# ಋಗ್ವೇದಸಂಹಿತಾ

ಭಾಗ ೧೫

ದ್ವಿತೀಯಾಷ್ಟಕದಲ್ಲಿ ಏಳು ಮತ್ತು
ಎಂಟನೆಯ ಅಧ್ಯಾಯಗಳು.

ದ್ವಿತೀಯ ಮಂಡಲದ ಸೂಕ್ತಗಳು ೨೪-೪೩ ಮತ್ತು
ತೃತೀಯ ಮಂಡಲದ ಸೂಕ್ತಗಳು ೧-೬



ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ ೧೫

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದಸಂಹಿತಾ

(ಕರ್ಣಾಟಕಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ ೧೫

ದ್ವಿತೀಯಾಷ್ಟಕದಲ್ಲಿ ಏಳು ಮತ್ತು ಎಂಟನೆಯ
ಅಧ್ಯಾಯಗಳು.

ದ್ವಿತೀಯ ಮಂಡಲದ ಸೂಕ್ತಗಳು ೨೪-೪೩ ಮತ್ತು
ತೃತೀಯ ಮಂಡಲದಸೂಕ್ತಗಳು ೧-೬

*Translated with Exhaustive Critical Notes*
*by*

**Asthana Mahavidwan**
**H. P. VENKATA RAO.**
*Editor.*

---

*Printed at*
SREE SHARADA PRESS
MYSORE.
1952



ಯದುವಂಶಪಯಃಪಾರಾವಾರಸುಧಾಕರರೂ ಸತ್ಯಸಂಧರೂ ಸಾರ್ವಜನಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮರಕ್ಷಕಪ್ರಭುಗಳೂ ಆದ ಶ್ರೀಮನ್ಮಹಾರಾಜ
ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,
ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರು

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನವಿದ್ವನ್ಮಂಡಲಿ

Translator & Editor:

**ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್**

**ಸಹಾಯಕ ವಿದ್ವನ್ಮಂಡಲಿ**

1. **ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು,** ಸಾಹಿತ್ಯ ವ್ಯಾಕರಣವಿದ್ವಾನ್, ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ, ಮೈಸೂರು.
2. **ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು,** ಜ್ಯೋತಿಷ ವಿದ್ವಾನ್ ಮತ್ತು ಕರ್ಣಾಟಕ ಭಾಷಾಪಂಡಿತರು.
3. **ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು,** ಋಗ್ವೇದ ಘನಪಾಠಿಗಳು.
4. **ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು,** ಶ್ರೌತವಿದ್ವಾನ್.
5. **ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು,** ಮೀಮಾಂಸಾದರ್ಶನಪಂಡಿತರು.
6. **ಬ್ರ॥ ಶ್ರೀ॥ G. N. ಚಕ್ರವರ್ತಿ** M.A.
   Professor of Sanskrit. St. Philomina's College, Mysore.
7. **ಬ್ರ॥ ಶ್ರೀ॥ ವೆಂಕಟರಮಣಾಚಾರ್,** M.A., B.T., ಸಾಹಿತ್ಯವಿದ್ವಾನ್.
8. **ಬ್ರ॥ ಶ್ರೀ॥ S. ರಂಗನಾಥನ್,** ಸಾಹಿತ್ಯ ವಿದ್ವಾನ್, ಅರಮನೆ ಸರಸ್ವತೀ ಭಂಡಾರ.
9. **ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್,** ಸಾಹಿತ್ಯವಿದ್ವಾನ್,
   Govt. Oriental Research Institute, Mysore.
10. **ಬ್ರ॥ ಶ್ರೀ॥ S. ಸೀತಾರಾಮಶಾಸ್ತ್ರಿಗಳು,** ರಿಟೈರ್ಡ್ ಪಂಡಿತರು.
    Govt. Oriental Research Institute, Mysore.

# ಪೀಠಿಕೆ.

ಈ ಭಾಗದಲ್ಲಿ ಕೆಲವು ಯಜ್ಞಾಂಗಕರ್ಮಗಳನ್ನು ವಿವರಿಸಲಾಗಿದೆ. ಯಜ್ಞವೆಂಬುದು ಒಂದೇ ಕರ್ಮವಲ್ಲ. ಅನೇಕ ಕರ್ಮಗಳು ಸೇರಿ ಯಜ್ಞವೆಂಬ ಪ್ರಧಾನಕರ್ಮವಾಗಿದೆ. ಇದರಲ್ಲಿ ಗೋದೋಹನ, ಅಗ್ನಿಮಂಥನ, ಅಗ್ನ್ಯಾನಯನ, ಸೋಮಪ್ರವಾಹಣ, ಆತಿಥ್ಯೇಷ್ಟಿ, ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನ ಎಂಬ ಮೂರು ಸವನಗಳು, ಋತುಯಾಜಹೋಮಗಳು ಮೊದಲಾದ ಅನೇಕ ಅಂಗಕರ್ಮಗಳಿರುವವು. ಇವುಗಳಲ್ಲಿ ಋತುಯಾಜ ಹೋಮಗಳು, ಸೋಮಪ್ರವಾಹಣ, ಮೂರು ಸವನಗಳು ಎಂಬ ಕರ್ಮಗಳನ್ನು ಮಾತ್ರ ಈ ಭಾಗದಲ್ಲಿ ವಿವರಿಸಲಾಗಿದೆ. ಈ ವಿಧವಾದ ಯಜ್ಞಕರ್ಮಾಂಗಗಳನ್ನು ವಿವರಿಸುವಾಗ ಇವುಗಳಿಗೆ ಎರಡು ವಿಧವಾದ ದೃಷ್ಟಿಯಿಂದ ಅರ್ಥವಿವರಣೆ ಮಾಡಬೇಕಾಗಿರುವುದು. ಏಕೆಂದರೆ ಯಜ್ಞಯಾಗಾದಿಗಳಲ್ಲಿ ಮಾಡಲ್ಪಡುವ ಪ್ರತಿಯೊಂದು ಮುಖ್ಯವಾದ ಕರ್ಮದಲ್ಲಿಯೂ ಹೋತೃ ಮತ್ತು ಅಧ್ವರ್ಯು ಎಂಬ ಋತ್ವಿಕ್ಕುಗಳ ಪಾತ್ರವಿರುವುದು. ಹೋತೃ ಅಥವಾ ಹೋತೃವರ್ಗದ ಋತ್ವಿಕ್ಕುಗಳು ಆಯಾ ಕರ್ಮಕ್ಕೆ ತಕ್ಕಂತೆ ಸಂದರ್ಭೋಚಿತವಾದ ಮಂತ್ರಗಳನ್ನು ವಿಧ್ಯುಕ್ತರೀತಿಯಲ್ಲಿ ಪಠಿಸುವರು; ಅಧ್ವರ್ಯು ಅಥವಾ ಅಧ್ವರ್ಯುವಿನ ಸಹಾಯಕರಾದ ಋತ್ವಿಕ್ಕುಗಳು ಆ ಕರ್ಮದಲ್ಲಿ ಸಮಯೋಚಿತವಾದ ಕಾರ್ಯಕಲಾಪಗಳನ್ನು ನೆರವೇರಿಸುವರು. ಯಜ್ಞಗಳಲ್ಲಿ ಮಾಡುವ ಕಾರ್ಯಕಲಾಪಗಳು ಎಷ್ಟೇ ಸಣ್ಣದಾಗಿದ್ದರೂ ಅವುಗಳು ವಿಧ್ಯುಕ್ತವಾಗಿಯೂ, ಮಂತ್ರಪಠನಪೂರ್ವಕವಾಗಿಯೂ ನೆರವೇರಿಸಲ್ಪಡಬೇಕು. ಕಾರ್ಯಕಲಾಪಗಳ ವಿವರಣೆ, ವಿಧಾನ ಮುಂತಾದ ವಿಷಯಗಳು ಅಧ್ವರ್ಯುವರ್ಗದವರಿಗೆ ಸಂಬಂಧಪಟ್ಟಿರುವುದರಿಂದಲೂ ಅವುಗಳ ವಿವರಣೆಯು ಯಜುರ್ವೇದದಲ್ಲಿ ಹೇಳಿರುವುದರಿಂದಲೂ ಅವುಗಳ ಸಂಬಂಧವಾದ ವಿಷಯವಿಮರ್ಶೆಯನ್ನು ಇಲ್ಲಿ ಮಾಡಿಲ್ಲ. ಆದರೆ ಹೋತೃವರ್ಗದವರು ಆಯಾ ಕರ್ಮದಲ್ಲಿ ಪಠಿಸಬೇಕಾದ ಮಂತ್ರಗಳ ವಿಮರ್ಶೆಯು ಋಗ್ವೇದಕ್ಕೆ ಸಂಬಂಧಪಟ್ಟಿರುವುದರಿಂದ, ಹೋತೃವರ್ಗದವರು ಪಠಿಸಬೇಕಾದ ಮಂತ್ರಗಳು, ಅವುಗಳನ್ನು ಯಾವ ಕಾಲದಲ್ಲಿ ಹೇಗೆ ಪಠಿಸಬೇಕು, ಇತ್ಯಾದಿ ವಿಷಯಗಳನ್ನು ಮಾತ್ರ ಐತರೇಯ ಬ್ರಾಹ್ಮಣದಲ್ಲಿ ಹೇಳಿರುವಂತೆ ಇಲ್ಲಿ ವಿವರಿಸಿದೆ. ಏಕೆಂದರೆ ಋಗ್ವೇದಕ್ಕೆ ಸಂಬಂಧಪಟ್ಟ ಮತ್ತು ಹೋತೃವರ್ಗದವರು ಪಠಿಸುವ ಮಂತ್ರತಂತ್ರಗಳ ವಿವರಣೆ ಮೊದಲಾದ ಸಮಸ್ತ ವಿಷಯಗಳೂ ಋಗ್ವೇದ ಬ್ರಾಹ್ಮಣಗಳಾದ ಐತರೇಯ ಮತ್ತು ಕೌಷೀತಕೀ ಎಂಬ ಎರಡು ಬ್ರಾಹ್ಮಣಗ್ರಂಥಗಳಲ್ಲಿ ಹೇಳಲಾಗಿದೆ. ಬ್ರಾಹ್ಮಣವೆಂದರೆ, ಯಜ್ಞಯಾಗಾದಿಗಳಲ್ಲಿ ಮಾಡಲ್ಪಡುವ ಪ್ರತಿಯೊಂದು ಮುಖ್ಯವಾದ ಅಂಗಕರ್ಮಗಳಲ್ಲಿಯೂ, ಪ್ರಧಾನಕರ್ಮಗಳಲ್ಲಿಯೂ ಹೋತೃವು ಅನುಸರಿಸಬೇಕಾದ ವಿಧಿ, ಪಠಿಸಬೇಕಾದ ಮಂತ್ರ, ಆ ಕರ್ಮಕ್ಕೆ ಸಂಬಂಧವಾದ ಪೂರ್ವೇತಿಹಾಸ, ಆ ಕರ್ಮವನ್ನು ಏತಕ್ಕಾಗಿ ಮಾಡಬೇಕು ಯಾವರೀತಿ ಮಾಡಿದರೆ ಯಾವ ರೀತಿಯಾದ ಫಲಪ್ರಾಪ್ತಿ, ಅದನ್ನು ವಿಧ್ಯುಕ್ತವಾಗಿ ಮಾಡದಿದ್ದರೆ ಸಂಭವಿಸುವ ದೋಷ, ಅದರ ಪ್ರಾಯಶ್ಚಿತ್ತ ಇತ್ಯಾದಿ ಸಮಸ್ತ ವಿಷಯಗಳನ್ನು ವಿವರಿಸುವ ಗ್ರಂಥವು. ಮೇಲೆ ಹೇಳಿದ ಐತರೇಯ ಮತ್ತು ಕೌಷೀತಕೀ ಎಂಬ ಎರಡು ಬ್ರಾಹ್ಮಣಗಳಲ್ಲಿಯೂ ವಿಷಯ ನಿರೂಪಣೆಯು ಸ್ವಲ್ಪ ಹೆಚ್ಚುಕಡಿಮೆ ಒಂದೇವಿಧವಾಗಿರುವುದರಿಂದಲೂ, ದಕ್ಷಿಣ ದೇಶದಲ್ಲಿ ಕೌಷೀತಕೀ ಬ್ರಾಹ್ಮಣವು ವಿಶೇಷವಾಗಿ ಪ್ರಚಾರವಿಲ್ಲದೆ ಐತರೇಯಬ್ರಾಹ್ಮಣವೇ ಬಳಕೆಯಲ್ಲಿರುವುದರಿಂದಲೂ ನಾವು ಹೋತೃಸಂಬಂಧವಾದ ವಿವರಣೆಗಳೆಲ್ಲವನ್ನೂ ಐತರೇಯಬ್ರಾಹ್ಮಣವನ್ನನುಸರಿಸಿಯೇ ವಿವರಿಸಿರುವವು.

ಅತಿಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ, ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡ ಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕ ಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ.** ಮಹಾಪ್ರಭುವರ್ಯರೂ ಅವರ ಸರ್ಕಾರದವರೂ ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ (ವೇದಮಂತ್ರಗಳಲ್ಲಿ ಅತಿಮುಖ್ಯವೆಂದು ಪರಿಗಣಿಸಲ್ಪಟ್ಟಿರುವ **ಗಾಯತ್ರೀ** ಎಂಬ ಮಂತ್ರನಾಮಾಂಕಿತರಾದ) ರಾಜಕುಮಾರಿಗೂ ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕ ಫಲಗಳಾದ ಆಯುರಾರೋಗ್ಯೈಶ್ವರ್ಯಾದಿಸಕಲಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ನಂದನನಾಮ ಸಂ॥ ಶ್ರಾವಣ ಶುದ್ಧ ಪಂಚಮಿ ಭಾನುವಾರ
ತಾ॥ 27—7—1952

ಅನುವಾದಕ:
**ಹೆಚ್. ಪಿ. ವೆಂಕಟರಾವ್,**
ಆಸ್ಥಾನ ಮಹಾವಿದ್ವಾನ್.

|| ಶ್ರೀಃ ||

# ಋಗ್ವೇದಸಂಹಿತೆಯ ಹದಿನೈದನೆಯ ಭಾಗದ

# ವಿ ಷ ಯಾ ನು ಕ್ರ ಮ ಣಿ ಕೆ

## ಎರಡನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯವು.

### ಎರಡನೆಯ ಮಂಡಲದ—

## ಎಂಟನೆಯ ಅಧ್ಯಾಯವು

**ವಾಯೋ ಯೇ ತೇ ಎಂಬ ನಲವತ್ತೊಂದನೆಯ ಸೂಕ್ತ—**



**ಕನಿಕ್ರದಜ್ಜನುಷಂ ಎಂಬ ನಲವತ್ತೆರಡನೆಯ ಸೂಕ್ತವು—**



**ಪ್ರದಕ್ಷಿಣಿತ್ ಎಂಬ ನಲವತ್ತಮೂರನೇ ಸೂಕ್ತವು—**

ದ್ವಿತೀಯಮಂಡಲವು ಸಮಾಪ್ತವು.

## ಮೂರನೆಯ ಮಂಡಲವು.

**ವೈಶ್ವಾನರಾಯ ಪೃಥುಪಾಜಸೇ ಎಂಬ ಮೂರನೆಯ ಸೂಕ್ತವು—**



**ಸಮಿತ್ಸಮಿತ್ ಎಂಬ ನಾಲ್ಕನೆಯ ಸೂಕ್ತವು (ಆಪ್ರೀ ಸೂಕ್ತ)—**

ದ್ವಿತೀಯಾಷ್ಟಕದಲ್ಲಿ ಎಂಟನೆಯ ಅಧ್ಯಾಯದ ವಿಷಯ ಸೂಚಿಕೆ ಸಮಾಪ್ತವು.



## ಸಂಕೇತಾಕ್ಷರಗಳ ವಿವರಣೆಯು.

ಅಥ. ಸಂ.—ಅಥರ್ವವೇದಸಂಹಿತಾ
ಆಪ. ಸೂ —ಆಪಸ್ತಂಬ ಶ್ರೌತಸೂತ್ರ
ಆಪ. ಧ. ಸೂ.—ಆಪಸ್ತಂಬ ಧರ್ಮಸೂತ್ರ
ಆಪ. ಪ. ಸೂ.—ಅಪಸ್ತಂಬ ಪರಿಭಾಷಾಸೂತ್ರ
ಆ. ಸೂ. ಅಥವಾ ಆ. ಆಶ್ವಲಾಯನ ಶ್ರೌತಸೂತ್ರ
ಉ. ಸೂ.—ಉಣಾದಿ ಸೂತ್ರ
ಋ. ಸಂ.—ಋಗ್ವೇದ ಸಂಹಿತಾ
ಐ. ಆ.—ಐತರೇಯಾರಣ್ಯಕ
ಐ. ಉ.—ಐತರೋಯೋಪನಿಷತ್
ಐ. ಬ್ರಾ.—ಐತರೇಯ ಬ್ರಾಹ್ಮಣ
ಛಾ. ಉ.—ಛಾಂದೋಗ್ಯೋಪನಿಷತ್
ಜೈ. ಪೂ ಸೂ.—ಜೈಮಿನೀಯ ಪೂರ್ವಮೀಮಾಂಸಾ ಸೂತ್ರ
ಜೈ. ನ್ಯಾ. ವಿ.—ಜೈಮಿನಿಯ ನ್ಯಾಯಮಾಲಾವಿಸ್ತರ
ತಾ. ಬ್ರಾ.—ತಾಂಡ್ಯಮಹಾ ಬ್ರಾಹ್ಮಣ
ತೈ. ಆ. —ತೈತ್ತಿರೀಯ ಆರಣ್ಯಕ
ತೈ. ಬ್ರಾ.—ತೈತ್ತಿರೀಯ ಬ್ರಾಹ್ಮಣ
ತೈ. ಸಂ.—ತೈತ್ತಿರೀಯ ಸಂಹಿತಾ
ನಿ.—ನಿರುಕ್ತ, ನಿಘಂಟು
ಪಾ. ಸೂ.—ಪಾಣಿನಿಯ ಸೂತ್ರ
ಪಾ. ಶಿ.—ಪಾಣಿನೀಯ ಶಿಕ್ಷಾ
ಫಿ. ಅಥವಾ ಫಿ. ಸೂ.—ಫಿಟ್ ಸೂತ್ರ
ಬ್ರ. ಸೂ —ಬ್ರಹ್ಮಸೂತ್ರ
ಮ. ಭಾ.—ಮಹಾಭಾರತ
ಮ. ಸ್ಮೃ.—ಮನು ಸ್ಮೃತಿ
ಮೈ. ಸಂ.—ಮೈತ್ರಾಯಣೀಯ ಸಂಹಿತಾ
ಯಾ ಸ್ಮೃ.—ಯಾಜ್ಞವಲ್ಕ್ಯ ಸ್ಮೃತಿ
ವಾ. ಸಂ.—ವಾಜಸನೇಯ ಸಂಹಿತಾ
ವಾ. ಪು —ವಾಯುಪುರಾಣ
ವಿ. ಪು.—ವಿಷ್ಣುಪುರಾಣ
ವೇ. ಸೂ.—ವೇದಾಂತ ಸೂತ್ರ
ಶ. ಬ್ರಾ.—ಶತಪಥಬ್ರಾಹ್ಮಣ
ಸಾ. ಸಂ.—ಸಾಮವೇದ ಸಂಹಿತಾ ಇತ್ಯಾದಿ.





॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥



ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

## ಭಾಗ—೧೫



## ॥ ದ್ವಿತೀಯಾಷ್ಟಕೇ ಸಪ್ತಮೋಽಧ್ಯಾಯಃ ॥

### ಎರಡನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯವು

## ಎರಡನೆಯ ಮಂಡಲದಲ್ಲಿ ಇಪ್ಪತ್ತನಾಲ್ಕನೆಯ ಸೂಕ್ತವು

### ಪೀಠಿಕೆ



ಈ ಭಾಗವು ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿ ಎಂಬ ದೇವತೆಗಳನ್ನು ಸ್ತುತಿಸುವ **ಸೇಮಾಮವಿಡ್ಢಿ** ಎಂಬ ಸೂಕ್ತದಿಂದ ಪ್ರಾರಂಭವಾಗುವುದು. ಈ ದೇವತೆಗಳು ಯಾರು? ಇವರ ಸ್ವರೂಪವೇನು ? ಎಂಬ ವಿಷಯವನ್ನು ಸೂಕ್ಷ್ಮವಾಗಿ ಪರಿಶೀಲಿಸುವುದು ಅವಶ್ಯಕವು. ಬೃಹಸ್ಪತಿದೇವತಾಕವಾದ ಈ ಸೂಕ್ತಕ್ಕೂ ಇದರ ಹಿಂದಿನ ಸೂಕ್ತಕ್ಕೂ ಗೃತ್ಸಮದನು ಋಷಿಯು. ಈ ಎರಡು ಸೂಕ್ತಗಳಲ್ಲಿಯೂ ಕೆಲವು ಋಕ್ಕುಗಳಲ್ಲಿ ಬೃಹಸ್ಪತಿಯನ್ನೂ ಇನ್ನು ಕೆಲವು ಋಕ್ಕುಗಳಲ್ಲಿ ಬ್ರಹ್ಮಣಸ್ಪತಿಯನ್ನೂ ಸ್ತುತಿಸಲಾಗಿದೆ. ಈ ಉಭಯದೇವತೆಗಳಿಗೂ ಸಾಮಾನ್ಯವಾದ ಅನೇಕ

ವಿಶೇಷಣ ಪದಗಳನ್ನು ಉಪಯೋಗಿಸಿ ಅವರ ಮಹತ್ಕಾರ್ಯಗಳನ್ನು ವರ್ಣಿಸಿರುವುದಲ್ಲದೆ ಬೃಹಸ್ಪತಿಯು ಮಾಡಿದ ಕಾರ್ಯಗಳನ್ನು ಬ್ರಹ್ಮಣಸ್ಪತಿದೇವತಾಕವಾದ ಋಕ್ಕುಗಳಲ್ಲಿಯೂ, ಬ್ರಹ್ಮಣಸ್ಪತಿಯ ಕಾರ್ಯಗಳನ್ನು ಬೃಹಸ್ಪತಿ ದೇವತಾಕವಾದ ಋಕ್ಕುಗಳಲ್ಲಿಯೂ ಪರಸ್ಪರ ವಿನಿಮಯದಿಂದ ವರ್ಣಿಸಲಾಗಿದೆ. ಆದುದರಿಂದ ಹೆಸರುಗಳು ಬೇರೆ ಬೇರೆ ಇದ್ದರೂ ಈ ಉಭಯ ದೇವತೆಗಳೂ ಒಂದೇ ದೇವತೆಯೆಂಬ ಭಾವನೆಯು ಗೃತ್ಸಮದ ಋಷಿಗೆ ಇದ್ದಂತೆ ತೋರುತ್ತದೆ. ಪರಂತು ಈ ವಿಧವಾದ ಭಾವನೆಯು ವ್ಯತ್ಯಾಸವನ್ನು ಹೊಂದಿ ಬೃಹಸ್ಪತಿಯೇ ಬೇರೆ, ಬ್ರಹ್ಮಣಸ್ಪತಿಯೇ ಬೇರೆ ಎಂಬ ಭಾವನೆಗೆ ಎಡೆಗೊಟ್ಟಂತೆ ತೋರುವುದು. ಇತರ ದೇವತೆಗಳ ವಿಷಯದಲ್ಲಿಯೂ ಈ ವಿಧವಾದ ವ್ಯತ್ಯಾಸಗಳಿಗೆ ಅವಕಾಶವು ಕಂಡುಬರುವುದು. ಹೇಗೆಂದರೆ **ಮಹಾನ್ ಇಂದ್ರಃ** ಎಂಬಲ್ಲಿ **ಮಹಾನ್** ಎಂಬ ಶಬ್ದವು ಇಂದ್ರನಿಗೆ ವಿಶೇಷಣವಾಗಿದ್ದರೂ ಇಂದ್ರನೇ ಬೇರೆ ದೇವತೆ, ಮಹಾನಿಂದ್ರನೇ ಬೇರೆ ದೇವತೆ ಎಂದು ನಿರ್ದಿಷ್ಟವಾಗಿರುವುದು. ಇದರಂತೆ **ಅಗ್ನಿಃ, ಅಗ್ನಿಃ ಶುಚಿಃ, ಅಗ್ನಿಃ ಪಾವಕಃ** ಇತ್ಯಾದಿ ದೇವತೆಗಳ ವಿಷಯದಲ್ಲಿಯೂ ಈ ಭಾವನೆಯು ಸಮನ್ವಯವಾಗುವುದು. ಈ ವಿಷಯವನ್ನು ಈ ಪೀಠಿಕೆಯ ಕೊನೆಯ ಭಾಗದಲ್ಲಿ ವಿಮರ್ಶೆಮಾಡಲಾಗುವುದು.

ಯಾಸ್ಕಮಹರ್ಷಿಗಳು ತಮ್ಮ ನಿರುಕ್ತದಲ್ಲಿ ಬ್ರಹ್ಮಣಸ್ಪತಿಯ ವಿಚಾರವಾಗಿ ಈ ರೀತಿ ಹೇಳಿರುವರು—

**ಬ್ರಹ್ಮಣಸ್ಪತಿಃ ಬ್ರಹ್ಮಣಸ್ಪತಿರ್ಬ್ರಹ್ಮಣಃ ಪಾತಾ ವಾ ಪಾಲಯಿತಾ ವಾ ॥**

(ನಿ. ೧೦–೧೨)

ಇಲ್ಲಿ ಬ್ರಹ್ಮಶಬ್ದಕ್ಕೆ ಅನ್ನವೆಂದೂ, ಧನವೆಂದೂ, ಸ್ತೋತ್ರವೆಂದೂ (ನಿ. ೩–೯) ಅರ್ಥವಾಗುವುದು. ಆದುದರಿಂದ **ಬ್ರಹ್ಮಣಃ ಪಾತಾ** ಎಂದರೆ **ಅನ್ನಸ್ಯ ಪಾತಾ** ಅನ್ನಕ್ಕೆ (ಆಹಾರಕ್ಕೆ) ಸ್ವಾಮಿಯು ಅಥವಾ ಅಧಿಪತಿಯು ಎಂದರ್ಥವು. ಬ್ರಹ್ಮಣಸ್ಪತಿಯು ಹೇಗೆ ಅನ್ನಕ್ಕೆ ಅಧಿಪತಿಯು ಎಂದರೆ ಯಾಸ್ಕರು ಉದಾಹರಣೆಗಾಗಿ—

**ಅಶ್ಮಾಸ್ಯಮವತಂ ಬ್ರಹ್ಮಣಸ್ಪತಿರ್ಮಧುಧಾರಮಭಿ ಯಮೋಜಸಾತೃಣತ್ ।**
**ತಮೇವ ವಿಶ್ವೇ ಪಪಿರೇ ಸ್ವರ್ದೃಶೋ ಬಹು ಸಾಕಂ ಸಿಸಿಚುರುತ್ಸಮುದ್ರಿಣಂ ॥**

(ಋ. ಸಂ. ೨–೨೪–೪)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟು ಅದಕ್ಕೆ,

**ಅಶನವಂತಮಾಸ್ಯಂತನವಂತಮವಾತಿತಂ ಬ್ರಹ್ಮಣಸ್ಪತಿರ್ಮಧುಧಾರಮಭಿಯಮೋಜಸಾ ಬಲೇ-ನಾಭ್ಯತೃಣತ್ತಮೇವ ಸರ್ವೇ ಪಿಬಂತಿ ರಶ್ಮಯಃ ಸೂರ್ಯದೃಶೋ ಬಹ್ವೇನಂ ಸಹ ಸಿಂಚಂತ್ಯುತ್ಸಮುದ್ರಿಣಮುದಕವಂತಂ ॥**

(ನಿ. ೧೦–೧೩)

ಎಂದು ನಿರ್ವಚನವನ್ನು ಹೇಳಿರುವರು. ಮುಖ್ಯಾಭಿಪ್ರಾಯವೇನೆಂದರೆ, ಈ ಬ್ರಹ್ಮಣಸ್ಪತಿಯು ಸೂರ್ಯರಶ್ಮಿಗಳ ಸಹಾಯದಿಂದ ಮೇಘಗಳು ಸಮುದ್ರೋದಕವನ್ನು ಪಾನಮಾಡಿ ಆ ಉದಕವನ್ನು ವಿಶೇಷವಾಗಿ ಭೂಮಿಯ ಮೇಲೆ ಮಳೆಯಾಗಿ ಬೀಳುವಂತೆ ಮಾಡುವುದರಿಂದ, ಮಳೆಯಿಂದ ಓಷಧಿವನಸ್ಪತಿಗಳೂ, ಓಷಧಿವನಸ್ಪತಿಗಳಿಂದ ಅನ್ನಾದ್ಯಾಹಾರವೂ ಲಭಿಸುವುದೆಂದೂ, ಆದುದರಿಂದ ಬ್ರಹ್ಮಣಸ್ಪತಿಯು ಅನ್ನಕ್ಕೆ ಅಧಿಪತಿಯು ಎಂದರ್ಥವು. ಇದರಂತೆ ಬ್ರಹ್ಮಶಬ್ದಕ್ಕೆ ಸ್ತೋತ್ರವೆಂದೂ ಧನವೆಂದೂ ಅರ್ಥಮಾಡುವಾಗ ಬ್ರಹ್ಮಣಸ್ಪತಿಯು ಮಂತ್ರಗಳಿಗೆ ಅಥವಾ ಧನಕ್ಕೆ

ಅಧಿಪತಿಯು ಎಂಬರ್ಥವನ್ನು ಹೇಳಬೇಕು. ಭಾಷ್ಯಕಾರರು ಈ ಅರ್ಥವನ್ನೇ ಮೇಲೆ ಉದಾಹರಿಸಿರುವ ಋಕ್ಕಿಗೆ ವ್ಯಾಖ್ಯಾನಮಾಡುವಾಗ ಹೇಳಿರುವರು.

ಬ್ರಹ್ಮಣಸ್ಪತಿಯ ಪರವಾದ ಮಂತ್ರಗಳು ಋಗ್ವೇದದಲ್ಲಿ ವಿಶೇಷವಾಗಿವೆ. ಆ ಮಂತ್ರಗಳಲ್ಲಿ ಬ್ರಹ್ಮಣಸ್ಪತಿಯು ಧನವನ್ನೂ, ಅನ್ನವನ್ನೂ ಕೊಡುವನೆಂದು ಹೇಳಿದೆ. ಈ ಬ್ರಹ್ಮಣಸ್ಪತಿಯು ಪ್ರತ್ಯೇಕ ದೇವತೆಯೇ, ಅಥವಾ ಅಗ್ನಿಯ ರೂಪಾಂತರವೇ ಎಂದು ಅನೇಕರು ಸಂಶಯಪಡುವರು. ಅಗ್ನಿ ಮೊದಲಾದ ಇತರ ದೇವತೆಗಳೂ ಸಹ ಧನವನ್ನೂ, ಅನ್ನವನ್ನೂ ಕೊಡುವವರಾದುದರಿಂದ ಬ್ರಹ್ಮಣಸ್ಪತಿಯು ಅಗ್ನಿಯ ಒಂದು ವಿಶೇಷರೂಪವೆಂದು ಕೆಲವರ ವಾದವು. ಯಾಸ್ಕರು ಈ ವಿಷಯದಲ್ಲಿ ಮೌನವಾಗಿರುವರು ಎಂದರೆ ಸ್ಪಷ್ಟವಾಗಿ ಏನನ್ನೂ ಹೇಳಿರುವುದಿಲ್ಲ. ಬ್ರಹ್ಮಣಸ್ಪತಿಯ ಪರವಾದ ಋಕ್ಕುಗಳಲ್ಲಿಯೂ ಈ ದೇವತೆಯು ಅಗ್ನಿಯ ರೂಪಾಂತರವೆಂದು ಹೇಳಲು ಯಾವ ಆಧಾರವೂ ಇಲ್ಲ. ಆದುದರಿಂದ ಬ್ರಹ್ಮಣಸ್ಪತಿಯು ಇಂದ್ರಾಗ್ನಿಗಳಂತೆ ಒಂದು ಪ್ರತ್ಯೇಕವಾದ ದೇವತೆಯೆಂದು ಧಾರಾಳವಾಗಿ ಹೇಳಬಹುದು.

ಯಾಸ್ಕರು ತಮ್ಮ ನಿರುಕ್ತದಲ್ಲಿ ಬೃಹಸ್ಪತಿಶಬ್ದದ ನಿರ್ವಚನವನ್ನು ವಿವರಿಸುತ್ತಾ—

**ಬೃಹಸ್ಪತಿಃ ಬೃಹತಃ ಪಾತಾ ವಾ ಪಾಲಯಿತಾ ವಾ |**

(ನಿ. ೧೦-೧೧)

ಎಂದು ಹೇಳಿದ್ದಾರೆ. ಇದಕ್ಕೆ ವ್ಯಾಖ್ಯಾನಕಾರರಾದ ದುರ್ಗಾಚಾರ್ಯರು—**ಬೃಹಸ್ಪತಿಃ ಕಸ್ಮಾತ್ ? " ಬೃಹತಃ ಪಾತಾ ವಾ ಪಾಲಯಿತಾ ವಾ " ಬೃಹತಃ ಮಹತೋಽಸ್ಯ ಜಗತಃ ಉದಕಸ್ಯ ವಾ ಪಾತಾ ರಕ್ಷಿತಾ, ಪಾಲಯಿತಾ ಅಪಿ ರಕ್ಷಿತೈವ ಧಾತ್ವನ್ಯತ್ವಮರ್ಥೈಕತ್ವಂ ||** ಎಂದರೆ ದೊಡ್ಡದಾದ ಜಗತ್ತಿನ ಅಥವಾ ಉದಕದ ಸಂರಕ್ಷಕನು, ಕಾಪಾಡುವವನು. ಪತಿಶಬ್ದದ ಅರ್ಥವನ್ನು ಸೂಚಿಸುವುದಕ್ಕೆ ಪಾತಾ, ಪಾಲಯಿತಾ ಎಂಬ ಬೇರೆ ಬೇರೆ ಧಾತುಗಳಿಂದ ನಿಷ್ಪನ್ನವಾದ ಶಬ್ದಗಳಿದ್ದರೂ ಅರ್ಥವು ಮಾತ್ರ ಒಂದೇ ಆಗಿರುವುದೆಂದು ಹೇಳಿರುವರು. ಸಾಯಣರು ಅನೇಕ ಸಂದರ್ಭಗಳಲ್ಲಿ ಬೃಹತಃ ಪಾತಾ ಎಂಬುದನ್ನು ವಿವರಿಸುವಾಗ ಬೃಹತಃ ಎಂಬ ಶಬ್ದಕ್ಕೆ ಬೃಹತಃ ಯಜ್ಞಾಖ್ಯಕರ್ಮಣಃ ಅಥವಾ ವೃಷ್ಟ್ಯಾಖ್ಯಕರ್ಮಣಃ ಎಂದರೆ ಯಜ್ಞರೂಪವಾದ ಕರ್ಮದ ಅಥವಾ ವೃಷ್ಟಿಪ್ರದಾನ ರೂಪವಾದ ಕರ್ಮದ ಎಂದು ಅರ್ಥವನ್ನು ಹೇಳಿರುವರು. ಬೃಹಸ್ಪತಿಯು ದೇವತೆಗಳಿಗೆ ಪುರೋಹಿತನಾಗಿ ಯಜ್ಞಕರ್ಮವನ್ನು ನೆರವೇರಿಸುವುದರಿಂದಲೂ, ಮನುಷ್ಯರಿಗೆ ಅವಶ್ಯಕವಾದ ವೃಷ್ಟಿಯನ್ನುಂಟುಮಾಡುವುದರಿಂದಲೂ ಈ ಎರಡು ವಿಧವಾದ ವಿಶೇಷಣಗಳೂ ಸಹಜವಾಗಿರುವುವು. ಬೃಹಸ್ಪತಿಯ ಪುರೋಹಿತತ್ವವನ್ನೂ ವೃಷ್ಟಿಪ್ರದಾನವನ್ನೂ ವರ್ಣಿಸುವ,

**ಯದ್ದೇವಾಪಿಃ ಶಂತನವೇ ಪುರೋಹಿತೋ ಹೋತ್ರಾಯ ವೃತಃ ಕೃಪಯನ್ನದೀಧೇತ್ |**
**ದೇವಶ್ರುತಂ ವೃಷ್ಟಿವನಿಂ ರರಾಣೋ ಬೃಹಸ್ಪತಿರ್ವಾಚಮಸ್ಮಾ ಅಯಚ್ಛತ್ ||**

(ಋ. ಸಂ. ೧೦-೯೮-೭)

ಎಂಬ ಋಕ್ಕನ್ನು ಯಾಸ್ಕರು ಉದಾಹರಣೆಗಾಗಿ ಕೊಟ್ಟಿರುವರು. ಈ ಋಕ್ಕಿನ ನಿರ್ವಚನದಲ್ಲಿ **ಬೃಹಸ್ಪತಿರ್ಬ್ರಹ್ಮಾಸೀತ್ ಸೋಽಸ್ಮೈ ವಾಚಮಯಚ್ಛತ್**—ಎಂದರೆ ಬೃಹಸ್ಪತಿಯು ಶಂತನುವೆಂಬ ರಾಜನು ಮಾಡಿದ ಯಜ್ಞದಲ್ಲಿ

ಬ್ರಹ್ಮನೆಂಬ ಪುರೋಹಿತನಾಗಿ ವಾಕ್ಯರೂಪವಾದ ಮಂತ್ರವನ್ನು ಉಪದೇಶಿಸಿದನೆಂದೂ ಆ ಮಂತ್ರದಿಂದ ಯಜಮಾನನು ಸ್ತುತಿಸಲಾಗಿ ವೃಷ್ಟಿ ಉಂಟಾಯಿತೆಂದೂ ವರ್ಣಿತವಾಗಿದೆ. ಇದಲ್ಲದೆ ಯಜುರ್ವೇದಾದಿಗಳಲ್ಲಿ—

**ಬೃಹಸ್ಪತಿರ್ದೇವಾನಾಂ ಪುರೋಹಿತ ಆಸೀಚ್ಛಂಡಾಮರ್ಕಾವಸುರಾಣಾಂ ।**
(ತೈ. ಸಂ. ೬-೪-೧೦-೧)

ಬೃಹಸ್ಪತಿಯು ದೇವತೆಗಳಿಗೆ ಪುರೋಹಿತನಾಗಿದ್ದನು. ಶಂಡಾಮರ್ಕರೆಂಬುವರು ಅಸುರರಿಗೆ ಪುರೋಹಿತರಾಗಿದ್ದರು ಎಂದು ಹೇಳಿದೆ.

**ಬ್ರಹ್ಮ ವೈ ದೇವಾನಾಂ ಬೃಹಸ್ಪತಿರ್ಬ್ರಹ್ಮಣೈವೈನಮಭಿಚರತಿ ।**
(ತೈ. ಸಂ. ೨-೨-೯-೧)

**ತಸ್ಮೈ ವಿಶಃ ಸ್ವಯಮೇವಾ ನಮಂತೇ ಯಸ್ಮಿನ್ ಬ್ರಹ್ಮಾ ರಾಜನಿ ಪೂರ್ವ ಏತಿ ।**
(ಋ. ಸಂ. ೪-೫೦-೮)

**ಅವಸ್ಯವೇ ಯೋ ವರಿವಃ ಕೃಣೋತಿ ಬ್ರಹ್ಮಣೇ ರಾಜಾ ತಮವಂತಿ ದೇವಾಃ ॥**
(ಋ ಸಂ. ೪-೫೦-೯)

**ಸೋಮಂ ರಾಜಾನಮವಸೇಽಗ್ನಿಂ ಗೀರ್ಭಿರ್ಹವಾಮಹೇ ।**
**ಆದಿತ್ಯಾನ್ವಿಷ್ಣುಂ ಸೂರ್ಯಂ ಬ್ರಹ್ಮಾಣಂ ಚ ಬೃಹಸ್ಪತಿಂ ॥**
(ಋ. ಸಂ. ೧೦-೧೪೧-೩)

ಇತ್ಯಾದಿ ಋಕ್ಕುಗಳಲ್ಲಿ ಬೃಹಸ್ಪತಿಯು ಋತ್ವಿಜನು ಎಂದು ವರ್ಣನೆ ಇದೆ.

ಋಗ್ವೇದದಲ್ಲಿ ಬೃಹಸ್ಪತಿಗೆ ಪ್ರಾಮುಖ್ಯವಾದ ಸ್ಥಾನವೇ ಇದೆ. ಹನ್ನೊಂದು ಸೂಕ್ತಗಳಲ್ಲಿ ಸ್ತುತನಾಗಿರುವುದಲ್ಲದೆ ಎರಡು ಸೂಕ್ತಗಳಲ್ಲಿ (ಋ. ಸಂ. ೪-೪೯; ೭-೯೭) ಇಂದ್ರನ ಜತೆಯಲ್ಲಿ ದ್ವಂದ್ವದೇವತೆಯಾಗಿಯೂ ಸ್ತುತನಾಗಿದ್ದಾನೆ. ಬೃಹಸ್ಪತಿ ಶಬ್ದವು ಋಗ್ವೇದದಲ್ಲಿ ಸುಮಾರು ೧೨೦ ಸಲ ಪಠಿತವಾಗಿದೆ. ಅನೇಕ ಸಂದರ್ಭಗಳಲ್ಲಿ ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿದೇವತೆಗಳು ಒಂದೇ ಮಂತ್ರದಲ್ಲಿ ಪರಸ್ಪರ ವಿನಿಮಯವಾಗಿ ಸ್ತುತರಾಗಿದಾರೆ. ಆದರೂ ಬೃಹಸ್ಪತಿಯೇ ಬೇರೆ ಬ್ರಹ್ಮಣಸ್ಪತಿಯೇ ಬೇರೆ ದೇವತೆಗಳು.

ಕೆಲವು ಪಾಶ್ಚಾತ್ಯಪಂಡಿತರೂ, ಆಧುನಿಕ ವಿದ್ವಾಂಸರಲ್ಲಿ ಕೆಲವರೂ ಸಹ ಋ. ಸಂ. ೨-೨೩ ನೆಯ ಸೂಕ್ತದಲ್ಲಿ ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿಗಳು ಪರಸ್ಪರ ವಿನಿಮಯವಾಗಿ ಸ್ತುತಿಸಲ್ಪಟ್ಟಿರುವುದರಿಂದ ಇಬ್ಬರೂ ಒಂದೇ ದೇವತೆಯೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರು. ಆದರೆ, ಯಾಸ್ಕರು, ಶೌನಕರು ಸಾಯಣರು ಮೊದಲಾದ ಪುರಾತನ ವೇದಭಾಷ್ಯಕಾರರು ಬೃಹಸ್ಪತಿಯೇ ಬೇರೆ ಬ್ರಹ್ಮಣಸ್ಪತಿಯೇ ಬೇರೆ ಎಂದು ಸ್ಪಷ್ಟವಾಗಿ ಹೇಳಿರುವರು. ಮೇಲೆ ಹೇಳಿದ ಋ. ಸಂ. ೨-೨೩ ನೆಯ ಸೂಕ್ತದಲ್ಲಿರುವ ೧೯ ಋಕ್ಕುಗಳಲ್ಲಿ ೧, ೫, ೯, ೧೧, ೧೭, ೧೯ ಎಂಬ ೬ ಋಕ್ಕುಗಳು ಮಾತ್ರ ಬೃಹಸ್ಪತಿಯನ್ನು ಸ್ತುತಿಸುತ್ತವೆ ಉಳಿದ ೧೩ ಋಕ್ಕುಗಳು ಬ್ರಹ್ಮಣಸ್ಪತಿಯ ಪರವಾಗಿವೆ. ಯಾಸ್ಕರೂ ಸಹ ಬೃಹಸ್ಪತಿ ಶಬ್ದಕ್ಕೂ ಬ್ರಹ್ಮಣಸ್ಪತಿ ಶಬ್ದಕ್ಕೂ ಬೇರೆ ಬೇರೆ ನಿರ್ವಚನವನ್ನು ಹೇಳಿದಾರೆ. ಆದುದರಿಂದ ಬೃಹಸ್ಪತಿಯೇ ಬೇರೆ ಬ್ರಹ್ಮಣಸ್ಪತಿಯೇ ಬೇರೆ.

ಇತರ ದೇವತೆಗಳಿಗಿಂತ ತೀರಾ ಭಿನ್ನವಾದ ವೈಶಿಷ್ಟ್ಯವು ಬೃಹಸ್ಪತಿಗೆ ಇದೆ. ಇತರ ದೇವತೆಗಳೆಲ್ಲಾ ಪ್ರಕೃತಿ ಅಥವಾ ಪ್ರಕೃತಿ ಶಕ್ತಿಯ ರೂಪವಿಶೇಷಗಳಾದರೆ ಬೃಹಸ್ಪತಿಯು ಮಾನವನ ನೈತಿಕ ಮತ್ತು ಧಾರ್ಮಿಕ ಜೀವನ ಕ್ಷೇತ್ರಕ್ಕೆ ಸಂಬಂಧಿಸಿದಂತಿದೆ. ಸ್ತುತಿ, ಸ್ತೋತ್ರ ಅಥವಾ ಪ್ರಾರ್ಥನೆಗೆ ರಕ್ಷಕನಾದ ಈ ದೇವತೆಯು ದೇವತೆಗಳ ಮನಸ್ಸಿನ ನಿರ್ಧಾರ, ಸಂಕಲ್ಪ ಅಥವಾ ಶಕ್ತಿಯ ಮೇಲೆ ತನ್ನ ಪ್ರಭಾವವನ್ನು ಬೀರುವನೆಂಬುದಕ್ಕೆ ಋಗ್ವೇದದಲ್ಲಿ ಅನೇಕ ಉದಾಹರಣೆಗಳಿವೆ. ಋಗ್ವೇದ ೧೦ ನೇ ಮಂಡಲದ ೯೮ ನೆಯ ಸೂಕ್ತದಲ್ಲಿ ದೇವಾಪಿ ಮತ್ತು ಶಂತನು ಎಂಬ ಕುರುವಂಶದ ರಾಜಪುತ್ರರ ವಿಷಯಕವಾದ ಒಂದು ಇತಿಹಾಸವರ್ಣನೆ ಇದೆ. ಅದರಲ್ಲಿ ಬೃಹಸ್ಪತಿಯ ಪಾತ್ರವು ಬಹುಮುಖ್ಯವಾದುದೆಂಬುದನ್ನು ನಿರುಕ್ತಕಾರರು ಈ ರೀತಿ ವರ್ಣಿಸಿದ್ದಾರೆ.

**ಅತ್ರೇತಿಹಾಸಮಾಚಕ್ಷತೇ। ದೇವಾಪಿಶ್ಚಾರ್ಷ್ಟಿಷೇಣಃ ಶಂತನುಶ್ಚ ಕೌರವ್ಯೌ ಭ್ರಾತರೌ ಬಭೂವತುಃ। ಸ ಶಂತನುಃ ಕನೀಯಾನಭಿಷೇಚಯಾಂಚಕ್ರೇ । ದೇವಾಪಿಸ್ತಪಃ ಪ್ರತಿಪೇದೇ । ತತಃ ಶಂತನೋ ರಾಜ್ಯೇ ದ್ವಾದಶ ವರ್ಷಾಣಿ ದೇವೋ ನ ವವರ್ಷ । ತಮೂಚುರ್ಬ್ರಾಹ್ಮಣಾ ಅಧರ್ಮಸ್ತ್ವಯಾ ಚರಿತೋ ಜ್ಯೇಷ್ಠಂ ಭ್ರಾತರಮಂತರಿತ್ಯಾಭಿಷೇಚಿತಂ ತಸ್ಮಾತ್ತೇ ದೇವೋ ನ ವರ್ಷತೀತಿ । ಸ ಶಂತನುರ್ದೇವಾಪಿಂ ಶಿಶಿಕ್ಷ ರಾಜ್ಯೇನ। ತಮುವಾಚ ದೇವಾಪಿಃ ಪುರೋಹಿತಸ್ತೇಽಸಾನಿ ಯಾಜಯಾನಿ ಚ ತ್ವೇತಿ ॥** (ನಿ. ೨-೧೧)

ಪೂರ್ವಕಾಲದಲ್ಲಿ ಕುರುವಂಶದಲ್ಲಿ ಋಷ್ಟಿಷೇಣನೆಂಬ ರಾಜನಿಗೆ ದೇವಾಪಿ, ಶಂತನು ಎಂಬ ಇರ್ವರು ಪುತ್ರರಿದ್ದರು. ಅವರಲ್ಲಿ ದೇವಾಪಿಯೆಂಬುವನು ಹಿರಿಯನು; ಶಂತನು ಎಂಬುವನು ಕಿರಿಯನು. ಇವರ ತಂದೆಯಾದ ಋಷ್ಟಿಷೇಣನು ಮೃತನಾದ ಬಳಿಕ ಅವನ ಹಿರಿಯಮಗನಾದ ದೇವಾಪಿ ಎಂಬುವನು ರಾಜನಾಗಬೇಕೆಂದು ಇಚ್ಛಿಸಿದನು. ಆದರೆ ಇವನ ತಮ್ಮನಾದ ಶಂತನುವು ಅದಕ್ಕೆ ಅವಕಾಶಕೊಡದೆ ತಾನೇ ರಾಜ್ಯಕ್ಕೆ ದೊರೆಯಾಗಬೇಕೆಂದು ಬಯಸಿ ಅಣ್ಣನಾದ ದೇವಾಪಿಯನ್ನು ಓಡಿಸಿ ತಾನೇ ರಾಜ್ಯವಾಳಲು ಮೊದಲು ಮಾಡಿದನು ಅಣ್ಣನಾದ ದೇವಾಪಿಯು ವ್ಯಾಕುಲವುಳ್ಳವನಾಗಿ ಕಾಡಿಗೆ ಹೋಗಿ ತಪಸ್ಸನ್ನು ಮಾಡುತ್ತಾ ಕಾಲಕಳೆಯುತ್ತಿದ್ದನು. ಹೀಗಿರಲು ಇವನ ದೇಶದಲ್ಲಿ ೧೨ ವರ್ಷಗಳವರಿಗೆ ಮಳೆಯೇ ಬರದೆ ಮಹಾಕ್ಷಾಮವು ಪ್ರಾಪ್ತವಾಯಿತು. ಆಗ ರಾಜನಾದ ಶಂತನುವು ಇದಕ್ಕೆ ಏನು ಮಾಡಬೇಕೆಂದು ಆಲೋಚಿಸಿ ಬ್ರಾಹ್ಮಣರ ಸಲಹೆಯನ್ನು ಕೇಳಿದನು. ಅದಕ್ಕೆ ಬ್ರಾಹ್ಮಣರು ರಾಜನನ್ನು ಕುರಿತು–ಧರ್ಮಶಾಸ್ತ್ರಪ್ರಕಾರ ರಾಜನ ಹಿರಿಯ ಮಗನೇ ರಾಜ್ಯಕ್ಕೆ ಅಧಿಕಾರಿಯು. ಆದುದರಿಂದ ರಾಜ್ಯಭಾರವನ್ನು ನಿನ್ನ ಅಣ್ಣನಾದ ದೇವಾಪಿಯೇ ಮಾಡಬೇಕಾಗಿದ್ದಿತು. ಆದರೆ ನೀನು ಅದಕ್ಕವಕಾಶ ಕೊಡದೆ ಅವನನ್ನು ಓಡಿಸಿ ರಾಜ್ಯವನ್ನು ಆಕ್ರಮಿಸಿರುವೆ. ಹೀಗೆ ನೀನು ಅಧರ್ಮವನ್ನು ಆಚರಿಸುತ್ತಿರುವುದರಿಂದ ವೃಷ್ಟಿದೇವನು ನಿನ್ನ ರಾಜ್ಯದಲ್ಲಿ ಮಳೆಗರೆಯುವುದಿಲ್ಲ ಎಂದು ಹೇಳಿದರು. ಶಂತನುರಾಜನು ತಾನು ಮಾಡಿದ ಅನ್ಯಾಯಕ್ಕೆ ಪಶ್ಚಾತ್ತಾಪಪಟ್ಟು ವನದಲ್ಲಿ ತಪಸ್ಸುಮಾಡುತ್ತಿದ್ದ ತನ್ನ ಅಣ್ಣನಾದ ದೇವಾಪಿಯನ್ನು ಕರೆಸಿ ಅವನಿಗೆ ರಾಜ್ಯವನ್ನು ಒಪ್ಪಿಸಿದನು. ಆದರೆ ದೇವಾಪಿಯು ರಾಜ್ಯವು ತನಗೆ ಬೇಡವೆಂದೂ ತಾನು ವನದಲ್ಲಿ ತಪಸ್ಸನ್ನು ಮಾಡುತ್ತಾ ನಿವೃತ್ತಿಮಾರ್ಗವನ್ನು ಆಶ್ರಯಿಸುವೆನೆಂದೂ ಹೇಳಿ, ರಾಜ್ಯದಲ್ಲಿ ಉಂಟಾಗಿರುವ ಅನಾವೃಷ್ಟಿಪರಿಹಾರಾರ್ಥವಾಗಿ ಶಂತನುವು ಯಜ್ಞ ಮಾಡಬೇಕೆಂದೂ ಅದರಲ್ಲಿ ತಾನು ಪೌರೋಹಿತ್ಯವನ್ನು ವಹಿಸಿ ವೃಷ್ಟಿಯಾಗಲು ಸಹಾಯಮಾಡುವನೆಂದೂ ಹೇಳಿದನು. ಅದಕ್ಕೆ ರಾಜನು ಒಪ್ಪಲು ದೇವಾಪಿಯು ಅವನ ಯಜ್ಞದಲ್ಲಿ ಹೋತೃವೆಂಬ ಋತ್ವಿಜನ ಪಾತ್ರವನ್ನು ವಹಿಸಿದನು.

ಬೃಹಸ್ಪತಿಯು ಬ್ರಹ್ಮನೆಂದು ಋತ್ವಿಜನಾದನು. ವೃಷ್ಟಿನಿರ್ವರ್ತಣಕ್ಕಾಗಿ ಮಾಡುತ್ತಿರುವ ಆ ಯಜ್ಞದಲ್ಲಿ ಹೋತೃವಾದ ದೇವಾಪಿಯು ಬ್ರಹ್ಮನಾದ ಬೃಹಸ್ಪತಿಯನ್ನು ಕುರಿತು ಎಲೈ ಬೃಹಸ್ಪತಿಯೇ, ನಿನಗೆ ದೇವತೆಗಳ ಮನಸ್ಸಿನ ಮೇಲೆ ಬಹಳವಾದ ಪ್ರಭಾವವಿರುವುದು. ಆದುದರಿಂದ ಅವರನ್ನು ಒಲಿಸಿಕೊಳ್ಳುವ ಮಂತ್ರಗಳನ್ನು ನನಗೆ ತಿಳಿಸಬೇಕು ಎಂದು ಪ್ರಾರ್ಥಿಸಲಾಗಿ ಬೃಹಸ್ಪತಿಯು ಹಾಗೇ ಆಗಲೆಂದು ವೃಷ್ಟಿನಿರ್ವರ್ತಣಕ್ಕೆ ಬೇಕಾದ ದೇವತೆಗಳ ಪ್ರಾರ್ಥನೆಗಳನ್ನೊಳಗೊಂಡ ಮಂತ್ರಗಳನ್ನು ಹೋತೃವಾದ ದೇವಾಪಿಗೆ ಹೇಳಿಕೊಟ್ಟನು. ಆ ಮಂತ್ರಗಳಿಂದ ದೇವತೆಗಳನ್ನುದ್ದೇಶಿಸಿ ಹೋಮಮಾಡಲು ಯಥೇಚ್ಛವಾಗಿ ವೃಷ್ಟಿಯಾಯಿತು ಎಂದು ಹೇಳಿದೆ. ಆದುದರಿಂದ ಈ ಸೂಕ್ತಕ್ಕೆ ವೃಷ್ಟಿಕಾಮ ಸೂಕ್ತವೆಂದೂ ಹೆಸರು. ಈ ವಿಷಯವು ಕೆಲವು ವ್ಯತ್ಯಾಸಗಳೊಡನೆ ವಿಷ್ಣುಪುರಾಣ ೪-೨೦-೭; ಮಹಾಭಾರತ ಆದಿಪರ್ವ; ಭಾಗವತಪುರಾಣ ೯-೨೨-೧೪ ರಿಂದ ೧೭; ಇತ್ಯಾದಿ ಪುರಾಣಗ್ರಂಥಗಳಲ್ಲಿಯೂ ಉಕ್ತವಾಗಿದೆ.

ಋ. ಸಂ. ೧೦ನೆಯ ಮಂಡಲದಲ್ಲಿ ೧೦೮ ನೆಯ ಸೂಕ್ತದಲ್ಲಿ ಮತ್ತೊಂದು ಉಪಾಖ್ಯಾನವಿರುವುದು. ಪಣಿಗಳೆಂಬ ಅಸುರರು ದೇವತೆಗಳ ಗೋವುಗಳನ್ನು (ಉದಕವಿಶಿಷ್ಟಗಳಾದ ಮೇಘಗಳನ್ನು) ಅಪಹರಿಸಿ ಅಭೇದ್ಯವಾದ ಒಂದು ದುರ್ಗದಲ್ಲಿ ಬಚ್ಚಿಟ್ಟಿದ್ದರು. ಅದನ್ನು ಹುಡುಕುವಂತೆ ಇಂದ್ರನು ದೇವಶುನಿಯಾದ ಸರಮೆಯನ್ನು ಕಳುಹಿಸಿದನು. ಆ ಸರಮೆಯು ಪಣಿಗಳಲ್ಲಿಗೆ ಬಂದು ಅವರೊಡನೆ ವಾಗ್ವಾದವನ್ನು ಬೆಳಸಿ ಅಪಹರಿಸಿದ್ದ ಗೋವುಗಳನ್ನು ಹಿಂದಕ್ಕೆ ಕೊಡುವಂತೆ ಕೇಳಲು ಆ ಪಣಿಗಳು-ಇಂದ್ರನ ಶಕ್ತಿಯೆಷ್ಟರದು? ತಾವು ಮಹಾವೀರರು ಮತ್ತು ತಮ್ಮ ಆಯುಧಗಳು ತುಂಬಾ ಹರಿತವಾದವು ಆದ್ದರಿಂದ ತಮ್ಮನ್ನು ಗೆಲ್ಲಲು ದೇವತೆಗಳಿಂದ ಸಾಧ್ಯವಿಲ್ಲವೆಂದೂ, ಗೋವುಗಳನ್ನು ಇಟ್ಟಿರುವ ಸ್ಥಳವನ್ನು ತಿಳಿಯಲು ದೇವತೆಗಳಿಗೂ ಸಾಧ್ಯವಿಲ್ಲವೆಂದೂ, ಆದುದರಿಂದ ಸರಮೆಯು ದೇವತೆಗಳ ಪಕ್ಷವನ್ನು ಬಿಟ್ಟುತಮ್ಮಗುಂಪಿಗೇ ಸೇರಿದಲ್ಲಿ ಬೇಕಾದ ಐಶ್ವರ್ಯಾದಿಗಳನ್ನು ಕೊಡುವುವೆಂದೂ, ನಾನಾವಿಧವಾಗಿ ಪ್ರೇರಿಸಿದರೂ ಸರಮೆಯು ಅದಕ್ಕೊಪ್ಪದೆ ಅಲ್ಲಿಂದ ಹಿಂತಿರುಗಿ ಆ ವಿಷಯವನ್ನೆಲ್ಲಾ ದೇವತೆಗಳಿಗೆ ತಿಳಿಸಿದಳು. ಆಗ ಬೃಹಸ್ಪತಿಯು ತನ್ನ ಸಾಮರ್ಥ್ಯದಿಂದ ಆ ಗೋವುಗಳನ್ನು ಬಚ್ಚಿಟ್ಟಿದ್ದ ಸ್ಥಳವನ್ನು ಪತ್ತೆಮಾಡಿದನು. ಬಳಿಕ ದೇವತೆಗಳು ಅವರನ್ನು ನಿಗ್ರಹಿಸಿ ಗೋವುಗಳನ್ನು ಹಿಂದಕ್ಕೆ ತಂದರು ಎಂಬ ಉಪಾಖ್ಯಾನವಿದೆ.

ಇಂತಹ ಅನೇಕಸಾಹಸಕಾರ್ಯಗಳಲ್ಲಿ ಬೃಹಸ್ಪತಿಯ ಪಾತ್ರವು ಬಹಳ ಮುಖ್ಯವಾಗಿದೆ. ಅದರಲ್ಲಿಯೂ ಮಾನವರಿಗೆ ವೃಷ್ಟಿಬೇಕಾದ ಸಹಾಯಮಾಡಲು ಬೃಹಸ್ಪತಿಯ ಸಹಾಯವು ಅವಶ್ಯಕವಾಗಿದೆ. ಈ ವಿಧವಾದ ಪ್ರಾರ್ಥನೆಯೇ ಬೃಹಸ್ಪತಿದೇವತಾಕವಾದ ಸೂಕ್ತಗಳಲ್ಲಿ ವಿಶೇಷವಾಗಿ ಕಂಡುಬರುವುದು.

ಋಗ್ವೇದದಲ್ಲಿ ವರ್ಣಿಸಿರುವಂತೆ ಬೃಹಸ್ಪತಿಯ ಗುಣಗಳು, ಕಾರ್ಯಸಾಧನೆಗಳು ಯಾವರೀತಿ ಇವೆಯೆಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸೋಣ. ಬೃಹಸ್ಪತಿಯು ದ್ಯಾವಾಪೃಥಿವಿಗಳಿಂದ ಜನಿಸಿದವನು ಮತ್ತು ಅವರ ಮಹತ್ತ್ವದಿಂದಲೇ ಅವನ ಪೋಷಣೆಯಾಗಿದೆ. (ಋ. ಸಂ. ೭-೯೭-೮) ಆದರೆ ಅವನನ್ನು ತ್ವಷ್ಟೃವು ಉತ್ಪತ್ತಿಮಾಡಿದನೆಂದು ಒಂದು ಕಡೆ (೨-೨೩-೧೭) ಹೇಳಿದೆ. ಅವನಿಗೆ ದೇವತೆಗಳ ಜನಕನೆಂದು ಹೆಸರಿದೆ. (೨-೨೬-೩); ಕಮ್ಮಾರನ ಸುತ್ತಿಗೆಯ ಏಟಿನಿಂದ ಅಗ್ನಿಕಣಗಳು ಹಾರುವಂತೆ ದೇವತೆಗಳು ಇವನಿಂದ ಉತ್ಪನ್ನರಾದರು (೧೦-೭೨-೮) ಎಂದೂ ಹೇಳಿದೆ.

ಅವನಿಗೆ ಬ್ರಹ್ಮ (ಬ್ರಹ್ಮ ಎಂಬ ಋತ್ವಿಜ) ನೆಂದು ಹೆಸರಿದೆ. (೧೦-೧೪೧-೩) ಋತ್ವಿಜರೊಡನೆ ಇವನಿಗೆ ಸಂಬಂಧವಿದೆ (೭-೧೦-೪; ೧೦-೧೪-೩) ಅಂಗಿರಸನೆಂತಲೂ ಹೆಸರಿದೆ. (೪-೪೦-೧; ೪-೭೩-೧; ೧೦-೪೭-೬)

ಸ್ತುತಿವಾಕ್ಯಗಳನ್ನು ರಚಿಸುವವನು, ಉಚ್ಚರಿಸುವವನು; ಅಶ್ವಗಳಿಗೆ ಅಧಿಪತಿ, ಪ್ರೇರಕ (೨–೨೩–೧, ೨; ೧–೪೦–೫; ೧೦–೯೮–೭); ಮಂತ್ರದಿಂದಲೇ ತನ್ನ ಉದ್ದೇಶಗಳನ್ನೆಲ್ಲಾ ಸಾಧಿಸುತ್ತಾನೆ (೨–೨೪–೩); ಯಜ್ಞವೆಂಬ ದೇದೀಪ್ಯಮಾನವಾದ ರಥವನ್ನೇರಿಕೊಂಡು ದೇವತೆಗಳ ಮತ್ತು ಸ್ತೋತೃಗಳ ಶತ್ರುಗಳನ್ನು ಜಯಿಸಲು ಹೊರಡುತ್ತಾನೆ. (೨–೨೩-೩); ಇವನು ಶ್ರದ್ಧಾಳುಗಳ ಪೋಷಕ ಮತ್ತು ರಕ್ಷಕನು ಅವರಿಗೆ ಮಾರ್ಗದರ್ಶಕನಾಗಿದಾನೆ; ಅವರನ್ನು ವಿಪತ್ತುಗಳಿಂದ ಪಾರುಮಾಡುತ್ತಾನೆ. (೨–೨೩–೪) ಅವರಿಗೆ ಸಂಪದಾದಿಗಳನ್ನು ಅನುಗ್ರಹಿಸುತ್ತಾನೆ (೨–೨೩–೯) ದೇವತೆಗಳಿಗೆಲ್ಲಾ ಪಿತೃವೆನಿಸಿಕೊಂಡಿದಾನೆ; ದಿವ್ಯವಾದ ಸಮಸ್ತ ಗುಣಗಳಿಂದ ಕೂಡಿದಾನೆ (೩–೬೨–೪; ೪–೫೦–೬) ವಿಶ್ವರೂಪನು; ಎಲ್ಲರೂ ಅಪೇಕ್ಷಿಸುವ ವಸ್ತುಗಳೆಲ್ಲವೂ ಇವನಲ್ಲಿವೆ (೭–೧೦–೪, ೭–೯೭–೪), ಸುವರ್ಣಮಯವಾದ ಈಟಿಯನ್ನು ಧರಿಸಿದಾನೆ (೭–೯೭–೭) ಇಂದ್ರನೊಡನೆ ಸೇರಿ ಇವನೂ ಸೈನ್ಯಗಳಿಗೆ ನಾಯಕನಾಗಿದಾನೆ. (೧೦–೧೦೩–೮) ಆಯುಸ್ಸನ್ನು ವೃದ್ಧಿಮಾಡುವವನು (೧೦–೧೦೦–೫), ಸಸ್ಯಗಳು ಇವರಿಂದ ಉದ್ಭೂತವಾದವು, (೧೦–೯೭–೧೫ ಮತ್ತು ೧೯): ಕಪಿಲವರ್ಣದ ಅಶ್ವಗಳೇ ಅವನ ವಾಹನವೆಂದು ಹೇಳಿದೆ. (ನಿ. ೨–೨೮)

ರಾಕ್ಷಸರಿಂದ ಭಾವಿಯಲ್ಲಿ ಎಸೆಯಲ್ಪಟ್ಟು, ಸಹಾಯಕ್ಕಾಗಿ ದೇವತೆಗಳನ್ನು ಕರೆಯುತ್ತಿದ್ದ ತ್ರಿತನ ಆರ್ತನಾದವನ್ನು ಕೇಳಿ, ಆ ಅಪಾಯಕರವಾದ ಅವಸ್ಥೆಯಿಂದ ಬೃಹಸ್ಪತಿಯು ಅವನನ್ನು ಬಿಡುಗಡೆಮಾಡಿದನೆಂದೂ (೧–೧೦೫–೧೭), ಇಂದ್ರನೊಡನೆ ಸೇರಿ ಬೃಹಸ್ಪತಿಯು ಅಂಧಕಾರಾವೃತವಾಗಿದ್ದ ಉದಕವನ್ನು ಪುನಃ ಪ್ರವಹಿಸುವಂತೆ ಮಾಡಿದನೆಂದೂ (೨–೨೩–೧೮; ೧–೫೬–೫); ಹೇಳಿದೆ.

ಮಧುಭರಿತವಾದ ಕೂಪದ ಶಿಲಾದ್ವಾರವನ್ನು ಬೃಹಸ್ಪತಿಯು ತನ್ನ ಸಾಮರ್ಥ್ಯದಿಂದ ಒಡೆದನು. ದೇವತೆಗಳು ಆ ಮಧುವನ್ನು ಪಾನಮಾಡಿ ಯಥೇಚ್ಛವಾಗಿ ಮಳೆಗರೆದರು. (೨–೨೪–೩, ೪); ಬೃಹಸ್ಪತಿಯು ಬೆಂಕಿಕಾರುತ್ತಿರುವ ಕಿರಣಗಳಿಂದ ವಲನ ದುರ್ಗಗಳನ್ನು ಭೇದಿಸಿದಾಗ ಗೋಸಮೂಹಗಳು ಗೋಚರವಾದುವು; ಮೊಟ್ಟೆಯನ್ನು ಒಡೆಯುವಂತೆ ಗೋವುಗಳನ್ನು ಹೊರಕ್ಕೆ ಅಟ್ಟಿದನು; ಶಿಲೆಯಿಂದ ಆವೃತವಾದ (ನೀರು) ಮಧುವನ್ನು ಕಂಡು, ತನ್ನ ಸಿಂಹನಾದದಿಂದಲೇ ಸೀಳಿ ಅದನ್ನು ಹೊರಕ್ಕೆ ಬರಮಾಡಿದನು (೧೦–೬೮–೪ ರಿಂದ ೯) ಬೃಹಸ್ಪತಿಯು ಹಸುಗಳನ್ನು ಬಂಡೆಗಳಿಂದ ಹೊರಕ್ಕೆ ತಂದನು; ವಲನ ಗೋವುಗಳನ್ನು ಹಿಡಿದು ತನ್ನ ವಶಪಡಿಸಿಕೊಂಡನು (೧೦–೬೮–೫).

ಬೃಹಸ್ಪತಿಯು ದೇವತ್ವವಿಶಿಷ್ಟನು (೨–೨೩–೨); ಎಲ್ಲಾ ದೇವತೆಗಳಿಗೂ ಸ್ವಕೀಯನು (೩–೬೨–೪; ೪–೫೦–೬): ಮತ್ತು ದೇವತೆಗಳಲ್ಲೆಲ್ಲಾ ಹೆಚ್ಚು ದೇವತ್ವವುಳ್ಳವನು: ದೇವತೆಯ ರೂಪದಿಂದ ಎಲ್ಲಾ ದೇವತೆಗಳನ್ನೂ ಎಲ್ಲಾ ಪದಾರ್ಥಗಳನ್ನೂ ತನ್ನಲ್ಲಿ ಸೇರಿಸಿಕೊಳ್ಳುತ್ತಾನೆ (೨–೨೪–೧೧; ೮–೬೧–೧೮). ಭೂಮಿಯ ಎರಡು ಕೊನೆಗಳನ್ನು ಸಮರ್ಥನಾದ ಇವನು ದೂರವಾಗಿ ಇಟ್ಟಿರುತ್ತಾನೆ. (೪–೫೦–೧): ಸೂರ್ಯಚಂದ್ರರು ಒಬ್ಬರಾದ ಮೇಲೊಬ್ಬರು ಉದಯಿಸುವುದೂ ಅವನ ಅನುಕರಣೀಯವಾದ ಕೃತ್ಯವೇ ಆಗಿದೆ (೧೦–೬೮–೧೦). ತೈತ್ತಿರೀಯ ಸಂಹಿತೆಯಲ್ಲಿ (ಯಜುರ್ವೇದದಲ್ಲಿ) ಬೃಹಸ್ಪತಿಗೂ ಕೆಲವು ನಕ್ಷತ್ರಗಳಿಗೂ ಸಂಬಂಧವು ಉಕ್ತವಾಗಿದೆ. ಬೃಹಸ್ಪತಿಯು ಪುಷ್ಯ ನಕ್ಷತ್ರದ ದೇವತೆ (ತೈ. ಸಂ. ೪–೪–೧೦–೧); ಪುರಾಣಾದಿಗಳಲ್ಲಿ ಬೃಹಸ್ಪತಿಯನ್ನು ವಾಚಸ್ಪತಿಯೆಂದೂ, ಬೃಹಸ್ಪತಿ ಗ್ರಹಾಭಿಮಾನಿದೇವತೆಯೆಂದೂ ವರ್ಣಿಸಿದೆ.

ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿ ಎಂಬ ದೇವತೆಗಳು ಅಗ್ನಿಯ ರೂಪಾಂತರಗಳೆಂದು ಕೆಲವು ಪಂಡಿತರು ಅಭಿಪ್ರಾಯಪಟ್ಟಿದ್ದಾರೆ. M. Langlois ಎಂಬ ಪಂಡಿತನು ತನ್ನ ಋಗ್ವೇದ ಭಾಷಾಂತರವೆಂಬ ಗ್ರಂಥದ

ಭಾಗ—I p. 249, 254, 578 ಗಳಲ್ಲಿ ಈ ಎರಡು ದೇವತೆಗಳೂ ಅಗ್ನಿಯ ರೂಪಾಂತರಗಳೆಂದು ಅನೇಕ ಉದಾಹರಣೆಗಳಿಂದ ಸಮರ್ಥಿಸಿದ್ದಾನೆ. Wilson ಎಂಬ ಪಂಡಿತನೂ ತನ್ನ ಋಗ್ವೇದ ಭಾಷಾಂತರದ ಮೊದಲನೆಯ ಭಾಗದ ಪೀಠಿಕೆಯಲ್ಲಿ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ; Max Muller ಎಂಬ ಪಂಡಿತನು ಸಹ— Brihaspati and Brahmanaspati are both varieties of Agni, the priest and the purohit of the Gods and men. and as such he is invoked together with the Maruts &c. ಎಂದರೆ, ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿ ಎಂಬೆರಡೂ ಅಗ್ನಿಯ ರೂಪಾಂತರಗಳು, ದೇವತೆಗಳಿಗೂ ಮನುಷ್ಯರಿಗೂ ಋತ್ವಿಜ ಮತ್ತು ಪುರೋಹಿತ ಸ್ಥಾನದಲ್ಲಿರುವವರು; ಈ ದೃಷ್ಟಿಯಿಂದಲೇ ಮರುದ್ದೇವತೆಗಳೊಡನೆ ಅವರಿಗೆ ಆಹ್ವಾನವಿತ್ತಿರುವುದು ಅನೇಕ ಕಡೆ ಇದೆ ಎಂದು ಹೇಳಿದ್ದಾನೆ. ಈ ರೀತಿ ಅಗ್ನಿಗೂ ಬೃಹಸ್ಪತಿ ಬ್ರಹ್ಮಣಸ್ಪತಿಗಳಿಗೂ ಇರುವ ತಾದಾತ್ಮ್ಯವನ್ನು ಹೇಳುವ ಒಂದೆರಡು ಉದಾಹರಣೆಗಳನ್ನು ಕೊಡುತ್ತೇವೆ.

ತ್ವಮಗ್ನ ಇಂದ್ರೋ ವೃಷಭಃ ಸತಾಮಸಿ ತ್ವಂ ವಿಷ್ಣುರುರುಗಾಯೋ ನಮಸ್ಯಃ ।
ತ್ವಂ ಬ್ರಹ್ಮಾ ರಯಿವಿದ್ಬ್ರಹ್ಮಣಸ್ಪತೇ ತ್ವಂ ವಿಧರ್ತಃ ಸಚಸೇ ಪುರಂಧ್ಯಾ ॥
(ಋ. ಸಂ. ೨-೧-೩)

ಎಲೈ ಅಗ್ನಿಯೇ, ಸಜ್ಜನರಲ್ಲಿ ಅತಿ ಶ್ರೇಷ್ಠನಾದ ಇಂದ್ರನೇ ನೀನು; ಪೂಜ್ಯನೂ ಅತಿ ದೊಡ್ಡದೇಹವುಳ್ಳವನೂ ಆದ ವಿಷ್ಣುವು ನೀನೇ; ಎಲೈ ಬ್ರಹ್ಮಣಸ್ಪತಿಯೇ, ಧನಾಢ್ಯನಾದ ಬ್ರಹ್ಮನಾಮಕ ಋತ್ವಿಜನೂ ನೀನೇ ಎಂದು ಅಗ್ನಿಯನ್ನು ನಾನಾ ದೇವತೆಗಳ ಸ್ವರೂಪನೆಂದು ವರ್ಣಿಸಿದೆ.

ತಂ ಶುಭ್ರಮಗ್ನಿಮವಸೇ ಹವಾಮಹೇ ವೈಶ್ವಾನರಂ ಮಾತರಿಶ್ವಾನಮುಕ್ಥ್ಯಂ ।
ಬೃಹಸ್ಪತಿಂ ಮನುಷೋ ದೇವತಾತಯೇ ವಿಪ್ರಂ ಶ್ರೋತಾರಮತಿಥಿಂ ರಘುಷ್ಯದಂ ॥
(ಋ. ಸಂ. ೩-೨೬-೨)

ಶುಭ್ರನೂ, ಮಾನವವರ್ಗಕ್ಕೇ ಮಿತ್ರಭೂತನೂ ಆದ ಅಗ್ನಿಯನ್ನು ನಮ್ಮ ರಕ್ಷಣೆಗೋಸ್ಕರ ಆಹ್ವಾನಿಸುತ್ತೇವೆ; ಮಂತ್ರವಾಚ್ಯನಾಗಲು ಯೋಗ್ಯನಾದ ಮಾತರಿಶ್ವನನ್ನೂ, ಜ್ಞಾನಿಯೂ, ದೇವತೆಗಳನ್ನುದ್ದೇಶಿಸಿ ಸ್ತುತಿಸುವವನೂ, ಅತಿಥಿಸ್ಥಾನೀಯನೂ, ಶೀಘ್ರಗಾಮಿಯೂ ಆದ ಬೃಹಸ್ಪತಿಯನ್ನೂ ಮಾನುಷ ಸಂಬಂಧವಾದ ಯಜ್ಞಾದಿಕರ್ಮಗಳಿಗೆ ಬರುವಂತೆ ಆಹ್ವಾನಿಸುತ್ತೇವೆ ಇತ್ಯಾದಿ.

ಸಾಯಣಾಚಾರ್ಯರು ೫-೪೩-೧೨ ನೆಯ ಋಕ್ಕಿಗೆ ವ್ಯಾಖ್ಯಾನ ಬರೆಯುವಾಗ ಬೃಹಸ್ಪತಿ ಶಬ್ದಕ್ಕೆ—

ಅಥವಾ ಇಯಮಾಗ್ನೇಯೀ। ಬೃಹತಃ ಪರಿವೃಢಸ್ಯ ಕರ್ಮಣಃ ಸ್ವಾಮೀತಿ ಬೃಹಸ್ಪತಿರಗ್ನಿರುಚ್ಯತೇ। ತಥಾ ನೀಲವರ್ಣಧೂಮಪೃಷ್ಠತ್ವಸದನಸಾದನಹಿರಣ್ಯವರ್ಣತ್ವಾದಿಲಿಂಗೈರಪ್ಯಗ್ನಿರೇವ ಬೃಹಸ್ಪತಿಃ ॥

ಎಂದರೆ—ಅಥವಾ ಈ ಮಂತ್ರವು ಅಗ್ನಿದೇವತಾಪ್ರತಿಪಾದಕವಾದುದು ಎನ್ನಬಹುದು. ಪ್ರಸ್ತುತವಾದ ಯಜ್ಞರೂಪ ಮಹಾಕಾರ್ಯಕ್ಕೆ ಸ್ವಾಮಿಯಾದುದರಿಂದ ಅಗ್ನಿಗೆ ಬೃಹಸ್ಪತಿಯೆಂದು ಹೆಸರು. ಅದರಂತೆ ಕಪ್ಪಾದ ಧೂಮವೇ ಪೃಷ್ಠಭಾಗ. ಯಜ್ಞವೇದಿಯೇ ಸ್ಥಾನ, ಹಿರಣ್ಯವರ್ಣ ಮೊದಲಾದ ಲಕ್ಷಣಗಳಿಂದಲೂ ಬೃಹಸ್ಪತಿಯನ್ನು ಅಗ್ನಿಯೆಂದೇ ಹೇಳಬೇಕು ಎಂದು ಹೇಳಿದ್ದಾರೆ.

ಇನ್ನು ಅಗ್ನಿಗೂ ಬೃಹಸ್ಪತಿ ಬ್ರಹ್ಮಣಸ್ಪತಿಗಳಿಗೂ ಭೇದವನ್ನು ಹೇಳಿರುವ ಉದಾಹರಣೆಗಳನ್ನು ವಿಮರ್ಶೆ ಮಾಡೋಣ.

**ಸೋ ಉಷಾಮವಿಂದತ್ಸ ಸ್ವಃ೧ ಸೋ ಅಗ್ನಿಂ ಸೋ ಅರ್ಕೇಣ ವಿ ಬಬಾಧೇ ತಮಾಂಸಿ ।**
**ಬೃಹಸ್ಪತಿರ್ಗೋವಪುಷೋ ವಲಸ್ಯ ನಿರ್ಮಜ್ಜಾನಂ ನ ಪರ್ವಣೋ ಜಭಾರ ॥**

(ಋ. ಸಂ. ೧೦-೬೮-೯)

ಎಂಬ ಋಕ್ಕಿನಲ್ಲಿ ಬೃಹಸ್ಪತಿಯು — ಉಷಸ್ಸು, ಸ್ವರ್ಗ ಮತ್ತು ಅಗ್ನಿಗಳನ್ನು ಸಂಪಾದಿಸಿದನು ಮತ್ತು ಒಂದು ಮಂತ್ರದಿಂದ ಅಂಧಕಾರವನ್ನು ಪರಿಹರಿಸಿದನು ಎಂದು ಬೃಹಸ್ಪತಿ ಮತ್ತು ಅಗ್ನಿಯು ಬೇರೆ ಬೇರೆ ಎಂದು ಹೇಳಿದೆ.

**ಇಂದ್ರಂ ನೋ ಅಗ್ನೇ ವಸುಭಿಃ ಸಜೋಷಾ ರುದ್ರಂ ರುದ್ರೇಭಿರಾ ವಹಾ ಬೃಹಂತಂ ।**
**ಆದಿತ್ಯೇಭಿರದಿತಿಂ ವಿಶ್ವಜನ್ಯಾಂ ಬೃಹಸ್ಪತಿಮೃಕ್ವಭಿರ್ವಿಶ್ವವಾರಂ ॥**

(ಋ. ಸಂ. ೭-೧೦-೪)

ಎಂಬ ಋಕ್ಕಿನಲ್ಲಿ ವಸುಗಳಿಂದ ಸಹಿತನಾದ ಇಂದ್ರನನ್ನೂ, ಮರುದ್ದೇವತೆಗಳಿಂದ ಸಹಿತನಾದ ರುದ್ರನನ್ನೂ ಆದಿತ್ಯರು (ದೇವತೆ) ಗಳಿಂದ ಸಹಿತಳಾದ ವಿಶ್ವಜನನಿಯಾದ ಅದಿತಿಯನ್ನು ಸ್ತೋತ್ರಮಾಡುತ್ತಿರುವ ಅಂಗಿರಾ ಋಷಿಗಳಿಂದ ಸಹಿತನಾದ ಬೃಹಸ್ಪತಿಯನ್ನೂ ಕರೆತರಬೇಕೆಂದು ಅಗ್ನಿಯನ್ನು ಪ್ರಾರ್ಥಿಸಿದೆ. ಇದಲ್ಲದೆ ಬೃಹಸ್ಪತಿ ಅಥವಾ ಬ್ರಹ್ಮಣಸ್ಪತಿಯೇ ಬೇರೆ ಅಗ್ನಿಯೇ ಬೇರೆ ಎಂಬ ಅರ್ಥವನ್ನು ಸೂಚಿಸುವ ಋಕ್ಕುಗಳು—೩-೨೦-೫, ೪-೪೦-೧, ೫-೫೧-೧೨, ೭-೪೧-೧, ೭-೪೪-೧, ೯-೫-೧೧, ೧೦-೩೫-೧೧, ೧೦-೬೫-೧, ೧೦-೧೩೦-೪, ೧೦-೧೪೧-೩, ಮೊದಲಾದ ಮಂತ್ರಗಳು ಋಗ್ವೇದದಲ್ಲಿ ಬಹಳವಾಗಿವೆ. ಆದುದರಿಂದ ಅಗ್ನಿಯೇ ಬೇರೆ, ಬೃಹಸ್ಪತಿಯೇ ಬೇರೆ, ಬ್ರಹ್ಮಣಸ್ಪತಿಯೇ ಬೇರೆ ಎಂಬ ಸಿದ್ಧಾಂತವೇ ಋಗ್ವೇದದಲ್ಲಿ ಸಮರ್ಥಿತವಾಗಿದೆ.

## ಇಪ್ಪತ್ತನಾಲ್ಕನೆಯ ಸೂಕ್ತವು

**ಅಥ ಋಷಿಚ್ಛಂದೋದೇವತಾವಿನಿಯೋಗಪುರಃಸರಂ ಸಪ್ತಮೋ ವ್ಯಾಖ್ಯಾಯತೇ ॥ ಗಾರ್ತ್ಸಮದಸ್ಯ ದ್ವಿತೀಯಮಂಡಲಸ್ಯ ತೃತೀಯೇಽನುವಾಕೇ ದಶ ಸೂಕ್ತಾನಿ । ತತ್ರೈಕಂ ಸೂಕ್ತಂ ವ್ಯಾಕೃತಂ । ಸೇಮಾಮಿತಿ ಷೋಡಶರ್ಚಂ ದ್ವಿತೀಯಂ ಸೂಕ್ತಂ । ಅತ್ರಾನುಕ್ರಮ್ಯತೇ । ಸೇಮಾಂ ಷೋಡಶಾಂತ್ಯಾ ತ್ರಿಷ್ಟುಪ್ ದ್ವಾದಶೀ ಚ ಸೈಂದ್ರೀ ಚೇತಿ । ಮಂಡಲದ್ರಷ್ಟಾ ಗೃತ್ಸಮದ ಋಷಿಃ । ದ್ವಾದಶೀಷೋಡಶ್ಯೌ ತ್ರಿಷ್ಟುಭೌ । ಶಿಷ್ಟಾಶ್ಚತುರ್ದಶ ಜಗತ್ಯಃ । ಬ್ರಾಹ್ಮಣಸ್ಪತ್ಯಂ ಹೇತ್ಯುಕ್ತತ್ವಾತ್ ತುಹ್ಯಾದಿಪರಿಭಾಷಯೇದಮಾದೀನಿ ತ್ರೀಣಿ ಸೂಕ್ತಾನಿ ಬ್ರಾಹ್ಮಣಸ್ಪತ್ಯಾನಿ । ಅಸ್ಯ ಸೂಕ್ತಸ್ಯ ದ್ವಾದಶ್ಯೈಂದ್ರೀ ಇಂದ್ರದೇವತ್ಯಾ । ಚಶಬ್ದಾದ್ಬ್ರಾಹ್ಮಣಸ್ಪತ್ಯಾ ಚ ॥ ಸಾಮಾನ್ಯವಿನಿಯೋಗಃ ಪೂರ್ವಮೇವೋಕ್ತಃ । ವಿಶೇಷತಸ್ತು ಲಿಂಗಾದವಗಂತವ್ಯಃ ॥**

ಅನುವಾದವು—ದ್ವಿತೀಯಾಷ್ಟಕದಲ್ಲಿ ಆರನೆಯ ಅಧ್ಯಾಯದ ಅರ್ಥಾನುವಾದವನ್ನು ವಿವರಿಸಿದ್ದಾಯಿತು. ಈಗ ಏಳನೆಯ ಅಧ್ಯಾಯವನ್ನು, ವಿಷಯ ವಿಮರ್ಶೆಗಳ ಪೂರ್ವಕವಾಗಿ ವಿವರಿಸಲಾಗುವುದು. ಗೃತ್ಸಮದ ಋಷಿ ದೃಷ್ಟವಾದ ಈ ಎರಡನೆಯ ಮಂಡಲದ ಮೂರನೆಯ ಅನುವಾಕದಲ್ಲಿ ಒಟ್ಟು ಹತ್ತು ಸೂಕ್ತಗಳಿರುವವು. ಅವುಗಳಲ್ಲಿ ಮೊದಲನೆಯ ಸೂಕ್ತವು ಹಿಂದೆಯೇ ಎಂದರೆ ಆರನೆಯ ಅಧ್ಯಾಯದ ಕೊನೆಯಲ್ಲಿ ವಿವರಿಸಲ್ಪಟ್ಟಿರುವುದು. ಈಗ **ಸೇಮಾಂ** ಎಂಬ ಎರಡನೆಯ ಸೂಕ್ತವನ್ನು ವಿವರಿಸುವೆವು. ಈ ಸೂಕ್ತದಲ್ಲಿ ಹದಿನಾರು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಸೇಮಾಂ ಷೋಡಶಾಂತ್ಯಾ ತ್ರಿಷ್ಟುಪ್ ದ್ವಾದಶೀ ಚ ಸೈಂದ್ರೀ ಚೇತಿ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಮಂಡಲದ್ರಷ್ಟೃವಾದ ಗೃತ್ಸಮದನೇ ಋಷಿಯು; ಹನ್ನೆರಡು ಮತ್ತು ಹದಿನಾರನೆಯ ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು; ಉಳಿದ ಹದಿನಾಲ್ಕು ಋಕ್ಕುಗಳು ಜಗತೀ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ ಹೇಳಿರುವಂತೆ ಈ ಮೂರು ಸೂಕ್ತಗಳಿಗೆ ಎಂದರೆ ಈ ಸೂಕ್ತಕ್ಕೂ ಮುಂದಿನ ಎರಡು ಸೂಕ್ತಗಳಿಗೂ ಬ್ರಹ್ಮಣಸ್ಪತಿಯೇ ದೇವತೆಯು; ಈ ಸೂಕ್ತದ ಹನ್ನೆರಡನೇ ಋಕ್ಕಿಗೆ ಇಂದ್ರನು ದೇವತೆಯು ಮತ್ತು ಅನುಕ್ರಮಣಿಕೆಯಲ್ಲಿ ಚ ಶಬ್ದ ಪ್ರಯೋಗವಿರುವುದರಿಂದ ಈ ಋಕ್ಕಿಗೆ ಇಂದ್ರ ಮತ್ತು ಬ್ರಹ್ಮಣಸ್ಪತಿ ಎಂಬಿಬ್ಬರೂ ದೇವತೆಗಳು. ಈ ಸೂಕ್ತದ ಸಾಮಾನ್ಯ ವಿನಿಯೋಗವು ಹಿಂದೆಯೇ ಹೇಳಲ್ಪಟ್ಟಿರುವುದು. ವಿಶೇಷ ವಿನಿಯೋಗವನ್ನು ಆಯಾ ಮಂತ್ರದ ಅರ್ಥಾನುಸಾರವಾಗಿ ತಿಳಿದುಕೊಳ್ಳಬಹುದು.

## ಸೂಕ್ತ—೨೪

ಮಂಡಲ—೨ ॥ ಅನುವಾಕ—೩ ॥ ಸೂಕ್ತ—೨೪ ॥
ಅಷ್ಟಕ—೨ ॥ ಅಧ್ಯಾಯ—೭ ॥ ವರ್ಗ—೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೬ ॥

॥ ಋಷಿಃ—ಗೃತ್ಸಮದಃ ॥

॥ ದೇವತಾ—೧ ೧೧, ೧೩–೧೬ ಬ್ರಹ್ಮಣಸ್ಪತಿಃ । ೧೨–ಬ್ರಹ್ಮಣಸ್ಪತಿರಿಂದ್ರಶ್ಚ ॥

॥ ಛಂದಃ—೧–೧೧, ೧೩–೧೫, ಜಗತೀ । ೧೨, ೧೬ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಸೇಮಾಮವಿಡ್ಢಿ ಪ್ರಭೃತಿಂ ಯ ಈಶಿಷೇಽಯಾ ವಿಧೇಮ ನವಯಾ ಮಹಾ ಗಿರಾ ।
ಯಥಾ ನೋ ಮೀಢ್ವಾನ್ಸ್ತವತೇ ಸಖಾ ತವ ಬೃಹಸ್ಪತೇ ಸೀಷಧಃ ಸೋತ ನೋ ಮತಿಂ ॥ ೧ ॥

॥ ಪದಪಾಠಃ ॥

ಸಃ । ಇಮಾಂ । ಅವಿಡ್ಢಿ । ಪ್ರಽಭೃತಿಂ । ಯಃ । ಈಶಿಷೇ । ಅಯಾ । ವಿಧೇಮ । ನವಯಾ । ಮಹಾ । ಗಿರಾ ।

ಯಥಾ । ನಃ । ಮೀಢ್ವಾನ್ । ಸ್ತವತೇ । ಸಖಾ । ತವ । ಬೃಹಸ್ಪತೇ । ಸೀಸಧಃ । ಸಃ । ಉತ । ನಃ ಮತಿಂ ॥ ೧

॥ ಸಾಯಣಭಾಷ್ಯಂ ॥

ಹೇ ಬ್ರಹ್ಮಣಸ್ಪತೇ ಯಸ್ತ್ವಮೀಶಿಷೇ ಸರ್ವಸ್ಯ ಜಗತ ಈಶ್ವರೋ ಭವಸಿ ಸ ತ್ವಮಿಮಾಮಸ್ಮದೀಯಾಂ ಪ್ರಭೃತಿಂ ಪ್ರಕರ್ಷೇಣ ಭೃತಾಂ ಸ್ತುತಿಮವಿಡ್ಢಿ । ಪ್ರಾಪ್ನುಹಿ ॥ ಅವತೇಃ ಪ್ರಾಪ್ತ್ಯರ್ಥಸ್ಯ ಲೋಟ್ಯೇತದ್ರೂಪಂ ॥ ವಯಂ ಚ ತ್ವಾಮಯಾ ಅನಯಾ ॥ ಛಾಂದಸೋ ವರ್ಣಲೋಪಃ ॥ ನವಯಾ ನೂತನಯಾ ಪ್ರತ್ಯಗ್ರಯಾ ಮಹಾ ಮಹತ್ಯಾ ಗಿರಾ ವೇದರೂಪಯಾ ಸ್ತುತಿಲಕ್ಷಣಯಾ ವಾಚಾ ವಿಧೇಮ । ಪರಿಚರೇಮ ॥ ವಿಧತಿಃ ಪರಿಚರಣಕರ್ಮಾ ॥ ಉತ ಅಪಿ ಚ ನೋಽಸ್ಮಾಕಂ ಮಧ್ಯೇ ಮೀಢ್ವಾನ್ ಸೇಕ್ತಾ ಸ್ತುತೇರ್ವರ್ಷಿತಾ । ಕರ್ತೇತಿ ಯಾವತ್ । ತವ ಸಖಾ ಮಿತ್ರಭೂತಃ ಸನ್ ಯಥಾ ಯೇನ ಪ್ರಕಾರೇಣ ಯತ್ಕಾಮನಯಾ ಸ್ತವತೇ । ತ್ವಾಂ ಸ್ತೌತಿ । ಹೇ ಬೃಹಸ್ಪತೇ ಬೃಹತೋ ಬ್ರಹ್ಮಣೋ ಮಂತ್ರಸ್ಯ ಸ್ವಾಮಿನ್ ಸ ತ್ವಂ ನೋಽಸ್ಮಾಕಂ ಮತಿಂ ತದಭಿಮತಂ ಫಲಂ ಸೀಷಧಃ । ಸಾಧಯ ॥ ಛಾಂದಸೇ ಲುಙಿ ಚಙ್ಯೇತದ್ರೂಪಂ ॥

॥ ಪ್ರತಿಪದಾರ್ಥ ॥

(ಎಲೈ ಬ್ರಹ್ಮಣಸ್ಪತಿಯೇ) **ಯಃ**— ಯಾವ ನೀನು । **ಈಶಿಷೇ**— ಸಕಲ ಜಗತ್ತಿಗೂ ಪ್ರಭುವಾಗಿದ್ದೀಯೋ । **ಸಃ**— ಅಂತಹ ನೀನು । **ಇಮಾಂ**— ಈ ನಮ್ಮಿಂದ ಪಠಿತವಾದುದೂ । **ಪ್ರಭೃತಿಂ**— ಉತ್ಕೃಷ್ಟವಾಗಿ ಸಂಪಾದಿತವಾದುದೂ ಆದ ಸ್ತುತಿಯನ್ನು । **ಅವಿಡ್ಢಿ**— ಸ್ವೀಕರಿಸು । **ನವಯಾ**— ನೂತನವಾದುದೂ । **ಮಹಾ**— ಮಹತ್ತಾದುದೂ ಆದ । **ಅಯಾ ಗಿರಾ**— ಸ್ತುತಿರೂಪವಾದ ಈ ವಾಕ್ಕಿನಿಂದ । **ವಿಧೇಮ**— ನಿನ್ನನ್ನು ಪರಿಚರಿಸುವೆವು । **ಉತ**— ಮತ್ತು । **ನಃ**— ನಮ್ಮ ಮಧ್ಯೆ । **ಮೀಢ್ವಾನ್**— ಸ್ತುತಿವರ್ಷಕನು । **ತವ ಸಖಾ**— ನಿನ್ನ ಮಿತ್ರಭೂತನಾಗಿ । **ಯಥಾ**— ಯಾವ ಪ್ರಕಾರವಾಗಿ । **ಸ್ತವತೇ**— ನಿನ್ನನ್ನು ಸ್ತುತಿಸುವನೋ (ಅದಕ್ಕೆ ಅನುಗುಣವಾಗಿ) । **ಬೃಹಸ್ಪತೇ**— ಎಲೈ ಮಂತ್ರಗಳ ಒಡೆಯನೇ । **ಸಃ**— ನೀನು । **ನಃ**— ನಮ್ಮ । **ಮತಿಂ**— ಅಪೇಕ್ಷಿತಾರ್ಥವನ್ನು । **ಸೀಷಧಃ**— ನೆರವೇರಿಸಿಕೊಡು.

॥ ಭಾವಾರ್ಥ ॥

ಎಲೈ ಬೃಹಸ್ಪತಿಯೇ, ಯಾವ ನೀನು ಸಕಲ ಜಗತ್ತಿಗೂ ಪ್ರಭುವಾಗಿದ್ದೀಯೋ, ಅಂತಹ ನೀನು ನಮ್ಮಿಂದ ಪಠಿತವಾದುದೂ, ಉತ್ಕೃಷ್ಟವಾಗಿ ಸಂಪಾದಿತವಾದುದೂ ಆದ ಸ್ತುತಿಯನ್ನು ಸ್ವೀಕರಿಸು. ನೂತನವಾದುದೂ ಮಹತ್ತಾದುದೂ ಆದ ಸ್ತುತಿರೂಪವಾದ ಈ ವಾಕ್ಕಿನಿಂದ ನಿನ್ನನ್ನು ಪರಿಚರಿಸುತ್ತೇವೆ. ಎಲೈ ಮಂತ್ರಗಳ ಒಡೆಯನೇ, ನಮ್ಮ ಮಧ್ಯೆ ಇರುವ ಸ್ತುತಿಪಾಠಕನು ಯಾವ ರೀತಿ ನಿನ್ನನ್ನು ಸ್ತುತಿಸುವನೋ, ಅದಕ್ಕೆ ಅನುಗುಣವಾಗಿ ನೀನು ನಮ್ಮ ಅಪೇಕ್ಷಿತಾರ್ಥವನ್ನು ನೆರವೇರಿಸಿಕೊಡು.

## English Translation.

Inasmuch, Brihaspati, as you rule (over all), accept this our propitiation : we worship you with this new and solemn hymn : since this, your friend, our benefactor, celebrates you, fulfil our desires.

॥ ವಿಶೇಷವಿಷಯಗಳು ॥

**ಸಃ ಇಮಾಂ**—ಇಲ್ಲಿ **ಸಃ ಇಮಾಂ** ಎಂಬ ಎರಡು ಪದಗಳು ಸೇರಿ **ಸ ಇಮಾಂ** ಎಂಬುವುದಕ್ಕೆ ಬದಲಾಗಿ **ಸೇಮಾಂ** ಎಂದಾಗಿದೆ ಎಂದರೆ ಸಕಾರದ ಮುಂದಿರುವ ವಿಸರ್ಗವು ಲೋಪವಾಗಿದೆ. ಇದರಂತೆಯೇ ಇದೇ ಮಂತ್ರದಲ್ಲಿರುವ **ಸಃ ಉತ** ಎಂಬ ಪದಗಳು ಸೇರಿ **ಸೋತ** ಎಂದಾಗಿದೆ. ಇಂತಹ ಉದಾಹರಣೆಗಳು ಋಗ್ವೇದದಲ್ಲಿ ಬಹಳವಾಗಿವೆ.

**ಸೇದಗ್ನೇ ಅಸ್ತು ಸುಭಗಃ ಸುದಾನುರ್ಯಸ್ತ್ವಾ ನಿತ್ಯೇನ ಹವಿಷಾ ಯ ಉಕ್ಥೈಃ ।**

(ಋ. ಸಂ. ೪-೪-೭)

**ಸೇದೃಭವೋ ಯಮವಥ ಯೂಯಮಿಂದ್ರಶ್ಚ ಮರ್ತ್ಯಂ ।**

(ಋ. ಸಂ. ೪-೩೭-೬)

ಈ ಋಕ್ಕುಗಳಲ್ಲಿ **ಸಃ ಇತ್** ಎಂಬ ಪದಗಳು ಸೇರಿ **ಸೇತ್** ಎಂದಾಗಿದೆ.

**ಸೈನಾನೀಕೇನ ಸುವಿದತ್ರೋ ಅಸ್ಮೇ ಯಷ್ಟಾ ದೇವಾಁ ಆಯಜಿಷ್ಠಃ ಸ್ವಸ್ತಿ ।**

(ಋ. ಸಂ. ೨-೯-೬)

ಎಂಬ ಋಕ್ಕಿನಲ್ಲಿ **ಸಃ ಏನಾ** ಎಂಬ ಪದಗಳು ಸೇರಿ **ಸೈನಾ** ಎಂದಾಗಿದೆ. ಇಂತಹ ಪ್ರಯೋಗಗಳು ವ್ಯಾಕರಣಾನುಸಾರವಾಗಿಲ್ಲವಾದ್ದರಿಂದ ಇವುಗಳನ್ನು ಛಾಂದಸ ಪ್ರಯೋಗಗಳೆಂದು ಹೇಳುವುದು ರೂಢಿಯಾಗಿದೆ.

**ಪ್ರಭೃತಿಂ—ಪ್ರಕರ್ಷೇಣ ಭೃತಾಂ ಸ್ತುತಿಂ ।** ನಾವು ಬಹಳ ಉತ್ಕೃಷ್ಟರೀತಿಯಲ್ಲಿ ಭರಿಸುವ (ಧರಿಸುವ) ಎಂದರೆ ಮಾಡುವ ಸ್ತೋತ್ರವನ್ನು ಎಂದರ್ಥವು. ಈ ಶಬ್ದವು **ಪ್ರ** ಎಂಬ ಉಪಸರ್ಗ ಪೂರ್ವಕವಾದ **ಭೃಞ್ ಭರಣೇ** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಈ ಧಾತುವಿಗೆ ಋಗ್ವೇದದಲ್ಲಿ ವಿಶೇಷರೀತಿಯಿಂದ ಸ್ತೋತ್ರಮಾಡು ಎಂಬರ್ಥದಲ್ಲಿ ಸಾಮಾನ್ಯವಾಗಿ ಪ್ರಯೋಗವಿದೆ. ಆದುದರಿಂದ ಪ್ರಭೃತಿಶಬ್ದಕ್ಕೆ ವಿಶೇಷರೀತಿಯಿಂದ ಮಾಡುವ ಸ್ತೋತ್ರ ಎಂದು ಭಾಷ್ಯಕಾರರು ಅರ್ಥವಿವರಣೆಮಾಡಿದಾರೆ.

**ಈಶಿಷೇ—ಸರ್ವಸ್ಯ ಜಗತ ಈಶ್ವರೋ ಭವಸಿ ।** ಸಮಸ್ತ ಪ್ರಪಂಚಕ್ಕೂ ಸ್ವಾಮಿಯಾಗಿರುತ್ತೀಯೆ ಎಂದು ಭಾಷ್ಯಕಾರರ ವಿವರಣೆಯು. ಎಂದರೆ ಎಲ್ಲಾ ದೇವತೆಗಳೂ, ಮನುಷ್ಯರೂ, ಪ್ರಾಣಿಗಳೂ, ಸಸ್ಯವರ್ಗವೂ ಇವನ ಅಧೀನದಲ್ಲಿವೆ. ಆದ್ದರಿಂದ ಎಲ್ಲರಿಗೂ ಪ್ರಭುವಾಗಿದ್ದೀಯೆ ಎಂದು ಹೇಳುವುದು ಸಹಜವಾಗಿದೆ. ಈ ಅಭಿಪ್ರಾಯವು ಋ ಸಂ. ೨-೨೪-೧೧ ; ೪-೫೦-೧ ; ೧೦-೬೮-೧೦ ; ೧೦-೯೭-೧೫ ಇತ್ಯಾದಿ ಋಕ್ಕುಗಳಲ್ಲಿ

ಉಕ್ತವಾಗಿದೆ. ಬೃಹಸ್ಪತಿಶಬ್ದಕ್ಕೆ ಮಂತ್ರಗಳಿಗೆ ಸ್ವಾಮಿ ಎಂದರ್ಥವಾಗುವುದರಿಂದ ಬೃಹಸ್ಪತಿಯು ಸಕಲ ಕಾರ್ಯಗಳನ್ನೂ ಮಂತ್ರಗಳಿಂದಲೇ ಸಾಧಿಸುತ್ತಾನೆ. ಮೇಘಗಳನ್ನು ಭೇದಿಸುವುದು, ಮಳೆಗರೆಯುವುದು, ತಮಸ್ಸನ್ನು ಹೋಗಲಾಡಿಸುವುದು, ಶತ್ರುಗಳನ್ನು ನಾಶಮಾಡುವುದು ಇತ್ಯಾದಿ ಕಾರ್ಯಗಳನ್ನು ಮಂತ್ರಗಳಿಂದಲೇ ಮಾಡುತ್ತಾನೆ ಆದುದರಿಂದಲೇ ಬೃಹಸ್ಪತಿರ್ಹಂತ್ಯಮಿತ್ರಮರ್ಕೈಃ (ಬೃಹಸ್ಪತಿಯು ಶತ್ರುಗಳನ್ನು ಮಂತ್ರಸಾಮರ್ಥ್ಯದಿಂದಲೇ ನಾಶಮಾಡುವನು) ಎಂದು ಋಗ್ವೇದವಾಕ್ಯವೇ ಇರುವುದು.

**ಅಯಾ—ಅನಯಾ ।** **ಅನಯಾ** ಎಂಬ ಶಬ್ದದ ನಕಾರವು ಲೋಪವಾಗಿ ಅಯಾ ಎಂದಿರುವುದು. ಇದು ಛಾಂದಸಪ್ರಯೋಗವು.

**ಅಯಾ ನವಯಾ ಮಹಾ ಗಿರಾ ವಿಧೇಮ—ಅನಯಾ ನೂತನಯಾ ಮಹತ್ಯಾ ವೇದರೂಪಯಾ ಸ್ತುತಿಲಕ್ಷಣಯಾ ವಾಚಾ ಪರಿಚರೇಮ ।** ಎಲೈ ಬೃಹಸ್ಪತಿಯೇ, ಈಗ ನಾವು ಮಾಡುತ್ತಿರುವ ಸ್ತೋತ್ರವು ಹೊಸದಾಗಿ ನಮ್ಮಿಂದ ರಚಿಸಲ್ಪಟ್ಟಿದೆ ಎಂದರೆ ಹಿಂದಿನ ಋಷಿಗಳಿಂದ ದೃಷ್ಟವಾದುದಲ್ಲ ಮತ್ತು ಇದು ಮಹತ್ಪೂರಿತವಾದ ನಿನ್ನ ಗುಣಗಳನ್ನು ಪ್ರಶಂಸೆಮಾಡುವುದಾಗಿದೆ. ಇಂತಹ ವೇದರೂಪವಾದ ಸ್ತೋತ್ರವಾಕ್ಯಗಳಿಂದ ನಿನ್ನನ್ನು ನಾವು ಸ್ತುತಿಸುತ್ತೇವೆ ಎಂದಭಿಪ್ರಾಯವು.

**ಮೀಢ್ವಾನ್—ಸೇಕ್ತಾ ಸ್ತುತೇರ್ವರ್ಷಿತಾ ।** **ಮೀಢ್ವಾನ್** ಎಂಬ ಶಬ್ದವು **ಕಾಮಾನಾಂ ವರ್ಷಿತಾ**—ಇಷ್ಟಾರ್ಥಗಳನ್ನು ಸುರಿಸುವವನು ಎಂಬರ್ಥದಲ್ಲಿ ಇಂದ್ರಾದಿ ದೇವತೆಗಳ ಪರವಾಗಿ ಉಪಯೋಗಿಸಲ್ಪಡುವುದಾದರೂ ಇಲ್ಲಿ ಸ್ತೋತ್ರಮಾಡುವ ಯಜಮಾನನಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. ಸ್ತೋತ್ರವನ್ನು ವರ್ಷಿಸುವವನು ಎಂದರೆ ಬೃಹಸ್ಪತಿಯನ್ನು ವಿಶೇಷವಾಗಿ ಸ್ತೋತ್ರಮಾಡುವ ಯಜಮಾನನು ಎಂದರ್ಥವು.

**ತವ ಸಖಾ—ಮಿತ್ರಭೂತಃ ।** ಸ್ನೇಹಿತನಂತೆ ಹಿತವನ್ನು ಆಚರಿಸುವವನು. ಬೃಹಸ್ಪತಿಯು ತನ್ನನ್ನು ಸ್ತೋತ್ರಮಾಡುವ ಯಜಮಾನನ ವಿಷಯದಲ್ಲಿ ಸ್ನೇಹಿತನಂತೆ ಉಪಕಾರವನ್ನು ಮಾಡುವವನು. ಹಿತವನ್ನು ಅಥವಾ ಉಪಕಾರವನ್ನು ಮಾಡುವುದೇ ಮಿತ್ರನ ಮುಖ್ಯಗುಣವೆಂದು—**ನ ಸ ಸಖಾ ಯೋ ನ ದದಾತಿ ಸಖ್ಯೇ** (ಋ. ಸಂ. ೧೦–೧೧೭–೪) ಯಾವ ಪುರುಷನು ತನ್ನ ಸ್ನೇಹಿತನಿಗೆ ಏನೂ ಕೊಡುವುದಿಲ್ಲವೋ ಎಂದರೆ ಕಷ್ಟಕಾಲದಲ್ಲಿ ಉಪಕಾರ ಮಾಡುವುದಿಲ್ಲವೋ ಅವನು ಸ್ನೇಹಿತನೇ ಅಲ್ಲ ಎಂದು ವೇದವಾಕ್ಯವೇ ಇರುವುದು. ಇಲ್ಲಿ ಬೃಹಸ್ಪತಿಯು ತನ್ನನ್ನು ಸ್ತುತಿಸುವ ಯಜಮಾನನಿಗೆ ಇಷ್ಟಾರ್ಥಗಳನ್ನು ಕೊಡುವುದರಿಂದ **ಸಖಾ** ಎಂಬ ಶಬ್ದದಿಂದ ಸ್ತುತಿಸಲಾಗಿದೆ—

**ಯೋ ರೇವಾನ್ ಯೋ ಅಮೀವಹಾ ವಸುವಿತ್ಪುಷ್ಟಿವರ್ಧನಃ ।**
**ಸ ನಃ ಸಿಷಕ್ತು ಯಸ್ತುರಃ ॥**

(ಋ. ೧–೧೮–೨)

ಎಂದರೆ ಬೃಹಸ್ಪತಿಯು ತನ್ನನ್ನು ಸ್ತೋತ್ರಮಾಡುವವನಿಗೆ ಐಶ್ವರ್ಯವನ್ನೂ, ಪುಷ್ಟಿಯನ್ನೂ, ಧನವನ್ನೂ ಕೊಡುವವನು, ರೋಗರುಜಿನಗಳನ್ನು ಪರಿಹರಿಸುವವನು. ಇಂತಹ ಬೃಹಸ್ಪತಿಯು ತನ್ನನ್ನು ಸ್ತೋತ್ರಮಾಡುವ ಯಜಮಾನನಿಗೆ ಇಷ್ಟಾರ್ಥಗಳನ್ನು ಕೊಡುವುದಕ್ಕಾಗಿ ಬೇಗನೆ ಬರುವನು.

**ಏವಾ ಪಿತ್ರೇ ವಿಶ್ವದೇವಾಯ ವೃಷ್ಣೇ ಯಜ್ಞೈರ್ವಿಧೇಮ ನಮಸಾ ಹವಿರ್ಭಿಃ ।**
**ಬೃಹಸ್ಪತೇ ಸುಪ್ರಜಾ ವೀರವಂತೋ ವಯಂ ಸ್ಯಾಮ ಪತಯೋ ರಯೀಣಾಂ ॥**
(ಋ. ಸಂ. ೪-೫೦-೬)

ಎಂದರೆ ನಮಗೆ ಪಾಲಕನಾದುದರಿಂದ ತಂದೆಯಂತಿರುವವನೂ, ಸರ್ವರಿಂದ ಸ್ತುತ್ಯನೂ, ಇಷ್ಟಾರ್ಥ ದಾಯಕನೂ ಆದ ಬೃಹಸ್ಪತಿಯನ್ನು ನಾವು ಯಜ್ಞಾದಿಕರ್ಮಗಳಿಂದಲೂ, ಹವಿರರ್ಪಣೆಗಳಿಂದಲೂ, ಸ್ತುತಿವಾಕ್ಯ ಗಳಿಂದಲೂ ಉಪಚರಿಸುತ್ತೇವೆ. ಎಲೈ ಬೃಹಸ್ಪತಿಯೇ, ನಾವು ವೀರರಾದ ಪುತ್ರಪೌತ್ರಾದಿಗಳನ್ನು ಪಡೆಯುವಂತೆಯೂ, ಧನಾದಿದ್ರವ್ಯಗಳಿಗೆ ಸ್ವಾಮಿಯಾಗುವಂತೆಯೂ ಅನುಗ್ರಹಿಸು ಎಂದಭಿಪ್ರಾಯವು. ಈ ವಿಧವಾದ ಅನೇಕ ಋಕ್ಕು ಗಳಲ್ಲಿ ಯಜಮಾನರು ಬೃಹಸ್ಪತಿಯನ್ನು ಸ್ತೋತ್ರಮಾಡಿ ಧನಾದಿಗಳನ್ನು ಪಡೆಯುವರೆಂದು ಹೇಳಿರುವುದರಿಂದ ಬೃಹಸ್ಪತಿಯನ್ನು ಉಪಕಾರಮಾಡುವ ಮಿತ್ರನೆಂದು ಇಲ್ಲಿ ವರ್ಣಿಸಿ ಸ್ತುತಿಸಲಾಗಿದೆ.

॥ ಸಂಹಿತಾಪಾಠಃ ॥

**ಯೋ ನನ್ತ್ವಾನ್ಯನಮನ್ನ್ಯೋಜಸೋತಾದರ್ದರ್ಮನ್ಯುನಾ ಶಂಬರಾಣಿ ವಿ ।**
**ಪ್ರಾಚ್ಯಾವಯದಚ್ಯುತಾ ಬ್ರಹ್ಮಣಸ್ಪತಿರಾ ಚಾವಿಶದ್ವಸುಮಂತಂ ವಿ ಪರ್ವತಂ ॥**

॥ ಪದಪಾಠಃ ॥

**ಯಃ । ನನ್ತ್ವಾನಿ । ಅನಮತ್ । ನಿ । ಓಜಸಾ । ಉತ । ಅದರ್ದಃ । ಮನ್ಯುನಾ । ಶಂಬರಾಣಿ । ವಿ ।**
**ಪ್ರ । ಅಚ್ಯವಯತ್ । ಅಚ್ಯುತಾ । ಬ್ರಹ್ಮಣಃ । ಪತಿಃ । ಆ । ಚ । ಅವಿಶತ್ । ವಸುಮಂತಂ । ವಿ ।**
**ಪರ್ವತಂ ॥ ೨ ॥**

॥ ಸಾಯಣಭಾಷ್ಯಂ ॥

**ಯೋ ಬ್ರಹ್ಮಣಸ್ಪತಿರ್ನಂತ್ವಾನಿ ನಮನೀಯಾನಿ ರಾಕ್ಷಸಾದೀನ್ಯೋಜಸಾ ಬಲೇನ ನ್ಯನಮತ್ । ನಿತರಾಮನಮಯತ್ ಪ್ರಹ್ವೀಭೂತಾನ್ಯಕರೋತ್ । ಉತ ಅಪಿ ಚ ಸ ಬ್ರಹ್ಮಣಸ್ಪತಿರ್ಮನ್ಯುನಾ ಮನುನಾ ಕ್ರೋಧೇನ ವಾ ॥ ಮನ್ಯುರ್ಮನ್ಯತೇರ್ದೀಪ್ತಿಕರ್ಮಣಃ ಕ್ರೋಧಕರ್ಮಣೋ ವಧಕರ್ಮಣೋ ವಾ । ನಿ. ೧೦-೨೯ । ಇತಿ ಯಾಸ್ಕಃ ॥ ಶಂಬರಾಣಿ ॥ ಮೇಘನಾಮೈತತ್ ॥ ಮೇಘಾನ್ ವ್ಯದರ್ದಃ । ವರ್ಷಣಾರ್ಥಂ ವಿದಾರಿತವಾನ್ ॥ ದೃ ವಿದಾರಣ ಇತ್ಯಸ್ಮಾದ್ಯಜಲುಗಂತಾಲ್ಲಙ್ಯೇತದ್ರೂಪಂ ॥ ತದನಂತರ- ಮಚ್ಯುತಾ ಅಚ್ಯುತಾನಿ ಸ್ವೈಕ್ಷಲ್ಯೇನ ಮೇಘೇಽವಸ್ಥಿತಾನ್ಯುದಕಾನಿ ಪ್ರಾಚ್ಯಾವಯತ್ ಪ್ರಕರ್ಷೇಣಾಗಮ-**

**ಯತ್ ।** **ಮೇಘಾನ್ನಿರಗಮಯದಿತ್ಯರ್ಥಃ । ತಥಾ ವಸುಮಂತಂ ಗೋರೂಪಧನವಂತಂ ಪರ್ವತಂ ವಲನಾಮ್ನಾಸುರೇಣ ಬಿಲದ್ವಾರೇ ಪಿಧಾನಾರ್ಥಂ ನಿಹಿತಂ ಶಿಲೋಚ್ಚಯಂ ಆ ಚ ಅಭಿಮುಖ್ಯೇನ ಚೇತ್ ॥ ಚಶಬ್ದಶ್ಚೇದರ್ಥಃ । ಸಮುಚ್ಚಯಾರ್ಥತ್ವೇ ತು ಚವಾಯೋಗೇ ಪ್ರಥಮೇತಿ ಪೂರ್ವಸ್ಯಾಚ್ಯಾವಯದಿತ್ಯಸ್ಯಾದ್ಯುದಾತ್ತತ್ವಂ ಸ್ಯಾತ್ ಅಸ್ಯ ಸರ್ವಾನುದಾತ್ತತ್ವಂ । ಚೇದರ್ಥೇ ತು ನಿಪಾತೈರ್ಯದ್ಯದಿಹಂತೇತಿ ನಿಘಾತಪ್ರತಿಷೇಧಃ ಸಿಧ್ಯತಿ ॥ ವ್ಯವಿಶತ್ । ವಿಶೇಷೇಣ ಪ್ರವಿಶತಿ । ತದಾನೀಂ ತದ್ಗೋರೂಪಂ ಧನಂ ಪ್ರಾಪ್ನೋದಿತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಯಃ ಬ್ರಹ್ಮಣಸ್ಪತಿಃ**—ಯಾವ ಆದೇ ಬ್ರಹ್ಮಣಸ್ಪತಿಯು । **ಓಜಸಾ**—ಬಲದಿಂದ । **ನಂಸ್ಯಾನಿ**—ಶಿಕ್ಷೆಗೆ ಅರ್ಹರಾದ ಅಸುರರನ್ನು । **ನಿ ಅನಮತ್**—ಶಿಕ್ಷಿಸಿ ನಮ್ರರಾಗುವಂತೆ ಮಾಡಿದನು । **ಉತ**—ಮತ್ತು । **ಮನ್ಯುನಾ**—ಕ್ರೋಧದಿಂದ । **ಶಂಬರಾಣಿ**—ಮೇಘಗಳನ್ನು । **ವಿ ಅದರ್ದಃ**—(ವರ್ಷಣಾರ್ಥವಾಗಿ) ಸೀಳಿದನು । **ಅಚ್ಯುತಾ**—ಚಲನವಿಲ್ಲದೇ (ಮೇಘದಲ್ಲಿದ್ದ) ಉದಕಗಳನ್ನು । **ಪ್ರಾಚ್ಯಾವಯತ್**—ಪ್ರವಹಿಸುವಂತೆ ಮಾಡಿದನು । **ವಸುಮಂತಂ**—ಗೋರೂಪವಾದ ಧನವುಳ್ಳ । **ಪರ್ವತಂ**—ಪರ್ವತವನ್ನು । **ಆ ಚ**—(ಅಭಿಮುಖವಾಗಿ) ಸಮೀಪಿಸಿ । **ವಿ ಅವಿಶತ್**—ಪೂರ್ಣವಾಗಿ ಪ್ರವೇಶಿಸಿದನು.

॥ ಭಾವಾರ್ಥ ॥

ಪ್ರಸಿದ್ಧನಾದ ಬ್ರಹ್ಮಣಸ್ಪತಿಯು ಶಿಕ್ಷೆಗೆ ಅರ್ಹರಾದ ಅಸುರರನ್ನು ತನ್ನ ಬಲದಿಂದ ಶಿಕ್ಷಿಸಿ ಅವರನ್ನು ನಮ್ರರಾಗುವಂತೆ ಮಾಡಿದನು. ಮತ್ತು ಕ್ರೋಧದಿಂದ ಮೇಘಗಳನ್ನು ಸೀಳಿ ವೃಷ್ಟಿಪತನಕ್ಕೆ ಸಹಾಯವನ್ನು ಮಾಡಿದನು. ಮೇಘದಲ್ಲಿ ಚಲನವಿಲ್ಲದೇ ಸ್ಥಿತವಾಗಿದ್ದ ಉದಕಗಳನ್ನು ಪ್ರವಹಿಸುವಂತೆ ಮಾಡಿದನು. ಗೋರೂಪವಾದ ಧನವುಳ್ಳ ಪರ್ವತವನ್ನು ಸಮೀಪಿಸಿ ಅದನ್ನು ಪ್ರವೇಶಿಸಿದನು.

English Translation.

(You are) that Brahmanaspati who, by his might, has humbled those who deserved humiliation; who in his wrath rent the clouds asunder; who sent down the undescending (waters) and made way into the mountain (cave), opulent (in cattle).

॥ ವಿಶೇಷವಿಷಯಗಳು ॥

**ಯಃ ಬ್ರಹ್ಮಣಸ್ಪತಿಃ ನಂಸ್ಯಾನಿ ಓಜಸಾ ನಿ ಅನಮತ್—ಬ್ರಹ್ಮಣಸ್ಪತಿಃ ನಮನೀಯಾನಿ ರಾಕ್ಷಸಾದೀನಿ ಬಲೇನ ನಿತರಾಮನಮಯತ್ ।** ಆ ಬ್ರಹ್ಮಣಸ್ಪತಿಯು (ಕೊಬ್ಬಿ ಮದಿಸಿದಕಾರಣದಿಂದ) ನಿಯಮನ ಮಾಡಲ್ಪಡಬೇಕಾದ ದುಷ್ಟರನ್ನು ಅಥವಾ ಅಸುರರನ್ನು ತನ್ನ ಸ್ವಸಾಮರ್ಥ್ಯದಿಂದ ತಗ್ಗಿ ನಡೆಯುವಂತೆ ಮಾಡಿದನು ಎಂದರೆ, ಅವರ ಅಹಂಕಾರವನ್ನೂ ಗರ್ವವನ್ನೂ ಅಡಗಿಸಿ ಬೃಹಸ್ಪತಿಯ ನಿಯಮಗಳಿಗೆ ಅಧೀನರಾಗುವಂತೆ ಮಾಡಿದನು. ಇಲ್ಲಿ **ನಂಸ್ಯಾನಿ** ಎಂಬ ಶಬ್ದವು ಣಮು **ಪ್ರಹ್ವತ್ವೇ** ಎಂಬ ಧಾತುವಿನಿಂದ ನಿಷ್ಪನ್ನವಾಗಿ ಬಗ್ಗಿಸಲ್ಪಡ

ಬೇಕಾದ ಎಂದರೆ ಶಿಕ್ಷಿಸಲ್ಪಡಬೇಕಾದ (ಜನರನ್ನು) ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಶಿಕ್ಷೆಗೆ ಒಳಪಡುವವರು ಕೆಟ್ಟಕೆಲಸಗಳನ್ನು ಮಾಡುವ ದುಷ್ಟರಾದುದರಿಂದ ನಂತ್ವಾನಿ ಎಂಬ ಶಬ್ದಕ್ಕೆ ರಾಕ್ಷಸರು, ಅಸುರರು ಎಂಬ ಅರ್ಥವನ್ನು ಭಾಷ್ಯಕಾರರು ಹೇಳಿದಾರೆ.

**ಉತ ಮನ್ಯುನಾ ಶಂಬರಾಣಿ ವಿ ಅದರ್ದಃ— ಸ ಬ್ರಹ್ಮಣಸ್ಪತಿಃ ಮನ್ಯುನಾ ಕ್ರೋಧೇನ ವಾ ಮೇಘಾನ್ ವರ್ಷಣಾರ್ಥಂ ವಿದಾರಿತವಾನ್ ।** ಮತ್ತು ಆ ಬ್ರಹ್ಮಣಸ್ಪತಿಯು ತನ್ನ ಮಂತ್ರಶಕ್ತಿಯಿಂದ ಅಥವಾ ಕೋಪದಿಂದ ಮೇಘಗಳನ್ನು ವರ್ಷಣಾರ್ಥವಾಗಿ ಸೀಳಿದನು. ಎಂದರೆ, ಮಳೆಯನ್ನು ಹುಯ್ಯದೆ ಉದಕಗಳನ್ನು ತಮ್ಮಲ್ಲಿಯೇ ತಡೆಗಟ್ಟಿ ನಿಲ್ಲಿಸಿಕೊಂಡಿದ್ದ ಮೇಘಗಳನ್ನು ಕೋಪದಿಂದ ಸೀಳಿ ಮಳೆ ಹುಯ್ಯುವಂತೆ ಮಾಡಿದನು ಎಂದಭಿಪ್ರಾಯವು.

**ಮನ್ಯುನಾ**—ಮನ್ಯುಶಬ್ದಕ್ಕೆ ಯಾಸ್ಕರು–**ಮನ್ಯುರ್ಮನ್ಯತೇರ್ದೀಪ್ತಿಕರ್ಮಣಃ ಕ್ರೋಧಕರ್ಮಣೋ ವಧಕರ್ಮಣೋ ವಾ ಮನ್ಯಂತ್ಯಸ್ಮಾದಿಷವಃ ।** (ನಿ. ೧೦–೨೯) ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ, ಮನ್ಯತಿಧಾತುವಿನಿಂದ ನಿಷ್ಪನ್ನವಾದ ಮನ್ಯು ಶಬ್ದಕ್ಕೆ ಪ್ರಕಾಶಪಡಿಸುವುದು, ಕೋಪ ಅಥವಾ ಸಂಹಾರಮಾಡುವುದು ಎಂದು ಅರ್ಥವಿರುವುದೆಂದು ಹೇಳಿರುವರು. ಮತ್ತು ಮನ್ಯು ಎಂಬುದು ಆ ಹೆಸರಿನ ಒಂದು ದೇವತೆಯ ಹೆಸರೂ ಆಗಬಹುದೆಂದು ಹೇಳಿ ಅದರ ಸಮರ್ಥನೆಗಾಗಿ—

**ತ್ವಯಾ ಮನ್ಯೋ ಸರಥಮಾರುಜಂತೋ ಹರ್ಷಮಾಣಾಸೋ ಧೃಷಿತಾ ಮರುತ್ವಃ ।**
**ತಿಗ್ಮೇಷವ ಆಯುಧಾ ಸಂಶಿಶಾನಾ ಅಭಿ ಪ್ರ ಯಂತು ನರೋ ಅಗ್ನಿರೂಪಾಃ ॥**

(ಋ. ಸಂ. ೧೦–೮೪–೧)

ಎಂಬ ಋಕ್ಕನ್ನು ಉದಾಹರಿಸಿದಾರೆ. **ಮನ್ಯು** ಎಂಬ ದೇವತೆಯು ೧೦ ನೇ ಮಂಡಲದ ೮೩ ಮತ್ತು ೮೪ ನೇ ಸೂಕ್ತಗಳಲ್ಲಿ ಸ್ತುತಿಸಲ್ಪಟ್ಟಿದೆ.

**ಶಂಬರಾಣಿ**—ಶಂಬರ ಶಬ್ದವು ಮೇಘನಾಮಗಳಲ್ಲಿ ಪಠಿತವಾಗಿದೆ. (ನಿ. ೨–೨೧) **ಶಮು ಉಪಶಮೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಶಂಬರಶಬ್ದಕ್ಕೆ—**ಶಮಯತಿ ನಾಶಯತಿ ಅಸುರಾನಿತಿ ಶಂಬೋ ವಜ್ರಃ । ಶಂಬೋಽಸ್ಯ ಪ್ರಹರ್ತೃತ್ವೇನಾಸ್ತಿ । ರೋ ಮತ್ವರ್ಥೀಯಃ । ಪ್ರಹರತಿ ಹಿ ವಜ್ರಃ ಇಂದ್ರಪ್ರೇರಿತೋ ಮೇಘಾನ್ ।** ಅಸುರಾದಿಗಳನ್ನು ನಾಶಮಾಡುವುದರಿಂದ ಇಂದ್ರನ ವಜ್ರಾಯುಧಕ್ಕೆ ಶಂಬಃ ಎಂದು ಹೆಸರು. ಆ ವಜ್ರಾಯುಧವು ಇಂದ್ರನಿಂದ ಪ್ರೇರಿತವಾಗಿ ಮೇಘಗಳನ್ನು ವರ್ಷಣಾರ್ಥವಾಗಿ ಸೀಳುವುದರಿಂದ ಶಂಬರವೆಂದರೆ ಮೇಘವೆಂದು ಹೆಸರು. ಅಥವಾ—**ಯದ್ವಾ ಸಂಪೂರ್ವಾತ್ ವೃಣೋತೇಃ ಇತ್ಯಪಿ ಸಂಬರಃ ಸನ್ ವರ್ಣವ್ಯತ್ಯಯೇನ ಶಂಬರಃ । ಸಂವ್ರಿಯತೇ ಮೇಘೇನಾಕಾಶಂ ಇತಿ ಶಂಬರಃ ।** ಅಥವಾ **ಸಂ** ಎಂಬ ಉಪಸರ್ಗ ಸಹಿತವಾದ ಆವರಿಸು ಎಂಬರ್ಥವುಳ್ಳ ವೃಣೋತಿಧಾತುವಿನಿಂದ ಸಂಬರಶಬ್ದವು ನಿಷ್ಪನ್ನವಾಗಬಹುದು. ವರ್ಣವ್ಯತ್ಯಾಸದಿಂದ **ಸಂಬರಃ** ಎಂಬುವುದು **ಶಂಬರಃ** ಎಂದಾಗುವುದು ಎಂದರೆ, ಆಕಾಶವು ಮೇಘದಿಂದ ಆವರಿಸಲ್ಪಡುವುದರಿಂದ ಮೇಘಕ್ಕೆ ಶಂಬರವೆಂದು ಹೆಸರು. ಅಥವಾ ಶಂಬರವೆಂದರೆ ಉದಕವೆಂದೂ, ಅರ್ಥವಾಗುವುದು, ಶಂಬರ ಶಬ್ದವು ೧೦೧ ಉದಕನಾಮಗಳಲ್ಲಿಯೂ ಪಠಿತವಾಗಿದೆ. (ನಿ. ೨–೨೪) ಅಂತಹ ಉದಕವು ಈ ಮೇಘದಲ್ಲಿರುವುದರಿಂದ ಮೇಘಕ್ಕೆ ಶಂಬರವೆಂದು ಹೆಸರು.

**ಅಚ್ಯುತಾ ಪ್ರ ಅಚ್ಯವಯತ್—ಕೇದನಂತರಮಚ್ಯುತಾ ಅಚ್ಯುತಾನಿ ನೈಶ್ಚಲ್ಯೇನ ಮೇಘೇಷ್ವವಸ್ಥಿತಾನ್ಯುದಕಾನಿ ಪ್ರಕರ್ಷೇಣಾಗಮಯತ್ । ಮೇಘಾನ್ನಿರಗಮಯದಿತ್ಯರ್ಥಃ ।** ಮೇಘಗಳಲ್ಲಿ ಚಲನವಿಲ್ಲದೆ ಸಂಗ್ರಹವಾಗಿ ಇರುವ ಎಲ್ಲ ಉದಕಗಳನ್ನು ಚಲಿಸುವಂತೆ ಮಾಡಿದನು ಎಂದರೆ ವೃಷ್ಟಿರೂಪದಲ್ಲಿ ಭೂಮಿಯ ಮೇಲೆ ಬೀಳುವಂತೆ ಮಾಡಿದನು.

**ವಸುಮಂತಂ ಪರ್ವತಂ ಆ ಚ ವಿ ಆವಿಶತ್—ಗೋರೂಪಧನವಂತಂ ಪರ್ವತಂ ವಲನಾಮ್ನಾಸುರೇಣ ದ್ವಾರೇ ಪಿಧಾನಾರ್ಥಂ ನಿಹಿತಂ ಶಿಲೋಚ್ಚಯಂ ಆಭಿಮುಖ್ಯೇನ ವಿಶೇಷೇಣ ಪ್ರವಿಶತಿ । ತದಾನೀಂ ತದ್ಗೋರೂಪಂ ಧನಂ ಪ್ರಾಪ್ನೋದಿತ್ಯರ್ಥಃ ।** ವಲನೆಂಬ ಅಸುರನು ದೇವತೆಗಳ ಗೋವುಗಳನ್ನು ಅಪಹರಿಸಿ ಅವುಗಳನ್ನು ಪರ್ವತದ ಗುಹೆಯಲ್ಲಿ ಬಚ್ಚಿಟ್ಟು ಅವು ತಪ್ಪಿಸಿಕೊಂಡು ಹೋಗದಂತೆ ಆ ಗುಹಾದ್ವಾರಕ್ಕೆ ಅಡ್ಡಲಾಗಿ ಒಂದು ದೊಡ್ಡ ಕಲ್ಲುಬಂಡೆಯನ್ನು ಮುಚ್ಚಿದ್ದನು. ಬ್ರಹ್ಮಣಸ್ಪತಿಯು ತನ್ನ ಮಂತ್ರಶಕ್ತಿಯಿಂದ ಗೋವುಗಳನ್ನು ಬಚ್ಚಿಟ್ಟಿದ್ದ ಪರ್ವತವನ್ನು ಕಂಡುಹಿಡಿದು ಆ ಗುಹಾದ್ವಾರದ ಬಂಡೆಯನ್ನು ತೆಗೆದುಹಾಕಿ ಗೋವುಗಳ ಸಮೀಪಕ್ಕೆ ಹೋಗಿ ಅವುಗಳನ್ನು ಬಂಧನದಿಂದ ಬಿಡಿಸಿದನು ಎಂದು ಮುಖ್ಯಾಭಿಪ್ರಾಯವು. ಇದಲ್ಲದೆ ಪರ್ವತಶಬ್ದಕ್ಕೆ ಮೇಘವೆಂದೂ ಅರ್ಥವಿರುವುದರಿಂದ (ನಿ. ೨-೨೧) ವಸುಮಂತಂ ಪರ್ವತಂ ಎಂಬ ಶಬ್ದಗಳಿಗೆ ಉದಕರೂಪವಾದ ಧನವುಳ್ಳ ಮೇಘವನ್ನು ಎಂದರ್ಥವನ್ನೂ ಹೇಳಬಹುದು. ಈ ಸಂದರ್ಭದಲ್ಲಿ ಈ ವಾಕ್ಯಕ್ಕೆ ಉದಕಗಳಿಂದ ತುಂಬಿದ ಮೇಘವನ್ನು ಬ್ರಹ್ಮಣಸ್ಪತಿಯು ತನ್ನ ಮಂತ್ರಶಕ್ತಿಯಿಂದ ಪ್ರವೇಶಿಸಿ ಅವುಗಳು ವೃಷ್ಟಿಯನ್ನು ಸುರಿಸುವಂತೆ ಪ್ರೇರಿಸಿದನು ಎಂಬರ್ಥವನ್ನು ಹೇಳಬಹುದು.



॥ ಸಂಹಿತಾಪಾಠಃ ॥

ತದ್ದೇವಾನಾಂ ದೇವತಮಾಯ ಕರ್ತ್ವಮಶ್ರಥ್ನನ್ದೃಳ್ಹಾವ್ರದಂತ ವೀಳಿತಾ ।
ಉದ್ಗಾ ಆಜದಭಿನದ್ಬ್ರಹ್ಮಣಾ ವಲಮಗೂಹತ್ತಮೋ ವ್ಯಚಕ್ಷಯತ್ಸ್ವಃ ॥ ೩ ॥

॥ ಪದಪಾಠಃ ॥

ತತ್ । ದೇವಾನಾಂ । ದೇವಽತಮಾಯ । ಕರ್ತ್ವಂ । ಅಶ್ರಥ್ನನ್ । ದೃಳ್ಹಾ । ಅವ್ರದಂತ । ವೀಳಿತಾ ।
ಉತ್ । ಗಾಃ । ಆಜತ್ । ಅಭಿನತ್ । ಬ್ರಹ್ಮಣಾ । ವಲಂ । ಅಗೂಹತ್ । ತಮಃ । ವಿ । ಅಚಕ್ಷಯತ್ ।
ಸ್ವ೧ ರಿತಿ ಸ್ವಃ ॥ ೩

॥ ಸಾಯಣಭಾಷ್ಯಂ ॥

ದೇವಾನಾಮಿಂದ್ರಾದೀನಾಂ ಮಧ್ಯೇ ದೇವತಮಾಯಾತಿಶಯೇನ ದಾನಾದಿಗುಣಯುಕ್ತಾಯ ॥ ಷಷ್ಠ್ಯರ್ಥೇ ಚತುರ್ಥೀ ॥ ಈದೃಶಸ್ಯ ಬ್ರಹ್ಮಣಸ್ಪತೇಸ್ತತ್ಕರ್ತ್ವಂ ಕರ್ತವ್ಯಂ ಕರ್ಮ । ಕಿಂ ಪುನಸ್ತದಿತಿ ಚೇದುಚ್ಯತೇ । ದೃಳ್ಹಾ ದೃಢಾನಿ ಪರ್ವತಾದೀನ್ಯಶ್ರಥ್ನನ್ ॥ ಶ್ರಂಥ ವಿಮೋಚನಪ್ರತಿಹರ್ಷಣಯೋಃ ॥ ಅಸ್ಯ ಬಲೇನ ಶ್ರಥಿತಾನಿ ವಿಶ್ಲಿಷ್ಟಾನ್ಯಭವನ್ । ತಥಾ ವೀಳಿತಾ ಸಂಸ್ತಂಭಿತಾನಿ ದೃಢೀಕೃತಾನಿ ವೃಕ್ಷಾದೀನಿ ॥ ವೀಳಯತಿಶ್ಚ ವ್ರೀಳಯತಿಶ್ಚ ಸಂಸ್ತಂಭಕರ್ಮಾಣಾವಿತಿ ಯಾಸ್ಕಃ । ನಿ. ೫-೧೬ ॥ ಅವ್ರದಂತ । ಮೃದೂನ್ಯಭವನ್ ॥ ವ್ರದತಿರ್ಮೃದೂಭಾವಕರ್ಮಾ ॥ ಅಪಿ ಚ ಸ ಬ್ರಹ್ಮಣಸ್ಪತಿರ್ವಲೇನಾಪಹೃತಾ ಗಾ ಉದಾಜತ್ ॥ ಅಜ ಗತಿಕ್ಷೇಪಣಯೋಃ ॥ ದೇವಾನ್ಪ್ರತ್ಯುದಗಮಯತ್ । ತಥಾ ಬ್ರಹ್ಮಣಾತ್ಮೀಯೇನ ಮಂತ್ರೇಣ ವಲಂ ಸರ್ವಸ್ಯಾವಾರಕಮಸುರಮಭಿನತ್ । ಮಂತ್ರಸ್ಯ ಸಾಮರ್ಥ್ಯೇನಾಭೈತ್ಸೀತ್ । ತದನಂತರಂ ವಲೇನೋತ್ಪಾದಿತಂ ತಮೋ ಧ್ವಾಂತಮಗೂಹತ್ ॥ ಗುಹ ಸಂವರಣೇ ॥ ಗೂಢಮದೃಶ್ಯಮ-ಕರೋತ್ । ತದನಂತರಂ ಸ್ವರಾದಿತ್ಯಂ ವ್ಯಚಕ್ಷಯತ್ । ತಮಸೋ ನಿರಾಕರಣೇನ ತತ್ಸ್ವಮದರ್ಶಯತ್ ॥ ಚಷ್ಟಿಃ ಪಶ್ಯತಿಕರ್ಮಾ ॥

॥ ಪ್ರತಿಪದಾರ್ಥ ॥

**ದೇವಾನಾಂ**— ಇಂದ್ರಾದಿದೇವತೆಗಳ ನಡುವೆ । **ದೇವತಮಾಯ**—ಅತ್ಯುತ್ತಮವಾದ ದೇವತೆಯಾದ ಬ್ರಹ್ಮಣಸ್ಪತಿಯ । **ಕರ್ತ್ವಂ**— ಅಸಾಧಾರಣವಾದ ಕರ್ಮವು । **ತತ್**—ಮುಂದೆ ಹೇಳುವಂತೆ ಪ್ರಸಿದ್ಧವಾಗಿದೆ. (ಅದೇನೆಂದರೆ) । **ದೃಳ್ಹಾ**—ದೃಢವಾದ ಪರ್ವತಾದಿಗಳನ್ನು । **ಅಶ್ರಥ್ನನ್**— ಶಿಥಿಲವಾಗುವಂತೆ ಮಾಡಿದನು **ವೀಳಿತಾ**—ದೃಢವಾದ ಬೇರೂರಿದ ವೃಕ್ಷಾದಿಗಳನ್ನು । **ಅವ್ರದಂತ**—ಮೃದುವಾದ ಸ್ಥಿತಿಯುಳ್ಳವಂತೆ ಮಾಡಿದನು । **ಗಾಃ**—(ವಲನಿಂದ ಅಪಹೃತವಾದ) ಗೋವುಗಳನ್ನು । **ಉದಾಜತ್**—ಗುಹೆಯಿಂದ ಹೊರಡಿಸಿ ದೇವತೆಗಳ ಅಭಿಮುಖವಾಗಿ ಹೋಗುವಂತೆ ಮಾಡಿದನು । **ಬ್ರಹ್ಮಣಾ**—ತನ್ನ ಮಂತ್ರಸಾಮರ್ಥ್ಯದಿಂದ । **ವಲಂ**— ವಲನೆಂಬ ಅಸುರನನ್ನು । **ಅಭಿನತ್**—ಬೆದರಿಸಿ ಓಡಿಸಿದನು (ಅಥವಾ ನಾಶಮಾಡಿದನು) । **ತಮಃ**—ಅಂಧಕಾರವನ್ನು । **ಅಗೂಹತ್**—ಚದುರಿಸಿ ಕಣ್ಮರೆಯಾಗುವಂತೆ ಮಾಡಿದನು । **ಸ್ವಃ**— ಆದಿತ್ಯನನ್ನು । **ವ್ಯಚಕ್ಷಯತ್**— ಪ್ರಕಾಶಿಸುವಂತೆ ಮಾಡಿದನು.

॥ ಭಾವಾರ್ಥ ॥

ಇಂದ್ರಾದಿ ದೇವತೆಗಳ ನಡುವೆ ಅತ್ಯುತ್ತಮವಾದ ದೇವತೆಯಾದ ಬ್ರಹ್ಮಣಸ್ಪತಿಯ ಅಸಾಧಾರಣವಾದ ಕರ್ಮವು ಮುಂದೆ ಹೇಳುವಂತೆ ಪ್ರಸಿದ್ಧವಾಗಿದೆ. ಅದೇನೆಂದರೆ:— ಅವನು ದೃಢವಾದ ಪರ್ವತಾದಿಗಳನ್ನು ಶಿಥಿಲವಾಗುವಂತೆ ಮಾಡಿದನು. ದೃಢವಾಗಿ ಬೇರೂರಿದ ವೃಕ್ಷಾದಿಗಳನ್ನು ಮೃದುವಾದ ಸ್ಥಿತಿಯುಳ್ಳವಂತೆ ಮಾಡಿದನು. ವಲನಿಂದ ಅಪಹೃತವಾದ ಗೋವುಗಳನ್ನು ದೇವತೆಗಳ ಅಭಿಮುಖವಾಗಿ ಹೋಗುವಂತೆ ಮಾಡಿದನು. ತನ್ನ ಮಂತ್ರದಿಂದ ವಲನೆಂಬ ಅಸುರನನ್ನು ಬೆದರಿಸಿ ಓಡಿಸಿದನು. ಮತ್ತು ಅವನನ್ನು ನಾಶಮಾಡಿದನು. ಅಂಧಕಾರವನ್ನು ಚದುರಿಸಿ ಕಣ್ಮರೆಯಾಗುವಂತೆ ಮಾಡಿದನು. ಆದಿತ್ಯನನ್ನು ಪ್ರಕಾಶಿಸುವಂತೆ ಮಾಡಿದನು.

## English Translation.

That was exploit, (performed) for the most divine of the gods, by which the firm (shut gates) were thrown open, the strong (barriers) were relaxed, (by him) who set the cows at liberty: who by the (force of the) sacred prayer, destroyed Vala: who dispersed the darkr ess and displayed the light.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಬ್ರಹಣಸ್ಪತಿಯು ಮಾಡಿದ ಕಾರ್ಯಗಳ ಪ್ರಶಂಸೆಯು ವರ್ಣಿತವಾಗಿದೆ. ಈ ಸಾಹಸಕಾರ್ಯಗಳೆಲ್ಲವನ್ನೂ ಬ್ರಹ್ಮಣಸ್ಪತಿಯು ತನ್ನ ಮಂತ್ರಶಕ್ತಿಯಿಂದಲೇ ಮಾಡಿದನೆಂದೂ ಹೇಳಿದೆ.

**ದೇವಾನಾಂ ದೇವತಮಾಯ–ಇಂದ್ರಾದೀನಾಂ ಮಧ್ಯೇ ಅತಿಶಯೇನ ದಾನಾದಿಗುಣಯುಕ್ತಾಯ।** ದೇವತೆಗಳೆಲ್ಲೆಲ್ಲಾ ಬ್ರಹ್ಮಣಸ್ಪತಿಯು ಶ್ರೇಷ್ಠನಾದವನು. ಎಂದರೆ ಇಂದ್ರಾದಿ ದೇವತೆಗಳ ಮಧ್ಯದಲ್ಲಿ ಈ ಬ್ರಹ್ಮಣಸ್ಪತಿಯೇ ಅತಿಶಯವಾದ ದಾನಾದಿಗುಣಯುಕ್ತನಾದವನು ತನ್ನನ್ನು ಸ್ತೋತ್ರಮಾಡುವವರಿಗೆ ಇಂದ್ರಾದಿ ದೇವತೆಗಳಿಗಿಂತ ಅತಿಶಯವಾಗಿ ಇಷ್ಟಾರ್ಥಗಳನ್ನು ಸಲ್ಲಿಸುವವನು ಎಂದಭಿಪ್ರಾಯ. ಅಥವಾ **ದೇವತಮ** ಎಂಬ ಶಬ್ದಕ್ಕೆ ದೇವಶ್ರೇಷ್ಠನು ಎಂದು ಅರ್ಥಮಾಡಿದಲ್ಲಿ **ದೇವಾನಾಂ ದೇವತಮಾಯ** ಎಂಬ ಶಬ್ದಗಳಿಗೆ ದೇವತೆಗಳಿಗೂ ದೇವಶ್ರೇಷ್ಠನಂತಿರುವವನು, ದೇವಾಧಿದೇವನು ಎಂಬ ಅರ್ಥವು ಭಾಸವಾಗುವುದು. ರಾಜಾಧಿರಾಜರುಗಳಲ್ಲೆಲ್ಲಾ ಶ್ರೇಷ್ಠನಾದವನಿಗೆ ರಾಜಾಧಿರಾಜನೆಂದು ಹೇಳುವಂತೆ ಇಲ್ಲಿ ಬ್ರಹ್ಮಣಸ್ಪತಿಯನ್ನು **ದೇವಾನಾಂ ದೇವತಮಾಯ** ಎಂಬ ಶಬ್ದಗಳಿಂದ ವರ್ಣಿಸಿದೆ. ಇಲ್ಲಿ **ದೇವತಮಾಯ** ಎಂಬ ಚತುರ್ಥೀ ವಿಭಕ್ತಿಯು ಷಷ್ಠೀ ವಿಭಕ್ತಿಯ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಭಾಷ್ಯಕಾರರ ವಿವರಣೆಯು.

**ಕರ್ತ್ವಂ—ಕರ್ತವ್ಯಂ ಕರ್ಮ ।** ಮಾಡಲ್ಪಡುವ ಕರ್ಮವು ಎಂದರೆ ಬ್ರಹ್ಮಣಸ್ಪತಿಯು ತನ್ನ ಮಂತ್ರಶಕ್ತಿಯಿಂದ ನೆರವೇರಿಸಿದ ಸಾಹಸಕಾರ್ಯವು.

**ದೃಳ್ಹಾ ಅಶ್ರಥ್ನನ್, ವೀಳಿತಾ ಅವ್ರದಂತ**— ಬ್ರಹ್ಮಣಸ್ಪತಿಯ ಸಾಹಸಕಾರ್ಯಗಳಲ್ಲಿ ಕೆಲವನ್ನು ಈ ಋಕ್ಕಿನಲ್ಲಿ ವರ್ಣಿಸಲಾಗಿವೆ. ಅದರಂತೆ ದೃಢವಾದ ಪರ್ವತಾದಿಗಳನ್ನು ಶಿಥಿಲವಾಗುವಂತೆ ಮಾಡುವುದೂ, ಚೆನ್ನಾಗಿ ಬೇರೂರಿ ದೃಢವಾಗಿ ಬೆಳೆದಿರುವ ವೃಕ್ಷಾದಿಗಳನ್ನು ಮೃದುವಾಗಿ ಮಾಡುವುದೂ ಈ ಸಾಹಸ ಕಾರ್ಯಗಳಲ್ಲಿ ಸೇರಿವೆ. ಇಲ್ಲಿ **ಅವ್ರದಂತ** ಎಂಬ ಕ್ರಿಯಾಪದವು **ವ್ರಂದ್** ಧಾತುವಿನಿಂದ ನಿಷ್ಪನ್ನವಾಗಿ ಮೃದುವಾಗಿರುವುದು ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಈ ಧಾತುವಿನಿಂದ ನಿಷ್ಪನ್ನವಾದ **ವ್ರಂದೀ** ಎಂಬ ಶಬ್ದಕ್ಕೆ ಯಾಸ್ಕರು—**ವ್ರಂದೀ ವ್ರಂದತೇ-ರ್ಮೃದುಭಾವಕರ್ಮಣಃ** ಎಂದು ನಿರ್ವಚನವನ್ನು ಹೇಳಿದಾರೆ( ನಿ. ೫-೧೬) ಈ ವಿಷಯದಲ್ಲಿ—

**ನಿ ಯದ್ವೃಣಕ್ಷಿ ಶ್ವಸನಸ್ಯ ಮೂರ್ಧನಿ ಶುಷ್ಣಸ್ಯ ಚಿದ್ವ್ರಂದಿನೋ ರೋರುವದ್ವನಾ ।**
**ಪ್ರಾಚೀನೇನ ಮನಸಾ ಬರ್ಹಣಾವತಾ ಯದದ್ಯಾ ಚಿತ್ಕೃಣವಃ ಕಸ್ತ್ವಾ ಪರಿ ॥**
(ಋ. ಸಂ. ೧-೫೪-೫)

ಎಂಬ ಋಕ್ಕನ್ನುದಾಹರಿಸಿ ಅದಕ್ಕೆ—**ನಿವೃಣಕ್ತಿ ಯಂಚ್ಛ್ವಸನಸ್ಯ ಮೂರ್ಧನಿ ಶಬ್ದಕಾರಿಣಃ ಶುಷ್ಣಸ್ಯಾದಿತ್ಯಸ್ಯ ಚ ಶೋಷಯಿತೂ ರೋರೂಯಮಾಣೋ ವನಾನೀತಿ ವಾ ವಧೇನೇತಿ ವಾ । ಅವ್ರದಂತ ವೀಳಿತಾ ಇತ್ಯಪಿ ನಿಗಮೋ ಭವತಿ । ವೀಳಯತಿಶ್ಚ ವ್ರೀಳಯತಿಶ್ಚ ಸಂಸ್ತಂಭಕರ್ಮಾಣೌ ಪೂರ್ವೇಣ ಸಂಪ್ರಯುಜ್ಯೇತೇ ।** ಎಂದು ನಿರ್ವಚನವನ್ನು ಹೇಳಿ **ಅವ್ರದಂತ ವೀಳಿತಾ** ಎಂಬ ಪ್ರಕೃತವಾದ ಋಕ್ಕನ್ನೂ ಉದಾಹರಣೆಯಾಗಿ ಉಪಯೋಗಿಸಿದಾರೆ. ಅಂತರಿಕ್ಷ ಸಂಚಾರಿಯಾದ ವಾಯು, ಫಲಾದಿಗಳನ್ನು ಮೃದುವಾಗಿ ಮಾಡುವುದರಿಂದ ವ್ರಂದಿಶಬ್ದ ವಾಚ್ಯನಾದ ಸೂರ್ಯ, ಇವರಿಬ್ಬರಿಗಿಂತ ಉದಕನಿಕ್ಷೇಪಮಾಡುವುದರಿಂದ ಇಂದ್ರನು ಶ್ರೇಷ್ಠನು. ಫಲಾದಿಗಳನ್ನು ಮೆತ್ತಗಿರುವಂತೆ ಮಾಡುವುದರಿಂದ ಸೂರ್ಯನಿಗೆ ವ್ರಂದಿ ಎಂಬ ವಿಶೇಷಣ ಪದಪ್ರಯೋಗವು ಅಷ್ಟು ಸ್ಪಷ್ಟವಾಗಿಲ್ಲವೆಂದು ಯಾಸ್ಕರು ತಾವೇ ಹೇಳಿ ಈಗ ಪ್ರಸಕ್ತವಾಗಿರುವ ಋಕ್ಕನ್ನೇ ಉದಾಹರಿಸಿ ಇಲ್ಲಿ **ವೀಳಿತಾ** ಎಂದರೆ, ರೂಢಮೂಲಗಳಾದ ವೃಕ್ಷಗಳನ್ನು **ಅವ್ರದಂತ** ಮೃದುಮಾಡಿದನು ಅಥವಾ ಸಡಿಲಿಸಿದನು ಎಂಬರ್ಥವನ್ನು ಹೇಳಿದಾರೆ. ಮತ್ತು— **ವೀಳಯತಿಶ್ಚ ವ್ರೀಳಯತಿಶ್ಚ ಸಂಸ್ತಂಭಕರ್ಮಾಣೌ** ಎಂದರೆ, ಸ್ತಂಭದಂತೆ ದೃಢವಾಗಿ ನಿಲ್ಲಿಸುವ ಎಂಬರ್ಥವುಳ್ಳ **ವೀಳಯತಿ** ಅಥವಾ **ವ್ರೀಳಯತಿ** ಧಾತುವಿನಿಂದ ನಿಷ್ಪನ್ನವಾದ **ವೀಳಿತಾ** ಎಂಬ ಶಬ್ದದೊಡನೆ **ಅವ್ರಂದತ** ಎಂಬ ಶಬ್ದಪ್ರಯೋಗವಿರುವುದರಿಂದ ದೃಢವಾಗಿರುವುದನ್ನು ಮೃದುವಾಗುವಂತೆ ಮಾಡುವುದು ಎಂಬರ್ಥವನ್ನು ಸ್ಪಷ್ಟವಾಗಿ ವಿವರಿಸಿದಾರೆ

**ಗಾಃ ಉತ್ ಆಜತ್, ಬ್ರಹ್ಮಣಾ ವಲಂ ಅಭಿನತ್**— ಬ್ರಹ್ಮಣಸ್ಪತಿಯು ತನ್ನ ಮಂತ್ರಶಕ್ತಿಯಿಂದ ವಲನೆಂಬ ಅಸುರನನ್ನು ಭೇದಿಸಿ ಅವನು ಬಂಧನದಲ್ಲಿ ಬಚ್ಚಿಟ್ಟಿದ್ದ ದೇವತೆಗಳ ಗೋವುಗಳನ್ನು ಪರ್ವತಗುಹೆಯಿಂದ ಈಚೆಗೆ ಹೊರಡಿಸಿದನು ಎಂದು ಮುಖ್ಯಾಭಿಪ್ರಾಯವು

**ತಮಃ ಅಗೂಹತ್, ಸ್ವಃ ವಿ ಅಚಕ್ಷಯತ್**—ವಲನಿಂದ ಆವೃತವಾಗಿದ್ದ ಅಂಧಕಾರವನ್ನು ಹೋಗಲಾಡಿಸಿ ಆದಿತ್ಯನು ಎಲ್ಲರಿಗೂ ಕಾಣಿಸಿ ಪ್ರಕಾಶಿಸುವಂತೆ ಮಾಡಿದನು. ವಲಾಸುರನು ಅಂಧಕಾರವನ್ನು ಉತ್ಪನ್ನ ಮಾಡಿ ಅದರಿಂದ ಸೂರ್ಯನು ಎಲ್ಲರಿಗೂ ಕಾಣಿಸದಂತೆ ಮುಚ್ಚಿದ್ದನು. ಆ ಅಂಧಕಾರವನ್ನು ಬೃಹಸ್ಪತಿಯು ಧ್ವಂಸ ಮಾಡಿ ಸೂರ್ಯನು ಪ್ರಕಾಶಿಸುವಂತೆ ಮಾಡಿದನು ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಅಶ್ಮಾಸ್ಯಮವತಂ ಬ್ರಹ್ಮಣಸ್ಪತಿರ್ಮಧುಧಾರಮಭಿ ಯಮೋಜಸಾತೃಣತ್ ।
ತಮೇವ ವಿಶ್ವೇ ಪಪಿರೇ ಸ್ವರ್ದೃಶೋ ಬಹು ಸಾಕಂ ಸಿಸಿಚುರುತ್ಸಮುದ್ರಿಣಂ ॥ ೪

ಪದಪಾಠಃ

ಅಶ್ಮ॑ಽಆಸ್ಯಂ । ಅ॒ವ॒ತಂ । ಬ್ರಹ್ಮ॑ಣಃ । ಪತಿಃ॑ । ಮಧು॑ಽಧಾರಂ । ಅ॒ಭಿ । ಯಂ । ಓಜ॑ಸಾ । ಅತೃ॑ಣತ್ ।

ತಂ । ಏ॒ವ । ವಿಶ್ವೇ॑ । ಪ॒ಪಿ॒ರೇ॒ । ಸ್ವಃ॒ಽದೃಶಃ॑ । ಬ॒ಹು । ಸಾ॒ಕಂ । ಸಿ॒ಸಿ॒ಚುಃ॒ । ಉತ್ಸಂ॑ । ಉ॒ದ್ರಿಣಂ॑ ॥ ೪ ॥

॥ ಸಾಯಣಭಾಷ್ಯಂ ॥

ಬ್ರಹ್ಮಣಸ್ಪತಿರ್ಬ್ರಹ್ಮಣೋ ಮಂತ್ರಸ್ಯ ಪತಿಃ ಪಾಲಯಿತಾ ದೇವೋಽಶ್ಮಾಸ್ಯಮಶ್ಮವದ್ದೃಢತ-ರಾಸ್ಯಂ । ಯಾಸ್ಕಸ್ತ್ವಾಹ । ಅಶನವಂತಮಾಸ್ಯಂದನವಂತಂ । ನಿ. ೧೦-೧೩ । ಇತಿ । ವ್ಯಾಪನವಂತಮಾ-ಸೇಚನವಂತಮಿತಿ ತಸ್ಯಾರ್ಥಃ । ಮಧುಧಾರಂ ಮಧುಮಾರ್ದಯಿತ್ರೀ ಉದಕಧಾರಾ ಯಸ್ಯ ತಾದೃಶಮವತಮವಸ್ತಾತ್ತತಂ ವಿಸ್ತೃತಂ ಯಂ ಮೇಘಮೋಜಸಾ ಬಲೇನಾಭ್ಯತೃಣತ್ ॥ ಉತೃದಿರ್ ಹಿಂಸಾನಾದರಯೋಃ ॥ ಅಹಿಂಸೀತ್ । ವರ್ಷಣಾರ್ಥಮವಧೀದಿತ್ಯರ್ಥಃ । ತಮೇವ ಮೇಘಂ ವಿಶ್ವೇ ಸರ್ವೇ ಸ್ವರ್ದೃಶಃ । ಸ್ವರಾದಿತ್ಯಃ । ತಸ್ಯ ಸಂಬಂಧಿನೋ ದ್ರಷ್ಟಾರೋ ರಶ್ಮಯಃ ಪಪಿರೇ । ಘರ್ಮಕಾಲೇ ಪಿಬಂತಿ । ಮೇಘೇನ ವೃಷ್ಟಸ್ಯೋದಕಸ್ಯ ಪಾನಾತ್ತಮೇವ ಪಿಬಂತೀತ್ಯುಚ್ಯತೇ । ತೇ ಚ ರಶ್ಮಯೋ ವರ್ಷಾಸೂತ್ಸಮುತ್ಸೇಚನವಂತಮುದ್ರಿಣಮುದಕವಂತಂ ಮೇಘಂ ಸಾಕಂ ಸಹ ಯುಗಪದೇವ ಬಹು ಸಿಸಿಚುಃ । ಘರ್ಮಕಾಲೇ ಯತ್ಪೀತಂ ತತೋಽಪಿ ಬಹುತರಂ ಸಹಸ್ರಗುಣಿತಂ ಸಿಂಚಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಬ್ರಹ್ಮಣಸ್ಪತಿಃ**—ಬ್ರಹ್ಮಣಸ್ಪತಿಯು । **ಅಶ್ಮಾಸ್ಯಂ**—ಶಿಲೆಯಂತೆ ಕಠಿಣವಾದುದೂ । **ಮಧುಧಾರಂ**—ಉದಕದಿಂದ ಪೂರ್ಣವಾದುದೂ । **ಅವತಂ**—ಅಧೋಮುಖವಾಗಿಯೂ, ವಿಸ್ತೃತವಾಗಿಯೂ, ತೂಗುತ್ತಿದ್ದುದೂ ಆದ । **ಯಂ**—ಯಾವ ಮೇಘವನ್ನು । **ಓಜಸಾ**—ತನ್ನ ಬಲದಿಂದ । **ಅಭಿ ಅತೃಣತ್**—ಬಿಡಿಸಿ ಭಾಗ ಮಾಡಿದನೋ । **ತಮೇವ**—ಅದೇ ಮೇಘವನ್ನೇ (ಮೇಘದಲ್ಲಿ ಅಡಕವಾಗಿದ್ದ ಉದಕವನ್ನೇ) । **ವಿಶ್ವೇ**—ಸಮಸ್ತವಾದ । **ಸ್ವರ್ದೃಶಃ**—ಸೂರ್ಯರಶ್ಮಿಗಳೂ । **ಪಪಿರೇ**—(ಬೇಸಿಗೆಯ ಕಾಲದಲ್ಲಿ) ಪಾನಮಾಡುತ್ತವೆ. (ಪುನಃ ವರ್ಷಾಕಾಲದಲ್ಲಿ) । **ಉತ್ಸಂ**—ಪ್ರವಾಹರೂಪವಾದುದೂ । **ಉದ್ರಿಣಂ**—ಉದಕದಿಂದ ಪೂರ್ಣವಾದುದೂ ಆದ ವೃಷ್ಟಿಯನ್ನು । **ಸಾಕಂ**—ಒಟ್ಟಿಗೆ ಸೇರಿ । **ಬಹು**—ಪ್ರಭೂತವಾಗಿ । **ಸಿಸಿಚುಃ**—ಸುರಿಸುತ್ತವೆ.

॥ ಭಾವಾರ್ಥ ॥

ಶಿಲೆಯಂತೆ ಕಠಿಣವಾದುದೂ, ಉದಕದಿಂದ ಪೂರ್ಣವಾದುದೂ, ಅಧೋಮುಖವಾಗಿ ತೂಗುತ್ತಿದ್ದುದೂ ಆದ ಯಾವ ಮೇಘವನ್ನು ಬ್ರಹ್ಮಣಸ್ಪತಿಯು ತನ್ನ ಬಲದಿಂದ ಬಿಡಿಸಿ ಭಾಗಮಾಡಿದನೋ ಅದೇ ಮೇಘದಲ್ಲಿ ಅಡಕವಾಗಿದ್ದ ಉದಕವನ್ನೆಲ್ಲಾ ಬೇಸಿಗೆಯಲ್ಲಿ ಸಮಸ್ತವಾದ ಸೂರ್ಯರಶ್ಮಿಗಳೂ ಪಾನಮಾಡುತ್ತವೆ. ಪುನಃ ವರ್ಷಾಕಾಲದಲ್ಲಿ ಪ್ರವಾಹರೂಪವಾದುದೂ, ಉದಕದಿಂದ ಪೂರ್ಣವಾದುದೂ ಆದ ವೃಷ್ಟಿಯನ್ನು ಎಲ್ಲವು ಒಟ್ಟಿಗೆ ಸೇರಿ ಪ್ರಭೂತವಾಗಿ ಸುರಿಸುತ್ತವೆ.

## English Translation.

That stone-like, solid, down-hanging, water-laden (cloud), which Bramhmanspathi has with his strength divided, the universal solar rays have drunk up: but they have again shed together the showering and water-spreading (rain).

॥ ವಿಶೇಷವಿಷಯಗಳು ॥

**ಅಶ್ಮಾಸ್ಯಂ—ಅಶ್ಮವದ್ದೃಢತರಾಸ್ಯಂ ।** ಕಲ್ಲಿನಂತೆ ಬಹು ದೃಢವಾದ ಎಂದು ಸಾಯಣರ ವಿವರಣೆಯು. ಈ ಶಬ್ದಕ್ಕೆ ಯಾಸ್ಕರು ನಿರ್ವಚನವನ್ನು ಹೇಳುತ್ತಾ ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು—

**ಅಶನವಂತಮಾಸ್ಯಂದನವಂತಮವಾತಿತಂ ।** (ನಿ ೧೦-೧೩) ಎಂದು ವಿವರಿಸಿದಾರೆ. ಎಂದರೆ— **ವ್ಯಾಪನವಂತಮಾಸೇಚನವಂತಮಿತಿ ತಸ್ಯಾರ್ಥಃ ।** ಉದಕದಿಂದ ವ್ಯಾಪ್ತವಾಗಿಯೂ, ವೃಷ್ಟಿಯನ್ನು ಸುರಿಸುವುದಾಗಿಯೂ ಇರುವ ಮೇಘವೆಂದು ಅಭಿಪ್ರಾಯವು ಮತ್ತು ಈ ಋಕ್ಕಿಗೆ

> **ಅಶನವಂತಮಾಸ್ಯಂದನವಂತಮವತಿತಂ ಬ್ರಹ್ಮಣಸ್ಪತಿರ್ಮಧುಧಾರಮಭಿಯವೋಜಸಾ ಬಲೇ-ನಾಭ್ಯತೃಣತ್ ತಮೇವ ಸರ್ವೇ ಪಿಬಂತಿ ರಶ್ಮಯಃ ಸೂರ್ಯದೃಶೋ ಬಹ್ವೇನಂ ಸಹ ಸಿಂಚಂತ್ಯುತ್ಸಮುದ್ರಿಣಮುದಕವಂತಂ ॥** (ನಿ. ೧೦-೧೩)

ಎಂದು ನಿರ್ವಚನವನ್ನು ಹೇಳಿದ್ದಾರೆ—ಈ ಬ್ರಹ್ಮಣಸ್ಪತಿಯು ಉದಕದಿಂದ ಪೂರ್ಣವಾಗಿ ಶಿಲೆಯಂತೆ ಕಠಿಣವಾದ ಮೇಘವನ್ನು ತನ್ನ ಶಕ್ತಿಯಿಂದ ಪ್ರಹರಿಸಿ ಆ ಮೇಘವು ಮಧುರವಾದ ಉದಕವನ್ನು ಅಧೋಮುಖವಾಗಿ ಭೂಮಿಯ ಮೇಲೆ ವೃಷ್ಟಿಸುವಂತೆ ಮಾಡಿದನು. ಆ ಉದಕವನ್ನೇ ಎಂದರೆ ಭೂಮಿಯ ಮೇಲೆ ಇರುವ ಉದಕವನ್ನೇ ಸೂರ್ಯನ ರಶ್ಮಿಗಳು ಪಾನಮಾಡಿ (ಹೀರಿ) ಅದನ್ನು ಮತ್ತೆ ವೃಷ್ಟಿರೂಪದಲ್ಲಿ ಭೂಮಿಯ ಮೇಲೆ ಸುರಿಸುವವು ಎಂದು ಮುಖ್ಯಾಭಿಪ್ರಾಯವು. ಭೂಮಿಯ ಮೇಲಿರುವ ಸಮುದ್ರ, ನದಿಗಳು, ಸರೋವರಗಳು, ಇತರ ಜಲಾಶಯಗಳು ಇವುಗಳ ಮೇಲೆ ಸೂರ್ಯನ ತೀಕ್ಷ್ಣವಾದ ಕಿರಣಗಳು ಬೀಳುವುದರಿಂದ ಆ ಜಲಾಶಯಗಳ ಉದಕಗಳಲ್ಲಿ ಕೆಲವು ಭಾಗವು ಕಿರಣಗಳ ತಾಪದಿಂದ ಕಾದು ಆವಿಯ ರೂಪದಿಂದ ಅಂತರಿಕ್ಷದಲ್ಲಿ ಹರಡಿ ಮೇಘರೂಪದಿಂದ ಗೋಚರಿಸುವುದು. ಈ ಮೇಘವು ತನ್ನಲ್ಲಿರುವ ಉದಕವನ್ನು ಮತ್ತೆ ಭೂಮಿಯ ಮೇಲೆ ಮಳೆಗರೆಯುವುದು ಎಲ್ಲರಿಗೂ ತಿಳಿದ ವಿಷಯವು. ಆಧುನಿಕ ವಿಜ್ಞಾನವೂ ಇದನ್ನೇ ಸಮರ್ಥಿಸುವುದು. ಆದುದರಿಂದ ಇಲ್ಲಿ ಹೇಳಿರುವ ಮೇಘೋತ್ಪತ್ತಿ ಮತ್ತು ವೃಷ್ಟಿಕಾರಣಗಳು ಅನುಭವಕ್ಕೂ ವಿಜ್ಞಾನಕ್ಕೂ ಅನುಸಾರವಾಗಿಯೇ ಇದೆ.

॥ ಸಂಹಿತಾಪಾಠಃ ॥

**ಸನಾ ತಾ ಕಾ ಚಿದ್ಭುವನಾ ಭವೀತ್ವಾ ಮಾದ್ಭಿಃ ಶರದ್ಭಿರ್ದುರೋ ವರಂತ ವಃ ।**
**ಅಯತಂತಾ ಚರತೋ ಅನ್ಯದನ್ಯದಿದ್ಯಾ ಚಕಾರ ವಯುನಾ ಬ್ರಹ್ಮಣಸ್ಪತಿಃ ॥ ೫ ॥**

॥ ಪದಪಾಠಃ ॥

ಸನಾ । ತಾ । ಕಾ । ಚಿತ್ । ಭುವನಾ । ಭವೀತ್ವಾ । ಮಾತ್‌ಽಭಿಃ । ಶರತ್‌ಽಭಿಃ । ದುರಃ । ವರಂತೆ । ವಃ ।

ಅಯತಂತಾ । ಚರತಃ । ಅನ್ಯತ್‌ಽಅನ್ಯತ್ । ಇತ್ । ಯಾ । ಚಕಾರ । ವಯುನಾ । ಬ್ರಹ್ಮಣಃ । ಪತಿಃ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಗ್ಯಜಮಾನಾ ವೋ ಯುಷ್ಮದರ್ಥಂ ಸನಾ ಸನಾತನಾನಿ ತಾ ತಾನಿ ಕಾ ಚಿತ್ ಕಾನಿ ಚಿತ್ ಬಹ್ಮಣಸ್ಪತೇಃ ಪ್ರಜ್ಞಾನಾನಿ ಭುವನಾ ಭುವನಾನಾಂ ॥ ಸುಪಾಂ ಸುಲುಗಿತಿ ಷಷ್ಠ್ಯಾ ಲುಕ್ ॥ ಭುವನಾನಾಮುದಕಾನಾಂ ಭವೀತ್ವಾ ಭಾವ್ಯಾನಾಂ ದುರೋ ದ್ವಾರಾಣಿ ಮಾದ್ಭಿರ್ಮಾಸೈಃ ॥ ಪದ್ದನ್ನಿತ್ಯಾದಿನಾ ಮಾಸಶಬ್ದಸ್ಯ ಮಾಸ್ಭಾವಃ । ಸ್ವತವಸ್ಮಾಸೋಽಷಸಾಂ ಚ ತ ಇಷ್ಯತೇ । ಪಾ. ೭-೪-೪೮-೨. । ಇತಿ ತತ್ವಂ ॥ ಶರದ್ಭಿಃ ಸಂವತ್ಸರೈಶ್ಚ ವರಂತೆ । ವಿವೃಣ್ವಂತಿ । ತತ್ಕಾಲೇ ವರ್ಷಣಾರ್ಥಂ ಮೇಘದ್ವಾರಾಣ್ಯುದ್ಘಾಟಯಂತೀತ್ಯರ್ಥಃ । ಕಾನಿ ಪುನಸ್ತಾನಿ । ಬ್ರಹ್ಮಣಸ್ಪತಿರ್ಯಾ ಯಾನಿ ವಯುನಾ ॥ ಜ್ಞಾನನಾಮೈತತ್ ॥ ಜ್ಞಾನಾನಿ ಮಂತ್ರವಿಷಯಾಣಿ ಚಕಾರ । ಕೃತವಾನ್ । ತದನಂತರಮಯತಂತಾ ಅಯತಮಾನಾವಪ್ರಯತ್ನಾವುಭೌ ಲೋಕೌ ದ್ಯಾವಶ್ಚ ಪೃಥಿವೀ ಚ ಅನ್ಯದನ್ಯದಿತ್ ಅನ್ಯದನ್ಯದೇವ ಪೃಥಿವೀ ವೃಷ್ಟಿಜಲಂ ದಿವ್ಯಮುದಕಂ ದ್ಯೌರುದಕಕಾರ್ಯಂ ಹವಿರ್ಲಕ್ಷಣಂ ಪಾರ್ಥಿವಮನ್ನಂ ಏವಂ ಪರಸ್ಪರವ್ಯತಿಹಾರೇಣ ಚರತಃ । ಭುಂಜಾತೇ ॥ ಚರ ಗತಿಭಕ್ಷಣಯೋಃ ॥

॥ ಪ್ರತಿಪದಾರ್ಥ ॥

(ಎಲೈ ಋತ್ವಿಗ್ಯಜಮಾನರೇ) ಬ್ರಹ್ಮಣಸ್ಪತಿಃ—ಬ್ರಹ್ಮಣಸ್ಪತಿಯು । **ಯಾ**—ಯಾವ । **ವಯುನಾ**—ಜ್ಞಾನಯುಕ್ತವಾದ ಕರ್ಮಗಳನ್ನು । **ಚಕಾರ**—(ಮಂತ್ರೋಚ್ಚಾರಣೆಯ ಫಲವಾಗಿ) ಮಾಡಿದನೋ । **ಸನಾ**—ಪುರಾತನವೂ । **ತಾ ಕಾ ಚಿತ್**—ಅನೇಕ ರೂಪವುಳ್ಳವೂ, ಪ್ರಸಿದ್ಧವಾದವೂ ಆದ ಆ ಕರ್ಮಗಳು । **ಭುವನಾ**—ಉದಕಗಳ । **ಭವಿತ್ವಾ**—ಭವಿಷತ್ತಿನ । **ದುರಃ**—ದ್ವಾರಗಳನ್ನು । **ಮಾದ್ಭಿಃ**—ಮಾಸಗಳ ಅವಧಿಯಲ್ಲಿಯೂ । **ಶರದ್ಭಿಃ**—ಸಂವತ್ಸರಗಳ ಅವಧಿಯಲ್ಲಿಯೂ । **ವಃ**—ನಿಮ್ಮ ಉಪಯೋಗಕ್ಕಾಗಿ । **ವರಂತೆ**—ಬಿಡಿಸಿ (ಉದಕಗಳ ಪ್ರವಾಹಕ್ಕೆ ದಾರಿಯನ್ನು ಮಾಡಿಕೊಡುತ್ತವೆ) । (ಅನಂತರ) **ಅಯತಂತಾ**—ಪ್ರಯತ್ನವಿಲ್ಲದೇ ಸ್ವಪ್ರೇರಣೆಯಿಂದಲೇ ವ್ಯವಹರಿಸತಕ್ಕ ದ್ಯಾವಾಪೃಥಿವಿಗಳು । **ಅನ್ಯದನ್ಯದಿತ್**—ಪರಸ್ಪರವಾಗಿ ದತ್ತವಾದ ಅನ್ನಗಳನ್ನು (ದ್ಯುಲೋಕದಿಂದ ದತ್ತವಾದ ಉದಕವನ್ನು ಪೃಥವಿಯೂ, ಪೃಥವಿಯಿಂದ ದತ್ತವಾದ ಹವಿಸ್ಸಿನ ರೂಪವಾದ ಅನ್ನವನ್ನು ದ್ಯುಲೋಕವೂ) । **ಚರತಃ**—ಉಪಯೋಗಿಸುತ್ತವೆ.

॥ ಭಾವಾರ್ಥ ॥

ಎಲೈ ಋತ್ವಿಗ್ಯಜಮಾನರೇ, ಬ್ರಹ್ಮಣಸ್ಪತಿಯು ಯಾವ ಜ್ಞಾನಯುಕ್ತವಾದ ಕರ್ಮಗಳನ್ನು ಮಂತ್ರಪಠನದ ಫಲವಾಗಿ ನೆರವೇರಿಸಿದನೋ, ।ಪುರಾತನವೂ, ಅನೇಕ ವಿಧವಾದವೂ, ಪ್ರಸಿದ್ಧವಾದವೂ ಆದ ಆ ಕರ್ಮಗಳು ಉದಕಗಳ ಭವಿಷ್ಯತ್ತಿನ ದ್ವಾರಗಳನ್ನು ಮಾಸಗಳ ಅವಧಿಯಲ್ಲಿಯೂ, ಸಂವತ್ಸರಗಳ ಅವಧಿಯಲ್ಲಿಯೂ ನಿಮ್ಮ ಉಪಯೋಗಕ್ಕಾಗಿ

ಬಿಡಿಸಿ ಉದಕಗಳ ಪ್ರವಾಹಕ್ಕೆ ದಾರಿಯನ್ನು ಮಾಡಿಕೊಡುತ್ತವೆ. ಅನಂತರ ನಿರ್ಬಂಧವಿಲ್ಲದೇ ಸ್ವಪ್ರೇರಣೆಯಿಂದಲೇ ವ್ಯವಹರಿಸತಕ್ಕ ದ್ಯಾವಾಪೃಥಿವಿಗಳು ಪರಸ್ಪರವಾಗಿ ದತ್ತವಾದ ಅನ್ನಗಳನ್ನು ಉಪಭೋಗಿಸುತ್ತವೆ. ಎಂದರೆ, ದ್ಯುಲೋಕದಿಂದ ದತ್ತವಾದ ಉದಕವನ್ನು ಪೃಥಿವಿಯೂ, ಪೃಥಿವಿಯಿಂದ ದತ್ತವಾದ ಹವಿಸ್ಸಿನ ರೂಪವಾದ ಅನ್ನವನ್ನು ದ್ಯುಲೋಕವೂ ಉಪಭೋಗಿಸುತ್ತವೆ.

## English Translation.

For you, (worshippers), the constant and manifold (bounties of Brahmanaspati), through months and through years, set open the gates of the future rains, and he has appointed those results of prayer, which the two regions mutually and without effort provide.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸ್ವಲ್ಪ ತೊಡಕಾಗಿರುವುದು. ಇದಕ್ಕೆ ಅನೇಕರು ಅನೇಕ ವಿಧವಾಗಿ ಅರ್ಥಮಾಡಿರುವರು. ಈ ಋಕ್ಕಿನಲ್ಲಿರುವ **ಭುವನಾ** ಎಂಬ ಶಬ್ದಕ್ಕೆ ಕೆಲವರು ಲೋಕದ ಜನರೆಂದೂ ಸಾಯಣರು ಉದಕವೆಂದೂ ಅರ್ಥ ಮಾಡಿರುವರು. ಅದರಂತೆ ದ್ಯಾವಾಪೃಥಿವಿಗಳೆಂಬ ಶಬ್ದವನ್ನು ಅಧ್ಯಾಹಾರಮಾಡಿ ಅರ್ಥವನ್ನು ಹೊಂದುವಂತೆ ವಿವರಿಸಿರುವರು.

**ಬ್ರಹ್ಮಣಃ ಪತಿಃ ಯೋ ವಯುನಾ ಚಕಾರ ಸನಾ ತಾ ಕಾ ಚಿತ್ ಭುವನಾ ಭವಿತ್ವಾ ದುರಃ ಮಾದ್ಭಿಃ ಶರದ್ಭಿಃ ವಃ ವರಂತೆ**— ಬ್ರಹ್ಮಣಸ್ಪತಿಯು ಜ್ಞಾನವನ್ನು ಮಂತ್ರವಿಷಯವನ್ನಾಗಿ ಎಂದರೆ ಮಂತ್ರಾರ್ಥರೂಪದಲ್ಲಿ ಪ್ರಚುರಪಡಿಸಿದಾಗ ಬ್ರಹ್ಮಣಸ್ಪತಿಯ ಜ್ಞಾನಯುಕ್ತವಾದ ಮಂತ್ರಗಳು (ಯಜ್ಞಾದಿ ಕರ್ಮಗಳು) ಮಾಸಗಳಲ್ಲಿಯೂ ಸಂವತ್ಸರಗಳಲ್ಲಿಯೂ ನಿಮ್ಮ (ಜನದ) ಉಪಯೋಗಾರ್ಥವಾಗಿ ವೃಷ್ಟ್ಯುದಕದ ದ್ವಾರಗಳನ್ನು ಬಿಡಿಸಿ ಮಳೆ ಹುಯ್ಯುವಂತೆ ಮಾಡಿದನು. ಯಜ್ಞಯಾಗಾದಿಗಳಲ್ಲಿ ಅರ್ಥಯುಕ್ತವಾದ ಮಂತ್ರಗಳನ್ನು ಪಠಿಸುವುದರಿಂದ ಅದರ ಫಲರೂಪವಾಗಿ ಸಂವತ್ಸರಪರ್ಯಂತವೂ ಎಲ್ಲಾ ತಿಂಗಳುಗಳಲ್ಲಿಯೂ ಎಂದರೆ ವರ್ಷದ ಬಹುಭಾಗದಲ್ಲಿ ಮಳೆಯು ಹುಯ್ಯುವುದು. ಮೇಘಗಳಲ್ಲಿ ಶೇಖರವಾಗಿರುವ ಉದಕವು ಯಜ್ಞಯಾಗಾದಿಗಳಲ್ಲಿ ಅರ್ಥವತ್ತಾದ ಮಂತ್ರೋಚ್ಚಾರಣೆಯಿಂದ ಬಿಡುಗಡೆ ಹೊಂದಿ ಮಳೆಯ ರೂಪದಲ್ಲಿ ಭೂಮಿಯ ಮೇಲೆ ಬೀಳುವುದು ಎಂದು ಮುಖ್ಯಾಭಿಪ್ರಾಯವು. ಇಲ್ಲಿ ವಯುನಶಬ್ದವು ಪ್ರಜ್ಞಾನಾಮಗಳಲ್ಲಿಯೂ (ನಿ. ೩-೧೩), ಭುವನಶಬ್ದವು ಉದಕನಾಮಗಳಲ್ಲಿಯೂ (ನಿ. ೨-೨೪) ಪಠಿತವಾಗಿದೆ. ಶರಚ್ಛಬ್ದವು ಸಂವತ್ಸರಾರ್ಥದಲ್ಲಿ ಪ್ರಯುಕ್ತವಾಗಿದೆ (ನಿ. ೪-೨೭).

**ಅಯತಂತಾ ಅನ್ಯದನ್ಯತ್ ಇತ್ ಚರತಃ**— ಬ್ರಹ್ಮಣಸ್ಪತಿಯ ಮಹಿಮೆಯಿಂದ ದ್ಯಾವಾಪೃಥಿವಿಗಳ ಯಾವ ಪ್ರಯತ್ನವೂ ಇಲ್ಲದೆ ಪರಸ್ಪರ ಸಹಕರಿಸಿ ಕೆಲಸ ಮಾಡುತ್ತವೆ. ಹೇಗೆಂದರೆ—ಮುಂದೆ ವರ್ಷಿಸಬಹುದಾದ ಉದಕದ್ವಾರಗಳನ್ನು (ಮೇಘಗಳನ್ನು) ಆಯಾ ತಿಂಗಳುಗಳಲ್ಲಿ ಅಥವಾ ವರ್ಷಗಳಲ್ಲಿ ಒಡೆದು ಮಳೆ ಸುರಿಯುವಂತೆ ಮಾಡಿರುವುದು ಎಂದರೆ ಈ ಬ್ರಹ್ಮಣಸ್ಪತಿಯು ತನ್ನ ಮಂತ್ರಶಕ್ತಿಯಿಂದ ಮೇಘಗಳು ಕಾಲಕಾಲಕ್ಕೆ ಸರಿಯಾಗಿ ಮಳೆ ಸುರಿಯುವಂತೆ ಮಾಡಿ ದ್ಯಾವಾಪೃಥಿವಿಗಳು ಒಂದಕ್ಕೊಂದು ಆಶ್ರಯವಾಗಿರುವಂತೆ ಮಾಡುವನು. ಸಕಾಲದಲ್ಲಿ ಮಳೆ

ಬೀಳುವುದರಿಂದ ಭೂಮಿಯ ಮೇಲೆ ಸಸ್ಯಾದಿಗಳು ಚೆನ್ನಾಗಿ ಬೆಳದು ಅದರ ಸಹಾಯದಿಂದ ಜನರು ಯಜ್ಞಯಾಗಾದಿಗಳನ್ನು ಮಾಡಲು ಅನುಕೂಲವಾಗುತ್ತದೆ. ಮನುಷ್ಯರಿಂದ ದತ್ತವಾದ ಹವಿರಾದಿಗಳನ್ನು ದ್ಯುಲೋಕದಲ್ಲಿರುವ ದೇವತೆಗಳು ಸ್ವೀಕರಿಸಿ ತೃಪ್ತರಾಗಿ ವೃಷ್ಟಿಯನ್ನುಂಟುಮಾಡುತ್ತಾರೆ. ಇದು ಪುನಃ ಯಜ್ಞಾದಿಗಳಿಗೆ ಅನುಕೂಲವಾಗುತ್ತದೆ. ಆದ್ದರಿಂದ ದ್ಯುಲೋಕವು ವೃಷ್ಟಿಯನ್ನು ಸುರಿಸುವುದೂ, ಭೂಮಿಯು ಸಸ್ಯಾದಿಗಳನ್ನು ಉತ್ಪತ್ತಿಮಾಡಿ ಯಜ್ಞಾದಿ ಕರ್ಮಗಳಿಗೆ ಸಹಾಯ ಮಾಡುವುದೂ, ದ್ಯಾವಾಪೃಥಿವಿಗಳ ಅನ್ಯೋನ್ಯಾಶ್ರಯವೆಂದು ಹೇಳಲ್ಪಡುವುದು. ಈ ಕಾರ್ಯವು ದ್ಯಾವಾಪೃಥಿವಿಗಳ ಪ್ರಯತ್ನವಿಲ್ಲದೆ ನಡೆಯುವುದರಿಂದ ಈ ವಿಧವಾದ ಕಾರ್ಯಗಳಿಗೆ ಬ್ರಹ್ಮಣಸ್ಪತಿಯ ಮಂತ್ರಶಕ್ತಿ ಅಥವಾ ಮಹಿಮೆಯೇ ಕಾರಣವು ಎಂದು ಮುಖ್ಯಾಭಿಪ್ರಾಯವು.



॥ ಸಂಹಿತಾಪಾಠಃ ॥

ಅಭಿನಕ್ಷಂತೋ ಅಭಿ ಯೇ ತಮಾನಶುರ್ನಿಧಿಂ ಪಣೀನಾಂ ಪರಮಂ ಗುಹಾ ಹಿತಂ ।
ತೇ ವಿದ್ವಾಂಸಃ ಪ್ರತಿಚಕ್ಷ್ಯಾನೃತಾ ಪುನರ್ಯತ ಉ ಆಯಂತದುದೀಯುರಾವಿಶಂ ॥

॥ ಪದಪಾಠಃ ॥

ಅಭಿಽನಕ್ಷಂತಃ । ಅಭಿ । ಯೇ । ತಂ । ಆನಶುಃ । ನಿಽಧಿಂ । ಪಣೀನಾಂ । ಪರಮಂ । ಗುಹಾ । ಹಿತಂ ।
ತೇ । ವಿದ್ವಾಂಸಃ । ಪ್ರತಿಽಚಕ್ಷ್ಯ । ಅನೃತಾ । ಪುನಃ । ಯತಃ । ಊಂ ಇತಿ । ಆಯನ್ । ತತ್ । ಉತ್
ಈಯುಃ । ಆಽವಿಶಂ ॥ ೬

॥ ಸಾಯಣಭಾಷ್ಯಂ ॥

ಗೋಸಮೂಹೇ ಪಣಿಭಿರಸುರೈರಪಹೃತೇ ಸತಿ ಪಣೀನಾಂ ಸ್ಥಾನಂ ಸರಮಾಖ್ಯಯಾ ದೇವಶುನ್ಯಾ ಜ್ಞಾತ್ವಾ ಬ್ರಹ್ಮಣಸ್ಪತಿನಾ ಸೃಷ್ಟಾ ಅಂಗಿರಸಸ್ತತ್ಸ್ಥಾನಂ ಪ್ರಾಪ್ಯ ಗೋಸಮೂಹಂ ಪಣಿಭಿರ್ನಿರ್ಮಿತಾ ಮಾಯಾಶ್ಚ ದೃಷ್ಟ್ವಾ ಅಸುರನಿವಾಸಸ್ಥಾನಂ ಸ್ವಹಸ್ತೋದ್ಭೂತೇನಾಗ್ನಿನಾ ದಗ್ಧ್ವಾ ಪ್ರತ್ಯಾಗಚ್ಛನ್ । ತದೇತದ್ವ್ಯಚೇನೋಚ್ಯತೇ । ಅಭಿನಕ್ಷಂತೋಽಭಿತೋ ಗಚ್ಛಂತೋ ಯೇಽಂಗಿರಸಸ್ತಂ ನಿಧಿಂ ಗೋಸಮೂಹರೂಪಂ ನಿಧಾನಂ ಧನಂ ಪರಮಮುತ್ಕೃಷ್ಟಂ ಪಣೀನಾಂ ॥ ತೃತೀಯಾರ್ಥೇ ಷಷ್ಠೀ । ಪಣಿಭಿರ್ಗುಹಾಯಾಂ ನಿಹಿತಂ ಸ್ಥಾಪಿತಮಭ್ಯಾನಶುಃ । ಅಭಿಲಕ್ಷ್ಯಾನಶಿರೇ । ಪ್ರಾಪ್ತವಂತಃ ॥

ವಿದ್ವಾಂಸೋಽಭಿಜ್ಞಾಸ್ತೇಽಂಗಿರಸೋಽನೃತಾ ಅನೃತಾನ್ಯಸುರೈಃ ಕೃತಾ ಮಾಯಾಃ ಪ್ರತಿಚಕ್ಷ್ಯ ದೃಷ್ಟ್ವಾ- ಆವಿಶಮಾವೇಷ್ಟುಂ ಪ್ರವೇಷ್ಟುಂ ಯತ ಉ ಯತ ಏವ ಸ್ಥಾನಾದಾಯನ್ ಆಗಚ್ಛನ್ ತತ್ಸ್ಥಾನಂ ಪುನರುದೀಯುಃ । ಉದಗಚ್ಛನ್ । ಉತ್ಕರ್ಷೇಣ ಪ್ರಾಪ್ತಾಃ ॥

॥ ಪ್ರತಿಪದಾರ್ಥ ॥

**ಅಭಿನಕ್ಷಂತಃ**—(ಗೋವುಗಳಿಗಾಗಿ) ಸುತ್ತಲೂ ಹುಡುಕುತ್ತಾ । **ಯೇ**—ಯಾವ ಅಂಗಿರಸ್ಸುಗಳು । **ಪರಮಂ**—ಉತ್ಕೃಷ್ಟವಾದುದೂ । **ತಂ ನಿಧಿಂ**—ಗೋರೂಪವಾದುದೂ ಆದ ಆ ಧನವನ್ನು । **ಪಣೀನಾಂ**—ಪಣಿಗಳ । **ಗುಹಾ ಹಿತಂ**—ಗುಹೆಯಲ್ಲಿ ಸ್ಥಾಪಿತವಾಗಿದ್ದುದನ್ನು । **ಅಭಿ ಆನಶುಃ**—ಕಂಡುಹಿಡಿದರೋ । **ವಿದ್ವಾಂಸಃ**—ಪ್ರಾಜ್ಞರಾದ । **ತೇ**—ಆ ಅಂಗಿರಸ್ಸುಗಳು । **ಅನೃತಾ**—ಅಸುರರ ಆ ಮಾಯೆಯನ್ನು । **ಪತಿಚಕ್ಷ್ಯ**—ನೋಡಿ (ಮಾಯಾರೂಪವಾದ ಗುಹೆಯನ್ನು) । **ಆವಿಶಂ**—ಪ್ರವೇಶಿಸುವುದಕ್ಕೆ । **ಯತ ಉ**—ಯಾವ ಸ್ಥಾನದಿಂದ । **ಆಯನ್**—ಬಂದರೋ । **ತತ್**—ಅದೇ ಸ್ಥಾನವನ್ನು । **ಪುನಃ**—ತಿರುಗಿಯೂ । **ಉದೀಯುಃ**—ಅತಿಶಯವಾಗಿ ಹೋಗಿ ಸೇರಿದರು.

॥ ಭಾವಾರ್ಥ ॥

ಯಾವ ಅಂಗಿರಸ್ಸುಗಳು ಗೋವುಗಳಿಗಾಗಿ ಸುತ್ತಲೂ ಹುಡುಕುತ್ತಾ, ಉತ್ಕೃಷ್ಟವಾದುದೂ, ಗೋರೂಪವಾದುದೂ ಆದ ಆ ಧನವನ್ನು ಪಣಿಗಳ ಗುಹೆಯಲ್ಲಿ ಸ್ಥಾಪಿತವಾಗಿದ್ದುದನ್ನು ಕಂಡುಹಿಡಿದರೋ, ಪ್ರಾಜ್ಞರಾದ ಅದೇ ಅಂಗಿರಸ್ಸುಗಳು ಅಸುರರ ಆ ಮಾಯೆಯನ್ನು ನೋಡಿ ಆ ಮಾಯಾರೂಪವಾದ ಗುಹೆಯನ್ನು ಪ್ರವೇಶಿಸುವುದಕ್ಕೆ ಯಾವ ಸ್ಥಾನದಿಂದ ಬಂದರೋ ಅದೇ ಸ್ಥಾನವನ್ನು ತಿರುಗಿಯೂ ಅತಿಶಯವಾಗಿ ಹೋಗಿ ಸೇರಿದರು.

## English Translation.

Those sages, who, searching on every side, discoverd the precious treasure (of cattle) hidden in the cave of the Panis, having seen through the false (illusions of the Asura), and again coming (thither), forced an entrance.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಬ್ರಹ್ಮಣಸ್ಪತಿ ಅಥವಾ ಬೃಹಸ್ಪತಿಯ ವಿಷಯವು ಪ್ರಸ್ತಾಪಿಸಲ್ಪಟ್ಟಿರುವುದಿಲ್ಲ. ಆದರೆ ಬೃಹಸ್ಪತಿಯು ವಂಶಸ್ಥರಾದ ಅಂಗಿರಾ ಋಷಿಗಳ ಪ್ರಶಂಸೆಯೂ, ಅವರು ಪಣಿಗಳಿಂದ ಅಪಹೃತವಾದ ಗೋವುಗಳನ್ನು ತಂದ ಸಂದರ್ಭದಲ್ಲಿ ಮಾಡಿದ ಸಾಹಸ ಕೃತ್ಯಗಳ ವರ್ಣನೆಯೂ ಉಕ್ತವಾಗಿದೆ.

ಈ ಋಕ್ಕಿನ ಅರ್ಥವನ್ನು ವಿವರಿಸುವುದಕ್ಕಾಗಿ ಭಾಷ್ಯಕಾರರು ಇತರ ಸ್ಥಳಗಳಲ್ಲಿ ಉಕ್ತವಾಗಿರುವ ಉಪಾಖ್ಯಾನವನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸಿರುವರು. ಹಿಂದೆ ಪಣಿಗಳೆಂಬ ಅಸುರರು ದೇವತೆಗಳ (ಅಥವಾ ಅಂಗಿರಾ ಋಷಿಗಳ?) ಗೋ ಸಮೂಹವನ್ನು ಅಪಹರಿಸಿ, ಅದನ್ನು ಒಂದು ರಹಸ್ಯ ಸ್ಥಳದಲ್ಲಿ ಎಂದರೆ, ಪರ್ವತದ ಗುಹೆಯಲ್ಲಿ ಬಚ್ಚಿಟ್ಟಿದ್ದರು. ಈ ಗೋವುಗಳನ್ನು ಹುಡುಕುವುದಕ್ಕಾಗಿ ಇಂದ್ರನು ಸರಮಾ ಎಂಬ ದೇವಶುನಿಯನ್ನು (ದೇವಲೋಕದ

ಹೆಣ್ಣುನಾಯಿ)' ಕಳುಹಿಸಿದನು. ಆ ಶುನಿಯು ಬಹು ದೂರ ಪ್ರಯಾಣ ಮಾಡಿ ಆಳವಾದ ಮತ್ತು ಬಹಳ ನೀರಿನಿಂದ ತುಂಬಿ ಹರಿಯುತ್ತಿದ್ದ ರಸಾ ಎಂಬ ನದಿಯನ್ನು ದಾಟಿ ಪಣಿಗಳಿದ್ದ ಸ್ಥಳಕ್ಕೆ ಬಂದು ಅವರೊಡನೆ ಸಂಭಾಷಣೆ ಮಾಡಿ, ಗೋವುಗಳನ್ನು ಬಚ್ಚಿಟ್ಟಿದ್ದ ಸ್ಥಳವನ್ನು ಕಂಡುಹಿಡಿದು ದೇವತೆಗಳಿಗೆ ತಿಳಿಸಿತು. ಈ ವಿಷಯವು ಋ. ಸಂ. ೧೦ ನೇ ಮಂಡಲದ ೧೦೮ ನೆಯ ಸೂಕ್ತದಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ. ಅನಂತರ ಬ್ರಹ್ಮಣಸ್ಪತಿಯಿಂದ ಸೃಷ್ಟರಾದ ಅಂಗಿರಾ ಋಷಿಗಳು ಪಣಿಗಳು ಗೋವುಗಳನ್ನು ಬಚ್ಚಿಟ್ಟಿದ್ದ ಪರ್ವತದ ಗುಹೆಯ ಒಳಗೆ ಹೋಗಿ ಅಸುರರು ನಿರ್ಮಿಸಿದ್ದ ನಾನಾವಿಧ ಮಾಯಾಜಾಲಗಳನ್ನು ನಿವಾರಣೆ ಮಾಡಿ ಗೋವುಗಳಿದ್ದ ಸ್ಥಾನವನ್ನು ಸಮೀಪಿಸಿದರು. ಮತ್ತು ಅಸುರರ ನಿವಾಸಸ್ಥಾನಗಳಿಗೆ ಬೆಂಕಿ ಹಚ್ಚಿ ಸುಟ್ಟು ಭಸ್ಮಮಾಡಿ ಗೋವುಗಳನ್ನು ಹಿಂದಕ್ಕೆ ತಂದರು. ಈ ವಿಷಯವನ್ನೇ ಈ ಋಕ್ಕಿನಲ್ಲಿ ಹೇಳಲಾಗಿದೆ ಎಂದು ಭಾಷ್ಯಕಾರರು ಪೀಠಿಕಾರೂಪವಾಗಿ ವಿವರಿಸಿರುವರು.

**ಅಭಿನಕ್ಷಂತಃ ಯೇ ಪಣೀನಾಂ ಗುಹಾ ಹಿತಂ ಪರಮಂ ತಂ ನಿಧಿಂ ಅಭಿ ಆನಶುಃ—ಅಭಿತೋ ಗಚ್ಛಂತೋ ಯೇಽಂಗಿರಸಃ ಪಣಿಭಿರ್ಗುಹಾಯಾಂ ಸ್ಥಾಪಿತಮುತ್ಕೃಷ್ಟಂ ಗೋಸಮೂಹರೂಪಂ ಧನಂ ಅಭಿಲಕ್ಷ್ಯ ಪ್ರಾಪ್ತವಂತಃ ।** ಅಂಗಿರಾ ಋಷಿಗಳು ಪಣಿಗಳಿಂದ ಅಪಹೃತವಾದ ಗೋವುಗಳನ್ನು ಹುಡುಕುತ್ತಾ ಹೋಗುತ್ತಿರುವಾಗ ಆ ಗೋರೂಪವಾದ ಧನವು ರಹಸ್ಯ ಸ್ಥಳವಾದ ಒಂದು ಗುಹೆಯಲ್ಲಿ ಪಣಿಗಳಿಂದ ಬಚ್ಚಿಡಲ್ಪಟ್ಟಿರುವುದನ್ನು ತಿಳಿದು ಅಲ್ಲಿಗೆ ಬಂದರು. ಈ ವಾಕ್ಯದಲ್ಲಿ **ಅಭಿನಕ್ಷಂತಃ ಯೇ** ಎಂಬ ಶಬ್ದಗಳಿಗೆ ಹುಡುಕುತ್ತಾ ಹೋಗುತ್ತಿರುವವರು ಎಂದು ಮಾತ್ರ ಅರ್ಥವಿದ್ದರೂ ಆ ರೀತಿ ಗೋವುಗಳನ್ನು ಹುಡುಕುವವರು ಅಂಗಿರಾ ಋಷಿಗಳೆಂದು ಅನೇಕ ಸಂದರ್ಭಗಳಲ್ಲಿ ಹೇಳಿರುವುದರಿಂದ ಇಲ್ಲಿಯೂ ಅಂಗಿರಾ ಋಷಿಗಳನ್ನೇ ನಿರ್ದೇಶಿಸಿ ಹೇಳಿರುವುದೆಂದು ಊಹೆ ಮಾಡಬೇಕು. **ಪಣೀನಾಂ** ಎಂಬ ಶಬ್ದವು ಷಷ್ಠೀವಿಭಕ್ತಿಯಲ್ಲಿದ್ದರೂ ಇದಕ್ಕೆ ತೃತೀಯಾವಿಭಕ್ತ್ಯರ್ಥವನ್ನೇ ಹೇಳಬೇಕೆಂದು ಎಂದರೆ, **ಪಣೀನಾಂ** ಪಣಿಗಳೆಂಬ ಅಸುರರಿಂದ ಎಂಬರ್ಥವನ್ನು ಹೇಳಬೇಕೆಂದು ಭಾಷ್ಯಕಾರರು ವಿವರಿಸಿರುವರು. **ನಿಧಿಂ** ಎಂಬ ಶಬ್ದಕ್ಕೆ ಗೋಸಮೂಹರೂಪವಾದ ಧನವೆಂದರ್ಥವು. ಏಕೆಂದರೆ, **ಪಣೀನಾಂ (ಪಣಿಭಿಃ) ಗುಹಾ ಹಿತಂ** ಪಣಿಗಳು ಗುಹೆಯಲ್ಲಿ ಬಚ್ಚಿಟ್ಟಿದ್ದ ನಿಧಿಯು ಎಂದು ಸ್ಪಷ್ಟವಾಗಿ ಹೇಳಿರುವುದರಿಂದಲೂ, ಪಣಿಗಳು ಗೋವುಗಳನ್ನು ಮಾತ್ರ ಬಚ್ಚಿಟ್ಟಿದ್ದುದರಿಂದ ಇಲ್ಲಿ ನಿಧಿ ಶಬ್ದಕ್ಕೆ ಗೋರೂಪವಾದ ಧನವನ್ನು ಎಂದರೆ, ಗೋವುಗಳನ್ನು ಎಂದೇ ಅಭಿಪ್ರಾಯವು.

**ತೇ ವಿದ್ವಾಂಸಃ ಅನೃತಾ ಪ್ರತಿಚಕ್ಷ್ಯ ಅವಿಶಂ ಯತಃ ಊಂ ಆಯನ್ ಪುನಃ ತತ್ ಉತ್ ಈಯುಃ— ಅಭಿಜ್ಞಾಸ್ತೇಽಙ್ಗಿರಸೋಽನೃತಾನ್ಯಸುರೈಃ ಕೃತಾ ಮಾಯಾಃ ದೃಷ್ಟ್ವಾ ಪ್ರವೇಷ್ಟುಂ ಯತ ಏವ ಸ್ಥಾನಾದಾಗಚ್ಛನ್ ತತ್ ಸ್ಥಾನಂ ಪುನಃ ಉತ್ಕರ್ಷೇಣ ಪ್ರಾಪ್ತಾಃ ।** ಸಕಲವನ್ನೂ ತಿಳಿದವರಾದ್ದರಿಂದಲೇ ಆ ಅಂಗಿರಾಋಷಿಗಳು—ಪಣಿಗಳು ಮಾಯೋಪಾಯಗಳಿಂದ ಯಾರಿಗೂ ತಿಳಿಯದಂತೆ ಗೋವುಗಳನ್ನು ಬಚ್ಚಿಟ್ಟಿದ್ದ ರಹಸ್ಯಸ್ಥಾನವನ್ನು ಯಾವರೀತಿ ಪ್ರವೇಶಿಸಬೇಕೆಂದು ಮೊದಲೇ ಬಂದು ತಿಳಿದಿದ್ದರೋ ಆ ಸ್ಥಾನಕ್ಕೆ ಮತ್ತೆ ಬಂದರು. ಪಣಿಗಳು ಗೋವುಗಳನ್ನು ಬಚ್ಚಿಟ್ಟಿದ್ದ ಗುಹೆಯನ್ನು ಅಂಗಿರಾಋಷಿಗಳು ತಮ್ಮ ಅಭಿಜ್ಞತೆಯಿಂದ ತಿಳಿದರು. ಆದರೂ ಆ ಗುಹೆಯನ್ನು ಎಲ್ಲಿ ಹೇಗೆ ಪ್ರವೇಶಿಸಬೇಕೆಂದು ಅದನ್ನು ಮೊದಲೇ ನೋಡಿ ಪರೀಕ್ಷಿಸಿ ತಿಳಿದುಕೊಂಡಿದ್ದರು. ಈಗ ಅದರಂತೆ ಆ ಗುಹೆಯನ್ನು ಮೊದಲೇ ಪ್ರವೇಶಿಸಲು ಅನುಕೂಲವಾದ ಸ್ಥಳಕ್ಕೆ ಮತ್ತೆ ಬಂದರು ಎಂದಭಿಪ್ರಾಯವು

ಈ ಋಕ್ಕಿಗೆ ಈ ಅರ್ಥವಲ್ಲದೆ ಬೇರೆ ವಿಧವಾಗಿ ಮತ್ತೊಂದು ಅರ್ಥವನ್ನೂ ಹೇಳಬಹುದು. ಅಂತರಿಕ್ಷದಲ್ಲಿ ಸಂಚರಿಸುವ ಮೇಘಗಳು (ಅಭಿನಕ್ಷಂತಃ) ತಮ್ಮಲ್ಲಿರುವ ನಿಧಿಭೂತವಾದ ಉದಕವನ್ನು ವೃಷ್ಟಿರೂಪದಲ್ಲಿ ಭೂಮಿಯ ಮೇಲೆ ಸುರಿಸದೆ ತಡೆದಿಟ್ಟುಕೊಂಡಿರುವುದನ್ನು ಸಮಸ್ತವನ್ನೂ ತಿಳಿದ ಅಂಗಿರಾಋಷಿಗಳು ತಮ್ಮ ಯಜ್ಞಕರ್ಮ ಪ್ರಭಾವದಿಂದ ಮಳೆಹುಯ್ಯುವಂತೆ ಮಾಡಿದರು ಎಂಬ ಅರ್ಥವೂ ಭಾಸವಾಗುವುದು.

॥ ಸಂಹಿತಾಪಾಠಃ ॥

ಋತಾವಾನಃ ಪ್ರತಿಚಕ್ಷ್ಯಾನೃತಾ ಪುನರಾತ ಆ ತಸ್ಥುಃ ಕವಯೋ ಮಹಸ್ಪಥಃ ।
ತೇ ಬಾಹುಭ್ಯಾಂ ಧಮಿತಮಗ್ನಿಮಶ್ಮನಿ ನಕಿಃ ಷೋ ಅಸ್ತ್ಯರಣೋ ಜಹುರ್ಹಿ ತಂ ॥

ಪದಪಾಠಃ

ಋತ್ಽವಾನಃ । ಪ್ರತಿಽಚಕ್ಷ್ಯ । ಅನೃತಾ । ಪುನಃ । ಆ । ಆತಃ । ಆ । ತಸ್ಥುಃ । ಕವಯಃ । ಮಹಃ । ಪಥಃ ।
ತೇ । ಬಾಹುಽಭ್ಯಾಂ । ಧಮಿತಂ । ಅಗ್ನಿಂ । ಅಶ್ಮನಿ । ನಕಿಃ । ಸಃ । ಅಸ್ತಿ । ಅರಣಃ । ಜಹುಃ । ಹಿ । ತಂ ॥ ೭ ॥

॥ ಸಾಯಣಭಾಷ್ಯಂ ॥

ಋತಾವಾನಃ। ಋತಮಿತಿ ಸತ್ಯನಾಮಧೇಯಂ। ತದ್ವಂತಃ ಕವಯಃ ಕ್ರಾಂತದರ್ಶಿನಃ ಸರ್ವಜ್ಞಾ ಅಂಗೀರಸೋಽನೃತಾ ಅನೃತಾನಿ ಪ್ರತಿಚಕ್ಷ್ಯ ಪೂರ್ವೋಕ್ತಪ್ರಕಾರೇಣ ದೃಷ್ಟ್ವಾ ಅತೋಽಸ್ಮಾತ್ಸ್ಥಾನಾತ್ ಪುನರಾಜಿಗಮಿಷವೋ ಮಹಸ್ಪಥೋ ಮಹತೋ ಮಾರ್ಗಾನ್ ಪ್ರತಿ ಆತಸ್ಥುಃ। ಅವತಸ್ಥಿರೇ। ಅವತಿಷ್ಠಮಾನಾಶ್ಚ ತೇ ಬಾಹುಭ್ಯಾಂ ಹಸ್ತಾಭ್ಯಾಂ ಧಮಿತಂ ಮಂಥನೋತ್ಪಾದಿತಂ ಪ್ರಜ್ವಾಲಿತಮಗ್ನಿಮಶ್ಮನಿ ಪಣೀನಾಂ ನಿವಾಸಭೂತೇ ಶಿಲೋಚ್ಚಯೇ ಜಹುರ್ಹಿ। ದಗ್ಧುಂ ತ್ಯಕ್ತವಂತಃ ಖಲು। ಅರಣೋಽರಮಯಿತಾ ದಾಹೇನ ದುಃಖಕಾರೀ ಸೋಽಗ್ನಿಃ ಪೂರ್ವಂ ತತ್ರ ನಕಿರಸ್ತಿ। ನ ವಿದ್ಯತೇ। ಅವಿದ್ಯಮಾನಮಗ್ನಿಂ ಸ್ವಸಾಮರ್ಥ್ಯಾದುತ್ಪಾದ್ಯ ತತ್ರ ಪ್ರಚಿಕ್ಷಿಪುರಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಋತಾವಾನಃ**—ಸತ್ಯಯುಕ್ತರೂ । **ಕವಯಃ**—ಕ್ರಾಂತದರ್ಶಿಗಳೂ (ಸರ್ವಜ್ಞರೂ) ಆದ ಅಂಗಿರಸ್ಸುಗಳು । **ಅನೃತಾ**—ಅಸತ್ಯಾತ್ಮಕವಾದ (ಅಸುರರ) ಮಾಯೆಗಳನ್ನು । **ಪ್ರತಿಚಕ್ಷ್ಯ**—ನೋಡಿ । **ಅತಃ**—ಆ ಸ್ಥಾನದಿಂದ । **ಪುನಃ**—ಹಿಂತಿರುಗಲಿಚ್ಛೆಯುಳ್ಳವರಾಗಿ । **ಮಹಸ್ಪಥಃ**—ಮಹಾಮಾರ್ಗಕ್ಕೆ । **ಆ ತಸ್ಥುಃ**—

ಬಂದು ನಿಂತರು | **ತೇ**—ಅವರು | **ಬಾಹುಭ್ಯಾಂ**—ತಮ್ಮ ಬಾಹುಗಳಿಂದ | **ಧಮಿತಂ**—ಮಥಿಸಲ್ಪಟ್ಟು ಪ್ರಜ್ವಲಿತವಾದ | **ತಂ ಅಗ್ನಿಂ**—ಆ ಅಗ್ನಿಯನ್ನು | **ಅಶ್ಮನಿ**—(ಪಣಿಗಳ ವಾಸಸ್ಥಾನವಾದ) ಪರ್ವತದ ಶಿಲೆಗಳಲ್ಲಿ | **ಜಹುರ್ಹಿ**—ಇಟ್ಟರು | **ಅರಣಃ**—ದಹಿಸತಕ್ಕ | **ಸಃ**—ಆ ಅಗ್ನಿಯು | **ನಕಿಃ ಅಸ್ತಿ**—(ಮೊದಲು) ಅಲ್ಲಿರಲೇ ಇಲ್ಲ.

॥ ಭಾವಾರ್ಥ ॥

ಸತ್ಯಯುಕ್ತರೂ, ಸರ್ವಜ್ಞರೂ, ಆದ ಅಂಗಿರಸ್ಸುಗಳು ಅಸತ್ಯಾತ್ಮಕವಾದ ಅಸುರರ ಮಾಯೆಗಳನ್ನು ನೋಡಿ ಆ ಸ್ಥಾನದಿಂದ ಹಿಂತಿರುಗಲಿಚ್ಛೆಯುಳ್ಳವರಾಗಿ ಮಹಾಮಾರ್ಗಕ್ಕೆ ಬಂದು ನಿಂತರು. ಅವರು ತಮ್ಮ ಬಾಹುಗಳಿಂದ ಮಥಿಸಲ್ಪಟ್ಟು ಪ್ರಜ್ವಲಿತವಾದ ಅಗ್ನಿಯನ್ನು ಪಣಿಗಳ ವಾಸಸ್ಥಾನವಾದ ಪರ್ವತದ ಶಿಲೆಗಳಲ್ಲಿ ಇಟ್ಟರು. ದಹಿಸತಕ್ಕ ಅಗ್ನಿಯು ಮೊದಲು ಅಲ್ಲಿರಲೇ ಇಲ್ಲ.

English Translation.

Those sages, eminent for truth, having seen through the false (illusions of the Asura), again pursued the main road thither, and with their hands cast against the rock the destructive fire, which, till then, was not there.

॥ ವಿಶೇಷವಿಷಯಗಳು ॥

**ಋತಾವಾನಃ ಕವಯಃ ಅನೃತಾ ಪ್ರತಿಚಕ್ಷ್ಯ ಅತಃ ಪುನಃ ಮಹಸ್ಪಥಃ ಆ ತಸ್ಥುಃ**—ಸತ್ಯವಂತರೂ ಕ್ರಾಂತದರ್ಶಿಗಳೂ ಆದ ಎಂದರೆ, ಸರ್ವಜ್ಞರಾದ ಆ ಅಂಗಿರಾ ಋಷಿಗಳು ಅಸುರರ ಮಾಯಾಜಾಲಗಳನ್ನು ನೋಡಿ ಗೋವುಗಳನ್ನು ಬಚ್ಚಿಟ್ಟಿದ್ದ ಗುಹೆಯ ಒಳಗೆ ಪ್ರವೇಶಿಸಲು ದಾರಿಕಾಣದೆ ತಾವು ಬಂದ ಆ ದೊಡ್ಡ ಮಾರ್ಗಕ್ಕೆ ಬಂದು ನಿಂತರು. ಆದರೆ ತಾವು ಬಂದ ಕಾರ್ಯವನ್ನು ಮಾಡದೆ ಹೋಗಲಿಷ್ಟಪಡಲಿಲ್ಲ. ಆದುದರಿಂದ,

**ತೇ ಬಾಹುಭ್ಯಾಂ ಧಮಿತಂ ತಂ ಅಗ್ನಿಂ ಅಶ್ಮನಿ ಜಹುರ್ಹಿ—ಆತಿಷ್ಠಮಾನಾಶ್ಚ ತೇ ಹಸ್ತಾಭ್ಯಾಂ ಮಂಥನೋತ್ಪಾದಿತಂ ಪ್ರಜ್ವಾಲಿತಮಗ್ನಿಂ ಪಣೀನಾಂ ನಿವಾಸಭೂತೇ ಶಿಲೋಚ್ಚಯೇ ದಗ್ಧುಂ ತ್ಯಕ್ತವಂತಃ ಖಲು** | ಅವರು ತಮ್ಮ ಹಸ್ತಗಳಿಂದ ಬಲವಾಗಿ ಕಡೆದು ಅಗ್ನಿಯನ್ನು ಉತ್ಪಾದನೆಮಾಡಿ ಅದು ಜಾಜ್ವಲ್ಯಮಾನವಾಗಿ ಉರಿಯುತ್ತಿರುವಾಗ ಅದನ್ನು ಪಣಿಗಳು ವಾಸಮಾಡುವ ಪರ್ವತದಲ್ಲಿರುವ ನಿವಾಸಸ್ಥಾನಗಳಿಗೆ ಹೊತ್ತಿಸಿಟ್ಟು ಉರಿಯುವಂತೆ ಮಾಡಿದರು. ಸಾಧಾರಣವಾಗಿ ಯುದ್ಧಾದಿಗಳಿಂದ ಶತ್ರುಗಳನ್ನು ಸೋಲಿಸಬೇಕಾದ ಸಂದರ್ಭದಲ್ಲಿ ಅವರ ನಿವಾಸಸ್ಥಾನಗಳಿಗೆ ಬೆಂಕಿ ಹಚ್ಚಿ ಅವರಿಗೆ ಅಪಾರವಾದ ನಷ್ಟವನ್ನುಂಟುಮಾಡುವುದು ಈಗಲೂ ರೂಢಿಯಲ್ಲಿದೆ. ಅದರಿಂದ ಶತ್ರುಗಳು ಭಯಭ್ರಾಂತರಾಗಿ ಪರಾಜಿತರಾಗುವರು. ಈ ಕ್ರಮವನ್ನನುಸರಿಸಿ ಅಂಗಿರಾ ಋಷಿಗಳು ಅಗ್ನಿಯನ್ನು ಕಡೆದು ಉತ್ಪನ್ನಮಾಡಿ ಅದು ಚೆನ್ನಾಗಿ ಹೊತ್ತಿ ಉರಿಯತೊಡಗುತ್ತಲೇ ಶತ್ರುಗಳಾದ ಪಣಿಗಳ ಊರಿಗೆ ಅಥವಾ ಅವರ ಗುಡಿಸಲುಗಳಿಗೆ ಬೆಂಕಿ ಹಚ್ಚಿದರು ಎಂದಭಿಪ್ರಾಯವು.

**ಅರಣಃ ಸಃ ನಕಿಃ ಅಸ್ತಿ— ಅರಣೋ ಅರಮಯಿತಾ । ದಾಹೇನ ದುಃಖಕಾರೀ ಸಃ ಅಗ್ನಿಃ ಪೂರ್ವಂ ತತ್ರ ನ ವಿದ್ಯತೇ ।** ರಣ ಎಂದರೆ ರಮಣೀಯವಾದ ಎಂದು ಅನೇಕ ಕಡೆ ಅರ್ಥಮಾಡಿದಾರೆ. **ಅರಣಃ** ಎಂದರೆ ರಮಣೀಯವಲ್ಲದ್ದು. ಇಲ್ಲಿ ಬೆಂಕಿಯ ತಾಪದಿಂದ ದಾಹಾದಿರೂಪವಾದ ದುಃಖವುಂಟಾಗುವುದರಿಂದ ಅಗ್ನಿಗೆ **ಅರಣಃ** ಎಂಬ ವರ್ಣನೆ ಇದೆ. ಸುಡುವ ಸ್ವಭಾವವುಳ್ಳವನಾದ್ದರಿಂದ ಅಗ್ನಿಯು ಜನರಿಗೆ ದುಃಖವನ್ನುಂಟುಮಾಡುವವನು. ಎಂದರೆ, ನಿವಾಸಸ್ಥಾನಗಳು ಬೆಂಕಿಯಿಂದ ಉರಿಯುತ್ತಿರುವಾಗ ಜನರಿಗೆ ಅತ್ಯಂತ ದುಃಖವಾಗುವುದು ಸಹಜವಷ್ಟೆ. ಅಂತಹ ಕ್ಲೇಶಕಾರಿಯಾದ ಅಗ್ನಿಯು ಮುಂಚೆ ಅಲ್ಲಿರಲಿಲ್ಲ.

ಶ್ರೀಃ

॥ ಸಂಹಿತಾಪಾಠಃ ॥

**ಋತಜ್ಯೇನ ಕ್ಷಿಪ್ರೇಣ ಬ್ರಹ್ಮಣಸ್ಪತಿರ್ಯತ್ರ ವಷ್ಟಿ ಪ್ರ ತದಶ್ನೋತಿ ಧನ್ವನಾ ।**
**ತಸ್ಯ ಸಾಧ್ವೀರಿಷವೋ ಯಾಭಿರಸ್ಯತಿ ನೃಚಕ್ಷಸೋ ದೃಶಯೇ ಕರ್ಣಯೋನಯಃ ॥**

॥ ಪದಪಾಠಃ ॥

**ಋತಽಜ್ಯೇನ । ಕ್ಷಿಪ್ರೇಣ । ಬ್ರಹ್ಮಣಃ । ಪತಿಃ । ಯತ್ರ । ವಷ್ಟಿ । ಪ್ರ । ತತ್ । ಅಶ್ನೋತಿ । ಧನ್ವನಾ ।**
**ತಸ್ಯ । ಸಾಧ್ವೀಃ । ಇಷವಃ । ಯಾಭಿಃ । ಅಸ್ಯತಿ । ನೃಽಚಕ್ಷಸಃ । ದೃಶಯೇ । ಕರ್ಣಽಯೋನಯಃ ॥ ೮ ॥**

॥ ಸಾಯಣಭಾಷ್ಯಂ ॥

**ಋತಂ ಸತ್ಯಮೇವ ಜ್ಯಾ ಯಸ್ಯ ತೇನ ಕ್ಷಿಪ್ರೇಣೇಷೂಣಾಂ ಕ್ಷೇಪಕೇಣ ಧನ್ವನಾ ಧರಣಭೂತೇನ ಧನುಷಾ ಬ್ರಹ್ಮಣಸ್ಪತಿರ್ಬ್ರಹ್ಮಣೋ ಮಂತ್ರಸ್ಯ ಪಾಲಯಿತಾ ದೇವೋ ಯತ್ರ ಯಸ್ಮಿನ್ವಿಷಯೇ ವಷ್ಟಿ ಕಾಮಯತೇ ತತ್ಪ್ರಾಶ್ನೋತಿ । ಪ್ರಕರ್ಷೇಣ ವ್ಯಾಪ್ನೋತಿ ॥ ಅಶ್ನೋತೇರ್ವ್ಯತ್ಯಯೇನ ಪರಸ್ಮೈಪದಂ ॥ ತಸ್ಯ ಧನುಷಃ ಸಾಧ್ವೀಃ ಸಾಧಿಕಾಸ್ತಾ ಇಷವೋ ಭವಂತಿ ಯಾಭಿರಿಷುಭಿರ್ಬ್ರಹ್ಮಣಸ್ಪತಿರಸ್ಯತಿ । ರಾಕ್ಷಸಾದೀನ್ ಕ್ಷಿಪತಿ । ಕೀದೃಶ್ಯಸ್ತಾಃ । ನೃಚಕ್ಷಸೋ ನೄನ್ ಪಶ್ಯತಃ । ಉಪಲಕ್ಷಣಮೇತತ್ । ಸರ್ವಜ್ಞಸ್ಯ ಬ್ರಹ್ಮಣಸ್ಪತೇರ್ದೃಶಯೇ ದರ್ಶನಾಯ ಜ್ಞಾನಾಯ ಜಾತಾಃ ಕರ್ಣಯೋನಯಃ ಶ್ರೋತ್ರೇಂದ್ರಿಯೇಣ ಗ್ರಾಹ್ಯಾ ಮಂತ್ರಭೂತಾ ಆಕರ್ಣಕೃಷ್ಟಾ ವಾ ಬಾಣಾಃ । ಬ್ರಹ್ಮಣಸ್ಪತಿರ್ಮಂತ್ರೈರೇವ ಸರ್ವಂ ಸಾಧಯತೀತಿ ಭಾವಃ ॥**

॥ ಪ್ರತಿಪದಾರ್ಥ ॥

**ಋತಜ್ಯೇನ**—ಸತ್ಯಾತ್ಮಕವಾದ ಹೆದೆಯುಳ್ಳದ್ದೂ । **ಕ್ಷಿಪ್ರೇಣ**—ವೇಗವಾಗಿ ಬಾಣವನ್ನು ಬಿಡತಕ್ಕದ್ದೂ ಆದ † **ಧನ್ವನಾ**—ಧನುಸ್ಸಿನಿಂದ । **ಬ್ರಹ್ಮಣಸ್ಪತಿಃ**—ಬ್ರಹ್ಮಣಸ್ಪತಿಯು । **ಯತ್ರ**—ಯಾವ ಲಕ್ಷ್ಯದಲ್ಲಿ । **ವಷ್ಟಿ**—ಗುರಿಯಿಟ್ಟು ಅಪೇಕ್ಷಿಸುತ್ತಾನೆಯೋ । **ತತ್**—ಅದನ್ನು । **ಪ್ರ ಅಶ್ನೋತಿ**—ಪೂರ್ಣವಾಗಿ ಹೊಂದುತ್ತಾನೆ । **ಯಾಭಿಃ**—ಯಾವ ಬಾಣಗಳಿಂದ । **ಅಸ್ಯತಿ**—ಬೃಹಸ್ಪತಿಯು ರಾಕ್ಷಸಾದಿಗಳನ್ನು ಉರುಳಿಸುತ್ತಾನೆಯೋ ಅಂತಹುದೂ । **ನೃಚಕ್ಷಸಃ**—ಸರ್ವಜ್ಞನಾದ ಬ್ರಹ್ಮಣಸ್ಪತಿಯ । **ದೃಶಯೇ**—ಜ್ಞಾನಾರ್ಥವಾಗಿ ಉತ್ಪನ್ನವಾದವೂ । **ಕರ್ಣಯೋನಯಃ**—ಶ್ರೋತ್ರೇಂದ್ರಿಯದಿಂದ ಗ್ರಾಹ್ಯವಾದವೂ ಮಂತ್ರಭೂತಾತ್ಮಕವೂ ಆದ । **ತಸ್ಯ**-ಆ ಧನುಸ್ಸಿನ। **ಇಷವಃ**—ಬಾಣಗಳು । **ಸಾಧ್ವೀಃ**—ತಮ್ಮ ಕೆಲಸವನ್ನು ಸಾಧಿಸತಕ್ಕವಾಗಿವೆ.

॥ ಭಾವಾರ್ಥ ॥

ಸತ್ಯಾತ್ಮಕವಾದ ಹೆದೆಯುಳ್ಳದ್ದೂ, ವೇಗವಾಗಿ ಬಾಣವನ್ನು ಬಿಡತಕ್ಕದ್ದೂ ಆದ ಧನುಸ್ಸಿನಿಂದ ಬ್ರಹ್ಮಣಸ್ಪತಿಯು ಯಾವ ಲಕ್ಷ್ಯದಲ್ಲಿ ಗುರಿಯಿಟ್ಟು ಅಪೇಕ್ಷಿಸುತ್ತಾನೆಯೋ, ಅದನ್ನು ಪೂರ್ಣವಾಗಿ ಹೊಂದುತ್ತಾನೆ. ಯಾವ ಬಾಣಗಳಿಂದ ಬೃಹಸ್ಪತಿಯು ರಾಕ್ಷಸಾದಿಗಳನ್ನು ಉರುಳಿಸುತ್ತಾನೆಯೋ ಅಂತಹುದೂ, ಸರ್ವಜ್ಞನಾದ ಬ್ರಹ್ಮಣಸ್ಪತಿಯ ಜ್ಞಾನಾರ್ಥವಾಗಿ ಉತ್ಪನ್ನವಾದವೂ, ಶ್ರೋತ್ರೇಂದ್ರಿಯದಿಂದ ಗ್ರಾಹ್ಯವಾಗತಕ್ಕ ಮಂತ್ರಭೂತಾತ್ಮಕವೂ ಆದ ಆ ಧನುಸ್ಸಿನ ಬಾಣಗಳು ತಮ್ಮ ಕೆಲಸವನ್ನು ಸಾಧಿಸತಕ್ಕವಾಗಿವೆ.

## English Translation.

Whatever Brahmanaspathi aims at with the truthrst-rung quick-darting bow, that (mark) he surely attains: holy are its arrows with which he shoots, (intended) for the eyes of men, and having their abode in the ear.

॥ ವಿಶೇಷವಿಷಯಗಳು ॥

**ಬ್ರಹ್ಮಣಸ್ಪತಿಃ ಋತಜ್ಯೇನ ಕ್ಷಿಪ್ರೇಣ ಧನ್ವನಾ ಯತ್ರ ವಷ್ಟಿ ತತ್ ಪ್ರ ಅಶ್ನೋತಿ—ಸತ್ಯಮೇವ ಜ್ಯಾ ಯಸ್ಯ ತೇನ ಇಷೂಣಾಂ ಕ್ಷೇಪಕೇಣ ಧನುಷಾ ಬ್ರಹ್ಮಣಸ್ಪತಿರ್ಬ್ರಹ್ಮಣೋ ಮಂತ್ರಸ್ಯ ಪಾಲಯಿತಾ ದೇವಃ ಯಸ್ಮಿನ್ ವಿಷಯೇ ಕಾಮಯತೇ ತತ್ಪ್ರಕರ್ಷೇಣ ಪ್ರಾಪ್ನೋತಿ ।** ಬ್ರಹ್ಮಣಸ್ಪತಿಯು ಮಂತ್ರಗಳಿಗೆ ಪಾಲಕನಾದ ದೇವನು. ಎಂದರೆ ಮಂತ್ರಗಳಿಂದ ಇವನು ಯಾವ ಕಾರ್ಯವನ್ನಾದರೂ ಸಾಧಿಸಬಲ್ಲನು. ಇವನ ಧನುಸ್ಸಿನ ಹೆದೆಯು (ಜ್ಯಾ) ಸತ್ಯಾತ್ಮಕವಾದದ್ದು. ಎಂದರೆ ಸತ್ಯವೇ ಇವನ ಧನುಸ್ಸಿನ ಹೆದೆಯು (ಹುರಿಯು) ತನ್ನ ಧನುಸ್ಸಿಗೆ ಇಂತಹ ಸತ್ಯವೆಂಬ ಹೆದೆಯನ್ನೇರಿಸಿ ಬೇಗಬೇಗನೆ ಬಿಡುವ ಬಾಣಗಳಿಂದ (ಎಂದರೆ ಮಂತ್ರಗಳಿಂದ) ಬ್ರಹ್ಮಣಸ್ಪತಿಯು ಯಾವ ವಿಷಯದಲ್ಲಿ ಗುರಿಯಿಡುವನೋ ಅದನ್ನು ತಪ್ಪದೆ ಸಾಧಿಸುವನು. ಇವನು ಇಟ್ಟ ಗುರಿಯನ್ನು ತಪ್ಪುವುದಿಲ್ಲ. ಎಂದರೆ ಮಾಡಬೇಕೆಂದು ಉದ್ದೇಶಿಸಿರುವ ಕಾರ್ಯವನ್ನು ಸಾಧಿಸದೆ ಬಿಡುವುದಿಲ್ಲ. ಇಲ್ಲಿ ಬಾಣಗಳೆಂದರೆ ಮಂತ್ರಗಳು ಅಥವಾ ದೇವತೆಗಳಿಗೆ ಅರ್ಪಿಸುವ ಹವಿಸ್ಸು. ಇಲ್ಲಿ, Wilson ಎಂಬ ಆಂಗ್ಲ ಪರಿವರ್ತನಕಾರನು ಹೇಳುವಂತೆ The arrows are oblations and mantras ಬಾಣಗಳೆಂದರೆ ಅವನಿಂದ ಅರ್ಪಿತವಾಗುವ ಹವಿಸ್ಸು ಮತ್ತು ಉಚ್ಚರಿತ

ವಾಗುವ ಮಂತ್ರಗಳು. ಇವುಗಳಿಂದ ಸಾಧಿಸಲು ಆಗದೇ ಇರುವ ಕಾರ್ಯವೇ ಇಲ್ಲ. ಆದುದರಿಂದಲೇ ಅವುಗಳಿಗೆ **ಸಾಧ್ವೀಃ ಸಾಧಿಕಾಃ** ಅಂದರೆ ಉದ್ದಿಷ್ಟಕಾರ್ಯವನ್ನು ಸಾಧಿಸತಕ್ಕ ಎಂಬ ವಿಶೇಷಣಪದಪ್ರಯೋಗವಿರುವುದು.

**ನೃಚಕ್ಷಸಃ ಕರ್ಣಯೋನಯಃ—ನ್ಯನ್ಪಶ್ಯತಃ, ಸರ್ವಜ್ಞಸ್ಯ ಬೃಹಸ್ಪತೇಃ, ಶ್ರೋತ್ರೇಂದ್ರಿಯೇಣ ಗ್ರಾಹ್ಯಾಃ ಮಂತ್ರಭೂತಾ ಆಕರ್ಣಕೃಷ್ಟಾ ವಾ ಬಾಣಾಃ। ಬ್ರಹ್ಮಣಸ್ಪತಿಃ ಮಂತ್ರೈರೇವ ಸರ್ವಂ ಸಾಧಯತೀತಿ ಭಾವಃ। ನೃಚಕ್ಷಸಃ** ಮನುಷ್ಯರನ್ನು ನೋಡುವ ಎಂದರೆ ಸರ್ವಜ್ಞನಾದ ಎಂತಲೂ, **ಕರ್ಣಯೋನಯಃ** ಶ್ರೋತ್ರೇಂದ್ರಿಯದಿಂದ ಗ್ರಾಹ್ಯವಾದ ಮಂತ್ರಸ್ವರೂಪವಾದ ಅಥವಾ ಕಿವಿಯವರೆಗೆ ಎಳೆಯಲ್ಪಟ್ಟ ಬಾಣಗಳು ಎಂತಲೂ ಸಾಯಣರು ಅಭಿಪ್ರಾಯಪಡುತ್ತಾರೆ. ಇಲ್ಲಿ **ನೃಚಕ್ಷಸಃ** ಎಂಬುದನ್ನು ಬ್ರಹ್ಮಣಸ್ಪತಿಗೆ ಅನ್ವಯಿಸಿ, ಸರ್ವಜ್ಞತ್ವವನ್ನು ಹೇಳಿದಾರೆ. ಆದರೆ ಮೇಲೆ ಉದಹರಿಸಿರುವ ಆಂಗ್ಲಪಂಡಿತರ ಅಭಿಪ್ರಾಯವನ್ನು ತೆಗೆದುಕೊಂಡರೆ, ಬಾಣಗಳು, ಆಹುತಿ ಮತ್ತು ಮಂತ್ರರೂಪವಾದವು. ಅವುಗಳಲ್ಲಿ ಆಹುತಿಗಳು **ನೃಚಕ್ಷಸಃ** ಮನುಷ್ಯರಿಗೆ ಕಾಣಿಸತಕ್ಕವು ಮತ್ತು ಮಂತ್ರಗಳು **ಕರ್ಣಯೋನಯಃ**_ಮನುಷ್ಯರ ಕಿವಿಗೆ ಕೇಳಸತಕ್ಕವು. ಈರೀತಿ ಬ್ರಹ್ಮಣಸ್ಪತಿಯಿಂದ ಪ್ರಯುಕ್ತವಾದ ಮಂತ್ರಗಳು ಮತ್ತು ದತ್ತವಾದ ಆಹುತಿಗಳು ಉದ್ದಿಷ್ಟ ಕಾರ್ಯಮಾಡುವುದರಲ್ಲಿ ಸಮರ್ಥವಾಗಿರುವುವು. ಇದನ್ನೇ ಸಾಯಣಾಚಾರ್ಯರು **ಬ್ರಹ್ಮಣಸ್ಪತಿಃ ಮಂತ್ರೇಣೈವ ಸರ್ವಂ ಸಾಧಯತಿ** (ಬ್ರಹ್ಮಣಸ್ಪತಿಯು ಮಂತ್ರದಿಂದಲೇ ಎಲ್ಲವನ್ನೂ ಸಾಧಿಸುತ್ತಾನೆ) ಎಂಬ ವಾಕ್ಯದಿಂದ ವಿವರಿಸಿದ್ದಾರೆ.



ಸಂಹಿತಾಪಾಠಃ

ಸ ಸಂನಯಃ ಸ ವಿನಯಃ ಪುರೋಹಿತಃ ಸ ಸುಷ್ಟುತಃ ಸ ಯುಧಿ ಬ್ರಹ್ಮಣಸ್ಪತಿಃ ।
ಚಾಕ್ಷ್ಮೋ ಯದ್ವಾಜಂ ಭರತೇ ಮತೀ ಧನಾದಿತ್ಸೂರ್ಯಸ್ತಪತಿ ತಪ್ಯತುರ್ವೃಥಾ ॥

॥ ಪದಪಾಠಃ ॥

ಸಃ । ಸಂऽನಯಃ । ಸಃ । ವಿऽನಯಃ । ಪುರಃऽಹಿತಃ । ಸಃ । ಸುऽಸ್ತುತಃ । ಸಃ । ಯುಧಿ । ಬ್ರಹ್ಮಣಃ । ಪತಿಃ
ಚಾಕ್ಷ್ಮಃ । ಯತ್ । ವಾಜಂ । ಭರತೇ । ಮತೀ । ಧನಾ । ಆತ್ । ಇತ್ । ಸೂರ್ಯಃ । ತಪತಿ । ತಪ್ಯತುಃ । ವೃಥಾ ॥ ೯ ॥

॥ ಸಾಯಣಭಾಷ್ಯಂ ॥

**ಪುರೋಹಿತೋ ದೇವೈಃ ಪುರತೋಽತ್ರ ಸ್ಥಾಪಿತಃ ಸ ಬ್ರಹ್ಮಣಸ್ಪತಿಃ ಸಂನಯಃ ವಿಶ್ಲಿಷ್ಟಾನಾಂ ಮಂತ್ರೈಃ ಸಂಗಮಯಿತಾ ಭವತಿ। ವಿನಯಃ ಸಂಗತಾನಾಂ ವಿವಿಧಂ ನೇತಾ ಪೃಥಕ್ಕರ್ತಾಽಪಿ ಸ ಏವ। ತಥಾ ಸುಷ್ಟುತಃ ಶೋಭನಂ ಸ್ತೋತೃಭಿಃ ಸ್ತುತಶ್ಚ ಭವತಿ। ತಥಾ ಯುಧಿ ಸಂಗ್ರಾಮೇ ಸ ಸ್ತೋತೄಣಾಮನುಗ್ರಹಾಯ ಪ್ರಾದುರ್ಭವತೀತಿ ಶೇಷಃ। ಯದ್ಯದಾ ಚಾಕ್ಷ್ಮಃ॥ ಚಷ್ಟೇಃ ಕ್ರಮತೇರ್ವಾ॥ ಸರ್ವಸ್ಯ ದ್ರಷ್ಟಾ ಸರ್ವಸಹೋ ವಾ ಬ್ರಹ್ಮಣಸ್ಪತಿರ್ವಾಜಮನ್ನಂ ಮತೀ ಮನನೀಯಂ ಪ್ರಶಸ್ತಂ ಧನಾ ಧನಂ ಚ ಸ್ತೋತೄಣಾಮರ್ಥಾಯ ಭರತೇ। ಬಿಭರ್ತಿ। ವೃಷ್ಟಿದ್ವಾರಾ ಪೋಷಯತಿ। ಆದಿತ್ ಅನಂತರಮೇವ ತಪ್ಯತುಸ್ತಾಪಕಃ ಸೂರ್ಯೋ ವೃಥಾ। ಅನಾಯಾಸವಚನಮೇತತ್। ಅನಾಯಾಸೇನ ತಪತಿ। ದೀಪ್ಯತೇ। ಬ್ರಹ್ಮಣಸ್ಪತಿನಾ ದತ್ತೈರನ್ನೈರ್ಧನೈಶ್ಚ ಯಜ್ಞಸ್ಯ ಸಿದ್ಧತ್ವಾತ್ ಸ್ವಯಂ ಕೇವಲಂ ಹವೀಂಷಿ ಭುಂಜಾನ ಏವ ವರ್ತತ ಇತ್ಯರ್ಥಃ॥**

॥ ಪ್ರತಿಪದಾರ್ಥ ॥

**ಪುರೋಹಿತಃ**— (ದೇವತೆಗಳ) ಅಗ್ರಭಾಗದಲ್ಲಿ ಸ್ಥಾಪಿತನಾದ। **ಸಃ ಬ್ರಹ್ಮಣಸ್ಪತಿಃ**—ಆ ಬ್ರಹ್ಮಣಸ್ಪತಿಯು। **ಸಂನಯಃ**—ಬೇರೆಬೇರೆಯಾಗಿರತಕ್ಕ ವಸ್ತುಗಳನ್ನು (ತನ್ನ ಮಂತ್ರಶಕ್ತಿಯಿಂದ) ಒಟ್ಟಿಗೆ ಸೇರಿಸತಕ್ಕವನೂ। **ವಿನಯಃ**—ಒಟ್ಟಿಗೆ ಸೇರಿರುವುವನ್ನು ಬಿಡಿಸಿ ಪ್ರತ್ಯೇಕ ಮಾಡುವವನೂ ಆಗಿದ್ದಾನೆ। **ಸಃ**—ಅವನೇ। **ಸ ಸುಷ್ಟುತಃ**—ಶ್ರೇಷ್ಠವಾಗಿ ಸ್ತುತನಾಗಿದ್ದಾನೆ। **ಯುಧಿ**—ಸಂಗ್ರಾಮದಲ್ಲಿ। **ಸಃ**—ಅವನೇ ಸ್ತೋತೃಗಳಿಗೆ ಸಹಾಯಕನು। **ಯತ್**—ಯಾವಾಗ। **ಚಾಕ್ಷ್ಮಃ**—ಸರ್ವಜ್ಞನಾದ ಬ್ರಹ್ಮಣಸ್ಪತಿಯು। **ವಾಜಂ**—ಅನ್ನವನ್ನೂ। **ಮತೀ**—ಪ್ರಶಸ್ತ್ಯವಾದ। **ಧನಾ**—ಧನವನ್ನೂ। **ಭರತೇ**—(ಸ್ತೋತೃಗಳಿಗಾಗಿ) ಭರಿಸುತ್ತಾನೆಯೋ। **ಆದಿತ್**—ಆ ಒಡನೆಯೇ। **ತಪ್ಯತುಃ**—ದಾಹಾತ್ಮಕನಾದ। **ಸೂರ್ಯಃ**—ಸೂರ್ಯನು। **ವೃಥಾ**—ಅನಾಯಾಸವಾಗಿ। **ತಪತಿ**—ಪ್ರಕಾಶಿಸುತ್ತಾನೆ.

॥ ಭಾವಾರ್ಥ ॥

ದೇವತೆಗಳಿಗೆ ಪುರೋಹಿತನಾಗಿ ಸ್ಥಾಪಿತನಾದ ಅದೇ ಬ್ರಹ್ಮಣಸ್ಪತಿಯು ಬೇರೆಬೇರೆಯಾಗಿರತಕ್ಕ ವಸ್ತುಗಳನ್ನು ತನ್ನ ಮಂತ್ರಶಕ್ತಿಯಿಂದ ಒಟ್ಟಿಗೆ ಸೇರಿಸತಕ್ಕವನೂ, ಒಟ್ಟಿಗೆ ಸೇರಿರುವುವನ್ನು ಬಿಡಿಸಿ ಪ್ರತ್ಯೇಕವಾಗಿ ಮಾಡುವವನೂ ಆಗಿದ್ದಾನೆ. ಅವನು ಶ್ರೇಷ್ಠವಾಗಿ ಸ್ತುತನೂ ಆಗಿದ್ದಾನೆ. ಸಂಗ್ರಾಮದಲ್ಲಿ ಅವನೇ ಸಹಾಯಕನು. ಯಾವಾಗ ಬ್ರಹ್ಮಣಸ್ಪತಿಯು ಅನ್ನವನ್ನೂ, ಪ್ರಶಸ್ತ್ಯವಾದ ಧನವನ್ನೂ ತನ್ನ ಸ್ತೋತೃಗಳಿಗಾಗಿ ಭರಿಸುತ್ತಾನೆಯೋ, ಆ ಒಡನೆಯೇ ದಾಹಾತ್ಮಕನಾದ ಸೂರ್ಯನು ಅನಾಯಾಸವಾಗಿ ಪ್ರಕಾಶಿಸುತ್ತಾನೆ.

## English Translation.

He Brahmanaspathi, is the aggregator and subjugator (of objects); the family priest (of the gods); and the renowned in battle; the beholder (of all), who bestows food and desired treasures, whence the radiant sun shines without exertion.

॥ ವಿಶೇಷವಿಷಯಗಳು ॥

**ಪುರೋಹಿತಃ ಬ್ರಹ್ಮಣಸ್ಪತಿಃ ಸಂನಯಃ—ವಿಶ್ಲಿಷ್ಟಾನಾಂ ಮಂತ್ರೈಃ ಸಂಗಮಯಿತಾ ಭವತಿ।** ಯಾಸ್ಕರು **ಪುರ ಏನಂ ದಧತಿ** (ನಿ. ೨-೧೨) ಎಂದು ಪುರೋಹಿತ ಶಬ್ದಾರ್ಥವನ್ನು ವಿವರಿಸಿದ್ದಾರೆ. ಸಾಯಣರು **ದೇವೈಃ ಪುರತೋಽತ್ರ ಸ್ಥಾಪಿತಃ**-ಬ್ರಹ್ಮಣಸ್ಪತಿಯನ್ನು ದೇವತೆಗಳು ತಮ್ಮ ಮುಂದುಗಡೆಯಲ್ಲಿ ಇರಿಸಿಕೊಂಡಿರುವರು ಎಂದು ಹೇಳಿ, ಈ ಬ್ರಹ್ಮಣಸ್ಪತಿಯು ಪರಸ್ಪರವಾಗಿ ವಿರಹಿತರಾದವರನ್ನು (ಅಗಲಿರುವವರನ್ನು) ತನ್ನ ಮಂತ್ರಗಳ ಪ್ರಭಾವದಿಂದ (ಒಂದುಕಡೆ ಇರುವಂತೆ) ಒಟ್ಟಾಗಿರುವಂತೆ ಸೇರಿಸುವನೆಂದು ವರ್ಣಿಸಿದ್ದಾರೆ. ಮತ್ತೂ **ವಿನಯಃ—ಸಂಗತಾನಾಂ ಪೃಥಕ್ಕರ್ತಾಪಿ ಸ ಏವ**—ಸ್ನೇಹದಿಂದಲಾಗಲಿ ಇತರ ಕಾರಣಗಳಿಂದಲಾಗಲಿ ಒಟ್ಟಿಗೆ ಇರುವವರನ್ನು ತಾನು ಮಂತ್ರಗಳನ್ನು ಪಠಿಸಿ ಬೇರೆ ಬೇರೆಯಾಗಿರುವಂತೆಯೂ ಮಾಡುವನು ಎಂದು ಅರ್ಥವನ್ನು ವಿವರಿಸಿದ್ದಾರೆ.

**ಸುಷ್ಟುತಃ ಯುಧಿ ಸಃ—ಸ್ತೋತೃಣಾಮನುಗ್ರಹಾಯ ಪ್ರಾದುರ್ಭವತಿ** ಸ್ತುತಿಮಾಡಲ್ಪಟ್ಟವನಾಗಿ ಅವರಿಗೆ ಯುದ್ಧವು ಒದಗಿದಾಗ ಅನುಗ್ರಹವನ್ನು ಆಚರಿಸುವುದಕ್ಕಾಗಿ ಪ್ರತ್ಯಕ್ಷನಾಗುವನು.

**ಚಾಕ್ಷ್ಮಃ** ಎಂಬ ಶಬ್ದಕ್ಕೆ **ಸರ್ವಸ್ಯ ದ್ರಷ್ಟಾ ಸರ್ವಸಹೋ ವಾ** ಬ್ರಹ್ಮಣಸ್ಪತಿಯು ಸರ್ವವನ್ನೂ ಪ್ರತ್ಯಕ್ಷವಾಗಿ ನೋಡುವವನು ಸಕಲ ವಿಧವಾದ ದುಃಖಗಳನ್ನೂ, ವಿಪತ್ತುಗಳನ್ನೂ ಸಹಿಸುವವನು ಎಂದು ಅರ್ಥವನ್ನು ವಿವರಿಸಿ, **ವಾಜಂ ಮತೀ ಧನಾ ಭರತೇ** ತನ್ನನ್ನು ಸ್ತೋತ್ರಮಾಡುವವರಿಗಾಗಿ ಅನ್ನವೂ, ಪ್ರಶಸ್ತವಾದ ಧನವೂ ಅಭಿವೃದ್ಧಿಯಾಗಲು ವೃಷ್ಟ್ಯುದಕಗಳು ಬರುವಂತೆ ಮಾಡಿ ಅವರನ್ನು ಪೋಷಿಸುವನು ಎಂದು ವಿವೃತವಾಗಿದೆ. ಇದರಿಂದ **ಬ್ರಹ್ಮಣಸ್ಪತಿನಾ ದತ್ತೈಃ ಅನ್ನೈಃ ಧನೈಶ್ಚ ಯಜ್ಞಸ್ಯ ಸಿದ್ಧತ್ವಾತ್ ತಾಪಕಃ ಸೂರ್ಯಃ ಸ್ವಯಂ ಕೇವಲಂ ಹವೀಂಷಿ ಭುಂಜಾನ ಏವ ವರ್ತತೇ।** ಬ್ರಹ್ಮಣಸ್ಪತಿಯು ಯಜಮಾನರ ಯಜ್ಞಗಳನ್ನು ಅನ್ನಗಳಿಂದಲೂ ಧನಗಳಿಂದಲೂ ನೆರವೇರಿಸುವ ಕಾರಣ, ಎಲ್ಲವನ್ನೂ ಪ್ರಕಾಶಗೊಳಿಸಿ ರಕ್ಷಿಸುವ ಸೂರ್ಯನು ತನ್ನ ಹವಿರ್ಭಾಗಗಳನ್ನು ಸ್ವೀಕರಿಸುತ್ತಾ ಸುಮ್ಮನೆ ಇರುವನೆಂದು ಬ್ರಹ್ಮಣಸ್ಪತಿಯು ತನ್ನ ಆಶ್ರಿತರನ್ನು ಪೋಷಿಸುವ ಅತಿಶಯವು ಉಕ್ತವಾಗಿದೆ.

॥ ಸಂಹಿತಾಪಾಠಃ ॥

ವಿಭು ಪ್ರಭು ಪ್ರಥಮಂ ಮೇಹನಾವತೋ ಬೃಹಸ್ಪತೇಃ ಸುವಿದತ್ರಾಣಿ ರಾಧ್ಯಾ

ಇಮಾ ಸಾತಾನಿ ವೇನ್ಯಸ್ಯ ವಾಜಿನೋ ಯೇನ ಜನಾ ಉಭಯೇ ಭುಂಜತೇ ವಿಶಃ

। ಪದಪಾಠಃ ।

ವಿऽಭು। ಪ್ರऽಭು। ಪ್ರಥಮಂ । ಮೇಹನಾऽವತಃ । ಬೃಹಸ್ಪತೇಃ । ಸುऽವಿದತ್ರಾಣಿ । ರಾಧ್ಯಾ ।

ಇಮಾ । ಸಾತಾನಿ । ವೇನ್ಯಸ್ಯ । ವಾಜಿನಃ । ಯೇನ । ಜನಾಃ । ಉಭಯೇ । ಭುಂಜತೇ । ವಿಶಃ ॥ ೧೦ ॥

॥ ಸಾಯಣಭಾಷ್ಯಂ ॥

ವಿಭು ವಿಭೂನಿ ವ್ಯಾಪ್ತಾನಿ ಪ್ರಭು ಪ್ರಭೂಣಿ ಪ್ರೌಢಾನಿ ಪ್ರಥಮಂ ಪ್ರಥಮಾನಿ ಮುಖ್ಯಾನಿ। ಏವಂಭೂತಾನಿ ಮೇಹನಾವತೋ ವರ್ಷಣವತೋ ವೃಷ್ಟಿಪ್ರದಸ್ಯ ಬೃಹಸ್ಪತೇರ್ಬೃಹತೋ ಮಂತ್ರಸ್ಯ ಪಾಲಯಿತುಃ ಸಂಬಂಧೀನಿ ಸುವಿದತ್ರಾಣಿ ॥ ವಿದಲೃ ಲಾಭೇ। ಸುವಿದೇಃ ಕತ್ರನ್। ಉ. ೩ ೧೦೮. ॥ ಸುಷ್ಠು ಲಬ್ಧವ್ಯಾನಿ ॥ ಸುವಿದತ್ರಂ ಧನಂ ಭವತೀತಿ ಯಾಸ್ಕಃ॥ ರಾಧ್ಯಾ ರಾಧ್ಯಾನಿ ಸಮ್ಯಕ್ ಸಾಧನೀಯಾನಿ। ಪ್ರಾಪ್ತವ್ಯಾನೀತಿ ಯಾವತ್। ಇಮಾ ಸಾತಾನೀಮಾನಿ ಧನಾನಿ ವೇನ್ಯಸ್ಯ ಕಮನೀಯಸ್ಯ ವಾಜಿನೋಽನ್ನವತೋ ಬ್ರಹ್ಮಣಸ್ಪತೇಃ ॥ ತೃತೀಯಾರ್ಥೇ ಷಷ್ಠೀ ॥ ಬ್ರಹ್ಮಣಸ್ಪತಿನಾ ದತ್ತಾನಿ। ಯೇನ ಧನೇನೋಭಯೆ ಉಭಯವಿಧಾ ಜನಾಃ ಸ್ತೋತಾರೋ ಯಜಮಾನಾಶ್ಚ ದೇವಾ ಮನುಷ್ಯಾಶ್ಚ ವಾ ವಿಶೋ ನಿವಿಷ್ಟಾಃ ಸಂತೋ ಭುಂಜತೇ। ಭೋಗಾನ್ ಲಭಂತೇ। ತತ್ಸರ್ವಂ ಬ್ರಹ್ಮಣಸ್ಪತಿನಾ ದತ್ತಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಮೇಹನಾವತಃ**—ವೃಷ್ಟಿಪ್ರದನಾದ। **ಬೃಹಸ್ಪತೇಃ**—ಬೃಹಸ್ಪತಿಯ। **ಸುವಿದತ್ರಾಣಿ**—ಧನಗಳು। **ವಿಭು**—ಸರ್ವತ್ರ ವ್ಯಾಪ್ತವಾಗಿಯೂ। **ಪ್ರಭು**—ಪ್ರೌಢವಾಗಿಯೂ। **ಪ್ರಥಮಂ**—ಬಹು ಶ್ರೇಷ್ಠವಾಗಿಯೂ ಇವೆ। **ಯೇನ**—ಯಾವ ಧನದಿಂದ। **ಉಭಯೇ**—ಮಾನವರೂ ದೇವತೆಗಳೂ ಈ ಎರಡು ವಿಧವಾದ। **ಜನಾಃ**—ಜನಗಳೂ। **ವಿಶಃ**—ಸೇರಿಕೊಂಡು। **ಭುಂಜತೇ**—ಭೋಗಗಳನ್ನು ಅನುಭವಿಸುತ್ತಾರೆಯೋ, ಅಂತಹವೂ। **ರಾಧ್ಯಾ**—ಆರಾಧನೀಯವಾದವೂ ಆದ। **ಇಮಾ ಸಾತಾನಿ**—ಈ ಧನಗಳು। **ವೇನ್ಯಸ್ಯ**—ಪ್ರಿಯನಾದವನೂ। **ವಾಜಿನಃ**—ಅನ್ನವಂತನೂ ಆದ ಬೃಹಸ್ಪತಿಯಿಂದ ದತ್ತವಾದುದಾಗಿದೆ.

॥ ಭಾವಾರ್ಥ ॥

ವೃಷ್ಟಿಪ್ರದನಾದ ಬೃಹಸ್ಪತಿಯ ಧನಗಳು ಸರ್ವತ್ರ ವ್ಯಾಪ್ತವಾಗಿಯೂ ಪ್ರೌಢವಾಗಿಯೂ ಬಹು ಶ್ರೇಷ್ಠವಾಗಿಯೂ ಇವೆ. ಯಾವ ಧನದಿಂದ ಮಾನವರೂ ದೇವತೆಗಳೂ ಸೇರಿ ಭೋಗಗಳನ್ನು ಅನುಭವಿಸುತ್ತಾರೆಯೋ ಅಂತಹವೂ, ಆರಾಧನೀಯವೂ ಆದ ಈ ಧನಗಳು ಪ್ರಿಯನಾದವನೂ ಅನ್ನವಂತನೂ ಆದ ಬೃಹಸ್ಪತಿಯಿಂದ ದತ್ತವಾದುದಾಗಿವೆ.

## English Translation.

Expansive, vast, and excellent riches, are the attainable (bounties) of Brihaspathi, the sender of the rain : these are the gifts of the adorable giver of food, whereby both (descriptions of worshippers) entering here enjoy (abundance).

॥ ವಿಶೇಷವಿಷಯಗಳು ॥

**ಮೇಹನಾವತಃ ಬೃಹಸ್ಪತೇಃ ಸುವಿದತ್ರಾಣಿ—ವೃಷ್ಟಿಪ್ರದಸ್ಯ ಬೃಹತೋ ಮಂತ್ರಸ್ಯ ಪಾಲಯಿತುಃ ಸುಷ್ಠು ಲಬ್ಧವ್ಯಾನಿ।** ವೃಷ್ಟ್ಯುದಕಗಳನ್ನು ಸುರಿಸುವವನಾಗಿರುವನು ಮತ್ತು ಪ್ರಭೂತವಾಗಿರುವ ಮಂತ್ರಗಳೆಲ್ಲವನ್ನೂ

ರಕ್ಷಿಸುವನು ಎಂದು ಬೃಹಸ್ಪತಿಯ ಅಥವಾ ಬ್ರಹ್ಮಣಸ್ಪತಿಯ ಮಹಿಮೆಯನ್ನು ವಿವರಿಸಿ, **ಸುವಿದತ್ರ** ಶಬ್ದಕ್ಕೆ ಅತಿಶಯವಾಗಿ ಹೊಂದಬೇಕಾದವುಗಳೆಂದು ಅರ್ಥವನ್ನು ಸಾಯಣರು ವಿವರಿಸಿ, ಧನವೆಂದು ಅರ್ಥವನ್ನು ವರ್ಣಿಸಿದ್ದಾರೆ.

**ಯಾಸ್ಕರು—ಸುವಿದತ್ರಃ ಕಲ್ಯಾಣವಿದ್ಯಃ** ಎಂದು ಅರ್ಥವನ್ನು (ನಿ. ೬-೧೪) ಹೇಳಿ, **ಸುವಿದತ್ರಂ ಧನಂ ಭವತಿ** (ನಿ. ೭-೯) ಎಂದು ಅರ್ಥವನ್ನು ವಿವರಿಸಿ, ಈ ಎರಡು ವಿಧವಾದ ಅರ್ಥಗಳಲ್ಲಿಯೂ ಪ್ರಯೋಗಗಳನ್ನು ಉದಾಹರಿಸಿದ್ದಾರೆ.

ಈ ಬೃಹಸ್ಪತಿಯಿಂದ ಹೊಂದಬೇಕಾಗಿರುವ ಧನವು—**ವಿಭು, ಪ್ರಭು, ಪ್ರಥಮಂ ರಾಧ್ಯಾ** ವ್ಯಾಪ್ತವಾಗಿರುವುದು, ಪ್ರೌಢ (ಪ್ರಭೂತ) ವಾಗಿರುವುದು, ಮುಖ್ಯವಾಗಿರುವುದು, ಅವಶ್ಯವಾಗಿ ಸಾಧಿಸಬೇಕಾಗಿರುವುದು, ಎಂದು ಧನದ ಮಹಿಮೆಯು ಉಕ್ತವಾಗಿದೆ. ಮತ್ತು **ವಾಜಿನಃ ಯೇನ ಉಭಯೇ ಜನಾಃ ಭುಂಜತೇ—**ಸ್ತೋತ್ರಮಾಡುವ ಋತ್ವಿಜರೂ, ಯಜಮಾನರೂ ಎಂಬ ಎರಡು ವಿಧವಾದ ಜನರೂ, ಅಥವಾ ಮನುಷ್ಯರೂ ದೇವತೆಗಳೂ ಎಂಬವರೂ ಅನ್ನವುಳ್ಳವನಾದ ಬೃಹಸ್ಪತಿಯಿಂದ ಅನುಗೃಹೀತವಾದ ಧನವನ್ನು ಹೊಂದಿ ಸುಖದಿಂದ ಇರುವವರಾಗಿ ಭೋಗಗಳನು ಅನುಭವಿಸುತ್ತಿರುವರೆಂದು ವರ್ಣಿಸಿದೆ.

॥ ಸಂಹಿತಾಪಾಠಃ

ಯೋಽವರೇ ವೃಜನೇ ವಿಶ್ವಥಾ ವಿಭುರ್ಮಹಾಮು ರಣ್ವಃ ಶವಸಾ ವವಕ್ಷಿಥ ।
ಸ ದೇವೋ ದೇವಾನ್ಪ್ರತಿ ಪಪ್ರಥೇ ಪೃಥು ವಿಶ್ವೇದು ತಾ ಪರಿಭೂರ್ಬ್ರಹ್ಮಣ-
ಸ್ಪತಿಃ ॥೧೧॥

॥ ಪದಪಾಠಃ ॥

ಯಃ । ಅವರೇ । ವೃಜನೇ । ವಿಶ್ವಥಾ । ವಿಽಭುಃ । ಮಹಾಂ । ಊಂ ಇತಿ । ರಣ್ವಃ । ಶವಸಾ । ವವಕ್ಷಿಥ ।
ಸಃ । ದೇವಃ । ದೇವಾನ್ । ಪ್ರತಿ । ಪಪ್ರಥೇ । ಪೃಥು । ವಿಶ್ವಾ । ಇತ್ । ಊಂ ಇತಿ । ತಾ । ಪರಿಽಭೂಃ ।
ಬ್ರಹ್ಮಣಃ । ಪತಿಃ ॥ ೧೧

॥ ಸಾಯಣಭಾಷ್ಯಂ ॥

ವಿಶ್ವಥಾ ಸರ್ವಪ್ರಕಾರೇಣ ವಿಭುರ್ವ್ಯಾಪ್ತೋ ರಣ್ವೋ ರಮಯಿತಾ ಸ್ತೋತವ್ಯೋ ವಾ ಯೋ ಬ್ರಹ್ಮಣಸ್ಪತಿರವರೇ ನಿಕೃಷ್ಟೇ ವೃಜನೇ ವರ್ಜನಹೇತುಭೂತೇ ಬಲೇ ವರ್ತಮಾನಂ। ದುರ್ಬಲಮಿತಿ ಯಾವತ್ । ಮಹಾಮು ಮಹಾಂತಂ ಚ ॥ ಛಾಂದಸೋ ವರ್ಣಲೋಪಃ ॥ ಉಭಯವಿಧಂ ಸ್ತೋತಾರಂ ಶವಸಾತ್ಮೀಯೇನ ಬಲೇನ ವವಕ್ಷಿಥ । ವೋಢುಮಿಚ್ಛತಿ । ಸರ್ವದಾ ವಹತೀತಿ ಯಾವತ್ ॥ ವಹತೇಃ ಸನಂತಸ್ಯ ಲಿಟ್ಯೇತದ್ರೂಪಂ । ಪುರುಷವ್ಯತ್ಯಯಃ ॥ ಸ ದೇವೋ ದಾನಾದಿಗುಣಯುಕ್ತೋ ದೇವಾನ್ ಪ್ರತಿ ಸರ್ವೇಷಾಂ ದೇವಾನಾಂ । ಪ್ರತಿನಿಧಿಃ ಸನ್ ಪೃಥು ಪಪ್ರಥೇ । ಅತ್ಯಂತಂ ಪ್ರಥತೇ । ಯಶಸಾ ವಿಸ್ತೀರ್ಣೋ ಭವತೀತಿ ಯಾವತ್ । ಯಸ್ಮಾದೇವಂ ತಸ್ಮಾದ್ವಿಶ್ವೇದು ಸರ್ವಾಣ್ಯೇವ ತಾ ತಾನಿ ಸರ್ವಾಣಿ ಭೂತಜಾತಾನಿ ಪರಿಭೂಃ ಪರಿಭವನ್ ಅಭಿಭವನ್ ವರ್ತತ ಇತಿ ಶೇಷಃ ॥

॥ ಪ್ರತಿಪದಾರ್ಥ ॥

**ವಿಶ್ವಥಾ**—ಸರ್ವವಿಧದಲ್ಲಿಯೂ । **ವಿಭುಃ**—ವ್ಯಾಪ್ತನೂ । **ರಣ್ವಃ**—ರಮಣೀಯನೂ ಆದ । **ಯಃ ಬ್ರಹ್ಮಣಸ್ಪತಿಃ**—ಯಾವ ಬ್ರಹ್ಮಣಸ್ಪತಿಯು । **ಅವರೇ**—ನಿಕೃಷ್ಟವಾದ । **ವೃಜನೇ**—ದುಃಸ್ಥಿತಿಯಲ್ಲಿರುವ ಭಕ್ತನನ್ನೂ । **ಮಹಾಮು**— ಉತ್ತಮಸ್ಥಿತಿಯಲ್ಲಿರುವ ಭಕ್ತನನ್ನೂ । **ಶವಸಾ** – ತನ್ನ ಬಲದಿಂದ । **ವವಕ್ಷಿಥ**—ಧರಿಸಲಿಚ್ಛಿಸುತ್ತಾನೆಯೋ । **ಸಃ ದೇವಃ**—ದೇವಾತ್ಮನಾದ ಅವನು । **ದೇವಾನ್ ಪ್ರತಿ**—ದೇವತೆಗಳ ದೃಷ್ಟಿಯಿಂದ । **ಪೃಥು**— ಅತ್ಯಧಿಕವಾಗಿ । **ಪಪ್ರಥೇ**—ವಿಸ್ತೃತನಾಗಿದ್ದಾನೆ (ಯಶಸ್ಸಿನಿಂದ ಅವರೆಲ್ಲರಿಗಿಂತಲೂ ಪ್ರಥಿತನಾಗಿದ್ದಾನೆ) **ವಿಶ್ವೇದು**—ಸಮಸ್ತವಾದ । **ತಾ**—ಭೂತಜಾತಗಳನ್ನೂ । **ಪರಿಭೂಃ**—ಮೀರಿ ಎಲ್ಲಕ್ಕಿಂತಲೂ ಅಧಿಕನಾಗಿದ್ದಾನೆ.

॥ ಭಾವಾರ್ಥ ॥

ಸರ್ವವಿಧದಲ್ಲಿಯೂ ವ್ಯಾಪ್ತನೂ, ರಮಣೀಯನೂ ಆದ ಬ್ರಹ್ಮಣಸ್ಪತಿಯು ನಿಕೃಷ್ಟವಾದ ದುಃಸ್ಥಿತಿಯಲ್ಲಿರುವ ಭಕ್ತನನ್ನೂ ಉತ್ತಮಸ್ಥಿತಿಯಲ್ಲಿರುವ ಭಕ್ತನನ್ನೂ ತನ್ನ ಬಲದಿಂದ ಧರಿಸಲಿಚ್ಛಿಸುತ್ತಾನೆ. ದೇವತಾತ್ಮನಾದ ಅದೇ ಬ್ರಹ್ಮಣಸ್ಪತಿಯು ದೇವತೆಗಳೆಲ್ಲರಿಗಿಂತಲೂ ಅಧಿಕವಾಗಿ ಯಶಸ್ವಿಯಾಗಿದ್ದಾನೆ. ಸಮಸ್ತ ಭೂತಜಾತಕಗಳನ್ನು ಮೀರಿ ಎಲ್ಲಕ್ಕಿಂತಲೂ ಅಧಿಕನಾಗಿದ್ದಾನೆ.

English Translation.

He, who is all-pervading and delighting, is willing to sustain by his strength the noble worshipper, as well as one who is in low distress: greatly is that Brahmanaspathi renowned amongst the gods, and therefore is he verily supreme above all (beings).

॥ ವಿಶೇಷವಿಷಯಗಳು ॥

ಬ್ರಹ್ಮಣಸ್ಪತಿಯು ಅನೇಕ ವಿಧಗಳಿಂದ ವ್ಯಾಪಿಸಿರುವನು ಮತ್ತು ಸುಖಜನಕನಾಗಿಯೂ ಅಥವಾ ಸ್ತುತಿಗೆ ಅರ್ಹನಾಗಿಯೂ ಇರುವ ಈ ದೇವನು **ವೃಜನೇ—ವರ್ಜನಹೇತುಭೂತೇ ಬಲೇ ವರ್ತಮಾನಂ ದುರ್ಬಲಂ**

ಸರ್ವರಿಂದಲೂ ತ್ಯಜಿಸಲರ್ಹವಾಗಿರುವ ಬಲಹೀನನೂ, **ಮಹಾಂತಂ ಚ** ಮಾಹಾತ್ಮ್ಯದಿಂದ ಪೂರಿತನಾದವನೂ ಆದ ಎರಡು ವಿಧವಾಗಿರುವ ಸ್ತೋತೃಜನವನ್ನು ತನ್ನ ಪ್ರಭಾವದಿಂದ ರಕ್ಷಿಸಲು ಅಪೇಕ್ಷಿಸುತ್ತಿರುವನೆಂದೂ, ಮತ್ತು ದಾನಾದಿಗುಣಗಳಿಂದ ಕೂಡಿರುವ ಈ ದೇವನು, **ದೇವಾನ್ ಸಪ್ರಥೇ** ಎಲ್ಲಾ ದೇವತೆಗಳಿಗೂ ಪ್ರತಿನಿಧಿಯಾಗಿ ತಾನು ಒಬ್ಬನೇ ಪ್ರಕಾಶಿಸುತ್ತಿರುವ ಕಾರಣ ಈ ದೇವನ ಕೀರ್ತಿಯು ಪ್ರಭೂತವಾಗಿರುವುದೆಂದೂ ವರ್ಣಿತವಾಗಿದೆ.

**ವಿಶ್ವೇದು ತಾ ಪರಿಭೂಃ – ಸರ್ವಾಣಿ ಭೂತಜಾತಾನಿ ಅಭಿಭವನ್ ವರ್ತತೇ** ಎಲ್ಲಾ ಪ್ರಾಣಿಗಳನ್ನೂ ತನ್ನ ಕೀರ್ತಿಯಿಂದಲೂ ಪ್ರಭಾವದಿಂದಲೂ ತಿರಸ್ಕರಿಸುವವನಾಗಿ ಈ ದೇವನು ಪ್ರಕಾಶಿಸುತ್ತಾನೆ ಎಂದು ವಿವೃತವಾಗಿದೆ.



॥ ಸಂಹಿತಾಪಾಠಃ ॥

ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚನ ಪ್ರಮಿನಂತಿ ವ್ರತಂ ವಾಂ ।
ಅಚ್ಛೇಂದ್ರಾಬ್ರಹ್ಮಣಸ್ಪತೀ ಹವಿರ್ನೋಽನ್ನಂ ಯುಜೇವ ವಾಜಿನಾ ಜಿಗಾತಂ ॥

॥ ಪದಪಾಠಃ ॥

ವಿಶ್ವಂ । ಸತ್ಯಂ । ಮಘಽವಾನಾ । ಯುವೋಃ । ಇತ್ । ಆಪಃ । ಚನ । ಪ್ರ । ಮಿನಂತಿ । ವ್ರತಂ । ವಾಂ
ಅಚ್ಛ । ಇಂದ್ರಾಬ್ರಹ್ಮಣಸ್ಪತೀ ಇತಿ । ಹವಿಃ । ನಃ । ಅನ್ನಂ । ಯುಜ್ಯಾಽಇವ । ವಾಜಿನಾ । ಜಿಗಾತಂ ॥

॥ ಸಾಯಣಭಾಷ್ಯಂ ॥

ಹೇ ಮಘವಾನಾ । ಮಘಮಿತಿ ಧನನಾಮ । ತದ್ವಂತಾವಿಂದ್ರಾಬ್ರಹ್ಮಣಸ್ಪತೀ ಯುವೋರಿತ್ ಯುವಯೋರೇವ ವಿಶ್ವಂ ಸರ್ವಂ ಸ್ತೋತ್ರಂ ಸತ್ಯಂ ಯಥಾರ್ಥಂ । ಸ್ತುತ್ಯಾ ಯದ್ಯದ್ಗುಣಜಾತಂ ಪ್ರತಿಪಾದ್ಯತೇ ತತ್ಸರ್ವಂ ಯುವಯೋರ್ವಿದ್ಯಮಾನಮೇವ ನ ತ್ವಾರೋಪಿತಮಿತ್ಯರ್ಥಃ । ತಥಾ ಚನೇತ್ಯೇತತ್ಪದದ್ವಯಸಮುದಾಯಃ । ಏಕಪದ್ಯಂ ತ್ವಧ್ಯಾಪಕಸಾಂಪ್ರದಾಯಿಕಂ ಯದ್ಯೇವ ಶಬ್ದಸ್ಯ ಪೂರ್ವಪದೇ ನ । ಆಪಶ್ಚ ಅಪೋಽಪಿ । ಉಪಲಕ್ಷಣಮೇತತ್ । ಏತದುಪಲಕ್ಷಿತಾನಿ ಸರ್ವಾಣ್ಯಪಿ ಭೂತಾನಿ ವಾಂ ಯುವಯೋರ್ವ್ರತಂ ಕರ್ಮ ನ ಪ್ರಮಿನಂತಿ । ನ ಹಿಂಸಂತಿ ॥ ಮೀಞ್ ಹಿಂಸಾಯಾಂ ಕ್ರ್ಯಾದಿಕಃ । ಮೀನಾತೇರ್ನಿಗಮ ಇತಿ ಹ್ರಸ್ವತ್ವಂ ॥ ಹೇ ಇಂದ್ರಾಬ್ರಹ್ಮಣಸ್ಪತೀ ನೋಽಸ್ಮಾಕಂ ಹವಿರಚ್ಛಾಭಿಮುಖ್ಯೇನ ಜಿಗಾತಂ । ಗಚ್ಛತಂ । ಆಗಚ್ಛತಮಿತಿ ಯಾವತ್ ॥ ಜಿಗಾತಿರ್ಗತಿಕರ್ಮಾ । ಜುಹೋತ್ಯಾದಿಕಃ ॥ ತತ್ರ ದೃಷ್ಟಾಂತಃ । ಯುಜೇವ ವಾಜಿನಾ । ಯುಜಾ ರಥೇ ನಿಯುಕ್ತೌ ವಾಜಿನೌ

ವೇಜನವಂತಾವಶ್ವಾವನ್ನಂ ಘಾಸಂ ಪ್ರತಿ ಯಥಾ ಸ್ವಯಮೇವ ಶೀಘ್ರಂ ಗಚ್ಛತಸ್ತದ್ವತ್ ಶೀಘ್ರಮಾಗಚ್ಛತಮಿತ್ಯರ್ಥಃ ॥ ಯುಜೇತ್ಯತ್ರ ಸುಪಾಂ ಸುಲುಗಿತಿ ಪ್ರಥಮಾದ್ವಿವಚನಸ್ಯಾಕಾರಃ । ತೃತಿಯಾಯಾಂ ಹಿ ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಮಘವಾನಾ**—ಧನಾಧಿಪತಿಗಳಾದ । **ಇಂದ್ರಾಬ್ರಹ್ಮಣಸ್ಪತೀ**—ಇಂದ್ರ ಮತ್ತು ಬ್ರಹ್ಮಣಸ್ಪತಿ ಎಂಬ ಎಲೈ ದೇವತೆಗಳೇ । **ವಿಶ್ವಂ**—ಸಮಸ್ತ ಸ್ತೋತ್ರವೂ । **ಸತ್ಯಂ**—ಸತ್ಯಾತ್ಮಕವಾಗಿ । **ಯುವೋರಿತ್**—ನಿಮ್ಮದೇ ಆಗಿದೆ । **ಆಪಶ್ಚ**—ಉದಕವನ್ನು ಆಶ್ರಯಿಸಿರುವ ಸಕಲ ಭೂತಗಳೂ । **ವಾಂ**—ನಿಮ್ಮಿಬ್ಬರ । **ವ್ರತಂ**—ಕರ್ಮವನ್ನು । **ನ ಪ್ರ ಮಿನಂತಿ**—ಹಿಂಸಿಸುವುದಿಲ್ಲ (ಮೀರುವುದಿಲ್ಲ) । **ಯುಜಾ**—ರಥಕ್ಕೆ ಕಟ್ಟಿರುವ । **ವಾಜಿನಾ**—ಅಶ್ವಗಳು । **ಅನ್ನಂ ಇವ**—ಹುಲ್ಲಿನ ಅಭಿಮುಖವಾಗಿ ಆತುರದಿಂದ ಹೋಗುವಂತೆ । **ನಃ**—ನಮ್ಮ । **ಹವಿಃ**—ಹವಿಸ್ಸಿಗೆ । **ಅಚ್ಛ**—ಅಭಿಮುಖವಾಗಿ । **ಜಿಗಾತಂ**—ಬನ್ನಿರಿ.

॥ ಭಾವಾರ್ಥ ॥

ಧನಾಧಿಪತಿಗಳಾದ ಇಂದ್ರ ಮತ್ತು ಬ್ರಹ್ಮಣಸ್ಪತಿ ದೇವತೆಗಳೇ, ಸಮಸ್ತ ಸ್ತೋತ್ರವೂ ಸತ್ಯಾತ್ಮಕವಾಗಿ ನಿಮ್ಮದೇ ಆಗಿದೆ. ಉದಕವನ್ನು ಆಶ್ರಯಿಸಿರುವ ಸಕಲ ಭೂತಗಳೂ ನಿಮ್ಮಿಬ್ಬರ ಕರ್ಮವನ್ನು ಮೀರುವುದಿಲ್ಲ. ರಥಕ್ಕೆ ಕಟ್ಟಿರುವ ಅಶ್ವಗಳು ಹುಲ್ಲಿನ ಅಭಿಮುಖವಾಗಿ ಆತುರದಿಂದ ಹೋಗುವಂತೆ ನಮ್ಮ ಹವಿಸ್ಸಿಗೆ ಅಭಿಮುಖವಾಗಿ ನೀವು ಬನ್ನಿರಿ.

## English Translation.

All truth, lords of wealth, (Indra and Brahmanaspathi), is inherent in you both : the waters injure not your rites: come to our presence (to receive) our oblations, like a pair of steeds (to receive) their provender.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರ ಮತ್ತು ಬ್ರಹ್ಮಣಸ್ಪತಿಗಳಿಬ್ಬರೂ ಸ್ತುತರಾಗಿದ್ದಾರೆ.

**ಮಘವಾನಾ—ತದ್ವಂತೌ ಇಂದ್ರಾಬ್ರಹ್ಮಣಸ್ಪತೀ ।** ಮಘ ಶಬ್ದವು ಯಾಸ್ಕರಿಂದ ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಇಂದ್ರನೂ ಮತ್ತು ಬ್ರಹ್ಮಣಸ್ಪತಿ ಎಂಬ ಇವರಿಬ್ಬರೂ ಧನವಂತರೆಂದು ಈ ಶಬ್ದದಿಂದ ಸಂಬೋಧಿತರಾಗಿದ್ದಾರೆ.

**ಯುವಯೋರಿತ್ ವಿಶ್ವಂ ಸತ್ಯಂ — ಯುವಯೋರೇವ ಸರ್ವಂ ಸ್ತೋತ್ರಂ ಯಥಾರ್ಥಂ । ಸ್ತುತ್ಯಾ ಯದ್ಯದ್ಗುಣಜಾತಂ ಪ್ರತಿಪಾದ್ಯತೇ ತತ್ಸರ್ವಂ ಯುವಯೋಃ ವಿದ್ಯಮಾನಮೇವ ನ ತ್ವಾರೋಪಿತಂ ।** ವಿಇಲ್ಲಿಶ್ವ ಶಬ್ದಕ್ಕೆ (ಸರ್ವಪ್ರಕಾರವಾದ) ಎಲ್ಲಾ ವಿಧವಾದ ಸ್ತುತಿಗಳು ಎಂದು ಅರ್ಥವನ್ನು ಹೇಳಿದೆ.

ಇಂದ್ರ ಮತ್ತು ಬ್ರಹ್ಮಣಸ್ಪತಿಗಳ ಸ್ತುತಿಗಳಲ್ಲಿ ಉಕ್ತವಾಗಿರುವ ಗುಣಗಳೆಲ್ಲವೂ ಸತ್ಯವಾಗಿಯೇ ಅವರಲ್ಲಿ ಇರುವುವು. ಕವಿಗಳು ಕಾವ್ಯಗಳಲ್ಲಿ ಹೇಳಿರುವಂತೆ ಆರೋಪಿತಗಳಾಗಿ ಇರತಕ್ಕವುಗಳಲ್ಲ ಎಂದು ಇವರ ಪ್ರಭೂತವಾದ ಗುಣಾತಿಶಯವು ನಿರ್ಣೀತವಾಗಿದೆ.

**ಆಪಶ್ಚ ವಾಂ ವ್ರತಂ ನ ಪ್ರಮಿನಂತಿ—ಅಪ್ಯೋsಪಿ । ಏತದುಪಲಕ್ಷಿತಾನಿ ಸರ್ವಾಣ್ಯಪಿ ಭೂತ-ಜಾತಾನಿ ಯುವಯೋಃ ಕರ್ಮ ನ ಹಿಂಸಂತಿ** ಇಲ್ಲಿ ಆಪಃ ಎಂಬ ಪದದಿಂದ ಉದಕಗಳು ಉಕ್ತವಾಗಿದ್ದರೂ, ಉದಕವೇ ಮೊದಲಾದ ಪಂಚಭೂತಗಳಿಂದ ವ್ಯಾಪ್ತವಾದ ಎಲ್ಲಾ ಪ್ರಾಣಿಗಳೂ ಇಂದ್ರಾಬ್ರಹ್ಮಣಸ್ಪತಿಗಳು ಆಚರಿಸುವ ಅವಶ್ಯಕರ್ತವ್ಯಗಳನ್ನು ನಾಶಪಡಿಸಲಾರವು (ಮೀರಲಾರವು) ಎಂದು ವಿವರಿಸಿದೆ.

**ನಃ ಹವಿಃ ಯುಜೇವ ವಾಜಿನಾ ಅಚ್ಛ—ರಥೇ ನಿಯುಕ್ತೌ ವೇಜನವಂತೌ ಅಶ್ವೌ ಘಾಸಂ ಪ್ರತಿ ಯಥಾ ಶೀಘ್ರಂ ಗಚ್ಛತಃ ತದ್ವತ್ ಶೀಘ್ರಂ ಆಗಚ್ಛತಂ** । ರಥದಲ್ಲಿ ಕಟ್ಟಿರುವ ವೇಗಶಾಲಿಗಳಾದ ಅಶ್ವಗಳು ತಮ್ಮ ಆಹಾರಕ್ಕಾಗಿ ವೇಗದಿಂದ ಬರುವಹಾಗೆ ಇಂದ್ರ ಮತ್ತು ಬ್ರಹ್ಮಣಸ್ಪತಿಗಳು ನಮ್ಮ ಯಜ್ಞದಲ್ಲಿ ಹವಿರಾದಿಗಳನ್ನು ಸ್ವೀಕರಿಸುವುದಕ್ಕಾಗಿ ಜಾಗ್ರತೆಯಾಗಿ ಬರಲಿ ಎಂದು ಯಜಮಾನರ ಪ್ರಾರ್ಥನೆಯು ಉಕ್ತವಾಗಿದೆ.

॥ ಸಂಹಿತಾಪಾಠಃ ॥

ಉತಾಶಿಷ್ಠಾ ಅನು ಶೃಣ್ವಂತಿ ವಹ್ನಯಃ ಸಭೇಯೋ ವಿಪ್ರೋ ಭರತೇ ಮತೀ ಧನಾ ।
ವೀಳುದ್ವೇಷಾ ಅನು ವಶ ಋಣಮಾದದಿಃ ಸ ಹ ವಾಜೀ ಸಮಿಥೇ ಬ್ರಹ್ಮಣಸ್ಪತಿಃ ॥೧೩॥

॥ ಪದಪಾಠಃ ॥

ಉತ । ಆಶಿಷ್ಠಾಃ । ಅನು । ಶೃಣ್ವಂತಿ । ವಹ್ನಯಃ । ಸಭೇಯಃ । ವಿಪ್ರಃ । ಭರತೇ । ಮತೀ । ಧನಾ । ವೀಳುsದ್ವೇಷಾಃ । ಅನು । ವಶಾ । ಋಣಂ । ಆsದದಿಃ । ಸಃ । ಹ । ವಾಜೀ । ಸಂsಇಥೇ । ಬ್ರಹ್ಮಣಃ । ಪತಿಃ ॥ ೧೩ ॥

। ಸಾಯಣಭಾಷ್ಯಂ ॥

ಉತ ಅಪಿ ಚ ಆಶಿಷ್ಠಾ ಆಶುತರಾಃ ಶೀಘ್ರಗಾಮಿನೋ ವಹ್ನಯಃ ॥ ಅಶ್ವನಾಮೈತತ್ ॥ ವೋಢಾರೋ ಬ್ರಹ್ಮಣಸ್ಪತೇರಶ್ವಾ ಅನು ಶೃಣ್ವಂತಿ । ಅಸ್ಮಾಭಿಃ ಕೃತಂ ಸ್ತೋತ್ರಮನುಕ್ರಮೇಣ ಶೃಣ್ವಂತಿ । ಯದ್ವಾ ಬ್ರಹ್ಮಣಸ್ಪತಿನಾ ಕೃತಮನುಶಾಸನಂ ಶೃಣ್ವಂತಿ । ಅತಸ್ತೇ ತಮಸ್ಮದೀಯಂ ಯಜ್ಞಂ ಪ್ರಾಪಯಂತ್ವಿತಿ ಶೇಷಃ । ಸಭೇಯಃ ಸಭಾಯಾಂ ಸಾಧುಃ ॥ ಛಂದಸೀತಿ ಢಃ ॥ ವಿಪ್ರೋ ಮೇಧಾವೀ ಅಧ್ವರ್ಯುರ್ಹೋತಾ ವಾ ಮತೀ ಮತ್ಯಾ ಮನನೀಯೇನ ಸ್ತೋತ್ರೇಣ ॥ ಸುಪಾಂ ಸುಲುಗಿತಿ ಪೂರ್ವ-ಸವರ್ಣದೀರ್ಘಃ ॥ ಧನಾ ಹವಿರ್ಲಕ್ಷಣಾನಿ ಧನಾನಿ ತಸ್ಮೈ ಬ್ರಹ್ಮಣಸ್ಪತಯೇ ಭರತೇ । ಬಿಭರ್ತಿ । ಸಂಪಾದಯತೀತಿ ಯಾವತ್ । ಯದ್ವಾ ಸ್ತೋತ್ರೇಣ ಧನಾನಿ ಭರತೇ । ಬಿಭರ್ತಿ ಪೋಷಯತಿ । ಅತೋ ವೀಳುದ್ವೇಷಾಃ । ವೀಳೂನ್ ದೃಢಾನ್ ಪ್ರಬಲಾನ್ ರಾಕ್ಷಸಾದೀನ್ ದ್ವೇಷ್ಟೀತಿ ತಾದೃಶೋ ಬ್ರಹ್ಮಣಸ್ಪತಿ-ರ್ವಶಾ ವಶಾಯಾ ಗೋಃ ॥ ಸುಪಾಂ ಸುಲುಗಿತಿ ಷಷ್ಠ್ಯಾ ಲುಕ್ । ಋತ್ಯಕ ಇತಿ ಪ್ರಕೃತಿಭಾವಃ ॥ ಋಣಮಸ್ಮಾಭಿರ್ಯಜ್ವಭಿಃ ಪ್ರದೇಯಮವದಾನಾತ್ಮಕಮನುಕ್ರಮೇಣಾದದಿರಾದಾತಾ ಭವತ್ವಿತಿ ಶೇಷಃ । ಅವದಾನಸ್ಯ ಋಣತ್ವಂ ಚ ತೈತ್ತಿರೀಯೇ ತ್ರಿಭಿರ್ಋಣವಾ ಜಾಯತೇ ಬ್ರಹ್ಮಚರ್ಯೇಣ ಋಷಿಭ್ಯಃ । ೬. ೩. ೧೦. ೫. । ಇತ್ಯಾದಿನಾ ಸ್ಪಷ್ಟಮಾಮ್ನಾತಂ । ಯದ್ವಾ ಅನುರಾನುಗುಣ್ಯೇ । ವಶಾ ವಶಸ್ಯ ಕಾಮ-ಸ್ಯಾಭಿಲಾಷಸ್ಯಾನುಗುಣಮಾದಾತಾ ಭವತ್ವಿತಿ ಯೋಜ್ಯಂ । ಹಶಬ್ದಃ ಪ್ರಸಿದ್ಧೌ । ಸ ಖಲು ಬ್ರಹ್ಮಣಸ್ಪತಿಃ ಸಮಿಥೇ । ಸಂಯಂತಿ ಸಂಗಚ್ಛಂತೇಽಸ್ಮಿನ್ನಾಹುತಿಭಿರ್ದೇವಾ ಇತಿ ಸಮಿಥೋ ಯಜ್ಞಃ । ತಸ್ಮಿನ್ವಾಜೀ ಅನ್ನವಾನ್ । ತಸ್ಮಾದ್ಧವಿಷ ಆದಾತಾ ಭವತ್ವಿತ್ಯರ್ಥಃ ॥

ಪ್ರತಿಪದಾರ್ಥ

**ಉತ**—ಮತ್ತು । **ಆಶಿಷ್ಠಾಃ**—ಶೀಘ್ರಗಾಮಿಗಳಾದ । **ವಹ್ನಯಃ**—ಅಶ್ವಗಳು । **ಅನು ಶೃಣ್ವಂತಿ**—ನಮ್ಮ ಸ್ತುತಿಗಳನ್ನು ಕೇಳಲಿ । **ಸಭೇಯಃ**—ಸಭೆಯಲ್ಲಿ ಶ್ರೇಷ್ಠನೂ । **ವಿಪ್ರಃ**—ಮೇಧಾವಿಯೂ ಆದ ಅಧ್ವರ್ಯುವು । **ಮತೀ**—ಮನನೀಯವಾದ ಸ್ತೋತ್ರದೊಡನೆ । **ಧನಾ**—ಹವಿಸ್ಸಿನ ರೂಪವಾದ ಧನಗಳನ್ನು । **ಭರತೇ**—ಅರ್ಪಿಸುತ್ತಾನೆ । **ವೀಳುದ್ವೇಷಾಃ**—ಪ್ರಬಲರಾದ ರಾಕ್ಷಸರನ್ನು ದ್ವೇಷಿಸುವ ಬ್ರಹ್ಮಣಸ್ಪತಿಯು । **ವಶಾ**—ಗೋವಿನಿಂದ ಉತ್ಪನ್ನವಾದುದೂ । **ಋಣಂ**—ಯಜ್ಞಕರ್ತರಿಂದ ಅರ್ಪಿತವಾದದೂ ಆದ ಅವದಾನವನ್ನು । **ಅನು ಆದದಿಃ**—ಸ್ವೀಕರಿಸಲಿ (ಏತಕ್ಕೆಂದರೆ) । **ಸ ಹಬ್ರಹ್ಮಣಸ್ಪತಿಃ**—ಆ ಬ್ರಹ್ಮಣಸ್ಪತಿಯಾದರೋ । **ಸಮಿಥೇ**—ಈ ಯಜ್ಞದಲ್ಲಿ । **ವಾಜೀ**—ಅನ್ನವಂತನಾಗಿದ್ದಾನೆ.

॥ ಭಾವಾರ್ಥ ॥

ಬ್ರಹ್ಮಣಸ್ಪತಿಯ ಶೀಘ್ರಗಾಮಿಗಳಾದ ಅಶ್ವಗಳು ನಮ್ಮ ಸ್ತುತಿಗಳನ್ನು ಕೇಳಲಿ. ಸಭೆಯಲ್ಲಿ ಶ್ರೇಷ್ಠನೂ, ಮೇಧಾವಿಯೂ ಆದ ಅಧ್ವರ್ಯುವು ಮನನೀಯವಾದ ಸ್ತೋತ್ರದೊಡನೆ ಹವಿಸ್ಸಿನ ರೂಪವಾದ ಧನಗಳನ್ನು ಅರ್ಪಿಸುತ್ತಾನೆ ಪ್ರಬಲರಾದ ರಾಕ್ಷಸರನ್ನು ದ್ವೇಷಿಸುವ ಬ್ರಹ್ಮಣಸ್ಪತಿಯು ಗೋವಿನಿಂದ ಉತ್ಪನ್ನವಾದುದೂ, ಯಜ್ಞಕರ್ತರಿಂದ ಅರ್ಪಿತವಾದುದೂ ಆದ ಅವದಾನವನ್ನು (ಹವಿಸ್ಸನ್ನು) ಸ್ವೀಕರಿಸಲಿ. ಏತಕ್ಕೆಂದರೆ ಆ ಬ್ರಹ್ಮಣಸ್ಪತಿಯಾದರೋ ಈ ಯಜ್ಞದಲ್ಲಿ ಅನ್ನವಂತನಾಗಿದ್ದಾನೆ.

## English Translation.

The very swift horses (of Brahmanaspathi) listen to (our invocation); the priest of the assembly offers with praise the (sacrificial) wealth: may Brahmanaspathi, the hater of the oppressor, accept (the payment of) the debt, agreeably to his pleasure: may he be the accepter of the (sacificial) food presented at this coremony.

॥ ವಿಶೇಷವಿಷಯಗಳು ॥

**ಆಶಿಷ್ಠಾ ವಯಃ ಅನು ಶೃಣ್ವಂತಿ— ಶೀಘ್ರಗಾಮಿನಃ ಬ್ರಹ್ಮಣಸ್ಪತೇರಶ್ವಾಃ ಅಸ್ಮಾಭಿಃ ಕೃತಂ ಸ್ತೋತ್ರಂ ಅನುಕ್ರಮೇಣ ಶೃಣ್ವಂತಿ । ಯದ್ವಾ ಬ್ರಹ್ಮಣಸ್ಪತಿನಾ ಕೃತಮನುಶಾಸನಂ ಶೃಣ್ವಂತಿ ।** ವೇಗ (ಶಾಲಿಗಳಾದ) ದಿಂದ ಸಂಚರಿಸುವ ಬ್ರಹ್ಮಣಸ್ಪತಿಯ ಅಶ್ವಗಳು ಯಜಮಾನರಿಂದ ಅಥವಾ ಋತ್ವಿಜರಿಂದ ಪಠಿತವಾದ ಬ್ರಹ್ಮಣಸ್ಪತಿಯ ಸ್ತುತಿಗಳನ್ನು ಕೇಳುತ್ತವೆ. ಅಥವಾ ಬ್ರಹ್ಮಣಸ್ಪತಿಯ ಅಪ್ಪಣೆಯನ್ನು ಕೇಳುತ್ತವೆ. ಆದ್ದರಿಂದ ಆ ಕುದುರೆಗಳು ಬ್ರಹ್ಮಣಸ್ಪತಿಯನ್ನು ನಮ್ಮ ಯಜ್ಞಕ್ಕೆ ಶೀಘ್ರವಾಗಿ ತರಲಿ ಎಂದು ಯಜಮಾನರ ಪ್ರಾರ್ಥನೆಯು ಉಕ್ತವಾಗಿದೆ.

**ವಿಪ್ರಃ ಮತೀ ಧನಾ ಭರತೇ—ಮೇಧಾವೀ ಅಧ್ವರ್ಯುಃ ಹೋತಾ ವಾ ಮನನೀಯೇನ ಸ್ತೋತ್ರೇಣ ಹವಿರ್ಲಕ್ಷಣಾನಿ ಧನಾನಿ ಪೋಷಯತಿ ।** ವಿಪ್ರಶಬ್ದವು ಮೇಧಾವಿನಾಮಗಳಲ್ಲಿ ಯಾಸ್ಕರಿಂದ (ನಿ. ೩-೧೯) ಉಕ್ತವಾಗಿದೆ. ಸಾಯಣರೂ—ಮೇಧಾವಿಯಾದ ಅಧ್ವರ್ಯುವೂ ಅಥವಾ ಹೋತೃ ಎಂಬ ಋತ್ವಿಜನೂ ಉತ್ತಮವಾದ ಸ್ತುತಿಗಳನ್ನು ಹೇಳಿ ಬ್ರಹ್ಮಣಸ್ಪತಿಯು ಯಾಗಕ್ಕಾಗಿ ಈ ಪ್ರಭೂತವಾದ ಧನವನ್ನು ಶೇಖರಿಸುತ್ತಾನೆ ಎಂದೂ, ಅಥವಾ ಶ್ಲಾಘ್ಯವಾದ ಸ್ತೋತ್ರಗಳಿಂದ ಬ್ರಹ್ಮಣಸ್ಪತಿಯ (ಅನುಗ್ರಹದಿಂದ) ಅನುಗ್ರಹವನ್ನು ಸಂಪಾದಿಸಿ ಸಂಪಾದಿಸಿದ ಧನವನ್ನು ವೃದ್ಧಿಗೊಳಿಸುವನೆಂದೂ ಎರಡು ವಿಧವಾದ ಅರ್ಥವೂ ಉಕ್ತವಾಗಿದೆ.

**ವೀಳುದ್ವೇಷಾಃ ವಶಾ ಋಣಮಾದದಿಃ—** ಇಲ್ಲಿ ವೀಳು ಶಬ್ದವು ಯಾಸ್ಕರಿಂದ ಬಲನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಇದರಿಂದ ಬ್ರಹ್ಮಣಸ್ಪತಿಯು **ದೃಢಾನ್ ರಾಕ್ಷಸಾದೀನ್ ದ್ವೇಷ್ಟಿ** ಪ್ರಭೂತವಾದ ಸಾಮರ್ಥ್ಯವುಳ್ಳವರಾದ ರಾಕ್ಷಸರೇ ಮೊದಲಾದವರನ್ನು ನಿಗ್ರಹ ಮಾಡುವವನೆಂದು ಅರ್ಥವನ್ನು ಹೇಳಿದೆ. ಈಪ್ರಕಾರವಾದ ಮಹಿಮೆಯುಳ್ಳ ಬ್ರಹ್ಮಣಸ್ಪತಿಯು **ಅಸ್ಮಾಭಿಃ ಯಜ್ವಭಿಃ ಪ್ರದೇಯಂ ಆವದಾನಾತ್ಮಕಂ (ಹವಿಃ) ಅನುಕ್ರಮೇಣ ಆದಾತಾ ಭವತು** ಹೋಮವನ್ನು ಆಚರಿಸುವ ಋತ್ವಿಜರು ತನಗಾಗಿ ಯಾಗಗಳಲ್ಲಿ ಉದ್ದೇಶಮಾಡಿ ಅರ್ಪಿಸುವ ಹವಿಸ್ಸುಗಳನ್ನು (ಋಣರೂಪವಾಗಿ ಕೊಟ್ಟ ದ್ರವ್ಯವನ್ನು ಅವಶ್ಯವಾಗಿ (ಸ್ವೀಕರಿಸುವಂತೆ) ಸ್ವೀಕರಿಸಲಿ ಎಂದು ಪ್ರಾರ್ಥಿಸಿದೆ.

ಇಲ್ಲಿ ಬ್ರಹ್ಮಣಸ್ಪತಿಯ ಉದ್ದೇಶದಿಂದ ಆಚರಿಸುವ ಹವಿರವದಾನವು ಋಣರೂಪವಾಗಿರುವುದೆಂದೂ, ಇದು ಅವಶ್ಯವಾಗಿ ಅರ್ಪಿಸಲೇಬೇಕಾಗಿರುವುದರಿಂದ ಇದನ್ನು ಋಣದಂತಿರುವುದೆಂದೂ ಹೇಳಬಹುದಾಗಿರುತ್ತದೆ. ಸಾಯಣರು ಹೀಗೆ ಅರ್ಥವನ್ನು ವಿವರಿಸಿ, **ಅವದಾನಸ್ಯ ಋಣತ್ವಂ ಚ— ಜಾಯಮಾನೋ ವೈ ಬ್ರಾಹ್ಮಣಸ್ತ್ರಿಭಿರ್ಋಣವಾ**

**ಜಾಯತೇ ಬ್ರಹ್ಮಚರ್ಯೇಣ ಋಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯ ಏಷ ವಾ ಅನೃಣೋ ಯಃ ಪುತ್ರೀ ಯಜ್ವಾ ಬ್ರಹ್ಮಚಾರಿವಾಸೀ ।** (ತೈ. ಸಂ. ೬-೩-೧೦-೫). ದ್ವಿಜನಾದವನು ಮೂರು ವಿಧವಾದ ಋಣಗಳನ್ನು ಹೊಂದಿಯೇ ಉತ್ಪನ್ನನಾಗುವನು. ಋಷಿಋಣ, ದೇವಋಣ, ಪಿತೃಋಣ ಎಂದು ; ಋಷಿಋಣವು ಬ್ರಹ್ಮಚರ್ಯದಿಂದ ವೇದಾಧ್ಯಯನ ಮಾಡುವುದರಿಂದಲೂ, ದೇವಋಣವು ಯಜ್ಞಮಾಡುವುದರಿಂದಲೂ, ಪಿತೃಋಣವು ಪುತ್ರನನ್ನು ತ್ಪತ್ತಿಮಾಡುವುದರಿಂದಲೂ ತೀರುವುದು ಎಂದು ಹೇಳಿರುವುದರಿಂದ ಹವಿರ್ಪದಾನವು ಋಣ ಶಬ್ದದಿಂದ ಇಲ್ಲಿ ಉಕ್ತವಾಗಿದೆ ಎಂದು ವಿವರಿಸಿ, ತೈತ್ತಿರೀಯಸಂಹಿತಾವಾಕ್ಯವನ್ನೂ ಉದಾಹರಿಸಿದ್ದಾರೆ. ಮತ್ತು **ಯದ್ವಾ ವಶಸ್ಯ ಕಾಮಸ್ಯ ಅಭಿಲಾಷಸ್ಯ ಅನುಗುಣಮಾದಾತಾ ಭವತು** ಅಥವಾ ಬ್ರಹ್ಮಣಸ್ಪತಿಯು, ಋತ್ವಿಜರು ಅರ್ಪಿಸಿದ ಹವಿಸ್ಸನ್ನು ಆಯಾಯ ಋತ್ವಿಜರ ಅಭಿಲಾಷೆಯನ್ನು ನೆರವೇರಿಸುವುದಕ್ಕಾಗಿ ಅವರವರ ಇಚ್ಛಾನುಸಾರವಾಗಿ ಸ್ವೀಕರಿಸುವವನಾಗಲಿ ಎಂದು ಎರಡನೆಯ ಅರ್ಥವೂ ಉಕ್ತವಾಗಿದೆ. ಈ ಅರ್ಥದಲ್ಲಿ ವಶ ಶಬ್ದಕ್ಕೆ ಇಚ್ಛೆ (ಅಭಿಲಾಷೆ) ಎಂದು. ಅರ್ಥವನ್ನು ಹೇಳಿದೆ.

**ಸಮಿಥೇ**—ಎಂಬ ಶಬ್ದವು ಯಾಸ್ಕರಿಂದ ಸಂಗ್ರಾಮ ನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಸಾಯಣರು **ಸಂಯಂತಿ ಸಂಗಚ್ಛಂತೇ ಅಸ್ಮಿನ್ನಾಹುತಿಭಿಃ ದೇವಾಃ ಇತಿ ಸಮಿಥೋ ಯಜ್ಞಃ** ದೇವತೆಗಳು ತಮ್ಮ ತಮ್ಮ ಹವಿರ್ಭಾಗಗಳಿಂದ ಒಟ್ಟುಗೂಡುವ ಸನ್ನಿವೇಶವು ಒದಗುವ ಕರ್ಮವೇ ಯಜ್ಞವು ಎಂದು ಅರ್ಥವನ್ನು ಈ ಶಬ್ದಕ್ಕೆ ವಿವರಿಸಿದ್ದಾರೆ. **ತಸ್ಮಾತ್ ಹವಿಷ ಆದಾತಾ ಭವತು**—ಆದ್ದರಿಂದ ಬ್ರಹ್ಮಣಸ್ಪತಿಯು (ಸಕಲ ದೇವತೆಗಳೊಡನೆ ಯಾಗಗಳಲ್ಲಿ) ಸರ್ವ ದೇವತೆಗಳೂ ಒಟ್ಟಾಗಿ ಸೇರುವ ಯಾಗಗಳಲ್ಲಿ ಹವಿಸ್ಸುಗಳನ್ನು ಸ್ವೀಕರಿಸುವವನಾಗಲಿ ಎಂದು ಪ್ರಾರ್ಥನೆಯು ವಿವರಿಸಲಾಗಿದೆ.

ಸಂಹಿತಾಪಾಠಃ ।

**ಬ್ರಹ್ಮಣಸ್ಪತೇರಭವದ್ಯಥಾವಶಂ ಸತ್ಯೋ ಮನ್ಯುರ್ಮಹಿ ಕರ್ಮಾ ಕರಿಷ್ಯತಃ ।**
**ಯೋ ಗಾ ಉದಾಜತ್ಸ ದಿವೇ ವಿ ಚಾಭಜನ್ಮಹೀವ ರೀತಿಃ ಶವಸಾಸರತ್ಪೃಥಕ್ ॥೧೪॥**

॥ ಪದಪಾಠಃ ॥

**ಬ್ರಹ್ಮಣಃ । ಪತೇಃ । ಅಭವತ್ । ಯಥಾಽವಶಂ । ಸತ್ಯಃ । ಮನ್ಯುಃ । ಮಹಿ । ಕರ್ಮ । ಕರಿಷ್ಯತಃ ।**
**ಯಃ । ಗಾಃ । ಉತ್ಽಆಜತ್ । ಸಃ । ದಿವೇ । ವಿ । ಚ । ಅಭಜತ್ । ಮಹೀಽಇವ । ರೀತಿಃ । ಶವಸಾ ।**
**ಅಸರತ್ । ಪೃಥಕ್ ॥ ೧೪ ॥**

॥ ಸಾಯಣಭಾಷ್ಯಂ ॥

**ಮಹಿ ಮಹತ್ಕರ್ಮ ಕರಿಷ್ಯತೋ ಬ್ರಹ್ಮಣಸ್ಪತೇರ್ಮನ್ಯುರ್ಮನನಸಾಧನೋ ಮಂತ್ರಃ ಕ್ರೋಧೋ ವಾ ಯಥಾವಶಂ ಯಥಾಕಾಮಂ ಸತ್ಯೋಽವಿತಥೋಽಭವತ್ । ಸ ಯಥಾ ಕಾಮಯತೇ ತಥಾ ಕರೋತೀತ್ಯರ್ಥಃ । ಯೋ ಬ್ರಹ್ಮಣಸ್ಪತಿಃ ಪಣಿಭಿರಪಹೃತಾ ಗಾ ಉದಾಜತ್ । ಉದಗಮಯತ್ ಗುಹಾಯಾ ನಿರಗಮಯದಿತ್ಯರ್ಥಃ । ಸ ಬ್ರಹ್ಮಣಸ್ಪತಿರ್ದಿವೇ ದ್ಯುಲೋಕಾಯ ತತ್ರತ್ಯೇಭ್ಯೋ ದೇವೇಭ್ಯ ಇತ್ಯರ್ಥಃ । ವ್ಯಭಜಚ್ಚ । ತಾ ಗಾ ವಿಭಕ್ತಾಶ್ಚಾಕರೋತ್ । ಸ ಚ ಗೋಸಮೂಹೋ ಮಹೀವ ರೀತಿಃ । ಮಹತೀ ಸ್ರುತಿರಿತಿವ ॥ ರೀಜ್ ಸ್ರವಣೇ ॥ ಯಥಾ ಗಂಗಾದೀನಾಂ ಸ್ರೋತೋ ವಿಭಕ್ತಂ ಸತ್ ನಿಮ್ನದೇಶಾಭಿಮುಖಂ ಪ್ರಸರತಿ ತಥಾ ಶವಸಾತ್ಮೀಯೇನ ಬಲೇನ ತತ್ತದ್ದೇವಗೃಹಂ ಪೃಥಕ್ ವಿಭಿನ್ನೋಽಸರತ್ । ಅಗಚ್ಛತ ॥**

। ಪ್ರತಿಪದಾರ್ಥ ।

**ಮಹಿ**—ಮಹತ್ತಾದ। **ಕರ್ಮ**—ಕರ್ಮವನ್ನು। **ಕರಿಷ್ಯತಃ**—ನೆರವೇರಿಸತಕ್ಕ। **ಬ್ರಹ್ಮಣಸ್ಪತೇಃ**—ಬ್ರಹ್ಮಣಸ್ಪತಿಯ। **ಮನ್ಯುಃ**—ಮನನಸಾಧನವಾದ ಮಂತ್ರವು (ಅಥವಾ ಅವನ ಕ್ರೋಧವು)। **ಯಥಾವಶಂ**—ಅವನ ಇಷ್ಟದಂತೆ। **ಸತ್ಯಃ**—ಸತ್ಯಾತ್ಮಕವಾಗಿ (ವ್ಯರ್ಥವಾಗದೇ)। **ಅನುಭವತ್**—ಆಯಿತು। **ಯಃ**—ಯಾವ ಬ್ರಹ್ಮಣಸ್ಪತಿಯು। **ಗಾಃ**—(ಪಣಿಗಳಿಂದ ಅಪಹೃತವಾದ) ಗೋವುಗಳನ್ನು। **ಉದಾಜತ್**—ಗುಹೆಯಿಂದ ಬಿಡಿಸಿ ಹೊರಡಿಸಿದನೋ! **ಸಃ**—ಅದೇ ಬ್ರಹ್ಮಣಸ್ಪತಿಯು। **ದಿವೇ**—ದೇವಲೋಕದ ದೇವತೆಗಳಿಗೆ। **ವಿ ಅಭಜತ್ ಚ**—ವಿಭಾಗಮಾಡಿ ಹಂಚಿದನು (ಅನಂತರ ಆ ಗೋಸಮೂಹವು)। **ಮಹೀವ ರೀತಿಃ**—ಗಂಗಾದಿ ನದಿಗಳ ಪ್ರವಾಹಗಳು ಕವಲಾಗಿ ಒಡೆದು ಬೇರೆ ಬೇರೆಯಾಗಿ ಹರಿಯುವಂತೆ। **ಶವಸಾ**—ಸ್ವಬಲದಿಂದ। **ಪೃಥಕ್**—(ದೇವತೆಗಳ ಗೃಹಕ್ಕೆ) ಬೇರೆ ಬೇರೆಯಾಗಿ। **ಅಸರತ್**—ಹೋದವು.

॥ ಭಾವಾರ್ಥ ॥

ಮಹತ್ತಾದ ಕರ್ಮವನ್ನು ನೆರವೇರಿಸತಕ್ಕ ಬ್ರಹ್ಮಣಸ್ಪತಿಯ ಮನನಸಾಧನದಿಂದ ಮಂತ್ರವು ಅವನ ಇಷ್ಟದಂತೆ ಸತ್ಯಫಲವುಳ್ಳದ್ದಾಗಿ ಆಯಿತು. ಯಾವ ಬ್ರಹ್ಮಣಸ್ಪತಿಯು ಪಣಿಗಳಿಂದ ಅಪಹೃತವಾದ ಗೋವುಗಳನ್ನು ಗುಹೆಯಿಂದ ಬಿಡಿಸಿ ಹೊರಡಿಸಿದನೋ ಅದೇ ಬ್ರಹ್ಮಣಸ್ಪತಿಯು ಆ ಗೋವುಗಳನ್ನು ದೇವಲೋಕದಲ್ಲಿ ದೇವತೆಗಳಿಗೆ ವಿಭಾಗಮಾಡಿ ಹಂಚಿದನು. ಅನಂತರ ಆ ಗೋಸಮೂಹವು ಗಂಗಾದಿನದಿಗಳ ಪ್ರವಾಹಗಳು ಕವಲಾಗಿ ಒಡೆದು ಬೇರೆ ಬೇರೆಯಾಗಿ ಹರಿಯುವಂತೆ ಸ್ವಬಲದಿಂದ ದೇವತೆಗಳ ಗೃಹಕ್ಕೆ ಬೇರೆ ಬೇರೆಯಾಗಿ ಹೋದವು.

## English Translation.

The purpose of Brahmaspathi, engaging in a great work, has been successful, according to his wish; for he it was who recovered (the stolen) cattle for (the dwellers in) heaven; and distributed them; so that of their own power they took different directions, like (the branches of) a mighty river.

॥ ವಿಶೇಷವಿಷಯಗಳು ॥

**ಬ್ರಹ್ಮಣಸ್ಪತೇಃ ಮನ್ಯುಃ ಸತ್ಯಃ**—ಇಲ್ಲಿ ಮನ್ಯುಶಬ್ದದ ಅರ್ಥವು **ಮನನಸಾಧನೋ ಮಂತ್ರಃ ಕ್ರೋಧೋ ವಾ**—ಮಂತ್ರ ಅಥವಾ (ಕ್ರೋಧ) ಕೋಪವೆಂದು ಎರಡು ವಿಧವಾಗಿ ವಿವೃತವಾಗಿ, ಬ್ರಹ್ಮಣಸ್ಪತಿಯು ಮಹತ್ತಾದ ಕರ್ಮಗಳನ್ನು ಆಚರಿಸುವವನಾದುದರಿಂದ ಈ ದೇವನ ಮಂತ್ರವೂ, ಅಥವಾ ಕೋಪವೂ ಕೂಡ ಸತ್ಯವಾಗಿರುವುದೆಂದೂ, **ಸಃ ಯಥಾ ಕಾಮಯತೇ ತಥಾ ಕರೋತಿ**—ಈ ದೇವನು ತನ್ನ ಇಷ್ಟಬಂದಂತೆ ಎಂದರೆ ಸ್ವಾತಂತ್ರ್ಯದಿಂದಲೇ (ಕರ್ಮಗಳನ್ನು) ಕರ್ತವ್ಯಗಳನ್ನು ಆಚರಿಸುವನು ಎಂದು ವಿವರಿಸಿದೆ.

**ಯಃ ಗಾಃ ಉದಜತ್, ಸಃ ದಿವೇ ವಿಭಜಚ್ಚ**—ಈ ಬ್ರಹ್ಮಣಸ್ಪತಿಯು **ಪಣಿಭಿರಪಹೃತಾಃ ಗಾಃ ಉದಗಮಯತ್**—ರಾಕ್ಷಸರು ಅಪಹರಿಸಿದ ಗೋವುಗಳನ್ನು (ಹಿಂದಕ್ಕೆ ತಂದನು) ಗುಹೆಯಿಂದ ಹೊರಕ್ಕೆ ತಂದು ರಕ್ಷಿಸಿ. **ದ್ಯುಲೋಕಾಯ ತತ್ರತ್ಯೇಭ್ಯೋ ದೇವೇಭ್ಯಃ ವಿಭಕ್ತಾಶ್ಚ ಅಕರೋತ್** ಸ್ವರ್ಗದಲ್ಲಿರುವ ದೇವತೆಗಳಿಗೆ ವಿಂಗಡಿಸಿ ಅವುಗಳನ್ನು ಕೊಟ್ಟನು. ಈ ಉಪಾಖ್ಯಾನವು ಹಿಂದೆ ವಿವೃತವಾಗಿದೆ.

**ಮಹೀವ ರೀತಿಃ ಶವಸಾ ಪೃಥಕ್ ಅಸರತ್ ಯಥಾ ಗಂಗಾದೀನಾಂ ಸ್ರೋತಃ ವಿಭಕ್ತಂ ಸತ್ ನಿಮ್ನದೇಶಾಭಿಮುಖಂ ಪ್ರಸರತಿ ತಥಾ ವಿಭಿನ್ನಃ ತತ್ತದ್ದೇವಗೃಹಂ ಆತ್ಮೀಯೇನ ಬಲೇನ ಅಗಚ್ಛತ**—ಗಂಗಾನದಿಯ ಪ್ರವಾಹವು ತಗ್ಗಾಗಿರುವ ಪ್ರದೇಶಗಳನ್ನು ಕುರಿತು ಹರಿದು ಕವಲೊಡೆಯುವ ಹಾಗೆ ಈ ಗೋವುಗಳ ಸಮೂಹವು ಬೇರೆ ಬೇರೆ ಹಿಂಡುಗಳಾಗಿ ಆಯಾಯ ದೇವತೆಗಳ ಮನೆಗಳನ್ನು ಹೊಂದಿತು ಎಂದು ಗಂಗಾ ಪ್ರವಾಹದ ಹೋಲಿಕೆಯು ಉಕ್ತವಾಗಿದೆ.

**ಶವಃ** ಎಂಬ ಪದವು ಬಲನಾಮಗಳಲ್ಲಿ ಯಾಸ್ಕರಿಂದ (ನಿ. ೨-೯) ಪಠಿತವಾಗಿದೆ.

॥ ಸಂಹಿತಾಪಾಠಃ ॥

ಬ್ರಹ್ಮಣಸ್ಪತೇ ಸುಯಮಸ್ಯ ವಿಶ್ವಹಾ ರಾಯಃ ಸ್ಯಾಮ ರಥ್ಯೋ೩ವಯಸ್ವತಃ ।
ವೀರೇಷು ವೀರಾँ ಉಪ ಪೃಂಗ್ಧಿ ನಸ್ತ್ವಂ ಯದೀಶಾನೋ ಬ್ರಹ್ಮಣಾ ವೇಷಿ ಮೇ ಹವಂ ॥ ೧೫ ॥

॥ ಪದಪಾಠಃ ॥

ಬ್ರಹ್ಮಣಃ । ಪತೇ । ಸುಽಯಮಸ್ಯ । ವಿಶ್ವಹಾ । ರಾಯಃ । ಸ್ಯಾಮ । ರಥ್ಯಃ । ವಯಸ್ವತಃ ।
ವೀರೇಷು । ವೀರಾನ್ । ಉಪ । ಪೃಂಗ್ಧಿ । ನಃ । ತ್ವಂ । ಯತ್ । ಈಶಾನಃ । ಬ್ರಹ್ಮಣಾ । ವೇಷಿ । ಮೇ । ಹವಂ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಬ್ರಹ್ಮಣಸ್ಪತೇ ಮಂತ್ರಾಧಿಪತೇ ಸುಯಮಸ್ಯ ಸುಷ್ಠು ನಿಯಂತವ್ಯಸ್ಯ ವಯಸ್ವತೋಽನ್ನ-ಯುಕ್ತಸ್ಯ ರಾಯೋ ಧನಸ್ಯ ವಿಶ್ವಹಾ ವಿಶ್ವೇಷು ಸರ್ವೇಷ್ವಹಃಸು ರಥ್ಯೋಽಧಿಪತಯಃ ಸ್ಯಾಮ । ಭೂಯಾಸ್ಮ । ರಥಾ ಏಷಾಂ ಸಂತೀತಿ ರಥ್ಯಃ ॥ ಛಂದಸೀವನಿಪಾವಿತಿ ಮತ್ವರ್ಥೀಯ ಈಕಾರಃ ॥ ಅಪಿ ಚ ನೋಽಸ್ಮಾಕಂ ವೀರೇಷು ವೀರ್ಯೋಪೇತೇಷ್ವಸ್ಮದೀಯೇಷು ಪುತ್ರೇಷು ವೀರಾನ್ ಪುತ್ರಾನ್ ತ್ವಮುಪ ಪೃಙ್ಧಿ । ಸಂಪೃಕ್ತಾನ್ ಕುರು । ಉತ್ಪಾದಯ ॥ ಪೃಚೀ ಸಂಪರ್ಕೇ । ರೌಧಾದಿಕಂ ॥ ವಯಂ ಪೌತ್ರಾನಪಿ ಲಭೇಮಹೀತಿ ಯಾವತ್ । ಈಶಾನಃ ಸರ್ವಸ್ಯೇಶ್ವರಸ್ತ್ವಂ ಬ್ರಹ್ಮಣಾ ॥ ಅನ್ನನಾಮೈತತ್ ॥ ಹವಿರ್ಲಕ್ಷ-ಣೇನಾನ್ನೇನ ಸಹ ಮೇ ಹವಂ ಮದೀಯಂ ಸ್ತುತಿಲಕ್ಷಣಮಾಹ್ವಾನಂ ವೇಷಿ । ಕಾಮಯಸೇ ॥ ವೀ ಗತಿ-ಪ್ರಜನನಕಾಂತ್ಯಸನಖಾದನೇಷು ॥ ಅತೋ ಮಯೋಕ್ತಂ ಕುರ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಬ್ರಹ್ಮಣಸ್ಪತೇ**—ಎಲೈ ಬ್ರಹ್ಮಣಸ್ಪತಿಯೇ । **ಸುಯಮಸ್ಯ**—ಶ್ರೇಷ್ಠವಾಗಿ ನಿಯಮಿತವಾದುದೂ । **ವಯಸ್ವತಃ**—ಅನ್ನದಿಂದ ಕೂಡಿದುದೂ ಆದ । **ರಾಯಃ**—ಧನಕ್ಕೆ । **ವಿಶ್ವಹಾ**—ಸಕಲ ದಿನಗಳಲ್ಲಿಯೂ । **ರಥ್ಯಃ**—ಅಧಿಪತಿಗಳಾಗಿ । **ಸ್ಯಾಮ**—(ನಾವು) ಆಗಿರುವಂತೆ (ಅನುಗ್ರಹಿಸು) । **ಯತ್**—ಯಾವ ನಿಮಿತ್ತವಾಗಿ । **ಈಶಾನಃ**—ಸಕಲಕ್ಕೂ ಪ್ರಭುವಾದ ನೀನು । **ಬ್ರಹ್ಮಣಾ**—ಹವಿಸ್ಸಿನ ರೂಪದ ಅನ್ನದೊಡನಿರುವ । **ಮೇ**—ನನ್ನ । **ಹವಂ**—ಆಹ್ವಾನವನ್ನು **ವೇಷಿ**—ಇಚ್ಛಿಸುತ್ತೀಯೋ (ಆದುದರಿಂದ) । **ನಃ**—ನಮ್ಮ । **ವೀರೇಷು**—ವೀರ್ಯವಂತರಾದ ಪುತ್ರರಲ್ಲಿ **ವೀರಾನ್**—ವೀರಪುತ್ರರನ್ನು । **ಉಪ ಪೃಙ್ಧಿ**—ಉತ್ಪನ್ನರಾಗುವಂತೆ ಮಾಡು.

॥ ಭಾವಾರ್ಥ ॥

ಎಲೈ ಬ್ರಹ್ಮಣಸ್ಪತಿಯೇ, ಶ್ರೇಷ್ಠವಾಗಿ ನಿರ್ಮಿತವಾದುದೂ, ಅನ್ನದಿಂದ ಕೂಡಿದುದೂ ಆದ ಧನಕ್ಕೆ ಸಕಲ ದಿನಗಳಲ್ಲಿಯೂ ನಾವು ಅಧಿಪತಿಗಳಾಗಿರುವಂತೆ ನಮ್ಮನ್ನು ಅನುಗ್ರಹಿಸು. ಯಾವ ನಿಮಿತ್ತವಾಗಿ ಸಕಲಕ್ಕೂ ಪ್ರಭುವಾದ ನೀನು ಹವಿಸ್ಸಿನ ರೂಪವಾದ ಅನ್ನದೊಡನಿರುವ ನನ್ನ ಆಹ್ವಾನವನ್ನು ಇಚ್ಛಿಸುತ್ತೀಯೋ ಆದುದರಿಂದ ನಮ್ಮ ವೀರ್ಯವಂತರಾದ ಪುತ್ರರಲ್ಲಿ ವೀರಪುತ್ರರನ್ನು ಉತ್ಪನ್ನರಾಗುವಂತೆ ಮಾಡು.

## English Translation.

May we, Brahmanaspathi, be daily in the possession of well-regulated and food-supplying wealth: add for us posterity to posterity, since you, who are the ruler (of all), accept my invocation with (offered sacrificial) food.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ **ಬ್ರಹ್ಮಣಸ್ಪತೇ** ಎಂಬ ಶಬ್ದಕ್ಕೆ **ಮಂತ್ರಾಧಿಪತೇ** ಬ್ರಹ್ಮಣಸ್ಪತಿಯು ಮಂತ್ರಗಳೆಲ್ಲಕ್ಕೂ (ಯಜಮಾನನು) ಒಡೆಯನು ಎಂದು ಅರ್ಥವನ್ನು ವಿವರಿಸಿ, ಸಂಶೋಧಿಸಿದೆ.

ಯಜಮಾನರು— **ರಾಯಃ ವಿಶ್ವಹಾ ರಥ್ಯಃ ಸ್ಯಾಮ**—ಅವಶ್ಯವಾಗಿ ರಕ್ಷಣಾರ್ಹವಾಗಿರುವ, ಅನ್ನಗಳಿಂದ ಕೂಡಿರುವ ಧನಗಳಿಗೆ ಸರ್ವಕಾಲದಲ್ಲಿಯೂ ಅಧಿಪತಿಗಳಾಗಿರಬೇಕೆಂಬ ಆಶಂಸನೆಯು ಪ್ರಾರ್ಥಿತವಾಗಿದೆ. ರಥ್ಯಃ ಎಂಬ ಪದಕ್ಕೆ **ರಥಾಃ ಏಷಾಂ ಸಂತಿ** ರಥಗಳನ್ನು ಹೊಂದಿರುವವರು ಅಧಿಪತಿಗಳು ಎಂದು ಅರ್ಥವನ್ನು ಹೇಳಿದೆ.

**ನಃ ವೀರೇಷು ವೀರಾನ್ ಉಪಸೃಜ್ಧಿ**—ವೀರೇಷು ಎಂಬ ಪದಕ್ಕೆ ವೀರ್ಯದಿಂದ ಉತ್ಪನ್ನರಾದವರೆಂದು ಅರ್ಥವನ್ನು ವಿವರಿಸಿ ಪುತ್ರರೆಂದು ಅರ್ಥಮಾಡಿ ಬ್ರಹ್ಮಣಸ್ಪತಿಯು ಯಜಮಾನರಾದ ನಮಗೆ ಮೊಮ್ಮಕ್ಕಳು ಉಂಟಾಗಲಿ ಎಂದು ಅನುಗ್ರಹಿಸಬೇಕೆಂದು ಪ್ರಾರ್ಥಿತವಾಗಿದೆ.

**ಈಶಾನಃ** ಬೃಹಸ್ಪತಿಯು ಎಲ್ಲಕ್ಕೂ ಅಧಿಪತಿಯಾಗಿರುವನೆಂದು ವಿವರಿಸಿ ಈ ದೇವನು **ಬ್ರಹ್ಮಣಾ ನೋ ಹವಂ ವೇಷಿ** ಹವಿಸ್ಸಿನ ರೂಪವಾದ ಅನ್ನದಿಂದ ಕೂಡಿರುವ ಯಜಮಾನನು ಆಚರಿಸುವ ಸ್ತುತಿರೂಪವಾದ ಆಹ್ವಾನವನ್ನು ಅಪೇಕ್ಷಿಸುವವನಾದುದರಿಂದ ಯಜಮಾನರ ಇಷ್ಟವನ್ನು ಸಾಧಿಸಲಿ ಎಂದೂ ಆಶಿಸಿದೆ.

**ಬ್ರಹ್ಮ** ಪದವನ್ನು ಯಾಸ್ಕರು ಧನನಾಮಗಳಲ್ಲಿಯೂ (ನಿ. ೩-೯) ಅನ್ನನಾಮಗಳಲ್ಲಿಯೂ ಪಾಠಮಾಡಿದ್ದಾರೆ. ಅನ್ನವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

|| ಸಂಹಿತಾಪಾಠಃ ||

ಬ್ರಹ್ಮಣಸ್ಪತೇ ತ್ವಮಸ್ಯ ಯಂತಾ ಸೂಕ್ತಸ್ಯ ಬೋಧಿ ತನಯಂ ಚ ಜಿನ್ವ |
ವಿಶ್ವಂ ತದ್ಭದ್ರಂ ಯದವಂತಿ ದೇವಾ ಬೃಹದ್ವದೇಮ ವಿದಥೇ ಸುವೀರಾಃ || ೧೬ ||

|| ಪದಪಾಠಃ ||

ಬ್ರಹ್ಮಣಃ | ಪತೇ | ತ್ವಂ | ಅಸ್ಯ | ಯಂತಾ | ಸುಽಉಕ್ತಸ್ಯ | ಬೋಧಿ | ತನಯಂ | ಚ | ಜಿನ್ವ |
ವಿಶ್ವಂ | ತತ್ | ಭದ್ರಂ | ಯತ್ | ಅವಂತಿ | ದೇವಾಃ | ಬೃಹತ್ | ವದೇಮ | ವಿದಥೇ | ಸುಽವೀರಾಃ ||

|| ಸಾಯಣಭಾಷ್ಯಂ ||

**ಹೇ ಬ್ರಹ್ಮಣಸ್ಪತೇ ಯಂತಾ ಸರ್ವಸ್ಯ ಜಗತೋ ನಿಯಂತಾ ತ್ವಮಸ್ಯ ಸೂಕ್ತಸ್ಯೇದಂ ಸೂಕ್ತಂ|| ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ|| ಬೋಧಿ| ಬುಧ್ಯಸ್ವ |**

**ಬುದ್ಧ್ವಾ ತನಯಂ ಪುತ್ರಂ ಚಾಸ್ಮಭ್ಯಂ ಜಿನ್ವ । ಪ್ರೇರಯ ॥ ಜಿವಿಃ ಪ್ರೀಣನಾರ್ಥಃ । ಅತ್ರ ಪ್ರೇರಣೇ ವರ್ತತೇ ಧಾತೂನಾಮನೇಕಾರ್ಥತ್ವಾತ್ ॥ ಯದ್ಭದ್ರಂ ಕಲ್ಯಾಣಂ ದೇವಾಃ ಸರ್ವೇಽವಂತಿ ರಕ್ಷಂತಿ ವಿಶ್ವಂ ಸರ್ವಂ ತದ್ಭದ್ರಂ ಚ ಜಿನ್ವೇತಿ ಶೇಷಃ । ವಯಂ ಚ ಸುವೀರಾಃ ಶೋಭನೈರ್ವೀರೈಃ ಪುತ್ರಪೌತ್ರಾದಿಭಿರುಪೇತಾಃ ಸಂತೋ ಬೃಹತ್ ಪ್ರೌಢಂ ಸ್ತೋತ್ರಂ ವಿದಥೇ । ವಿದಂತಿ ಯಷ್ಟವ್ಯತಯಾಸ್ಮಿನ್ದೇವಾನ್ ಜಾನಂತೀತಿ ವಿದಥೋ ಯಜ್ಞಃ । ತಸ್ಮಿನ್ ವದೇಮ । ಬ್ರೂಯಾಮ ॥ ೩ ॥**

॥ ಪ್ರತಿಪದಾರ್ಥ ॥

**ಬ್ರಹ್ಮಣಸ್ಪತೇ**— ಎಲೈ ಬ್ರಹ್ಮಣಸ್ಪತಿಯೇ । **ಯಂತಾ**— ಸಕಲ ಜಗತ್ತಿಗೂ ನಿಯಂತೃವಾದ । **ತ್ವಂ**— ನೀನು । **ಅಸ್ಯ ಸೂಕ್ತಸ್ಯ**— (ನಮ್ಮಿಂದ ಪಠಿತವಾದ) ಈ ಸೂಕ್ತವನ್ನು । **ಬೋಧಿ**— ತಿಳಿ । **ಯತ್**— ಯಾವ ಮಹಿಮೆಯಿಂದ । **ಭದ್ರಂ**— ಸಕಲ ಕಲ್ಯಾಣವನ್ನೂ । **ದೇವಾಃ**— ದೇವತೆಗಳು । **ಅವಂತಿ**— ರಕ್ಷಿಸುವರೋ । **ವಿಶ್ವಂ**— ಸಮಸ್ತವಾದ । **ತತ್**— ಆ ಕಲ್ಯಾಣವನ್ನೂ । **ಜಿನ್ವ**— ನಮಗುಂಟಾಗುವಂತೆ ಮಾಡಿ (ಆದುದರಿಂದಲೇ) **ತನಯಂ ಚ**— ಪುತ್ರನನ್ನೂ । (**ಜಿನ್ವ**— ನಮಗೆ ಉತ್ಪನ್ನನಾಗುವಂತೆ ಮಾಡು) । **ಸುವೀರಾಃ**— ವೀರ್ಯಯುಕ್ತರಾದ ಪುತ್ರಾದಿಗಳಿಂದ ಕೂಡಿದ ನಾವು । **ಬೃಹತ್**— ಪ್ರೌಢವಾದ ಸ್ತೋತ್ರವನ್ನು । **ವಿದಥೇ**— ಈ ಯಜ್ಞದಲ್ಲಿ । **ವದೇಮ**— ಪಠಿಸುವೆವು.

॥ ಭಾವಾರ್ಥ ॥

ಎಲೈ ಬ್ರಹ್ಮಣಸ್ಪತಿಯೇ, ಸಕಲ ಜಗತ್ತಿಗೂ ನಿಯಂತೃವಾದ ನೀನು ನಮ್ಮಿಂದ ಪಠಿತವಾದ ಈ ಸೂಕ್ತವನ್ನು ತಿಳಿ (ಕೇಳು) ಯಾವ ಮಹಿಮೆಯಿಂದ ದೇವತೆಗಳು ಸಕಲ ಕಲ್ಯಾಣವನ್ನೂ ರಕ್ಷಿಸುವರೋ, ಅದೇ ಮಹಿಮೆಯಿಂದ ನಮಗೂ ಸಹ ಸಮಸ್ತ ಕಲ್ಯಾಣವೂ ಉಂಟಾಗುವಂತೆ ಮಾಡು. ಆದುದರಿಂದಲೇ ಪುತ್ರಲಾಭವನ್ನು ಉಂಟುಮಾಡು. ವೀರ್ಯಯುಕ್ತರಾದ ಪುತ್ರಾದಿಗಳಿಂದ ಕೂಡಿದ ನಾವು ಪ್ರೌಢವಾದ ಸ್ತೋತ್ರವನ್ನು ಈ ಯಜ್ಞದಲ್ಲಿ ಪಠಿಸುವೆವು.

English Translation

Brahmanaspathi, you are the regulator of this (world), understand (the purport of) our hymn, and grant us posterity; for all is prosperous that the gods protect: (and therefore) may we, blessed with excellent descendants, glorify you at this sacrifice.

॥ ವಿಶೇಷವಿಷಯಗಳು ॥

ಬ್ರಹ್ಮಣಸ್ಪತಿಯನ್ನು ಸಂಬೋಧಿಸಿ, ಈ ದೇವನು **ಸರ್ವಸ್ಯ ಜಗತೋ ನಿಯಂತಾ** ಜಗತ್ತಿಲ್ಲಕ್ಕೂ ನಿಯಾಮಕನಾಗಿರುವನೆಂದೂ, **ಅಸ್ಯ ಸೂಕ್ತಸ್ಯ ಬೋಧಿ** ನಾವು ಪಡಿಸುವ ಈ ಸೂಕ್ತವನ್ನು ಶ್ರವಣಮಾಡಬೇಕೆಂದೂ ವಿವರಿಸಿದೆ.

**ತನಯಂ ಚ ಜಿನ್ವ— ಪುತ್ರಂ ಚ ಪ್ರೇರಯ । ಜಿವಿಃ ಪ್ರೀಣನಾರ್ಥೋಽತ್ರ ಪ್ರೇರಣೇ ವರ್ತತೇ ।** ಜಿವಿ ಎಂಬ ಧಾತುವಿಗೆ ಸಂತೋಷಪಡಿಸು ಎಂಬ ಅರ್ಥದಲ್ಲಿ ಪ್ರಯೋಗವು ಇರುವುದಾದರೂ ಇಲ್ಲಿ ಪ್ರೇರಿಸು ಎಂಬ

ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಸಾಯಣರು ವ್ಯಾಖ್ಯಾನಮಾಡಿ, ಬ್ರಹ್ಮಣಸ್ಪತಿಯು ನಮ್ಮ ಈ ಸೂಕ್ತವನ್ನು ಶ್ರವಣ ಮಾಡಿ ನಮ್ಮ ಪುತ್ರರೂ ಈ ಸೂಕ್ತವನ್ನು ಪಠಿಸುವಂತೆ ಪ್ರೇರಿಸಲಿ ಎಂದೂ, **ಸರ್ವೇ ದೇವಾಃ ಸರ್ವಂ ಅವಂತಿ ತತ್ ಭದ್ರಂ ಚ ಜಿನ್ವ** ಸಮಸ್ತ ದೇವತೆಗಳೂ ಪ್ರಪಂಚವೆಲ್ಲವನ್ನೂ ರಕ್ಷಿಸುವ ಕಲ್ಯಾಣವು ನಮಗೆ ಉಂಟಾಗುವಂತೆ ಪ್ರೇರಿಸಲಿ ಎಂದೂ ಪ್ರಾರ್ಥಿಸಿದೆ.

**ಸುವೀರಾಃ—ಶೋಭನೈಃ ವೀರೈಃ ಪುತ್ರಪೌತ್ರಾದಿಭಿರುಪೇತಾಃ** ಸುವೀರ ಎಂಬ ಪದಕ್ಕೆ ಎಲ್ಲಾ ವಿಧವಾದ ಒಳ್ಳೆಯ ಗುಣಗಳಿಂದ ಕೂಡಿರುವ ಮಕ್ಕಳು ಮತ್ತು ಮೊಮ್ಮಕ್ಕಳು ಎಂದು ಅರ್ಥವನ್ನು ವಿವರಿಸಿ, ಇವರಿಂದ ಕೂಡಿ ನಾವು ಯಜ್ಞಗಳಲ್ಲಿ ಪ್ರೌಢವಾದ ಸ್ತುತಿಗಳನ್ನು ಪಠಿಸುತ್ತೇವೆ ಎಂದು ವರ್ಣಿಸಿದೆ.

**ವಿದಥೇ—ಯಷ್ಟವ್ಯತಯಾ ಅಸ್ಮಿನ್ ದೇವಾನ್ ಜಾನಾತಿ ಇತಿ ವಿದಥೋ ಯಜ್ಞಃ।** ದೇವತೆಗಳನ್ನು ಉದ್ದೇಶಮಾಡಿ ಹವಿಸ್ಸುಗಳು ಅರ್ಪಿಸಲ್ಪಡುವ ಕರ್ಮವು ಯಜ್ಞವೆನಿಸುವುದು ಎಂದು ವಿದಥಪದದ ಅರ್ಥವು ವಿವೃತವಾಗಿದೆ.

# ಇಪ್ಪತ್ತೈದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಇಂಧಾನ ಇತಿ ಪಂಚರ್ಚಂ ತೃತೀಯಂ ಸೂಕ್ತಂ ಗಾರ್ತ್ಸಮದಂ ಜಾಗತಂ ಬ್ರಾಹ್ಮಣಸ್ಪತ್ಯಂ। ತಥಾ ಚಾನುಕ್ರಾಂತಂ। ಇಂಧಾನಃ ಪಂಚ ಜಾಗತಂ ತ್ವಿತಿ। ಲೈಂಗಿಕೋ ವಿನಿಯೋಗಃ॥**

ಅನುವಾದವು—**ಇಂಧಾನೋ ಅಗ್ನಿಂ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು; ಬ್ರಹ್ಮಣಸ್ಪತಿಯು ದೇವತೆಯು; ಜಗತೀ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಇಂಧಾನಃ ಪಂಚ ಜಾಗತಂ ತು** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೨೫

ಮಂಡಲ—೨ ॥ ಅನುವಾಕ—೩ ॥ ಸೂಕ್ತ—೨೫ ॥
ಅಷ್ಟಕ—೨ ॥ ಅಧ್ಯಾಯ—೬ ॥ ವರ್ಗ—೪ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಗೃತ್ಸಮದಃ ॥
॥ ದೇವತಾ—ಬ್ರಹ್ಮಣಸ್ಪತಿಃ ॥
॥ ಛಂದಃ—ಜಗತೀ ॥

॥ ಸಂಹಿತಾಪಾಠಃ ॥

ಇಂಧಾನೋ ಅಗ್ನಿಂ ವನವದ್ವನುಷ್ಯತಃ ಕೃತಬ್ರಹ್ಮಾ ಶೂಶುವದ್ರಾತಹವ್ಯ ಇತ್ ।
ಜಾತೇನ ಜಾತಮತಿ ಸ ಪ್ರ ಸರ್ಸೃತೇ ಯಂಯಂ ಯುಜಂ ಕೃಣುತೇ ಬ್ರಹ್ಮಣ-
ಸ್ಪತಿಃ ॥ ೧ ॥

॥ ಪದಪಾಠಃ ॥

ಇಂಧಾನಃ । ಅಗ್ನಿಂ । ವನವತ್ । ವನುಷ್ಯತಃ । ಕೃತಽಬ್ರಹ್ಮಾ । ಶೂಶುವತ್ । ರಾತಽಹವ್ಯಃ । ಇತ್ ।
ಜಾತೇನ । ಜಾತಂ । ಅತಿ । ಸಃ । ಪ್ರ । ಸರ್ಸ್ರೃತೇ । ಯಂಽಯಂ । ಯುಜಂ । ಕೃಣುತೇ । ಬ್ರಹ್ಮಣಃ ।
ಪತಿಃ ॥ ೧ ॥

॥ ಸಾಯಣಭಾಷ್ಯಂ ॥

ಅಗ್ನಿಮಿಂಧಾನೋ ಬ್ರಹ್ಮಣಸ್ಪತೇರ್ಯಾಗಾರ್ಥಮಗ್ನಿಂ ಪ್ರಜ್ವಲಯನ್ಯಜಮಾನೋ ವನುಷ್ಯತೋ ಹಿಂಸಿಷ್ಯತೋ ಹಿಂಸಾಂ ಕುರ್ವತೋ ವಾ ಶತ್ರೂನ್ವನವತ್ । ವನುಯಾತ್ ಹಿಂಸ್ಯಾತ್ ॥ ವನುಷ್ಯತಿರ್ಹಂತಿಕರ್ಮೇತಿ ಯಾಸ್ಕಃ । ಇದಿತಿ ಚಾರ್ಥೇ ॥ ಕೃತಬ್ರಹ್ಮಾ । ಬ್ರಹ್ಮ ಸ್ತೋತ್ರಂ ಕೃತಂ ಯೇನ ಸ ತಥೋಕ್ತಃ । ರಾತಹವ್ಯಃ । ರಾತಂ ದತ್ತಂ ಹವ್ಯಂ ಹವಿರ್ಯೇನ । ಏವಂಭೂತಃ ಸನ್ ಶೂಶುವತ್ । ವರ್ಧತೇ॥ ಟುಓಶ್ವಿ ಗತಿವೃದ್ಧ್ಯೋಃ॥ ಅಸ್ಮಾಣ್ಣ್ಯಂತಾಲ್ಲುಙಿ ರೂಪಂ॥ ತಥಾ ಯಜಮಾನೋ ಜಾತೇನ ಪುತ್ರೇಣ ಜಾತಂ ಜನಿತಮುತ್ಪಾದಿತಂ ಸ್ವಸ್ಯ ಪೌತ್ರಮಿತಿ ಪ್ರಸರ್ಸ್ರೃತೇ । ಅತೀತ್ಯ ಭೃಶಂ ಪ್ರಸರತಿ । ಪೌತ್ರಮಪಿ ಪಶ್ಯನ್ ಚಿರಕಾಲಂ ಜೀವೇದಿತ್ಯರ್ಥಃ ॥ ಸರ್ತೇರ್ಯಙ್ಲುಗಂತಾದ್ವ್ಯತ್ಯಯೇನಾತ್ಮನೇಪದಂ ॥ ಯಂಯಂ ಯಜಮಾನಂ ಬ್ರಹ್ಮಣಸ್ಪತಿಃ ಸ್ತೋತ್ರಹವಿಷೋಃ ಸ್ವೀಕರಣೇನ ಯುಜಂ ಸಖಾಯಂ ಕೃಣುತೇ । ಕುರುತೇ । ಸ ಸಮಾನ ಏವ ಭವತೀತ್ಯರ್ಥಃ ॥

॥ ಪ್ರತಿಪದಾರ್ಥ ॥

(ಬ್ರಹ್ಮಣಸ್ಪತಿಯನ್ನು ಪ್ರೀತಿಸಿದ ಯಾಗಕ್ಕಾಗಿ) **ಅಗ್ನಿಂ**—ಅಗ್ನಿಯನ್ನು । **ಇಂಧಾನಃ**—ಪ್ರಜ್ವಲಿಸುವಂತೆ ಮಾಡುವ ಯಜಮಾನನು । **ವನುಷ್ಯತಃ**—ಯಜ್ಞಕ್ಕೆ ವಿಘ್ನವನ್ನುಂಟುಮಾಡುವ ಶತ್ರುಗಳನ್ನು । **ವನವತ್**—ಹಿಂಸಿಸಿ ದೂರಕ್ಕೆ ಅಟ್ಟುತ್ತಾನೆ । **ಇತ್**—ಮತ್ತು । **ಕೃತಬ್ರಹ್ಮಾ**—ಸ್ತೋತ್ರವನ್ನು ನಿರ್ಮಿಸುತ್ತಲೂ, । **ರಾತಹವ್ಯಃ**—ಹವಿಸ್ಸನ್ನು ಅರ್ಪಿಸುತ್ತಲೂ । **ಶೂಶುವತ್**—ವೃದ್ಧಿಯನ್ನು ಪಡೆಯುತ್ತಾನೆ । **ಯಂಯಂ**—ಯಾವ ಯಾವ ಯಜಮಾನನನ್ನು । **ಬ್ರಹ್ಮಣಸ್ಪತಿಃ**—ಬ್ರಹ್ಮಣಸ್ಪತಿಯು । **ಯುಜಂ**—ಮಿತ್ರನನ್ನಾಗಿ । **ಕೃಣುತೇ**—ಮಾಡಿಕೊಳ್ಳುತ್ತಾನೆಯೋ । **ಸಃ**—ಅಂತಹ ಯಜಮಾನನು । **ಜಾತೇನ**—ಪುತ್ರನಿಂದ । **ಜಾತಂ**—ಉತ್ಪನ್ನನಾದ ಪೌತ್ರನನ್ನೂ । **ಅತಿ ಪ್ರ ಸರ್ಸ್ರೃತೇ**—ದಾಟಿ ದೀರ್ಘವಾಗಿ ಜೀವಿಸುತ್ತಾನೆ. (ಪೌತ್ರಾದಿಗಳನ್ನೂ ಸಹ ನೋಡುವಷ್ಟು ಕಾಲ ಬದುಕುತ್ತಾನೆ).

॥ ಭಾವಾರ್ಥ ॥

ಬ್ರಹ್ಮಣಸ್ಪತಿಯನ್ನು ಪ್ರೀತಿಸಿದ ಯಾಗಕ್ಕಾಗಿ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವ ಯಜಮಾನನು ಯಜ್ಞಕ್ಕೆ ವಿಘ್ನವನ್ನುಂಟುಮಾಡುವ ಶತ್ರುಗಳನ್ನು ಹಿಂಸಿಸಿ ದೂರಕ್ಕೆ ಅಟ್ಟುತ್ತಾನೆ. ಮತ್ತು ಸ್ತೋತ್ರವನ್ನು ನಿರ್ಮಿಸುತ್ತಲೂ ಹವಿಸ್ಸನ್ನು ಅರ್ಪಿಸುತ್ತಲೂ ವೃದ್ಧಿಯನ್ನು ಪಡೆಯುತ್ತಾನೆ. ಯಾವ ಯಾವ ಯಜಮಾನನನ್ನು ಬ್ರಹ್ಮಣಸ್ಪತಿಯು ಮಿತ್ರನನ್ನಾಗಿ ಮಾಡುತ್ತಾನೆಯೋ ಅಂತಹ ಯಜಮಾನನು ತನ್ನ ಪುತ್ರಪೌತ್ರಾದಿಗಳನ್ನೆಲ್ಲಾ ನೋಡಿ ಸಂತೋಷಪಡಿಸುವಷ್ಟು ಕಾಲ ದೀರ್ಘವಾಗಿ ಬಾಳುತ್ತಾನೆ.

## English Translation.

Kindling the fire, may (the worshipper) overcome the malevolent (disturbers of the rite); may he, repeating prayers, and laden with oblations, prosper; he whom Brahmanaspathi makes his associate, lives to behold the son of his son.

॥ ವಿಶೇಷವಿಷಯಗಳು ॥

**ಅಗ್ನಿಂ ಇಂಧಾನಃ — ಬ್ರಹಣಸ್ಪತೇರ್ಯಾಗಾರ್ಥಮಗ್ನಿಂ ಪ್ರಜ್ವಲಯನ್ ಯಜಮಾನಃ।** ಇಲ್ಲಿ **ಇಂಧಾನಃ** ಎಂಬ ಶಬ್ದಕ್ಕೆ ಅಗ್ನಿಯನ್ನು ಉದ್ದೀಪನೆಮಾಡುವ ಯಜಮಾನನು ಎಂದು ಅರ್ಥವನ್ನು ಹೇಳಿ ಬ್ರಹ್ಮಣ ಸ್ಪತಿಯನ್ನು ಉದ್ದೇಶಿಸಿ ಆಚರಿಸುವ ಯಾಗದಲ್ಲಿ ಯಜ್ಞಮಾಡುವ ಯಜಮಾನನು ತನಗೆ ಹಿಂಸೆಯನ್ನು ಉಂಟು ಮಾಡುವ ಶತ್ರುಗಳೆಲ್ಲರನ್ನೂ ಅಗ್ನಿಯ ಮಹಿಮೆಯಿಂದ ದೂರಕ್ಕೆ ಅಟ್ಟುತ್ತಾನೆ ಎಂದು ಅರ್ಥವನ್ನು ವಿವರಿಸಿದೆ. ಯಾಸ್ಕರು **ವನುಷ್ಯತಿರ್ಹಿಂಸಾ ಕರ್ಮಾ** (ನಿ. ೫-೨) ಎಂದು ಪಾಠನಮಾಡಿ, **ವನುಯಾಮ, ವನುಷ್ಯತಃ** ಎಂದು ವಿವರಿಸಿ ಉದಾಹರಿಸಿದ್ದಾರೆ.

**ಕೃತಬ್ರಹ್ಮಾ**—ಬ್ರಹ್ಮ ಶಬ್ದವು ಅನ್ನ ಧನ, ಎಂಬ ಅರ್ಥಗಳಲ್ಲಿ ಯಾಸ್ಕರಿಂದ (ನಿ. ೩-೯) ಪಠಿತವಾಗಿದೆ, ಸಾಯಣರು ಇಲ್ಲಿ **ಕೃತಂ ಬ್ರಹ್ಮ ಸ್ತೋತ್ರಂ ಯೇನ** ಎಂದು ಬ್ರಹ್ಮಶಬ್ದಕ್ಕೆ ಸ್ತೋತ್ರವೆಂಬ ಅರ್ಥವನ್ನು ವಿವರಿಸಿದ್ದಾರೆ.

**ಜಾತೇನ ಜಾತಂ—ಯಜಮಾನಃ ಪುತ್ರೇಣ ಜನಿತಂ ಸ್ವಸ್ಯ ಪೌತ್ರಂ ಅತೀತ್ಯ ಭೃಶಂ ಪ್ರಸರತಿ। ಪೌತ್ರಮಪಿ ಪಶ್ಯನ್ ಚಿರಕಾಲಂ ಜೀವೇತ್** ಇಲ್ಲಿ **ಜಾತೇನ** ಎಂಬ ಶಬ್ದಕ್ಕೆ **ಜಾತೇನ ಪುತ್ರೇಣ** ಯಜಮಾನನ ಪುತ್ರನಿಂದ ಎಂದರ್ಥವು. ಇಂತಹ ಪುತ್ರನಿಂದ **ಜಾತಂ** ಹುಟ್ಟಿದ ಮೊಮ್ಮಗನೆಂದು ಅರ್ಥವು. ಆದುದರಿಂದ **ಜಾತೇನ ಜಾತಂ** ಎಂಬ ಶಬ್ದಗಳಿಗೆ ಯಜಮಾನನ ಮಗನ ಮಗನು ಅಥವಾ ಮೊಮ್ಮಗನು ಎಂದು ಅಭಿಪ್ರಾಯವು. ಇಂತಹ ಮೊಮ್ಮಗನ ಕಾಲಪರ್ಯಂತರವೂ ಯಜಮಾನರಾದ ನಾವು ಜೀವಿಸಿರುವಂತೆ ಆಯುಸ್ಸನ್ನು ಅನುಗ್ರಹಿಸ ಬೇಕೆಂದು ಬ್ರಹ್ಮಣಸ್ಪತಿಯನ್ನು ಇಲ್ಲಿ ಪ್ರಾರ್ಥಿಸಲಾಗಿದೆ.

**ಬ್ರಹ್ಮಣಸ್ಪತಿಃ ಯಂಯಂ ಯುಜಂ ಕೃಣುತೇ ಸಃ**—ಬ್ರಹ್ಮಣಸ್ಪತಿ ಎಂಬ ಶಬ್ದದ ವಿವರಣೆಯು ಹಿಂದೆ ವಿವೃತವಾಗಿದೆ. ಕೆಲವರು ಬೃಹಸ್ಪತಿ ಎಂದೂ ಇನ್ನು ಕೆಲವರು ಬೃಹಸ್ಪತಿಗಿಂತ ಬೇರೆಯಾದ ದೇವತೆ ಎಂದೂ ಅಭಿಪ್ರಾಯ ಪಟ್ಟಿದ್ದಾರೆ. ಈ ದೇವತೆಗಳನ್ನು ಉದ್ದೇಶಮಾಡಿ ಹವಿರಾದಿಗಳಿಂದ ತೃಪ್ತಿಗೊಳಿಸಿದ ಯಜಮಾನನನ್ನು ಈ ದೇವನು ತನ್ನ ಸ್ನೇಹಿತನನ್ನಾಗಿ ತಿಳಿದು ತನಗೆ ಸಮಾನವಾದ ಮಹಿಮೆಯುಳ್ಳವನ್ನಾಗಿ ಮಾಡುವನು ಎಂದು ವಿವರಿಸಿದೆ.



॥ ಸಂಹಿತಾಪಾಠಃ ॥

ವೀರೇಭಿರ್ವೀರಾನ್ವನವದ್ವನುಷ್ಯತೋ ಗೋಭೀ ರಯಿಂ ಪಪ್ರಥದ್ಬೋಧತಿ ತ್ಮನಾ ।
ತೋಕಂ ಚ ತಸ್ಯ ತನಯಂ ಚ ವರ್ಧತೇ ಯಂಯಂ ಯುಜಂ ಕೃಣುತೇ ಬ್ರಹ್ಮಣ-
ಸ್ಪತಿಃ ॥ ೨ ॥

॥ ಪದಪಾಠಃ ॥

ವೀರೇಭಿಃ । ವೀರಾನ್ । ವನವತ್ । ವನುಷ್ಯತಃ । ಗೋಭಿಃ । ರಯಿಂ । ಪಪ್ರಥತ್ । ಬೋಧತಿ । ತ್ಮನಾ ।
ತೋಕಂ । ಚ । ತಸ್ಯ । ತನಯಂ । ಚ । ವರ್ಧತೇ । ಯಂಽಯಂ । ಯುಜಂ । ಕೃಣುತೇ । ಬ್ರಹ್ಮಣಃ ।
ಪತಿಃ ॥ ೨ ॥

॥ ಸಾಯಣಭಾಷ್ಯಂ ॥

ಸ ಯಜಮಾನೋ ವೀರೇಭಿರ್ವೀರೈರಾತ್ಮೀಯೈಃ ಪುತ್ರೈರ್ವನುಷ್ಯತೋ ಹಿಂಸತೋ ವೀರಾನ್ ಶತ್ರುಪುತ್ರಾನ್ ವನವತ್ । ವನುಯಾತ್ ಹಿಂಸ್ಯಾತ್ । ಅಪಿ ಚ ಗೋಭಿಃ ಸಹಿತಂ ಧನಂ ಪಪ್ರಥತ್ । ಪ್ರಥಯತಿ ವಿಸ್ತಾರಯತಿ ॥ ಪ್ರಥಯತೇರ್ಲುಙಿ ಚಙ್ಯೇತದ್ರೂಪಂ ॥ ತಥಾ ತ್ಮನಾ ಆತ್ಮನೈವ ಬೋಧತಿ । ಸರ್ವಂ ಜಾನಾತಿ । ಅನನ್ಯಾಧೀನಜ್ಞಾನೋ ಭವತೀತ್ಯರ್ಥಃ । ಕಿಂಚ ತಸ್ಯ ಯಜಮಾನಸ್ಯ ತೋಕಂ ಪುತ್ರಸ್ತನಯಂ ॥ ವಿಭಕ್ತಿವ್ಯತ್ಯಯಃ ॥ ತನಯಸ್ತತ್ಪುತ್ರಶ್ಚ ವರ್ಧತೇ । ಪ್ರವೃದ್ಧೋ ಭವತಿ । ಯದ್ವಾ ತೋಕಂ ತನಯಂ ಪುತ್ರಂ ಪೌತ್ರಂ ಚ ಬ್ರಹ್ಮಣಸ್ಪತಿರ್ವರ್ಧಯತಿ ॥ ವೃಧಿರಂತರ್ಭಾವಿತಣ್ಯರ್ಥೋ ದ್ರಷ್ಟವ್ಯಃ । ಅನ್ಯದ್ಗತಂ ॥

॥ ಪ್ರತಿಪದಾರ್ಥ ॥

**ಯಂಯಂ**—ಯಾವ ಯಾವ ಯಜಮಾನನನ್ನು । **ಬ್ರಹ್ಮಣಸ್ಪತಿಃ**—ಬ್ರಹ್ಮಣಸ್ಪತಿಯು । **ಯುಜಂ**—ಮಿತ್ರನನ್ನಾಗಿ । **ಕೃಣುತೇ**—ಮಾಡಿಕೊಳ್ಳುತ್ತಾನೆಯೋ (ಅಂತಹ ಯಜಮಾನನು) । **ವೀರೇಭಿಃ**– ವೀರರಾದ ಪುತ್ರರೊಡಗೂಡಿ । **ವನುಷ್ಯತಃ**– ಹಿಂಸಕರಾದ । **ವೀರಾನ್**—ಶತ್ರುಪುತ್ರರನ್ನು । **ವನವತ್**— ಹಿಂಸಿಸುವನು । (ಮತ್ತು) **ಗೋಭಿಃ** – ಗೋವುಗಳೊಡನೆ ಕೂಡಿದ । **ರಯಿಂ**—ಧನವನ್ನು । **ಪಪ್ರಥತ್**— ವಿಸ್ತರಿಸಿ ವೃದ್ಧಿಪಡಿಸಿ ಕೊಳ್ಳುತ್ತಾನೆ । **ತ್ಮನಾ**—ಸ್ವಸಾಮರ್ಥ್ಯದಿಂದಲೇ । **ಬೋಧತಿ**– ಎಲ್ಲವನ್ನೂ ತಿಳಿಯುತ್ತಾನೆ । **ತಸ್ಯ**—ಅಂತಹ ಯಜಮಾನನ । **ತೋಕಂ ಚ**—ಪುತ್ರನೂ । **ತನಯಂ ಚ**—ಪೌತ್ರನೂ । **ವರ್ಧತೇ**—ವೃದ್ಧಿಯನ್ನು ಪಡೆಯುತ್ತಾರೆ.

॥ ಭಾವಾರ್ಥ ॥

ಯಾವ ಯಾವ ಯಜಮಾನನನ್ನು ಬ್ರಹ್ಮಣಸ್ಪತಿಯು ಮಿತ್ರನನ್ನಾಗಿ ಮಾಡಿಕೊಳ್ಳುತ್ತಾನೆಯೋ, ಅಂತಹ ಯಜಮಾನನು ವೀರರಾದ ಪುತ್ರರೊಡಗೂಡಿ ಹಿಂಸಕರಾದ ಶತ್ರುಪುತ್ರರನ್ನು ಹಿಂಸಿಸುವನು. ಮತ್ತು ಗೋವ್ರಗಳೊಡನೆ ಕೂಡಿದ ಧನವನ್ನು ವಿಸ್ತರಿಸಿ ವೃದ್ಧಿಪಡಿಸಿಕೊಳ್ಳುತ್ತಾನೆ. ಅವನು ಸ್ವಸಾಮರ್ಥ್ಯದಿಂದಲೇ ಎಲ್ಲವನ್ನೂ ತಿಳಿಯುತ್ತಾನೆ. ಅಂತಹ ಯಜಮಾನನ ಪುತ್ರನೂ ಪೌತ್ರನೂ ವೃದ್ಧಿಯನ್ನು ಪಡೆಯುತ್ತಾರೆ.

English Translation.

(Surrounded) by his descendants, may he surpass the malevolent descendants (of his adversaries), for hc is famed for great wealth of cattle, and understands (all things) of himself: his sons and grandsons prosper whom Brahmanaspathi makes his associate.

॥ ವಿಶೇಷವಿಷಯಗಳು ॥

**ವೀರೇಭಿಃ ವೀರಾನ್ ವನವತ್**— ಯಾಸ್ಕರು **ವೀರೋ ವೀರಯತ್ಯಮಿತ್ರಾನ್ ವೇತೇರ್ವಾ ಸ್ಯಾದ್ಗತಿಕರ್ಮಣೋ ವೀರಯತೇರ್ವಾ** (ನಿ. ೧–೭) ಎಂದು ವಿವರಿಸಿದ್ದಾರೆ. ಇದರಿಂದ ವೀರಶಬ್ದಕ್ಕೆ ಇತರರನ್ನು ತನ್ನ ಸಾಮರ್ಥ್ಯದಿಂದ ನಾಶಪಡಿಸುವವನು (ಶೂರನು) ಎಂದು ಅರ್ಥವಾಗುತ್ತದೆ. ಸಾಯಣರು ಇಲ್ಲಿ ವೀರೇಭಿಃ ಎಂದರೆ **ಆತ್ಮೀಯೈಃ ಪುತ್ರೈಃ** ಯಜಮಾನನ ಪುತ್ರರು (ಮಕ್ಕಳು) ಎಂದೂ, **ವೀರಾನ್** ಎಂದರೆ ಶತ್ರುಪುತ್ರರು ಎಂದೂ ಅರ್ಥವನ್ನು ವಿವರಿಸಿದ್ದಾರೆ. ಯಜಮಾನನು ತನ್ನ ಕಡೆಯ ವೀರರಿಂದ ಶತ್ರುವೀರರನ್ನು ಬ್ರಹ್ಮಣಸ್ಪತಿಯ ಅನುಗ್ರಹದಿಂದ ನಿಗ್ರಹಿಸುವಂತಾಗಲಿ ಎಂದು ವಿವರಿಸಿದೆ.

**ಗೋಭಿಃ ಸಪ್ರಥತ್—ಗೋಭಿಸ್ಸಹಿತಂ ಧನಂ ವಿಸ್ತಾರಯತಿ** ಗೌಃ ಎಂಬ ಶಬ್ದಕ್ಕೆ ಯಾಸ್ಕರು ಭೂಮಿ, ಪಶು, ಚರ್ಮ, ಶ್ಲೇಷ್ಮಾ, ಮೌರ್ವೀ, ಆದಿತ್ಯ, ಸುಷುಮ್ನಾನಾಡಿ, ಕಿರಣಗಳು, ಎಂಬ (ನಿ. ೨–೫,೬,೭.೮) ಅರ್ಥಗಳನ್ನು ವಿವರಿಸಿದ್ದಾರೆ. ಇಲ್ಲಿ (ಪಶು) ಗವಾಶ್ವಾಜಾದಿಪಶುಗಳಿಂದ ಕೂಡಿದ ಗೋಸಂಪತ್ತೆಂಬ ಅರ್ಥವನ್ನು ಹೇಳಿ ಯಜಮಾನನು ಈ ರೂಪವಾದ ಧನವನ್ನು ಬ್ರಹ್ಮಣಸ್ಪತಿಯ ಅನುಗ್ರಹದಿಂದ ವಿಸ್ತಾರಗೊಳಿಸುತ್ತಾನೆಂದು ವರ್ಣಿಸಿದ್ದಾರೆ.

**ತ್ಮನಾ ಬೋಧತಿ—ಆತ್ಮನೈವ ಸರ್ವಂ ಜಾನಾತಿ ಅನನ್ಯಾಧೀನಜ್ಞಾನೋ ಭವತಿ** । ತ್ಮನಾ ಎಂದರೆ ತನ್ನ ಸ್ವಭಾವದಿಂದಲೇ ಎಂದು ಅರ್ಥವನ್ನು ಹೇಳಿದೆ ಬ್ರಹ್ಮಣಸ್ಪತಿಯ ಅನುಗ್ರಹದಿಂದ ಯಜಮಾನನು ಎಂಬ ಅರ್ಥವು ವಿವೃತವಾಗಿದೆ.

**ತೋಕಂ ತನಯಂ ವರ್ಧತೇ—ತೋಕಂ ತನಯಸ್ತತ್ಪುತ್ರಃ ಚ ಪ್ರವೃದ್ಧೋ** ಭವತಿ । **ಯದ್ವಾ ತೋಕಂ ತನಯಂ ಪುತ್ರಂ ಪೌತ್ರಂ ಚ ವರ್ಧಯತಿ ಬ್ರಹ್ಮಣಸ್ಪತಿಃ** । ಯಜಮಾನನ ಪುತ್ರರನ್ನೂ ಪೌತ್ರರನ್ನೂ ಬ್ರಹ್ಮಣಸ್ಪತಿಯು ವೃದ್ಧಿಗೊಳಿಸುವನು ಅಥವಾ ಬ್ರಹ್ಮಣಸ್ಪತಿಯ ಅನುಗ್ರಹದಿಂದ ಅವರೇ ವೃದ್ಧಿಹೊಂದುವರು ಎಂದು ಎರಡು ವಿಧವಾದ ಅರ್ಥವೂ ಉಕ್ತವಾಗಿದೆ.

॥ ಸಂಹಿತಾಪಾಠಃ ॥

ಸಿಂಧುರ್ನ ಕ್ಷೋದಃ ಶಿಮೀವಾँ ಋಘಾಯತೋ ವೃಷೇವ ವಧ್ರೀँರಭಿ ವಷ್ಟ್ಯೋಜಸಾ ।
ಅಗ್ನೇರಿವ ಪ್ರಸಿತಿರ್ನಾಹ ವರ್ತವೇ ಯಂಯಂ ಯುಜಂ ಕೃಣುತೇ ಬ್ರಹ್ಮಣಸ್ಪತಿಃ ॥

॥ ಪದಪಾಠಃ ॥

ಸಿಂಧುಃ । ನ । ಕ್ಷೋದಃ । ಶಿಮೀಽವಾನ್ । ಋಘಾಯತಃ । ವೃಷಾಽಇವ । ವಧ್ರೀನ್ । ಅಭಿ । ವಷ್ಟಿ । ಓಜಸಾ
ಅಗ್ನೇಃಽಇವ । ಪ್ರಽಸಿತಿಃ । ನ । ಅಹ । ವರ್ತವೇ । ಯಂಽಯಂ । ಯುಜಂ । ಕೃಣುತೇ । ಬ್ರಹ್ಮಣಃ । ಪತಿಃ ॥ ೩ ॥

॥ ಸಾಯಣಭಾಷ್ಯಂ ॥

ಸಿಂಧುಃ ಸ್ಯಂದನಶೀಲಾ ನದೀ ಕ್ಷೋದೋ ನ ಕ್ಷುದ್ಯಮಾನಂ ಕೂಲಂ ಯಥಾ ಭಿನತ್ತಿ ತಥಾ ಶಿಮೀವಾನ್ । ಶಿಮೀತಿ ಕರ್ಮನಾಮ । ಬ್ರಹ್ಮಣಸ್ಪತೇಃ ಪರಿಚರಣಾತ್ಮನಾ ಕರ್ಮಣಾ ಯುಕ್ತೋ ಯಜಮಾನ ಋಘಾಯತೋ ಹಿಂಸತಃ ಶತ್ರೂನ್ ಓಜಸಾ ಬಲೇನಾಭಿವಷ್ಟಿ । ಹಂತುಮಭಿತಃ ಕಾಮಯತೇ ॥ ವಶ ಕಾಂತೌ ॥ ಇದಮಪರಂ ನಿದರ್ಶನಂ । ವೃಷೇವ ವಧ್ರೀನ್ । ವಧ್ರಯೋ ನಿಷ್ಪಿಷ್ಟಮುಷ್ಕಾ ನಿರ್ವೀರ್ಯಾ ಬಲೀವರ್ದಾಃ । ತಾನ್ ಯಥಾ ವೃಷಾ ಸೇಚನಸಮರ್ಥಃ ಸವೀರ್ಯೋ ವೃಷಭೋಽಭಿಭವತಿ ತದ್ವಚ್ಛತ್ರೂನಭಿಭವತೀತ್ಯರ್ಥಃ । ಅಪಿ ಚಾಸಾವಗ್ನೇರಿವ ಪ್ರಸಿತಿಃ । ಪ್ರಸೀಯತೇ ಬಧ್ಯತೇಽನಯೇತಿ ಪ್ರಸಿತಿರ್ಜ್ವಾಲಾ ॥ ಷಿಞ್ ಬಂಧನೇ । ಕರಣೇ ಕ್ತಿನ್ ॥ ಯಥಾಗ್ನೇರ್ಜ್ವಾಲಾಪ್ರತಿಹತಪ್ರಸರಾ ಏವಮಪಿ ನ ವರ್ತವೇ । ವಾರಯಿತುಂ ನಿವರ್ತಯಿತುಂ ವಾ ನೈವ ಶಕ್ಯತೇ । ಆಹಶಬ್ದೋಽವಧಾರಣೇ । ವೃಣೋತೇರಂತರ್ಭಾವಿತಣ್ಯರ್ಥಾತ್ ವರ್ತೇರ್ವಾ ತುಮರ್ಥೇ ತವೇನ್ಪ್ರತ್ಯಯಃ । ಅನ್ಯದ್ಗತಂ ॥

॥ ಪ್ರತಿಪದಾರ್ಥ ॥

**ಸಿಂಧುಃ**—ಪ್ರವಹಿಸುವ ನದಿಯು । **ಕ್ಷೋದಃ ನ**—ತನ್ನ ದಡವನ್ನು ಕೊಚ್ಚಿ ಸೀಳುವಂತೆಯೂ । **ವಧ್ರೀನ್**—ನಿರ್ವೀರ್ಯವಾದ ಮುದಿಯೆತ್ತುಗಳನ್ನು । **ವೃಷೇವ**—ಪುಷ್ಟವಾದ ವೃಷಭವು ಕೆಳಕ್ಕೆ ಬೀಳಿಸುವಂತೆಯೂ । **ಶಿಮೀವಾನ್**—ಬ್ರಹ್ಮಣಸ್ಪತಿಯನ್ನು ಪಚರಿಸುವ ಕರ್ಮಯುಕ್ತನಾದ ಯಜಮಾನನು । **ಋಘಾಯತಃ**—ತನ್ನನ್ನು ಹಿಂಸಿಸುವ ಶತ್ರುಗಳನ್ನು । **ಓಜಸಾ**—ತನ್ನ ಬಲದಿಂದ । **ಅಭಿ ವಷ್ಟಿ**—ಸುತ್ತುವರಿದು

ಹಿಂಸಿಸಲು ಇಚ್ಛಿಸುತ್ತಾನೆ। **ಯಂಯಂ**—ಯಾವ ಯಾವ ಯಜಮಾನನನ್ನು। **ಬ್ರಹ್ಮಣಸ್ಪತಿಃ**-ಬ್ರಹ್ಮಣಸ್ಪತಿಯು। **ಯುಜಂ**—ಸಖನನ್ನಾಗಿ। **ಕೃಣುತೇ**—ಮಾಡಿಕೊಳ್ಳುತ್ತಾನೆಯೋ (ಅಂತಹ ಯಜಮಾನನು)। **ಅಗ್ನೇಃ ಇವ ಪ್ರಸಿತಿಃ**—ಅಗ್ನಿಯು ಜ್ವಾಲೆಯನ್ನು ಹರಡಿ ಅಪ್ರತಿಹತವಾಗಿ ಪ್ರಸರಿಸುವಂತೆ। **ನ ವರ್ತವೇ ಅಹ**—(ಯಾರಿಂದಲೂ) ತಡೆಯಲಶಕ್ಯವಾದ ವೃದ್ಧಿಯನ್ನು ಪಡೆಯುತ್ತಾನೆ.

॥ ಭಾವಾರ್ಥ ॥

ಪ್ರವಹಿಸುವ ನದಿಯು ತನ್ನ ದಡವನ್ನು ಕೊಚ್ಚಿ ಸೀಳುವಂತೆಯೂ, ನಿರ್ವೀರ್ಯವಾದ ಮುದಿಯೆತ್ತುಗಳನ್ನು ಪುಷ್ಟವಾದ ವೃಷಭವು ಕೆಳಕ್ಕೆ ಬೀಳಿಸುವಂತೆಯೂ, ಬ್ರಹ್ಮಣಸ್ಪತಿಯನ್ನು ಪಚರಿಸುವ ಕರ್ಮಯುಕ್ತನಾದ ಯಜಮಾನನು ತನ್ನನ್ನು ಹಿಂಸಿಸುವ ಶತ್ರುಗಳನ್ನು ಬಲದಿಂದ ಸುತ್ತುವರಿದು ಹಿಂಸಿಸಲು ಇಚ್ಛಿಸುತ್ತಾನೆ. ಯಾವ ಯಾವ ಯಜಮಾನನನ್ನು ಬ್ರಹ್ಮಣಸ್ಪತಿಯು ಸಖನನ್ನಾಗಿ ಮಾಡಿಕೊಳ್ಳುತ್ತಾನೆಯೋ ಅಂತಹ ಯಜಮಾನನು, ಅಗ್ನಿಯು ಜ್ವಾಲೆಯನ್ನು ಹರಡಿ ಅಪ್ರತಿಹತವಾಗಿ ಪ್ರಸರಿಸುವಂತೆ ಯಾರಿಂದಲೂ ತಡೆಯಲಶಕ್ಯವಾದ ವೃದ್ಧಿಯನ್ನು ಪಡೆಯುತ್ತಾನೆ.

## English Translation.

As a river (washes away) its banks, so the devout worshipper, of Brahmanaspathi), overpowers his enemies by his strength, as a bull (overcomes) an ox: like the spreading flame of fire, it is impossible to stop him, whom Brahmanaspathi makes his associate.

॥ ವಿಶೇಷವಿಷಯಗಳು ॥

**ಶಿಮೀವಾನ್ ಋಘಾಯತಃ ಓಜಸಾ ಅಭಿ ವಷ್ಟಿ**— **ಶಿಮೀ** ಎಂಬ ಪದವು ಯಾಸ್ಕರಿಂದ ಕರ್ಮನಾಮಗಳಲ್ಲಿ (ನಿ. ೩-೨) ಪಠಿತವಾಗಿದೆ. ಮತ್ತು **ಶಿಮೀತಿ ಕರ್ಮನಾಮ, ಶಮಯತೇರ್ವಾ ಶಕ್ನೋತೇರ್ವಾ** (ನಿ. ೫-೧೨) ಎಂದು ಉಕ್ತವಾಗಿದೆ. ಸಾಯಣರು ಈ ವಾಕ್ಯಕ್ಕೆ **ಬ್ರಹ್ಮಣಸ್ಪತೇಃ ಪರಿಚರಣಾತ್ಮನಾ ಕರ್ಮಣಾ ಯುಕ್ತೋ ಯಜಮಾನಃ ಹಿಂಸತಃ ಶತ್ರೂನ್ ಬಲೇನ ಹಂತುಮಭಿತಃ ಕಾಮಯತೇ**—ಬ್ರಹ್ಮಣಸ್ಪತಿಯನ್ನು (ಸೇವಿಸುವ) ಆರಾಧಿಸುವ ಯಜಮಾನನು ತನ್ನನ್ನು ಹಿಂಸೆಮಾಡುವವರನ್ನು ತನ್ನ ಸಾಮರ್ಥ್ಯದಿಂದ ನಾಶಗೊಳಿಸಲು ಅಪೇಕ್ಷಿಸುವನು ಎಂದು ವಿವರಿಸಿದ್ದಾರೆ. ಇಲ್ಲಿ ಮೂರು ಉಪಮಾನಗಳು ಉಕ್ತವಾಗಿವೆ. ಮೊದಲನೆಯದಾಗಿ **ಸಿಂಧುಃ ಕ್ಷೋದಃ ನ—ಸ್ಯಂದನಶೀಲಾ ನದೀ ಕ್ಷುದ್ಯಮಾನಂ ಕೂಲಂ ಯಥಾ ಭಿನತ್ತಿ**—ಪ್ರವಹಿಸುವ ನದಿಯು ದಡವನ್ನು ಕೊಚ್ಚಿ ಭೇದಿಸುವ ಹಾಗೆ ಎಂದು ವರ್ಣಿಸಿದೆ. ಎರಡನೆಯದಾಗಿ—**ವೃಷೇವ ವಧ್ರೀನ್ ವಧ್ರಯೋ ನಿಷ್ಪಿಷ್ಟಮುಷ್ಕಾ ನಿರ್ವೀರ್ಯಾ ಬಲೀವರ್ದಾಃ ತಾನ್ ಯಥಾ ಸೇಚನಸಮರ್ಥಃ ಸವೀರ್ಯಃ ವೃಷಭೋ ಅಭಿಭವತಿ**—ಪ್ರಭೂತವಾದ ಸಾಮರ್ಥ್ಯದಿಂದ ಕೂಡಿರುವ ಗೂಳಿಗಳು ವಡದಿರುವ ಬೀಜವುಳ್ಳ ನಿತ್ರಾಣವಾದ ಮುದಿ ಎತ್ತುಗಳನ್ನು ತಿವಿದು ಕೆಳಕ್ಕೆ ಉರುಳಿಸುವಂತೆ ಎಂದು ವಿವರಿಸಿದೆ. ಮೂರನೆಯದಾಗಿ **ಅಗ್ನೇರಿವ ಪ್ರಸಿತಿಃ—ಯಥಾ ಅಗ್ನೇರ್ಜ್ವಾಲಾಪ್ರತಿಹತಪ್ರಸರಾ ವಾರಯಿತುಂ ನಿವರ್ತಯಿತುಂ ವಾ ನೈವ ಶಕ್ಯತೇ**—ದಾವಾಗ್ನಿಯ

ಜ್ವಾಲೆಯನ್ನು ತಡೆಯುವುದಕ್ಕೂ, ಹಿಂತಿರಿಗಿಸುವುದಕ್ಕೂ ಅಶಕ್ಯವಾಗಿ ಇರುವ ಹಾಗೆ ಎಂದು ವರ್ಣಿತವಾಗಿದೆ. ಇದರಿಂದ ಬ್ರಹ್ಮಣಸ್ಪತಿಯ ಅನುಗ್ರಹವನ್ನು ಸಂಪಾದಿಸಿದ ಯಜಮಾನರ ಸಾಮರ್ಥ್ಯವು ಶತ್ರುಗಳನ್ನು ಪರಾಭವ ಗೊಳಿಸುವ ವಿಷಯದಲ್ಲಿ ಬಹಳ ಅದ್ಭುತವಾಗಿರುವುದು ಎಂದು ವರ್ಣಿಸಿದೆ.



॥ ಸಂಹಿತಾಪಾಠಃ ॥

ತಸ್ಮಾ ಅರ್ಷಂತಿ ದಿವ್ಯಾ ಅಸಶ್ಚತಃ ಸ ಸತ್ವಭಿಃ ಪ್ರಥಮೋ ಗೋಷು ಗಚ್ಛತಿ ।
ಅನಿಭೃಷ್ಟತವಿಷಿರ್ಹಂತ್ಯೋಜಸಾ ಯಂಯಂ ಯುಜಂ ಕೃಣುತೇ ಬ್ರಹ್ಮಣಸ್ಪತಿಃ ॥

॥ ಪದಪಾಠಃ ॥

ತಸ್ಮೈ । ಅರ್ಷಂತಿ । ದಿವ್ಯಾಃ । ಅಸಶ್ಚತಃ । ಸಃ । ಸತ್ವಽಭಿಃ । ಪ್ರಥಮಃ । ಗೋಷು । ಗಚ್ಛತಿ ।
ಅನಿಭೃಷ್ಟಽತವಿಷಿಃ । ಹಂತಿ । ಓಜಸಾ । ಯಂಽಯಂ । ಯುಜಂ । ಕೃಣುತೇ । ಬ್ರಹ್ಮಣಃ । ಪತಿಃ ॥ ೪ ॥

॥ ಸಾಯಣಭಾಷ್ಯಂ ॥

ತಸ್ಮೈ ಯಜಮಾನಾಯ ದಿವ್ಯಾ ದಿವಿ ಭವಾ ವೃಷ್ಟಿಲಕ್ಷಣಾ ಆಪೋಽಸಶ್ಚತೋಽಸಜ್ಯಮಾನಾ ಅನಿರುದ್ಧಾಃ ಸತ್ಯೋಽರ್ಷಂತಿ । ಗಚ್ಛಂತಿ ಪ್ರಾಪ್ನುವಂತಿ ॥ ಅರ್ತೇರ್ಲೇಟಿ ರೂಪಂ ॥ ತಥಾ ಸ ಯಜಮಾನಃ ಸತ್ವಭಿಃ । ಸತ್ವಾನಃ ಸಾಧಕಾಃ ಪರಿಚಾರಕಾಃ । ತೈಃ ಸಹಿತಃ ಪ್ರಥಮೋಽನ್ಯೇಭ್ಯೋ ಯಜಮಾನೇಭ್ಯಃ ಪೂರ್ವಭಾವೀ ಸನ್ ಗೋಷು ಗಚ್ಛತಿ । ಗವಾದಿಧನಂ ಪ್ರಾಪ್ನೋತೀತ್ಯರ್ಥಃ । ಕಿಂಚ ಅನಿಭೃಷ್ಟತವಿಷಿಃ । ತವಿಷೀತಿ ಬಲನಾಮ । ಅನಿಭೃಷ್ಟಾ ಪರೈರಬಾಧಿತಾ ತವಿಷೀ ಬಲಂ ಯಸ್ಯ ತಾದೃಶಃ ಸನ್ ಓಜಸಾ ಬಲೇನ ಹಂತಿ ಶತ್ರೂನ್ ॥

॥ ಪ್ರತಿಪದಾರ್ಥ ॥

**ಯಂಯಂ**—ಯಾವ ಯಾವ ಯಜಮಾನನನ್ನು । **ಬ್ರಹ್ಮಣಸ್ಪತಿಃ**—ಬ್ರಹ್ಮಣಸ್ಪತಿಯು । **ಯುಜಂ**—ಸಖನನ್ನಾಗಿ । **ಕೃಣುತೇ**—ಮಾಡಿಕೊಳ್ಳುತ್ತಾನೆಯೋ । **ತಸ್ಮೈ**—ಆ ಯಜಮಾನನಿಗೆ । **ದಿವ್ಯಾಃ**—ದ್ಯುಲೋಕದಿಂದ ಉತ್ಪನ್ನವಾಗುವ ವೃಷ್ಟಿಗಳು । **ಅಸಶ್ಚತಃ**—ತಡೆಯಿಲ್ಲದೆ । **ಅರ್ಷಂತಿ**—ಸುರಿಯುತ್ತವೆ । **ಸಃ**—ಅವನು । **ಸತ್ವಭಿಃ**—ತನ್ನ ಪರಿಚಾರಕರೊಡನೆ । **ಪ್ರಥಮಃ**—ಇತರ ಯಜಮಾನರಿಗಿಂತಲೂ ಮೊದಲೇ । **ಗೋಷು**—ಗೋರೂಪವಾದ ಧನವನ್ನು । **ಗಚ್ಛತಿ**—ಪಡೆಯುತ್ತಾನೆ । **ಅನಿಭೃಷ್ಟತವಿಷಿಃ**—ಇತರರಿಂದ ಸೋಲಿಸಲಾಗದ ಶಕ್ತಿಯುಳ್ಳವನಾಗಿ । **ಓಜಸಾ**—ತನ್ನ ವೀರ್ಯದಿಂದ । **ಹಂತಿ**—(ಶತ್ರುಗಳನ್ನು) ನಾಶ ಮಾಡುತ್ತಾನೆ.

॥ ಭಾವಾರ್ಥ ॥

ಯಾವ ಯಾವ ಯಜಮಾನನನ್ನು ಬ್ರಹ್ಮಣಸ್ಪತಿಯು ತನ್ನ ಸಖನನ್ನಾಗಿ ಮಾಡಿಕೊಳ್ಳುತ್ತಾನೆಯೋ, ಆ ಯಜಮಾನನಿಗೆ ದ್ಯುಲೋಕದಿಂದ ಉತ್ಪನ್ನವಾಗುವ ವೃಷ್ಟಿಗಳು ತಡೆಯಿಲ್ಲದೇ ಸುರಿಯುತ್ತವೆ. ಅವನು ತನ್ನ ಪರಿಚಾರಕರೊಡನೆ ಇತರ ಯಜಮಾನರಿಗಿಂತಲೂ ಮೊದಲೇ ಗೋರೂಪವಾದ ಧನವನ್ನು ಪಡೆಯುತ್ತಾನೆ. ಇತರರಿಂದ ಸೋಲಿಸಲಾಗದ ಶಕ್ತಿಯುಳ್ಳವನಾಗಿ ತನ್ನ ವೀರ್ಯದಿಂದ ಶತ್ರುಗಳನ್ನು ನಾಶಮಾಡುತ್ತಾನೆ.

English Translation.

For him, the unobstructed rains of heaven descend : first among the devout, he acquires (wealth) in cattle : of irresistible vigour, he destroys his enemies by his strength, whom Brahmanaspati makes his associate.

॥ ವಿಶೇಷವಿಷಯುಗಳು ॥

ಬ್ರಹ್ಮಣಸ್ಪತಿಯನ್ನು ಹವಿರಾದಿಗಳಿಂದ ತೃಪ್ತಿಗೊಳಿಸುವ ಯಜಮಾನರಿಗೆ **ದಿವ್ಯಾಃ ಅಸಶ್ಚತಃ ಅರ್ಷಂತಿ** ಅಂತರಿಕ್ಷದಲ್ಲಿ ಶೇಖರಿತವಾಗಿರುವ ಉತ್ತಮವಾದ ವೃಷ್ಟಿಯಿಂದ ಉತ್ಪನ್ನವಾದ ಉದಕಗಳು ಅವರ ಇಚ್ಛಾನುಸಾರವಾಗಿ ದೊರಕುವುವು. ಮತ್ತು **ಸತ್ವಭಿಃ ಪ್ರಥಮಃ:—ಪರಿಚಾರಕೈಃ ಸಹಿತಃ ಅನ್ಯೇಭ್ಯಃ ಯಜಮಾನೇಭ್ಯಃ ಪೂರ್ವಭಾವೀ ಗೋಷು ಗಚ್ಛತಿ**—ಪರಿಚಾರಕರಿಂದ ಕೂಡಿರುವ ಯಜಮಾನನು ಗವಾದಿ ಧನಗಳನ್ನು ಪಡೆಯುವನು. ಎಂದೂ, **ಅನಿಭೃಷ್ಟತವಿಷಿಃ ಓಜಸಾ ಬಲೇನ ಹಂತಿ ಪರೈರಬಾಧಿತಾ ತವಿಷೀ ಯಸ್ಯ ತಾದೃಶಃ ಬಲೇನ ಶತ್ರೂನ್ ಹಂತಿ** । ಬ್ರಹ್ಮಣಸ್ಪತಿಯ ಅನುಗ್ರಹಕ್ಕೆ ಪಾತ್ರನಾದ ಯಜಮಾನನು ಇತರರ ಆಕ್ರಮಣಕ್ಕೆ ಸಿಕ್ಕದಿರುವ ಮತ್ತು ಶತ್ರುಗಳನ್ನು ನಿಗ್ರಹಿಸಲು ಅನುಕೂಲವಾದ ಪ್ರಭೂತವಾದ ಬಲದಿಂದ ತನ್ನ ಶತ್ರುಗಳನ್ನು ನಿಗ್ರಹಿಸುವ ಸಾಮರ್ಥ್ಯವುಳ್ಳವನಾಗುವನು ಎಂದು ವಿವರಿಸಿದೆ.

**ದಿವ್ಯ** ಶಬ್ದವು ಯಾಸ್ಕರಿಂದ ದಿವಿಜ ಎಂದು ಅರ್ಥ ಮಾಡಿ (ನಿ. ೭–೧೮) ವಿವೃತವಾಗಿದೆ. **ತವಿಷೀ** ಎಂಬ ಪದವು (ನಿ. ೩–೯) ಬಲನಾಮುಗಳಲ್ಲಿ ಉಕ್ತವಾಗಿದೆ.

**ಓಜಃ** ಎಂಬ ಪದವು ಬಲನಾಮುಗಳಲ್ಲಿಯೂ (ನಿ ೩–೯) ಉದಕನಾಮುಗಳಲ್ಲಿಯೂ (ನಿ. ೨–೨೪) ಉಕ್ತವಾಗಿ, **ಓಜ ಓಜತೇರ್ವಾ ಉಬ್ಜತೇರ್ವಾ** (ನಿ. ೬-೮) ಎಂದು ವ್ಯಾಖ್ಯಾತವಾಗಿರುತ್ತದೆ.

॥ ಸಂಹಿತಾಪಾಠಃ

**ತಸ್ಮಾ ಇದ್ವಿಶ್ವೇ ಧುನಯಂತ ಸಿಂಧವೋಽಚ್ಛಿದ್ರಾ ಶರ್ಮ ದಧಿರೇ ಪುರೂಣಿ ।**

**ದೇವಾನಾಂ ಸುಮ್ನೇ ಸುಭಗಃ ಸ ಏಧತೇ ಯಂಯಂ ಯುಜಂ ಕೃಣುತೇ ಬ್ರಹ್ಮಣಸ್ಪತಿಃ ॥ ೫ ॥**

॥ ಪದಪಾಠಃ ॥

ತಸ್ಮೈ । ಇತ್ । ವಿಶ್ವೇ । ಧುನಯಂತ । ಸಿಂಧವಃ । ಅಚ್ಛಿದ್ರಾ । ಶರ್ಮ । ದಧಿರೇ । ಪುರೂಣಿ ।

ದೇವಾನಾಂ । ಸುಮ್ನೇ । ಸುಽಭಗಃ । ಸಃ । ಏಧತೇ । ಯಂಽಯಂ । ಯುಜಂ । ಕೃಣುತೇ । ಬ್ರಹ್ಮಣಃ ।

ಪತಿಃ ॥ ೫ ॥

॥ ಸಾಯಣಭಾಷ್ಯಂ ॥

ತಸ್ಮಾ ಇತ್ ತಸ್ಮಾ ಏವ ಯಜಮಾನಾಯ ವಿಶ್ವೇ ಸಿಂಧವಃ ಸರ್ವಾಃ ಸ್ಯಂದನಶೀಲಾ ನದ್ಯೋ ಧುನಯಂತ । ಚಲಯಂತಿ । ಏತದಭೀಷ್ಟಫಲಸಿದ್ಧ್ಯರ್ಥಂ ಪ್ರವಹಂತೀತ್ಯರ್ಥಃ । ತಥಾ ಅಚ್ಛಿದ್ರಾ ಅಚ್ಛಿದ್ರಾಣಿ ಛಿದ್ರರಹಿತಾನಿ ಸಂತತಾನಿ ಪುರೂಣಿ ಬಹೂನಿ ಶರ್ಮ ಶರ್ಮಾಣಿ ಸುಖಾನಿ ದಧಿರೇ । ತಸ್ಮಾ ಏವ ಧಾರ್ಯಂತೇ । ಯದ್ವಾ ಶರ್ಮೇತಿ ಗೃಹನಾಮ । ಛಿದ್ರರಹಿತಾನಿ ಬಹೂನಿ ಸದನಾನಿ ಧಾರ್ಯಂತೇ । ಸುಭಗಃ ಶೋಭನಧನೋ ದೇವಾನಾಂ ಸುಮ್ನೇ ದೇವೈಃ ಪ್ರತ್ತೇ ಸುಖೇ ವರ್ತಮಾನಃ ಸನ್ ಏಧತೇ । ವರ್ಧತೇ । ಶಿಷ್ಟಂ ಸ್ಪಷ್ಟಂ ॥

॥ ಪ್ರತಿಪದಾರ್ಥ ॥

**ಯಂಯಂ**—ಯಾವ ಯಾವ ಯಜಮಾನನನ್ನು । **ಬ್ರಹ್ಮಣಸ್ಪತಿಃ**—ಬ್ರಹ್ಮಣಸ್ಪತಿಯು । **ಯುಜಂ**—ಸಖನನ್ನಾಗಿ । **ಕೃಣುತೇ**—ಮಾಡಿಕೊಳ್ಳುತ್ತಾನೆಯೋ । **ತಸ್ಮಾ ಇತ್**—ಅವನಿಗೋಸ್ಕರವೇ । **ವಿಶ್ವೇ ಸಿಂಧವಃ**—ಸಮಸ್ತವಾದ ನದಿಗಳೂ । **ಧುನಯಂತ**—ಪ್ರವಹಿಸುತ್ತವೆ । **ಅಚ್ಛಿದ್ರಾ**—ಛಿದ್ರವಿಲ್ಲದೇ ಶಾಶ್ವತವಾಗಿರುವುದೂ । **ಪುರೂಣಿ**—ಪ್ರಭೂತವಾದುದೂ ಆದ । **ಶರ್ಮ**—ಸುಖಗಳು (ಅಥವಾ ಗೃಹಗಳು) । **ದಧಿರೇ**—(ಅವನಿಗಾಗಿಯೇ) ಧೃತವಾಗಿವೆ । **ಸಃ**—ಆ ಯಜಮಾನನು । **ಸುಭಗಃ**—ಶ್ರೇಷ್ಠವಾದ ಧನವುಳ್ಳವನಾಗಿ । **ದೇವಾನಾಂ**—ದೇವತೆಗಳಿಂದ ದತ್ತವಾದ । **ಸುಮ್ನೇ**—ಸುಖದಲ್ಲಿರುತ್ತಾ । **ಏಧತೇ**—ವೃದ್ಧಿಯನ್ನನುಭವಿಸುತ್ತಾನೆ.

॥ ಭಾವಾರ್ಥ ॥

ಯಾವ ಯಾವ ಯಜಮಾನನನ್ನು ಬ್ರಹ್ಮಣಸ್ಪತಿಯು ಸಖನನ್ನಾಗಿ ಮಾಡಿಕೊಳ್ಳುತ್ತಾನೆಯೋ, ಅವನಿಗೋಸ್ಕರವೇ ಸಮಸ್ತ ನದಿಗಳೂ ಪ್ರವಹಿಸುತ್ತವೆ. ಛಿದ್ರವಿಲ್ಲದೇ ಶಾಶ್ವತವಾಗಿರುವುವೂ, ಪ್ರಭೂತವಾದವೂ ಆದ ಸುಖಗಳು (ಗೃಹಗಳು) ಅವನಿಗಾಗಿಯೇ ಧೃತವಾಗಿವೆ. ಆ ಯಜಮಾನನು ಶ್ರೇಷ್ಠವಾದ ಧನವುಳ್ಳವನಾಗಿ ದೇವತೆಗಳಿಂದ ದತ್ತವಾದ ಸುಖದಲ್ಲಿರುತ್ತಾ ವೃದ್ಧಿಯನ್ನನುಭವಿಸುತ್ತಾನೆ.

Englis Translation.

Verily, for him all rivers flow : him do uninterrupted and numerous pleasures await : blessed with the felicity of the Gods he ever prospers, whom Brahmanaspati makes his associate.

॥ ವಿಶೇಷವಿಷಯಗಳು ॥

**ವಿಶ್ವೇ ಸಿಂಧವಃ ತಸ್ಮಾ ಇತ್ ಧುನಯಂತೇ—ಸರ್ವಾಃ ಸ್ಯಂದನಶೀಲಾ ನದ್ಯಃ ಏತದಭೀಷ್ಟಫಲಸಿದ್ಧ್ಯರ್ಥಂ ಪ್ರವಹಂತಿ ।** ಬ್ರಹ್ಮಣಸ್ಪತಿಯನ್ನು ತೃಪ್ತಿಗೊಳಿಸಿರುವ ಯಜಮಾನನಿಗೆ ಪ್ರವಾಹಗಳಿಂದ ಕೂಡಿರುವ ನದಿಗಳೆಲ್ಲವೂ ಬೇಕಾದ ಇಷ್ಟಾರ್ಥಗಳನ್ನು ಅನುಗ್ರಹಿಸುವುದಕ್ಕಾಗಿಯೇ ಪ್ರವಹಿಸುತ್ತವೆ ಎಂದು ಅಸಾಧಾರಣವಾದ ಬ್ರಹ್ಮಣಸ್ಪತಿಯ ಮಹಿಮೆಯು ಉಕ್ತವಾಗಿದೆ.

**ಅಚ್ಛಿದ್ರಾಣಿ ಪುರೂಣಿ ಶರ್ಮ ದಧಿರೇ**—ಅಚ್ಛಿದ್ರಾಣಿ ಎಂದರೆ, ಎಡಬಿಡದೆ ಇರುವ (ವಿಚ್ಛಿತ್ತಿ ಇಲ್ಲದೆ ಅನುಸ್ಯೂತವಾಗಿರುವ) ಎಂದು ಅರ್ಥ. ಶರ್ಮಪದಕ್ಕೆ ಗೃಹವೆಂದೂ, ಸುಖವೆಂದೂ (ನಿ. ೩–೧೩) ಉಕ್ತವಾಗಿದೆ. ಮಧ್ಯಕಾಲದಲ್ಲಿ ದುಃಖಾದಿಗಳಿಂದ ಮಿಶ್ರವಾಗದಿರುವ ಪ್ರಭೂತವಾದ ಸುಖವನ್ನೂ, **ಛಿದ್ರರಹಿತಾನಿ ಬಹೂನಿ ಸದನಾನಿ** ದೃಢವಾಗಿರುವ ಅನೇಕ ಮನೆಗಳನ್ನೂ ಯಜಮಾನರು ಹೊಂದುವರು ಎಂದೂ ವರ್ಣಿಸಿದೆ.

ಮತ್ತೂ ಬ್ರಹ್ಮಣಸ್ಪತಿಯ ಅನುಗ್ರಹಕ್ಕೆ ಪಾತ್ರನಾದ ಯಜಮಾನನು—**ಸುಭಗಃ ದೇವಾನಾಂ ಸುಮ್ನೇ ಏಧತೇ—ಶೋಭನಧನಃ ದೇವೈಃ ಪ್ರತ್ತೇ ಸುಖೇ ವರ್ತಮಾನಃ ವರ್ಧತೇ**—ಉತ್ತಮವಾದ ಧನವನ್ನು ಹೊಂದಿ, ದೇವತೆಗಳಿಂದ ಅನುಗ್ರಹೀತವಾದ ಉತ್ತಮವಾದ ಸುಖದಿಂದ ಇರುವವನಾಗಿ ವೃದ್ಧಿಯನ್ನು ಹೊಂದುವನು ಎಂದು ವರ್ಣಿಸಿದೆ. ಸುಮ್ನ ಶಬ್ದವು (ನಿ. ೩–೧೩) ಸುಖನಾಮಗಳಲ್ಲಿ ಪಠಿತವಾಗಿದೆ.



# ಇಪ್ಪತ್ತಾರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಋಜುರಿತಿ ಚತುರ್ಋಚಂ ಚತುರ್ಥಂ ಸೂಕ್ತಂ ಗೃತ್ಸಮದಸ್ಯಾರ್ಷಂ ಜಾಗತಂ ಬ್ರಾಹ್ಮಣಸ್ಪತ್ಯಂ । ತಥಾ ಚಾನುಕ್ರಾಂತಂ । ಋಜುಶ್ಚತುಷ್ಕಮಿತಿ । ಗತೋ ವಿನಿಯೋಗಃ ॥**

ಅನುವಾದವು—**ಋಜುರಿತ್** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು ; ಬ್ರಹ್ಮಣಸ್ಪತಿಯು ದೇವತೆಯು ; ಜಗತೀ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಋಜುಶ್ಚತುಷ್ಕಮಿತಿ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ ಎಂದರೆ ಹಿಂದಿನ ಸೂಕ್ತದಂತೆಯೇ.

## ಸೂಕ್ತ—೨೬

ಮಂಡಲ—೨ ॥ ಅನುವಾಕ—೩ ॥ ಸೂಕ್ತ—೨೬ ॥
ಅಷ್ಟಕ—೨ ॥ ಅಧ್ಯಾಯ—೭ ॥ ವರ್ಗ—೫ ॥

॥ **ಸೂಕ್ತದಲ್ಲಿರುವ ಋಕ್ಸಂಖ್ಯೆ—೪** ॥
॥ **ಋಷಿಃ— ಗೃತ್ಸಮದಃ** ॥
॥ **ದೇವತಾ— ಬ್ರಹ್ಮಣಸ್ಪತಿಃ** ॥
॥ **ಛಂದಃ— ಜಗತೀ** ॥

॥ ಸಂಹಿತಾಪಾಠಃ ॥

ಋಜುರಿಚ್ಛಂಸೋ ವನವದ್ವನುಷ್ಯತೋ ದೇವಯನ್ನಿದದೇವಯಂತಮಭ್ಯಸತ್ ।
ಸುಪ್ರಾವೀರಿದ್ವನವತ್ಪೃತ್ಸು ದುಷ್ಟರಂ ಯಜ್ವೇದಯಜ್ಯೋರ್ವಿ ಭಜಾತಿ ಭೋಜನಂ ॥ ೧ ॥

॥ ಪದಪಾಠಃ ॥

ಋಜುಃ । ಇತ್ । ಶಂಸಃ । ವನವತ್ । ವನುಷ್ಯತಃ । ದೇವಽಯನ್ । ಇತ್ । ಅದೇವಽಯಂತಂ । ಅಭಿ । ಅಸತ್ ।
ಸುಪ್ರಽಅವೀಃ । ಇತ್ । ವನವತ್ । ಪೃತ್ಽಸು । ದುಸ್ತರಂ । ಯಜ್ವಾ । ಇತ್ । ಅಯಜ್ಯೋಃ । ವಿ । ಭಜಾತಿ । ಭೋಜನಂ ॥ ೧ ॥

॥ ಸಾಯಣಭಾಷ್ಯಂ ॥

ಋಜುರಿತ್ ಆರ್ಜವಯುಕ್ತ ಏವ । ಯದ್ವಾ ಋಜಂತಿಃ ಪ್ರಸಾಧನಕರ್ಮಾ । ಸ್ತೋತ್ರಾಣಾಂ ಪ್ರಸಾಧಕ ಏವ ಶಂಸೋ ಬ್ರಹ್ಮಣಸ್ಪತೇಃ ಸ್ತೋತಾ ವನುಷ್ಯತೋ ಹಿಂಸತಃ ಶತ್ರೂನ್ ವನವತ್ । ವನುಯಾತ್ ಹಿಂಸ್ಯಾತ್ ॥ ವನೋತೇರ್ಹಂತಿಕರ್ಮಣ ಏತದ್ರೂಪಂ ॥ ತಥಾ ದೇವಯನ್ನಿತ್ ದೇವಂ ದಾನಾದಿಗುಣಯುಕ್ತಂ ಬ್ರಹ್ಮಣಸ್ಪತಿಮಾತ್ಮನ ಇಚ್ಛನ್ನೇವ ಅದೇವಯಂತಂ ತದ್ವಿಪರೀತಂ ಪುರುಷಮಭ್ಯಸತ್ । ಅಭಿಭವೇತ್ ॥ ಅಸ್ತೇರ್ಲೇಟ್ಯೇತದ್ರೂಪಂ ॥ ತಥಾ ಸುಪ್ರಾವೀರಿತ್ ॥ ಅವತೇಸ್ತ್ಯ್ಪೃತ್ಯರ್ಥಾದೌಣಾದಿಕ ಈಕಾರಪ್ರತ್ಯಯಃ ॥ ಸುಷ್ಠು ಪ್ರಕರ್ಷೇಣ ಬ್ರಹ್ಮಣಸ್ಪತೇಸ್ತರ್ಪಯಿತೈವ ಪೃತ್ಸು ಪೃತನಾಸು ಸಂಗ್ರಾಮೇಷು ದುಸ್ತರಂ ತರೀತುಮಶಕ್ಯಂ ವನವತ್ । ಹಿಂಸ್ಯಾತ್ । ತಥಾ ಯಜ್ವೇತ್ ಬ್ರಹ್ಮಣಸ್ಪತಿಂ ಹವಿಷೇಷ್ಟವಾನೇವ ಅಯಜ್ಯೋರಯಜ್ವನೋ ಭೋಜನಂ ಭೋಗಸಾಧನಂ ವಿಭಜಾತಿ । ವಿಶೇಷೇಣ ಭಜೇತೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಋಜುರಿತ್**— ಋಜುಬುದ್ಧಿಯುಳ್ಳವನೇ ಆದ । **ಶಂಸಃ**— (ಬ್ರಹ್ಮಣಸ್ಪತಿಯ) ಸ್ತುತಿಕರ್ತನು । **ವನುಷ್ಯತಃ**— ಹಿಂಸಕರಾದ ಶತ್ರುಗಳನ್ನು । **ವನವತ್**— ಹಿಂಸಿಸಲಿ । **ದೇವಯನ್ನಿತ್**— ದೇವಾತ್ಮನಾದ ಬ್ರಹ್ಮಣಸ್ಪತಿಯ ಅನುಗ್ರಹವನ್ನಿಚ್ಛಿಸುತ್ತಲೇ । **ಅದೇವಯಂತಂ**—ದೈವಭಕ್ತಿಯಿಲ್ಲದ ಪುರುಷನನ್ನು । **ಅಭ್ಯಸತ್**—ಸೋಲಿಸಲಿ । **ಸುಪ್ರಾವೀರಿತ್**—(ಬ್ರಹ್ಮಣಸ್ಪತಿಯನ್ನು) ಪೂಜೆಯಿಂದ ತೃಪ್ತಿಪಡಿಸುತ್ತಲೇ । **ಪೃತ್ಸು**— ಸಂಗ್ರಾಮ

ಗಳಲ್ಲಿ | **ದುಸ್ತರಂ**--(ಇತರರಿಂದ) ಸೋಲಿಸಲಸಾಧ್ಯವಾದ ಶತ್ರುಗಳನ್ನು | **ವನವತ್**—ಹಿಂಸಿಸಲಿ | **ಯಜ್ವೇತ್**–(ಬ್ರಹ್ಮಣಸ್ಪತಿಯನ್ನು) ಹವಿಸ್ಸಿನಿಂದ ಪೂಜಿಸುತ್ತಲೇ | **ಅಯುಜ್ಯೋಃ** — ಯಾಗರಹಿತನಾದ ಪುರುಷನ | **ಭೋಜನಂ**-- ಭೋಗಸಾಧನವಾದ ಸಂಪತ್ತನ್ನು | **ವಿ ಭಜಾತಿ**—ಪೂರ್ಣವಾಗಿ ಪಡೆದುಕೊಳ್ಳಲಿ.

॥ ಭಾವಾರ್ಥ ॥

ಋಜುಬುದ್ಧಿಯಿಂದ ಬ್ರಹ್ಮಣಸ್ಪತಿಯನ್ನು ಸ್ತುತಿಸುವವನು ಹಿಂಸಕರಾದ ಶತ್ರುಗಳನ್ನು ಹಿಂಸಿಸಲಿ. ದೇವತಾತ್ಮನಾದ ಬ್ರಹ್ಮಣಸ್ಪತಿಯ ಅನುಗ್ರಹವನ್ನಿಚ್ಛಿಸುತ್ತಲೇ ದೈವಭಕ್ತಿಯಿಲ್ಲದ ಪುರುಷರನ್ನು ಸೋಲಿಸಲಿ. ಬ್ರಹ್ಮಣ ಸ್ಪತಿಯನ್ನು ಪೂಜೆಯಿಂದ ತೃಪ್ತಿಪಡಿಸುತ್ತಲೇ ಸಂಗ್ರಾಮಗಳಲ್ಲಿ ಇತರರಿಂದ ಸೋಲಿಸಲಸಾಧ್ಯವಾದ ಶತ್ರುವನ್ನು ಹಿಂಸಿಸಲಿ. ಬ್ರಹ್ಮಣಸ್ಪತಿಯನ್ನು ಹವಿಸ್ಸಿನಿಂದ ಪೂಜಿಸುತ್ತಲೇ, ಯಾಗರಹಿತನಾದ ಪುರುಷನ ಭೋಗಸಾಧನವಾದ ಸಂಪತ್ತನ್ನು ಪೂರ್ಣವಾಗಿ ಪಡೆದುಕೊಳ್ಳಲಿ.

## English Translation

May the sincere praiser (of Brahmanaspati) verily overcome (his) enemies; may the worshipper of the gods overcome him assuredly who does not reverence them: may the propitiator (of Brahmanaspati) overcome him who is difficult to be overcome in battles: may he who offers sacrifice appropriate the food of him who does not sacrifice

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಋಜುರಿತ್, ದೇವಯನ್ನಿತ್, ಸುಪ್ರಾವೀರಿತ್, ಯಜ್ವೇತ್ ಎಂಬ ಪದಗಳಲ್ಲಿ ಇತ್ ಎಂಬ ಪದವು ಪಠಿತವಾಗಿದೆ. ಈ ಇತ್ ಎಂಬ ಪದಕ್ಕೆ ಯಾಸ್ಕರು **ಚಿದಿತ್ಯೇಷೋಽನೇಕಕರ್ಮಾ** (ನಿ. ೧-೪) ಎಂದು ಅನೇಕ ವಿಧವಾದ ಅರ್ಥಗಳಲ್ಲಿ (ಚಿತ್) ಪ್ರಯೋಗವಿರುವುದನ್ನು ಉದಾಹರಿಸಿದ್ದಾರೆ. ಇಲ್ಲಿ ನಾಲ್ಕು ಕಡೆಗಳಲ್ಲಿಯೂ ಅವಧಾರಣಾರ್ಥದಲ್ಲಿ ಈ ಪದವು ಪ್ರಯುಕ್ತವಾಗಿದೆ ಎಂದು ಅರ್ಥವನ್ನು ವಿವರಿಸಿದ್ದಾರೆ.

ಮೊದಲನೆಯದಾದ **ಋಜುರಿತ್** ಎಂಬ ಪದಕ್ಕೆ **ಆರ್ಜವಯುಕ್ತ ಏವ | ಯದ್ವಾ ಋಂಜತಿ ಪ್ರಸಾಧನಕರ್ಮಾ | ಸ್ತೋತ್ರಾಣಾಂ ಪ್ರಸಾಧಕ ಏವ**- ಬ್ರಹ್ಮಣಸ್ಪತಿಯನ್ನು ಆರಾಧಿಸುವ ಯಜಮಾನನು ಸರಳವಾದ ಮಾರ್ಗದಿಂದ ಕೂಡಿರುವವನಾಗಿಯೇ ಅಥವಾ ಸ್ತುತಿಗಳಿಂದ (ಅನುಕೂಲ) ಪ್ರಸನ್ನನಾಗಿ ಮಾಡಿ ಕೊಳ್ಳುವವನಾಗಿಯೇ ಇರುವನೆಂದೂ ಅರ್ಥವನ್ನು ವರ್ಣಿಸಿದ್ದಾರೆ.

**ದೇವಯನ್ನಿತ್-ದಾನಾದಿಗುಣಯುಕ್ತಂ ಬ್ರಹ್ಮಣಸ್ಪತಿಂ ಆತ್ಮನ ಇಚ್ಛನ್ನೇನ|** ತನ್ನನ್ನು ಸ್ತೋತ್ರಾದಿ ಗಳಿಂದ ಪೂಜಿಸುವವರಿಗೆ ಇಷ್ಟಾರ್ಥಗಳನ್ನು ಅನುಗ್ರಹಿಸುವುದೇ ಮೊದಲಾದ ಗುಣಗಳಿಂದ ಕೂಡಿದ ಬ್ರಹ್ಮಣಸ್ಪತಿ ಯನ್ನು ಯಜಮಾನನು ತನ್ನ ಪ್ರಭುವನ್ನಾಗಿ ಅಪೇಕ್ಷಿಸುವವನಾಗಿಯೇ ಇರುವನೆಂದು ಅರ್ಥವು ವಿವೃತವಾಗಿದೆ.

**ಸುಪ್ರಾವೀತ್— ಸುಷ್ಠು ಪ್ರಕರ್ಷೇಣ ಬ್ರಹ್ಮಣಸ್ಪತೇಸ್ತರ್ಪಯಿತ್ರೈವ|** ಬ್ರಹ್ಮಣಸ್ಪತಿಯನ್ನು ಅತಿಯಶವಾಗಿ ತೃಪ್ತಿಗೊಳಿಸುವವನಾಗಿಯೇ ಇರುವನು ಎಂದು ಯಜಮಾನನ ಗುಣವನ್ನು ವರ್ಣಿಸಿದೆ.

**ಯಜ್ಞೇತ್— ಬ್ರಹ್ಮಣಸ್ಪತಿಂ ಹವಿಷಾ ಇಷ್ಟವಾನೇವ |** ಬ್ರಹ್ಮಣಸ್ಪತಿಯನ್ನು ಹವಿಸ್ಸುಗಳಿಂದ ಯಾಗಗಳಲ್ಲಿ ಸಂತೋಷಪಡಿಸುವವನಾಗಿಯೇ ಇರುವನು ಎಂದು ಯಜಮಾನನ ಗುಣಗಳನ್ನು ಈ ನಾಲ್ಕು ಪದಗಳಿಂದ ವಿವರಿಸಿ, ಈ ಗುಣಗಳಿಂದ ವರ್ಜಿತರಾದ **ಅದೇವಯುಂತಂ**— ಬ್ರಹ್ಮಣಸ್ಪತಿಯನ್ನು ಪೂಜಿಸದಿರುವವರನ್ನೂ ಹಿಂಸಕರಾದ ಶತ್ರುಗಳನ್ನೂ ಯಜಮಾನನು ತಿರಸ್ಕರಿಸುವನು ಎಂದೂ, **ಅಯಜ್ವನಃ ಭೋಗಸಾಧನಂ ವಿಶೇಷೇಣ ಭಜತೇ** ಯಜ್ಞಮಾಡದಿರುವವನ ಸುಖಸಾಧನಗಳನ್ನು ಹೊಂದುವನೆಂದೂ ವಿವರಿಸಿದೆ.



ಸಂಹಿತಾಪಾಠಃ

## ಯಜಸ್ವ ವೀರ ಪ್ರ ವಿಹಿ ಮನಾಯತೋ ಭದ್ರಂ ಮನಃ ಕೃಣುಷ್ವ ವೃತ್ರತೂರ್ಯೇ|
## ಹವಿಷ್ಕೃಣುಷ್ವ ಸುಭಗೋ ಯಥಾಸಸಿ ಬ್ರಹ್ಮಣಸ್ಪತೇರವ ಆ ವೃಣೀಮಹೇ ॥ ೨ ॥

॥ ಪದಪಾಠಃ

ಯಜಸ್ವ | ವೀರ | ಪ್ರ | ವಿಹಿ | ಮನಾಯತಃ | ಭದ್ರಂ | ಮನಃ | ಕೃಣುಷ್ವ | ವೃತ್ರಽತೂರ್ಯೇ |
ಹವಿಃ | ಕೃಣುಷ್ವ | ಸುಽಭಗಃ | ಯಥಾ | ಅಸಸಿ | ಬ್ರಹ್ಮಣಃ | ಪತೇಃ | ಅವಃ | ಆ | ವೃಣೀಮಹೇ ॥ ೨

॥ ಸಾಯಣಭಾಷ್ಯಂ ॥

**ಋಷಿರಾತ್ಮೀಯಂ ಪುರುಷಂ ಶಾಸ್ತಿ | ಹೇ ವೀರ ವಿಶೇಷೇಣ ಸ್ತುತೀನಾಂ ಪ್ರೇರಕ ಸಖೇ ಯಜಸ್ವ | ಬ್ರಹ್ಮಣಸ್ಪತಿಂ ಸ್ತುತ್ಯಾ ಪೂಜಯ | ಮನಾಯತೋ ಮನ ಏವ ಶೀಘ್ರಂ ಪ್ರವರ್ತಮಾನಾನ್ ಹಿಂಸಕಾನ್ ಯದ್ವಾ ಅಭಿಮನ್ಯಮಾನಾನ್ ಶತ್ರೂನ್ಪ್ರತಿ ಪ್ರವಿಹಿ | ಪ್ರಕರ್ಷೇಣ ಯುದ್ಧಾರ್ಥಂ ಗಚ್ಛ ॥ ವೀ ಗತ್ಯಾದಿಷು | ಛಾಂದಸೋ ಹ್ರಸ್ವಃ ॥ ವೃತ್ರತೂರ್ಯೇ ವೃತ್ರಾಣಾಮಾವಾರಕಾಣಾಂ ಶತ್ರೂಣಾಂ ಹಿಂಸಾಹೇತುಭೂತೇ ಸಂಗ್ರಾಮೇ ಭದ್ರಂ ಕಲ್ಯಾಣಂ ಧಾರ್ಷ್ಟ್ಯೋಪೇತಂ ಮನಃ ಕೃಣುಷ್ವ | ಕುರುಷ್ವ | ಬ್ರಹ್ಮಣಸ್ಪತೇರನುಗ್ರಹಾತ್ತವೈವ ಜಯೋ ಭವಿಷ್ಯತಿ | ತಥಾ ಬ್ರಹ್ಮಣಸ್ಪತಯೇ ಹವಿಶ್ಚರುಪುರೋಡಾಶಾದಿಕಂ ಕೃಣುಷ್ವ | ಕುರು | ಯಥಾ ತ್ವಂ ಸುಭಗಃ ಶೋಭನಧನೋಽಸಸಿ | ಭವೇಃ ॥ ಅಸ್ತೇರ್ಲೇಟ್ಯಡಾಗಮಃ ॥ ಬ್ರಹ್ಮಣಸ್ಪತೇರ್ಯೋಗೇನ ತ್ವಂ ಶೋಭನಧನೋ ಭವಿಷ್ಯಸೀತಿ ಯಾವತ್ | ಅಪಿ ಚ ವಯಂ ಬ್ರಹ್ಮಣಸ್ಪತೇರವೋ ರಕ್ಷಣಮಾಭಿಮುಖ್ಯೇನ ವೃಣೀಮಹೇ | ಪ್ರಾರ್ಥಯಾಮಹೇ ॥**

॥ ಪ್ರತಿಪದಾರ್ಥ ॥

**ವೀರ**—ವಿಶೇಷ ರೀತಿಯಲ್ಲಿ ಸ್ತುತಿಯನ್ನು ಪ್ರೇರಿಸುವ ಸಖನೇ । **ಯಜಸ್ವ**—(ಬ್ರಹ್ಮಣಸ್ಪತಿಗೆ) ಪೂಜೆಯನ್ನರ್ಪಿಸು । **ಮನಾಯತಃ**—ಶೀಘ್ರವಾಗಿ ಮುನ್ನುಗ್ಗಿ ಬರುವ ಶತ್ರುಗಳನ್ನು (ಸೋಲಿಸಲು) । **ಪ್ರ ಇಹಿ**—ಯುದ್ಧಾಭಿಮುಖವಾಗಿ ಹೊರಡು । **ವೃತ್ರತೂರ್ಯೇ**—ವೃತ್ರಾದಿಗಳನ್ನು ಹಿಂಸಿಸುವ ಯುದ್ಧದಲ್ಲಿ । **ಭದ್ರಂ**—ದೃಢವಾಗಿ ನೆಲೆಸಿ ಕಲ್ಯಾಣವನ್ನುಂಟುಮಾಡುವ । **ಮನಃ**—ಮನಸ್ಸನ್ನು । **ಕೃಣುಷ್ವ**—ಮಾಡು । **ಯಥಾ**— ಯಾವ ವಿಧದಿಂದ । **ಸುಭಗಃ**—ಶ್ರೇಷ್ಠವಾದ ಧನವುಳ್ಳವನಾಗಿ । **ಅಸಸಿ**—ಆಗುತ್ತೀಯೋ (ಆ ರೀತಿ) । **ಹವಿಃ**—ಚರುಪುರೋಡಾಶಾದಿಗಳನ್ನು । **ಕೃಣುಷ್ವ**—(ಬ್ರಹ್ಮಣಸ್ಪತಿಗಾಗಿ) ಸಿದ್ಧಪಡಿಸು । **(ವಯಂ**—ನಾವೂ ಸಹ) । **ಬ್ರಹ್ಮಣಸ್ಪತೇಃ**—ಬ್ರಹ್ಮಣಸ್ಪತಿಯ । **ಅವಃ**—ರಕ್ಷಣವನ್ನು । **ಆ**—ಎದುರುಗೊಳ್ಳುವವರಾಗಿ । **ವೃಣೀಮಹೇ**—ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ವಿಶೇಷ ರೀತಿಯಲ್ಲಿ ಸ್ತುತಿಯನ್ನು ಪ್ರೇರಿಸುವ ಎಲೈ ಯಜಮಾನನೇ, ಬ್ರಹ್ಮಣಸ್ಪತಿಗೆ ಪೂಜೆಯನ್ನರ್ಪಿಸು. ಈನಗೆ ತೊಂದರೆಯನ್ನೇ ಮನಸ್ಸಿನಲ್ಲಿ ಕೋರುತ್ತಾ ಶೀಘ್ರವಾಗಿ ಮುನ್ನುಗ್ಗಿ ಬರುವ ಶತ್ರುಗಳನ್ನು ಸೋಲಿಸಲು ಯುದ್ಧಾಭಿಮುಖವಾಗಿ ಹೊರಡು. ವೃತ್ರಾದಿಗಳನ್ನು ಹಿಂಸಿಸುವ ಯುದ್ಧದಲ್ಲಿ ದೃಢವಾಗಿ ನೆಲೆಸಿ ಕಲ್ಯಾಣವನ್ನುಂಟುಮಾಡುವ ಮನಸ್ಸನ್ನು ಮಾಡು. ಯಾವ ವಿಧದಿಂದ ನೀನು ಶ್ರೇಷ್ಠವಾದ ಧನವುಳ್ಳವನಾಗಿ ಆಗುತ್ತೀಯೋ ಆ ರೀತಿ ಚರುಪುರೋಡಾಶಾದಿಗಳನ್ನು ಬ್ರಹ್ಮಣಸ್ಪತಿಗಾಗಿ ಸಿದ್ಧಪಡಿಸು. ನಾವೂ ಸಹ ಬ್ರಹ್ಮಣಸ್ಪತಿಯ ರಕ್ಷಣವನ್ನು ಎದುರುಗೊಳ್ಳುವವರಾಗಿ ಪ್ರಾರ್ಥಿಸುತ್ತೇವೆ.

## English Translation

Offer worship, O man, (to Brahmanaspati): proceed resolutely against those who are meditating (hostility): keep your mind firm in contending against foes: offer oblations whereby you may be prosperous: we also solicit the protection of Brahmanaspathi.

॥ ವಿಶೇಷವಿಷಯಗಳು ॥

ಮಂತ್ರದ್ರಷ್ಟೃವಾದ ಋಷಿಯು (ತನ್ನವರಿಗೆ) ತನಗೆ ಆಪ್ತರಾದ ಪುರುಷರಿಗೆ ಉಪದೇಶಮಾಡಿರುವ ಕ್ರಮವು ಈ ಮಂತ್ರದಲ್ಲಿ ಉಕ್ತವಾಗಿದೆ.

**ವೀರ ಯಜಸ್ವ**—ಇಲ್ಲಿ ವೀರ ಶಬ್ದಕ್ಕೆ **ಸ್ತುತೀನಾಂ ಪ್ರೇರಕ ಸಖೇ** ಸ್ತುತಿಗಳನ್ನು ಅತಿಶಯವಾಗಿ ಪಠಿಸುವ ಸ್ನೇಹಿತನೆಂದು ಅರ್ಥವನ್ನು ವಿವರಿಸಿ, ಬ್ರಹ್ಮಣಸ್ಪತಿಯನ್ನು ಸ್ತುತಿಯಿಂದ ಪೂಜಿಸಬೇಕೆಂದು ವಿಧಿಯು ಆಶಂಸಿತವಾಗಿದೆ

**ಮನಾಯತಃ ಇಹಿ—ಮನ ಇವ ಶೀಘ್ರಂ ಪ್ರವರ್ತಮಾನಾನ್, ಹಿಂಸಕಾನ್. ಅಭಿಮನ್ಯಮಾನಾನ್ ಶತ್ರೂನ್ ಪ್ರತಿ ಯುದ್ಧಾರ್ಥಂ ಗಚ್ಛ।** ಮನಸ್ಸಿನ ವೇಗದ ಹಾಗೆ ಪ್ರಭೂತವಾದ ವೇಗದಿಂದ ಮುನ್ನುಗ್ಗಿ

ಬಂದು ಹಿಂಸೆಮಾಡುವವರ ವಿಷಯದಲ್ಲಿಯೂ ಅಥವಾ ಬಹಳ ಅಹಂಕಾರದಿಂದ ಇರುವ ಶತ್ರುಗಳ ವಿಷಯದಲ್ಲಿಯೂ ಮಾಡು ಎಂದು ಹೇಳಿದೆ-

**ವೃತ್ರತೂರ್ಯೇ-ಭದ್ರಂ ಮನಃ ಕೃಣುಷ್ವ**—ಈ ವಾಕ್ಯದಲ್ಲಿರುವ ವೃತ್ರಶಬ್ದವು ಆವರಿಸುವ ಹಿಂಸಾಕಾರಕರಾದ ಶತ್ರುಗಳೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಅರ್ಥವನ್ನು ಸಾಯಣರು ವರ್ಣಿಸಿದ್ದಾರೆ. ಯಾಸ್ಕರು ವೃತ್ರ ಶಬ್ದಕ್ಕೆ ನಾನಾರ್ಥಗಳನ್ನು (ನಿ ೨-೧೬) ವಿವರಿಸಿದ್ದಾರೆ. ವೃತ್ರತೂರ್ಯೇ ಎಂಬ ಪದವನ್ನು ಸಂಗ್ರಾಮ ನಾಮಗಳಲ್ಲಿ (ನಿ ೩-೯) ಪಠಿಸಿದ್ದಾರೆ. ಇಲ್ಲಿ ಹಿಂಸೆಯನ್ನು ಆಚರಿಸುವ ಶತ್ರುಗಳ ವಿಷಯದಲ್ಲಿ ಧೈರ್ಯದಿಂದ ಕೂಡಿರುವ ಮನಸ್ಸನ್ನು ಉಪಯೋಗಿಸಬೇಕೆಂದೂ, **ಬ್ರಹ್ಮಣಸ್ಪತೇರನುಗ್ರಹಾತ್ತ್ವೈವ ಜಯೋ ಭವಿಷ್ಯತಿ** ಬ್ರಹ್ಮಣ ಸ್ಪತಿಯ ಅನುಗ್ರಹದಿಂದ ನಿನಗೇ ಜಯವು ಲಭಿಸುವುದೆಂದೂ ಮಂತ್ರದ್ರಷ್ಟೃವಾದ ಋಷಿಯ ಅಭಿಮತವು ವರ್ಣಿತವಾಗಿದೆ.

**ಯಥಾ ತ್ವಂ ಸುಭಗಃ ಅಸಸಿ—ಬ್ರಹ್ಮಣಸ್ಪತೇರ್ಯಾಗೇನ ತ್ವಂ ಶೋಭನಧನೋ ಭವಿಷ್ಯಸಿ ।** ಬ್ರಹ್ಮಣಸ್ಪತಿಯನ್ನು ಉದ್ದೇಶಮಾಡಿ ಯಾಗವನ್ನಾಚರಿಸುವುದರಿಂದ ಉತ್ತಮವಾದ ಧನಪ್ರಾಪ್ತಿಯು ಆಗುವುದೆಂದೂ ವರ್ಣಿಸಿದೆ. ಮತ್ತು **ವಯಂ ಬ್ರಹ್ಮಣಸ್ಪತೇಃ ಅವಃ ಆವೃಣೀಮಹೇ** ನಾವು ಬ್ರಹ್ಮಣಸ್ಪತಿಯಿಂದ ರಕ್ಷಣೆಯನ್ನು ಅತಿಶಯವಾಗಿ ಅಪೇಕ್ಷಿಸುತ್ತೇವೆ ಎಂದು ಆಶಂಸನೆಯೂ ಉಕ್ತವಾಗಿದೆ.

॥ ಸಂಹಿತಾಪಾಠಃ ॥

**ಸ ಇಜ್ಜನೇನ ಸ ವಿಶಾ ಸ ಜನ್ಮನಾ ಸ ಪುತ್ರೈರ್ವಾಜಂ ಭರತೇ ಧನಾ ನೃಭಿಃ ।**
**ದೇವಾನಾಂ ಯಃ ಪಿತರಮಾವಿವಾಸತಿ ಶ್ರದ್ಧಾಮನಾ ಹವಿಷಾ ಬ್ರಹ್ಮಣಸ್ಪತಿಂ ॥ ೩ ॥**

॥ ಪದಪಾಠಃ ॥

**ಸಃ । ಇತ್ । ಜನೇನ । ಸಃ । ವಿಶಾ । ಸಃ । ಜನ್ಮನಾ । ಸಃ । ಪುತ್ರೈಃ । ವಾಜಂ । ಭರತೇ । ಧನಾ । ನೃಽಭಿಃ ।**
**ದೇವಾನಾಂ । ಯಃ । ಪಿತರಂ । ಆಽವಿವಾಸತಿ । ಶ್ರದ್ಧಾಽಮನಾಃ । ಹವಿಷಾ । ಬ್ರಹ್ಮಣಃ । ಪತಿಂ ॥ ೩ ॥**

॥ ಸಾಯಣಭಾಷ್ಯಂ ॥

**ಯೋ ಯಜಮಾನಃ ಶ್ರದ್ಧಾಮನಾಃ ಶ್ರದ್ಧಾ ಮನಸಿ ಯಸ್ಯ ತಾದೃಶಃ ಸನ್ ದೇವಾನಾಂ ಪಿತರಂ ಪಾಲಯಿತಾರಂ ಬ್ರಹ್ಮಣಸ್ಪತಿಂ ಹವಿಷಾ ಚರುಪುರೋಡಾಶಾದಿನಾವಿವಾಸತಿ । ಪರಿಚರತಿ ॥ ವಿವಾಸತಿಃ ಪರಿಚರಣಕರ್ಮಾ ॥ ಸ ಇತ್ ಸ ಏವ ಯಜಮಾನೋ ಜನೇನ ಜಾತೇನ ಸರ್ವೇಣ ಲೋಕೇನ ವಾಜಮನ್ನಂ ಭರತೇ । ಬಿಭರ್ತಿ ಸಂಭರತಿ ವಾ । ಸ ಏವ ವಿಶಾ ಪ್ರಜಯಾ ಜನ್ಮನಾತ್ಮೀಯೇನ ಬಂಧುಜನೇನ ವಾಜಂ ಭರತೇ । ಸ ಏವ ಪುತ್ರೈರಾತ್ಮೀಯೈರಪತ್ಯೈರ್ವಾಜಂ ಭರತೇ । ತಥಾ ನೃಭಿರ್ನೇತೃಭಿರನ್ಯೈಃ ಪರಿಚಾರಕೈರ್ಧನಾ ಧನಾನಿ ಭರತೇ । ಬಿಭರ್ತಿ ಸಂಪಾದಯತಿ ವಾ । ಬ್ರಹ್ಮಣಸ್ಪತಿಮಿಷ್ಟವತೋ ಯಜಮಾನಸ್ಯ ಸರ್ವತೋ ಜನಾ ಅನ್ನಧನಯೋಃ ಸಾಧಕಾ ಭವಂತೀತಿ ಭಾವಃ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಯಜಮಾನನು । **ಶ್ರದ್ಧಾಮನಾಃ**—ಶ್ರದ್ಧೆಯಿಂದ ಕೂಡಿದ ಮನಸ್ಸುಳ್ಳವನಾಗಿ । **ದೇವಾನಾಂ**—ದೇವತೆಗಳ । **ಪಿತರಂ**—ಪಾಲಕನಾದ । **ಬ್ರಹ್ಮಣಸ್ಪತಿಂ**—ಬ್ರಹ್ಮಣಸ್ಪತಿಯನ್ನು । **ಹವಿಷಾ**—ಚರುಪುರೋಡಾಶಾದಿಗಳಿಂದ । **ಆ ವಿವಾಸತಿ**—ಪರಿಚರಿಸಿ ಪೂಜಿಸುತ್ತಾನೆಯೋ । **ಸ ಇತ್**—ಆ ಯಜಮಾನನು ಮಾತ್ರ (ತನ್ನ ಸಂಬಂಧಿಯಾಗಿ) । **ಜನ್ಮನಾ ಜನೇನ**—ಉತ್ಪನ್ನವಾದ ಸಕಲ ಲೋಕಗಳೊಂದಿಗೂ । **ವಾಜಂ**—ಅನ್ನವನ್ನು । **ಭರತೇ**—ಹೊಂದುತ್ತಾನೆ । **ಸಃ**—ಅವನೇ । **ವಿಶಾ**—(ತನ್ನ) ಪ್ರಜೆಗಳೊಡನೆ (ಅನ್ನವನ್ನು ಹೊಂದುತ್ತಾನೆ) । **ಸಃ**—ಅವನೇ । **ಪುತ್ರೈಃ**—ತನ್ನ ಪುತ್ರರೊಡನೆಯೂ (ಅನ್ನವನ್ನು ಹೊಂದುತ್ತಾನೆ) । **ನೃಭಿಃ**—ತನ್ನ ಪರಿಚಾರಕರಾದ ನರರೊಡನೆ । **ಧನಾ**—ಧನಗಳನ್ನು (ಹೊಂದುತ್ತಾನೆ).

॥ ಭಾವಾರ್ಥ ॥

ಯಾವ ಯಜಮಾನನು ಶ್ರದ್ಧೆಯಿಂದ ಕೂಡಿದ ಮನಸ್ಸುಳ್ಳವನಾಗಿ ದೇವತೆಗಳ ಪಾಲಕನಾದ ಬ್ರಹ್ಮಣಸ್ಪತಿಯನ್ನು ಚರುಪುರೋಡಾಶಾದಿಗಳಿಂದ ಉಪಚರಿಸಿ ಪೂಜಿಸುತ್ತಾನೆಯೋ ಆ ಯಜಮಾನನು ಮಾತ್ರ ತನ್ನ ಸಂಬಂಧಿಯಾಗಿ ಉತ್ಪನ್ನವಾದ ಸಕಲರೊಡನೆಯೂ, ತನ್ನ ಪ್ರಜೆಗಳೊಡನೆಯೂ, ತನ್ನ ಪುತ್ರರೊಡನೆಯೂ ಅನ್ನವನ್ನು ಹೊಂದುತ್ತಾನೆ. ಆ ಯಜಮಾನನು ಮಾತ್ರ ತನ್ನ ಪರಿಚಾರಕರಾದ ನರರೊಡನೆ ಧನಗಳನ್ನು ಹೊಂದುತ್ತಾನೆ.

## English Translation.

He who with a believing mind worships Brahmanaspati, the father of the gods, with oblations, he verily receives food, together with his sons, his kindred, his descendants, his people, and (obtains) riches together with (all) men.

॥ ವಿಶೇಷವಿಷಯಗಳು ॥

**ಬ್ರಹ್ಮಣಸ್ಪತಿಮಿಷ್ಟವತೋ ಯಜಮಾನಸ್ಯ ಜನಾಃ ಸರ್ವತೋ ಅನ್ನಧನಯೋಃ ಸಾಧಕಾಃ ಭವಂತಿ** ಬ್ರಹ್ಮಣಸ್ಪತಿ ಎಂಬ ದೇವನನ್ನು ಕುರಿತು ಯಾಗವನ್ನು ಆಚರಿಸುವ ಯಜಮಾನನಿಗೆ ಜನರೆಲ್ಲರೂ ನಾನಾ

ರೂಪದಿಂದ ಅನ್ನವನ್ನೂ ಧನವನ್ನೂ ಕೊಟ್ಟು ಸಹಾಯಮಾಡುವರು ಎಂಬ ಅರ್ಥವು ಈ ಋಕ್ಕಿನಲ್ಲಿ ನಾಲ್ಕು ವಾಕ್ಯಗಳಿಂದ ವಿವೃತವಾಗಿದೆ.

**ಶ್ರದ್ಧಾಮನಾಃ ಹವಿಷಾ ಆ ವಿವಾಸತಿ ಸ ಇತ್ ವಾಜಂ ಭರತೇ,** ಇಲ್ಲಿ ವಿವಾಸತಿ ಎಂಬ ಪದವನ್ನು ಯಾಸ್ಕರು (ನಿ. ೩-೧೩-೧೧-೨೩) ಪರಿಚರಣಕರ್ಮವಾಚಕಪದಗಳಲ್ಲಿ ಪಾಠಮಾಡಿದ್ದಾರೆ. ಭಕ್ತಿಯಿಂದ ಕೂಡಿದವನಾಗಿ ಬ್ರಹ್ಮಣಸ್ಪತಿಯನ್ನು ಹವಿಸ್ಸುಗಳಿಂದ ತೃಪ್ತಿಗೊಳಿಸಿದ ಯಜಮಾನನೇ ಅನ್ನವನ್ನು ಹೊಂದಿ, ಇತರರೆಲ್ಲರನ್ನೂ ಪೋಷಿಸುವನು ಎಂದು ಅರ್ಥವನ್ನು ಹೇಳಿದೆ.

ಇದರಂತೆಯೇ-**ಆತ್ಮೀಯೇನ ಬಂಧುಜನೇನ, ಆತ್ಮೀಯೈರಪತ್ಯೈಃ ನೇತೃಭಿರನ್ಯೈಃ ಪರಿಚಾರಕೈಃ ವಾಜಂ ಭರತೇ ಸಂಪಾದಯತಿ ವಾ** ಈ ರೀತಿಯಿಂದ ಇರುವ ಯಜಮಾನನಿಗೆ ಅವನ ಬಂಧುಜನಗಳೂ, ಅವನ ಪುತ್ರರೂ, ಅವನನ್ನು ಸೇವಿಸುವ ಭೃತ್ಯರೂ ಕೂಡ ಅನ್ನವನ್ನೂ ಧನವನ್ನೂ ಪಡೆದು ಅವನಿಂದ ಪೋಷಿತರಾಗುವರೆಂದು ವಿವರಿಸಿದೆ.

॥ ಸಂಹಿತಾಪಾಠಃ ॥

**ಯೋ ಅಸ್ಮೈ ಹವ್ಯೈರ್ಘೃತವದ್ಭಿರವಿಧತ್ಪ್ರ ತಂ ಪ್ರಾಚಾ ನಯತಿ ಬ್ರಹ್ಮಣಸ್ಪತಿಃ।**
**ಉರುಷ್ಯತೀಮಂಹಸೋ ರಕ್ಷತೀ ರಿಷೋಽಂಹೋಶ್ಚಿದಸ್ಮಾ ಉರುಚಕ್ರಿರದ್ಭುತಃ ॥**

॥ ಪದಪಾಠಃ ॥

ಯಃ । ಅಸ್ಮೈ । ಹವ್ಯೈಃ । ಘೃತವತ್ಽಭಿಃ । ಅವಿಧತ್ । ಪ್ರ । ತಂ । ಪ್ರಾಚಾ । ನಯತಿ । ಬ್ರಹ್ಮಣಃ । ಪತಿಃ ।
ಉರುಷ್ಯತಿ । ಈಂ । ಅಂಹಸಃ । ರಕ್ಷತಿ । ರಿಷಃ । ಅಂಹೋಃ । ಚಿತ್ । ಅಸ್ಮೈ । ಉರುಽಚಕ್ರಿಃ । ಅದ್ಭುತಃ ॥ ೪

॥ ಸಾಯಣಭಾಷ್ಯಂ ॥

**ಯೋ ಯಜಮಾನೋಽಸ್ಮೈ ಬೃಹ್ಮಣಸ್ಪತಯೇ ॥ ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥೀ ॥ ಇಮಂ ಬ್ರಹ್ಮಣಸ್ಪತಿಂ ಘೃತವದ್ಭಿರುಪಸ್ತರಣಾಭಿಘಾರಣಾತ್ಮಕೇನಾಜ್ಯೇನೋಪೇತೈರ್ಹವ್ಯೈರ್ಹವಿರ್ಭಿರವಿಧತ್ । ಪರಿಚರತಿ ॥ ವಿಧ ವಿಧಾನೇ ತೌದಾದಿಕಃ । ಅಯಂ ಪರಿಚರಣ-**

**ಕರ್ಮಸು ಪಠಿತಃ ॥ ತಂ ಯಜಮಾನಂ ಬ್ರಹ್ಮಣಸ್ಪತಿಃ ಪ್ರಾಚಾ ಪ್ರಾಚೀನೇನ ಋಜುನಾ ಮಾರ್ಗೇಣ ಪ್ರಣಯತಿ । ಪ್ರಕೃಷ್ಟಫಲಂ ಪ್ರಾಪಯತಿ । ಅಪಿ ಚ ಈಮೇನಮಂಹಸಃ ಪಾಪಾದುರುಷ್ಯತಿ । ರಕ್ಷತಿ ॥ ಉರುಷ್ಯತೀ ರಕ್ಷಾಕರ್ಮೇತಿ ಯಾಸ್ಕಃ ॥ ತಥಾ ರಿಷೋ ಹಿಂಸಕಾದೇನಂ ರಕ್ಷತಿ । ಅಂಹೋಶ್ಚಿತ್ । ಅವೃತ್ತೇರ್ದಾರಿದ್ರ್ಯಾತ್ । ಯದ್ವಾ ಆಗತ್ಯ ಹಂತುರಪಿ ರಕ್ಷತಿ । ಅಪಿ ಚಾಸ್ಮೈ ಯಜಮಾನಾಯಾದ್ಭುತಃ । ಮಹನ್ನಾಮೈತತ್ । ಆಶ್ಚರ್ಯಭೂತೋ ಮಹಾನ್ ಬ್ರಹ್ಮಣಸ್ಪತಿರುರುಚಕ್ರಿರುರೋರ್ವಿಸ್ತೀರ್ಣಸ್ಯೋಪಕಾರಸ್ಯ ಕರ್ತಾ ಭವತಿ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಯಜಮಾನನು । **ಅಸ್ಮೈ**—ಈ ಬ್ರಹ್ಮಣಸ್ಪತಿಯನ್ನುದ್ದೇಶಿಸಿ । **ಘೃತವದ್ಭಿಃ**—ಆಜ್ಯಗಳಿಂದ ಯುಕ್ತವಾದ । **ಹವ್ಯೈಃ**—ಹವಿಸ್ಸುಗಳಿಂದ । **ಅವಿಧತ್**—ಪೂಜಿಸುತ್ತಾನೆಯೋ । **ತಂ**—ಆ ಯಜಮಾನನನ್ನು । **ಬ್ರಹ್ಮಣಸ್ಪತಿಃ**—ಬ್ರಹ್ಮಣಸ್ಪತಿಯು । **ಪ್ರಾಚಾ**—ಅತ್ಯಂತ ಋಜುವಾದ ಮಾರ್ಗದಿಂದ । **ಪ್ರ ನಯತಿ**—ಫಲಾಭಿಮುಖವಾಗಿ ಒಯ್ಯುತ್ತಾನೆ । (ಮತ್ತು) **ಈಂ**—ಈ ಯಜಮಾನನನ್ನು । ಅಂಹಸಃ—ಪಾಪದಿಂದ । **ಉರುಷ್ಯತಿ**—ರಕ್ಷಿಸುತ್ತಾನೆ । **ರಿಷಃ**—ಹಿಂಸಕನಾದ ಶತ್ರುವಿನಿಂದ । **ರಕ್ಷತಿ**—ರಕ್ಷಿಸುತ್ತಾನೆ । **ಅಂಹೋಶ್ಚಿತ್**—ದಾರಿದ್ರ್ಯರೂಪವಾದ ಪಾಪದಿಂದಲೂ (ರಕ್ಷಿಸುತ್ತಾನೆ) । **ಅಸ್ಮೈ**—ಇದೇ ಯಜಮಾನನಿಗೆ । **ಅದ್ಭುತಃ**—ಮಹಾತ್ಮನಾದ ಬ್ರಹ್ಮಣಸ್ಪತಿಯು । **ಉರುಚಕ್ರಿಃ**—ಪ್ರಭೂತವಾಗಿ ಉಪಕಾರಕನೂ ಆಗುತ್ತಾನೆ.

॥ ಭಾವಾರ್ಥ ॥

ಯಾವ ಯಜಮಾನನು ಬ್ರಹ್ಮಣಸ್ಪತಿಯನ್ನುದ್ದೇಶಿಸಿ ಆಜ್ಯಗಳಿಂದ ಯುಕ್ತವಾದ ಹವಿಸ್ಸುಗಳಿಂದ ಪೂಜಿಸುತ್ತಾನೆಯೋ, ಆ ಯಜಮಾನನನ್ನು ಬ್ರಹ್ಮಣಸ್ಪತಿಯು ಅತ್ಯಂತ ಋಜುವಾದ ಮಾರ್ಗದಿಂದ ಫಲಾಭಿಮುಖವಾಗಿ ಕರೆದುಕೊಂಡು ಹೋಗುತ್ತಾನೆ. ಮತ್ತು ಈ ಯಜಮಾನನನ್ನು ಪಾಪದಿಂದಲೂ, ಹಿಂಸಕನಾದ ಶತ್ರುವಿನಿಂದಲೂ, ದಾರಿದ್ರ್ಯದಿಂದಲೂ ರಕ್ಷಿಸುತ್ತಾನೆ. ಇದೇ ಯಜಮಾನನಿಗೆ ಮಹಾತ್ಮನಾದ ಬ್ರಹ್ಮಣಸ್ಪತಿಯು ಪ್ರಭೂತವಾಗಿ ಉಪಕಾರಕನೂ ಆಗುತ್ತಾನೆ.

## English Translation

Brahmanaspathi leads by a straight path (to his reward), the worshipper who propitiates him with oblations of butter: he guards him against sin; he protects him from foes and from distresss; and wonderful (in might), confers upon him many (favours)-

॥ ವಿಶೇಷವಿಷಯಗಳು ॥

**ತಂ ಪ್ರಾಚಾ ಪ್ರನಯತಿ—ಬ್ರಹ್ಮಣಸ್ಪತಿಃ ಋಜುನಾ ಮಾರ್ಗೇಣ ಪ್ರಕೃಷ್ಟಂ ಫಲಂ ಪ್ರಾಪಯತಿ ।** ಘೃತಾದಿದ್ರವ್ಯಗಳನ್ನು ಸಂಸ್ಕರಿಸಿ ಅದರಿಂದ ಕೂಡಿರುವ ಹವಿರಾದ್ಯರ್ಪಣೆಗಳಿಂದ ತೃಪ್ತನಾದ ಬ್ರಹ್ಮಣಸ್ಪತಿಯು

ಯಜಮಾನನನ್ನು ಸರಿಯಾದ ಮಾರ್ಗದಲ್ಲಿ ಒಯ್ದು ಉತ್ತಮವಾದ ಫಲಭಾಜಕನನ್ನಾಗಿ ಮಾಡುವನು. ಇಲ್ಲಿ **ಪ್ರಾಚಾ** ಎಂಬ ಪದಕ್ಕೆ **ಪ್ರಾಚೀನೇನ** ಎಂದರೆ ಪೂರ್ವಿಕರಿಂದ ಅನುಸೃತವಾದ ಸರಳವಾದ ಮಾರ್ಗವೆಂದು ಅರ್ಥವು ವಿವೃತವಾಗಿದೆ.

**ಈಂ ಅಂಹಸಃ ಉರುಷ್ಯತಿ—ಏನಂ ಪಾಪಾತ್ ರಕ್ಷತಿ ।** ಈಂ ಎಂಬ ನಿಪಾತಕ್ಕೆ ಇಲ್ಲಿ ಈ ಯಜಮಾನನನ್ನು ಎಂದು ಅರ್ಥವನ್ನು ಹೇಳಿದೆ. ಯಾಸ್ಕರು ಪಾದಪೂರಣಾಸ್ತೇ ಅನರ್ಥಕಾಃ ಕಮೀಮಿದ್ವಿತಿ (ನಿ. ೧-೯) ಕಂ, ಈಂ, ಇತ್, ಉ ಎಂಬ ನಿಪಾತಗಳು ವಾಕ್ಯಪೂರಣಾರ್ಥವಾಗಿ ಪ್ರಯುಕ್ತವಾಗಿರುತ್ತವೆ ಇವುಗಳು ಯಾವ ಅರ್ಥವನ್ನೂ ಬೋಧಿಸುವುದಿಲ್ಲವೆಂದು ಅರ್ಥವನ್ನು ವರ್ಣಿಸಿದ್ದಾರೆ. **ಉರುಷ್ಯತೀ ರಕ್ಷಾಕರ್ಮಾ ಇತಿ ಯಾಸ್ಕಃ** ಎಂದು ವ್ಯಾಖ್ಯಾನವಾಡಿ ಯಜಮಾನನನ್ನು ಪಾಪಗಳಿಂದ ಬ್ರಹ್ಮಣಸ್ಪತಿಯು ರಕ್ಷಿಸುವನು ಎಂದು ವಿವರಿಸಿದೆ.

**ಅಂಹೋಶ್ಚಿತ್** ಎಂಬ ಪದಕ್ಕೆ **ಅವೃತ್ತೇರ್ದಾರಿದ್ರ್ಯಾತ್ ಯದ್ವಾ ಆಗತ್ಯ ಹಂತುರಪಿ** (ದರಿದ್ರತನ) ಬಡತನ ಅಥವಾ ನವಿಾಪಕ್ಕೆ ಬಂದು ಕೊಲ್ಲುವವನು ಎಂದು ಎರಡುವಿಧವಾದ ಅರ್ಥವನ್ನು ವಿವರಿಸಿ ಅವುಗಳಿಂದ ಬ್ರಹ್ಮಣಸ್ಪತಿಯು ರಕ್ಷಿಸುವನೆಂದು ಉಕ್ತವಾಗಿದೆ.

**ಅಸ್ಮೈ ಅದ್ಭುತಃ—ಆಚಾರ್ಯಭೂತಃ ಮಹಾನ್** ಅದ್ಭುತ ಶಬ್ದವು ಮಹನ್ನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ಬ್ರಹ್ಮಣಸ್ಪತಿಯು ಯಜಮಾನನಿಗೆ ಆಚಾರ್ಯನಾಗಿಯೂ, ಪೂಜ್ಯನಾಗಿಯೂ ಪ್ರಭೂತವಾದ ಉಪಕಾರವನ್ನು ಆಚರಿಸುವನೆಂದು ವರ್ಣಿಸಿದೆ.

## ಇಪ್ಪತ್ತೇಳನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಇಮಾ ಗಿರ ಇತಿ ಸಪ್ತದಶರ್ಚಂ ಪಂಚಮಂ ಸೂಕ್ತಂ ಗೃತ್ಸಮದಪುತ್ರಸ್ಯ **ಕೂರ್ಮಸ್ಯಾರ್ಷಂ ಗೃತ್ಸಮದಸ್ಯೈವ ವಾ ತ್ರೈಷ್ಟುಭಮಾದಿತ್ಯದೇವತಾಕಂ । ತಥಾ ಚಾನುಕ್ರಾಂತಂ । ಇಮಾ ಗಿರಸ್ತ್ರ್ಯೂನಾ ಕೂರ್ಮೋ ಗಾರ್ತ್ಸಮದೋ ಹಿ ವಾದಿತ್ಯಮಿತಿ ॥ ಸೂಕ್ತವಿನಿಯೋಗೋ ಲೈಂಗಿಕಃ । ಆದಿತ್ಯದೇವತಾಕೇ ಪಶೌ ಪುರೋಡಾಶಸ್ಯೇಮಾ ಗಿರ ಇತ್ಯೇಷಾನುವಾಕ್ಯಾ । ಅಗ್ನೀಷೋಮಾವಿತಿ ಖಂಡೇ ಸೂತ್ರಿತಂ । ಇಮಾ ಗಿರ ಆದಿತ್ಯೇಭ್ಯೋ ಘೃತಸ್ನೂಸ್ತ ಆದಿತ್ಯಾಸ ಉರವೋ ಗಭೀರಾಃ । ಆ-೩-೮ । ಇತಿ ।**

ಅನುವಾದವು—**ಇಮಾ ಗಿರಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹದಿನೇಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದಪುತ್ರನಾದ ಕೂರ್ಮನೆಂಬುವನು ಋಷಿಯು ಅಥವಾ ಗೃತ್ಸಮದನೇ ಋಷಿಯು ಎಂದೂ ಹೇಳುವರು. ಆದಿತ್ಯರು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಇಮಾ ಗಿರಸ್ತ್ರ್ಯೂನಾ ಕೂರ್ಮೋ ಗಾರ್ತ್ಸಮದೋ ಹಿ ವಾದಿತ್ಯಂ** ಎಂದು ಹೇಳಿರುವುದು. ಸೂಕ್ತವಿನಿಯೋಗವು ಲೈಂಗಿಕವು. ಆದಿತ್ಯ ದೇವತಾಸಂಬಂಧವಾದ ಪಶುಯಾಗದಲ್ಲಿ **ಇಮಾ ಗಿರಃ** ಎಂಬ ಈ ಸೂಕ್ತದ ಮೊದಲನೆಯ ಋಕ್ಕನ್ನು ಪುರೋಡಾಶಹೋಮಮಾಡುವಾಗ ಅನುವಾಕ್ಯಾ ಮಂತ್ರವನ್ನಾಗಿ ಪಠಿಸಬೇಕೆಂದು

ಆಶ್ವಲಾಯನ ಶ್ರೌತಸೂತ್ರದ **ಅಗ್ನೀಷೋಮೌ** ಎಂಬ ಖಂಡದ **ಇಮಾ ಗಿರ ಆದಿತ್ಯೇಭ್ಯೋ ಘೃತಸ್ನೂಸ್ತ ಆದಿತ್ಯಾಸ ಉರವೋ ಗಭೀರಾಃ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೫-೮).

## ಸೂಕ್ತ—೨೭

ಮಂಡಲ—೨ ॥ ಅನುವಾಕ—೩ ॥ ಸೂಕ್ತ—೨೭ ॥

ಅಷ್ಟಕ—೨ ॥ ಅಧ್ಯಾಯ—೭ ॥ ವರ್ಗ—೬, ೭, ೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೭ ॥

॥ ಋಷಿಃ—ಕೂರ್ಮೋ ಗಾರ್ತ್ಸಮದೋ ಗೃತ್ಸಮದೋ ವಾ ॥

॥ ದೇವತಾ— ಆದಿತ್ಯಾಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಇಮಾ ಗಿರ ಆದಿತ್ಯೇಭ್ಯೋ ಘೃತಸ್ನೂಃ ಸನಾದ್ರಾಜಭ್ಯೋ ಜುಹ್ವಾ ಜುಹೋಮಿ ।
ಶೃಣೋತು ಮಿತ್ರೋ ಅರ್ಯಮಾ ಭಗೋ ನಸ್ತುವಿಜಾತೋ ವರುಣೋ ದಕ್ಷೋ ಅಂಶಃ ॥ ೧

॥ ಪದಪಾಠಃ ॥

ಇಮಾಃ । ಗಿರಃ । ಆದಿತ್ಯೇಭ್ಯಃ । ಘೃತಽಸ್ನೂಃ । ಸನಾತ್ । ರಾಜಽಭ್ಯಃ । ಜುಹ್ವಾ । ಜುಹೋಮಿ ।
ಶೃಣೋತು । ಮಿತ್ರಃ । ಅರ್ಯಮಾ । ಭಗಃ । ನಃ । ತುವಿಽಜಾತಃ । ವರುಣಃ । ದಕ್ಷಃ । ಅಂಶಃ ॥ ೧ ॥

॥ ಸಾಯಣಭಾಷ್ಯಂ ॥

ಆದಿತ್ಯೇಭ್ಯೋಽದಿತೇಃ ಪುತ್ರೇಭ್ಯೋ ರಾಜಭ್ಯೋ ರಾಜಮಾನೇಭ್ಯ ಈಶ್ವರೇಭ್ಯೋ ವಾ ಮಿತ್ರಾದಿಭ್ಯೋ ಘೃತಸ್ನೂರ್ಘೃತಪ್ರಸ್ರಾವಿಣೀರ್ಘೃತಂ ಕ್ಷರಂತೀರಿಮಾ ಗಿರಃ ಸ್ತುತಿಲಕ್ಷಣಾ ವಾಚಃ ಸನಾತ್ಸರ್ವದಾ ಜುಹ್ವಾ । ವಾಙ್ನಾಮೈತತ್ । ವಾಗಿಂದ್ರಿಯೇಣ ಜುಹೋಮಿ । ಪ್ರಯಚ್ಛಾಮಿ । ಕರೋಮೀತಿ ಯಾವತ್ । ಯದ್ವಾ ಜುಹೂಸ್ಥಾನೀಯೇನ ಘೃತಂ ಕ್ಷರಂತಿ ವಾಗ್ರೂಪಾಣಿ ಹವೀಂಷಿ ಜುಹೋಮಿ। ಆದಿತ್ಯಾನುದ್ದಿಶ್ಯ ತ್ಯಜಾಮಿ । ಮಂತ್ರಾಣಾಂ ಪಯೋಘೃತಾದಿಕ್ಷರಣಹೇತುತ್ವಂ ಚ ಯ ಋಚೋಽಧೀತೇ ಪಯಸಃ ಕೂಲ್ಯಾ ಅಸ್ಯೇತ್ಯಾದಿನಾ ತೈತ್ತಿರೀಯಕೇ ಸ್ಪಷ್ಟಮಾಮ್ನಾತಂ । ತೈ. ಆ. ೨. ೧೦. ೭. । ನೋಽಸ್ಮದೀಯಸ್ತಾ ಗಿರೋ ಮಿತ್ರಾದಯಃ ಪ್ರತ್ಯೇಕಂ ಶೃಣೋತು । ತೇ ಚ ತೈತ್ತಿರೀಯೇಽಷ್ಟೌ ಪುತ್ರಾಸೋ ಅದಿತೇರಿತ್ಯುಪಕ್ರಮ್ಯ ಸ್ಪಷ್ಟಮನುಕ್ರಾಂತಾಃ । ಮಿತ್ರಶ್ಚ ವರುಣಶ್ಚ ಧಾತಾ ಚಾರ್ಯಮಾ

**ಚ ಅಂಶುಶ್ಚ ಭಗಶ್ಚ ಇಂದ್ರಶ್ಚ ವಿವಸ್ವಾಂಶ್ಚೇತ್ಯೇತೆ ಇತಿ । ಮಿತ್ರಃ ಪ್ರಮೀತೇಸ್ತ್ರಾಯಕಃ । ಯದ್ವಾ ಸರ್ವೇಷಾಂ ಸ್ನಿಗ್ಧಃ । ಅರೀನ್ ಯಚ್ಛತಿ ನಿಯಚ್ಛತೀತ್ಯರ್ಯಮಾ । ಭಗೋ ಭಜನೀಯೋ ದೇವಃ । ತುವೀತಿ ಬಹುನಾಮ । ಬಹುಷು ದೇಶೇಷ್ವನುಗ್ರಹಾರ್ಥಂ ಪ್ರಾದುರ್ಭೂತಃ । ವರುಣವಿಶೇಷಣಮೇತತ್। ಪಾಪಸ್ಯ ನಿವಾರಣಾದ್ವರುಣಃ । ದಕ್ಷಃ ಸಮರ್ಥಃ । ಏತಚ್ಚಾಂಶಸ್ಯ ವಿಶೇಷಣಂ । ಏತೇ ಪ್ರತ್ಯೇಕಂ ಶೃಣ್ವಂತು ॥**

॥ ಪ್ರತಿಪದಾರ್ಥ ॥

**ಆದಿತ್ಯೇಭ್ಯಃ**— ಅದಿತಿಪುತ್ರರೂ । **ರಾಜಭ್ಯಃ**—ಪ್ರಕಾಶಮಾನರೂ ಆದ ಮಿತ್ರಾದಿದೇವತೆಗಳನ್ನುದ್ದೇಶಿಸಿ । **ಘೃತಸ್ನೂಃ**—ಘೃತವನ್ನು ಸುರಿಸತಕ್ಕ । **ಇಮಾ ಗಿರಃ**—ಸ್ತುತಿರೂಪವಾದ ಈ ವಾಕ್ಕುಗಳನ್ನು । **ಸನಾತ್**—ಸರ್ವದಾ । **ಜುಹ್ವಾ**—ವಾಗಿಂದ್ರಿಯರೂಪವಾದ ಜುಹೂಪಾತ್ರೆಯ ಮೂಲಕ । **ಜುಹೋಮಿ**— ಅರ್ಪಿಸುತ್ತೇನೆ **ನಃ**—ನಮ್ಮ ಈ ಸ್ತುತಿವಾಕ್ಕುಗಳನ್ನು । **ಮಿತ್ರಃ**—ಮಿತ್ರನೂ । **ಅರ್ಯಮಾ**—ಅರ್ಯಮನೂ । **ಭಗಃ**—ಭಗನೂ । **ತುವಿಜಾತಃ**—(ಲೋಕೋಪಕಾರಕ್ಕಾಗಿ) ಅನೇಕ ಪ್ರದೇಶಗಳಲ್ಲಿ ಉತ್ಪನ್ನನಾದ । **ವರುಣಃ**—ವರುಣನೂ । **ದಕ್ಷಃ**—ದಕ್ಷನೂ । **ಅಂಶಃ**—ಅಂಶನೂ । **ಶೃಣೋತು**—ಕೇಳಲಿ.

॥ ಭಾವಾರ್ಥ ॥

ಅದಿತಿಪುತ್ರರೂ, ಪ್ರಕಾಶಮಾನರೂ ಆದ ಮಿತ್ರಾದಿದೇವತೆಗಳನ್ನುದ್ದೇಶಿಸಿ ಘೃತವನ್ನು ಪ್ರವಿಸತಕ್ಕ ಸ್ತುತಿರೂಪವಾದ ಈ ವಾಕ್ಕುಗಳನ್ನು ವಾಗಿಂದ್ರಿಯರೂಪವಾದ ಜುಹೂಪಾತ್ರೆಯ ಮೂಲಕ ಸರ್ವದಾ ಅರ್ಪಿಸುತ್ತೇನೆ. ನಮ್ಮ ಈ ಸ್ತುತಿವಾಕ್ಕುಗಳನ್ನು ಮಿತ್ರನೂ ಅರ್ಯಮನೂ, ಭಗನೂ ಲೋಕೋಪಕಾರಕ್ಕಾಗಿ ಅನೇಕ ಪ್ರದೇಶಗಳಲ್ಲಿ ಉತ್ಪನ್ನನಾದ ವರುಣನೂ, ದಕ್ಷನೂ, ಅಂಶನೂ ಕೇಳಲಿ.

## English Translation.

I present cotinually, with the ladle (of speech), these oblation-droping hymns to the royal Adityas: May Mitra, Aryaman, Bhaga, the multipresent Varuna, the powerful Ansha, hear us.

॥ ವಿಶೇಷವಿಷಯಗಳು ॥

**ಆದಿತ್ಯೇಭ್ಯಃ ರಾಜಭ್ಯಃ ಘೃತಸ್ನೂಃ ಗಿರಃ ಜುಹ್ವಾ ಜುಹೋಮಿ — ಅದಿತಿಪುತ್ರೇಭ್ಯಃ ರಾಜಮಾನೇಭ್ಯ ಈಶ್ವರೇಭ್ಯೋ ವಾ ಮಿತ್ರಾದಿಭ್ಯಃ ಘೃತಂ ಕ್ಷರಂತೀಃ ಸ್ತುತಿಲಕ್ಷಣಾಃ ವಾಚಃ ವಾಗಿಂದ್ರಿಯೇಣ ಕರೋಮಿ। ಅದಿತಿದೇವಿಯ**—ಪುತ್ರರಾಗಿರುವ ತೇಜಸ್ಸಿನಿಂದ ಪ್ರಕಾಶಿಸುತ್ತಿರುವ ಅಥವಾ ಸರ್ವಕ್ಕೂ ಅಧಿಪತಿಗಳಾಗಿ ಇರುವ ಮಿತ್ರನೇ ಮೊದಲಾದವರನ್ನು ಕುರಿತು ಅಮೃತವನ್ನು ಸುರಿಸುವ ಸ್ತುತಿರೂಪವಾದ ಹವಿಸ್ಸುಗಳನ್ನು ಹೋಮ ಸಾಧನವಾದ ಜುಹೂವಿನಿಂದ ಹೋಮ ಮಾಡುವಂತೆ ವಾಕ್ಕುಗಳನ್ನು ವಾಗಿಂದ್ರಿಯದಿಂದ ಅರ್ಪಿಸುತ್ತೇನೆ ಎಂದು ಒಂದು ವಿಧವಾದ ಅರ್ಥವನ್ನು ವರ್ಣಿಸಿದೆ. ಎರಡನೆಯದಾಗಿ **ಯದ್ವಾ ಜುಹೂಸ್ಥಾನೀಯೇನ ಘೃತಂ ಕ್ಷರಂತಿ ವಾಗ್ರೂಪಾಣಿ ಹವೀಂಷಿ ಆದಿತ್ಯಾನುದ್ದಿಶ್ಯ ತ್ಯಜಾಮಿ** ಆದಿತ್ಯರನ್ನು ಉದ್ದೇಶಮಾಡಿ ಜೂಹೂ ಎಂಬ ಹೋಮ

ಮಾಡುವ ಪಾತ್ರೆಯಂತೆ ಇರುವ ವಾಗಿಂದ್ರಿಯದಿಂದ ಘೃತವನ್ನು ಸುರಿಸುವ ವಾಗ್ರೂಪವಾದ ಹವಿಸ್ಸುಗಳನ್ನು ಅರ್ಪಿಸುತ್ತೇನೆ ಎಂದು ವಿವರಿಸಿದೆ. ಮಂತ್ರಗಳು ಘೃತವನ್ನೂ ಇತರವಾದ ದ್ರವ್ಯಗಳನ್ನೂ ಅತಿಶಯವಾಗಿ ಅರ್ಪಿಸುವುವು ಎಂಬ ವಿಷಯವು **ಯದ್ವೃಚೋಽಧೀತೇ ಪಯಸಃ ಕುಲ್ಯಾ ಅಸ್ಯ** (ತೈ. ಬ್ರಾ. ೨-೧೧) ಎಂಬ ತೈತ್ತಿರೀಯ ಬ್ರಾಹ್ಮಣದ ವಾಕ್ಯದಿಂದ ವಿವೃತವಾಗಿದೆ.

**ಜುಹ್ವಾ—ವಾಗಿಂದ್ರಿಯೇಣ**— ವಾಙ್ವಾಮೈತತ್ ಎಂದೂ ಸಾಯಣರ ವಿವರಣೆಯು ಇದೆ ಯಾಸ್ಕರು **ಜಿಹ್ವಾ** ಎಂಬ ಪದವನ್ನು ವಾಙ್ನಾಮಗಳಲ್ಲಿ (ನಿ ೨-೨೩) ಪಠಿಸಿದ್ದಾರೆ.

**ನಃ ಶೃಣೋತು**— ಈ ವಾಕ್ಯಕ್ಕೆ **ಅಸ್ಮದೀಯಾಃ ತಾಃ ಗಿರಃ ಮಿತ್ರಾದಯಃ ಪ್ರತ್ಯೇಕಂ ಶೃಣೋತು** ಸ್ತುತಿಮಾಡುವ ನಮ್ಮ ಸ್ತುತಿವಾಕ್ಯುಗಳನ್ನು ಮಿತ್ರನೇ ಮೊದಲಾದ ಆದಿತ್ಯರು ಪ್ರತ್ಯೇಕವಾಗಿ ಎಲ್ಲರೂ ಶ್ರವಣಮಾಡಲಿ ಎಂದು ವಿವರಿಸಿ, ಸಾಯಣರು " **ಅಷ್ಟೌ ಪುತ್ರಾಸೋ ಅದಿತೇಃ........ಮಿತ್ರಶ್ಚ ವರುಣಶ್ಚ ಧಾತಾಚಾರ್ಯಮಾಚ ಅಂಶುಶ್ಚ ಭಗಶ್ಚ ಇಂದ್ರಶ್ಚ ವಿವಸ್ವಾಂಶ್ಚೇತ್ಯೇತೇ** " (ತೈ. ಆ. ೧-೧೩-೩) ಅದಿತಿದೇವಿಗೆ ಮಿತ್ರ, ವರುಣ, ಧಾತಾ, ಅರ್ಯಮಾ, ಅಂಶು, ಭಗ, ಇಂದ್ರ, ವಿವಸ್ವಾ್ ಎಂದು ಎಂಟು ಮಂದಿ ಪುತ್ರರು ಇರುವರು ಎಂದು ಹೇಳುವ ತೈತ್ತಿರೀಯ ಆರಣ್ಯಕದ ವಾಕ್ಯವನ್ನು ಉದಾಹರಿಸಿದ್ದಾರೆ.

**ಮಿತ್ರಃ:—ಪ್ರಮೀತೇಸ್ತ್ರಾಯಕಃ ಯದ್ವಾ ಸರ್ವೇಷಾಂ ಸ್ನಿಗ್ಧಃ ।** ಪ್ರಾಣಿಗಳನ್ನು ಮೃತಿಹೊಂದದಿರುವಂತೆ ಅಪಾಯಗಳಿಂದ ರಕ್ಷಿಸುವವನು ಅಥವಾ, ಪ್ರಾಣಿಗಳ ವಿಷಯದಲ್ಲಿ ಸ್ನೇಹದಿಂದ ಇರುವವನು ಎಂದು ಮಿತ್ರ ಶಬ್ದದ ಅರ್ಥವನ್ನು ಸಾಯಣರು ವಿವರಿಸಿದ್ದಾರೆ. ಯಾಸ್ಕರು **ಮಿತ್ರಃ ಪ್ರಮೀತೇಸ್ತ್ರಾಯತೇ `ಸಮ್ಮಿನ್ವಾನೋ ದ್ರವತೀತಿ ವಾ ಮೇದಯತೇರ್ವಾ** (ನಿ. ೧೦-೨೨) ಎಂದು ಮಿತ್ರಶಬ್ದಾರ್ಥವನ್ನು ವಿವರಿಸಿದ್ದಾರೆ.

**ಅರೀನ್ ಗಚ್ಛತಿ ನಿಯಚ್ಛತೀತಿ ಅರ್ಯಮಾ**—ಶತ್ರುಗಳನ್ನು ನಿಗ್ರಹಮಾಡುವವನು ಎಂದು ಅರ್ಯಮಾ ಎಂಬ ಪದದ ವಿವರಣೆಯು. ಸಾಯಣರಿಂದ ಉಕ್ತವಾಗಿದೆ. ಯಾಸ್ಕರು **ಅರ್ಯಮಾದಿತ್ಯೋ ಅರೀನ್ನಿಯಚ್ಛತಿ** (ನಿ. ೧೧-೨೩) ಎಂದು ವಿವರಿಸಿದ್ದಾರೆ.

**ಭಗಃ ಭಜನೀಯೋ ದೇವಃ ।** ಸೇವಿಸಲು ಅರ್ಹನಾದ ದೇವನು ಎಂದು ಸಾಯಣರ ವಿವರಣೆಯು. ಯಾಸ್ಕರು ಭಗಶಬ್ದಕ್ಕೆ **ಭಗೋ ಭಜತೇಃ** (ನಿ ೧-೭) ಎಂದು ವ್ಯಾಖ್ಯಾನಮಾಡಿದ್ದಾರೆ. ಧನನಾಮಗಳಲ್ಲಿ ಪಾಠಮಾಡಿ (ನಿ. ೩-೯) ಭಗಸ್ಯ ಭಾಗಧೇಯಸ್ಯ ಧರ್ಮಸ್ಯ (ನಿ. ೯-೩೧) ಎಂದೂ ಅರ್ಥವನ್ನು ವಿವರಿಸಿದ್ದಾರೆ.

**ವರುಣಃ ತುವಿಜಾತಃ-ಅನುಗ್ರಹಾರ್ಥಂ ಬಹುಷು ದೇಶೇಷು ಪ್ರಾದುರ್ಭೂತಃ ಪಾಪನಿವಾರಣಾತ್ ವರುಣಃ** । ಪ್ರಾಣಿಗಳನ್ನು ದಯೆಯಿಂದ ರಕ್ಷಿಸುವುದಕ್ಕಾಗಿಯೂ ಪಾಪಗಳನ್ನು ಪರಿಹರಿಸುವುದಕ್ಕಾಗಿಯೂ ಅನೇಕ ಪ್ರದೇಶಗಳಲ್ಲಿ ಆವಿರ್ಭೂತನಾಗಿರುವುದರಿಂದ ವರುಣನೆಂದು ಹೆಸರು ಬಂದಿರುವುದೆಂದು ಸಾಯಣರು ವಿವರಿಸಿದ್ದಾರೆ. ಯಾಸ್ಕರು **ವೃಣೋತೀತಿ ಸತಃ** (ನಿ. ೧೦-೩) ಎಂದು ವಿವರಣೆಮಾಡಿದ್ದಾರೆ.

**ದಕ್ಷಃ ಅಂಶಃ—ಸಮರ್ಥಃ** । ದಕ್ಷ ಶಬ್ದಕ್ಕೆ ಸಮರ್ಥನು, ಶಕ್ತಿಯುಳ್ಳವನು ಎಂದು ಅರ್ಥವನ್ನು ಹೇಳಿದೆ. ಈ ಪದವು ಅಂಶನೆಂದು ಹೆಸರಿನಿಂದ ಪ್ರಸಿದ್ಧನಾದ ಆದಿತ್ಯನಿಗೆ ವಿಶೇಷಣವೆಂದು ವಿವರಿಸಿದೆ. ಈ ಮಿತ್ರ, ಅರ್ಯಮಾ

ವರುಣ, ಅಂಶ ಎಂಬಿವರು ಋತ್ವಿಜರಾದ ನಾವು ಪಠಿಸುವ ಸ್ತೋತ್ರಗಳನ್ನು ಪ್ರತ್ಯೇಕವಾಗಿ ಶ್ರವಣಮಾಡಿ ಅನುಗ್ರಹ ವನ್ನು ಮಾಡಲಿ ಎಂದು ಆಶಂಸಿತವಾಗಿದೆ.



॥ ಸಂಹಿತಾಪಾಠಃ ॥

ಇಮಂ ಸ್ತೋಮಂ ಸಕ್ರತವೋ ಮೇ ಅದ್ಯ ಮಿತ್ರೋ ಅರ್ಯಮಾ ವರುಣೋ ಜುಷಂತ ।
ಆದಿತ್ಯಾಸಃ ಶುಚಯೋ ಧಾರಪೂತಾ ಅವೃಜಿನಾ ಅನವದ್ಯಾ ಅರಿಷ್ಟಾಃ ॥ ೨ ॥

॥ ಪದಪಾಠಃ ॥

ಇಮಂ । ಸ್ತೋಮಂ । ಸಽಕ್ರತವಃ । ಮೇ । ಅದ್ಯ । ಮಿತ್ರಃ । ಅರ್ಯಮಾ । ವರುಣಃ । ಜುಷಂತ ।
ಆದಿತ್ಯಾಸಃ । ಶುಚಯಃ । ಧಾರಽಪೂತಾಃ । ಅವೃಜಿನಾಃ । ಅನವದ್ಯಾಃ । ಅರಿಷ್ಟಾಃ ॥ ೨ ॥

॥ ಸಾಯಣಭಾಷ್ಯಂ ॥

ಪೂರ್ವೋಕ್ತ ಏವ ಪಶಾವಿಮಂ ಸ್ತೋಮಮಿತ್ಯೇಷಾ ವಪಾಯಾ ಯಾಜ್ಯಾ । ಸೂತ್ರಿತಂ ಚ । ಇಮಂ ಸ್ತೋಮಂ ಸಕ್ರತವೋ ಮೇ ಅದ್ಯ ತಿಸ್ರೋ ಭೂಮೀರ್ಧಾರಯನ್ ತ್ರೀರುತ ದ್ಯೂನ್ । ಆ. ೩. ೮. । ಇತಿ ॥

ಇಮಂ ಮೇಽಸ್ಮದೀಯಂ ಸ್ತೋಮಂ ಸ್ತೋತ್ರಂ ಸಕ್ರತವಃ ಸಮಾನಕರ್ಮಾಣಃ ಸಮಾನಪ್ರಜ್ಞಾ ವಾ ಮಿತ್ರಾದಯೋಽದ್ಯೇದಾನೀಂ ಜುಷಂತೆ । ಜುಷಂತಾಂ ಸೇವಂತಾಂ । ಕೀದೃಶಾಸ್ತೇ । ಆದಿತ್ಯಾ-ಸೋಽದಿತೇಃ ಪುತ್ರಾಃ ಶುಚಯೋ ದೀಪ್ಯಮಾನಾಃ । ಧಾರಪೂತಾ ಉದಕಧಾರಾಭಿರಿವ ಪೂತಾಃ । ನಿರ್ಮಲಾ ಇತ್ಯರ್ಥಃ । ಅವೃಜಿನಾಃ । ವೃಜೀ ವರ್ಜನೇ । ಅವರ್ಜಿತಾರಃ । ಸರ್ವಾನನುಗ್ರಾಹಕಾ ಇತ್ಯರ್ಥಃ। ಅನವದ್ಯಾಃ। ಅವದ್ಯೇನ ಗರ್ಹ್ಯೇಣ ಪಾಪೇನ ರಹಿತಾಃ । ಅರಿಷ್ಟಾಃ ಕೇನಾಪ್ಯಹಿಂಸಿತಾಃ ॥

॥ ಪ್ರತಿಪದಾರ್ಥ ॥

**ಆದಿತ್ಯಾಸಃ**—ಅದಿತಿಪುತ್ರರೂ । **ಶುಚಯಃ**—ಪ್ರಕಾಶಮಾನರೂ । **ಧಾರಪೂತಾಃ**—ಉದಕದ ಧಾರೆಯಂತೆ ನಿರ್ಮಲರೂ । **ಅವೃಜಿನಾಃ**—(ಭಕ್ತರಾರನ್ನೂ) ಕೈಬಿಡದೇ ಎಲ್ಲರನ್ನೂ ಅನುಗ್ರಹಿಸುವವರೂ । **ಅನವದ್ಯಾಃ**—ಪಾಪರಹಿತರೂ । **ಅರಿಷ್ಟಾಃ**—(ಯಾರಿಂದಲೂ) ಹಿಂಸಿತರಲ್ಲದವರೂ। **ಸಕ್ರತವಃ**—ಸಮಾನವಾದ (ಕರ್ಮ ಅಥವಾ) ಪ್ರಜ್ಞೆಯುಳ್ಳವರೂ ಆದ । **ಮಿತ್ರಃ**—ಮಿತ್ರನೂ । **ಅರ್ಯಮಾ**—ಅರ್ಯಮನೂ । **ವರುಣಃ**—

ವರುಣನೂ ಸಹ | **ಮೇ** –ನನ್ನಿಂದ ಪಠಿತವಾದ | **ಇಮಂ ಸ್ತೋಮಂ**— ಈ ಸ್ತೋತ್ರವನ್ನು | **ಅದ್ಯ—** ಈ ಯಾಗ ಕಾಲದಲ್ಲಿ | **ಜುಷಂತ**—ಸೇವಿಸಲಿ.

॥ ಭಾವಾರ್ಥ ॥

ಅದಿತಿಪುತ್ರರೂ, ಪ್ರಕಾಶಮಾನರೂ, ಉದಕದ ಧಾರೆಯಂತೆ ನಿರ್ಮಲರೂ, ಭಕ್ತರಾರನ್ನೂ ಕೈಬಿಡದೆ ಎಲ್ಲರನ್ನೂ ಅನುಗ್ರಹಿಸುವವರೂ ಪಾಪರಹಿತರೂ, ಯಾರಿಂದಲೂ ಹಿಂಸಿತರಲ್ಲದವರೂ, ಸಮಾನವಾದ ಕರ್ಮವೂ ಪ್ರಜ್ಞೆಯೂ ಉಳ್ಳವರೂ ಆದ ಮಿತ್ರ, ಅರ್ಯಮ ಮತ್ತು ವರುಣ ದೇವತೆಗಳು ನನ್ನಿಂದ ಪಠಿತವಾದ ಈ ಸ್ತೋತ್ರವನ್ನು ಈ ಯಾಗಕಾಲದಲ್ಲಿ ಸೇವಿಸಲಿ. (ಕೇಳಿ ತೃಪ್ತಿಪಡಲಿ)

English Translation.

May those of equal exploits, Mitra, Aryaman, Varuna, be pleased to-day by this my praise; they who are Adityas, luminous, purified by showers, who abandon none (that worship them), who are irreproachable. unassailable.

॥ ವಿಶೇಷವಿಷಯಗಳು ॥

ಹಿಂದೆ ಹೇಳಿದ ಪಶುಯಾಗದಲ್ಲಿ—**ಇಮಂ ಸ್ತೋಮಂ** ಎಂಬ ಈ ಋಕ್ಕನ್ನು ವಪಾಹೋಮಮಾಡುವಾಗ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ಇಮಂ ಸ್ತೋಮಂ ಸಕ್ರತವೋ ಮೇ ಅದ್ಯ ತಿಸ್ರೋ ಭೂಮೀರ್ಧಾರಯನ್ ತ್ರೀರುತ ದ್ಯೂನ್** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ ೩-೮).

**ಸಕ್ರತವಃ—ಸಮಾನಕರ್ಮಾಣಃ ಸಮಾನಪ್ರಜ್ಞಾ ವಾ ಮಿತ್ರಾದಯಃ** ಒಂದೇ ವಿಧವಾದ ಕಾರ್ಯವುಳ್ಳವರೂ, ಏಕರೀತಿಯಾಗಿರುವ ಜ್ಞಾನವನ್ನು ಹೊಂದಿರುವವರೂ ಆದ ಮಿತ್ರರೇ ಮೊದಲಾದವರು ಋತ್ವಿಜರಾದ ನಮ್ಮ ಸ್ತುತಿಗಳನ್ನು ಶ್ರವಣಮಾಡಿ ಪ್ರೀತರಾಗಲಿ ಎಂದು ವರ್ಣಿಸಿದೆ.

ಈ ಆದಿತ್ಯರು **ದೀಪ್ಯಮಾನಾಃ** ತೇಜಶ್ಶಾಲಿಗಳಾಗಿಯೂ, **ಉದಕಧಾರಾಭಿರಿವ ಪೂತಾಃ** ಜಲಧಾರೆಗಳ ಹಾಗೆ ಪವಿತ್ರರಾಗಿಯೂ, **ಅವರ್ಜಿತಾರಃ** ಸರ್ವರಿಗೂ ಅನುಗ್ರಹವನ್ನು ಆಚರಿಸುವವರಾಗಿಯೂ, **ಗರ್ಹ್ಯೇಣ ಪಾಪೇನ ರಹಿತಾಃ** ನಿಂದಿತವಾದ ಪಾಪಗಳಿಂದ ವರ್ಜಿತರಾಗಿಯೂ, **ಕೇನಾಪ್ಯಹಿಂಸಿತಾಃ** ಇತರರು ಯಾರಿಂದಲೂ ಹಿಂಸೆಮಾಡಲು ಅಶಕ್ಯರೆಂದೂ ವರ್ಣಿಸಿದೆ. ಇವರ ಮಹಿಮೆಯು ಈ ಪ್ರಕಾರವಾಗಿ ವಿಶದಮಾಡಲ್ಪಟ್ಟಿರುವುದು.

॥ ಸಂಹಿತಾಪಾಠಃ ॥

ತ ಆದಿತ್ಯಾಸ ಉರವೋ ಗಭೀರಾ ಅದಬ್ಧಾಸೋ ದಿಪ್ಸನ್ತೋ ಭೂರ್ಯಕ್ಷಾಃ |
ಅನ್ತಃ ಪಶ್ಯನ್ತಿ ವೃಜಿನೋತ ಸಾಧು ಸರ್ವಂ ರಾಜಭ್ಯಃ ಪರಮಾ ಚಿದನ್ತಿ || ೩ ||

॥ ಪದಪಾಠಃ ॥

ತೇ । ಆದಿತ್ಯಾಸಃ । ಉರವಃ । ಗಭೀರಾಃ । ಅದಬ್ಧಾಸಃ । ದಿಪ್ಸನ್ತಃ । ಭೂರಿಽಅಕ್ಷಾಃ ।
ಅನ್ತರಿತಿ । ಪಶ್ಯನ್ತಿ । ವೃಜಿನಾ । ಉತ । ಸಾಧು । ಸರ್ವಂ । ರಾಜಽಭ್ಯಃ । ಪರಮಾ । ಚಿತ್ । ಅನ್ತಿ ॥ ೩ ॥

॥ ಸಾಯಣಭಾಷ್ಯಂ ॥

ತಸ್ಮಿನ್ನೇವ ಪಶೌ ತ ಆದಿತ್ಯಾಸ ಇತಿ ಹವಿಷೋಽನುವಾಕ್ಯಾ । ಸೂತ್ರಂ ತು ಪೂರ್ವಮೇವೋದಾಹೃತಂ ॥

ತ ಆದಿತ್ಯಾಸೋಽದಿತೇಃ ಪುತ್ರಾ ಉರವೋ ಮಹಾಂತೋ ಗಭೀರಾ ಗಾಂಭಿರ್ಯೋಪೇತಾ ಅದಬ್ಧಾಸಃ ಶತ್ರುಭಿರಹಿಂಸಿತಾಃ ಸಂತೋ ದಿಪ್ಸಂತಃ ಶತ್ರೂನ್ದಂಭಿತುಂ ಹಿಂಸಿತುಮಿಚ್ಛಂತಃ ॥ ದಂಭು ದಂಭೇ । ಅಸ್ಮಾದಿಚ್ಛಾಸನಿ ಸನೀವಂತರ್ಧೇತೀಡಭಾವಪಕ್ಷೇ ದಂಭ ಇಚ್ಚೇತೀಕಾರಃ । ದಂಭೇರ್ಹಲ್ಗ್ರಹಣಸ್ಯ ಜಾತಿವಾಚಕತ್ವಾತ್ಸಿದ್ಧಮಿತಿ ಸನಃ ಕಿತ್ತ್ವೇಽನುನಾಸಿಕಲೋಪಃ ॥ ತಥಾ ಭೂರ್ಯಕ್ಷಾಃ । ಭೂರೀಣಿ ಬಹೂನ್ಯಕ್ಷೀಣಿ ಚಕ್ಷೂಂಷಿ ಯೇಷಾಂ ತೇ ತಥೋಕ್ತಾಃ । ಬಹುತೇಜಸೋ ವಾ ॥ ಬಹುವ್ರೀಹೌ ಸಕ್ಥ್ಯಕ್ಷ್ಣೋರಿತಿ ಷಚ್ ಸಮಾಸಾಂತಃ ॥ ಏವಂಭೂತಾ ಆದಿತ್ಯಾ ಅಂತರ್ಮಧ್ಯೇ ಪ್ರಾಣಿನಾಂ ಹೃದಿ ಪ್ರೇರಕತಯಾ ವರ್ತಮಾನಾಃ ಸಂತೋ ವೃಜಿನಾ ವೃಜಿನಾನಿ ಪಾಪಾನಿ ಉತ ಅಪಿ ಚ ಸಾಧು ಸಾಧೂನಿ ಪುಣ್ಯಾನಿ ಚ ಪ್ರಾಣಿಭಿಃ ಕೃತಾನಿ ಪಶ್ಯಂತಿ । ಜಾನಂತಿ । ಪರಮಾ ಚಿತ್ ಪರಮಾಣಿ ದೂರದೇಶಾವಸ್ಥಿತಾನ್ಯಪಿ ಸರ್ವಂ ಸರ್ವಾಣಿ ದೃಶ್ಯಮಾನಾನಿ ರಾಜಭ್ಯೋ ರಾಜ್ಞಾಮೀಶ್ವರಾಣಾಮಾದಿತ್ಯಾನಾಮಂತ್ಯಂತಿಕೇ ಸಮೀಪೇ ವರ್ತತ ಇತಿ ಶೇಷಃ ॥ ಕಾದಿಲೋಪೋ ಬಹುಲಮಿತ್ಯಂತಿಕಶಬ್ದಸ್ಯ ಕಾದಿಲೋಪಃ ॥

॥ ಪ್ರತಿಪದಾರ್ಥ ॥

**ಆದಿತ್ಯಾಸಃ**—ಅದಿತಿಪುತ್ರರೂ । **ಉರವಃ**—ಮಹತ್ತಾದ ಸ್ವರೂಪವುಳ್ಳವರೂ । **ಗಭೀರಾಃ**—ಗಾಂಭೀರ್ಯದಿಂದ ಕೂಡಿದವರೂ । **ಅದಬ್ಧಾಸಃ**—ಶತ್ರುಗಳಿಂದ ಹಿಂಸಿತರಾಗದವರೂ । **ದಿಪ್ಸಂತಃ**—ಶತ್ರುನಾಶಕ್ಕೆ ಇಚ್ಛಿಸುವವರೂ । **ಭೂರ್ಯಕ್ಷಾಃ**—ಬಹಳವಾದ ಚಕ್ಷುಸ್ಸುಳ್ಳವರೂ ಅಥವಾ ಪ್ರಭೂತವಾದ ತೇಜಸ್ಸುಳ್ಳವರೂ ಆದ । **ತೇ**—ಆ ಆದಿತ್ಯರು । **ಅಂತಃ**—(ಪ್ರಾಣಿಗಳ) ಹೃದಯದೊಳಗಿದ್ದುಕೊಂಡು । **ವೃಜಿನಾ**—(ಮಾನವರ) ಪಾಪಗಳನ್ನೂ । **ಉತ**—ಮತ್ತು । **ಸಾಧು**—ಪುಣ್ಯಕಾರ್ಯಗಳನ್ನೂ । **ಪಶ್ಯಂತಿ**—ತಿಳಿಯುತ್ತಾರೆ । **ಪರಮಾ ಚಿತ್**—ಅತ್ಯಂತ ದೂರದಲ್ಲಿದ್ದರೂ ಸಹ । **ಸರ್ವಂ**—ಸಕಲ ವಸ್ತುಗಳೂ । **ರಾಜಭ್ಯಃ**—ಪ್ರಭುಗಳಾದ ಆದಿತ್ಯರಿಗೆ । **ಅಂತಿ**—ಅತ್ಯಂತ ಸಮೀಪದಲ್ಲಿರುವಂತೆಯೇ ಇರುತ್ತದೆ.

॥ ಭಾವಾರ್ಥ ॥

ಅದಿತಿಪುತ್ರರೂ, ಮಹತ್ತಾದ ಸ್ವರೂಪವುಳ್ಳವರೂ, ಗಾಂಭೀರ್ಯದಿಂದ ಕೂಡಿದವರೂ, ಶತ್ರುಗಳಿಂದ ಹಿಂಸಿತರಾಗದವರೂ, ಶತ್ರುನಾಶಕ್ಕೆ ಇಚ್ಛಿಸುವವರೂ, ಪ್ರಭೂತವಾದ ತೇಜಸ್ಸುಳ್ಳವರೂ ಆದ ಆ ಆದಿತ್ಯರು ಪ್ರಾಣಿಗಳ

ಹೃದಯದೊಳಗಿದ್ದುಕೊಂಡು ಮಾನವರ ಪಾಪಗಳನ್ನೂ ಮತ್ತು ಪುಣ್ಯಕಾರ್ಯಗಳನ್ನೂ ತಿಳಿಯುತ್ತಾರೆ. ಅತ್ಯಂತ ದೂರದಲ್ಲಿದ್ದರೂ ಸಹ ಸಕಲ ವಸ್ತುಗಳೂ ಪ್ರಭುಗಳಾದ ಆದಿತ್ಯರಿಗೆ ಅತ್ಯಂತ ಸಮೀಪದಲ್ಲಿರುವಂತೆಯೇ ಇರುತ್ತವೆ.

## English Translation.

Those Adityas, mighty, profound, unsubdued, subduing, many eyed behold the innermost (thoughts of men), whether wicked or virtuous, whether far from or nigh to those royal (deities).

॥ ವಿಶೇಷವಿಷಯಗಳು ॥

ಹಿಂದೆ ಹೇಳಿದ ಅದೇ ಪಶುಯಾಗದಲ್ಲಿ—**ತೇ ಆದಿತ್ಯಾಸ** ಎಂಬ ಈ ಋಕ್ಕನ್ನು ಹವಿಸ್ಸನ್ನು ಹೋಮ ಮಾಡುವಾಗ ಅನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಹಿಂದೆ ಹೇಳಿದ ಸೂತ್ರದಲ್ಲಿಯೇ ನಿರ್ದೇಶಿಸಲಾಗಿರುವುದು.

**ಭೂರ್ಯಕ್ಷಾಃ—ಬಹೂನಿ ಚಕ್ಷೂಂಷಿ ಯೇಷಾಂ ತೇ ಬಹುತೇಜಸೋ ವಾ** । ಆದಿತ್ಯರು ಅನೇಕ ವಿಧದಿಂದ ಎಲ್ಲವನ್ನು ನೋಡುವವರೂ, ಬಹಳ ಕಣ್ಣುಗಳನ್ನು ಹೊಂದಿರುವವರೂ, ಅಥವಾ ಪ್ರಭೂತವಾದ ತೇಜಸ್ಸುಗಳನ್ನು ಹೊಂದಿ ಇರುವವರೂ ಎಂದು ವರ್ಣಿಸಿದೆ.

**ಅಂತಃ—ಮಧ್ಯೇ ಪ್ರಾಣಿನಾಂ ಹೃದಿ ಪ್ರೇರಕತಯಾ ವರ್ತಮಾನಾಃ**—ಪ್ರಾಣಿಗಳು ಆಚರಿಸುವ ಕಾರ್ಯಗಳಿಗೆ ಅನುಸಾರವಾಗಿ ಅವರವರ ಹೃದಯದಲ್ಲಿ ಇದ್ದುಕೊಂಡು ಪ್ರೇರಿಸುವವರಾಗಿರುವವರು ಎಂದು ಆದಿತ್ಯರಿಗೆ ಅಂತರ್ಯಾಮಿತ್ವವನ್ನು ವರ್ಣಿಸಿದೆ.

**ಸಾಧು ಪಶ್ಯಂತಿ—ಪ್ರಾಣಿಭಿಃ ಕೃತಾನಿ ಚ ಪುಣ್ಯಾನಿ ಜಾನಂತಿ** ಆಯಾಯ ಪ್ರಾಣಿಗಳು ಆಚರಿಸಿದ ಕರ್ಮಗಳಿಗನುಗುಣವಾದ ಪುಣ್ಯವನ್ನು ಎಲ್ಲವನ್ನೂ ತಿಳಿದು ಇರುವರೆಂದು ವಿವರಿಸಿದೆ.

**ಪರಮಾ ಚಿತ್ ಸರ್ವಂ ರಾಜಭ್ಯಃ ಅಂತಿ—ದೂರದೇಶಸ್ಥಿತಾನ್ಯಪಿ ಸರ್ವಾಣಿ ದೃಶ್ಯಮಾನಾನಿ ಈಶ್ವರಾಣಾಂ ಆದಿತ್ಯಾನಾಂ ಸಮೀಪೇ ವರ್ತತೇ** । ದೂರ ಪ್ರದೇಶದಲ್ಲಿ ಇರುವ ಸಮಸ್ತ ವಸ್ತುಗಳೂ ಸರ್ವಕ್ಕೂ ಅಧಿಪತಿಗಳಾದ ಆದಿತ್ಯರಿಗೆ ಎಲ್ಲವೂ ಸಮೀಪದಲ್ಲಿರುವಂತೆಯೇ ಕಾಣುವುವು ಎಂದು ಅವರ ದೃಕ್ಪಾಟವವೂ, ಜ್ಞಾನಾಧಿಕ್ಯವೂ ವಿವೃತವಾಗಿದೆ.



॥ ಸಂಹಿತಾಪಾಠಃ ॥

ಧಾರಯಂತ ಆದಿತ್ಯಾಸೋ ಜಗತ್ಸ್ಥಾ ದೇವಾ ವಿಶ್ವಸ್ಯ ಭುವನಸ್ಯ ಗೋಪಾಃ ।

ದೀರ್ಘಾಧಿಯೋ ರಕ್ಷಮಾಣಾ ಅಸುರ್ಯಮೃತಾವಾನಶ್ಚಯಮಾನಾ ಋಣಾನಿ ॥

॥ ಪದಪಾಠಃ ॥

ಧಾರಯನ್ತಃ । ಆದಿತ್ಯಾಸಃ । ಜಗತ್ । ಸ್ಥಾಃ । ದೇವಾಃ । ವಿಶ್ವಸ್ಯ । ಭುವನಸ್ಯ । ಗೋಪಾಃ ।

ದೀರ್ಘಽಧಿಯಃ । ರಕ್ಷಮಾಣಾಃ । ಅಸುರ್ಯಂ । ಋತಽವಾನಃ । ಚಯಮಾನಾಃ । ಋಣಾನಿ ॥ ೪ ॥

॥ ಸಾಯಣಭಾಷ್ಯಂ ॥

ಸಾಗ್ನಿಚಿತ್ಯೇ ಕ್ರತೌ ದೀಕ್ಷಣೀಯಾಯಾಮಾದಿತ್ಯಯಾಗಸ್ಯ ಧಾರಯಂತ ಇತ್ಯಾದಿಕೇ ದ್ವೇ ಯಾಜ್ಯಾನುವಾಕ್ಯೇ । ಅತ ಏವ ಭುವದ್ವದ್ಭುವನಪತಿವಿಶೇಷಣವಿಶಿಷ್ಟಾದಿತ್ಯಯಾಗೇಽಪಿ । ತಥಾ ಚ ದೀಕ್ಷಣೀಯಾಯಾಮಿತಿ ಖಂಡೇ ಸೂತ್ರಿತಂ । ಧಾರಯಂತ ಆದಿತ್ಯಾಸೋ ಜಗತ್ಸ್ಥಾ ಇತಿ ದ್ವೇ ಏತೇ ಏವ ಭುವದ್ವದ್ಭ್ಯೋ ಭುವನಪತಿಭ್ಯೋ ವಾ । ಆ. ೪. ೨. । ಇತಿ ॥

ಜಗಜ್ಜಂಗಮಂ ಸ್ಥಾಃ ಸ್ಥಾವರಂ ಚ ॥ ತಿಷ್ಠತೇಃ ಕರ್ತರ್ಯಸುನ್ ॥ ಏತದುಭಯವಿಧಂ ಭೂತಜಾತಂ ಧಾರಯಂತೋಽವಸ್ಥಾಪಯಂತೋ ದೇವಾ ದಾನಾದಿಗುಣಯುಕ್ತಾ ವಿಶ್ವಸ್ಯ ಭುವನಸ್ಯ ಸರ್ವಸ್ಯ ಲೋಕಸ್ಯ ಗೋಪಾ ಗೋಪಯಿತಾರೋ ರಕ್ಷಕಾ ದೀರ್ಘಾಧಿಯೋ ದೀರ್ಘಾಣಿ ಧಿಯಃ ಕರ್ಮಾಣಿ ಜ್ಞಾನಾನಿ ವಾ ಯೇಷಾಂ ತಾದೃಶಾಃ ॥ ಅನ್ಯೇಷಾಮಪಿ ದೃಶ್ಯತ ಇತಿ ಪೂರ್ವಪದಸ್ಯ ದೀರ್ಘಃ ॥ ಅಸುರ್ಯಂ । ಅಸವಃ ಪ್ರಾಣಾಃ । ತೇನ ಚ ತದ್ಧೇತುಭೂತಾ ಆಪೋ ಲಕ್ಷ್ಯಂತೇ । ಅಪಾಂ ತದ್ಧೇತುತ್ವಂ ಚ ಛಾಂದೋಗ್ಯೇ ಸ್ಪಷ್ಟಮಾಮ್ನಾತಂ । ಆಪೋಮಯಃ ಪ್ರಾಣಃ । ಛಾಂ. ಉ. ೬-೫-೪ । ಇತಿ । ಅಸುಮುದಕಂ ದದಾತೀತ್ಯಸುರೋ ಮೇಘಃ । ತತ್ರ ಭವಂ ಮೇಘಾಂತರ್ವರ್ತಮಾನಮುದಕಂ ರಕ್ಷಮಾಣಾಃ । ತತ್ತತ್ಕಾಲೇ ವೃಷ್ಟ್ಯುತ್ಪಾದನಾಯ ರಕ್ಷಂತಃ ॥ ಅಸುರಶಬ್ದಾದ್ಭವೇ ಛಂದಸೀತಿ ಯತ್ ॥ ಋತಾವಾನಃ ಸತ್ಯವಂತೋ ಯಜ್ಞವಂತೋ ವಾ ॥ ಛಂದಸೀವನಿಪಾವಿತಿ ಮತ್ವರ್ಥೀಯೋ ವನಿಪ್ । ಪೂರ್ವವದ್ದೀರ್ಘಃ ॥ ಋಣಾನಿ ಸ್ತೋತೃಭಿರನ್ಯೇಭ್ಯಃ ಪ್ರದೇಯಾನಿ ಚಯಮಾನಾ ಅಪಗಮಯಂತಃ ॥ ಚಯ ಗತೌ । ಭೌವಾದಿಕೋಽನುದಾತ್ತೇತ್ ॥ ಏವಂಗುಣವಿಶಿಷ್ಟಾನುಗ್ರಹಾ ವಾ ಅಸ್ಮದಧೀನಾ ಭವಂತ್ವಿತಿ ಶೇಷಃ ॥

॥ ಪ್ರತಿಪದಾರ್ಥ ॥

**ಜಗತ್**—ಜಂಗಮಾತ್ಮಕವಾದ ಪ್ರಾಣಿಗಳನ್ನೂ । **ಸ್ಥಾಃ**—ಸ್ಥಿರವಾದ ವಸ್ತುಗಳನ್ನೂ । **ಧಾರಯಂತಃ** ಸ್ಥಾಪಿಸಿ ಧರಿಸಿರುವವರೂ । **ದೇವಾಃ**—ದಾನಾದಿಗುಣಗಳಿಂದ ಕೂಡಿದವರೂ । **ವಿಶ್ವಸ್ಯ ಭುವನಸ್ಯ**—ಸಕಲ ಲೋಕಕ್ಕೂ । **ಗೋಪಾಃ**—ರಕ್ಷಕರೂ । **ದೀರ್ಘಧಿಯಃ**—ದೀರ್ಘವಾದ ಪ್ರಜ್ಞೆಯುಳ್ಳವರೂ । **ಅಸುರ್ಯಂ**—ಮೇಘಸ್ಥವಾದ ಉದಕವನ್ನು । **ರಕ್ಷಮಾಣಾಃ**—ಸಕಾಲದಲ್ಲಿ ಶೇಖರಿಸಿ ರಕ್ಷಿಸುವವರೂ । **ಋತಾವಾನಃ**—ಸತ್ಯವಂತರೂ । **ಋಣಾನಿ**—(ಸ್ತೋತೃಗಳು ಇತರರಿಗೆ ಕೊಡಬೇಕಾದ) ಋಣಗಳನ್ನು । **ಚಯಮಾನಾಃ**—ತೀರಿಸುವವರೂ ಆದ । **ಆದಿತ್ಯಾಸಃ**—ಆದಿತ್ಯರು (ನಮ್ಮನ್ನನುಗ್ರಹಿಸಲಿ).

॥ ಭಾವಾರ್ಥ ॥

ಜಂಗಮಾತ್ಮವಾದ ಪ್ರಾಣಿಗಳನ್ನೂ, ಸ್ಥಿರವಾದ ವಸ್ತುಗಳನ್ನೂ ಸ್ಥಾಪಿಸಿ ಧರಿಸಿರುವವರೂ, ದಾನಾದಿಗುಣಗಳಿಂದ ಕೂಡಿದವರೂ ಸಕಲಲೋಕಕ್ಕೂ ರಕ್ಷಕರೂ, ದೀರ್ಘವಾದ ಪ್ರಜ್ಞೆಯುಳ್ಳವರೂ ಮೇಘಸ್ಥವಾದ ಉದಕವನ್ನು

ಸಕಾಲದಲ್ಲಿ ಶೇಖರಿಸಿ ರಕ್ಷಿಸುವವರೂ, ಸತ್ಯವಂತರೂ, ಸ್ತೋತೃಗಳು ಇತರರಿಗೆ ಕೊಡಬೇಕಾದ ಋಣಗಳನ್ನು ತೀರಿಸುವವರೂ ಆದ ಆದಿತ್ಯರು ನಮ್ಮನ್ನನುಗ್ರಹಿಸಲಿ.

## English Translation.

The divine Adityas are the upholders (of all things) moveable or immoveble; the protectors of the universe: the provident in acts; the collectors of rain: the possessors of veracity; the acquitters of our debts.

॥ ವಿಶೇಷವಿಷಯಗಳು ॥

ಅಗ್ನಿಚಿತಿಯನ್ನು ಮಾಡುವಾಗ **ದೀಕ್ಷಣೀಯಾ** ಎಂಬ ಕರ್ಮದಲ್ಲಿ ಆದಿತ್ಯಯಾಗದಲ್ಲಿ—**ಧಾರಯಂತ ಆದಿತ್ಯಾಸಃ**—ಎಂಬ ಋಕ್ಕೂ ಅದರ ಮುಂದಿನ ಋಕ್ಕೂ ಸಹ ಯಾಜ್ಯಾ ಮತ್ತು ಪುರೋನುವಾಕ್ಯಾಮಂತ್ರಗಳನ್ನಾಗಿ ಉಪಯೋಗಿಸಲ್ಪಡಬೇಕೆಂದೂ ಮತ್ತು **ಭುವದ್ವತ್, ಭುವನಪತಿ** ಎಂಬ ವಿಶೇಷಣ ಸಹಿತರಾದ ಆದಿತ್ಯ ದೇವತೆಗಳ ಪರವಾಗಿಯೂ ಸಹ ಈ ಋಕ್ಕುಗಳ ವಿನಿಯೋಗವಿರುವುದೆಂದೂ ಆಶ್ವಲಾಯನಶ್ರೌತಸೂತ್ರದ—**ತಥಾ ಚ ದೀಕ್ಷಣೀಯಾಯಾಂ** ಎಂಬ ಖಂಡದ, **ಧಾರಯಂತ ಆದಿತ್ಯಾಸೋ ಜಗತ್ಸ್ಥಾ ಇತಿ ದ್ವೇ ಏತೇ ಏವ ಭುವದ್ವದ್ಭ್ಯೋ ಭುವನಪತಿಭ್ಯೋ ವಾ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೪-೨)

**ಜಗತ್ ಸ್ಥಾಃಧಾರಯಂತ—ಸ್ಥಾವರಂ ಜಂಗಮಂ ಚ ಉಭಯವಿಧಂ ಭೂತಜಾತಂ ಅವಸ್ಥಾಪಯಂತಿ** | ಸ್ಥಿರವಾದ ವೃಕ್ಷಲತಾದಿರೂಪದಿಂದ ಇರುವ, ಸಂಚರಿಸುವ ಪಶುಮೃಗಪಕ್ಷಿ ಮನುಷ್ಯರೇ ಮೊದಲಾದ ರೂಪದಿಂದ ಇರುವ ಎರಡು ವಿಧವಾದ ಪ್ರಾಣಿಗಳನ್ನು ಅವರವರ ಅರ್ಹತೆಗೆ ಅನುಸಾರವಾಗಿರುವಂತೆ ಆದಿತ್ಯರು ಇರಿಸಿರುವರೆಂದು ವರ್ಣಿಸಿ, ಆದಿತ್ಯರು **ದೇವಾಃ—ದಾನಾದಿಗುಣಯುಕ್ತಾಃ** ದಾನವೇ ಮೊದಲಾದ ಗುಣಗಳಿಂದ ಕೂಡಿರುವವರೆಂದು ವಿವರಿಸಿದೆ

**ದೀರ್ಘಾಧಿಯಃ—ದೀರ್ಘಾಣಿ ಧಿಯಃ ಕರ್ಮಾಣಿ ಜ್ಞಾನಾನಿ ವಾ ಯೇಷಾಂ**—ಆದಿತ್ಯರು ಪ್ರಭೂತ ಪಾಪಕರ್ಮಗಳನ್ನು ಆಚರಿಸತಕ್ಕವರೂ, ಮತ್ತು ಪ್ರಬಲವಾದ ಜ್ಞಾನವಂತರಾಗಿರುವವರೂ ಆಗಿರುವರೆಂದು ವರ್ಣಿಸಿದೆ.

**ಅಸುರ್ಯಂ ರಕ್ಷಮಾಣಾಃ—ಅಸವಃ ಪ್ರಾಣಾಃ | ತೇನ ಚ ತದ್ಧೇತುಭೂತಾಃ ಆಪಃ ಲಕ್ಷ್ಯಂತೇ. ಅಸುಮುದಕಂ ದದಾತೀತ್ಯಸುರೋ ಮೇಘಃ | ತತ್ರ ಭವಂ ಮೇಘಾಂತರ್ವರ್ತಿನಮುದಕಂ ತತ್ತತ್ಕಾಲೇ ವೃಷ್ಟ್ಯುತ್ಪಾದನಾಯ ರಕ್ಷಂತಿ** | ಇಲ್ಲಿ ಅಸು ಶಬ್ದಕ್ಕೆ ಪ್ರಾಣವೆಂದು ಅರ್ಥ ವರ್ಣಿಸಿದೆ. ಇದರಿಂದ ಪ್ರಾಣ ವಾಯುವಿಗೆ ಕಾರಣವಾದ ಉದಕಗಳೆಂದು ಅರ್ಥವನ್ನು ವಿವರಿಸಿದೆ. ಮೇಘಗಳು ಉದಕವನ್ನು ಭೂಮಿಗೆ ಕೊಡುವ ಕಾರಣ ಅಸುರಶಬ್ದದಿಂದ ವ್ಯವಹೃತವಾಗಿದೆ. ಆದಿತ್ಯರು ಮೇಘಗಳಲ್ಲಿರುವ ಉದಕವನ್ನು ಆಯಾಯ ಕಾಲಗಳಲ್ಲಿ ವೃಷ್ಟಿರೂಪದಿಂದ ಭೂಮಿಗೆ ಕೊಡುವುದಕ್ಕಾಗಿ ರಕ್ಷಿಸುತ್ತಿರುವರೆಂದು ವರ್ಣಿಸಿದೆ. ಮತ್ತು **ಅಪಾಂ ತದ್ಧೇತುತ್ವಂ ಚ ಆಪೋಮಯಃ ಪ್ರಾಣಃ** (ಛಾಂ. ಉ. ೬-೫-೪) ಉದಕಗಳು ವಾಯುವಿಗೆ ಕಾರಣವಾಗಿರುವುವು ಎಂದು ವ್ಯಾಖ್ಯಾನಮಾಡಿ, ಛಾಂದೋಗ್ಯೋಪನಿಷತ್ತಿನ ವಾಕ್ಯವೂ ಉದಾಹೃತವಾಗಿದೆ.

**ಋತಾವಾನಃ—ಸತ್ಯವಂತೋ ಯಜ್ಞವಂತೋ ವಾ**—ಆದಿತ್ಯರು ಸತ್ಯದಿಂದಲೇ ವರ್ತಿಸುವವರೂ, ಅಥವಾ ಯಜ್ಞವನ್ನು ಆಚರಿಸುವವರು ಎಂದೂ, **ಋಣಾನಿ ಚಾಯಮಾನಾಃ—ಸ್ತೋತೃಭಿಃ ಅನ್ಯೇಭ್ಯಃ**

ಪ್ರದೇಯಾನಿ ಅಪಗಮಯಂತಃ ತಮ್ಮನ್ನು ಸ್ತುತಿಮಾಡುವ ಋತ್ವಿಜರು ಇತರರಿಗೆ ಕೊಡಬೇಕಾಗಿರುವ ಸಾಲಗಳನ್ನು ಪರಿಹರಿಸುವರೆಂದೂ ವರ್ಣಿಸಿದೆ.

॥ ಸಂಹಿತಾಪಾಠಃ ॥

ವಿದ್ಯಾಮಾದಿತ್ಯಾ ಅವಸೋ ವೋ ಅಸ್ಯ ಯದರ್ಯಮನ್ಭಯ ಆ ಚಿನ್ಮಯೋಭು

ಯುಷ್ಮಾಕಂ ಮಿತ್ರಾವರುಣಾ ಪ್ರಣೀತೌ ಪರಿ ಶ್ವಭ್ರೇವ ದುರಿತಾನಿ ವೃಜ್ಯಾಂ ॥

ಪದಪಾಠಃ ॥

ವಿದ್ಯಾಂ । ಆದಿತ್ಯಾಃ । ಅವಸಃ । ವಃ । ಅಸ್ಯ । ಯತ್ । ಅರ್ಯಮನ್ । ಭಯೇ । ಆ । ಚಿತ್ । ಮಯಃऽಭು ।

ಯುಷ್ಮಾಕಂ । ಮಿತ್ರಾವರುಣಾ । ಪ್ರऽನೀತೌ । ಪರಿ । ಶ್ವಭ್ರಾऽಇವ । ದುಃऽಇತಾನಿ । ವೃಜ್ಯಾಂ ॥ ೫ ॥

॥ ಸಾಯಣಭಾಷ್ಯಂ ॥

ಹೇ ಆದಿತ್ಯಾಃ ಅದಿತೇಃ ಪುತ್ರಾ ವೋ ಯುಷ್ಮಾಕಮಸ್ಯಾವಸಃ ॥ ಕರ್ಮಣಿ ಷಷ್ಠೀ ॥ ಇದಂ ರಕ್ಷಣಂ ವಿದ್ಯಾಂ । ಲಭೇಯ । ಭಯೇ ರಾಕ್ಷಸಾದಿಭ್ಯ ಆಗತೇ ಸತಿ ಯದ್ಯುಷ್ಮದೀಯಂ ರಕ್ಷಣಂ । ಚಿಚ್ಛಬ್ದಶ್ಚಾರ್ಥೇ । ಮಯೋಭು ಮಯಸಃ ಸುಖಸ್ಯ ಭಾವಯಿತೃ ಚ ತದಿತಂ ಲಭೇಯೇತ್ಯನ್ವಯಃ । ಹೇ ಅರ್ಯಮನ್ ಹೇ ಮಿತ್ರಾವರುಣಾ ಯುಷ್ಮಾಕಂ ಪ್ರಣೀತಾವಸ್ಮದ್ವಿಷಯೇ ಪ್ರಕೃಷ್ಟೇ ನಯನೇ ಸತಿ ಶ್ವಭ್ರೇವ ಶ್ವಭ್ರಾಣೀವ ಸ್ಥಾತುಮಯೋಗ್ಯಾನಿ ಗರ್ತವಂತಿ ಸ್ಥಲಾನೀವ ದುರಿತಾನಿ ಪಾಪಾನಿ ಪರಿವೃಜ್ಯಾಂ । ಪರಿತ್ಯಜೇಯಂ ॥ ವೃಜೀ ವರ್ಜನೇ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ ॥ ೬ ॥

॥ ಪ್ರತಿಪದಾರ್ಥ ॥

**ಆದಿತ್ಯಾಃ**— ಎಲೈ ಆದಿತ್ಯರೇ । **ಯತ್**— ಯಾವ ನಿಮ್ಮ ರಕ್ಷಣವು । **ಭಯೇ ಚಿತ್**— (ರಾಕ್ಷಸಾದಿಗಳಿಂದ) ಭಯವು ಪ್ರಾಪ್ತವಾದಾಗ । **ಮಯೋಭು**— (ಆ ಭಯವನ್ನು ತಪ್ಪಿಸಿ) ಸುಖವನ್ನುಂಟುಮಾಡುತ್ತದೆಯೋ ಅಂತಹ । **ವಃ**— ನಿಮ್ಮ । **ಅಸ್ಯ ಅವಸಃ**— ಈ ರಕ್ಷಣವನ್ನು । **ವಿದ್ಯಾಂ**— ನಾನು ಪಡೆಯುವಂತಾಗಲಿ । **ಅರ್ಯಮನ್**— ಎಲೈ ಅರ್ಯಮನೇ । **ಮಿತ್ರಾವರುಣಾ**— ಎಲೈ ಮಿತ್ರಾವರುಣರೇ । **ಯುಷ್ಮಾಕಂ** — ನಿಮ್ಮ । **ಪ್ರಣೀತೌ**— ಶ್ರೇಷ್ಠವಾದ ಮಾರ್ಗದರ್ಶಿತ್ವವಿರಲಾಗಿ । **ಶ್ವಭ್ರೇವ**— ಅಪಾಯಕರವಾದ ಹಳ್ಳವನ್ನು ದಾಟುವಂತೆ **ದುರಿತಾನಿ**--- ಪಾಪಗಳನ್ನು । **ಪರಿವೃಜ್ಯಾಂ**— ದಾಟುವಂತಾಗಲಿ.

॥ ಭಾವಾರ್ಥ ॥

ಎಲೈ ಆದಿತ್ಯರೇ, ಯಾವ ನಿಮ್ಮ ರಕ್ಷಣವು ರಾಕ್ಷಸಾದಿಗಳಿಂದ ಭಯವು ಪ್ರಾಪ್ತವಾದಾಗಲೂ ಆ ಭಯವನ್ನು ತಪ್ಪಿಸಿ ಸುಖವನ್ನುಂಟುಮಾಡುತ್ತದೆಯೋ, ಅಂತಹ ನಿಮ್ಮ ಈ ರಕ್ಷಣವನ್ನು ನಾವು ಪಡೆಯುವಂತಾಗಲಿ. ಎಲೈ ಅರ್ಯಮ ಮತ್ತು ಮಿತ್ರಾವರುಣರೇ, ನಿಮ್ಮ ಶ್ರೇಷ್ಠವಾದ ಮಾರ್ಗದರ್ಶಿತ್ವವಿರಲಾಗಿ, ಅಪಾಯಕರವಾದ ಹಳ್ಳವನ್ನು ದಾಟುವಂತೆ ನಾನು ಪಾಪಗಳನ್ನು ದಾಟುವಂತಾಗಲಿ.

## English Translation.

May I be conscious, Adityas, of this your protection, the cause of happiness (and security) in danger; Aryaman, Mitra, and Varuna, May I, through your guidance, escape the sins which are like pitfalls (in my path).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಯಜಮಾನರು ಆದಿತ್ಯರನ್ನು ಉದ್ದೇಶಿಸಿ ಆಚರಿಸಿರುವ ಎರಡು ವಿಧವಾದ ರಕ್ಷಣೆಯೂ ಪ್ರಾರ್ಥಿತವಾಗಿದೆ. ಮೊದಲನೆಯದಾಗಿ **ವಃ ಅಸ್ಯ ಅವಸಃ ವಿದ್ಯಾಂ ಲಭೇಯ**– ಆದಿತ್ಯಕೃತವಾದ ರಕ್ಷಣೆಯು ಜ್ಞಾನಪ್ರದವಾಗಿರಲಿ ಎಂದೂ, **ಭಯೇ ಮಯೋಭು—ಭಯೇ ರಾಕ್ಷಸಾದಿಭ್ಯ ಆಗತೇ ಸತಿ ಸುಖಸ್ಯ ಚ ಭಾವಯಿತೃ** ಭಯವನ್ನು ಉಂಟುಮಾಡುವ ರಾಕ್ಷಸರೇ ಮೊದಲಾದವರಿಂದ ಭಯವು ಯಜಮಾನನಿಗೆ ಪ್ರಾಪ್ತ ವಾದಾಗ ಆದಿತ್ಯರಿಂದ ಕೃತವಾದ ರಕ್ಷಣೆಯು ಸುಖಜನಕವಾಗಿ ಇರಲಿ ಎಂದೂ ಎರಡನೆಯ ಆಶಂಸನೆಯು ವರ್ಣಿತವಾಗಿದೆ.

ಅರ್ಯಮನನ್ನೂ ಮಿತ್ರಾವರುಣರನ್ನೂ ಸಂಭೋಧಿಸಿ, **ಯುಷ್ಮಾಕಂ ಪ್ರಣೀತೌ ಶ್ವಭ್ರೇ ದುರಿತಾನಿ ಪರಿವೃಜ್ಯಾಂ—ಯುಷ್ಮಾಕಂ ಪ್ರಕೃಷ್ಟನಯನೇ ಸತಿ ಸ್ಥಾತುಮಯೋಗ್ಯಾನಿ ಗರ್ತವಂತಿ ಸ್ಥೂಲಾನೀವ ಪಾಪಾನಿ ಪರಿತ್ಯಜೇಯಂ**—ಇವರಿಬ್ಬರೂ ಯಜಮಾನರನ್ನು ರಕ್ಷಿಸುವಾಗ ದೊಡ್ಡದಾದ ಹಳ್ಳಗಳಲ್ಲಿ ಬಿದ್ದು, ಸ್ಥಿತಿಯನ್ನು ಹೊಂದಲವಕಾಶವಿಲ್ಲದಿರುವಂತೆ ದುರ್ಗತಿಯನ್ನು ಉಂಟುಮಾಡುವ ಪ್ರಭೂತವಾದ ಪಾಪಗಳನ್ನು ಪರಿಹರಿಸುವ ಸ್ಥಿತಿಯು ಪ್ರಾಪ್ತವಾಗಲಿ ಎಂದು ಆಶಂಸನೆಯು ಉಕ್ತವಾಗಿದೆ. ಪಾಪಗಳಿಗೆ ಆಳವಾಗಿರುವ ಹಳ್ಳಗಳ ಹೋಲಿಕೆಯನ್ನು ಹೇಳಿ, ಅವುಗಳಿಂದ ರಕ್ಷಣೆಯು ವಿಮೋಚನಾ ರೂಪವೆಂದೂ ವಿವೃತವಾಗಿದೆ.

**ಮಯೋಭು** ಎಂಬ ಪದವು ಯಾಸ್ಕರಿಂದ **ಮಯಃ** ಎಂದು ಸುಖನಾಮಗಳಲ್ಲಿ (ನಿ. ೩-೧೩) ಉಕ್ತವಾಗಿ ರುವುದರಿಂದ **ಸುಖಸ್ಯ ಭಾವಯಿತೃ** ಸುಖಜನಕವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.



॥ ಸಂಹಿತಾಪಾಠಃ ॥

ಸುಗೋ ಹಿ ವೋ ಅರ್ಯಮನ್ಮಿತ್ರ ಪನ್ಥಾ ಅನೃಕ್ಷರೋ ವರುಣ ಸಾಧುರಸ್ತಿ ।
ತೇನಾದಿತ್ಯಾ ಅಧಿ ವೋಚತಾ ನೋ ಯಚ್ಛತಾ ನೋ ದುಷ್ಪರಿಹನ್ತು ಶರ್ಮ ॥೬॥

॥ ಪದಪಾಠಃ ॥

ಸುऽಗಃ । ಹಿ । ವಃ । ಅರ್ಯಮನ್ । ಮಿತ್ರ । ಪನ್ಥಾಃ । ಅನೃಕ್ಷರಃ । ವರುಣ । ಸಾಧುಃ । ಅಸ್ತಿ ।
ತೇನ । ಆದಿತ್ಯಾಃ । ಅಧಿ । ವೋಚತ । ನಃ । ಯಚ್ಛತ । ನಃ । ದುಃऽಪರಿಹನ್ತು । ಶರ್ಮ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅರ್ಯಮನ್ ಮಿತ್ರ ವರುಣ ವೋ ಯುಷ್ಮಾಕಂ ಸುಗಃ ಸುಖೇನ ಗಂತವ್ಯೋಽನೃಕ್ಷರಃ । ಋಕ್ಷರಃ ಕಂಟಕಃ ಋಚ್ಛತೇರಿತಿ । ತದ್ರಹಿತಃ ಸಾಧುಃ ಸಾಧಕಃ ಶೋಭನೋ ವಾ । ಏವಂಗುಣವಿಶಿಷ್ಟಃ ಪಂಥಾ ಮಾರ್ಗೋಽಸ್ತಿ । ವಿದ್ಯತೇ ಖಲು । ಅತಸ್ತೇನ ಪಥಾಸ್ಮಾನ್ ಶೋಭನಂ ನಯತೇತಿ ಶೇಷಃ । ಹೇ ಆದಿತ್ಯಾ ನೋಽಸ್ಮಾಕಮಧಿವೋಚತ । ಅಧಿವಚನಂ ಪಕ್ಷಪಾತೇನ ವಚನಂ ಕುರುತ । ಅಪಿ ಚ ನೋಽಸ್ಮಭ್ಯಂ ದುಷ್ಪರಿಹಂತು ಪರಿಹಂತುಂ ವಿನಾಶಯಿತುಮಶಕ್ಯಂ ಶರ್ಮ ಸುಖಂ ಯಚ್ಛತ । ದತ್ತ ॥ ದಾಣ್ ದಾನೇ । ಶಪಿ ಪ್ರಾಘ್ರೇತ್ಯಾದಿನಾ ಯಚ್ಛಾದೇಶಃ ॥

ಪ್ರತಿಪದಾರ್ಥ ॥

**ಅರ್ಯಮನ್**—ಅರ್ಯಮನೇ । **ಮಿತ್ರ**—ಮಿತ್ರದೇವನೇ । **ವರುಣ**—ವರುಣನೇ । **ವಃ**—ನಿಮ್ಮ ಮಾರ್ಗವು । **ಸುಗಃ**—ಸುಖವಾಗಿ ಸಂಚರಿಸತಕ್ಕದ್ದೂ । **ಅನೃಕ್ಷರಃ**—ಕಂಟಕರಹಿತವಾದದ್ದೂ । **ಸಾಧುಃ**—ಶೋಭನಾತ್ಮಕವಾದುದೂ ಆದ । **ಪಂಥಾಃ**—ಮಾರ್ಗವಾಗಿ । **ಅಸ್ತಿ ಹಿ**—ಇರುವುದು ಪ್ರಸಿದ್ಧವಾಗಿದೆ । **ತೇನ**—ಅದೇ ಮಾರ್ಗದಿಂದ (ನಮ್ಮನ್ನು ಕರೆದುಕೊಂಡು ಹೋಗಿ) । **ಆದಿತ್ಯಾಃ**—ಎಲೈ ಆದಿತ್ಯರೇ । **ನಃ**—ನಮ್ಮೊಡನೆ । **ಅಧಿ ವೋಚತ**—ಪ್ರೀತಿಪೂರ್ವಕವಾಗಿ ಮಾತನಾಡಿರಿ । **ನಃ**—ನಮಗೆ । **ದುಷ್ಪರಿಹಂತು**—ನಾಶಮಾಡಲು ಶಕ್ಯವಲ್ಲದ । **ಶರ್ಮ**—ಸುಖವನ್ನು । **ಯಚ್ಛತ**—ಕೊಡಿ.

॥ ಭಾವಾರ್ಥ

ಎಲೈ ಅರ್ಯಮನೇ, ಮಿತ್ರದೇವನೇ, ವರುಣನೇ, ನಿಮ್ಮ ಮಾರ್ಗವು ಸುಖವಾಗಿ ಸಂಚರಿಸತಕ್ಕದ್ದೂ, ಕಂಟಕರಹಿತವಾದದ್ದೂ, ಶೋಭನಾತ್ಮಕವಾದುದೂ ಆದ ಮಾರ್ಗವಾಗಿ ಇರುವುದು ಪ್ರಸಿದ್ಧವಾಗಿದೆ. ಅದೇ ಮಾರ್ಗದಿಂದ ನಮ್ಮನ್ನು ಕರೆದುಕೊಂಡು ಹೋಗಿ. ಎಲೈ ಆದಿತ್ಯರೇ, ನಮ್ಮೊಡನೆ ಪ್ರೀತಿಪೂರ್ವಕವಾಗಿ ಮಾತನಾಡಿರಿ. ಶತ್ರುಗಳಿಂದ ನಾಶಮಾಡಲು ಸಾಧ್ಯವಿಲ್ಲದ ಸುಖವನ್ನು ನಮಗೆ ಕೊಡಿ.

## English Translation.

Aryaman, Mitra, and Varuna, easy is the path (you show us), and free from thorns, and pleasant: therefore, Adityas, (lead us) by (it): speak to us favouably, and grant us happiness difficult to be disturbed.

॥ ವಿಶೇಷವಿಷಯಗಳು ॥

ಅರ್ಯಮ, ಮಿತ್ರ, ವರುಣರನ್ನೇ ಉದ್ದೇಶಮಾಡಿ ಯಜಮಾನರಿಗೆ ಇವರಿಂದ **ಅನೃಕ್ಷರಃ ಸಾಧುಃ ಪಂಥಾಃ ತೇನ—ಕಂಟಕರಹಿತಃ ಸಾಧಕಃ ಶೋಭನಃ ಮಾರ್ಗಃ ತೇನ ಶೋಭನಂ ನಯತ** ಕಂಟಕರಹಿತವಾದ ನೇರವಾಗಿರುವ, ಸುಖಕರವಾದ ಮಾರ್ಗದಲ್ಲಿ ಪ್ರವೇಶವು ಉಂಟಾಗಲಿ ಎಂಬ ಆಶಂಸನೆಯು ವರ್ಣಿತವಾಗಿದೆ. **ಅನೃಕ್ಷರಃ** ಎಂಬ ಪದವು **ಋಕ್ಷರಃ ಕಂಟಕಃ ಉಚ್ಯತೇ** (ನಿ. ೯-೩೮) ಎಂದು ವ್ಯಾಖ್ಯಾತವಾಗಿದೆ. ಕಂಟಕರಹಿತಃ ಮುಳ್ಳುಗಳಿಂದಲೂ ಭಯದಿಂದಲೂ ರಹಿತವಾದ ಮಾರ್ಗವೆಂದು ಅರ್ಥವನ್ನು ಈ ಪದಕ್ಕೆ ವಿವರಿಸಿದೆ.

**ಆದಿತ್ಯಾಃ ನಃ ಅಧಿವೋಚತ—ಅಸ್ಮಾಕಂ ಪಕ್ಷಪಾತೇನ ವಚನಂ ಕುರುತ ।** ಆದಿತ್ಯರನ್ನು ಸಂಬೋಧಿಸಿ, ಯಜಮಾನರು ತಮ್ಮ ವಿಷಯದಲ್ಲಿ ಆದಿತ್ಯರು ವಿಶ್ವಾಸದಿಂದ (ಪ್ರೀತಿಯಿಂದ) ಕೂಡಿರುವ ವಚನಗಳನ್ನು ಹೇಳಲಿ ಎಂದು ಆಶಂಸಿತವಾಗಿದೆ. ಮತ್ತು **ದುಷ್ಪರಿಹಂತು ಶರ್ಮ ಯಚ್ಛತ** ಯಾವಾಗಲೂ ವಿಚ್ಛಿತ್ತಿಯಿಲ್ಲದಿರುವ, ನಾಶವನ್ನು ಹೊಂದದೆ ಇರುವ ಸುಖವನ್ನು ಆದಿತ್ಯರು ಅನುಗ್ರಹಿಸಲಿ ಎಂದೂ ಯಜಮಾನರ ಪ್ರಾರ್ಥನೆಯು ವಿವೃತವಾಗಿದೆ.

॥ ಸಂಹಿತಾಪಾಠಃ ॥

**ಪಿಪರ್ತು ನೋ ಅದಿತೀ ರಾಜಪುತ್ರಾತಿ ದ್ವೇಷಾಂಸ್ಯರ್ಯಮಾ ಸುಗೇಭಿಃ ।**
**ಬೃಹನ್ಮಿತ್ರಸ್ಯ ವರುಣಸ್ಯ ಶರ್ಮೋಪ ಸ್ಯಾಮ ಪುರುವೀರಾ ಅರಿಷ್ಟಾಃ ॥ ೭ ॥**

॥ ಪದಪಾಠಃ ॥

**ಪಿಪರ್ತು । ನಃ । ಅದಿತಿಃ । ರಾಜsಪುತ್ರಾ । ಅತಿ । ದ್ವೇಷಾಂಸಿ । ಅರ್ಯಮಾ । ಸುsಗೇಭಿಃ ।**
**ಬೃಹತ್ । ಮಿತ್ರಸ್ಯ । ವರುಣಸ್ಯ । ಶರ್ಮ । ಉಪ । ಸ್ಯಾಮ । ಪುರುsವೀರಾಃ । ಅರಿಷ್ಟಾಃ ॥ ೭ ॥**

॥ ಸಾಯಣಭಾಷ್ಯಂ ॥

**ರಾಜಪುತ್ರಾ ರಾಜಾನೋ ರಾಜಮಾನಾ ಮಿತ್ರಾದಯಃ ಪುತ್ರಾ ಯಸ್ಯಾಸ್ತಾದೃಶ್ಯದಿತಿರದೀನಾ ಅಖಂಡನೀಯಾ ವಾ ದೇವೀ ನೋಽಸ್ಮಾನ್ ದ್ವೇಷಾಂಸಿ ದ್ವೇಷ್ಟೄಣಿ ರಕ್ಷಾಂಸ್ಯತಿ ಪಿಪರ್ತು । ಅತಿ**

**ಪಾರಯತು । ಅತಿಕ್ರಮ್ಯ ತದ್ರಹಿತಂ ದೇಶಂ ಪ್ರಾಪಯತ್ವಿತ್ಯರ್ಥಃ । ಅರ್ಯಮಾ ಚ ಸುಗೇಭಿಃ ಸುಷ್ಠು ಗಂತವ್ಯೈರ್ಮಾರ್ಗೈರಸ್ಮಾನ್ಪಾರಯತು । ಅಪಿ ಚ ವಯಂ ಪುರುವೀರಾ ಬಹುಭಿರ್ವೀರೈಃ ಪುತ್ರಾದಿಭಿರುಪೇತಾ ಅರಿಷ್ಟಾಃ ಕೇನಾಪ್ಯಹಿಂಸಿತಾಶ್ಚ ಸಂತೋ ಮಿತ್ರಸ್ಯ ವರುಣಸ್ಯ ಚ ಬೃಹತ್ಪರಿವೃಢಂ ಶರ್ಮ ಸುಖಮುಪಸ್ಯಾಮ । ಉಪಗತಾ ಭವೇಮ ॥**

। ಪ್ರತಿಪದಾರ್ಥ

**ರಾಜಪುತ್ರಾ**—ಪ್ರಕಾಶಮಾನರಾದ ಮಿತ್ರಾದಿಗಳೇ ಪುತ್ರರಾಗಿ ಉಳ್ಳವಳೂ । **ಅದಿತಿಃ**—ಅಖಂಡನೀಯಳೂ ಆದ ದೇವಮಾತೆಯು । **ನಃ**—ನಮ್ಮನ್ನು । **ದ್ವೇಷಾಂಸಿ**—ಶತ್ರುಗಳ ದ್ವೇಷದಿಂದ । **ಅತಿ ಪಿಪರ್ತು**—ದಾಟಿಸಿ (ದ್ವೇಷರಹಿತವಾದ ಸ್ಥಾನಕ್ಕೆ ಕರೆದೊಯ್ಯಲಿ) । **ಅರ್ಯಮಾ**—ಅರ್ಯಮನೂ ಕೂಡ । **ಸುಗೇಭಿಃ**—ಶ್ರೇಷ್ಠವಾಗಿ ಸಂಚರಿಸತಕ್ಕ ಮಾರ್ಗಗಳಿಂದ (ನಮ್ಮನ್ನು ಕರೆದುಕೊಂಡು ಹೋಗಲಿ) । (**ವಯಂ**—ನಾವೂ ಸಹ) **ಪುರುವೀರಾಃ**—ಅನೇಕ ವೀರಪುತ್ರರಿಂದೊಡಗೂಡಿಯೂ । **ಅರಿಷ್ಟಾಃ**—ಯಾರಿಂದಲೂ ಹಿಂಸಿಸಲ್ಪಡದೆಯೂ ಇದ್ದು । **ಮಿತ್ರಸ್ಯ**—ಮಿತ್ರರಿಗೆ ಸೇರಿದುದೂ । **ವರುಣಸ್ಯ**—ವರುಣನಿಗೆ ಸೇರಿದುದೂ ಆದ । **ಬೃಹತ್**—ಅತ್ಯಧಿಕವಾದುದೂ ಆದ । **ಶರ್ಮ**—ಸುಖವನ್ನು । **ಉಪ ಸ್ಯಾಮ**—ಹೊಂದುವಂತಾಗಲಿ.

। ಭಾವಾರ್ಥ ।

ಪ್ರಕಾಶಮಾನರಾದ ಮಿತ್ರಾದಿದೇವತೆಗಳೇ ಪುತ್ರರಾಗಿ ಉಳ್ಳವಳೂ, ಅಖಂಡನೀಯಳೂ ಆದ ದೇವಮಾತೆಯು ನಮ್ಮನ್ನು ಶತ್ರುಗಳ ದ್ವೇಷದಿಂದ ದಾಟಿಸಿ ಅಂತಹ ದ್ವೇಷವಿಲ್ಲದಿರುವ ಸ್ಥಾನಕ್ಕೆ ಕರೆದೊಯ್ಯಲಿ. ಅರ್ಯಮನೂ ಸಹ ಶ್ರೇಷ್ಠವಾಗಿ ಸಂಚರಿಸತಕ್ಕ ಮಾರ್ಗಗಳಿಂದ ನಮ್ಮನ್ನು ಕರೆದುಕೊಂಡು ಹೋಗಲಿ. ನಾವೂ ಸಹ ಅನೇಕ ವೀರಪುತ್ರರಿಂದೊಡಗೂಡಿಯೂ, ಯಾರಿಂದಲೂ ಹಿಂಸಿಸಲ್ಪಡದೆಯೂ ಇದ್ದು ಮಿತ್ರಾವರುಣರಿಗೆ ಸೇರಿದುದೂ, ಅತ್ಯಧಿಕವಾದುದೂ ಆದ ಸುಖವನ್ನು ಹೊಂದುವಂತಾಗಲಿ.

## English Translation.

May Aditi, the mother of royal sons, place us beyond the malice (of our enemies): may Aryaman lead us by easy paths, and may we, blessed with many descendants, and safe from harm, attain the great happiness of Mitra and Varuna.

। ವಿಶೇಷವಿಷಯಗಳು ॥

**ರಾಜಪುತ್ರಾ ಅದಿತಿಃ—ರಾಜಮಾನಾಃ ಮಿತ್ರಾದಯಃ ಪುತ್ರಾಃ ಯಸ್ಯಾಃ ಅಖಂಡನೀಯಾ ಯಾ ದೇವೀ** । ಅದಿತಿದೇವಿಯು ತೇಜಸ್ಸಿನಿಂದ ಬೆಳಗುತ್ತಿರುವ ಪುತ್ರರನ್ನು ಹೊಂದಿರುವಳೆಂದು ಅದಿತಿಯ ಪ್ರಭೂತವಾದ ಪ್ರಭಾವವು ವರ್ಣಿತವಾಗಿದೆ. **ಅದಿತಿ** ಶಬ್ದವು ಯಾಸ್ಕರಿಂದ ಭೂಮಿನಾಮಗಳಲ್ಲಿ (ನಿ. ೧-೫) ವಾಙ್ನಾಮಗಳಲ್ಲಿ (ನಿ. ೧-೧೩) ಗೋನಾಮಗಳಲ್ಲಿ (ನಿ. ೩-೯) ದ್ಯಾವಾಪೃಥಿವೀನಾಮಗಳಲ್ಲಿ (ನಿ. ೩-೨೦) ಉಕ್ತವಾಗಿದೆ. ಮತ್ತು

**ಅದಿತಿಃ ದೇವಮಾತಾ ಅದೀನಾ** (ನಿ ೪-೨೩) ಎಂದು ವ್ಯಾಖ್ಯಾತವಾಗಿದೆ, **ಅದಿತಿರ್ದ್ಯೌರದಿತಿರಂತರಿಕ್ಷಂ** (ಋ. ಸಂ ೧-೮೯-೧೦) ಎಂಬ ಋಕ್ಕನ್ನುದಹರಿಸಿ ಅದಿತಿಯ ಪ್ರಭಾವವು ಅಖಂಡಿತವಾಗಿರುವುದೆಂದೂ, ವರ್ಣಿತ ವಾಗಿದೆ. ಈ ದೇವಿಯು **ನಃ ದ್ವೇಷಾಂಸಿ ಅತಿ ಪಿಪರ್ತು**—ಯಜಮಾನರಾದ ನಮ್ಮನ್ನು **ರಕ್ಷಾಂಸಿ ಅತಿಕ್ರಮ್ಯ ತದ್ರಹಿತಂ ದೇಶಂ ಪ್ರಾಪಯತು**—ರಾಕ್ಷಸರ ಬಾಧೆ ಇಲ್ಲದಿರುವ ಪ್ರದೇಶಗಳಲ್ಲಿ ವಾಸವಿರುವಂತೆ ಮಾಡಲಿ ಎಂಬ ಪ್ರಾರ್ಥನೆಯು ಉಕ್ತವಾಗಿದೆ.

**ಅರ್ಯಮಾ ಸುಗೇಭಿಃ** ಅರ್ಯಮನಿಂದ ಸುಖವಾದ ಮಾರ್ಗದಲ್ಲಿ ಗಮನವೂ ರಕ್ಷಣೆಯೂ ಯಜಮಾನರಿಂದ ಪ್ರಾರ್ಥಿತವಾಗಿದೆ. ಮತ್ತು **ಮಿತ್ರಸ್ಯ ವರುಣಸ್ಯ ಚ ಬೃಹತ್ ಶರ್ಮ** ಮಿತ್ರಾವರುಣರಿಂದ ಪ್ರಭೂತವಾದ ಸುಖವೂ ಉಂಟಾಗಲಿ ಎಂದು ಆಶಂಸಿತವಾಗಿದೆ

॥ ಸಂಹಿತಾಪಾಠಃ ॥

ತಿಸ್ರೋ ಭೂಮೀರ್ಧಾರಯನ್ ತ್ರೀರುತ ದ್ಯೂನ್ತ್ರೀಣಿ ವ್ರತಾ ವಿದಥೇ ಅನ್ತರೇಷಾಂ ।
ಋತೇನಾದಿತ್ಯಾ ಮಹಿ ವೋ ಮಹಿತ್ವಂ ತದರ್ಯಮನ್ವರುಣ ಮಿತ್ರ ಚಾರು ॥೮॥

॥ ಪದಪಾಠಃ ॥

ತಿಸ್ರಃ । ಭೂಮೀಃ । ಧಾರಯನ್ । ತ್ರೀನ್ । ಉತ । ದ್ಯೂನ್ । ತ್ರೀಣಿ । ವ್ರತಾ । ವಿದಥೇ । ಅನ್ತಃ । ಏಷಾಂ ।
ಋತೇನ । ಆದಿತ್ಯಾಃ । ಮಹಿ । ವಃ । ಮಹಿऽತ್ವಂ । ತತ್ । ಅರ್ಯಮನ್ । ವರುಣ । ಮಿತ್ರ । ಚಾರು ॥

॥ ಸಾಯಣಭಾಷ್ಯಂ ॥

ಪೂರ್ವೋಕ್ತೇ ಪಶೌ ತಿಸ್ರೋ ಭೂಮೀರಿತಿ ಪುರೋಡಾಶಸ್ಯ ಯಾಜ್ಯಾ । ಸೂತ್ರಂ ಪೂರ್ವಮೇವೋದಾಹೃತಂ ॥

ತಿಸ್ರೋ ಭೂಮೀಃ । ಅತ್ರ ಭೂಮೀಶಬ್ದೋ ಲೋಕತ್ರಯೇ ವರ್ತತೇ । ಯೋ ದ್ವಿತೀಯಸ್ಯಾಂ ತೃತೀಯಸ್ಯಾಂ ಪೃಥಿವ್ಯಾಮಿತ್ಯತ್ರ ಯಥಾ ಪೃಥಿವೀಶಬ್ದಃ । ಭೂಮ್ಯಂತರಿಕ್ಷಸ್ವರ್ಗಾಂಸ್ತ್ರೀನ್ ಲೋಕಾನ್ ಆದಿತ್ಯಾ ಧಾರಯನ್ । ವೃಷ್ಟಿಪ್ರದಾನಾದಿನಾ ಧಾರಯಂತಿ । ಉತ ಅಪಿ ಚ ದ್ಯೂನ್ ದೀಪ್ತಾನ್ ತತ ಉಪರಿತನಾನ್ ಮಹರಾದಿಕಾನಪಿ ತ್ರೀನ್ ಲೋಕಾನ್ ಧಾರಯಂತಿ । ಯದ್ವಾ ದೀಪ್ತಾನ್ ಅಗ್ನಿಂ ವಾಯುಂ ಸೂರ್ಯಂ ಚ ಧಾರಯಂತಿ । ಅಪಿ ಚೈಷಾಮಾದಿತ್ಯಾನಾಂ ವಿದಥೇ ಯಜ್ಞೇಽನ್ತರ್ಮಧ್ಯೇ ತ್ರೀಣಿ ವ್ರತಾ ಸವನತ್ರಯನಿಷ್ಪಾದ್ಯಾನಿ ತ್ರೀಣಿ ಕರ್ಮಾಣಿ ಸಂತಿ । ಯದ್ವಾ ಏಷಾಂ ಲೋಕಾನಾಮಂತರ್ಮಧ್ಯೇ ವಿದಥೇ ಯಜ್ಞೇ ನಿಮಿತ್ತಭೂತೇ ಸತಿ ಏಷಾಮಾದಿತ್ಯಾನಾಂ ತ್ರೀಣಿ ಕರ್ಮಾಣಿ ರಸಾದಾನಧಾ-

**ರಣವಿಸರ್ಜನಲಕ್ಷಣಾನಿ ಸಂತಿ । ಉತ್ತರೋऽರ್ಧರ್ಚಃ ಪ್ರತ್ಯಕ್ಷಕೃತಃ । ಹೇ ಆದಿತ್ಯಾಃ ಋತೇನ ಸತ್ಯೇನ ಯಜ್ಞೇನ ವಾ ಮಹಿ ಮಹತ್ ಪ್ರಭೂತಂ ವೋ ಯುಷ್ಮಾಕಂ ಮಹಿತ್ವಂ ಮಹತ್ತ್ವಂ ಯನ್ಮಹಾಭಾಗ್ಯಂ ಹೇ ಅರ್ಯಮನ್ ವರುಣ ಮಿತ್ರ ತನ್ಮಹಾಭಾಗ್ಯಂ ಚಾರು । ಶೋಭನಂ ಸರ್ವೋತ್ಕೃಷ್ಟಮಿತ್ಯರ್ಥಃ ॥**

॥ ಪ್ರತಿಪದಾರ್ಥ ॥

**ತಿಸ್ರಃ ಭೂಮೀಃ**—ಪೃಥಿವ್ಯಾದಿ ಮೂರು ಲೋಕಗಳನ್ನೂ । **ಧಾರಯನ್**—(ಆದಿತ್ಯರು) ಧರಿಸಿದ್ದಾರೆ । **ಉತ**—ಮತ್ತು । **ದ್ಯೂನ್**—ಪ್ರಕಾಶಮಾನವಾದ । **ತ್ರೀನ್**—ಮಹರಾದಿ ಮೂರು ಲೋಕಗಳನ್ನೂ ಧರಿಸಿದ್ದಾರೆ । **ಏಷಾಂ**—ಈ ಆದಿತ್ಯರ । **ವಿದಥೇ**—ಯಜ್ಞದಲ್ಲಿ ಅಥವಾ ಲೋಕತ್ರಯದ ಮಧ್ಯಭಾಗದಲ್ಲಿ ಯಜ್ಞನಿಮಿತ್ತವಾದ । **ಅಂತಃ**—ಮಧ್ಯಭಾಗದಲ್ಲಿ । **ತ್ರೀಣಿ ವ್ರತಾ**—(ಸವನತ್ರಯದಿಂದ ನಿಷ್ಪಾದಿತವಾಗುವ) ಮೂರು ವಿಧವಾದ ಕರ್ಮಗಳು ಪ್ರಸಿದ್ಧವಾಗಿವೆ (ಅಥವಾ ಉದಕವನ್ನು ಹೀರುವುದು, ಧರಿಸಿರುವುದು ಮತ್ತು ವೃಷ್ಟಿರೂಪದಲ್ಲಿ ಬಿಡುವುದು ಎಂಬ ಮೂರು ವಿಧವಾದ ಕರ್ಮಗಳು ಪ್ರಸಿದ್ಧವಾಗಿವೆ) । **ಆದಿತ್ಯಾಃ**—ಎಲೈ ಆದಿತ್ಯರೇ । **ವಃ**—ನಿಮ್ಮ । **ಮಹಿತ್ವಂ**—ಮಾಹಾತ್ಮ್ಯವು । **ಋತೇನ**—ಸತ್ಯದಿಂದ ಅಥವಾ ಯಜ್ಞದಿಂದ । **ಮಹಿ**—ಮಹದ್ರೂಪದಲ್ಲಿ ಬೆಳೆದಿದೆ । **ಅರ್ಯಮನ್**—ಎಲೈ ಅರ್ಯಮನೇ । **ವರುಣ**—ವರುಣನೇ । **ಮಿತ್ರ**—ಎಲೈ ಮಿತ್ರನೇ । **ತತ್**—ನಿಮ್ಮ ಆ ಮಾಹಾತ್ಮ್ಯವು । **ಚಾರು**—ಶೋಭನಾತ್ಮಕವಾಗಿಯೂ ಎಲ್ಲಕ್ಕಿಂತಲೂ ಉತ್ಕೃಷ್ಟವಾಗಿಯೂ ಇದೆ.

॥ ಭಾವಾರ್ಥ ॥

ಆದಿತ್ಯರು ಪೃಥಿವ್ಯಾದಿ ಮೂರು ಲೋಕಗಳನ್ನೂ, ಮಹರಾದಿ ಮೂರು ಊರ್ಧ್ವಲೋಕಗಳನ್ನೂ ಧರಿಸಿದ್ದಾರೆ. ಈ ಆದಿತ್ಯರಿಗೆ ಸಂಬಂಧಿಸಿದ ಲೋಕತ್ರಯದ ಮಧ್ಯಭಾಗದಲ್ಲಿ ಯಜ್ಞನಿಮಿತ್ತಕವಾದ ಮೂರು ಕರ್ಮಗಳು ಎಂದರೆ ಉದಕವನ್ನು ಹೀರುವುದು, ಧರಿಸಿರುವುದು ಮತ್ತು ವೃಷ್ಟಿರೂಪದಲ್ಲಿ ಬಿಡುವುದು ಎಂದು ಮೂರು ವಿಧವಾದ ಕರ್ಮಗಳು ಪ್ರಸಿದ್ಧವಾಗಿವೆ. ಎಲೈ ಆದಿತ್ಯರೇ, ನಿಮ್ಮ ಮಾಹಾತ್ಮ್ಯವು ಸತ್ಯದಿಂದ ಮಹದ್ರೂಪದಲ್ಲಿ ಬೆಳೆದಿದೆ. ಎಲೈ ಅರ್ಯಮನೇ, ವರುಣನೇ, ನಿಮ್ಮ ಆ ಮಾಹಾತ್ಮ್ಯವು ಶೋಭನಾತ್ಮಕವಾಗಿಯೂ ಎಲ್ಲಕ್ಕಿಂತಲೂ ಉತ್ಕೃಷ್ಟವಾಗಿಯೂ ಇದೆ.

English Translation.

They uphold the three worlds, the three heavens; and in their sacrifices three ceremonies (are comprised): by truth, Adityas, has your great might (been produced), such as is most excellent; Aryaman, Mitra, and Varuna.

॥ ವಿಶೇಷವಿಷಯಗಳು ॥

ಹಿಂದೆ ಹೇಳಿದ ವಿಷಯದಲ್ಲಿ **ತಿಸ್ರೋ ಭೂಮೀಃ**—ಎಂಬ ಈ ಋಕ್ಕನ್ನು ಪುರೋಡಾಶ ಹೋಮಮಾಡುವಾಗ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಹಿಂದೆ ಉದಾಹೃತವಾದ ಸೂತ್ರದಲ್ಲಿಯೇ ವಿವೃತವಾಗಿದೆ.

**ತಿಸ್ರೋ ಭೂಮೀಃ ಧಾರಯನ್**—**ಅತ್ರ ಭೂಮಿಶಬ್ದಃ ಲೋಕತ್ರಯೇ ವರ್ತತೇ । "ಯೋ**

**ದ್ವಿತೀಯಸ್ಯಾಂ ತೃತೀಯಸ್ಯಾಂ ಪೃಥಿವ್ಯಾಂ" ಇತ್ಯತ್ರ ಯಥಾ ಪೃಥಿವೀ ಶಬ್ದಃ** ಯಃ ದ್ವಿತೀಯಸ್ಯಾಂ ಎಂಬ ಮಂತ್ರದಲ್ಲಿ ಪೃಥಿವೀ ಶಬ್ದಕ್ಕೆ ಮೂರು ಲೋಕಗಳೆಂಬ ಅರ್ಥವನ್ನು ಹೇಳುವ ಹಾಗೆ ಇಲ್ಲಿಯೂ ಭೂಮಿ ಶಬ್ದವು ಮೂರು ಲೋಕಗಳೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಅರ್ಥವನ್ನು ವಿವರಿಸಿದೆ. ಇದರಿಂದ **ಭೂಮ್ಯಂತರಿಕ್ಷ ಸ್ವರ್ಗಸ್ಥಾನ್ ತ್ರೀನ್ ಲೋಕಾನ್ ಆದಿತ್ಯಾಃ ವೃಷ್ಟಿಪ್ರದಾನಾದಿನಾ ಧಾರಯಂತಿ**—ಆದಿತ್ಯರು ಭೂಮಿ, ಅಂತರಿಕ್ಷ, ಸ್ವರ್ಗ ಎಂಬ ಮೂರು ಲೋಕಗಳನ್ನೂ ಮೂರು ಲೋಕಗಳಲ್ಲಿರುವವರನ್ನೂ ವೃಷ್ಟ್ಯುದಕವೇ ಮೊದಲಾದವುಗಳನ್ನು ಅನುಗ್ರಹಿಸುವುದರಿಂದ ಧರಿಸುವರು ಎಂದರೆ ರಕ್ಷಿಸುತ್ತಿರುವರು ಎಂದು ಅರ್ಥವನ್ನು ವರ್ಣಿಸಿದೆ-

ಮತ್ತು **ದ್ಯೂನ್ ತ್ರೀನ್** ಎಂಬ ಪದಕ್ಕೆ **ತತ ಉಪರಿತನಾನ್ ಮಹಾರಾದಿಕಾನ್ ಅಪಿ** ಈ ಮೂರು ಲೋಕಗಳಿಗಿಂತಲೂ ಮೇಲುಗಡೆಯಲ್ಲಿ ಇರುವ ಮಹೋಲೋಕವೇ ಮೊದಲಾದವುಗಳಾದ ಮೂರು ಲೋಕಗಳೆಂದು ಅರ್ಥವನ್ನು ವಿವರಿಸಿ, ಅವುಗಳನ್ನು ಆದಿತ್ಯರು ಧರಿಸಿದ್ದಾರೆ ಎಂದು ಒಂದು ವಿಧವಾದ ಅರ್ಥವನ್ನೂ ವರ್ಣಿಸಿ, **ಯದ್ವಾ ದೀಪ್ತಾನ್ ಅಗ್ನಿಂ ವಾಯುಂ ಸೂರ್ಯಂ ಚ ಧಾರಯಂತಿ** ಅಥವಾ ಪ್ರಕಾಶಮಾನರಾದ ಅಗ್ನಿ, ವಾಯು, ಸೂರ್ಯರನ್ನೂ ಈ ಆದಿತ್ಯರು ಧರಿಸಿದ್ದಾರೆ ಎಂದೂ ವರ್ಣಿತವಾಗಿದೆ.

**ಏಷಾಂ ವಿದಥೇ ಅಂತಃ ವ್ರತಾ ತ್ರೀಣಿ ಸಂತಿ—ಆದಿತ್ಯಾನಾಂ ಏಷಾಂ ಯಜ್ಞಮಧ್ಯೇ ಸವನತ್ರಯ ನಿಷ್ಪಾದ್ಯಾನಿ ಕರ್ಮಾಣಿ ಸಂತಿ**—ಈ ಆದಿತ್ಯರನ್ನು ಉದ್ದೇಶಮಾಡಿ ಆಚರಿಸುವ ಯಜ್ಞಗಳ ಮಧ್ಯದಲ್ಲಿ ಪ್ರಾತಃ ಮಧ್ಯಾಹ್ನ, ಸಾಯಂಕಾಲಗಳ ಸವನರೂಪವಾದ ಕರ್ಮಗಳಲ್ಲಿ (ಅನುಷ್ಠೇಯವಾದ) ಕರ್ತವ್ಯವಾದ ಕರ್ಮಗಳೂ ಆಚರಿತವಾಗಿರುತ್ತವೆ ಎಂದು ಮೊದಲನೇ ಅರ್ಥವು ವಿವೃತವಾಗಿದೆ. ಎರಡನೆಯದಾಗಿ, **ಯದ್ವಾ ಏಷಾಂ ಲೋಕಾನಾಂ ಅಂತರ್ಮಧ್ಯೇ ಯಜ್ಞೇ ನಿಮಿತ್ತಭೂತೇ ಸತಿ ಏಷಾಮಾದಿತ್ಯಾನಾಂ ರಸಾದಾನಧಾರಣ-ವಿಸರ್ಜನಲಕ್ಷಣಾನಿ ತ್ರೀಣಿ ಕರ್ಮಾಣಿ ಸಂತಿ** । ಸ್ವರ್ಗ, ಭೂಮಿ, ಅಂತರಿಕ್ಷವೆಂಬ ಮೂರು ಲೋಕಗಳ ಮಧ್ಯದಲ್ಲಿ ಯಜ್ಞವು ಆಚರಿತವಾಗುವ ಕಾಲದಲ್ಲಿ ಈ ಆದಿತ್ಯರು ಉದಕಗಳನ್ನು ಸ್ವೀಕರಿಸುವುದೂ, ಸ್ವೀಕರಿಸಿದ ಉದಕಗಳನ್ನು ಧರಿಸಿರುವುದೂ, ಅವುಗಳನ್ನು ವೃಷ್ಟಿಯರೂಪದಿಂದ ಭೂಮಿಗೆ ಸುರಿಸುವುದೂ ಎಂಬ ಮೂರು ವಿಧವಾದ ಕರ್ಮಗಳನ್ನು ಆಚರಿಸುವುದರಿಂದ ಯಾಗಾದಿಕರ್ಮಗಳನ್ನು ರಕ್ಷಿಸುವರು ಎಂಬ ಅರ್ಥವೂ ವಿವೃತವಾಗಿದೆ

**ಹೆ ಆದಿತ್ಯಾಃ ಅರ್ಯಮನ್, ಮಿತ್ರ, ವರುಣ** ಎಂದು ಆದಿತ್ಯರನ್ನು ಸಂಬೋಧಿಸಿ, **ಋತೇನ ಯಜ್ಞೇನ ಸತ್ಯೇನ ವಾ ಯುಷ್ಮಾಕಂ ಪ್ರಭೂತಂ ಮಹಾಭಾಗ್ಯಂ ಚಾರು**—ಅವರ ಪ್ರಭೂತವಾದ ಮಹತ್ತ್ವಪೂರಿತವಾದ ಮಹಿಮೆಯು ಯಜ್ಞವನ್ನೂ ಈ ಸತ್ಯವನ್ನೂ ರಕ್ಷಿಸುವುದರಿಂದ ಎಲ್ಲವನ್ನೂ ಮೀರಿ ಇರುವುದು ಎಂದು ವರ್ಣಿಸಿದೆ. **ಅರ್ಯಮಾ, ಮಿತ್ರ, ವರುಣ** ಶಬ್ದಗಳ ಅರ್ಥವು ಹಿಂದೆ ವಿವೃತವಾಗಿದೆ. ಋತ ಶಬ್ದಕ್ಕೆ, ಸತ್ಯ, ಯಜ್ಞ ಎಂಬ ಅರ್ಥವು ಯಾಸ್ಕರಿಂದ, **ಸತ್ಯಂ ವಾ ಯಜ್ಞಂ ವಾ** (ನಿ. ೪-೧೯) ಎಂದು ವಿವೃತವಾಗಿದೆ.

॥ ಸಂಹಿತಾಪಾಠಃ ॥

ತ್ರೀ ರೋ॒ಚ॒ನಾ ದಿ॒ವ್ಯಾ ಧಾ॒ರ॒ಯ॒ನ್ತ॒ ಹಿ॒ರ॒ಣ್ಯಯಾಃ ಶುಚ॑ಯೋ ಧಾರಪೂತಾಃ ।
ಅಸ್ವ॑ಪ್ನಜೋ ಅನಿಮಿ॒ಷಾ ಅದಬ್ಧಾ ಉ॒ರು॒ಶಂಸಾ ಋ॒ಜವೇ॒ ಮರ್ತ್ಯಾಯ ॥ ೯ ॥

॥ ಪದಪಾಠಃ ॥

ತ್ರೀ । ರೋ॒ಚ॒ನಾ । ದಿ॒ವ್ಯಾ । ಧಾ॒ರ॒ಯ॒ನ್ತ॒ । ಹಿ॒ರ॒ಣ್ಯಯಾಃ । ಶುಚ॑ಯಃ । ಧಾರ॑ಽಪೂತಾಃ ।
ಅಸ್ವ॑ಪ್ನಽಜಃ । ಅ॒ನಿ॒ಽಮಿ॒ಷಾಃ । ಅದಬ್ಧಾಃ । ಉ॒ರು॒ಽಶಂಸಾಃ । ಋ॒ಜವೇ । ಮರ್ತ್ಯಾಯ ॥ ೯ ॥

॥ ಸಾಯಣಭಾಷ್ಯಂ ॥

**ತ್ರೀ ರೋಚನಾ ತ್ರೀಣಿ ರೋಚನಾನಿ ರೋಚಮಾನಾಗ್ನ್ಯಾದೀನಿ ತೇಜಾಂಸಿ ದಿವ್ಯಾ ದಿವ್ಯಾನಿ ದಿವಿಭವಾನಿ ಧಾರಯಂತ । ಆದಿತ್ಯಾ ಅವಾಸ್ಥಾಪಯನ್ । ಕಿಮರ್ಥಂ । ಋಜವೇ ಋಜೀಕಾಯ ಸ್ತೋತ್ರಾಣಾಂ ಮರ್ತ್ಯಾಯ ಮನುಷ್ಯಾಯ ಭೋಗಸಿದ್ಧ್ಯರ್ಥಮಿತಿ ಯಾವತ್ । ಕೀದೃಶಾ ಆದಿತ್ಯಾಃ । ಹಿರಣ್ಯಯಾಃ । ಹಿರಣ್ಮಯಾ ಹಿರಣ್ಯಾಲಂಕೃತಸರ್ವಾಂಗಾಃ । ಯದ್ವಾ ಹಿತರಮಣೀಯವೇಷಾಃ । ಶುಚಯೋ ದೀಪ್ಯಮಾನಾಃ । ಧಾರಪೂತಾ ಉದಕಧಾರಯಾ ಕ್ಷಾಲಿತಾ ಇವ ನಿರ್ಮಲಾಃ । ಅಸ್ವಪ್ನ-ಜೋಽಸಂಜಾತಸ್ವಪ್ನಾಃ ॥ ಸುಪಾಂ ಸುಲುಗಿತಿ ಜಸಃ ಸುಃ ॥ ಅಪರ ಆಹ । ಅಸ್ವಪ್ನಜೋಽಸ್ವಪಂತೋ ವಿಗತನಿದ್ರಾಃ ॥ ಸ್ವಪಿತೃಷೋರ್ನಜಿಙ್ಙಿತಿ ನಜಿಙ್ಪ್ರತ್ಯಯ ಇತಿ ತದೇತತ್ಪದಕಾರಸ್ಯಾನಭಿಮತಂ ॥ ಅನಿಮಿಷಾ ನಿಮೇಷರಹಿತಾಃ । ಅದಬ್ಧಾ ಅಸುರಾದಿಭಿರಹಿಂಸಿತಾಃ । ಉರುಶಂಸಾ ಉರುಭಿರ್ಬಹುಭಿಃ ಶಂಸನೀಯಾಃ ಸ್ತೋತವ್ಯಾಃ । ಏವಂಗುಣವಿಶಿಷ್ಟಾ ಅಧಾರಯಂತೇತ್ಯನ್ವಯಃ ॥**

॥ ಪ್ರತಿಪದಾರ್ಥ ॥

**ಹಿರಣ್ಯಯಾಃ**—ಹಿರಣ್ಮಯವಾದ ರೂಪವುಳ್ಳವರೂ, ಅಥವಾ ಹಿತಕರವೂ ರಮಣೀಯವೂ ಆದ ವೇಷವುಳ್ಳವರೂ । **ಶುಚಯಃ**—ಪ್ರಕಾಶಮಾನರೂ । **ಧಾರಪೂತಾಃ**—ಉದಕಧಾರೆಯಿಂದ ಕ್ಷಾಲಿತರಾದಂತೆ ನಿರ್ಮಲರಾದವರೂ । **ಅಸ್ವಪ್ನಜಃ**—ನಿದ್ರಾರಹಿತರೂ । **ಅನಿಮಿಷಾಃ** — ಕಣ್ಣುರೆಪ್ಪೆಯನ್ನು ಹೊಡೆಯದವರೂ । **ಅದಬ್ಧಾಃ**—ಅಸುರಾದಿಗಳಿಂದ ಅಹಿಂಸಿತರೂ । **ಉರುಶಂಸಾಃ**—ಅನೇಕರಿಂದ ಸ್ತುತಿಸಲ್ಪಡುವವರೂ ಆದ ಆದಿತ್ಯರು । **ಋಜವೇ**—ಋಜುಬುದ್ಧಿಯುಳ್ಳ ಸ್ತುತಿಕರ್ತನಾದ । **ಮರ್ತ್ಯಾಯ**—ಮಾನವನ ಹಿತಕ್ಕಾಗಿ । **ದಿವ್ಯಾ**—ದೇವಲೋಕೋತ್ಪನ್ನವಾದ । **ತ್ರೀ ರೋಚನಾ**—ಅಗ್ನ್ಯಾದಿ ಮೂರು ತೇಜೋಮಂಡಲಗಳನ್ನು । **ಧಾರಯಂತ**—ಧರಿಸಿದ್ದಾರೆ.

॥ ಭಾವಾರ್ಥ ॥

ಹಿರಣ್ಮಯವಾದ ರೂಪವುಳ್ಳವರೂ, ಪ್ರಕಾಶಮಾನರೂ ಉದಕಧಾರೆಯಿಂದ ಕ್ಷಾಲಿತರಾದಂತೆ ನಿರ್ಮಲ ರಾದವರೂ, ನಿದ್ರಾರಹಿತರೂ, ಕಣ್ಣುರೆಪ್ಪೆಯನ್ನು ಹೊಡೆಯದವರೂ, ಅಸುರಾದಿಗಳಿಂದ ಅಹಿಂಸಿತರೂ, ಅನೇಕ ರಿಂದ ಸ್ತುತಿಸಲ್ಪಡುವವರೂ ಆದ ಆದಿತ್ಯರು ಋಜುಬುದ್ಧಿಯುಳ್ಳ ಸ್ತುತಿಕರ್ತನಾದ ಮಾನವನ ಹಿತಕ್ಕಾಗಿ ದೇವಲೋ ಕೋತ್ಪನ್ನವಾದ ಅಗ್ನ್ಯಾದಿ ಮೂರು ತೇಜೋಮಂಡಲಗಳನ್ನು ಧರಿಸಿದ್ದಾರೆ.

English Translation.

The Adityas, decorated with golden ornaments, brilliant, purified by showers, who never slumber, nor close their eyelids, who are unassailable, and praised by many, uphold the three bright heavenly regions for the sake of the upright man.

॥ ವಿಶೇಷವಿಷಯಗಳು ॥

**ತ್ರೀ ರೋಚನಾ ದಿವ್ಯಾ ಧಾರಯಂತೆ—ಆದಿತ್ಯಾಃ ದಿವಿ ಭವಾನಿ ತ್ರೀಣಿ ರೋಚಮಾನಾನಿ ಅಗ್ನ್ಯಾದೀನಿ ತೇಜಾಂಸಿ ಅವಸ್ಥಾಪಯಂತಿ ।** ಆದಿತ್ಯರು ಅಂತರಿಕ್ಷದಲ್ಲಿ ಉತ್ಪನ್ನವಾಗಿರುವ ಅಗ್ನಿ, ಸೂರ್ಯರೇ ಮೊದಲಾದ ಮೂರುವಿಧವಾದ ತೇಜಸ್ಸುಗಳನ್ನೂ ತಮ್ಮನ್ನು ಸ್ತುತಿಮಾಡುವವರಿಗೆ ಸುಖವನ್ನು ಉಂಟುಮಾಡುವುದ ಕ್ಕಾಗಿ ಸ್ಥಿರವಾಗಿರುವಂತೆ ಇರಿಸಿದ್ದಾರೆ. ಎಂದು ವರ್ಣಿಸಿದೆ.

**ಹಿರಣ್ಯಯಾಃ**—ಎಂಬ ಪದಕ್ಕೆ **ಹಿರಣ್ಯಾಲಂಕೃತಸರ್ವಾಂಗಾಃ, ಹಿತರಮಣೀಯವೇಷಾಃ**—ಆದಿತ್ಯರು ಸುವರ್ಣಾಭರಣಗಳಿಂದ ಅಲಂಕಾರಮಾಡಲ್ಪಟ್ಟ ಅವಯವಗಳುಳ್ಳವರು ಅಥವಾ ಹಿತಕರವಾಗಿಯೂ ಮನೋಹರ ವಾಗಿಯೂ ಇರುವ ವೇಷಭೂಷವುಳ್ಳವರಾಗಿರುವರೆಂದು ವಿವರಿಸಿದೆ.

**ಧಾರಪೂತಾಃ**—ಆದಿತ್ಯರು ಉದಕದ ಧಾರೆಗಳಿಂದ ಚೆನ್ನಾಗಿ ತೊಳೆಯಲ್ಪಟ್ಟವರಹಾಗೆ ಪರಿಶುದ್ಧರಾಗಿರುವ ರೆಂದೂ, **ಅಸ್ವಪ್ನಜಃ**—ಸ್ವಪ್ನಗಳು ಇಲ್ಲದವರು ಅಥವಾ ನಿದ್ರೆಯಿಲ್ಲದವರು ಎಂದೂ, **ಉರುಶಂಸಾಃ** ಬಹಳ ಜನರಿಂದ ಸ್ತುತಿಮಾಡಲು ಅರ್ಹರಾಗಿರುವರೆಂದೂ ವರ್ಣಿಸಿ ಆದಿತ್ಯರ ಮಹಿಮೆಯೂ, ಅಲಂಕಾರವೂ, ರೂಪಾದಿಗಳೂ, ಸ್ವಭಾವವೂ ವರ್ಣಿತವಾಗಿದೆ.

॥ ಸಂಹಿತಾಪಾಠಃ ॥

ತ್ವಂ ವಿಶ್ವೇಷಾಂ ವರುಣಾಸಿ ರಾಜಾ ಯೇ ಚ ದೇವಾ ಅಸುರ ಯೇ ಚ ಮರ್ತಾಃ ।

ಶತಂ ನೋ ರಾಸ್ವ ಶರದೋ ವಿಚಕ್ಷೇಽಶ್ಯಾಮಾಯೂಂಷಿ ಸುಧಿತಾನಿ ಪೂರ್ವಾ ॥೧೦॥

॥ ಪದಪಾಠಃ ॥

ತ್ವಂ । ವಿಶ್ವೇಷಾಂ । ವರುಣ । ಅಸಿ । ರಾಜಾ । ಯೇ । ಚ । ದೇವಾಃ । ಅಸುರ । ಯೇ । ಚ । ಮರ್ತಾಃ ।

ಶತಂ । ನಃ । ರಾಸ್ವ । ಶರದಃ । ವಿಽಚಕ್ಷೇ । ಅಶ್ಯಾಮ । ಆಯೂಂಷಿ । ಸುಽಧಿತಾನಿ । ಪೂರ್ವಾ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಅಸುರ ಶತ್ರೂಣಾಂ ಕ್ಷೇಪಕ ವರುಣ ತ್ವಂ ವಿಶ್ವೇಷಾಂ ಸರ್ವೇಷಾಂ ರಾಜಾಸಿ । ಕೇಷಾಂ । ಯೇ ಚ ದೇವಾ ದೇವಜನಾಃ ಯೇ ಚ ಮರ್ತಾ ಮರಣಧರ್ಮಾಣೋ ಮನುಷ್ಯಾಃ । ತೇಷಾಮಿತ್ಯರ್ಥಃ । ಅತಸ್ತ್ವಂ ನೋಽಸ್ಮಭ್ಯಂ ಶತಂ ಶರದಃ ಶತಸಂಖ್ಯಾಕಾನ್ ಸಂವತ್ಸರಾನ್ ವಿಚಕ್ಷೇ ವಿಶೇಷೇಣ ದರ್ಶನಾಯ ರಾಸ್ವ । ಪ್ರಯಚ್ಛ । ರಾ ದಾನೇ । ವ್ಯತ್ಯಯೇನಾತ್ಮನೇಪದಂ ॥ ವಯಂ ಚ ಪೂರ್ವಾ ಪೂರ್ವೈರ್ದೇವೈಃ ಸುಧಿತಾನಿ ಸುಷ್ಠು ಹಿತಾನಿ ಶತಸಂವತ್ಸರಲಕ್ಷಣಾನ್ಯಾಯೂಂಷ್ಯಶ್ಯಾಮ । ವ್ಯಾಪ್ನುಯಾಮ ॥ ಸುಧಿತವಸುಧಿತನೇಮಧಿತಧಿಷ್ವಧಿಷೀಯ ಚೇತಿ ನಿಪಾತ್ಯತೇ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಪೂರ್ವಾ । ಸುಪಾಂ ಸುಲುಗಿತಿ ತೃತೀಯಾಯಾ ಡಾದೇಶಃ ॥

॥ ಪ್ರತಿಪದಾರ್ಥ ॥

**ಅಸುರ**—ಶತ್ರುನಾಶಕನಾದ । **ವರುಣ**-- ಎಲೈ ವರುಣನೇ । **ತ್ವಂ**—ನೀನು । **ಯೇ ಚ ದೇವಾಃ** ಯಾವ ಯಾವ ದೇವತೆಗಳಿದ್ದಾರೆಯೋ । **ಯೇ ಚ ಮರ್ತಾಃ**—ಯಾವ ಯಾವ ಮಾನವರಿದ್ದಾರೆಯೋ ಅಂತಹ । **ವಿಶ್ವೇಷಾಂ**—ಸಮಸ್ತರಿಗೂ । **ರಾಜಾ ಅಸಿ**—ಪ್ರಭುವಾಗಿದ್ದೀಯೆ । **ನಃ**—ನಮಗೆ । **ಶತಂ ಶರದಃ**—ಶತಸಂಖ್ಯಾತವಾದ ಸಂವತ್ಸರಗಳನ್ನು । **ವಿಚಕ್ಷೇ**—ದರ್ಶನಕ್ಕಾಗಿ । **ರಾಸ್ವ**—ಕೊಡು । **(ವಯಂ ಚ**—ನಾವೂ ಕೂಡ) । **ಪೂರ್ವಾ**---ಪುರಾತನರಾದ ಋಷಿಗಳಿಂದ । **ಸುಧಿತಾನಿ**—ಪೂರ್ಣವಾಗಿ ಅನುಭವಿಸಲ್ಪಟ್ಟ । **ಆಯೂಂಷಿ**---ಆಯುಸ್ಸುಗಳನ್ನು । **ಅಶ್ಯಾಮ**—ಅನುಭವಿಸುವಂತಾಗಲಿ.

॥ ಭಾವಾರ್ಥ ॥

ಶತ್ರುನಾಶಕನಾದ ವರುಣನೇ, ನೀನು ಸಮಸ್ತ ದೇವತೆಗಳಿಗೂ ಸಮಸ್ತಮಾನವರಿಗೂ ಪ್ರಭುವಾಗಿದ್ದೀಯೆ. ಶತಸಂಖ್ಯಾತವಾದ ವತ್ಸರಗಳನ್ನೂ ನಾವು ಪೂರ್ಣವಾಗಿ ನೋಡುವಂತೆ ಮಾಡು ಹಿಂದಿನ ಋಷಿಗಳು ಯಾವ ರೀತಿ ನೂರು ವರ್ಷವುಳ್ಳ ಆಯುಸ್ಸನ್ನು ಪೂರ್ಣವಾಗಿ ಅನುಭವಿಸಿದರೋ, ಅದರಂತೆಯೇ ನಾವೂ ಸಹ ಪೂರ್ಣವಾದ ಆಯುಸ್ಸನ್ನು ಅನುಭವಿಸುವಂತಾಗಲಿ.

## Englis Translation.

Varuna, destroyer of foes, you are the sovereign over all, whether they be gods or mortals: grant to us to behold a hundred years, and that we may enjoy lives such as were enjoyed by ancient (sages).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ವರುಣನು ಸ್ತುತನಾಗಿದ್ದಾನೆ. ಅಸುರಪದಕ್ಕೆ ಶತ್ರುನಾಶಕನೆಂದು ಅರ್ಥವನ್ನು ವಿವರಿಸಿ, ವರುಣನು ಶತ್ರುನಾಶಕನಾಗಿರುವನೆಂದೂ, ಮನುಷ್ಯರು ಮತ್ತು ದೇವತೆಗಳು ಇವರಿಗೆ ಇವನು ರಾಜನಾಗಿರುವನೆಂದೂ, ವರ್ಣಿಸಿ, ಈ ದೇವನು ಯಜಮಾನರಾದ ನಮಗೆ ನೂರು ವರ್ಷಗಳನ್ನು ನೋಡುವಂತೆ, ಎಂದರೆ ನೂರುವರುಷಗಳ ವರಿಗೆ ಜೀವಿಸಿರುನಂತೆ ಅನುಗ್ರಹಿಸಲಿ ಎಂದು ಆಶಂಸಿತವಾಗಿದೆ. ಮತ್ತು **ಪೂರ್ವಾ ಸುಧಿತಾನಿ ಆಯೂಂಷಿ ಅಶ್ಯಾಮ** ಪ್ರಾಚೀನರಾಗಿರುವ ದೇವತೆಗಳಿಂದ ನಿಷ್ಕರ್ಷಿಸಲ್ಪಟ್ಟಿರುವಂತೆ ನೂರುವರ್ಷಗಳವರೆಗೆ ಬದುಕಿರುವಂತೆ ಆಯುಸ್ಸು ಯಜಮಾನರಾದ ನಮಗೆ ದೊರಕಲಿ ಎಂಬ ಈ ದೇವನ ಅನುಗ್ರಹವು ಪ್ರಾರ್ಥಿತವಾಗಿದೆ.

॥ ಸಂಹಿತಾಪಾಠಃ ॥

ನ ದಕ್ಷಿಣಾ ವಿ ಚಿಕಿತೇ ನ ಸವ್ಯಾ ನ ಪ್ರಾಚೀನಮಾದಿತ್ಯಾ ನೋತ ಪಶ್ಚಾ ।
ಪಾಕ್ಯಾ ಚಿದ್ವಸವೋ ಧೀರ್ಯಾ ಚಿದ್ಯುಷ್ಮಾನೀತೋ ಅಭಯಂ ಜ್ಯೋತಿರಶ್ಯಾಂ ॥

॥ ಪದಪಾಠಃ ॥

ನ । ದಕ್ಷಿಣಾ । ವಿ । ಚಿಕಿತೇ । ನ । ಸವ್ಯಾ । ನ । ಪ್ರಾಚೀನಂ । ಆದಿತ್ಯಾಃ । ನ । ಉತ । ಪಶ್ಚಾ ।
ಪಾಕ್ಯಾ । ಚಿತ್ । ವಸವಃ । ಧೀರ್ಯಾ । ಚಿತ್ । ಯುಷ್ಮಾऽನೀತಃ । ಅಭಯಂ । ಜ್ಯೋತಿಃ । ಅಶ್ಯಾಂ ॥

॥ ಸಾಯಣಭಾಷ್ಯಂ ॥

ಆದಿತ್ಯದೇವತಾಕೇ ಪಶೌ ನ ದಕ್ಷಿಣೇತ್ಯೇಷಾ ಹವಿಷೋ ಯಾಜ್ಯಾ । ತಿಸ್ರೋ ಭೂಮೀರ್ಧಾರಯನ್ನಿತ್ಯುತ ದ್ಯೂನ್ ನ ದಕ್ಷಿಣಾ ವಿ ಚಿಕಿತೇ ನ ಸವ್ಯಾ । ಆ. ೩. ೮. । ಇತಿ ॥

ಹೇ ಆದಿತ್ಯಾಃ ದಕ್ಷಿಣಾ ದಕ್ಷಿಣೋ ನ ಭಾಗೋ ವಿಚಿಕಿತೇ । ಮಯಾ ನ ವಿಜ್ಞಾಯತೇ । ಸವ್ಯಾ ಸವ್ಯೋ ವಾಮಭಾಗೋऽಪಿ ನ ಜ್ಞಾಯತೇ ॥ ಉಭಯತ್ರ ಸುಪಾಂ ಸುಲುಗಿತಿ ಸೋರಾಜಾದೇಶಃ । ತಥಾ ಪ್ರಾಚೀನಂ ಪುರಸ್ತಾದಪಿ ನ ಜ್ಞಾಯತೇ ॥ ವಿಭಾಷಾಂಚೇರದಿಕ್ಸ್ತ್ರಿಯಾಮಿತಿ ಸ್ವಾರ್ಥೇ ಖಃ ॥ ಉತ ಅಪಿ ಚ ಪಶ್ಚಾ ಪಶ್ಚಾತ್ ಪೃಷ್ಠಭಾಗೇऽಪಿ ನ ಜ್ಞಾಯತೇ । ನೈಶೇನ ತಮಸಾವೃತತ್ವಾತ್ ಅಂತರಾದಜ್ಞಾನಾದ್ವಾ ॥ ಪಶ್ಚ ಪಶ್ಚಾ ಚ ಛಂದಸಿ । ಪಾ. ೫. ೩. ೩೩. । ಇತಿ ನಿಪಾತ್ಯತೇ ॥ ಕಿಂ ಬಹುನಾ । ಪಾಕ್ಯಾ ಚಿತ್ । ಪಾಕ್ಯಃ ಪಕ್ತವ್ಯೋऽಪರಿಪಕ್ವಜ್ಞಾನೋऽಪಿ ॥ ಡುಪಚಷ್ ಪಾಕೇ । ಋಹಲೋರ್ಣ್ಯತ್ । ತಿತ್ಸ್ವರಿತಂ ॥ ಧೀರ್ಯಾ ಚಿತ್ ಧೀರೇ ನೇತವ್ಯತ್ವೇನ ಭವೋ ಧೀರ್ಯಃ ಕಾತರಃ ॥ ಭವೇ ಛಂದಸೀತಿ

**ಯತ್** ॥ **ಕಾತರೋऽಪಿ** ॥ **ಉಭಯತ್ರ ಸುಪಾಂ ಸುಲುಗಿತ್ಯಾಕಾರಃ** ॥ **ಹೇ ವಸವೋ ವಾಸಯಿತಾರ ಆದಿತ್ಯಾ ಯುಷ್ಮಾನೀತೋ ಯುಷ್ಮಾಭಿರ್ನೀತಃ ಶೋಭನೇನ ಮಾರ್ಗೇಣ ಪ್ರಾಪಿತಃ ಸನ್ ಅಭಯಂ ಭಯರಹಿತಂ ಜ್ಯೋತಿಃ ಸೌರಂ ತೇಜ ಆಂತರಂ ವಾ ಜ್ಞಾನಾತ್ಮಕಮಶ್ಯಾಂ । ಪ್ರಾಪ್ನುಯಾಂ** ॥

॥ ಪ್ರತಿಪದಾರ್ಥ ॥

**ಆದಿತ್ಯಾಃ**—ಎಲೈ ಆದಿತ್ಯರೇ । **ದಕ್ಷಿಣಾ**—ನನ್ನ ಬಲಭಾಗದಲ್ಲಿರುವುದು । **ನ ವಿ ಚಿಕಿತೇ**—ನನಗೆ ತಿಳಿಯುತ್ತಿಲ್ಲ । **ಸವ್ಯಾ**—ಎಡಭಾಗದಲ್ಲಿರುವುದೂ । **ನ**—ತಿಳಿಯುತ್ತಿಲ್ಲ । **ಪ್ರಾಚೀನಂ**—ಮುಂಭಾಗದಲ್ಲಿರುವುದೂ **ನ**—ತಿಳಿಯುತ್ತಿಲ್ಲ । **ಉತ**—ಮತ್ತು । **ಪಶ್ಚಾ**—ಪೃಷ್ಠಭಾಗದಲ್ಲಿರುವುದೂ । **ನ**—ತಿಳಿಯತ್ತಿಲ್ಲ । **ಪಾಕ್ಯಾ ಚಿತ್**—ಪರಿಪಕ್ವವಾದ ಜ್ಞಾನವಿಲ್ಲದಿದ್ದರೂ । **ಧೀರ್ಯಾ ಚಿತ್**—ಕಾತರತ್ವವಿದ್ದರೂ ಸಹ । **ವಸವಃ**—ಎಲೈ ಆದಿತ್ಯರೇ । **ಯುಷ್ಮಾನೀತಃ**—ನಿಮ್ಮಿಂದ ನಿರ್ದಿಷ್ಟವಾದ ಮಾರ್ಗದಲ್ಲಿ ನಡೆಯುತ್ತಾ । **ಅಭಯಂ**—ಭಯರಹಿತವಾದ । **ಜ್ಯೋತಿಃ**—ತೇಜಸ್ಸನ್ನು । **ಅಶ್ಯಾಂ**—ಹೊಂದುವಂತಾಗಲಿ.

॥ ಭಾವಾರ್ಥ ॥

ಎಲೈ ಆದಿತ್ಯರೇ, ನನ್ನ ಅಜ್ಞಾನದಿಂದಲೂ ಮತ್ತು ಸ್ವೈಶವಾದ ಅಂಧಕಾರದಿಂದಲೂ ನನಗೆ ನನ್ನ ಬಲಭಾಗದಲ್ಲಿರುವ ವಸ್ತುವಾಗಲಿ, ಎಡಭಾಗದಲ್ಲಿರುವುದಾಗಲಿ, ಮುಂಭಾಗದಲ್ಲಿರುವುದಾಗಲಿ ಮತ್ತು ಪೃಷ್ಠಭಾಗದಲ್ಲಿರುವುದಾಗಲೀ ತಿಳಿಯುತ್ತಿಲ್ಲ. ನಾನು ಪರಿಪಕ್ವವಾದ ಜ್ಞಾನವಿಲ್ಲದವನೂ ಕಾತರನೂ ಆಗಿದ್ದೇನೆ. ಆದರೂ ಸಹ ನಿಮ್ಮಿಂದ ನಿರ್ದಿಷ್ಟವಾದ ಮಾರ್ಗದಲ್ಲಿ ನಡೆಯುತ್ತಾ ಭಯರಹಿತವಾದ ತೇಜಸ್ಸನ್ನು ನಾನು ಪಡೆಯುವಂತಾಗಲಿ.

## English Translation

Neither is the right hand known to us, Adityas, nor is the left; neither is that which is in front, nor that which is behind, (discerned by me): Givers of dwellings, may I, who am immature (in knowledge), and timid (in spirit), obtain, when guided by you, the light that is free from fear.

॥ ವಿಶೇಷವಿಷಯಗಳು ॥

ಆದಿತ್ಯದೇವತಾಸಂಬಂಧವಾದ ಪಶುಯಾಗದಲ್ಲಿ— **ನ ದಕ್ಷಿಣಾ** ಎಂಬ ಈ ಋಕ್ಕನ್ನು ಹವಿಸ್ಸನ್ನು ಹೋಮಮಾಡುವಾಗ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತ್ರಸೂತ್ರದ—**ತಿಸ್ರೋ ಭೂಮೀರ್ಧಾರಯನ್ತ್ರೀರುತ ದ್ಯೂನ್ ನ ದಕ್ಷಿಣಾ ವಿ ಚಿಕಿತೇ ನ ಸವ್ಯಾ** ಎಂಬ ಸೂತ್ರದಿಂದ ವಿವೃತವಾಗಿರುವುದು.

ಈ ಋಕ್ಕಿನಲ್ಲಿ ಕಗ್ಗತ್ತಲೆಯಂತೆ ಇರುವ ಅಜ್ಞಾನವು ನಾಶವಾಗಬೇಕೆಂದು ಆದಿತ್ಯರನ್ನು ಕುರಿತು ಆಚರಿಸಿದ ಪ್ರಾರ್ಥನೆಯು ಉಕ್ತವಾಗಿದೆ.

ಆದಿತ್ಯರನ್ನು ಸಂಬೋಧಿಸಿ, **ದಕ್ಷಿಣಾ, ಸವ್ಯಾ, ಪ್ರಾಚೀನಂ ಪಶ್ಚಾ,** ಎಂಬ ಪದಗಳಿಂದ **ನೈಶೇನ ತಮಸಾ ಆವೃತತ್ವಾತ್ ಆಂತರಾದಜ್ಞಾನಾದ್ವಾ,** ರಾತ್ರಿಕಾಲದ ಕತ್ತಲೆಯೂ ಅಥವಾ ಮನಸ್ಸಿನಲ್ಲಿ ಪ್ರಭೂತವಾಗಿರುವ ಅಜ್ಞಾನವೂ, ಏನೂ ತಿಳಿಯದ ನನ್ನನ್ನು ಆವರಿಸಿಕೊಂಡು ಬಲಭಾಗ, ಎಡಭಾಗ, ಎಂಬಿವುಗಳನ್ನೂ ಪೂರ್ವ ಮತ್ತು ಪಶ್ಚಿಮ ಎಂಬ ದಿಕ್ಕುಗಳ ವ್ಯವಸ್ಥೆಯನ್ನೂ ಕೂಡ ಗೋಚರವಾಗದಂತೆ ಮಾಡಿರುತ್ತವೆ ಎಂದು ವರ್ಣಿಸಿ, **ಪಾಕ್ಯಾ ಚಿತ್, ಧೀರ್ಯಾ ಚಿತ್, ಯುಷ್ಮಾನೀತಃ ಅಭಯಂ ಜ್ಯೋತಿರಶ್ಯಾಂ ।** ಅಲ್ಪವಾದ ಜ್ಞಾನವುಳ್ಳವನಾದರೂ, (ಮಂದಮತಿ) ದಡ್ಡನಾದರೂ ಯಜಮಾನನು ಈ ಆದಿತ್ಯರಿಂದ ಅನುಗೃಹೀತನಾದವನಾಗಿ ಯಾರಿಂದಲೂ ಭಯವನ್ನು ಹೊಂದದೆ ಇರುವ ಹಾಗೆ ಸೂರ್ಯಸಂಬಂಧವಾದ ಕತ್ತಲೆಯನ್ನು ನಾಶಪಡಿಸುವ ತೇಜಸ್ಸನ್ನೂ ಅಥವಾ ಅಜ್ಞಾನವನ್ನು ಹೋಗಲಾಡಿಸುವ ಜ್ಞಾನವನ್ನೂ ಹೊಂದಬೇಕೆಂದು ಪ್ರಾರ್ಥನೆಯು ಉಕ್ತವಾಗಿದೆ.

**ಪಾಕ್ಯಾ—ಪಕ್ತವ್ಯಃ ಅಪರಿಪಕ್ವಜ್ಞಾನಃ ।** ಸಂಪೂರ್ಣವಾದ ಜ್ಞಾನವಿಲ್ಲದವನೆಂದು ಸಾಯಣರು ವಿವರಿಸಿದ್ದಾರೆ. ಯಾಸ್ಕರು—**ಪಾಕಃ** ಎಂಬ ಶಬ್ದವನ್ನು ಪ್ರಶಸ್ಯ ನಾಮಗಳಲ್ಲಿ ಪಾಠಮಾಡಿ (ನಿ. ೩–೧೩) **ಪಾಕಃ ಪಕ್ತವ್ಯೋ ಭವತಿ ವಿಪಕ್ವಪ್ರಜ್ಞ ಆದಿತ್ಯಃ** (ನಿ. ೩–೧೨) ಎಂದು ವಿವರಿಸಿದ್ದಾರೆ. ಪಾಕ ಶಬ್ದದ ಅರ್ಥವಿವರಣೆಯು ವಾಮನ ಸೂಕ್ತದಲ್ಲಿ ಹಿಂದೆ ವಿವೃತವಾಗಿದೆ.

**ಧೀರ್ಯಾ ಚಿತ್—ಧೀರೇ ನೇತವ್ಯತ್ವೇನ ಭವಃ ಧೀರ್ಯಃ ಕಾತರಃ—**ಬುದ್ಧಿವಂತನಾದವನು (ಹೇಳಿಕೊಟ್ಟು) ಉಪದೇಶಮಾಡಿದಂತೆ ವ್ಯವಹಾರವನ್ನು ಆಚರಿಸುವವನು ಎಂದರೆ ಸ್ವಲ್ಪವಾದರೂ (ಜ್ಞಾನ) ತಿಳುವಳಿಕೆ ಇಲ್ಲದವನು ಎಂದು ಸಾಯಣರು ಅರ್ಥವನ್ನು ವಿವರಿಸುತ್ತಾರೆ. ಚಿತ್ ಎಂಬ ಪದಕ್ಕೆ ಸಮುಚ್ಚಯಾರ್ಥವು ಉಕ್ತವಾಗಿದೆ.



॥ ಸಂಹಿತಾಪಾಠಃ ॥

ಯೋ ರಾಜಭ್ಯ ಋತನಿಭ್ಯೋ ದದಾಶ ಯಂ ವರ್ಧಯನ್ತಿ ಪುಷ್ಟಯಶ್ಚ ನಿತ್ಯಾಃ ।
ಸ ರೇವಾನ್ಯಾತಿ ಪ್ರಥಮೋ ರಥೇನ ವಸುದಾವಾ ವಿದಥೇಷು ಪ್ರಶಸ್ತಃ ॥ ೧೨ ॥

॥ ಪದಪಾಠಃ ॥

ಯಃ । ರಾಜಽಭ್ಯಃ । ಋತನಿಽಭ್ಯಃ । ದದಾಶ । ಯಂ । ವರ್ಧಯನ್ತಿ । ಪುಷ್ಟಯಃ । ಚ । ನಿತ್ಯಾಃ ।
ಸಃ । ರೇವಾನ್ । ಯಾತಿ । ಪ್ರಥಮಃ । ರಥೇನ । ವಸುಽದಾವಾ । ವಿದಥೇಷು । ಪ್ರಽಶಸ್ತಃ ॥ ೧೨ ॥

॥ ಸಾಯಣಭಾಷ್ಯಂ ॥

**ಯೋ ಯಜಮಾನೋ ರಾಜಭ್ಯೋ ರಾಜಮಾನೇಭ್ಯ ಋತನಿಭ್ಯ ಋತಸ್ಯ ಸತ್ಯಸ್ಯ ವಾ ನೇತೃಭ್ಯ ಆದಿತ್ಯೇಭ್ಯೋ ದದಾಶ । ಚರುಪುರೋಡಾಶಾದಿಕಂ ದದಾತಿ। ಯಂ ಯಜಮಾನಂ ಪುಷ್ಟಯಃ ಪೋಷಕಾ ನಿತ್ಯಾಃ ಶಾಶ್ವತಾ ಆದಿತ್ಯಾಶ್ಚ ವರ್ಧಯಂತಿ । ಸ ಯಜಮಾನೋ ರೇವಾನ್ಧನವಾನ್ ಪ್ರಥಮಃ ಪ್ರಥಿತಃ ಪ್ರಖ್ಯಾತಃ ವಸುದಾವಾ ವಸೂನಾಂ ಧನಾನಾಂ ದಾತಾ ಸನ್ ಪ್ರಶಸ್ತಃ ಸರ್ವೈಃ ಪ್ರಶಸ್ಯಮಾನೋ ವಿದಥೇಷು ವೇದ್ಯೇಷು ಲಬ್ಧವ್ಯೇಷು ಗೃಹೇಷು ರಥೇನ ವಾಹನೇನ ಯಾತಿ । ಗಚ್ಛತಿ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಯಜಮಾನನು । **ರಾಜಭ್ಯಃ**—ಪ್ರಕಾಶಮಾನರಾದವರೂ । **ಋತನಿಭ್ಯಃ**—ಯಜ್ಞಕ್ಕೆ ನೇತೃಗಳಾದವರೂ ಆದ ಆದಿತ್ಯರಿಗೆ । **ದದಾಶ**—ಚರುಪುರೋಡಾಶಾದಿಗಳನ್ನು ಅರ್ಪಿಸುವನೋ (ಮತ್ತು) । **ಯಂ**—ಯಾವ ಯಜಮಾನನನ್ನು । **ಪುಷ್ಟಯಃ**—ಪೋಷಕರೂ । **ನಿತ್ಯಾಃ**—ಶಾಶ್ವತರೂ ಆದ ಆದಿತ್ಯರು । **ವರ್ಧಯಂತಿ**—ವೃದ್ಧಿಯನ್ನು ಪಡೆಯುವಂತೆ ಮಾಡುತ್ತಾರೆಯೋ । **ಸಃ**—ಆ ಯಜಮಾನನು । **ರೇವಾನ್**—ಧನವಂತನಾಗಿಯೂ । **ಪ್ರಥಮಃ**—ಪ್ರಖ್ಯಾತನಾಗಿಯೂ । **ವಸುದಾವಾ**—ಧನದಾತನಾಗಿಯೂ । **ಪ್ರಶಸ್ತಃ**—ಎಲ್ಲರಿಂದಲೂ ಪ್ರಶಂಸಿಸಲ್ಪಡುವವನಾಗಿಯೂ । **ವಿದಥೇಷು** – ಯಜ್ಞಗೃಹಗಳಲ್ಲಿ (ಯಜ್ಞಗೃಹಗಳಿಗೆ) । **ರಥೇನ**—ರಥದಲ್ಲಿ ಕುಳಿತು । **ಯಾತಿ**—ಹೋಗುತ್ತಾನೆ.

॥ ಭಾವಾರ್ಥ ॥

ಪ್ರಕಾಶಮಾನರಾದವರೂ, ಯಜ್ಞಕ್ಕೆ ನೇತೃಗಳಾದವರೂ ಆದ ಆದಿತ್ಯರಿಗೆ ಚರುಪುರೋಡಾಶಾದಿಗಳನ್ನು ಯಾವ ಯಜಮಾನನು ಅರ್ಪಿಸುವನೋ, ಮತ್ತು ಪೋಷಕರೂ, ಶಾಶ್ವತರೂ ಆದ ಆದಿತ್ಯರು ಯಾವ ಯಜಮಾನನ್ನು ವೃದ್ಧಿಯನ್ನು ಪಡೆಯುವಂತೆ ಮಾಡುತ್ತಾರೆಯೋ ಆ ಯಜಮಾನನು ಧನವಂತನಾಗಿಯೂ, ಪ್ರಖ್ಯಾತನಾಗಿಯೂ, ಧನದಾತನಾಗಿಯೂ ಮತ್ತು ಎಲ್ಲರಿಂದಲೂ ಪ್ರಶಂಸಿಸಲ್ಪಡುವವನಾಗಿಯೂ ಯಜ್ಞಗೃಹಗಳಿಗೆ ರಥದಲ್ಲಿ ಕುಳಿತು ಹೋಗುತ್ತಾನೆ.

English Translation

He who presents offerings to the royal and true (Adityas); he whom their constant favours exalt; he proceeds, wealthy, renowned, munificent and honoured, to sacrifices, in his chariot.

॥ ವಿಶೇಷವಿಷಯಗಳು ॥

**ಋತನಿಭ್ಯಃ ದದಾಶ—ಸತ್ಯಸ್ಯ ಯಜ್ಞಸ್ಯ ವಾ ನೇತೃಭ್ಯಃ ಆದಿತ್ಯೇಭ್ಯಃ ಚರುಪುರೋಡಾಶಾದಿಕಂ ದದಾತಿ** । ಆದಿತ್ಯರು ಸತ್ಯವನ್ನೂ ಯಜ್ಞವನ್ನೂ ಮುಂದಾಳಾಗಿ ನಿಂತುಕೊಂಡು ರಕ್ಷಿಸುವುದರಿಂದ ಇವರು ನೇತೃಗಳಾಗಿ ಇರುವರೆಂದು ತಿಳಿದು ಈ ಆದಿತ್ಯರಿಗೆ ಯಜಮಾನನು ಹವಿಸ್ಸಿನ ರೂಪವಾದ ಚರುಪುರೋಡಾಶಗಳನ್ನು ಅರ್ಪಿ

ಸುವನು. ಈ ಆದಿತ್ಯರು **ಪುಷ್ಯಯಃ ನಿತ್ಯಾಃ** ಜಗತ್ತೆಲ್ಲವನ್ನೂ ಪೋಷಿಸುವವರಾಗಿಯೂ, ನಾಶವನ್ನು ಹೊಂದದೆ ಇರುವವರಾದುದರಿಂದ ತಮಗೆ ಹವಿಸ್ಸನ್ನು ಅರ್ಪಿಸುತ್ತಿರುವ ಯಜಮಾನನು ವೃದ್ಧಿಯಾಗುವ ಹಾಗೆ ಅನುಗ್ರಹಿಸುವರು ಈ ಆದಿತ್ಯರ ಅನುಗ್ರಹಕ್ಕೆ ಪಾತ್ರನಾಗಿರುವ ಯಜಮಾನನು ಆದಿತ್ಯರ ಅನುಗ್ರಹದಿಂದ ಲಬ್ಧವಾದ ಧನದಿಂದ ಎಲ್ಲರಿಗಿಂತಲೂ ಮುಖ್ಯನಾಗಿಯೂ, ಸರ್ವರಲ್ಲಿಯೂ ಪ್ರಸಿದ್ಧನಾಗಿಯೂ, ಧನವನ್ನು ಇತರರಿಗೆ ದಾನಮಾಡುವವನಾಗಿಯೂ ಇರುತ್ತಾನೆ ಎಂದೂ ಯಜಮಾನರಿಗೆ ಲಬ್ಧವಾದ ಆದಿತ್ಯರ ಅನುಗ್ರಹ ರೂಪವಾದ ಮಹಿಮೆಯು ವರ್ಣಿತವಾಗಿದೆ. ಮತ್ತು ಯಜಮಾನನು **ಪ್ರ ಶಸ್ತಃ ವಿದಥೇಷು ರಥೇನ ಯಾತಿ.** ಇತರರಿಂದ ಸ್ತುತಿಸಲ್ಪಡುವವನಾಗಿ, ರಥದಲ್ಲಿ ಉಪವಿಷ್ಟನಾಗಿ, ಯಜ್ಞಗೃಹಾಭಿಮುಖವಾಗಿ ಹೋಗುವನೆಂದೂ ವಿವರಿಸಿದೆ.

**ವಸು** ಶಬ್ದವು ಯಾಸ್ಕರಿಂದ ರಶ್ಮಿನಾಮಗಳಲ್ಲಿ (ನಿ. ೨-೧೩) ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. **ಯಸ್ತ್ವಾ ಯಂತಂ ವಸುನಾ ಪ್ರಾತರಿತ್ವಃ** (ಋ ಸಂ. ೧-೧೨೫--೨) ಎಂಬಲ್ಲಿ **ವಸುನಾ ಅನ್ನೇನ** ಎಂದು ಅರ್ಥದಲ್ಲಿ ಪ್ರಯುಕ್ತವಾಗಿವೆ. ಸಾಯಣರು ಇಲ್ಲಿ ಧನ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಹೇಳಿದ್ದಾರೆ. ಮತ್ತು ವಸುದಾವಾ ಎಂಬ ಪದಕ್ಕೆ ಧನವನ್ನು ದಾನಮಾಡುವವನೆಂದು ಅರ್ಥವನ್ನು ವಿವರಿಸಿದ್ದಾರೆ.

॥ ಸಂಹಿತಾಪಾಠಃ ॥

**ಶುಚಿರಪಃ ಸೂಯವಸಾ ಅದಬ್ಧ ಉಪ ಕ್ಷೇತಿ ವೃದ್ಧವಯಾಃ ಸುವೀರಃ ।**
**ನಕಿಷ್ಟಂ ಘ್ನಂತ್ಯಂತಿತೋ ನ ದೂರಾದ್ಯ ಆದಿತ್ಯಾನಾಂ ಭವತಿ ಪ್ರಣೀತೌ ॥ ೧೩ ॥**

ಪದಪಾಠಃ

**ಶುಚಿಃ । ಅಪಃ । ಸುಽಯವಸಾಃ । ಅದಬ್ಧಃ । ಉಪ । ಕ್ಷೇತಿ । ವೃದ್ಧಽವಯಾಃ । ಸುಽವೀರಃ ।**
**ನಕಿಃ । ತಂ । ಘ್ನಂತಿ । ಅಂತಿತಃ । ನ । ದೂರಾತ್ । ಯಃ । ಆದಿತ್ಯಾನಾಂ । ಭವತಿ । ಪ್ರಽನೀತೌ ॥ ೧೩ ॥**

॥ ಸಾಯಣಭಾಷ್ಯಂ ॥

**ಸ ಯಜಮಾನಃ ಶುಚಿರ್ದೀಪ್ಯಮಾನಃ ಶುದ್ಧೋ ವಾ ಅದಬ್ಧಃ ಸಪತ್ನೈರಬಾಧಿತೋ ವೃದ್ಧವಯಾಃ ಪ್ರಭೂತಾನ್ನಃ ಸುವೀರಃ ಶೋಭನಪುತ್ರಶ್ಚ ಸನ್ ಸುಯವಸಾಃ ಶೋಭನಸಸ್ಯಾನ್ಯಪೋ ವೃಷ್ಟಿಲಕ್ಷಣಾನ್ಯುದಕಾನ್ಯುಪಕ್ಷೇತಿ । ಉಪನಿವಸತಿ । ಸರ್ವದಾ ಸುಸಸ್ಯಾನಾಮಪಾಂ ಸಮೀಪೇ ನಿವಸತೀತ್ಯರ್ಥಃ । ತಥಾ ನಕಿರ್ನ ಚ ತಂ ಘ್ನಂತಿ ಹಿಂಸಂತ್ಯಂತಿತೋ ನ ಅಂತಿಕಾತ್ಸಮೀಪದೇಶಾಚ್ಚ ದೂರಾದ್ವಿಪ್ರಕೃಷ್ಟಾಚ್ಚ ದೇಶಾದಾಗತಾ ಬಾಧಕಾಃ ॥ ಅಂತಿಕಸ್ಯ ತಸಿ ಕಾದಿಲೋಪ ಇತಿ ಲೋಪಃ ॥ ಯೋ ಯಜಮಾನ ಆದಿತ್ಯಾನಾಮದಿತೇಃ ಪುತ್ರಾಣಾಂ ಮಿತ್ರಾದೀನಾಂ ಪ್ರಣೀತೌ ಪ್ರಕೃಷ್ಟೇ ನಯನೇ ಪ್ರಾಪಣೇ ಭವತಿ ವರ್ತತೇ ಸ ಇತಿ ಪೂರ್ವತ್ರ ಸಂಬಂಧಃ ॥**

॥ ಪ್ರತಿಪದಾರ್ಥ ॥

**ಯಃ**— ಯಾವ ಯಜಮಾನನು । **ಆದಿತ್ಯಾನಾಂ**— ಆದಿತ್ಯರ । **ಪ್ರಣೀತೌ**—ಶ್ರೇಷ್ಠವಾದ ಮಾರ್ಗದರ್ಶಿತ್ವದಲ್ಲಿ । **ಭವತಿ**— ಇರುತ್ತಾನೆಯೋ, (ಆ ಯಜಮಾನನು) । **ಶುಚಿಃ**—ಶುದ್ಧನಾಗಿಯೂ । **ಅದಬ್ಧಃ**— ಇತರರಿಂದ ಹಿಂಸಿಸಲ್ಪಡದೆಯೂ। **ವೃದ್ಧವಯಾಃ**— ಪ್ರಭೂತವಾದ ಅನ್ನವುಳ್ಳವನಾಗಿಯೂ। **ಸುವೀರಃ**—ಶ್ರೇಷ್ಠವಾದ ಪುತ್ರಸಹಿತನಾಗಿಯೂ ಇದ್ದು । **ಸೂಯವಸಾಃ**— ಉತ್ತಮವಾದ ಸಸ್ಯಗಳನ್ನು ಬೆಳೆಸಲು ಯೋಗ್ಯವಾದ । **ಅಪಃ**— ಉದಕಗಳ । **ಉಪ**—ಸಮೀಪದಲ್ಲಿ । **ಕ್ಷೇತಿ**— ವಾಸಮಾಡುತ್ತಾನೆ । **ತಂ**—ಆ ಯಜಮಾನನನ್ನು । **ನಕಿಃ**— ಯಾರೂ ಕೂಡ । **ಘ್ನಂತಿ**— ಹಿಂಸಿಸುವುದಿಲ್ಲ । **ಅಂತಿತಃ**— ಸಮೀಪದಲ್ಲಿರುವವರಾಗಲಿ । **ದೂರಾತ್**— ದೂರದೇಶಸ್ಥರಾಗಲಿ **ನ**— ಯಾರೂ

॥ ಭಾವಾರ್ಥ ॥

ಯಾವ ಯಜಮಾನನು ಆದಿತ್ಯರ ಶ್ರೇಷ್ಠವಾದ ಮಾರ್ಗದರ್ಶಿತ್ವದಲ್ಲಿ ಇರುತ್ತಾನೆಯೋ ಆ ಯಜಮಾನನು ಶುದ್ಧನಾಗಿಯೂ, ಇತರರಿಂದ ಹಿಂಸಿಸಲ್ಪಡದೆಯೂ, ಪ್ರಭೂತವಾದ ಅನ್ನವುಳ್ಳವನಾಗಿಯೂ, ಶ್ರೇಷ್ಠವಾದ ಪುತ್ರಸಹಿತನಾಗಿಯೂ ಇದ್ದು ಉತ್ತಮವಾದ ಸಸ್ಯಗಳನ್ನು ಬೆಳೆಸಲು ಯೋಗ್ಯವಾದ ಉದಕಗಳ ಸಮೀಪದಲ್ಲಿ ವಾಸಮಾಡುತ್ತಾನೆ. ಆ ಯಜಮಾನನನ್ನು ಯಾರೂ ಹಿಂಸಿಸುವುದಿಲ್ಲ. ಸಮೀಪದಲ್ಲಿರುವವರಾಗಲಿ, ದೂರದಲ್ಲಿರುವವರಾಗಲಿ ಯಾರೂ ಹಿಂಸಿಸಲಾರರು.

English Translation.

Pure unmolested, possessing (abundant) food and virtuous descendants, he dwells amidst fertilizing waters: no one, whether nigh or afar, harms him who is (safe) in the good guidance of the Adityas.

॥ ವಿಶೇಷವಿಷಯಗಳು ॥

**ಶುಚಿಃ—ದೀಪ್ಯಮಾನಃ ಶುದ್ಧೋ ವಾ ।** ಶುಚಿ ಶಬ್ದವು ಯಾಸ್ಕರಿಂದ **ಶುಕ್ ಶೋಚತೇಃ, ಶುಚಿಃ ಶೋಚತೇಃ, ಜ್ವಲತಿಕರ್ಮಣಃ** (ನಿ. ೬-೧) ಎಂದು ವ್ಯಾಖ್ಯಾತವಾಗಿದೆ. ಸಾಯಣರು ತೇಜಸ್ಸುಗಳಿಂದ ಬೆಳಗುವವನು, ಪರಿಶುದ್ಧನು ಎಂದು ಅರ್ಥವನ್ನು ಹೇಳಿದ್ದಾರೆ. ಆದಿತ್ಯರನ್ನು ಆರಾಧಿಸುವ ಯಜಮಾನನು ಕಾಂತಿಯಿಂದ ಪ್ರಕಾಶಮಾನನಾಗಿಯೂ, ಪರಿಶುದ್ಧನಾಗಿಯೂ ಇರುವನೆಂದು ಎರಡು ವಿಧವಾದ ಅರ್ಥವು ಉಕ್ತವಾಗಿದೆ. ಮತ್ತೂ ಈ ಯಜಮಾನನು ಶತ್ರುಗಳ ಹಿಂಸೆಗೆ ಒಳಪಡದವನಾಗಿಯೂ, ಪ್ರಭೂತವಾದ ಅನ್ನವನ್ನು ಹೊಂದಿರುವವನಾಗಿಯೂ, ಗುಣವಂತರಾದ ಪುತ್ರರನ್ನು ಹೊಂದಿ, **ಸುಸಸ್ಯಾನಾಂ ಅಪಾಂ ಸಮೀಪೇ ಸರ್ವದಾ ನಿವಸತಿ** ಸಸ್ಯಗಳಿಂದ ತುಂಬಿರುವ, ಉದಕಸಮೃದ್ಧವಾದ ಪ್ರದೇಶಗಳಲ್ಲಿ ಅನ್ನಪಾನಗಳಿಗೆ ತೊಂದರೆಯಿಲ್ಲದಂತೆ ವಾಸಮಾಡುತ್ತಾನೆಂದು ಯಜಮಾನನಿಗೆ ಪ್ರಾಪ್ತವಾಗಬಹುದಾದ ಆದಿತ್ಯರ ಅನುಗ್ರಹದ ಪ್ರಭಾವವು ಉಕ್ತವಾಗಿದೆ.

**ನಕಿಃ**— ಈ ಪದವು ಯಾಸ್ಕರಿಂದ **ಸರ್ವಪದಸಮಾಮ್ನಾಯ**ದಲ್ಲಿ (ನಿ. ೩-೧೪) ಉಕ್ತವಾಗಿ ಇಲ್ಲಿ **ಸಮೀಪ** ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಆದಿತ್ಯರ ಅನುಗ್ರಹವನ್ನು ಹೊಂದಿದ ಯಜಮಾನನನ್ನು ಶತ್ರುಗಳು ಹತ್ತಿರದಲ್ಲಿಯಾಗಲಿ, ದೂರದಿಂದಲಾಗಲಿ ಹಿಂಸೆಮಾಡಲು ಅಶಕ್ಯವು ಎಂದು ಆದಿತ್ಯರ ಮಹಿಮೆಯು ವರ್ಣಿತವಾಗಿದೆ.

॥ ಸಂಹಿತಾಪಾಠಃ ॥

ಅದಿ॑ತೇ॒ ಮಿತ್ರ॒ ವರು॒ಣೋತ ಮೃ॒ಳ ಯದ್ವೋ॑ ವ॒ಯಂ ಚ॑ಕೃ॒ಮಾ ಕಚ್ಚಿ॒ದಾಗಃ॑ ।
ಉ॒ರ್ವ॑ಶ್ಯಾ॒ಮಭ॑ಯಂ॒ ಜ್ಯೋತಿ॑ರಿನ್ದ್ರ॒ ಮಾ ನೋ॑ ದೀ॒ರ್ಘಾ ಅ॒ಭಿ ನ॑ಶ॒ನ್ತಮಿ॑ಸ್ರಾಃ ॥

॥ ಪದಪಾಠಃ ॥

ಅದಿ॑ತೇ । ಮಿತ್ರ॑ । ವರು॑ಣ । ಉ॒ತ । ಮೃ॒ಳ । ಯತ್ । ವಃ॒ । ಚ॒ಕೃ॒ಮ । ಕತ್ । ಚಿ॒ತ್ । ಆಗಃ॑ ।
ಉ॒ರು । ಅ॒ಶ್ಯಾ॒ಂ । ಅಭ॑ಯಂ । ಜ್ಯೋತಿಃ॑ । ಇ॒ನ್ದ್ರ॒ । ಮಾ । ನಃ॒ । ದೀ॒ರ್ಘಾಃ । ಅ॒ಭಿ । ನ॒ಶ॒ನ್ । ತಮಿ॑-
ಸ್ರಾಃ ॥ ೧೪ ॥

॥ ಸಾಯಣಭಾಷ್ಯಂ ॥

ಉತ ಅಪಿ ಚ ಹೇ ಅದಿತೇ ಮಿತ್ರ ವರುಣ ॥ ಆಮಂತ್ರಿತಂ ಪೂರ್ವಮವಿದ್ಯಮಾನವದಿತಿ ಪೂರ್ವಪೂರ್ವಸ್ಯಾಮಂತ್ರಿತಸ್ಯಾವಿದ್ಯಮಾನವದ್ಭಾವಾತ್ ಸರ್ವೇಷಾಂ ಷಾಷ್ಠಿಕಮಾಮಂತ್ರಿತಸ್ಯೇತ್ಯಾ-ದ್ಯುದಾತ್ತತ್ವಂ ॥ ಯೂಯಂ ಪ್ರತ್ಯೇಕಂ ಮೃಳ । ಅಸ್ಮಾಕಮುಪರಿ ದಯಾಂ ಕುರು । ರಕ್ಷೇತ್ಯರ್ಥಃ । ಯತ್ ಯದ್ಯಪಿ ವಯಂ ವೋ ಯುಷ್ಮಾಕಂ ಕಚ್ಚಿತ್ ಕಿಂಚಿದಾಗೋಽಪರಾಧಂ ಚಕೃಮ । ಅಕುರ್ಮ । ತಥಾಪಿ ಮೃಳೇತ್ಯರ್ಥಃ । ಹೇ ಇಂದ್ರ ಪರಮೈಶ್ವರ್ಯೋಪೇತಾದಿತ್ಯ ಉರು ವಿಸ್ತೀರ್ಣಮಭಯಂ ಭಯ-ರಹಿತಂ ಜ್ಯೋತಿಸ್ತ್ವದೀಯಂ ಪ್ರಕಾಶಂ ಜ್ಞಾನಾತ್ಮಕಂ ವಾಶ್ಯಾಂ । ಅಹಂ ಪ್ರಾಪ್ನುಯಾಂ । ದೀರ್ಘಾ ವಿಸ್ತೃತಾಸ್ತಮಿಸ್ರಾಸ್ತಮಸಾ ಯುಕ್ತಾ ನಿಶಾಃ ॥ ಜ್ಯೋತ್ಸ್ನಾತಮಿಸ್ರಾಶೃಂಗಿಣಾ । ಪಾ. ೫. ೨. ೧೧೪ । ಇತಿ ನಿಪಾತ್ಯತೇ ॥ ತಾ ನೋಽಸ್ಮಾನ್ ಮಾಭಿನಶನ್ । ಮಾಭಿಮುಖ್ಯೇನ ವ್ಯಾಪ್ನುವಂತು ॥

॥ ಪ್ರತಿಪದಾರ್ಥ ॥

**ಉತ** – ಮತ್ತು । **ಅದಿತೇ**—ಎಲೈ ಅದಿತಿಯೇ । **ಮಿತ್ರ**—ಮಿತ್ರನೇ । **ವರುಣ**—ಎಲೈ ವರುಣನೇ। **ಯತ್**—ಒಂದು ವೇಳೆ । **ವಯಂ**—ನಾವು। **ವಃ**—ನಿಮ್ಮ ವಿಷಯದಲ್ಲಿ। **ಕಚ್ಚಿತ್**—ಯಾವುದಾದರೂ। **ಆಗಃ**—ಅಪರಾಧವನ್ನು । **ಚಕೃಮ**—ಮಾಡಿದ್ದರೂ ಸಹ । **ಮೃಳ**—ನಮ್ಮಲ್ಲಿ ದಯೆಯಿಟ್ಟು ನಮ್ಮನ್ನು ರಕ್ಷಿಸಿರಿ । **ಇಂದ್ರ**— ಉತ್ಕೃಷ್ಟವಾದ ಐಶ್ವರ್ಯೋಪೇತನಾದ ಆದಿತ್ಯನೇ । **ಉರು**—ವಿಸ್ತೃತವಾದುದೂ। **ಅಭಯಂ**—ಭಯರಹಿತವಾದುದೂ ಆದ । **ಜ್ಯೋತಿಃ**—ತೇಜಸ್ಸನ್ನು । **ಅಶ್ಯಾಂ**—ನಾನು ಹೊಂದುವಂತಾಗಲಿ। **ದೀರ್ಘಾಃ**—ಅತಿ ದೀರ್ಘವಾದುವೂ । **ತಮಿಸ್ರಾಃ**—ಅಂಧಕಾರದಿಂದ ಕೂಡಿದವೂ ಆದ ರಾತ್ರಿಗಳು । **ನಃ**—ನಮ್ಮನ್ನು । **ಮಾ ಅಭಿ ನಶನ್**—ಸುತ್ತುವರಿದು ವ್ಯಾಪಿಸದಿರಲಿ.

### ಭಾವಾರ್ಥ ॥

ಎಲೈ ಅದಿತಿಯೇ, ಮಿತ್ರನೇ, ವರುಣನೇ, ಒಂದು ವೇಳೆ ನಾವು ನಿಮ್ಮ ವಿಷಯದಲ್ಲಿ ಯಾವುದಾದರೂ ಅಪರಾಧವನ್ನು ಮಾಡಿದ್ದರೂ ಸಹ ನಮ್ಮಲ್ಲಿ ದಯೆಯನ್ನಿಟ್ಟು ನಮ್ಮನ್ನು ರಕ್ಷಿಸಿರಿ. ಉತ್ಕೃಷ್ಟನಾದ ಐಶ್ವರ್ಯೋಪೇತನಾದ ಆದಿತ್ಯನೇ, ವಿಸ್ತೃತವಾದುದೂ, ಭಯರಹಿತವಾದುದೂ ಆದ ತೇಜಸ್ಸನ್ನು ನಾನು ಹೊಂದುವಂತಾಗಲಿ ಅತಿದೀರ್ಘವಾದವೂ, ಅಂಧಕಾರದಿಂದ ಕೂಡಿದವೂ ಆದ ನಿಶೆಗಳು ನಮ್ಮನ್ನು ಸುತ್ತುವರಿದು ವ್ಯಾಪಿಸದಿರಲಿ.

### English Translation.

Aditi, Mitra, Varuna, have pity upon us, even although we may have committed some offence against you: may I obtain, Indra, that great light which is free from peril: let not the protracted glooms (of night) envelop us.

### ॥ ವಿಶೇಷವಿಷಯಗಳು ॥

ಅದಿತಿ, ಮಿತ್ರ, ವರುಣ ಶಬ್ದಗಳ ಅರ್ಥವಿವರಣೆಯು ಹಿಂದೆ ವಿವೃತವಾಗಿದೆ. ಇಲ್ಲಿ ಈ ಶಬ್ದಗಳಿಂದ ಈ ದೇವತೆಗಳನ್ನು ಸಂಬೋಧಿಸಿ, ಇವರು ಯಜಮಾನರನ್ನೂ ಋತ್ವಿಜರನ್ನೂ, ಪ್ರತಿಯೊಬ್ಬರೂ ದಯೆಯಿಂದ ರಕ್ಷಿಸಬೇಕೆಂದು ರಕ್ಷಣೆಯು ಪ್ರಾರ್ಥಿತವಾಗಿದೆ. ಮತ್ತು ಇವರು ಯಜಮಾನರು ಮತ್ತು ಋತ್ವಿಜರು ಆಚರಿಸಿರುವ ಅಪರಾಧಗಳನ್ನು ಮನ್ನಿಸಿ ರಕ್ಷಿಸಬೇಕೆಂದೂ ಪ್ರಾರ್ಥನೆಯು ವರ್ಣಿತವಾಗಿದೆ.

ಇಂದ್ರ ಶಬ್ದಕ್ಕೆ ಯಾಸ್ಕರು ಅರ್ಥವನ್ನು (ನಿ. ೧೦-೮) ವಿವರಿಸಿದ್ದಾರೆ. ಈ ವಿವರಣೆಯು ಹಿಂದಿನ ಸಂಪುಟಗಳಲ್ಲಿ ವಿಸ್ತಾರವಾಗಿ ಹೇಳಿದೆ. ಇಲ್ಲಿ ಆದಿತ್ಯರನ್ನು ಇಂದ್ರ ಶಬ್ದದಿಂದ ಸಂಬೋಧಿಸಿ, ಆದಿತ್ಯರು ನಿರತಿಶಯವಾದ ಐಶ್ವರ್ಯವುಳ್ಳವರೆಂದು ಅರ್ಥವನ್ನು ವಿವರಿಸಿ, ಈ ಆದಿತ್ಯರು, ಯಜಮಾನರಿಗೆ ತಮ್ಮ ಸಂಬಂಧಿಯಾದ ಪ್ರಭೂತವಾದ ತೇಜಸ್ಸನ್ನು ಅಥವಾ ಜ್ಞಾನವನ್ನು ಅನುಗ್ರಹಿಸಲಿ ಎಂದು ಪ್ರಾರ್ಥಿಸಲಾಗಿದೆ. ಮತ್ತು ಆದಿತ್ಯರು (ಅಂಧಕಾರ) ಕಗ್ಗತ್ತಲೆಯಿಂದ ವ್ಯಾಪ್ತವಾದುವುಗಳೂ, ಬಹಳ ಕಾಲದವರಿಗೂ ವ್ಯಾಪಿಸಿರುವುವೂ ಆದ ರಾತ್ರಿಗಳು ಯಜಮಾನರಿಗೆ ಸುಖಕರಗಳಾಗಿ ಕಳೆಯುವಂತೆ ಅನುಗ್ರಹವನ್ನು ಮಾಡಲಿ ಎಂದು ಆಶಿಸಿದೆ.



### ॥ ಸಂಹಿತಾಪಾಠಃ ॥

ಉಭೇ ಅಸ್ಮೈ ಪೀಪಯತಃ ಸಮೀಚೀ ದಿವೋ ವೃಷ್ಟಿಂ ಸುಭಗೋ ನಾಮ ಪುಷ್ಯನ್ ।
ಉಭಾ ಕ್ಷಯಾವಾಜಯನ್ಯಾತಿ ಪೃತ್ಸೂಭಾವರ್ಧಾ ಭವತಃ ಸಾಧೂ ಅಸ್ಮೈ ॥ ೧೫ ॥

॥ ಪದಪಾಠಃ ॥

ಉಭೇ ಇತಿ । ಅಸ್ಮೈ । ಪೀಪಯತಃ । ಸಮೀಚೀ ಇತಿ ಸಮ್ಽಈಚೀ । ದಿವಃ । ವೃಷ್ಟಿಂ । ಸುಽಭಗಃ ।
ನಾಮ । ಪುಷ್ಯನ್ ।

ಉಭಾ । ಕ್ಷಯೌ । ಆಽಜಯನ್ । ಯಾತಿ । ಪೃತ್ಽಸು । ಉಭೌ । ಅರ್ಧೌ । ಭವತಃ । ಸಾಧೂ ಇತಿ ।
ಅಸ್ಮೈ ॥ ೧೫ ॥

॥ ಸಾಯಣಭಾಷ್ಯಂ ॥

ಯೋ ಆದಿತ್ಯಾನಾಂ ಭವತಿ ಪ್ರಣೀತಾವಿತಿ ವ್ಯವಹಿತೋಽಪ್ಯತ್ರೇದಂಶಬ್ದೇನ ಪರಾಮೃಶ್ಯತೇ । ಅಸ್ಮೈ ಯಜಮಾನಾಯ ಸಮೀಚೀ ಸಂಗಚ್ಛಮಾನೇ ಉಭೇ ದ್ಯಾವಾಪೃಥಿವ್ಯೌ ಪೀಪಯತಃ । ಪ್ಯಾಯಯತಃ । ಕಾಮಾನ್ವರ್ಧಯತಃ ॥ ಪ್ಯಾಯೀ ವೃದ್ಧೌ । ಅಸ್ಮಾಣ್ಣ್ಯಂತಾಚ್ಛಾಂದಸೋ ಲುಙ್ । ವ್ಯತ್ಯಯೇನ ತಸಸ್ತಾಮಾದೇಶಾಭಾವೋ ಧಾತೋಃ ಪೀಭಾವಶ್ಚ ॥ ಸ ಚ ಸುಭಗಃ ಶೋಭನಧನೋ ದಿವೋ ದ್ಯುಲೋಕಾದಾಗತಾಂ ವೃಷ್ಟಿಂ ಪುಷ್ಯನ್ ವರ್ಧಯನ್ ಭವತಿ । ನಾಮೇತಿ ಪ್ರಸಿದ್ಧಿರ್ದ್ಯೋತ್ಯತೇ । ಕಿಂಚ ಪೃತ್ಸು ಪೃತನಾಸು ಸಂಗ್ರಾಮೇಷ್ವಾಜಯನ್ ಶತ್ರೂನಾಭಿಮುಖ್ಯೇನಾಭಿಭವನ್ ಉಭಾ ಕ್ಷಯಾವುಭೌ ನಿವಾಸೌ ॥ ಕ್ಷಿಯಂತಿ ನಿವಸಂತ್ಯಸ್ಮಿನ್ನಿತಿ ಕ್ಷಯೋ ನಿವಾಸಸ್ಥಾನಂ । ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣೇತ್ಯಧಿಕರಣೇ ಘಃ । ಕ್ಷಯೋ ನಿವಾಸ ಇತ್ಯಾದ್ಯುದಾತ್ತತ್ವಂ ॥ ತೌ ಪರೈರನಾಕ್ರಾಂತಂ ಸ್ವಕೀಯಂ ನಿವಾಸಸ್ಥಾನಂ ಆತ್ಮನಾಪಹೃತಂ ಪರಕೀಯಂ ನಿವಾಸಸ್ಥಾನಂ ಚ ಯಾತಿ । ಗಚ್ಛತಿ । ತಥಾಸ್ಮೈ ಯಜಮಾನಾಯೋಭಾವರ್ಧೌ ಜಗತೋ ಭಾಗೌ ಚರಾಚರಾತ್ಮಕೌ ಮರ್ತ್ಯಾಮರ್ತ್ಯಾತ್ಮಕೌ ವಾ ಸಾಧೂ ಸಾಧಕೌ ಭವತಃ ॥

॥ ಪ್ರತಿಪದಾರ್ಥ ॥

**ಅಸ್ಮೈ**—(ಆದಿತ್ಯರ ಮಾರ್ಗದರ್ಶಿತ್ವದಲ್ಲಿರುವ) ಈ ಯಜಮಾನನಿಗೆ । **ಉಭೇ**—ದ್ಯಾವಾಪೃಥಿವಿಗಳಿಬ್ಬರೂ । **ಸಮೀಚೀ**—ಒಟ್ಟಿಗೆ ಸೇರಿಕೊಂಡು । **ಪೀಪಯತಃ**—ಅವನ ಇಷ್ಟಾರ್ಥಗಳನ್ನು ಪೂರ್ಣಮಾಡುತ್ತಾರೆ (ಅವನು) । **ಸುಭಗಃ**—ಶ್ರೇಷ್ಠವಾದ ಧನಯುಕ್ತನಾಗಿ । **ದಿವಃ**—ದ್ಯುಲೋಕದಿಂದ ಆಗತವಾದ । **ವೃಷ್ಟಿಂ**—ವೃಷ್ಟಿಯನ್ನು (ವೃಷ್ಟಿಯಿಂದ) । **ಪುಷ್ಯನ್ ನಾಮ**—ಖಂಡಿತವಾಗಿಯೂ ವೃದ್ಧಿಯನ್ನು ಪಡೆಯುತ್ತಾನೆ । **ಪೃತ್ಸು**—ಸಂಗ್ರಾಮಗಳಲ್ಲಿ । **ಆಜಯನ್**—ಶತ್ರುಗಳನ್ನು ಸೋಲಿಸುತ್ತಾ । **ಉಭಾ ಕ್ಷಯೌ**—ತನಗೆ ಸೇರಿದವೂ ಮತ್ತು ಶತ್ರುಗಳಿಗೆ ಸೇರಿದವೂ ಆದ ಎರಡು ವಿಧವಾದ ವಾಸಸ್ಥಾನಗಳನ್ನೂ । **ಯಾತಿ**—ಪ್ರವೇಶಿಸುತ್ತಾನೆ । **ಅಸ್ಮೈ**—ಈ ಯಜಮಾನನಿಗೆ । **ಉಭಾವರ್ಧೌ**—ಚರಾಚರಾತ್ಮಗಳಾದ ಎರಡು ವಿಧವಾದ ಸೃಷ್ಟಿಕಾರ್ಯಗಳೂ ಸಹ । **ಸಾಧೂ**—ಅನುಕೂಲವನ್ನುಂಟುಮಾಡುವವಾಗಿ । **ಭವತಃ**—ಆಗುತ್ತವೆ.

॥ ಭಾವಾರ್ಥ ॥

ಆದಿತ್ಯರ ಮಾರ್ಗದರ್ಶಿತ್ವದಲ್ಲಿರುವ ಯಜಮಾನನಿಗೆ ದ್ಯಾವಾಪೃಥಿವಿಗಳಿಬ್ಬರೂ ಒಟ್ಟಿಗೆ ಸೇರಿಕೊಂಡು ಅವನ ಇಷ್ಟಾರ್ಥಗಳನ್ನು ಪೂರ್ಣಮಾಡುತ್ತಾರೆ. ಅವನು ಶ್ರೇಷ್ಠವಾದ ಧನಯುಕ್ತನಾಗಿ ದ್ಯುಲೋಕದಿಂದ ಆಗತವಾದ

ವೃದ್ಧಿಯನ್ನು ಪಡೆಯುತ್ತಾನೆ. ಸಂಗ್ರಾಮಗಳಲ್ಲಿ ಶತ್ರುಗಳನ್ನು ಸೋಲಿಸುತ್ತಾ ತನಗೆ ಸೇರಿದವೂ ಮತ್ತು ಶತ್ರುಗಳಿಗೆ ಸೇರಿದವೂ ಆದ ಎರಡು ವಿಧವಾದ ವಾಸಸ್ಥಾನಗಳನ್ನೂ ಪ್ರವೇಶಿಸುತ್ತಾನೆ. ಈ ಯಜಮಾನನಿಗೆ ಚರಾಚರಾತ್ಮಕಗಳಾದ ಎರಡು ವಿಧವಾದ ಸೃಷ್ಟಿಕಾರ್ಯಗಳೂ ಸಹ ಅನುಕೂಲಕಾರಕಗಳಾಗಿ ಆಗುತ್ತವೆ.

## English Translation.

Both (heaven and earth) combined, cherish him (whom the Adityas protect); verily prosperous, he thrivs, with the rain of heaven; victorious in battles, (he defends) both his own dwelling (and assails) that of his foe; to him both portions (of creation) are propitious.

॥ ವಿಶೇಷವಿಷಯಗಳು ॥

ಆದಿತ್ಯರ ಅನುಗ್ರಹವನ್ನು ಹೊಂದಿ ಅವರು ತೋರಿಸುವ ಮಾರ್ಗದಲ್ಲಿ ಇರುವ ಯಜಮಾನರಿಗೆ ಯಾವಾಗಲೂ ಜತೆಯಾಗಿರುವ ದ್ಯಾವಾಪೃಥಿವಿಗಳು ಯಜಮಾನರ ಇಷ್ಟಾರ್ಥಗಳು ನೆರವೇರುವಂತೆ ಅನುಕೂಲವಾಗಿ ಅಭಿವೃದ್ಧಿಯನ್ನು ಉಂಟುಮಾಡುತ್ತವೆ ಎಂದು ವಿವರಿಸಿದೆ.

**ಪೃತ್ಸು ಆಜಯನ್ ಉಭೌ ಕ್ಷಯೌ ಯಾತಿ— ಸಂಗ್ರಾಮೇಷು ಶತ್ರೂನಾಭಿಮುಖ್ಯೇನಾಭಿಭವನ್, ಪರೈರನಾಕ್ರಾಂತಂ ಸ್ವಕೀಯಂ ನಿವಾಸಸ್ಥಾನಂ ಆತ್ಮನಾಪಹೃತಂ ಪರಕೀಯಂ ನಿವಾಸಸ್ಥಾನಂ ಚ ಗಚ್ಛತಿ ।** ಪೃತು ಎಂಬ ಪದವು ಯಾಸ್ಕರಿಂದ (ನಿ. ೩-೯) ಸಂಗ್ರಾಮ ನಾಮಗಳಲ್ಲಿ ಉಕ್ತವಾಗಿದೆ. ಆದಿತ್ಯರ ಅನುಗ್ರಹದಿಂದ ಯಜಮಾನನು ಯುದ್ಧಗಳಲ್ಲಿ ಶತ್ರುಗಳನ್ನು ತಿರಸ್ಕರಿಸುವನು ಮತ್ತು ಇತರರಿಂದ ಆಕ್ರಾಂತವಾಗದಿರುವ ತನ್ನ ವಾಸಸ್ಥಾನವನ್ನೂ (ಮನೆಯನ್ನೂ) ತಾನು ಆಕ್ರಮಿಸಿರುವ ಇತರರ ಮನೆಯನ್ನೂ ಹೊಂದುವನು. ಎಂದರೆ, ತನ್ನ ವಸತಿಯನ್ನು ಸುಖವಾಗಿರುವಂತೆ ಇರಿಸಿಕೊಂಡು, ತನ್ನ ಶತ್ರುಗಳ ವಸತಿಯನ್ನೂ ಆಕ್ರಮಿಸಿಕೊಂಡು ತನ್ನ ಸಾಮರ್ಥ್ಯದಿಂದ ಸುಖವಾಗಿರುವನೆಂದು ವರ್ಣಿಸಿದೆ.

**ಕ್ಷಯೌ ಕ್ಷಿಯಂತಿ ನಿವಸಂತ್ಯಸ್ಮಿನ್ನಿತಿ ।** ವಾಸಮಾಡುವುದಕ್ಕೆ ಅನುಕೂಲವಾಗಿರುವಂತೆ ಕಲ್ಪಿತಗಳಾಗಿ ಜನರಿಂದ ವಾಸಮಾಡಲ್ಪಡುವ ಪ್ರದೇಶಗಳು ಎಂದರೆ ಮನೆಗಳು ಎಂದು ಕ್ಷಯಶಬ್ದಕ್ಕೆ ಅರ್ಥವನ್ನು ವಿವರಿಸಿದೆ

**ಉಭಾವರ್ಧೌ ಸಾಧೂ—ಜಗತಃ ಚರಾಚರಾತ್ಮಕೌ ಭಾಗೌ, ಮರ್ತ್ಯಾಮರ್ತ್ಯಾತ್ಮಕೌ ವಾ ।** ಈ ಲೋಕವು ಸ್ಥಿರವಾಗಿರುವ ಎಂದರೆ ಸಂಚಾರಮಾಡದೆ ಸ್ಥಿರವಾಗಿರುವ ವೃಕ್ಷಲತಾದಿರೂಪವಾದ ಮತ್ತು ಸಂಚರಿಸುವ ಶಕ್ತಿಯುಳ್ಳ ಪ್ರಾಣಿಗಳಿಂದಲೂ ಕೂಡಿರುವುದರಿಂದ ಎರಡು ವಿಧಗಳನ್ನು ಒಳಗೊಂಡು ಎಂಬ ಅರ್ಥವುಳ್ಳದ್ದಾಗಿದೆ ಎಂದೂ, ಅಥವಾ ಮರಣವನ್ನು ಹೊಂದುವ ಪ್ರಾಣಿಗಳು, ಮರಣವನ್ನು ಹೊಂದದೆ ಇರುವ ಪ್ರಾಣಿಗಳು ಎಂಬ ಎರಡು ವಿಧವಾದ ದೇವ ಮರ್ತ್ಯರೂಪವಾದ ಪ್ರಾಣಿಗಳನ್ನು ಹೊಂದಿದೆ ಎಂಬ ಎರಡು ಅರ್ಥಗಳಿಂದ ಕೂಡಿರುವುದೆಂದೂ ವರ್ಣಿಸಿ ಇವೆಲ್ಲವೂ ಯಜಮಾನನಿಗೆ ಅನುಕೂಲವಾಗಿ ಕಾರ್ಯಸಾಧಕವಾಗುವುದೆಂದು ವಿವರಿಸಿದೆ.

॥ ಸಂಹಿತಾಪಾಠಃ ॥

ಯಾ ವೋ ಮಾಯಾ ಅಭಿದ್ರುಹೇ ಯಜತ್ರಾಃ ಪಾಶಾ ಆದಿತ್ಯಾ ರಿಪವೇ ವಿಚೃತ್ತಾಃ ।
ಅಶ್ವೀವ ತಾಁ ಅತಿ ಯೇಷಂ ರಥೇನಾರಿಷ್ಟಾ ಉರಾವಾ ಶರ್ಮನ್ತ್ಸ್ಯಾಮ ॥ ೧೬ ॥

॥ ಪದಪಾಠಃ ॥

ಯಾಃ । ವಃ । ಮಾಯಾಃ । ಅಭಿऽದ್ರುಹೇ । ಯಜತ್ರಾಃ । ಪಾಶಾಃ । ಆದಿತ್ಯಾಃ । ರಿಪವೇ । ವಿऽಚೃತ್ತಾಃ ।
ಅಶ್ವೀऽಇವ । ತಾನ್ । ಅತಿ । ಯೇಷಂ । ರಥೇನ । ಅರಿಷ್ಟಾಃ । ಉರೌ । ಆ । ಶರ್ಮನ್ । ಸ್ಯಾಮ ॥

॥ ಸಾಯಣಭಾಷ್ಯಂ ॥

ಹೇ ಯಜತ್ರಾ ಯಷ್ಟವ್ಯಾ ಆದಿತ್ಯಾ ವೋ ಯುಷ್ಮಾಕಂ ಯಾ ಮಾಯಾ ಅಭಿದ್ರುಹೇಽಭಿದ್ರೋಹಂ ಕುರ್ವತೇ ರಾಕ್ಷಸಾದಯೇ ನಿರ್ಮಿತಾಃ ಯೇ ಚ ಪಾಶಾ ರಿಪವೇ ಶತ್ರವೇ ವಿಚೃತ್ತಾಃ ॥ ಚೃತೀ ಹಿಂಸಾಸಂಗ್ರಂಥನಯೋಃ । ಪ್ರಸಾರಿತಾ ಇತ್ಯರ್ಥಃ । ತಾನ್ಪಾಶಾನ್ ಮಾಯಾಶ್ಚ ರಥೇನಾತಿಯೇಷಂ । ಅತೀತ್ಯ ಪ್ರಯತೇಯಂ । ಅತಿತರೇಯಮಿತ್ಯರ್ಥಃ । ತತ್ರ ದೃಷ್ಟಾಂತಃ । ಅಶ್ವೀವ । ಯಥಾ ಶೋಭನಾಶ್ವಃ ಕಶ್ಚಿತ್ಪುರುಷೋ ದುಸ್ತರಾನ್ಮಾರ್ಗಾನ್ ಶೀಘ್ರಮತಿಕ್ರಾಮತಿ ತದ್ವತ್ ॥ ಯೇಷ ಪ್ರಯತ್ನೇ ಭೌವಾದಿಕೋಽನುದಾತ್ತೇತ್ । ಛಾಂದಸೋ ಲಙ್ । ವ್ಯತ್ಯಯೇನ ಪರಸ್ಮೈಪದಂ ॥ ತಥಾ ವಯಮರಿಷ್ಟಾಃ ಶತ್ರುಭಿರಹಿಂಸಿತಾಃ ಸಂತ ಉರೌ ವಿಸ್ತೀರ್ಣೇ ಶರ್ಮನ್ ॥ ಶರ್ಮೇತಿ ಗೃಹನಾಮ ॥ ತ್ವಯಾ ದತ್ತೇ ಸುಖೇ ಗೃಹೇ ವಾ ಆ ಸಮಂತಾತ್ ಸ್ಯಾಮ । ವರ್ತಮಾನಾ ಭವೇಮ ॥

॥ ಪ್ರತಿಪದಾರ್ಥ ॥

**ಯಜತ್ರಾಃ**— ಯಜ್ಞಾರ್ಹರಾದ । **ಆದಿತ್ಯಾಃ**— ಎಲೈ ಆದಿತ್ಯರೇ । **ಅಭಿದ್ರುಹೇ**— ದ್ರೋಹವನ್ನಾಚರಿಸತಕ್ಕ ರಾಕ್ಷಸಾದಿಗಳ ಬಂಧನಕ್ಕಾಗಿ । **ವಃ** — ನಿಮ್ಮ । **ಯಾಃ ಮಾಯಾಃ**— ಯಾವ ಮಾಯಾಶಕ್ತಿಗಳಿವೆಯೋ । **ರಿಪವೇ**— ಶತ್ರುಗಳ ಬಂಧನಕ್ಕಾಗಿ । **ಪಾಶಾಃ**— ಯಾವ ಪಾಶಗಳು । **ವಿಚೃತಾಃ**— ಹರಡಲ್ಪಟ್ಟಿವೆಯೋ (ಅಂತಹ) । **ತಾನ್**— ಆ ಪಾಶಗಳನ್ನೂ ಮಾಯೆಗಳನ್ನೂ । **ಅಶ್ವೀವ**— ಅಶ್ವಯುಕ್ತನಾದ ಪುರುಷನು ದುಸ್ತರವಾದ ಮಾರ್ಗವನ್ನು ದಾಟುವಂತೆ । **ರಥೇನ** – ರಥದಿಂದ । **ಅತಿ ಯೇಷಂ**— ನಾವು ದಾಟುವುದಕ್ಕೆ ಸಹಾಯ ಮಾಡಿರಿ । **ಅರಿಷ್ಟಾಃ**— ಶತ್ರುಗಳಿಂದ ಅಹಿಂಸಿತರಾದ ನಾವು । **ಉರೌ**— ವಿಸ್ತೀರ್ಣವಾದ । **ಶರ್ಮನ್**— ಗೃಹದಲ್ಲಿ । **ಆ ಸ್ಯಾಮ**— ಸುಖವಾಗಿರುವಂತಾಗಲಿ.

॥ ಭಾವಾರ್ಥ ॥

ಯಜ್ಞಾರ್ಹರಾದ ಎಲೈ ಆದಿತ್ಯರೇ, ದ್ರೋಹವನ್ನಾಚರಿಸತಕ್ಕ ರಾಕ್ಷಸಾದಿಗಳ ಬಂಧನಕ್ಕಾಗಿ ನಿಮ್ಮ ಯಾವ ಮಾಯಾಶಕ್ತಿಗಳಿವೆಯೋ ಮತ್ತು ಶತ್ರುಗಳ ಬಂಧನಕ್ಕಾಗಿ ಯಾವ ಪಾಶಗಳು ಹರಡಲ್ಪಟ್ಟಿವೆಯೋ ಅಂತಹ

ಆ ಪಾಶಗಳನ್ನೂ, ಮಾಯೆಗಳನ್ನೂ ಸಹ ಉಪಯೋಗಿಸಿ ಅಶ್ವಯುಕ್ತನಾದ ಪುರುಷನು ದುಸ್ತರವಾದ ಮಾರ್ಗವನ್ನು ದಾಟುವಂತೆ ನಾವೂ ರಥದಿಂದ ದಾಟುವುದಕ್ಕೆ ಸಹಾಯಮಾಡಿರಿ. ಶತ್ರುಗಳಿಂದ ಅಹಿಂಸಿತರಾದ ನಾವು ವಿಸ್ತೀರ್ಣವಾದ ಗೃಹದಲ್ಲಿ ಸುಖವಾಗಿರುವಂತಾಗಲಿ.

## English Translation·

Adorable Adityas, may I pass (safe) in your car from the illusions which (you devise) for the malignant, the snares which are spread for your foes, (in like manner) as a horseman (passes over a road); and thus may we abide secure in infinite felicity.

॥ ವಿಶೇಷವಿಷಯಗಳು ॥

**ಯಜತ್ರಾಃ ಆದಿತ್ಯಾಃ**—ಆದಿತ್ಯರು (ತಮ್ಮನ್ನು ಉದ್ದೇಶಿಸಿ) ಯಜಮಾನರಿಂದ ಯಾಗವನ್ನಾಚರಿಸಲು ಅರ್ಹರೆಂದು ಸಂಬೋಧಿತರಾಗಿದ್ದಾರೆ. ಮತ್ತು ಇವರು **ಅಭಿದ್ರುಹೇ, ರಿಪವೇ** ಸರ್ವಪ್ರಕಾರದಿಂದಲೂ ದ್ರೋಹವನ್ನು ಆಚರಿಸುವ ರಾಕ್ಷಸರ ನಿಗ್ರಹಕ್ಕಾಗಿಯೂ, ಹಿಂಸೆಯನ್ನು ಮಾಡುವ ಉದ್ದೇಶದಿಂದಿರುವ ಶತ್ರುಗಳ ನಾಶಕ್ಕಾಗಿಯೂ ಮಾಯೆಗಳನ್ನೂ, ಪಾಶಗಳನ್ನೂ ಹರಡಿರುವ ಕಾರಣ ಯಜಮಾನರಾದ ನಾವು **ಅಶ್ವೀವ ರಥೇನ—ಶೋಭನಾಶ್ವಃ ಕಶ್ಚಿತ್ ಪುರುಷಃ ದುಸ್ತರಾನ್ ಮಾರ್ಗಾನ್ ಶೀಘ್ರಂ ಯಥಾ ಅತಿಕ್ರಾಮತಿ ತದ್ವತ್** ಉತ್ತಮವಾದ (ವೇಗಶಾಲಿಯಾದ) ಕುದುರೆಯನ್ನು ಹತ್ತಿರುವ ಪುರುಷನು ದಾಟಲಸಾಧ್ಯವಾದ ಮಾರ್ಗವನ್ನು ಶೀಘ್ರವಾಗಿ ಅತಿಕ್ರಮಿಸುವಹಾಗೆ ಆದಿತ್ಯರು ಶತ್ರುಗಳ ಮತ್ತು ರಾಕ್ಷಸರ ಬಂಧನಕ್ಕಾಗಿಯೂ, ನಿಗ್ರಹಕ್ಕಾಗಿಯೂ ಹರಡಿರುವ ಮಾಯೆಗಳನ್ನು ಉಪಯೋಗಿಸಿ ರಥದಲ್ಲಿ ಉಪವಿಷ್ಟರಾಗಿ ಆದಿತ್ಯರ ಅನುಗ್ರಹದಿಂದ ದಾಟುವಂತಾಗಲಿ ಎಂದು ದೃಷ್ಟಾಂತೋಪನ್ಯಾಸಪೂರ್ವಕವಾಗಿ ವಿವರಿಸಿದೆ.

**ಅರಿಷ್ಟಾಃ ಉರೌ ಶರ್ಮನ್ ಆ ಸ್ಯಾಮ**—ಶರ್ಮಶಬ್ದವು ಗೃಹನಾಮಗಳಲ್ಲಿ (ನಿ. ೩-೧೩) ಪಠಿತವಾಗಿದೆ. ಯಜಮಾನರಾದ ನಾವು ಶತ್ರುಗಳ ಹಿಂಸೆಗೆ ಒಳಪಡದವರಾಗಿ ಆದಿತ್ಯರು ಅನುಗ್ರಹಿಸಿದ ದೊಡ್ಡಮನೆಯಲ್ಲಿ ಸುಖವಾಗಿರುವಂತಾಗಲಿ ಎಂದು ಯಜಮಾನರ ಆಶಂಸನೆಯು ವಿವೃತವಾಗಿದೆ.

॥ ಸಂಹಿತಾಪಾಠಃ ॥

ಮಾಹಂ ಮಘೋನೋ ವರುಣ ಪ್ರಿಯಸ್ಯ ಭೂರಿದಾವ್ನ ಆ ವಿದಂ ಶೂನಮಾಪೇಃ ।
ಮಾ ರಾಯೋ ರಾಜನ್ತ್ಸುಯಮಾದವ ಸ್ಥಾಂ ಬೃಹದ್ವದೇಮ ವಿದಥೇ ಸುವೀರಾಃ ॥

ಪದಪಾಠಃ ।

ಮಾ । ಅಹಂ । ಮಘೋನಃ । ವರುಣ । ಪ್ರಿಯಸ್ಯ । ಭೂರಿऽದಾವ್ನಃ । ಆ । ವಿದಂ । ಶೂನಂ । ಆಪೇಃ ।

ಮಾ । ರಾಯಃ । ರಾಜನ್ । ಸುऽಯಮಾತ್ । ಅವ । ಸ್ಥಾಂ । ಬೃಹತ್ । ವದೇಮ । ವಿದಥೇ । ಸುऽ-

ವೀರಾಃ ॥ ೧೭ ॥

। ಸಾಯಣಭಾಷ್ಯಂ ॥

ಹೇ ವರುಣ ಮಘೋನೋ ಧನವತಃ ಪ್ರಿಯಸ್ಯಾನುಕೂಲಸ್ಯ ಭೂರಿದಾವ್ನೋ ಭೂರೇರ್ಬಹುಲಸ್ಯ ದಾತುರಾಢ್ಯಸ್ಯಾಹಂ ಮಾ ಆವಿದಂ । ಮಾವೇದಯಾನಿ । ಆವೇದನಂ ವಿಜ್ಞಾಪನಂ ಮಾ ಕರವಾಣಿ । ಕಿಂ ತದನಾವೇದ್ಯಂ । ಆಪೇರ್ಜ್ಞಾತೇಃ ಶೂನಂ ಶೂನ್ಯಂ ದಾರಿದ್ರ್ಯಂ ॥ ವರ್ಣಲೋಪಶ್ಛಾಂದಸಃ ॥ ಯದ್ವಾ ಶೂನಂ ಗತಂ ಪ್ರಾಪ್ತಂ ದಾರಿದ್ರ್ಯಂ ॥ ಟುಓಶ್ವಿ ಗತಿವೃದ್ಧ್ಯೋಃ । ಶ್ವೀದಿತೋ ನಿಷ್ಠಾಯಾಮಿತೀಟ್ಪ್ರತಿಷೇಧಃ । ಯಜಾದಿತ್ವಾತ್ಸಂಪ್ರಸಾರಣಂ । ಓದಿತಶ್ಚೇತಿ ನಕಾರಃ । ವೃಷಾದಿತ್ವಾದಾದ್ಯುದಾತ್ತತ್ವಂ ॥ ಏತದುಕ್ತಂ ಭವತಿ ಅಸ್ಮದೀಯಾಃ ಪುತ್ರಾದಯಃ ಕ್ಷುಧಿತಾ ಇತಿ ಪ್ರಭುಪ್ರಭುಸಮೀಪೇಽಭಿಧಾಯ ಯಾಚಮಾನೋ ಮಾ ಭೂವಮಿತಿ । ಹೇ ರಾಜನ್ ಸುಯಮಾತ್। ಸುಷ್ಠು ನಿಯಮ್ಯತೇಽನೇನ ಪುರುಷೋ ಗೃಹ ಇತಿ ಸುಯಮಃ ॥ ಈಷದ್ದುಃಸುಷ್ವಿತಿ ಖಲು ॥ ತಾದೃಶಾದ್ರಾಯೋ ಧನಾನ್ಮಾವಸ್ಥಾಂ । ಅವಯುತ್ಯ ಸ್ಥಿತೋ ಮಾ ಭೂವಂ । ವಯಂ ಸುವೀರಾಃ ಶೋಭನಪುತ್ರಾ ವಿದಥೇ ಯಜ್ಞೇ ಗೃಹೇ ವರ್ತಮಾನಾಃ ಸಂತೋ ಬೃಹತ್ ಪ್ರೌಢಂ ಸ್ತೋತ್ರಂ ವದೇಮ । ಉಚ್ಚಾರಯಾಮ ॥

॥ ಪ್ರತಿಪದಾರ್ಥ ॥

**ವರುಣ**—ಎಲೈ ವರುಣನೇ । **ಮಘೋನಃ**—ಧನವಂತನೂ । **ಪ್ರಿಯಸ್ಯ**—ಅನುಕೂಲವಾಗಿರುವವನೂ । **ಭೂರಿದಾವ್ನಃ**—ಪ್ರಭೂತವಾಗಿ ದಾನಮಾಡುವವನೂ ಆದ ಆಢ್ಯನ ಮುಂದೆ । **ಅಹಂ**—ನಾನು । **ಆಪೇಃ**—ನನ್ನ ಸಮೀಪವಾದ ಬಂಧುವಿನ । **ಶೂನಂ**—ದಾರಿದ್ರ್ಯವನ್ನು । **ಮಾ ಆ ವಿದಂ**—ಹೇಳಿಕೊಳ್ಳದಂತೆ ಆಗಲಿ । **ರಾಜನ್**—ಪ್ರಭುವಾದ ವರುಣನೇ । **ಸುಯಮಾತ್**—ನಿಯಮಕ್ಕೆ ಒಳಪಟ್ಟಂತೆ ಶೇಖರಿಸಿದ । **ರಾಯಃ**—ಧನದಿಂದ । **ಮಾ ಅವ ಸ್ಥಾಂ**—ಶೂನ್ಯನಾಗದಂತಾಗಲಿ । **(ವಯಂ**—ನಾವು) । **ಸುವೀರಾಃ**—ಶ್ರೇಷ್ಠವಾದ ಪುತ್ರರೊಡಗೂಡಿ । **ವಿದಥೇ**—ಯಜ್ಞಗೃಹದಲ್ಲಿ । **ಬೃಹತ್**—ಪ್ರೌಢವಾದ ಸ್ತೋತ್ರವನ್ನು । **ವದೇಮ**—ಪಠಿಸುತ್ತೇವೆ.

॥ ಭಾವಾರ್ಥ ॥

ಎಲೈ ವರುಣನೇ, ಧನವಂತನೂ, ಅನುಕೂಲವಾಗಿರುವವನೂ, ಪ್ರಭೂತವಾಗಿ ದಾನಮಾಡುವವನೂ ಆದ ಆಢ್ಯನ ಮುಂದೆ ನಾನು ನನ್ನ ಪುತ್ರಾದಿ ಸಮೀಪವಾದ ಬಂಧುಗಳು ದಾರಿದ್ರ್ಯದಿಂದ ಕಷ್ಟವನ್ನನುಭವಿಸುತ್ತಾರೆಂದು ಹೇಳಿ ಅವನಿಂದ ಧನಯಾಚನೆಯನ್ನು ಮಾಡದಂತಾಗಲಿ. ನಿಯಮಕ್ಕೆ ಒಳಪಟ್ಟಂತೆ ಶೇಖರಿಸಿದ ಧನದಿಂದ ಶೂನ್ಯನಾಗದಂತಾಗಲಿ. ನಾವು ಶ್ರೇಷ್ಠವಾದ ಪುತ್ರರೊಡಗೂಡಿ ಯಜ್ಞಗೃಹದಲ್ಲಿ ಪ್ರೌಢವಾದ ಸ್ತೋತ್ರವನ್ನು ಪಠಿಸುತ್ತೇವೆ.

## English Translation.

May I never (have to) represent, Varuna, the destitution of a (once) opulent, dear, and munificent kinsman: may I never, royal Varuna, be devoid of well-regulated riches: (and) may we, blessed with excellent descendants, worthily glorify you at this sacrifice.

॥ ವಿಶೇಷವಿಷಯಗಳು ॥

**ವರುಣ** ಎಂಬ ಪದದಿಂದ ಇಲ್ಲಿ ಆದಿತ್ಯನು ಸಂಬೋಧಿತನಾಗಿದ್ದಾನೆ. ವರುಣನೂ ದ್ವಾದಶಾದಿತ್ಯರಲ್ಲಿ ಒಬ್ಬನೆಂದು ಹಿಂದೆ ವಿವೃತವಾಗಿದೆ.

**ಮಘೋನಃ—ಧನವತಃ** । ಮಘ ಶಬ್ದವು ಧನನಾಮುಗಳಲ್ಲಿ ಯಾಸ್ಕರಿಂದ (ನಿ. ೨-೯) ಪಠಿತವಾಗಿದೆ. ಧನವುಳ್ಳವನೆಂದು ಅರ್ಥವನ್ನು ವಿವರಿಸಿದೆ.

**ಪ್ರಿಯಸ್ಯ ಭೂರಿದಾವ್ನಃ ಆಪೇಃ ಶುನಂ ಮಾ ಆ ವಿದಂ—ಬಹುಲಸ್ಯ ದಾತುರಾಢ್ಯಸ್ಯ ಸಮೀಪೇ ಅಸ್ಮದೀಯಾಃ ಪುತ್ರಾದಯಃ ಕ್ಷುಧಿತಾ ಇತಿ ದಾರಿದ್ರ್ಯಮಭಿದಾಯ ಯಾಚಮಾನೋ ಮಾ ಭೂವಂ ।** ಹಿತಕರನಾಗಿಯೂ ಪ್ರಭೂತವಾಗಿ ದಾನಮಾಡುವವನಾಗಿಯೂ ಇರುವ ಹಣಗಾರನ ಹತ್ತಿರಕ್ಕೆ ಹೋಗಿ ನಮ್ಮ ಪುತ್ರರೇ ಮೊದಲಾದವರು ದಾರಿದ್ರ್ಯದಿಂದ ಇರುವರೆಂದು ಹೇಳಿ ಧನವನ್ನು ಯಜಮಾನರಾದ ನಾವು ಯಾಚಿಸದಿರುವಂತೆ ಆಗಲಿ ಎಂದು ಪ್ರಾರ್ಥನೆಯು ವಿವೃತವಾಗಿದೆ.

**ಶೂನಂ—ಶೂನ್ಯಂ, ಯದ್ವಾ ಶೂನಂ ಗತಂ ಪ್ರಾಪ್ತಂ ದಾರಿದ್ರ್ಯಂ** । ಯಾವ ವಿಧವಾದ ವಸ್ತುವೂ ಇಲ್ಲವಿರುವುದು, ಅಥವಾ ಶೂನ್ಯಾವಸ್ಥೆಯನ್ನು ಹೊಂದಿಸಲರ್ಹವಾದ ದರಿದ್ರತನ (ಬಡತನ) ವೆಂದು ಅರ್ಥವು ಶೂನ ಶಬ್ದಕ್ಕೆ ವಿವೃತವಾಗಿದೆ.

**ರಾಜನ್ ಸುಯಮಾತ್ ರಾಯಃ ಮಾ ಅವಸ್ಥಾಮ್—ಸುಷ್ಠು ನಿಯಮ್ಯತೇ ಅನೇನ ಪುರುಷೋ ಗೃಹೇ ಇತಿ ಸುಯಮಃ** । ವರುಣನನ್ನು ರಾಜ ಶಬ್ದದಿಂದ ಸಂಬೋಧಿಸಿ ಈ ವರುಣನ ಅನುಗ್ರಹದಿಂದ ಯಜಮಾನರಾದ ನಮಗೆ ಯಾವಾಗಲೂ ಶೇಖರಿಸಿದ ಹಣವು ನಾಶವಾಗದಿರಲಿ ಎಂದು ಪ್ರಾರ್ಥಿತವಾಗಿದೆ.

ಯಜಮಾನರಾದ ನಾವು **ಬೃಹದ್ವದೇಮ ವಿದಥೇ ಸುವೀರಾಃ** ಯಜ್ಞಗಳಲ್ಲಿ ನಮ್ಮ ಉತ್ತಮರಾದ ಪುತ್ರರೊಡಗೂಡಿ ಸ್ತೋತ್ರಗಳನ್ನು ಪಠಿಸುತ್ತೇವೆಯಾಗಿ ನಮಗೆ ಅನುಗ್ರಹವನ್ನು ಉಂಟುಮಾಡು ಎಂದು ಪ್ರಾರ್ಥಿಸಿದೆ.



# ಇಪ್ಪತ್ತೆಂಟನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಇದಮಿತ್ಯೇಕಾದಶರ್ಚಂ ಷಷ್ಠಂ ಸೂಕ್ತಂ । ಅತ್ರಾನುಕ್ರಮ್ಯತೇ। ಇದಮೇಕಾದಶ ವಾರುಣಮಿತಿ। ಪೂರ್ವಸೂಕ್ತೇ ಕೂರ್ಮೋ ಗಾರ್ತ್ಸಮದೋ ಹಿ ವೇತ್ಯುಕ್ತತ್ವಾದಸ್ಯೋತ್ತರಸ್ಯ ಚ ಕೂರ್ಮೋ ಗೃತ್ಸಮದೋ ವಾ ಋಷಿಃ । ತ್ರಿಷ್ಟುಪ್ ಛಂದಃ । ವರುಣೋ ದೇವತಾ । ವಿನಿಯೋಗೋ ಲೈಂಗಿಕಃ । ಅತ್ರ ಕೇಚಿದಾಹುಃ । ಇದಮೇಕಾದಶರ್ಚಂ ತು ವಾರುಣಂ ಭಯಪಾಪನುತ್ । ಋಣದಾರಿದ್ರ್ಯದುಃಸ್ವಪ್ನ-ನಾಶನಂ ಚೇತಿ ಶುಶ್ರುಮ । ಋಗ್ವಿಧಾ. ೧-೨೫-೧ । ಇತಿ ॥**

ಅನುವಾದವು—**ಇದಂ ಕವೇರಾದಿತ್ಯಸ್ಯ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಇದಮೇಕಾದಶ ವಾರುಣಂ** ಎಂದು ಹೇಳಿರುವುದು. ಹಿಂದಿನ ಸೂಕ್ತದಲ್ಲಿ ಸೂಕ್ತದ ಋಷಿಯು—**ಕೂರ್ಮೋ ಗಾರ್ತ್ಸಮದೋ ಹಿ ವಾ** ಎಂದು ಹೇಳಿರುವುದರಿಂದ ಈ ಸೂಕ್ತಕ್ಕೂ ಮುಂದಿನ ಸೂಕ್ತಕ್ಕೂ ಗೃತ್ಸಮದ ಪುತ್ರನಾದ ಕೂರ್ಮನು ಅಥವಾ ಗೃತ್ಸಮದನೇ ಋಷಿಯು; ತ್ರಿಷ್ಟುಪ್ ಛಂದಸ್ಸು; ವರುಣನು ದೇವತೆಯು ವಿನಿಯೋಗವು ಲೈಂಗಿಕವು. ಈ ಸೂಕ್ತವಿಷಯದಲ್ಲಿ—

**ಇದಮೇಕಾದಶರ್ಚಂ ತು ವಾರುಣಂ ಭಯಪಾಪನುತ್ ।**
**ಋಣದಾರಿದ್ರ್ಯದುಃಸ್ವಪ್ನನಾಶನಂ ಚೇತಿ ಶುಶ್ರುಮ ॥**
(ಋಗ್ವಿಧಾನ ೨-೨೧-೧)

ಎಂದು ಹೇಳಿರುವುದರಿಂದ ಹನ್ನೊಂದು ಋಕ್ಕುಗಳುಳ್ಳ ವರುಣದೇವತಾಕವಾದ ಈ ಸೂಕ್ತ ಮಂತ್ರಪಠನಮಾಡುವವರಿಗೆ, ಭಯ, ಪಾಪ, ಬಡತನ ದುಃಸ್ವಪ್ನ ಇವುಗಳು ಪರಿಹಾರವಾಗುವವು ಎಂದು ಕೆಲವರು ಹೇಳುವರು.

## ಸೂಕ್ತ—೨೮

ಮಂಡಲ—೨ ॥ ಅನುವಾಕ—೩ ॥ ಸೂಕ್ತ—೨೮ ॥
ಅಷ್ಟಕ—೨ ॥ ಅಧ್ಯಾಯ—೭ ॥ ವರ್ಗ—೯, ೧೦ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
॥ ಋಷಿಃ—ಕೂರ್ಮೋ ಗಾರ್ತ್ಸಮದೋ ಗೃತ್ಸಮದೋ ವಾ ॥
॥ ದೇವತಾ— ವರುಣಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಇದಂ ಕವೇರಾದಿತ್ಯಸ್ಯ ಸ್ವರಾಜೋ ವಿಶ್ವಾನಿ ಸಾನ್ತ್ಯಭ್ಯಸ್ತು ಮಹ್ನಾ ।**
**ಅತಿ ಯೋ ಮನ್ದ್ರೋ ಯಜಥಾಯ ದೇವಃ ಸುಕೀರ್ತಿಂ ಭಿಕ್ಷೇ ವರುಣಸ್ಯ ಭೂರೇಃ॥**

॥ ಪದಪಾಠಃ ॥

ಇದಂ । ಕವೇಃ । ಆದಿತ್ಯಸ್ಯ । ಸ್ವಽರಾಜಃ । ವಿಶ್ವಾನಿ । ಸನ್ತಿ । ಅಭಿ । ಅಸ್ತು । ಮಹ್ನಾ ।
ಅತಿ । ಯಃ । ಮನ್ದ್ರಃ । ಯಜಥಾಯ । ದೇವಃ । ಸುಽಕೀರ್ತಿಂ । ಭಿಕ್ಷೇ । ವರುಣಸ್ಯ । ಭೂರೇಃ ॥

॥ ಸಾಯಣಭಾಷ್ಯಂ ॥

ಕವೇಃ ಕ್ರಾಂತದರ್ಶಿನ ಆದಿತ್ಯಾಸ್ಯಾದಿತೇಃ ಪುತ್ರಸ್ಯ ಸ್ವರಾಜಃ ಸ್ವಯಮೇವ ರಾಜಮಾನಸ್ಯೇಶ್ವರಸ್ಯ ವಾ ವರುಣಸ್ಯೇದಂ ಹವಿಃ ಸ್ತೋತ್ರಂ ವಾ ಯಜಮಾನಃ ಕರೋತೀತಿ ಶೇಷಃ । ಸ ಚ ವಿಶ್ವಾನಿ ಸರ್ವಾಣಿ ಸಂತಿ ದ್ವಿತೀಯಭಾವವಿಕಾರಭಾಂಜಿ ಭೂತಜಾತಾನಿ ಮಹ್ನಾ ಮಹಿಮ್ನಾ ವರುಣಪ್ರಸಾದಾಲ್ಲಬ್ಧೇನಾಭ್ಯಸ್ತು । ಅಭಿಭವತು । ಯೋ ದೇವೋ ದ್ಯೋತಮಾನೋ ವರುಣೋ ಯಜಥಾಯ ಯಷ್ಟ್ರೇ ಪುರುಷಾಯ ಅತಿ ಅತಿಶಯೇನ ಮಂದ್ರಃ ಸ್ತುತ್ಯೋ ಹರ್ಷಯಿತಾ ವಾ ಭವತಿ ತಸ್ಯ ಭೂರೇಃ ಭರ್ತುರ್ವರುಣಸ್ಯ ಸುಕೀರ್ತಿಂ ಶೋಭನಾಂ ಸ್ತುತಿಂ ಭಿಕ್ಷೇ । ಪ್ರಾರ್ಥಯೇ । ಯದ್ವಾ ವರುಣಸ್ಯೇತಿ ತೃತೀಯಾರ್ಥೇ ಷಷ್ಠೀ । ತೇನ ವರುಣೇನ ದಾತವ್ಯಾಂ ಶೋಭನಾಂ ಕೀರ್ತಿಮಹಂ ಯಾಚೇ ॥

॥ ಪ್ರತಿಪದಾರ್ಥ ॥

**ಕವೇಃ**—ಕ್ರಾಂತದರ್ಶಿಯೂ । **ಆದಿತ್ಯಸ್ಯ**—ಅದಿತಿಪುತ್ರನೂ । **ಸ್ವರಾಜಃ**—ಸ್ವಯಂ ಪ್ರಕಾಶಕನೂ ಆದ । **ವರುಣಸ್ಯ**—ವರುಣನನ್ನುದ್ದೇಶಿಸಿ । **ಇದಂ**—ಈ ಹವಿಸ್ಸು ಅಥವಾ ಸ್ತೋತ್ರವು (ಅರ್ಪಿಸಲ್ಪಡುತ್ತದೆ) । (**ಸ ಚ**—ಈ ಹವಿಸ್ಸನ್ನರ್ಪಿಸುವ ಯಜಮಾನನು) । **ವಿಶ್ವಾನಿ**—ಸಮಸ್ತವಾದ । **ಸಂತಿ**—ಭೂತಜಾತಗಳನ್ನೂ । **ಮಹ್ನಾ**—(ವರುಣನ ಪ್ರಸಾದದಿಂದ ಲಬ್ಧವಾದ) ಮಹಿಮೆಯಿಂದ । **ಅಭ್ಯಸ್ತು**—ತನ್ನ ಅಧಿಕಾರದಲ್ಲಿರಿಸಿಕೊಳ್ಳಲಿ । **ದೇವಃ**—ದ್ಯೋತಮಾನನಾದ । **ಯಃ**—ಯಾವ ವರುಣನು । **ಯಜಥಾಯ**—ಯಜ್ಞಕರ್ತನಾದ ಪುರುಷನಿಗೆ । **ಅತಿ**—ಅತಿಶಯವಾಗಿ । **ಮಂದ್ರಃ**—ಹರ್ಷಕಾರಕನಾಗಿರುವನೋ । **ಭೂರೇಃ**—ಭರ್ತೃವಾದ ಅಂತಹ ವರುಣನ । **ಸುಕೀರ್ತಿಂ**—ಶ್ರೇಷ್ಠವಾದ ಸ್ತುತಿಯನ್ನು । **ಭಿಕ್ಷೇ**—ಪ್ರಾರ್ಥಿಸುತ್ತೇನೆ [ ಅಥವಾ । **ಭೂರೇಃ**—ಭರ್ತೃವಾದ ಅಂತಹ ವರುಣನಿಂದ । **ಸುಕೀರ್ತಿಂ**—ಶೋಭನಾತ್ಮಕವಾದ ಕೀರ್ತಿಯನ್ನು । **ಭಿಕ್ಷೇ**—ಯಾಚಿಸುತ್ತೇನೆ.]

॥ ಭಾವಾರ್ಥ ॥

ಕ್ರಾಂತದರ್ಶಿಯೂ, ಅದಿತಿಪುತ್ರನೂ, ಸ್ವಯಂ ಪ್ರಕಾಶಕನೂ ಆದ ವರುಣನನ್ನುದ್ದೇಶಿಸಿ ಯಜಮಾನನು ಈ ಹವಿಸ್ಸನ್ನರ್ಪಿಸುತ್ತಾನೆ. ಈ ಯಜಮಾನನು ವರುಣನ ಪ್ರಸಾದದಿಂದ ಲಬ್ಧವಾದ ತನ್ನ ಮಹಿಮೆಯಿಂದ ಸಮಸ್ತವಾದ ಭೂತಜಾತಗಳನ್ನೂ ತನ್ನ ಅಧಿಕಾರದಲ್ಲಿರಿಸಿಕೊಳ್ಳಲಿ. ದ್ಯೋತಮಾನನಾದ ಯಾವ ವರುಣನು ಯಜ್ಞಕರ್ತನಾದ ಪುರುಷನಿಗೆ ಅತಿಶಯವಾಗಿ ಹರ್ಷಕಾರಕನಾಗಿರುವನೋ ಭರ್ತೃವಾದ ಅಂತಹ ವರುಣನಿಂದ ಶೋಭನಾತ್ಮಕವಾದ ಕೀರ್ತಿಯನ್ನು ಯಾಚಿಸುತ್ತೇನೆ.

## English Translation.

(The worshipper repeats) this praise of the sage, the self-radiant Aditya : may he preside over all beings by his power : I beg for fame of the sovereign Varuna. a diety who, when much pleased, (is propitious) to his adorer.

॥ ವಿಶೇಷವಿಷಯಗಳು ॥

**ಕವೇಃ—ಕ್ರಾಂತದರ್ಶಿನಃ ।** ಯಾಸ್ಕರು ಕವಿ ಶಬ್ದವನ್ನು ಮೇಧಾವಿನಾಮಗಳಲ್ಲಿ (ನಿ. ೧೨-೧೩) ಪಾಠ ಮಾಡಿದ್ದಾರೆ. **ಮೇಧಾವೀ ಕ್ರಾಂತದರ್ಶನೋ ಭವತಿ ಕವತೇರ್ವಾ** (ನಿ. ೧೨-೧೩) ಎಂದು ವಿವರಿಸಿದ್ದಾರೆ. ಅದಿತಿದೇವಿಯ ಪುತ್ರನಾದ ವರುಣನು ಬುದ್ಧಿಯ ಪಾರವನ್ನು ನೋಡಿರುವವನೆಂದೂ, **ಸ್ವರಾಜಃ—ಸ್ವಯಮೇವ ರಾಜಮಾನಸ್ಯ ಈಶ್ವರಸ್ಯ ವಾ ।** ತಾನಾಗಿ ಎಂದರೆ ಇತರ ಪ್ರಕಾಶಗಳ ಸಹಾಯವಿಲ್ಲದೇ ತೇಜಶ್ಶಾಲಿಯಾಗಿಯೂ, ಸರ್ವಕ್ಕೂ ಅಧಿಪತಿಯಾಗಿಯೂ ಇರುವನೆಂದೂ, ವರ್ಣಿಸಿದೆ. ಮತ್ತು **ಇದಂ** ಎಂಬ ಪದಕ್ಕೆ ಹವಿಸ್ಸು ಅಥವಾ ಸ್ತೋತ್ರ ಎಂದು ಅರ್ಥವನ್ನು ಹೇಳಿ, ತಾನಾಗಿ ತೇಜಶ್ಶಾಲಿಯಾಗಿ, ಸರ್ವಕ್ಕೂ ಅಧಿಪತಿಯಾಗಿರುವ ವರುಣನಿಗೆ ಯಜಮಾನನು ಹವಿಸ್ಸನ್ನೂ ಅಥವಾ ಸ್ತೋತ್ರವನ್ನೂ ಅರ್ಪಿಸುವನೆಂದು ವಿವರಿಸಿದೆ.

**ವಿಶ್ವಾನಿ ಸಂತಿ—ಸರ್ವಾಣಿ ದ್ವಿತೀಯಭಾವ ವಿಕಾರಭಾಂಜಿ ಭೂತಜಾತಾನಿ ।** ವರುಣನ ಅನುಗ್ರಹದಿಂದ ಉಂಟಾದ ಮಹಿಮೆಯಿಂದ ಯಜಮಾನನು ಸಮಸ್ತ ಚರಾಚರಾತ್ಮಕವಾದ ಭೂತಜಾತಗಳನ್ನು ತನ್ನ ವಶದಲ್ಲಿರಿಸಿಕೊಳ್ಳಲಿ ಎಂದು ವರ್ಣಿಸಿದೆ.

**ಅತಿಮಂದ್ರಃ—ಅತಿಶಯೇನ ಸ್ತುತ್ಯಃ ಹರ್ಷಯಿತಾ ವಾ ।** ಮಂದ್ರಶಬ್ದವು ಯಾಸ್ಕರಿಂದ ವಾಙ್ನಾಮಗಳಲ್ಲಿ (ನಿ. ೨-೨೩) ಪಠಿತವಾಗಿದೆ. ಮತ್ತು **ಮಂದ್ರಾ ಮದನಾ ಹರ್ಷಕರೀ ವಾ ಲೋಕಸ್ಯ** (ನಿ. ೧೧-೩೦) ಎಂದು ವಿವೃತವಾಗಿದೆ. ವರುಣನು ಯಜಮಾನನಿಗೆ ಸ್ತುತ್ಯನಾಗಿಯೂ, ಹರ್ಷವನ್ನು ಉಂಟುಮಾಡುವವನಾಗಿಯೂ ಇರುವನೆಂದು ಉಕ್ತವಾಗಿದೆ.

**ಸುಕೀರ್ತಿಂ ಭಿಕ್ಷೇ—ಶೋಭನಾಂ ಸ್ತುತಿಂ ಯದ್ವಾ ವರುಣೇನ ದಾತವ್ಯಾಂ ಶೋಭನಾಂ ಕೀರ್ತಿಂ । ಭೂರಿ** ಶಬ್ದಕ್ಕೆ **ಭರ್ತುಃ** ಅಧಿಪತಿಯಾದ ವರುಣನ; ಸ್ತುತಿಯನ್ನೂ (ಆಚರಿಸುವ ಬುದ್ಧಿಯನ್ನೂ) ಅಥವಾ ವರುಣನಿಂದ ಅನುಗೃಹಿತವಾಗುವ ಉತ್ತಮವಾದ ಯಶಸ್ಸನ್ನೂ ಯಜಮಾನನು ಪ್ರಾರ್ಥಿಸುವನೆಂದು ಆಶಿಸಿದೆ.



॥ ಸಂಹಿತಾಪಾಠಃ ॥

ತವ ವ್ರತೇ ಸುಭಗಾಸಃ ಸ್ಯಾಮ ಸ್ವಾಧ್ಯೋ ವರುಣ ತುಷ್ಟುವಾಂಸಃ ।
ಉಪಾಯನ ಉಷಸಾಂ ಗೋಮತೀನಾಮಗ್ನಯೋ ನ ಜರಮಾಣಾ ಅನು ದ್ಯೂನ್॥

॥ ಪದಪಾಠಃ ॥

ತವ । ವ್ರತೇ । ಸುಽಭಗಾಸಃ । ಸ್ಯಾಮ । ಸುಽಆಧ್ಯಃ । ವರುಣ । ತುಸ್ತುಽವಾಂಸಃ ।

ಉಪಽಅಯನೇ । ಉಷಸಾಂ । ಗೋಽಮತೀನಾಂ । ಅಗ್ನಯಃ । ನ । ಜರಮಾಣಾಃ । ಅನು । ದ್ಯೂನ್ ॥ ೨ ॥

॥ ಸಾಯಣಭಾಷ್ಯಂ ॥

ಹೇ ವರುಣ ಸ್ವಾಧ್ಯಃ ಶೋಭನಾಧ್ಯಾನಾಸ್ತುಷ್ಟುವಾಂಸಃ ಸ್ತುತವಂತೋ ವಯಂ ತವ ವ್ರತೇ ತ್ವದೀಯೇ ಪರಿಚರಣಾಖ್ಯೇ ಕರ್ಮಣಿ ವರ್ತಮಾನಾಃ ಸುಭಗಾಸಃ ಸ್ಯಾಮ । ಶೋಭನಧನಾ ಭವೇಮ । ಅಪಿ ಚ ಗೋಮತೀನಾಂ ರಶ್ಮಿಭಿರ್ಯುಕ್ತಾನಾಮುಷಸಾಮುಪಾಯನ ಉಪಾಗಮನೇ ಸತ್ಯಗ್ನಯೋ ನ ಯಥಾಗ್ನಯೋಽಗ್ನಿಹೋತ್ರಾದಿಕರ್ಮಾರ್ಥಂ ಸಮಿಧ್ಯಂತೇ ಏವಮನು ದ್ಯೂನ್ ಅನುದಿನಂ ಜರಮಾಣಾಸ್ತ್ವಾಂ ಸ್ತುವಂತೋ ವಯಂ ದೀಪ್ಯಮಾನಾ ಭವೇಮ ॥

॥ ಪ್ರತಿಪದಾರ್ಥ ॥

**ವರುಣ**—ಎಲೈ ವರುಣನೇ । **ಸ್ವಾಧ್ಯಃ**—ಶ್ರೇಷ್ಠವಾದ ಧ್ಯಾನದಿಂದ ಕೂಡಿದವರೂ । **ತುಷ್ಟುವಾಂಸಃ**—(ನಿನ್ನನ್ನು) ಸ್ತುತಿಸುವವರೂ ಆದ ನಾವು । **ತವ ವ್ರತೇ**—ನಿನ್ನನ್ನು ಪೂಜಿಸುವ ಕರ್ಮದಲ್ಲಿ ನಿರತರಾಗಿದ್ದು । **ಸುಭಗಾಸಃ**—ಶೋಭನಾತ್ಮಕವಾದ ಧನವುಳ್ಳವರಾಗಿ । **ಸ್ಯಾಮ**—ಆಗುವಂತೆ ಅನುಗ್ರಹಿಸು । **ಗೋಮತೀನಾಂ**—ರಶ್ಮಿಗಳೊಡನೆ ಕೂಡಿದ । **ಉಷಸಾಂ**—ಉಷಸ್ಸುಗಳ । **ಉಪಾಯನೇ**—ಉದಯ ಕಾಲದಲ್ಲಿ । **ಅಗ್ನಯೋ ನ**—ಅಗ್ನಿಹೋತ್ರಾರ್ಥವಾಗಿ ಪ್ರಜ್ವಲಿತವಾದ ಅಗ್ನಿಗಳು ಪ್ರಕಾಶಿಸುವಂತೆ । **ಅನು ದ್ಯೂನ್**—ಪ್ರತಿ ದಿನವೂ **ಜರಮಾಣಾಃ**—ನಿನ್ನನ್ನು ಸ್ತುತಿಸುವ ನಾವು ಪ್ರಕಾಶಿಸುತ್ತಾ ಇರುವಂತಾಗಲಿ.

॥ ಭಾವಾರ್ಥ ॥

ಎಲೈ ವರುಣನೇ, ಶ್ರೇಷ್ಠವಾದ ಧ್ಯಾನದಿಂದ ಕೂಡಿದವರೂ. ನಿನ್ನನ್ನು ಸ್ತುತಿಸುವವರೂ ಆದ ನಾವು ನಿನ್ನನ್ನು ಪೂಜಿಸುವ ಕರ್ಮದಲ್ಲಿ ನಿರತರಾಗಿದ್ದು ಶೋಭನಾತ್ಮಕವಾದ ಧನವುಳ್ಳವರಾಗಿ ಆಗುವಂತೆ ಅನುಗ್ರಹಿಸು. ರಶ್ಮಿಗಳೊಡನೆ ಕೂಡಿದ ಉಷಸ್ಸುಗಳ ಉದಯಕಾಲದಲ್ಲಿ ಅಗ್ನಿಹೋತ್ರಾರ್ಥವಾಗಿ ಪ್ರಜ್ವಲಿತವಾದ ಅಗ್ನಿಯು ಪ್ರಕಾಶಿಸುವಂತೆ ಪ್ರತಿ ದಿನವೂ ನಿನ್ನನ್ನು ಸ್ತುತಿಸುವ ನಾವು ಪ್ರಕಾಶಿಸುತ್ತಾ ಇರುವಂತಾಗಲಿ.

## English Translation.

May we, Varuna, deeply meditating on you earnestly praising you and (engaged) in your worship, be prosperous; glorifying you daily, like the fires (that are kindled in your honour) at the coming of the luminous dawns.

॥ ವಿಶೇಷವಿಷಯಗಳು ॥

**ವ್ರತೇ—ತ್ವದೀಯೇ ಪರಿಚರಣಾಖ್ಯೇ ಕರ್ಮಣಿ ವರ್ತಮಾನಾಃ** । ವ್ರತ ಶಬ್ದವು ಯಾಸ್ಕರಿಂದ ಕರ್ಮ ನಾಮಗಳಲ್ಲಿ (ನಿ. ೩-೨) ಪಠಿತವಾಗಿದೆ. ಮತ್ತು **ವ್ರತಮಿತಿ ಕರ್ಮನಾಮ ವೃಣೋತೀತಿ ಸತಃ** (ನಿ. ೨-೧೩) ಎಂದು ವ್ಯಾಖ್ಯಾತವಾಗಿದೆ. ಇಲ್ಲಿ ಸಾಯಣರು ವರುಣನ ಸಂಬಂಧವಾದ (ಸೇವೆಯನ್ನಾಚರಿಸುವ) ಸೇವಾಚರಣ ರೂಪವಾದ ಕರ್ಮವೆಂಬ ಅರ್ಥವನ್ನು ಹೇಳಿದ್ದಾರೆ.

**ಸುಭಗಾಸಃ—ಶೋಭನಧನಾಃ**—ಇಲ್ಲಿ ಭಗ ಶಬ್ದಕ್ಕೆ ಸು ಎಂಬ ಉಪಸರ್ಗವನ್ನು ಪ್ರಯೋಗಿಸಿದೆ. ಪದವು ಯಜಮಾನರಿಗೆ ವಿಶೇಷಣವಾಗಿ ಪ್ರಯುಕ್ತವಾಗಿದೆ ಎಂದು ವಿವರಿಸಿ ಧನವೆಂಬ ಅರ್ಥವನ್ನು ಹೇಳಿ ಯಜಮಾನರು ಉತ್ತಮವಾದ ಧನದಿಂದ ಕೂಡಿದವರಾಗಬೇಕೆಂದು ಅವರ ಪ್ರಾರ್ಥನೆಯು ಉಕ್ತವಾಗಿದೆ. ಯಾಸ್ಕರು **ಭಗೋ ಭಜತೇಃ** (ನಿ. ೧-೭) ಎಂದೂ, ಧನನಾಮಗಳಲ್ಲಿ (ನಿ. ೩-೯) ಪಾಠಮಾಡಿ ಧನವೆಂದೂ, **ಭಗಸ್ಯ ಭಾಗಧೇಯಸ್ಯ** (ನಿ. ೯-೨೧) ಎಂಬಲ್ಲಿ ಧರ್ಮವೆಂದೂ, **ಪ್ರಾತರ್ಜಿತಂ ಭಗಮುಗ್ರಂ ಹುವೇಮ** (ಋ. ಸಂ. ೭-೪೧-೨) ಎಂಬಲ್ಲಿ ಅದಿತಿದೇವಿಯ ಪುತ್ರನಾದ ಒಬ್ಬ ದೇವತೆಯೆಂದೂ ಅರ್ಥವನ್ನು ವಿವರಿಸಿದ್ದಾರೆ.

**ಗೋಮತೀನಾಂ ಉಷಸಾಂ ಉಪಾಯನೇ ಅಗ್ನಯೋ ನ**—ಯಾಸ್ಕರು ಗೋ ಶಬ್ದಕ್ಕೆ ನಾನಾರ್ಥ ಗಳನ್ನು (ನಿ. ೨-೫) ಹೇಳಿದ್ದಾರೆ. ಇಲ್ಲಿ ರಶ್ಮಿ (ಕಿರಣ) ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಅರ್ಥವನ್ನು ಹೇಳಿ, **ರಶ್ಮಿಭಿರ್ಯುಕ್ತಾನಾಂ ಉಷಸಾಂ ಉಪಾಗಮೇ ಯಥಾ ಅಗ್ನಯೋ ಅಗ್ನಿಹೋತ್ರಾದಿಕರ್ಮಾರ್ಥಂ ಸಮಿಧ್ಯಂತೇ ಏವಂ ತ್ವಾಂ ಸ್ತುವಂತೋ ವಯಂ ದೀಪ್ಯಮಾನಾ ಭವೇಮ** । ಉಷಃಕಾಲಗಳ ಉದಯದಲ್ಲಿ ಅಗ್ನಿಹೋತ್ರಾದಿ ಕರ್ಮಗಳ ಆಚರಣೆಗಾಗಿ ಅಗ್ನಿಯು ಪ್ರಜ್ವಲಿತನಾಗುವ ಹಾಗೆ, ವರುಣನನ್ನು ಸ್ತುತಿಸುವ ಯಜಮಾನರಾದ ನಾವು ಪ್ರತಿದಿನದಲ್ಲಿಯೂ ತೇಜಸ್ಸುಗಳಿಂದ ಪ್ರಕಾಶವುಳ್ಳವರಾಗೋಣ ಎಂದು ಯಜಮಾನರ ಪ್ರಾರ್ಥನೆಯು ಆಶಂಸಿತವಾಗಿದೆ.



॥ ಸಂಹಿತಾಪಾಠಃ ॥

ತವ ಸ್ಯಾಮ ಪುರುವೀರಸ್ಯ ಶರ್ಮನ್ನುರುಶಂಸಸ್ಯ ವರುಣ ಪ್ರಣೇತಃ ।
ಯೂಯಂ ನಃ ಪುತ್ರಾ ಅದಿತೇರದಬ್ಧಾ ಅಭಿ ಕ್ಷಮಧ್ವಂ ಯುಜ್ಯಾಯ ದೇವಾಃ ॥

॥ ಪದಪಾಠಃ

ತವ । ಸ್ಯಾಮ । ಪುರುऽವೀರಸ್ಯ । ಶರ್ಮನ್ । ಉರುऽಶಂಸಸ್ಯ । ವರುಣ । ಪ್ರನೇತರಿತಿ ಪ್ರऽನೇತಃ ।
ಯೂಯಂ । ನಃ । ಪುತ್ರಾಃ । ಅದಿತೇಃ । ಅದಬ್ಧಾಃ । ಅಭಿ । ಕ್ಷಮಧ್ವಂ । ಯುಜ್ಯಾಯ । ದೇವಾಃ ॥

॥ ಸಾಯಣಭಾಷ್ಯಂ ॥

ಹೇ ಪ್ರಣೇತಃ ಸರ್ವಸ್ಯ ಜಗತಃ ಪ್ರಕರ್ಷೇಣ ನೇತರ್ವರುಣ ಪುರುವೀರಸ್ಯ ಪುರುಭಿರ್ಬಹುಭಿ-ರ್ವೀರೈರುಪೇತಸ್ಯ ಯದ್ವಾ ಪುರೂಣಾಂ ಬಹೂನಾಂ ಶತ್ರೂಣಾಂ ವಿಶೇಷೇಣ ಪ್ರೇರಕಸ್ಯೋರು-ಶಂಸಸ್ಯೋರುಭಿರ್ಬಹುಭಿಃ ಸ್ತೂಯಮಾನಸ್ಯ ತವ ಶರ್ಮನ್ ಶರ್ಮಣಿ ಸುಖೇ ಗೃಹೇ ವಾ ಸ್ಯಾಮ । ಅದಿತೇಃ ಪುತ್ರಾ ಮಿತ್ರಾದಯಃ ॥ ಶರಮುಪಿ ಛಂದಸೀತಿ ಷರಸ್ಯ ಷಷ್ಠ್ಯಂತಸ್ಯ ಪೂರ್ವಾಮಂತ್ರಿತಾಂಗವದ್ಭಾವೇನಾನುಪ್ರವೇಶಾತ್ ಪದದ್ವಯಸಮುದಾಯಸ್ಯಾಷ್ಟಮಿಕಂ ಸರ್ವಾನುದಾತ್ತತ್ವಂ ॥ ಅದಬ್ಧಾಃ ಶತ್ರುಭಿರಹಿಂಸಿತಾಃ । ಏವಂಭೂತಾ ಹೇ ದೇವಾ ಯೂಯಂ ನೋಽಸ್ಮಾನ್ ಕೃತಾಪರಾಧಾನ್ ಯುಜ್ಯಾಯ ಸಖ್ಯಾಯಾಭಿಕ್ಷಮಧ್ವಂ । ಅಸ್ಮಾಭಿಃ ಕೃತಮಪರಾಧಂ ಸಹಧ್ವಂ ॥

॥ ಪ್ರತಿಪದಾರ್ಥ ॥

**ಪ್ರಣೇತಃ**—ಸಕಲ ಜಗತ್ತಿಗೂ ಮಾರ್ಗದರ್ಶಕನಾದ । **ವರುಣ**—ಎಲೈ ವರುಣನೇ । **ಪುರುವೀರಸ್ಯ**—ಅನೇಕ ವಿಧವಾದ ವೀರ್ಯದಿಂದ ಕೂಡಿದವನೂ । **ಉರುಶಂಸಸ್ಯ**—ಬಹುಜನರಿಂದ ಸ್ತುತಿಸಲ್ಪಡುವವನೂ ಆದ । **ತವ**—ನಿನ್ನ । **ಶರ್ಮನ್**—ಸುಖಕರವಾದ ಗೃಹದಲ್ಲಿ । **ಸ್ಯಾಮ**—(ನಾವು) ಇರುವಂತಾಗಲಿ । **ಅದಿತೇಃ ಪುತ್ರಾಃ**—ಅದಿತಿಪುತ್ರರಾದ ಎಲೈ ಮಿತ್ರಾದಿ ದೇವತೆಗಳೇ । **ಅದಬ್ಧಾಃ**—ಶತ್ರುಗಳಿಂದ ಅಹಿಂಸಿತರಾದವರೂ । **ದೇವಾಃ**—ದೇವತಾತ್ಮರೂ ಆದ । **ಯೂಯಂ**—ನೀವು । **ನಃ**—(ಅಪರಾಧವನ್ನು ಮಾಡಿದ್ದರೂ ಸಹ) ನಮ್ಮನ್ನು । **ಯುಜ್ಯಾಯ**—ಸಖಿತ್ವಕ್ಕಾಗಿ । **ಅಭಿ ಕ್ಷಮಧ್ವಂ**—ಕ್ಷಮಿಸಿರಿ.

॥ ಭಾವಾರ್ಥ ॥

ಸಕಲ ಜಗತ್ತಿಗೂ ಮಾರ್ಗದರ್ಶಕನಾದ ಎಲೈ ವರುಣನೇ, ಅನೇಕ ವಿಧವಾದ ವೀರ್ಯದಿಂದ ಕೂಡಿದವನೂ, ಬಹುಜನರಿಂದ ಸ್ತುತಿಸಲ್ಪಡುವವನೂ ಆದ ನಿನ್ನ ಸುಖಕರವಾದ ಗೃಹದಲ್ಲಿ ನಾವು ಇರುವಂತಾಗಲಿ. ಅದಿತಿಪುತ್ರರಾದ ಎಲೈ ಮಿತ್ರಾದಿದೇವತೆಗಳೇ, ಶತ್ರುಗಳಿಂದ ಅಹಿಂಸಿತರಾದವರೂ, ದೇವತಾತ್ಮರೂ ಆದ ನೀವು ನಮ್ಮ ಅಪರಾಧಗಳನ್ನು ಕ್ಷಮಿಸಿ ನಿಮ್ಮೊಡನೆ ನಮ್ಮ ಸಖಿತ್ವವನ್ನು ಳಿಸಿರಿ

## English Translation.

Varuna, chief guide (of men), may we abide in the felicity of you who are endowed with great prowess, and are glorified by many: divine sons of Aditi, unharmed (by foes), have compassion upon us through your benevolence.

॥ ವಿಶೇಷವಿಷಯಗಳು ॥

**ಪ್ರಣೇತಃ—ಸರ್ವಸ್ಯ ಜಗತಃ ಪ್ರಕರ್ಷೇಣ ನೇತಃ** । ವರುಣನು ಜಗತ್ತೆಲ್ಲವನ್ನೂ ಪ್ರಭೂತವಾಗಿ ಎಂದರೆ ಬಹಳವಾಗಿ ನಿಯಮಿಸುವವನು ಎಂದು ಅರ್ಥವನ್ನು ವಿವರಿಸಿದೆ.

**ಪುರುವೀರಸ್ಯ**—**ಬಹುಭಿರ್ವೀರೈರುಪೇತಸ್ಯ ಯದ್ವಾ ಬಹೂನಾಂ ಶತ್ರೂಣಾಂ ವಿಶೇಷೇಣ ಪ್ರೇರಕಸ್ಯ** । ಯಾಸ್ಕರಿಂದ ವೀರ ಶಬ್ದವು **ವೀರೋ ವೀರಯತ್ಯಮಿತ್ರಾನ್ । ವೇತೇರ್ವಾ ಸ್ಯಾದ್ಗತಿಕರ್ಮಣಃ । ವೀರಯತೇರ್ವಾ** । (ನಿ. ೧-೭) ಎಂದು ವ್ಯಾಖ್ಯಾತವಾಗಿದೆ. ಸಾಯಣರು ಶಕ್ತಿಯಿಂದ ಕೂಡಿದವರು, ಅಥವಾ ಶತ್ರುಗಳು ಎಂದು ಎರಡು ವಿಧವಾದ ಅರ್ಥವನ್ನು ವಿವರಿಸಿ, ವರುಣನು ಅನೇಕ ವೀರರಿಂದ ಕೂಡಿದವನು, ಅಥವಾ ಶತ್ರುಗಳನ್ನು ಪ್ರೇರಿಸುವವನು ಎಂದು ಎರಡು ವಿಧವಾದ ಅರ್ಥವನ್ನೂ ವರ್ಣಿಸಿದ್ದಾರೆ

**ಶರ್ಮನ್**—**ಗೃಹೇ ಸುಖೇ ವಾ** । ಶರ್ಮ ಶಬ್ದವು ಯಾಸ್ಕರಿಂದ (ನಿ. ೩-೧೩) ಗೃಹ, ಸುಖ ಎಂಬ ಎರಡು ವಿಧವಾದ ನಾಮಗಳಲ್ಲಿಯೂ ಪಠಿತವಾಗಿದೆಯಾಗಿ ಸಾಯಣರು ಎರಡು ವಿಧವಾದ ಅರ್ಥವನ್ನೂ ವಿವರಿಸಿದ್ದಾರೆ.

ಈ ಋಕ್ಕಿನ ಪೂರ್ವಾರ್ಧದಲ್ಲಿ ವರುಣನೂ, ಎರಡನೆಯ ಅರ್ಧದಲ್ಲಿ ಅತಿದಿಪುತ್ರರಾದ ಮಿತ್ರನೇ ಮೊದಲಾದ ಆದಿತ್ಯರೂ ಸ್ತುತರಾಗಿದ್ದಾರೆ. ವರುಣನಿಂದ ಅನುಗೃಹೀತವಾದ ಸುಖದಲ್ಲಿ ಅಥವಾ ಗೃಹದಲ್ಲಿ ಯಜಮಾನರ ವಾಸವು ಆಶಂಸಿತವಾಗಿದೆ ಮತ್ತು ಮಿತ್ರರೇ ಮೊದಲಾದ ಆದಿತ್ಯರು ಯಜಮಾನರ ಅಪರಾಧಗಳನ್ನು ಕ್ಷಮಿಸಬೇಕೆಂದೂ ಪ್ರಾರ್ಥನೆಯು ಉಕ್ತವಾಗಿದೆ.



॥ ಸಂಹಿತಾಪಾಠಃ ॥

ಪ್ರ ಸೀಮಾದಿತ್ಯೋ ಅಸೃಜದ್ವಿಧರ್ತಾ ಋತಂ ಸಿಂಧವೋ ವರುಣಸ್ಯ ಯಂತಿ ।
ನ ಶ್ರಾಮ್ಯಂತಿ ನ ವಿ ಮುಚಂತ್ಯೇತೇ ವಯೋ ನ ಪಪ್ತೂ ರಘುಯಾ ಪರಿಜ್ಮನ್ ॥

॥ ಪದಪಾಠಃ ॥

ಪ್ರ । ಸೀಂ । ಆದಿತ್ಯಃ । ಅಸೃಜತ್ । ವಿऽಧರ್ತಾ । ಋತಂ । ಸಿಂಧವಃ । ವರುಣಸ್ಯ । ಯಂತಿ ।
ನ । ಶ್ರಾಮ್ಯಂತಿ । ನ । ವಿ । ಮುಚಂತಿ । ಏತೇ । ವಯಃ । ನ । ಪಪ್ತುಃ । ರಘುऽಯಾ । ಪರಿऽಜ್ಮನ್ ॥

॥ ಸಾಯಣಭಾಷ್ಯಂ ॥

**ವಿಧರ್ತಾ ಸೇತುರಿವ ಜಲಸ್ಯ ವಿಧಾರಯಿತಾದಿತ್ಯೋऽದಿತೇಃ ಪುತ್ರೋ ವರುಣ ಋತಂ ವಿಧಾರಣಹೇತುಭೂತಂ ಸತ್ಯಂ ಯದ್ವಾ ನದೀನಾಮುಪಾದಾನಭೂತಮುದಕಂ ಸೀಂ ಸರ್ವತಃ ಪ್ರಾಸೃಜತ್ । ಪ್ರಕರ್ಷೇಣ ಸೃಷ್ಟವಾನ್ ॥ ಆಙೋऽಪ್ರಗೃಹ್ಯಸ್ಯಾನುನಾಸಿಕ ಇತ್ಯಾಕಾರಃ ಸಾನುನಾಸಿಕಃ ॥ ತೇನ ವರುಣಸ್ಯರ್ತೇನ ಸಿಂಧವಃ ಸ್ಯಂದನಶೀಲಾ ನದ್ಯೋ ಯಂತಿ । ಗಚ್ಛಂತಿ ಪ್ರವಹಂತಿ । ಏತೇ ಸಿಂಧವೋ**

ನ ಶ್ರಾಮ್ಯಂತಿ । ಶ್ರಾಂತಿಂ ನ ಪ್ರಾಪ್ನುವಂತಿ । ನ ವಿಮುಚಂತಿ । ಉಪರತಾ ನ ಭವಂತಿ । ಅನಲಸಾಃ ಸರ್ವದೈಕರೂಪ್ಯೇಣ ಪ್ರವಹಂತೀತ್ಯರ್ಥಃ । ಏತದೇವೋಚ್ಯತೇ । ವಯೋ ನ । ವಯಃ ಪಕ್ಷಿಣ ಇವ ರಘುಯಾ ರಘವಃ ಶೀಘ್ರಗಾಮಿನಃ ಪರಿಜ್ಮನ್ ಪರಿಜ್ಮನಿ ಭೂಮ್ಯಾಂ ಪಪ್ತುಃ । ಪತಂತಿ ಗಚ್ಛಂತಿ ॥ ಪತ್ಲೃ ಗತೌ । ಲಿಟ್ಯುಸಿ ತನಿಪತ್ಯೋಶ್ಛಂದಸೀತ್ಯುಪಧಾಲೋಪಃ । ಸ್ಥಾನಿವದ್ಭಾವಾದ್ದ್ವಿರ್ವಚನಾದಿ । ರಘುಯಾ ಇತ್ಯತ್ರ ಸುಪಾಂ ಸುಲುಗಿತಿ ಜಸೋ ಯಾಜಾದೇಶಃ ॥

॥ ಪ್ರತಿಪದಾರ್ಥ ॥

**ವಿಧರ್ತಾ**—ಉದಕದ ಧಾರಕನೂ । **ಆದಿತ್ಯಃ**—ಅದಿತಿಪುತ್ರನೂ ಆದ ವರುಣನು । **ಋತಂ**—ಸತ್ಯವನ್ನು ಅಥವಾ ಉದಕವನ್ನು । **ಸೀಂ**—ಸರ್ವತ್ರ । **ಪ್ರ ಅಸೃಜತ್**—ಸೃಷ್ಟಿಸಿದನು । **ವರುಣಸ್ಯ**—ವರುಣನ ನಿಯಮದಿಂದ । **ಸಿಂಧವಃ**—(ಪ್ರವಹಿಸತಕ್ಕ) ನದಿಗಳು । **ಯಂತಿ**—ಪ್ರವಹಿಸುತ್ತವೆ । **ಏತೇ**—ಈ ನದಿಗಳು । **ನ ಶ್ರಾಮ್ಯಂತಿ**—ಆಯಾಸವನ್ನು ಹೊಂದುವುದಿಲ್ಲ । **ನ ವಿ ಮುಚಂತಿ**—ಹರಿಯುವುದನ್ನು ನಿಲ್ಲಿಸುವುದಿಲ್ಲ । **ವಯೋ ನ**—ಪಕ್ಷಿಗಳಂತೆ । **ರಘುಯಾ**—ಶೀಘ್ರಗಾಮಿಗಳಾಗಿ । **ಪರಿಜ್ಮನ್**—ಭೂಮಿಯ ಮೇಲೆ । **ಪಪ್ತುಃ**—ಬಿದ್ದು ಹರಿಯುತ್ತವೆ.

॥ ಭಾವಾರ್ಥ ॥

ಉದಕಕ್ಕೆ ಧಾರಕನೂ, ಅದಿತಿಪುತ್ರನೂ ಆದ ವರುಣನು ಸರ್ವತ್ರ ಉದಕವನ್ನು ಸೃಷ್ಟಿಸಿದನು. ವರುಣನ ಆಜ್ಞೆಯ ಶಕ್ತಿಯಿಂದಲೇ ನದಿಗಳು ಪ್ರವಹಿಸುತ್ತವೆ. ಈ ನದಿಗಳು ಆಯಾಸವನ್ನು ಹೊಂದುವುದೂ ಇಲ್ಲ ಮತ್ತು ತಮ್ಮ ಪ್ರವಾಹಗಳನ್ನು ನಿಲ್ಲಿಸುವುದೂ ಇಲ್ಲ. ಪಕ್ಷಿಗಳಂತೆ ವೇಗಗಾಮಿಗಳಾಗಿ ಭೂಮಿಯ ಮೇಲೆ ಬಿದ್ದು ಪ್ರವಹಿಸುತ್ತವೆ.

## English Translation.

The Aditya, the upholder, has created all this water: the rivers flow by the power of Varuna: they never weary, they never stop; they have descended with swiftness, like birds upon the circumambient (earth).

॥ ವಿಶೇಷವಿಷಯಗಳು ॥

**ಋತಂ—ವಿಧಾರಣಹೇತುಭೂತಂ ಸತ್ಯಂ ಯದ್ವಾ ನದೀನಾಮುಪಾದಾನಭೂತಮುದಕಂ ।** ಋತ ಶಬ್ದವೂ ಯಾಸ್ಕರಿಂದ ಉದಕ, ಸತ್ಯ, ಯಜ್ಞ, ನಾಮುಗಳಲ್ಲಿ (ನಿ. ೨–೨೪, ೪–೧೯) ಪಠಿತವಾಗಿದೆ. ಸರ್ವವನ್ನೂ ಧರಿಸಲು ಮುಖ್ಯ ಕಾರಣವಾದ ಸತ್ಯವೆಂದೂ, ನದಿಗಳಲ್ಲಿ ಅತಿಶಯವಾಗಿ ಪ್ರಾಮುಖ್ಯತೆಯನ್ನು ಹೊಂದಿ ಇರುವ ಉದಕವೆಂದೂ ಎರಡು ವಿಧವಾದ ಅರ್ಥವನ್ನು ಸಾಯಣರು ವಿವರಿಸಿದ್ದಾರೆ.

**ವಿಧರ್ತಾ—ಸೇತುರಿವ ಜಲಸ್ಯ ವಿಧಾರಯಿತಾ ।** ಸೇತುವೆಯು ಉದಕವನ್ನು ಧರಿಸಿರುವಹಾಗೆ ವರುಣನೂ ವೃಷ್ಟ್ಯುದಕಗಳನ್ನು ಧರಿಸಿರುವನೆಂದು ಸೇತುವೆಯನ್ನು ಹೋಲಿಸಿ ವಿವರಿಸಿದೆ.

**ಸಿಂಧವಃ—ಸ್ಯಂದನಶೀಲಾಃ ।** ನಿರುಕ್ತಕಾರರು ನದೀನಾಮಗಳಲ್ಲಿ (ನಿ. ೨-೨೪) ಈ ಶಬ್ದವನ್ನು ಪಾಠ ಮಾಡಿರುವರು. ಮತ್ತು **ಸಿಂಧುಃ ಸ್ರವಣಾತ್** (ನಿ, ೫-೨೭) ಎಂದು ವ್ಯಾಖ್ಯಾನವನ್ನು ಮಾಡಿದ್ದಾರೆ. ವರುಣನು ಉದಕಗಳನ್ನು ಸೃಷ್ಟಿಮಾಡಿ, ಅವುಗಳನ್ನು ಲೋಕಗಳ ಉಪಕಾರಕ್ಕಾಗಿ ಧರಿಸಿ, ಅವುಗಳು ನದಿಗಳ ರೂಪದಿಂದ ಭೂಮಿಯಲ್ಲಿ ಪ್ರವಹಿಸುವ:ಹಾಗೆ ಮಾಡಿರುವನು. ಈ ನದಿಗಳು ಯಾವಾಗಲೂ ತಮ್ಮ ಪ್ರವಾಹವನ್ನು ನಿಲ್ಲಿಸದೆ, **ರಘುಯಾ ವಯೋ ನ—ಶೀಘ್ರಗಾಮಿನಃ ಪಕ್ಷಿಣ ಇವ** ಜಾಗ್ರತೆಯಾಗಿ ಸಂಚರಿಸುವ ಪಕ್ಷಿಗಳು ಅಂತರಿಕ್ಷದಲ್ಲಿ ಸಂಚರಿಸುತ್ತಾ ಭೂಮಿಯಲ್ಲಿಯೂ ಸಂಚರಿಸುವಂತೆ, ಈ ನದಿಗಳೂ ಕೂಡ ತಮ್ಮ ಉದಕಗಳು ಯಾವಾಗಲೂ ಒಂದೇ ಕಡೆಯಲ್ಲಿರದಂತೆ, **ಅನಲಸಾಃ ಐಕರೂಪ್ಯೇಣ ಪ್ರವಹಂತಿ** (ಕೊಂಚವೂ) ಸ್ವಲ್ಪವೂ ಸೋಮಾರಿತನಕ್ಕೆ ಅವಕಾಶ ವನ್ನು ಕೊಡದೆ ಒಂದೇಸಮನಾಗಿ ಪ್ರವಹಿಸುತ್ತಿರುವುವು. ವರುಣನು ಲೋಕೋಪಕಾರಕ್ಕಾಗಿ ಉದಕಗಳನ್ನು ಸೃಷ್ಟಿ ಮಾಡಿ, ಧರಿಸಿ, ಅವುಗಳು ಒಂದೇಸಮನಾಗಿ ಭೂಮಿಯಲ್ಲಿ ಪ್ರವಹಿಸುವಂತೆ ಮಾಡಿರುವನು ಎಂದು ವಿವರಿಸಿದೆ. ನಿರುಕ್ತಕಾರರೂ ಕೂಡ ಇದೇ ಅಭಿಪ್ರಾಯವನ್ನೇ

**ಸುದೇವೋ ಅಸಿ ವರುಣ ಯಸ್ಯ ತೇ ಸಪ್ತ ಸಿಂಧವಃ ।**
**ಅನುಕ್ಷರಂತಿ ಕಾಕುದಂ ಸೂರ್ಮ್ಯಂ ಸುಷಿರಾಮಿವ ॥**

(ಋ. ಸಂ. ೮-೬೯-೧೨)

ಎಂಬ ಋಕ್ಕಿನಿಂದ ಉದಾಹರಿಸಿದ್ದಾರೆ.

ಸಂಹಿತಾಪಾಠಃ ॥

**ವಿ ಮಚ್ಛ್ರಥಾಯ ರಶನಾಮಿವಾಗ ಋಧ್ಯಾಮ ತೇ ವರುಣ ಖಾಮೃತಸ್ಯ ।**
**ಮಾ ತಂತುಶ್ಛೇದಿ ವಯತೋ ಧಿಯಂ ಮೇ ಮಾ ಮಾತ್ರಾ ಶಾರ್ಯಪಸಃ ಪುರ ಋತೋಃ ॥ ೫ ॥**

॥ ಪದಪಾಠಃ ॥

**ವಿ । ಮತ್ । ಶ್ರಥಯ । ರಶನಾಂಽಇವ । ಆಗಃ । ಋಧ್ಯಾಮ । ತೇ । ವರುಣ । ಖಾಂ । ಋತಸ್ಯ ।**
**ಮಾ । ತಂತುಃ । ಛೇದಿ । ವಯತಃ । ಧಿಯಂ । ಮೇ । ಮಾ । ಮಾತ್ರಾ । ಶಾರಿ । ಅಪಸಃ । ಪುರಾ । ಋತೋಃ ॥ ೫ ॥**

॥ ಸಾಯಣಭಾಷ್ಯಂ ॥

**ಹೇ ವರುಣ ಮತ್ ಮತ್ಸಕಾಶಾತ್ ರಶನಾಮಿವ ರಜ್ಜುಮಿವಾಗೋ ವಿಹಿತಾನನುಷ್ಠಾನಜನಿತಂ ಪಾಪಂ ವಿಶ್ರಥಯ । ಶಿಥಿಲೀಕುರು । ವಿಮೋಚಯೇತ್ಯರ್ಥಃ । ತೇ ತ್ವತ್ಸಂಬಂಧಿನ ಋತಸ್ಯೋದಕಸ್ಯ ಪೂರ್ಣಾಂ ಖಾಂ ನದೀಂ ॥ ಖಾ ಇತಿ ನದೀನಾಮ ॥ ತಾಮೃಧ್ಯಾಮ । ಲಭೇಮಹಿ । ಅಪಿ ಚ ಧಿಯಂ ಕರ್ಮ ವಯತಃ ಸಂತನ್ವತೋ ಮೇ ಮಮ ತಂತುಃ ಕರ್ಮಸಂತತಿರ್ಮಾ ಛೇದಿ। ಛಿನ್ನೋ ಮಾ ಭೂತ್। ನೈರಂತರ್ಯೇಣೇತ್ಯರ್ಥಃ । ತಥಾ ಋತೋಃ ಸಮಾಪ್ತಿಕಾಲಾತ್ಪುರಾ ಪೂರ್ವಮಪಸಃ ಕರ್ಮಣೋ ಮಾತ್ರಾ ಶರೀರಂ ಪ್ರಾಚ್ಯೋದೀಚ್ಯಾಂಗಲಕ್ಷಣಂ ಮಾ ಶಾರಿ । ಶೀರ್ಣಂ ವಿಕಲಂ ಮಾ ಭೂತ್ ॥ ಶೄ ಹಿಂಸಾಯಾಂ । ಕರ್ಮಣಿ ಲುಙ್ ॥ ಪುರ ಋತೋರಿತ್ಯತ್ರ ಋತ್ಯಕ ಇತಿ ಪ್ರಕೃತಿಭಾವಃ ॥**

॥ ಪ್ರತಿಪದಾರ್ಥ ॥

**ವರುಣ**—ಎಲೈ ವರುಣನೇ । **ಮತ್**—ನನ್ನಿಂದ । **ರಶನಾಮಿವ**—ರಜ್ಜುವಿನಿಂದ ಬಂಧಕವಾಗಿರತಕ್ಕ । **ಆಗಃ**—ಅನುಷ್ಠಾನಲೋಪರೂಪವಾದ ಪಾಪವನ್ನು । **ವಿ ಶ್ರಥಯ**—ನಾಶಮಾಡು । **ತೇ**—ನಿನ್ನಿಂದ ದತ್ತವಾಗುವುದೂ **ಋತಸ್ಯ**—ಉದಕದಿಂದ ಪೂರ್ಣವಾಗಿರುವುದೂ ಆದ । **ಖಾಂ**—ನದಿಯನ್ನು । **ಋಧ್ಯಾಮ**—(ನಾವು) ಹೊಂದುವಂತಾಗಲಿ । **ಧಿಯಂ**—ಕರ್ಮವನ್ನು । **ವಯತಃ**—ಹೆಣೆಯುತ್ತಿರುವ । **ಮೇ**—ನನ್ನ **ತಂತುಃ**—ಕರ್ಮರೂಪವಾದ ತಂತುವು **ಮಾ ಛೇದಿ**—ಕತ್ತರಿಸದಿರಲಿ । **ಋತೋಃ**—ಸಮಾಪ್ತಿ ಕಾಲಕ್ಕಿಂತಲೂ **ಪುರಾ**—ಮೊದಲೇ **ಅಪಸಃ**—ಕರ್ಮದ **ಮಾತ್ರಾ**—ಶರೀರವನ್ನು । **ಮಾ ಶಾರಿ**—ವಿಕಲವಾಗುವಂತೆ ಮಾಡಬೇಡ

॥ ಭಾವಾರ್ಥ ॥

ಎಲೈ ವರುಣನೇ, ರಜ್ಜುವಿನಂತೆ ಬಂಧಕವಾಗಿರತಕ್ಕ ಅನುಷ್ಠಾನಲೋಪರೂಪವಾದ ಪಾಪವನ್ನು ನನ್ನಿಂದ ನಾಶಮಾಡು. ನಿನ್ನಿಂದ ದತ್ತವಾಗುವುದೂ, ಉದಕದಿಂದ ಪೂರ್ಣವಾಗಿರುವುದೂ ಆದ ನದಿಯನ್ನು ನಾವು ಹೊಂದುವಂತಾಗಲಿ. ಕರ್ಮರೂಪವಾದ ಪಟವನ್ನು ಹೆಣೆಯುತ್ತಿರುವ ನನ್ನ ಕರ್ಮರೂಪವಾದ ತಂತುವು ಕತ್ತರಿಸದಿರಲಿ. ಸಮಾಪ್ತಿ ಕಾಲಕ್ಕಿಂತಲೂ ಮೊದಲೇ, ನನ್ನ ಕರ್ಮದ ಶರೀರವನ್ನು ವಿಕಲವಾಗುವಂತೆ ಮಾಡಬೇಡ.

## English Translation

Cast off from me sin, Varuna, as if it were a rope: may we obtain from you a channel (filled) with water : cut not the thread of me (engaged id) weaving pious works: blight not the elemcnts of holy rites before the season (of their maturity).

॥ ವಿಶೇಷವಿಷಯಗಳು ॥

**ರಶನಾಮಿವ ಆಗಃ ವಿ ಶ್ರಥಯ**—**ಆಗಃ** ಎಂಬ ಪದವು **ಆಙ್ ಪೂರ್ವಾದ್ಗಮೇಃ** (ನಿ. ೧೧-೨೨) ಎಂದು ಯಾಸ್ಕರಿಂದ ವ್ಯಾಖ್ಯಾತವಾಗಿದೆ. ಈ ಪದವು ಆಙ್ ಎಂಬ ಉಪಸರ್ಗವು ಗಮ್ ಧಾತುವಿನೊಡನೆ ಸೇರಿ ನಿಷ್ಪನ್ನವಾಗಿದೆ. **ಅವಶ್ಯಮೇನ್ಯೈತದಾಗಚ್ಛತಿ ಕರ್ತಾರಂ** ಕರ್ಮಾಚರಣೆ ಮಾಡಿದವನನ್ನು ನಿಯತವಾಗಿ

(ಹೊಂದುವ) **ಆಗಃ** ಎಂದು ಅರ್ಥವು ವಿವೃತವಾಗಿದೆ. **ರಶನಾ** ಎಂದರೆ ವಸ್ತ್ರಾದಿಗಳನ್ನು ಧರಿಸಿದಾಗ ಅವುಗಳು ಪೃಥವಾಗಿ ನಿಲ್ಲುವಂತೆ ಕಟ್ಟಲರ್ಹವಾದುದು ಇದು ಪ್ರಾಯಕವಾಗಿ ರಜ್ಜುವೇ (ಹಗ್ಗ) ಮೊದಲಾದವುಗಳಾಗಿರುತ್ತವೆ. ಇಲ್ಲಿ ಸ್ವಾತಂತ್ರ್ಯವನ್ನು ನಾಶಗೊಳಿಸುವುದರಿಂದ **ರಶನಾ** ಎಂಬುದು ಬಂಧಕವೆಂದು ಉಕ್ತವಾಗಿದೆ. **ಆಗಸ್** ಎಂಬ ಪದಕ್ಕೆ ಸಾಯಣರು **ವಿಹಿತಾನನುಷ್ಠಾನಜನಿತಂ ಪಾಪಂ**—ಅವಶ್ಯಕರ್ತವ್ಯವನ್ನು ತ್ಯಜಿಸಿದ ನಿಮಿತ್ತದಿಂದ ಉಂಟಾಗಬಹುದಾದ ಪಾಪವೆಂದು ಅರ್ಥವನ್ನು ಹೇಳಿದ್ದಾರೆ. ಈ ಪಾಪವು ಕರ್ಮಕರ್ತೃವಿನ ಕರ್ಮದಲ್ಲಿರುವುದರಿಂದ ಕರ್ಮವು ಆಚರಿತವಾದರೂ ಸರಿಯಾದ ಫಲಜನಕವಾಗುವುದಿಲ್ಲ. ಆದರೆ ಕರ್ಮವನ್ನು ವಿಹಿತಕ್ರಮದಿಂದ ಆಚರಿಸಲಿಲ್ಲ ವೆಂಬ ದೋಷರೂಪವಾಗಿ (ಪಾಪ) ಪರಿಣಮಿಸಿ ಬಂಧಕವಾಗುತ್ತದೆಯಾಗಿ ರಜ್ಜುವಿನಂತೆ (ಹಗ್ಗದಂತೆ) ಬಂಧಕವಾದ ಈ ರೂಪವಾದ ಪಾಪಗಳು ನಮಗೆ ವರುಣನ ಅನುಗ್ರಹದಿಂದ ನಾಶವಾಗಲಿ ಎಂದು ಯಜಮಾನರ ಪ್ರಾರ್ಥನೆಯು ಉಕ್ತವಾಗಿದೆ.

**ಧಿಯಂ ವಯತಃ ಮೇ ತಂತುಃ ಮಾ ಚ್ಛೇದಿ—ಕರ್ಮ ಸಂತನ್ವತಃ ಮಮ ಕರ್ಮಸಂತತಿಃ ಛಿನ್ನೋ ಮಾ ಭೂತ್ ।** ಧೀಶಬ್ದವು ಕರ್ಮನಾಮಗಳಲ್ಲಿ (ನಿ. ೩-೨) ಪ್ರಜ್ಞಾನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ಇಲ್ಲಿ ಕರ್ಮವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. **ವೇಞ್ ತಂತುಸಂತಾನೇ** ಎಂಬ ಧಾತುವಿನಿಂದ ನಿಷ್ಪನ್ನವಾದ **ವಯತಃ** ಎಂಬ ಪದಕ್ಕೆ ಬಟ್ಟೆಯನ್ನು ನೆಯ್ಯುವುದು ಎಂದು ಅರ್ಥವಾಗುತ್ತದೆ. ವಸ್ತ್ರಾದಿಗಳನ್ನು ನೆಯ್ಯುವವನು ತನ್ನ ನೆಯಿಗೆಯ ಕೆಲಸವನ್ನು ಮಾಡುವಾಗ ದಾರಗಳು ಕಿತ್ತುಹೋದಲ್ಲಿ ಅವನ ನೆಯಿಗೆಯ ಕೆಲಸವು ಸರಿಯಾಗುವುದಿಲ್ಲ. ಇದರ ಹಾಗೆಯೇ ಯಜಮಾನರ ಕರ್ಮಗಳಲ್ಲಿ ವಿಚ್ಛಿತ್ತಿ ಇಲ್ಲದಿರುವುದು ಇಲ್ಲಿ ಪ್ರಾರ್ಥಿತವಾಗಿದೆ. ಶರೀರವು ಅವಯವಗಳಿಂದ ಕೂಡಿದಾಗ ಪೂರ್ಣವಾಗಿರುವ ಹಾಗೆ ಕರ್ಮವೂ ಅಂಗಗಳಿಂದ (ಮಧ್ಯದಲ್ಲಿ ಆಚರಿಸ ಬೇಕಾದ ಕರ್ಮಗಳಿಂದ) ಕೂಡಿದೆ. ಅಂಗಲೋಪವಾದರೂ, ಸಮಾಪ್ತಿಯಾಗದೆ ಕರ್ಮವು ನಿಂತುಹೋದರೂ ಕರ್ಮ ವಿಚ್ಛಿತ್ತಿಯಾಗುವ ಕಾರಣ ಈ ಎರಡು ವಿಧವಾದ ಕರ್ಮವಿಚ್ಛಿತ್ತಿಯೂ ಆಗದಿರಲಿ ಎಂಬ ಯಜಮಾನರ ಪ್ರಾರ್ಥನೆಯು ಉಕ್ತವಾಗಿದೆ.



॥ ಸಂಹಿತಾಪಾಠಃ ॥

**ಅಪೋ ಸು ಮ್ಯಕ್ಷ ವರುಣ ಭಿಯಸಂ ಮತ್ಸಮ್ರಾಳೃತಾವೋಽನು ಮಾ ಗೃಭಾಯ।**
**ದಾಮೇವ ವತ್ಸಾದ್ವಿ ಮುಮುಗ್ಧ್ಯಂಹೋ ನಹಿ ತ್ವದಾರೇ ನಿಮಿಷಶ್ಚನೇಶೇ ॥೬॥**

॥ ಪದಪಾಠಃ ॥

ಅಪೋ ಇತಿ । ಸು । ಮ್ಯಕ್ಷ । ವರುಣ । ಭಿಯಸಂ । ಮತ್ । ಸಂऽರಾಟ್ । ಋತऽವಃ । ಅನು । ಮಾ । ಗೃಭಾಯ ।

ದಾಮऽಇವ । ವತ್ಸಾತ್ । ವಿ । ಮುಮುಗ್ಧಿ । ಅಂಹಃ । ನಹಿ । ತ್ವತ್ । ಆರೇ । ನಿऽಮಿಷಃ । ಚನ । ಈಶೇ ॥

॥ ಸಾಯಣಭಾಷ್ಯಂ ॥

**ಹೇ ವರುಣ ಭಿಯಸಂ ಭಯಂ ಮತ್ ಮತ್ತಃ ಸು ಸುಷ್ಠು ಅಪೋ ಮ್ಯಕ್ಷ ।** ಅಪಗಮಯ । **ಹೇ ಸಮ್ರಾಟ್ ಸಮಗ್ರಾಜಮಾನ ಹೇ ಋತಾವಃ ಸತ್ಯವನ್ ಯಜ್ಞವನ್ವಾ ವರುಣ ಮಾ ಮಾಮನುಗೃಭಾಯ ।** ಅನುಗೃಹಾಣ ॥ **ಛಂದಸಿ ಶಾಯಜಪೀತಿ ಶ್ನಃ ಶಾಯಜಾದೇಶಃ । ಹೃಗ್ರಹೋರ್ಭ ಇತಿ ಭತ್ವಂ॥ ಅಪಿ ಚ ದಾಮೇವ ವತ್ಸಾತ್ ಯಥಾ ದೋಗ್ಧಾ ವತ್ಸಸಕಾಶಾದ್ಬಂಧನೀಂ ರಜ್ಜುಂ ವಿಮುಂಚತಿ ತಥಾಂಹಃ ಪಾಪಂ ಮತ್ಸಕಾಶಾದ್ವಿಮುಮುಗ್ಧಿ । ವಿಮುಂಚ ॥ ಛಾಂದಸಃ ಶಪಃ ಶ್ಲುಃ ॥ ಪೃಥಕ್ಕುರು । ತ್ವದಾರೇ ತ್ವತ್ತೋ ದೂರದೇಶೇ ವರ್ತಮಾನಃ । ತ್ವದನ್ಯ ಇತ್ಯರ್ಥಃ । ತ್ವತ್ತೋಽನ್ಯಃ ಕಶ್ಚಿತ್ ನಿಮಿಷಶ್ಚನ ನಿಮೇಷಸ್ಯಾಪಿ ಅಕ್ಷಿಪಕ್ಷ್ಮಚಲನಸ್ಯಾಪಿ ನಹೀಶೇ । ನೇಷ್ಟೇ । ತ್ವಮೇವೇಶ್ವರ ಇತ್ಯರ್ಥಃ ॥ ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ ॥**

॥ ಪ್ರತಿಪದಾರ್ಥ ॥

**ವರುಣ**—ಎಲೈ ವರುಣನೇ । **ಭಿಯಸಂ**—ಭಯವನ್ನು । **ಮತ್**—ನನ್ನಿಂದ । **ಸು**—ಪೂರ್ಣವಾಗಿ । **ಅಪೋ ಮ್ಯಕ್ಷ**—ದೂರಪಡಿಸು । **ಸಮ್ರಾಟ್**—ಪೂರ್ಣವಾಗಿ ಪ್ರಕಾಶಿಸುವವನೂ । **ಋತಾವಃ**—ಸತ್ಯವಂತನೂ ಆದ ವರುಣನೇ । **ಮಾ**—ನನ್ನನ್ನು । **ಅನು ಗೃಭಾಯ**—ಅನುಗ್ರಹಿಸು । **ವತ್ಸಾತ್**—(ಹಾಲನ್ನು ಕುಡಿಯಲು ಆತುರಪಡುವ) ಕರುವಿನ ಕತ್ತಿನಿಂದ । **ದಾಮೇವ**—ಹಗ್ಗವನ್ನು ಬಿಚ್ಚುವಂತೆ । **ಅಂಹಃ**—ಪಾಪವನ್ನು । **ವಿ ಮುಮುಗ್ಧಿ**—(ನನ್ನಿಂದ) ಬಿಡಿಸು । **ತ್ವದಾರೇ**—ನಿನ್ನಿಂದ ದೂರನಾದ ಯಾವ ವ್ಯಕ್ತಿಯೇ ಆಗಲಿ। **ನಿಮಿಷಶ್ಚನ**—ಒಂದು ನಿಮಿಷದಕಾಲವೂ ಸಹ । **ನಹಿ ಈಶೇ**—ಸ್ವತಂತ್ರನಾಗಿರಲು ಸಾಧ್ಯವಿಲ್ಲ.

॥ ಭಾವಾರ್ಥ ॥

ಎಲೈ ವರುಣನೇ, ನನ್ನಿಂದ ಭಯವನ್ನು ದೂರಮಾಡು ಪೂರ್ಣವಾಗಿ ಪ್ರಕಾಶಿಸುವವನೂ, ಸತ್ಯವಂತನೂ ಆದ ವರುಣನೇ, ನನ್ನನ್ನು ಅನುಗ್ರಹಿಸು. ಹಾಲನ್ನು ಕುಡಿಯಲು ಆತುರಪಡುವ ಕರುವಿನ ಕತ್ತಿನಿಂದ ಹಗ್ಗವನ್ನು ಬಿಚ್ಚುವಂತೆ ನನ್ನಿಂದ ಪಾಪವನ್ನು ಬಿಡಿಸು. ನಿನ್ನಿಂದ ದೂರನಾದ ಯಾವ ವ್ಯಕ್ತಿಯೇ ಆಗಲಿ ಒಂದು ನಿಮಿಷದ ಕಾಲವೂ ಸಹ ಸ್ವತಂತ್ರನಾಗಿರಲು ಸಾಧ್ಯವಿಲ್ಲ.

## English Translation.

Keep off all danger from me, Varuna : supreme monarch, endowed with truth, bestow your favour upon me: cast off (frem me) sin, like a tether from a calf: no one rules for the twinkling of an eye, apart fram you.

॥ ವಿಶೇಷವಿಷಯಗಳು ॥

ವರುಣನನ್ನು ಸಂಬೋಧಿಸಿ **ಭಿಯಸಂ ಮತ್ ಸು ಅಪೋ ಮ್ಯಕ್ಷ**-ಯಾರಿಂದಲೂ, ಯಾವವಿಧದಿಂದಲೂ, ಭಯವು ಉಂಟಾಗದಂತೆ, ಭಯವೆಂಬುವುದೇ ದೂರವಾಗಿರುವ ಸ್ಥಿತಿರೂಪವಾದ ವರುಣನ ಅನುಗ್ರಹವು ಯಜಮಾನರಿಂದ ಪ್ರಾರ್ಥಿತವಾಗಿದೆ.

**ದಾಮೇವ ವತ್ಸಾತ್ ಅಂಹಃ ವಿ ಮುಮುಗ್ಧಿ – ದೋಗ್ಧಾ ವತ್ಸಸಕಾಶಾತ್ ಬಂಧನೀಂ ರಜ್ಜುಂ ಯಥಾ ವಿಮುಂಚತಿ ತಥಾ ಪಾಪಃ ಮತ್ಸಕಾಶಾತ್ ವಿಮುಂಚ** । ಅಂಹಃ ಎಂಬ ಪದವು **ಅಂಹತಿಶ್ಚಾಂಹಶ್ಚ ಅಂಹುಶ್ಚ ಹಂತೇರ್ನಿರೂಢೋಪಧಾತ್** (ನಿ. ೪–೨೫) ಹನ ಧಾತುವಿನಿಂದ ಅಂಹತಿ, ಅಂಹಃ, ಅಂಹುಃ ಎಂಬ ಶಬ್ದಗಳು ನಿಷ್ಪನ್ನವಾಗಿವೆ ಎಂದೂ, ಇವುಗಳಿಂದ ಪಾಪ ಎಂಬ ಶಬ್ದವು ಬೋಧ್ಯವಾಗಿದೆ ಎಂದೂ, ಯಾಸ್ಕರಿಂದ ವಿವೃತವಾಗಿದೆ. ಹಾಲನ್ನು ಹಸುವಿನಿಂದ ಹಿಂಡುವವನು ಕರುವನ್ನು ಹಗ್ಗದಿಂದ ಬಿಡಿಸುವಹಾಗೆ, ಪಾಪಗಳಿಂದ ಯಜಮಾನನು ಬಿಡುಗಡೆಯಾಗಬೇಕೆಂಬ ವರುಣನ ಅನುಗ್ರಹವು ಪ್ರಾರ್ಥಿತವಾಗಿದೆ. ಇದು ಉಪಮಾನೋಕ್ತಿ ಪೂರ್ವಕವಾಗಿ ಇಲ್ಲಿ ಉಕ್ತವಾಗಿದೆ. **ತ್ವದಾರೇ** ಎಂಬಲ್ಲಿ ಆರೇ ಎಂಬ ಪದವು ದೂರನಾಮಗಳಲ್ಲಿ (ನಿ. ೩–೨೦) ಪಠಿತ ವಾಗಿದೆ. ಸಾಯಣರು **ತ್ವತ್ತೋ ದೂರದೇಶೇ ವರ್ತಮಾನಸ್ತ್ವದನ್ಯಃ** ವರುಣನಿಂದ ದೂರಪ್ರದೇಶದಲ್ಲಿರುವವನು (ಎಂದರೆ ವರುಣನನ್ನು ರಕ್ಷಕನನ್ನಾಗಿ ತಿಳಿಯದಿರುವವನು; ವರುಣನಿಗಿಂತ ಬೇರೆಯಾದವನು ಎಂದರೆ ವರುಣನ ಅನುಗ್ರಹಕ್ಕೆ ಪಾತ್ರನಾಗದಿರುವವನು) ಎಂದು ಅರ್ಥವನ್ನು ಮಾಡಿದ್ದಾರೆ ಇವನು ಕಶ್ಚಿತ್ ಯಾವನೇ ಆದರೂ, **ನಿಮಿಷಶ್ಚನ** ಕಣ್ಣಿನ ರೆಪ್ಪೆಯು ಚಲಿಸುವಕಾಲದವರಿಗೂ ಇರುವ ಸೂಕ್ಷ್ಮಕಾಲದವರಿಗೂ ಕೂಡ **ನಹಿ ಈಶೇ** ಸ್ವತಂತ್ರ ನಾಗಿರಲು ಸಾಧ್ಯವಿಲ್ಲವೆಂದೂ, ವರುಣನೇ ಸರ್ವರಿಗೂ ಸ್ವತಂತ್ರನಾಗಿರುವಂತೆ ಅನುಗ್ರಹಿಸುವವನೆಂದೂ ವರುಣನ ಪ್ರಭಾವವು ಉಕ್ತವಾಗಿದೆ.

॥ ಸಂಹಿತಾಪಾಠಃ ॥

**ಮಾ ನೋ ವಧೈರ್ವರುಣ ಯೇ ತ ಇಷ್ಟಾವೇನಃ ಕೃಣ್ವಂತಮಸುರ ಭ್ರೀಣಂತಿ**

**ಮಾ ಜ್ಯೋತಿಷಃ ಪ್ರವಸಥಾನಿ ಗನ್ಮ ವಿ ಷೂ ಮೃಧಃ ಶಿಶ್ರಥೋ ಜೀವಸೇ ನಃ ॥**

ಪದಪಾಠಃ

**ಮಾ । ನಃ । ವಧೈಃ । ವರುಣ । ಯೇ । ತೇ । ಇಷ್ಟೌ । ಏನಃ । ಕೃಣ್ವಂತಂ । ಅಸುರ । ಭ್ರೀಣಂತಿ ।**

**ಮಾ । ಜ್ಯೋತಿಷಃ । ಪ್ರಽವಸಥಾನಿ । ಗನ್ಮ । ವಿ । ಸು । ಮೃಧಃ । ಶಿಶ್ರಥಃ । ಜೀವಸೇ । ನಃ ॥ ೭ ॥**

॥ ಸಾಯಣಭಾಷ್ಯಂ ॥

**ಹೇ ವರುಣ ನೋಽಸ್ಮಾನ್ ವಧೈರ್ಹನನಸಾಧನೈರಾಯುಧೈರ್ಮಾ ಹಿಂಸೀರಿತಿ ಶೇಷಃ । ಹೇ ಅಸುರ ಪಾಪಕೃತಾಂ ನಿರಸಿತಃ ತೇ ತ್ವದೀಯ ಇಷ್ಟೌ ಯಜ್ಞ ಏನೋ ವಿಹಿತಾನನುಷ್ಠಾನೇನ ಜನಿತಂ ಪಾಪಂ ಕೃಣ್ವಂತಂ ಕುರ್ವಂತಂ ಪುರುಷಂ ಯೇ ವಧಾ ಭ್ರೀಣಂತಿ ಹಿಂಸಂತಿ ತೈರಿತಿ ಪೂರ್ವತ್ರ ಸಂಬಂಧಃ ॥ ಭ್ರೀಙ್ ಹಿಂಸಾಯಾಂ ಕ್ರ್ಯಾದಿಃ ॥ ಅಪಿ ಚ ಜ್ಯೋತಿಷೋ ಗೃಹೇ ವರ್ತಮಾನಾದಗ್ನೇಃ**

**ಸೌರಪ್ರಕಾಶಾದ್ವಾ ಪ್ರವಸಥಾನಿ ಪ್ರವಾಸಾನ್ಮಾ ಗನ್ಮ । ಮಾ ಗಚ್ಛಾಮ । ಸರ್ವದಾ ಗೃಹೇ ವರ್ತಮಾನಾಃ ಸೂರ್ಯಂ ಪಶ್ಯಂಶ್ಚಿರಕಾಲಂ ಜೀವೇಮೇತ್ಯರ್ಥಃ ॥ ಗಮೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ ॥ ತಥಾ ನೋಽಸ್ಮಾಕಂ ಜೀವಸೇ ಜೀವನಾಯ ಮೃಧೋ ಹಿಂಸಕಾನ್ ಸುಷು ವಿಶಿಶ್ರಥಃ । ವಿಶ್ಲೇಷಯ । ಬಾಧಸ್ವೇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಅಸುರ**—ಪಾಪಿಷ್ಠರನ್ನು ಹೊಡೆದೋಡಿಸತಕ್ಕ । **ವರುಣ**—ಎಲೈ ವರುಣನೇ । **ತೇ** ನಿನ್ನನ್ನು ದ್ವೇಶಿಸಿದ । **ಇಷ್ಟೌ**—ಯಜ್ಞದಲ್ಲಿ । **ಏನಃ**—(ಕರ್ಮಲೋಪದಿಂದ ಜನಿತವಾದ) ಪಾಪವನ್ನು । **ಕೃಣ್ವಂತಂ**—ಮಾಡತಕ್ಕ ಪುರುಷನನ್ನು । **ಯೇ**—ಯಾವ ವಧಸಾಧನವಾದ ಆಯುಧಗಳು । **ಭ್ರೀಣಂತಿ**—ಹಿಂಸಿಸುವೋ (ಅಂತಹ) । **ವಧೈಃ**—ಆಯುಧಗಳಿಂದ । **ನಃ**—ನಮ್ಮನ್ನು । **ಮಾ**—ಹಿಂಸಿಸಬೇಡ । **ಜ್ಯೋತಿಷಃ**—ಯಜ್ಞಾಗ್ನಿಯಿಂದ । **ಪ್ರವಸಥಾನಿ**—ಬೇರೆಯಾದ ಸ್ಥಳದಲ್ಲಿ ವಾಸವನ್ನು । **ಮಾ ಗನ್ಮ**—ನಾವು ಹೊಂದದಿರುವಂತಾಗಲಿ । **ನಃ**—ನಮ್ಮ । **ಜೀವಸೇ**—(ಸುಖದ) ಜೀವನಕ್ಕಾಗಿ । **ಮೃಧಃ**—ಹಿಂಸಕರಾದ ಶತ್ರುಗಳನ್ನು । **ವಿ ಶಿಶ್ರಥಃ**—ನಾಶಪಡಿಸು.

॥ ಭಾವಾರ್ಥ ॥

ಪಾಪಿಷ್ಠರನ್ನು ಹೊಡೆದೋಡಿಸತಕ್ಕ ಎಲೈ ವರುಣನೇ, ನಿನ್ನನ್ನು ದ್ವೇಶಿಸಿದ ಯಜ್ಞದಲ್ಲಿ ಕರ್ಮಲೋಪದಿಂದ ಜನಿತವಾದ ಪಾಪವನ್ನು ಮಾಡತಕ್ಕ ಪುರುಷನನ್ನು ಯಾವ ವಧಸಾಧನವಾದ ಆಯುಧಗಳು ಹಿಂಸಿಸುವೋ ಅಂತಹ ಆಯುಧಗಳಿಂದ ನಮ್ಮನ್ನು ಹಿಂಸಿಸಬೇಡ. ಯಜ್ಞಾಗ್ನಿಯಿಲ್ಲದ ಸ್ಥಳದಲ್ಲಿ ನಾವು ವಾಸಮಾಡದಂತಾಗಲಿ. ನಮಗೆ ಸುಖದ ಜೀವನವು ಲಭಿಸುವುದಕ್ಕಾಗಿ ಹಿಂಸಕರಾದ ಶತ್ರುಗಳನ್ನು ನಾಶಪಡಿಸು.

English Translation

Harm us not, Varuna, with those destructive (weapons), which, repeller (of foes), demolish him who does evil at your sacrifice : let us not depart (before our time) from the regions of light : scatter the malevolent, that we may live.

॥ ವಿಶೇಷವಿಷಯಗಳು ॥

**ಅಸುರ—ಪಾಪಕೃತಾಂ ನಿರಸಿತಃ** । ಅಸುರ ಶಬ್ದವು ಮೇಘನಾಮಗಳಲ್ಲಿ (ನಿ. ೧-೧೦) ಉಕ್ತವಾಗಿದೆ. **ಅಸುರಾಃ ಅಸುರತಾಃ ಸ್ಥಾನೇಷ್ವಸ್ತಾಃ, ಸ್ಥಾನೇಭ್ಯ ಇತಿ ವಾ, ಅಸೋರಸುರಾನಸೃಜತ ತದಸುರಾಣಾಮಸುರತ್ವಂ** (ನಿ. ೩-೮) ಎಂದು ವ್ಯಾಖ್ಯಾತವಾಗಿದೆ. ಸಾಯಣರು ವರುಣನು ಪಾಪಿಗಳನ್ನು ನಾಶಪಡಿಸುವ ನಿಮಿತ್ತ ಈ ಪದದಿಂದ ಸಂಬೋಧಿತನಾಗಿರುವನೆಂದು ವಿವರಿಸಿದೆ. ಮತ್ತು **ವಧೈಃ ಏನಃ ಕೃಣ್ವಂತಂ ಯೇ ಭ್ರೀಣಂತಿ ನಃ ಮಾ—ಹನನಸಾಧನೈಃ ಆಯುಧೈಃ ವಿಹಿತಾನನುಷ್ಠಾನೇನ ಜನಿತಂ ಪಾಪಂ ಕುರ್ವಂತಂ ಪುರುಷಂ ಹಿಂಸಂತಿ ತೈಃ ಅಸ್ಮಾನ್ ಮಾ ಹಿಂಸೀಃ**—ಹಿಂಸೆಮಾಡುವವರನ್ನೂ, ವರುಣನನ್ನು ಉದ್ದೇಶಿಸಿ ಆಚರಿಸುವ ಯಾಗಗಳಲ್ಲಿ ಕರ್ತವ್ಯಲೋಪಮಾಡುವವನನ್ನೂ ನಾಶಪಡಿಸುವ ಆಯುಧಗಳಿಂದ ಯಜಮಾನರಾದ ನಮ್ಮನ್ನು ಹಿಂಸೆಮಾಡದಿರುವಂತೆ ರಕ್ಷಣೆಯು ಪ್ರಾರ್ಥಿತವಾಗಿದೆ.

**ಜ್ಯೋತಿಷಃ ಪ್ರವಸಥಾನಿ ಮಾ ಗನ್ಮ—ಗೃಹೇ ವರ್ತಮಾನಾದಗ್ನೇಃ ಸೌರಪ್ರಕಾಶಾದ್ವಾ ಪ್ರವಾಸಾನ್ ಮಾ ಗಚ್ಛಾಮ। ಸರ್ವದಾ ಗೃಹೇ ವರ್ತಮಾನಃ ಸೂರ್ಯಂ ಪಶ್ಯನ್ ಚಿರಕಾಲಂ ಜೀವೇಯಂ।** ಸರ್ವದಾ ಅಗ್ನಿಯ ಪ್ರಕಾಶದಿಂದ ವ್ಯಾಪ್ತವಾಗಿರುವ ಯಾಗಶಾಲೆಯಿಂದಲಾಗಲಿ, ಅಥವಾ ಸೂರ್ಯನ ಪ್ರಕಾಶದಿಂದ ಕೂಡಿರುವ ಪ್ರದೇಶದಿಂದಲಾಗಲಿ, ಬೇರೆ ಇರುವಿಕೆಯು ಉಂಟಾಗದಿರುವ ಸ್ಥಿತಿಯು ಎಂದರೆ ಯಾಗಗಳಿಗಾಗಿ ಪ್ರಜ್ವಲಿತ್ತನಾದ ಅಗ್ನಿಯನ್ನೂ, ಸೂರ್ಯನನ್ನೂ ನೋಡುವವನಾಗಿ ಯಜಮಾನನು ಬಹಳ ಕಾಲದವರೆಗೂ ಮನೆಯಲ್ಲಿ ವಾಸಮಾಡುವ ಸ್ಥಿತಿಯು ಉಂಟಾಗುವ ಹಾಗೆ ವರುಣನ ಅನುಗ್ರಹವು ಆಶಂಸಿತವಾಗಿದೆ.

**ಮೃಧಃ—ಹಿಂಸಕಾನ್ ।** ಮೃಧಃ ಎಂಬ ಪದವು ಸಂಗ್ರಾಮನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಮತ್ತು

**ವಿ ನ ಇಂದ್ರ ಮೃಧೋ ಜಹಿ ನೀಚಾ ಯಚ್ಛ ಪೃತನ್ಯತಃ ।**
**ಯೋ ಅಸ್ಮಾँ ಅಭಿದಾಸತ್ಯಧರಂ ಗಮಯಾ ತಮಃ ॥**
(ಋ ಸಂ. ೧೦-೧೫೨-೪)

ಈ ಋಕ್ಕಿನಲ್ಲಿ **ಮೃಧಃ—ಮೃಧಕರ್ತ್ರೀನ್ ಶತ್ರೂನ್** ಎಂದು (ನಿ. ೭-೨) ಅರ್ಥವನ್ನು ವಿವರಿಸಿದೆ.

॥ ಸಂಹಿತಾಪಾಠಃ ॥

ನಮಃ ಪುರಾ ತೇ ವರುಣೋತ ನೂನಮುತಾಪರಂ ತುವಿಜಾತ ಬ್ರವಾಮ ।
ತ್ವೇ ಹಿ ಕಂ ಪರ್ವತೇ ನ ಶ್ರಿತಾನ್ಯಪ್ರಚ್ಯುತಾನಿ ದೂಳಭ ವ್ರತಾನಿ ॥ ೮ ॥

॥ ಪದಪಾಠಃ ॥

ನಮಃ । ಪುರಾ । ತೇ । ವರುಣ । ಉತ । ನೂನಂ । ಉತ । ಅಪರಂ । ತುವಿऽಜಾತ । ಬ್ರವಾಮ ।
ತ್ವೇ ಇತಿ । ಹಿ । ಕಂ । ಪರ್ವತೇ । ನ । ಶ್ರಿತಾನಿ । ಅಪ್ರऽಚ್ಯುತಾನಿ । ದುಃऽದಭ । ವ್ರತಾನಿ ॥ ೮ ॥

॥ ಸಾಯಣಭಾಷ್ಯಂ ॥

**ಹೇ ವರುಣ ಪುರಾ ಪೂರ್ವಸ್ಮಿನ್ಕಾಲೇ ತೇ ತುಭ್ಯಂ ನಮೋ ನಮಸ್ಕಾರಪ್ರತಿಪಾದಕಂ ನಮ ಇತಿ ಶಬ್ದಮವಾದಿಷ್ಮ। ಉತ ಅಪಿ ಚ ನೂನಮದ್ಯಾಪಿ ಬ್ರವಾಮ । ಉತ ಅಪಿ ಚ ಹೇ ತುವಿಜಾತ ಬಹುಷು ಪ್ರದೇಶೇಷು ಪ್ರಾದುರ್ಭೂತ ವರುಣಾಪರಮಾಗಾಮಿನ್ಯಪಿ ಕಾಲೇ ನಮಃಶಬ್ದಂ ಬ್ರವಾಮ । ಉಚ್ಚಾರಯಾಮ । ಕಸ್ಮಾದಿತಿ ಚೇದುಚ್ಯತೇ । ದೂಳಭ ದುರ್ದಭ ದಂಭಿತುಂ ಹಿಂಸಿತುಮಶಕ್ಯ ॥ ದುರೋ ದಾಶನಾಶದಭ್ಯಾಧ್ಯೇಷು । ಪಾ. ೬. ೩. ೧೦೯. ೫. । ಇತಿ ರೇಫಸ್ಯೋತ್ವಮುತ್ತರಪದಾದೇಃ ಷ್ಟುತ್ವಂ ಚ ।**

**ಕಮಿತ್ಯೇತತ್ಪಾದಪೂರಣಂ ॥ ಹಿ ಯಸ್ಮಾತ್ ತ್ವೇ ತ್ವಯಿ ಪರ್ವತೇ ನ ಶಿಲೋಚ್ಚಯೆ ಇವಾಪ್ರಚ್ಯುತಾನ್ಯನ್ಯೈಃ ಪ್ರಚ್ಯಾವಯಿತುಮಶಕ್ಯಾನಿ ವ್ರತಾನಿ ಕರ್ಮಾಣಿ ವಿಧರಣಾನಿ ಶ್ರಿತಾನಿ । ಆಶ್ರಿತಾನಿ । ತಸ್ಮಾದಿತ್ಯರ್ಥಃ ॥**

॥ ಪ್ರತಿಪದಾರ್ಥ ॥

**ದೂಳಭ**—ಅಪ್ರತಿಹತನಾದ । **ವರುಣ**—ಎಲೈ ವರುಣನೇ । **ಹಿ**—ಯಾವ ಕಾರಣದಿಂದ । **ತೇ**—ನಿನ್ನಲ್ಲಿ । **ಪರ್ವತೇ ನ**—ಪರ್ವತಗಳಲ್ಲಿ ಕಾಣುವಂತೆ । **ಅಪ್ರಚ್ಯುತಾನಿ**—ಇತರರಿಂದ ಚಲಿಸಲು ಸಾಧ್ಯವಿಲ್ಲದ । **ವ್ರತಾನಿ**—ಧಾರಣ ಶಕ್ತಿಗಳು । **ಶ್ರಿತಾನಿ**—ಆಶ್ರಯಿಸಿವೆಯೋ (ಆದುದರಿಂದ) । **ಪುರಾ**—ಪೂರ್ವ ಕಾಲದಲ್ಲಿ । **ತೇ**—ನಿನ್ನನ್ನುದ್ದೇಶಿಸಿ । **ನಮಃ**—ನಮಸ್ಕಾರಪೂರ್ವಕವಾದ ಪೂಜೆಯನ್ನು ಅರ್ಪಿಸಿದೆವು । **ಉತ**—ಮತ್ತು । **ನೂನಂ**—ಈಗಲೂ । **ಬ್ರವಾಮ**—ನಮಸ್ಕಾರ ಪೂರ್ವಕವಾದ ಸ್ತುತಿಯನ್ನು ಪಠಿಸುತ್ತೇವೆ । **ಉತ**—ಅಲ್ಲದೇ । **ತುವಿಜಾತ**—ಬಹು ಪ್ರದೇಶಗಳಲ್ಲಿ ಉತ್ಪನ್ನನಾದ ವರುಣನೇ । **ಅಪರಂ**—ಭವಿಷ್ಯತ್ಕಾಲಗಳಲ್ಲೂ ಸಹ (ನಿನಗೆ ಇದೇ ರೀತಿಯಾದ ಪೂಜೆಗಳನ್ನರ್ಪಿಸುತ್ತೇವೆ)

॥ ಭಾವಾರ್ಥ ॥

ಅಪ್ರತಿಹನಾದ ಎಲೈ ವರುಣನೇ ಯಾವ ಕಾರಣದಿಂದ ನಿನ್ನಲ್ಲಿ ಪರ್ವತಗಳಲ್ಲಿ ಕಾಣುವಂತೆ ಇತರರಿಂದ ಚಲಿಸಲು ಸಾಧ್ಯವಿಲ್ಲದ ಧಾರಣಶಕ್ತಿಗಳು ಆಶ್ರಯಿಸಿವೆಯೋ, ಆದುದರಿಂದ ಪೂರ್ವಕಾಲದಲ್ಲಿಯೂ ಈಗಲೂ ಸಹ ನಿನ್ನನ್ನುದ್ದೇಶಿಸಿ ನಮಸ್ಕಾರಪೂರ್ವಕವಾದ ಪೂಜೆಗಳನ್ನರ್ಪಿಸಿದ್ದೇವೆ. ಬಹುಪ್ರದೇಶಗಳಲ್ಲಿ ಉತ್ಪನ್ನನಾದ ವರುಣನೇ, ಅದೇ ರೀತಿಯಲ್ಲಿ ಮುಂದೆಯೂ ಸಹ ನಮಸ್ಕಾರಪೂರ್ವಕವಾದ ಸ್ತುತಿಗಳನ್ನು ಪಠಿಸುತ್ತೇವೆ.

## English Translation.

As we have offered adoration to you, Varuua, of old, in like manner as we offer it now so may we offer it in future (to you), you are cverywhere present: for in you, who are difficult of attainment, as in an (immoveable) mountain, all holy acts are assembled, and are not to be dissevered.

॥ ವಿಶೇಷವಿಷಯಗಳು ॥

ವರುಣನನ್ನು **ತುವಿಜಾತ** ಎಂಬ ಪದದಿಂದ ಸಂಬೋಧಿಸಿದೆ. ಈ ವರುಣನ ಅಧಿಕಾರವು ಅನೇಕ ಪ್ರದೇಶಗಳ ಪರ್ಯಂತವಾಗಿಯೂ ವ್ಯಾಪಿಸಿರುವುದರಿಂದ ಅದಕ್ಕನುಗುಣವಾಗಿ ಬಹಳ ಪ್ರದೇಶಗಳಲ್ಲಿ ಉತ್ಪನ್ನನಾಗಿರುವನೆಂದೂ, **ದೂಳಭ**—ಯಾರಿಂದಲೂ ಹಿಂಸೆಮಾಡಲಶಕ್ಯನೆಂದೂ, ವರ್ಣಿಸಿ, **ತ್ವೇ—ಪರ್ವತೇ ನ ಅಪ್ರಚ್ಯುತಾನಿ ವ್ರತಾನಿ ಶ್ರಿತಾನಿ—ತ್ವಯಿ ಶಿಲೋಚ್ಚಯೆ ಇವ ಅನ್ಯೈಃ ಪ್ರಚ್ಯಾವಯಿತುಮಶಕ್ಯಾನಿ ಆಶ್ರಿತಾನಿ** ಈ ವರುಣನ ಧಾರಣಶಕ್ತಿಯು ಪರ್ವತಗಳು, ಶಿಲಾ, ಮೃತ್, ವೃಕ್ಷಾದಿಗಳ ಹಾಗೆ ಯಾರಿಂದಲೂ ನಾಶಪಡಿಸಲಶಕ್ಯವಾಗಿದೆ ಎಂದೂ ವರುಣನ ಪ್ರಭಾವವನ್ನು ವಿವರಿಸಿ, ಈ ವಿಧವಾದ ಪ್ರಭೂತಪ್ರಭಾವದಿಂದ ಇರುವ ವರುಣನನ್ನು ಉದ್ದೇಶಿಸಿ, ಯಜಮಾನರು ಭೂತ, ವರ್ತಮಾನ, ಭವಿಷತ್ಕಾಲವೆಂಬ ಮೂರು ಕಾಲಗಳಲ್ಲಿಯೂ ಅರ್ಪಿಸಿರುವ, ಮತ್ತು ಅರ್ಪಿಸುತ್ತಿರುವ, ಅರ್ಪಿಸುವ ನಮಸ್ಕಾರಪೂಜಾದಿಗಳ ನಿಯತಾಚರಣವು ಉಕ್ತವಾಗಿದೆ.

॥ ಸಂಹಿತಾಪಾಠಃ ॥

ಪರ ಋಣಾ ಸಾವೀರಧ ಮತ್ಕೃತಾನಿ ಮಾಹಂ ರಾಜನ್ನನ್ಯಕೃತೇನ ಭೋಜಂ ।
ಅವ್ಯುಷ್ಟಾ ಇನ್ನು ಭೂಯಸೀರುಷಾಸ ಆ ನೋ ಜೀವಾನ್ವರುಣ ತಾಸು ಶಾಧಿ ॥

॥ ಪದಪಾಠಃ ॥

ಪರಾ । ಋಣಾ । ಸಾವೀಃ । ಅಧ । ಮತ್ಽಕೃತಾನಿ । ಮಾ । ಅಹಂ । ರಾಜನ್ । ಅನ್ಯಽಕೃತೇನ । ಭೋಜಂ ।

ಅವಿಽಉಷ್ಟಾಃ । ಇತ್ । ನು । ಭೂಯಸೀಃ । ಉಷಸಃ । ಆ । ನಃ । ಜೀವಾನ್ । ವರುಣ । ತಾಸು । ಶಾಧಿ ॥ ೯ ॥

॥ ಸಾಯಣಭಾಷ್ಯಂ ॥

ಹೇ ವರುಣ ಋಣಾ ಋಣಾನಿ ಪಿತ್ರಾದಿಭಿಃ ಕೃತಾನ್ಯಸ್ಮಾಭಿರ್ದೇಯಾನಿ ಪರಾ ಸಾವೀಃ । ಪರಾ ಸುವ । ಪರಾಚೀನಂ ಪ್ರೇರಯ ॥ ಷೂ ಪ್ರೇರಣೇ । ಛಾಂದಸೋ ಲುಙ್ ॥ ಅಧ ಅಧುನಾ ಮತ್ಕೃತಾನಿ ಮಯಾ ನಿಷ್ಪಾದಿತಾನಿ ಋಣಾನಿ ಪರಾ ಸುವ । ಅಪಿ ಚ ಹೇ ರಾಜನ್ ಸ್ವಾಮಿನ್ ವರುಣ ಅಹಮನ್ಯ-ಕೃತೇನಾನ್ಯೈರರ್ಜಿತೇನ ಧನೇನ ಮಾ ಭೋಜಂ । ಭೋಗಂ ಮಾ ಲಭೇಯಂ । ಕಿಂ ಕಾರಣಮಿತಿ ಚೇದುಚ್ಯತೇ । ಭೂಯಸೀರ್ಭೂಯಸ್ಯೋ ಬಹುತರಾ ಉಷಸೋಽವ್ಯುಷ್ಟಾ ಇನ್ನು । ಸತ್ಯಮವ್ಯುಷ್ಟಾ ಏವ । ಅಪರರಾತ್ರೇಷೂತ್ಥಾಯ ಋಣಾನಿ ಚಿಂತಯತೋ ಜಾಗ್ರತೋ ಮಮ ವ್ಯುಷ್ಟಾ ಅಪ್ಯವ್ಯುಷ್ಟಕಲ್ಪಾ ಆಸನ್ । ಹೇ ವರುಣ ತಾಸೂಷಃಸು ನೋಽಸ್ಮಾನ್ ಜೀವಾನ್ ಜೀವನವತ ಆಶಾಧಿ । ಆ ಸಮಂತಾದ-ನುಶಿಷ್ಟಾನ್ ಕುರು । ಋಣಾನ್ಯಪಕೃತ್ಯ ಭೋಗಪರ್ಯಾಪ್ತಂ ಧನಂ ಪ್ರಯಚ್ಛೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ವರುಣ**— ಎಲೈ ವರುಣನೇ । **ಋಣಾ**—ನಮ್ಮ ಪಿತೃಗಳಿಂದ ಮಾಡಲ್ಪಟ್ಟ ಋಣಗಳನ್ನು । **ಪರಾ ಸಾವೀಃ**— ತೀರಿಸು । **ಅಧ**—ಈಗ । **ಮತ್ಕೃತಾನಿ**– ನನ್ನಿಂದ ಮಾಡಲ್ಪಟ್ಟ ಋಣಗಳನ್ನೂ ತೀರಿಸು । **ರಾಜನ್**— ಪ್ರಭುವಾದ ವರುಣನೇ । **ಅಹಂ**— ನಾನು । **ಅನ್ಯಕೃತೇನ**—ಇತರರು ಸಂಪಾದಿಸಿದ ಧನದಿಂದ । **ಮಾ ಭೋಜಂ**— ಭೋಗವನ್ನು ಅನುಭವಿಸುವಂತೆ ಮಾಡಬೇಡ । **ಭೂಯಸೀಃ**—ಅನೇಕಸಲ । **ಉಷಸಃ**—ಪ್ರಕಾಶಮಾನವಾದ ಉಷಸ್ಸುಗಳು । **ಅವ್ಯುಷ್ಟಾ ಇನ್ನು**—(ಋಣಬಾಧೆಯಿರುವುದರಿಂದ) ಹುಟ್ಟದಿರುವಂತೆಯೇ ಆಗಿ ಅಂಧಕಾರಪ್ರಾಯ ವಾಗಿವೆ । **ತಾಸು**—ಅಂತಹ ಉಷಃಕಾಲಗಳಲ್ಲಿ । **ನಃ**—ನಮ್ಮನ್ನು । **ಜೀವಾನ್**—ನೆಮ್ಮದಿಯ ಜೀವನವನ್ನು ಹೊಂದಿರುವಂತೆ । **ಆ ಶಾಧಿ**—ಋಣಮುಕ್ತರನ್ನಾಗಿ ಮಾಡು.

॥ ಭಾವಾರ್ಥ ॥

ಎಲೈ ವರುಣನೇ, ನಮ್ಮ ಪಿತೃಗಳಿಂದ ಮಾಡಲ್ಪಟ್ಟ ಋಣಗಳನ್ನೂ ನನ್ನಿಂದ ಈಗ ಮಾಡಲ್ಪಟ್ಟಿರುವ ಋಣ ಗಳನ್ನೂ ತೀರಿಸು. ಪ್ರಭುವಾದ ವರುಣನೇ, ಇತರರು ಸಂಪಾದಿಸಿದ ಧನದಿಂದ ನಾನು ಭೋಗವನ್ನನುಭವಿಸುವಂತೆ

ಮಾಡಬೇಡ. ನನಗೆ ಋಣಬಾಧೆಯಿರುವುದರಿಂದ ಅನೇಕ ಸಲ ಪ್ರಕಾಶಮಾನವಾದ ಉಷಸ್ಸುಗಳು ಹುಟ್ಟದಿರುವಂತೆಯೇ ಆಗಿ ಅಂಧಕಾರಪ್ರಾಯವಾಗಿದೆ. ಅಂತಹ ಉಷಃಕಾಲಗಳಲ್ಲಿ ನಾವು ನಿಮ್ಮದಿಯ ಜೀವನವನ್ನು ಹೊಂದಿರುವಂತೆ ನಮ್ಮನ್ನು ಋಣಮುಕ್ತರನ್ನಾಗಿ ಮಾಡು.

English Translation.

Discharge, Varuna, the debts (contracted) by my progenitors, and those now (contracted) by me; and may I not, royal Varuna, be dependent (on the debts contacted) by another: many are the mornings that have, as it were, indeed not dawned: make us, Varuna, alive in them.

। ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ **ಋಣ** ಎಂಬ ಪದವೂ, **ಪರಾಸಾವೀಃ** ಎಂಬ ಕ್ರಿಯಾಪದವೂ ಒಂದೇಸಾರಿ ಪ್ರಯುಕ್ತವಾಗಿದೆ. ಆದರೆ **ಅಥ ಮತ್ಕೃತಾನಿ** ಎಂಬ ಪದಗಳ ಪ್ರಯೋಗವಿರುವುದರಿಂದ ಸಾಯಣರು ಕರ್ಮಪದವನ್ನೂ ಕ್ರಿಯಾಪದವನ್ನೂ ಆವೃತ್ತಿಮಾಡಿ ಅರ್ಥವನ್ನು ವಿವರಿಸುವುದರಲ್ಲಿ, ಯಜಮಾನರ ಪಿತೃಗಳು ಆಚರಿಸುವ ಋಣವೂ, ಯಜಮಾನರು ಮಾಡಿರುವ ಋಣವೂ, ಎಂದು ಎರಡುವಿಧವಾದ ಋಣಗಳನ್ನೂ ಯಜಮಾನರೇ ಕೊಡಬೇಕಾಗಿರವುದರಿಂದ ವರುಣನು ಈ ಎರಡು ವಿಧವಾದ ಋಣಗಳೂ ತೀರಿಹೋಗಲಿ ಎಂದು ಅನುಗ್ರಹಿಸಲಿ ಎಂಬ ಪ್ರಾರ್ಥನೆಯು ಉಕ್ತವಾಗಿದೆ.

**ಭೂಯಸೀಃ ಉಷಸಃ ಅವ್ಯುಷ್ಟಾ ಇನ್ನು**—ಇತ್ ಎಂಬ ಪದಕ್ಕೆ ಸಮುಚ್ಚಯಾರ್ಥವನ್ನೂ, ನು ಎಂಬ ಪದಕ್ಕೆ ಉಪಮಾರ್ಥವನ್ನೂ ಹೇಳಿದೆ. **ಭೂಯಸ್ಯಃ ಉಷಸಃ ಅಪರರಾತ್ರೇಷೂತ್ಥಾಯ ಋಣಾನಿ ಚಿಂತಯತೋ ಜಾಗ್ರತೋ ಮಮ ವ್ಯುಷ್ಟಾಅಪಿ ಅವ್ಯುಷ್ಟಕಲ್ಪಾಃ ಆಸನ್** । ರಾತ್ರಿಯ ಕೊನೆಯ ಯಾಮದಲ್ಲಿ ಎಚ್ಚರದಿಂದ ಇದ್ದರೂ, ಋಣವನ್ನು ತೀರಿಸುವುದಕ್ಕಾಗಿ ಯೋಚಿಸುತ್ತಿರುವ ಯಜಮಾನರಿಗೆ ಉಷಃಕಾಲಗಳ ಪ್ರಾಪ್ತವಾಗಿ, ಕ್ರಮವಾಗಿ ಅವುಗಳು ಕಳೆದುಹೋಗುವುವುಗಳಾದರೂ, ಕಳೆಯದಿರುವಂತೆ ಇರುವುವು ಎಂದು ಯಜಮಾನರ ಚಿಂತೆಯು ಪ್ರಭೂತವಾಗಿರುವುದು ಉಕ್ತವಾಗಿದೆ. ಮತ್ತು **ತಾಸು ನಃ ಜೀವಾನ್ ಅಶಾಧಿ**—ವರುಣನನ್ನು ಸಂಬೋಧಿಸಿ ಆ ಉಷಃಕಾಲಗಳಲ್ಲಿ ಬಹಳವಾಗಿ ಯೋಚಿಸುತ್ತಿರುವ ಯಜಮಾನರಿಗೆ **ಋಣಾನ್ಯಪಕೃತ್ಯ ಭೋಗಪರ್ಯಾಪ್ತಂ ಧನಂ ಪ್ರಯಚ್ಛ**— ಋಣಗಳು ತೀರುವಂತೆಯೂ, ಭೋಗವನ್ನು ಅನುಭವಿಸಲು ಸಾಕಾಗುವಂತೆ ಧನವನ್ನು ಕೊಡಬೇಕೆಂದೂ ಪ್ರಾರ್ಥಿಸಿದೆ.

ಸಂಹಿತಾಪಾಠಃ ॥

**ಯೋ ಮೇ ರಾಜನ್ಯುಜ್ಯೋ ವಾ ಸಖಾ ವಾ ಸ್ವಪ್ನೇ ಭಯಂ ಭೀರವೇ ಮಹ್ಯಮಾಹ**

**ಸ್ತೇನೋ ವಾ ಯೋ ದಿಪ್ಸತಿ ನೋ ವೃಕೋ ವಾ ತ್ವಂ ತಸ್ಮಾದ್ವರುಣ ಪಾಹ್ಯಸ್ಮಾನ್ ॥**

॥ ಪದಪಾಠಃ ॥

ಯಃ । ಮೇ । ರಾಜನ್ । ಯುಜ್ಯಃ । ವಾ । ಸಖಾ । ವಾ । ಸ್ವಪ್ನೇ । ಭಯಂ । ಭೀರವೇ । ಮಹ್ಯಂ ।

ಆಹ ।

ಸ್ತೇನಃ । ವಾ । ಯಃ । ದಿಪ್ಸತಿ । ನಃ । ವೃಕಃ । ವಾ । ತ್ವಂ । ತಸ್ಮಾತ್ । ವರುಣ । ಪಾಹಿ । ಅಸ್ಮಾನ್॥೧೦॥

॥ ಸಾಯಣಭಾಷ್ಯಂ ॥

ಹೇ ರಾಜನ್ ವರುಣ ಮೇ ಮದೀಯೋ ಯುಜ್ಯೋ ಯೋಜನಸಮರ್ಥಃ ಪಿತ್ರಾದಿರ್ವಾ ಸಖಾ ಸಮಾನಖ್ಯಾನೋಽನ್ಯೋ ಬಾಂಧವೋ ವಾ ಸ್ವಪ್ನೇ ದೃಷ್ಟಂ ತ್ವದ್ವಿಷಯಂ ಭಯಂ ಭೀರವೇ ಭಯಶೀಲಾಯ ಮಹ್ಯಂ ಯ ಆಹ ಬ್ರೂತೇ। ತಥಾ ಸ್ತೇನಶ್ಚೋರೋ ವಾ ವೃಕೋಽರಣ್ಯಶ್ವಾ ವಾ ಯೋ ನೋಽಸ್ಮಾನ್ ದಿಪ್ಸತಿ । ಜಿಘಾಂಸತಿ ॥ ಸನೀವಂತರ್ಧೇಽತಿ ವಿಕಲ್ಪನಾದಿಡಭಾವಃ । ದಂಭ ಇಚ್ಛೇತೀತ್ವಂ ॥ ಹೇ ವರುಣ ತ್ವಂ ತಸ್ಮಾತ್ಸರ್ವಸ್ಮಾದಸ್ಮಾನ್ಪಾಹಿ । ರಕ್ಷ ॥

॥ ಪ್ರತಿಪದಾರ್ಥ ॥

**ರಾಜನ್**— ಪ್ರಭುವಾದ । **ವರುಣ**— ಎಲೈ ವರುಣನೇ । **ಮೇ**—ನನ್ನ । **ಯಃ ಯುಜ್ಯಃ**— ಯಾವ ಪಿತ್ರಾದಿಗಳಾಗಲಿ । **ವಾ**—ಅಥವಾ । **ಸಖಾ ವಾ** – ಇತರ ಬಂಧುವಾಗಲಿ । **ಸ್ವಪ್ನೇ**—ಸ್ವಪ್ನದಲ್ಲಿ (ನಿನ್ನ ವಿಷಯವಾಗಿ ನೋಡಿದ) । **ಭಯಂ**—ಭಯವನ್ನು । **ಭೀರವೇ**—ಭಯಶಾಲಿಯಾದ । **ಮಹ್ಯಂ**— ನನಗೆ । **ಆಹ**—ವಿವರಿಸಿ ಹೇಳುತ್ತಾನೆಯೋ, ಅದರಿಂದಲೂ । **ಯಃ ಸ್ತೇನಃ ವಾ**— ಯಾವ ಚೋರನಾಗಲಿ । **ವಾ**—ಅಥವಾ । **ವೃಕಃ**—ತೋಳನಾಗಲಿ । **ನಃ**—ನಮ್ಮನ್ನು । **ದಿಪ್ಸತಿ**—ಹಿಂಸಿಸುವುದೋ । **ತಸ್ಮಾತ್**— ಆ ಎಲ್ಲಾ ಭಯದಿಂದಲೂ ಮತ್ತು ಹಿಂಸೆಯಿಂದಲೂ । **ತ್ವಂ**—ನೀನು । **ಅಸ್ಮಾನ್**—ನಮ್ಮನ್ನು । **ಪಾಹಿ**— ರಕ್ಷಿಸು.

॥ ಭಾವಾರ್ಥ ॥

ಪ್ರಭುವಾದ ಎಲೈ ವರುಣನೇ, ನನ್ನ ಯಾವ ಪಿತ್ರಾದಿಗಳಾಗಲಿ, ಅಥವಾ ಇತರ ಬಂಧುವಾಗಲಿ, ಭಯಶಾಲಿಯಾದ ನನಗೆ ಸ್ವಪ್ನದಲ್ಲಿ ನಿನ್ನ ವಿಷಯವಾಗಿ ನೋಡಿದ ಯಾವ ಭಯವನ್ನು ವಿವರಿಸಿ ಹೇಳುತ್ತಾನೆಯೋ ಅದರಿಂದಲೂ ಅಥವಾ ಯಾವ ಚೋರನಾಗಲಿ, ತೋಳನಾಲಿ ನಮ್ಮನ್ನು ಹಿಂಸಿಸುವುದೋ ಆ ಎಲ್ಲಾ ಭಯದಿಂದಲೂ ಮತ್ತು ಹಿಂಸೆಯಿಂದಲೂ ನಮ್ಮನ್ನು ಪೂರ್ಣವಾಗಿ ರಕ್ಷಿಸು.

English Translation.

Protect us, Varuna, against every peril which a kinsman or a friend threatens me with alarmed in sleep; or from a thief or a wolf that attempts to destroy us.

॥ ವಿಶೇಷವಿಷಯಗಳು ॥

ಈ ಸೂಕ್ತದಲ್ಲಿ ವರುಣನಿಂದ ಭಯನಿವಾರಣಪೂರ್ವಕವಾಗಿ ರಕ್ಷಣೆಯು ಯಜಮಾನರಿಂದ ಪ್ರಾರ್ಥಿಸಲಾಗಿದೆ. ಭಯಜನಕವಾದ ಕಾರಣವೂ ಉಕ್ತವಾಗಿದೆ. ಮೊದಲನೆಯದಾಗಿ **ಯುಜ್ಯಃ—ಯೋಜನಸಮರ್ಥಃ ಪಿತ್ರಾದಿಃ** ಪೋಷಣೆಯನ್ನು ಮಾಡಲು ಶಕ್ತನಾದ ತಂದೆಯೇ ಮೊದಲಾದವನೂ, **ಸಖಾ—ಸಮಾನಖ್ಯಾನಃ ಅನ್ಯೋವಾ ಬಾಂಧವಃ** ತನಗೆ ಸಮಾನವಾದ ತಿಳುವಳಿಕೆಯುಳ್ಳ ಸ್ನೇಹಿತ ಅಥವಾ ಬಂಧುವಾಗಲಿ ಯಜಮಾನನಿಂದ ಉಪಾಸ್ಯನಾಗಿರುವ ದೇವತೆಯ ವಿಷಯದಲ್ಲಿ ಭಯವನ್ನು ಯಜಮಾನನಿಗೆ ಸೂಚಿಸುವನು ಆದುದರಿಂದ ಈ ದೇವತೆಯಿಂದ ರಕ್ಷಣೆಯು ಆಶಂಸಿತವಾಗಿದೆ.

ಎರಡನೆಯದಾಗಿ **ಸ್ತೇನಃ—ಚೋರಃ, ವೃಕಃ—ಅರಣ್ಯಶ್ವಾ** ಹಿಂಸೆಯನ್ನು ಉಂಟುಮಾಡುವ ಪ್ರಾಣಿಗಳಾದ ಕಳ್ಳನೂ, ಕಾಡಿನಲ್ಲಿ ಕೊಂದು ತಿನ್ನುವ ದುಷ್ಟಮೃಗಗಳೂ (ತೋಳಗಳು) ಇವುಗಳಿಂದಲೂ, ವರುಣನು ರಕ್ಷಿಸಲಿ ಎಂದು ಪ್ರಾರ್ಥಿಸಿದೆ.

ಸ್ತೇನಶಬ್ದವು ಯಾಸ್ಕರಿಂದ **ಸ್ತೇನ**ನಾಮಗಳಲ್ಲಿ ಪಠಿತವಾಗಿಲ್ಲದಿದ್ದರೂ, **ಸ್ತೇನಃ ಕಸ್ಮಾತ್ ಸಂಸ್ತ್ಯಾನಮಸ್ಮಿನ್ ಪಾಪಕಮಿತಿ ನೈರುಕ್ತಾಃ** (ನಿ. ೩–೧೯) ಎಂದು ವ್ಯಾಖ್ಯಾತವಾಗಿದೆ.

**ವೃಕಃ—ಅರಣ್ಯಶ್ವಾ । ವೃಕ** ಶಬ್ದವು–ವಜ್ರನಾಮಗಳಲ್ಲಿಯೂ, (ನಿ. ೩–೧೧) ಸ್ತೇನನಾಮಗಳಲ್ಲಿಯೂ, (ನಿ. ೩–೧೯) ಪಠಿತವಾಗಿದೆ. ಮತ್ತು **ವೃಕಶ್ಚಂದ್ರಮಾ ಭವತಿ । ವಿವೃತ ಜ್ಯೋತಿಷ್ಕೋ ವಾ ವಿಕೃತಜ್ಯೋತಿಷ್ಕೋ ವಾ, ವಿಕ್ರಾಂತಜೋತಿಷ್ಕೋ ವಾ** (ನಿ. ೫–೨೧) ಎಂದು ವಿವೃತವಾಗಿದೆ. **ವೃಕೋ ಲಾಂಗಲಂ ಭವತಿ ವಿಕರ್ತನಾತ್** (ನಿ ೬–೨೬) ಎಂದು ವೃಕಶಬ್ದಾರ್ಥವು ವಿವರಿಸಲಾಗಿದೆ. ಸಾಯಣರು ಕಾಡುನಾಯಿ (ತೋಳ) ಎಂದು ಈ ಶಬ್ದಕ್ಕೆ ಅರ್ಥವನ್ನು ವಿವರಿಸಿದ್ದಾರೆ.



॥ ಸಂಹಿತಾಪಾಠಃ ॥

ಮಾಹಂ ಮಘೋನೋ ವರುಣ ಪ್ರಿಯಸ್ಯ ಭೂರಿದಾವ್ನ ಆ ವಿದಂ ಶೂನಮಾಪೇಃ ।
ಮಾ ರಾಯೋ ರಾಜನ್ತ್ಸುಯಮಾದವ ಸ್ಥಾಂ ಬೃಹದ್ವದೇಮ ವಿದಥೇ ಸುವೀರಾಃ ॥

ಪದಪಾಠಃ ॥

ಮಾ । ಅಹಂ । ಮಘೋನಃ । ವರುಣ । ಪ್ರಿಯಸ್ಯ । ಭೂರಿऽದಾವ್ನಃ । ಆ । ವಿದಂ । ಶೂನಂ । ಆಪೇಃ । ಮಾ । ರಾಯಃ । ರಾಜನ್ । ಸುऽಯಮಾತ್ । ಅವ । ಸ್ಥಾಂ । ಬೃಹತ್ । ವದೇಮ । ವಿದಥೇ । ಸುऽವೀರಾಃ ॥ ೧೭ ॥

॥ ಸಾಯಣಭಾಷ್ಯಂ ॥

ಹೇ ವರುಣ ಮಘೋನೋ ಧನವತಃ ಪ್ರಿಯಸ್ಯಾನುಕೂಲಸ್ಯ ಭೂರಿದಾವ್ನೋ ಭೂರೇರ್ಬಹುಲಸ್ಯ ದಾತುರಾಢ್ಯಸ್ಯಾಹಂ ಮಾ ಆವಿದಂ । ಮಾವೇದಯಾನಿ । ಆವೇದನಂ ವಿಜ್ಞಾಪನಂ ಮಾ ಕರವಾಣಿ । ಕಿಂ ತದನಾವೇದ್ಯಂ । ಆಪೇರ್ಜ್ಞಾತೇಃ ಶೂನಂ ಶೂನ್ಯಂ ದಾರಿದ್ರ್ಯಂ ॥ ವರ್ಣಲೋಪಶ್ಛಾಂದಸಃ ॥ ಯದ್ವಾ ಶೂನಂ ಗತಂ ಪ್ರಾಪ್ತಂ ದಾರಿದ್ರ್ಯಂ ॥ ಟುಓಶ್ವಿ ಗತಿವೃದ್ಧ್ಯೋಃ । ಶ್ವೀದಿತೋ ನಿಷ್ಠಾಯಾಮಿತೀಟ್ಪ್ರತಿಷೇಧಃ । ಯಜಾದಿತ್ವಾತ್ಸಂಪ್ರಸಾರಣಂ । ಓದಿತಶ್ಚೇತಿ ನಕಾರಃ । ವೃಷಾದಿತ್ವಾದಾದ್ಯುದಾತ್ತತ್ವಂ ॥ ಏತದುಕ್ತಂ ಭವತಿ । ಅಸ್ಮದೀಯಾಃ ಪುತ್ರಾದಯಃ ಕ್ಷುಧಿತಾ ಇತಿ ಪ್ರಭುಪ್ರಭುಸಮೀಪೇऽಭಿಧಾಯ ಯಾಚಮಾನೋ ಮಾ ಭೂವಮಿತಿ । ಹೇ ರಾಜನ್ ಸುಯಮಾತ್ । ಸುಷ್ಠು ನಿಯಮ್ಯತೇऽನೇನ ಪುರುಷೋ ಗೃಹ ಇತಿ ಸುಯಮಃ ॥ ಈಷದ್ದುಃಸುಷ್ವಿತಿ ಖಲು ॥ ತಾದೃಶಾದ್ರಾಯೋ ಧನಾನ್ಮಾವಸ್ಥಾಂ । ಅವಯುತ್ಯ ಸ್ಥಿತೋ ಮಾ ಭೂವಂ । ವಯಂ ಸುವೀರಾಃ ಶೋಭನಪುತ್ರಾ ವಿದಥೇ ಯಜ್ಞೇ ಗೃಹೇ ವರ್ತಮಾನಾಃ ಸಂತೋ ಬೃಹತ್ ಪ್ರೌಢಂ ಸ್ತೋತ್ರಂ ವದೇಮ । ಉಚ್ಚಾರಯಾಮ ॥

॥ ಪ್ರತಿಪದಾರ್ಥ ॥

**ವರುಣ**—ಎಲೈ ವರುಣನೇ । **ಮಘೋನಃ**—ಧನವಂತನೂ । **ಪ್ರಿಯಸ್ಯ**—ಅನುಕೂಲವಾಗಿರುವವನೂ । **ಭೂರಿದಾವ್ನಃ**—ಪ್ರಭೂತವಾಗಿ ದಾನಮಾಡುವವನೂ ಆದ ಆಢ್ಯನ ಮುಂದೆ । **ಅಹಂ**—ನಾನು । **ಆಪೇಃ**—ನನ್ನ ಸಮೀಪವಾದ ಬಂಧುವಿನ । **ಶೂನಂ**—ದಾರಿದ್ರ್ಯವನ್ನು । **ಮಾ ಆ ವಿದಂ**—ಹೇಳಿಕೊಳ್ಳದಂತೆ ಆಗಲಿ । **ರಾಜನ್**—ಪ್ರಭುವಾದ ವರುಣನೇ । **ಸುಯಮಾತ್**—ನಿಯಮಕ್ಕೆ ಒಳಪಟ್ಟಂತೆ ಶೇಖರಿಸಿದ । **ರಾಯಃ**—ಧನದಿಂದ । **ಮಾ ಅವ ಸ್ಥಾಂ**—ಶೂನ್ಯನಾಗದಂತಾಗಲಿ । **(ವಯಂ**—ನಾವು) । **ಸುವೀರಾಃ**—ಶ್ರೇಷ್ಠವಾದ ಪುತ್ರರೊಡಗೂಡಿ । **ವಿದಥೇ**—ಯಜ್ಞಗೃಹದಲ್ಲಿ । **ಬೃಹತ್**—ಪ್ರೌಢವಾದ ಸ್ತೋತ್ರವನ್ನು । **ವದೇಮ**—ಪಠಿಸುತ್ತೇವೆ.

॥ ಭಾವಾರ್ಥ ॥

ಎಲೈ ವರುಣನೇ, ಧನವಂತನೂ, ಅನುಕೂಲವಾಗಿರುವವನೂ, ಪ್ರಭೂತವಾಗಿ ದಾನಮಾಡುವವನೂ ಆದ ಆಢ್ಯನ ಮುಂದೆ ನಾನು ನನ್ನ ಪುತ್ರಾದಿ ಸಮೀಪವಾದ ಬಂಧುಗಳು ದಾರಿದ್ರ್ಯದಿಂದ ಕಷ್ಟವನ್ನನುಭವಿಸುತ್ತಾರೆಂದು ಹೇಳಿ ಅವನಿಂದ ಧನಯಾಚನೆಯನ್ನು ಮಾಡದಂತಾಗಲಿ. ನಿಯಮಕ್ಕೆ ಒಳಪಟ್ಟಂತೆ ಶೇಖರಿಸಿದ ಧನದಿಂದ ಶೂನ್ಯನಾಗದಂತಾಗಲಿ- ನಾವು ಶ್ರೇಷ್ಠವಾದ ಪುತ್ರರೊಡಗೂಡಿ ಯಜ್ಞಗೃಹದಲ್ಲಿ ಪ್ರೌಢವಾದ ಸ್ತೋತ್ರವನ್ನು ಪಠಿಸುತ್ತೇವೆ.

## English Translation.

May I never (have to) represent, Varuna, the destitution of a (once) opulent, dear, and munificent kinsman : may I never, royal Varuna, be devoid of well-regulated riches : (and) may we, blessed with excellent descendants, worthily glorify you at this sacrifice.

॥ ವಿಶೇಷವಿಷಯಗಳು ॥

**ವರುಣ** ಎಂಬ ಪದದಿಂದ ಇಲ್ಲಿ ಆದಿತ್ಯನು ಸಂಬೋಧಿತನಾಗಿದ್ದಾನೆ. ವರುಣನೂ ದ್ವಾದಶಾದಿತ್ಯರಲ್ಲಿ ಒಬ ನೆಂದು ಹಿಂದೆ ವಿವೃತವಾಗಿದೆ.

**ಮಘೋನಃ—ಧನವತಃ** । ಮಘ ಶಬ್ದವು ಧನನಾಮಗಳಲ್ಲಿ ಯಾಸ್ಕರಿಂದ (ನಿ. ೩-೯) ಪಠಿತವಾಗಿದೆ. ಧನವುಳ್ಳವನೆಂದು ಅರ್ಥವನ್ನು ವಿವರಿಸಿದೆ.

**ಪ್ರಿಯಸ್ಯ ಭೂರಿದಾವ್ನಃ ಆಪೇಃ ಶುನಂ ಮಾ ಆ ವಿದಂ—ಬಹುಲಸ್ಯ ದಾತುರಾಢ್ಯಸ್ಯ ಸಮೀಪೇ ಅಸ್ಮದೀಯಾಃ ಪುತ್ರಾದಯಃ ಕ್ಷುಧಿತಾ ಇತಿ ದಾರಿದ್ರ್ಯಮಭಿದಾಯ ಯಾಚಮಾನೋ ಮಾ ಭೂವಂ** । ಹಿತಕರನಾಗಿಯೂ ಪ್ರಭೂತವಾಗಿ ದಾನಮಾಡುವವನಾಗಿಯೂ ಇರುವ ಹಣಗಾರನ ಹತ್ತಿರಕ್ಕೆ ಹೋಗಿ ನಮ್ಮ ಪುತ್ರರೇ ಮೊದಲಾದವರು ದಾರಿದ್ರ್ಯದಿಂದ ಇರುವರೆಂದು ಹೇಳಿ ಧನವನ್ನು ಯಜಮಾನರಾದ ನಾವು ಯಾಚಿಸ ದಿರುವಂತೆ ಆಗಲಿ ಎಂದು ಪ್ರಾರ್ಥನೆಯು ವಿವೃತವಾಗಿದೆ.

**ಶೂನಂ—ಶೂನ್ಯಂ, ಯದ್ವಾ ಶೂನಂ ಗತಂ ಪ್ರಾಪ್ತಂ ದಾರಿದ್ರ್ಯಂ** । ಯಾವ ವಿಧವಾದ ವಸ್ತುವೂ ಇಲ್ಲದಿರುವುದು, ಅಥವಾ ಶೂನ್ಯಾವಸ್ಥೆಯನ್ನು ಹೊಂದಿಸಲರ್ಹವಾದ ದರಿದ್ರತನ (ಬಡತನ) ವೆಂದು ಅರ್ಥವು ಶೂನ ಶಬ್ದಕ್ಕೆ ವಿವೃತವಾಗಿದೆ.

**ರಾಜನ್ ಸುಯಮಾತ್ ರಾಯಃ ಮಾ ಅವಸ್ಥಾಮ್—ಸುಷ್ಠು ನಿಯಮ್ಯತೇ ಅನೇನ ಪುರುಷೋ ಗೃಹೇ ಇತಿ ಸುಯಮಃ** । ವರುಣನನ್ನು ರಾಜ ಶಬ್ದದಿಂದ ಸಂಬೋಧಿಸಿ ಈ ವರುಣನ ಅನುಗ್ರಹದಿಂದ ಯಜಮಾನ ರಾದ ನಮಗೆ ಯಾವಾಗಲೂ ಶೇಖರಿಸಿದ ಹಣವು ನಾಶವಾಗದಿರಲಿ ಎಂದು ಪ್ರಾರ್ಥಿತವಾಗಿದೆ.

ಯಜಮಾನರಾದ ನಾವು **ಬೃಹದ್ವದೇಮ ವಿದಥೇ ಸುವೀರಾಃ** ಯಜ್ಞಗಳಲ್ಲಿ ನಮ್ಮ ಉತ್ತಮರಾದ ಪುತ್ರ ರೊಡಗೂಡಿ ಸ್ತೋತ್ರಗಳನ್ನು ಪಠಿಸುತ್ತೇವೆಯಾಗಿ ನಮಗೆ ಅನುಗ್ರಹವನ್ನು ಉಂಟುಮಾಡು ಎಂದು ಪ್ರಾರ್ಥಿಸಿದೆ.



# ಇಪ್ಪತ್ತೊಂಭತ್ತನೆಯ ಸೂಕ್ತವು

**ಧೃತವ್ರತಾ ಇತಿ ಸಪ್ತರ್ಚಂ ಸಪ್ತಮಂ ಸೂಕ್ತಂ ಗಾರ್ತ್ಸಮದಸ್ಯ ಕೂರ್ಮಸ್ಯ ಗೃತ್ಸಮದಸ್ಯ ವಾರ್ಷಂ ತ್ರೈಷ್ಟುಭಂ ವೈಶ್ವದೇವಂ। ತಥಾ ಚಾನುಕ್ರಾಂತಂ। ಧೃತವ್ರತಾಃ ಸಪ್ತ ವೈಶ್ವದೇವಮಿತಿ। ಗತೋ ವಿನಿಯೋಗಃ॥**

ಅನುವಾದವು—**ಧೃತವತಾಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದಪುತ್ರನಾದ ಕೂರ್ಮನೆಂಬುವನು ಅಥವಾ ಗೃತ್ಸಮದನೇ ಋಷಿಯು; ವಿಶ್ವೇದೇವತೆಗಳು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಧೃತವ್ರತಾಃ ಸಪ್ತ ವೈಶ್ವದೇವಂ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೨೯

ಮಂಡಲ—೨ ॥ ಅನುವಾಕ—೩ ॥ ಸೂಕ್ತ—೨೯ ॥

ಅಷ್ಟಕ—೨ ॥ ಅಧ್ಯಾಯ—೭ ॥ ವರ್ಗ—೧೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥

॥ ಋಷಿಃ—ಕೂರ್ಮೋ ಗಾರ್ತ್ಸಮದೋ ಗೃತ್ಸಮದೋ ವಾ ॥

॥ ದೇವತಾ—ವಿಶ್ವೇದೇವಾಃ ॥

॥ ಛಂದಃ— ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಧೃತವ್ರತಾ ಆದಿತ್ಯಾ ಇಷಿರಾ ಆರೇ ಮತ್ಕರ್ತ ರಹಸೂರಿವಾಗಃ ।**

**ಶೃಣ್ವತೋ ವೋ ವರುಣ ಮಿತ್ರ ದೇವಾ ಭದ್ರಸ್ಯ ವಿದ್ವಾಁ ಅವಸೇ ಹುವೇ ವಃ ॥**

॥ ಪದಪಾಠಃ ॥

**ಧೃತಽವ್ರತಾಃ । ಆದಿತ್ಯಾಃ । ಇಷಿರಾಃ । ಆರೇ । ಮತ್ । ಕರ್ತ । ರಹಸೂಃಽಇವ । ಆಗಃ ।**

**ಶೃಣ್ವತಃ । ವಃ । ವರುಣ । ಮಿತ್ರ । ದೇವಾಃ । ಭದ್ರಸ್ಯ । ವಿದ್ವಾನ್ । ಅವಸೇ । ಹುವೇ । ವಃ ॥ ೧ ॥**

॥ ಸಾಯಣಭಾಷ್ಯಂ ॥

**ಹೇ ಧೃತವ್ರತಾ ಧೃತಕರ್ಮಾಣ ಆದಿತ್ಯಾ ಅದಿತೇಃ ಪುತ್ರಾ ಇಷಿರಾ ಗಮನಶೀಲಾಃ ಸರ್ವೈರಭ್ಯೇಷಣೀಯಾಃ ಪ್ರಾರ್ಥನೀಯಾ ವಾ ಹೇ ವಿಶ್ವೇ ದೇವಾ ಮದಾರೇ ಮತ್ತೋ ದೂರದೇಶ ಆಗೋ ವಿಹಿತಾನನುಷ್ಠಾನಾದಿಜನಿತಂ ಪಾಪಂ ಕರ್ತ । ಕುರುತ ॥ ಕರೋತೇಶ್ಛಾಂದಸೋ ವಿಕರಣಸ್ಯ ಲುಕ್ । ತಪ್ತನಪ್ತನಥನಾಶ್ಚೇತಿ ತಬಾದೇಶಃ ॥ ತತ್ರ ದೃಷ್ಟಾಂತಃ । ರಹಸೂರಿವ । ರಹಸ್ಯನ್ಯೈರಜ್ಞಾತೇ ಪ್ರದೇಶೇ ಸೂಯತ ಇತಿ ರಹಸೂರ್ವ್ಯಭಿಚಾರಿಣೀ । ಸಾ ಯಥಾ ಗರ್ಭಂ ಪಾತಯಿತ್ವಾ ದೂರದೇಶೇ ಪರಿತ್ಯಜತಿ ತದ್ವತ್ । ಹೇ ವರುಣ ಮಿತ್ರ ದೇವಾಶ್ಚ ವೋ ಯುಷ್ಮದೀಯಸ್ಯ ಭದ್ರಸ್ಯ ಯುಷ್ಮಾಭಿಃ ಕರಣೀಯಂ ಶ್ರೇಯೋ ವಿದ್ವಾನ್ ಜಾನನ್ನಹಂ ಶೃಣ್ವತೋ ಮತ್ಕೃತಾನಿ ಸ್ತೋತ್ರಾಣಿ ಶ್ರೋತ್ರೇಣ ಜಾನತೋ ವೋ ಯುಷ್ಮಾನ್ ಅವಸೇ ರಕ್ಷಣಾರ್ಥಂ ಹುವೇ । ಆಹ್ವಯಾಮಿ ॥**

॥ ಪ್ರತಿಪದಾರ್ಥ ॥

**ಧೃತವ್ರತಾಃ** — ಧೃತವ್ರತರಾದವರೂ । **ಇಷಿರಾಃ**—ಸರ್ವರಿಂದಲೂ ಅಪೇಕ್ಷಿತರಾದವರೂ ಆದ । **ಆದಿತ್ಯಾಃ**—ಎಲೈ ಆದಿತ್ಯರೇ । **ರಹಸೂಃ ಇವ**—ರಹಸ್ಯವಾಗಿ ಪ್ರಸವಿಸಿದ ಸ್ತ್ರೀಯು ಮಗುವನ್ನು ಯಾರಿಗೂ ಕಾಣದಂತೆ ದೂರದಲ್ಲಿ ಎಸೆದು ಬಿಡುವಂತೆ । **ಆಗಃ**—ನನ್ನ ಅನುಷ್ಠಾನಲೋಪರೂಪವಾದ ಪಾಪವನ್ನು । **ಮತ್**—ನನ್ನಿಂದ । **ಆರೇ**—ಬಹುದೂರ ಪ್ರದೇಶದಲ್ಲಿ । **ಕರ್ತ**—ಎಸೆದು ಅಗೋಚರವಾಗುವಂತೆ ಮಾಡಿರಿ । **ವರುಣ** — ಎಲೈ ವರುಣನೇ, । **ಮಿತ್ರ**—ಎಲೈ ಮಿತ್ರನೇ, । **ದೇವಾಃ**—ವಿಶ್ವೇದೇವತೆಗಳೇ, । **ವಃ**—ನಿಮ್ಮಿಂದ ಲಭಿಸತಕ್ಕ । **ಭದ್ರಸ್ಯ**—ಕಲ್ಯಾಣದ ಸ್ವರೂಪವನ್ನು । **ವಿದ್ವಾನ್**—ತಿಳಿದಿರುವ ನಾನು । **ಶೃಣ್ವತಃ**—ನನ್ನ ಸ್ತುತಿಯನ್ನು ಕೇಳತಕ್ಕ । **ವಃ**—ನಿಮ್ಮನ್ನು । **ಅವಸೇ**—ರಕ್ಷಣಾರ್ಥವಾಗಿ । **ಹುವೇ**—ಕರೆಯುತ್ತೇನೆ.

॥ ಭಾವಾರ್ಥ ॥

ಧೃತವ್ರತರಾದವರೂ, ಸರ್ವರಿಂದಲೂ ಪ್ರಾರ್ಥಿತರಾದವರೂ ಆದ ಆದಿತ್ಯರೇ, ರಹಸ್ಯವಾಗಿ ಪ್ರಸವಿಸಿದ ಸ್ತ್ರೀಯು ಮಗುವನ್ನು ಯಾರಿಗೂ ಕಾಣದಂತೆ ದೂರದಲ್ಲಿ ಎಸೆದುಬಿಡುವಂತೆ, ನನ್ನ ಅನುಷ್ಠಾನಲೋಪರೂಪವಾದ ಪಾಪವನ್ನು ನನ್ನಿಂದ ಬಹುದೂರದಲ್ಲಿ ಎಸೆದು ಅಗೋಚರವಾಗುವಂತೆ ಮಾಡಿರಿ. ಎಲೈ ವರುಣನೇ ಮಿತ್ರನೇ ಮತ್ತು ವಿಶ್ವೇದೇವತೆಗಳೇ, ನಿಮ್ಮಿಂದ ಲಭಿಸತಕ್ಕ ಕಲ್ಯಾಣದ ಸ್ವರೂಪವನ್ನು ತಿಳಿದಿರುವ ನಾನು ನನ್ನ ಸ್ತುತಿಯನ್ನು ಕೇಳತಕ್ಕ ನಿಮ್ಮನ್ನು ರಕ್ಷಣಾರ್ಥವಾಗಿ ಕರೆಯುತ್ತೇನೆ.

## English Translation

Adityas, upholders of pious works, and who are to be sought by all, remove sin far from me, like, a woman delivered in secret: knowing, Mitra, Varuna, and (universal) gods, the good that follows from your hearing our prayers, I invoke you for (our) protection.

॥ ವಿಶೇಷವಿಷಯಗಳು ॥

**ಇಷಿರಾಃ—ಗಮನಶೀಲಾಃ ಸರ್ವೈರಭ್ಯೇಷಣೀಯಾಃ ಪ್ರಾರ್ಥನೀಯಾ ವಾ** । ಸಂಚಾರಮಾಡುವ ಸ್ವಭಾವವುಳ್ಳವರು, ಸರ್ವರಿಂದಲೂ ಅಪೇಕ್ಷಿತರಾದವರು, ಎಲ್ಲರೂ ತಮ್ಮ ತಮ್ಮ ಅಭೀಷ್ಟಗಳು ನೆರವೇರುವಂತೆ ಪ್ರಾರ್ಥನೆಮಾಡಲು ಅರ್ಹರಾದವರು ಎಂದು ಅರ್ಥವನ್ನು ಮಾಡಿ, ಈ ಪದವು ಆದಿತ್ಯರಿಗೆ ವಿಶೇಷಣವಾಗಿ ಪ್ರಯುಕ್ತ ವಾಗಿದೆ ಎಂದು ಸಾಯಣರು ವಿವರಿಸಿದ್ದಾರೆ. ಯಾಸ್ಕರು **ಇಷಿರೇಣ—ಈಷಣೇನ ವಾ ಏಷಣೇನ ವಾ ಅರ್ಷಣೇನ ವಾ** (ನಿ. ೪-೭) ಎಂದು ಪದದ ಅರ್ಥವನ್ನು ವಿವರಿಸಿರುವರು. ಅದಿತಿಯ ಪುತ್ರರಾದ ವಿಶ್ವೇ ದೇವತೆಗಳು ಯಾವಾಗಲೂ ಸಂಚರಿಸುವ ಸ್ವಭಾವದಿಂದ ಇರುವರು. ಸರ್ವರಿಂದಲೂ ತಮ್ಮ ತಮ್ಮ ಕಾರ್ಯಗಳೂ ಅಥವಾ ಅಭಿಲಾಷೆಗಳು ನೆರವೇರುವುದಕ್ಕಾಗಿ ಅಪೇಕ್ಷಿತರಾದವರು, ಎಲ್ಲರಿಂದಲೂ ಪ್ರಾರ್ಥಿಸಲ್ಪಡುವವರು. ಆದುದರಿಂದ ಈ ಆದಿತ್ಯರು ಯಜಮಾನರಿಂದ ಆಚರಿತವಾದ ಯಾಗವೇ ಮೊದಲಾದ ಕರ್ಮಗಳ ಆಚರಣೆಯ ವ್ಯತ್ಯಾಸದಿಂದ ಉಂಟಾಗಿರುವ ನ್ಯೂನತೆಯ ರೂಪದಿಂದ ಇರುವ ಅಪರಾಧವನ್ನು ದೂರದಲ್ಲಿರುವಂತೆಮಾಡಲಿ ಎಂದರೆ ಮನ್ನಿಸಲಿ ಅಥವಾ ನಾಶಪಡಿಸಲಿ ಎಂದು ವಿಶ್ವೇದೇವತೆಗಳನ್ನು ಸಂಬೋಧಿಸಿ, ವಿಶ್ವೇದೇವತೆಗಳು ಅದಿತಿದೇವಿಯ ಪುತ್ರರೆಂದು ಅರ್ಥಮಾಡಿ ಹೇಳಿದೆ. ಈ ಋಕ್ಕಿನಲ್ಲಿ ಆದಿತ್ಯಾಃ ಎಂದು ಬಹುವಚನ ಪ್ರಯೋಗವಿದೆ. ಇದಕ್ಕೆ ಸಾಯಣರು **ಹೇ ಆದಿತ್ಯಾಃ ಅದಿತಿಪುತ್ರಾಃ ಹೇ ವಿಶ್ವೇ ದೇವಾಃ** ಎಂದು ಅರ್ಥವನ್ನು ವರ್ಣಿಸಿದ್ದಾರೆ ಯಾಸ್ಕರು **ವಿಶ್ವೇ ದೇವಾಃ—ಸರ್ವೇ ದೇವಾಃ** (ನಿ. ೧೨-೪೦) ಎಂದು ಅರ್ಥವನ್ನು ಹೇಳಿದ್ದಾರೆ.

**ರಹಸೂಃ ಇವ—ರಹಸಿ ಅನ್ಯೈರಜ್ಞಾತೇ ಪ್ರದೇಶೇ ಸೂಯತೆ ಇತಿ ರಹಸೂಃ ವ್ಯಭಿಚಾರಿಣೀ । ಸಾ ಯಥಾ ಗರ್ಭಂ ಪಾತಯಿತ್ವಾ ದೂರದೇಶೇ ಪರಿತ್ಯಜತಿ ತದ್ವತ್** । ಯಾರಿಗೂ ತಿಳಿಯದಂತೆ ಇರುವ, ಜನರ ಸಂಚಾರವು ಇಲ್ಲದಿರುವ ಪ್ರದೇಶದಲ್ಲಿ ಪ್ರಸವಿಸುವಳಾದುದರಿಂದ ವ್ಯಭಿಚಾರ ಮಾಡುವ ಸ್ತ್ರೀಯು ಇಲ್ಲಿ ರಹಸೂಃ ಎಂಬ ಪದದಿಂದ ವ್ಯಪದಿಷ್ಟಳಾಗಿದ್ದಾಳೆ.

ಈ ಸ್ತ್ರೀಯು ತಾನು ಪ್ರಸವಿಸಿದ ಮಗುವನ್ನು ದೂರದಲ್ಲಿ ಹಾಕುವಂತೆ ಯಜಮಾನರ ಕರ್ಮಾನನುಷ್ಠಾನ (ರೂಪವಾದ ನ್ಯೂನತೆಗಳೆಂಬ) ಅಪರಾಧಗಳು ಈ ಆದಿತ್ಯರ ಅಥವಾ ವಿಶ್ವೇದೇವತೆಗಳ ಅನುಗ್ರಹದಿಂದ ದೂರವಾಗಲಿ ಎಂದು ಪ್ರಾರ್ಥಿಸಿದೆ.

**ಮಿತ್ರ; ವರುಣ** ಎಂದೂ, **ದೇವಾಃ** ಎಂದೂ, ಅತಿದಿಪುತ್ರರನ್ನು ಸಂಬೋಧಿಸಿ, **ಭದ್ರಸ್ಯ ವಿದ್ವಾನ್—ಯುಷ್ಮಾಭಿಃ ಕರಣೀಯಂ ಶ್ರೇಯಃ ಜಾನನ್** ಈ ದೇವತೆಗಳು ಯಜಮಾನನ ವಿಷಯದಲ್ಲಿ ಅನುಗ್ರಹಿಸುವ ಶ್ರೇಯಸ್ಸಿನ ಮಹಿಮೆಯನ್ನು ತಾನು ತಿಳಿದಿರುವೆನೆಂದೂ, **ಶೃಣ್ವತಃ** ಯಜಮಾನರು ಪಠಿಸುವ ಸ್ತೋತ್ರಗಳನ್ನು ಈ ದೇವತೆಗಳೂ ಕೇಳುವ ನಿಮಿತ್ತ ಇವರನ್ನು ತನ್ನ ರಕ್ಷಣೆಗಾಗಿ ಆಹ್ವಾನಮಾಡುವೆನೆಂದೂ ವರ್ಣಿಸಿದೆ.

**ಭದ್ರಸ್ಯ**—ಈ ಶಬ್ದದ ಅರ್ಥವನ್ನು ವಿವರಿಸುವಾಗ **ಯಾಸ್ಕರು**-ಭದ್ರಂ ಭಗೇನ ವ್ಯಾಖ್ಯಾತಂ, ಎಂದು ಹೇಳಿ **ಭಜನೀಯಂ, ಭೂತಾನಾಂ ಅಭಿದ್ರವಣೀಯಂ, ಭವದ್ರಮಯತೀತಿ ವಾ, ಭಾಜನವದ್ವಾ** ಎಂದು (ನಿ. ೪-೯) ವಿವರಿಸಿದ್ದಾರೆ. ಇದರ ಅರ್ಥವು ಹಿಂದೆ ವಿವೃತವಾಗಿದೆ.



। ಸಂಹಿತಾಪಾಠಃ।

ಯೂಯಂ ದೇವಾಃ ಪ್ರಮತಿರ್ಯೂಯಮೋಜೋ ಯೂಯಂ ದ್ವೇಷಾಂಸಿ ಸನುತರ್ಯುಯೋತ ।

ಅಭಿಕ್ಷತ್ತಾರೋ ಅಭಿ ಚ ಕ್ಷಮಧ್ವಮದ್ಯಾ ಚ ನೋ ಮೃಳಯತಾಪರಂ ಚ ॥ ೨ ॥

। ಪದಪಾಠಃ ।

ಯೂಯಂ । ದೇವಾಃ । ಪ್ರಽಮತಿಃ । ಯೂಯಂ । ಓಜಃ । ಯೂಯಂ । ದ್ವೇಷಾಂಸಿ । ಸನುತಃ । ಯುಯೋತ ।

ಅಭಿಽಕ್ಷತ್ತಾರಃ । ಅಭಿ । ಚ । ಕ್ಷಮಧ್ವಂ । ಅದ್ಯ । ಚ । ನಃ । ಮೃಳಯತ । ಅಪರಂ । ಚ ॥ ೨ ॥

ಸಾಯಣಭಾಷ್ಯಂ ।

ಹೇ ದೇವಾಃ ಪ್ರಮತಿಃ ಪ್ರಕೃಷ್ಟಾ ಮತಿರ್ಯಸ್ಯ ಪ್ರಿತ್ರಾದೇಸ್ತಾದೃಶಾ ಅಪಿ ಯೂಯಮೇವ । ತಥೌಜೋ ಬಲಮಪಿ ಯೂಯಮೇವ । ಅಪಿ ಚ ಯೂಯಂ ದ್ವೇಷಾಂಸಿ ದ್ವೇಷ್ಟೄಣಿ ರಕ್ಷಃಪಿಶಾಚಾದೀನಿ । ಸನುತರಿತ್ಯವ್ಯಯಂ । ಅಂತರ್ಹಿತನಾಮೈತತ್ । ಅಂತರ್ಹಿತೇ ಪ್ರದೇಶೇ ಯುಯೋತ । ಪೃಥಕ್ಕುರುತ ॥ ಯು ಮಿಶ್ರಣಾಮಿಶ್ರಣಯೋಃ । ಛಾಂದಸಃ ಶಪಃ ಶ್ಲುಃ । ಪೂರ್ವವತ್ತಸ್ಯ ತಬಾದೇಶಃ ॥ ಅಭಿಕ್ಷತ್ತಾರೋಽಭಿತಃ ಶತ್ರೂಣಾಂ ಹಿಂಸಿತಾರೋ ಯೂಯಮಭಿ ಚ ಕ್ಷಮಧ್ವಂ । ಅಭಿಭವತ ಶತ್ರೂನ್। ಅದ್ಯಾಸ್ಮಿನ್ದಿನೇ ನೋಽಸ್ಮಾನ್ಮೃಳಯತ । ಸುಖಯತ । ಅಪರಂ ಚ ಅಪರಮಪಿ ಕಾಲಂ । ಆಗಾಮಿನ್ಯಪಿ ಕಾಲೇಽಸ್ಮಾನ್ ಮೃಳಯತ ॥

॥ ಪ್ರತಿಪದಾರ್ಥ ॥

**ದೇವಾಃ**—ಎಲೈ ದೇವತೆಗಳೇ । **ಪ್ರಮತಿಃ**—ಉತ್ತಮವಾದ ಮತಿಯು । **ಯೂಯಂ**—ನೀವೇ ಆಗಿದ್ದೀರಿ । **ಓಜಃ**—ಬಲವೂ । **ಯೂಯಂ**—ನೀವೇ । **ಯೂಯಂ**—ನೀವು । **ದ್ವೇಷಾಂಸಿ**—(ನಮ್ಮನ್ನು) ದ್ವೇಷಿಸುವ ರಾಕ್ಷಸಾದಿಗಳನ್ನು । **ಸನುತಃ**—ಕಣ್ಮರೆಯಾದ ದೂರ ದೇಶಕ್ಕೆ । **ಯುಯೋತ**—ಅಟ್ಟಿಬಿಡಿರಿ । **ಅಭಿಕ್ಷತ್ತಾರಃ**—ಸುತ್ತಲೂ ಶತ್ರುಗಳನ್ನು ಹಿಂಸಿಸತಕ್ಕ ನೀವು । **ಅಭಿ ಚ ಕ್ಷಮಧ್ವಂ**—ಅವರನ್ನು ಪೂರ್ಣವಾಗಿ ಸೋಲಿಸಿರಿ । **ಅದ್ಯ ಚ**—ಈ ದಿನವೂ । **ನಃ**—ನಮ್ಮನ್ನು । **ಮೃಳಯತ**—ಸುಖಪಡಿಸಿರಿ । **ಅಪರಂ ಚ**—ಬೇರೆ ದಿನವೂ (ಸುಖಪಡಿಸಿರಿ).

॥ ಭಾವಾರ್ಥ ॥

ಎಲೈ ದೇವತೆಗಳೇ, ಉತ್ತಮವಾದ ಮತಿಯೂ ಬಲವೂ ನೀವೂ ಆಗಿದ್ದೀರಿ. ನಮ್ಮನ್ನು ದ್ವೇಷಿಸುವ ರಾಕ್ಷಸಾದಿಗಳನ್ನು ಕಣ್ಮರೆಯಾದ ದೂರದೇಶಕ್ಕೆ ಅಟ್ಟಿಬಿಡಿರಿ. ಸುತ್ತಲೂ ಶತ್ರುಗಳನ್ನು ಹಿಂಸಿಸತಕ್ಕ ನೀವು ಅವರನ್ನು ಪೂರ್ಣವಾಗಿ ಸೋಲಿಸಿರಿ. ಈ ದಿನವೂ, ಇದರಂತೆಯೇ ಮುಂದಕ್ಕೂ ನಮ್ಮನ್ನು ಸುಖಪಡಿಸಿರಿ.

## English Translation.

You, gods, are intelligence, you are vigour: drive away the malevolent subduers (of enemies), overcome them entirely, and grant us felicity both now and in future.

॥ ವಿಶೇಷವಿಷಯಗಳು ॥

**ದೇವಾಃ**—ನಿರುಕ್ತಕಾರರು **ದೇವೋ ದಾನಾದ್ವಾ, ದೀಪನಾದ್ವಾ ದ್ಯೋತನಾದ್ವಾ, ದ್ಯುಸ್ಥಾನೋ ಭವತೀತಿ ವಾ** (ನಿ. ೭-೧೫) ಎಂದು ದೇವಪದದ ಅರ್ಥವನ್ನು ವಿವರಿಸಿದ್ದಾರೆ.

**ಓಜಃ**—ಈ ಪದವು ಯಾಸ್ಕರಿಂದ ಉದಕನಾಮಗಳಲ್ಲಿ (ನಿ. ೨-೨೪), ಬಲನಾಮಗಳಲ್ಲಿ (ನಿ. ೩-೯) ಪಠಿತವಾಗಿ, **ಓಜ ಓಜತೇರ್ವಾ ಉಬ್ಜತೇರ್ವಾ** (ನಿ. ೬-೮) ಎಂದು ವ್ಯಾಖ್ಯಾತವಾಗಿದೆ, ಇಲ್ಲಿ ಬಲವೆಂದು ಅರ್ಥವನ್ನು ಸಾಯಣರು ವರ್ಣಿಸಿದ್ದಾರೆ.

ದೇವತೆಗಳನ್ನು ಸಂಬೋಧಿಸಿ, ಈ ದೇವತೆಗಳು ಯಜಮಾನರ ವಿಷಯದಲ್ಲಿ **ಪ್ರಮತಿಃ—ಪ್ರಕೃಷ್ಟಾ ಮತಿರ್ಯಸ್ಯ ಪಿತ್ರಾದೇಃ ।** ಅತಿಶಯವಾದ ಬುದ್ಧಿಯುಳ್ಳ ತಂದೆಯೇ ಮೊದಲಾದ ರಕ್ಷಕರಾಗಿರುವರೆಂದೂ, ಈ ಯಜಮಾನರಿಗೆ ಸರ್ವವಿಧವಾದ ಈ ಪ್ರಪಂಚದ ವ್ಯವಹಾರವನ್ನು ಆಚರಿಸಲರ್ಹವಾದ ಬಲರೂಪರಾಗಿರುವರೆಂದೂ, ಈ ಯಜಮಾನರನ್ನು ಹಿಂಸೆಮಾಡುವ ರಾಕ್ಷಸರು ಅಥವಾ ಪಿಶಾಚವೇ ಮೊದಲಾದವರನ್ನು ಈ ದೇವತೆಗಳು ದೂರವಾಗಿರಿಸಲಿ ಎಂದೂ ವರ್ಣಿಸಿದೆ.

ಈ ದೇವತೆಗಳು **ಅಭಿಕ್ಷತ್ತಾರಃ—ಅಭಿತಃ ಶತ್ರೂನ್** ಹಿಂಸಿತಾರಃ—ಶತ್ರುಗಳನ್ನು ನಾಶಮಾಡುವವರಾದುದರಿಂದ ಯಜಮಾನರ ಶತ್ರುಗಳನ್ನು ನಾಶಪಡಿಸಿ, **ಅದ್ಯ ಅಪರಂ ಚ ಕಾಲಂ ಮೃಳಯತ** ಈಗಲೂ ಮುಂದಿನ ಕಾಲದಲ್ಲಿಯೂ ಕೂಡ ರಕ್ಷಿಸಲಿ ಅಥವಾ ಸುಖದಿಂದ ಇರಿಸಲಿ ಎಂದು ಪ್ರಾರ್ಥಿಸಿದೆ.

ಸಂಹಿತಾಪಾಠಃ ॥

**ಕಿಮೂ ನು ವಃ ಕೃಣವಾಮಾಪರೇಣ ಕಿಂ ಸನೇನ ವಸವ ಆಪ್ಯೇನ ।**

**ಯೂಯಂ ನೋ ಮಿತ್ರಾವರುಣಾದಿತೇ ಚ ಸ್ವಸ್ತಿಮಿಂದ್ರಾಮರುತೋ ದಧಾತ**

॥ ಪದಪಾಠಃ ॥

**ಕಿಂ । ಊಂ ಇತಿ । ನು । ವಃ । ಕೃಣವಾಮ । ಅಪರೇಣ । ಕಿಂ । ಸನೇನ । ವಸವಃ । ಆಪ್ಯೇನ ।**

**ಯೂಯಂ । ನಃ । ಮಿತ್ರಾವರುಣಾ । ಅದಿತೇ । ಚ । ಸ್ವಸ್ತಿಂ । ಇಂದ್ರಾಮರುತಃ । ದಧಾತ ॥ ೩ ॥**

॥ ಸಾಯಣಭಾಷ್ಯಂ ॥

ಹೇ ದೇವಾ ವೋ ಯುಷ್ಮಾಕಂ ನು ಅದ್ಯೇದಾನೀಂ ಕಿಮು ಕೃಣವಾಮ । ಕಿಂ ಖಲು ಕರ್ತುಂ ಶಕ್ನವಾಮ । ನ ಕಿಮಪೀತ್ಯರ್ಥಃ । ತಥಾಪರೇಣಾಪರಕಾಲಭಾವಿನಾ ಕರ್ಮಣಾ ಕಿಂ ಕರ್ತುಂ ಶಕ್ತಾಃ । ತಥಾ ಹೇ ವಸವೋ ವಾಸಯಿತಾರೋ ದೇವಾಃ ಸನೇನ ಸನಾತನೇನಾಪ್ಯೇನಾಪ್ತವ್ಯೇನ ಕರ್ಮಣಾ ಯುಷ್ಮಾಕಂ ಕಿಂ ಕರ್ತುಂ ಶಕ್ತಾಃ । ಸರ್ವದಾಪಿ ಯುಷ್ಮದನುಗುಣಂ ಪರಿಚರಣಂ ಕರ್ತುಂ ನ ಶಕ್ತಾ ಇತ್ಯರ್ಥಃ । ಹೇ ಮಿತ್ರಾವರುಣೌ ಹೇ ಅದಿತೇ ಹೇ ಇಂದ್ರಾಮರುತಃ ॥ ದೇವತಾದ್ವಂದ್ವೇ ಚೇತಿ ಪೂರ್ವಪದಸ್ಯಾನಙ್ ॥ ತೇ ಚ ಸರ್ವೇ ಯೂಯಂ ಸ್ವಸ್ತಿಮವಿನಾಶಂ ನೋಽಸ್ಮಭ್ಯಂ ದಧಾತ । ಧತ್ತ । ಪ್ರಯಚ್ಛತ ॥ ಲೋಟಿ ತಸ್ಯ ತಬಾದೇಶೇ ಙಿತ್ತ್ವಾಭಾವೇನಾತೋಲೋಪಾಭಾವಃ ॥

॥ ಪ್ರತಿಪದಾರ್ಥ ॥

(**ದೇವಾಃ**—ಎಲೈ ದೇವತೆಗಳೇ) । **ವಃ**—ನಿಮಗೆ । **ನು**—ಈಗ । **ಕಿಮು ಕೃಣವಾಮ**—ನಾವು ಏನುಮಾಡಬಲ್ಲೆವು ? (ಸಮರ್ಪಕವಾದ ರೀತಿಯಲ್ಲಿ ಪೂಜೆಯನ್ನರ್ಪಿಸಲು ಹೇಗೆ ತಾನೇ ಸಮರ್ಥರಾಗಿದ್ದೇವೆ ? । **ಅಪರೇಣ**—ಬೇರೆಕಾಲದಲ್ಲಾಗಲಿ । **ಕಿಂ**—ಯಾವ ವಿಧದಲ್ಲಿ ತಾನೇ ಸಮರ್ಪಕವಾಗಿ ಉಪಚರಿಸಬಲ್ಲೆವು ? । **ವಸವಃ**—ಎಲೈ ದೇವತೆಗಳೇ । **ಸನೇನ**—ಸನಾತನವಾದುದೂ । **ಆಪ್ಯೇನ**—ಕಾರ್ಯಕಾರಿಯಾಗತಕ್ಕದ್ದೂ ಆದ ಕರ್ಮದಿಂದ ಹೇಗೆ ತಾನೇ ನಿಮ್ಮನ್ನು ಪೂಜಿಸಬಲ್ಲೆವು ? । **ಅದಿತೇ**—ಎಲೈ ಅದಿತಿಯೇ, । **ಇಂದ್ರಾಮರುತಃ**—ಎಲೈ ಇಂದ್ರ ಮತ್ತು ಮರುದ್ದೇವತೆಗಳೇ, । **ಯೂಯಂ**—ನೀವು । **ಸ್ವಸ್ತಿಂ**—ನಾಶರಹಿತವಾದ ಕಲ್ಯಾಣವನ್ನು । **ನಃ**—ನಮಗೆ । **ದಧಾತ**—ಉಂಟುಮಾಡಿರಿ.

॥ ಭಾವಾರ್ಥ ॥

ಎಲೈ ದೇವತೆಗಳೇ ಈ ಕಾಲದಲ್ಲಾಗಲಿ ಅಥವಾ ಬೇರೆ ಕಾಲದಲ್ಲಾಗಲಿ, ನಿಮಗೆ ಸಮರ್ಪಕವಾದ ರೀತಿಯಲ್ಲಿ ನಾವು ಹೇಗೆ ತಾನೇ ಪೂಜೆಯನ್ನರ್ಪಿಸಲು ಸಮರ್ಥರಾಗಿದ್ದೇವೆ ? ಎಲೈ ದೇವತೆಗಳೇ, ಸನಾತನವಾದುದೂ, ಕಾರ್ಯಕಾರಿಯಾಗತಕ್ಕದ್ದೂ ಆದ ಕರ್ಮದಿಂದ ನಾವು ಹೇಗೆ ತಾನೆ ನಿಮ್ಮನ್ನು ಪೂಜಿಸಬಲ್ಲೆವು ? ಎಲೈ ಅದಿತಿಯೇ, ಎಲೈ ಇಂದ್ರ ಮತ್ತು ಮರುದ್ದೇವತೆಗಳೇ, ನಮಗೆ ನಾಶರಹಿತವಾದ ಕಲ್ಯಾಣವನ್ನು ಉಂಟುಮಾಡಿರಿ.

## English Translation.

What may we do for you, gods, either now, or in future: what may we do, Vasus, by perpetual and practicable (acts of devotion): Do you, Mitra, Aditi, Indra, and the Maruts, maintain our well-being.

॥ ವಿಶೇಷವಿಷಯಗಳು ॥

**ವಸವಃ—ವಾಸಯಿತಾರಃ** । ವಸು ಶಬ್ದವು ಯಾಸ್ಕರಿಂದ ಅನ್ನ (ನಿ. ೫-೧೯) ಧನ, (ನಿ. ೩-೯) ರಶ್ಮಿ, (ನಿ. ೨-೧೫) ಎಂಬ ಅರ್ಥದಲ್ಲಿ ಉಕ್ತವಾಗಿದೆ. ಇಲ್ಲಿ ಸುಖದಿಂದ ಇರುವಂತೆ ಮಾಡುವವರು ಎಂದು ವಿವೃತವಾಗಿದೆ.

ದೇವತೆಗಳನ್ನು ಸಂಬೋಧಿಸಿ, ಯಾವಾಗಲೂ ಸರ್ವರನ್ನೂ ಸುಖದಿಂದ ಇರುವ ಹಾಗೆ ಮಾಡುವ ಈ ದೇವತೆಗಳ ವಿಷಯದಲ್ಲಿ ಯಜಮಾನರು ಯಜ್ಞಾಚರಣೆಯ ಕಾಲದಲ್ಲಿ (ವರ್ತಮಾನ ಕಾಲದಲ್ಲಿ) ಯೂ ಅವರಿಗೆ ಅನುರೂಪವಾಗಿರುವ (ಪೂಜಾದಿಗಳನ್ನು) ಸೇವೆಯೇ ಮೊದಲಾದವುಗಳನ್ನು ಆಚರಿಸಲು ಅಶಕ್ತರಾಗಿರುವರೆಂದೂ, ಇದರಂತೆಯೇ ಭೂತಕಾಲ ಮತ್ತು ಭವಿಷ್ಯತ್‌ಕಾಲಗಳೆಂಬ ಕಾಲಗಳಲ್ಲಿಯೂ, ಮತ್ತು ಸರ್ವಕಾಲದಲ್ಲಿಯೂ, ತಮ್ಮ ಅಶಕ್ತಿಯನ್ನು ವ್ಯಕ್ತಗೊಳಿಸಿ, ಯಜಮಾನರ ಈ ರೂಪವಾದ ಅಪರಾಧವನ್ನು ಮನ್ನಿಸಿ ದೇವತೆಗಳು ನಮಗೆ ನಾಶರಹಿತವಾದ ರಕ್ಷಣೆಯನ್ನು ಉಂಟುಮಾಡಲಿ ಎಂದು ಯಜಮಾನರ ಪ್ರಾರ್ಥನೆಯು ಉಕ್ತವಾಗಿದೆ

**ಸ್ವಸ್ತಿಂ—ಅವಿನಾಶಂ । ಸ್ವಸ್ತೀತ್ಯವಿನಾಶಿನಾಮ । ಅಸ್ತಿರಭಿಪೂಜಿತಃ ಸು ಅಸ್ತೀತಿ** (ನಿ. ೩-೨೧) ಎಂದು ಯಾಸ್ಕರಿಂದ ವ್ಯಾಖ್ಯಾತವಾಗಿದೆ. ಸಾಯಣರು ನಾಶವಿಲ್ಲದುದು ಎಂದು ಅರ್ಥವನ್ನು ಹೇಳಿದ್ದಾರೆ.

ಸಂಹಿತಾಪಾಠಃ ॥

**ಹಯೋ ದೇವಾ ಯೂಯಮಿದಾಪಯಃ ಸ್ಥ ತೇ ಮೃಳತ ನಾಧಮಾನಾಯ ಮಹ್ಯಂ।**
**ಮಾ ವೋ ರಥೋ ಮಧ್ಯಮವಾಳೃತೇ ಭೂನ್ಮಾ ಯುಷ್ಮಾವತ್ಸ್ವಾಪಿಷು ಶ್ರಮಿಷ್ಮ॥**

ಪದಪಾಠಃ

**ಹಯೋ । ದೇವಾಃ । ಯೂಯಂ । ಇತ್ । ಆಪಯಃ । ಸ್ಥ । ತೇ । ಮೃಳತ । ನಾಧಮಾನಾಯ । ಮಹ್ಯಂ।**
**ಮಾ । ವಃ । ರಥಃ । ಮಧ್ಯಮಽವಾಟ್ । ಋತೇ । ಭೂತ್ । ಮಾ । ಯುಷ್ಮಾವತ್ಽಸು । ಆಪಿಷು । ಶ್ರಮಿಷ್ಮ ॥ ೪ ॥**

॥ ಸಾಯಣಭಾಷ್ಯಂ ॥

**ಹಯೋ ದೇವಾಃ ॥ ಛಾಂದಸೋ ವರ್ಣೋಪಜನಃ ॥ ಹೇ ದೇವಾಃ ಯೂಯಮಿತ್ ಯೂಯಮೇವಾಪಯೋ ಧನಸ್ಯ ಪ್ರಾಪಯಿತಾರೋ ಬಂಧವಃ ಸ್ಥ । ಭವಥ । ತೇ ಯೂಯಂ ನಾಧಮಾನಾಯಾಭಿಮತಂ ಫಲಂ ಯಾಚಮಾನಾಯ ಮಹ್ಯಂ ಸ್ತೋತ್ರೇ ಮೃಳತ। ಸುಖಯತ। ತಥಾ ವೋ ಯುಷ್ಮಾಕಂ ರಥ ಋತೇಽಸ್ಮದೀಯೇ ಯಜ್ಞೇ ನಿಮಿತ್ತಭೂತೇ ಮಧ್ಯಮವಾಟ್ ಮಾ ಭೂತ್ । ಮಧ್ಯಮೇನ ಮಂದಗಮನೇನ ವಾಹಕೋ ಮಾ ಭೂತ್ । ಶೀಘ್ರಂ ಯುಷ್ಮಾನ್ವಹತ್ವಿತ್ಯರ್ಥಃ । ವಯಂ ಯುಷ್ಮಾವತ್ಸು ಯುಷ್ಮತ್ಸದೃಶೇಷ್ವಾಪಿಷು ಬಂಧುಷು ಸತ್ಸು ಮಾ ಶ್ರಮಿಷ್ಮ । ಶ್ರಾಂತಾ ಮಾ ಭೂಮ ॥ ವತುಪ್ಪ್ರಕರಣೇ ಯುಷ್ಮದಸ್ಮದ್ಭ್ಯಾಂ ಛಂದಸಿ ಸಾದೃಶ್ಯ ಉಪಸಂಖ್ಯಾನಮಿತಿ ವತುಪ್ । ಆ ಸರ್ವನಾಮ್ನ ಇತ್ಯಾತ್ವಂ ॥**

॥ ಪ್ರತಿಪದಾರ್ಥ ॥

**ಹಯೇ ದೇವಾಃ**—ಎಲೈ ದೇವತೆಗಳೇ | **ಯೂಯಮಿತ್**—ನೀವೇನೇ | **ಆಪಯಃ**—ಧನದಾತರಾದ ಬಂಧುಗಳಾಗಿ | **ಸ್ಥ**—ಆಗಿದ್ದೀರಿ | **ತೇ**—ಅಂತಹ ನೀವು | **ನಾಧಮಾನಸ್ಯ**—ಇಷ್ಟಾರ್ಥವನ್ನು ಯಾಚಿಸತಕ್ಕ **ಮಹ್ಯಂ**—ನನಗೆ | **ಮೃಳತ**—ಸುಖವನ್ನುಂಟುಮಾಡಿರಿ | **ವಃ**—ನಿಮ್ಮ | **ರಥಃ**—ರಥವು | **ಋತೇ**—ನಮ್ಮ ಯಜ್ಞನಿಮಿತ್ತವಾಗಿ (ಬರುವಾಗ) | **ಮಧ್ಯಮವಾಟ್ ಮಾ ಭೂತ್**— ಮಂದಗಮನವುಳ್ಳದ್ದಾಗಿ ಆಗದಿರಲಿ **ಯುಷ್ಮಾವತ್ಸು**—ನಿಮ್ಮಂತಹ | **ಆಪಿಷು**—ಬಂಧುಗಳಿರುವಾಗ | **ಮಾ ಶ್ರಮಿಷ್ಮ**—ನಮಗೆ ಯಾವಾಗಲೂ ಶ್ರಮವಾಗದಿರಲಿ.

॥ ಭಾವಾರ್ಥ ॥

ಎಲೈ ದೇವತೆಗಳೇ, ನೀವೇ ನಮ್ಮ ಧನದಾತರಾದ ಬಂಧುಗಳಾಗಿ ಆಗಿದ್ದೀರಿ. ಅಂತಹ ನೀವು ಇಷ್ಟಾರ್ಥವನ್ನು ಯಾಚಿಸತಕ್ಕ ನನಗೆ ಸುಖವನ್ನುಂಟುಮಾಡಿರಿ. ನಿಮ್ಮ ರಥವು ನಮ್ಮ ಯಜ್ಞನಿಮಿತ್ತವಾಗಿ ಬರುವಾಗ ಮಂದಗಮನವುಳ್ಳದ್ದಾಗಿ ಆಗಿರದೇ ಶೀಘ್ರವಾಗಿ ಬರಲಿ. ನಿಮ್ಮಂತಹ ಬಂಧುಗಳಿರುವಾಗ ನಮಗೆ ಯಾವಾಗಲೂ ಶ್ರಮವೇ ಆಗದಿರಲಿ.

## Englis Translation.

O gods, you, verily, are our kinsmen : being so, grant felicity to me your suppliant; let not your chariot be tardy in coming to the sacrifice; let us never be weary of relatives such as you are.

॥ ವಿಶೇಷವಿಷಯಗಳು ॥

**ಹಯೇ ದೇವಾಃ ಯೂಯಮಿತ್ ಆಪಯಃ ಸ್ಥ— ಯೂಯಮೇವ ಧನಸ್ಯ ಪ್ರಾಪಯಿತಾರೋ ಬಂಧವೋ ಭವಥ** | ಇಲ್ಲಿ ಇತ್ ಎಂಬ ಉಪಸರ್ಗಕ್ಕೆ ಏವ ಎಂಬ ಅವಧಾರಣಾರ್ಥವನ್ನು ಹೇಳಿದೆ. ಆಪಯಃ ಎಂಬ ಪದಕ್ಕೆ ಧನವನ್ನು ಕೊಡುವ ಬಂಧುಗಳೆಂದು ಅರ್ಥವನ್ನೂ ವರ್ಣಿಸಿದೆ. ಹಯೇ ಎಂಬ ನಿಪಾತವು ಸಂಬೋಧನೆಯ ವಾಚಕವಾಗಿದೆ. ದೇವತೆಗಳನ್ನೂ ಸಂಬೋಧಿಸಿ ಯಜಮಾನರು ದೇವತೆಗಳೇ ತಮಗೆ ಧನ ಪ್ರಾಪಕರಾದ ಬಂಧುಗಳೆಂದು ತಿಳಿದಿರುವರೆಂದು ವರ್ಣಿಸಿ, ಯಜಮಾನರಿಗೆ ಬಂಧುಗಳಾಗಿರುವ ದೇವತೆಗಳು **ನಾಧಮಾನಾಯ ಮಹ್ಯಂ ಮೃಳತ** ಇಷ್ಟವಾದ ಪ್ರಯೋಜನಗಳನ್ನು ಬೇಡುವವನಾಗಿಯೂ ಸ್ತುತಿಮಾಡುವವನಾಗಿಯೂ, ಇರುವ ತನಗೆ ಸುಖವನ್ನು ಅನುಗ್ರಹಿಸಲಿ ಎಂದು ಆಶಿಸಿದೆ.

**ವಃ ರಥಃ ಋತೇ ಮಧ್ಯಮವಾಟ್ ಮಾಭೂತ್—ಯುಷ್ಮಾಕಂ ರಥಃ ಅಸ್ಮದೀಯೇ ಯಜ್ಞೇ ಮಧ್ಯಮೇನ ಗಮನೇನ ವಾಹಕೋ ಮಾ ಭೂತ್ | ಶೀಘ್ರಂ ಯುಷ್ಮಾನ್ ವಹತು** | ದೇವತೆಗಳ ರಥವು ಯಜಮಾನರ ಯಜ್ಞದ ನಿಮಿತ್ತವಾಗಿ ಮಂದಗಮನವಿಲ್ಲದೆ ಜಾಗ್ರತೆಯಾಗಿ ದೇವತೆಗಳನ್ನೂ ಕರೆದುಕೊಂಡು ಬರಲಿ ಎಂದು ಪ್ರಾರ್ಥಿಸಿದೆ.

**ಯುಷ್ಮಾವತ್ಸು ಆಪಿಷು ಮಾ ಶ್ರಮಿಷ್ಮ—ಯುಷ್ಮತ್ಸದೃಶೇಷು ಬಂಧುಷು ಸತ್ಸು ಶ್ರಾಂತಾ ಮಾ ಭೂಮ** | ದೇವತೆಗಳಂತಿರುವ ಬಂಧುಗಳೇ ಇರುವಾಗ ಯಜಮಾನರಾದ ನಾವು ಯಾವ ವಿಧವಾದ ಶ್ರಮವೂ ಇಲ್ಲದಿರುವಂತೆ ಇರುವ ಸ್ಥಿತಿಯು ಪ್ರಾರ್ಥಿತವಾಗಿದೆ.

॥ ಸಂಹಿತಾಪಾಠಃ ॥

ಪ್ರ ವ ಏಕೋ ಮಿಮಯ ಭೂರ್ಯಾಗೋ ಯನ್ಮಾ ಪಿತೇವ ಕಿತವಂ ಶಶಾಸ ।
ಆರೇ ಪಾಶಾ ಆರೇ ಅಘಾನಿ ದೇವಾ ಮಾ ಮಾಧಿ ಪುತ್ರೇ ವಿಮಿವ ಗ್ರಭೀಷ್ಟ ॥೫॥

॥ ಪದಪಾಠಃ ॥

ಪ್ರ । ವಃ । ಏಕಃ । ಮಿಮಯ । ಭೂರಿ । ಆಗಃ । ಯತ್ । ಮಾ । ಪಿತಾಽಇವ । ಕಿತವಂ । ಶಶಾಸ ।
ಆರೇ । ಪಾಶಾಃ । ಆರೇ । ಅಘಾನಿ । ದೇವಾಃ । ಮಾ । ಮಾ । ಅಧಿ । ಪುತ್ರೇ । ವಿಂಽಇವ । ಗ್ರಭೀಷ್ಟ ॥ ೫॥

॥ ಸಾಯಣಭಾಷ್ಯಂ ॥

ಹೇ ದೇವಾ ವೋ ಯುಷ್ಮಾಕಂ ಮಧ್ಯೇಽಹಮೇಕಃ ಸನ್ ಭೂರಿ ಬಹುಲಮಾಗಃ ಪಾಪಂ ಪ್ರ ಮಿಮಯ । ಅಹಂ ಪ್ರಕರ್ಷೇಣಾಹಿಂಸಿಷಂ । ಕಥಮಸ್ಮಾಕಂ ಮಧ್ಯೇ ತ್ವಮೇವ ಇತಿ ಚೇದುಚ್ಯತೇ। ಯದ್ಯಸ್ಮಾನ್ಮಾಂ ಪಿತೇವ ಕಿತವಂ ಯಥಾಪಥಪ್ರವೃತ್ತಂ ಪುತ್ರಂ ಪಿತಾನುಶಾಸ್ತಿ ತಥಾ ಶಶಾಸ। ಅನು-ಶಿಷ್ಟಂ ಚಕೃಢ್ವೇ ॥ ಶಾಸು ಅನುಶಿಷ್ಟಾವಿತ್ಯಸ್ಮಾಲ್ಲಿಟಿ ಮಧ್ಯಮಸ್ಯ ರೂಪಂ ॥ ಅಪಿ ಚ ಹೇ ದೇವಾ ಯುಷ್ಮದೀಯಾಃ ಪಾಶಾ ಆರೇಽಸ್ಮತ್ತೋ ದೂರದೇಶೇ ಸಂತು । ಅಘಾನಿ ಪಾಪಾನಿ ಚಾರೇ ಸಂತು । ಮಾ ಮಾಧಿ ಪುತ್ರೇ ॥ ಅಧಿಃ ಸಪ್ತಮ್ಯರ್ಥಾನುವಾದೀ ॥ ಪುತ್ರೇ ಪಶ್ಯತಿ ಸತಿ ಪಿತರಂ ಸಂತಂ ವಿಮಿವ ಪಕ್ಷಿಣಮಿವ ವ್ಯಾಧೋ ಮಾ ಗ್ರಭೀಷ್ಟ। ಮಾ ಗೃಹ್ಣೀಧ್ವಂ ॥ ಮಾಙಿ ಲುಙಿ ಹೃಗ್ರಹೋರ್ಭ ಇತಿ ಭತ್ವಂ ॥

॥ ಪ್ರತಿಪದಾರ್ಥ ॥

**ದೇವಾಃ**—ಎಲೈ ದೇವತೆಗಳೇ, । **ವಃ**—ನಿಮ್ಮ ವಿಷಯದಲ್ಲಿ । **ಏಕಃ**—ನಾನೊಬ್ಬನೇ ಆಗಿದ್ದು । **ಭೂರಿ**—ಅಧಿಕವಾದ । **ಆಗಃ**—ಪಾಪವನ್ನು । **ಪ್ರ ಮಿಮಯ**—ಮಾಡಿದ್ದೇನೆ । **ಯತ್**—ಯಾವ ಸ್ವಾತಂತ್ರ್ಯದಿಂದಲೂ ಪ್ರೀತಿಯಿಂದಲೂ । **ಪಿತಾ**—ತಂದೆಯು । **ಕಿತವಂ ಇವ**—ಅಸನ್ಮಾರ್ಗದಲ್ಲಿರುವ ಪುತ್ರನ ತಪ್ಪನ್ನು ತಿದ್ದಿ ಸನ್ಮಾರ್ಗದಲ್ಲಿ ಪ್ರೇರಿಸುವನೋ (ಅದರಂತೆ ನೀವೂ ಸಹ)। **ಮಾ**—ನನ್ನನ್ನು । **ಶಶಾಸ**—ಸರಿಯಾಗಿ ತಿದ್ದಿ ಸನ್ಮಾರ್ಗದಲ್ಲಿ ವ್ಯವಹರಿಸುವಂತೆ ನಿರ್ದೇಶಿಸಿ । **ಪಾಶಾಃ**—ನಿಮ್ಮ ಪಾಶಗಳು । **ಆರೇ**—ನಮ್ಮಿಂದ ದೂರವಾಗಿರಲಿ । **ಅಘಾನಿ**—ಪಾಪಗಳೂ । **ಆರೇ**—ದೂರವಾಗಿರಲಿ । **ವಿಮಿವ**—(ವ್ಯಾಧನು) ಪಕ್ಷಿಗಳನ್ನು ಹಿಡಿಯುವಂತೆ । **ಪುತ್ರೇ**—ನಿಮಗೆ ಪುತ್ರರೂಪನಾದ ನನ್ನಲ್ಲಿ। **ಮಾ ಮಾ ಅಧಿ ಗ್ರೇಭಿಷ್ಟ**—ಬಂಧಕವಾದ ಪಾಶವನ್ನು ಎಸೆದು ಖಂಡಿತವಾಗಿಯೂ ನನ್ನನ್ನು ಬಂಧಿಸಬೇಡಿ

॥ ಭಾವಾರ್ಥ ॥

ಎಲೈ ದೇವತೆಗಳೇ, ನಾನೊಬ್ಬನೇ ಆಗಿದ್ದು ನಿಮ್ಮಲ್ಲಿ ಅಧಿಕವಾದ ಪಾಪವನ್ನು ಆಚರಿಸಿದ್ದೇನೆ ಯಾವ ಸ್ವಾತಂತ್ರ್ಯದಿಂದಲೂ, ಅಭಿಮಾನದಿಂದಲೂ ತಂದೆಯಾದವನು ಅಸನ್ಮಾರ್ಗದಲ್ಲಿರುವ ಪುತ್ರನ ತಪ್ಪನ್ನು ತಿದ್ದಿ ಸನ್ಮಾರ್ಗ

ದಲ್ಲಿ ಪ್ರೇರಿಸುವನೋ ಅದರಂತೆ ನೀವು ಸಹ ನನ್ನನ್ನು ಸರಿಯಾಗಿ ತಿದ್ದಿ ಸನ್ಮಾರ್ಗದಲ್ಲಿ ವ್ಯವಹರಿಸುವಂತೆ ನಿರ್ದೇಶಿಸಿ. ನಿಮ್ಮ ಪಾಶಗಳು ನಮ್ಮಿಂದ ದೂರವಾಗಿರಲಿ. ಪಾಪಗಳೂ ದೂರವಾಗಿರಲಿ. ವ್ಯಾಧನು ಪಕ್ಷಿಗಳನ್ನು ಹಿಡಿಯುವಂತೆ ನಿಮಗೆ ಪುತ್ರರೂಪನಾದ ನನ್ನಲ್ಲಿ ಬಂಧಕವಾದ ಪಾಶವನ್ನು ಎಸೆದು ಖಂಡಿತವಾಗಿಯೂ ನನ್ನನ್ನು ಬಂಧಿಸಬೇಡಿ.

## English Translation.

Alone among you, I have committed many offences, (correct them) as a father corrects a naughty (son): far from me, gods, be bonds; far from me be sins: seize not upon me (your) son as (a fowler) catches a bird.

॥ ವಿಶೇಷವಿಷಯಗಳು ॥

ಈ ಋಕ್ಕಿನ ಪೂರ್ವಾರ್ಧಕ್ಕೆ ಸಾಯಣರು ಮಾಡಿರುವ ಅರ್ಥವು ಸರಿಯಾಗಿ ಹೊಂದುವುದಿಲ್ಲ. **ವಃ ಏಕಃ ಭೂರಿ ಆಗಃ ಪ್ರಮಿಮಯ—ಯುಷ್ಮಾಕಂ ಮಧ್ಯೇ ಅಹಮೇಕಸ್ಸನ್ ಬಹುಲಂ ಪಾಪಂ ಅಹಂ ಪ್ರಕರ್ಷೇಣ ಅಹಿಂಸಿಷಂ।** ದೇವತೆಗಳನ್ನು ಸಂಭೋಧಿಸಿ—ನಾನು ಒಬ್ಬನೇ ನಿಮ್ಮ ವಿಷಯದಲ್ಲಿ ಪ್ರಭೂತವಾದ ಪಾಪಗಳನ್ನು ಆಚರಿಸಿದ್ದೇನೆ. **ಯತ್ ಮಾಂ ಪಿತೇವ ಕಿತವಂ ಶಶಾಸ-ಯಥಾ ಅಪಥಪ್ರವೃತ್ತಂ ಪುತ್ರಂ ಪಿತಾ ಅನುಶಾಸ್ತಿ ತಥಾ ಅನುಶಿಷ್ಯಂ ಚಕೃಢ್ವೇ**—ದುಷ್ಟವಾದ ಮಾರ್ಗದಲ್ಲಿರುವ ಮಗನನ್ನು ತಂದೆಯು ತಿದ್ದಿ ಸರಿಯಾದ ಮಾರ್ಗದಲ್ಲಿರುವ ಹಾಗೆ ಶಿಕ್ಷಿಸುವಂತೆ ಬಹಳ ಪಾಪಗಳನ್ನು ಆಚರಿಸಿರುವ ನನ್ನನ್ನು ನೀವು ಅನುಶಾಸನೆ ಮಾಡಿರಿ ಎಂದು ವರ್ಣಿಸಿದೆ. ಈ ಅರ್ಥವು ಅಷ್ಟು ಸಮಂಜಸವಾಗಿಲ್ಲ. ಸಾಯಣರ ಭಾಷ್ಯದಲ್ಲಿ ಇರುವ **ಯುಷ್ಮಾಕಂ ಮಧ್ಯೇ ಅಸ್ಮಾಕಂ ಮಧ್ಯೇ,** ಎಂಬಲ್ಲಿ ಮಧ್ಯೇ ಎಂಬ ಪದವನ್ನು ಬಿಟ್ಟರೆ ಒಂದು ವೇಳೆ ಸಮಂಜಸವಾಗಬಹುದು.

**ಮಾ ಮಾಧಿ ಪುತ್ರೇ ವಿಮಿವ—ಪುತ್ರೇ ಪಶ್ಯತಿ ಸತಿ ಪಿತರಂ ಸಂತಂ ಪಕ್ಷಿಣಮಿವ ವ್ಯಾಧಃ ಮಾ ಗೃಹ್ಣೀಧ್ವಂ।** ವ್ಯಾಧನು ಪಕ್ಷಿಯನ್ನು ಹಿಡಿಯುವಂತೆ ನೀವು ನಿಮ್ಮ ಪುತ್ರನಂತಿರುವ ನನ್ನಲ್ಲಿ ಪಾಶವನ್ನು ಎಸೆದು ನನ್ನನ್ನು ಬಂಧಿಸಬೇಡಿ ಎಂದೂ, **ಅಘಾನಿ ಆರೇ ಸಂತು** ನಮ್ಮ ವಿಷಯದಲ್ಲಿ ಬಂಧಕಗಳಾಗಿರುವ ಪಾಪಗಳೂ ನಮ್ಮಿಂದ ದೂರವಾಗಿರಲಿ ಎಂದೂ ದೇವತೆಗಳನ್ನು ಸಂಬೋಧಿಸಿ ಪ್ರಾರ್ಥಿಸಿದೆ.



॥ ಸಂಹಿತಾಪಾಠಃ ॥

ಅರ್ವಾಂಚೋ ಅದ್ಯಾ ಭವತಾ ಯಜತ್ರಾ ಆ ವೋ ಹಾರ್ದಿ ಭಯಮಾನೋ
ವ್ಯಯೇಯಂ ।
ತ್ರಾಧ್ವಂ ನೋ ದೇವಾ ನಿಜುರೋ ವೃಕಸ್ಯ ತ್ರಾಧ್ವಂ ಕರ್ತಾದವಪದೋ ಯಜತ್ರಾಃ॥

॥ ಪದಪಾಠಃ ॥

ಅರ್ವಾಂಚಃ । ಅದ್ಯ । ಭವತ । ಯಜತ್ರಾಃ । ಆ । ವಃ । ಹಾರ್ದಿ । ಭಯಮಾನಃ । ವ್ಯಯೇಯಂ ।
ತ್ರಾಧ್ವಂ । ನಃ । ದೇವಾಃ । ನಿಽಜುರಃ । ವೃಕಸ್ಯ । ತ್ರಾಧ್ವಂ । ಕರ್ತಾತ್ । ಅವಽಪದಃ । ಯಜತ್ರಾಃ ॥

॥ ಸಾಯಣಭಾಷ್ಯಂ ॥

**ಹೇ ಯಜತ್ರಾ ಯಷ್ಟವ್ಯಾ ದೇವಾ ಅದ್ಯೇದಾನೀಮರ್ವಾಂಚೋಽಸ್ಮದಭಿಮುಖಾ ಭವತ । ವೋ ಯುಷ್ಮಾಕಂ ಹಾರ್ದಿ ಹೃದ್ಯವಸ್ಥಿತಂ ರಕ್ಷಣಂ ಭಯಮಾನೋ ಬಿಭ್ಯದಹಮಾವ್ಯಯೇಯಂ । ಅಭಿಮುಖ್ಯೇನ ಪ್ರಾಪ್ನುಯಾಂ ॥ ವ್ಯಯ ಗತೌ ಭ್ವಾದಿಕಃ ॥ ಹೇ ದೇವಾ ವೃಕಸ್ಯ ತಸ್ಕರಸ್ಯಾರಣ್ಯ-ಶುನೋ ವಾ ಸಂಬಂಧಿನೋ ನಿಜುರೋ ನಿಹನನಾತ್॥ ಜೂರೀ ಹಿಂಸಾರ್ಥಃ । ಅಸ್ಮಾತ್ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಛಾಂದಸೋ ಹ್ರಸ್ವಃ ॥ ನೋಽಸ್ಮಾನ್ ತ್ರಾಧ್ವಂ । ತ್ರಾಯಧ್ವಂ ॥ ತಥಾ ಹೇ ಯಜತ್ರಾ ಅವಪದ ಆಪದಃ ಕರ್ತಾತ್ಕರ್ತುಃ ಸಕಾಶಾತ್ ತ್ರಾಧ್ವಂ । ತ್ರಾಯಧ್ವಂ ॥**

॥ ಪ್ರತಿಪದಾರ್ಥ ॥

**ಯಜತ್ರಾಃ**— ಯಜ್ಞಾರ್ಹರಾದ ದೇವತೆಗಳೇ । **ಅದ್ಯ**— ಈ ಯಾಗಕಾಲದಲ್ಲಿ । **ಅರ್ವಾಂಚಃ**— ನಮ್ಮ ಅಭಿಮುಖವಾಗಿ । **ಭವತ**— ಇರಿ । **ವಃ**— ನಿಮ್ಮ । **ಹಾರ್ದಿ**— ಮಮತಾಪೂರ್ವಕವಾದ ರಕ್ಷಣವನ್ನು । **ಭಯಮಾನಃ**— ಭೀತನಾದ ನಾನು । **ಆ ವ್ಯಯೇಯಂ**— ಪೂರ್ಣವಾಗಿ ಪಡೆಯುವಂತಾಗಲಿ । **ದೇವಾಃ**— ಎಲೈ ದೇವತೆಗಳೇ । **ವೃಕಸ್ಯ**— ತಸ್ಕರನ ಅಥವಾ ತೋಳನ । **ನಿಜುರಃ**— ಹಿಂಸೆಯಿಂದ । **ನಃ**— ನಮ್ಮನ್ನು । **ತ್ರಾಧ್ವಂ**— ರಕ್ಷಿಸಿರಿ । **ಯಜತ್ರಾಃ**— ಪೂಜ್ಯರಾದ ದೇವತೆಗಳೇ । **ಅವಪದಃ**— ಆಪತ್ತುಗಳನ್ನು । **ಕರ್ತಾತ್**— ಉಂಟುಮಾಡತಕ್ಕವನಿಂದ । **ತ್ರಾಧ್ವಂ**— ರಕ್ಷಿಸಿರಿ.

॥ ಭಾವಾರ್ಥ ॥

ಯಜ್ಞಾರ್ಹರಾದ ಎಲೈದೇವತೆಗಳೇ, ಈ ಯಾಗಕಾಲದಲ್ಲಿ ನಮ್ಮ ಅಭಿಮುಖವಾಗಿರಿ. ನಿಮ್ಮ ಮಮತಾಪೂರ್ವಕವಾದ ರಕ್ಷಣವನ್ನು ಭೀತನಾದ ನಾನು ಪೂರ್ಣವಾಗಿ ಪಡೆಯುವಂತಾಗಲಿ ಎಲೈ ಪೂಜ್ಯರಾದ ದೇವತೆಗಳೇ ತಸ್ಕರನ ಹಿಂಸೆಯಿಂದ ನಮ್ಮನ್ನು ರಕ್ಷಿಸಿರಿ. ಆಪತ್ಕಾರಕರಿಂದಲೂ ರಕ್ಷಿಸಿ.

## English Translation.

Adorable (deities), be present to-day, that, apprehensive of danger, I may feel sure of your hearty (support): protect us, gods, from the rapacity of the wolf: protect us, adorable (deities), from him who would work us misfortune.

॥ ವಿಶೇಷವಿಷಯಗಳು ॥

**ಯಜತ್ರಾಃ**—ಎಂಬ ಪದಕ್ಕೆ ಯಾಗಾರ್ಹರೆಂದು ಅರ್ಥವನ್ನು ವಿವರಿಸಿದೆ. ಈ ಪದದಿಂದ ಯಾಗಾರ್ಹರಾದ ದೇವತೆಗಳನ್ನು ಸಂಬೋಧಿಸಿ, ಯಜಮಾನರು ಭಯಪಡುವವರಾದ ನಿಮಿತ್ತ ಈ ದೇವತೆಗಳ ಮನಃಪೂರ್ವಕ ರಕ್ಷಣೆಯು ಯಜಮಾನರಿಗೆ ದೊರಕುವುದಕ್ಕಾಗಿ ಯಾಗಕಾಲಗಳಲ್ಲಿ ಈ ದೇವತೆಗಳ ಸಂನಿಧಿಯು ಉಂಟಾಗಲಿ ಎಂದು ಪ್ರಾರ್ಥಿಸಿದೆ. ದೇವತೆಗಳಿಂದ ಉಂಟಾಗುವ ಭಯದಿಂದ ರಕ್ಷಣೆಯನ್ನು ಪ್ರಾರ್ಥಿಸಿದ ನಂತರ ವ್ಯಕ್ತವಾಗಿ ಕಂಡು ಬರುವ ಘಾತುಕಪ್ರಾಣಿಗಳಾದ ಕಳ್ಳ, ಮತ್ತು ತೋಳ, ಇವುಗಳಿಂದಲೂ ವಿಪತ್ತನ್ನುಂಟುಮಾಡುವ ದುಷ್ಟಜನರಿಂದಲೂ ಯಜಮಾನರಿಗೆ ರಕ್ಷಣೆಯು (ಇಲ್ಲಿ) ಪ್ರಾರ್ಥಿತವಾಗಿದೆ.

**ವೃಕಸ್ಯ—ತಸ್ಕರಸ್ಯ ಅರಣ್ಯಶುನೋ ವಾ ।** ವೃಕ ಪದಕ್ಕೆ ಅನೇಕಾರ್ಥಗಳಿರುವುದನ್ನು ಹಿಂದೆ ವಿವರಿಸಿದೆ. ಇಲ್ಲಿ ಕಳ್ಳ ಅಥವಾ ತೋಳ (ಕಾಡುನಾಯಿ) ಇವೇ ಮೊದಲಾದ ಹಿಂಸೆಮಾಡುವ ಪ್ರಾಣಿಗಳೆಂದು ಅರ್ಥವನ್ನು ಹೇಳಿದೆ.

**ಅವಪದಃ—ಆಪದಃ ।** ಅವಪದಃ ಎಂಬ ಪದಕ್ಕೆ ವಿಪತ್ತುಗಳು ಎಂದು ಅರ್ಥವನ್ನು ವಿವರಿಸಿದೆ.

**ಯಜತ್ರಾಃ ಅದ್ಯ ಅರ್ವಾಂಚಃ ಭವತ—ಹೇ ಯಷ್ಟವ್ಯಾ ದೇವಾ ಇದಾನೀಮಸ್ಮದಭಿಮುಖಾ ಭವತ ।** ಎಲೈ ಯಾಗಾರ್ಹರಾದ ಎಂದರೆ ಯಜ್ಞದಲ್ಲಿ ಪೂಜಿಸಲ್ಪಡುವ ದೇವತೆಗಳೇ, ಈಗ ಎಂದರೆ ಈ ಯಜ್ಞ ನಡೆಯುತ್ತಿರುವ ಸಮಯದಲ್ಲಿ ನೀವು ನಮ್ಮ ಅಭಿಮುಖವಾಗಿ (ಎದುರಾಗಿ) ಬಂದು ಕುಳಿತುಕೊಳ್ಳಿರಿ ಎಂದು ಪ್ರಾರ್ಥಿಸಲಾಗಿದೆ.

**ವಃ ಹಾರ್ದಿ ಭಯಮಾನಃ ಆ ವ್ಯಯೇಯಂ—ಹೇ ದೇವಾ ಯುಷ್ಮಾಕಂ ಹೃದ್ಯವಸ್ಥಿತಂ ರಕ್ಷಣಂ ಬಿಭ್ಯದಹಮಾಭಿಮುಖ್ಯೇನ ಪ್ರಾಪ್ನುಯಾಂ ।** ಎಲೈ ದೇವತೆಗಳೇ, ನನಗುಂಟಾಗಿರುವ ಭಯವನ್ನು ಪರಿಹರಿಸಿ ನನ್ನನ್ನು ರಕ್ಷಿಸಬೇಕೆಂದು ನಿಮ್ಮ ಮನಸ್ಸಿನಲ್ಲಿರುವುದು. ಆ ರಕ್ಷಣೆಯನ್ನು ನಾನು ಹೊಂದುವಂತಾಗಲಿ.

ನನಗೆ ಉಂಟಾಗಿರುವ ಭಯವು ಯಾವುದು ಎಂದರೆ—**ಯಜತ್ರಾಃ ನಿಜುರಃ ವೃಕಸ್ಯ ಅವಪದಃ ಕರ್ತಾತ್ ತ್ರಾಧ್ವಂ ।** ಎಲೈ ಯಜ್ಞಾರ್ಹರಾದ ದೇವತೆಗಳೇ ಹಿಂಸೆಯನ್ನುಂಟುಮಾಡುವ ತೋಳ, ಕಳ್ಳ, ವಿಪತ್ತುಗಳನ್ನುಂಟುಮಾಡುವ ದುಷ್ಟಜನರು ಇವರುಗಳಿಂದ ಉಂಟಾಗಬಹುದಾದ ಭಯವನ್ನು ತಪ್ಪಿಸಿ ನನ್ನನ್ನು ರಕ್ಷಿಸಿರಿ ಎಂದು ದೇವತೆಗಳನ್ನು ಪ್ರಾರ್ಥಿಸಲಾಗಿದೆ.



॥ ಸಂಹಿತಾಪಾಠಃ ॥

**ಮಾಹಂ ಮಘೋನೋ ವರುಣ ಪ್ರಿಯಸ್ಯ ಭೂರಿದಾವ್ನ ಆ ವಿದಂ ಶೂನಮಾಪೇಃ।**

**ಮಾ ರಾಯೋ ರಾಜನ್ತ್ಸುಯಮಾದವ ಸ್ಥಾಂ ಬೃಹದ್ವದೇಮ ವಿದಥೇ ಸುವೀರಾಃ॥**

॥ ಪದಪಾಠಃ ॥

ಮಾ । ಅಹಂ । ಮಘೋನಃ । ವರುಣ । ಪ್ರಿಯಸ್ಯ । ಭೂರಿಽದಾವ್ನಃ । ಆ । ವಿದಂ । ಶೂನಂ । ಆಪೇಃ । ಮಾ । ರಾಯಃ । ರಾಜನ್ । ಸುಽಯಮಾತ್ । ಅವ । ಸ್ಥಾಂ । ಬೃಹತ್ । ವದೇಮ । ವಿದಥೇ । ಸುಽವೀರಾಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ವರುಣ ಮಘೋನೋ ಧನವತಃ ಪ್ರಿಯಸ್ಯಾನುಕೂಲಸ್ಯ ಭೂರಿದಾವ್ನೋ ಭೂರೇರ್ಬಹುಲಸ್ಯ ದಾತುರಾಢ್ಯಸ್ಯಾಹಂ ಮಾ ಆವಿದಂ । ಮಾವೇದಯಾನಿ । ಆವೇದನಂ ವಿಜ್ಞಾಪನಂ ಮಾ ಕರವಾಣಿ । ಕಿಂ ತದನಾವೇದ್ಯಂ । ಆಪೇರ್ಜ್ಞಾತೇಃ ಶೂನಂ ಶೂನ್ಯಂ ದಾರಿದ್ರ್ಯಂ ॥ ವರ್ಣಲೋಪಶ್ಛಾಂದಸಃ ॥ ಯದ್ವಾ ಶೂನಂ ಗತಂ ಪ್ರಾಪ್ತಂ ದಾರಿದ್ರ್ಯಂ ॥ ಟುಓಶ್ವಿ ಗತಿವೃದ್ಧ್ಯೋಃ । ಶ್ವೀದಿತೋ ನಿಷ್ಠಾಯಾಮಿತೀಟ್ಪ್ರತಿಷೇಧಃ । ಯಜಾದಿತ್ವಾತ್ಸಂಪ್ರಸಾರಣಂ । ಓದಿತಶ್ಚೇತಿ ನಕಾರಃ । ವೃಷಾದಿತ್ವಾದಾದ್ಯುದಾತ್ತತ್ವಂ ॥ ಏತದುಕ್ತಂ ಭವತಿ । ಅಸ್ಮದೀಯಾಃ ಪುತ್ರಾದಯಃ ಕ್ಷುಧಿತಾ ಇತಿ ಪ್ರಭುಪ್ರಭುಸಮೀಪೇಽಭಿಧಾಯ ಯಾಚಮಾನೋ ಮಾ ಭೂವಮಿತಿ । ಹೇ ರಾಜನ್ ಸುಯಮಾತ್। ಸುಷ್ಠು ನಿಯಮ್ಯತೇಽನೇನ ಪುರುಷೋ ಗೃಹ ಇತಿ ಸುಯಮಃ ॥ ಈಷದ್ದುಃಸುಷ್ವಿತಿ ಖಲು ॥ ತಾದೃಶಾದ್ರಾಯೋ ಧನಾನ್ಮಾವಸ್ಥಾಂ । ಅವಯುತ್ಯ ಸ್ಥಿತೋ ಮಾ ಭೂವಂ । ವಯಂ ಸುವೀರಾಃ ಶೋಭನಪುತ್ರಾ ವಿದಥೇ ಯಜ್ಞೇ ಗೃಹೇ ವರ್ತಮಾನಾಃ ಸಂತೋ ಬೃಹತ್ ಪ್ರೌಢಂ ಸ್ತೋತ್ರಂ ವದೇಮ । ಉಚ್ಚಾರಯಾಮ ॥

॥ ಪ್ರತಿಪದಾರ್ಥ ॥

**ವರುಣ**—ಎಲೈ ವರುಣನೇ । **ಮಘೋನಃ**—ಧನವಂತನೂ । **ಪ್ರಿಯಸ್ಯ**—ಅನುಕೂಲವಾಗಿರುವವನೂ । **ಭೂರಿದಾವ್ನಃ**—ಪ್ರಭೂತವಾಗಿ ದಾನಮಾಡುವವನೂ ಆದ ಆಢ್ಯನ ಮುಂದೆ । **ಅಹಂ**—ನಾನು । **ಆಪೇಃ**—ನನ್ನ ಸಮೀಪವಾದ ಬಂಧುವಿನ । **ಶೂನಂ**—ದಾರಿದ್ರ್ಯವನ್ನು । **ಮಾ ಆ ವಿದಂ**—ಹೇಳಿಕೊಳ್ಳದಂತೆ ಆಗಲಿ । **ರಾಜನ್**—ಪ್ರಭುವಾದ ವರುಣನೇ । **ಸುಯಮಾತ್**—ನಿಯಮಕ್ಕೆ ಒಳಪಟ್ಟಂತೆ ಶೇಖರಿಸಿದ । **ರಾಯಃ**—ಧನದಿಂದ । **ಮಾ ಅವ ಸ್ಥಾಂ**—ಶೂನ್ಯನಾಗದಂತಾಗಲಿ । (**ವಯಂ**—ನಾವು) । **ಸುವೀರಾಃ**—ಶ್ರೇಷ್ಠವಾದ ಪುತ್ರರೊಡಗೂಡಿ । **ವಿದಥೇ**—ಯಜ್ಞಗೃಹದಲ್ಲಿ । **ಬೃಹತ್**—ಪ್ರೌಢವಾದ ಸ್ತೋತ್ರವನ್ನು । **ವದೇಮ**—ಪಠಿಸುತ್ತೇವೆ.

॥ ಭಾವಾರ್ಥ ॥

ಎಲೈ ವರುಣನೇ, ಧನವಂತನೂ, ಅನುಕೂಲವಾಗಿರುವವನೂ, ಪ್ರಭೂತವಾಗಿ ದಾನಮಾಡುವವನೂ ಆದ ಆಢ್ಯನ ಮುಂದೆ ನಾನು ನನ್ನ ಪುತ್ರಾದಿ ಸಮೀಪವಾದ ಬಂಧುಗಳು ದಾರಿದ್ರ್ಯದಿಂದ ಕಷ್ಟವನ್ನನುಭವಿಸುತ್ತಾರೆಂದು ಹೇಳಿ ಅವನಿಂದ ಧನಯಾಚನೆಯನ್ನು ಮಾಡದಂತಾಗಲಿ. ನಿಯಮಕ್ಕೆ ಒಳಪಟ್ಟಂತೆ ಶೇಖರಿಸಿದ ಧನದಿಂದ ಶೂನ್ಯನಾಗದಂತಾಗಲಿ- ನಾವು ಶ್ರೇಷ್ಠವಾದ ಪುತ್ರರೊಡಗೂಡಿ ಯಜ್ಞಗೃಹದಲ್ಲಿ ಪ್ರೌಢವಾದ ಸ್ತೋತ್ರವನ್ನು ಪಠಿಸುತ್ತೇವೆ.

## English Translation.

May I never (have to) represent, Varuna, the destitution of a (once) opulent, dear, and munificent kinsman : may I never, royal Varuna, be devoid of well-regulated riches : (and) may we, blessed with excellent descendants, worthily glorify you at this sacrifice.

**ವರುಣ** ಎಂಬ ಪದದಿಂದ ಇಲ್ಲಿ ಆದಿತ್ಯನು ಸಂಬೋಧಿತನಾಗಿದ್ದಾನೆ. ವರುಣನೂ ದ್ವಾದಶಾದಿತ್ಯರಲ್ಲಿ ಒಬ್ಬನೆಂದು ಹಿಂದೆ ವಿವೃತವಾಗಿದೆ.

**ಮಘೋನಃ—ಧನವತಃ ।** ಮಘ ಶಬ್ದವು ಧನನಾಮಗಳಲ್ಲಿ ಯಾಸ್ಕರಿಂದ (ನಿ. ೩-೯) ಪಠಿತವಾಗಿದೆ. ಧನವುಳ್ಳವನೆಂದು ಅರ್ಥವನ್ನು ವಿವರಿಸಿದೆ.

**ಪ್ರಿಯಸ್ಯ ಭೂರಿದಾವ್ನಃ ಆಪೇಃ ಶುನಂ ಮಾ ಆ ವಿದಂ—ಬಹುಲಸ್ಯ ದಾತುರಾಢ್ಯಸ್ಯ ಸಮೀಪೇ ಅಸ್ಮದೀಯಾಃ ಪುತ್ರಾದಯಃ ಕ್ಷುಧಿತಾ ಇತಿ ದಾರಿದ್ರ್ಯಮಭಿದಾಯ ಯಾಚಮಾನೋ ಮಾ ಭೂವಂ ।** ಹಿತಕರನಾಗಿಯೂ ಪ್ರಭೂತವಾಗಿ ದಾನಮಾಡುವವನಾಗಿಯೂ ಇರುವ ಹಣಗಾರನ ಹತ್ತಿರಕ್ಕೆ ಹೋಗಿ ನಮ್ಮ ಪುತ್ರರೇ ಮೊದಲಾದವರು ದಾರಿದ್ರ್ಯದಿಂದ ಉಪವಾಸವಿರುವರೆಂದು ಹೇಳಿ ಧನವನ್ನು ಯಜಮಾನರಾದ ನಾವು ಯಾಚಿಸದಿರುವಂತೆ ಆಗಲಿ ಎಂದು ಪ್ರಾರ್ಥನೆಯು ವಿವೃತವಾಗಿದೆ.

**ಶೂನಂ—ಶೂನ್ಯಂ, ಯದ್ವಾ ಶೂನಂ ಗತಂ ಪ್ರಾಪ್ತಂ ದಾರಿದ್ರ್ಯಂ ।** ಯಾವ ವಿಧವಾದ ವಸ್ತುವೂ ಇಲ್ಲದಿರುವುದು, ಅಥವಾ ಶೂನ್ಯಾವಸ್ಥೆಯನ್ನು ಹೊಂದಿಸಲರ್ಹವಾದ ದರಿದ್ರತನ (ಬಡತನ) ವೆಂದು ಅರ್ಥವು ಶೂನ ಶಬ್ದಕ್ಕೆ ವಿವೃತವಾಗಿದೆ.

**ರಾಜನ್ ಸುಯಮಾತ್ ರಾಯಃ ಮಾ ಅವಸ್ಥಾಮ್—ಸುಷ್ಠು ನಿಯಮ್ಯತೇ ಅನೇನ ಪುರುಷೋ ಗೃಹೇ ಇತಿ ಸುಯಮಃ ।** ವರುಣನನ್ನು ರಾಜ ಶಬ್ದದಿಂದ ಸಂಬೋಧಿಸಿ ಈ ವರುಣನ ಅನುಗ್ರಹದಿಂದ ಯಜಮಾನರಾದ ನಮಗೆ ಯಾವಾಗಲೂ ಶೇಖರಿಸಿದ ಹಣವು ನಾಶವಾಗದಿರಲಿ ಎಂದು ಪ್ರಾರ್ಥಿತವಾಗಿದೆ.

ಯಜಮಾನರಾದ ನಾವು **ಬೃಹದ್ವದೇಮ ವಿದಥೇ ಸುವೀರಾಃ** ಯಜ್ಞಗಳಲ್ಲಿ ನಮ್ಮ ಉತ್ತಮರಾದ ಪುತ್ರರೊಡಗೂಡಿ ಸ್ತೋತ್ರಗಳನ್ನು ಪಠಿಸುತ್ತೇವೆಯಾಗಿ ನಮಗೆ ಅನುಗ್ರಹವನ್ನು ಉಂಟುಮಾಡು ಎಂದು ಪ್ರಾರ್ಥಿಸಿದೆ.



# ಮೂವತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಋತಂ ದೇವಾಯೇತ್ಯೇಕಾದಶರ್ಚಮಷ್ಟಮಂ ಸೂಕ್ತಂ ಗಾರ್ತ್ಸಮದಂ। ಅಂತ್ಯಾ ಜಗತೀ ಶಿಷ್ಟಾಸ್ತ್ರಿಷ್ಟುಭಃ। ಪ್ರ ಹಿ ಕ್ರತುಮಿತ್ಯೇಷೇಂದ್ರಾಸೋಮದೇವತಾಕಾ। ಸರಸ್ವತಿ ತ್ವಮಸ್ಮಾನಿತ್ಯರ್ಧರ್ಚಃ ಸಾರಸ್ವತಃ। ಯೋ ನಃ ಸನುತ್ಯ ಇತ್ಯೇಷಾ ಬಾರ್ಹಸ್ಪತ್ಯಾ। ಅಂತ್ಯಾ ಮಾರುತೀ। ಶಿಷ್ಟಾ ಐಂದ್ರ್ಯಃ। ತಥಾ ಚಾನುಕ್ರಾಂತಂ। ಋತಮೇಕಾದಶ ಜಗತ್ಯಂತಂ ಷಷ್ಠ್ಯೈಂದ್ರಾಸೋಮೀ ಸರಸ್ವತಿ ತ್ವಮಿತಿ ಸಾರಸ್ವತೋಽರ್ಧರ್ಚೋ ಯೋ ನೋ ಬಾರ್ಹಸ್ಪತ್ಯಾ ತಂ ವೋ ಮಾರುತೀತಿ ॥ ಗತೋ ವಿನಿಯೋಗಃ ॥**

ಅನುವಾದವು— **ಋತಂ ದೇವಾಯ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು; ಈ ಸೂಕ್ತದ ಕೊನೆಯ ಋಕ್ಕು ಜಗತೀಛಂದಸ್ಕವು; ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು ಈ ಸೂಕ್ತದಲ್ಲಿರುವ **ಪ್ರ ಹಿ ಕ್ರತುಂ** ಎಂಬ ಋಕ್ಕು (೬ ನೆಯ ಋಕ್ಕು) ಇಂದ್ರಾಸೋಮದೇವತಾಕವು; **ಸರಸ್ವತಿ ತ್ವಮಸ್ಮಾನ್** ಎಂಬ ಋಕ್ಕಿನ (೮ ನೇ ಋಕ್ಕು) ಪೂರ್ವಾರ್ಧವು ಸರಸ್ವತೀದೇವತಾಕವು; **ಯೋ ನಃ ಸನುತ್ಯ** ಎಂಬ ಋಕ್ಕು (೯ ನೇ ಋಕ್ಕು) ಬೃಹಸ್ಪತಿದೇವತಾಕವು; ಕೊನೆಯ ಋಕ್ಕು (೧೧ ನೆಯ ಋಕ್ಕು) ಮರುದ್ದೇವತಾಕವು. ಉಳಿದ ಋಕ್ಕುಗಳು (೧-೫, ೭, ೮ ರಲ್ಲಿ ಉತ್ತರಾರ್ಧ, ೧೦ ನೇ ಋಕ್ಕುಗಳ) ಇಂದ್ರದೇವತಾಕವು. ಅನುಕ್ರಮಣಿಕೆಯಲ್ಲಿ— **ಋತಮೇಕಾದಶ ಜಗತ್ಯಂತಂ ಷಷ್ಠ್ಯೈಂದ್ರಾಸೋಮೀ ಸರಸ್ವತಿ ತ್ವಮಿತಿ ಸಾರಸ್ವತೋಽರ್ಧರ್ಚೋ ಯೋ ನೋ ಬಾರ್ಹಸ್ಪತ್ಯಾ ತಂ ವೋ ಮಾರುತೀತಿ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೩೦

ಮಂಡಲ—೨ ॥ ಅನುವಾಕ—೩ ॥ ಸೂಕ್ತ—೩೦ ॥

ಅಷ್ಟಕ—೨ ॥ ಅಧ್ಯಾಯ—೭ ॥ ವರ್ಗ—೧೨, ೧೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥

॥ ಋಷಿಃ— ಗೃತ್ಸಮದಃ ॥

॥ ದೇವತಾ—೧-೫, ೭, ೮ ರಲ್ಲಿ ಉತ್ತರಾರ್ಧ, ೧೦. ಇಂದ್ರಃ।
೬. ಇಂದ್ರಾಸೋಮೌ। ೮ ರಲ್ಲಿ ಪೂರ್ವಾರ್ಧ. ಸರಸ್ವತೀ।
೯. ಬೃಹಸ್ಪತಿಃ। ೧೧. ಮರುತಃ ॥

॥ ಛಂದಃ—೧-೧೦ ತ್ರಿಷ್ಟುಪ್। ೧೧. ಜಗತೀ ॥

॥ ಸಂಹಿತಾಪಾಠಃ ॥

ಋತಂ ದೇವಾಯ ಕೃಣ್ವತೇ ಸವಿತ್ರ ಇಂದ್ರಾಯಾಹಿಘ್ನೇ ನ ರಮಂತ ಆಪಃ ।
ಅಹರಹರ್ಯಾತ್ಯಕ್ತುರಪಾಂ ಕಿಯಾತ್ಯಾ ಪ್ರಥಮಃ ಸರ್ಗ ಆಸಾಂ ॥ ೧ ॥

॥ ಪದಪಾಠಃ ॥

ಋತಂ । ದೇವಾಯ । ಕೃಣ್ವತೇ । ಸವಿತ್ರೇ । ಇಂದ್ರಾಯ । ಅಹಿಽಘ್ನೇ । ನ । ರಮಂತೇ । ಆಪಃ ।
ಅಹಃಽಅಹಃ । ಯಾತಿ । ಅಕ್ತುಃ । ಅಪಾಂ । ಕಿಯತಿ । ಆ । ಪ್ರಥಮಃ । ಸರ್ಗಃ । ಆಸಾಂ ॥ ೧ ॥

॥ ಸಾಯಣಭಾಷ್ಯಂ ॥

**ಋತಮುದಕಂ ವೃಷ್ಟಿಲಕ್ಷಣಂ ಕೃಣ್ವತೇ ಕುರ್ವತೇ ದೇವಾಯ ದ್ಯೋತಮಾನಾಯ ಸವಿತ್ರೇ ಸರ್ವಸ್ಯ ಪ್ರೇರಕಾಯಾಹಿಘ್ನೇಽಹಿಂ ವೃತ್ರಂ ಹತವತ ಇಂದ್ರಾಯ ಯಾಗಾರ್ಥಮಾಪೋ ನ ರಮಂತೇ । ತಸ್ಮಾದ್ಧೇತೋರ್ಭೀತ್ಯಾ ನೋಪರತಾ ಭವಂತಿ ॥ ತಸ್ಮಾದ್ವ್ಯತ್ಯಯೇನ ಚತುರ್ಥೀ ॥ ಅಪಿ ತು ತಾಸಾಮಪಾಮಕ್ತುಃ ಸೇಚಕಂ ಸ್ರೋತೋಽಹರಹಃ ಪ್ರತ್ಯಹಂ ಯಾತಿ । ಗಚ್ಛತಿ । ಆಸಾಂ ಪ್ರಥಮಃ ಸರ್ಗಃ ಪ್ರಾಥಮಿಕಂ ಜನ್ಮ ಕಿಯಾತ್ಯಾ । ಕಿಯತಿ ಕಾಲೇ ನಿಷ್ಪನ್ನಂ । ಆಕಾರಃ ಪ್ರಶ್ನೇ । ಕಿಂಶಬ್ದ ಆಕ್ಷೇಪೇ । ಯಾವತಿ ಕಾಲೇ ತಾ ಆಜಾಯಂತ ಸ ಕಾಲಃ ಕಿಯಾನ್ । ಕಿಂ ಪರಿಮಾಣಂ ತಸ್ಯ ಕಾಲಸ್ಯ । ನ ಕಿಮಪಿ । ನಿತ್ಯಾ ಏವ ಹಿ ತಾ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಋತಂ**—ವೃಷ್ಟಿರೂಪವಾದ ಉದಕವನ್ನು । **ಕೃಣ್ವತೇ**—ನಿರ್ಮಿಸುವವನೂ । **ದೇವಾಯ**—ದೇವತಾತ್ಮನೂ । **ಸವಿತ್ರೇ**—ಸಕಲವ್ಯವಹಾರಗಳಿಗೂ ಪ್ರೇರಕನೂ । **ಅಹಿಘ್ನೇ**—ವೃತ್ರಹಂತಕನೂ ಆದ । **ಇಂದ್ರಾಯ**—ಇಂದ್ರನನ್ನುದ್ದೇಶಿಸಿದ ಯಜ್ಞಾರ್ಥವಾಗಿ । **ಆಪಃ**—ಉದಕಗಳು । **ನ ರಮಂತೇ**—ಯಾವಾಗಲೂ ವಿಶ್ರಾಂತಿಯನ್ನು ಹೊಂದುವುದೇ ಇಲ್ಲ । **ಆಸಾಂ**—(ಅಂತಹ) ಉದಕಗಳ । **ಅಕ್ತುಃ**—ಪ್ರವಾಹವು । **ಅಹರಹಃ**—ಪ್ರತಿದಿನವೂ । **ಯಾತಿ**—ಪ್ರವಹಿಸುತ್ತದೆ । **ಆಸಾಂ**—ಅವುಗಳ । **ಪ್ರಥಮಃ**—ಮೊದಲನೆಯ । **ಸರ್ಗಃ**—ಸೃಷ್ಟಿಯು । **ಕಿಯಾತ್ಯಾ**—ಯಾವ ಕಾಲದಲ್ಲಾಯಿತು ?

॥ ಭಾವಾರ್ಥ ॥

ವೃಷ್ಟಿರೂಪವಾದ ಉದಕವನ್ನು ನಿರ್ಮಿಸುವವನೂ, ದೇವತಾತ್ಮನೂ, ಸಕಲ ವ್ಯವಹಾರಗಳಿಗೂ ಚೈತನ್ಯದಾಯಕನೂ, ವೃತ್ರಹಂತಕನೂ ಆದ ಇಂದ್ರನನ್ನುದ್ದೇಶಿಸಿದ ಯಜ್ಞಾರ್ಥವಾಗಿ ಉದಕಗಳು ಯಾವಾಗಲೂ ವಿಶ್ರಾಂತಿಯನ್ನು ಹೊಂದುವುದೇ ಇಲ್ಲ. ಅಂತಹ ಉದಕಗಳ ಪ್ರವಾಹವು ಪ್ರತಿದಿನವೂ ಪ್ರವಹಿಸುತ್ತವೆ. ಅವುಗಳ ಮೊದಲನೆಯ ಸೃಷ್ಟಿಯು ಯಾವ ಕಾಲದಲ್ಲಾಯಿತು ? ಎಂದರೆ ಅವು ಅನಾದಿಯಾಗಿವೆಯೆಂದರ್ಥ.

## English Translation.

The waters cease not (to flow in libations) to the divine Indra, the sender of rain, the animator (of all), the slayer of Ahi; day by day proceeds the current of the waters; at what period of time was their first creation.

॥ ವಿಶೇಷವಿಷಯಗಳು ॥

**ಋತಂ—ವೃಷ್ಟಿಲಕ್ಷಣಂ ಉದಕಂ** | ಋತ ಶಬ್ದಕ್ಕೆ ಸತ್ಯ, ಯಜ್ಞ, ಉದಕ ಎಂಬ ಅನೇಕಾರ್ಥಗಳು ಇದ್ದಾಗ್ಯೂ ಇಲ್ಲಿ ವೃಷ್ಟ್ಯುದಕಗಳೆಂದು ಅರ್ಥವನ್ನು ಹೇಳಿದೆ.

**ದೇವಾಯ—ದ್ಯೋತಮಾನಾಯ** | ದೇವ ಶಬ್ದಕ್ಕೆ ದಾನ, ದೀಪನ, ದ್ಯೋತನ, ದ್ಯುಸ್ಥಾನಸ್ಥಿತಿಗಳೆಂಬ ಪ್ರವೃತ್ತಿನಿಮಿತ್ತಗಳನ್ನು ಹೇಳಿರುವುದರಿಂದ ಅನೇಕ ವಿಧವಾಗಿ ನಿರ್ವಚನಗಳಲ್ಲಿ ಪ್ರಕಾಶಿಸುವವನೆಂದು ಅರ್ಥವನ್ನು ವಿವರಿಸಿದೆ.

**ಸವಿತ್ರೇ—ಸರ್ವಸ್ಯ ಪ್ರೇರಕಾಯ** | ಯಾಸ್ಕರು **ಸವಿತಾ—ಸರ್ವಸ್ಯ ಪ್ರಸವಿತಾ** (ನಿ. ೧೦–೩೨) ಎಂದು ಅರ್ಥವನ್ನು ವಿವರಿಸಿದ್ದಾರೆ. ಸರ್ವವನ್ನೂ ಪ್ರೇರಿಸುವವನೆಂದು ಅರ್ಥವನ್ನು ವರ್ಣಿಸಿದೆ.

**ಅಹಿಘ್ನೇ—ವೃತ್ರಂ ಹತವತೇ** | ಅಹಿಃ ಎಂಬ ಪದವು ಮೇಘನಾಮಗಳಲ್ಲಿ (ನಿ. ೨-೨೧) ಉದಕ ನಾಮಗಳಲ್ಲಿ (ನಿ. ೨–೨೪) ಉಕ್ತವಾಗಿದೆ. ಅಹಿರಯನಾತ್ (ನಿ. ೧೦–೪೩) ಎಂದು ವ್ಯಾಖ್ಯಾತವಾಗಿದೆ. ಇಲ್ಲಿ ವೃತ್ರಾಸುರನೆಂದು ಅರ್ಥವನ್ನು ಹೇಳಿ ವೃತ್ರಾಸುರನನ್ನು ನಾಶಮಾಡಿದವನೆಂದು ವರ್ಣಿಸಿದೆ.

**ಇಂದ್ರಾಯ**—ಇಂದ್ರ ಶಬ್ದದ ನಿರ್ವಚನವೂ (ನಿ. ೧೦–೮) ನಾನಾ ವಿಧವಾಗಿ ಉಕ್ತವಾಗಿದೆ ವೃಷ್ಟ್ಯು ದಕಗಳನ್ನು ಸೃಷ್ಟಿಮಾಡುವವನಾಗಿಯೂ, ಯಾವಾಗಲೂ ಪ್ರಕಾಶಿಸುತ್ತಿರುವವನಾಗಿಯೂ, ಸರ್ವವನ್ನೂ ಆಯಾಯ ರೀತಿಯಿಂದ ಪ್ರೇರಿಸುವವನಾಗಿಯೂ, ವೃತ್ರಾಸುರನನ್ನು ನಾಶಮಾಡಿದವನಾಗಿಯೂ ಇರುವ ಇಂದ್ರನನ್ನು ಉದ್ದೇಶಿಸಿ ಆಚರಿಸುವ ಯಾಗಕ್ಕಾಗಿ ಉದಕಗಳು ಭಯದಿಂದ ಪ್ರವಹಿಸುತ್ತಿರುತ್ತವೆ ಎಂದೂ ಈ ಉದಕಗಳ ಪ್ರವಾಹವು ಪ್ರತಿ ದಿನದಲ್ಲೂ ಸ್ವಲ್ಪವೂ ತಡೆಯಿಲ್ಲದೆ ಮುಂದಕ್ಕೆ ಪ್ರವಹಿಸುತ್ತಿದೆ ಎಂದೂ ವಿವರಿಸಿದೆ.

**ಆಸಾಂ ಸರ್ಗಃ ಪ್ರಥಮಃ ಕಿಯತ್ಯಾ**—ಈ ಉದಕಗಳ ಮೊದಲನೆಯ ಸೃಷ್ಟಿಯು **ಕಿಯತಿ ಕಾಲೇ ನಿಷ್ಪನ್ನಂ** ಯಾವಾಗ ಉಂಟಾಯಿತು ಎಂದು ಪ್ರಶ್ನೆಯನ್ನುಮಾಡಿ, **ಸಃ ಕಾಲಃ ಕಿಯಾನ್, ಕಿಂ ಪರಿಮಾಣಂ ತಸ್ಯ ಕಾಲಸ್ಯ** ಆ ಕಾಲದ ಪರಿಮಾಣವೇನು? ಎಂದು ವಿಮರ್ಶೆಮಾಡಿ, **ನ ಕಿಮಪಿ** ಆ ಕಾಲದ ಪರಿಮಾಣವು ಯಾರಿಗೂ ತಿಳಿಯುವಂತಿಲ್ಲ ಎಂದು ಉತ್ತರವನ್ನು ಹೇಳಿ, **ನಿತ್ಯಾ ಏವ ಹಿ ತಾಃ** ಆ ಉದಕಪ್ರವಾಹಗಳು ನಿತ್ಯವಾಗಿವೆ ಎಂದು ಸಮರ್ಥನೆ ಮಾಡಿದೆ.



ಸಂಹಿತಾಪಾಠಃ

ಯೋ ವೃತ್ರಾಯ ಸಿನಮತ್ರಾಭರಿಷ್ಯತ್ಪ್ರ ತಂ ಜನಿತ್ರೀ ವಿದುಷ ಉವಾಚ ।
ಪಥೋ ರದಂತೀರನು ಜೋಷಮಸ್ಮೈ ದಿವೇದಿವೇ ಧುನಯೋ ಯಂತ್ಯರ್ಥಂ ॥ ೨ ॥

॥ ಪದಪಾಠಃ

ಯಃ । ವೃತ್ರಾಯ । ಸಿನಂ । ಅತ್ರ । ಅಭರಿಷ್ಯತ್ । ಪ್ರ । ತಂ । ಜನಿತ್ರೀ । ವಿದುಷೇ । ಉವಾಚ ।
ಪಥಃ । ರದಂತೀಃ । ಅನು । ಜೋಷಂ । ಅಸ್ಮೈ । ದಿವೇಽದಿವೇ । ಧುನಯಃ । ಯಂತಿ । ಅರ್ಥಂ ॥ ೨ ॥

॥ ಸಾಯಣಭಾಷ್ಯಂ ॥

ಯಃ ಪುರುಷೋ ವೃತ್ರಾಯಾಸುರಾಯ ಸಿನಮನ್ನಮತ್ರ ಪಾಕಸ್ಥಾನ ಆಹರ್ತುಮಭರಿಷ್ಯತ್ ಸಂಪಾದಿತವಾನ್ ತಂ ಪುರುಷಂ ಜನಿತ್ರೀ ಜನಯಿತ್ರೀಂದ್ರಸ್ಯ ಮಾತಾದಿತಿರ್ವಿದುಷೇಽಭಿಜ್ಞಾಯೇಂದ್ರಾಯ ಪ್ರೋವಾಚ । ಪ್ರೋಕ್ತವತೀ । ಪ್ರವಚನಸ್ಯ ಹನನಾರ್ಥತ್ವಾತ್ ತಂ ವೃತ್ರಂ ಹತವಾನಿತಿ ಶೇಷಃ । ಅಪಿ ಚಾಸ್ಮಾ ಅಸ್ಯೇಂದ್ರಸ್ಯಾನುಜೋಷಮನುಕಾಮಮಿಚ್ಛಾಮನುಸೃತ್ಯ ಪಥೋ ಮಾರ್ಗಾನ್ ರದಂತೀರ್ವಿಲಿಖಂತ್ಯೋ ಧುನಯೋ ನದ್ಯೋ ದಿವೇದಿವೇ ಪ್ರತಿದಿವಸಮರ್ಥಮರ್ತವ್ಯಂ ಗಂತವ್ಯಂ ಸಮುದ್ರಂ ಪ್ರತಿ ಯಂತಿ । ಗಚ್ಛಂತಿ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಪುರುಷನು । **ವೃತ್ರಾಯ**—ಅಸುರನಿಗೆ । **ಸಿನಂ**—ಅನ್ನವನ್ನು । **ಅತ್ರ**—ಈ ಪಾಕಸ್ಥಾನದಲ್ಲಿ ಅರ್ಪಿಸಲು । **ಅಭರಿಷ್ಯತ್**—ಸಂಪಾದಿಸಿದನೋ, । **ತಂ**—ಆ ಪುರುಷನನ್ನು । **ಜನಿತ್ರೀ**—ಇಂದ್ರಮಾತೆಯಾದ ಅದಿತಿಯು । **ವಿದುಷೇ**—ಪ್ರಜ್ಞನಾದ ಇಂದ್ರನಿಗೆ । **ಪ್ರ ಉವಾಚ**—ತಿಳಿಸಿದಳು । **ಅಸ್ಮೈ**—ಈ ಇಂದ್ರನ । **ಅನು ಜೋಷಂ**—ಇಚ್ಛೆಯನ್ನನುಸರಿಸಿ । **ಪಥಃ**—ಮಾರ್ಗಗಳನ್ನು । **ರದಂತೀಃ**—ತೋಡಿಕೊಳ್ಳತಕ್ಕ । **ಧುನಯಃ**—ನದಿಗಳು । **ದಿವೇದಿವೇ**—ಪ್ರತಿದಿನವೂ । **ಅರ್ಥಂ**—ತಮ್ಮ ಗಮ್ಯಸ್ಥಾನವಾದ ಸಮುದ್ರಕ್ಕೆ । **ಯಂತಿ**—ಹೋಗಿ ಸೇರುತ್ತವೆ.

॥ ಭಾವಾರ್ಥ ॥

ಯಾವ ಪುರುಷನು ಅಸುರನಿಗೆ ಅನ್ನವನ್ನರ್ಪಿಸಲು ಈ ಪಾಕಸ್ಥಾನದಲ್ಲಿ ಸಂಪಾದಿಸಿದನೋ, ಆ ಪುರುಷನನ್ನು ಇಂದ್ರಮಾತೆಯಾದ ಅದಿತಿಯು ಪ್ರಾಜ್ಞನಾದ ಇಂದ್ರನಿಗೆ ತಿಳಿಸಿದಳು. ಈ ಇಂದ್ರನ ಇಚ್ಛೆಯನ್ನನುಸರಿಸಿ ಸ್ವತಃ ಮಾರ್ಗಗಳನ್ನು ತೋಡಿಕೊಳ್ಳತಕ್ಕ ನದಿಗಳು ಪ್ರತಿದಿನವೂ ತಮ್ಮ ಗಮ್ಯಸ್ಥಾನವಾದ ಸಮುದ್ರಕ್ಕೆ ಹೋಗಿ ಸೇರುತ್ತವೆ.

## English Translation

His mother, (Aditi), declared to him the man who had offered (sacrificial) food to Vritra; obedient to his pleasure, the rivers, tracing out their paths, flow day by day to their object, (the ocean).

॥ ವಿಶೇಷವಿಷಯಗಳು ॥

**ವೃತ್ರಾಯ—ಅಸುರಾಯ್ಯ ।** ವೃತ್ರಶಬ್ದಾರ್ಥವು ಯಾಸ್ಕರಿಂದ (ನಿ ೨-೧೬) ಉಕ್ತವಾಗಿದೆ. ಮೇಘನಾಮಗಳಲ್ಲಿಯೂ (ನಿ. ೨-೨೨) ಪಠಿತವಾಗಿದೆ. ಧನನಾಮಗಳಲ್ಲಿಯೂ (ನಿ. ೩-೯) ಉಕ್ತವಾಗಿದೆ. ಇಲ್ಲಿ ಅಸುರರೆಂಬ ಅರ್ಥವನ್ನು ವಿವರಿಸಿದೆ.

**ಸಿನಂ—ಅನ್ನಂ ।** ಸಿನ ಶಬ್ದವು ಅನ್ನನಾಮಗಳಲ್ಲಿ (ನಿ. ೩-೯) ಪಠಿತವಾಗಿ, **ಸಿನಮನ್ನಂ ಭವತಿ ಸಿನಾತಿ ಭೂತಾನಿ** (ನಿ. ೫-೫) ಎಂದು ವಿವೃತವಾಗಿದೆ.

**ಯಃ ವೃತ್ರಾಯ ಸಿನಂ ಅಭರಿಷ್ಯತ್ ತಂ ಜನಿತ್ರೀ ವಿದುಷೇ ಪ್ರೋವಾಚ ಯಃ ಪುರುಷಃ ಅಸುರಾಯ ಅನ್ನಮಾಹರ್ತುಂ ಸಂಪಾದಿತವಾನ್, ತಂ ಪುರುಷಂ ಇಂದ್ರಸ್ಯ ಮಾತಾ ಅದಿತಿಃ ಅಭಿಜ್ಞಾಯ ಇಂದ್ರಾಯ ಪ್ರೋವಾಚ । ತಂ ಹತವಾನ್ ।** ವೃತ್ರಾಸುರನಿಗಾಗಿ ಅನ್ನವನ್ನು ಅರ್ಪಿಸಲು ಒಬ್ಬನು ಅನ್ನವನ್ನು ಶೇಖರಿಸಿದುದನ್ನು ತಿಳಿದು ಇಂದ್ರನ ಮಾತೆಯಾದ ಅದಿತಿದೇವಿಯು ಇಂದ್ರನಿಗೆ ತಿಳಿಸಿದಳು. ಇಂದ್ರನು ಇವನನ್ನು ಕೊಂದನು ಎಂದು ವರ್ಣಿಸಿದೆ. ಈ ಉಪಾಖ್ಯಾನವು ಹಿಂದೆ ವಿವೃತವಾಗಿದೆ.

**ಅಸ್ಮೈ ಅನುಜೋಷಂ ಧುನಯಃ ದಿವೇ ದಿವೇ ಅರ್ಥಂ ಯನ್ತಿ—ಯಸ್ಯ ಇಂದ್ರಸ್ಯ ಇಚ್ಛಾಮನುಸೃತ್ಯ ನದ್ಯಃ ಪ್ರತಿದಿನಂ ಗಂತವ್ಯಂ ಸಮುದ್ರಂ ಗಚ್ಛಂತಿ ।** ಮೇಘಗಳಲ್ಲಿರುವ ಉದಕಗಳನ್ನು ವೃಷ್ಟಿರೂಪದಿಂದ ಭೂಮಿಗೆ ಬರುವಂತೆ ಮಾಡಿ ರಕ್ಷಿಸುತ್ತಿರುವ ಇಂದ್ರನ ಇಚ್ಛಾನುಸಾರವಾಗಿ ನದಿಗಳು ತಾವು ಪ್ರವಹಿಸುವ ಮಾರ್ಗಗಳನ್ನು ಕಲ್ಪಿಸಿಕೊಂಡು ಪ್ರವಹಿಸುತ್ತಾ ಪ್ರತಿದಿನವಲ್ಲಿಯೂ (ಒಂದೇ ಪ್ರದೇಶದಲ್ಲಿ ನಿಲ್ಲದೆ) ತಾವು ಹೋಗಿ ನೆಲೆಯಾಗಿ ನಿಲ್ಲುವ ಸ್ಥಾನವಾದ ಸಮುದ್ರವನ್ನು ಸೇರುತ್ತವೆ ಎಂದು ವರ್ಣಿಸಿದೆ. ಇಂದ್ರನು ಆಚರಿಸುತ್ತಿರುವ ರಕ್ಷಣೆಯೂ, ಉದಕಗಳನ್ನು ಭೂಮಿಗೆ ಒದಗಿಸುವ ನದಿಗಳ ನಿಯಾಮಕತ್ವವೂ ವರ್ಣಿತವಾಗಿರುತ್ತದೆ.

**ಧುನಯಃ** ಎಂಬ ಪದವು ನದೀನಾಮಗಳಲ್ಲಿ (ನಿ. ೨-೨೪) ಉಕ್ತವಾಗಿದೆ ಮತ್ತು **ಧುನಿಃ ಧುನೋತೇಃ** (ನಿ. ೫-೧೨) ಎಂದು ವಿವೃತವಾಗಿದೆ.



॥ ಸಂಹಿತಾಪಾಠಃ ॥

ಊರ್ಧ್ವೋ ಹ್ಯಸ್ಥಾದಧ್ಯಂತರಿಕ್ಷೇಽಧಾ ವೃತ್ರಾಯ ಪ್ರ ವಧಂ ಜಭಾರ ।

ಮಿಹಂ ವಸಾನ ಉಪ ಹೀಮದುದ್ರೋತ್ತಿಗ್ಮಾಯುಧೋ ಅಜಯಚ್ಛತ್ರುಮಿಂದ್ರಃ॥

॥ ಪದಪಾಠಃ ॥

ಊರ್ಧ್ವಃ । ಹಿ । ಅಸ್ಥಾತ್ । ಅಧಿ । ಅಂತರಿಕ್ಷೇ । ಅಧ । ವೃತ್ರಾಯ । ಪ್ರ । ವಧಂ । ಜಭಾರ ।

ಮಿಹಂ । ವಸಾನಃ । ಉಪ । ಹಿ । ಈಂ । ಅದುದ್ರೋತ್ । ತಿಗ್ಮಽಆಯುಧಃ । ಅಜಯತ್ । ಶತ್ರುಂ

ಇಂದ್ರಃ ॥ ೩ ॥

॥ ಸಾಯಣಭಾಷ್ಯಂ ॥

ಹಿರ್ಹೇತೌ । ಯಸ್ಮಾದಯಂ ವೃತ್ರೋಽಂತರಿಕ್ಷ ಊರ್ಧ್ವಃ ಸನ್ ಸರ್ವಮಾವೃತ್ಯಾಧ್ಯಸ್ಥಾತ್ । ಅಧಿಷ್ಠಿತೋಽಭೂತ್ । ಅಥ ಅತಃ ಕಾರಣಾತ್ ವೃತ್ರಾಯ ವೃತ್ರಂ ಪ್ರತಿ ವಧಂ ಹನನಸಾಧನಂ ವಜ್ರಮಿಂದ್ರಃಪ್ರಜಭಾರ । ಪ್ರಚಿಕ್ಷೇಪ ॥ ಹೃಗ್ರಹೋರ್ಭಃ ॥ ಸ ಹಿ ಸ ಖಲು ವೃತ್ರೋ ಮಿಹಂ ವೃಷ್ಟೇಃ ಸೇಕ್ತಾರಂ ಮೇಘಂ ವಸಾನ ಆಚ್ಛಾದಯನ್ ಈಮೇನಮಿಂದ್ರಮುಪಾದುದ್ರೋತ್ । ಉಪಾಗಮತ್ ॥ ದು ದ್ರು ಗತೌ । ಲಙ್ ಛಾಂದಸಃ ಶಪಃ ಶ್ಲುಃ ॥ ತಿಗ್ಮಾಯುಧಸ್ತೀಕ್ಷ್ಣಾಯುಧ ಇಂದ್ರಃ ಶತ್ರುಂ ಶಾತಯಿತಾರಂ ತಂ ವೃತ್ರಮಜಯತ್ । ಜಿತವಾನ್ ॥

॥ ಪ್ರತಿಪದಾರ್ಥ ॥

**ಹಿ**—ಯಾವ ಕಾರಣದಿಂದ (ವೃತ್ರಾಸುರನು) । **ಅಂತರಿಕ್ಷೇ**—ಅಂತರಿಕ್ಷದಲ್ಲಿ । **ಊರ್ಧ್ವಃ**—ಮೇಲುಮೇಲಾಗಿ ಏರುತ್ತಾ । **ಅಧಿ ಅಸ್ಥಾತ್**—ಎಲ್ಲವನ್ನೂ ವ್ಯಾಪಿಸಿ ನಿಂತನೋ । **ಅಧ**—ಆದ್ದರಿಂದಲೇ । **ವೃತ್ರಾಯ**—ವೃತ್ರನ ಕಡೆಗೆ । **ವಧಂ**—ವಧಸಾಧನವಾದ ವಜ್ರಾಯುಧವನ್ನು । **ಪ್ರ ಜಭಾರ**—(ಇಂದ್ರನು) ಎಸೆದನು । **ಹಿ**—ಆ ವೃತ್ರನಾದರೋ, **ಮಿಹಂ**—ವೃಷ್ಟಿಸೇಚಕವಾದ ಮೇಘವನ್ನು । **ವಸಾನಃ**—ಹೊದೆದುಕೊಂಡು । **ಈಂ**—ಈ ಇಂದ್ರನನ್ನು । **ಉಪ ಅದುದ್ರೋತ್**—ಎದುರಿಸುತ್ತಾ ಮೇಲೆ ಬೀಳಲು ಬಂದನು । **ತಿಗ್ಮಾಯುಧಃ**—ತೀಕ್ಷ್ಣವಾದ ಆಯುಧವುಳ್ಳ । **ಇಂದ್ರಃ**—ಇಂದ್ರನು । **ಶತ್ರುಂ**—ಶತ್ರುವಾದ ವೃತ್ರನನ್ನು । **ಅಜಯತ್**—ಜಯಿಸಿದನು.

॥ ಭಾವಾರ್ಥ ॥

ಅಂತರಿಕ್ಷದಲ್ಲಿ ಮೇಲುಮೇಲಾಗಿ ಏರುತ್ತಾ ವೃತ್ರನು ಎಲ್ಲವನ್ನೂ ವ್ಯಾಪಿಸಿಕೊಂಡು ನಿಂತುದದರಿಂದ ಇಂದ್ರನು ಅವನ ಕಡೆಗೆ ತನ್ನ ವಜ್ರಾಯುಧವನ್ನು ಎಸೆದನು. ಆ ವೃತ್ರನಾದರೋ, ವೃಷ್ಟಿಸೇಚಕವಾದ ಮೇಘದ ಆಚ್ಛಾದನೆಯಿಂದ ಇಂದ್ರನನ್ನು ಎದುರಿಸುತ್ತಾ ಅವನ ಮೇಲೆ ಬೀಳಲು ಬಂದನು. ತೀಕ್ಷ್ಣವಾದ ಆಯುಧವುಳ್ಳ ಇಂದ್ರನು ಶತ್ರುವಾದ ವೃತ್ರನನ್ನು ಜಯಿಸಿದನು.

## English Translation.

Inasmuch as he had soared aloft above the firmament, Indra hurled against Vritra his destructive (thunderbolt): enveloped in a cloud, he

rushed upon Indra, but the wielder of the sharp-edged weapon triumphed over his foe.

| ವಿಶೇಷವಿಷಯಗಳು |

ಈ ಋಕ್ಕಿನಲ್ಲಿ ವೃತ್ರಾಸುರನಿಗೂ ಇಂದ್ರನಿಗೂ ನಡೆದಿರುವ ಯುದ್ಧವು ವರ್ಣಿತವಾಗಿ ಇದೆ. ಯಾಸ್ಕರು ವೃತ್ರಶಬ್ದಾರ್ಥವನ್ನು ವಿವರಿಸುವಾಗ-**ಮೇಘ ಇತಿ ನೈರುಕ್ತಾಃ । ತ್ವಾಷ್ಟ್ರೋಽಸುರ ಇತ್ಯೈತಿಹಾಸಿಕಾಃ। ಅಪಾಂ ಜ್ಯೋತಿಷಶ್ಚ ಮಿಶ್ರೀಭಾವಕರ್ಮಣೋ ವರ್ಷಕರ್ಮ ಜಾಯತೇ। ತತ್ರೋಪಮಾರ್ಥೇನ ಯುದ್ಧವರ್ಣಾ ಭವಂತಿ। ಅಹಿವತ್ತು ಖಲು ಮಂತ್ರವರ್ಣಾ ಬ್ರಾಹ್ಮಣವಾದಾಶ್ಚ। ವಿವೃದ್ಧ್ಯಾ ಶರೀರಸ್ಯ ಸ್ರೋತಾಂಸಿ ನಿವಾರಯಾಂಚಕಾರ। ತಸ್ಮಿನ್ ಹತೇ ಪ್ರಸಸ್ಯಂದಿರ ಆಪಃ। ವೃತ್ರೋ ವೃಣೋತೇರ್ವಾ, ವರ್ತತೇರ್ವಾ ವರ್ಧತೇರ್ವಾ। ಯದವೃಣೋತ್ ತತ್ ವೃತ್ರಸ್ಯ ವೃತ್ರತ್ವಮಿತಿ ವಿಜ್ಞಾಯತೇ। ಯದವರ್ತತ ತತ್ ವೃತ್ರಸ್ಯ ವೃತ್ರತ್ವಮಿತಿ ವಿಜ್ಞಾಯತೇ। ಯದವರ್ಧತ ತತ್ ವೃತ್ರಸ್ಯ ವೃತ್ರತ್ವಮಿತಿ ವಿಜ್ಞಾಯತೇ।** (ನಿ. ೨-೧೬)

ನಿರುಕ್ತಕಾರರು ವೃತ್ರನೆಂದರೆ ಮೇಘವೆಂದು ಅರ್ಥವನ್ನು ಹೇಳಿದ್ದಾರೆ. ಮೇಘದಲ್ಲಿ ಉದಕಗಳು ಸೂರ್ಯನ ಕಿರಣಗಳಿಂದ ಒಟ್ಟಾಗಿ ಸೇರಿದನಂತರ ತೇಜಸ್ಸು ಮತ್ತು ಉದಕಗಳ ಮಿಶ್ರವಾಗಿರುವುದರ ವ್ಯತ್ಯಾಸದಿಂದ (ನ್ಯೂನಾಧಿಕ ಭಾವದಿಂದ) ವೃಷ್ಟಿಯು ಉಂಟಾಗುವುದು. ಈ ನ್ಯೂನಾಧಿಕಭಾವವನ್ನು ಯುದ್ಧಕ್ಕೆ ಹೋಲಿಸಿ ಆಯಾಯ ಋಕ್ಕುಗಳಲ್ಲಿ ವರ್ಣಿತವಾಗಿದೆ. ಮೇಘವು ಉದಕಗಳನ್ನು ಘನವಾದ (ಗಟ್ಟಿಯಾದ) ರೀತಿಯಲ್ಲಿರಿಸಿಕೊಂಡು ಭೂಮಿಗೆ ಮಳೆಯನ್ನು ಸುರಿಸದೆ ನದಿಗಳ ಪ್ರವಾಹವನ್ನು ತಡೆದುಬಿಡುತ್ತದೆ. ಈ ಮೇಘಗಳನ್ನು ಚೂರ್ಣಮಾಡಿದಾಗ (ಮಳೆಯಾದಾಗ) ಉದಕಗಳು ಭೂಮಿಗೆ ಬರುವುದರಿಂದ ನದಿಗಳು ಪ್ರವಹಿಸುತ್ತವೆ ಎಂದು ಒಂದು (ಮತವನ್ನು) ಅಭಿಪ್ರಾಯವನ್ನು ವಿವರಿಸಿದ್ದಾರೆ. ಪುರಾಣಗಳಲ್ಲಿ ತ್ವಷ್ಟೃ ಎಂಬುವನ ಪುತ್ರನು ವೃತ್ರಾಸುರನೆಂದೂ ಅವನು ವೃಷ್ಟ್ಯುದಕಗಳನ್ನು ಸುರಿಸುವ ಮೇಘಗಳನ್ನೂ ತಡೆದು, ಅವುಗಳಿಗಿಂತಲೂ ದೊಡ್ಡದಾದ ಶರೀರವನ್ನು ಹೊಂದಿ ಪ್ರತಿದಿನವೂ ಬೆಳೆದು, ಲೋಕಕ್ಕೆ ಉದಕವಿಲ್ಲದಂತೆ ಮಾಡುತ್ತಾ ಲೋಕಕಂಟಕನಾಗಿದ್ದನೆಂದೂ ಅವನನ್ನು ಇಂದ್ರನು ತನ್ನ ವಜ್ರಾಯುಧದಿಂದ ಹೊಡೆದು ನಾಶಮಾಡಿ ಲೋಕವನ್ನು ರಕ್ಷಿಸಿದನೆಂದೂ ಹೇಳಿದೆ. ಈ ಐತಿಹಾಸಿಕ ಮತವನ್ನು ಅವಲಂಬಿಸಿ ಇಲ್ಲಿ ಇಂದ್ರನ ಪ್ರಭಾವವನ್ನು ವರ್ಣಿಸಿದೆ. ಇದರ ಹಿಂದಿನ ಋಕ್ಕಿನಲ್ಲಿ ನದಿಗಳೂ, ಉದಕಗಳೂ ಪ್ರವಹಿಸುವ ವಿಷಯವು ವೃತ್ರಾಸುರನ ವಧೆಯನ್ನು ವರ್ಣಿಸುವುದರ ಮೂಲಕವೇ ಉಕ್ತವಾಗಿದೆ. ವೃದ್ಧಿಯನ್ನು ಹೊಂದುವುದು ಎಂಬ ಅರ್ಥವನ್ನು ಬೋಧಿಸುವ ವೃಧು ವೃದ್ಧೌ ಎಂಬ ಧಾತುವಿನಿಂದಲೂ, ವೃತ್ರಶಬ್ದವು ನಿಷ್ಪನ್ನವಾಗಿರುವುದರಿಂದ ಇಲ್ಲಿ—**ಅಂತರಿಕ್ಷೇ ಊರ್ಧ್ವಃ ಅಧಿ ಅಸ್ಥಾತ್-ವೃತಃ ಅಂತರಿಕ್ಷೇ ಸರ್ವಮಾವೃತ್ಯ ಅಧಿಷ್ಠಿತೋಽಭೂತ್**—ಅಂತರಿಕ್ಷದಲ್ಲಿ ಎಲ್ಲವನ್ನೂ ಆವರಿಸುತ್ತಾ ವ್ಯಾಪಿಸಿಕೊಂಡು ನಿಂತನು ಎಂದು ವರ್ಣಿಸಿದೆ. ಮತ್ತು ಆಚ್ಛಾದಿಸುವುದು ಎಂಬ ಅರ್ಥವನ್ನು ಬೋಧಿಸುವ ವೃಞ್ ವರಣೇ ಎಂಬ ಧಾತುವಿನಿಂದಲೂ, ಇರುವುದು ಎಂಬ ಅರ್ಥವನ್ನು ಬೋಧಿಸುವ ವೃತು ವರ್ತನೇ ಎಂಬ ಧಾತುವಿನಿಂದಲೂ ವೃತ್ರಶಬ್ದವು ನಿಷ್ಪನ್ನವಾಗುವುದರಿಂದ, **ವೃತ್ರಃ ಮಿಹಂ ವಸಾನಃ ಉಪ ಅದುದ್ರೋತ್—ವೃಷ್ಟೇಃ ಸೇಕ್ತಾರಂ ಮೇಘಂ ಆಚ್ಛಾದಯನ್**—ವೃತ್ರಾಸುರನು ವೃಷ್ಟ್ಯುದಕಗಳನ್ನು ಸುರಿಸುವ ಮೇಘವನ್ನು ಆವರಿಸಿಕೊಂಡು ಇಂದ್ರನನ್ನು ಎದುರಿಸಿದನು ಎಂದು ಅರ್ಥವನ್ನು ವರ್ಣಿಸಿದೆ.

**ತಿಗ್ಮಾಯುಧಃ—ತೀಕ್ಷ್ಣಾಯುಧಃ ।** ತಿಗ್ಮ ಶಬ್ದವು—ಯಾಸ್ಕರಿಂದ ವಜ್ರನಾಮಗಳಲ್ಲಿ (ನಿ. ೩-೧೧) ಪಠಿತವಾಗಿದೆ. ಸಾಯಣರು ಈ ಪದಕ್ಕೆ ಹರಿತವಾದ ಆಯುಧವನ್ನು ಇಂದ್ರನು ಹೊಂದಿರುವನೆಂದು ಅರ್ಥವನ್ನು ಹೇಳಿದಾರೆ.

॥ ಸಂಹಿತಾಪಾಠಃ ॥

ಬೃಹಸ್ಪತೇ ತಪುಷಾಶ್ನೇವ ವಿಧ್ಯ ವೃಕದ್ವರಸೋ ಅಸುರಸ್ಯ ವೀರಾನ್ ।
ಯಥಾ ಜಘಂಥ ಧೃಷತಾ ಪುರಾ ಚಿದೇವಾ ಜಹಿ ಶತ್ರುಮಸ್ಮಾಕಮಿಂದ್ರ ॥ ೪ ॥

॥ ಪದಪಾಠಃ ॥

ಬೃಹಸ್ಪತೇ । ತಪುಷಾ । ಅಶ್ನಾऽಇವ । ವಿಧ್ಯ । ವೃಕऽದ್ವರಸಃ । ಅಸುರಸ್ಯ । ವೀರಾನ್ ।
ಯಥಾ । ಜಘಂಥ । ಧೃಷತಾ । ಪುರಾ । ಚಿತ್ । ಏವ । ಜಹಿ । ಶತ್ರುಂ । ಅಸ್ಮಾಕಂ । ಇಂದ್ರ ॥ ೪ ॥

॥ ಸಾಯಣಭಾಷ್ಯಂ ॥

**ಹೇ ಬೃಹಸ್ಪತೇ ಬೃಹತಾಂ ಪರಿವೃಢಾನಾಂ ಪಾಲಯಿತರಿಂದ್ರ ತಪುಷಾ ತಾಪಕೇನ ದೀಪ್ತೇನ ವಜ್ರೇಣಾಶ್ನೇವ ಅಶನ್ಯೇವ ವೃಕದ್ವರಸಃ ಸಂವೃತದ್ವಾರಸ್ಯಾಸುರಸ್ಯ ವೀರಾನ್ ಪುತ್ರಾನ್ । ಯದ್ವಾ ಸಂವೃತದ್ವಾರಾನಸುರಸ್ಯ ವೀರಾನ್ ವಿಧ್ಯ । ತಾಡಯ ॥ ವೃಣೋತೇಃ ಸೃವೃಭೂಶುಷಿಮುಷಿಭ್ಯಃ ಕಿದಿತಿ ಕರ್ಮಣಿ ಕಸ್ಪ್ರತ್ಯಯಃ । ದ್ರು ಗತೌ । ಅಸ್ಮಾದೌಣಾದಿಕೋऽಸಸ್ಪ್ರತ್ಯಯಃ । ವೃಕಾಣಿ ಸಂವೃತಾನಿ ದ್ವರಾಂಸಿ ದ್ವಾರಾಣಿ ಯೇಷಾಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥ ಹೇ ಇಂದ್ರ ಪುರಾ ಚಿತ್ ಪುರಾಪಿ ಧೃಷತಾ ಧರ್ಷಕೇಣ ಬಲೇನ ಯಥಾ ಜಘಂಥ ತ್ವಂ ಹತವಾನ್ ಏವ್ಮೇವಮೇವಾಸ್ಮಾಕಂ ಶತ್ರುಂ ಜಹಿ । ನಾಶಯ ॥ ಹಂತೇರ್ಜ ಇತಿ ಹೌ ಜಾದೇಶಃ ॥**

॥ ಪ್ರತಿಪದಾರ್ಥ ॥

**ಬೃಹಸ್ಪತೇ**—ಬೃಹದ್ರಕ್ಷಕನಾದ ಎಲೈ ಇಂದ್ರನೇ । **ತಪುಷಾ**—ದಾಹಾತ್ಮಕವಾದ ಆಯುಧದಿಂದ । **ಅಶ್ನೇವ**—ಸಿಡಿಲಿನಿಂದ ಹೊಡೆಯುವಂತೆ । **ವೃಕದ್ವರಸಃ**—ದ್ವಾರಗಳನ್ನು ಆವರಿಸಿರುವ । **ಅಸುರಸ್ಯ**—ಅಸುರನ । **ವೀರಾನ್**—ಶಕ್ತಿಯುತರಾದ ಪುತ್ರರನ್ನು । **ವಿಧ್ಯ**—ಪ್ರಹರಿಸು । **ಇಂದ್ರ**—ಎಲೈ ಇಂದ್ರನೇ । **ಪುರಾ ಚಿತ್**—ಹಿಂದೆಯೂ । **ಧೃಷತಾ**—ಪ್ರಹರಿಸುವ ವಜ್ರಾಯುಧದಿಂದ । **ಯಥಾ**—ಯಾವ ರೀತಿ । **ಜಘಂಥ**—ಹೊಡೆದೆಯೋ । **ಏವ**—ಆದರಂತೆಯೇ । **ಅಸ್ಮಾಕಂ**—ನಮ್ಮ । **ಶತ್ರುಂ**—ಶತ್ರುವನ್ನೂ । **ಜಹಿ**—ನಾಶಮಾಡು.

॥ ಭಾವಾರ್ಥ ॥

ಬೃಹಸ್ಪತಿರಕ್ಷಕನಾದ ಇಂದ್ರನೇ, ದಾಹಾತ್ಮಕವಾದ ಆಯುಧದಿಂದ ದ್ವಾರಗಳನ್ನು ಆವರಿಸಿರುವ ಶಕ್ತಿಯುತರಾದ ಅಸುರಪುತ್ರರನ್ನು ಸಿಡಿಲಿನಿಂದ ಹೊಡೆಯುವಂತೆ ಪ್ರಹರಿಸು. ಎಲೈ ಇಂದ್ರನೇ, ವಜ್ರಾಯುಧದಿಂದ ಹಿಂದೆ ಯಾವ ರೀತಿಯಲ್ಲಿ ಅಸುರರನ್ನು ಹೊಡೆದೆಯೋ ಅದರಂತೆಯೇ ಈಗಲೂ ನಮ್ಮ ಶತ್ರುವನ್ನು ನಾಶಮಾಡು.

English Translation.

Pierce, Brihaspathi, with a radiant shaft, as with a thunderbolt, the sons of Asura guarding his gates : in like manner as you formerly slew Vritra by your prowess, so now destroy our enemy.

॥ ವಿಶೇಷವಿಷಯಗಳು ॥

**ಬೃಹಸ್ಪತೇ—ಬೃಹತಾಂ ಪರಿವೃಢಾನಾಂ ಪಾಲಯಿತಃ** । ಬೃಹಸ್ಪತಿ ಶಬ್ದವು ಯಾಸ್ಕರಿಂದ **ಬೃಹಸ್ಪತಿಃ ಬೃಹತಃ ಪಾತಾ ವಾ ಪಾಲಯಿತಾ ವಾ** । (ನಿ. ೧೦-೧೨) ಎಂದು ವಿವೃತವಾಗಿದೆ. ಬಲವುಳ್ಳವರನ್ನು ರಕ್ಷಿಸುವವನು ಎಂದು ಅರ್ಥವನ್ನು ವಿವರಿಸಿ, ಈ ಪದದಿಂದ ಇಂದ್ರನು ಸಂಬೋಧಿತನಾಗಿದ್ದಾನೆ ಎಂದು ಸಾಯಣರು ವರ್ಣಿಸಿದ್ದಾರೆ.

**ವೃಕದ್ವರಸಃ ಅಸುರಸ್ಯ ವೀರಾನ್—ವೃಕಾಣಿ ಸಂವೃತಾನಿ ದ್ವಾರಾಂಸಿ ದ್ವಾರಾಣಿ ಯೇಷಾಂ** । ವೀರ ಶಬ್ದಕ್ಕೆ **ವೀರಾನ್—ಪುತ್ರಾನ್ ಯದ್ವಾ ಸಂವೃತದ್ವಾರಾನಸುರಸ್ಯ ವೀರಾನ್** । (ವೃಕದ್ವರಸಃ) ಈ ಪದಕ್ಕೆ ಮುಚ್ಚಲ್ಪಟ್ಟ ಪ್ರವೇಶಮಾರ್ಗಗಳುಳ್ಳವರು ಎಂದರೆ ಪ್ರವೇಶಿಸಲಾಗದಿರುವ ಹಾಗೆ ದ್ವಾರಗಳನ್ನು ಪ್ರವೇಶಿಸುವ ಮಾರ್ಗಗಳನ್ನು ಮುಚ್ಚಿರುವ ಅಸುರನ ಪುತ್ರರೆಂದೂ, ಅಥವಾ ಇಂದ್ರನು ಪ್ರವೇಶಿಸಲಾಗದಿರುವಂತೆ ಅಸುರವೀರರು ಮಾರ್ಗಗಳನ್ನು ಮುಚ್ಚಿರುವರೆಂದೂ ಎರಡು ವಿಧವಾದ ಅರ್ಥವನ್ನೂ ವಿವರಿಸಿದೆ. ಇಂದ್ರನು ಅಸುರರಿಂದ ಮುಚ್ಚಿರುವ, ದ್ವಾರಗಳನ್ನು ಬಿಡಿಸಲು **ಅಶ್ನೇವ ತಪುಷಾ ವಿಧ್ಯ—ದೀಪ್ತೇನ ವಜ್ರೇಣ ಅಶನ್ಯೇವ ತಾಡಯ** । ಅಸುರರ ಮಕ್ಕಳುಗಳನ್ನೂ, ಅಸುರರ ವೀರರನ್ನೂ ತನ್ನ ತೇಜಸ್ಸಿನಿಂದ ಪ್ರಕಾಶಿಸುವ ವಜ್ರಾಯುಧದಿಂದ, ಶಿಡಿಲಿನಿಂದ ಹೊಡೆಯುವ ಹಾಗೆ ಪ್ರಹರಿಸಲಿ ಎಂದು ಅರ್ಥವನ್ನು ವಿವರಿಸಿದೆ. ಮತ್ತು **ಪುರಾ ಚಿತ್ ಧೃಷತಾ ಯಥಾ ಜಘಂಥ ಏವ ಅಸ್ಮಾಕಂ ಶತ್ರುಂ ಜಹಿ—ಚಿತ್** ಎಂಬ ಪದಕ್ಕೆ ಸಮುಚ್ಚಯಾರ್ಥವನ್ನು ವಿವರಿಸಿ, ಇಂದ್ರನು ಪೂರ್ವದಲ್ಲಿ ಶತ್ರುಗಳನ್ನು ತಿರಸ್ಕರಿಸುವ ವಜ್ರಾಯುಧದಿಂದ ಶತ್ರುಗಳನ್ನು ಪ್ರಹರಿಸಿದ ಹಾಗೆಯೇ ಈಗಲೂ ಯಜಮಾನರ ಶತ್ರುಗಳನ್ನು ಪ್ರಹರಿಸಲಿ ಎಂದು ಯಜಮಾನರ ಆಶಂಸನೆಯು ವರ್ಣಿತವಾಗಿದೆ.



॥ ಸಂಹಿತಾಪಾಠಃ ॥

ಅವ ಕ್ಷಿಪ ದಿವೋ ಅಶ್ಮಾನಮುಚ್ಚಾ ಯೇನ ಶತ್ರುಂ ಮಂದಸಾನೋ ನಿಜೂರ್ವಾಃ ।
ತೋಕಸ್ಯ ಸಾತೌ ತನಯಸ್ಯ ಭೂರೇರಸ್ಮಾಁ ಅರ್ಧಂ ಕೃಣುತಾದಿಂದ್ರ ಗೋನಾಂ ॥

॥ ಪದಪಾಠಃ ॥

ಅವ । ಕ್ಷಿಪ । ದಿವಃ । ಅಶ್ಮಾನಂ । ಉಚ್ಚಾ । ಯೇನ । ಶತ್ರುಂ । ಮಂದಸಾನಃ । ನಿಽಜೂರ್ವಾಃ ।
ತೋಕಸ್ಯ । ಸಾತೌ । ತನಯಸ್ಯ । ಭೂರೇಃ । ಅಸ್ಮಾನ್ । ಅರ್ಧಂ । ಕೃಣುತಾತ್ । ಇಂದ್ರ । ಗೋನಾಂ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ದಿವೋ ನಭಸಃ ಸಕಾಶಾದಶ್ಮಾನಮಶ್ಮವತ್ಕಠಿನಂ ವಜ್ರಮುಚ್ಚಾ ಉಚ್ಚೈರ್ವರ್ತಮಾನಸ್ತ್ವಮವಕ್ಷಿಪ । ಅಸ್ಮದೀಯಾನ್ ಶತ್ರೂನುದ್ದಿಶ್ಯಾವಸ್ತಾತ್ಕ್ಷಿಪ । ಯೇನ ವಜ್ರೇಣ ಮಂದಸಾನಃ ಸ್ತೋತೃಭಿಃ ಸ್ತೂಯಮಾನಃ ಸನ್ ಶತ್ರುಂ ನಿಜೂರ್ವಾಃ । ನ್ಯಹಿಂಸೀಃ ॥ ಜುರ್ವೀ ಹಿಂಸಾರ್ಥಃ । ಲೇಟ್ಯಡಾಗಮಃ ॥ ತಥಾ ತೋಕಸ್ಯ ಭೂರೇರ್ಭರ್ತವ್ಯಸ್ಯ ತನಯಸ್ಯ ಪೌತ್ರಸ್ಯ ಸಾತೌ ಸಂಭಜನೇ ॥ ನಿಮಿತ್ತೇ ಸಪ್ತಮ್ಯೇಷಾ ॥ ಸಂಭಜನಾರ್ಥಂ । ತಥಾ ಹೇ ಇಂದ್ರ ಗೋನಾಂ ಗವಾಂ ಸಂಭಜನಾರ್ಥಂ ಚಾಸ್ಮಾನ್ ಅಸ್ಮಾಕಂ ॥ ವಿಭಕ್ತಿವ್ಯತ್ಯಯಃ ॥ ಅರ್ಧಂ ಸಮೃದ್ಧಿಂ ಕೃಣುತಾತ್ । ಕುರು ॥ ಗೋಃ ಪಾದಾಂತ ಇತಿ ಗೋಶಬ್ದಸ್ಯಾಮೋ ನುಡಾಗಮಃ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಯೇನ**—ಯಾವ ವಜ್ರಾಯುಧದಿಂದ । **ಮಂದಸಾನಃ**—ಸ್ತೋತೃಗಳಿಂದ ಸ್ತುತಿಸಲ್ಪಡುವ ನೀನು । **ಶತ್ರುಂ**—ಶತ್ರುವನ್ನು । **ನಿಜೂರ್ವಾಃ**—ಹಿಂಸಿಸುವೆಯೋ ಅಂಥಹ । **ಅಶ್ಮಾನಂ**—ಕಠಿಣವಾದ ವಜ್ರಾಯುಧವನ್ನು । **ದಿವಃ**—ಅಂತರಿಕ್ಷದಿಂದ । **ಉಚ್ಚಾ**—ಊರ್ಧ್ವಭಾಗದಲ್ಲಿ ನಿಂತಿರುವ ನೀನು । **ಅವ ಕ್ಷಿಪ**—ಶತ್ರುವಿನ ಮೇಲೆ ಎಸೆ । **ತೋಕಸ್ಯ**—ಪುತ್ರನ (ಮತ್ತು) । **ಭೂರೇಃ**—ಪೋಷ್ಯನಾದ । **ತನಯಸ್ಯ**—ಪೌತ್ರನ । **ಸಾತೌ**—ಪೋಷಣೆಗಾಗಿಯೂ । **ಗೋನಾಂ**—ಗೋವುಗಳ ಪೋಷಣೆಗಾಗಿಯೂ । **ಅಸ್ಮಾನ್**—ನಮಗೆ । **ಅರ್ಧಂ**—ಸಂಪತ್ಸಮೃದ್ಧಿಯನ್ನು । **ಕೃಣುತಾತ್**—ಉಂಟುಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಸ್ತೋತೃಗಳಿಂದ ಸ್ತುತಿಸಲ್ಪಡುವ ನೀನು ಯಾವ ವಜ್ರಾಯುಧದಿಂದ ಶತ್ರುವನ್ನು ಹಿಂಸಿಸುವೆಯೋ ಅಂತಹ ಕಠಿಣವಾದ ವಜ್ರಾಯುಧವನ್ನು ಊರ್ಧ್ವಭಾಗದಲ್ಲಿ ನಿಂತಿರುವ ನೀನು ಅಂತರಿಕ್ಷದಿಂದ ಶತ್ರುವಿನ ಮೇಲೆ ಎಸೆ. ಪೋಷ್ಯನಾದ ನನ್ನ ಪುತ್ರನ ಮತ್ತು ಪೌತ್ರನ ರಕ್ಷಣೆಗೂ, ಗೋವುಗಳ ರಕ್ಷಣಾರ್ಥವಾಗಿಯೂ ನಮಗೆ ಸಂಪತ್ಸಮೃದ್ಧಿಯನ್ನುಂಟುಮಾಡು.

## English Translation.

You, being on high, cast down from heaven the adamantine (thunderbolt), wherewith, when exhilarated, you slew your foe; and make us affluent in the possession of many sons, and grandsons, and cattle.

‖ ವಿಶೇಷವಿಷಯಗಳು ‖

ಇಂದ್ರನನ್ನು ಸಂಬೋಧಿಸಿ **ದಿವಃ ಅಶ್ಮಾನಂ ಉಚ್ಚಾ ಅವ ಕ್ಷಿಪ—ಉಚ್ಚೈರ್ವರ್ತಮಾನಸ್ತ್ವಂ ನಭಸಸ್ಸಕಾಶಾತ್ ಅಸ್ಮದೀಯಾನ್ ಶತ್ರೂನ್ ಉದ್ದಿಶ್ಯ ಅಶ್ಮವತ್ಕಠಿನಂ ವಜ್ರಂ ಪ್ರಕ್ಷಿಪ** । ಅಶ್ಮಾನಂ ಎಂಬ ಪದಕ್ಕೆ ಕಲ್ಲಿಗಿಂತಲೂ ಕಠಿನವೆಂದು ಅರ್ಥವನ್ನು ಹೇಳಿ ಈ ರೀತಿಯಿಂದ ಇರುವ ವಜ್ರಾಯುಧವನ್ನು ಸರ್ವಕ್ಕೂ ಉಪರಿ (ಮೇಲು) ಭಾಗದಲ್ಲಿ ಇರುವ ಇಂದ್ರನು ಯಜಮಾನರಾದ ನಮ್ಮ ಶತ್ರುಗಳ ನಾಶಕ್ಕಾಗಿ (ಎಸೆಯಲಿ) ಪ್ರಯೋಗಿಸಲಿ ಎಂದು ಆಶಂಸಿತವಾಗಿದೆ.

**ತೋಕಸ್ಯ ತನಯಸ್ಯ ಸಾತೌ ಗೋನಾಂ ಅಸ್ಮಾನ್ ಅರ್ಥಂ ಕೃಣುತಾತ್ ಪುತ್ರಸ್ಯ ಪೌತ್ರಸ್ಯ ಸಂಭಜನೇ ನಿಮಿತ್ತೇ ಗವಾಂ ಸಂಭಜನಾರ್ಥಂ ಚ ಅಸ್ಮಾಕಂ ಸಮೃದ್ಧಿಂ ಕುರು** । ಯಾಸ್ಕರು ಅಪತ್ಯನಾಮ ಗಳಲ್ಲಿ **ತೋಕ ತನಯ** ಎಂಬ ಪದಗಳನ್ನು (ನಿ. ೩-೨) ಪಠಿಸಿದ್ದಾರೆ. **ತೋಕಂ ತುದ್ಯತೇಃ ತನಯಂ ತನೋತೇಃ** (ನಿ. ೧೦-೮) ಎಂದು ರೂಪನಿಷ್ಪತ್ತಿಯನ್ನು ವಿವರಿಸಿದ್ದಾರೆ. ಮತ್ತು

**ಉಷಸ್ತಚ್ಚಿತ್ರಮಾಭರಾಸ್ಮಭ್ಯಂ ವಾಜಿನೀವತಿ ।**
**ಯೇನ ತೋಕಂ ಚ ತನಯಂ ಚ ಧಾಮಹೇ ॥**

(ಋ. ಸಂ. ೧-೯೨-೧೩)

ಎಂಬಲ್ಲಿ ತೋಕ ಶಬ್ದಕ್ಕೆ ಪುತ್ರನೆಂದೂ ತನಯ ಶಬ್ದಕ್ಕೆ ಪೌತ್ರನೆಂದೂ ಅರ್ಥವನ್ನು ವರ್ಣಿಸಿದ್ದಾರೆ. ಇಲ್ಲಿ ಇಂದ್ರನನ್ನು ಸಂಬೋಧಿಸಿ ಯಜಮಾನರು ತಮ್ಮ ಪುತ್ರರನ್ನೂ ಪೌತ್ರರನ್ನೂ (ಮೊಮ್ಮಕ್ಕಳನ್ನು) ಮತ್ತು ಗೋವುಗಳೇ ಮೊದಲಾದ ವುಗಳನ್ನು ಪೋಷಿಸುವುದಕ್ಕಾಗಿಯೂ ಮತ್ತು ಸುಖದಿಂದ ಇರುವುದಕ್ಕಾಗಿಯೂ ಧನವೇ ಮೊದಲಾದುವುಗಳ ಅಭಿ ವೃದ್ಧಿಯನ್ನು ಉಂಟಾಗಲಿ ಎಂದು ಪ್ರಾರ್ಥಿಸಿದ್ದಾರೆ.

ಯಾಸ್ಕರು ಗೋಶಬ್ದಕ್ಕೆ ಅನೇಕಾರ್ಥಗಳನ್ನು (ನಿ. ೨-೫) ಹೇಳಿದ್ದಾರೆ. ಸಾಯಣರು ಗೋವುಗಳು ಎಂದು ಅರ್ಥವನ್ನು ವಿವರಿಸಿದ್ದಾರೆ.



‖ ಸಂಹಿತಾಪಾಠಃ ‖

ಪ್ರ ಹಿ ಕ್ರತುಂ ವೃಹಥೋ ಯಂ ವನುಥೋ ರಧ್ರಸ್ಯ ಸ್ಥೋ ಯಜಮಾನಸ್ಯ ಚೋದೌ ।
ಇಂದ್ರಾಸೋಮಾ ಯುವಮಸ್ಮಾಁ ಅವಿಷ್ಟಮಸ್ಮಿನ್ಭಯಸ್ಥೇ ಕೃಣುತಮು ಲೋಕಂ ॥

॥ ಪದಪಾಠಃ ॥

ಪ್ರ । ಹಿ । ಕ್ರತುಂ । ವೃಹಥಃ । ಯಂ । ವನುಥಃ । ರಧ್ರಸ್ಯ । ಸ್ಥಃ । ಯಜಮಾನಸ್ಯ । ಚೋದೌ ।

ಇಂದ್ರಾಸೋಮಾ । ಯುವಂ । ಅಸ್ಮಾನ್ । ಅವಿಷ್ಟಂ । ಅಸ್ಮಿನ್ । ಭಯಽಸ್ಥೇ । ಕೃಣುತಂ । ಊಂ ಇತಿ । ಲೋಕಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಸೋಮೌ ಯಂ ವೈರಿಣಂ ವನುಥೋ ಹಿಂಸಥಃ ॥ ವನುಷ್ಯತಿರ್ಹಂತಿಕರ್ಮೇತಿ ಯಾಸ್ಕಃ ॥ ತಂ ಕ್ರತುಂ ದ್ವೇಷಸ್ಯ ಕರ್ತಾರಂ ಪ್ರ ಹಿ ವೃಹಥಃ । ಪ್ರಕರ್ಷೇಣೋದ್ಯಚ್ಛಥಃ ಖಲು । ಉನ್ಮೂಲಯಥ ಇತ್ಯರ್ಥಃ ॥ ವೃಹೂ ಉದ್ಯಮನೇ ತೌದಾದಿಕಃ ॥ ತಥಾ ರಧ್ರಸ್ಯ ರಾಧಕಸ್ಯ ಯಜಮಾನಸ್ಯ ಚೋದೌ ಶತ್ರೂಣಾಂ ಪ್ರೇರಕೌ ಸ್ಥಃ । ಭವಥಃ । ತಥಾ ಹೇ ಇಂದ್ರಾಸೋಮೌ ಯುವಂ ಯುವಾಮಸ್ಮಾನವಿಷ್ಟಂ । ಅವತಂ । ಅಸ್ಮಿನ್ಭಯಸ್ಥೇ ಭಯಸ್ಥಾನೇ ಯುದ್ಧೇ ॥ ಘಞರ್ಥೇ ಕವಿಧಾನಮಿತ್ಯಧಿಕರಣೇ ಕಪ್ರತ್ಯಯಃ । ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ ॥ ತಸ್ಮಿನ್ಯುದ್ಧೇ ಲೋಕಂ ಭಯರಹಿತಂ ಸ್ಥಾನಂ ಕೃಣುತಂ । ಕುರುತಂ । ಉ ಇತಿ ಪಾದಪೂರಣಃ ॥

॥ ಪ್ರತಿಪದಾರ್ಥ ॥

**ಇಂದ್ರಾಸೋಮಾ**—ಇಂದ್ರ ಮತ್ತು ಸೋಮದೇವತೆಗಳೇ । **ಯಂ**—ಯಾವ ವೈರಿಯನ್ನು । **ವನುಥಃ**—ನೀವು ದ್ವೇಷಿಸುವಿರೋ । **ಕ್ರತುಂ**—ಯಜ್ಞಕ್ಕೆ ವಿಘ್ನಕಾರಿಯಾದ ಅವನನ್ನು । **ಪ್ರ ಹಿ ವೃಹಥಃ**—ಪೂರ್ಣವಾಗಿ ನಿರ್ಮೂಲಮಾಡಿರಿ । **ರಧ್ರಸ್ಯ**—(ನಿಮಗೆ) ವಿಧೇಯನಾಗಿರತಕ್ಕ । **ಯಜಮಾನಸ್ಯ**—ಯಜಮಾನನಿಗೆ । **ಚೋದೌ**—ಉತ್ತೇಜಕರಾಗಿ । **ಸ್ಥಃ**—ಇರಿ । **ಯುವಂ**—ನೀವು । **ಅಸ್ಮಾನ್**—ನಮ್ಮನ್ನು । **ಅವಿಷ್ಟಂ**—ರಕ್ಷಿಸಿರಿ । **ಅಸ್ಮಿನ್ ಭಯಸ್ಥೇ**—ಭಯಕ್ಕೆ ಸ್ಥಾನವಾದ ಈ ಯುದ್ಧದಲ್ಲಿ । **ಲೋಕಂ**—ಭಯರಹಿತವಾದ ಸ್ಥಾನವನ್ನು । **ಕೃಣುತಂ**—ಉಂಟುಮಾಡಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಸೋಮದೇವತೆಗಳೇ, ಯಾವ ವೈರಿಯನ್ನು ನೀವು ದ್ವೇಷಿಸುವಿರೋ, ಯಜ್ಞಕ್ಕೆ ವಿಘ್ನಕಾರಿಯಾದ ಅವನನ್ನು ಪೂರ್ಣವಾಗಿ ನಿರ್ಮೂಲಮಾಡಿರಿ. ನಿಮಗೆ ವಿಧೇಯನಾಗಿರತಕ್ಕ ಯಜಮಾನನಿಗೆ ಉತ್ತೇಜಕರಾಗಿರಿ. ನೀವು ನಮ್ಮನ್ನು ರಕ್ಷಿಸಿರಿ. ಭಯಕ್ಕೆ ಸ್ಥಾನವಾದ ಈ ಯುದ್ಧದಲ್ಲಿ ಭಯರಹಿತವಾದ ಸ್ಥಾನವನ್ನು ಉಂಟುಮಾಡಿರಿ

English Translation.

Indra and Soma, eradicate the worker (of evil), whom you hate; be the encouragers of the liberal institutor of the rite: protect us in this place of peril and make the world (free from fear).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರ ಮತ್ತು ಸೋಮ ಎಂಬ ಎರಡು ದೇವತೆಗಳನ್ನು ಸ್ತುತಿಸಲಾಗಿದೆ.

**ಕ್ರತುಂ—ದ್ವೇಷಸ್ಯ ಕರ್ತಾರಂ।** **ಕ್ರತು** ಎಂಬ ಪದವು ಯಾಸ್ಕರಿಂದ ಕರ್ಮನಾಮಗಳಲ್ಲಿಯೂ (ನಿ. ೩-೨) ಪ್ರಜ್ಞಾನಾಮಗಳಲ್ಲಿಯೂ (ನಿ. ೩-೧೩) ಉಕ್ತವಾಗಿದೆ. **ಕ್ರತುಂ ಕರ್ಮ ವಾ ಪ್ರಜ್ಞಾಂ ವಾ** (ನಿ. ೨-೨೮) ಎಂದು ವಿವೃತವಾಗಿದೆ. ಸಾಯಣರು ದ್ವೇಷವನ್ನು ಮಾಡುವವನು ಎಂದು ಅರ್ಥವನ್ನು ಹೇಳಿದ್ದಾರೆ. ಇಂದ್ರ ಮತ್ತು ಸೋಮ ಇವರು ತಮ್ಮನ್ನು ದ್ವೇಷಿಸುವ ಶತ್ರುವನ್ನು ಹಿಂಸೆಗೆ ಒಳಗುಮಾಡುವರು ಮತ್ತು ಅವನನ್ನು **ಪ್ರ ಹಿ ವೃಹತಃ** (ನಿರ್ಮೂಲವಾಗಿ) ಸಂಪೂರ್ಣವಾಗಿ ನಾಶಪಡಿಸುವರೆಂದೂ, **ರಧ್ರಸ್ಯ ಯಜಮಾನಸ್ಯ ಚೋದೌ ಸ್ಥಃ— ಸಾಧಕಸ್ಯ ಯಜಮಾನಸ್ಯ ಶತ್ರೂಣಾಂ ಪ್ರೇರಕೌ ಭವತಃ** ಯಾಗಗಳನ್ನು ಆಚರಿಸುವ ಯಜಮಾನನ ಶತ್ರುಗಳನ್ನು ನಾಶಮಾಡುವವರಾಗಿರುವರೆಂದೂ ಅರ್ಥವನ್ನು ವಿವರಿಸಿದ್ದಾರೆ.

ಈ ಇಂದ್ರಾ ಸೋಮರನ್ನು ಉದ್ದೇಶಿಸಿ **ಯುವಂ ಅಸ್ಮಾನ್ ಅವಿಷ್ಟಂ। ಯುವಾಂ ಅಸ್ಮಾನ್ ಅವತಂ** ಯಜಮಾನರು ತಮ್ಮ ರಕ್ಷಣೆಯನ್ನು ಪ್ರಾರ್ಥಿಸಿದ್ದಾರೆ ಮತ್ತು **ಭಯಸ್ಥೇ ಲೋಕಂ ಕೃಣುತಂ। ಭಯಸ್ಥಾನೇ ಯುದ್ಧಭಯರಹಿತಂ ಸ್ಥಾನಂ ಕುರುತಂ** ಯಜಮಾನರಿಗೆ ಭಯವನ್ನು ಉಂಟುಮಾಡುವ ಯುದ್ಧವು ಒದಗಿದಾಗ ಭಯವು ಉಂಟಾಗದಂತೆ ರಕ್ಷಣೆಯು ಪ್ರಾರ್ಥಿಸಲಾಗಿದೆ.



॥ ಸಂಹಿತಾಪಾಠಃ ॥

ನ ಮಾ ತಮನ್ನ ಶ್ರಮನ್ನೋತ ತಂದ್ರನ್ನ ವೋಚಾಮ ಮಾ ಸುನೋತೇತಿ ಸೋಮಂ ।
ಯೋ ಮೇ ಪೃಣಾದ್ಯೋ ದದದ್ಯೋ ನಿಬೋಧಾದ್ಯೋ ಮಾ ಸುನ್ವಂತಮುಪ ಗೋಭಿರಾಯತ್ ॥ ೭ ॥

॥ ಪದಪಾಠಃ ॥

ನ । ಮಾ । ತಮತ್ । ನ । ಶ್ರಮತ್ । ನ । ಉತ । ತಂದ್ರತ್ । ನ । ವೋಚಾಮ । ಮಾ । ಸುನೋತ । ಇತಿ । ಸೋಮಂ ।
ಯಃ । ಮೇ । ಪೃಣಾತ್ । ಯಃ । ದದತ್ । ಯಃ । ನಿऽಬೋಧಾತ್ । ಯಃ । ಮಾ । ಸುನ್ವಂತಂ । ಉಪ । ಗೋಭಿಃ । ಆ । ಅಯತ್ ॥ ೭ ॥

॥ ಸಾಯಣಭಾಷ್ಯಂ ॥

ಸ ಇಂದ್ರೋ ಮಾಂ ನ ತಮತ್। ನ ತಮಯತು । ನ ಗ್ಲಪಯತು । ತಥಾ ನ ಶ್ರಮತ್। ಶ್ರಾಂತಂ ಮಾ ಕರೋತು ॥ ತಮು ಗ್ಲಾನೌ ಶ್ರಮು ತಪಸಿ ಖೇದೇ ಚ । ಅನಯೋರ್ಹೇತುಮಣ್ಣ್ಯಂತಯೋರ್ಲೇಟ್ಯಡಾಗಮಃ । ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವಾಣ್ಣೇರನಿಟೀತಿ ಣಿಲೋಪಃ ॥ ಉತ ಅಪಿ ಚ ಮಾಂ ನ ತಂದ್ರತ್ । ನ ತಂದ್ರಯೇತ್ । ತಂದ್ರ್ಯಾಲಸ್ಯೇನ ಯುಕ್ತಂ ಮಾ ಕರೋತು ॥ ತಂದ್ರೀಶಬ್ದಾತ್ತತ್ಕರೋತೀತಿ ಣಿಚ್ । ಣಾವಿಷ್ಠವತ್ಪ್ರಾತಿಪದಿಕಸ್ಯೇತಿ ಟಿಲೋಪಃ । ಅನ್ಯತ್ ಪೂರ್ವವತ್ ॥ ಇಂದ್ರಯಾಗಾಯ ಸೋಮಂ ಮಾ ಸುನೋತ ಮಾಭಿಷುಣುತೇತ್ಯನ್ಯಾನ್ಯಜಮಾನಾನ್ ಪ್ರತಿ ನ ವೋಚಾಮ । ನ ಬ್ರವಾಮ ॥ ವಕ್ತೇಶ್ಛಾಂದಸೋ ಲುಙ್। ಸುನೋತೇತ್ಯತ್ರ ತಪ್ತನಪ್ತನಥನಾಶ್ಚೇತಿ ತಸ್ಯ ತಬಾದೇಶಃ । ತಸ್ಯ ಪಿತ್ತ್ವೇನ ಙಿತ್ತ್ವಾಭಾವಾದ್ಗುಣಃ ॥ ಯ ಇಂದ್ರೋ ನೋ ಮಮ ಪೃಣಾತ್ ಕಾಮಾನ್ ಪೂರಯೇತ್ ಯಶ್ಚ ದದತ್ ಅಭೀಷ್ಟಂ ಫಲಂ ದದ್ಯಾತ್ ಯಶ್ಚ ನಿಬೋಧಾತ್ ಅಸ್ಮದೀಯಂ ಸ್ತೋತ್ರಂ ಯಾಗಂ ವಾವಗಚ್ಛೇತ್ ಯ ಇಂದ್ರಃ ಸುನ್ವಂತಂ ಸೋಮಮಭಿಷುಣ್ವಂತಂ ಮಾಮಸ್ಮಭ್ಯಂ ದಾತವ್ಯೈರ್ಗೋಭಿಃ ಸಹೋಪಾಯತ್ ಉಪಾಗಚ್ಛೇತ್ । ಸ ಇಂದ್ರ ಇತಿ ಪೂರ್ವತ್ರಾನ್ವಯಃ ॥ ಪೃಣಾದಿತ್ಯಾದಿಷು ಲೇಟ್ಯಡಾಗಮಃ ॥

॥ ಪ್ರತಿಪದಾರ್ಥ

**ಯಃ**—ಯಾವ ಇಂದ್ರನು । **ನಃ**—ನನ್ನ । **ಪೃಣಾತ್**—ಇಷ್ಟಾರ್ಥಗಳನ್ನು ಪೂರೈಸುವನೋ । **ಯಃ**—ಯಾರು । **ದದತ್**—(ನಾನು ಅಪೇಕ್ಷಿಸಿದುದನ್ನು ಕೊಡುವನೋ । **ಯಃ**—ಯಾರು । **ನಿಬೋಧಾತ್**—ನಮ್ಮಿಂದ ಕೃತವಾದ ಪೂಜೆಗಳನ್ನು ತಿಳಿದು(ಸ್ವೀಕರಿಸುವನೋ)। **ಯಃ**—ಯಾವ ಇಂದ್ರನು। **ಸುನ್ವಂತಂ ಮಾ**—ಸೋಮರಸವನ್ನು ಹಿಂಡುವ ನನ್ನನ್ನು । **ಗೋಭಿಃ**—ಗೋವುಗಳೊಂದಿಗೆ । **ಉಪ ಆಯತ್**—ಸೇರುವಂತೆ ಮಾಡುವನೋ । **(ಸಃ**—ಆ ಇಂದ್ರನು) । **ಮಾ**—ನನ್ನನ್ನು । **ನ ತಮತ್**—ಕಾಡದೇ ಇರಲಿ । **ನ ಶ್ರಮತ್**—ಶ್ರಮವನ್ನು ಹೊಂದುವಂತೆ ಮಾಡದಿರಲಿ । **ಉತ**—ಮತ್ತು । **ನ ತಂದ್ರತ್**—ಆಲಸಿಕೆಯಿಂದ ಯುಕ್ತನಾಗುವಂತೆ ಮಾಡದಿರಲಿ । **ಸೋಮಂ**—(ಇಂದ್ರ ಯಾಗಕ್ಕಾಗಿ) ಸೋಮವನ್ನು । **ಮಾ ಸುನೋತ**—ಹಿಂಡಬೇಡಿ । **ಇತಿ**—ಎಂದು । **ನ ವೋಚಾಮ**—(ಇತರ ಯಜಮಾನರಿಗೆ) ನಾವು ಹೇಳುವುದಿಲ್ಲ.

॥ ಭಾವಾರ್ಥ ॥

ನನ್ನ ಇಷ್ಟಾರ್ಥಗಳನ್ನು ಪೂರೈಸಿ ನಾನು ಅಪೇಕ್ಷಿತವಾದುದನ್ನು ಕೊಡುವವನೂ, ನಮ್ಮಿಂದ ಆಚರಿತವಾದ ಪೂಜೆಯನ್ನು ತಿಳಿಯುವವನೂ, ಸೋಮರಸವನ್ನು ಹಿಂಡುವ ನನ್ನನ್ನು ಗೋವುಗಳೊಂದಿಗೆ ಸೇರುವಂತೆ ಮಾಡುವವನೂ ಆದ ಇಂದ್ರನು ನನ್ನನ್ನು ಕಾಡದಿರಲಿ. ನನಗೆ ಶ್ರಮವನ್ನು ಕೊಡದಿರಲಿ. ಮತ್ತು ನನ್ನನ್ನು ಆಲಸನನ್ನಾಗಿ ಮಾಡದಿರಲಿ. ಇಂದ್ರಯಾಗಕ್ಕಾಗಿ ಸೋಮರಸವನ್ನು ಹಿಂಡಬೇಡಿ ಎಂದು ನಾನು ಇತರರಿಗೆ ಹೇಳುವುದಿಲ್ಲ.

English Translation.

Let not Indra vex me, or weary me, or make me slothful : never may we say (to another), do not offer the Soma libation : (for it is Indra)

who will fulfil (my wishes), who will give (me riches), who will hear (my prayers), who will reward me, presenting libations, with cattle.

' ವಿಶೇಷವಿಷಯಗಳು '

ಈ ಋಕ್ಕಿನಲ್ಲಿ ಇಂದ್ರನನ್ನು ಮಾತ್ರ ಸ್ತುತಿಸಿದೆ. **ಯೋ ಪೃಣಾತ್ ಮಮ ಕಾಮಾನ್ ಪೂರಯೇತ್, ದದತ್—ಅಭೀಷ್ಟಂ ಫಲಂ ದದ್ಯಾತ್, ನಿಬೋಧಾತ್-ಅಸ್ಮದೀಯಂ ಸ್ತೋತ್ರಂ ಯಾಗಂ ವಾ ಅವಗಚ್ಛೇತ್, ಗೋಭಿಃ ಸಹ ಉಪ ಆಯಿತ್-ಸೋಮಮಭಿಷುಣ್ವಂತಂ ಮಾಂ ಅಸ್ಮಭ್ಯಂ ದಾತವ್ಯೈಃ ಗೋಭಿಸ್ಸಹ ಉಪಾಗಚ್ಛೇತ್** । ಇಂದ್ರನು ಯಾಗವನ್ನು ಆಚರಿಸುವ ಯಜಮಾನನ ಇಷ್ಟಗಳನ್ನು ನೆರವೇರಿಸುವನು, ಅಭಿಲಾಷೆಗನುಸಾರವಾದ ಫಲದಾತೃವಾಗಿರುವನು, ಸ್ತುತಿಗಳನ್ನು ತಿಳಿದು ಯಾಗಗಳಿಗೆ ಬರುವನು, ಸೋಮಯಾಗಗಳಲ್ಲಿ ಸೋಮರಸವನ್ನು ಹಿಂಡುವ ಯಜಮಾನನಿಗೆ ಅನುಗ್ರಹಿಸುವ ಗೋವುಗಳೊಡನೆ ಯಾಗಗಳಿಗೆ ಬರುವನು ಎಂದು ವರ್ಣಿಸಿ, ಈ ಇಂದ್ರನಿಂದ ಯಜಮಾನನು **ನ ತಮಯತು, ನ ಗ್ಲಪಯತು, ಶ್ರಾಂತಂ ಮಾ ಕರೋತು, ನ ತಂದ್ರಯೇತ್**, ಗ್ಲಾನಿಯು ಉಂಟಾಗದಿರಬೇಕೆಂದೂ, ಆಯಾಸವುಳ್ಳವನಾಗದೆ ಇರಬೇಕೆಂದೂ, ಸೋಮಾರಿತನವು ಉಂಟಾಗದಿರಲೆಂದೂ ಅನುಗ್ರಹವನ್ನು ಪ್ರಾರ್ಥಿಸಿದ್ದಾನೆ. **ಇಂದ್ರಯಾಗಾಯ ಸೋಮಂ ಮಾ ಸುನೋತ ಇತಿ ನ ವೋ ಚಾಮ**—ಮತ್ತು **ಇಂದ್ರಯಾಗಾಯ ಸೋಮಂ ಮಾ ಅಭಿಷುಣುತ ಇತಿ ಅನ್ಯಾನ್ ಯಜಮಾನಾನ್ ಪ್ರತಿ ನ ಬ್ರವಾಮ** ಇಂದ್ರನನ್ನು ಉದ್ದೇಶಮಾಡಿ ಯಾಗವನ್ನಾಚರಿಸುವ ಇತರ ಯಜಮಾನರ ಸಮೀಪಕ್ಕೆ ಹೋಗಿ ಇಂದ್ರನಿಗಾಗಿ ಸೋಮರಸವನ್ನು ಹಿಂಡಬೇಡಿ ಎಂದು ಹೇಳುವುದು ಯಾವಾಗಲೂ ಆಗದಿರಲಿ ಎಂದು ಆಶಿಸಿದೆ.

~~~

॥ ಸಂಹಿತಾಪಾಠಃ ॥

ಸರಸ್ವತಿ ತ್ವಮಸ್ಮಾಁ ಅವಿಡ್ಢಿ ಮರುತ್ವತೀ ಧೃಷತೀ ಜೇಷಿ ಶತ್ರೂನ್ ।
ತ್ಯಂ ಚಿಚ್ಛರ್ಧಂತಂ ತವಿಷೀಯಮಾಣಮಿಂದ್ರೋ ಹಂತಿ ವೃಷಭಂ ಶಂಡಿಕಾನಾಂ ॥

॥ ಪದಪಾಠಃ

ಸರಸ್ವತಿ । ತ್ವಂ । ಅಸ್ಮಾನ್ । ಅವಿಡ್ಢಿ । ಮರುತ್ವತೀ । ಧೃಷತೀ । ಜೇಷಿ । ಶತ್ರೂನ್ ।
ತ್ಯಂ । ಚಿತ್ । ಶರ್ಧಂತಂ । ತವಿಷೀಽಯಮಾಣಂ । ಇಂದ್ರಃ । ಹಂತಿ । ವೃಷಭಂ । ಶಂಡಿಕಾನಾಂ ॥ ೮ ॥

॥ ಸಾಯಣಭಾಷ್ಯಂ ॥

ಹೇ ಸರಸ್ವತಿ ಸರಣವತಿ ದೇವಿ ತ್ವಮಸ್ಮಾನ್ ಸ್ತೋತೄನ್ ಅವಿಡ್ಢಿ । ರಕ್ಷ ॥ ರಕ್ಷಾರ್ಥಸ್ಯಾವತೇರ್ಲೋಟ್ಯೇತದ್ರೂಪಂ ॥ ತಥಾ ಮರುತ್ವತೀ ಮರುದ್ಭಿರ್ಯುಕ್ತಾ । ಮಧ್ಯಮಸ್ಥಾನಾ ಹಿ ವಾಕ್ ಸರಸ್ವತೀ ಮರುತಶ್ಚ ಮಧ್ಯಮಸ್ಥಾನಸ್ಥಾಃ । ಅತಸ್ತದ್ವತೀ ಸತೀ ಧೃಷತೀ ಧರ್ಷಯಂತೀ ಶತ್ರೂನ್ ಶಾತಯಿತ್ರ್ಯಾನ್
~~~

**ವೈರಿಣೋ ಜೇಷಿ । ಜಯ ॥ ಜಯತೇಶ್ಛಾಂದಸಃ ಶಪಃ ಶ್ಲುಃ ॥ ಕಿಂಚಾಯಮಿಂದ್ರಸ್ತ್ಯಂ ಚಿತ್ ತಮಸ್ಯ-ಸುರಂ ಹಂತಿ । ಹತವಾನ್ ॥ ವ್ಯತ್ಯಯೇನ ಭೂತಾರ್ಥೇ ಲಟ್ ॥ ಕೀದೃಶಂ । ಶರ್ಧಂತಂ । ಪ್ರಸಹನ-ಶೀಲಂ ॥ ಶೃಧು ಪ್ರಸಹನೇ ॥ ತವಿಷೀಯಮಾಣಂ । ತವಿಷೀ ಬಲಮಿವಾಚರಂತಂ ಸರ್ವಸ್ಯ ಭಂಜನೇ ಶಕ್ತಂ । ಶಂಡಿಕಾನಾಂ । ಶಂಡಾಮರ್ಕಾವಸುರಪುರೋಹಿತೌ । ತೈ.ಸಂ. ೬-೪-೧೦-೧। ಶಂಡವಂಶ್ಯಾನಾಂ ಮಧ್ಯೇ ವೃಷಭಂ ಪ್ರಧಾನಂ ॥**

। ಪ್ರತಿಪದಾರ್ಥ ॥

**ಸರಸ್ವತಿ**—ಎಲೈ ಸರಸ್ವತೀದೇವಿಯೇ । **ತ್ವಂ**—ನೀನು । **ಅಸ್ಮಾನ್**—ಸ್ತೋತೃಗಳಾದ ನಮ್ಮನ್ನು । **ಅವಿಢ್ಢಿ**—ರಕ್ಷಿಸು । **ಮರುತ್ವತೀ**—ಮರುದ್ದೇವತೆಗಳೊಡನೆ ಕೂಡಿದವಳೂ । **ಧೃಷತೀ**—ಶತ್ರುಗಳನ್ನು ಮರ್ದನ ಮಾಡುವವಳೂ ಆಗಿ । **ಶತ್ರೂನ್**—ಶತ್ರುಗಳನ್ನು । **ಜೇಷಿ**—ಜಯಿಸು । **ಇಂದ್ರಃ**—ಇಂದ್ರನು । **ಶರ್ಧಂತಂ**—ಅಪ್ರತಿಹತವಾದ ಶಕ್ತಿಯುಳ್ಳವನೂ । **ತವಿಷೀಯಮಾಣಂ**—ತನ್ನ ಶಕ್ತಿಯಲ್ಲಿ ಅಭಿಮಾನದಿಂದ ಕೂಡಿದವನೂ । **ಶಂಡಿಕಾನಾಂ**—ಶಂಡವಂಶದವರಿಗೆ । **ವೃಷಭಂ**—ಪ್ರಧಾನನೂ ಆದ । **ತ್ಯಂ ಚಿತ್**—ಆ ಅಸುರನನ್ನು । **ಹಂತಿ**—ಕೊಂದಿದ್ದಾನೆ.

। ಭಾವಾರ್ಥ ॥

ಎಲೈ ಸರಸ್ವತೀದೇವಿಯೇ, ನೀನು ಸ್ತೋತೃಗಳಾದ ನಮ್ಮನ್ನು ರಕ್ಷಿಸು. ಮರುದ್ದೇವತೆಗಳೊಡನೆ ಕೂಡಿದವಳೂ, ಶತ್ರುಗಳನ್ನು ಮರ್ದನಮಾಡುವವಳೂ ಆಗಿ ನೀನು ಶತ್ರುಗಳನ್ನು ಜಯಿಸು. ಅದೇ ಕಾಲದಲ್ಲಿ ಇಂದ್ರನು ಅಪ್ರತಿಹತವಾದ ಶಕ್ತಿಯುಳ್ಳವನೂ, ತನ್ನ ಶಕ್ತಿಯಲ್ಲಿ ಗರ್ವವುಳ್ಳವನೂ ಶಂಡವಂಶದ ಅಸುರರಿಗೆ ಪ್ರಧಾನನೂ ಆದ ಅಸುರನನ್ನು ಕೊಂದಿದ್ದಾನೆ.

## English Translation.

Saraswati, protect us : associated with the Maruts, and firm (of purpose), overcome our foes, whilst Indra slays the chief of the Shandikas, defying him and confiding in his strength.

। ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಪೂರ್ವಾರ್ಧದಲ್ಲಿ ಸರಸ್ವತೀದೇವಿಯನ್ನು ಸ್ತುತಿಸಲಾಗಿದೆ.

**ಸರಸ್ವತಿ— ಸರಣವತಿ ದೇವಿ ।** ಯಾಸ್ಕರು **ಸರಸ್ವತೀ** ಎಂಬ ಪದವನ್ನು ವಾಙ್ನಾಮಗಳಲ್ಲಿಯೂ, (ನಿ. ೨-೨೩) ನದೀನಾಮಗಳಲ್ಲಿಯೂ (ನಿ. ೨-೨೪) ಪಠಿಸಿದ್ದಾರೆ. ಮತ್ತು

**ಪಾವಕಾ ನಸ್ಸರಸ್ವತೀ ವಾಜೇಭಿರ್ವಾಜಿನೀವತೀ । ಯಜ್ಞಂ ವಷ್ಟು ಧಿಯಾವಸುಃ ॥**

(ಋ. ಸಂ. ೧-೩-೧೦)

ಎಂಬ ಈ ಋಕ್ಕನ್ನು ಉದಾಹರಿಸಿ **ಸರಸ್ವತೀ—ಮಾಧ್ಯಮಿಕಾ ವಾಕ್** ಎಂಬ ಅರ್ಥವನ್ನು ವಿವರಿಸಿದ್ದಾರೆ. ಇಲ್ಲಿ ಸಾಯಣರು **ಸರಣವತಿ ದೇವಿ** ಎಂದು ಅರ್ಥವನ್ನು ಹೇಳಿ, ಈ ದೇವಿಯನ್ನು ಸಂಬೋಧಿಸಿ ಈ ದೇವಿಯಿಂದ ಸ್ತೋತೃಗಳಾದ ಯಜಮಾನರಿಗೆ ರಕ್ಷಣೆಯು ಪ್ರಾರ್ಥಿತವಾಗಿದೆ ಎಂದು ವಿವರಿಸಿದ್ದಾರೆ.

**ಮರುತ್ವತೀ—ಮರುದ್ಭಿರ್ಯುಕ್ತಾ । ಮಧ್ಯಮಸ್ಥಾನಾ ಹಿ ವಾಕ್ ಸರಸ್ವತೀ ಮರುತಶ್ಚ ಮಧ್ಯಮಸ್ಥಾನಸ್ಥಾಃ ಅತಸ್ತದ್ವತೀ ।** ಮಧ್ಯಮಸ್ಥಾನವುಳ್ಳದ್ದಾದ ವಾಗ್ದೇವತೆಯು ಮಧ್ಯಮಸ್ಥಾನದಲ್ಲಿರುವ ಮರುದ್ದೇವತೆಗಳೊಡನೆ ಇರುವ ಕಾರಣ ಮರುದ್ದೇವತೆಗಳ ಹಾಗೆ ಇತರರಿಂದ ಜಯಿಸಲಶಕ್ಯಳಾಗಿರುವಳು ಎಂದೂ, **ಶತ್ರೂನ್ ಜೇಷಿ—ಶಾತಯಿತ್ವಾನ್ ವೈರಿಣಃ** ಜಯ ಯಜಮಾನರ ಶತ್ರುಗಳನ್ನು ಈ ದೇವಿಯು ಜಯಿಸಲಿ ಎಂದೂ ಆಶಿಸಿದೆ. ಉತ್ತರಾರ್ಧದಲ್ಲಿ ಇಂದ್ರನು ಸ್ತುತನಾಗಿದ್ದಾನೆ.

**ಇಂದ್ರಃ ಶರ್ಧಂತಂ ತವಿಷೀಯಮಾಣಂ ಶಂಡಿಕಾನಾಂ ವೃಷಭಂ ತ್ಯಂ ಚಿತ್ ಹಂತಿ—ಪ್ರಸಹನಶೀಲಂ ಬಲಮಿವಾಚರಂತಂ ಸರ್ವಸ್ಯ ಭಂಜನೇ ಶಕ್ತಂ ಶಂಡಿಕಾನಾಂ ಪ್ರಧಾನಂ ಅಸುರಂ ಹತವಾನ್ ।** ಇಂದ್ರನು ಸರ್ವರನ್ನೂ ನಾಶಗೊಳಿಸುವ ಬಲವುಳ್ಳವನಾಗಿರುವ ನಿಮಿತ್ತ ಸರ್ವರನ್ನೂ ತಿರಸ್ಕರಿಸುವವನಾದ, ಶಂಡ ವಂಶದವರೆಲ್ಲರಿಗೂ ಮುಖ್ಯನಾಗಿರುವ ಅಸುರ ಪುರೋಹಿತನಾದ ಶಂಡನೆಂಬ ಅಸುರನನ್ನು ಕೊಂದನು ಎಂದು ಹೇಳಿ ಈ ದೇವಿಯು ಯಜಮಾನರ ಶತ್ರುಗಳನ್ನು ಜಯಿಸಲಿ ಎಂದು ಆಶಿಸಿದೆ. **ಶಂಡಿಕಾನಾಂ ವೃಷಭಂ ಅಸುರಂ** ಎಂಬಲ್ಲಿ ಶಂಡವಂಶೋತ್ಪನ್ನರಾದವರೆಂಬುದು **ಬೃಹಸ್ಪತಿರ್ದೇವಾನಾಂ ಪುರೋಹಿತ ಆಸೀಚ್ಛಂಡಾಮರ್ಕಾವಸುರಾಣಾಂ** ಎಂದು (ತೈ. ಸಂ. ೬-೪-೧೦-೧) ಉಕ್ತವಾಗಿದೆ.

॥ ಸಂಹಿತಾಪಾಠಃ ॥

ಯೋ ನಃ ಸನುತ್ಯ ಉತ ವಾ ಜಿಘತ್ನುರಭಿಖ್ಯಾಯ ತಂ ತಿಗಿತೇನ ವಿಧ್ಯ ।
ಬೃಹಸ್ಪತ ಆಯುಧೈರ್ಜೇಷಿ ಶತ್ರೂನ್ದ್ರುಹೇ ರಿಷಂತಂ ಪರಿ ಧೇಹಿ ರಾಜನ್

ಪದಪಾಠಃ ॥

ಯಃ । ನಃ । ಸನುತ್ಯಃ । ಉತ । ವಾ । ಜಿಘತ್ನುಃ । ಅಭಿಽಖ್ಯಾಯ । ತಂ । ತಿಗಿತೇನ । ವಿಧ್ಯ ।
ಬೃಹಸ್ಪತೇ । ಆಯುಧೈಃ । ಜೇಷಿ । ಶತ್ರೂನ್ । ದ್ರುಹೇ । ರಿಷಂತಂ । ಪರಿ । ಧೇಹಿ । ರಾಜನ್ ॥ ೯

॥ ಸಾಯಣಭಾಷ್ಯಂ ॥

**ಹೇ ಬೃಹಸ್ಪತೇ ಯೋ ನೋಽಸ್ಮಾಕಂ ಸನುತ್ಯಃ । ಸನುತರಿತ್ಯಂತರ್ಹಿತನಾಮ । ಅಂತರ್ಹಿತೇ ದೇಶೇ ಭವಶ್ಚೋರಃ ॥ ಸಗರ್ಭಸಯೂಥಸನುತಾದ್ಯತ್ ॥ ಉತ ವಾ ಅಪಿ ವಾ ಯೋ ಜಿಘತ್ನುರ್ಜಿಘಾಂಸುರ್ಭವತಿ । ತಮಭಿಖ್ಯಾಯ ಸಂವೀಕ್ಷ್ಯ ತಿಗಿತೇನ ತೀಕ್ಷ್ಣೇನಾಯುಧೇನ ವಿಧ್ಯ । ತಾಡಯ । ತಥಾಸ್ಮದೀಯಾನ್ ಶತ್ರೂನ್ ಆಯುಧೈರಾಯೋಧನಸಾಧನೈರಿಷ್ವಾದಿಭಿರ್ಜೇಷಿ । ಜಯ । ತಥಾ ಹೇ ರಾಜನ್ ರಾಜಮಾನ ಬೃಹಸ್ಪತೇ ದ್ರುಹೇ ದ್ರೋಗ್ಧ್ರೇ ಶತ್ರವೇ ರಿಷಂತಂ ಹಿಸಂತಂ ವಜ್ರಂ ಪರಿ ಧೇಹಿ । ಪರಿತೋ ಧಾರಯ । ಪ್ರಕ್ಷಿಪೇತ್ಯರ್ಥಃ ॥**

॥ ಪ್ರತಿಪದಾರ್ಥ ॥

**(ಬೃಹಸ್ಪತೇ**—ಎಲೈ ಬೃಹಸ್ಪತಿಯೇ) । **ಯಃ**—ಯಾರು । **ನಃ**—ನಮಗೆ (ಕೇಡನ್ನು ಬಯಸಿ) । **ಸನುತ್ಯಃ**—ಗುಪ್ತವಾದ ಸ್ಥಾನದಲ್ಲಿ ಕಾದಿರುವನೋ । **ಉತ ವಾ**—ಅಲ್ಲದೇ । **ಜಿಘತ್ನುಃ**—ಹಿಂಸಿಸಲಿಚ್ಛಿಸುವನೋ । **ತಂ**—ಆ ಅಸುರನನ್ನು । **ಅಭಿಖ್ಯಾಯ**—ಹುಡುಕಿ । **ತಿಗಿತೇನ**—ಹರಿತವಾದ ಆಯುಧದಿಂದ । **ವಿಧ್ಯ**—ಹೊಡೆ । **ಶತ್ರೂನ್**—ನಮ್ಮ ಶತ್ರುಗಳನ್ನು । **ಆಯುಧೈಃ**—ಬಾಣವೇ ಮುಂತಾದ ಆಯುಧಗಳಿಂದ ಹೊಡೆದು । **ಜೇಷಿ**—ಜಯಿಸು । **ರಾಜನ್**—ಪ್ರಕಾಶಮಾನನಾದ । **ಬೃಹಸ್ಪತೇ**—ಎಲೈ ಬೃಹಸ್ಪತಿಯೇ । **ದ್ರುಹೇ**—ದ್ರೋಹವನ್ನಾಚರಿಸತಕ್ಕ ಶತ್ರುವಿನ ಮೇಲೆ । **ರಿಷಂತಂ**—ಹಿಂಸಿಸತಕ್ಕ ವಜ್ರಾಯುಧವನ್ನು । **ಪರಿ ಧೇಹಿ**—ಬೀಸಿ ಎಸೆ.

॥ ಭಾವಾರ್ಥ ॥

ಪ್ರಕಾಶಮಾನನಾದ ಎಲೈ ಬೃಹಸ್ಪತಿಯೇ, ಯಾರು ನಮಗೆ ಕೇಡನ್ನು ಬಯಸಿ ಗುಪ್ತವಾದ ಸ್ಥಾನದಲ್ಲಿ ಕಾದಿರುವನೋ, ಮತ್ತು ಹಿಂಸಿಸಲಿಚ್ಛಿಸುವನೋ, ಆ ಅಸುರನನ್ನು ಹುಡುಕಿ ಹರಿತವಾದ ಆಯುಧದಿಂದ ಹೊಡೆ. ನಮ್ಮ ಶತ್ರುಗಳನ್ನು ಆಯುಧಗಳಿಂದ ಹೊಡೆದು ಜಯಿಸು. ದ್ರೋಹವನ್ನಾಚರಿಸತಕ್ಕ ಶತ್ರುವಿನ ಮೇಲೆ ಹಿಂಸಿಸತಕ್ಕ ವಜ್ರಾಯುಧವನ್ನು ಬೀಸಿ ಎಸೆ.

English Translation

Detecting him who is lying in ambush (against us), who is purposing our death, pierce him, Brihaspati, with your sharp (thunderbolt), and overthrow (our) enemies with (your) weapons: hurl, monarch, your destroying (shaft) against the oppressor.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಬೃಹಸ್ಪತಿಯು ಸ್ತುತನಾಗಿದ್ದಾನೆ. ಬೃಹಸ್ಪತಿಯನ್ನು ಸಂಬೋಧಿಸಿದೆ.

**ನಃ ಸನುತ್ಯಃ ಉತ ವಾ ಜಿಘತ್ನುಃ ತಂ ತಿಗಿತೇನ ವಿಧ್ಯ—ಅಸ್ಮಾಕಂ ಅಂತರ್ಹಿತದೇಶೇ ಭವಶ್ಚೋರಃ ಅಪಿವಾ ಜಿಘಾಂಸುರ್ಭವತಿ ತಂ ಅಭಿವೀಕ್ಷ್ಯ ತೀಕ್ಷ್ಣಾಯುಧೇನ ತಾಡಯ** । ಯಾಸ್ಕರು **ಸನುತಃ** ಎಂಬ ಪದವನ್ನು ಅಂತರ್ಹಿತನಾಮಗಳಲ್ಲಿ (ನಿ. ೩-೧೯) ಪಠಿಸಿದ್ದಾರೆ. ಬೃಹಸ್ಪತಿಯು ಯಜಮಾನರಾದ ನಮ್ಮ ವಿಷಯದಲ್ಲಿ ಗೂಢವಾಗಿರುವ ಪ್ರದೇಶಗಳಲ್ಲಿ ಅಡಗಿಕೊಂಡು ಕಳ್ಳತನವನ್ನು ಆಚರಿಸಿರುವ ಕಳ್ಳರನ್ನೂ ನಮ್ಮನ್ನು ನಾಶಪಡಿಸುವ ಇಚ್ಛೆಯುಳ್ಳವರನ್ನೂ ಹರಿತವಾದ ಆಯುಧದಿಂದ ಹೊಡೆಯಲಿ ಎಂದು ಆಶಿಸಿದೆ. ಮತ್ತು ಈ ಬೃಹಸ್ಪತಿಯು **ಶತ್ರೂನ್ ಆಯುಧೈಃ ಜೇಷಿ—ಅಸ್ಮದೀಯಾನ್ ಶತ್ರೂನ್ ಆಯೋಧನಸಾಧನೈಃ ಇಷ್ವಾದಿಭಿಃ ಜಯ.** ಯಜಮಾನರಾದ ನಮ್ಮ ಶತ್ರುಗಳನ್ನು ಯುದ್ಧಮಾಡುವ ಕಾಲದಲ್ಲಿ ಶತ್ರುಗಳನ್ನು ನಾಶಮಾಡುವ ಸಾಧಕಗಳಾದ ಬಾಣವೇ ಮೊದಲಾದವುಗಳಿಂದ ಜಯಿಸಲಿ ಎಂದೂ ಪ್ರಾರ್ಥಿಸಿದೆ. ಮತ್ತು ಬೃಹಸ್ಪತಿಯನ್ನು ಪ್ರಕಾಶಿಸುತ್ತಿರುವನೆಂದು ಪ್ರಶಂಸೆಮಾಡಿ, ಸಂಬೋಧಿಸಿ, **ದ್ರುಹೇ ರಿಷಂತಂ ಪರಿ ಧೇಹಿ—ದ್ರೋಗ್ಧ್ರೇ ಶತ್ರವೇ ಹಿಸಂತಂ ವಜ್ರಂ ಪ್ರಕ್ಷಿಪ** ಈ ಬೃಹಸ್ಪತಿಯು ಯಜಮಾನರಾದ ನಮಗೆ ದ್ರೋಹವನ್ನಾಚರಿಸುವ ಶತ್ರುಗಳ ನಾಶಕ್ಕಾಗಿ ವಜ್ರಾಯುಧವನ್ನು ಪ್ರೇರಿಸಲಿ ಅಥವಾ ಬೀಸಿ ಎಸೆಯಲಿ ಎಂದೂ ಯಜಮಾನರ ಪ್ರಾರ್ಥನೆಯು ಉಕ್ತವಾಗಿದೆ.

॥ ಸಂಹಿತಾಪಾಠಃ ॥

ಅಸ್ಮಾಕೇಭಿಃ ಸತ್ವಭಿಃ ಶೂರ ಶೂರೈರ್ವೀರ್ಯಾ ಕೃಧಿ ಯಾನಿ ತೇ ಕರ್ತ್ವಾನಿ ।
ಜ್ಯೋಗಭೂವನ್ನನುಧೂಪಿತಾಸೋ ಹತ್ವೀ ತೇಷಾಮಾ ಭರಾ ನೋ ವಸೂನಿ ॥

॥ ಪದಪಾಠಃ ॥

ಅಸ್ಮಾಕೇಭಿಃ । ಸತ್ವಽಭಿಃ । ಶೂರ । ಶೂರೈಃ । ವೀರ್ಯಾ । ಕೃಧಿ । ಯಾನಿ । ತೇ । ಕರ್ತ್ವಾನಿ ।
ಜ್ಯೋಕ್ । ಅಭೂವನ್ । ಅನುಽಧೂಪಿತಾಸಃ । ಹತ್ವೀ । ತೇಷಾಂ । ಆ । ಭರ । ನಃ । ವಸೂನಿ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಶೂರ ಶೌರ್ಯವನ್ನಿಂದ್ರ ಅಸ್ಮಾಕೇಭಿರಾಸ್ಮಾಕೀನೈಃ ಸತ್ವಭಿಃ ಪರೇಷಾಂ ಸಾದಕೈಃ ಶೂರೈಃ ಶೌರ್ಯೋಪೇತೈರ್ಭಟೈಸ್ತಾನಿ ವೀರ್ಯಾ ವೀರಕರ್ಮಾಣಿ ಕೃಧಿ ಕುರು ಯಾನಿ ತೇ ತ್ವಯಾ ಕರ್ತ್ವಾನಿ ಕರಣೀಯಾನಿ ॥ ಕೃತ್ಯಾರ್ಥೇ ತವೈಕೇನಿತಿ ಕರೋತೇಸ್ತ್ವನ್ಪ್ರತ್ಯಯಃ ॥ ಜ್ಯೋಕ್ ಚಿರಕಾಲಮನುಧೂಪಿತಾಸೋ ಧೂಪಾಯಮಾನಹೃದಯಾ ಮದೀಯಾಃ ಶತ್ರವೋಽಭೂವನ್ । ಆಸನ್ । ಹತ್ವೀ ತಾನ್ ಹತ್ವಾ ॥ ಸ್ನಾತ್ವ್ಯಾದಯಶ್ಚೇತೀಕಾರಃ ತೇಷಾಂ ಶತ್ರೂಣಾಂ ವಸೂನಿ ಧನಾನಿ ನೋಽಸ್ಮಭ್ಯಮಾಭರ । ಆಹರ ॥

॥ ಪ್ರತಿಪದಾರ್ಥ ॥

**ಶೂರ**— ಪರಾಕ್ರಮಿಯಾದ ಇಂದ್ರನೇ, । **ಅಸ್ಮಾಕೇಭಿಃ**— ನಮಗೆ ಸಂಬಂಧಿಸಿದವರೂ । **ಸತ್ವಭಿಃ**— ಶತ್ರುದಮನಮಾಡಲು ಶಕ್ತಿಯುಳ್ಳವರೂ । **ಶೂರೈಃ**— ಶೌರ್ಯಯುಕ್ತರೂ ಆದ ಭಟರೊಡನೆ ಸೇರಿ । **ಯಾನಿ**— ಯಾವ ವೀರ್ಯಕರ್ಮಗಳು । **ತೇ**— ನಿನ್ನಿಂದ । **ಕರ್ತ್ವಾನಿ**— ಆಚರಿಸಲ್ಪಡಬೇಕೋ ಅಂತಹ । **ವೀರ್ಯಾ**— ವೀರ್ಯಕರ್ಮಗಳನ್ನು । **ಕೃಧಿ**— ನೆರವೇರಿಸು । **ಜ್ಯೋಕ್**— ಬಹಳ ಕಾಲ (ನಮ್ಮ ಶತ್ರುಗಳು) । **ಅನುಧೂಪಿತಾಸಃ**— ಗರ್ವದಿಂದ ಕೊಬ್ಬಿದವರಾಗಿ । **ಅಭೂವನ್**— ಇದ್ದರೋ । **ಹತ್ವೀ**— ಅಂತಹ ಅವರನ್ನು ಕೊಂದು । **ತೇಷಾಂ**— ಅವರ । **ವಸೂನಿ**— ಧನಗಳನ್ನು । **ನಃ**— ನಮಗೆ । **ಆ ಭರ**— ತೆಗೆದುಕೊಂಡು ಬಂದು ಕೊಡು.

॥ ಭಾವಾರ್ಥ ॥

ಪರಾಕ್ರಮಿಯಾದ ಇಂದ್ರನೇ, ನಮಗೆ ಸಂಬಂಧಿಸಿದವರೂ, ಶತ್ರುದಮನಮಾಡಲು ಶಕ್ತಿಯುಳ್ಳವರೂ, ಶೌರ್ಯಯುಕ್ತರೂ ಆದ ಭಟರೊಡನೆ ಸೇರಿ ಯಾವ ವೀರ್ಯಕರ್ಮಗಳು ನಿನ್ನಿಂದ ಆಚರಿಸಲ್ಪಡಬೇಕೋ ಅಂತಹ ವೀರ ಕರ್ಮಗಳನ್ನು ನೆರವೇರಿಸು. ಬಹಳಕಾಲ ನಮ್ಮ ಶತ್ರುಗಳು ಗರ್ವದಿಂದ ಕೊಬ್ಬಿದವರಾಗಿದ್ದರು. ಅವರನ್ನು ಕೊಂದು ಅವರ ಧನವನ್ನು ತಂದು ನಮಗೆ ಹಂಚು.

## English Translation.

Achieve, hero, along with our valiant heroes, the exploits that are to be achieved by you: long have (our enemies) been inflated (with pride); slay them, and bring to us their treasures.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರನು ಸ್ತುತನಾಗಿದ್ದಾನೆ. **ಶೂರ** ಎಂಬ ಪದಕ್ಕೆ **ಶೌರ್ಯವನ್** ಬಲವುಳ್ಳವನೆಂದು ಅರ್ಥವನ್ನು ವಿವರಿಸಿ, ಈ ಪದದಿಂದ ಇಂದ್ರನನ್ನು ಸಂಬೋಧಿಸಿ, ಈ ಇಂದ್ರನು **ಅಸ್ಮಾಕೇಭಿಃ—ಅಸ್ಮಾಕೀನೈಃ** ಯಜಮಾನರಾದ ನಮಗೆ ಸಂಬಂಧಿಸಿದವುಗಳಾಗಿಯೂ, **ಸತ್ವಭಿಃ—ಪರೇಷಾಂ ಸಾದಕೈಃ** ಶತ್ರುಗಳನ್ನು ನಿರ್ಮೂಲ ಮಾಡುವವುಗಳಾಗಿಯೂ, **ವೀರ್ಯಾ—ವೀರಕರ್ಮಾಣಿ** ವೀರರಿಂದ ಆಚರಿಸಲರ್ಹಗಳಾಗಿಯೂ, **ಕರ್ತ್ವಾ—ಕರಣೀಯಾನಿ** ಅವಶ್ಯಕರ್ತವ್ಯವುಗಳಾಗಿಯೂ ಇರುವ ಕಾರ್ಯಗಳನ್ನು (ಇಂದ್ರನು) ಆಚರಿಸಲಿ ಎಂದು ಆಶಂಸಿತ ವಾಗಿದೆ.

**ಅನುಧೂಪಿತಾಸಃ ಹತ್ವೀ ತೇಷಾಂ ವಸೂನಿ ನಃ ಆಭರ—ಮದೀಯಾಃ ಶತ್ರವಃ ಧೂಪಾಯಮಾನ ಹೃದಯಾಃ । ತಾನ್ ಹತ್ವಾ ತೇಷಾಂ ಶತ್ರೂಣಾಂ ಧನಾನಿ ಅಸ್ಮಭ್ಯಂ ಆಹರ.** ಯಜಮಾನರಾದ ನಮ್ಮ ಶತ್ರುಗಳು ಬಹಳ ಕಾಲದಿಂದಲೂ ನಮ್ಮ ವಿಷಯದಲ್ಲಿರುವ ಕ್ರೋಧವನ್ನು ತಮ್ಮಲ್ಲಿ ಅಡಗಿಸಿಕೊಂಡು ಇರುತ್ತಾರೆ ಯಾದ ಕಾರಣ ಇಂದ್ರನು ಅವರನ್ನು ನಾಶಗೊಳಿಸಿ ಅವರ ಧನವನ್ನು ನಮಗೆ ತಂದುಕೊಡಲಿ ಎಂದು ಯಜಮಾನರ ಪ್ರಾರ್ಥನೆಯು ಉಕ್ತವಾಗಿರುತ್ತದೆ.

ವಸು ಶಬ್ದವು ಯಾಸ್ಕರಿಂದ ಅನೇಕಾರ್ಥಗಳಲ್ಲಿ ಪಠಿತವಾಗಿದೆ. ಇಲ್ಲಿ ಧನವೆಂಬ ಅರ್ಥವನ್ನು ವಿವರಿಸಿದೆ.



॥ ಸಂಹಿತಾಪಾಠಃ ॥

ತಂ ವಃ ಶರ್ಧಂ ಮಾರುತಂ ಸುಮ್ನಯುರ್ಗಿರೋಪ ಬ್ರುವೇ ನಮಸಾ ದೈವ್ಯಂ
ಜನಂ ।
ಯಥಾ ರಯಿಂ ಸರ್ವವೀರಂ ನಶಾಮಹಾ ಅಪತ್ಯಸಾಚಂ ಶ್ರುತ್ಯಂ ದಿವೇದಿವೇ ॥

ಪದಪಾಠಃ

ತಂ । ವಃ । ಶರ್ಧಂ । ಮಾರುತಂ । ಸುಮ್ನೃಽಯುಃ । ಗಿರಾ । ಉಪ । ಬ್ರುವೇ । ನಮಸಾ । ದೈವ್ಯಂ ।
ಜನಂ ।

ಯಥಾ । ರಯಿಂ । ಸರ್ವಽವೀರಂ । ನಶಾಮಹೈ । ಅಪತ್ಯಽಸಾಚಂ । ಶ್ರುತ್ಯಂ । ದಿವೇಽದಿವೇ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಮರುತೋ ವೋ ಯುಷ್ಮಾಕಂ ಶರ್ಧಂ ಬಲಂ ಮಾರುತಂ ಮರುತ್ಸಮೂಹರೂಪಂ ದೈವ್ಯಂ ದೇವೇನೇಂದ್ರೇಣ ಸಂಬದ್ಧಂ ಪ್ರಾದುರ್ಭೂತಂ ಏವಂಗುಣವಿಶಿಷ್ಟಂ ಬಲಂ ನಮಸಾ ನಮಸ್ಕಾರೇಣ ಹವಿಷಾ ವಾ ಗಿರಾ ಸ್ತೋತ್ರೇಣೋಪಬ್ರುವೇ । ಸ್ತೌಮಿ । ಯಥಾ ಯೇನ ಪ್ರಕಾರೇಣ ವಯಂ ಸರ್ವವೀರಂ ಸರ್ವೈರ್ವೀರೈರ್ವಿಶೇಷೇಣ ಶತ್ರೂಣಾಂ ಪ್ರೇರಕೈರ್ಭಟೈರುಪೇತಮಪತ್ಯಸಾಚಮಪತ್ಯೈರಪತನಹೇತುಭೂತೈಃ ಪುತ್ರಾದಿಭಿರುಪೇತಂ ಶ್ರುತ್ಯಂ ಶ್ರವಣೀಯಂ ಪ್ರಶಸ್ಯಭೂತಂ ರಯಿಂ ದಿವೇದಿವೇ ಪ್ರತಿದಿವಸಂ ನಶಾಮಹೈ । ವ್ಯಾಪ್ನವಾಮ ॥ ನಶತಿರ್ವ್ಯಾಪ್ತಿಕರ್ಮಾ । ಲೇಟ್ಯಾಡಾಗಮಃ । ವೈತೋಽನ್ಯತ್ರೇತ್ಯೈಕಾರಃ ॥

॥ ಪ್ರತಿಪದಾರ್ಥ ॥

**ಮರುತಃ**—ಎಲೈ ಮರುದ್ದೇವತೆಗಳೇ । **ಯಥಾ**—ಯಾವವಿಧವಾದ । **ಸರ್ವವೀರಂ**—ಸಮಸ್ತವಾದ ವೀರಭಟರೊಂದಿಗೆ ಕೂಡಿದುದೂ । **ಅಪತ್ಯಸಾಚಂ**—ಪುತ್ರಾದಿಗಳಿಂದ ಕೂಡಿದುದೂ । **ಶ್ರುತ್ಯಂ**—ಪ್ರಖ್ಯಾತವಾದುದೂ ಆದ । **ರಯಿಂ**—ಧನವನ್ನು । **ದಿವೇದಿವೇ**—ಪ್ರತಿದಿನವೂ । **ನಶಾಮಹೈ**—ಪೂರ್ಣವಾಗಿ ಹೊಂದುತ್ತೇವೆಯೋ ಅಂತಹುದೂ । **ನಮಸಾ**—ನಮಸ್ಕಾರದಿಂದಲೂ ಹವಿಸ್ಸಿನಿಂದಲೂ ಕೂಡಿದುದೂ ಆದ । **ಗಿರಾ**—ಸ್ತುತಿರೂಪವಾದ ವಾಕ್ಕಿನಿಂದ । **ವಃ**—ನಿಮಗೆ ಸಂಬಂಧಿಸಿದುದೂ । **ಮಾರುತಂ**—ಮರುತ್ಸಮೂಹರೂಪವಾದುದೂ । **ಶರ್ಧಂ** — ಸಂಘಾತ್ಮಕವಾದ ಶಕ್ತಿಯುಳ್ಳದ್ದೂ । **ದೈವ್ಯಂ** — ದೇವತಾತ್ಮವಾದದ್ದೂ (ಅಥವಾ ಇಂದ್ರನೊಡನೆ ಸಂಬಧಿಸಿದುದೂ) । **ಜನಂ**—ಪ್ರಾದುರ್ಭೂತವಾದದ್ದೂ ಆದ ಶಕ್ತಿಯನ್ನು । **ಬ್ರುವೇ**—ಸ್ತುತಿಸಿ ಪೂಜಿಸುತ್ತೇನೆ.

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ಯಾವ ವಿಧವಾದ ಪೂಜೆಯಿಂದ ಸಮಸ್ತವಾದ ವೀರಭಟರೊಂದಿಗೆ ಕೂಡಿದುದೂ, ಪುತ್ರಾದಿಗಳಿಂದ ಕೂಡಿದುದೂ, ಪ್ರಖ್ಯಾತವಾದುದೂ ಆದ ಧನವನ್ನು ಪ್ರತಿದಿನವೂ ಪೂರ್ಣವಾಗಿ ಹೊಂದುತ್ತೇವೆಯೋ ಅಂತಹುದೂ ಮತ್ತು ನಮಸ್ಕಾರದಿಂದಲೂ, ಹವಿಸ್ಸಿನಿಂದಲೂ ಕೂಡಿದುದೂ ಆದ ಸ್ತುತಿರೂಪವಾದ ವಾಕ್ಕಿನಿಂದ ಮರುತ್ಸಮೂಹರೂಪವಾದದ್ದೂ, ಸಂಘಾತ್ಮಕವಾದ ಶಕ್ತಿಯುಳ್ಳದ್ದೂ, ದೇವತಾತ್ಮವಾದದ್ದೂ ಮತ್ತು ದೇವನಾದ ಇಂದ್ರನೊಡನೆ ಸಂಬದ್ಧವಾದುದೂ, ಎಲ್ಲರಿಗೂ ಗೋಚರವಾಗುವಂತೆ ಪ್ರಾದುರ್ಭೂತವಾದದ್ದೂ ಆದ ಶಕ್ತಿಯನ್ನು ಸ್ತುತಿಸಿ ಪೂಜಿಸುತ್ತೇನೆ.

English Translation.

Desirous of felicity, Maruts, I glorify with praise and homage your divine, manifest, and congregated strength; that we may thereby daily enjoy distinguished affluence, accompanied by valiant dependants and posterity.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ ಮರುದ್ದೇವತೆಗಳು ಸ್ತುತರಾಗಿದ್ದಾರೆ. ಯಜಮಾನರು ಮರುದ್ದೇವತೆಗಳನ್ನು ಸಂಬೋಧಿಸಿ, ಈ ಮರುದ್ದೇವತೆಗಳ ಬಲವು **ಮಾರುತಂ**—ಮರುದ್ದೇವತೆಗಳು ಏಳು ಜನರಾದುದರಿಂದ ಇವರ ಸಮೂಹದಿಂದ ಯುಕ್ತವಾಗಿ ಇರುವುದೆಂದೂ, **ದೈವ್ಯಂ**—ತೇಜಶಾಲಿಯಾದ ಇಂದ್ರನಿಂದ ಸಂಬಂಧಿಸಿರುವುದೆಂದೂ, **ಜನಂ**— ಆಗಾಗ ಪ್ರಾದುರ್ಭೂತವೂ ಆಗಿರುವುದೆಂದೂ, ವರ್ಣಿಸಿ, ಈ ಪ್ರಕಾರದಿಂದ ಇರುವ ಈ ಬಲವನ್ನು **ನಮಸಾ ಗಿರಾ**—ನಮಸ್ಕಾರದಿಂದಲೂ, ಹವಿಸ್ಸಿನ ಅರ್ಪಣೆಗಳಿಂದಲೂ, ಸ್ತುತಿಗಳನ್ನು ಪಠಿಸುವುದರಿಂದಲೂ ಯಜಮಾನರು ಸ್ತುತಿಮಾಡುವರೆಂದು ವರ್ಣಿಸಿದೆ.

ಈ ನಮ್ಮ ಸ್ತುತಿಗಳನ್ನು ಶ್ರವಣಮಾಡಿ ಮರುದ್ದೇವತೆಗಳು ನಮಗೆ **ಸರ್ವವೀರಂ**—ಪ್ರಭೂತವಾಗಿರುವ ವೀರ್ಯದಿಂದ ಕೂಡಿರುವ ಶತ್ರುಗಳನ್ನು ನಾಶಪಡಿಸಲರ್ಹವಾಗಿಯೂ, **ಅಪತ್ಯಸಾಚಂ**—ದುರ್ಗತಿಯನ್ನು ಉಂಟುಮಾಡದಿರುವ ಪುತ್ರರೇ ಮೊದಲಾದವರಿಂದ ಕೂಡಿರುವುದಾಗಿಯೂ, **ಶ್ರುತ್ಯಂ** ಪ್ರಶಂಸೆಮಾಡಲು ಅರ್ಹವಾಗಿಯೂ ಇರುವ ಧನವನ್ನು ಯಜಮಾನರಾದ ನಾವು ಪ್ರತಿದಿನದಲ್ಲಿಯೂ ಹೊಂದುವಂತೆ ಅನುಗ್ರಹವನ್ನು ಮಾಡಲಿ ಎಂದು ಆಶಿಸಿದೆ.

**ಶರ್ಧಂ—ಬಲಂ** | ಶರ್ಧಃ ಎಂಬ ಪದವು ಬಲನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ.

ನಮಸ್ಯತಿ ಎಂಬ ಪದವು ಪರಿಚರಣಕರ್ಮಗಳಲ್ಲಿ ಯಾಸ್ಕರಿಂದ (ನಿ. ೩-೧೩) ಪಠಿತವಾಗಿರುವುದರಿಂದ **ನಮಸಾ** ಎಂಬ ಪದಕ್ಕೆ ನಮಸ್ಕಾರವೆಂದೂ, ಅಥವಾ ಹವಿಸ್ಸಿನ ಅರ್ಪಣೆಯೆಂದೂ ಎರಡು ವಿಧವಾದ ಅರ್ಥವನ್ನು ವಿವರಿಸಿದೆ.

**ರಯಿಃ—ಧನಂ**| ಈ ಪದವು ಯಾಸ್ಕರಿಂದ ಉದಕನಾಮಗಳಲ್ಲಿಯೂ (ನಿ. ೨-೨೪) ಧನನಾಮಗಳಲ್ಲಿಯೂ (ನಿ. ೨-೯) ಉಕ್ತವಾಗಿ, **ರಯಿರಿತಿ ಧನನಾಮ ರಾತೇರ್ದಾನಕರ್ಮಣಃ** ಎಂದು ವ್ಯಾಖ್ಯಾತವಾಗಿದೆ.

# ಮೂವತ್ತೊಂದನೆಯ ಸೂಕ್ತವು

**ಅಸ್ಮಾಕಮಿತಿ ಸಪ್ತರ್ಚಂ ನವಮಂ ಸೂಕ್ತಂ ಗೃತ್ಸಮದಸ್ಯಾರ್ಷಂ ವೈಶ್ವದೇವಂ | ಅಂತ್ಯಾ ತ್ರಿಷ್ಟುಪ್ | ಶಿಷ್ಟಾ ಜಗತ್ಯಃ | ತಥಾ ಚಾನುಕ್ರಾಂತಂ | ಅಸ್ಮಾಕಂ ಸಪ್ತ ವೈಶ್ವದೇವಂ ತ್ರಿಷ್ಟುಬಂತಮಿತಿ || ವಿನಿಯೋಗೋ ಲೈಂಗಿಕಃ ||**

ಅನುವಾದವು—**ಅಸ್ಮಾಕಂ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು; ವಿಶ್ವೇದೇವತೆಗಳು ದೇವತೆಯು; ಈ ಸೂಕ್ತದ ಕೊನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು; ಉಳಿದ ಋಕ್ಕುಗಳು ಜಗತೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಅಸ್ಮಾಕಂ ಸಪ್ತ ವೈಶ್ವದೇವಂ ತ್ರಿಷ್ಟುಬಂತಂ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೩೧

ಮಂಡಲ—೨ ‖ ಅನುವಾಕ—೩ ‖ ಸೂಕ್ತ—೩೧ ‖

ಅಷ್ಟಕ—೨ ‖ ಅಧ್ಯಾಯ—೭ ‖ ವರ್ಗ—೧೪ ‖

‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ‖

‖ ಋಷಿಃ—ಗೃತ್ಸಮದಃ ‖

‖ ದೇವತಾ—ವಿಶ್ವೇ ದೇವಾಃ ‖

‖ ಛಂದಃ—೧-೬. ಜಗತೀ । ೭ ತ್ರಿಷ್ಟುಪ್ ‖

‖ ಸಂಹಿತಾಪಾಠಃ ‖

ಅಸ್ಮಾಕಂ ಮಿತ್ರಾವರುಣಾವತಂ ರಥಮಾದಿತ್ಯೈ ರುದ್ರೈರ್ವಸುಭಿಃ ಸಚಾಭುವಾ ।
ಪ್ರ ಯದ್ವಯೋ ನ ಪಪ್ತನ್ವಸ್ಮನಸ್ಪರಿ ಶ್ರವಸ್ಯವೋ ಹೃಷೀವಂತೋ ವನರ್ಷದಃ ‖

‖ ಪದಪಾಠಃ ‖

ಅಸ್ಮಾಕಂ । ಮಿತ್ರಾವರುಣಾ । ಅವತಂ । ರಥಂ । ಆದಿತ್ಯೈಃ । ರುದ್ರೈಃ । ವಸುಽಭಿಃ । ಸಚಾಽಭುವಾ ।
ಪ್ರ । ಯತ್ । ವಯಃ । ನ । ಪಪ್ತನ್ । ವಸ್ಮನಃ । ಪರಿ । ಶ್ರವಸ್ಯವಃ । ಹೃಷೀಽವಂತಃ । ವನಽಸದಃ ‖ ೧ ‖

‖ ಸಾಯಣಭಾಷ್ಯಂ ‖

ಮಿತ್ರಾವರುಣಾ ಹೇ ಮಿತ್ರಾವರುಣೌ ಆದಿತ್ಯೈರ್ಧಾತ್ರರ್ಯಮಾದಿಭಿರ್ದ್ವಾದಶಭಿಃ ರುದ್ರೈರೇಕಾದಶಸಂಖ್ಯಾಕೈಃ ವಸುಭಿರ್ಧರೋ ಧ್ರುವ ಇತ್ಯಾದಿಭಿರಷ್ಟಸಂಖ್ಯಾಕೈಃ ಏವಂ ತ್ರಿಭಿರ್ದೇವಗಣೈಃ ಸಚಾಭುವಾ ಸಹ ಭವಂತೌ ಸಹ ವರ್ತಮಾನೌ ಯುವಾಮಸ್ಮಾಕಂ ರಥಮನ್ನಲಾಭಾಯ ಪ್ರವೃತ್ತಮವತಂ । ಯದ್ಯದಾಸ್ಮದೀಯಾ ರಥಾ ವಸ್ಮನಸ್ಪರಿ ‖ ವಸಂತ್ಯಸ್ಮಿನ್ನಿತಿ ವಸ್ಮ ನಿವಾಸಸ್ಥಾನಂ । ಔಣಾದಿಕೋ ಮನಿನ್ ‖ ತಸ್ಮಾತ್ಸ್ಥಾನಾತ್ಪರಿ ಉಪರಿ ದೇಶಾಂತರೇ ‖ ಪಂಚಮ್ಯಾಃ ಪರಾವಧ್ಯರ್ಥ ಇತಿ ಸತ್ವಂ । ಅಧ್ಯರ್ಥ ಉಪರ್ಯರ್ಥ ಇತಿ ವೃತ್ತಿಃ ‖ ವಯೋ ನ ಪಕ್ಷಿಣ ಇವ ಪ್ರಪಪ್ತನ್ । ಪ್ರಪತಂತಿ । ಪ್ರಕರ್ಷೇಣ

**ಗಚ್ಛಂತಿ ॥ ಪತೇಶ್ಛಾಂದಸೇ ಲುಙಿ ಲೃದಿತ್ತ್ವಾತ್ ಚ್ಲೇರಙಾದೇಶಃ । ಪತಃ ಪುಮಿತಿ ಪುಮಾಗಮಃ ॥ ಕೀದೃಶಾ ವಯಃ । ಶ್ರವಸ್ಯವೋಽನ್ನಕಾಮಾಃ । ಹೃಷೀವಂತಃ ಪ್ರಾಪ್ತಹರ್ಷಾಃ । ವನರ್ಷದೋ ವನೇ ವೃಕ್ಷಾದೌ ನಿಷಣ್ಣಾಃ ॥ ಸಾಂಹಿತಿಕಶ್ಛಾಂದಸೋ ರೇಫೋಪಜನಃ ॥**

॥ ಪ್ರತಿಪದಾರ್ಥ ॥

**ಮಿತ್ರಾವರುಣಾ**—ಎಲೈ ಮಿತ್ರಾವರುಣರೇ! **ಶ್ರವಸ್ಯವಃ**—ಅನ್ನವನ್ನು ಹುಡುಕುವುವೂ! **ಹೃಷೀವಂತಃ**—ಹರ್ಷಯುಕ್ತವಾದವೂ | **ವನರ್ಷದಃ**—ವನವೃಕ್ಷಗಳಲ್ಲಿ ಕುಳಿತಿರುವುವೂ ಆದ | **ವಯೋ ನ**—ಪಕ್ಷಿಗಳಂತೆ | **ಯತ್**—ಯಾವಾಗ | **ರಥಾಃ**—ನಮ್ಮ ರಥಗಳು | **ವಸ್ಮನಸ್ಪರಿ**—ದೇಶಾಂತರಗಳಲ್ಲಿ | **ಪ್ರ ಪಪ್ತನ್**—ಸಂಚರಿಸುವುವೋ (ಆ ಕಾಲದಲ್ಲಿ) | **ಆದಿತ್ಯೈಃ**—ಆದಿತ್ಯರೊಡನೆಯೂ | **ರುದ್ರೈಃ**—ರುದ್ರರೊಡನೆಯೂ | **ವಸುಭಿಃ**—ವಸುಗಳೊಡನೆಯೂ | **ಸಚಾಭುವಾ**—ಒಟ್ಟಿಗೆ ಕೂಡಿಕೊಂಡಿರುವವರಾಗಿ | **ಅಸ್ಮಾಕಂ**—ನಮ್ಮ | **ರಥಂ**—(ಅನ್ನಾರ್ಥವಾಗಿ ಹೊರಟ) ರಥವನ್ನು | **ಅವತಂ**—ರಕ್ಷಿಸಿರಿ |

॥ ಭಾವಾರ್ಥ ॥

ಎಲೈ ಮಿತ್ರಾವರುಣರೇ, ಅನ್ನವನ್ನು ಹುಡುಕುವುವೂ, ಹರ್ಷಯುಕ್ತವಾದವೂ ವನವೃಕ್ಷಗಳಲ್ಲಿ ಕುಳಿತಿರುವುವೂ ಆದ ಪಕ್ಷಿಗಳಂತೆ ಯಾವಾಗ ನಮ್ಮ ರಥಗಳು ಅನ್ನಾರ್ಥವಾಗಿ ದೇಶಾಂತರಗಳಲ್ಲಿ ಸಂಚರಿಸುವುವೋ ಆ ಕಾಲದಲ್ಲಿ ಆದಿತ್ಯರೊಡನೆಯೂ, ರುದ್ರರೊಡನೆಯೂ, ವಸುಗಳೊಡನೆಯೂ ಒಟ್ಟಿಗೆ ಕೂಡಿಕೊಂಡವರಾಗಿ ನಮ್ಮ ರಥವನ್ನು ರಕ್ಷಿಸಿರಿ.

## English Translation.

Mitra and Varuna, associated with the Adityas, the Rudras, and the Vasus, protect our (sacrificial) chariot, when (it goes) about (from one place to another); like birds that fly down, seeking for food, rejoicing, and resting in the woods.

॥ ವಿಶೇಷವಿಷಯಗಳು ॥

ಮಿತ್ರಾವರುಣರನ್ನು ಸಂಬೋಧಿಸಿ, ಈ ಮಿತ್ರಾವರುಣರು, **ಆದಿತ್ಯೈಃ ಧಾತ್ರರ್ಯಮಾದಿಭಿರ್ದ್ವಾದಶಭಿಃ ಏಕಾದಶಸಂಖ್ಯಾಕೈಃ ರುದ್ರೈಃ, ಧರಃ, ಧ್ರುವಃ ಇತ್ಯಾದಿಭಿರಷ್ಟಸಂಖ್ಯಾಕೈಃ ವಸುಭಿಃ ಏವಂ ತ್ರಿಭಿರ್ದೇವಗಣೈಃ ಸಹ ವರ್ತಮಾನೌ ।** ಧಾತಾ, ಅರ್ಯಮಾ, ಮೊದಲಾದ ಪ್ರಸಿದ್ಧರಾದ ಹನ್ನೆರಡು ಜನರಾದ ಆದಿತ್ಯರಿಂದಲೂ, ಹನ್ನೊಂದು ಜನರೆಂದು ಪರಿಗಣಿತರಾದ ರುದ್ರರೊಡನೆಯೂ, ಧರ, (ವರ) ಧ್ರುವ ಎಂಬಿವೇ ಮೊದಲಾದ ಹೆಸರುಗಳಿಂದ ಇರುವ ಎಂಟು ಜನವಸುಗಳಿಂದಲೂ, ಈ ವಸು, ರುದ್ರ, ಆದಿತ್ಯರೆಂಬ ಮೂರು ವಿಧವಾಗಿರುವ ದೇವತೆಗಳ ಗುಂಪಿನಿಂದ ಕೂಡಿ ಇರುವವರೆಂದು ವರ್ಣಿಸಿ, ಈ ಮಿತ್ರಾವರುಣರು **ಅನ್ನಲಾಭಾಯ ಪ್ರವೃತ್ತಂ ಅಸ್ಮಾಕಂ ರಥಂ ಅವತಂ ।** ಅನ್ನವನ್ನು ಸಂಪಾದಿಸುವುದಕ್ಕಾಗಿ ಸಂಚರಿಸುವ ನಮ್ಮ ರಥವನ್ನು ರಕ್ಷಿಸಲಿ ಎಂದು ವಿವರಿಸಿದೆ.

ಶ್ರವಸ್ಯವಃ, ಹೃಷೀವಂತಃ, ವನರ್ಷದಃ ವಯೋ ನ ವಸ್ಮನಸ್ಪರಿ ಪ್ರಪಪ್ತನ್—ಅನ್ನಕಾಮಾಃ ಪ್ರಾಪ್ತಹರ್ಷಾಃ ವನವೃಕ್ಷಾದೌ ನಿಷಣ್ಣಾಃ—ಪಕ್ಷಿಣ ಇವ ಅಸ್ಮದೀಯಾಃ ರಥಾಃ ನಿವಾಸಸ್ಥಾನಾತ್ ಉಪರಿ ದೇಶಾಂತರೇ ಪ್ರಕರ್ಷೇಣ ಗಚ್ಛಂತಿ। ಆಹಾರವನ್ನು ಅಪೇಕ್ಷಿಸುವ, ಹರ್ಷದಿಂದ ಕೂಡಿರುವ, ಕಾಡಿನಲ್ಲಿರುವ ಮರಗಳೇ ಮೊದಲಾದವುಗಳಲ್ಲಿ ಕೂತುಕೊಂಡಿರುವ ಪಕ್ಷಿಗಳು ತಮ್ಮ ವಾಸಸ್ಥಾನವನ್ನು ಬಿಟ್ಟು ಆಹಾರಾದಿಗಳ ಲಾಭಕ್ಕಾಗಿ ಬೇರೆಬೇರೆ ಸ್ಥಾನಗಳಲ್ಲಿ ಸಂಚರಿಸುವಹಾಗೆ ನಮ್ಮ ನಮ್ಮ ರಥಗಳೂ ಚಲಿಸುತ್ತವೆ ಎಂದು ಪಕ್ಷಿಗಳನ್ನು ದೃಷ್ಟಾಂತವಾಗಿ ಹೋಲಿಸಿ ವರ್ಣಿಸಿದೆ.

ವಸ್ಮನಸ್ಪರಿ—ವಸಂತ್ಯಸ್ಮಿನ್ನಿತಿ ವಸ್ಮ ನಿವಾಸಸ್ಥಾನಂ। ತಸ್ಮಾನ್ ಸ್ಥಾನಾತ್ ಉಪರಿ ದೇಶಾಂತರೇ। ವಾಸಮಾಡಲು ಅರ್ಹವಾದ ಪ್ರದೇಶವು ವಸ್ಮ ಶಬ್ದದ ಅರ್ಥವಾಗಿದೆ. ಅದಕ್ಕಿಂತಲೂ ಬೇರೆಯಾದ ಪ್ರದೇಶಗಳಲ್ಲಿ ರಥವು ಸಂಚರಿಸುವುದೆಂದು ವರ್ಣಿಸಿದೆ.



॥ ಸಂಹಿತಾಪಾಠಃ ॥

ಅಧ ಸ್ಮಾ ನ ಉದವತಾ ಸಜೋಷಸೋ ರಥಂ ದೇವಾಸೋ ಅಭಿ ವಿಕ್ಷು ವಾಜಯುಂ ।
ಯದಾಶವಃ ಪದ್ಯಾಭಿಸ್ತಿತ್ರತೋ ರಜಃ ಪೃಥಿವ್ಯಾಃ ಸಾನೌ ಜಂಘನಂತ ಪಾಣಿಭಿಃ

॥ ಪದಪಾಠಃ ॥

ಅಧ । ಸ್ಮ । ನಃ । ಉತ್ । ಅವತ । ಸऽಜೋಷಸಃ । ರಥಂ । ದೇವಾಸಃ । ಅಭಿ । ವಿಕ್ಷು । ವಾಜऽಯುಂ ।
ಯತ್ । ಆಶವಃ । ಪದ್ಯಾಭಿಃ । ತಿತ್ರತಃ । ರಜಃ । ಪೃಥಿವ್ಯಾಃ । ಸಾನೌ । ಜಂಘನಂತ । ಪಾಣಿऽಭಿಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಸಜೋಷಸಃ ಸಮಾನಂ ಪ್ರೀಯಮಾಣಾ ದೇವಾಸೋ ದೇವಾ ಅಧ ಅಧುನಾ ನೋऽಸ್ಮಾಕಂ ವಾಜಯುಂ ವಾಜಮನ್ನಂ ಕಾಮಯಮಾನಂ ಗತಿವಿಶೇಷಯುಕ್ತಂ ವಾ ರಥಂ ವಿಕ್ಷು ಪ್ರಜಾಸು ಜನಪದೇಷ್ವಭಿಮುಖಮುದವತ । ಉದಗಮಯತ ॥ ಅವತಿರತ್ರ ಗತ್ಯರ್ಥಃ ॥ ಯದ್ಯದಾಸ್ಮಿನ್ರಥೇ ಯುಕ್ತಾ ಆಶವೋ ವ್ಯಾಪನಶೀಲಾ ಅಶ್ವಾಃ ಪದ್ಯಾಭಿಃ ಪಾದಸಾಧ್ಯಾಭಿರ್ಗತಿಭೀ ರಜೋ ರಂಜಕಂ ಮಾರ್ಗಂ ತಿತ್ರತಸ್ತರಂತಃ ॥ ತರತೇಃ ಶತರಿ ಬಹುಲಂ ಛಂದಸೀತಿ ಶಪಃ ಶ್ಲುಃ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥ ಪೃಥಿವ್ಯಾಃ ಪ್ರಥಿತಾಯಾ ಭೂಮೇಃ ಸಾನೌ ಸಮುಚ್ಛ್ರಿತೇ ಪ್ರದೇಶೇ ಪಾಣಿಭಿಃ ಪಾಣ್ಯುಪಲಕ್ಷಿತೈಃ ಪಾದೈರ್ಜಂಘನಂತೇ । ಅತ್ಯರ್ಥಂ ಗಚ್ಛಂತಿ ॥ ಹಂತೇರ್ಯಙ್ಲುಗಂತಾಚ್ಛಾಂದಸೋ ಲಙ್ । ವ್ಯತ್ಯಯೇನಾತ್ಮನೇಪದಂ । ಬಹುಲಂ ಛಂದಸೀತಿ ಶಪೋ ಲುಗಭಾವಃ ॥

‖ ಪ್ರತಿಪದಾರ್ಥ ‖

**ಸಜೋಷಸಃ**—ಸಮಾನವಾದ ಪ್ರೀತಿಯುಳ್ಳ । **ದೇವಾಸಃ**—ಎಲೈ ದೇವತೆಗಳೇ । **ಯತ್**—ಯಾವಾಗ । **ಆಶವಃ**—ನಮ್ಮ ರಥಕ್ಕೆ ಕಟ್ಟಿರುವ ಅಶ್ವಗಳು । **ಪದ್ಯಾಭಿಃ**—ತಮ್ಮ ಕಾಲುನಡಗೆಗಳಿಂದ । **ರಜಃ**—ಧೂಳನ್ನು । **ತಿತ್ರತೆಃ**—ಮೇಲೇಳುವಂತೆ ಮಾಡುತ್ತಾ । **ಪೃಥಿವ್ಯಾಃ**—ಭೂಮಿಯ । **ಸಾನೌ**—ಉಚ್ಛ್ರಿತವಾದ ಪ್ರದೇಶದಲ್ಲಿ । **ಪಾಣಿಭಿಃ**—ತಮ್ಮ ಪಾದಗಳಿಂದ । **ಜಂಘನಂತ**—ನಾಗಾಲೋಟದಿಂದ ಓಡುವುವೋ । **ಅಧ**—ಆ ತತ್ಕಾಲದಲ್ಲಿ । **ನಃ**—ನಮ್ಮ । **ವಾಜಯುಂ**—ಅನ್ನಾರ್ಥವಾಗಿ ಹೊರಟ । **ರಥಂ**—ರಥವನ್ನು । **ವಿಕ್ಷು ಅಭಿ**—ಪ್ರಜೆಗಳ ನಡುವೆ । **ಉದವತ**—ಸುಖವಾಗಿ ಸಂಚರಿಸುವಂತೆ ಮಾಡಿರಿ.

‖ ಭಾವಾರ್ಥ ‖

ಸಮಾನವಾದ ಪ್ರೀತಿಯುಳ್ಳ ಎಲೈ ದೇವತೆಗಳೇ, ಯಾವಾಗ ನಮ್ಮ ರಥಕ್ಕೆ ಕಟ್ಟಿರುವ ಅಶ್ವಗಳು ತಮ್ಮ ಕಾಲುನಡಗೆಗಳಿಂದ ಧೂಳನ್ನು ಮೇಲೇಳುವಂತೆ ಮಾಡುತ್ತಾ ಭೂಮಿಯ ಎತ್ತರವಾದ ಪ್ರದೇಶದಲ್ಲಿ ತಮ್ಮ ಪಾದಗಳಿಂದ ನಾಗಾಲೋಟದಿಂದ ಓಡುವುವೋ, ಆ ತತ್ಕಾಲದಲ್ಲಿ ಅನ್ನಾರ್ಥವಾಗಿ ಹೊರಟ ನಮ್ಮ ರಥವನ್ನು ಪ್ರಜೆಗಳ ನಡುವೆ ಸುಖವಾಗಿ ಸಂಚರಿಸುವಂತೆ ಮಾಡಿರಿ.

English Translation.

Propitiated divinities, protect our chariot, gone forth in quest of food among the people, when the quick (horses), raising the dust with their paces, trample with their feet upon the high places of the earth.

‖ ವಿಶೇಷವಿಷಯಗಳು ‖

**ಸಜೋಷಸಃ ದೇವಾಸಃ—ಸಮಾನಂ ಪ್ರೀಯಮಾಣಾಃ ದೇವಾಃ** ಎಲ್ಲಾ ಕಾಲದಲ್ಲಿಯೂ ಒಂದೇ ರೀತಿಯಾಗಿ ಸಂತೋಷದಿಂದ ಇರುವವರು ಎಂಬ ಅರ್ಥವನ್ನು **ಸಜೋಷಸಃ** ಎಂಬ ಪದಕ್ಕೆ ವಿವರಿಸಿ, ದೇವತೆಗಳು ಈ ವಿಧವಾದ ಸ್ವಭಾವದವರೆಂದು ವರ್ಣಿಸಿವೆ.

**ವಾಜಯುಂ—ವಾಜಮನ್ನಂ ಕಾಮಯಮಾನಂ, ಗತಿವಿಶೇಷಯುಕ್ತಂ ವಾ** । ಈ ಶಬ್ದವು ರಥಂ ಎಂಬ ಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿದೆ. ವಾಜ ಶಬ್ದವು ಅನ್ನಾದ್ಯರ್ಥಗಳಲ್ಲಿ ಪಠಿತವಾಗಿದೆ. ಸಾಯಣರು ಅನ್ನವನ್ನು ಅಪೇಕ್ಷಿಸುವುದೂ, ವೇಗಯುಕ್ತವಾದ ಗಮನದಿಂದ ಕೂಡಿರುವುದೂ ಎಂದು ಅರ್ಥವನ್ನು ವಿವರಿಸಿದ್ದಾರೆ.

ದೇವತೆಗಳನ್ನು ಸಂಬೋಧಿಸಿ, ಯಜಮಾನರು—ಅನ್ನಲಾಭಕ್ಕಾಗಿ ಸಂಚರಿಸುವ ತಮ್ಮ ರಥಗಳು ವೇಗವಾಗಿ ಸಂಚರಿಸುವವುಗಳಾಗಿ, ಪ್ರಜೆಗಳ ಮತ್ತು ಆಯಾಯ ದೇಶಗಳಲ್ಲಿ ಅಭಿಮುಖವಾಗಿ ಸಂಚರಿಸುವಂತಾಗಲಿ ಎಂದು ಪ್ರಾರ್ಥಿಸಿದ್ದಾರೆ. ಮತ್ತು **ಆಶವಃ ಪದ್ಯಾಭಿಃ ರಜಃ ತಿತ್ರತೆಃ—ವ್ಯಾಪನಶೀಲಾಃ ಅಶ್ವಾಃ ಪಾದಸಾಧ್ಯಾಭಿರ್ಗತಿಭಿಃ ರಂಜಕಂ ಮಾರ್ಗಂ ತೆರಂತೆಃ** । ವೇಗವಾಗಿ ಸಂಚರಿಸುವ ಕುದುರೆಗಳು ತಮ್ಮ ಕಾಲುನಡಿಗೆಗಳಿಂದ ದಾರಿಯಲ್ಲಿ ಧೂಳು ಉಂಟಾಗುವಂತೆ ಮಾಡಿ ದಾಟುತ್ತವೆ ಎಂದೂ, **ಪೃಥಿವ್ಯಾಃ ಸಾನೌ ಪಾಣಿಭಿಃ ಜಂಘನಂತ**—

**ಭೂಮೇಃ ಉಚ್ಛ್ರಿತೇ ಪ್ರದೇಶೇ ಪಾಣ್ಯುಪಲಕ್ಷಿತೈಃ ಪಾದೈಃ ಅತ್ಯರ್ಥಂ ಗಚ್ಛತಿ ।** ಈ ಅಶ್ವಗಳು ಭೂಮಿಯ ಎತ್ತರವಾದ ಪ್ರದೇಶಗಳಲ್ಲಿ ಹಸ್ತಗಳ ಹಾಗೆ ಇರುವ ತಮ್ಮ ಪಾದಗಳಿಂದಲೇ ಸಂಚರಿಸತಕ್ಕವು ಗಳಾಗಿರುತ್ತವೆ ಎಂದು ವಿವರಿಸಿದೆ.



॥ ಸಂಹಿತಾಪಾಠಃ ॥

**ಉತ ಸ್ಯ ನ ಇಂದ್ರೋ ವಿಶ್ವಚರ್ಷಣಿರ್ದಿವಃ ಶರ್ಧೇನ ಮಾರುತೇನ ಸುಕ್ರತುಃ ।**
**ಅನು ನು ಸ್ಥಾತ್ಯವೃಕಾಭಿರೂತಿಭೀ ರಥಂ ಮಹೇ ಸನಯೇ ವಾಜಸಾತಯೇ ॥ ೩**

॥ ಪದಪಾಠಃ ॥

**ಉತ । ಸ್ಯಃ । ನಃ । ಇಂದ್ರಃ । ವಿಶ್ವಽಚರ್ಷಣಿಃ । ದಿವಃ । ಶರ್ಧೇನ । ಮಾರುತೇನ । ಸುಽಕ್ರತುಃ ।**
**ಅನು । ನು । ಸ್ಥಾತಿ । ಅವೃಕಾಭಿಃ । ಊತಿಽಭಿಃ । ರಥಂ । ಮಹೇ । ಸನಯೇ । ವಾಜಽಸಾತಯೇ ।**

॥ ಸಾಯಣಭಾಷ್ಯಂ ॥

**ಉತ ಅಪಿ ಚ ವಿಶ್ವಚರ್ಷಣಿರ್ವಿಶ್ವಸ್ಯ ಸರ್ವಸ್ಯ ದ್ರಷ್ಟಾ ಯದ್ವಾ ವಿಶ್ವೇ ಚರ್ಷಣಯೋ ಮನುಷ್ಯಾ ಯಸ್ಯ ಪರಿಚಾರಕಾಃ । ಅಥವಾ ವಿಶ್ವೇ ಸರ್ವೇ ಲೋಕಾಶ್ಚರ್ಷಣಯೋ ದ್ರಷ್ಟವ್ಯಾ ಯೇನ ॥ ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ ॥ ಮಾರುತೇನ ಮರುತ್ಸಮೂಹ-ರೂಪೇಣ ಶರ್ಧೇನ ಬಲೇನ ಸಹ ಸುಕ್ರತುಃ ಶೋಭನಕರ್ಮಾ ಶೋಭನಪ್ರಜ್ಞೋ ವಾ ಸ್ಯ ಸ ಇಂದ್ರೋಽವೃಕಾಭಿರ್ಹಿಂಸಕರಹಿತಾಭಿರೂತಿಭೀ ರಕ್ಷಾಭಿಃ ಸಹಿತಃ ಸನ್ ದಿವೋ ದ್ಯುಲೋಕಾದಾಗತ್ಯ ನು ಅದ್ಯ ನೋಽಸ್ಮಾಕಂ ರಥಮನುಸ್ಥಾತಿ । ಆನುಗುಣ್ಯೇನಾಧಿತಿಷ್ಠತು ॥ ಛಾಂದಸಃ ಶಪೋ ಲುಕ್ ॥ ಕಿಮರ್ಥಂ । ಮಹೇ ಸನಯೇ ಮಹತೇ ಧನಾಯ । ತಥಾ ವಾಜಸಾತಯೇ ವಾಜಸ್ಯಾನ್ನಸ್ಯ ಸಾತಯೇ ಸಂಭಜನಾರ್ಥಂ ॥**

॥ ಪ್ರತಿಪದಾರ್ಥ ॥

**ಉತ**—ಮತ್ತು । **ವಿಶ್ವಚರ್ಷಣಿಃ**—ಸಕಲವನ್ನೂ ನೋಡಲು ಶಕ್ತಿಯುಳ್ಳವನೂ । **ಮಾರುತೇನ**—ಮರುತ್ತುಗಳ ಸಮೂಹರೂಪವಾದ । **ಶರ್ಧೇನ**—ಬಲದೊಡನೆ ಸೇರಿ । **ಸುಕ್ರತುಃ**—ಶ್ರೇಷ್ಠವಾದ ಕರ್ಮಗಳನ್ನು ಮಾಡುವವನೂ ಆದ । **ಸ್ಯಃ ಇಂದ್ರಃ**—ಪ್ರಸಿದ್ಧನಾದ ಇಂದ್ರನು । **ಅವೃಕಾಭಿಃ**—ಹಿಂಸಾರಹಿತಗಳಾದ । **ಊತಿಭಿಃ**—ರಕ್ಷಣೆಗಳೊಡನೆ । **ದಿವಃ**—ದ್ಯುಲೋಕದಿಂದ ಬಂದು । **ನು**—ಈಗ । **ಮಹೇ ಸನಯೇ**—ಮಹತ್ತಾದ ಧನಲಾಭಕ್ಕಾಗಿಯೂ । **ವಾಜಸಾತಯೇ**—ಅನ್ನಸಂಪತ್ತಿನ ಲಾಭಕ್ಕಾಗಿಯೂ (ಹೊರಟಿರುವ) । **ನಃ**—ನಮ್ಮ । **ರಥಂ**—ರಥವನ್ನು । **ಅನು ಸ್ಥಾತಿ**—ಹತ್ತಿ ಕುಳಿತುಕೊಳ್ಳಲಿ.

॥ ಭಾವಾರ್ಥ ॥

ಸರ್ವಜ್ಞನೂ, ಸರ್ವಶಕ್ತನೂ, ಮರುತ್ತುಗಳ ಸಮೂಹರೂಪವಾದ ಬಲದೊಡನೆ ಸೇರಿ ಶ್ರೇಷ್ಠವಾದ ಕರ್ಮಗಳನ್ನು ಮಾಡುವವನೂ ಪ್ರಸಿದ್ಧನೂ ಆದ ಇಂದ್ರನು ಹಿಂಸಾರಹಿತಗಳಾದ ರಕ್ಷಣೆಗಳೊಡನೆ ಕೂಡಿ ದ್ಯುಲೋಕದಿಂದ ಬಂದು ಮಹತ್ತಾದ ಧನಲಾಭಕ್ಕಾಗಿಯೂ ಅನ್ನ ಸಂಪತ್ತಿನ ಲಾಭಕ್ಕಾಗಿಯೂ ಸಹ ಹೊರಟಿರುವ ನಮ್ಮ ರಥವನ್ನು ಹತ್ತಿ ಕುಳಿತು ನಮ್ಮ ರಕ್ಷಕನಾಗಿರಲಿ.

English Translation.

Or, may that all-beholding Indra, the accomplisher of great deeds, qy the collective vigour of the Maruts, (coming) from heaven, protect our chariot with unassailable protection, (for the sake of securing to us) ample wealth and abundant food.

॥ ವಿಶೇಷವಿಷಯಗಳು ॥

**ವಿಶ್ವಚರ್ಷಣಿಃ—ವಿಶ್ವಸ್ಯ ಸರ್ವಸ್ಯ ದ್ರಷ್ಟಾ, ವಿಶ್ವೇ ಚರ್ಷಣ್ಯಃ ಮನುಷ್ಯಾಃ ಯಸ್ಯ ಪರಿಚಾರಕಾಃ, ಅಥವಾ ವಿಶ್ವೇ ಸರ್ವೇ ಲೋಕಾಃ ಚರ್ಷಣ್ಯೋ ದ್ರಷ್ಟವ್ಯಾ ಯೇನ ।** ಯಾಸ್ಕರು ಚರ್ಷಣಿಶಬ್ದವನ್ನು (ನಿ ೩-೧೩) ಪಶ್ಯತಿ ಕರ್ಮಗಳಲ್ಲಿ ಪಾಠಮಾಡಿದ್ದಾರೆ. ಸಾಯಣರು ಈ ಪದಕ್ಕೆ ಮೂರು ವಿಧವಾಗಿ ಅರ್ಥವನ್ನು ವಿವರಿಸಿದ್ದಾರೆ. ಇಂದ್ರನು ಸರ್ವವನ್ನೂ ನೋಡುವವನೆಂದೂ, ಮನುಷ್ಯರೆಲ್ಲರನ್ನೂ ಪರಿಚಾರಕನ್ನಾಗಿ (ಉಳ್ಳವನು) ಹೊಂದಿರುವವನು ಎಂದೂ, ಲೋಕಗಳೆಲ್ಲವನ್ನು ಅವಶ್ಯವಾಗಿ ನೋಡುವನೆಂದೂ ಅರ್ಥವನ್ನು ವಿವರಿಸಿ, ಈ ಪ್ರಕಾರವಾದ ಪ್ರಭೂತವಾದ ಮಹಿಮೆಯುಳ್ಳ ಇಂದ್ರನು **ಮಾರುತೇನ ಶರ್ಧೇನ ಸುಕ್ರತುಃ ಮರುತ್ಸಮೂಹರೂಪೇಣ ಬಲೇನ ಸಹ ಶೋಭನಕರ್ಮಾ ಶೋಭನಪ್ರಜ್ಞೋ ವಾ ।** ಮರುದ್ದೇವತೆಗಳ ಸಮೂಹರೂಪವಾದ ಸಾಮರ್ಥ್ಯದಿಂದ ಯುಕ್ತನಾಗಿಯೂ, ಉತ್ತಮವಾದ ಕರ್ಮ ಅಥವಾ ಜ್ಞಾನದಿಂದ ಕೂಡಿದವನಾಗಿಯೂ ಇರುವ ನಿಮಿತ್ತ ದ್ಯುಲೋಕದಿಂದ ಬಂದು **ನಃ ರಥಂ ಅನುಸ್ಥಾತಿ–ಅಸ್ಮಾಕಂ ರಥಂ ಆನುಗುಣ್ಯೇನ ಅಧಿತಿಷ್ಠತು** ಯಜಮಾನರಾದ ನಮ್ಮ ರಥವನ್ನು ಹಿಂಸಾಕರವಾದ ಭಯಗಳು ಇಲ್ಲದಂತಿರುವಂತೆ, **ಮಹೇ ಸನಾಯ ವಾಜಸಾತಯೇ**— ಪ್ರಭೂತವಾದ ಧನವನ್ನೂ, ಅನ್ನವನ್ನೂ ನಾವು ಹೊಂದುವುದಕ್ಕಾಗಿ, ನಮಗೆ ಅನುರೂಪವಾದ ರೀತಿಯಿಂದ ಹತ್ತಿ ಉಪವಿಷ್ಟನಾಗಿ ರಕ್ಷಿಸಲಿ ಎಂದು ಆಶಿಸಿದೆ.

**ಚರ್ಷಣಿ** ಶಬ್ದವು ಯಾಸ್ಕರಿಂದ ಮನುಷ್ಯನಾಮಗಳಲ್ಲಿ (ನಿ. ೩-೭) ಉಕ್ತವಾಗಿ, **ಚರ್ಷಣಿಃ ಚಾಯಿತಾ, ಬುದ್ಧ್ಯಧಿದೇವತಾಭಾವೇನಾವಸ್ಥಿತಃ ಸರ್ವಭೂತಾನಾಂ ದ್ರಷ್ಟಾ ।** (ನಿ.೫-೨೪) ಎಂದು ದುರ್ಗಾಚಾರ್ಯರಿಂದ ವ್ಯಾಖ್ಯಾತವಾಗಿದೆ.

॥ ಸಂಹಿತಾಪಾಠಃ ॥

ಉತ ಸ್ಯ ದೇವೋ ಭುವನಸ್ಯ ಸಕ್ಷಣಿಸ್ತ್ವಷ್ಟಾ ಗ್ನಾಭಿಃ ಸಜೋಷಾ ಜೂಜುವದ್ರಥಂ

ಇಳಾ ಭಗೋ ಬೃಹದ್ದಿವೋತ ರೋದಸೀ ಪೂಷಾ ಪುರಂಧಿರಶ್ವಿನಾವಧಾ ಪತೀ ॥

॥ ಪದಪಾಠಃ ॥

ಉತ । ಸ್ಯಃ । ದೇವಃ । ಭುವನಸ್ಯ । ಸಕ್ಷಣಿಃ । ತ್ವಷ್ಟಾ । ಗ್ನಾಭಿಃ । ಸ್ಽಜೋಷಾಃ । ಜೂಜುವತ್ । ರಥಂ ।

ಇಳಾ । ಭಗಃ । ಬೃಹತ್ಽದಿವಾ । ಉತ । ರೋದಸೀ ಇತಿ । ಪೂಷಾ । ಪುರಂಽಧಿಃ । ಅಶ್ವಿನೌ । ಅಧ । ಪತೀ ಇತಿ ॥ ೪ ॥

॥ ಸಾಯಣಭಾಷ್ಯಂ ॥

ಉತ ಅಪಿ ಚ ಸ್ಯಸ ದೇವೋ ದಾನಾದಿಗುಣಯುಕ್ತೋ ಭುವನಸ್ಯ ಭೂತಜಾತಸ್ಯ ಸಕ್ಷಣಿಃ ಸಚನೀಯಃ ಸೇವ್ಯೋ ಗ್ನಾಭಿರ್ದೇವಪತ್ನೀಭಿಃ । ಛಂದಾಂಸಿ ವೈ ಗ್ನಾ ಇತಿ ತೈತ್ತಿರೀಯಕಂ । ಗಾಯತ್ರ್ಯಾದೀನಿ ಛಂದಾಂಸಿ ಚ ದೇವಪತ್ನ್ಯ ಇತ್ಯುಕ್ತಂ । ಸಜೋಷಾಃ ಸಮಾನಪ್ರೀತಿಃ । ಏವಂಗುಣವಿಶಿಷ್ಟಸ್ತ್ವಷ್ಟಾಸ್ಮದೀಯಂ ರಥಂ ಜೂಜುವತ್ । ಪ್ರೇರಯತು ॥ ಜು ಇತಿ ಸೌತ್ರೋ ಧಾತುರ್ಗತ್ಯರ್ಥಃ । ಅಸ್ಮಾಣ್ಣ್ಯಂತಾಲ್ಲುಙಿ ರೂಪಂ ॥ ತಥೇಳಾ ತಿಸ್ರಾಣಾಂ ದೇವೀನಾಮಾದ್ಯೇಡಾಖ್ಯಾ ದೇವೀ ಚ ರಥಂ ಪ್ರೇರಯತು । ಬೃಹದ್ದಿವಾ ಬೃಹನ್ಮಹದ್ದೀವ್ಯತಿ ದ್ಯೋತತ ಇತಿ ಬೃಹದ್ದಿವಃ ॥ ಇಗುಪಧಾಲಕ್ಷಣಃ ಕಃ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ತಾದೃಶೋ ಭಗಶ್ಚ ಪ್ರೇರಯತು । ಉತ ಅಪಿ ಚ ರೋದಸೀ ದ್ಯಾವಾಪೃಥಿವ್ಯೌ ಪುರಂಧಿರ್ಬಹುಧೀಃ ಪೂಷಾ ಪೋಷಕೋ ದೇವಶ್ಚ ॥ ಅಧಶಬ್ದಶ್ಚಾರ್ಥೇ ॥ ಪತೀ ಸೂರ್ಯಾಯಾ ಭರ್ತಾರಾವಶ್ವಿನೌ ಚ ಏತೇ ಸರ್ವೇಽಸ್ಮದೀಯಂ ರಥಂ ಪ್ರೇರಯಂತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಉತ**—ಮತ್ತು । **ಸ್ಯಃ**—ಪ್ರಸಿದ್ಧನೂ । **ದೇವಃ**—ದಾನಾದಿಗುಣಯುಕ್ತನೂ । **ಭುವನಸ್ಯ**—ಸಕಲ ಭೂತಗಳಿಗೂ । **ಸಕ್ಷಣಿಃ**—ಸೇವ್ಯನೂ । **ಗ್ನಾಭಿಃ**—ದೇವಪತ್ನಿಯರೊಡನೆ । **ಸಜೋಷಾಃ**—ಸಮಾನವಾದ ಪ್ರೀತಿಯುಳ್ಳವನೂ ಆದ । **ತ್ವಷ್ಟಾ**—ತ್ವಷ್ಟೃದೇವತೆಯು । **ರಥಂ**—ನಮ್ಮ ರಥವನ್ನು । **ಜೂಜುವತ್**—ಪ್ರೇರಿಸಲಿ (ಸುಖವಾಗಿ ಹೋಗುವಂತೆ ಮಾಡಲಿ) (ಹಾಗೆಯೇ) । **ಇಳಾ**—ಇಳೆಯೂ । **ಬೃಹದ್ದಿವಾ**—ಬೃಹತ್ತಾದ ಕಾಂತಿಯುಳ್ಳ । **ಭಗಃ**—ಭಗನೂ । **ಉತ**—ಮತ್ತು । **ರೋದಸೀ**—ದ್ಯಾವಾಪೃಥಿವಿಗಳೂ । **ಪುರಂಧಿಃ**—ವಿಶೇಷವಾದ ಪ್ರಜ್ಞೆಯುಳ್ಳ । **ಪೂಷಾ**—ಪೂಷನೂ । **ಪತೀ** —ಸೂರ್ಯೆಯ ಭರ್ತೃಗಳಾದ । **ಅಶ್ವಿನೌ**— ಅಶ್ವಿನೀ ದೇವತೆಗಳೂ (ನಮ್ಮ ರಥವನ್ನು ಸುಖಸಂಚಾರಿಯಾಗಿ ಮಾಡಲಿ)

॥ ಭಾವಾರ್ಥ ॥

ಪ್ರಸಿದ್ಧನೂ, ದಾನಾದಿಗುಣಯುಕ್ತನೂ, ಸಕಲಭೂತಗಳಿಗೂ ಸೇವ್ಯನೂ, ದೇವಪತ್ನಿಯರೊಡನೆ ಸಮಾನವಾದ ಪ್ರೀತಿಯುಳ್ಳವನೂ ಆದ ತ್ವಷ್ಟೃದೇವತೆಯು ನಮ್ಮ ರಥವನ್ನು ಪ್ರೇರಿಸಲಿ ಹಾಗೆಯೇ, ಇಳೆಯೂ, ಬೃಹತ್ತಾದ ಕಾಂತಿಯುಳ್ಳ ಭಗನೂ, ದ್ಯಾವ್ಯಾಪೃಥಿವಿಗಳೂ, ವಿಶೇಷವಾದ ಪ್ರಜ್ಞೆಯುಳ್ಳ ಪೂಷನೂ, ಸೂರ್ಯಾದೇವಿಯ ಭರ್ತೃಗಳಾದ ಅಶ್ವಿನೀದೇವತೆಗಳೂ ನಮ್ಮ ರಥವನ್ನು ಪ್ರೇರಿಸಲಿ

English Translation.

Or, may the divine Twashtri, the defender of the world, together with the wives (of the gods), well pleased, urge on the chariot; or may Ila, the resplendent Bhaga, Heaven and Earth, the sagacious Pushan, and the Ashwins, the two husbands (or Surya), urge on the chariot.

॥ ವಿಶೇಷವಿಷಯಗಳು ॥

**ಗ್ನಾಭಿಃ ಸಜೋಷಾಃ— ದೇವಪತ್ನೀಭಿಃ ಸಮಾನಪ್ರೀತಿಃ** । ಗ್ನಾಃ ಎಂಬ ಪದವು ಯಾಸ್ಕರಿಂದ ವಾಙ್ನಾಮಗಳಲ್ಲಿ (ನಿ. ೨-೨೭) ಉಕ್ತವಾಗಿದೆ. ಮತ್ತು **ಮೇನಾ ಗ್ನಾ ಇತಿ ಸ್ತ್ರೀಣಾಂ, ಗ್ನಾ ಗಚ್ಛಂತ್ಯೇನಾಃ** (ನಿ ೩-೨೧) ಎಂದು ವ್ಯಾಖ್ಯಾತವಾಗಿದೆ. ಸಾಯಣರು ತ್ವಷ್ಟೃ ಎಂಬ ದೇವನು ದೇವಪತ್ನಿಯವರೊಡನೆಯೂ ಒಂದೇ ಸಮನಾದ ಪ್ರೀತಿಯುಳ್ಳವನೆಂದು ಅರ್ಥಮಾಡಿ ಆ ಪದವು ದೇವಪತ್ನಿಯರು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವಿವರಿಸಿ, **"ಛಂದಾಂಸಿ ವೈ ಗ್ನಾಃ"** ಎಂಬ ತೈತ್ತಿರೀಯಸಂಹಿತಾವಾಕ್ಯವನ್ನು ಉದಾಹರಿಸಿ **ಗಾಯತ್ರ್ಯಾದೀನಿ ಛಂದಾಸಿ ಚ ದೇವಪತ್ನ್ಯಃ** ಎಂದು ಅರ್ಥವನ್ನು ಹೇಳಿದ್ದಾರೆ. ನಿರುಕ್ತಕಾರರು ತ್ವಷ್ಟಾ ಎಂಬ ಪದದ ಅರ್ಥವನ್ನು ವಿಮರ್ಶೆಮಾಡುವಾಗ—

**ತ್ವಷ್ಟಾ ದುಹಿತ್ರೇ ವಹತುಂ ಕೃಣೋತೀದಂ ವಿಶ್ವಂ ಭುವನಂ ಸಮೇತಿ ।**
**ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ ವಿವಸ್ವತೋ ನನಾಶ ॥**

(ಋ. ಸಂ. ೧೦-೧೭-೧)

ಎಂಬ ಋಕ್ಕನ್ನು ಉದಹರಿಸಿದ್ದಾರೆ ದುರ್ಗಾಚಾರ್ಯರು **ತ್ವಷ್ಟಾ ಹಿ ವಿಶ್ವಕರ್ಮಾ** ಎಂದು ಐತಿಹಾಸಿಕ ಪಕ್ಷದಲ್ಲಿ ಅರ್ಥವನ್ನೂ, **ತ್ವಷ್ಟಾ ಮಧ್ಯಮಃ** ಎಂದು ನೈರುಕ್ತ ಪಕ್ಷವನ್ನೂ ಹೇಳಿದ್ದಾರೆ. ಸಾಯಣರು ಎರಡು ಪಕ್ಷಗಳಿಗೂ ಅನುಗುಣವಾದ ವ್ಯಾಖ್ಯಾನವನ್ನು ಮಾಡಿದ್ದಾರೆ.

ತ್ವಷ್ಟೃದೇವನು ದಾನಮಾಡುವುದೇ ಮೊದಲಾದ ಗುಣಗಳುಳ್ಳವನು. ಲೋಕದಲ್ಲಿ ಸರ್ವಪ್ರಾಣಿಗಳಿಂದಲೂ ಸೇವ್ಯನಾಗಿರುವನು. ಈ ಪ್ರಕಾರವಾದ ಮಹಿಮೆಯುಳ್ಳ ಈ ದೇವನು ನಮ್ಮ ರಥವನ್ನು ಪ್ರೇರಿಸಲಿ ಎಂದು ಯಜಮಾನರ ಆಶಂಸನೆಯು ಉಕ್ತವಾಗಿದೆ.

**ಇಳಾ—ತಿಸ್ರೃಣಾಂ ದೇವೀನಾಂ ಆದ್ಯಾ ಇಡಾಖ್ಯಾ ದೇವೀ ।** ಇಳಾ ಎಂಬ ಪದವು ಪೃಥಿವೀನಾಮ ಗಳಲ್ಲಿ (ನಿ. ೨-೫) ವಾಙ್ನಾಮಗಳಲ್ಲಿ (ನಿ. ೨-೨೩) ಅನ್ನನಾಮಗಳಲ್ಲಿ (ನಿ. ೩-೯) ಗೋನಾಮಗಳಲ್ಲಿ (ನಿ. ೩-೯) ಉಕ್ತವಾಗಿ, ಈಟ್ಟೇಃ ಸ್ತುತಿಕರ್ಮಣಃ ಎಂದು ವ್ಯಾಖ್ಯಾತವಾಗಿದೆ.

ಸಾಯಣರು ಇಳಾ, ಸರಸ್ವತೀ, ಭಾರತೀ ಎಂಬ ಮೂರುದೇವಿಯರಲ್ಲಿ ಮೊದಲನೆಯವಳಾದ ಇಳಾ ಎಂಬ ದೇವಿಯು ಯಜಮಾನರ ರಥವನ್ನು ಪ್ರೇರಿಸಲಿ ಎಂದು ಅರ್ಥವನ್ನು ವಿವರಿಸಿದ್ದಾರೆ.

**ಬೃಹದ್ದಿವಾ ಭಗಃ—ಬೃಹನ್ಮಹದ್ದಿವ್ಯತಿ ದ್ಯೋತತೇ ಇತಿ ಬೃಹದ್ದಿವಃ ತಾದೃಶಶ್ಚ ಪ್ರೇರಯತು** ಪ್ರಭೂತವಾದ ತೇಜಸ್ಸಿನಿಂದ ಬೆಳಗುತ್ತಿರುವ ಭಗನೆಂಬ ದೇವನೂ ನಮ್ಮ ರಥವನ್ನು ಪ್ರೇರಿಸಲಿ

**ರೋದಸೀ ಪುರಂಧಿಃ ಪೂಷಾ—ದ್ಯಾವಾಪೃಥಿವ್ಯೌ ಬಹುಧೀಃ ಪೋಷಕೋ ದೇವಶ್ಚ । ರೋದಸೀ ಪುರಂಧೀ** ಎಂಬ ಪದಗಳು ದ್ಯಾವಾಪೃಥಿವೀನಾಮಗಳಲ್ಲಿ (ನಿ. ೩-೨೨) ಉಕ್ತವಾಗಿದೆ. **ಪುರಂಧಿರ್ಬಹುಧೀಸ್ತತ್ಕಃ ಪುರಂಧಿರ್ಭಗಃ** (ನಿ. ೬-೧೩) ಎಂದೂ, **ಇಂದ್ರ ಇತ್ಯಪರಂ ಸ ಬಹುಕರ್ಮತಮಃ, ಪುರಾಂ ಚ ದಾರಯಿತೃತಮಃ ವರುಣ ಇತ್ಯಪರಂ** ಎಂದೂ, ಯಾಸ್ಕರು ಪುರಂಧಿಶಬ್ದದ ಅರ್ಥವಿವರಣೆಯನ್ನು ಹೇಳಿದ್ದಾರೆ. ದುರ್ಗಾಚಾರ್ಯರು **ಪುರಂಧಿಃ ಬಹುಧನಸ್ಯ ದಾತಾ** (ನಿ. ೧೧-೨) ಎಂದು ಅರ್ಥವನ್ನು ವರ್ಣಿಸಿದ್ದಾರೆ. ಮತ್ತು ಪುರಂಧ್ಯಾಸ್ತುತ್ಯಾ ಎಂದೂ (ನಿ. ೧೨-೩೦) ಈ ಶಬ್ದವು ವಿವೃತವಾಗಿದೆ. ಪೂಷಾ ಎಂಬ ಪದವು ಪೃಥಿವೀನಾಮಗಳಲ್ಲಿ (ನಿ. ೨-೫) ಉಕ್ತವಾಗಿದೆ. **ಅಥಯದ್ರಶ್ಮಿಪೋಷಂ ಪುಷ್ಯತಿ ತತ್ ಪೂಷಾ ಭವತಿ** (ನಿ. ೧೨-೧೬) ಎಂದು ಪೂಷಾ ಎಂಬ ಪದವು ವ್ಯಾಖ್ಯಾತವಾಗಿದೆ. ಈ ಪದಗಳ ಅರ್ಥವಿವರಣೆಯು ಹಿಂದಿನ ಸಂಪುಟಗಳಲ್ಲಿ ವಿಸ್ತಾರವಾಗಿ ಉಕ್ತವಾಗಿರುವುದರಿಂದ ಇಲ್ಲಿ ವಿವರಿಸಿಲ್ಲ. ದ್ಯಾವಾಪೃಥಿವಿಗಳೂ, ಪ್ರಭೂತವಾದ ಪ್ರಜ್ಞೆಯುಳ್ಳವನಾದ ಪೂಷನೆಂಬ ದೇವನೂ ಯಜಮಾನರಾದ ನಮ್ಮ ರಥಗಳನ್ನು ಪ್ರೇರಿಸಲಿ ಎಂದು ಆಶಂಸಿತವಾಗಿದೆ.

**ಪತೀ ಅಶ್ವಿನೌ ಸೂರ್ಯಾಯಾ ಭರ್ತಾರೌ ಅಶ್ವಿನೌ ಚ ಏತೇ ಅಸ್ಮದ್ರಥಂ ಪ್ರೇರಯಂತು** ಅಶ್ವಿನೀ ಶಬ್ದದ ವಿವರಣೆಯು ಹಿಂದೆ ಉಕ್ತವಾಗಿದೆ. ಅಶ್ವಿನೀದೇವತೆಗಳು ಸೂರ್ಯಾದೇವಿಯನ್ನು ವಿವಾಹಮಾಡಿಕೊಂಡ ವಿಷಯವೂ ಹಿಂದೆ ಉಕ್ತವಾಗಿದೆ. ಸೂರ್ಯಾದೇವಿಯ ಪತಿಯಾದ ಅಶ್ವಿನೀದೇವತೆಗಳೂ ನಮ್ಮ ರಥವನ್ನು ಪ್ರೇರಿಸಲಿ ಎಂದು ಯಜಮಾನರು ಪ್ರಾರ್ಥಿಸಿದ್ದಾರೆ.



॥ ಸಂಹಿತಾಪಾಠಃ ॥

## ಉತ ತ್ಯೇ ದೇವೀ ಸುಭಗೇ ಮಿಥೂದೃಶೋಷಾಸಾನಕ್ತಾ ಜಗತಾಮಪೀಜುವಾ ।
## ಸ್ತುಷೇ ಯದ್ವಾಂ ಪೃಥಿವಿ ನವ್ಯಸಾ ವಚಃ ಸ್ಥಾತುಶ್ಚ ವಯಸ್ತ್ರಿವಯಾ ಉಪಸ್ತಿರೇ ॥

ಪದಪಾಠಃ

ಉತ । ತ್ಯೇ ಇತಿ । ದೇವೀ ಇತಿ । ಸುಭಗೇ ಇತಿ ಸುऽಭಗೇ । ಮಿಥುऽದೃಶಾ । ಉಷಸಾನಕ್ತಾ । ಜಗತಾಂ।

ಅಪಿऽಜುವಾ ।

ಸ್ತುಷೇ । ಯತ್ । ವಾಂ । ಪೃಥಿವಿ । ನವ್ಯಸಾ । ವಚಃ । ಸ್ಥಾತುಃ । ಚ । ವಯಃ । ತ್ರಿऽವಯಾಃ ।

ಉಪऽಸ್ತಿರೇ ॥ ೫ ॥

॥ ಸಾಯಣಭಾಷ್ಯಂ ॥

ಉತ ಅಪಿ ಚ ತ್ಯೇ ತೇ ಪ್ರಸಿದ್ಧೇ ದೇವೀ ದೇವ್ಯೌ ದೇವನಶೀಲೇ ಸುಭಗೇ ಶೋಭನಧನೇ ಮಿಥೂದೃಶಾ ಮಿಥಃ ಪರಸ್ಪರಂ ಪಶ್ಯಂತ್ಯೌ ಏವಂಭೂತೇ ಉಷಾಸಾನಕ್ತಾ ಉಷಾಶ್ಚ ರಾತ್ರಿಶ್ಚ ಜಗತಾಂ ಜಂಗಮಾನಾಮಪೀಜುವಾ ಪ್ರೇರಯಿತ್ರ್ಯೌ ಭವತಃ । ತಸ್ಮಾದಸ್ಮದೀಯಮಪಿ ರಥಂ ಪ್ರೇರಯತಂ । ಉತ್ತರೋऽರ್ಧರ್ಚೋ ದ್ಯಾವಾಪೃಥಿವ್ಯಃ ಪ್ರತ್ಯಕ್ಷಕೃತಃ । ಹೇ ಪೃಥಿವಿ ವಾಂ ಯುವಾಂ ತ್ವಾಂ ದಿವಂ ಚ ನವ್ಯಸಾ ನವೀಯಸಾ ನವತರೇಣ ಪ್ರಶಸ್ಯೇನ ವಚೋ ವಚಸಾ ॥ ಸುಪಾಂ ಸುಲುಗಿತಿ ತೃತೀಯಾಯಾ ಲುಕ್ ॥ ಯದ್ಯದಾ ಸ್ತುಷೇ ಸ್ತುವೇ ॥ ಉತ್ತಮಸ್ಯ ವ್ಯತ್ಯಯೇನ ಮಧ್ಯಮಃ ॥ ತದಾನೀಂ ಸ್ಥಾತುಃ ಸ್ಥಾವರಸ್ಯ ವ್ರೀಹ್ಯಾದೇಃ ಸಂಬಂಧಿ ವಯೋऽನ್ನಂ ಚರುಪುರೋಡಾಶಾದಿಲಕ್ಷಣಂ ತ್ರಿವಯಾಃ । ವಯ ಇತ್ಯನ್ನನಾಮ । ಓಷಧಿಪಶುಸೋಮಾತ್ಮಕಾನಿ ಹವಿರ್ಲಕ್ಷಣಾನ್ಯನ್ನಾನಿ ಯಸ್ಯ ತಾದೃಶೋऽಹಮುಪಸ್ತಿರೇ । ಉಪಸ್ತೃಣಾಮಿ । ಆಜ್ಯೇನೋಪಸ್ತರಣಾಭಿಘಾರಣಪೂರ್ವಕಂ ಪ್ರಯಚ್ಛಾಮೀತ್ಯರ್ಥಃ ॥ ಸ್ತೃಞ್ ಆಚ್ಛಾದನೇ । ಲಟ್ಯುತ್ತಮೇ ಛಾಂದಸೋ ವಿಕರಣಸ್ಯ ಲುಕ್ । ಅತ್ರ ತ್ಯಶ್ಚ ಶಬ್ದಶ್ಚಣಿತಿ ನಿಪಾತಾಂತರಂ ಪಾದಪೂರಣಂ । ಋತ ಇದ್ಧಾತೋರಿತೀತ್ವಂ । ನಿಪಾತೈರ್ಯದ್ಯದಿಹಂತೇತಿ ನಿಘಾತ ಪ್ರತಿಷೇಧಃ ॥

॥ ಪ್ರತಿಪದಾರ್ಥ ॥

ಉತ—ಮತ್ತು । ತ್ಯೇ—ಪ್ರಸಿದ್ಧರಾದವರೂ । ದೇವೀ—ದ್ಯೋತಮಾನರೂ । ಸುಭಗೇ—ಶ್ರೇಷ್ಠವಾದ ಧನವುಳ್ಳವರೂ । ಮಿಥೂದೃಶಾ—ಪರಸ್ಪರವಾಗಿ ನೋಡತಕ್ಕವರೂ ಆದ । ಉಷಾಸಾನಕ್ತಾ—ಅಹೋರಾತ್ರಿಗಳೇ (ನೀವು) । ಜಗತಾಂ—ಜಂಗಮಾತ್ಮಕವಾದ ಲೋಕಕ್ಕೆ । ಅಪೀಜುವಾ—ಪ್ರೇರಕರಾಗಿರುತ್ತೀರಿ (ಆದುದರಿಂದ ನಮ್ಮ ರಥವನ್ನೂ ಪ್ರೇರಿಸಿ) । ಪೃಥಿವಿ—ಎಲೈ ದ್ಯಾವಾಪೃಥಿವಿಗಳೇ । ವಾಂ—ನಿಮ್ಮಿಬ್ಬರನ್ನೂ । ನವ್ಯಸಾ—ನೂತನವಾದ । ವಚಃ—ಸ್ತುತಿರೂಪನಾದ ವಾಕ್ಯಸಿಂದ । ಯತ್—ಯಾವಾಗ । ಸ್ತುಷೇ—ಸ್ತುತಿಸುತ್ತೇನೆಯೋ (ಆಗ) । ಸ್ಥಾತುಃ—ಸ್ಥಾವರವಾದ ವ್ರೀಹ್ಯಾದಿಗಳ । ವಯಃ—ಅನ್ನವನ್ನು । ತ್ರಿವಯಾಃ—ಓಷಧಿ, ಪಶು, ಸೋಮ ಎಂಬ ಮೂರು ವಿಧವಾದ ಹವಿಸ್ಸನ್ನು ಸಿದ್ಧಪಡಿಸಿಕೊಂಡಿರುವ ನಾನು । ಉಪಸ್ತಿರೇ—ಆಜ್ಯದಿಂದ ಉಪಸ್ತರಣಮಾಡಿ ಅರ್ಪಿಸುತ್ತೇನೆ.

॥ ಭಾವಾರ್ಥ ॥

ಪ್ರಸಿದ್ಧರಾದವರೂ, ದ್ಯೋತಮಾನರೂ, ಶ್ರೇಷ್ಠವಾದ ಧನವುಳ್ಳವರೂ, ಪರಸ್ಪರವಾಗಿ ನೋಡತಕ್ಕವರೂ ಆದ ಅಹೋರಾತ್ರಗಳೇ, ನೀವು ಜಂಗಮಾತ್ಮಕವಾದ ಲೋಕಕ್ಕೆಲ್ಲಾ ಚೈತನ್ಯದಾಯಕರಾಗಿರುವಂತೆ ನಮ್ಮ ರಥವನ್ನು ಪ್ರೇರಿಸಿ. ಎಲೈ ದ್ಯಾವಾಪೃಥಿವಿಗಳೇ, ಓಷಧಿ, ಪಶು, ಸೋಮ ಎಂಬ ಮೂರುವಿಧವಾದ ಹವಿಸ್ಸನ್ನು ಹೊಂದಿರುವ ನಾನು ನಿಮ್ಮಿಬ್ಬರನ್ನೂ ನೂತನವಾದ ಸ್ತುತಿವಾಕ್ಕಿನಿಂದ ಯಾವಾಗ ಸ್ತುತಿಸುತ್ತೇನೆಯೋ ಆಗ ಸ್ಥಾವರಾತ್ಮಕವಾದ ವ್ರೀಹ್ಯಾದಿಗಳ ಅನ್ನವನ್ನು ಆಜ್ಯದಿಂದ ಉಪಸ್ತರಣಮಾಡಿ ಅರ್ಪಿಸುತ್ತೇನೆ.

## Englis Translation.

Or, may the two divine auspicious and mutually contemplating Day and Night, the animators of moving (creatures, urge it on): and, Earth Heaven, whilst I praise you both with a new hymn, I offer you food of the standing (corn), although provided with the three (sorts of sacrificial) viands.

॥ ವಿಶೇಷವಿಷಯಗಳು ॥

**ಉಷಾಸಾನಕ್ತಾ—ಉಷಾಶ್ಚ ರಾತ್ರಿಶ್ಚ । ಉಷಾಸಾನಕ್ತೋಷಾಶ್ಚ ನಕ್ತಾ ಚೋಷಾ ವ್ಯಾಖ್ಯಾತಾ । ನಕ್ತೇತಿ ರಾತ್ರಿನಾಮ । ಅನಕ್ತಿ ಭೂತಾನಿ ಅವಶ್ಯಾಯೇನಾಪಿವಾ ನಕ್ತಾ ಅವ್ಯಕ್ತವರ್ಣಾ ।** (ನಿ. ೮-೧೧) ಎಂದು ಯಾಸ್ಕರಿಂದ ಉಷಾಸಾನಕ್ತಾ ಎಂಬ ಪದವು ವ್ಯಾಖ್ಯಾತವಾಗಿದೆ. ಈ ಪದದ ವಿಸ್ತಾರವಾದ ವರ್ಣನೆಯು ಹಿಂದೆ ವಿವೃತವಾಗಿದೆ.

**ದೇವೀ ಸುಭಗೇ ಮಿಥೂದೃಶಾ ಉಷಾಸಾನಕ್ತಾ ಜಗತಾಂ ಅಪೀಜುವಾ—ದೇವನಶೀಲೇ ಶೋಭನಧನೇ ಮಿಥಃ ಪರಸ್ಪರಂ ಪಶ್ಯಂತ್ಯೌ ಉಷಾ ಚ ರಾತ್ರಿಶ್ಚ ಜಂಗಮಾನಾಂ ಪ್ರೇರಯಿತ್ರ್ಯೌ ಭವತಃ। ತಸ್ಮಾದಸ್ಮದೀಯಂ ರಥಂ ಪ್ರೇರಯತಾಂ ।** ತೇಜಸ್ಸಿನಿಂದ ಪ್ರಕಾಶಿಸುವ ಸ್ವಭಾವದಿಂದಲೂ, ಪ್ರಭೂತವಾದ ಮತ್ತು ಸುಖಕರವಾದ ಧನದಿಂದಲೂ ಯುಕ್ತವಾಗಿರುವ, ಅನ್ಯೋನ್ಯವಾದ ರೀತಿಯಿಂದ ಒಬ್ಬರನ್ನು ಒಬ್ಬರು ನೋಡುತ್ತಿರುವ ಉಷೋದೇವಿಯೂ, ರಾತ್ರಿಯೂ ಚರಪ್ರಾಣಿಗಳೆಲ್ಲವನ್ನೂ ಪ್ರೇರಿಸುವವರಾದುದರಿಂದ ನಮ್ಮ ರಥಗಳನ್ನು ಪ್ರೇರಿಸಲಿ ಎಂದು ಯಜಮಾನರು ಪ್ರಾರ್ಥಿಸಿದ್ದಾರೆ ಎಂದು ವರ್ಣಿತವಾಗಿದೆ.

**ಹೇ ಪೃಥಿವಿ** ಎಂದು ಭೂದೇವಿಯನ್ನು ಸಂಬೋಧಿಸಿ, **ಯುವಾಂ ದಿವಂ ಚ**—ಉಷೋದೇವಿ ಮತ್ತು ರಾತ್ರಿಯನ್ನೂ, ಅಂತರಿಕ್ಷವನ್ನೂ ಯಜಮಾನನು **ನವ್ಯಸಾ ವಚಸಾ** ಹೊಸದಾಗಿಯೂ, ಶಂಸನಾರ್ಹವಾಗಿಯೂ ಇರುವ ಸ್ತುತಿಗಳಿಂದ ಸ್ತುತಿಮಾಡುವವನೆಂದೂ, **ಸ್ಥಾತುಃ ವಯಃ ತ್ರಿವಯಾಃ ಉಪಸ್ತೃಣೇ**—ಸ್ಥಿರವಾದುದಾಗಿರುವ ವ್ರೀಹಿಸಂಬಂಧವಾದ, ಚರುಪುರೋಡಾಶಾದಿರೂಪದಿಂದ ಇರುವ, ಅನ್ನವನ್ನು ಹೊಂದಿರುವ ಯಜಮಾನನಾದ ನಾನು ಹವಿಸ್ಸಿನರೂಪವಾದ ಅನ್ನವನ್ನು ಆಜ್ಯದಿಂದ ಸಂಸ್ಕಾರಪೂರ್ವಕವಾಗಿ ಅರ್ಪಿಸುವೆನೆಂದೂ ವಿವರಿಸಿದೆ.

**ತ್ರಿವಯಾಃ---ವಯ ಇತ್ಯನ್ನನಾಮ । ಓಷಧಿ ಪಶು ಸೋಮಾತ್ಮಕಾನಿ ಹವಿರ್ಲಕ್ಷಣಾನ್ಯನ್ನಾನಿ ಯಸ್ಯ ।** ವಯಃ ಎಂಬ ಪದವು ಅನ್ನನಾಮಗಳಲ್ಲಿ (ನಿ. ೩–೯) ಉಕ್ತವಾಗಿದೆ. ಹವಿಸ್ಸಿನ ರೂಪದಿಂದ ದೇವತೆಗಳಿಗೆ ಅರ್ಪಿತವಾಗುವ ಅನ್ನಗಳು—ಸೋಮರಸ, ಪಶು, ಚರು ಎಂದು ಮೂರು ವಿಧವಾಗಿರುವುವು ಎಂದೂ ಅವುಗಳನ್ನು ಯಜಮಾನನು ಹೊಂದಿರುವನೆಂದೂ ವರ್ಣಿಸಿದೆ.

॥ ಸಂಹಿತಾಪಾಠಃ ॥

ಉತ ವಃ ಶಂಸಮುಶಿಜಾಮಿವ ಶ್ಮಸ್ಯಹಿರ್ಬುಧ್ನ್ಯೋಽಜ ಏಕಪಾದುತ ।
ತ್ರಿತ ಋಭುಕ್ಷಾಃ ಸವಿತಾ ಚನೋ ದಧೇಽಪಾಂ ನಪಾದಾಶುಹೇಮಾ ಧಿಯಾ
ಶಮಿ ॥ ೬ ॥

ಪದಪಾಠಃ ॥

ಉತ । ವಃ । ಶಂಸಂ । ಉಶಿಜಾಂಽಇವ । ಶ್ಮಸಿ । ಅಹಿಃ । ಬುಧ್ನ್ಯಃ । ಅಜಃ । ಏಕಽಪಾತ್ । ಉತ । ತ್ರಿತಃ । ಋಭುಕ್ಷಾಃ । ಸವಿತಾ । ಚನಃ । ದಧೇ । ಅಪಾಂ । ನಪಾತ್ । ಆಶುಽಹೇಮಾ । ಧಿಯಾ । ಶಮಿ ॥೬॥

॥ ಸಾಯಣಭಾಷ್ಯಂ ॥

ಉತ ಅಪಿ ಚ ಹೇ ದೇವಾ ಉಶಿಜಾಮಿವ । ಇವೇತಿ ಸಂಪ್ರತ್ಯರ್ಥೀಯಃ । ಅಸ್ಮತ್ತಃ ಸ್ತುತಿಂ ಕಾಮಯಮಾನಾನಾಂ ವೋ ಯುಷ್ಮಾಕಂ ಶಂಸಂ ಸ್ತುತಿಂ ಸಂಪ್ರತಿ ಶ್ಮಸಿ । ಉಶ್ಮಸಿ ಕಾಮಯಾಮಹೇ ॥ ವಶ ಕಾಂತೌ । ಇದಂತೋ ಮಸಿಃ । ಗ್ರಹಿಜ್ಯಾದಿನಾ ಸಂಪ್ರಸಾರಣಂ । ಛಾಂದಸೋ ವರ್ಣಲೋಪಃ ॥ ಉತ ಅಪಿ ಚ ಅಹಿರ್ಬುಧ್ನ್ಯಃ । ಬುಧ್ನಮಂತರಿಕ್ಷಂ । ತತ್ರ ಭವೋಽಹಿನಾಮಾ ದೇವಃ । ಅಜ ಏಕಪಾತ್ । ನ ಜಾಯತ ಇತ್ಯಜಃ । ಏಕ ಏವ ಪದ್ಯತೇ ಗಚ್ಛತೀತ್ಯೇಕಪಾತ್ । ಅಜ ಏಕಪಾತ್ಸಂಜ್ಞಕಃ ಸೂರ್ಯಃ । ತ್ರಿತಸ್ತ್ರೀರ್ಣತಮ ಋಭುಕ್ಷಾ ಉರುಕ್ಷಯ ಉರುನಿವಾಸ ಋಭೂಣಾಂ ನಿವಾಸಯಿತಾ ವೇಂದ್ರಶ್ಚ ಸವಿತಾ ಪ್ರಸವಿತಾ ಚನೋಽನ್ನಂ ದಧೇ । ವಿದಧಾತು ಸರ್ವಸ್ಯ । ಅಸ್ಮಭ್ಯಂ ಕರೋತು । ತಥಾಶುಹೇಮಾ ಶೀಘ್ರಗಾಮೀ ॥ ಹಿ ಗತಾವಿತ್ಯಸ್ಮಾದನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ ॥ ತಾದೃಶೋಽಪಾಂ ನಪಾತ್ ಅಪಾಂ ಪೌತ್ರೀಯಸ್ಥಾನೀಯೋಽಗ್ನಿಃ ॥ ಅದ್ಭ್ಯ ಓಷಧಿವನಸ್ಪತಯೋ ಜಾಯಂತೇ । ಓಷಧಿವನಸ್ಪತಿಭ್ಯಶ್ಚಾಯಮಗ್ನಿರ್ಜಾಯತ ಇತ್ಯಗ್ನೇರಪಾಂ ಪೌತ್ರತ್ವಂ । ಸ ಚ ಧಿಯಾ ಸ್ತುತ್ಯಾ ಶಮಿ । ಶಮೀತಿ ಕರ್ಮನಾಮ । ಯಜ್ಞಕರ್ಮಣಿ ಪ್ರೀತೋ ಭವತ್ವಿತಿ ಶೇಷಃ ॥

॥ ಪ್ರತಿಪದಾರ್ಥ ॥

**ಉತ**—ಮತ್ತು । (**ದೇವಾಃ**—ಎಲೈ ದೇವತೆಗಳೇ) **ಉಶಿಜಾಮಿವ**—ನಮ್ಮ ಸ್ತುತಿಗಳನ್ನು ಇಚ್ಛಿಸತಕ್ಕ । **ವಃ**—ನಿಮ್ಮ ತೃಪ್ತ್ಯರ್ಥವಾಗಿ **ಶಂಸಂ**—ಸ್ತುತಿಯನ್ನು । **ಶ್ನಸಿ**—ಆದರದಿಂದ ಅರ್ಪಿಸುತ್ತೇವೆ । **ಉತ**—ಮತ್ತು । **ಅಹಿರ್ಬುಧ್ನ್ಯಃ**—ಅಹಿರ್ಬುಧ್ನ್ಯನೂ । **ಅಜ ಏಕಪಾತ್**—ಅಜ ಏಕಪಾತ್ ಎಂಬ ದೇವತೆಯೂ । **ತ್ರಿತಃ**—ತ್ರಿತನೂ **ಋಭುಕ್ಷಾಃ**—ಋಭುಕ್ಷನೂ । **ಸವಿತಾ**—ಸವಿತೃವೂ । **ಚನಃ**—ಅನ್ನವನ್ನು । **ದಧೇ**—ಒದಗಿಸಿಕೊಡಲಿ (ಹಾಗೆಯೇ)। **ಆಶುಹೇಮಾ**—ಶೀಘ್ರಗಾಮಿಯಾದ। **ಅಪಾಂ ನಪಾತ್**—ಉದಕಗಳ ಪೌತ್ರನಾದ ಅಗ್ನಿಯು । **ಧಿಯಾ**—ನಮ್ಮ ಸ್ತುತಿಗಳಿಂದಲೂ । **ಶಮಿ**—ನಮ್ಮ ಕರ್ಮಗಳಿಂದಲೂ (ತೃಪ್ತನಾಗಲಿ).

॥ ಭಾವಾರ್ಥ ॥

ಎಲೈ ದೇವತೆಗಳೇ, ನಮ್ಮ ಸ್ತುತಿಗಳನ್ನು ಇಚ್ಛಿಸತಕ್ಕ ನಿಮ್ಮ ತೃಪ್ತ್ಯರ್ಥವಾಗಿ ಸ್ತುತಿಯನ್ನು ಆದರದಿಂದ ಅರ್ಪಿಸುತ್ತೇವೆ. ಮತ್ತು ಅಹಿರ್ಬುಧ್ನ್ಯನೂ, ಅಜಏಕಪಾತ್ ಎಂಬ ದೇವತೆಯೂ ತ್ರಿತನೂ, ಋಭುಕ್ಷನೂ, ಸವಿತೃವೂ ನಮಗೆ ಅನ್ನವನ್ನು ಒದಗಿಸಲಿ. ಹಾಗೆಯೇ, ಶೀಘ್ರಗಾಮಿಯಾದ ಅಪಾಂನಪಾತ್ ಎಂಬ ಹೆಸರಿನಿಂದ ಪ್ರಸಿದ್ಧನಾದ ಅಗ್ನಿಯು ನಮ್ಮ ಕರ್ಮಗಳಿಂದಲೂ ತೃಪ್ತನಾಗಲಿ.

English Translation.

We desire, gods, to repeat the praise of you, who are propitiated by praise: may Ahirbudhnya, Ajaekapad, Trita, Ribhukshin, Savitri, bestow upon us food, and may the swift-moving grandson of the waters, (Agni, be gratified by) our praises and our worship.

॥ ವಿಶೇಷವಿಷಯಗಳು ॥

**ಉಶಿಜಾಮಿವ ಶಂಸಂ ಶ್ನಸಿ—ಅಸ್ಮತ್ತಃ ಸ್ತುತಿಂ ಕಾಮಯಮಾನಾನಾಂ ಯುಷ್ಮಾಕಂ ಸ್ತುತಿಂ ಸಂಪ್ರತಿ ಕಾಮಯಾಮಹೇ।** ಇಲ್ಲಿ ಇವ ಎಂಬ ಪದಕ್ಕೆ **ಸಂಪ್ರತಿ**—ಈಗ ಎಂದು ಅರ್ಥವನ್ನು ಹೇಳಿದೆ. **ಉಶಿಕ್** ಎಂಬ ಪದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಉಕ್ತವಾಗಿ **ಉಶಿಕ್ ವಷ್ಟೇಃ ಕಾಂತಿಕರ್ಮಣಃ** (ನಿ. ೬-೧೧) ಎಂದು ವ್ಯಾಖ್ಯಾತವಾಗಿದೆ. ಸ್ತುತಿಯನ್ನು ಸ್ತೋತ್ರಮಾಡುವವರಿಂದ ಅಪೇಕ್ಷಿಸುವವರೆಂದು ಅರ್ಥವನ್ನು ವರ್ಣಿಸಿದೆ. ಯಾಗವನ್ನಾಚರಿಸುವ ಯಜಮಾನರಿಂದ ಪಠಿಸಲರ್ಹವಾದ ಸ್ತುತಿಯನ್ನು ಅಪೇಕ್ಷಿಸುವ ದೇವತೆಗಳಾದ ನಿಮ್ಮ ಸ್ತುತಿಗಳನ್ನು ಪಠಿಸಲು ಯಜಮಾನರಾದ ನಾವು ಅಪೇಕ್ಷಿಸುತ್ತೇವೆ ಎಂದು ಅರ್ಥವನ್ನು ವಿವರಿಸಿದೆ.

**ಅಹಿರ್ಬುಧ್ನ್ಯಃ—ಬುಧ್ನಮಂತರಿಕ್ಷಂ ತತ್ರ ಭವಃ ಅಹಿನಾಮಾ ದೇವಃ।** **ಅಹಿರ್ಬುಧ್ನ್ಯಃ** ಎಂಬ ಪದವು **ಯೋಽಹಿಃ ಸ ಬುಧ್ನ್ಯೋ ಬುಧ್ನಮಂತರಿಕ್ಷಂ ತನ್ನಿವಾಸಾತ್** (ನಿ. ೧೦-೪೬) ಎಂದು ಯಾಸ್ಕರಿಂದ ವ್ಯಾಖ್ಯಾತವಾಗಿದೆ ಬುಧ್ನ ಶಬ್ದಕ್ಕೆ ಅಂತರಿಕ್ಷವೆಂದು ಅರ್ಥವನ್ನು ವರ್ಣಿಸಿ, ಅಂತರಿಕ್ಷದಲ್ಲಿ ಉತ್ಪನ್ನವಾದ ಅಹಿ ಎಂದು ಹೆಸರುಳ್ಳ ದೇವನೆಂದು ಅರ್ಥವನ್ನು ವಿವರಿಸಿದೆ.

**ಅಜ ಏಕಪಾತ್—ನ ಜಾಯತ ಇತ್ಯಜಃ । ಏಕ ಏವ ಪದ್ಯತೇ ಗಚ್ಛತೀತ್ಯೇಕಪಾತ್ ।** ಅಜ ಏಕ ಪಾತ್ ಎಂಬ ಪದಕ್ಕೆ **ಅಜಏಕಪಾದಜನ ಏಕಃ ಪಾದಃ । ಏಕೇನ ಪಾದೇನ ಪಾತೀತಿ ವಾ, ಪಿಬತೀತಿ ವಾ ಏಕೋಽಸ್ಯ ಪಾದ ಇತಿ ವಾ ।** (ನಿ. ೧೨-೩೦) ಎಂದು ಯಾಸ್ಕರು ವ್ಯಾಖ್ಯಾನವನ್ನು ಮಾಡಿದ್ದಾರೆ. ದುರ್ಗಾಚಾರ್ಯರು, **ಸ ಪುನರಾದಿತ್ಯಃ ನಿತ್ಯಂ ಅಜನಃ ಗಮನಃ ಏಕಃ ಪಾದಃ ಬ್ರಹ್ಮಣಃ । ವಿಜ್ಞಾಯತೇ ಹಿ ಅಗ್ನಿಃ ಪಾದೋ ವಾಯುಃ ಪಾದಃ ಆದಿತ್ಯಃ ಪಾದೋ ದಿಶಃ ಪಾದಃ । ಸರ್ವಮಿದಂ ಜಗತ್ ಏಕೇನಾಂಶೇನ ಅನುಪ್ರವಿಶ್ಯ ರಕ್ಷತಿ । ಸ್ವಾಪಕಾಲೇ ಅನ್ನಂ ಪಚನ್ ಅಜನಶ್ಚ । ಏಕೇನ ಪಾದೇನ ಅಂಶೇನ ಉದಕಂ ಸರ್ವಸ್ಮಾಜ್ಜಗತಃ ಪಿಬತಿ । ಅಜನೋಽಗಮನಃ ಜೀವಭೂತೋಽಸ್ಯ ಕೃತ್ಸ್ನೇ ಜಗತಿ ಏಕಃ ಪಾದಃ ಅನುಪ್ರವಿಷ್ಟಃ ।** (ನಿ. ೧೨-೩೦)

ಈ ಪದಕ್ಕೆ ಆದಿತ್ಯನೆಂದು ಅರ್ಥವನ್ನು ವರ್ಣಿಸಿದ್ದಾರೆ. ಈ ಆದಿತ್ಯನು ನಿರಾಕಾರನಾಗಿರುವ ಕೇವಲ ಸಚ್ಚಿದಾನಂದ ರೂಪದಿಂದ ಇರುವ ಪರಬ್ರಹ್ಮನ ಪಾದ (ನಾಲ್ಕನೇ ಒಂದು ಭಾಗ)ವಾಗಿರುವವನೆಂದೂ, ಇವನು ಯಾವಾಗಲೂ ಸಂಚರಿಸುವವನಾಗಿರುವನೆಂದೂ, ಇವನು ಜಗತ್ತೆಲ್ಲವನ್ನೂ ಒಂದು ಅಂಶದಿಂದ ವ್ಯಾಪಿಸಿ ರಕ್ಷಿಸುವನು, ಪ್ರಾಣಿಗಳ ನಿದ್ರಾಕಾಲದಲ್ಲಿ ಅಗ್ನಿರೂಪದಿಂದ ಅವರ ಆಹಾರವನ್ನು (ಪಚನ) ಜೀರ್ಣಿಸುವಂತೆ ಮಾಡುವನು. ಒಂದು ಅಂಶದಿಂದ ಉದಕಗಳನ್ನು ಹೀರುವನು. ಒಂದು ಅಂಶದಿಂದ ಜೀವಸ್ವರೂಪದಿಂದ ಜಗತ್ತೆಲ್ಲವನ್ನೂ ವ್ಯಾಪಿಸಿ ಸಂಚರಿಸುತ್ತಿರುವನು ಎಂದು ಈ ಆದಿತ್ಯನಿಗೆ ಅಗ್ನಿ ವಾಯು, ಆದಿತ್ಯ, ದಿಕ್ಕುಗಳು ಎಂಬ ನಾಲ್ಕು ಪಾದಗಳಿಂದ ಇರುವ ಪರಬ್ರಹ್ಮನ ಒಂದು ಪಾದವೆಂದು ವಿವರಿಸಿ, ಕಾರ್ಯರೂಪದಿಂದ ಪರಮಾತ್ಮ ತಾದಾತ್ಮ್ಯವನ್ನು ಈ ಆದಿತ್ಯನಿಗೆ ವರ್ಣಿಸಿದ್ದಾರೆ ಈ ಪದದ ಅರ್ಥವಿವರಣೆಯು ಹಿಂದೆ ವಿವೃತವಾಗಿದೆ. ಸಾಯಣರು ಈ ಪದಕ್ಕೆ ಸೂರ್ಯನೆಂದೂ ಒಬ್ಬನೇ ಸಂಚರಿಸುವವನೆಂದೂ, ಉತ್ಪನ್ನನಾಗದೆ ಇರುವವನೆಂದೂ ಅರ್ಥವನ್ನು ವಿವರಿಸಿದ್ದಾರೆ.

**ತ್ರಿತಃ ಋಭುಕ್ಷಾಃ—ತೀರ್ಣತಮಃ ಉರುಕ್ಷಯಃ ಉರುನಿವಾಸಃ ಋಭೂಣಾಂ ನಿವಾಸಯಿತಾ ವಾ ಇಂದ್ರಶ್ಚ ।** ಯಾಸ್ಕರು **ತ್ರಿತಸ್ತೀರ್ಣತಮೋ ಮೇಧಯಾ ಬಭೂವ ಅಪಿ ವಾ ಸಂಖ್ಯಾನಾಮೈವಾಭಿಪ್ರೇತಂ ಸ್ಯಾತ್ ಏಕತೋ ದ್ವಿತಸ್ತ್ರಿತ ಇತಿ ತ್ರಯೋ ಬಭೂವುಃ** (ನಿ. ೪-೬) **ತ್ರಿತಃ ತ್ರಿಸ್ಥಾನ ಇಂದ್ರಃ** (ನಿ. ೯-೨೫) ಎಂದು ವಿವರಿಸಿದ್ದಾರೆ ಮತ್ತೂ **ಋಭುಕ್ಷಾಃ** ಎಂಬ ಪದವು ಮಹನ್ನಾಮಗಳಲ್ಲಿ (ನಿ. ೩-೧೩) ಉಕ್ತವಾಗಿ, ಉರುಕ್ಷಯಣಃ ಋಭೂಣಾಂ ರಾಜಾ (ನಿ. ೯-೩) ಎಂದು ಯಾಸ್ಕರಿಂದ ವ್ಯಾಖ್ಯಾತವಾಗಿದೆ. ಸಾಯಣರು ಈ ಎರಡು ಪದಗಳೂ ಇಂದ್ರನಿಗೆ ವಿಶೇಷಣಗಳಾಗಿರುತ್ತವೆಯಾಗಿ ಇಂದ್ರನು ತನ್ನ ಬುದ್ಧಿಯ ಪ್ರಭಾವದಿಂದ ಎಲ್ಲರನ್ನೂ ಮೀರಿ ಇರುವವನೆಂದೂ, ( ಪ್ರಭೂತವಾದ ) ನಾನಾಕಡೆಗಳಲ್ಲಿ ವ್ಯಾಪಿಸಿಕೊಂಡು ತನ್ನ ಅಧಿಕಾರಕ್ಕನುಗುಣವಾಗಿರುವವನೆಂದೂ, ಅಥವಾ ಋಭುಗಳೆಂಬುವರನ್ನು ಸುಖವಾಗಿರುವಹಾಗೆ ಇರಿಸಿರುವನೆಂದೂ ಅರ್ಥವನ್ನು ವರ್ಣಿಸಿದ್ದಾರೆ.

**ಸವಿತಾ-ಸರ್ವಸ್ಯ ಪ್ರಸವಿತಾ ।** ಯಾಸ್ಕರು ಈ ಪದಕ್ಕೆ **ಸರ್ವಸ್ಯ ಪ್ರಸವಿತಾ** (ನಿ. ೧೦-೩೨) ಎಂದು ಅರ್ಥವನ್ನು ವರ್ಣಿಸಿದ್ದಾರೆ. ಅಹಿ ಎಂಬ ದೇವನೂ, ಅಜ ಏಕಪಾತ್ ಎಂದು ಪ್ರಸಿದ್ಧನಾದ ಸೂರ್ಯನೂ, ಇಂದ್ರನೂ, ಸವಿತೃದೇವನೂ ಯಜಮಾನರಾದ ನಮಗೆ ಅನ್ನವನ್ನು ಅನುಗ್ರಹಿಸಲಿ ಎಂದು ಯಜಮಾನರ ಪ್ರಾರ್ಥನೆಯು ಉಕ್ತವಾಗಿದೆ.

**ಆಶುಹೇಮಾ ಅಪಾನ್ನಪಾತ್ — ಶೀಘ್ರಗಾಮೀ ಅಪಾಂ ಪೌತ್ರೀಯಸ್ಥಾನೀಯೋ ಅಗ್ನಿಃ ।** ಯಾಸ್ಕರು **ಆಪಾಂನಪಾತ್ ತನೂನಪಾತ್ರಾ ವ್ಯಾಖ್ಯಾತಃ** (ನಿ. ೧೦-೧೮) ಎಂದು ವರ್ಣಿಸಿದ್ದಾರೆ.

**ಧಿಯಾ ಶಮಿ—ಶಮಿನಾತಿ ಕರ್ಮನಾಮ ಯಜ್ಞಕರ್ಮಣಿ ಪ್ರೀತೋ ಭವತು । ಯದ್ವಾ ಧಿಯಾ ಕರ್ಮಣಾ ಅಸ್ಮದೀಯೇನ ಪರಿಚರಣಲಕ್ಷಣೇನ ಶಂ ಸುಖಂ ತನ್ನಿಮಿತ್ತಂ ಭವತು ।** ಶಮೀ ಎಂದು ಕರ್ಮನಾಮಗಳಲ್ಲಿ (ನಿ. ೩-೨) ಉಕ್ತವಾಗಿದೆ. ಉದಕಗಳಿಂದ ಓಷಧಿ ವನಸ್ಪತಿಗಳು ಉತ್ಪನ್ನವಾಗಿ, ಅವುಗಳಿಂದ ಅಗ್ನಿಯು ಉತ್ಪನ್ನವಾಗಿರುವುದರಿಂದ ಉದಕಗಳ ಪೌತ್ರ (ಮೊಮ್ಮಗ ಸ್ಥಾನೀಯ) ನಾದ ಅಗ್ನಿಯು ಶೀಘ್ರವಾಗಿ ವ್ಯಾಪಿಸುವವನಾಗಿ, ಯಜಮಾನರಾದ ನಮ್ಮ ಯಜ್ಞಕರ್ಮಗಳ ವಿಷಯದಲ್ಲಿ ನಮ್ಮ ಸ್ತುತಿಗಳನ್ನು ಕೇಳಿ ಸಂತೋಷದಿಂದ ಇರಲಿ, ಎಂದು ಒಂದು ವಿಧವಾದ ಅರ್ಥವು ಉಕ್ತವಾಗಿದೆ. ಅಥವಾ ಸುಖವೆಂಬ ಅರ್ಥವನ್ನು ಬೋಧಿಸುವ ಶಬ್ದದ ಸಪ್ತಮೀ ಏಕವಚನವು ಶಮಿ ಎಂದು ಆಗುವುದರಿಂದ ಅಗ್ನಿಯು ಯಜಮಾನರಾದ ನಾವುಗಳು ಆಚರಿಸುವ ಸೇವೆಗಳಿಂದ ನಮ್ಮ ವಿಷಯದಲ್ಲಿ ಸುಖವನ್ನು ಉಂಟುಮಾಡುವವನಾಗಿರಲಿ ಎಂದು ವಿವರಿಸಿದೆ.

**ಧಿಯಾ—ಸ್ತುತ್ಯಾ ।** ಧೀ ಶಬ್ದವು ಯಾಸ್ಕರಿಂದ ಕರ್ಮನಾಮಗಳಲ್ಲಿಯೂ (ನಿ. ೩-೨) ಪ್ರಜ್ಞಾನಾಮಗಳಲ್ಲಿಯೂ (ನಿ. ೩-೧೩) ಪಠಿತವಾಗಿದೆ. ಇಲ್ಲಿ ಸ್ತುತಿ ಎಂಬ ಅರ್ಥವನ್ನು ಸಾಯಣರು ವರ್ಣಿಸಿದ್ದಾರೆ.



॥ ಸಂಹಿತಾಪಾಠಃ ॥

ಏತಾ ವೋ ವಶ್ಮ್ಯುದ್ಯತಾ ಯಜತ್ರಾ ಅತಕ್ಷನ್ನಾಯವೋ ನವ್ಯಸೇ ಸಂ ।
ಶ್ರವಸ್ಯವೋ ವಾಜಂ ಚಕಾನಾಃ ಸಪ್ತಿರ್ನ ರಥ್ಯೋ ಅಹ ಧೀತಿಮಶ್ಯಾಃ ॥ ೭ ॥

॥ ಪದಪಾಠಃ ॥

ಏತಾ । ವಃ । ವಶ್ಮಿ । ಉತ್ಽಯತಾ । ಯಜತ್ರಾಃ । ಅತಕ್ಷನ್ । ಆಯವಃ । ನವ್ಯಸೇ । ಸಂ ।
ಶ್ರವಸ್ಯವಃ । ವಾಜಂ । ಚಕಾನಾಃ । ಸಪ್ತಿಃ । ನ । ರಥ್ಯಃ । ಅಹ । ಧೀತಿಂ । ಅಶ್ಯಾಃ ॥ ೭ ॥

॥ ಸಾಯಣಭಾಷ್ಯಂ ॥

**ಹೇ ಯಜತ್ರಾ ಯಜನೀಯಾ ವಿಶ್ವೇ ದೇವಾ ವೋ ಯುಷ್ಮದೀಯಾನ್ಯೇತೈತಾನ್ಯುದ್ಯತೋದ್ಯತಾನಿ ವಚಾಂಸಿ ವಶ್ಮಿ। ಕಾಮಯೇ । ನವ್ಯಸೇ ನವತರಾಯ ಸ್ತುತ್ಯತಮಾಯ ಯುಷ್ಮದ್ಗಣಾಯಾಯವೋ ಮತ್ಪ್ರಭೃತಯೋ ಮನುಷ್ಯಾಃ ಕಾಮಿತಾನಿ ಸ್ತೋತ್ರಾಣಿ ಸಮತಕ್ಷನ್। ಸಮಸ್ಕುರ್ವನ್ । ಕಿಮಿಚ್ಛಂತಃ। ಶ್ರವಸ್ಯವಃ ಶ್ರವಣೀಯಂ ಯಶೋಽನ್ನಂ ವಾತ್ಮನ ಇಚ್ಛಂತಃ । ವಾಜಂ ಬಲಂ ಚಕಾನಾಃ ಕಾಮಯ-**

**ಮಾನಾಃ ॥ ಕನ ದೀಪ್ತಿಕಾಂತಿಗತಿಷು । ಲಿಟಃ ಕಾನಚ್ ॥ ರಥ್ಯೋ ರಥಸಂಬಂಧೀ ಸಪ್ತಿರ್ನ ಸರ್ಪಣಶೀಲೋಽಶ್ವ ಇವ ಯುಷ್ಮದ್ಗಣೋ ಧೀತಿಮಸ್ಮದೀಯಂ ಕರ್ಮಾಶ್ಯಾಃ । ಪ್ರಾಪ್ನೋತು ॥ ಅಶೂ ವ್ಯಾಪ್ತೌ । ವ್ಯತ್ಯಯೇನ ಪರಸ್ಮೈಪದಮಧ್ಯಮೌ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ ॥**

॥ ಪ್ರತಿಪದಾರ್ಥ ॥

**ಯಜತ್ರಾಃ**—ಯಜ್ಞಾರ್ಹರಾದ ದೇವತೆಗಳೇ । **ವಃ**—ನಿಮ್ಮನ್ನುದ್ದೇಶಿಸಿದುದೂ । **ಏತಾ ಉದ್ಯತಾ**—ಶ್ರದ್ಧೆಯಿಂದ ಪಠಿಸುವುದೂ ಆದ ಈ ಸ್ತುತಿವಾಕ್ಯಗಳನ್ನು । **ವಶ್ಮಿ**—ಪಠಿಸಲಿಚ್ಛಿಸುತ್ತೇನೆ । **ಶ್ರವಸ್ಯವಃ**—ಅನ್ನಾರ್ಥಿಗಳೂ । **ವಾಜಂ**—ಬಲವನ್ನು । **ಚಕಾನಾಃ**—ಅಪೇಕ್ಷಿಸುವವರೂ ಆದ । **ಆಯವಃ**—ನನ್ನಂತಹ ಮಾನವರು । **ನವ್ಯಸೇ**—ಪೂಜ್ಯರಾದ ನಿಮ್ಮ ಆರಾಧನೆಗಾಗಿ । **ಸಮತಕ್ಷನ್**—(ಸ್ತುತಿಗಳನ್ನು) ನಿರ್ಮಿಸುತ್ತಾರೆ । **ರಥ್ಯಃ**—ರಥದಲ್ಲಿ ಯುಕ್ತವಾಗಿರುವ । **ಸಪ್ತಿಃ ನ**—ಅಶ್ವದಂತೆ । **ಧೀತಿಂ**—ನಮ್ಮ ಕರ್ಮಾಭಿಮುಖವಾಗಿ । **ಅಶ್ಯಾಃ**—(ನಿಮ್ಮ ಸಮೂಹವು) ಬಂದು ಸೇರಲಿ.

॥ ಭಾವಾರ್ಥ ॥

ಯಜ್ಞಾರ್ಹರಾದ ದೇವತೆಗಳೇ, ನಿಮ್ಮನ್ನುದ್ದೇಶಿಸಿದುದೂ, ಶ್ರದ್ಧೆಯಿಂದ ಪಠಿಸಲ್ಪಡುವುದೂ ಆದ ಈ ಸ್ತುತಿವಾಕ್ಕುಗಳನ್ನು ಪಠಿಸಲಿಚ್ಛಿಸುತ್ತೇನೆ. ಅನ್ನಾರ್ಥಿಗಳೂ, ಬಲವನ್ನು ಅಪೇಕ್ಷಿಸುವವರೂ ಆದ ನನ್ನಂತಹ ಮಾನವರು ಪೂಜ್ಯರಾದ ನಿಮ್ಮ ಆರಾಧನೆಗಾಗಿ ಸ್ತುತಿಗಳನ್ನು ನಿರ್ಮಿಸುತ್ತಾರೆ. ರಥದಲ್ಲಿ ಯುಕ್ತವಾಗಿರುವ ಅಶ್ವದಂತೆ ನಿಮ್ಮ ಸಮೂಹವು ನಮ್ಮ ಕರ್ಮಾಭಿಮುಖವಾಗಿ ಬಂದು ಸೇರಲಿ.

English Translation.

Adorable (gods), I desire that these (my) earnest praises (should please) you: men wishing for food, desirous of vigour, have constructed (hymns) for yous celebration; may you hasten like a (swift) chariot-horse to our (pious) rite.

॥ ವಿಶೇಷವಿಷಯಗಳು ॥

**ಯಜತ್ರಾಃ—ಯಜನೀಯಾಃ** । ವಿಶ್ವೇದೇವತೆಗಳು ಯಾಗಾರ್ಹರಾಗಿರುವುದರಿಂದ ಈ ಪದದಿಂದ ಇವರನ್ನು ಸಂಬೋಧಿಸಿ, **ವಃ ಏತಾ ಉದ್ಯತಾ ವಶ್ಮಿ—ಯುಷ್ಮದೀಯಾನಿ ಏತಾನಿ ಉದ್ಯತಾನಿ ವಚಾಂಸಿ ಕಾಮಯೇ** । ಯಜಮಾನನು— ಈ ದೇವತೆಗಳನ್ನು ಉದ್ದೇಶಿಸಿ ಸ್ತೋತ್ರಗಳನ್ನು ಪಠಿಸಲಪೇಕ್ಷಿಸುವೆನೆಂದೂ, **ಆಯವಃ ನವ್ಯಸೇ ಸಮತಕ್ಷನ್—ಮತ್ತ್ರಭೃತಯೋಃ ಮನುಷ್ಯಾಃ ಸ್ತುತ್ಯತಮಾಯ ಯುಷ್ಮದ್ಗಣಾಯ ಸ್ತೋತ್ರಾಣಿ ಸಮಸ್ಕುರ್ವನ್** । ಯಜಮಾನರೇ ಮೊದಲಾದವರು ಯಶಸ್ಸನ್ನೂ, ಅನ್ನವನ್ನೂ. ಬಲವನ್ನೂ ಹೊಂದಲು ಇಚ್ಛೆಯಿಂದ, ಈ ದೇವತೆಗಳನ್ನು ಪಠಿಸಲರ್ಹವಾದ ಸ್ತುತಿಗಳಿಂದ ಪೂಜಿಸಿರುವರೆಂದೂ ವರ್ಣಿಸಿದೆ.

**ರಥ್ಯಃ—ಸಪ್ತಿರ್ನ ಧೀತಿಂ ಅಶ್ಯಾಃ—ರಥಸಂಬಂಧೀ ಸರ್ಪಣಶೀಲೋ ಅಶ್ವ ಇವ ಯುಷ್ಮದ್ಗಣಃ ಅಸ್ಮದೀಯಂ ಕರ್ಮ ಪ್ರಾಪ್ನೋತು** । ರಥಕ್ಕೆ ಕಟ್ಟಲು ಅರ್ಹವಾಗಿರುವ ವೇಗಶಾಲಿಯಾದ ಕುದುರೆಯು,

ತನ್ನನ್ನು ಸೇವಿಸುವವನ ಸ್ತುತಿಯನ್ನೂ, ಸೇವೆಯನ್ನೂ ಸ್ವೀಕರಿಸುವ ಹಾಗೆ, ಯಜಮಾನರಾದ ನಾವು ಆಚರಿಸುವ ಸ್ತುತಿಪಠನ, ಹವಿರರ್ಪಣವೇ ಮೊದಲಾದ ವಿಶ್ವೇದೇವತೆಗಳ ಉದ್ದೇಶವಾಗಿರುವ ಕರ್ತವ್ಯಗಳೆಲ್ಲವನ್ನು ಅವರು ಅಂಗೀಕರಿಸಲಿ ಎಂದು ಆಶಿಸಿದೆ.

**ಆಯವಃ—ಮನುಷ್ಯಾಃ** । ಈ ಪದವು ಮನುಷ್ಯನಾಮಗಳಲ್ಲಿ (ನಿ. ೩-೮) ಉಕ್ತವಾಗಿದೆ. ಇಲ್ಲಿ ಯಾಗವನ್ನಾಚರಿಸುವವರೇ ಮೊದಲಾದ ಮನುಷ್ಯರೆಂದು ಅರ್ಥವನ್ನು ಹೇಳಿದೆ.

**ಸಪ್ತಿಃ—ಸರ್ಪಣಶೀಲಃ ಅಶ್ವಃ** । ಸಪ್ತಿ ಎಂಬ ಪದವು ಅಶ್ವನಾಮಗಳಲ್ಲಿ (ನಿ. ೨-೨೭) ಪಠಿತವಾಗಿದೆ. ವೇಗವಾಗಿ ಸಂಚರಿಸುವ ಸ್ವಭಾವದಿಂದ ಇರುವ ಕುದುರೆ ಎಂದು ಅರ್ಥವನ್ನು ವಿವರಿಸಿದೆ.

**ರಥ್ಯಾಃ—ರಥಸ್ಯ ವೋಢಾರಃ** (ನಿ. ೧೦-೩) ಎಂದು ಯಾಸ್ಕರು **ರಥ್ಯ** ಶಬ್ದದ ಬಹುವಚನರೂಪದಲ್ಲಿರುವ ಪದಕ್ಕೆ ಅರ್ಥವನ್ನು ವರ್ಣಿಸಿದ್ದಾರೆ. ರಥ್ಯ ಶಬ್ದವು ಸಪ್ತಿ ಎಂಬ ಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿ ರಥ ಸಂಬಂಧಿ ಎಂದು ವ್ಯಾಖ್ಯಾತವಾಗಿದೆ.



# ಮೂವತ್ತೆರಡನೆಯ ಸೂಕ್ತವು

**ಅಸ್ಯ ಮ ಇತ್ಯಷ್ಟರ್ಚಂ ದಶಮಂ ಸೂಕ್ತಂ ಗೃತ್ಸಮದಸ್ಯಾರ್ಷಂ ಷಷ್ಠ್ಯಾದ್ಯಾಸ್ತಿಸ್ರೋಽನುಷ್ಟುಭಃ । ಶಿಷ್ಟಾಃ ಪಂಚ ಜಗತ್ಯಃ । ಪ್ರಥಮಾ ದ್ಯಾವಾಪೃಥಿವೀಯಾ ತತೋ ದ್ವೇ ಐಂದ್ರ್ಯೌ ತ್ವಾಷ್ಟ್ರ್ಯೌ ವಾ । ತತೋ ದ್ವೇ ರಾಕಾದೇವತ್ಯೇ ದ್ವೇ ಸಿನೀವಾಲೀದೇವತ್ಯೇ ಅಂತ್ಯಾ ಗುಂಗ್ವಾದಿಷಡ್ದೇವತಾಕಾ । ತಥಾ ಚಾನುಕ್ರಾಂತಂ । ಅಸ್ಯಮೇಽಷ್ಟೌ ಜಾಗತಂ ತ್ರ್ಯನುಷ್ಟುಬಂತಂ । ದ್ಯಾವಾಪೃಥಿವ್ಯೈಕಾ ದ್ವೇ ಐಂದ್ರ್ಯೌ ತ್ವಾಷ್ಟ್ರ್ಯೌ ವಾ ದ್ವೇ ದ್ವೇ ರಾಕಾಸಿನೀವಾಲ್ಯೋರಂತ್ಯಾ ಲಿಂಗೋಕ್ತದೇವತೇತಿ ॥ ಅಭಿಪ್ಲವಿಕೇ ಚತುರ್ಥೇಽಹನಿ ವೈಶ್ವದೇವಶಸ್ತ್ರ ಆದ್ಯಸ್ತೃಚೋ ದ್ಯಾವಾಪೃಥಿವೀಯನಿವಿದ್ಧಾನಃ । ತಥಾ ಚ ಸೂತ್ರಿತಂ। ಅಸ್ಯ ಮೇ ದ್ಯಾವಾಪೃಥಿವೀ ಇತಿ ತಿಸ್ರಸ್ತತಂ ನೋ ಅಪ ಇತಿ ವೈಶ್ವದೇವಂ | ಆ. ೭-೭ । ಇತಿ ॥**

ಅನುವಾದವು—**ಅಸ್ಯ ಮೇ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು; ಆರನೆಯ ಋಕ್ಕಿನಿಂದ ಎಂಟನೆಯ ಋಕ್ಕಿನ ವರೆಗಿರುವ ಕೊನೆಯ ಮೂರು ಋಕ್ಕುಗಳು ಅನುಷ್ಟುಪ್‌ಛಂದಸ್ಕವು; ಉಳಿದ ಐದು ಋಕ್ಕುಗಳು ಜಗತೀ ಛಂದಸ್ಕವು. ಈ ಸೂಕ್ತದಲ್ಲಿ ಮೊದಲನೆಯ ಋಕ್ಕು ದ್ಯಾವಾಪೃಥಿವೀದೇವತಾಕವು; ಅಲ್ಲಿಂದ ಮುಂದಿನ ಎರಡು ಋಕ್ಕುಗಳಿಗೆ (೨-೩ ಋಕ್ಕುಗಳಿಗೆ) ಇಂದ್ರನು ಅಥವಾ ತ್ವಷ್ಟೃವು ದೇವತೆಯು; ಅದರ ಮುಂದಿನ ಎರಡು ಋಕ್ಕುಗಳಿಗೆ (೪-೫ ಋಕ್ಕುಗಳಿಗೆ) ರಾಕಾ ದೇವತೆಯು; ಅದರ ಮುಂದಿನ ಎರಡು ಋಕ್ಕುಗಳಿಗೆ (೬-೭ ಋಕ್ಕುಗಳಿಗೆ) ಸಿನೀವಾಲಿಯು ದೇವತೆಯು; ಕೊನೆಯ ಋಕ್ಕಿಗೆ (೮ ನೇ ಋಕ್ಕಿಗೆ) ಗುಂಗು ಮೊದಲಾದ ಆರು ಮಂದಿಯರು

ದೇವತೆಯು. ಅನುಕ್ರಮಣಿಕೆಯಲ್ಲಿ—**ಅಸ್ಯ ಮೇಽಷ್ಟೌ ಜಾಗತಂ ತ್ರ್ಯನುಷ್ಟುಬಂತಂ ದ್ಯಾವಾಪೃಥಿವ್ಯೈಕಾ ದ್ವೇ ಐಂದ್ರ್ಯೌ ತ್ವಾಷ್ಟ್ರ್ಯೌ ವಾ ದ್ವೇ ದ್ವೇ ರಾಕಾಸಿನೀವಾಲ್ಯೋರಂತ್ಯಾ ಲಿಂಗೋಕ್ತದೇವತೇತಿ** ಎಂದು ಹೇಳಿರುವುದು. ಅಭಿಪ್ಲವವೆಂಬ ಯಾಗದ ನಾಲ್ಕನೆಯ ದಿವಸದಲ್ಲಿ ವೈಶ್ವದೇವಶಸ್ತ್ರಮಂತ್ರಗಳ ಪಠನಕಾಲದಲ್ಲಿ ಈ ಸೂಕ್ತದ ಮೊದಲನೆಯ ಮೂರು ಋಕ್ಕುಗಳನ್ನು ದ್ಯಾವಾಪೃಥಿವೀಸಂಬಂಧವಾದ ನಿವಿನ್ಮಂತ್ರಗಳಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಸ್ಯ ಮೇ ದ್ಯಾವಾಪೃಥಿವೀ ಇತಿ ತಿಸ್ರಸ್ತತಂ ಮೇ ಅಪ ಇತಿ ವೈಶ್ವದೇವಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೭-೭).

## ಸೂಕ್ತ—೩೨

ಮಂಡಲ—೨ ॥ ಅನುವಾಕ—೩ ॥ ಸೂಕ್ತ—೩೨ ॥

ಅಷ್ಟಕ—೨ ॥ ಅಧ್ಯಾಯ—೭ ॥ ವರ್ಗ—೧೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥

॥ ಋಷಿಃ—ಗೃತ್ಸಮದಃ ॥

॥ ದೇವತಾ—೧. ದ್ಯಾವಾಪೃಥಿವೀ । ೨-೩ ಇಂದ್ರಸ್ತ್ವಷ್ಟಾ ವಾ ।
೪-೫. ರಾಕಾ । ೬-೭. ಸಿನೀವಾಲೀ । ೮. ಲಿಂಗೋಕ್ತದೇವತಾಃ ।

॥ ಛಂದಃ—೧-೫. ಜಗತೀ । ೬-೮. ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಅಸ್ಯ ಮೇ ದ್ಯಾವಾಪೃಥಿವೀ ಋತಾಯತೋ ಭೂತಮವಿತ್ರೀ ವಚಸಃ ಸಿಷಾಸತಃ ।
ಯಯೋರಾಯುಃ ಪ್ರತರಂ ತೇ ಇದಂ ಪುರ ಉಪಸ್ತುತೇ ವಸೂಯುರ್ವಾಂ
ಮಹೋ ದಧೇ ॥ ೧ ॥

ಪದಪಾಠಃ ॥

ಅಸ್ಯ । ಮೇ । ದ್ಯಾವಾಪೃಥಿವೀ ಇತಿ । ಋತಽಯತಃ । ಭೂತಂ । ಅವಿತ್ರೀ ಇತಿ । ವಚಸಃ । ಸಿಸಾಸತಃ ।
ಯಯೋಃ । ಆಯುಃ । ಪ್ರಽತರಂ । ತೇ ಇತಿ । ಇದಂ । ಪುರಃ । ಉಪಸ್ತುತೇ ಇತ್ಯುಪಽಸ್ತುತೇ ।
ವಸುಽಯುಃ । ವಾಂ । ಮಹಃ । ದಧೇ ॥ ೧ ॥

॥ ಸಾಯಣಭಾಷ್ಯಂ ॥

**ದ್ಯಾವಾಪೃಥಿವೀ ಹೇ ದ್ಯಾವಾಪೃಥಿವ್ಯೌ ಋತಾಯತ ಋತಂ ಯಜ್ಞಮಾತ್ಮನ ಇಚ್ಛತಃ ಸಿಷಾಸತೋ ಯುವಾಂ ಸಂಭಕ್ತುಮಿಚ್ಛತೋಽಸ್ಯ ವಚಸಃ ॥ ವಕ್ತೀತಿ ವಚಾಃ ಸ್ತೋತಾ । ಅಸುನ್ ॥**

**ಸ್ತೋತುರಸ್ಯ ಮೇ ಮಮಾವಿತ್ರೀ ಅವಿತ್ರ್ಯೌ ಪಾಲಯಿತ್ರ್ಯೌ ಭೂತಂ । ಭವತಂ । ಯಯೋರ್ದ್ಯಾವಾಪೃಥಿವ್ಯೋರಾಯುರನ್ನಂ ಪ್ರತರಂ ಪ್ರಕೃಷ್ಟತರಮುತ್ಪದ್ಯತ ಇತಿ ಶೇಷಃ । ಇದಮಿದಾನೀಂ ತೇ ದ್ಯಾವಾಪೃಥಿವ್ಯಾವುಪಸ್ತುತೇ ತತ್ರ ತತ್ರ ಸ್ಥಿತೈಃ ಸ್ತೋತೃಭಿಃ ಸ್ತುತೇ ವಾಂ ಯುವಾಂ ವಸೂಯುರ್ಧನಕಾಮೋಽಹಂ ಮಹೋ ಮಹತಃ ॥ ವಿಭಕ್ತಿವ್ಯತ್ಯಯಃ ॥ ಮಹತಾ ಸ್ತೋತ್ರೇಣ ಪುರೋ ದಧೇ । ಪುರಸ್ಕರೋಮಿ ॥**

॥ ಪ್ರತಿಪದಾರ್ಥ ॥

**ದ್ಯಾವಾಪೃಥಿವೀ**—ಎಲೈ ದ್ಯಾವಾಪೃಥಿವಿಗಳೇ । **ಋತಾಯತಃ**—ಯಜ್ಞವನ್ನು ಮಾಡಲು ಇಚ್ಛೆಯುಳ್ಳವನೂ । **ಸಿಷಾಸತಃ**—ನಿಮ್ಮನ್ನು ಸೇವಿಸಲಿಚ್ಛಿಸುವವನೂ । **ವಚಸಃ**—ಸ್ತುತಿಕರ್ತನೂ ಆದ । **ಅಸ್ಯ ಮೇ**—ಈ ನನಗೆ । **ಅವಿತ್ರೀ**—ಪಾಲಕಿಯರಾಗಿ । **ಭೂತಂ**—ಇರಿ । **ಯಯೋಃ**—ಯಾವ ದ್ಯಾವಾಪೃಥಿವಿಗಳ । **ಆಯುಃ**—ಅನ್ನವು । **ಪ್ರತರಂ**—ಅತ್ಯುತ್ಕೃಷ್ಟವಾಗಿದೆಯೋ । **ತೇ**—ಅಂತಹವರೂ । **ಉಪಸ್ತುತೇ**—ಎಲ್ಲರಿಂದಲೂ ಸ್ತುತಿಸಲ್ಪಡುವವರೂ ಆದ । **ವಾಂ**—ನಿಮ್ಮಿಬ್ಬರನ್ನೂ । **ಇದಂ**—ಈಗ । **ವಸೂಯುಃ**—ಧನೇಚ್ಛೆಯುಳ್ಳವನಾಗಿ । **ಮಹಃ**—ಮಹತ್ತಾದ ಸ್ತೋತ್ರದಿಂದ । **ಪುರಃ ದಧೇ**—ಕೊಂಡಾಡುತ್ತೇನೆ.

॥ ಭಾವಾರ್ಥ ॥

ಎಲೈ ದ್ಯಾವಾಪೃಥಿವಿಗಳೇ, ಯಜ್ಞವನ್ನು ಮಾಡಲಿಚ್ಛೆಯುಳ್ಳವನೂ, ನಿಮ್ಮನ್ನು ಸೇವಿಸಲು ಕಾತರನಾಗಿರುವವನೂ, ಸ್ತುತಿಕರ್ತನೂ ಆದ ಈ ನನ್ನ ರಕ್ಷಕಿಯರಾಗಿರಿ. ಯಾವ ದ್ಯಾವಾಪೃಥಿವಿಗಳ ಅನ್ನವು ಅತ್ಯುತ್ಕೃಷ್ಟವಾಗಿದೆಯೋ ಅಂತಹವರೂ, ಎಲ್ಲರಿಂದಲೂ ಸ್ತುತಿಸಲ್ಪಡುವವರೂ ಆದ ನಿಮ್ಮಿಬ್ಬರನ್ನೂ ಈಗ ಧನೇಚ್ಛೆಯುಳ್ಳವನಾಗಿ ಮಹತ್ತಾದ ಸ್ತುತಿಯಿಂದ ಕೊಂಡಾಡುತ್ತೇನೆ.

English Translation.

Heaven and Earth, be the protectors of me your worshipper, anxious to propitiate you by worship and adoration, for of you two is abundant food: desiring riches, I glorify you both, and celebrate you with great (laudation).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ದ್ಯಾವಾಪೃಥಿವಿಗಳನ್ನು ಸ್ತುತಿಸಲಾಗಿದೆ. ದ್ಯಾವಾಪೃಥಿವಿಗಳನ್ನು ಸಂಬೋಧಿಸಿ ಇವರನ್ನು ಉದ್ದೇಶಮಾಡಿ ಯಾಗವನ್ನಾಚರಿಸುವುದರ ಮೂಲಕವಾಗಿಯೂ ಸ್ತೋತ್ರವನ್ನು ಪಠಿಸುವುದರ ಮೂಲಕವಾಗಿಯೂ ಸೇವಿಸಲು ಅಭಿಲಾಷೆಯನ್ನು ಹೊಂದಿರುವ ಮತ್ತು ಸ್ತುತಿಯನ್ನು ಪಠಿಸುತ್ತಿರುವ ಯಜಮಾನನಿಗೆ ದ್ಯಾವಾಪೃಥಿವಿಗಳು ರಕ್ಷಕರಾಗಿರಲಿ ಎಂದು ಆಶಿಸಿದೆ.

**ವಚಸಃ—ವಕ್ತೀತಿ ವಚಾಃ ಸ್ತೋತಾ ।** ಸ್ತುತಿಗಳನ್ನು ಪಠಿಸುವನಾದುದರಿಂದ ವಚಸಃ ಎಂಬ ಶಬ್ದವು ಸ್ತುತಿಪಾಠಕನು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಉಪಸ್ತುತೇ—ತತ್ರ ತತ್ರ ಸ್ಥಿತೈಃ ಸ್ತೋತೃಭಿಃ ಸ್ತುತೇ** । ಯಾಗ ಕಾಲಗಳಲ್ಲಿ ಆಯಾಯ ಪ್ರದೇಶಗಳಲ್ಲಿರುವ ಋತ್ವಿಜರಿಂದಲೂ ಯಜಮಾನರಿಂದಲೂ ಸ್ತುತಿಮಾಡಲ್ಪಟ್ಟಿರುವರು ಎಂದು ವಿವರಿಸಿದೆ.

**ವಸೂಯುಃ— ಧನಕಾಮಃ । ಯಾಸ್ಕರು "ವಸೂಯವೋ ವಸುಕಾಮಾಃ"** (ನಿ. ೬-೫) ಎಂದೂ, **"ವಸೂಯುಃ ವಸುಮಾನ್"** (ನಿ. ೬-೩೨) ಎಂದೂ ಅರ್ಥವನ್ನು ವಿವರಿಸಿದ್ದಾರೆ.

**ಯುಯೋಃ ಆಯುಃ ಪ್ರತರಂ**—ಈ ದ್ಯಾವಾಪೃಥಿವಿಗಳಿಂದ ಲಭ್ಯವಾಗುವ ಅನ್ನವು ಪ್ರಭೂತವಾಗಿರುವುದು ಎಂದು **ಇದಂ ತೇ ಉಪಸ್ತುತೇ**—ಈ ಕಾರಣದಿಂದ ಈಗ ಈ ದ್ಯಾವಾಪೃಥಿವಿಗಳು ಯಾಗಗಳಲ್ಲಿ ಆಯಾಯ ಋತ್ವಿಜರಿಂದ ಸ್ತುತಿಸಲ್ಪಡುವವರೆಂದೂ, **ವಸೂಯುಃ ಮಹಃ ಸ್ತರಃ ದಧೇ**—ಧನವೇ ಮೊದಲಾದವುಗಳನ್ನು ಹೊಂದಲಿಚ್ಛಿಸುವ ಯಜಮಾನನು ಶ್ಲಾಘ್ಯವಾದ ಸ್ತುತಿಗಳನ್ನು ಪಠಿಸುವುದರ ಮೂಲಕ ಈ ದ್ಯಾವಾಪೃಥಿವಿಗಳನ್ನು ತೃಪ್ತಿಪಡಿಸುವನು ಎಂದೂ ವರ್ಣಿಸಿದೆ.

॥ ಸಂಹಿತಾಪಾಠಃ ॥

ಮಾ ನೋ ಗುಹ್ಯಾ ರಿಪ ಆಯೋರಹನ್ದಭನ್ಮಾ ನ ಆಭ್ಯೋ ರೀರಧೋ ದುಚ್ಛು-
ನಾಭ್ಯಃ ।
ಮಾ ನೋ ವಿ ಯೌಃ ಸಖ್ಯಾ ವಿದ್ಧಿ ತಸ್ಯ ನಃ ಸುಮ್ನಾಯತಾ ಮನಸಾ ತತ್ತ್ವೇ-
ಮಹೇ ॥ ೨ ॥

॥ ಪದಪಾಠಃ ॥

ಮಾ । ನಃ । ಗುಹ್ಯಾಃ । ರಿಪಃ । ಆಯೋಃ । ಅಹನ್ । ದಭನ್ । ಮಾ । ನಃ । ಆಭ್ಯಃ । ರೀರಧಃ ।
ದುಚ್ಛುನಾಭ್ಯಃ ।
ಮಾ । ನಃ । ವಿ । ಯೌಃ । ಸಖ್ಯಾ । ವಿದ್ಧಿ । ತಸ್ಯ । ನಃ । ಸುಮ್ನಯತಾ । ಮನಸಾ । ತತ್ । ತ್ವಾ ।
ಈಮಹೇ ॥ ೨ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ತ್ವಷ್ಟರ್ವಾ ಆಯೋರ್ಮನುಷ್ಯಸ್ಯ ಶತ್ರುಭೂತಸ್ಯ ಗುಹ್ಯಾ ಗೋಪ್ಯಾ ಜ್ಞಾತುಮಶಕ್ಯಾ ರಿಪೋ ಹಿಂಸಾರೂಪಾ ಮಾಯಾ ನೋಽಸ್ಮಾನ್ ಅಹನ್ । ಉಪಲಕ್ಷಣಮೇತತ್ । ಅಹನಿ ರಾತ್ರೌ**

**ಚ ಮಾ ದಭನ್** । **ಮಾ ಹಿಂಸಿಷುಃ** । **ತಥಾ ನೋಽಸ್ಮಾನಾಭ್ಯೋ ದುಚ್ಛುನಾಭ್ಯಃ** । **ಶುನಮಿತಿ ಸುಖನಾಮ** । **ದುಃಶುನಾ ದುಚ್ಛುನಾಃ** । **ದುಃಖಕಾರಿಣೀಭ್ಯಃ ಶತ್ರುಸೇನಾಭ್ಯೋ ಮಾ ರೀರಧಃ** । **ವಶಂ ಮಾ ನೈಷೀಃ** **ರಧ್ಯತಿರ್ವಶಗಮನ ಇತಿ ಯಾಸ್ಕಃ** । **ರಧ ಹಿಂಸಾಸಂರಾದ್ಧ್ಯೋಃ** । **ಅಸ್ಮಾಣ್ಣ್ಯಂತಾಲ್ಲುಙಿ ಚಙಿ ರೂಪಂ** ॥ **ಅಪಿ ಚ ನೋಽಸ್ಮಾಕಂ ಸಖ್ಯಾ ಸಖ್ಯಾನಿ ಸಖಿತ್ವಾನಿ ಮಾ ವಿ ಯೌಃ** । **ತ್ವಯಾ ವಿಯುಕ್ತಾನಿ ಮಾ ಕಾರ್ಷೀಃ** । **ಅಪಿ ತು ನೋಽಸ್ಮಾಕಂ ತಸ್ಯ ತತ್ ಸಖಿತ್ವಂ ಸುಮ್ನಾಯತಾ ಸುಖಮಸ್ಮಾಕಮಿಚ್ಛತಾ ಮನಸಾ ವಿದ್ಧಿ** । **ಜಾನೀಹಿ** ॥ **ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ** ॥ **ತತ್ ತ್ವಾ ತ್ವಾದೃಶಂ ತ್ವಾಮೀಮಹೇ** । **ಅಭಿಮತಫಲಂ ಯಾಚಾಮಹೇ** ॥ **ಸುಪಾಂ ಸುಲುಗಿತಿ ತಚ್ಛಬ್ದಾದುತ್ತರಸ್ಯಾ ವಿಭಕ್ತೇರ್ಲುಕ್** ॥

॥ ಪ್ರತಿಪದಾರ್ಥ ॥

ಎಲೈ ಇಂದ್ರನೇ । **ಆಯೋಃ**—ಶತ್ರುಭೂತನಾದ ಮಾನವನ । **ಗುಹ್ಯಾಃ**—ಗೋಪ್ಯವಾದ । **ರಿಪಃ**—ಹಿಂಸಾರೂಪವಾದ ಮಾಯೆಗಳು । **ನಃ**—ನಮ್ಮನ್ನು । **ಅಹನ್**—ಅಹಸ್ಸಿನಲ್ಲಾಗಲಿ ಅಥವಾ ರಾತ್ರಿಯಲ್ಲಾಗಲಿ । **ಮಾ ದಭನ್**—ಹಿಂಸಿಸದಿರಲಿ । **ನಃ**—ನಮ್ಮನ್ನು । **ಆಭ್ಯಃ ದುಚ್ಛುನಾಭ್ಯಃ**—ದುಃಖಕಾರಿಗಳಾದ ಈ ಶತ್ರುಸೈನ್ಯಗಳಿಗೆ । **ಮಾ ರೀರಧಃ**—ವಶವಾಗುವಂತೆ ಮಾಡಬೇಡ । **ನಃ**—ನಮ್ಮೊಂದಿಗೆ । **ಸಖ್ಯಾ**—ನಿನ್ನ ಸಖಿತ್ವವನ್ನು । **ಮಾ ವಿ ಯೌಃ**—ಭೇದವಾಗುವಂತೆ ಮಾಡಬೇಡ । **ನಃ**—ನಮ್ಮೊಂದಿಗೆ । **ತಸ್ಯ**—ಆ ಸಖಿತ್ವವನ್ನು । **ಸುಮ್ನಾಯತಾ**—ಸುಖವನ್ನಪೇಕ್ಷಿಸತಕ್ಕ । **ಮನಸಾ**—ಮನಸ್ಸಿನಿಂದ । **ವಿದ್ಧಿ**—ತಿಳಿ । **ತತ್ ತ್ವಾ**—ಅಂತಹ ಆಪ್ತಮಿತ್ರನಾದ ನಿನ್ನನ್ನು । **ಈ ಮಹೇ**—ಅಭಿಮತಫಲವನ್ನು ಯಾಚಿಸುತ್ತೇನೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಶತ್ರುಭೂತನಾದ ಮಾನವನ ಗೋಪ್ಯವಾದುದೂ, ಹಿಂಸಾತ್ಮಕವಾದುದೂ ಆದ ಮಾಯೆಗಳು ನಮ್ಮನ್ನು ಅಹಸ್ಸಿನಲ್ಲಾಗಲಿ ಅಥವಾ ರಾತ್ರಿಯಲ್ಲಾಗಲಿ ಹಿಂಸಿಸದಿರಲಿ. ನಮ್ಮನ್ನು ದುಃಖಕಾರಿಗಳಾದ ಈ ಶತ್ರುಸೈನ್ಯಗಳಿಗೆ ವಶವಾಗುವಂತೆ ಮಾಡಬೇಡ. ನಮ್ಮೊಂದಿಗೆ ನಿನ್ನ ಸಖಿತ್ವವನ್ನು ಭೇದವಾಗುವಂತೆ ಮಾಡದೇ, ಅದನ್ನು ಸುಖಕಾರಿಯಾಗುವಂತೆ ವೃದ್ಧಿಪಡಿಸು. ಅಂತಹ ಆಪ್ತಮಿತ್ರನಾದ ನಿನ್ನಲ್ಲಿ ಅಭಿಮತಫಲವನ್ನು ಯಾಚಿಸುತ್ತೇನೆ

English Translation·

Let not the secret guile of man, (Indra), harm us by day (or night); leave us not subject to the malevolent, disunite us not from your friendship; regard us with the favourable thoughts that (spring) from it: we ask this (boon) of you.

॥ ವಿಶೇಷವಿಷಯಗಳು ॥

ಈ ಋಕ್ಕಿನಿಂದಲೂ ಇದರ ಮುಂದಿನ ಋಕ್ಕಿನಿಂದಲೂ ಇಂದ್ರನೂ ಮತ್ತು ತ್ವಷ್ಟೃ ಎಂಬ ದೇವನೂ ಸ್ತುತರಾಗಿದ್ದಾರೆ. ಇಂದ್ರ ಶಬ್ದದ ನಿರ್ವಚನವೂ ತ್ವಷ್ಟೃ ಶಬ್ದದ ನಿರ್ವಚನವೂ ಹಿಂದೆಯೇ ಉಕ್ತವಾಗಿದೆ.

**ಆಯೋಃ—ಗುಹ್ಯಾಃ ರಿಷಃ ನಃ ಅರ್ಹ— ಶತ್ರುಭೂತಸ್ಯ ಮನುಷ್ಯಸ್ಯ ಜ್ಞಾತುಮಶಕ್ಯಾಃ ಮಾಯಾಃ ಹಿಂಸಾರೂಪಾಃ ಅಹನಿ ರಾತ್ರೌ ಚ ಮಾ ಹಿಂಸಿಷುಃ ।** ಆಯುಃ ಶಬ್ದಕ್ಕೆ ಶತ್ರುವಾದ ಮನುಷ್ಯನೆಂದು ಅರ್ಥವನ್ನು ಹೇಳಿದೆ. ಈ ಶತ್ರುವು ಯಜಮಾನನಾದ ನಮ್ಮನ್ನು ಹಿಂಸೆಮಾಡುವುದಕ್ಕಾಗಿ ಆಚರಿಸಿರುವ, ನಮ್ಮಿಂದ ತಿಳಿಯಲು ಅಶಕ್ಯವಾದ ಕಾರ್ಯಗಳು ಅಹೋರಾತ್ರಗಳಲ್ಲಿ ನಮ್ಮನ್ನು ಹಿಂಸೆ ಮಾಡದೆ ಇರಲಿ ಎಂದು ಇಂದ್ರನನ್ನೂ ತ್ವಷ್ಟೃವನ್ನೂ ಪ್ರಾರ್ಥಿಸಿದ್ದಾರೆ.

**ದುಚ್ಛುನಾಭ್ಯಃ—ದುಃಶುನಾಃ ದುಚ್ಛುನಾಃ ದುಃಖಕಾರಿಣೀಭ್ಯಃ ಶತ್ರುಸೇನಾಭ್ಯಃ ।** ಶುನ ಶಬ್ದವು ಯಾಸ್ಕರಿಂದ ಸುಖನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ದುಃಖವನ್ನು ಉಂಟುಮಾಡುವುದು ಎಂಬ ಅರ್ಥವನ್ನು ದುಃ ಎಂಬ ಉಪಸರ್ಗವು ಸುಖವಾಚಕವಾದ ಶುನ ಶಬ್ದದೊಡನೆ ಸೇರಿದಾಗ ದುಚ್ಛುನಶಬ್ದವು ಆಗುತ್ತದೆ. ದುಃಖವನ್ನು ಉಂಟುಮಾಡುವ ಶತ್ರುಗಳ ವಶಕ್ಕೆ ನಮ್ಮನ್ನು ಇಂದ್ರನೂ, ತ್ವಷ್ಟೃದೇವನೂ ಒಪ್ಪಿಸದಿರಲಿ ಎಂದು ಯಜಮಾನರು ಪ್ರಾರ್ಥಿಸಿದ್ದಾರೆ.

**ನಃ ಸಖ್ಯಾ ಮಾ ವಿ ಯೌಃ—ಅಸ್ಮಾಕಂ ಸಖಿತ್ವಾನಿ ತ್ವಯಾ ವಿಯುಕ್ತಾನಿ ಮಾ ಕಾರ್ಷೀಃ ।** ಯಜಮಾನರು ಇಂದ್ರನೊಡನೆ ತಮಗಿರುವ ಸ್ನೇಹವು ಛಿನ್ನವಾಗದಿರಬೇಕೆಂದೂ, **ನಃ ತಸ್ಯ ಸುಮ್ನಾಯತಾ ಮನಸಾ ವಿದ್ಧಿ—ಅಸ್ಮಾಕಂ ತತ್ಸಖಿತ್ವಂ ಸುಖಮಸ್ಮಾಕಮಿಚ್ಛತಾ ಮನಸಾ ಜಾನೀಹಿ** ಇಂದ್ರನೊಡನೆ ನಮಗೆ ಉಂಟಾಗಿರುವ ಸ್ನೇಹವನ್ನು ಇಂದ್ರನು ಯಜಮಾನರಾದ ನಮಗೆ ಸುಖವನ್ನು ಅನುಗ್ರಹಿಸುವ ಮನಸ್ಸಿನಿಂದ ತಿಳಿಯಬೇಕೆಂದೂ ಯಜಮಾನರ ಪ್ರಾರ್ಥನೆಯು ಉಕ್ತವಾಗಿದೆ.

**ಸುಮ್ನಾಯತಾ - ಸುಖಮಿಚ್ಛತಾ ।** ಸುಮ್ನ ಶಬ್ದವು ಸುಖನಾಮಗಳಲ್ಲಿ (ನಿ. ೩-೧೩) ಉಕ್ತವಾಗಿರುವುದರಿಂದ ಇಲ್ಲಿ ಈ ಪದಕ್ಕೆ ಸುಖವನ್ನು ಇಚ್ಛೆಮಾಡುವುದೆಂದು ಅರ್ಥವನ್ನು ವಿವರಿಸಿದೆ.



ಸಂಹಿತಾಪಾಠಃ

ಅಹೇಳತಾ ಮನಸಾ ಶ್ರುಷ್ಟಿಮಾ ವಹ ದುಹಾನಾಂ ಧೇನುಂ ಪಿಪ್ಯುಷೀಮಸಶ್ಚತಂ ।
ಪದ್ಯಾಭಿರಾಶುಂ ವಚಸಾ ಚ ವಾಜಿನಂ ತ್ವಾಂ ಹಿನೋಮಿ ಪುರುಹೂತ ವಿಶ್ವಹಾ ॥

॥ ಪದಪಾಠಃ ॥

ಅಹೇಳತಾ । ಮನಸಾ । ಶ್ರುಷ್ಟಿಂ । ಆ । ವಹ । ದುಹಾನಾಂ । ಧೇನುಂ । ಪಿಪ್ಯುಷೀಂ । ಅಸಶ್ಚತಂ ॥
ಪದ್ಯಾಭಿಃ । ಆಶುಂ । ವಚಸಾ । ಚ । ವಾಜಿನಂ । ತ್ವಾಂ । ಹಿನೋಮಿ । ಪುರುऽಹೂತ । ವಿಶ್ವಹಾ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಷ್ಟರ್ವಾ ಅಹೇಳತಾ ಅಕ್ರುಧ್ಯತಾ ಮನಸಾ ಶ್ರುಷ್ಟಿಂ ಸುಖಕರೀಂ ದುಹಾನಾಂ ದೋಗ್ಧ್ರೀಂ ಪಿಪ್ಯುಷೀಂ ಪ್ರವೃದ್ಧಾಂ ಪೀನಾಂ ॥ ಪ್ಯಾಯೀ ವೃದ್ಧೌ । ಲಿಟಃ ಕ್ವಸುಃ । ಲಿಡ್ಯಙೋಶ್ಚೇತಿ ಪೀಭಾವಃ । ಉಗಿತಶ್ಚೇತಿ ಙೀಪ್ । ಸಂಪ್ರಸಾರಣಮಿತಿ ಸಂಪ್ರಸಾರಣಂ । ಶಾಸಿವಸಿಘಸೀನಾಂ ಚೇತಿ ಷತ್ವಂ ॥ ಅಸಶ್ಚತಮಸಕ್ತಾವಯವಾಂ ಏವಂಭೂತಾಂ ಧೇನುಂ ಗಾಮಾವಹ। ಆಭಿಮುಖ್ಯೇನ ಪ್ರಾಪಯ। ಅಪಿ ಚ ಹೇ ಪುರುಹೂತ ಬಹುಭಿರಾಹೂತೇಂದ್ರ ತ್ವಷ್ಟರ್ವಾ ಪದ್ಯಾಭಿಃ ಪಾದಗತಿಭಿರಾಶುಂ ವ್ಯಾಪನ-ಶೀಲಂ ವಚಸಾ ವಾಚಾ ಚ ವಾಜಿನಂ ವೇಗವಂತಂ ತ್ವಾಂ ವಿಶ್ವಹಾ ಸರ್ವೇಷ್ವಹಃಸು ಹಿನೋಮಿ । ಸ್ತುತಿಭಿಃ ಪ್ರೇರಯಾಮಿ ॥ ಹಿ ಗತೌ ವೃದ್ಧೌ ಚ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಅಹೇಳತಾ—ಕ್ರೋಧವಿಲ್ಲದಿರುವ । **ಮನಸಾ**—ಮನಸ್ಸಿನಿಂದ । **ಶ್ರುಷ್ಟಿಂ**—ಸುಖಕಾರಿಯಾದುದೂ । **ದುಹಾನಾಂ**—ಕರೆಯತಕ್ಕದ್ದೂ । **ಪಿಪ್ಯುಷೀಂ**—ಪುಷ್ಟವಾದದ್ದೂ । **ಅಸಶ್ಚತಂ**—ಲಕ್ಷಣವಾಗಿ ಹೊಂದಿಕೊಂಡಿರುವ ಅವಯವಗಳುಳ್ಳದ್ದೂ ಆದ । **ಧೇನುಂ**—ಧೇನುವನ್ನು । **ಆ ವಹ**—ನಮ್ಮ ಅಭಿಮುಖವಾಗಿ ತಂದು ಸೇರಿಸು । **ಪುರುಹೂತ**—ಅನೇಕರಿಂದ ಕರೆಯಲ್ಪಡತಕ್ಕ ಇಂದ್ರನೇ । **ಪದ್ಯಾಭಿಃ**—ಪಾದಗತಿಗಳಿಂದ । **ಆಶುಂ**—ಎಲ್ಲವನ್ನೂ ವ್ಯಾಪಿಸುವವನೂ । **ವಚಸಾ**—ವಾಕ್ಕಿನಿಂದ । **ವಾಜಿನಂ ಚ**—ವೇಗಶಾಲಿಯೂ ಆದ । **ತ್ವಾಂ**—ನಿನ್ನನ್ನು । **ವಿಶ್ವಹಾ**—ಸಕಲವಾದ ಅಹಸ್ಸುಗಳಲ್ಲಿಯೂ । **ಹಿನೋಮಿ**—ಸ್ತುತಿಗಳಿಂದ ಪ್ರೇರಿಸುತ್ತೇನೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಕ್ರೋಧವಿಲ್ಲದಿರುವ ಮನಸ್ಸಿನಿಂದ ಸುಖಕರವಾದುದೂ, ಕರೆಯತಕ್ಕದ್ದೂ, ಪುಷ್ಟವಾದದ್ದೂ ಲಕ್ಷಣವಾಗಿ ಹೊಂದಿಕೊಂಡಿರುವ ಅವಯವಗಳುಳ್ಳದ್ದೂ ಆದ ಧೇನುವನ್ನು ನಮ್ಮ ಅಭಿಮುಖವಾಗಿ ತಂದು ಸೇರಿಸು. ಅನೇಕರಿಂದ ಕರೆಯಲ್ಪಡತಕ್ಕ ಎಲೈ ಇಂದ್ರನೇ, ಪಾದಗತಿಗಳಿಂದ ಎಲ್ಲವನ್ನೂ ವ್ಯಾಪಿಸುವವನೂ, ವಾಕ್ಕಿನಿಂದ ವೇಗಶಾಲಿಯೂ ಆದ ನಿನ್ನನ್ನು ಸಕಲವಾದ ಅಹಸ್ಸುಗಳಲ್ಲಿಯೂ ಸ್ತುತಿಸಿ ಪ್ರೇರಿಸುತ್ತೇನೆ.

## English Translation

Bring to us, with benignant mind, the well-nourished and compactly-limbed milch cow, yielding milk, and conferring happiness: daily I glorify, you, who are adored by many, quick (your) steps, and rapid in (your) words.

॥ ವಿಶೇಷವಿಷಯಗಳು ॥

ಇಂದ್ರನೂ ಅಥವಾ ತ್ವಷ್ಟೃದೇವನೂ ಯಜಮಾನರಾದ ನಮಗೆ, **ಅಹೇಳತಾ ಮನಸಾ—ಅಕ್ರುಧ್ಯತಾ ಮನಸಾ** ಕೋಪವಿಲ್ಲದ ಅಂದರೆ ಸಂತೋಷದಿಂದ ತುಂಬಿರುವ ಮನಸ್ಸುಳ್ಳವರಾಗಿ, ಸುಖಕರವಾದುದೂ, ಹಾಲನ್ನು

ಪ್ರಭೂತವಾಗಿ ಹಿಂಡುವುದೂ, ಚೆನ್ನಾಗಿ ವೃದ್ಧಿಹೊಂದಿರುವ ಶರೀರವುಳ್ಳದುದೂ, ಕೆಟ್ಟಲಕ್ಷಣಗಳು ಇಲ್ಲದಿರುವುದೂ ಆಗಿರುವ ಧೇನುವನ್ನು (ಹಸುವನ್ನು) ನಮ್ಮ ಹಿತಕ್ಕಾಗಿ ಅನುಗ್ರಹಿಸಲಿ ಎಂದು ಆಶಿಸಿದೆ.

ಇಂದ್ರನನ್ನೂ, ತ್ವಷ್ಟೃದೇವನನ್ನೂ **ಪುರುಹೂತೆ—ಬಹುಭಿರಾಹೂತೆ**- ಅನೇಕ ಯಾಗಗಳಲ್ಲಿ ಬಹಳಮಂದಿ ಋತ್ವಿಜರಿಂದಲೂ ಯಜಮಾನರಿಂದಲೂ (ಆಹೂತ) ಸ್ತುತಿಪಠನಪೂರ್ವಕವಾಗಿ ಕರೆಯಲ್ಪಟ್ಟಿದ್ದಾರೆಂದು ಸಂಬೋಧಿಸಿ, **ಪೆದ್ಭಿಃ ಆಶುಂ ವಚಸಾ ಚ ವಾಜಿನಂ ತ್ವಾ ವಿಶ್ವಹಾ ಹಿನೋಮಿ**—ಈ ದೇವನು ತನ್ನ ಪಾದನಡಿಗೆಗಳಿಂದಲೇ ಸರ್ವವನ್ನೂ ವ್ಯಾಪಿಸಿರುವನೆಂದೂ, ಮತ್ತು ವಾಕ್ಕುಗಳಿಂದ ವೇಗಶಾಲಿಯಾಗಿರುವನೆಂದೂ ಈ ದೇವನ ಪ್ರಭಾವವನ್ನು ವರ್ಣಿಸಿ, ಈ ರೀತಿಯಾದ ಮಹಿಮೆಯಿಂದ ಕೂಡಿರುವ ಈ ದೇವನನ್ನು ಉದ್ದೇಶಿಸಿ ಎಲ್ಲಾ ದಿನಗಳಲ್ಲಿಯೂ ಯಜಮಾನನು ಸ್ತುತಿಗಳನ್ನು ಪಠಿಸುವನೆಂದು ವರ್ಣಿಸಿದೆ.

**ಶ್ರುಷ್ಟಿಂ—ಸುಖಕರೀಂ ।** ಶ್ರುಷ್ಟೀ ಎಂಬ ಪದವು ಯಾಸ್ಕರಿಂದ **ಶ್ರುಷ್ಟೀತಿ ಕ್ಷಿಪ್ರನಾಮ** (ನಿ. ೬–೧೩) ಎಂದು ವ್ಯಾಖ್ಯಾತವಾಗಿದೆ. ದುರ್ಗಾಚಾರ್ಯರು **ಶ್ರುಷ್ಟೀವರೀಃ ಸುಖವತೀಃ** ಎಂದು ಅರ್ಥವನ್ನು ಹೇಳಿ **ತೆಸ್ಮಾದನೇಕಾರ್ಥಮಪಿ ಭವತಿ** ಈ ಪದವು ನಾನಾರ್ಥಗಳಲ್ಲಿಯೂ ಪ್ರಯುಕ್ತವಾಗಿದೆ ಎಂದು ವಿವರಿಸಿದ್ದಾರೆ.

**ಅಹೇಳತಾ—ಅಕ್ರುಧ್ಯತಾ, ಹೇಳತೇಃ** ಎಂದು ಕ್ರುಧ್ಯತಿಕರ್ಮನಾಮಗಳಲ್ಲಿ ಯಾಸ್ಕರು (ನಿ. ೩–೯) ಪಾಠಮಾಡಿದ್ದಾರೆ. ಇದರಿಂದ ಸಾಯಣರು ಇಲ್ಲಿ ಕ್ರೋಧವಿಲ್ಲದಿರುವ ಎಂದು ಅರ್ಥವನ್ನು ವಿವರಿಸಿದ್ದಾರೆ.

॥ ಸಂಹಿತಾಪಾಠಃ ॥

ರಾಕಾಮಹಂ ಸುಹವಾಂ ಸುಷ್ಟುತೀ ಹುವೇ ಶೃಣೋತು ನಃ ಸುಭಗಾ ಬೋಧತು ತ್ಮನಾ ।
ಸೀವ್ಯತ್ವಪಃ ಸೂಚ್ಯಾಚ್ಛಿದ್ಯಮಾನಯಾ ದದಾತು ವೀರಂ ಶತದಾಯಮುಕ್ಥ್ಯಂ ॥

॥ ಪದಪಾಠಃ ॥

ರಾಕಾಂ ಅಹಂ । ಸುಽಹವಾಂ । ಸುಽಸ್ತುತೀ । ಹುವೇ । ಶೃಣೋತು । ನಃ । ಸುಽಭಗಾ । ಬೋಧತು । ತ್ಮನಾ ।
ಸೀವ್ಯತು । ಅಪಃ । ಸೂಚ್ಯಾ । ಅಚ್ಛಿದ್ಯಮಾನಯಾ । ದದಾತು । ವೀರಂ । ಶತಽದಾಯಂ । ಉಕ್ಥ್ಯಂ ॥

॥ ಸಾಯಣಭಾಷ್ಯಂ ॥

**ಪತ್ನೀಸಂಯಾಜೇಷು ಗೃಹಪತೇಃ ಪ್ರಾಕ್ ರಾಕಾಸಿನೀವಾಲ್ಯೌ ಯಷ್ಟವ್ಯೇ । ತತ್ರ ರಾಕಾಯಾಗಸ್ಯ ರಾಕಾಮಹಮಿತ್ಯಾದಿಕೇ ಯಾಜ್ಯಾನುವಾಕ್ಯೇ । ಸೂತ್ರಿತಂ ಚ । ರಾಕಾಮಹಂ ಸಿನೀವಾಲಿ ಕುಹೂಮಹಮಿತಿ ದ್ವೇ ದ್ವೇ ಯಾಜ್ಯಾನುವಾಕ್ಯೇ । ಆ. ೧-೧೦ । ಇತಿ ॥ ತಥಾಗ್ನಿಮಾರುತೇಪ್ಯೇತೇ ಧಾಯ್ಯೇ । ಸೂತ್ರಿತಂ ಚ । ರಾಕಾಮಹಮಿತಿ ದ್ವೇ । ಆ. ೩-೨೦ । ಇತಿ ॥**

**ಸಂಪೂರ್ಣಚಂದ್ರಾ ಪೌರ್ಣಮಾಸೀ ರಾಕಾ । ತಾಂ ದೇವೀಂ ಸುಹವಾಂ ಸ್ವಾಹ್ವಾನಾಮಾಹ್ವಾನಪ್ರಯೋಜನಕಾರಿಣೀಂ ಸುಷ್ಟುತೀ ಶೋಭನಯಾ ಸ್ತುತ್ಯಾಹಂ ಹುವೇ । ಆಹ್ವಯಾಮಿ ॥ ಸುಷ್ಟುತಿಶಬ್ದಾತ್ತೃತೀಯೈಕವಚನಸ್ಯ ಸುಪಾಂ ಸುಲುಗಿತಿ ಪೂರ್ವಸವರ್ಣ ಈಕಾರಃ॥ ಸಾ ಚ ಸುಭಗಾ ಶೋಭನಧನಾ ನೋಽಸ್ಮಾಕಮಾಹ್ವಾನಂ ಶೃಣೋತು । ಶ್ರುತ್ವಾ ಚ ತ್ಮನಾ ಆತ್ಮನಾ ಸ್ವಯಮೇವ ಬೋಧತು । ಅಸ್ಮದಭಿಪ್ರಾಯಂ ಬುಧ್ಯತಾಂ । ಬುದ್ಧ್ವಾ ಚಾಪಃ ಕರ್ಮ ಪುತ್ರೋತ್ಪಾದನಲಕ್ಷಣಂ ಸೂಚ್ಯಾ ಸೂಚೀಸ್ಥಾನೀಯಯಾಚ್ಛಿದ್ಯಮಾನಯಾವಿಚ್ಛಿನ್ನಯಾನುಗ್ರಹಬುದ್ಧ್ಯಾ ಸೀವ್ಯತು । ಸಂತನೋತು । ಯಥಾ ವಸ್ತ್ರಾದಿಕಂ ಸೂಚ್ಯಾ ಸ್ಯೂತಂ ಚಿರಂ ತಿಷ್ಠತಿ ಏವಮಿಪಂ ಕರೋತು । ಕೃತ್ವಾ ಚ ವೀರಂ ವಿಕ್ರಾಂತಂ ಶತದಾಯಂ ಬಹುಧನಂ ಬಹುಪ್ರದಂ ವೋಕ್ಥ್ಯಂ ಪ್ರಶಸ್ಯಂ ಪುತ್ರಂ ದದಾತು ॥**

॥ ಪ್ರತಿಪದಾರ್ಥ ॥

**ಸುಹವಾಂ**—ಶ್ರೇಷ್ಠವಾದ ಆಹ್ವಾನಕ್ಕೆ ಅರ್ಹಳಾದ । **ರಾಕಾಂ**—ರಾಕಾ ಎಂಬ ದೇವತೆಯನ್ನು । **ಸುಷ್ಟುತೀ**—ಶ್ರೇಷ್ಠವಾದ ಸ್ತುತಿಪೂರ್ವಕವಾಗಿ । **ಅಹಂ**—ನಾನು । **ಹುವೇ**—ಕರೆಯುತ್ತೇನೆ । **ಸುಭಗಾ**—ಉತ್ತಮವಾದ ಧನವುಳ್ಳ ಆ ದೇವಿಯು । **ನಃ**—ನಮ್ಮ ಆಹ್ವಾನವನ್ನು । **ಶೃಣೋತು**—ಕೇಳಲಿ । **ತ್ಮನಾ**—ತಾನಾಗಿಯೇ । **ಬೋಧತು**—ನಮ್ಮ ಇಷ್ಟಾರ್ಥವನ್ನು ತಿಳಿಯಲಿ । **ಅಪಃ**—ಪುತ್ರೋತ್ಪಾದನರೂಪವಾದ ಕರ್ಮವನ್ನು । **ಸೂಚ್ಯಾ**—ಸೂಚೀಸ್ಥಾನೀಯವಾದುದೂ । **ಅಚ್ಛಿದ್ಯಮಾನಯಾ**—ಅವಿಚ್ಛಿನ್ನವಾದುದೂ ಆದ ಅನುಗ್ರಹಬುದ್ಧಿಯಿಂದ । **ಸೀವ್ಯತು**—ಹೆಣೆಯಲಿ । **ವೀರಂ**—ಪರಾಕ್ರಮಿಯಾದವನೂ । **ಶತದಾಯಂ**—ಬಹಳ ಧನವುಳ್ಳವನೂ । **ಉಕ್ಥ್ಯಂ**—ಪ್ರಶಸ್ಯನೂ ಆದ ಪುತ್ರನನ್ನು । **ದದಾತು**—ಕೊಡಲಿ.

॥ ಭಾವಾರ್ಥ ॥

ಶ್ರೇಷ್ಠವಾದ ಆಹ್ವಾನಕ್ಕೆ ಅರ್ಹಳಾದ 'ರಾಕಾ' ಎಂಬ ದೇವತೆಯನ್ನು ಶ್ರೇಷ್ಠವಾದ ಸ್ತುತಿಪೂರ್ವಕವಾಗಿ ನಾನು ಕರೆಯುತ್ತೇನೆ. ಉತ್ತಮವಾದ ಧನವುಳ್ಳ ಆ ದೇವಿಯು ನಮ್ಮ ಆಹ್ವಾನವನ್ನು ಕೇಳಲಿ. ತಾನಾಗಿಯೇ ನಮ್ಮ ಇಷ್ಟಾರ್ಥವನ್ನು ತಿಳಿಯಲಿ. ಪುತ್ರೋತ್ಪಾದನ ರೂಪವಾದ ಕರ್ಮವನ್ನು ಸೂಚೀಸ್ಥಾನೀಯವಾದುದೂ, ಅವಿಚ್ಛಿನ್ನವಾದುದೂ ಆದ ಅನುಗ್ರಹದ ಬುದ್ಧಿಯಿಂದ ಹೆಣೆಯಲಿ. ಪರಾಕ್ರಮಿಯಾದವನೂ, ಬಹುಧನವುಳ್ಳವನೂ ಮತ್ತು ಪ್ರಶಸ್ಯನೂ ಆದ ಪುತ್ರನನ್ನು ಕೊಡಲಿ.

## English Translation.

I invoke. with suitable praise, Raka, who is worthily invoked : may she, who is auspicious of good fortune, hear us, and spontaneously

understand (our purpose): may she sew her work with an infallible needle: may she grant us excellent and opulent descendants.

‖ ವಿಶೇಷವಿಷಯಗಳು ‖

ಪತ್ನೀಸಂಯಾಜನೆಂಬ ಯಾಗದಲ್ಲಿ ಗೃಹಪತಿಹೋಮಕ್ಕೆ ಪೂರ್ವಭಾವಿಯಾಗಿ ರಾಕಾ ಮತ್ತು ಸಿನೀವಾಲಿ ಎಂಬ ದೇವತೆಗಳನ್ನು ಉದ್ದೇಶಿಸಿ ಹೋಮಮಾಡಬೇಕು. ಆಗ ರಾಕಾಯಾಗದಲ್ಲಿ **ರಾಕಾಮಹಂ** ಎಂಬ ಈ ಸೂಕ್ತದ ಮೊದಲನೆಯ ಋಕ್ಕು **ಯಾಸ್ತೇ ರಾಕೇ** ಎಂಬ ಎರಡನೆಯ ಋಕ್ಕು ಯಾಜ್ಯಾ ಮತ್ತು ಪುರೋನುವಾಕ್ಯಾ ಮಂತ್ರಗಳಿಗಾಗಿ ಉಪಯೋಗಿಸಲಾಗುವುವೆಂದು ಆಶ್ವಲಾಯನ ಶ್ರೌತ್ರಸೂತ್ರದ **ರಾಕಾಮಹಂ ಸಿನೀವಾಲಿ ಕುಹೂಮಹಮಿತಿ ದ್ವೇ ದ್ವೇ ಯಾಜ್ಯಾನುವಾಕ್ಯೇ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೧-೧೦); ಮತ್ತು ಮರುದ್ದೇವತಾಕವಾದ ಮಂತ್ರಗಳಲ್ಲಿ ಈ ಋಕ್ಕುಗಳನ್ನು ಧಾಯ್ಯಾ ಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತ್ರಸೂತ್ರದ **ರಾಕಾಮಹಮಿತಿ ದ್ವೇ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೫-೨೦)

ಈ ಋಕ್ಕಿನಿಂದಲೂ ಇದರ ಮುಂದಿನ ಋಕ್ಕಿನಿಂದಲೂ ರಾಕಾ ಎಂಬ ದೇವಿಯು ಸ್ತುತಳಾಗಿದ್ದಾಳೆ.

**ರಾಕಾ-ಸಂಪೂರ್ಣಚಂದ್ರಾ ಪೌರ್ಣಮಾಸೀ**—ಸಂಪೂರ್ಣವಾದ ಚಂದ್ರನನ್ನು ಹೊಂದಿರುವ ರಾತ್ರಿಗೆ ಪೂರ್ಣಿಮಾ ಎಂದು ಹೆಸರು ಲೋಕದಲ್ಲಿ ರೂಢಿಯಲ್ಲಿದೆ. ಇದನ್ನೇ ರಾಕಾ ಎಂದು ಹೇಳಿದೆ. **ಸುಹವಾಂ ಸುಷ್ಟುತೀ ಅಹಂ ಹುವೇ-ಸ್ವಾಹ್ವಾನಾಂ ಆಹ್ವಾನಪ್ರಯೋಜಕಾರಿಣೀಂ ಶೋಭನಯಾ ಸ್ತುತ್ಯಾ ಅಹಮಾಹ್ವಯಾಮಿ** ಈ ದೇವಿಯು ತನ್ನನ್ನು ಆಹ್ವಾನಮಾಡುವವರ ಅಭಿಲಾಷೆಗಳನ್ನು ನೆರವೇರಿಸಿಕೊಡುವವಳಾದುದರಿಂದ ಈ ದೇವಿಯನ್ನು ಯಜಮಾನನು ಉತ್ತಮವಾದ ಸ್ತುತಿಯಿಂದ ಆಹ್ವಾನಮಾಡುವನು ಎಂದು ಹೇಳಿದೆ.

ಸುಭಗಾ ಎಂಬ ಪದಕ್ಕೆ ಉತ್ತಮವಾದ ಧನವನ್ನು ಹೊಂದಿರುವಳೆಂದು ಅರ್ಥಮಾಡಿ ಉತ್ತಮವಾದ ಧನವುಳ್ಳ ಈ ದೇವಿಯು ಯಜಮಾನನ ಆಹ್ವಾನವನ್ನು (ಕೇಳಲಿ ಎಂದೂ, ಕೇಳಿದ ನಂತರ) ಶ್ರವಣಮಾಡಿದ ನಂತರ **ತ್ಮನಾ ಬೋಧತು** ಯಜಮಾನನು ಆಹ್ವಾನಮಾಡಿದ ಉದ್ದೇಶವನ್ನು ತಾನಾಗಿಯೇ ತಿಳಿಯಲಿ ಎಂದೂ **ಅಪಃ ಸೂಚ್ಯಾ ಅಚ್ಛಿದ್ಯಮಾನಯಾ ಸೀವ್ಯತು** ಯಜಮಾನನ ಸಂತತಿಯು ಅವಿಚ್ಛಿನ್ನವಾಗದಂತೆ ಅನುಗ್ರಹಿಸಲಿ ಎಂದೂ, **ವೀರಂ ಶತದಾಯಂ ಉಕ್ಥ್ಯಂ ಪುತ್ರಂ ದದಾತು** ಪರಾಕ್ರಮಶಾಲಿಯೂ, ಪ್ರಭೂತವಾದ ಧನವಂತನೂ ಅಥವಾ ಪ್ರಭೂತವಾಗಿ ದಾನಮಾಡುವವನೂ ಆಗಿರುವ ಪ್ರಶಸ್ಯಮಾನನಾದ ಪುತ್ರನನ್ನು ಅನುಗ್ರಹಿಸಲಿ ಎಂದೂ ಆಶಿಸಿದೆ.

**ಅಪಃ ಸೂಚ್ಯಾ ಅಚ್ಛಿದ್ಯಮಾನಯಾ ಸೀವ್ಯತು—ಪುತ್ರೋತ್ಪಾದನಲಕ್ಷಣಂ ಕರ್ಮ ಸೂಚೀಸ್ಥಾನೀಯಯಾ ಅವಿಚ್ಛಿನ್ನಯಾ ಅನುಗ್ರಹಬುದ್ಧ್ಯಾ ಸಂತನೋತು। ಯಥಾ ವಸ್ತ್ರಾದಿಕಂ ಸೂಚ್ಯಾ ಸ್ಯೂತಂ ಚಿರಂ ತಿಷ್ಠತಿ ಏವಮಿದಂ ಕರೋತು ।** ಅಪಃ ಎಂಬ ಪದವು ಕರ್ಮನಾಮಗಳಲ್ಲಿ (ನಿ. ೩-೨) ಯಾಸ್ಕರಿಂದ ಪಠಿತವಾಗಿದೆ. ಈ ಪದಕ್ಕೆ ಪುತ್ರೋತ್ಪಾದನರೂಪವಾದ ಕರ್ಮವೆಂದು ಇಲ್ಲಿ ಅರ್ಥವನ್ನು ವಿವರಿಸಿದೆ. ರಾಕಾದೇವಿಯ ಅನುಗ್ರಹವು ಸೂಜಿಯಿಂದ ಹೊಲಿಯಲ್ಪಟ್ಟ (ವಸ್ತ್ರದ ಹಾಗೆ) ವಸ್ತ್ರವು ಬಹಳ ಕಾಲದವರೆಗೂ ಸ್ಥಿರವಾಗಿರುವ ಹಾಗೆ ನಮ್ಮ (ಪುತ್ರರು) ವಂಶವು ಪುತ್ರರುತ್ಪನ್ನರಾಗುವುದರಿಂದ ಬಹಳ ಕಾಲದವರೆಗೂ ಸ್ಥಿರವಾಗಲಿ ಎಂದು ಅರ್ಥವನ್ನು ವಿವರಿಸಿದೆ.

ನಿರುಕ್ತಕಾರರು ರಾಕಾ ಎಂಬ ಪದದ ಅರ್ಥವನ್ನು ವಿವರಿಸುವಾಗ ಈ ಋಕ್ಕನ್ನೇ ಉದಹರಿಸಿ, (ನಿ. ೧೧-೩೧) **ರಾಕಾ—ರಾತೇರ್ದಾನ ಕರ್ಮಣಃ** ಎಂದು ನಿರ್ವಚನವನ್ನು ಹೇಳಿ, **ರಾಕಾಮಹಂ ಸುಹ್ವಾನಾಂ ಸುಷ್ಟುತ್ಯಾ-ಹ್ವಯೇ ಶೃಣೋತು ನಸ್ಸುಭಗಾ ಬೋಧತ್ವಾತ್ಮನಾ ಸೀವ್ಯತ್ವಪಃ ಪ್ರಜನನಕರ್ಮ ಸೂಚ್ಯಾಚ್ಛಿದ್ಯಮಾನಯಾ ಸೂಚೀ ಸೀವ್ಯತೇಃ ದದಾತು ವೀರಂ ಶತಪ್ರದಮುಕ್ಥ್ಯಂ ವ್ಯಕ್ತವ್ಯಪ್ರಶಂಸಂ** ಎಂದು ಈ ಋಕ್ಕಿನ ಅರ್ಥವನ್ನು ಭಾಷ್ಯಕಾರರು ಅರ್ಥಮಾಡಿರುವ ರೀತಿಯಲ್ಲಿಯೇ ವರ್ಣಿಸಿದ್ದಾರೆ.



॥ ಸಂಹಿತಾಪಾಠಃ ॥

## ಯಾಸ್ತೇ ರಾಕೇ ಸುಮತಯಃ ಸುಪೇಶಸೋ ಯಾಭಿರ್ದದಾಸಿ ದಾಶುಷೇ ವಸೂನಿ ।
## ತಾಭಿರ್ನೋ ಅದ್ಯ ಸುಮನಾ ಉಪಾಗಹಿ ಸಹಸ್ರಪೋಷಂ ಸುಭಗೇ ರರಾಣಾ ॥ ೫ ॥

॥ ಪದಪಾಠಃ ॥

ಯಾಃ । ತೇ । ರಾಕೇ । ಸುಽಮತಯಃ । ಸುಽಪೇಶಸಃ । ಯಾಭಿಃ । ದದಾಸಿ । ದಾಶುಷೇ । ವಸೂನಿ ।
ತಾಭಿಃ । ನಃ । ಅದ್ಯ । ಸುಽಮನಾಃ । ಉಪಽಆಗಹಿ । ಸಹಸ್ರಽಪೋಷಂ । ಸುಽಭಗೇ । ರರಾಣಾ ॥ ೫ ॥

॥ ಸಾಯಣಭಾಷ್ಯಂ ॥

**ಹೇ ರಾಕೇ ದೇವಿ ಸುಪೇಶಸಃ ಶೋಭನರೂಪಾಸ್ತೇ ತವ ಯಾಃ ಸುಮತಯಃ ಶೋಭನಬುದ್ಧಯಃ ಯಾಭಿರ್ಮತಿಭಿರ್ದಾಶುಷೇ ಹವಿರ್ದತ್ತವತೇ ಯಜಮಾನಾಯ ವಸೂನಿ ಧನಾನಿ ದದಾಸಿ । ಪ್ರಯಚ್ಛಸಿ । ಅದ್ಯೇದಾನೀಂ ತಾಭಿರ್ಮತಿಭಿಃ ಸಹಿತಾ ತ್ವಂ ಸುಮನಾಃ ಶೋಭನಮನಾಃ ಭೂತ್ವೋಪಾಗಹಿ । ಉಪಾಗಚ್ಛ ॥ ಗಮೇಶ್ಛಾಂದಸಃ ಶಪೋ ಲುಕ್ । ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ಅಸಿದ್ಧವದತ್ರಾಭಾದಿತ್ಯಸ್ಯಾಸಿದ್ಧತ್ವಾದ್ಧೇರ್ಲುಗಭಾವಃ ॥ ಕಿಂ ಕುರ್ವತೀ । ಹೇ ಸುಭಗೇ ಶೋಭನಧನೇ ಸಹಸ್ರಪೋಷಂ ಸಹಸ್ರಸಂಖ್ಯಾಕಸ್ಯ ಧನಸ್ಯ ಪುಷ್ಟಿಂ ರರಾಣಾ ದದತೀ ॥ ರಾ ದಾನೇ । ವ್ಯತ್ಯಯೇನ ಶಾನಚ್ । ಛಾಂದಸಃ ಶಪಃ ಶ್ಲುಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಸುಭಗೇ**—ಉತ್ತಮವಾದ ಧನವುಳ್ಳ । **ರಾಕೇ**—ಎಲೈ ರಾಕಾದೇವಿಯೇ । **ಸುಪೇಶಸಃ**—ಶ್ರೇಷ್ಠವಾದ ರೂಪವುಳ್ಳ । **ತೇ**—ನಿನ್ನ । **ಯಾಃ ಸುಮತಯಃ**—ಯಾವ ಶೋಭನಾತ್ಮಕವಾದ ಬುದ್ಧಿಗಳಿವೆಯೋ । **ಯಾಭಿಃ**—ಯಾವ ಅದೇ ಅನುಗ್ರಹ ಬುದ್ಧಿಗಳಿಂದ । **ದಾಶುಷೇ**—ಹವಿಸ್ಸನ್ನರ್ಪಿಸುವ ಯಜಮಾನನಿಗೆ ।

**ವಸೂನಿ**—ಧನಗಳನ್ನು । **ದದಾಸಿ**—ಕೊಡುತ್ತೀಯೋ । **ಅದ್ಯ**—ಈಗ । **ನಃ**—ನಮ್ಮ ವಿಷಯದಲ್ಲಿ । **ತಾಭಿಃ**—ಅದೇ ಬುದ್ಧಿಗಳೊಡನೆ । **ಸುಮನಾಃ**—ಕಲ್ಯಾಣಾತ್ಮಕವಾದ ಮನಸ್ಸುಳ್ಳವಳಾಗಿಯೂ । **ಸಹಸ್ರಪೋಷಂ**—ಸಹಸ್ರಸಂಖ್ಯಾತವಾದ ಧನದ ಪುಷ್ಟಿಯನ್ನು । **ರರಾಣಾ**—ಕೊಡುವವಳಾಗಿಯೂ । **ಉಪಾಗಹಿ**—ದಯಮಾಡು.

॥ ಭಾವಾರ್ಥ ॥

ಉತ್ತಮವಾದ ಧನವುಳ್ಳ ಎಲೈ ರಾಕಾದೇವಿಯೇ, ಶ್ರೇಷ್ಠವಾದ ರೂಪವುಳ್ಳ ನಿನ್ನ ಯಾವ ಶೋಭನಾತ್ಮಕವಾದ ಬುದ್ಧಿಗಳಿವೆಯೋ ಮತ್ತು ಯಾವ ಅದೇ ಅನುಗ್ರಹಬುದ್ಧಿಗಳಿಂದ ಹವಿಸ್ಸನ್ನರ್ಪಿಸುವ ಯಜಮಾನನಿಗೆ ಧನಗಳನ್ನು ಕೊಡುತ್ತೀಯೋ ಈಗ ನಮ್ಮ ವಿಷಯದಲ್ಲಿ ಅದೇ ಬುದ್ಧಿಗಳೊಡನೆ ಕಲ್ಯಾಣಾತ್ಮಕವಾದ ಮನಸ್ಸುಳ್ಳವಳಾಗಿಯೂ, ಸಹಸ್ರಸಂಖ್ಯಾಕವಾದ ಧನದ ಪುಷ್ಟಿಯನ್ನು ಕೊಡುವವಳಾಗಿಯೂ ದಯಮಾಡು.

English Translation.

Raka, with those your kind and gracious intentions, wherewith you grant riches to the donor (of oblations), approach us to-day; you who are auspicious of good fortune, favourably inclined, and bestowing a thousand blessings.

॥ ವಿಶೇಷವಿಷಯಗಳು ॥

**ಹೇ ರಾಕೇ** ಎಂಬ ಪದದಿಂದ ಈ ದೇವಿಯನ್ನು ಸಂಬೋಧಿಸಿ, **ಯಾಭಿಃ ದಾಶುಷೇ ಯಜಮಾನಾಯ ವಸೂನಿ ದದಾಸಿ, ಅದ್ಯ ತಾಭಿಃ ಸುಮನಾಃ ಉಪಾಗಹಿ—ಯಾಭಿಃ ಮತಿಭಿಃ ಹವಿರ್ದತ್ತವತೇ ಯಜಮಾನಾಯ ಧನಾನಿ ಪ್ರಯಚ್ಛಸಿ ತಾಭಿಃ ಮತಿಭಿಃ ಸಹಿತಾ ತ್ವಂ ಶೋಭನಮನಾ ಭೂತ್ವಾ ಉಪಾಗಚ್ಛ**—ಈ ದೇವಿಯು ತನ್ನನ್ನು ಉದ್ದೇಶಿಸಿ ಯಾಗವನ್ನಾಚರಿಸುವವರ ವಿಷಯದಲ್ಲಿ ಮಂಗಳಕರವಾದ ಬುದ್ಧಿಯುಳ್ಳವಳಾಗಿರುವ ಕಾರಣ ಹವಿಸ್ಸನ್ನು ತನಗೆ ಅರ್ಪಿಸುವ ಯಜಮಾನರಲ್ಲಿ ಕಲ್ಯಾಣವನ್ನು ಉಂಟುಮಾಡುವ ಬುದ್ಧಿಯಿಂದ ಕೂಡಿ ಧನವನ್ನು ಅನುಗ್ರಹಿಸುವುದಕ್ಕಾಗಿ ನಮ್ಮ ಯಾಗಶಾಲೆಗೆ ಆಗಮಿಸಲಿ ಎಂದು ಪ್ರಾರ್ಥಿಸಿದೆ. ಮತ್ತು ಈ ದೇವಿಯು **ಸುಭಗೇ ಸಹಸ್ರಪೋಷಂ ರರಾಣಾ—ಶೋಭನಧನೇ ಸಹಸ್ರಸಂಖ್ಯಾತಸ್ಯ ಧನಸ್ಯ ಪುಷ್ಟಿಂ ದದತೀ ।** ಈ ದೇವಿಯು ಪ್ರಭೂತವಾದ ಧನವುಳ್ಳವಳಾದುದರಿಂದ ಸುಭಗೇ ಎಂಬ ಪದದಿಂದ ಸಂಬೋಧಿತಳಾಗಿ ತನ್ನನ್ನು ಸೇವಿಸುವವರಿಗೆ ಸಾವಿರಗಟ್ಟಲೆಯಾಗಿರುವ ಧನಗಳ (ಅತಿಶಯವನ್ನು) ಸಮೃದ್ಧಿಯನ್ನು ಅನುಗ್ರಹಿಸುವಳು ಎಂದು ಈ ದೇವಿಯ ಔದಾರ್ಯವೂ ವರ್ಣಿತವಾಗಿದೆ.



॥ ಸಂಹಿತಾಪಾಠಃ ॥

**ಸಿನೀವಾಲಿ ಪೃಥುಷ್ಟುಕೇ ಯಾ ದೇವಾನಾಮಸಿ ಸ್ವಸಾ ।**

**ಜುಷಸ್ವ ಹವ್ಯಮಾಹುತಂ ಪ್ರಜಾಂ ದೇವಿ ದಿದಿಡ್ಢಿ ನಃ ॥ ೬ ॥**

॥ ಪದಪಾಠಃ ॥

ಸಿನೀವಾಲಿ । ಪೃಥುಽಸ್ತುಕೇ । ಯಾ । ದೇವಾನಾಂ । ಅಸಿ । ಸ್ವಸಾ ।

ಜುಷಸ್ವ । ಹವ್ಯಂ । ಆಽಹುತಂ । ಪ್ರಽಜಾಂ । ದೇವಿ । ದಿದಿಡ್ಢಿ । ನಃ ॥ ೬ ॥

॥ ಸಾಯಣಭಾಷ್ಯಂ ॥

ಸಿನೀವಾಲ್ಯಾ ಯಾಗೇ ಸಿನೀವಾಲೀತ್ಯಾದಿಕೇ ದ್ವೇ ಯಾಜ್ಯಾನುವಾಕ್ಯೇ । ಸೂತ್ರಂ ಪೂರ್ವಮುದಾಹೃತಂ ॥

ದೃಷ್ಟಚಂದ್ರಾಮಾವಾಸ್ಯಾ ಸಿನೀವಾಲೀ । ಹೇ ಸಿನೀವಾಲಿ ಪೃಥುಷ್ಟುಕೇ ಪೃಥುಜಘನೇ ಪೃಥುಸಂಹತೇ ವಾ ಯಾ ತ್ವಂ ದೇವಾನಾಂ ಸ್ವಸಾಸಿ ಸ್ವಯಂಸಂಚಾರಿಣೀ ಭಗಿನೀ ವಾ ಭವಸಿ ಸಾ ತ್ವಮಾಹುತಮಾಭಿಮುಖ್ಯೇನಾಗ್ನೌ ಪ್ರಕ್ಷಿಪ್ತಂ ಹವ್ಯಮಸ್ಮದೀಯಂ ಹವಿರ್ಜುಷಸ್ವ । ಸೇವಸ್ವ । ಕಿಂಚ ಹೇ ದೇವಿ ಸಿನೀವಾಲಿ ನೋಽಸ್ಮಾಕಂ ಪ್ರಜಾಂ ಪುತ್ರಾದಿಕಾಂ ದಿದಿಡ್ಢಿ । ಉಪಚಿನು ಅತಿಸರ್ಜಯ ವಾ । ದೇಹೀತ್ಯರ್ಥಃ ॥ ದಿಹ ಉಪಚಯೇ । ಲೋಟಿ ಛಾಂದಸಃ ಶಪಃ ಶ್ಲುಃ । ದಿಶ ಅತಿಸರ್ಜನ ಇತ್ಯಸ್ಮಾದ್ವಾ ॥

॥ ಪ್ರತಿಪದಾರ್ಥ ॥

**ಪೃಥುಷ್ಟುಕೇ**—ದೊಡ್ಡದಾದ ಜಘನವುಳ್ಳ । **ಸಿನೀವಾಲಿ**—ಎಲೈ ಸಿನೀವಾಲಿ ದೇವತೆಯೇ । **ಯಾ**—ಯಾವ ನೀನು । **ದೇವಾನಾಂ**—ದೇವತೆಗಳಿಗೆ । **ಸ್ವಸಾ ಅಸಿ**—ಭಗಿನಿಯಾಗಿದ್ದೀಯೋ ಅಂತಹ ನೀನು । **ಆಹುತಂ**(—ಅಗ್ನಿಯಲ್ಲಿ) ಅರ್ಪಿಸಿದ । **ಹವ್ಯಂ**—ಹವಿಸ್ಸನ್ನು । **ಜುಷಸ್ವ**—ಸೇವಿಸು । **ದೇವಿ**— ಎಲೆಳ ದೇವಿಯೇ! **ನಃ**—ನಮಗೆ । **ಪ್ರಜಾಂ**—ಪುತ್ರಾದಿಗಳನ್ನು । **ದಿದಿಡ್ಢಿ**—ಕೊಡು.

॥ ಭಾವಾರ್ಥ ॥

ಪೃಥುವಾದ ಜಘನವುಳ್ಳ ಎಲೈ ಸಿನೀವಾಲಿ ದೇವತೆಯೇ, ಯಾವ ನೀನು ದೇವತೆಗಳಿಗೆ ಭಗಿನಿಯಾಗಿದ್ದೀಯೋ ಅಂತಹ ನೀನು ಅಗ್ನಿಯಲ್ಲಿ ನಾವು ಅರ್ಪಿಸಿದ ಹವಿಸ್ಸನ್ನು ಸೇವಿಸು. ಎಲೈ ದೇವಿಯೇ, ನಮಗೆ ಪುತ್ರಾದಿಗಳನ್ನು ಕೊಡು.

## English Translation.

Wide-hipped Sinivali, who are the sister of the gods, accept the offered oblation, and grant us, goddess, progeny.

॥ ವಿಶೇಷವಿಷಯಗಳು ॥

ಸಿನೀವಾಲಿಯಾಗದಲ್ಲಿ **ಸಿನೀವಾಲಿ** ಎಂಬ ಈ ಋಕ್ಕೂ, **ಯಾ ಸುಬಾಹುಃ** ಎಂಬ ಇದರ ಮುಂದಿನ ಋಕ್ಕೂ ಸಹ ಯಾಜ್ಯಾ ಮತ್ತು ಪುರೋನುವಾಕ್ಯಾ ಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಹೇಳಿರುವ ಆಶ್ವಲಾಯನಶ್ರೌತ ಸೂತ್ರದ ಸೂತ್ರವನ್ನು ಹಿಂದೆಯೇ ಹೇಳಲಾಗಿದೆ. (ಆ. ೫–೨೦).

ಅಮಾವಾಸ್ಯೆಯು ಎರಡು ವಿಧವಾಗಿರುವುದು. ಇವರಲ್ಲಿ ಚಂದ್ರನು ಕಲಾಮಾತ್ರದಿಂದ ಕಾಣುವ ಅಮಾವಾಸ್ಯೆಯು ಸಿನೀವಾಲಿ ಎಂದು ಪ್ರಸಿದ್ಧವಾಗಿದೆ. ಇದೇ ಅಭಿಪ್ರಾಯವೇ **ದೃಷ್ಟಚಂದ್ರಾ ಅಮಾವಾಸ್ಯಾ ಸಿನೀವಾಲಿ** ಎಂದು ವಿವೃತವಾಗಿದೆ. ಈ ಅಮಾವಾಸ್ಯಾ ಅಭಿಮಾನಿದೇವತೆಯಾದ ದೇವತೆಯು ಹೇ ಸಿನೀವಾಲಿ ಎಂಬ ಪದದಿಂದ ಸಂಬೋಧಿತಳಾಗಿದ್ದಾಳೆ. ಈ ದೇವಿಯು **ಪೃಥುಷ್ಟುಕೇ—ಪೃಥುಜಘನೇ ಪೃಥು ಸಂಹತೇ ವಾ** ಸ್ಥೂಲವಾದ ಕಟಿಪ್ರದೇಶಭಾಗವುಳ್ಳವಳು (ಸ್ಥೂಲವಾದ ಕಿಜ್ಜೊಟ್ಟೆಯುಳ್ಳವಳು) ಅಥವಾ ಬಲವಾಗಿರುವ ಶರೀರ ಸಂಬಂಧವುಳ್ಳವಳು ಎಂದೂ **ದೇವಾನಾಂ ಸ್ವಸಾ ಅಸಿ—ಸ್ವಯಂ ಸಾರಿಣೀ, ಭಗಿನೀ ವಾ ಭವಸಿ**—ಈ ದೇವಿಯು ತನ್ನ ಇಚ್ಛಾನುಸಾರವಾಗಿ ಸಂಚರಿಸುವವಳು, ಅಥವಾ ದೇವತೆಗಳ ಸಹೋದರಿಯಾಗಿರುವವಳು ಎಂದೂ ವರ್ಣಿಸಿ, **ಆಹುತಂ ಹವಿಃ ಜುಷಸ್ವ—ಅಭಿಮುಖ್ಯೇನ ಅಗ್ನೌ ಪ್ರಕ್ಷಿಪ್ತಂ ಅಸ್ಮದೀಯಂ ಹವಿಃ ಸೇವಸ್ವ**—ಈ ದೇವಿಯನ್ನು ಉದ್ದೇಶಿಸಿ ಯಜಮಾನರು ಅರ್ಪಿಸಿದ ಹವಿರ್ಭಾಗಗಳನ್ನು ಸೇವಿಸಲಿ ಎಂದೂ ಆಶಂಸಿತವಾಗಿದೆ. ಮತ್ತು—**ನಃ ಪ್ರಜಾಂ ದಿದಿಡ್ಢಿ—ಅಸ್ಮಾಕಂ ಪುತ್ರಾದಿಕಾಂ ಉಪಚಿನು ಅತಿಸರ್ಜಯ ವಾ**—ಈ ದೇವಿಯು ಯಜ್ಞಗಳಲ್ಲಿ ಹವಿರ್ಭಾಗಗಳನ್ನು ಅರ್ಪಿಸುವ ಯಜಮಾನರಾದ ನಮಗೆ ಪುತ್ರಾದಿಗಳನ್ನು ಅಭಿವೃದ್ಧಿಗೊಳಿಸಲಿ ಅಥವಾ ಅನುಗ್ರಹಿಸಲಿ ಎಂದೂ ಪ್ರಾರ್ಥಿಸಲಾಗಿದೆ.

ಅಮಾವಾಸ್ಯೆಯ ದಿವಸ ಚಂದ್ರನು ಪ್ರತ್ಯೇಕವಾಗಿ ಕಲಾಮಾತ್ರದಿಂದ ಕಾಣಿಸುವನಾದರೆ **ಆಗ** ಆ ಅಮಾವಾಸ್ಯೆಯನ್ನು ಸಿನೀವಾಲಿ ಎಂಬ ಹೆಸರಿನಿಂದ ವ್ಯವಹರಿಸುತ್ತಾರೆ. ಇದರಿಂದಲೇ ಇಲ್ಲಿ **ದೃಷ್ಟಚಂದ್ರಾ ಅಮಾವಾಸ್ಯಾ ಸೀನಿವಾಲೀ** ಎಂದು ವಿವರಣವು ಉಕ್ತವಾಗಿದೆ. ಯಾಸ್ಕರು—**ಸಿನೀವಾಲೀ ಕುಹೂರಿತಿ ದೇವಪತ್ನ್ಯಾವಿತಿ ನೈರುಕ್ತಾಃ । ಅಮಾವಾಸ್ಯಾ ಇತಿ ಯಾಜ್ಞಿಕಾಃ । ಯಾ ಪೂರ್ವಾ ಅಮಾವಾಸ್ಯಾ ಸಾ ಸೀನೀವಾಲೀ, ಯಾ ಉತ್ತರಾ ಸಾ ಕುಹೂರಿತಿ ವಿಜ್ಞಾಯತೇ ।** ಸೀನೀವಾಲೀ ಕುಹೂ ಎಂದು ಹೆಸರುಳ್ಳ ಇವರಿಬ್ಬರು ದೇವಿಯರು ದೇವಪತ್ನಿಯರೆಂದು ನಿರುಕ್ತಕಾರರ ಅಭಿಪ್ರಾಯವು ಎಂದೂ, ಅಮಾವಾಸ್ಯಾ ಎಂಬ ಕಾಲ ವಿಶೇಷವು ಸಿನೀವಾಲೀ ಕುಹೂ ಎಂದು ಎರಡು ವಿಧವಾಗಿರುವುದೆಂದು ಯಾಗಗಳನ್ನು ಆಚರಿಸುವವರ ಅಭಿಪ್ರಾಯವು ಎಂದೂ ಎರಡು ಮತಗಳನ್ನು ಉಪಪಾದನೆ ಮಾಡಿ ಈ ಅಭಿಪ್ರಾಯವನ್ನು ಬೋಧಿಸುವ ತೈತ್ತಿರೀಯ ಬ್ರಾಹ್ಮಣ ವಾಕ್ಯವನ್ನು ಉದಾಹರಿಸಿದ್ದಾರೆ. ಮತ್ತು **ಸಿನೀವಾಲೀ ಸಿನಮನ್ನಂ ಭವತಿ ಸಿನಾತಿ ಭೂತಾನಿ ವಾಲಂ ಪರ್ವ ವೃಣೋತೇಃ ತಸ್ಮಿನ್ನನ್ನವತೀ ವಾಲಿನೀ ವಾ, ವಾಲೇನೇವಾಸ್ಯಾಮಣುತ್ವಾಚ್ಚಂದ್ರಮಾಃ ಸೇವಿತವ್ಯೋ ಭವತಿ ಇತಿ ವಾ** (ನಿ. ೧೧-೩೧) ಸಿನವೆಂದರೆ ಅನ್ನವು ಪ್ರಾಣಿಗಳನ್ನು ಅನ್ನವುಳ್ಳದ್ದನ್ನಾಗಿ ಮಾಡಿ ಪೋಷಿಸುವುದು ಆದ ಕಾರಣ ಪರ್ವಕಾಲದಲ್ಲಿ ದೇವತೆಗಳು ಹವಿಸ್ಸನ್ನು ಅಪೇಕ್ಷಿಸುವವರಾದ ಕಾರಣ ಸಿನೀವಾಲಿಯು ಅನ್ನದಿಂದ ತುಂಬಿರುವವಳು ಎಂದು ಒಂದು ವಿಧವಾದ ಅರ್ಥವನ್ನು ವಿವರಿಸಿದ್ದಾರೆ. ಎರಡನೆಯದಾಗಿ ವಾಲಶಬ್ದವು ಬಾಲ(ಎಳೆಯ ಹುಡುಗ) ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಈ ದೇವತೆಗಳ ಇಷ್ಟವಾದ ಹವಿಸ್ಸುಗಳಿಂದ ತುಂಬಿರುವವಳೂ, ಅಥವಾ ಅಣುರೂಪದಿಂದ ಇರುವ ಚಂದ್ರನಿಂದ ಸೇವಿಸಲ್ಪಡುವವಳೂ ಆಗಿರುವಳು ಎಂದೂ ಅರ್ಥವನ್ನು ಹೇಳಿದ್ದಾರೆ. ಮತ್ತು ಈ ಮಂತ್ರವನ್ನೇ ಉದಹರಿಸಿ, **ಸಿನೀವಾಲೀ ಪೃಥುಜಘನೇ, ಸ್ತುಕಃ ಸ್ತ್ಯಾಯತೇಃ ಸಂಘಾತಃ । ಪೃಥುಕೇಶಸ್ತುತೇ ಪೃಥುಷ್ಟುತೇ ವಾ । ಯಾ ತ್ವಂ ದೇವಾನಾಮಸಿ ಸ್ವಸಾ । ಸ್ವಸಾ ಸು ಅಸಾ । ಸ್ವೇಷು ಸೀದತೀತಿ ವಾ । ಜುಷಸ್ವ ಹವ್ಯಮದನಂ ಪ್ರಜಾಂ ಚ ದೇವಿ ದಿಶಃ ನಃ** (ನಿ. ೧೧-೩೨) ಎಂದು ಅರ್ಥವನ್ನು ವಿವರಿಸಿರುವರು.

॥ ಸಂಹಿತಾಪಾಠಃ ॥

ಯಾ ಸುಬಾಹುಃ ಸ್ವಂಗುರಿಃ ಸುಷೂಮಾ ಬಹುಸೂವರೀ ।

ತಸ್ಯೈ ವಿಶ್ಪತ್ನ್ಯೈ ಹವಿಃ ಸಿನೀವಾಲ್ಯೈ ಜುಹೋತನ ॥ ೭ ॥

॥ ಪದಪಾಠಃ ॥

ಯಾ । ಸುऽಬಾಹುಃ । ಸುऽಅಂಗುರಿಃ । ಸುऽಸೂಮಾ । ಬಹುऽಸೂವರೀ ।

ತಸ್ಯೈ । ವಿಶ್ಪತ್ನ್ಯೈ । ಹವಿಃ । ಸಿನೀವಾಲ್ಯೈ । ಜುಹೋತನ ॥ ೭ ॥

॥ ಸಾಯಣಭಾಷ್ಯಂ ॥

ಯಾ ಸಿನೀವಾಲೀ ಸುಬಾಹುಃ ಶೋಭನಬಾಹುಃ ಸ್ವಂಗುರಿಃ ಶೋಭನಾಂಗುಲಿಃ ಸುಷೂಮಾ ಸುಷ್ಠು ಪ್ರಸವಿತ್ರೀ ॥ ಷೂಙ್ ಪ್ರಾಣಿಪ್ರಸವೇ । ಅನ್ಯೇಭ್ಯೋऽಪಿ ದೃಶ್ಯಂತ ಇತಿ ಮನಿನ್ । ಕೃದುತ್ತರಪದಪ್ರಕೃತಿಸ್ವರತ್ವಂ ॥ ಬಹುಸೂವರೀ ಬಹ್ವೀನಾಂ ಪ್ರಜಾನಾಂ ಸವಿತ್ರೀ ॥ ತೇನೈವ ಸೂತ್ರೇಣ ಕ್ವನಿಪ್ । ವನೋ ರ ಚೇತಿ ಙೀಬ್ರೇಫೌ । ಕೃದುತ್ತರಪದಪ್ರಕೃತಿಸ್ವರತ್ವಂ ॥ ತಸ್ಯೈ ಸೀನೀವಾಲ್ಯೈ ವಿಶ್ಪತ್ನ್ಯೈ । ವಿಶಾಂ ಪಾಲಯಿತ್ರ್ಯೈ ॥ ವಿಭಾಷಾ ಸಪೂರ್ವಸ್ಯೇತಿ ಪತ್ಯುರ್ನಕಾರಾಂತಾದೇಶಃ । ಅಯಸ್ಮಯಾದಿತ್ವೇನ ಭತ್ವಾದ್ವಿಶೋ ಜಶ್ತ್ವಾಭಾವಃ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ ॥ ಹೇ ಋತ್ವಿಗ್ಯಜಮಾನಾ ಹವಿರ್ಜುಹೋತನ । ಜುಹುತ ॥ ತಪ್ತನಪ್ತನಥನಾಶ್ಚೇತಿ ತನಬಾದೇಶಃ ॥

॥ ಪ್ರತಿಪದಾರ್ಥ ॥

**ಯಾ**—ಯಾರು । **ಸುಬಾಹುಃ**—ಶ್ರೇಷ್ಠವಾದ ಬಾಹುವುಳ್ಳವಳೂ । **ಸ್ವಂಗುರಿಃ**—ಶ್ರೇಷ್ಠವಾದ ಅಂಗುಳಿಗಳುಳ್ಳವಳೂ । **ಸುಷೂಮಾ**—ಉತ್ತಮವಾದ ಪುತ್ರರನ್ನು ಪಡೆದಿರುವವಳೂ । **ಬಹುಸೂವರೀ**—ಅನೇಕ ಪುತ್ರರುಳ್ಳವಳೂ ಆಗಿರುವಳೋ । **ತಸ್ಯೈ**—ಅಂತಹ । **ವಿಶ್ಪತ್ನ್ಯೈ**—ಪ್ರಜಾಪಾಲಕಳಾದ । **ಸಿನೀವಾಲ್ಯೈ**—ಸಿನೀವಾಲಿ ದೇವತೆಯನ್ನುದ್ದೇಶಿಸಿ । **ಹವಿಃ**—ಹವಿಸ್ಸನ್ನು । **ಜುಹೋತನ**—ಅರ್ಪಿಸಿ.

॥ ಭಾವಾರ್ಥ ॥

ಎಲೈ ಯಜಮಾನರೇ, ಯಾರು ಶ್ರೇಷ್ಠವಾದ ಬಾಹುವುಳ್ಳವಳೂ, ಶ್ರೇಷ್ಠವಾದ ಅಂಗುಳಿಗಳುಳ್ಳವಳೂ, ಉತ್ತಮವಾದ ಪುತ್ರರುಳ್ಳವಳೂ, ಅನೇಕ ಪುತ್ರರನ್ನು ಪಡೆದಿರುವಳೂ ಆಗಿರುವಳೋ ಅಂತಹ ಸಿನೀವಾಲಿ ದೇವತೆಯನ್ನುದ್ದೇಶಿಸಿ ಹವಿಸ್ಸನ್ನು ಅರ್ಪಿಸಿ.

English Translation.

Offer the oblation to that Sinivali, the protectress of mankind, who has beautiful fingers, who is the parent of many children, and who had numerous childrn.

॥ ವಿಶೇಷವಿಷಯಗಳು ॥

**ಯಾ ಸುಬಾಹುಃ ಸ್ವಂಗುರಿಃ ಸುಷೂಮಾ ಬಹುಸೂವರೀ—ಸಿನೀವಾಲೀ ಶೋಭನಬಾಹುಃ ಶೋಭನಾಂಗುಲಿಃ ಸುಷ್ಠು ಪ್ರಸವಿತ್ರೀ, ಬಹ್ವೀನಾಂ ಪ್ರಜಾನಾಂ ಸವಿತ್ರೀ।** ಈ ಸಿನೀವಾಲಿ ಎಂಬ ದೇವಿಯು ಅಂದವಾಗಿರುವ ಪ್ರಶಸ್ತವಾದ ಬಾಹುಗಳನ್ನೂ, ಬೆರಳುಗಳನ್ನೂ ಹೊಂದಿರುವಳು. ಒಳ್ಳೆಯ ಪುತ್ರರನ್ನು ಪ್ರಸವಿಸುವವಳು, ಬಹಳ ಮಕ್ಕಳನ್ನು ಪ್ರಸವಿಸುವವಳೂ ಆಗಿರುವಳೆಂದು ಈ ದೇವಿಯನ್ನೂ, ಈ ದೇವಿಯ ಪ್ರಭಾವವನ್ನೂ ವರ್ಣಿಸಿ **ತಸ್ಯೈ ಸಿನೀವಾಲ್ಯೈ ವಿಶ್ಪತ್ನ್ಯೈ ಹವಿಃ ಜುಹೋತನ—ವಿಶಾಂ ಪಾಲಯಿತ್ರ್ಯೈ ಹವಿಃ ಜುಹುತ—**ಋತ್ವಿಜರು ಮತ್ತು ಯಜಮಾನರುಗಳು ಈ ಪ್ರಭಾವವುಳ್ಳ, ಪ್ರಜೆಗಳನ್ನು ರಕ್ಷಿಸುವ ಈ ಸಿನೀವಾಲಿ ದೇವಿಗಾಗಿ ಹವಿಸ್ಸುಗಳನ್ನು ಅರ್ಪಿಸಿರಿ ಎಂದು ಮಂತ್ರದ್ರಷ್ಟೃವಾದ ಋಷಿಯು ಆಶಂಸನೆಯು ವರ್ಣಿತವಾಗಿದೆ.

—~~—

॥ ಸಂಹಿತಾಪಾಠಃ ॥

ಯಾ ಗುಂಗೂರ್ಯಾ ಸಿನೀವಾಲೀ ಯಾ ರಾಕಾ ಯಾ ಸರಸ್ವತೀ ।
ಇಂದ್ರಾಣೀಮಹ್ವ ಊತಯೇ ವರುಣಾನೀಂ ಸ್ವಸ್ತಯೇ ॥ ೮ ॥

॥ ಪದಪಾಠಃ ॥

**ಯಾ । ಗುಂಗೂಃ । ಯಾ । ಸಿನೀವಾಲೀ । ಯಾ । ರಾಕಾ । ಯಾ । ಸರಸ್ವತೀ ।**
**ಇಂದ್ರಾಣೀಂ । ಅಹ್ವೇ । ಊತಯೇ । ವರುಣಾನೀಂ । ಸ್ವಸ್ತಯೇ ॥ ೮ ॥**

॥ ಸಾಯಣಭಾಷ್ಯಂ ॥

**ಅತ್ರ ಗುಂಗೂಶಬ್ದೇನ ರಾಕಾಸಿನೀವಾಲ್ಯೋಃ ಸಾಹಚರ್ಯಾತ್ಕುಹೂರುಚ್ಯತೇ । ಯಾ ಗುಂಗೂಃ ಕುಹೂಸ್ತಾಮಹ್ವೇ । ಆಹ್ವಯಾಮಿ । ಏವಮುತ್ತರತ್ರಾಪಿ ಯೋಜ್ಯಂ । ಇಂದ್ರಾಣೀಮಿಂದ್ರಸ್ಯ ಪತ್ನೀಮೂತಯೇ ರಕ್ಷಣಾರ್ಥಮಹ್ವೇ । ಆಹ್ವಯಾಮಿ । ತಥಾ ವರುಣಾನೀಂ ವರುಣಸ್ಯ ಪತ್ನೀಂ ಸ್ವಸ್ತಯೇಽವಿನಾಶಾಯಾಹ್ವಯಾಮಿ ॥ ಇಂದ್ರವರುಣೇತ್ಯಾದಿನಾ ಙೀಷ್ ಆನುಗಾಗಮಶ್ಚ ॥**

॥ ಪ್ರತಿಪದಾರ್ಥ ॥

**ಯಾ**—ಯಾರು । **ಗುಂಗೂಃ**—ಕುಹೂದೇವತೆಯೆಂದೂ । **ಯಾ**—ಯಾರು । **ಸಿನೀವಾಲೀ**—ಸಿನೀವಾಲಿಯೆಂದೂ । **ಯಾ**—ಯಾರು । **ರಾಕಾ**—ರಾಕಾ ಎಂದೂ । **ಯಾ**—ಯಾರು । **ಸರಸ್ವತೀ**—ಸರಸ್ವತಿಯೆಂದೂ ಪ್ರಸಿದ್ಧಳಾಗಿದ್ದಾಳೋ ಅವಳನ್ನು । **ಅಹ್ವೇ**—ಕರೆಯುತ್ತೇನೆ । **ಇಂದ್ರಾಣೀಂ**—ಇಂದ್ರಪತ್ನಿಯನ್ನು । **ಊತಯೇ**—ರಕ್ಷಣಾರ್ಥವಾಗಿ ಕರೆಯುತ್ತೇನೆ । **ವರುಣಾನೀಂ**—ವರುಣನಪತ್ನಿಯನ್ನು । **ಸ್ವಸ್ತಯೇ**—ಕಲ್ಯಾಣ ಉಂಟಾಗುವುದಕ್ಕಾಗಿ ಕರೆಯುತ್ತೇನೆ.

॥ ಭಾವಾರ್ಥ ॥

ಯಾರು 'ಕುಹೂ' ದೇವತೆಯೆಂದೂ, ಯಾರು, 'ಸಿನೀವಾಲಿ' ಯೆಂದೂ, ಯಾರು 'ರಾಕಾ' ಎಂದೂ, ಯಾರು 'ಸರಸ್ವತಿ'ಯೆಂದೂ ಪ್ರಸಿದ್ಧಳಾಗಿದ್ದಾಳೆಯೋ ಆ ದೇವತೆಯನ್ನು ಕರೆಯುತ್ತೇನೆ. ಇಂದ್ರಾಣಿಯನ್ನು ರಕ್ಷಣಾರ್ಥವಾಗಿಯೂ, ವರುಣಾನಿಯನ್ನು ಕಲ್ಯಾಣಕಾಗಿಯೂ ಕರೆಯುತ್ತೇನೆ.

## English Translation.

I invoke her who is Gangu, who is Sinivali, who is Raka, who is Saraswati: (I invoke) Indrani for protection, Varunani for welfare.

॥ ವಿಶೇಷವಿಷಯಗಳು ॥

ಇಲ್ಲಿ **ಗುಂಗೂಃ** ಎಂಬ ಪದದಿಂದ ಕುಹೂ ಎಂಬ ದೇವಿಯು ಉಕ್ತಳಾಗಿದ್ದಾಳೆ. ರಾಕಾ, ಸಿನೀವಾಲೀ ಇವರುಗಳನ್ನು ಹಿಂದಿನ ಋಕ್ಕುಗಳಲ್ಲಿ ವರ್ಣಿಸಿರುವುದರಿಂದ ಇಲ್ಲಿ ಗುಂಗೂ ಶಬ್ದಕ್ಕೆ ಕುಹೂ (ಎಂದರೆ ಚಂದ್ರನು ಕಾಣಿಸದೆ ಇರುವ ಅಮಾವಾಸ್ಯೆಯು) ಎಂದು ಭಾಷ್ಯಕಾರರು ವಿವರಿಸಿದ್ದಾರೆ. ನಿರುಕ್ತಕಾರರು **ಕೂಹೂರ್ಗೂಹತೇಃ ಕ್ವಾ ಭೂದಿತಿ ವಾ ಕ್ವ ಸತೀ ಹೂಯತ ಇತಿ ವಾ, ಕ್ವಾಹುತಂ ಜುಹೋತೀತಿ ವಾ** (ನಿ. ೧೧–೩೪) ಗುಹೂ ಸಂವರಣೇ—ಮುಚ್ಚುವುದು, ಆವರಿಸುವುದು ಎಂಬ ಅರ್ಥವುಳ್ಳ ಗುಹೂ ಧಾತುವಿನಿಂದ ನಿಷ್ಪನ್ನವಾದ (ಗುಂಗೂ) ಎಂಬ ಪದವನ್ನು ವಿವರಿಸಿಲ್ಲ. ಕುಹೂ ಶಬ್ದವೇ ಗೂಹುಧಾತುವಿನಿಂದ ನಿಷ್ಪನ್ನವಾಗಿದೆ, ಎಂದೂ, **ಕ್ವ ಅಭೂತ್, ಕ್ವ ಹೂಯತೇ, ಕ್ವ ಆಹುತಂ ಜುಹೋತಿ** ಈ ದೇವತೆಯು ಎಲ್ಲಿರುವಳು? ಎಲ್ಲಿ ಕರೆಯಲ್ಪಡುತ್ತಾಳೆ? ಎಲ್ಲಿ ಆಹುತಿಯು ಅರ್ಪಿಸಲ್ಪಡುತ್ತದೆ ಎಂದು ಮೂರು ವಿಧವಾಗಿ ಕುಹೂ ಶಬ್ದದ ರೂಪನಿಷ್ಪತ್ತಿಯನ್ನು ವಿವರಿಸಿದ್ದಾರೆ

ಕುಹೂದೇವಿಯನ್ನೂ ಸಿನೀವಾಲೀ ಎಂಬ ದೇವಿಯನ್ನೂ ರಾಕಾ, ಸರಸ್ವತೀ, ಇಂದ್ರಾಣೀ, ವರುಣಾನೀ ದೇವಿಯರನ್ನೂ **ಸ್ವಸ್ತಯೇ ಅವಿನಾಶಾಯ** ಯಜಮಾನರುಗಳು ತಮಗೆ ಕ್ಷೇಮವು ಉಂಟಾಗುವುದಕ್ಕಾಗಿ ಆಹ್ವಾನಿಸುವರೆಂದು ವರ್ಣಿಸಿದೆ.

**ಇಂದ್ರಾಣೀಂ—ಇಂದ್ರಸ್ಯ ಪತ್ನೀಂ** । ನಿರುಕ್ತಕಾರರು **ಇಂದ್ರಾಣೀ ಇಂದ್ರಸ್ಯ ಪತ್ನೀ** (ನಿ. ೧೧–೩೭) ಎಂದು ವ್ಯಾಖ್ಯಾನಮಾಡಿದ್ದಾರೆ. **ವರುಣಾನೀಂ—ವರುಣಸ್ಯಪತ್ನೀಂ** । ಯಾಸ್ಕರು—

**ಉತ ಗ್ನಾ ವ್ಯಂತು ದೇವಪತ್ನೀರಿಂದ್ರಾಣ್ಯ೧ ಗ್ನಾಯ್ಯಶ್ವಿನೀ ರಾಟ್ ।**
**ಆ ರೋದಸೀ ವರುಣಾನೀ ಶೃಣೋತು ವ್ಯಂತು ದೇವೀರ್ಯ ಋತುರ್ಜನೀನಾಂ ।**

(ಋ. ಸಂ. ೫–೪೬–೮)

ಎಂಬ ಋಕ್ಕಿನ ಅರ್ಥವಿವರಣೆಯಲ್ಲಿ—ಇಂದ್ರಾಣೀಂದ್ರಸ್ಯ ಪತ್ನೀ, ಅಗ್ನಾಯೀ ಅಗ್ನೇಃಪತ್ನೀ, ಅಶ್ವಿನೀ ಅಶ್ವನೋಃ ಪತ್ನೀ, ರೋದಸೀ ರುದ್ರಸ್ಯ ಪತ್ನೀ, ವರುಣಾನೀ ವರುಣಸ್ಯ ಪತ್ನೀ (ನಿ. ೧೨–೪೬) ಎಂದು ವಿವರಿಸಿದ್ದಾರೆ.



# ಮೂವತ್ತಮೂರನೆಯ ಸೂಕ್ತವು

**ಚತುರ್ಥೇಽನುವಾಕೇ ಏಕಾದಶ ಸೂಕ್ತಾನಿ। ತತ್ರ ತೇ ಪಿತರಿತಿ ಪಂಚದಶರ್ಚಂ ಪ್ರಥಮಂ ಸೂಕ್ತಂ ಗೃತ್ಸಮದಸ್ಯಾರ್ಷಂ ತ್ರಿಷ್ಟುಭಂ ರೌದ್ರಂ। ಅನುಕ್ರಾಂತಂ ಚ । ಆ ತೇ ಪಂಚೋನಾ ರೌದ್ರಮಿತಿ ॥ ಶೂಲಗವಾದಿರುದ್ರಯಜ್ಞೇಷ್ವನೇನ ಸೂಕ್ತೇನ ಪ್ರತೀಚೀ ದಿಗುಪಸ್ಥೇಯಾ । ಸೂತ್ರಿತಂ ಚ । ಕದ್ರುದ್ರಾಯೇಮಾ ರುದ್ರಾಯಾ ತೇ ಪಿತರಿಮಾ ರುದ್ರಾಯ ಸ್ಥಿರಧನ್ವನ ಇತಿ ಸರ್ವರುದ್ರಯಜ್ಞೇಷು ದಿಶಾಮುಪಸ್ಥಾನಂ । ಗೃ. ಸೂ. ೪. ೮. ೨೬. । ಇತಿ ॥ ರುದ್ರದೇವತ್ಯೇ ಪಶೌ ಆ ತೇ ಪಿತರಿತಿ ಹವಿಷೋಽನುವಾಕ್ಯಾ । ಸೂತ್ರಿತಂ ಚ । ಆ ತೇ ಪಿತರ್ಮರುತಾಂ ಸುಮ್ನಮೇತು ಪ್ರ ಬಭ್ರವೇ ವೃಷಭಾಯ ಶ್ವಿತೀಚ ಇತಿ ತಿಸ್ರಃ। ಆ. ೩. ೮. । ಇತಿ ॥ ಅತ್ರ ಶೌನಕಃ । ಚತುರ್ದಶೀಮುಪೋಷ್ಯೈಕಾಂ ಕೃಷ್ಣಸ್ಯ ಜುಹುಯಾಚ್ಚರುಂ । ಆತೇಸೂಕ್ತೇನ ರೌದ್ರೇಣ ಪ್ರತ್ಯೃಚಂ ವಾಗ್ಯತಃ ಶುಚಿಃ । ಪೂರ್ವಮಾಜ್ಯಾಹುತೀರ್ಹುತ್ವಾಥೋಪಸ್ಥಾಯ ಚ ಶಂಕರಂ । ಹವಿಃಶೇಷೇಣ ವರ್ತೇತೈಕಾಂತರಮತಂದ್ರಿತಃ । ಪೂರ್ಣಮಾಸೇ ಜಯೇನ್ಮೃತ್ಯುಂ ರೋಗೈಶ್ಚ ಪರಿಮುಚ್ಯತೇ । ಋಗ್ವಿ. ೧ ೩೦. । ಇತಿ ॥**

ಎರಡನೆಯ ಮಂಡಲದ ನಾಲ್ಕನೆಯ ಅನುವಾಕದಲ್ಲಿ ಹನ್ನೊಂದು ಸೂಕ್ತಗಳಿರುವವು. ಅವುಗಳಲ್ಲಿ **ಆ ತೇ ಪಿತರ್ಮರುತಾಂ** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು; ರುದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಆ ತೇ ಪಂಚೋನಾ ರೌದ್ರಮಿತಿ** ಎಂದು ಹೇಳಿರುವದು. ಶೂಲಗವ ಎಂಬ ಹೆಸರಿನ ಯಜ್ಞವೇ ಮೊದಲಾದ ರುದ್ರಯಜ್ಞಗಳಲ್ಲಿ ಈ ಸೂಕ್ತದಿಂದ ಪಶ್ಚಿಮದಿಗ್ದೇವತೆಯನ್ನು ಉಪಸ್ಥಾನಮಾಡಬೇಕೆಂದು ಆಶ್ವಲಾಯನ ಗೃಹ್ಯಸೂತ್ರದ—**ಕದ್ರುದ್ರಾಯೇಮಾ ರುದ್ರಾಯಾ ತೇ ಪಿತರಿಮಾ ರುದ್ರಾಯ ಸ್ಥಿರಧನ್ವನ ಇತಿ ಸರ್ವರುದ್ರಯಜ್ಞೇಷು ದಿಶಾಮುಪಸ್ಥಾನಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಗೃ. ಸೂ. ೪-೮-೨೩); ರುದ್ರದೇವತಾಕವಾದ ಪಶುಯಾಗದಲ್ಲಿ **ಆ ತೇ ಪಿತಃ** ಎಂಬ ಈ ಋಕ್ಕನ್ನು ಹವಿಸ್ಸನ್ನು ಹೋಮಮಾಡುವಾಗ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಆ ತೇ ಪಿತರ್ಮರುತಾಂ ಸುಮ್ನಮೇತು ಪ್ರ ಬಭ್ರವೇ ವೃಷಭಾಯ ಶ್ವಿತೀಚ ಇತಿ ತಿಸ್ರಃ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೩-೮). ಮತ್ತು ಈ ಸೂಕ್ತದ ವಿನಿಯೋಗವಿಚಾರದಲ್ಲಿ ಶೌನಕಮಹರ್ಷಿಯು ಋಗ್ವಿಧಾನವೆಂಬ ಗ್ರಂಥದಲ್ಲಿ—

> **ಚತುರ್ದಶೀಮುಪೋಷ್ಯೈಕಾಂ ಕೃಷ್ಣಸ್ಯ ಜುಹುಯಾಚ್ಚರುಂ ।**
> **ಆತೇಸೂಕ್ತೇನ ರೌದ್ರೇಣ ಪ್ರತ್ಯೃಚಂ ವಾಗ್ಯತಃ ಶುಚಿಃ ॥**
> **ಪೂರ್ವಮಾಜ್ಯಾಹುತೀರ್ಹುತ್ವಾಥೋಪಸ್ಥಾಯ ಚ ಶಂಕರಂ ।**
> **ಹವಿಃಶೇಷೇಣ ವರ್ತೇತೈಕಾಂತರಮತಂದ್ರಿತಃ ॥**
> **ಪೂರ್ಣಮಾಸೇ ಜಯೇನ್ಮೃತ್ಯುಂ ರೋಗೈಶ್ಚ ಪರಿಮುಚ್ಯತೇ ॥**
>
> (ಋಗ್ವಿಧಾನ ೧-೩೦)

ಎಂದು ಹೇಳಿದ್ದಾರೆ ಎಂದರೆ ಕೃಷ್ಣಪಕ್ಷದ ಚತುರ್ದಶೀ ದಿವದ ಉಪವಾಸವಿದ್ದು ಸಂಯಮವುಳ್ಳವನಾಗಿಯೂ, ಶುಚಿರ್ಭೂತನಾಗಿಯೂ ಆ ತೇ ಪಿತಃ ಎಂಬ ಈ ರುದ್ರಸೂಕ್ತದ ಪ್ರತಿಋಕ್ಕನ್ನೂ ಪಠಿಸುತ್ತಾ ಚರುವನ್ನು ಪಯೋಗಿಸಿ

ಆಜ್ಯದಿಂದ ಹೋಮಮಾಡಬೇಕು. ಹೋಮಾನಂತರ ರುದ್ರದೇವತೆಯನ್ನು ಉಪಸ್ಥಾನಮಾಡಬೇಕು. ಬಳಿಕ ಆ ದಿವಸ ಹವಿಶ್ಶೇಷವನ್ನು ಮಾತ್ರ ಏಕಾಂತವಾಗಿ ಯಾವ ಆತಂಕವನ್ನೂ ಇಟ್ಟುಕೊಳ್ಳದೆ ಭಕ್ಷಿಸಬೇಕು. ಬೇರೆ ಆಹಾರವನ್ನು ತೆಗೆದುಕೊಳ್ಳಕೂಡದು. ಈ ರೀತಿ ಚತುರ್ದಶಿಯಿಂದ ಪ್ರಾರಂಭಿಸಿ ಒಂದು ತಿಂಗಳವರಿಗೂ ಆಚರಿಸಿದಲ್ಲಿ ಅಪಮೃತ್ಯು ರೋಗ ಇವುಗಳಿಂದ ಮುಕ್ತನಾಗಿ ಸುಖವಾಗಿರುವನು ಎಂದು ಹೇಳಿದೆ.

## ಸೂಕ್ತ—೩೩

ಮಂಡಲ—೨ ॥ ಅನುವಾಕ—೪ ॥ ಸೂಕ್ತ—೩೩ ॥
ಅಷ್ಟಕ—೨ ॥ ಅಧ್ಯಾಯ—೭ ॥ ವರ್ಗ—೧೬, ೧೭, ೧೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥
॥ ಋಷಿಃ—ಗೃತ್ಸಮದಃ ॥
॥ ದೇವತಾ— ರುದ್ರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಆ ತೇ ಪಿತರ್ಮರುತಾಂ ಸುಮ್ನಮೇತು ಮಾ ನಃ ಸೂರ್ಯಸ್ಯ ಸಂದೃಶೋ-
ಯುಯೋಥಾಃ ।
ಅಭಿ ನೋ ವೀರೋ ಅರ್ವತಿ ಕ್ಷಮೇತ ಪ ಜಾಯೇಮಹಿ ರುದ್ರ ಪ್ರಜಾಭಿಃ ॥೧॥

॥ ಪದಪಾಠಃ ॥

ಆ । ತೇ । ಪಿತಃ । ಮರುತಾಂ । ಸುಮ್ನಂ । ಏತು । ಮಾ । ನಃ । ಸೂರ್ಯಸ್ಯ । ಸಂऽದೃಶಃ । ಯುಯೋಥಾಃ ।
ಅಭಿ । ನಃ । ವೀರಃ । ಅರ್ವತಿ । ಕ್ಷಮೇತ । ಪ್ರ । ಜಾಯೇಮಹಿ । ರುದ್ರ । ಪ್ರऽಜಾಭಿಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಮರುತಾಂ ಪಿತಃ ಮರುತ್ಸಂಜ್ಞಾನಾಂ ದೇವಾನಾಮುತ್ಪಾದಕ ರುದ್ರ ॥ ಪರಮಪಿ ಛಂದಸೀತಿ ಷಷ್ಠ್ಯಂತಸ್ಯ ಪೂರ್ವಾಮಂತ್ರಿತಾಂಗವದ್ಭಾವಾತ್ಸರ್ವಾನುದಾತ್ತತ್ವಂ ॥ ತೇ ತ್ವದೀಯಮಸ್ಮಭ್ಯಂ ದಾತವ್ಯಂ ಸುಮ್ನಂ ಸುಖಮೈತು । ಆಗಚ್ಛತು । ರುದ್ರಸ್ಯ ಚ ಮರುತಾಂ ಪಿತೃತ್ವಮಿದಂ ಪಿತ್ರೇ ಮರುತಾಮಾಖ್ಯಾಯಿಕಾಮುಖೇನಾವಾದಿಷ್ಮ । ಋಗ್ವೇ. ೧-೧೧೪-೬. । ತಥಾ ತ್ವಂ ನೋऽಸ್ಮಾನ್ ಸೂರ್ಯಸ್ಯ ಸಂದೃಶಃ ಸಂದರ್ಶನಾನ್ಮಾ ಯುಯೋಥಾಃ । ಮಾ ಪೃಥಕ್ಕಾರ್ಷೀಃ ॥ ಯು ಮಿಶ್ರಣಾಮಿಶ್ರಣಯೋಃ । ಲಙಿ ಛಾಂದಸಃ ಶಪಃ ಶ್ಲುಃ । ಛಂದಸ್ಯುಭಯಥೇತ್ಯಾರ್ಧಧಾತುಕತ್ವೇನ ಙಿತ್ತ್ವಾಭಾವಾದ್ಗುಣಃ ॥ ಅರ್ವತಿ

ಶತ್ರೌ । ಭ್ರಾತೃವ್ಯೋ ವಾ ಅರ್ವೇತಿ ಶ್ರುತೇಃ । ನೋಽಸ್ಮಾಕಂ ವೀರೋ ವೀರ್ಯವಾನ್ ಪುತ್ರಾದಿರಭಿಕ್ಷಮೇತ । ಅಭಿಭವತು । ಯದ್ವಾ ವೀರಸ್ತ್ವಂ ನೋಽಸ್ಮಾನಭಿಕ್ಷಮೇಥಾಃ । ಅಸ್ಮಾನ್ ಕೃತಾಪರಾಧಾನಭಿಕ್ಷಮಸ್ವ । ಹೇ ರುದ್ರ ಪ್ರಜಾಭಿಃ ಪುತ್ರಪೌತ್ರಾದಿಭಿಃ ಪ್ರಜಾಯೇಮಹಿ । ಪ್ರಭೂತಾಃ ಸ್ಯಾಮ ॥

। ಪ್ರತಿಪದಾರ್ಥ ।

**ಮಾರುತಾಂ ಪಿತಃ**—ಮರುತ್ತುಗಳಿಗೆ ಪಿತೃವಾದ ಎಲೈ ರುದ್ರನೇ । **ತೇ**—ನಿನ್ನಿಂದ ಲಭಿಸಬೇಕಾದ । **ಸುಮ್ನಂ**—ಸುಖವು । **ಆ ಏತು**—ನಮಗೆ ಬಂದು ಸೇರಲಿ । **ನಃ**—ನಮ್ಮನ್ನು । **ಸೂರ್ಯಸ್ಯ**—ಸೂರ್ಯನ । **ಸಂದೃಶಃ**—ಸಂದರ್ಶನದಿಂದ । **ಮಾ ಯುಯೋಥಾಃ**—ಬೇರೆ ಮಾಡಬೇಡ (ಅವನ ಪ್ರಕಾಶವನ್ನು ನಮಗೆ ತಪ್ಪಿಸಬೇಡ) । **ಅರ್ವತಿ**—ಶತ್ರುವಿನೊಡನೆ (ಹೋರಾಡುವಾಗ) । **ನಃ**—ನಮ್ಮ । **ವೀರಃ**—ವೀರ್ಯವಂತನಾದ ಪುತ್ರನು । **ಅಭಿಕ್ಷಮೇತ**—ಅವನನ್ನು ಸೋಲಿಸುವ ಸಾಮರ್ಥ್ಯವನ್ನು ಪಡೆಯಲಿ । **ರುದ್ರ**—ಎಲೈ ರುದ್ರನೇ । **ಪ್ರಜಾಭಿಃ**—ಪುತ್ರಪೌತ್ರಾದಿಗಳಿಂದ । **ಪ್ರ ಜಾಯೇಮಹಿ**—ನಾವು ವೃದ್ಧಿಯಾಗುವಂತೆ ಮಾಡು.

ಭಾವಾರ್ಥ

ಮರುತ್ತುಗಳಿಗೆ ಪಿತೃವಾದ ಎಲೈ ರುದ್ರನೇ, ನಿನ್ನಿಂದ ಲಭಿಸಬೇಕಾದ ಸುಖವು ನಮಗೆ ಬಂದು ಸೇರಲಿ. ನಮ್ಮನ್ನು ಸೂರ್ಯನ ಸಂದರ್ಶನದಿಂದ ಬೇರೆ ಮಾಡಿ ನಮ್ಮನ್ನು ಕತ್ತಲಿನಲ್ಲಿರಿಸಬೇಡ. ನಮ್ಮ ವೀರ್ಯವಂತನಾದ ಪುತ್ರನು ಶತ್ರುವಿನೊಡನೆ ಹೋರಾಡಿ ಅವನನ್ನು ಸೋಲಿಸುವ ಸಾಮರ್ಥ್ಯವನ್ನು ಪಡೆಯಲಿ. ಎಲೈ ರುದ್ರನೇ, ಪುತ್ರಪೌತ್ರಾದಿಗಳಿಂದ ನಮ್ಮ ವಂಶವು ಅಭಿವೃದ್ಧಿಯನ್ನು ಹೊಂದುವಂತೆ ಮಾಡು.

English Translation.

Father of the Maruts, may your felicity extend to us : exclude us not from the sight of the sun : (grant that) our valiant (descendants) may overcome (these) foes, and that we may be multiplied, Rudra, by (our) progeny.

॥ ವಿಶೇಷವಿಷಯಗಳು ॥

**ರುದ್ರ**— ಸಾಯಣರು ರುದ್ರಶಬ್ದಕ್ಕೆ ಆರು ವಿಧವಾಗಿ ಅರ್ಥವನ್ನು ವಿವರಿಸಿರುವರು. ರುದ್ರಶಬ್ದವು ರುದ್ ಧಾತುವಿನಿಂದ ಣಿಜಂತದಲ್ಲಿ ನಿಷ್ಪನ್ನವಾಗಿರುವುದು. ಯಾಸ್ಕರು—**ರುದ್ರೋ ರೌತೀತಿ ಸತಃ ರೋರೂಯಮಾಣೋ ದ್ರವತೀತಿ ವಾ ರೋದಯತೇರ್ವಾ** । ರುದ್ರನೆಂದರೆ **ರೌತಿ–ಸ್ತನಯಿತ್ನು ಶಬ್ದಂ ಕರೋತಿ ಇತಿ ರುದ್ರಃ** ಮೇಘದ ಗುಡುಗಿನ ಹಾಗೆ ಧ್ವನಿಮಾಡುವವನು, **ರೋರೂಯಮಾಣೋ ದ್ರವತಿ** ಶಬ್ದವನ್ನು ಮಾಡುತ್ತಾ ಮೇಘದ ಮಧ್ಯದಲ್ಲಿ ಓಡುವವನು. **ರೋದಯತೇರ್ವಾ** ಶತ್ರುಗಳನ್ನು ಪರಾಭವಗೊಳಿಸಿ ಅವರು ಅಳುವಂತೆ ಮಾಡುವವನು ಎಂದು ಅರ್ಥವನ್ನು ವಿವರಿಸಿರುವರು. ಮತ್ತು **ಯದರುದತ್ ತದ್ರುದ್ರಸ್ಯ ರುದ್ರತ್ವಂ** ಇವನು ತನ್ನ ತಂದೆಯಾದ ಪ್ರಜಾಪತಿಗೆ ಬಾಣಗಳಿಂದ ಪೆಟ್ಟುಗಳು ಬಿದ್ದಾಗ ಅವನನ್ನು ನೋಡಿ ವ್ಯಸನಪಟ್ಟು ಅತ್ತನು ಎಂದು **ಕಠೋಪನಿಷತ್ತಿನಲ್ಲಿ** ಪ್ರಸಿದ್ಧವಾದ ಇತಿಹಾಸವನ್ನು ಅನುಸರಿಸಿಯೂ ಅಥವಾ **ಮೈತ್ರಾಯಣೀಯಶಾಖಾ** ಮತ್ತು ತೈತ್ತಿರೀಯಶಾಖಾವಾಕ್ಯವನ್ನು ಅನುಸರಿಸಿಯೂ **ಯದರೋದೀತ್ ತದ್ರುದ್ರಸ್ಯ ರುದ್ರತ್ವಮ್**—ಇವನು

(ಅತ್ರ ಕಾರಣ) ರೋದನಮಾಡಿದ ಕಾರಣ ಇವನಿಗೆ ರುದ್ರನೆಂದು ಹೆಸರು ಎಂದು (ನಿ. ೧೦-೭) ರುದ್ರಶಬ್ದಾರ್ಥ ನಿರ್ವಚನವನ್ನು ಮಾಡಿರುವರು. ಸಾಯಣರು ರುದ್ರ ಶಬ್ದಕ್ಕೆ ಅರ್ಥವನ್ನು ಹೇಳಿರುವುದು ಇದಕ್ಕಿಂತಲೂ ಬೇರೆ ವಿಧವಾಗಿರುವುದು. ಪ್ರಳಯಕಾಲದಲ್ಲಿ ಎಲ್ಲರೂ ಅಳುವಂತೆ ಮಾಡುವುದರಿಂದಲೂ ಅಥವಾ ಸಂಸಾರವೆಂಬ ದುಃಖವನ್ನು ನಾಶಮಾಡುವುದರಿಂದಲೂ, ಅಥವಾ ಶಬ್ದರೂಪವಾದ ಉಪನಿಷತ್ತುಗಳಿಂದ ಪ್ರತಿಪಾದ್ಯನಾಗಿರುವುದರಿಂದಲೂ ಅಥವಾ ಆತ್ಮವಿದ್ಯೆಯನ್ನು ಆತ್ಮವಿದ್ಯೋಪಾಸಕರಿಗೆ ಉಪದೇಶಮಾಡುವುದರಿಂದಲೂ, ಅಥವಾ ಪ್ರಕಾಶವನ್ನು ಆವರಿಸುವ ಕಗ್ಗತ್ತಲೆಯಂತೆ ಜ್ಞಾನವನ್ನು ಆವರಿಸುವ ಅಜ್ಞಾನವನ್ನು ನಾಶಮಾಡುವುದರಿಂದಲೂ, ರುದ್ರನಾಗಿರುವನು ಎಂದು ರುತ್ ಶಬ್ದದ ಅರ್ಥದಿಂದ ಉಂಟಾಗುವ ಅರ್ಥಭೇದಪ್ರದರ್ಶನಪೂರ್ವಕವಾಗಿ ರುದ್ರಶಬ್ದದ ಅರ್ಥವನ್ನು ವಿವರಿಸಿರುವರು.

ಮತ್ತು ಐತಿಹಾಸಿಕ ಮತದಲ್ಲಿ ನಿರ್ದಿಷ್ಟವಾಗಿರುವ ಇತಿಹಾಸಕ್ಕನುಗುಣವಾಗಿ **ರುದಿಲ್ ಅಶ್ರುವಿಮೋಚನೇ** ಎಂಬ ಧಾತುವಿನಿಂದ ಉಂಟಾದ ರುದ್ರಶಬ್ದದ ಅರ್ಥವನ್ನು **ಸೋಽರೋದಿದ್ಯದರೋದೀತ್ತದ್ರುದ್ರಸ್ಯ ರುದ್ರತ್ವಂ** (ತೈ. ಸಂ. ೧-೫-೧-೧) ಎಂಬ ಶ್ರುತಿವಚನೋಪನ್ಯಾಸಪೂರ್ವಕವಾಗಿ ವಿವರಿಸಿರುವರು. ಇದರಿಂದ ರುದ್ರನ ಮಹಿಮೆಯೂ, ರುದ್ರನಿಗೆ ಪ್ರಾಣಿಗಳ ವಿಷಯದಲ್ಲಿ ಇರುವ ಕಾರುಣ್ಯವೂ ವ್ಯಕ್ತವಾಗುತ್ತದೆ.

**ಮರುತಾಂ ಪಿತಃ ರುದ್ರ ತೇ ಸುಮ್ನಂ ಆ ಏತು—ಮರುತ್ಸಂಜ್ಞಾನಾಂ ದೇವಾನಾಮುತ್ಪಾದಕ ರುದ್ರ ತ್ವದೀಯಮಸ್ಮಭ್ಯಂ ದಾತವ್ಯಂ ಸುಖಂ ಆಗಚ್ಛತು ।** ಯಾಸ್ಕರು **ಮರುತಃ** ಎಂಬ ಪದಕ್ಕೆ **ಮಿತರಾವಿಣೋ ವಾ, ಮಿತರೋಚಿನೋ ವಾ, ಮಹತ್ ದ್ರವಂತೀತಿ ವಾ** (ನಿ. ೧೧-೧೪) ಎಂದು ಅರ್ಥವನ್ನು ವಿವರಿಸಿದ್ದಾರೆ ಮತ್ತು **ರುದ್ರ** ಶಬ್ದವನ್ನು **ಸ್ತೋತ್ರೈ** ನಾಮಗಳಲ್ಲಿ (ನಿ. ೩-೧೯) ಪಾಠಮಾಡಿ, **ರುದ್ರೋ ರೌತೀತಿ ಸತಃ, ರೋರೂಯಮಾಣೋ ದ್ರವತೀತಿ ವಾ. ರೋದಯತೇರ್ವಾ,** ಎಂದು ವ್ಯಾಖ್ಯಾನಮಾಡಿ, **"ಯದರುದತ್ ತದ್ರುದ್ರಸ್ಯ ರುದ್ರತ್ವಂ"** ಎಂದು ಕಾಠಕವಚನವನ್ನೂ **"ಯದರೋದೀತ್ ತದ್ರುದ್ರಸ್ಯ ರುದ್ರತ್ವಂ"** ಎಂದು ಮೈತ್ರಾಯಣೀಯ ಶಾಖಾವಚನವನ್ನೂ (ನಿ. ೧೦-೭) ಉದಾಹರಿಸಿದ್ದಾರೆ. ಸಾಯಣರು ಮರುದ್ದೇವತೆಗಳು ರುದ್ರನ ಪುತ್ರರೆಂದು ವ್ಯಾಖ್ಯಾನಮಾಡಿ, **ರುದ್ರಸ್ಯ ಚ ಮರುತಾಂ ಪಿತೃತ್ವಂ "ಇದಂ ಪಿತ್ರೇ ಮರುತಾಂ"** (ಋ. ಸಂ. ೧-೧೧೪-೬) **ಇತ್ಯತ್ರ ಆಖ್ಯಾಯಿಕಾಮುಖೇನೋಪಾದಿಷ್ಟ** । ಇದಂ ಪಿತ್ರೇ ಮರುತಾಂ ಎಂಬ ಸೂಕ್ತವನ್ನೂ ವಿವರಿಸುವಾಗ ರುದ್ರನು ಮರುದ್ದೇವತೆಗಳ ಜನಕನು ಎಂದು ಉಪಾಖ್ಯಾನವನ್ನು ವರ್ಣಿಸಿದ್ದಾರೆ. ಮರುದ್ದೇವತೆಗಳ ಜನಕನಾದ ರುದ್ರನು ಅನುಗ್ರಹಿಸುವ ಸುಖವು ಯಜಮಾನರಾದ ನಮಗೆಉಂಟಾಗಲಿ ಎಂದು ಆಶಿಸಿದೆ.

**ನಃ ಸೂರ್ಯಸ್ಯ ಸಂದೃಶಃ ಮಾ ಯುಯೋಥಾಃ—ಅಸ್ಮಾನ್ ಸೂರ್ಯಸ್ಯ ಸಂದರ್ಶನಾತ್ ಮಾ ಪೃಥಕ್ಕಾರ್ಷೀಃ ।** ರುದ್ರದೇವನು ಯಜಮಾನರಾದ ನಮಗೆ ಸೂರ್ಯನ ಪ್ರಕಾಶವು ತಪ್ಪದಿರುವಂತೆ ನಮ್ಮನ್ನು ರಕ್ಷಿಸಲಿ ಎಂದೂ, **ನಃ ವೀರಃ ಅರ್ವತಿ ಅಭಿಕ್ಷಮೇತ**—ಯಜಮಾನರಾದ ನಮ್ಮ ಪುತ್ರರೇ ಮೊದಲಾದವರಿಗೆ ಶತ್ರುವನ್ನು ತಿರಸ್ಕರಿಸುವ ಬಲವನ್ನು ರುದ್ರನು ಅನುಗ್ರಹಿಸಲಿ ಎಂದೂ, ಅಥವಾ **ಯದ್ವಾ ವೀರಸ್ತ್ವಂ ನೋ ಅಸ್ಮಾನಭಿಕ್ಷಮೇಥಾಃ ಅಸ್ಮಾನ್ ಕೃತಾಪರಾಧಾನಭಿ ಕ್ಷಮಸ್ವ** ಶೂರನಾದ ರುದ್ರನು ಅಪರಾಧವನ್ನು ಆಚರಿಸಿರುವ ನಮ್ಮ ಅಪರಾಧಗಳನ್ನು ಮನ್ನಿಸಲಿ ಎಂದೂ **ಪ್ರಜಾಭಿಃ ಪ್ರಜಾಯೇಮಹಿ** ಪುತ್ರಪೌತ್ರಾದಿಗಳಿಂದ ಯಜಮಾನ ರಾದ ನಾವು ವೃದ್ಧಿಯನ್ನು ಹೊಂದೋಣವೆಂದೂ ಆಶಂಸಿತವಾಗಿದೆ.

॥ ಸಂಹಿತಾಪಾಠಃ ॥

ತ್ವಾದ॑ತ್ತೇಭೀ ರುದ್ರ॒ ಶಂತ॑ಮೇಭಿಃ ಶ॒ತಂ ಹಿಮಾ॑ ಅಶೀಯ ಭೇ॒ಷ॒ಜೇಭಿಃ॑ ।
ವ್ಯ॑೧॒ಸ್ಮದ್ದ್ವೇಷೋ॑ ವಿತ॒ರಂ ವ್ಯಂಹೋ॒ ವ್ಯಮೀ॑ವಾಶ್ಚಾತಯಸ್ವಾ॒ ವಿಷೂ॑ಚೀಃ ॥ ೨ ॥

॥ ಪದಪಾಠಃ ॥

ತ್ವಾಽದ॑ತ್ತೇಭಿಃ । ರು॒ದ್ರ॒ । ಶಂಽತ॑ಮೇಭಿಃ । ಶ॒ತಂ । ಹಿಮಾಃ॑ । ಅ॒ಶೀ॒ಯ॒ । ಭೇ॒ಷ॒ಜೇಭಿಃ॑ ।
ವಿ । ಅ॒ಸ್ಮತ್ । ದ್ವೇಷಃ॑ । ವಿ॒ಽತ॒ರಂ । ವಿ । ಅಂಹಃ॑ । ವಿ । ಅಮೀ॑ವಾಃ । ಚಾ॒ತ॒ಯ॒ಸ್ವ॒ । ವಿಷೂ॑ಚೀಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ರುದ್ರ ತ್ವಾದತ್ತೇಭಿಸ್ತ್ವಯಾ ದತ್ತೈಃ ಶಂತಮೇಭಿರತಿಶಯೇನ ಸುಖಕರೈರ್ಭೇಷಜೇಭಿರ್ಭೇಷಜೈರೌಷಧೈಃ ಶತಂ ಹಿಮಾಃ ಶತಂ ಹೇಮಂತಾನ್ ಶತಂ ಸಂವತ್ಸರಾನಶೀಯ । ವ್ಯಾಪ್ನುಯಾಂ ॥ ಅಶ್ನೋತೇರ್ಲಿಙಿ ಛಾಂದಸೋ ವಿಕರಣಸ್ಯ ಲುಕ್ . ಅಪಿ ಚ ಅಸ್ಮದಸ್ಮತ್ತೋ ದ್ವೇಷೋ ದ್ವೇಷ್ಟೄನ್ ವಿಚಾತಯಸ್ವ । ವಿನಾಶಯ । ತಥಾಂಹಃ ಪಾಪಂ ವಿತರಮತ್ಯಂತಂ ವಿಚಾತಯಸ್ವ । ಅಮೀವಾ ರೋಗಾನ್ವಿಷೂಚೀರ್ವಿಷು ನಾನಾಂಚಂತೀಃ ಕೃತ್ಸ್ನಶರೀರವ್ಯಾಪಕಾನ್ ರೋಗಾನ್ವಿಚಾತಯಸ್ವ । ಅಸ್ಮತ್ತಃ ಪೃಥಕ್ಕೃತ್ಯ ವಿನಾಶಯ ॥

॥ ಪ್ರತಿಪದಾರ್ಥ ॥

ರುದ್ರ— ಎಲೈ ರುದ್ರನೇ ತ್ವಾದತ್ತೇಭಿಃ—ನಿನ್ನಿಂದ ದತ್ತವಾದವೂ . ಶಂತಮೇಭಿಃ—ಸುಖಕರವಾದವೂ ಆದ ಭೇಷಜೇಭಿ ವನಸ್ಪತಿಗಳಿಂದ । ಶತಂ ಹಿಮಾಃ—ನೂರು ಸಂವತ್ಸರಗಳನ್ನು । ಅಶೀಯ—ಪೂರ್ಣವಾಗಿ ಹೊಂದುವಂತಾಗಲಿ । ಅಸ್ಮತ್—ನಮ್ಮಿಂದ । ದ್ವೇಷಃ—ನಮ್ಮ ಶತ್ರುಗಳನ್ನು । ವಿ ಚಾತಯಸ್ವ—ಪೂರ್ಣವಾಗಿ ನಾಶಮಾಡು । ಅಂಹಃ—ಪಾಪವನ್ನೂ । ವಿತರಂ ವಿ—ಅತ್ಯಂತವಾಗಿ (ನಾಶಮಾಡು) । ವಿಷೂಚೀಃ—ನಾನಾ ವಿಧದಲ್ಲಿ ಶರೀರವನ್ನು ವ್ಯಾಪಿಸುವ । ಅಮೀವಾಃ ವಿ—ರೋಗಗಳನ್ನು (ನಾಶಮಾಡು).

॥ ಭಾವಾರ್ಥ ॥

ಎಲೈ ರುದ್ರನೇ, ನಿನ್ನಿಂದ ದತ್ತವಾದವೂ, ಸುಖಕರವಾದವೂ ಆದ ವನಸ್ಪತಿಗಳ ಸೇವನೆಯಿಂದ ಪುಷ್ಟನಾಗಿ ನಾನು ಶತಸಂಖ್ಯಾತವಾದ ವತ್ಸರಗಳನ್ನೂ ಪೂರ್ಣವಾಗಿ ಜೀವಿಸುವಂತಾಗಲಿ. ನಮ್ಮ ಶತ್ರುಗಳನ್ನೂ, ಪಾಪವನ್ನೂ ನಾನಾವಿಧವಾಗಿ ಶರೀರದಲ್ಲಿ ವ್ಯಾಪಿಸುವ ರೋಗಗಳನ್ನೂ ಸಹ ಪೂರ್ಣವಾಗಿ ನಾಶಮಾಡು.

## English Translation·

Nourished by the sanatory vegetables which are bestowed by you, may I live a hundred winters : extirpate my enemies, my exceeding sin, and my manifold infirmities.

॥ ವಿಶೇಷವಿಷಯಗಳು ॥

ರುದ್ರನನ್ನು ಸಂಬೋಧಿಸಿ, ಯಜಮಾನನು, ರುದ್ರದತ್ತವಾಗಿರುವುದೂ, **ಶಂತಮೇಭಿಃ ಭೇಷಜೇಭಿಃ** ಪ್ರಭೂತಸುಖಕರವಾದುದೂ ಆಗಿರುವ ಔಷಧಗಳಿಂದ **ಶತಂ ಹಿಮಾಃ ಅಶೀಯ** ಅನೇಕಸಂವತ್ಸರಗಳ (ಪರಿಯಂತವೂ) ವರಿಗೂ ಸುಖವಾಗಿರುವನೆಂದೂ, **ಅಸ್ಮತ್ ದ್ವೇಷಃ ವಿಚಾತಯಸ್ವ**—ಯಜಮಾನರಾದ ನಮ್ಮನ್ನು ದ್ವೇಷಮಾಡುವವರನ್ನು ರುದ್ರನು ನಾಶಪಡಿಸಲಿ ಎಂದೂ ಆಶಿಸಿದೆ. ಮತ್ತು,

**ಅಂಹಃ ವಿತರ—ಪಾಪಂ ಅತ್ಯಂತಂ ವಿ ಚಾತಯಸ್ವ** । ನಮ್ಮ ಪಾಪಗಳನ್ನು ರುದ್ರನು ನಾಶಪಡಿಸಲಿ ಎಂದೂ, ಪ್ರಾರ್ಥಿಸಿದೆ. **ವಿಷೂಚೀಃ—ವಿಷು ನಾನಾ ಅಂಚತೀಃ ಕೃತ್ಸ್ನಶರೀರವ್ಯಾಪಕಾಃ**—ವಿಷೂಚೀ ಎಂಬ ಪದಕ್ಕೆ ನಾನಾವಿಧವಾಗಿ ಶರೀರವೆಲ್ಲವನ್ನೂ ವ್ಯಾಪಿಸುವ ರೋಗಗಳು ಎಂದು ಅರ್ಥವನ್ನು ವಿವರಿಸಿ, ಈ ಪ್ರಕಾರ ವಾಗಿರುವ ರೋಗಗಳು ಯಜಮಾನರಿಗೆ ಉಂಟಾಗದಹಾಗೆ ಅವುಗಳ ನಾಶವು ಆಗಬೇಕೆಂದು ರುದ್ರದೇವನನ್ನು ಯಜಮಾನರು ಪ್ರಾರ್ಥಿಸಿದ್ದಾರೆ.



॥ ಸಂಹಿತಾಪಾಠಃ ॥

**ಶ್ರೇಷ್ಠೋ ಜಾತಸ್ಯ ರುದ್ರ ಶ್ರಿಯಾಸಿ ತವಸ್ತಮಸ್ತವಸಾಂ ವಜ್ರಬಾಹೋ ।**

**ಷರ್ಷಿ ಣಃ ಪಾರಮಂಹಸಃ ಸ್ವಸ್ತಿ ವಿಶ್ವಾ ಅಭೀತೀ ರಪಸೋ ಯುಯೋಧಿ ॥ ೩ ॥**

॥ ಪದಪಾಠಃ ॥

**ಶ್ರೇಷ್ಠಃ । ಜಾತಸ್ಯ । ರುದ್ರ । ಶ್ರಿಯಾ । ಅಸಿ । ತವಃऽತಮಃ । ತವಸಾಂ । ವಜ್ರಬಾಹೋ ಇತಿ ವಜ್ರऽಬಾಹೋ ।**

**ಪರ್ಷಿ । ನಃ । ಪಾರಂ । ಅಂಹಸಃ । ಸ್ವಸ್ತಿ । ವಿಶ್ವಾಃ । ಅಭಿऽಇತೀಃ । ರಪಸಃ । ಯುಯೋಧಿ ॥ ೩ ॥**

॥ ಸಾಯಣಭಾಷ್ಯಂ ॥

**ಹೇ ರುದ್ರ ಜಾತಸ್ಯೋತ್ಪನ್ನಸ್ಯ ಸರ್ವಸ್ಯ ಜಗತೋ ಮಧ್ಯೇ ಶ್ರಿಯೈಶ್ವರ್ಯೇಣ ಶ್ರೇಷ್ಠಃ ಪ್ರಶಸ್ಯತಮೋಽಸಿ । ಭವಸಿ । ತಥಾ ಹೇ ವಜ್ರಬಾಹೋ ಆಯುಧಹಸ್ತ ರುದ್ರ ತವಸಾಂ ಪ್ರವೃದ್ಧಾನಾಂ**

ಮಧ್ಯೇ ತವಸ್ತಮೋಽತಿಶಯೇನ ಪ್ರವೃದ್ಧೋಽಸಿ । ಸ ತ್ವಂ ನೋಽಸ್ಮಾನಂಹಸಃ ಪಾಪಸ್ಯ ಪಾರಂ ತೀರಂ ಸ್ವಸ್ತಿ ಕ್ಷೇಮೇಣ ಪರ್ಷಿ । ಪಾರಯ । ತಥಾ ರಪಸಃ ಪಾಪಸ್ಯ ವಿಶ್ವಾಃ ಸರ್ವಾ ಅಭೀತೀರಭಿಗಮನಾನಿ ಯುಯೋಧಿ । ಪೃಥಕ್ಕುರು ॥ ಯೌತೇಶ್ಛಾಂದಸಃ ಶಪಃ ಶ್ಲುಃ । ವಾ ಛಂದಸೀತ್ಯಪಿತ್ತ್ವಸ್ಯ ವಿಕಲ್ಪನಾತ್ ಙಿತ್ತ್ವಾಭಾವೇಽಙಿತಶ್ಚೇತಿ ಹೇರ್ಧಿಃ ॥

॥ ಪ್ರತಿಪದಾರ್ಥ ॥

**ರುದ್ರ**—ಎಲೈ ರುದ್ರನೇ । **ಜಾತಸ್ಯ**—ಉತ್ಪನ್ನವಾದ ಸಕಲ ಜಗತ್ತಿಗೂ । **ಶ್ರಿಯಾ**—ಐಶ್ವರ್ಯದಿಂದ । **ಶ್ರೇಷ್ಠಃ**—ಅತ್ಯುತ್ಕೃಷ್ಟನಾಗಿ । **ಅಸಿ**—ಆಗಿದ್ದೀಯೆ । **ವಜ್ರಬಾಹೋ**—ವಜ್ರವನ್ನು ಹಿಡಿದಿರುವ ಎಲೈ ರುದ್ರನೇ । **ತವಸಾ**—ಬಲಶಾಲಿಗಳ ನಡುವೆ । **ತವಸ್ತಮಃ**—ಅತ್ಯಂತ ಶಕ್ತಿಯುತನಾಗಿದ್ದೀಯೆ । **ನಃ**—ನಮ್ಮನ್ನು । **ಅಂಹಸಃ**—ಪಾಪದ । **ಪಾರಂ**—ಕೊನೆಯನ್ನು (ಮುಟ್ಟಿಸಿ) । **ಸ್ವಸ್ತಿ**—ಸುರಕ್ಷಿತವಾಗಿ । **ಪರ್ಷಿ**—(ಅದರಿಂದ) ದಾಟಿಸು । **ರಪಸಃ**—ಪಾಪದ । **ವಿಶ್ವಾಃ**—ಸಮಸ್ತವಾದ । **ಅಭೀತೀಃ**—ಹೊಡೆತಗಳನ್ನು । **ಯುಯೋಧಿ**—ತಪ್ಪಿಸು.

॥ ಭಾವಾರ್ಥ ॥

ಎಲೈ ರುದ್ರನೇ, ಉತ್ಪನ್ನವಾದ ಸಕಲ ಜಗತ್ತಿನಲ್ಲಿಯೂ ನೀನು ನಿನ್ನ ಐಶ್ವರ್ಯದಿಂದ ಅತ್ಯುತ್ಕೃಷ್ಟನಾಗಿದ್ದೀಯೆ. ವಜ್ರವನ್ನು ಆಯುಧವಾಗಿ ಹಿಡಿದಿರುವ ರುದ್ರನೇ, ಬಲಶಾಲಿಗಳ ನಡುವೆ ನೀನು ಅತ್ಯಂತ ಬಲಶಾಲಿಯಾಗಿದ್ದೀಯೆ. ನಮ್ಮನ್ನು ಪಾಪದ ಕೊನೆಯನ್ನು ಮುಟ್ಟಿಸಿ ಸುರಕ್ಷಿತವಾಗಿ ಅದರಿಂದ ದಾಟಿಸು. ಪಾಪದ ಸಕಲ ವಿಘ್ನವಾದ ಹೊಡೆತಗಳನ್ನು ತಪ್ಪಿಸು

English Translation.

You, Rudra, are the chiefest of beings in glory : you, wielder of the thunderbolt, are the mightiest of the mighty : do you waft us in the safety over (the ocean) of sin : repel all the assaults of iniquity.

॥ ವಿಶೇಷವಿಷಯಗಳು ॥

ರುದ್ರನನ್ನು ಸಂಬೋಧಿಸಿ ಈ ದೇವನು **ಜಾತಸ್ಯ ಶ್ರಿಯಾ ಶ್ರೇಷ್ಠಃ—ಉತ್ಪನ್ನಸ್ಯ ಸರ್ವಸ್ಯ ಜಗತಃ ಮಧ್ಯೇ ಐಶ್ವರ್ಯೇಣ ಪ್ರಶಸ್ಯತಮಃ**—ಉತ್ಪನ್ನವಾಗಿರುವ ಜಗತ್ತಿನಲ್ಲಿ ಈಶಿತೃತ್ವರೂಪವಾದ ತನ್ನ ಪ್ರಭಾವದಿಂದ ಸರ್ವರಿಂದಲೂ ಅತಿಶಯವಾಗಿ ಪ್ರಶಸ್ಯನಾಗಿರುವನೆಂದು ವರ್ಣಿಸಿದೆ.

**ವಜ್ರಬಾಹೋ ತವಸಾಂ ತವಸ್ತಮಃ—ಆಯುಧಹಸ್ತ ರುದ್ರ ಪ್ರವೃದ್ಧಾನಾಂ ಮಧ್ಯೇ ಅತಿಶಯೇನ ಪ್ರವೃದ್ಧೋಽಸಿ** । ವಜ್ರ ಶಬ್ದಕ್ಕೆ ಆಯುಧ ಎಂದು ಅರ್ಥ ಹೇಳಿ ರುದ್ರನು ಆಯುಧವನ್ನು ಹಸ್ತದಲ್ಲಿ ಧರಿಸಿರುವನೆಂದೂ, ಮಹತ್ವಪೂರಿತರಾದವರೆಲ್ಲರಿಗಿಂತಲೂ ಅತಿಶಯವಾದ ಮಹತ್ವದಿಂದ ಕೂಡಿರುವನೆಂದೂ ವಿವರಿಸಿದೆ. ಈ ದೇವನು ಯಜಮಾನರನ್ನು ಅವರವರು ಆಚರಿಸುವ ಪಾಪಗಳಿಂದ ಬಿಡುಗಡೆಮಾಡಿ ಕ್ಷೇಮವನ್ನು ಅನುಗ್ರಹಿಸಲಿ ಎಂದೂ, **ಅಂಹಸಃ ಪಾರಂ ಸ್ವಸ್ತಿ ಪರ್ಷಿ** ಎಂಬ ವಾಕ್ಯದಿಂದ ಹಿಂದೆ ಆಚರಿತವಾದ ಪಾಪಗಳ ಪರಿಹಾರವನ್ನು ಮಾಡಿ ಕ್ಷೇಮವನ್ನು ಉಂಟುಮಾಡುವಂತೆಯೂ **ರಪಸಃ ವಿಶ್ವಾಃ ಅಭೀತೀಃ ಯುಯೋಧಿ—ಪಾಪಸ್ಯ**

**ಸರ್ವಾಃ ಅಭಿಗಮನಾನಿ ಪೃಥಕ್ಕುರು** ಯಜಮಾನರಿಗೆ ಮುಂದೆ ಉಂಟಾಗಬಹುದಾದ ಸಕಲವಿಧವಾದ ಪಾಪಗಳ ಸಂಪರ್ಕದಿಂದ ರುದ್ರನು ನಮ್ಮನ್ನು ಬೇರೆಯಾಗಿರಿಸಲಿ ಎಂದರೆ ಪಾಪಗಳನ್ನು ನಾಶಮಾಡಲಿ ಎಂದೂ ಯಜಮಾನರ ಆಶಂಸನೆಯು ವರ್ಣಿತವಾಗಿದೆ.

॥ ಸಂಹಿತಾಪಾಠಃ ॥

ಮಾ ತ್ವಾ ರುದ್ರ ಚುಕ್ರುಧಾಮಾ ನಮೋಭಿರ್ಮಾ ದುಷ್ಟುತೀ ವೃಷಭ ಮಾ ಸಹೂತೀ ।
ಉನ್ನೋ ವೀರಾँ ಅರ್ಪಯ ಭೇಷಜೇಭಿರ್ಭಿಷಕ್ತಮಂ ತ್ವಾ ಭಿಷಜಾಂ ಶೃಣೋಮಿ ॥

॥ ಪದಪಾಠಃ ॥

ಮಾ । ತ್ವಾ । ರುದ್ರ । ಚುಕ್ರುಧಾಮ । ನಮಃಽಭಿಃ । ಮಾ । ದುಃಽಸ್ತುತೀ । ವೃಷಭ । ಮಾ । ಸಽಹೂತೀ ।
ಉತ್ । ನಃ । ವೀರಾನ್ । ಅರ್ಪಯ । ಭೇಷಜೇಭಿಃ । ಭಿಷಕ್ಽತಮಂ । ತ್ವಾ । ಭಿಷಜಾಂ । ಶೃಣೋಮಿ ॥ ೪ ॥

॥ ಸಾಯಣಭಾಷ್ಯಂ ॥

ಹೇ ರುದ್ರ ತ್ವಾ ತ್ವಾಂ ನಮೋಭಿರಯಥಾಕ್ರಿಯಮಾಣೈರ್ನಮಸ್ಕಾರೈರ್ಹವಿರ್ಭಿರ್ವಾ ಮಾ ಚುಕ್ರುಧಾಮ । ಮಾ ಕ್ರೋಧಯಾಮ । ಕ್ರುದ್ಧಂ ಮಾ ಕಾರ್ಷ್ಮ ॥ ಕ್ರುಧ ಕೋಪೇ । ಅಸ್ಮಾಣ್ಣ್ಯಂತಾಲ್ಲುಙಿ ಚಙಿ ರೂಪಂ ॥ ಹೇ ವೃಷಭ ಕಾಮಾನಾಂ ವರ್ಷಿತರ್ದುಷ್ಟುತೀ ದುಃಸ್ತುತ್ಯಾಶೋಭನಯಾ ಸ್ತುತ್ಯಾ ಮಾ ಚುಕ್ರುಧಾಮೇತ್ಯೇವ । ತಥಾ ಸಹೂತೀ ಸಹೂತ್ಯಾ ವಿಸದೃಶೈರನ್ಯೈರ್ದೇವೈಃ ಸಹಾಹ್ವಾನೇನ ಮಾ ಕ್ರೋಧಯಾಮ । ಶ್ರೇಷ್ಠೋ ಹಿ ಸ್ವಸ್ಮಾನ್ನ್ಯೂನೇನ ಸಹಾಹ್ವಾನೇ ಕ್ರುದ್ಧೋ ಭವತಿ । ಸ ತ್ವಂ ನೋಽಸ್ಮಾಕಂ ವೀರಾನ್ ಪುತ್ರಾನ್ಭೇಷಜೇಭಿಸ್ತ್ವದೀಯೈರ್ಭೇಷಜೈರೌಷಧೈರುದರ್ಪಯ । ಉತ್ಕೃಷ್ಟಂ ಸಂಯೋಜಯ । ಹೇ ರುದ್ರ ತ್ವಾ ತ್ವಾಂ ಭಿಷಜಾಂ ಚಿಕಿತ್ಸಾಭಿಜ್ಞಾನಾಂ ಮಧ್ಯೇ ಭಿಷಕ್ತಮಮತಿಶಯೇನ ಭೈಷಜ್ಯಸ್ಯ ಕರ್ತಾರಂ ಶೃಣೋಮಿ । ಪ್ರಥಮೋ ದೈವ್ಯೋ ಭಿಷಕ್ । ವಾ. ಸಂ. ೧೬-೫. । ಇತಿ ಚ ಮಂತ್ರಾಂತರೇಽಪ್ಯುಕ್ತಂ ॥

॥ ಪ್ರತಿಪದಾರ್ಥ ॥

**ರುದ್ರ**—ಎಲೈ ರುದ್ರನೇ । **ತ್ವಾ**—ನಿನ್ನನ್ನು । **ನಮೋಭಿಃ**—(ನ್ಯೂನತೆಯಿಂದ ಕೂಡಿದ) ಪೂಜೆಗಳಿಂದ । **ಮಾ ಚುಕ್ರುಧಾಮ**—ಕ್ರುದ್ಧನನ್ನಾಗಿ ಮಾಡುವುದಿಲ್ಲ । **ವೃಷಭ**—ಇಷ್ಟಾರ್ಥಗಳನ್ನು ಸುರಿಸುವ ಎಲೈ ರುದ್ರನೇ । **ದುಷ್ಟುತೀ**—ಅಮಂಗಳಕರವಾದ ಸ್ತುತಿಗಳಿಂದ । **ಮಾ**—ಕ್ರುದ್ಧನನ್ನಾಗಿ ಮಾಡುವುದಿಲ್ಲ ।

**ಸಹೂತೀ**—ನಿನ್ನೊಂದಿಗೆ ವಿಸದೃಶರಾದ ಇತರ ದೇವತೆಗಳನ್ನು ಕರೆದು ಪೂಜಿಸುವುದರಿಂದಲೂ। **ಮಾ**—ನಿನಗೆ ಕ್ರೋಧವನ್ನುಂಟುಮಾಡುವುದಿಲ್ಲ। **ನಃ**—ನಮ್ಮ। **ವೀರಾನ್**—ವೀರಪುತ್ರರನ್ನು। **ಭೇಷಜೇಭಿಃ**—ನಿನ್ನ ಓಷಧಿಗಳಿಂದ। **ಉತ್ ಅರ್ಪಯ**—ಸಂಯುಕ್ತರಾಗುವಂತೆ ಮಾಡು। **ತ್ವಾ**—ನಿನ್ನನ್ನು। **ಭಿಷಜಾಂ**—ವೈದ್ಯರಲ್ಲೆಲ್ಲಾ। **ಭಿಷಕ್ತಮಂ**—ಅತ್ಯಂತ ಶ್ರೇಷ್ಠನಾದ ವೈದ್ಯನೆಂದು। **ಶೃಣೋಮಿ**—ಕೇಳಿ ತಿಳಿದಿದ್ದೇನೆ.

। ಭಾವಾರ್ಥ ।

ಇಷ್ಟಾರ್ಥಪ್ರದನಾದ ಎಲೈ ರುದ್ರನೇ ನ್ಯೂನತೆಯಿಂದ ಕೂಡಿದ ಪೂಜೆಗಳಿಂದಾಗಲಿ, ಅಮಂಗಳಕರಗಳಾದ ಸ್ತುತಿಗಳಿಂದಾಗಲಿ, ವಿಸದೃಶವಾದ ಇತರ ದೇವತೆಗಳನ್ನು ನಿನ್ನೊಂದಿಗೆ ಕರೆದು ಪೂಜಿಸುವುದರಿಂದಾಗಲಿ ನಾವು ನಿನಗೆ ಕ್ರೋಧವನ್ನುಂಟುಮಾಡುವಂತೆ ಆಗದಿರಲಿ. ನಾವು ಹಾಗೆ ಮಾಡಲಾರೆವು. ನಮ್ಮ ವೀರಪುತ್ರರನ್ನು ನಿನ್ನ ಓಷಧಿಗಳಿಂದ ಸಂಯುಕ್ತರಾಗುವಂತೆ ಮಾಡು. ನಿನ್ನನ್ನು ವೈದ್ಯರಲ್ಲೆಲ್ಲಾ ಅತ್ಯಂತ ಶ್ರೇಷ್ಠನಾದ ವೈದ್ಯನೆಂದು ಕೇಳಿ ತಿಳಿದಿದ್ದೇನೆ.

English Translation.

Let us not provoke you, Rudra, to wrath by our (imperfect) adorations: nor, showerer (of benifits), by our unworthy praise, nor by our invocation (of other deities); invigorate our sons by your medicinal plants, for I hear that you are a chief physician amongst physicians.

। ವಿಶೇಷವಿಷಯಗಳು ।

ಈ ಋಕ್ಕಿನಲ್ಲಿ ಚುಕ್ರುಧಾಮ ಎಂಬ ಕ್ರಿಯಾಪದವನ್ನು ಮೂರುಸಲ ಆವೃತ್ತಿಮಾಡಿ ಮೂರು ವಾಕ್ಯಗಳಲ್ಲಿಯೂ ಕ್ರಿಯಾಪದವನ್ನಾಗಿ ಸೇರಿಸಿ ಅರ್ಥವನ್ನು ನಿರೂಪಿಸಿದೆ.

ಮೊದಲನೆಯ ವಾಕ್ಯದಲ್ಲಿ **ನಮೋಭಿಃ — ಅಯಥಾಕ್ರಿಯಮಾಣೈಃ ನಮಸ್ಕಾರೈಃ ಹವಿರ್ಭಿರ್ವಾ** ಶಾಸ್ತ್ರದಲ್ಲಿ ಉಕ್ತವಾದ ಕ್ರಮವನ್ನು ಅನುಸರಿಸದೆ ಆಚರಿತವಾದ ನಮಸ್ಕಾರಗಳಿಂದಲೂ, ಅಥವಾ ಹವಿಸ್ಸಿನ ಅರ್ಪಣೆಗಳಿಂದಲೂ ಈ ರುದ್ರದೇವನನ್ನು ಯಜಮಾನರು ಕೋಪವುಳ್ಳವನನ್ನಾಗಿ ಮಾಡುವುದಿಲ್ಲ ಎಂದು ಹೇಳಿದೆ.

**ದುಷ್ಟುತೀ—ದುಃಸ್ತುತ್ಯಾ ಅಶೋಭನಯಾ ಸ್ತುತ್ಯಾ**—ಸರಿಯಲ್ಲದ ಎಂದರೆ ಈ ದೇವನ ಪ್ರಭಾವವನ್ನಾಗಲಿ ಗುಣಗಳನ್ನಾಗಲಿ ಬೇರೆಯ ವಿಧವಾಗಿ ತಿಳಿಯುವಂತೆ ಅರ್ಥವನ್ನು ಬೋಧಿಸುವ ಸ್ತುತಿಗಳನ್ನು ಪಠಿಸಿ ಈ ದೇವನು ಯಜಮಾನ ಇಷ್ಟಗಳನ್ನು ಬೇಕಾದ ಹಾಗೆ ಕೊಡದಂತೆ ಮಾಡಿ ಈ ದೇವನನ್ನು ಕೋಪವುಳ್ಳವನಾಗುವಂತೆ ಯಜಮಾನನು ಆಚರಿಸುವುದಿಲ್ಲ ಎಂದು ಅರ್ಥವನ್ನು ವರ್ಣಿಸಿದೆ.

**ಸುಹೂತೀ—ಸುಹೂತ್ಯಾ ವಿಸದೃಶೈಃ ಅನ್ಯೈಃ ದೇವೈಃ ಸಹ ಆಹ್ವಾನೇನ ಮಾ ಕ್ರೋಧಯಾಮ। ಶ್ರೇಷ್ಠೋ ಹಿ ಸ್ವಸ್ಮಾತ್ ನ್ಯೂನೇನ ಸಹಾಹ್ವಾನೇ ನ ಕ್ರುದ್ಧೋ ಭವತಿ।** ಈ ದೇವನನ್ನು ಯಾಗಗಳಲ್ಲಿ ಆಹ್ವಾನ ಮಾಡುವಾಗ ಇತರ ಕ್ಷುದ್ರದೇವತೆಗಳೊಡನೆ ಸೇರಿಸಿ ಆಹ್ವಾನಮಾಡಿ ಈ ದೇವನಿಗೆ ಯಜಮಾನರ ವಿಷಯದಲ್ಲಿ

ಕೋಪವು ಉಂಟಾಗುವ ಹಾಗೆ ಮಾಡುವುದಿಲ್ಲ. ಪ್ರಭಾವದಿಂದಲೂ ಗುಣಗಳಿಂದಲೂ ಮಿಗಿಲಾದವನನ್ನು ತನಗಿಂತ ಕಡಿಮೆಯಾದವನ ಜತೆಗೆ ಸೇರಿಸಿದಲ್ಲಿ ತಿರಸ್ಕಾರವನ್ನಾಡಿದರೆಂಬ ತಿಳಿವಳಿಕೆಯು ಉಂಟಾಗುವುದು. ಆದುದರಿಂದ ಅಪರಾಧವಮಾಡಿದಂತಾಗುವ ಕಾರಣ ಈ ದೇವನ ಪ್ರಭಾವವನ್ನು ಅರಿತು ಅದಕ್ಕನುಸಾರವಾಗಿ ಯಜಮಾನರು ಆಚರಿಸುವರೆಂದು ವರ್ಣಿಸಿದೆ.

ಈ ದೇವನು "ಪ್ರಥಮೋ ದೈವ್ಯೋ ಭಿಷಕ್" (ತೈ. ಸಂ. ೪-೧-೫-೨) ಎಂದು ಮಂತ್ರಾಂತರಗಳಲ್ಲಿ ಉಕ್ತವಾಗಿರುವ ಕಾರಣ, ಈ ದೇವನನ್ನು **ತ್ವಾ ಭಿಷಜಾಂ-ಚಿಕಿತ್ಸಾಭಿಜ್ಞಾನಾಂ ಮಧ್ಯೇ ಅತಿಶಯೇನ ಭೈಷಜ್ಯಸ್ಯ ಕರ್ತಾರಂ ಶೃಣೋಮಿ**— ಮಾನಸಿಕವಾದ ಅಥವಾ ಶರೀರ ಸಂಬಂಧವಾದ ರೋಗಗಳಿಗೆ ಚಿಕಿತ್ಸೆಯನ್ನು ಮಾಡಿ ಅವುಗಳನ್ನು ನಾಶಪಡಿಸುವ ವೈದ್ಯರಲ್ಲಿ ಮುಖ್ಯವಾಗಿರುವನೆಂದು ಯಜಮಾನರು ತಿಳಿದಿರುವರು ಎಂದೂ, ಈ ನಿಮಿತ್ತದಿಂದಲೂ, **ನಃ ವೀರಾನ್ ಭೇಷಜೇಭಿಃ ಉತ್ ಅರ್ಪಯ—ಅಸ್ಮಾಕಂ ಪುತ್ರಾನ್ ತ್ವದೀಯೈಃ ಔಷಧೈಃ ಉತ್ಕೃಷ್ಟಂ ಸಂಯೋಜಯ।** ಯಜಮಾನರಾದ ನಮ್ಮ ಮಕ್ಕಳುಗಳಿಗೆ ಈ ದೇವನು ಸರಿಯಾದ ಔಷಧಿಗಳನ್ನು ಕೊಟ್ಟು ಅವರುಗಳು ಎಲ್ಲರಿಗಿಂತಲೂ ಉತ್ಕೃಷ್ಟರಾಗುವ ಹಾಗೆ ಮಾಡಲಿ ಎಂದು ಆಶಂಸಿತವಾಗಿದೆ. ಈ ರುದ್ರದೇವನನ್ನು ಯಾಜ್ಞಿಕರು ದೇವತೆಗಳೆಲ್ಲರನ್ನೂ ಆಹ್ವಾನಿಸಿ ಹವಿರಾದಿಗಳಿಂದ ತೃಪ್ತಿಪಡಿಸಿ ತದನಂತರ ಪ್ರತ್ಯೇಕವಾಗಿ ಆಹ್ವಾನಮಾಡುವರಾದ ಕಾರಣ ಈ ದೇವನ ಕೋಪಕ್ಕೆ ಪಾತ್ರರಾಗಬಾರದೆಂದು ಇಲ್ಲಿ ಈ ರೀತಿಯಾಗಿ ವರ್ಣಿಸಿದೆ.



॥ ಸಂಹಿತಾಪಾಠಃ ॥

ಹವೀಮಭಿರ್ಹವತೇ ಯೋ ಹವಿರ್ಭಿರವ ಸ್ತೋಮೇಭೀ ರುದ್ರಂ ದಿಷೀಯ ।
ಋದೂದರಃ ಸುಹವೋ ಮಾ ನೋ ಅಸ್ಯೈ ಬಭ್ರುಃ ಸುಶಿಪ್ರೋ ರೀರಧನ್ಮನಾಯೈ ॥

॥ ಪದಪಾಠಃ ॥

**ಹವೀಮಽಭಿಃ । ಹವತೇ । ಯಃ । ಹವಿಃಽಭಿಃ । ಅವ । ಸ್ತೋಮೇಭಿಃ । ರುದ್ರಂ । ದಿಷೀಯ ।**

**ಋಽದೂದರಃ । ಸುಽಹವಃ । ಮಾ । ನಃ । ಅಸ್ಯೈ । ಬಭ್ರುಃ । ಸುಽಶಿಪ್ರಃ । ರೀರಧತ್ । ಮನಾಯೈ ॥ ೫ ॥**

॥ ಸಾಯಣಭಾಷ್ಯಂ ॥

**ಯೋ ರುದ್ರೋ ಹವಿರ್ಭಿಶ್ಚರುಪುರೋಡಾಶಾದಿಭಿಃ ಸಹಿತೈರ್ಹವೀಮಭಿರಾಹ್ವಾನೈಃ ಸ್ತುತಿಲಕ್ಷಣೈರ್ಹವತೇ । ಆಹ್ವಯತೇ ಸ್ತೂಯತೇ ॥ ವ್ಯತ್ಯಯೇನ ಕರ್ಮಣಿ ಕರ್ತೃಪ್ರತ್ಯಯಃ । ಬಹುಲಂ ಛಂದಸೀತಿ ಹ್ವಯತೇಃ ಸಂಪ್ರಸಾರಣಂ ॥ ತಂ ರುದ್ರಂ ಸ್ತೋಮೇಭಿಃ ಸ್ತೋತ್ರೈರವದಿಷೀಯ ।**

ಅವಖಂಡಯಾಮಿ | ಪೃಥಕ್ಕರೋಮಿ | ಅಪಗತಕ್ರೋಧಂ ಕರೋಮೀತಿ ಯಾವತ್ || ದೋ ಅವಖಂಡನೇ | ವ್ಯತ್ಯಯೇನಾತ್ಮನೇಪದಂ | ಬಹುಲಂ ಛಂದಸೀತೀತ್ವಂ || ಉದೂದರಃ | ಉದೂದರೋ ಮೃದೂದರ ಇತಿ ಯಾಸ್ಕಃ | ನಿ. ೬. ೪. | ಸುಹವಃ ಶೋಭನಾಹ್ವಾನೋ ಬಭ್ರುರ್ಭರ್ತಾ ಸರ್ವಸ್ಯ ಬಭ್ರುವರ್ಣೋ ವಾ ಸುಶಿಪ್ರಃ ಶಿಪ್ರೇ ಹನೂ ನಾಸಿಕೇ ವಾ ಶೋಭನಶಿಪ್ರಃ | ಏವಂಗುಣವಿಶಿಷ್ಟಃ ಸ ರುದ್ರೋಽಸ್ಯೈ ಮನಾಯೈ ಹನ್ಮೀತಿ ಮನ್ಯಮಾನಾಯೈ ಬುದ್ಧಿರ್ಮನಾ | ತಸ್ಯೈ ನೋಽಸ್ಮಾನ್ಮಾ ರೀರಧತ್ | ಮಾ ವಶಂ ನೈಷೀತ್ || ರಧ ಹಿಂಸಾಸಂರಾದ್ಧ್ಯೋಃ | ಅಸ್ಮಾಣ್ಣ್ಯಂತಾಲ್ಲುಙಿ ಚಙಿ ರೂಪಂ | ರಧ್ಯತಿರ್ವಶಗಮನ ಇತಿ ಯಾಸ್ಕಃ ||

|| ಪ್ರತಿಪದಾರ್ಥ ||

**ಯಃ**—ಯಾವ ರುದ್ರನು **ಹವಿರ್ಭಿಃ**—ಚರುಪುರೋಡಾಶಾದಿಗಳಿಂದ ಕೂಡಿದುದೂ | **ಹವೀಮಭಿಃ**—ಸ್ತುತಿರೂಪವಾದುದೂ ಆದ ಆಹ್ವಾನಗಳಿಂದ | **ಹವತೇ**—ಸ್ತುತಿಸಲ್ಪಡುವನೋ | **ರುದ್ರಂ**—ಅಂತಹ ರುದ್ರನನ್ನು | **ಸ್ತೋಮೇಭಿಃ**—ಸ್ತೋತ್ರಗಳಿಂದ **ಅವ ದಿಷೀಯ** – ಕ್ರೋಧರಹಿತನನ್ನಾಗಿಯೂ, ಸಮಾಧಾನಚಿತ್ತನನ್ನಾಗಿಯೂ ಮಾಡುತ್ತೇನೆ **ಉತೂದರಃ**—ಮೃದುವಾದ ಉದರವುಳ್ಳವನೂ | **ಸುಹವಃ**—ಶ್ರೇಷ್ಠವಾದ ಆಹ್ವಾನವುಳ್ಳವನೂ , **ಬಭ್ರುಃ**—ಹೊಂಬಣ್ಣದಿಂದ ಕೂಡಿದವನೂ | **ಸುಶಿಪ್ರಃ**—ಉತ್ತಮವಾದ ಕೆನ್ನೆ ಅಥವಾ ನಾಸಿಕವುಳ್ಳವನೂ ಆದ ರುದ್ರನು | **ಅಸ್ಯೈ ಮನಾಯೈ**—ನಮಗೆ ಕೇಡನ್ನು ಬಯಸುವ ಈ ದುಷ್ಟಬುದ್ಧಿಗೆ | **ನಃ**—ನಮ್ಮನ್ನು , **ಮಾ ರೀರಧತ್**—ವಶವಾಗುವಂತೆ ಮಾಡದಿರಲಿ.

|| ಭಾವಾರ್ಥ ||

ಯಾವ ರುದ್ರನು ಚರುಪುರೋಡಾಶಾದಿಗಳಿಂದ ಕೂಡಿದುದೂ, ಸ್ತುತಿರೂಪವಾದುದೂ ಆದ ಆಹ್ವಾನಗಳಿಂದ ಸ್ತುತಿಸಲ್ಪಡುವನೋ ಅಂತಹ ರುದ್ರನನ್ನು ಸ್ತೋತ್ರಗಳಿಂದ ಸ್ತುತಿಸಿ ಕ್ರೋಧರಹಿತನನ್ನಾಗಿಯೂ, ಸಮಾಧಾನ ಚಿತ್ತನನ್ನಾಗಿಯೂ ಮಾಡುತ್ತೇನೆ. ಮೃದುವಾದ ಉದರವುಳ್ಳವನೂ, ಶ್ರೇಷ್ಠವಾದ ಆಹ್ವಾನವುಳ್ಳವನೂ, ಹೊಂಬಣ್ಣದಿಂದ ಕೂಡಿದ ರೂಪವುಳ್ಳವನೂ ಉತ್ತಮವಾದ ನಾಸಿಕವುಳ್ಳವನೂ ಆದ ರುದ್ರನು ನಮಗೆ ಕೇಡನ್ನು ಬಯಸುವ ಈ ದುಷ್ಟಬುದ್ಧಿಗೆ ನಮ್ಮನ್ನು ವಶವಾಗುವಂತೆ ಮಾಡದಿರಲಿ.

## English Translation.

May I pacify by my praises that Rudra, who is worshipped with invocations and oblations; and never may he who is soft-bellied, of a tawny hue, and handsome chin; who is reverently invoked; subject us not to that malevolent disposition (that purposes our destruction).

|| ವಿಶೇಷವಿಷಯಗಳು ||

ಈ ರುದ್ರದೇವನು **ಉದೂದರಃ ಸುಹವಃ ಬಭ್ರುಃ ಸುಶಿಪ್ರಃ—ಶೋಭನಾಹ್ವಾನಃ ಭರ್ತಾ ಸರ್ವಸ್ಯ ಬಭ್ರುವರ್ಣೋ ವಾ ಶಿಪ್ರೇ ಹನೂನಾಸಿಕೇ ವಾ ಸುಶಿಪ್ರಃ**—ಮೃದುವಾದ ಉದರವುಳ್ಳವನು ಎಂದರೆ ಘೋರವಾದ

ವೇಷಭೂಷಾದಿಗಳಿಂದ ಇರುವವನಾದರೂ ಹಿತವನ್ನು ಉಂಟುಮಾಡುವ ಅಭಿಪ್ರಾಯವನ್ನು ಹೊಂದಿರುವನು. ಈ ದೇವನ ಆಹ್ವಾನವು ಹಿತಕರವಾದುದರಿಂದ ಒಳ್ಳೆಯ ಆಹ್ವಾನವುಳ್ಳವನು, ಸರ್ವಕ್ಕೂ ಅಧಿಪತಿಯಾಗಿರುವವನು, ಅಥವಾ ಹೊಂಬಣ್ಣವುಳ್ಳ ಶರೀರದ ಕಾಂತಿಯುಳ್ಳವನು, ಅಂದವಾಗಿರುವ ಕೆನ್ನೆಗಳನ್ನೂ ಅಥವಾ ನಾಸಿಕವನ್ನೂ ಹೊಂದಿರುವವನು ಅಥವಾ ಈ ದೇವನನ್ನು ವರ್ಣಿಸಿ, ಯಜಮಾನನು— **ಹವಿರ್ಭಿಃ ಹವೀಮಭಿಃ ಹವತೇ ಸ್ತೋಮೇಭಿಃ ಅವದಿಷೀಯ, ಚರುಪುರೋಡಾಶಾದಿಭಿಃ ಸಹಿತೈಃ ಆಹ್ವಾನೈಃ ಸ್ತುತಿಲಕ್ಷಣೈಃ, ಸ್ತೂಯತೇ ಸ್ತೋತ್ರೈಃ ಅವಖಂಡಯಾಮಿ—ಪೃಥಕ್ಕರೋಮಿ** ಚರುಪುರೋಡಾಶವೇ ಮೊದಲಾದ ಹವಿಸ್ಸುಗಳ ಅರ್ಪಣೆಗಳಿಂದಲೂ, ಸ್ತುತಿರೂಪವಾದ ಆಹ್ವಾನಗಳಿಂದಲೂ (ಸ್ತುತಿಮಾಡಿ) ಸಂತೋಷಪಡಿಸಿ. ಈ ದೇವನಿಗೆ ಕೋಪವು ಉಂಟಾಗದಂತೆ ಆಚರಿಸುತ್ತೇವೆ ಎಂದೂ, **ಅಸ್ಮೈ ಮನಾಯೈ ನಃ ಮಾ ರೀರಧತ್ ಹನ್ಮೀತಿ ಮನ್ಯಮಾನಾ ಬುದ್ಧಿರ್ಮನಾ ತಸ್ಯೈ ಅಸ್ಮಾನ್ ಮಾ ವಶಂ ನೈಷೀತ್ ।** ಇರುವ ಇತರರನ್ನು ನಾಶಪಡಿಸಬೇಕೆಂಬ ಬುದ್ಧಿಯು ಯಜಮಾನರ ವಿಷಯದಲ್ಲಿ ಉಂಟಾಗದಿರಬೇಕೆಂದು ಪ್ರಾರ್ಥಿಸಿದೆ.

**ಋದೂದರಃ**—ಯಾಸ್ಕರು **ಋದೂದರಃ ಸೋಮೋ ಮೃದೂದರೋ ಮೃದುರುದರೇಷ್ವಿತಿ ವಾ** (ನಿ. ೬-೪) ಮೃದುವಾದ ಮಧ್ಯಭಾಗವುಳ್ಳ ಅಥವಾ ಮಧ್ಯಭಾಗದಲ್ಲಿ (ಒಳಗಡೆಯಲ್ಲಿ) ಮೃದುವಾಗಿರುವುದೆಂದೂ, ಸೋಮ (ಲತೆಯೆಂದೂ) ಶಿಪ್ರ ಶಬ್ದಕ್ಕೆ ಕೆನ್ನೆಗಳು ಅಥವಾ ನಾಸಿಕೆ ಎಂದೂ ಅರ್ಥವನ್ನು ವಿವರಿಸಿದ್ದಾರೆ.

**ಸುಶಿಪ್ರಃ**—ಯಾಸ್ಕರು **ಸುಶಿಪ್ರಮೇತೇನ ವ್ಯಾಖ್ಯಾತಂ । ಹನೂ ನಾಸಿಕೇ ವಾ, ಹನುಃ ಹಂತೇಃ । ನಾಸಿಕಾ ನಸತೇಃ** (ನಿ ೬-೧೭) ಶಿಪ್ರಶಬ್ದಕ್ಕೆ ಕೆನ್ನೆಗಳು ಅಥವಾ ನಾಸಿಕೇ ಎಂದು ಅರ್ಥವನ್ನು ವಿವರಿಸಿದ್ದಾರೆ.

ಬಭ್ರುಃ—ಯಾಸ್ಕರು ಬಭ್ರು ಶಬ್ದಾರ್ಥವನ್ನು ವಿವರಿಸುವಾಗ—

**ಯಾ ಓಷಧೀಃ ಪೂರ್ವಾ ಜಾತಾ ದೇವೇಭ್ಯಸ್ತ್ರಿಯುಗಂ ಪುರಾ ।**
**ಮನ್ಯೇ ನು ಬಭ್ರೂಣಾಮಹಂ ಶತಂ ಧಾಮಾನಿ ಸಪ್ತ ಚ ॥**

(ಋ. ಸಂ. ೧೦-೯೭-೧)

ಎಂಬ ಋಕ್ಕನ್ನು ಉದಹರಿಸಿ, **ಬಭ್ರೂಣಾಂ ಬಭ್ರುವರ್ಣಾನಾಂ** (ನಿ. ೯-೨೮) ಎಂದು ವಿವರಿಸಿದ್ದಾರೆ. ದುರ್ಗಾಚಾರ್ಯರು **ಓಷಧಯಃ ಸ್ವಭಾವತಃ ಪಚ್ಯಮಾನಾಃ ಸರ್ವಾ ಏವ ಬಭ್ರುವರ್ಣಾಃ ಕಪಿಲಾಃ ಸಂಪದ್ಯಂತೇ ।** ಎಂದು ಅರ್ಥವನ್ನು ಹೇಳಿದ್ದಾರೆ. ಮೂಲಿಕೆಗಳು ಪ್ರಾಯಿಕವಾಗಿ ಬಲಿಯುವ ಕಾಲದಲ್ಲಿ ಹೊಂಬಣ್ಣವನ್ನು ಧರಿಸುತ್ತವೆಯೆಂದು ಹೇಳಿದ್ದಾರೆ.



॥ ಸಂಹಿತಾಪಾಠಃ ॥

ಉನ್ಮಾ ಮಮಂದ ವೃಷಭೋ ಮರುತ್ವಾನ್ತ್ವಕ್ಷೀಯಸಾ ವಯಸಾ ನಾಧಮಾನಂ

ಘೃಣೀವ ಚ್ಛಾಯಾಮರಪಾ ಅಶೀಯಾ ವಿವಾಸೇಯಂ ರುದ್ರಸ್ಯ ಸುಮ್ನಂ ॥ ೬ ।

॥ ಪದಪಾಠಃ ॥

ಉತ್ । ಮಾ । ಮಮಂದ । ವೃಷಭಃ । ಮರುತ್ವಾನ್ । ತ್ವಕ್ಷೀಯಸಾ । ವಯಸಾ । ನಾಧಮಾನಂ । ಘೃಣಿಃಽಇವ । ಛಾಯಾಂ । ಅರಪಾಃ । ಅಶೀಯ । ಆ । ವಿವಾಸೇಯಂ । ರುದ್ರಸ್ಯ । ಸುಮ್ನಂ ॥ ೬ ॥

॥ ಸಾಯಣಭಾಷ್ಯಂ ॥

ವೃಷಭಃ ಕಾಮಾನಾಂ ವರ್ಷಿತಾ ಮರುತ್ವಾನ್ ಮರುದ್ಭಿಃ ಪುತ್ರೈರ್ಯುಕ್ತೋ ರುದ್ರೋ ನಾಧಮಾನಂ ಯಾಚಮಾನಂ ಮಾ ಮಾಂ ತ್ವಕ್ಷೀಯಸಾ ದೀಪ್ತೇನ ವಯಸಾನ್ನೇನೋನ್ಮಮಂದ । ಉತ್ಕರ್ಷೇಣ ತರ್ಪಯತು । ಅಪಿ ಚಾಹಂ ಘೃಣೀವ ಛಾಯಾಂ ಯಥಾ ಸೂರ್ಯಕಿರಣಸಂತಪ್ತಶ್ಛಾಯಾಂ ಪ್ರವಿಶತಿ ಏವಂ ರುದ್ರಸ್ಯ ಸುಮ್ನಂ ಸುಖಮರಪಾ ಅಪಾಪಃ ಸನ್ ಅಶೀಯ । ವ್ಯಾಪ್ನುಯಾಂ ।.. ತದರ್ಥಂ ತಂ ರುದ್ರಮಾವಿವಾಸೇಯಂ । ಪರಿಚರೇಯಂ ॥ ವಿವಾಸತಿಃ ಪರಿಚರಣಕರ್ಮಾ ॥

॥ ಪ್ರತಿಪದಾರ್ಥ ॥

**ವೃಷಭಃ**—ಇಷ್ಟಾರ್ಥವನ್ನು ಸುರಿಸುವವನೂ । **ಮರುತ್ವಾನ್**—ಮರುದ್ದೇವತೆಗಳಿಂದ ಕೂಡಿದವನೂ ಆದ ರುದ್ರನು । **ನಾಧಮಾನಂ**—ದೈನ್ಯದಿಂದ ಯಾಚಿಸುವ । **ಮಾ**—ನನ್ನನ್ನು । **ತ್ವಕ್ಷೀಯಸಾ**—ಪ್ರಕಾಶಮಾನವಾದ । **ವಯಸಾ**—ಅನ್ನದಿಂದ । **ಉತ್ ಮಮಂದ**—ಅತಿಶಯವಾಗಿ ತೃಪ್ತಿಪಡಿಸಲಿ । (ನಾನೂ ಸಹ) **ಘೃಣೀವ**—ಸೂರ್ಯನ ತಾಪದಿಂದ ತಪ್ತನಾದವನು । **ಛಾಯಾಂ**—ನೆರಳನ್ನು ಆಶ್ರಯಿಸುವಂತೆ । **ರುದ್ರಸ್ಯ**—ರುದ್ರನಿಂದ ಲಭಿಸತಕ್ಕ । **ಸುಮ್ನಂ**—ಸುಖವನ್ನು । **ಅರಪಾಃ**—ಪಾಪರಹಿತನಾಗಿ **ಅಶೀಯ**—ಪೂರ್ಣವಾಗಿ ಪಡೆಯುವಂತಾಗಲಿ.

॥ ಭಾವಾರ್ಥ ॥

ಇಷ್ಟಾರ್ಥವನ್ನು ಸುರಿಸುವವನೂ, ಮರುದ್ದೇವತೆಗಳಿಂದ ಕೂಡಿದವನೂ ಆದ ರುದ್ರನು ದೈನ್ಯದಿಂದ ಯಾಚಿಸುವ ನನ್ನನ್ನು ಪ್ರಕಾಶಮಾನವಾದ ಅನ್ನದಿಂದ ಅತಿಶಯವಾಗಿ ತೃಪ್ತಿಪಡಿಸಲಿ. ನಾನೂ ಸಹ ಪಾಪರಹಿತನಾಗಿ ಸೂರ್ಯನ ತಾಪದಿಂದ ತೃಪ್ತನಾದವನು ನೆರಳನ್ನು ಆಶ್ರಯಿಸುವಂತೆ ರುದ್ರನಿಂದ ಲಭಿಸತಕ್ಕ ಸುಖವನ್ನು ಪೂರ್ಣವಾಗಿ ಪಡೆಯುವಂತಾಗಲಿ.

## English Translation.

May the showerer of benifits, the lord of Maruts, gratify me his suppliant with invigorating food: may I, free from sin, so propitiate Rudra. that I may attain to his felicity, as a man, distressed by heat, (finds relief) in the shade.

॥ ವಿಶೇಷವಿಷಯಗಳು ॥

**ವೃಷಭಃ—ಕಾಮಾನಾಂ ವರ್ಷಿತಾ।** ಆಶ್ರಿತರಿಗೆ ಇಷ್ಟಗಳನ್ನು ಕೊಡುವವನು ಎಂದು ರುದ್ರದೇವನ ಗುಣವನ್ನು ವರ್ಣಿಸಿದೆ. ಈ ರುದ್ರನು **ಮರುತ್ವಾನ್** ತನ್ನ ಪುತ್ರರಾದ ಮರುದ್ದೇವತೆಗಳಿಂದ ಯುಕ್ತನಾಗಿ ಯಜಮಾನನ ಪ್ರಾರ್ಥನೆಯನ್ನು ಕಾಂತಿಯುಕ್ತವಾದ ಅನ್ನವನ್ನು ಅನುಗ್ರಹಿಸುವುದರ ಮೂಲಕವಾಗಿ ನೆರವೇರಿಸಿ, ತೃಪ್ತಿಯನ್ನು ಉಂಟುಮಾಡಲಿ ಎಂದೂ, **ಘೃಣೀವ ಛಾಯಾಂ ರುದ್ರಸ್ಯ ಸುಮ್ನಂ ಅರಪಾ ಅಶೀಯ—ಯಥಾ ಸೂರ್ಯಕಿರಣಸಂತಪ್ತಃ ಛಾಯಾಂ ಪ್ರವಿಶತಿ ಏವಂ ರುದ್ರಸ್ಯ ಸುಖಂ ಅಪಾಪಃ ವ್ಯಾಪ್ನುಯಾಂ।** ಸೂರ್ಯನ ತೀಕ್ಷ್ಣವಾದ ಬಿಸಲಿನಿಂದ ಸಂತಪ್ತನಾದವನು ನೆರಳನ್ನು ಆಶ್ರಯಿಸುವ ಹಾಗೆ ರುದ್ರನಿಂದ ಅನುಗೃಹೀತವಾದ ಸುಖವನ್ನು ಪಾಪಗಳಿಲ್ಲದಿರುವ ಯಜಮಾನನು ಹೊಂದುವನು ಎಂದು ಯಜಮಾನನ ಆಶಂಸನೆಯು ವರ್ಣಿತವಾಗಿದೆ.

**ಅರಪಾಃ—ಅಪಾಪಃ।** ರಪೋರಿಪ್ರಮಿತಿ ಪಾಪನಾಮನೀ ಭವತಃ (ನಿ. ೪-೨೧) ರಪಃ ರಿಪ್ರ ಎಂಬ ಎರಡು ಪದಗಳೂ ಪಾಪವಾಚಕಗಳಾಗಿವೆ ಎಂದು ಯಾಸ್ಕರು ವಿವರಿಸಿದ್ದಾರೆ. ಇಲ್ಲಿ ಅರಪಾಃ ಎಂಬ ಪದಕ್ಕೆ ಪಾಪವಿಲ್ಲದವನೆಂದು ಅರ್ಥವನ್ನು ಹೇಳಿದೆ.



॥ ಸಂಹಿತಾಪಾಠಃ ॥

ಕ್ವ೨ ಸ್ಯ ತೇ ರುದ್ರ ಮೃಳಯಾಕುರ್ಹಸ್ತೋ ಯೋ ಅಸ್ತಿ ಭೇಷಜೋ ಜಲಾಷಃ।
ಅಪಭರ್ತಾ ರಪಸೋ ದೈವ್ಯಸ್ಯಾಭೀ ನು ಮಾ ವೃಷಭ ಚಕ್ಷಮೀಥಾಃ ॥ ೭ ॥

॥ ಪದಪಾಠಃ ॥

ಕ್ವ । ಸ್ಯಃ । ತೇ । ರುದ್ರ । ಮೃಳಯಾಕುಃ । ಹಸ್ತಃ । ಯಃ । ಅಸ್ತಿ । ಭೇಷಜಃ । ಜಲಾಷಃ ।
ಅಪಽಭರ್ತಾ । ರಪಸಃ । ದೈವ್ಯಸ್ಯ । ಅಭಿ । ನು । ಮಾ । ವೃಷಭ । ಚಕ್ಷಮೀಥಾಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ರುದ್ರ ತೇ ತವ ಮೃಳಯಾಕುಃ ಸುಖಯಿತಾ ಸ್ಯಃ ಸ ಹಸ್ತಃ ಕ್ವ ಕುತ್ರ ವರ್ತತೇ। ಯೋ ಹಸ್ತೋ ಭೇಷಜೋ ಭೈಷಜ್ಯಕೃತ್ ಜಲಾಷಃ ಸರ್ವೇಷಾಂ ಸುಖಕರೋಽಸ್ತಿ। ಭವತಿ। ಸ ಹಸ್ತೋ ವಿದ್ಯತ ಏವ। ತೇನ ಹಸ್ತೇನ ಮಾಂ ರಕ್ಷೇತಿ ಭಾವಃ। ಅಪಿ ಚ ಹೇ ವೃಷಭ ಕಾಮಾನಾಂ ವರ್ಷಿತಃ ದೈವ್ಯಸ್ಯ ದೇವಕೃತಸ್ಯ ರಪಸಃ ಪಾಪಸ್ಯಾಪಭರ್ತಾಽಪಹರ್ತಾ ವಿನಾಶಯಿತಾ ಭೂತ್ವಾ ಕೃತಾಪರಾಧಂ ಮಾಂ ನು ಕ್ಷಿಪ್ರಮಭಿಚಕ್ಷಮೀಥಾಃ। ಅಭಿಕ್ಷಮಸ್ವ। ಕ್ಷಮೂಷ್ ಸಹನೇ। ಲಙಿ ಛಾಂದಸಃ ಶಪಃ ಶ್ಲುಃ। ಬಹುಲಂ ಛಂದಸೀತೀಡಾಗಮಃ ॥

॥ ಪ್ರತಿಪದಾರ್ಥ ॥

**ರುದ್ರ**—ಎಲೈ ರುದ್ರನೇ, **ಯಃ**—ಯಾವ ಹಸ್ತವು । **ಭೇಷಜಃ**—ರೋಗವನ್ನು ನಾಶಮಾಡತಕ್ಕದ್ದೂ । **ಜಲಾಷಃ**—ಸಂತೋಷದಾಯಕವಾದುದೂ । **ಅಸ್ತಿ**—ಆಗಿರುತ್ತದೆಯೋ ಅಂತಹ । **ತೇ**—ನಿನ್ನ । **ಮೃಳಯಾಕುಃ**—ಸುಖಕರಿಯಾದುದೂ **ಸ್ಯಃ**—ಪ್ರಸಿದ್ಧವಾದುದೂ ಆದ **ಹಸ್ತಃ**—ಹಸ್ತವು । **ಕ್ವ**—ಎಲ್ಲಿ? । **ವೃಷಭ**—ಕಾಮವರ್ಷಕನಾದ ಎಲೈ ರುದ್ರನೇ । **ದೈವ್ಯಸ್ಯ**—ದೇವಕೃತವಾದ । **ರಪಸಃ**—ಪಾಪವನ್ನೂ ಸಹ । **ಅಪಭರ್ತಾ**—ನಾಶಮಾಡುವ ಶಕ್ತಿಯುಳ್ಳ ನೀನು । **ಮಾ**—ಅಪರಾಧಿಯಾದ ನನ್ನನ್ನು । **ನು**—ಕ್ಷಿಪ್ರವಾಗಿ । **ಅಭಿ ಚಕ್ಷಮೀಥಾಃ**—ಪೂರ್ಣವಾಗಿ ಕ್ಷಮಿಸು.

॥ ಭಾವಾರ್ಥ ॥

ಎಲೈ ರುದ್ರನೇ, ಯಾವ ಹಸ್ತವು ರೋಗವನ್ನು ನಾಶಮಾಡತಕ್ಕದ್ದೂ, ಸಂತೋಷದಾಯಕವಾದುದೂ ಆಗಿರುತ್ತದೆಯೋ ಅಂತಹ ನಿನ್ನ ಸುಖಕಾರಿಯಾದುದೂ, ಪ್ರಸಿದ್ಧವಾದುದೂ ಆದ ಹಸ್ತವು ಎಲ್ಲಿ? ಕಾಮವರ್ಷಕನಾದ ರುದ್ರನೇ, ದೇವತೆಗಳು ಮಾಡಿದ ಪಾಪವನ್ನೂ ನಾಶಮಾಡಿ ಕ್ಷಮಿಸುವ ಶಕ್ತಿಯುಳ್ಳ ನೀನು, ಅಪರಾಧಿಯಾದ ಈ ನನ್ನನ್ನು ಕ್ಷಿಪ್ರವಾಗಿಯೂ ಪೂರ್ಣವಾಗಿಯೂ ಕ್ಷಮಿಸು.

English Translation.

Where, Rudra, is your joy-dispensing hand, which is the healer and delighter (of all): showerer (of benifits), you are the dispeller of the sins of the gods, quickly have compassion upon me.

॥ ವಿಶೇಷವಿಷಯಗಳು ॥

**ರುದ್ರ ತೇ ಮೃಳಯಾಕುಃ ಹಸ್ತಃ ಕ್ವ**—ಸುಖಕರವಾದ ಹಸ್ತವು **ಭೇಷಜಃ ಜಲಾಷಃ ಭೈಷಜ್ಯಕೃತ್ ಸರ್ವೇಷಾಂ ಸುಖಕರಃ** ಎಲ್ಲಿ ಇದೆ ಎಂಬ ಪ್ರಶ್ನೆಯನ್ನು ಕೇಳುವುದರಿಂದ ಹಸ್ತದಲ್ಲಿರುವ ಅಸಾಧಾರಣ ಧರ್ಮವು ಉಕ್ತವಾಗಿ, ಈ ಹಸ್ತವು ಸರ್ವರ ರೋಗವನ್ನು ನಾಶಮಾಡುವುದಾಗಿಯೂ, ಸರ್ವರಿಗೂ ಸುಖಕರವಾಗಿಯೂ ಇರುವು ದೆಂದೂ, **ರುದ್ರನು ತೇನ ಹಸ್ತೇನ ಮಾಂ ರಕ್ಷ** ಆ ಹಸ್ತದಿಂದ ಯಜಮಾನರನ್ನು ರಕ್ಷಿಸಲಿ ಎಂದೂ ಆಶಿಸಿದೆ.

**ದೈವ್ಯಸ್ಯ ರಪಸಃ ಅಪಭರ್ತಾ ಮಾ ಅಭಿಚಕ್ಷಮೀಥಾಃ—ದೇವಕೃತಸ್ಯ ಪಾಪಸ್ಯ ವಿನಾಶಯಿತಾ ಭೂತ್ವಾ ಕೃತಾಪರಾಧಂ ಮಾಂ ಅಭಿಕ್ಷಮಸ್ವ** । ದೇವತೆಗಳ ವಿಷಯದಲ್ಲಿ ವಿಪರೀತವಾದ ವರ್ತನೆಯಿಂದ ಯಜಮಾನರಿಗೆ ಪ್ರಾಪ್ತವಾಗಿರುವ ಪಾಪಗಳನ್ನು ರುದ್ರನು ನಾಶಗೊಳಿಸಿ, ಅಪರಾಧವನ್ನು ಆಚರಿಸಿರುವ ಯಜಮಾನನಾದ ನನ್ನನ್ನು ರುದ್ರನು ಮನ್ನಿಸಲಿ ಎಂದು ವಿವೃತವಾಗಿದೆ.

**ಜಲಾಷಃ—ಸರ್ವೇಷಾಂ ಸುಖಕರಃ** । ಜಲಾಷ ಎಂಬ ಪದವು ಯಾಸ್ಕರಿಂದ (ನಿ ೨–೨೪) ಉದಕ ನಾಮಗಳಲ್ಲಿ ಉಕ್ತವಾಗಿದೆ. ಇಲ್ಲಿ ಸುಖಕರವೆಂಬ ಅರ್ಥವನ್ನು ಹೇಳಿದೆ.



॥ ಸಂಹಿತಾಪಾಠಃ ॥

ಪ್ರ ಬಭ್ರವೇ ವೃಷಭಾಯ ಶ್ವಿತೀಚೇ ಮಹೋ ಮಹೀಂ ಸುಷ್ಟುತಿಮೀರಯಾಮಿ ।
ನಮಸ್ಯಾ ಕಲ್ಮಲೀಕಿನಂ ನಮೋಭಿರ್ಗೃಣೀಮಸಿ ತ್ವೇಷಂ ರುದ್ರಸ್ಯ ನಾಮ ॥ ೮ ॥

॥ ಪದಪಾಠಃ ॥

ಪ್ರ । ಬಭ್ರವೇ । ವೃಷಭಾಯ । ಶ್ವಿತೀಚೇ । ಮಹಃ । ಮಹೀಂ । ಸುಽಸ್ತುತಿಂ । ಈರಯಾಮಿ ।
ನಮಸ್ಯ । ಕಲ್ಮಲೀಕಿನಂ । ನಮಃಽಭಿಃ । ಗೃಣೀಮಸಿ । ತ್ವೇಷಂ । ರುದ್ರಸ್ಯ । ನಾಮ ॥ ೮ ॥

॥ ಸಾಯಣಭಾಷ್ಯಂ ॥

ರುದ್ರದೇವತ್ಯೇ ಪಶೌ ವಪಾಪುರೋಡಾಶಹವಿಷಾಂ ಕ್ರಮೇಣ ಪ್ರ ಬಭ್ರವ ಇತ್ಯಾದ್ಯಾಸ್ತಿಸ್ರೋ ಯಾಜ್ಯಾಃ । ಪ್ರ ಬಭ್ರವೇ ವೃಷಭಾಯ ಶ್ವಿತೀಚ ಇತಿ ತಿಸ್ರ ಆ ಪಶ್ಚಾತಾನ್ನಾಸತ್ಯಾ ಪುರಸ್ತಾತ್ । ಆ. ૩-೮. । ಇತಿ ॥

ಬಭ್ರವೇ ವಿಶ್ವಸ್ಯ ಭರ್ತ್ರೇ ಬಭ್ರುವರ್ಣಾಯ ವಾ ವೃಷಭಾಯ ಕಾಮಾನಾಂ ವರ್ಷಿತ್ರೇ ತದ್ವತ್ ಪ್ರಸಹ್ಯಕಾರಿಣೇ ವಾ ಶ್ವಿತೀಚೇ ಶ್ವೈತ್ಯಮಂಚತೇ ॥ ಶ್ವಿತಾ ವರ್ಣೇ । ಔಣಾದಿಕ ಇನ್ಪ್ರತ್ಯಯಃ । ಶ್ವಿತಿಮಂಚತೀತ್ಯಂಚತೇಋರ್ತ್ವಿಗಿತ್ಯಾದಿನಾ ಕ್ವಿನ್ । ಚತುರ್ಥ್ಯೇಕವಚನೇಽಚ ಇತ್ಯಕಾರಲೋಪೇ ಚಾವಿತಿ ದೀರ್ಘತ್ವಂ । ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ ॥ ಏವಂಗುಣವಿಶಿಷ್ಟಾಯ ರುದ್ರಾಯ ಮಹೋ ಮಹೀಂ ಮಹತೋಽಪಿ ಮಹತೀಂ ಸುಷ್ಟುತಿಂ ಶೋಭನಸ್ತುತಿಂ ಪ್ರೇರಯಾಮಿ । ಪ್ರಕರ್ಷೇಣೋಚ್ಚಾರಯಾಮಿ । ಹೇ ಸ್ತೋತಃ ಕಲ್ಮಲೀಕಿನಂ । ಜ್ವಲತೋ ನಾಮಧೇಯಮೇತತ್। ನೈಘಂ. ೧-೧೭। ಜ್ವಲಂತಂ । ಕಲಯತ್ಯಪಗಮಯತಿ ಮಲಮಿತಿ ಕಲ್ಮಲೀಕಂ ತೇಜಃ । ತದ್ವಂತಂ ರುದ್ರಂ ನಮೋಭಿರ್ನಮಸ್ಕಾರೈರ್ಹವಿರ್ಭಿರ್ವಾ ನಮಸ್ಯ । ಪೂಜಯ । ವಯಂ ಚ ರುದ್ರಸ್ಯ ಮಹಾದೇವಸ್ಯ ತ್ವೇಷಂ ದೀಪ್ತಂ ನಾಮ ಗೃಣೀಮಸಿ । ಗೃಣೀಮಃ ಸಂಕೀರ್ತಯಾಮಃ ॥ ಗೄ ಶಬ್ದೇ । ಕ್ರ್ಯಾದಿಕಃ । ಇದಂತೋ ಮಸಿಃ । ಪ್ವಾದೀನಾಂ ಹ್ರಸ್ವಃ ॥

॥ ಪ್ರತಿಪದಾರ್ಥ ॥

**ಬಭ್ರವೇ**—ಬಭ್ರುವರ್ಣವುಳ್ಳವನೂ । **ವೃಷಭಾಯ**—ಕಾಮವರ್ಷಕನೂ । **ಶ್ವಿತೀಚೇ**—ಶ್ವೇತವರ್ಣದ ರೂಪವುಳ್ಳವನೂ ಆದ ರುದ್ರನಿಗೆ । **ಮಹೋ ಮಹೀಂ**—ಉತ್ತಮವಾದುದಕ್ಕಿಂತಲೂ ಅತ್ಯುತ್ತಮವಾದ । **ಸುಷ್ಟುತಿಂ**—ಶ್ರೇಷ್ಠವಾದ ಸ್ತುತಿಯನ್ನು । **ಪ್ರ ಈರಯಾಮಿ**—ಭಕ್ತಿಯಿಂದ ಅರ್ಪಿಸುತ್ತೇನೆ । **ಕಲ್ಮಲೀಕಿನಂ**—ಮಲವನ್ನು ನಾಶಮಾಡುವ ತೇಜಸ್ಸಿನಿಂದ ಕೂಡಿದ ರುದ್ರನನ್ನು । **ನಮೋಭಿಃ**—ನಮಸ್ಕಾರಗಳಿಂದ ಅಥವಾ ಹವಿಸ್ಸುಗಳಿಂದ । **ನಮಸ್ಯ**—ಪೂಜಿಸು ।(ನಾವೂ ಸಹ) **ರುದ್ರಸ್ಯ**—ರುದ್ರನ । **ತ್ವೇಷಂ**—ಕಾಂತಿಯುತವಾದ ಪ್ರಭಾವವನ್ನು । **ಗೃಣೀಮಸಿ ನಾಮ**—ಖಂಡಿತವಾಗಿಯೂ ಸ್ತುತಿಸುತ್ತೇವೆ.

॥ ಭಾವಾರ್ಥ ॥

ಬಭ್ರುವರ್ಣವುಳ್ಳವನೂ, ಕಾಮವರ್ಷಕನೂ. ಶ್ವೇತವರ್ಣದ ರೂಪವುಳ್ಳವನೂ ಆದ ರುದ್ರನಿಗೆ ಉತ್ತಮ ವಾದುವಕ್ಕಿಂತಲೂ ಅತ್ಯುತ್ತಮವಾದ ಸ್ತುತಿಯನ್ನು ಅರ್ಪಿಸುತ್ತೇನೆ. ಮಲವನ್ನು ನಾಶಮಾಡುವ ತೇಜಸ್ಸಿನಿಂದ ಕೂಡಿದ ರುದ್ರನನ್ನು ಹವಿಸ್ಸುಗಳ ಅರ್ಪಣೆಯಿಂದ ಪೂಜಿಸು. ನಾವೂ ಸಹ ರುದ್ರನ ಕಾಂತಿಯುತವಾದ ಪ್ರಭಾವ ವನ್ನು ಸ್ತುತಿಸುತ್ತೇವೆ

English Translation.

I address infinite and earnest praise to the showerer (of benifits), the cherisher (of all), the white-complexioned: adore the consumer (of sin), with prostrations: we gloriify the illustrious name of Rudra.

॥ ವಿಶೇಷವಿಷಯಗಳು ॥

ರುದ್ರದೇವತಾಸಂಬಂಧವಾದ ಪಶುಯಾಗದಲ್ಲಿ ವಪಾ, ಪುರೋಡಾಶ, ಹವಿಸ್ಸು ಇವುಗಳನ್ನು ಹೋಮ ಮಾಡುವಾಗ ಈ ಸೂಕ್ತದ **ಪ್ರ ಬಭ್ರವೇ** ಎಂಬ ಋಕ್ಕನ್ನೂ ಇದರ ಮುಂದಿನ ಎರಡು ಋಕ್ಕುಗಳನ್ನೂ ಕ್ರಮವಾಗಿ ಯಾಜ್ಯಾಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ-**ಪ್ರ ಬಭ್ರವೇ ವೃಷಭಾಯ ಶ್ವಿತೀಚೆ ಇತಿ ತಿಸ್ರ ಆ ಪಶ್ವಾತಾನ್ನಾಸಕ್ಯಾ ಪುರಸ್ತಾತ್** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೩-೮).

**ಬಭ್ರವೇ-ವಿಶ್ವಸ್ಯ ಭರ್ತ್ರೇ ಬಭ್ರುವರ್ಣಾಯ ವಾ** । ರುದ್ರನು ಜಗತ್ತಿಗೆಲ್ಲಕ್ಕೂ ಅಧಿಪತಿಯಾಗಿರುವನು ಅಥವಾ ಬಭ್ರುವರ್ಣವುಳ್ಳವನಾಗಿರುವನು, **ವೃಷಭಾಯ ಕಾಮಾನಾಂ ವರ್ಷಿತ್ರೇ ತದ್ವತ್ಪ್ರಸಹ್ಯಕಾರಿಣೇ ವಾ** । ತನ್ನನ್ನು ಸೇವಿಸಿದವರ ಅಭಿಲಾಷೆಗಳನ್ನು ಈಡೇರಿಸುವವನು ಅಥವಾ ಗೂಳಿಯ ಹಾಗೆ ಬಲಾತ್ಕರಿಸಿ ಕಾರ್ಯವನ್ನು ಆಚರಿಸುವವನು, **ಶ್ವಿತೀಚೇ—ಶ್ವೈತ್ಯಮಂಚತೇ** ಶುಭ್ರವಾದ ತೇಜಸ್ಸನ್ನು ಹೊಂದಿರುವನು ಎಂದು ಈ ರುದ್ರನನ್ನು ವರ್ಣಿಸಿ, ಈ ಗುಣಗಳಿಂದ ಕೂಡಿರುವ ರುದ್ರನಿಗಾಗಿ **ಮಹೋ ಮಹೀಂ ಸುಷ್ಟುತಿಂ ಈರಯಾಮಿ** ಮಹತ್ವದಿಂದ ಪೂರಿತವಾದ ಸ್ತುತಿಯನ್ನು ಬಹಳವಾಗಿ ಉಚ್ಚರಿಸುವೆನು ಎಂದು ಮಂತ್ರದ್ರಷ್ಟೃವಾದ ಋಷಿಯು ಹೇಳಿರುವನು.

**ಕಲ್ಮಲೀಕಿನಂ ರುದ್ರಂ ನಮೋಭಿಃ ನಮಸ್ಯ—ಜ್ವಲಂತಂ ರುದ್ರಂ ನಮಸ್ಕಾರೈಃ ಹವಿರ್ಭಿರ್ವಾ ಪೂಜಯ**—ಸ್ತೋತೃವಾದ ಯಜಮಾನನನ್ನೂ ಋತ್ವಿಜನನ್ನೂ ಸಂಬೋಧಿಸಿ, ತೇಜಸ್ಸುಗಳಿಂದ ಪ್ರಕಾಶಿಸುತ್ತಿರುವ ರುದ್ರನನ್ನು ಹವಿಸ್ಸುಗಳಿಂದಲೂ ನಮಸ್ಕಾರಗಳಿಂದಲೂ ಪೂಜಿಸಿರಿ ಎಂದೂ ಉಕ್ತವಾಗಿದೆ.

**ರುದ್ರಸ್ಯ ತ್ವೇಷಂ ನಾಮ ಗೃಣೀಮಸಿ—ಮಹಾದೇವಸ್ಯ ದೀಪ್ತಂ ನಾಮ ಸಂಕೀರ್ತಯಾಮಃ** । ದೇವತೆಗಳೆಲ್ಲರಿಗಿಂತಲೂ ಮಹತ್ವದಿಂದ ಪೂರಿತನಾಗಿರುವ ಈ ಮಹಾದೇವನ ಕಾಂತಿಯಿಂದ ಬೆಳಗುತ್ತಿರುವ ನಾಮವ (ಹೆಸರ) ನ್ನು ಮಂತ್ರದ್ರಷ್ಟೃಗಳಾದ ನಾವು ಪಠಿಸುತ್ತಿರುತ್ತೇವೆ ಎಂದು ವಿವೃತವಾಗಿದೆ.

**ಕಲ್ಮಲೀಕಿನಂ—ಕಲಯತಿ ಅಪಗಮಯತಿ ಮಲಮಿತಿ ಕಲ್ಮಲೀಕಂ ತೇಜಃ ತದ್ವಂತಂ** । ಯಾಸ್ಕರು—ಕಲ್ಮಲೀಕಿನಂ ಎಂಬ ಪದವನ್ನು ಜ್ವಲತೋ ನಾಮಧೇಯಾನಿ ಎಂದು ಜ್ವಲತಃ ನಾಮಗಳಲ್ಲಿ

(ಸಿ. ೨-೨೮) ಪಾಠವನಾಡಿದ್ದಾರೆ. ಸಾಯಣರು ಮಲಂ ಎಂದರೆ ಪಾಪವನ್ನು ನಾಶಗೊಳಿಸುವುದು ಎಂದು ಅರ್ಥವನ್ನು ಹೇಳಿ ಕಲ್ಮಲೀಕ ಶಬ್ದಕ್ಕೆ ತೇಜಸ್ಸು ಎಂದು ಅರ್ಥವನ್ನು ವಿವರಿಸಿ, ಕಲ್ಮಲೀಕಂ ಎಂದರೆ ತೇಜಶ್ಶಾಲಿಯು ಎಂದು ವರ್ಣಿಸಿದ್ದಾರೆ.



॥ ಸಂಹಿತಾಪಾಠಃ ॥

ಸ್ಥಿರೇಭಿರಂಗೈಃ ಪುರುರೂಪ ಉಗ್ರೋ ಬಭ್ರುಃ ಶುಕ್ರೇಭಿಃ ಪಿಪಿಶೇ ಹಿರಣ್ಯೈಃ ।
ಈಶಾನಾದಸ್ಯ ಭುವನಸ್ಯ ಭೂರೇರ್ನವಾ ಉ ಯೋಷದ್ರುದ್ರಾದಸುರ್ಯಂ ॥ ೯ ॥

॥ ಪದಪಾಠಃ ॥

ಸ್ಥಿರೇಭಿಃ । ಅಂಗೈಃ । ಪುರುಽರೂಪಃ । ಉಗ್ರಃ । ಬಭ್ರುಃ । ಶುಕ್ರೇಭಿಃ । ಪಿಪಿಶೇ । ಹಿರಣ್ಯೈಃ ।
ಈಶಾನಾತ್ । ಅಸ್ಯ । ಭುವನಸ್ಯ । ಭೂರೇಃ । ನ । ವೈ । ಊಂ ಇತಿ । ಯೋಷತ್ । ರುದ್ರಾತ್ ।
ಅಸುರ್ಯಂ ॥ ೯ ॥

॥ ಸಾಯಣಭಾಷ್ಯಂ ॥

**ಸ್ಥಿರೇಭಿಃ ಸ್ಥಿರೈರ್ದೃಢೈರಂಗೈರವಯವೈರ್ಯುಕ್ತಃ ಪುರುರೂಪೋಽಷ್ಟಮೂರ್ತ್ಯಾತ್ಮಕೈರ್ಬಹುಭೀ ರೂಪೈರುಪೇತ ಉಗ್ರ ಉದ್ಗೂರ್ಣಸ್ತೇಜಸ್ವೀ ಬಭ್ರುರ್ಭರ್ತಾ ಬಭ್ರುವರ್ಣೋ ವಾ ರುದ್ರಃ ಶುಕ್ರೇಭಿರ್ದೀಪ್ತೈರ್ಹಿರಣ್ಯೈರ್ಹಿರಣ್ಮಯೈರ್ಹಿತರಮಣೀಯೈರ್ವಾಲಂಕಾರೈಃ ಪಿಪಿಶೇ । ದೀಪ್ಯತೇ ॥ ಪಿಶ ಅವಯವೇ । ಕರ್ಮಣಿ ಲಿಟ್ ॥ ಈಶಾನಾದೀಶ್ವರಾದಸ್ಯ ಭುವನಸ್ಯ ಭೂತಜಾತಸ್ಯ ಭೂರೇರ್ಭರ್ತೋ ರುದ್ರಾದಸುರ್ಯಂ ॥ ಅಸು ಕ್ಷೇಪಣೇ । ಅಸೇರುರನ್ । ಅಸರಃ ಕ್ಷೇಪ್ತಾ । ತತ್ರ ಸಾಧುಃ ॥ ಅಸುರ್ಯಂ ಬಲಂ ನ ವಾ ಉ ಯೋಷತ್ । ನೈವ ಪೃಥಗ್ಭವತಿ ॥ ಯೌತೇರ್ಲೇಟ್ಯಡಾಗಮಃ । ಸಿಬ್ಬಹುಲಂ ಲೇಟೀತಿ ಸಿಪ್ ॥**

॥ ಪ್ರತಿಪದಾರ್ಥ ॥

**ಸ್ಥಿರೇಭಿಃ**—ದೃಢವಾದ । **ಅಂಗೈಃ**—ಅವಯವಗಳಿಂದ ಯುಕ್ತನಾದವನೂ । **ಪುರುರೂಪಃ**—ನಾನಾ ರೂಪಗಳಿಂದ ಕೂಡಿದವನೂ । **ಉಗ್ರಃ**—ಪ್ರಕಟಿತವಾದ ತೇಜಸ್ಸುಳ್ಳವನೂ । **ಬಭ್ರುಃ**—ಬಭ್ರುವರ್ಣವುಳ್ಳವನೂ ಆದ ರುದ್ರನು । **ಶುಕ್ರೇಭಿಃ**—ಪ್ರಕಾಶಮಾನವಾದವೂ । **ಹಿರಣ್ಯೈಃ**—ಹಿರಣ್ಮಯವಾದವೂ ಆದ ಅಲಂಕಾರಗಳಿಂದ । **ಪಿಪಿಶೇ**—ಬೆಳಗುತ್ತಾನೆ । **ಈಶಾನಾತ್**—ಪ್ರಭುವಾದವನೂ । **ಅಸ್ಯ ಭುವನಸ್ಯ**—ಈ ಲೋಕಕ್ಕೆಲ್ಲಾ । **ಭೂರೇಃ**—ಭರ್ತೃವಾದವನೂ ಆದ । **ರುದ್ರಾತ್**—ರುದ್ರನಿಂದ । **ಅಸುರ್ಯಂ**—ವಿಶ್ವಶಕ್ತಿಯು । **ನ ವಾ ಉ ಯೋಷತ್**—ಬೇರೆಯಾಗುವುದೇ ಇಲ್ಲ.

॥ ಭಾವಾರ್ಥ ॥

ಸ್ಥಿರವಾದ ಅವಯವಗಳಿಂದ ಯುಕ್ತನಾದವನೂ, ನಾನಾರೂಪಗಳಿಂದ ಕೂಡಿದವನೂ, ಪ್ರಕಟಿತವಾದ ತೇಜಸ್ಸುಳ್ಳವನೂ, ಬಭ್ರುವರ್ಣವುಳ್ಳವನೂ ಆದ ರುದ್ರನು ಪ್ರಕಾಶಮಾನವಾದವೂ, ಹಿರಣ್ಮಯವಾದವೂ ಆದ ಅಲಂಕಾರಗಳಿಂದ ಬೆಳಗುತ್ತಾನೆ. ಪ್ರಭುವಾದವನೂ, ಈ ಲೋಕವನ್ನೆಲ್ಲಾ ಧರಿಸಿರುವವನೂ ಆದ ರುದ್ರನಿಂದ ವಿಶ್ವಶಕ್ತಿಯು ಬೇರೆಯಾಗುವುದೇ ಇಲ್ಲ.

English Translation.

(Firm) with strong limbs, assuming many forms, fierce, and tawny-coloured, he shines with brilliant golden ornaments : vigour is inseparable from Rudra, the supreme ruler and lord of this world.

॥ ವಿಶೇಷವಿಷಯಗಳು ॥

ರುದ್ರನು **ಸ್ಥಿರೇಭಿರಂಗೈಃ—ದೃಢೈರವಯವೈರ್ಯುಕ್ತಃ** । ಶಕ್ತಿಯಿಂದಲೂ ತೇಜಸ್ಸುಗಳಿಂದಲೂ ಕೂಡಿರುವವೂ ಬಲವುಳ್ಳವುಗಳೂ ಆದ ಅವಯವಗಳಿಂದ ಕೂಡಿದವನು, **ಪುರುರೂಪಃ— ಅಷ್ಟಮೂರ್ತ್ಯಾತ್ಮಕೈಃ ಬಹುಭಿಃ ರೂಪೈಃ ಉಪೇತಃ** ಪೃಥಿವೀ, ಉದಕ, ಸೂರ್ಯ, ಚಂದ್ರ, ಅಗ್ನಿ, ವಾಯು, ಆಕಾಶ, ಯಜ್ಞವನ್ನು ಆಚರಿಸುವ ಯಜಮಾನ ಎಂಬ ಎಂಟು ವಿಧವಾದ ರೂಪಗಳಿಂದ ಪ್ರಕಾಶಿಸುತ್ತಿರುವನು, ಮತ್ತು **ಉಗ್ರಃ— ಉದ್ಗೂರ್ಣಃ ತೇಜಸ್ವೀ** ಬಲದಿಂದಲೂ ತೇಜಸ್ಸಿನಿಂದಲೂ ಪೂರಿತನಾದವನು ಎಂದೂ **ಬಭ್ರುಃ—ಭರ್ತಾ ಬಭ್ರುವರ್ಣೋ ವಾ** । ಲೋಕಕ್ಕೆ ಅಧಿಪತಿಯಾಗಿರುವನು ಅಥವಾ ಹೊಂಬಣ್ಣವುಳ್ಳವನು ಎಂದೂ ವರ್ಣಿಸಿ, (ಈ ರುದ್ರನನ್ನು **ಶುಕ್ರೇಭಿಃ ಹಿರಣ್ಯೈಃ ಪಿಪಿಶೇ—ದೀಪ್ತೈಃ ಹಿತರಮಣೀಯೈಃ ಹಿರಣ್ಮಯೈರಲಂಕಾರೈರ್ವಾ ದೀಪ್ಯತೇ** ಬಹಳ ಕಾಂತಿಯುಳ್ಳವುಗಳಾಗಿಯೂ ಹಿತಕರವಾಗಿಯೂ ಮನೋಹರವಾಗಿಯೂ ಇರುವ ಸುವರ್ಣ ಮಯವಾದ ಅಲಂಕಾರಗಳಿಂದ ಶೋಭಿಸುತ್ತಿರುವನು ಎಂದು ವಿವರಿಸಿದೆ.

**ಈಶ್ವರಾತ್ ರುದ್ರಾತ್ ಅಸುರ್ಯಂ ನ ವಾ ಉ ಯೋಷತ್—ಅಸ್ಯ ಭೂತಜಾತಸ್ಯ ಭರ್ತುಃ ಈಶ್ವರಾತ್ ಅಸುರ್ಯಂ ಬಲಂ ನೈವ ಪೃಥಕ್ ಭವತಿ** । ಸರ್ವಪ್ರಾಣಿಗಳಿಗೂ ಅಧಿಪತಿಯಾಗಿರುವ, ಸರ್ವಕ್ಕೂ ಒಡೆಯನಾದ, ಈ ರುದ್ರನಿಗಿಂತಲೂ ಬಲವುಳ್ಳದ್ದು (ವಸ್ತುವು) ಬೇರೊಂದು ಇರುವುದಿಲ್ಲವೆಂದು ಉಕ್ತವಾಗಿದೆ.

**ಅಸುರ್ಯಂ—ಅಸು ಕ್ಷೇಪಣೇ** ಎಂಬ ಧಾತುವಿಗೆ ಉರನ್ ಪ್ರತ್ಯಯವು ಬಂದು ಅಸುರ ಎಂಬ ಶಬ್ದ ರೂಪವಾಗುತ್ತದೆ. **ಅಸುರಃ ಕ್ಷೇಪ್ತಾ** ಎಂದು ಅಸುರ ಶಬ್ದಕ್ಕೆ ಎಸೆಯುವವನು ಎಂದು ಅರ್ಥವಾಗುತ್ತದೆ. ತತ್ರ ಸಾಧುಃ ಎಂಬ ಸೂತ್ರದಿಂದ ಯಪ್ರತ್ಯಯವು ಬಂದು ಅಸುರ್ಯ ಎಂದಾಗಿದೆ. ಸಾಯಣರು ಬಲ ಎಂದು ಅರ್ಥ ವನ್ನು ವಿವರಿಸಿದ್ದಾರೆ.



॥ ಸಂಹಿತಾಪಾಠಃ ॥

ಅರ್ಹನ್ಬಿಭರ್ಷಿ ಸಾಯಕಾನಿ ಧನ್ವಾರ್ಹನ್ನಿಷ್ಕಂ ಯಜತಂ ವಿಶ್ವರೂಪಂ ।
ಅರ್ಹನ್ನಿದಂ ದಯಸೇ ವಿಶ್ವಮಭ್ವಂ ನ ವಾ ಓಜೀಯೋ ರುದ್ರ ತ್ವದಸ್ತಿ ॥ ೧೦ ॥

॥ ಪದಪಾಠಃ ॥

ಅರ್ಹನ್ । ಬಿಭರ್ಷಿ । ಸಾಯಕಾನಿ । ಧನ್ವ । ಅರ್ಹನ್ । ನಿಷ್ಕಂ । ಯಜತಂ । ವಿಶ್ವರೂಪಂ ।
ಅರ್ಹನ್ । ಇದಂ । ದಯಸೇ । ವಿಶ್ವಂ । ಅಭ್ವಂ । ನ । ವೈ । ಓಜೀಯಃ । ರುದ್ರ । ತ್ವತ್ । ಅಸ್ತಿ ॥ ೧೦ ॥

॥ ಸಾಯಣಭಾಷ್ಯಂ ॥

**ಹೇ ರುದ್ರ ತ್ವಮರ್ಹನ್ ಅರ್ಹೋ ಯೋಗ್ಯ ಏವ ಸನ್ ಸಾಯಕಾನಿ ಶರಾನ್ ಧನ್ವ ಧನುಶ್ಚ ಬಿಭರ್ಷಿ । ಧಾರಯಸಿ । ತಥಾರ್ಹನ್ನೇವ ಯಜತಂ ಯಜನೀಯಂ ಪೂಜನೀಯಂ ವಿಶ್ವರೂಪಂ ಬಹುವಿಧರೂಪಯುಕ್ತಂ ನಿಷ್ಕಂ ಹಾರಂ ಬಭರ್ಷಿ । ತಥಾರ್ಹನ್ನೇವೇದಂ ವಿಶ್ವಂ ಸರ್ವಮಭ್ವಂ। ಮಹನ್ನಾಮೈತತ್। ಅತಿವಿಸ್ತೃತಂ ಜಗದ್ದಯಸೇ । ರಕ್ಷಸಿ । ದೇಙ್ ರಕ್ಷಣೇ । ಹೇ ರುದ್ರ ತ್ವತ್ ತ್ವತ್ತೋಽನ್ಯತ್ ಕಿಂಚಿದೋಜೀಯ ಓಜಸ್ವಿತರಂ ಬಲವತ್ತರಂ ನ ವಾ ಅಸ್ತಿ । ನ ಖಲು ವಿದ್ಯತೇ। ಅತಸ್ತ್ವಮೇವೋಕ್ತವ್ಯಾಪಾರೇಷು ಯೋಜ್ಯ ಇತ್ಯರ್ಥಃ॥ ಓಜಃಶಬ್ದಾನ್ಮತ್ವರ್ಥೀಯೋ ವಿನಿಃ । ತತಃ ಆತಿಶಾಯನಿಕ ಇಷ್ಠನ್ । ವಿನ್ಮತೋರ್ಲುಕ್ । ಟೇರಿತಿ ಟಿಲೋಪಃ ॥**

॥ ಪ್ರತಿಪದಾರ್ಥ ॥

**ರುದ್ರ**—ಎಲೈ ರುದ್ರನೇ । **ಅರ್ಹನ್**—ಪೂಜಾರ್ಹನಾದ ನೀನು । **ಸಾಯಕಾನಿ**—ಬಾಣಗಳನ್ನು । **ಧನ್ವ**—ಧನಸ್ಸನ್ನೂ । **ಬಿಭರ್ಷಿ**—ಧರಿಸಿದ್ದೀಯೆ । **ಅರ್ಹನ್**—ಪೂಜಾರ್ಹನಾಗಿದ್ದು । **ಯಜತಂ**—ಪೂಜ್ಯವಾದುದೂ ; **ವಿಶ್ವರೂಪಂ**—ನಾನಾ ರೂಪಾತ್ಮಕವಾದುದೂ ಆದ **ನಿಷ್ಕಂ**—ಹಾರವನ್ನು ಧರಿಸಿದ್ದೀಯೆ **ಅರ್ಹನ್**—ಸ್ತುತ್ಯರ್ಹನಾಗಿ । **ಇದಂ ವಿಶ್ವಂ**—ಈ ಸಮಸ್ತವಾದುದೂ । **ಅಭ್ವಂ**—ಮಹತ್ತಾದುದೂ ಆದ ಲೋಕವನ್ನು । **ದಯಸೇ**—ರಕ್ಷಿಸುತ್ತೀಯೆ । **ರುದ್ರ**—ಎಲೈ ರುದ್ರನೇ । **ಓಜೀಯಃ**—ನಿನಗಿಂತಲೂ ಅಧಿಕವಾದ ಅಂತಶ್ಶಕ್ತಿಯುಳ್ಳವನು । **ತ್ವತ್**—ನಿನಗಿಂತಲೂ ಬೇರೆಯಾಗಿ ಯಾರೂ । **ನ ವೈ ಅಸ್ತಿ**—ಇಲ್ಲವೇ ಇಲ್ಲ.

॥ ಭಾವಾರ್ಥ ॥

ಎಲೈ ರುದ್ರನೇ, ಪೂಜಾರ್ಹನಾದ ನೀನು ಬಾಣಗಳನ್ನೂ, ಧನುಸ್ಸನ್ನೂ ಧರಿಸಿದ್ದೀಯೆ. ಪೂಜಾರ್ಹನಾಗಿದ್ದು ಪೂಜ್ಯವಾದುದೂ, ನಾನಾರೂಪಾತ್ಮಕವಾದದ್ದೂ ಆದ ಹಾರವನ್ನು ಧರಿಸಿದ್ದೀಯೆ. ಸ್ತುತ್ಯರ್ಹನಾಗಿದ್ದು ಸಮಸ್ತವಾದುದೂ ಮಹತ್ತಾದುದೂ ಆದ ಈ ಲೋಕವನ್ನು ರಕ್ಷಿಸುತ್ತೀಯೆ. ಎಲೈ ರುದ್ರನೇ ನಿನಗಿಂತಲೂ ಅಧಿಕವಾದ ಅಂತಹ ಶಕ್ತಿಯುಳ್ಳವನು ನಿನಗಿಂತಲೂ ಬೇರೆಯಾಗಿ ಯಾರೂ ಇಲ್ಲವೇ ಇಲ್ಲ.

## English Translation·

Worthy ( of reverence ), you bear arrows and a bow ; worthy (of praise), you wear an adorable and omniform necklace; worthy (of adoration), you preserve all this vast universe : there is no one more powerful than you.

॥ ವಿಶೇಷವಿಷಯಗಳು ॥

ರುದ್ರನನ್ನು ಹೇ ರುದ್ರ ಎಂದು ಸಂಬೋಧಿಸಿ, ಈ ರುದ್ರನು ಪೂಜಾರ್ಹನಾಗಿರುವವನಾಗಿಯೇ ಧನುರ್ಬಾಣಗಳನ್ನು ಧರಿಸಿರುವನೆಂದೂ, **ಯಜನೀಯಂ ಪೂಜನೀಯಂ ವಿಶ್ವರೂಪಂ ನಿಷ್ಕಂ ಹಾರಂ ಬಿಭರ್ಷಿ,** ಪೂಜೆಗೆ ಅರ್ಹನಾಗಿರುವ ಮತ್ತು ನಾನಾವಿಧವಾದ ಆಕಾರದಿಂದ ಇರುವುದೂ ಆದ ಹಾರಗಳನ್ನು ಧರಿಸಿರುವನೆಂದೂ, **ಅರ್ಹನ್ನೇವ ಇದಂ ವಿಶ್ವಂ ಅಭ್ವಂ ದಯಸೇ,** ಬಹಳ ವಿಸ್ತಾರವಾದುದಾಗಿರುವ ಈ ಜಗತ್ತೆಲ್ಲವನ್ನೂ ರಕ್ಷಿಸುತ್ತಿರುವನೆಂದೂ, ಈ ರುದ್ರನ ಪ್ರಭಾವವನ್ನೂ ಅಲಂಕಾರವನ್ನೂ ಅದ್ಭುತವಾದ ಕಾರ್ಯವನ್ನೂ ವಿವರಿಸಿದೆ. ಮತ್ತು **ತ್ವತ್ ಓಜೀಯಃ ನ ವೈ ಅಸ್ತಿ—ತ್ವತ್ತಃ ಅನ್ಯತ್ ಕಿಂಚಿತ್ ಬಲವತ್ತರಂ ನ ಖಲು ವಿದ್ಯತೇ—** ಈ ರುದ್ರನಿಗಿಂತಲೂ ಬೇರೆಯಾಗಿರುವುದೂ ಬಲದಿಂದ ಅಧಿಕವಾದುದೂ ಯಾವುದೂ ಇಲ್ಲದ ಕಾರಣ **ತ್ವಮೇವ ಉಕ್ತವ್ಯಾಪಾರೇಷು ಯೋಗ್ಯಃ—**ಈ ಜಗತ್ತಿನ ರಕ್ಷಣರೂಪವಾದ ಕಾರ್ಯವನ್ನು ಆಚರಿಸುವುದರಲ್ಲಿ ರುದ್ರನೇ ಸಮರ್ಥನಾಗಿರುವನೆಂದು ಉಕ್ತವಾಗಿದೆ.

**ಅಭ್ವಂ—ಅತಿವಿಸ್ತೃತಂ ।** ಅಭ್ವ ಶಬ್ದವನ್ನು ಯಾಸ್ಕರು ಮಹನ್ನಾಮಗಳಲ್ಲಿ (ನಿ. ೩-೧೩) ಪಾಠಮಾಡಿದ್ದಾರೆ. ಸಾಯಣರು ಈ ಪದವನ್ನು ವಿಶ್ವಂ ಎಂಬ ಪದಕ್ಕೆ ವಿಶೇಷಣವನ್ನಾಗಿ ಹೇಳಿ (ಅತಿವಿಸ್ತೃತಂ) ಬಹಳ ವಿಸ್ತಾರವಾದುದು ಎಂಬ ಅರ್ಥವನ್ನು ವಿವರಿಸಿದ್ದಾರೆ.



॥ ಸಂಹಿತಾಪಾಠಃ ॥

ಸ್ತುಹಿ ಶ್ರುತಂ ಗರ್ತಸದಂ ಯುವಾನಂ ಮೃಗಂ ನ ಭೀಮಮುಪಹತ್ನುಮುಗ್ರಂ ।
ಮೃಳಾ ಜರಿತ್ರೇ ರುದ್ರ ಸ್ತವಾನೋಽನ್ಯಂ ತೇ ಅಸ್ಮನ್ನಿ ವಪಂತು ಸೇನಾಃ ॥ ೧೧ ॥

॥ ಪದಪಾಠಃ ॥

ಸ್ತುಹಿ । ಶ್ರುತಂ । ಗರ್ತಽಸದಂ । ಯುವಾನಂ । ಮೃಗಂ । ನ । ಭೀಮಂ । ಉಪಽಹತ್ನುಂ । ಉಗ್ರಂ ।
ಮೃಳ । ಜರಿತ್ರೇ । ರುದ್ರ । ಸ್ತವಾನಃ । ಅನ್ಯಂ । ತೇ । ಅಸ್ಮತ್ । ನಿ । ವಪಂತು । ಸೇನಾಃ ॥ ೧೧ ॥

॥ ಸಾಯಣಭಾಷ್ಯಂ ॥

ಪ್ರಯಾಣೇ ಮೃಗಸ್ಯಾಮನೋಜ್ಞವಚಃ ಶ್ರುತ್ವಾ ಸ್ತುಹಿ ಶ್ರುತಮಿತ್ಯೇತಾಂ ಜಪೇತ್। ಸೂತ್ರಿತಂ ಚ । ಸ್ತುಹಿ ಶ್ರುತಂ ಗರ್ತಸದಂ ಯುವಾನಮಿತಿ ಮೃಗಸ್ಯ । ಗೃ. ೩-೧೧-೧೧. । ಇತಿ ॥

ಹೇ ಸ್ತೋತಃ ಶ್ರುತಂ ವಿಶ್ರುತಂ ಪ್ರಖ್ಯಾತಂ ರುದ್ರಂ ಸ್ತುಹಿ । ಕೀದೃಶಂ । ಗರ್ತಸದಂ । ಗರ್ತೋ ರಥಃ । ತತ್ರ ಸೀದಂತಂ ಯುವಾನಂ ನಿತ್ಯತರುಣಂ ಮೃಗಂ ನ ಭೀಮಂ ಮೃಗಂ ಸಿಂಹಮಿವ ಭಯಂಕರಂ । ಉಪಹತ್ನುಮುಪಹಂತಾರಂ ಶತ್ರೂಣಾಂ ಮುಗ್ರಮುದ್ಗೂರ್ಣಂ । ಹೇ ರುದ್ರ ತ್ವಂ ಸ್ತವಾನೋಽಸ್ಮಾಭಿಃ ಸ್ತೂಯಮಾನಃ ಸನ್ ಜರಿತ್ರೇ ಸ್ತೋತ್ರೇ ಮಹ್ಯಂ ಮೃಳ । ಸುಖಯ । ತೇ ತ್ವದೀಯಾಃ ಸೇನಾ ಅಸ್ಮದನ್ಯಮಸ್ಮದ್ವ್ಯತಿರಿಕ್ತಂ ಪುರುಷಂ ನಿವಪಂತು । ನಿಘ್ನಂತು ॥

॥ ಪ್ರತಿಪದಾರ್ಥ ॥

(**ಸ್ತೋತ್ರಃ**—ಎಲೈ ಸ್ತುತಿಕರ್ತನೇ) । **ಗರ್ತಸದಂ**—ರಥದಲ್ಲಿ ಕುಳಿತಿರುವವನೂ । **ಯುವಾನಂ**—ನಿತ್ಯತರುಣನೂ । **ಮೃಗಂ ನ**—ಸಿಂಹದಂತೆ । **ಭೀಮಂ**—ಭಯಂಕರನೂ । **ಉಪಹತ್ನುಂ**—ಶತ್ರುನಾಶಕನೂ । **ಉಗ್ರಂ**—ಪ್ರಕಟಿತವಾದ ಶಕ್ತಿಯುಳ್ಳವನೂ । **ಶ್ರುತಂ**—ಪ್ರಖ್ಯಾತನೂ ಆದ ರುದ್ರನನ್ನು । **ಸ್ತುಹಿ**—ಸ್ತೋತ್ರಮಾಡಿ ಪ್ರಾರ್ಥಿಸು । **ರುದ್ರ**—ಎಲೈ ರುದ್ರನೇ । **ಸ್ತವಾನಃ**—ನಮ್ಮಿಂದ ಸ್ತುತನಾಗುವ ನೀನು । **ಜರಿತ್ರೇ**—ಸ್ತುತಿಕರ್ತನಾದ ನನಗೆ । **ಮೃಳ**—ಸುಖವನ್ನುಂಟುಮಾಡು । **ತೇ**—ನಿನ್ನ । **ಸೇನಾಃ**—ಸೇನೆಗಳು । **ಅಸ್ಮತ್**—ನಮಗಿಂತಲೂ । **ಅನ್ಯಂ**—ಬೇರೆಯಾದ ಶತ್ರುವನ್ನು । **ನಿ ವಪಂತು**—ನಾಶಮಾಡಲಿ.

॥ ಭಾವಾರ್ಥ ॥

ಎಲೈ ಸ್ತುತಿಕರ್ತನೇ, ರಥದಲ್ಲಿ ಕುಳಿತಿರುವವನೂ, ನಿತ್ಯತರುಣನೂ, ಸಿಂಹದಂತೆ ಭಯಂಕರನೂ, ಶತ್ರುನಾಶಕನೂ, ಪ್ರಕಟಿತವಾದ ಶಕ್ತಿಯುಳ್ಳವನೂ ಪ್ರಖ್ಯಾತನೂ ಆದ ರುದ್ರನನ್ನು ಸ್ತೋತ್ರಮಾಡಿ ಪ್ರಾರ್ಥಿಸು. ಎಲೈ ರುದ್ರನೇ, ನಮ್ಮಿಂದ ಸ್ತುತನಾಗುವ ನೀನು ಸ್ತುತಿಕರ್ತನಾದ ನನಗೆ ಸುಖವನ್ನುಂಟುಮಾಡು. ನಿನ್ನ ಸೇನೆಗಳು ನಮಗಿಂತಲೂ ಬೇರೆಯಾದ ಶತ್ರುವನ್ನು ನಾಶಮಾಡಲಿ.

English Translation.

Glorify the renowned Rudra, riding in his car, ever youthful, destructive, fierce like a formidable wild beast: Rudra, propitiated by praise, grant happiness to him who praises (you), and let your hosts destroy him who is our adversary.

॥ ವಿಶೇಷವಿಷಯಗಳು ॥

ಪ್ರಯಾಣಕಾಲದಲ್ಲಿ ಮೃಗಗಳ ಕಠೋರವಾದ ಧ್ವನಿಯನ್ನು ಕೇಳಿದಾಗ **ಸ್ತುಹಿ ಶ್ರುತಂ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ **ಸ್ತುಹಿ ಶ್ರುತಂ ಗರ್ತಸದಂ ಯುವಾನಮಿತಿ ಮೃಗಸ್ಯ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ಗೃ. ೩-೧೦-೧೦)

ಈ ಋಕ್ಕಿನ ಮೊದಲನೆಯ ಅರ್ಧದಲ್ಲಿ ಮಂತ್ರದ್ರಷ್ಟೃವಾದ ಋಷಿಯು ಯಜ್ಞದಲ್ಲಿ ಸ್ತುತಿಮಾಡುವ ಋತ್ವಿಜನನ್ನು ಸಂಬೋಧಿಸಿ ಹೇಳಿದ್ದಾನೆ. **ಹೇ ಸ್ತೋತಃ** ಎಲೈ ಸ್ತುತಿಮಾಡುವ ಋತ್ವಿಜನೇ—**ಶ್ರುತಂ ಗರ್ತಸದಂ**

**ಯುವಾನಂ ಮೃಗಂ ನ ಭೀಮಂ ಉಪಹತ್ನುಂ ಉಗ್ರಂ ರುದ್ರಂ ಸ್ತುಹಿ—ಪ್ರಖ್ಯಾತಂ, ರಥೇ ಸೀದಂತಂ ನಿತ್ಯತರುಣಂ, ಸಿಂಹಮಿವ ಭಯಂಕರಂ. ಶತ್ರೂಣಾಮುಪಹಂತಾರಂ, ಉದ್ಗೂರ್ಣಂ ರುದ್ರಂ ಸ್ತುಹಿ ।** ರುದ್ರನು ಮಹತ್ತ್ವಾನ್ವಿತನಾದುದರಿಂದ ಪ್ರಸಿದ್ಧನಾಗಿದ್ದಾನೆ, ರಥದಲ್ಲಿ ಉಪವಿಷ್ಟನಾಗಿದ್ದಾನೆ. ಸಿಂಹದ ಹಾಗೆ ಸರ್ವರಿಗೂ ಭಯಂಕರನಾಗಿದ್ದಾನೆ. ಬಲಾಢ್ಯನಾಗಿದ್ದಾನೆ, ಈ ಪ್ರಕಾರವಾದ ಮಹಿಮೆಯುಳ್ಳ ರುದ್ರನನ್ನು ಸ್ತುತಿಮಾಡು ಎಂದು ಆದೇಶವು ವರ್ಣಿತವಾಗಿದೆ. ಎರಡನೆಯ ಅರ್ಧದಲ್ಲಿ ಯಜಮಾನನ ಪ್ರಾರ್ಥನೆಯು ಉಕ್ತವಾಗಿದೆ, ರುದ್ರನನ್ನು ಸಂಬೋಧಿಸಿ, **ಹೇ ರುದ್ರ ಸ್ತವಾನಃ ತ್ವಂ ಜರಿತ್ರೇ ಮಹ್ಯಂ ಮೃಳ— ಅಸ್ಮಾಭಿಃ ಸ್ತೂಯಮಾನಃ ಸನ್ ಸ್ತೋತ್ರೇ ಮಹ್ಯಂ ಸುಖಯ**—ಎಲೈ ರುದ್ರನೇ ನೀನು ಯಜಮಾನರಾದ ನಮ್ಮಿಂದ ಸ್ತುತಿಸಲ್ಪಟ್ಟವನಾಗಿ, ಸ್ತುತಿಯನ್ನು ಪಠಿಸಿರುವ ನಮಗೆ ಸುಖಕರನಾಗಿರು ಎಂದೂ, **ತೇ ಸೇನಾಃ ಅಸ್ಮತ್ ಅನ್ಯಂ ನಿ ವಪಂತು—ತ್ವದೀಯಾಃ ಸೇನಾಃ ಅಸ್ಮದ್ವ್ಯತಿರಿಕ್ತಂ ಪುರುಷಂ ನಿಘ್ನಂತು** ರುದ್ರನ ಸೇನೆಗಳು ಸ್ತುತಿಮಾಡುವ ನಮ್ಮನ್ನು ಬಿಟ್ಟು ಬೇರೆ ಪುರುಷನನ್ನು ನಾಶಪಡಿಸಲಿ ಎಂದೂ ಪ್ರಾರ್ಥಿಸಲಾಗಿದೆ.

**ಗರ್ತಸದಂ—ರಥೇ ಸೀದಂತಂ ।** ಯಾಸ್ಕರು ಗರ್ತಶಬ್ದವನ್ನು ಗೃಹನಾಮಗಳಲ್ಲಿ (ನಿ. ೩-೧೩) ಪಾಠಮಾಡಿದ್ದಾರೆ. ಮತ್ತು

**ಅಭ್ರಾತೇವ ಪುಂಸ ಏತಿ ಪ್ರತೀಚೀ ಗರ್ತಾರುಗಿವ ಸನಯೇ ಧನಾನಾಂ ।**
**ಜಾಯೇವ ಪತ್ಯ ಉಶತೀ ಸುವಾಸಾ ಉಷಾ ಹಸ್ರೇವ ನಿ ರಿಣೀತೇ ಅಪ್ಸಃ ॥**

(ಋ. ಸಂ. ೧-೧೨೪-೭)

ಈ ಋಕ್ಕನ್ನು ಉದಾಹರಿಸಿ ಗರ್ತಶಬ್ದಕ್ಕೆ **ಗರ್ತಃ ಸಭಾ ಸ್ಥಾಣುಃ** (ನಿ. ೩-೫) ಎಂದು ಅರ್ಥವನ್ನು ವರ್ಣಿಸಿದ್ದಾರೆ. ಮತ್ತು—**ಶ್ಮಶಾನಸಂಚಯೋಽಪಿ ಗರ್ತ ಉಚ್ಯತೇ** ಎಂದೂ, **ಗುರತೇರಪಗೂರ್ಣೋ ಭವತಿ** । ಎಂದೂ. ಮತ್ತು

**ಹಿರಣ್ಯರೂಪಮುಷಸೋ ವ್ಯುಷ್ಟಾವಯಃಸ್ಥೂಣಮುದಿತಾ ಸೂರ್ಯಸ್ಯ ।**
**ಆ ರೋಹಥೋ ವರುಣ ಮಿತ್ರ ಗರ್ತಮತಶ್ಚಕ್ಷಾಥೇ ಅದಿತಿಂ ದಿತಿಂ ಚ ।**

(ಋ. ಸಂ. ೫-೬೨-೮)

ಎಂಬ ಈ ಋಕ್ಕಿನಲ್ಲಿರುವ ಗರ್ತಶಬ್ದವೂ ರಥೋಽಪಿ ಗರ್ತ ಉಚ್ಯತೇ । ಗೃಣಾತೇಃ ಸ್ತುತಿಕರ್ಮಣಃ । ಸ್ತುತತಮಂ ಯಾನಂ । (ನಿ. ೩-೫) ಎಂದೂ, ಜೂಜನ್ನಾಡುವ ಪ್ರದೇಶದಲ್ಲಿ (ಅಕ್ಷ) ಪಗಡೆಯ ಕಾಯಿಗಳನ್ನು ಇರಿಸುವ ಮನೆ, ಮನೆ, ಶ್ಮಶಾನದಲ್ಲಿರುವ ಹಳ್ಳ, ಮತ್ತು ರಥ ಎಂದು ನಾಲ್ಕು ವಿಧವಾದ ಅರ್ಥವನ್ನು ನಿವರಿಸಿದ್ದಾರೆ. ಇಲ್ಲಿ ಸಾಯಣರು ರಥನೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಹೇಳಿದ್ದಾರೆ.

॥ ಸಂಹಿತಾಪಾಠಃ ॥

ಕುಮಾರಶ್ಚಿತ್ಪಿತರಂ ವಂದಮಾನಂ ಪ್ರತಿ ನಾನಾಮ ರುದ್ರೋಪಯಂತಂ ।
ಭೂರೇರ್ದಾತಾರಂ ಸತ್ಪತಿಂ ಗೃಣೀಷೇ ಸ್ತುತಸ್ತ್ವಂ ಭೇಷಜಾ ರಾಸ್ಯಸ್ಮೇ ॥ ೧೨ ॥

॥ ಪದಪಾಠಃ ॥

ಕುಮಾರಃ । ಚಿತ್ । ಪಿತರಂ । ವಂದಮಾನಂ । ಪ್ರತಿ । ನನಾಮ । ರುದ್ರ । ಉಪಯಂತಂ ।

ಭೂರೇಃ । ದಾತಾರಂ । ಸತ್ಽಪತಿಂ । ಗೃಣೀಷೇ । ಸ್ತುತಃ । ತ್ವಂ । ಭೇಷಜಾ । ರಾಸಿ । ಅಸ್ಮೇ ಇತಿ ॥೧೨॥

॥ ಸಾಯಣಭಾಷ್ಯಂ ॥

ವಂದಮಾನಂ ಆಯುಷ್ಮಾನ್ ಭವ ಸೌಮ್ಯೇತಿ ಸ್ತುವಂತಂ ಪಿತರಂ ಕುಮಾರಶ್ಚಿತ್ ಯಥಾ ಕುಮಾರಃ ॥ ಚಿದಿತ್ಯೇತದುಪಮಾರ್ಥೇ ॥ ಹೇ ರುದ್ರ ಉಪಯಂತಮುಸ್ಮತ್ಸಮೀಪೇ ಗಚ್ಛಂತಂ ತ್ವಾಂ ಪ್ರತಿನನಾಮ । ಪ್ರತಿನತೋಽಸ್ಮಿ । ಅಪಿ ಚ ಭೂರೇರ್ಬಹುನೋ ಧನಸ್ಯ ದಾತಾರಂ ಸತ್ಪತಿಂ ಸತಾಂ ಪಾಲಯಿತಾರಂ ॥ ಪತ್ಯಾವೈಶ್ವರ್ಯ ಇತಿ ಪೂರ್ವಪದಪ್ರಕೃತಿಸ್ವರತ್ವಂ ॥ ಹೇ ರುದ್ರ ಏವಂಭೂತಂ ತ್ವಾಂ ಗೃಣೀಷೇ । ಸ್ತೌಮಿ ॥ ಮಿಪಸ್ತಿಙಾಂ ತಿಙೋ ಭವಂತೀತಿ ಸೇ ಆದೇಶಃ । ಸ್ತುತಶ್ಚ ತ್ವಮಸ್ಮೇ ಅಸ್ಮಭ್ಯಂ ಭೇಷಜಾ ಭೇಷಜಾನಿ ರಾಸಿ । ದೇಹಿ ॥

॥ ಪ್ರತಿಪದಾರ್ಥ ॥

**ರುದ್ರ**—ಎಲೈ ರುದ್ರನೇ । **ವಂದಮಾನಂ**—'ದೀರ್ಘಾಯುಸ್ಸುಳ್ಳವನಾಗು' ಎಂದು ಆಶೀರ್ವಚನವನ್ನು ಹೇಳತಕ್ಕ । **ಪಿತರಂ**—ತಂದೆಯನ್ನು । **ಕುಮಾರಶ್ಚಿತ್**—ಪುತ್ರನು ನಮಿಸಿ ವಂದಿಸುವಂತೆ । **ಉಪಯಂತಂ**—ನಮ್ಮ ಅಭಿಮುಖವಾಗಿ ಬರತಕ್ಕ ನಿನಗೆ । **ಪ್ರತಿ ನನಾಮ**—ಎದುರಾಗಿ ಬಂದು ನಮಸ್ಕರಿಸುತ್ತೇನೆ । **ಭೂರೇಃ**—ಅಧಿಕವಾದ ಧನದ । **ದಾತಾರಂ**—ದಾತೃವೂ । **ಸತ್ಪತಿಂ**—ಸಜ್ಜನರ ಪಾಲಕನೂ ಆದ ನಿನ್ನನ್ನು । **ಗೃಣೀಷೇ**—ಸ್ತುತಿಸುತ್ತೇನೆ । **ಸ್ತುತಃ ತ್ವಂ**—ನಮ್ಮಿಂದ ಸ್ತುತನಾದ ನೀನು । **ಅಸ್ಮೇ**—ನಮಗೆ । **ಭೇಷಜಾ**—ಔಷಧಿಗಳನ್ನು । **ರಾಸಿ**—ಕೊಡು.

॥ ಭಾವಾರ್ಥ ॥

ಎಲೈ ರುದ್ರನೇ, 'ಆಯುಷ್ಮಾನ್ ಭವ' ಎಂದು ಆಶೀರ್ವಚನವನ್ನು ಹೇಳತಕ್ಕ ತಂದೆಯೆದುರಿಗೆ ಪುತ್ರನು ತಂದೆಯನ್ನು ನಮಿಸಿ ವಂದಿಸುವಂತೆ ನಮ್ಮ ಅಭಿಮುಖವಾಗಿ ಬರತಕ್ಕ ನಿನಗೆ ಎದುರಾಗಿ ಬಂದು ನಾನು ನಮಸ್ಕರಿಸುತ್ತೇನೆ. ಅಧಿಕವಾದ ಧನದ ದಾತೃವೂ, ಸಜ್ಜನರ ಪಾಲಕನೂ ಆದ ನಿನ್ನನ್ನು ಸ್ತುತಿಸುತ್ತೇನೆ. ನಮ್ಮಿಂದ ಸ್ತುತನಾದ ನೀನು ನಮಗೆ ಔಷಧಿಗಳನ್ನು ಕೊಡು.

## English Translation.

I bow, Rudra, to you, approaching (our rite), as a boy to his father when pronouncing a blessing upon him : I glorify you, the giver of much (wealth), the protector of the virtuous ; thus glorified, bestow healing herbs upon me.

॥ ವಿಶೇಷವಿಷಯಗಳು ॥

**ಹೇ ರುದ್ರ—ಉಪಯಂತಂ ವಂದಮಾನಂ ಪಿತರಂ ಕುಮಾರಶ್ಚಿತ್ ಪ್ರತಿ ನನಾಮ—ಅಸ್ಮತ್ಸಮೀಪೇ ಗಚ್ಛಂತಂ ತ್ವಾಂ ಆಯುಷ್ಮಾನ್ ಭವ ಸೌಮ್ಯ ಇತಿ ಸ್ತುವಂತಂ ಪಿತರಂ ಯಥಾ ಕುಮಾರಃ ತಥಾ ಪ್ರತಿನತೋಽಸ್ಮಿ ।** ರುದ್ರನನ್ನು ಸಂಬೋಧಿಸಿ—ಎಲೈ ರುದ್ರನೇ, ನೀನು ಯಜಮಾನರಾದ ನಮ್ಮ ಸಮೀಪದಲ್ಲಿ ಸಂಚರಿಸುತ್ತಿರುವಾಗ, "ಆಯುಷ್ಮಂತನಾಗಿರು" ಎಂದು ಆಶೀರ್ವದಿಸುವ ತಂದೆಗೆ ಮಗನು ನಮಸ್ಕಾರವನ್ನು ಆಚರಿಸುವ ಹಾಗೆ ಯಜಮಾನರಾದ ನಾವು ನಿನಗೆ ನಮಸ್ಕಾರಗಳನ್ನು ಆಚರಿಸುತ್ತೇವೆ ಎಂದೂ, **ಭೂರೇಃ ದಾತಾರಂ ಸತ್ಪತಿಂ ಗೃಣೀಷೇ—ಬಹುನೋ ಧನಸ್ಯ ದಾತಾರಂ ಸತಾಂ ಪಾಲಯಿತಾರಂ ತ್ವಾಂ ಸ್ತೌಮಿ.** ಪ್ರಭೂತವಾದ ಧನವನ್ನು (ದಾನವಾಗಿಯೂ) ಅನುಗ್ರಹಿಸುವವನೂ, ಸತ್ಪುರುಷರನ್ನು ರಕ್ಷಿಸುವವನೂ ಆದ ನಿನ್ನನ್ನು ಯಜಮಾನರಾದ ನಾವು ಸ್ತುತಿಗಳನ್ನು ಪಠಿಸುವುದರಿಂದ ಶ್ಲಾಘಿಸುತ್ತೇವೆ ಎಂದೂ ವರ್ಣಿಸಿದೆ. ಮತ್ತು, **ಸ್ತುತಃ ತ್ವಂ ಅಸ್ಮೇ ಭೇಷಜಾ ರಾಸಿ—** ನಮ್ಮಿಂದ ಸ್ತುತಿಸಲ್ಪಟ್ಟ ನೀನು ನಮಗೆ ರೋಗಾದಿಗಳು ಬಾರದಿರುವಂತೆ ಔಷಧಿಗಳನ್ನು ಅನುಗ್ರಹಿಸು ಎಂದೂ ವಿವೃತವಾಗಿದೆ.

**ಕುಮಾರಶ್ಚಿತ್**—ಎಂಬಲ್ಲಿ **ಚಿತ್** ಎಂಬ ಪದವು ಉಪಮಾರ್ಥದಲ್ಲಿ ಪ್ರಯುಕ್ತವಾಗಿದೆ. ಯಾಸ್ಕರು **ಚಿದಿತ್ಯೇಷೋಽನೇಕಕರ್ಮಾ, ಆಚಾರ್ಯಶ್ಚಿದಿದಂ ಬ್ರೂಯಾದಿತಿ ಪೂಜಾಯಾಂ, ದಧಿ ಚಿದಿತ್ಯುಪಮಾರ್ಥೇ, ಕುಲ್ಮಾಷಾಂಶ್ಚಿದಿತ್ಯವಕುತ್ಸಿತೇ ।** ಎಂದು ಚಿತ್ ಎಂಬ ಪದವು ಪೂಜಾ, ಉಪಮಾ, ಅವಕುತ್ಸನ ಎಂಬ ಅರ್ಥಗಳನ್ನು ಬೋಧಿಸುವುದು ಎಂದು ಅನೇಕಾರ್ಥಗಳಲ್ಲಿ ಪ್ರಯೋಗವನ್ನು ಉದಾಹರಣೆಗಳ ಪ್ರದರ್ಶನ ಪೂರ್ವಕವಾಗಿ ವಿವರಿಸಿದ್ದಾರೆ.

**ಅಸ್ಮೇ**—ಎಂಬ ನಿಪಾತವು ಏಳು ವಿಭಕ್ತಿಗಳಲ್ಲಿಯೂ (ನಿ. ೬–೭) ಪ್ರಯುಕ್ತವಾಗುವುದು ಎಂದು ಹೇಳಿ ಅವುಗಳಿಗೆಲ್ಲಕ್ಕೂ ಯಾಸ್ಕರು ಉದಾಹರಣೆಗಳನ್ನು ಪ್ರದರ್ಶಿಸಿದ್ದಾರೆ. ಇಲ್ಲಿ ಸಾಯಣರು ಚತುರ್ಥ್ಯಂತವಾಗಿ ಈ ಪದವು ಪ್ರಯುಕ್ತವಾಗಿದೆ ಎಂದು ಅರ್ಥವನ್ನು ವರ್ಣಿಸಿದ್ದಾರೆ.

॥ ಸಂಹಿತಾಪಾಠಃ ॥

**ಯಾ ವೋ ಭೇಷಜಾ ಮರುತಃ ಶುಚೀನಿ ಯಾ ಶಂತಮಾ ವೃಷಣೋ ಯಾ ಮಯೋಭು ।**

**ಯಾನಿ ಮನುರವೃಣೀತಾ ಪಿತಾ ನಸ್ತಾ ಶಂ ಚ ಯೋಶ್ಚ ರುದ್ರಸ್ಯ ವಶ್ಮಿ ॥ ೧೩ ॥**

॥ ಪದಪಾಠಃ ॥

ಯಾ । ವಃ । ಭೇಷಜಾ । ಮರುತಃ । ಶುಚೀನಿ । ಯಾ । ಶಂಽತಮಾ । ವೃಷಣಃ । ಯಾ । ಮಯಃಽಭು । ಯಾನಿ । ಮನುಃ । ಅವೃಣೀತ । ಪಿತಾ । ನಃ । ತಾ । ಶಂ । ಚ । ಯೋಃ । ಚ । ರುದ್ರಸ್ಯ । ವಶ್ಮಿ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಮರುತೋ ರುದ್ರಪುತ್ರಾ ವೋ ಯುಷ್ಮಾಕಂ ಯಾ ಯಾನಿ ಭೇಷಜಾ ಭೇಷಜಾನ್ಯಸ್ಮದಾರೋಗ್ಯಹೇತುಭೂತಾನ್ಯೌಷಧಾನಿ ಶುಚೀನಿ ಶುದ್ಧಾನಿ ನಿರ್ಮಲಾನಿ ಸಂತಿ । ಹೇ ವೃಷಣಃ ಕಾಮಾನಾಂ ವರ್ಷಿತಾರೋ ಮರುತೋ ಯಾ ಯಾನಿ ಚ ಯುಷ್ಮದೀಯಾನಿ ಭೇಷಜಾನಿ ಶಂತಮಾ ಅತಿಶಯೇನ ಸುಖಕರಾಣಿ । ಯಾ ಯಾನಿ ಚ ಭೇಷಜಾನಿ ಮಯೋಭು ಮಯೋಭೂನಿ ಮಯಸಃ ಸುಖಸ್ಯ ಭಾವಯಿತೄಣಿ ನೋಽಸ್ಮತ್ಪಿತಾ ಮನುರ್ಯಾನಿ ಭೇಷಜಾನಿ ಯುಷ್ಮದೀಯಾನ್ಯವೃಣೀತ ವೃತವಾನ್ ತಾ ತಾನಿ ಭೇಷಜಾನಿ ರುದ್ರಸ್ಯ ಮಹಾದೇವಸ್ಯ ಸಂಬಂಧಿ ಶಂ ಚ ಯೋಶ್ಚ ಯಚ್ಛಮನೀಯಾನಾಂ ರೋಗಾಣಾಮುಪಶಮನಂ ಯಾವನೀಯಾನಾಂ ಭಯಾನಾಂ ಯದ್ಯಾವನಮಸ್ಮತ್ತಃ ಪೃಥಕ್ಕರಣಂ ತದುಭಯಂ ಚ ವಶ್ಮಿ । ಕಾಮಯೇ ॥ ವಶ ಕಾಂತೌ । ಅದಾದಿಕಃ ॥

॥ ಪ್ರತಿಪದಾರ್ಥ ॥

**ಮರುತಃ**—ರುದ್ರಪುತ್ರರಾದ ಎಲೈ ಮರುತ್ತುಗಳೇ । **ವಃ**—ನಿಮ್ಮ ಸಂಬಂಧಿಯಾದ । **ಯಾ**—ಯಾವ । **ಭೇಷಜಾ**—ಔಷಧಿಗಳು । **ಶುಚೀನಿ**—ಶುದ್ಧವಾಗಿವೆಯೋ । **ವೃಷಣಃ**—ಕಾಮವರ್ಷಕರಾದ ಮರುತ್ತುಗಳೇ । **ಯಾ**—ಯಾವ ನಿಮ್ಮ ಔಷಧಿಗಳು । **ಶಂತಮಾ**—ಸುಖಕರಗಳಾಗಿವೆಯೋ । **ಯಾ**—ಯಾವ ಔಷಧಿಗಳು । **ಮಯೋಭು**—ಸುಖವನ್ನು ಸ್ಥಾಪಿಸುವುವಾಗಿವೆಯೋ । **ಯಾನಿ**—ಯಾವ ಔಷಧಿಗಳನ್ನು **ನಃ ಪಿತಾ**—ನಮ್ಮ ಪಿತೃವಾದ । **ಮನುಃ**—ಮನುವು । **ಅವೃಣೀತ**—ವರಿಸಿದನೋ । **ತಾ**—ಆ ಔಷಧಿಗಳನ್ನೂ । **ಚ**—ಮತ್ತು । **ರುದ್ರಸ್ಯ**—ರುದ್ರಸಂಬಂಧಿಯಾದುದೂ । **ಶಂ**—ರೋಗನಾಶಕವಾದುದೂ । **ಯೋಶ್ಚ**—ಭಯರಾಹಿತ್ಯವನ್ನುಂಟುಮಾಡತಕ್ಕದ್ದೂ ಆದ (ಈ ಎರಡು ವಿಧವಾದ) ಔಷಧಿಗಳನ್ನೂ । **ವಶ್ಮಿ**—ಪಡೆಯಲಿಚ್ಛಿಸುತ್ತೇನೆ.

॥ ಭಾವಾರ್ಥ ॥

ಕಾಮವರ್ಷಕರಾದ ಮತ್ತು ರುದ್ರಪುತ್ರರಾದ ಎಲೈ ಮರುತ್ತುಗಳೇ, ನಿಮ್ಮ ಸಂಬಂಧಿಯಾದ ಯಾವ ಔಷಧಿಗಳು ಶುದ್ಧವಾಗಿವೆಯೋ, ಯಾವ ನಿಮ್ಮ ಔಷಧಿಗಳು ಸುಖಕರವಾಗಿವೆಯೋ, ಯಾವ ನಿಮ್ಮ ಔಷಧಿಗಳನ್ನು ನಮ್ಮ ಪಿತೃವಾದ ಮನುವು ವರಿಸಿದನೋ ಅವನ್ನೂ, ಮತ್ತು ರುದ್ರಸಂಬಂಧಿಯಾದುದೂ, ರೋಗನಾಶಕವಾದುದೂ, ಭಯರಾಹಿತ್ಯವನ್ನುಂಟುಮಾಡತಕ್ಕದ್ದೂ ಆದ ಯಾವುದುಂಟೋ ಅದನ್ನೂ ಈ ಎರಡು ವಿಧವಾದ ಔಷಧಿಗಳನ್ನೂ ನಾನು ಪಡೆಯಲಿಚ್ಛಿಸುತ್ತೇನೆ.

## English Translation.

Maruts, I solicit of you those medicaments which are pure; those, showerers (of benifits) which give great pleasure; those which confer felicity; those which (our) sire, Manu, selected; and those (medicaments) of Rudra which are the alleviation (of disease), and defence (against danger).

॥ ವಿಶೇಷವಿಷಯಗಳು ॥

**ಹೇ ಮರುತಃ—ರುದ್ರಪುತ್ರಾಃ** ರುದ್ರನ ಮಕ್ಕಳಾದ ಮರುದ್ದೇವತೆಗಳೇ ಎಂದು ಮರುದ್ದೇವತೆಗಳು ಈ ಋಕ್ಕಿನಿಂದ ಸ್ತುತರಾಗಿದ್ದಾರೆ. ಈ ಮರುದ್ದೇವತೆಗಳು **ವೃಷಣಃ—ಕಾಮಾನಾಂ ವರ್ಷಿತಾರಃ** ಯಜಮಾನರ ಅಭಿಲಾಷೆಗಳೆಲ್ಲವನ್ನೂ ನೆರವೇರಿಸುವರು ಆದುದರಿಂದ ಯಜಮಾನರು ತಮ್ಮ ಜೀವಿತವನ್ನು ಸುಖದಿಂದ ಸಾಗಿಸಲು ಶರೀರದ ಆರೋಗ್ಯವನ್ನು ಹೊಂದಲು ಮರುದ್ದೇವತೆಗಳನ್ನು ಪ್ರಾರ್ಥಿಸಿದ್ದಾರೆ ಅನುಗ್ರಹದಿಂದ ಲಭ್ಯವಾಗ ಬಹುದಾದ ಔಷಧಿಗಳಿಗಾಗಿಯೂ ಮತ್ತೂ ರುದ್ರನ ಅನುಗ್ರಹಕ್ಕಾಗಿಯೂ ಪ್ರಾರ್ಥನೆಯು ಉಕ್ತವಾಗಿದೆ.

**ವಃ ಯಾನಿ ಭೇಷಜಾ ಶುಚೀನಿ ಶಂತಮಾ ಮಯೋಭು ನಃ ಪಿತಾ ಅವೃಣೀತ । ಭೇಷಜಾನಿ ಅಸ್ಮದಾರೋಗ್ಯಹೇತುಭೂತಾನಿ, ಶುದ್ಧಾನಿ ನಿರ್ಮಲಾನಿ, ಅತಿಶಯೇನ ಸುಖಕರಾಣಿ, ಮಯಸ್ಯ ಸುಖಸ್ಯ ಭಾವಯಿತ್ರೀಣಿ, ಅಸ್ಮತ್ಪಿತಾ ಮನುಃ ಯುಷ್ಮದೀಯಾನಿ ಭೇಷಜಾನಿ ಅವೃಣೀತ ।** ಮರುದ್ದೇವತೆಗಳ ಸಂಬಂಧಿಯಾದ ಔಷಧಿಗಳು ಯಜಮಾನರಾದ ನಮ್ಮ ಆರೋಗ್ಯವನ್ನು ಉಂಟುಮಾಡಲು ಸಾಧಕಗಳಾಗಿರುವುವು, ಪರಿಶುದ್ಧಗಳಾಗಿ ಪ್ರಭೂತವಾದ ಸುಖಸಂಪಾದಕಗಳಾಗಿ ಇರುವುವು ಮತ್ತೂ ಸುಖವನ್ನೂ ಉಂಟುಮಾಡುವವು ಆದುದರಿಂದ ನಮಗೆ ಜನಕನಾದ ಮನುವು ಈ ಔಷಧಿಗಳನ್ನು ವರಿಸಿರುವನು ಎಂದು ಔಷಧಿಗಳ ಮಹತ್ವವು ಉಕ್ತವಾಗಿದೆ. ಮತ್ತು **ತಾನಿ ಭೇಷಜಾನಿ ರುದ್ರಸ್ಯ ಶಂಯೋಃ ಚ ವಶ್ಮಿ ಮಹಾದೇವಸಂಬಂಧಿ ಶಮನೀಯಾನಾಂ ರೋಗಾಣಾಮುಪಶಮನಂ ಯಾವನೀಯಾನಾಂ ಭಯಾನಾಮಸ್ಮತ್ತಃ ಪೃಥಕ್ಕರಣಂ ತದುಭಯಂ ಚ ಪ್ರಾರ್ಥಯೇ**—ಮಹಾದೇವನ ಸಂಬಂಧಿಯಾಗಿರುವವುಗಳೂ, ರೋಗಗಳ (ಶಮನ) ನಾಶವನ್ನು ಉಂಟುಮಾಡುವವುಗಳೂ, ಭಯವು ಉಂಟಾಗುವ ಸನ್ನಿವೇಶಗಳಲ್ಲಿ ಭಯನಾಶಕಗಳಾಗಿರುವವುಗಳೂ ಆಗಿರುವ ಅನುಗ್ರಹವನ್ನೂ ಮರುದ್ದೇವತೆಯ ಸಂಬಂಧಿಯಾದ ಔಷಧಿಗಳನ್ನೂ (ಈ ಎರಡನ್ನೂ) ಯಜಮಾನರು ಪ್ರಾರ್ಥಿಸಿದ್ದಾರೆ.

**ಶಂಯುಃ**—ಈ ಪದಕ್ಕೆ ಯಾಸ್ಕರು **ಸುಖಂಯುಃ** (ನಿ. ೪–೨೧) ಎಂದು ವಿವರಿಸಿದ್ದಾರೆ. ದುರ್ಗಾಚಾರ್ಯರು **ಶಂ ಯುಃ** ಎಂದು ಎರಡು ಪದವೆಂದೂ, ಶಂ ಎಂಬ ಪದಕ್ಕೆ **ರೋಗಾಣಾಂ ಉಪಶಮನಂ** ರೋಗಗಳ ನಾಶವೆಂದೂ, ಯುಃ ಎಂಬ ಪದಕ್ಕೆ **ಭಯಾನಾಂ ಯಾವನಂ** ಭಯಗಳು ಉಂಟಾಗದಂತೆ ಇರುವ ಸ್ಥಿತಿಯೆಂದೂ ಅರ್ಥವನ್ನು ವರ್ಣಿಸಿದ್ದಾರೆ.



ಸಂಹಿತಾಪಾಠಃ

ಪರಿ ಣೋ ಹೇತೀ ರುದ್ರಸ್ಯ ವೃಜ್ಯಾಃ ಪರಿ ತ್ವೇಷಸ್ಯ ದುರ್ಮತಿರ್ಮಹೀ ಗಾತ್ ।
ಅವ ಸ್ಥಿರಾ ಮಘವದ್ಭ್ಯಸ್ತನುಷ್ವ ಮೀಢ್ವಸ್ತೋಕಾಯ ತನಯಾಯ ಮೃಳ ॥ ೧೪ ॥

॥ ಪದಪಾಠಃ ॥

ಪರಿ । ನಃ । ಹೇತಿಃ । ರುದ್ರಸ್ಯ । ವೃಜ್ಯಾಃ । ಪರಿ । ತ್ವೇಷಸ್ಯ । ದುಃऽಮತಿಃ । ಮಹೀ । ಗಾತ್ ।
ಅವ । ಸ್ಥಿರಾ । ಮಘವತ್ऽಭ್ಯಃ । ತನುಷ್ವ । ಮೀಢ್ವಃ । ತೋಕಾಯ । ತನಯಾಯ । ಮೃಳ ॥ ೧೪ ॥

॥ ಸಾಯಣಭಾಷ್ಯಂ ॥

ರುದ್ರಸ್ಯ ಮಹಾದೇವಸ್ಯ ಹೇತಿರಾಯುಧಂ ನೋಽಸ್ಮಾನ್ಪರಿವೃಜ್ಯಾಃ । ಪರಿವರ಼್ಯತು । ಯಥಾ ತ್ವೇಷಸ್ಯ ದೀಪ್ತಸ್ಯ ರುದ್ರಸ್ಯ ಮಹೀ ಮಹತೀ ದುರ್ಮತಿರ್ದುಃಖಕಾರಿಣೀ ಬುದ್ಧಿಶ್ಚ ಪರಿಗಾತ್ । ಅಸ್ಮಾನ್ವರ್ಜಯಿತ್ವಾನ್ಯತ್ರ ಗಚ್ಛತು ॥ ಅಪಪರೀ ವರ್ಜನೇ । ಪಾ. ೧-೪-೮೮. ॥ ಹೇ ಮೀಢ್ವಃ ಸೇಚನಸಮರ್ಥ ರುದ್ರ ಸ್ಥಿರಾ ಸ್ಥಿರಾಣಿ ತ್ವದೀಯಾನಿ ಧನೂಂಷಿ ಮಘವದ್ಭ್ಯೋ ಹವಿರ್ಲಕ್ಷಣಧನಯುಕ್ತೇಭ್ಯೋ ಯಜಮಾನೇಭ್ಯೋಽವತನುಷ್ವ । ಅವತತಜ್ಯಾನಿ ಕುರು । ತಥಾ ತೋಕಾಯಾಸ್ಮತ್ಪುತ್ರಾಯ ತನಯಾಯ ತತ್ಪುತ್ರಾಯ ಚ ಮೃಳ । ಸುಖಂ ಕುರು

॥ ಪ್ರತಿಪದಾರ್ಥ

**ರುದ್ರಸ್ಯ**—ರುದ್ರನ । **ಹೇತಿಃ**—ಆಯುಧವು । **ನಃ**—ನಮ್ಮನ್ನು । **ಪರಿ ವೃಜ್ಯಾಃ**—ಲಕ್ಷ್ಯವನ್ನಾಗಿ ಮಾಡದೆ ಬಿಟ್ಟುಬಿಡಲಿ । **ತ್ವೇಷಸ್ಯ**—ಪ್ರಕಾಶಮಾನನಾದ ರುದ್ರನ । **ಮಹೀ**—ಮಹತ್ತಾದುದೂ । **ದುರ್ಮತಿಃ**—ದುಃಖಕರವೂ ಆದ ಕ್ರೋಧರೂಪವಾದ ಬುದ್ಧಿಯು । **ಪರಿ ಗಾತ್**—ನಮ್ಮನ್ನು ಬಿಟ್ಟು ಬೇರೆ ಕಡೆ ಲಕ್ಷ್ಯವನ್ನಿಡಲಿ । **ಮೀಢ್ವಃ**—ಕಾಮವರ್ಷಕನಾದ ರುದ್ರನೇ । **ಸ್ಥಿರಾ**—ದೃಢವಾದ ನಿನ್ನ ಧನಸ್ಸುಗಳನ್ನು । **ಮಘವದ್ಭ್ಯಃ**—ಹವಿಸ್ಸಿನ ರೂಪವಾದ ಧನವನ್ನು ಹೊಂದಿರುವ ಯಜಮಾನರಿಂದ । **ಅವ ತನುಷ್ವ**—ಬೇರೆ ಕಡೆ ತಿರುಗುವಂತೆ ಮಾಡು । **ತೋಕಾಯ**—ನಮ್ಮ ಪುತ್ರರಿಗೂ । **ತನಯಾಯ**—ನಮ್ಮ ಪೌತ್ರರಿಗೂ । **ಮೃಳ**—ಸುಖವನ್ನು ಉಂಟುಮಾಡು

॥ ಭಾವಾರ್ಥ ॥

ರುದ್ರನ ಆಯುಧಕ್ಕೆ ನಾವು ಲಕ್ಷ್ಯರಾಗಿ ಆಗದಿರಲಿ. ಪ್ರಕಾಶಮಾನನಾದ ರುದ್ರನ ಮಹತ್ತಾದುದೂ ದುಃಖಕಾರಕವೂ ಆದ ಕ್ರೋಧರೂಪವಾದ ಬುದ್ಧಿಯು ನಮ್ಮನ್ನು ಬಿಟ್ಟು ಬೇರೆ ಕಡೆ ಲಕ್ಷ್ಯವನ್ನಿಡಲಿ. ಕಾಮವರ್ಷಕನಾದ ರುದ್ರನೇ, ದೃಢವಾದ ನಿನ್ನ ಧನುಸ್ಸುಗಳನ್ನು ಹವಿಸ್ಸಿನ ರೂಪದ ಧನವನ್ನು ಹೊಂದಿರುವ ಯಜಮಾನರಿಂದ ಬೇರೆ ಕಡೆ ತಿರುಗುವಂತೆ ಮಾಡು. ನಮ್ಮ ಪುತ್ರರಿಗೂ ನಮ್ಮ ಪೌತ್ರರಿಗೂ ಸುಖವನ್ನುಂಟುಮಾಡು.

## Englis Translation.

May the javelin of Rudra avoid us: may the great displeasure of the radiant d ity pass away (from us): showerer of be ifits, turn away your strong (bow) from the wealthy (offerers of oblations), and bestow happiness upon (our) sons and grandsons.

॥ ವಿಶೇಷವಿಷಯಗಳು ॥

**ರುದ್ರಸ್ಯ ಹೇತಿಃ ನಃ ಪರಿ ವೃಜ್ಯಾಃ**— ಮಹಾದೇವನ ಶತ್ರುಗಳನ್ನು ನಿರ್ಮೂಲಮಾಡುವ ಆಯುಧವು ಯಜಮಾನರಾದ ನಮ್ಮ ವಿಷಯದಲ್ಲಿ ದೂರವಾಗಿರಲಿ ಎಂದೂ, **ತ್ವೇಷಸ್ಯ ದುರ್ಮತಿಃ ಪರಿಗಾತ್**—ತೇಜಸ್ವಿಯಾದ ಈ ರುದ್ರನ (ಎಲ್ಲರಿಗೂ) ಶತ್ರುಗಳಿಗೆ ದುಃಖವನ್ನು ಉಂಟುಮಾಡುವ ಕೆಟ್ಟಬುದ್ಧಿಯು ಯಜಮಾನರಾದ ನಮ್ಮ ವಿಷಯದಲ್ಲಿ ಇರದೆ ಬೇರೆಯವರಲ್ಲಿ ಇರಲಿ ಎಂದೂ ಪ್ರಾರ್ಥಿಸಿದೆ. **ಮೀಢ್ವಃ**—ಎಂಬ ಪದಕ್ಕೆ **ಸೇಚನಸಮರ್ಥಃ**-ವೃಷ್ಟಿಯನ್ನು ಅನುಗ್ರಹಿಸುವುದರಲ್ಲಿ ಶಕ್ತನಾದವನೆಂದು ರುದ್ರನನ್ನು ಸಂಬೋಧಿಸಿ, **ಸ್ಥಿರಾ ಮಘವದ್ಭ್ಯಃ ಅವತನುಷ್ವ—ಸ್ಥಿರಾಣಿ ತ್ವದೀಯಾನಿ ಧನೂಂಷಿ ಹವಿರ್ಲಕ್ಷಣಧನಯುಕ್ತೇಭ್ಯಃ ಯಜಮಾನೇಭ್ಯಃ ಅವತತಜ್ಯಾನಿ ಕುರು**—ರುದ್ರನ ಸಂಬಂಧಿಯಾದ ಧನುಸ್ಸು, ಹವಿಸ್ಸಿನ ರೂಪದಿಂದ ಇರುವ ಧನವನ್ನು ಹೊಂದಿರುವ ಯಜಮಾನರನ್ನು ಬಿಟ್ಟು ಇತರ ಜನರ ಮೇಲೆ ತಿರುಗಿಸಬೇಕೆಂದೂ **ತೋಕಾಯ ತನಯಾಯ ಮೃಳ**—ಯಜಮಾನರ ಮಕ್ಕಳು ಮೊಮ್ಮಕ್ಕಳು ಇವರುಗಳನ್ನು ಸುಖದಿಂದ ಇರಿಸಬೇಕೆಂದೂ ಪ್ರಾರ್ಥಿತವಾಗಿದೆ.

॥ ಸಂಹಿತಾಪಾಠಃ ॥

ಏವಾ ಬಭ್ರೋ ವೃಷಭ ಚೇಕಿತಾನ ಯಥಾ ದೇವ ನ ಹೃಣೀಷೇ ನ ಹಂಸಿ ।
ಹವನಶ್ರುನ್ನೋ ರುದ್ರೇಹ ಬೋಧಿ ಬೃಹದ್ವದೇಮ ವಿದಥೇ ಸುವೀರಾಃ ॥ ೧೫ ॥

॥ ಪದಪಾಠಃ ॥

ಏವ । ಬಭ್ರೋ ಇತಿ । ವೃಷಭ । ಚೇಕಿತಾನ । ಯಥಾ । ದೇವ । ಹೃಣೀಷೇ । ನ । ಹಂಸಿ ।
ಹವನ್ಽಶ್ರುತ್ । ನಃ । ರುದ್ರ । ಇಹ । ಬೋಧಿ । ಬೃಹತ್ । ವದೇಮ । ವಿದಥೇ । ಸುಽವೀರಾಃ ॥ ೧೫ ॥

॥ ಸಾಯಣಭಾಷ್ಯಂ ॥

**ಹೇ ಬಭ್ರೋ ಜಗತೋ ಭರ್ತರ್ಬಭ್ರುವರ್ಣ ವಾ ವೃಷಭ ಕಾಮಾನಾಂ ವರ್ಷಿತಃ ಚೇಕಿತಾನ ಸರ್ವಂ ಜಾನನ್ ಹೇ ದೇವ ದ್ಯೋತಮಾನ ರುದ್ರ ಯಥಾ ಯೇನ ಪ್ರಕಾರೇಣ ನ ಹೃಣೀಷೇ ನ ಕ್ರುಧ್ಯಸಿ ನ ಚ ಹಂಸಿ ॥ ಹೃಣೀಙ್ ಲಜ್ಜಾಯಾಂ ಅಯಂ ಕ್ರುಧ್ಯತಿಕರ್ಮಾ ಚ ॥ ಏವಂ ಹವನಶ್ರುತ್ ಅಸ್ಮದೀಯಮಾಹ್ವಾನಂ ಶೃಣ್ವನ್ ನೋಽಸ್ಮಾನ್ ಹೇ ರುದ್ರ ಇಹಾಸ್ಮಿನ್ದೇಶೇ ಬೋಧಿ । ಬುಧ್ಯಸ್ವ । ವಿದಥೇ ಯಜ್ಞೇ ಗೃಹೇ ವಾ ಸುವೀರಾಃ ಶೋಭನಪುತ್ರಾಃ ಸಂತೋ ಬೃಹತ್ ಪ್ರೌಢಂ ತ್ವದೀಯಂ ಸ್ತೋತ್ರಂ ವದೇಮ । ಉಚ್ಚಾರಯೇಮ ॥**

॥ ಪ್ರತಿಪದಾರ್ಥ ॥

**ಬಭ್ರೋ**—ಜಗತ್ತನ್ನೆಲ್ಲಾ ಧರಿಸುವವನೂ । **ವೃಷಭ**—ಕಾಮವರ್ಷಕನೂ । **ಚೇಕಿತಾನ**—ಸರ್ವಜ್ಞನೂ । **ದೇವ**—ದ್ಯೋತಮಾನನೂ ಆದ । **ರುದ್ರ**—ಎಲೈರುದ್ರನೇ । **ಯಥಾ**—ಯಾವ ರೀತಿಯಲ್ಲಿ । **ನ ಹೃಣೀಷೇ**—(ನಮ್ಮ ಮೇಲೆ) ಕೋಪಿಸಿಕೊಳ್ಳುವುದಿಲ್ಲವೋ । **ನ ಚ ಹಂಸಿ**— ನಮ್ಮನ್ನು ಕ್ರೋಧಪೂರ್ವಕವಾಗಿ ಹಿಂಸಿಸುವುದಿಲ್ಲವೋ (ಆ ರೀತಿಯಲ್ಲಿ) । **ಹವನಶ್ರುತ್**— ನಮ್ಮ ಆಹ್ವಾನವನ್ನು ಕೇಳುವವನಾಗಿ । **ನಃ**— ನಮ್ಮನ್ನು । **ಇಹ**—ಈ ಯಾಗ ಪ್ರದೇಶದಲ್ಲಿ । **ಬೋಧಿ**—ತಿಳಿ । **ವಿದಥೇ**—ಯಜ್ಞಗೃಹದಲ್ಲಿ । **ಸುವೀರಾಃ**—ಶ್ರೇಷ್ಠರಾದ ವೀರಪುತ್ರರಿಂದೊಡಗೂಡಿದ ನಾವು । **ಬೃಹತ್**—ಪ್ರೌಢವಾದ ನಿನ್ನ ಸ್ತುತಿಯನ್ನು । **ವದೇಮ**—ಪಠಿಸುತ್ತೇವೆ

॥ ಭಾವಾರ್ಥ ॥

ಜಗತ್ತನ್ನೆಲ್ಲಾ ಧರಿಸುವವನೂ, ಕಾಮವರ್ಷಕನೂ, ಸರ್ವಜ್ಞನೂ, ದ್ಯೋತಮಾನನೂ ಆದ ಎಲೈರುದ್ರನೇ ಯಾವ ರೀತಿಯಲ್ಲಿ ನೀನು ನಮ್ಮ ಮೇಲೆ ಕೋಪಿಸಿಕೊಳ್ಳುವುದಿಲ್ಲವೋ ಮತ್ತು ಕ್ರೋಧಪೂರ್ವಕವಾಗಿ ನಮ್ಮನ್ನು ಹಿಂಸಿಸುವುದಿಲ್ಲವೋ ಆ ರೀತಿಯಲ್ಲಿ ನಮ್ಮ ಆಹ್ವಾನವನ್ನು ಕೇಳುವವನಾಗಿ ನಮ್ಮನ್ನು ಈ ಯಾಗಪ್ರದೇಶದಲ್ಲಿ ತಿಳಿ. ಯಜ್ಞಗೃಹದಲ್ಲಿ ವೀರಪುತ್ರರಿಂದೊಡಗೂಡಿದ ನಾವು ಪ್ರೌಢವಾದ ನಿನ್ನ ಸ್ತುತಿಯನ್ನು ಪಠಿಸುತ್ತೇವೆ.

## English Translation.

Cherisher of the world, showerer (of benefits), omniscient and divine (Rudra), hearer of our invocation, so consider us on this occasion, that you may not be irate, nor slay us, but that, blessed with excellent descendants, we may worthily glorify you at this sacrifice.

॥ ವಿಶೇಷವಿಷಯಗಳು ॥

ಬಭ್ರೋ, ವೃಷಭ, ಚೇಕಿತಾನ, ದೇವ ಈ ಪದಗಳಿಂದ ರುದ್ರನನ್ನು ಸಂಬೋಧಿಸಿ, ಈ ರುದ್ರನು ಜಗತ್ತೆಲ್ಲವನ್ನೂ ತಾನು ಅಧಿಪತಿಯಾಗಿ ಆಳುವವನೆಂದೂ, ತನ್ನನ್ನು ಸೇವಿಸುವವರ ಕಾಮುಗಳನ್ನು ಸಲ್ಲಿಸುವವನೆಂದೂ. ಎಲ್ಲವನ್ನೂ ತಿಳಿದು ಸರ್ವಜ್ಞನಾಗಿರುವವನೆಂದೂ, ಕಾಂತಿಯಿಂದ ಅಥವಾ ತೇಜಸ್ಸುಗಳಿಂದ ಬೆಳಗುತ್ತಿರುವವನೆಂದೂ ಈ ದೇವನ ಪ್ರಭಾವವನ್ನು ವರ್ಣಿಸಿ, ಈ ದೇವನು ಯಜಮಾನರ ವಿಷಯದಲ್ಲಿ **ಯಥಾ ನ ಹೃಣೀಷೇ ನ ಚ ಹಂಸಿ,**

ಕೋಪಗೊಳ್ಳದೆಯೂ, ನಾಶವನ್ನು ಉಂಟುಮಾಡದೆಯೂ ಇರುವವನಾಗಿ, **ನಃ ಹವನಶ್ರುತ್ ಬೋಧಿ** ಯಜಮಾನರಾದ ನಾವು ಯಜ್ಞಗಳಲ್ಲಿ ಮಾಡುವ ನಮ್ಮ ಆಹ್ವಾನವನ್ನು ಶ್ರವಣಮಾಡಿ ನಮ್ಮನ್ನು ಸರಿಯಾಗಿ ತಿಳಿಯಲಿ ಎಂದೂ, ನಾವು **ವಿದಥೇ ಸುವೀರಾಃ ಬೃಹತ್ ವದೇಮ** ಯಜ್ಞಗಳಲ್ಲಿಯೂ ಮನೆಗಳಲ್ಲಿಯೂ, ಉತ್ತಮ ಗುಣಗಳುಳ್ಳ ನಮ್ಮ ಪುತ್ರರೊಡನೆ ಪ್ರೌಢವಾದ ಈ ದೇವನ ಸ್ತುತಿಗಳನ್ನು ಪಠಿಸುವೆವು ಎಂದೂ ವಿವರಿಸಿದೆ.

# ಮೂವತ್ತನಾಲ್ಕನೆಯ ಸೂಕ್ತವು

**ಧಾರಾವರಾ ಇತಿ ಪಂಚದಶರ್ಚಂ ದ್ವಿತೀಯಂ ಸೂಕ್ತಂ ಗಾರ್ತ್ಸಮದಂ ಮಾರುತಂ । ಅಂತ್ಯಾ ತ್ರಿಷ್ಟುಪ್ ಶಿಷ್ಟಾ ಜಗತ್ಯಃ । ತಥಾ ಚಾನುಕ್ರಾಂತಂ । ಧಾರಾವರಾ ಮಾರುತಂ ತ್ರಿಷ್ಟುಬಂತಮಿತಿ ॥ ಪೃಷ್ಠ್ಯಾಭಿಪ್ಲವಷಡಹಯೋಸ್ತೃತೀಯೇಽಹನ್ಯಾಗ್ನಿಮಾರುತಶಸ್ತ್ರಸ್ಯೇದಂ ಮಾರುತನಿವಿದ್ಧಾನಂ । ಸೂತ್ರಿತಂ ಚ । ವೈಶ್ವಾನರಾಯ ಧಿಷಣಾಂ ಧಾರಾವರಾ ಮರುತಸ್ತ್ವಮಗ್ನೇ ಪ್ರಥಮೋ ಅಂಗಿರಾ ಇತ್ಯಾಗ್ನಿಮಾರುತಂ । ಆ. ೭-೭. । ಇತಿ ॥**

ಅನುವಾದವು—**ಧಾರಾವರಾ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹದಿನೈದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು ; ಮರುತ್ತುಗಳು ದೇವತೆಯು ; ಕೊನೆಯ ಋಕ್ಕು ತ್ರಿಷ್ಟುಪ್ ಛಂದಸ್ಸುವು ; ಉಳಿದ ಋಕ್ಕುಗಳು ಜಗತೀಛಂದಸ್ಸುವು. ಅನುಕ್ರಮಣಿಕೆಯಲ್ಲಿ—**ಧಾರಾವರಾ ಮಾರುತಂ ತ್ರಿಷ್ಟುಬಂತಮಿತಿ** ಎಂದು ಹೇಳಿರುವುದು. ಪೃಷ್ಠ್ಯ ಮತ್ತು ಅಭಿಪ್ಲವಷಡಹವೆಂಬ ಯಾಗಗಳ ಮೂರನೆಯ ದಿನದಲ್ಲಿ ಆಗ್ನಿಮಾರುತಶಸ್ತ್ರಮಂತ್ರಗಳ ಪಠನಪ್ರಾರಂಭದಲ್ಲಿ ಈ ಸೂಕ್ತವನ್ನು ನಿವಿನ್ಮಂತ್ರಗಳಿಗಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ವೈಶ್ವಾನರಾಯ ಧಿಷಣಾಂ ಧಾರಾವರಾ ಮರುತಸ್ತ್ವಮಗ್ನೇ ಪ್ರಥಮೋ ಅಂಗಿರಾ ಇತ್ಯಾಗ್ನಿಮಾರುತಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೭-೭)

## ಸೂಕ್ತ—೩೪

ಮಂಡಲ—೨ ॥ ಅನುವಾಕ—೪ ॥ ಸೂಕ್ತ—೩೪ ॥

ಅಷ್ಟಕ—೨ ॥ ಅಧ್ಯಾಯ—೭ ॥ ವರ್ಗ—೧೯, ೨೦, ೨೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥

॥ ಋಷಿಃ—ಗೃತ್ಸಮದಃ ॥

॥ ದೇವತಾ—ಮರುತಃ ॥

॥ ಛಂದಃ—೧-೧೪. ಜಗತೀ । ೧೫. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಧಾರಾವರಾ ಮರುತೋ ಧೃಷ್ಣ್ವೋಜಸೋ ಮೃಗಾ ನ ಭೀಮಾಸ್ತವಿಷೀಭಿರರ್ಚಿನಃ।

ಅಗ್ನಯೋ ನ ಶುಶುಚಾನಾ ಋಜೀಷಿಣೋ ಭೃಮಿಂ ಧಮಂತೋ ಅಪ ಗಾ

ಅವೃಣ್ವತ ॥ ೧ ॥

॥ ಪದಪಾಠಃ ॥

ಧಾರಾವರಾಃ । ಮರುತಃ । ಧೃಷ್ಣುಽಓಜಸಃ । ಮೃಗಾಃ । ನ । ಭೀಮಾಃ । ತವಿಷೀಭಿಃ । ಅರ್ಚಿನಃ ।

ಅಗ್ನಯಃ । ನ । ಶುಶುಚಾನಾಃ । ಋಜೀಷಿಣಃ । ಭೃಮಿಂ । ಧಮಂತಃ । ಅಪ । ಗಾಃ । ಅವೃಣ್ವತ ॥ ೧ ॥

॥ ಸಾಯಣಭಾಷ್ಯಂ ॥

ಧಾರಾವರಾ ಉದಕಧಾರಯಾಂತರಿಕ್ಷಮಾವೃಣ್ವಂತಃ । ಯದ್ವಾ ಧಾರಾಣಾಂ ಧೃತಾನಾಂ ಸ್ಥಿರಾಣಾಂ ವೃಕ್ಷಾದೀನಾಂ ನಿವಾರಯಿತಾರಶ್ಚಾಲಾಯಿತಾರಃ । ಧೃಷ್ಣ್ವೋಜಸಃ ಪರೇಷಾಂ ಧರ್ಷಕೇಣ ಬಲೇನ ಯುಕ್ತಾಃ । ಅತ ಏವ ಮೃಗಾ ನ ಭೀಮಾಃ । ಸಿಂಹಾ ಇವ ಭಯಂಕರಾಃ । ತವಿಷೀಭಿರಾತ್ಮೀಯೈರ್ಬಲೈರ್ವೃಷ್ಟಿಪ್ರದಾನಾದಿನಾರ್ಚಿನಃ ಸರ್ವಂ ಜಗತ್ಪೂಜಯಂತಃ । ಅಗ್ನಯೋ ನ ಶುಶುಚಾನಾ ದೀಪ್ತಾ ವಹ್ನಯ ಇವ ದೀಪ್ಯಮಾನಾಃ ॥ ಶುಚ ದೀಪ್ತೌ । ಲಿಟಃ ಕಾನಚ್ ॥ ಋಜೀಷಿಣಃ । ಋಜೀಷಮುದಕಂ ತದ್ವಂತಃ । ಯದ್ವಾ ಋಜೀಷೋಽಪಗತಸಾರಃ ಸೋಮಃ । ತೇನ ಯುಕ್ತಾಃ । ತೃತೀಯಸವನೇ ಹ್ಯಾಗ್ನಿಮಾರುತೇ ಮರುತಃ ಸ್ತೂಯಂತೇ । ತತ್ರ ಚ ಸವನದ್ವಯೇಽಭಿಷುತಂ ಗತಸಾರಂ ಸೋಮಮಭಿಷುಣ್ವಂತಿ । ಅತಸ್ತೇಷಾಂ ತದ್ಯುಕ್ತತ್ವಂ । ಏವಂಭೂತಾ ಮರುತೋ ಭೃಮಿಂ ಭ್ರಾಮ್ಯಂತಂ ಮೇಘಂ ಧಮಂತೋ ವರ್ಷಣಾರ್ಥಮಿತಸ್ತತಃ ಪ್ರೇರಯಂತೋ ಗಾಸ್ತದಂತರ್ಗತಾ ಅಪೋಽಪಾವೃಣ್ವತ । ಅಪಾವೃತಾಃ ಕುರ್ವಂತಿ ಯಥಾ ಸರ್ವೈರ್ದೃಶ್ಯಂತೇ ತಥಾ ಪ್ರವರ್ಷಂತೀತ್ಯರ್ಥಃ । ಯದ್ವಾ ಭೃಮ್ಯಾಖ್ಯೋ ವೀಣಾವಿಶೇಷಃ । ತಂ ಧಮಂತೋ ವಾದಯಂತೋ ಗಾ ವಲನಾಮ್ನಾಸುರೇಣಾಪಿಹಿತಾ ಅಪಾವೃಣ್ವತ । ಅಪಗತಾವರಣಾ ಅಕುರ್ವನ್ ॥

॥ ಪ್ರತಿಪದಾರ್ಥ ॥

**ಧಾರಾವರಾಃ**—ಉದಕಧಾರೆಯಿಂದ ಕೂಡಿ ಅಂತರಿಕ್ಷವನ್ನು ಆವರಿಸುವವರೂ, ಅಥವಾ ಸ್ಥಿರವಾಗಿರತಕ್ಕ ವೃಕ್ಷಾದಿಗಳನ್ನು ಚಲಿಸುವಂತೆ ಮಾಡುವವರೂ । **ಧೃಷ್ಣ್ವೋಜಸಃ**—ಶತ್ರುಗಳನ್ನು ಸದೆಬಡಿಯುವ ಶಕ್ತಿಯುಳ್ಳವರೂ । **ಮೃಗಾ ನ**—ಸಿಂಹಗಳಂತೆ । **ಭೀಮಾಃ**—ಭಯಂಕರವಾದ ರೂಪವುಳ್ಳವರೂ । **ತವಿಷೀಭಿಃ**—ತಮ್ಮ ಆತ್ಮ ಶಕ್ತಿಗಳಿಂದ । **ಅರ್ಚಿನಃ**—ಜಗತ್ತನ್ನು ಪೂಜಿಸುವವರೂ । **ಅಗ್ನಯೋ ನ**—ಪ್ರಕಾಶಮಾನವಾದ

ಅಗ್ನಿಗಳಂತೆ । **ಶುಶುಚಾನಾಃ**—ಬೆಳಗುವವರೂ । **ಋಜೀಷಿಣಃ**—ಉದಕವನ್ನು ಹೊಂದಿರುವವರೂ ಆದ । **ಮರುತಃ**—ಮರುದ್ದೇವತೆಗಳು । **ಭ್ರಮಿಂ**—ಸಂಚರಿಸುವ ಮೇಘಗಳನ್ನು । **ಧಮಂತಃ**—ವೃಷ್ಟ್ಯರ್ಥವಾಗಿ ಪ್ರೇರಿಸುತ್ತಾ । **ಗಾಃ**—ತದಂತರ್ಗತವಾದ ಉದಕಗಳನ್ನು । **ಅಪ ಅವೃಣತ**—ವೃಷ್ಟಿರೂಪದಲ್ಲಿ ಸುರಿಸುವಂತೆ ಮಾಡುತ್ತಾರೆ.

॥ ಭಾವಾರ್ಥ ॥

ಸ್ಥಿರವಾಗಿರತಕ್ಕ ವೃಕ್ಷಾದಿಗಳನ್ನು ಚಲಿಸುವಂತೆ ಮಾಡುವವರೂ ಶತ್ರುಗಳನ್ನು ಸದೆಬಡಿಯುವ ಶಕ್ತಿಯುಳ್ಳವರೂ, ಸಿಂಹಗಳಂತೆ ಭಯಂಕರವಾದ ರೂಪವುಳ್ಳವರೂ, ತಮ್ಮ ಆತ್ಮಶಕ್ತಿಗಳಿಂದ ಜಗತ್ತನ್ನು ಪೂಜಿಸುವವರೂ, ಪ್ರಕಾಶಮಾನವಾದ ಅಗ್ನಿಗಳಂತೆ ಬೆಳಗುವವರೂ ಉದಕವಂತರೂ ಆದ ಮರುದ್ದೇವತೆಗಳು ಸಂಚರಿಸುವ ಮೇಘಗಳನ್ನು ವೃಷ್ಟ್ಯರ್ಥವಾಗಿ ಪ್ರೇರಿಸುತ್ತಾ ತದಂತರ್ಗತವಾದ ಉದಕಗಳನ್ನು ವೃಷ್ಟಿರೂಪದಲ್ಲಿ ಸುರಿಸುವಂತೆ ಮಾಡುತ್ತಾರೆ.

## English Translation.

The Maruts, shedders of showers, endowed with resistless might, like formidable lions, reverencing (the world) by their energies, resplendent as fires, laden with water, and blowing about the wandering cloud, give vent to its (collected) rain.

॥ ವಿಶೇಷವಿಷಯಗಳು ॥

**ಧಾರಾವರಾಃ—ಉದಕಧಾರಯಾ ಅಂತರಿಕ್ಷಮಾವೃಣ್ವಂತಃ । ಯದ್ವಾ ಧೃತಾನಾಂ ಸ್ಥಿರಾಣಾಂ ವೃಕ್ಷಾದೀನಾಂ ಚಾಲಯಿತಾರಃ, ಯದ್ವಾ ಸರ್ವಸ್ಯ ಜಗತೋ ಧಾರಯಿತಾರಃ ।** ಮರುದ್ದೇವತೆಗಳು ವೃಷ್ಟ್ಯುದಕಗಳ ಧಾರೆಗಳಿಂದ (ಹನಿಗಳು ಎಡೆಬಿಡದೆ ಏಕರೀತಿಯಾಗಿ ಸುರಿಸುವುದರಿಂದ) ಅಂತರಿಕ್ಷವನ್ನು ವ್ಯಾಪಿಸಿರುವವರು. ಅಥವಾ ಚಲಿಸದೆ ಸ್ಥಿರವಾಗಿ ಇರುವ ವೃಕ್ಷವೇ ಮೊದಲಾದವುಗಳನ್ನೂ ಚಲಿಸುವಹಾಗೆ ಮಾಡುವವರು, ಅಥವ ಜಗತ್ತೆಲ್ಲವನ್ನೂ ತಮ್ಮ ಸಾಮರ್ಥ್ಯದಿಂದ ರಕ್ಷಿಸಿ ಧರಿಸಿರುವವರು ಎಂದು ಮೂರುವಿಧವಾದ ಅರ್ಥವನ್ನು ವರ್ಣಿಸಿದೆ.

**ಧೃಷ್ಣ್ವೋಜಸಃ ಮೃಗಾ ನ ಭೀಮಾಃ—ಪರೇಷಾಂ ಧರ್ಷಕೇನ ಬಲೇನ ಯುಕ್ತಾಃ ಅತ ಏವ ಸಿಂಹಾ ಇವ ಭಯಂಕರಾಃ।** ಶತ್ರುಗಳನ್ನು ನಿಗ್ರಹಮಾಡುವ ಶಕ್ತಿಯಿಂದ ಕೂಡಿರುವವರಾದಕಾರಣ ಸಿಂಹಗಳಹಾಗೆ ಭಯವನ್ನು ಉಂಟುಮಾಡುವವರೆಂದು ಮರುದ್ದೇವತೆಗಳ ಪರಾಕ್ರಮವು ಸಿಂಹದ ಪರಾಕ್ರಮಕ್ಕೆ ಹೋಲಿಸಿ ಹೇಳಿದೆ.

**ತವಿಷೀಭಿಃ ಅರ್ಚಿನಃ—ಆತ್ಮೀಯೈರ್ಬಲೈಃ ವೃಷ್ಟಿಪ್ರದಾನಾದಿನಾ ಸರ್ವಂ ಜಗತ್ ಪೂಜಯಂತಃ।** ಮರುದ್ದೇವತೆಗಳು ತಮ್ಮ ಶಕ್ತಿಯಿಂದ ಅನುಗ್ರಹಿಸುವ ವೃಷ್ಟ್ಯುದಕಗಳಿಂದ ಜಗತ್ತೆಲ್ಲವೂ (ಪೂಜೆಗೆ) ಶ್ಲಾಘನೆಗೆ ಅರ್ಹವಾಗಿರುವಂತೆ ಮಾಡುವವರು ಎಂದೂ, **ಅಗ್ನಯೋ ನ ಶುಶುಚಾನಾಃ—ದೀಪ್ತಾವಹ್ನಯ ಇವ ದೀಪ್ಯಮಾನಾಃ** ಕಾಂತಿಯಿಂದ ಬೆಳಗುತ್ತಿರುವ ಅಗ್ನಿಗಳಹಾಗೆ ತೇಜಸ್ಸುಗಳಿಂದ ಪ್ರಭೂತವಾಗಿ ಪ್ರಕಾಶಿಸುತ್ತಿರುವವರು ಎಂದೂ ವರ್ಣಿತವಾಗಿದೆ.

**ಋಜೀಷಿಣಃ—ಋಜೀಷಿಮುದಕಂ ತದ್ವಂತಃ । ಯದ್ವಾ ಋಜೀಷೋ ಅಪಗತಸಾರಃ ಸೋಮಃ ತೇನ ಯುಕ್ತಾಃ । ತೃತೀಯಸವನೇ ಹಿ ಆಗ್ನಿಮಾರುತೇ ಮರುತಃ ಸ್ತೂಯಂತೇ । ತತ್ರ ಚ ಸವನದ್ವಯೇ ಅಭಿಷುತಂ ಗತಸಾರಂ ಸೋಮಮಭಿಷುಣ್ವಂತಿ । ಅತಸ್ತೇಷಾಂ ತದ್ಯುಕ್ತತ್ವಂ ।** ಸಾಯಣರು ಋಜೀಷ ಶಬ್ದಕ್ಕೆ ಉದಕ (ನೀರು) ಎಂದು ಅರ್ಥವನ್ನು ಹೇಳಿ ಮರುದ್ದೇವತೆಗಳು ವೃಷ್ಟ್ಯುದಕಗಳನ್ನು ಸುರಿಸುವವರಾದುದರಿಂದ ಉದಕವುಳ್ಳವರೆಂದು ಒಂದು ವಿಧವಾದ ಅರ್ಥವನ್ನು ವಿವರಿಸಿದ್ದಾರೆ. ಎರಡನೆಯ ಅರ್ಥದಲ್ಲಿ (ಸಾರವನ್ನು) ರಸವನ್ನು ಹಿಂಡಿರುವ ಸೋಮಲತೆಗಳೆಂದು ಹೇಳಿದೆ. ಯಜ್ಞಕರ್ಮವನ್ನು ಆಚರಿಸುವಾಗ, ಮೂರನೆಯ ಸವನದಲ್ಲಿ ಅಗ್ನಿಮರುತ್ದೇವತೆಗಳ ಸ್ತೋತ್ರವನ್ನು ಪಠಿಸುವರು. ಆಗ ಹಿಂದಿನ ಸವನಗಳಲ್ಲಿ ರಸವನ್ನು ಹಿಂಡಿ ಉಳಿದ ಸಿಪ್ಪೆಗಳಿಂದ ರಸವನ್ನು ಹಿಂಡಿ ಈ ದೇವತೆಗಳಿಗಾಗಿ ಹೋಮವನ್ನಾಚರಿಸುವರು. ಪ್ರಾತಃಕಾಲದ ಅಥವಾ ಮಾಧ್ಯಾಹ್ನಿಕ ಸವನಗಳೆಂಬ ಎರಡು ವೇಳೆಯಲ್ಲಿಯೂ ಹಿಂಡಿದ ಸೋಮಲತೆಗಳನ್ನೇ ಸಾಯಂಸವನದಲ್ಲಿಯೂ ಹಿಂಡುವ ಕಾರಣ ರಸವಿಲ್ಲದಿರುವ ಸಿಪ್ಪೆಯು ಋಜೀಷವೆನ್ನಿಸಿಕೊಳ್ಳುವುದು. ಈ ರೀತಿಯಿಂದಿರುವ ಸೋಮವನ್ನು ಹವಿರ್ಭಾಗವನ್ನಾಗಿ ಹೊಂದಿರುವುದರಿಂದ ಮರುದ್ದೇವತೆಗಳನ್ನು ಋಜೀಷಿಣಃ ಎಂದು ಇಲ್ಲಿ ಹೇಳಿದೆ ಎಂದು ಅರ್ಥವನ್ನು ವಿವರಿಸಿದೆ. ಯಾಸ್ಕರು ಋಜೀಷೀ ಎಂಬ ಪದದ ಅರ್ಥವನ್ನು ವಿವರಿಸುವಾಗ—

**ಅಪಾಂತಮನ್ಯುಸ್ತೃಪಲಪ್ರಭರ್ಮಾ ಧುನಿಶ್ಶಿಮೀವಾಞ್ಛರುಮಾಁ ಋಜೀಷೀ ।**
**ಸೋಮೋ ವಿಶ್ವಾನ್ಯತಸಾ ವನಾನಿ ನಾರ್ವಾಗಿಂದ್ರಂ ಪ್ರತಿಮಾನಾನಿ ದೇಭುಃ ॥**

(ಋ. ಸಂ. ೧೦-೮೯-೫)

ಎಂಬ ಋಕ್ಕನ್ನು ಉದಹರಿಸಿ **ಋಜೀಷೀ ಸೋಮಃ ಯತ್ ಸೋಮಸ್ಯ ಪೂಯಮಾನಸ್ಯ ಅತಿರಿಚ್ಯತೇ ತದೃಜೀಷಮಪಾರ್ಜಿತಂ ಭವತಿ ತೇನರ್ಜೀಷೀ ಸೋಮಃ** (ನಿ. ೫-೧೨) ಎಂದು ಅರ್ಥವನ್ನು ವಿವರಿಸಿ, **ಅಥಾಪ್ಯೈಂದ್ರೋ ನಿಗಮೋ ಭವತಿ** ಎಂದು ಹೇಳಿದ್ದಾರೆ. ದುರ್ಗಾಚಾರ್ಯರು—

**ಋಜೀಷೀ ವಜ್ರೀ ವೃಷಭಸ್ತುರಾಷಾಟ್ಛುಷ್ಮೀ ರಾಜಾ ವೃತ್ರಹಾ ಸೋಮಪಾವಾ ।**
**ಯುಕ್ತ್ವಾ ಹರಿಭ್ಯಾಮುಪ ಯಾಸದರ್ವಾಙ್ ಮಾಧ್ಯಂದಿನೇ ಸವನೇ ಮತ್ಸದಿಂದ್ರಃ ॥**

(ಋ. ಸಂ ೫-೪೦-೪)

ಎಂಬ ಈ ಋಕ್ಕನ್ನು ಉದಹರಿಸಿ **ಋಜೀಷೀ ಇಂದ್ರಃ** ಎಂದು ಹೇಳಿದ್ದಾರೆ.

**ಭೃಮಿಂ ಧಮಂತಃ ಗಾಃ ಅಪ ಅವೃಣ್ವತ—ಭ್ರಾಮ್ಯಂತಂ ಮೇಘಂ ವರ್ಷಣಾರ್ಥಮಿತಸ್ತತಃ ಪ್ರೇರಯಂತಃ ತದಂತರ್ಗತಾಃ ಅಪಃ ಅಪಾವೃತಾಃ ಕುರ್ವಂತಿ ಯದ್ವಾ ಭೃಮ್ಯಾಖ್ಯಃ ವೀಣಾವಿಶೇಷಃ ತಂ ಧಮಂತೋ ವಾದಯಂತಃ ಬಲನಾಮ್ನಾ ಅಸುರೇಣಾಪಿಹಿತಾ ಗಾಃ ಅಪಗತಾವರಣಾ ಅಕುರ್ವನ್ ।** ಉದಕಗಳಿಂದ ವ್ಯಾಪ್ತವಾಗಿ ಅಂತರಿಕ್ಷದಲ್ಲಿ ಸುತ್ತಾಡುತ್ತಿರುವ ಮೇಘಗಳನ್ನು ಮಳೆಹುಯ್ಯುವುದಕ್ಕಾಗಿ ಅಲ್ಲಲ್ಲಿ ಚಲಿಸುವ ಹಾಗೆ ಮರುದ್ದೇವತಗಳು ಪ್ರೇರಿಸಿ ಮೇಘಗಳಲ್ಲಿ ಅಡಗಿರುವ ಉದಕಗಳು ವೃಷ್ಟಿಯ ರೂಪದಿಂದ ಹೊರಗೆ ಬರುವ ಹಾಗೆ ಮಾಡುವರೆಂದು ಒಂದು ವಿಧವಾದ ಅರ್ಥವನ್ನು ವಿವರಿಸಿದೆ. ಎರಡನೆಯದಾಗಿ ಭೃಮಿ ಶಬ್ದಕ್ಕೆ ವೀಣೆ ಎಂದು ಅರ್ಥವನ್ನು ಹೇಳಿದೆ. ಈ ಮರುದ್ದೇವತೆಗಳು ವಲನೆಂಬ ಅಸುರನು ದೇವತೆಗಳ ಗೋವುಗಳನ್ನು ಅಪಹರಿಸಿ ಬಚ್ಚಿಟ್ಟಿದ್ದಾಗ

ಇವರು ವೀಣಾವಾದನವನ್ನು (ವೀಣೆಯನ್ನು ಬಾರಿಸಿ) ನಡೆಸಿ ಆ ಗೋವುಗಳು ಇರುವ ಪ್ರದೇಶವನ್ನು ಗುರ್ತಿಸಿ ಆ ಗೋವುಗಳು ಹೊರಗಡೆಗೆ ಬರುವ ಹಾಗೆ ಮಾಡಿದರು ಎಂದು ವರ್ಣಿಸಿದೆ. ಈ ಉಪಾಖ್ಯಾನವು ಹಿಂದೆಯೇ ವರ್ಣಿತ ವಾಗಿದೆ. ಯಾಸ್ಕರು—**ಭೃಮಿಃ ಭ್ರಾಮ್ಯತೇಃ** (ನಿ. ೬-೨೧) ಎಂದು ವ್ಯಾಖ್ಯಾನವನ್ನು ಮಾಡಿ—

**ಇಮಾಮಗ್ನೇ ಶರಣಿಂ ಮೀಮೃಷೋ ನ ಇಮಮಧ್ವಾನಂ ಯಮಗಾಮ ದೂರಾತ್ ।**
**ಆಪಿಃ ಪಿತಾ ಪ್ರಮತಿಃ ಸೋಮ್ಯಾನಾಂ ಭೃಮಿರಸ್ಯೃಷಿಕೃನ್ಮರ್ತ್ಯಾನಾಂ ॥**
(ಋ. ಸಂ. ೧-೩೧-೧೬)

ಎಂಬ ಋಕ್ಕನ್ನು ಉದಹರಿಸಿ ಭೃಮಿಶಬ್ದದಿಂದ ಅಗ್ನಿಯು ಅಭಿಧೇಯನಾಗಿರುವನೆಂದು ಅರ್ಥವನ್ನು ವಿವರಿಸಿದ್ದಾರೆ.

॥ ಸಂಹಿತಾಪಾಠಃ ॥

ದ್ಯಾವೋ ನ ಸ್ತೃಭಿಶ್ಚಿತಯಂತ ಖಾದಿನೋ ವ್ಯ೧ಭ್ರಿಯಾ ನ ದ್ಯುತಯಂತ
ವೃಷ್ಟಯಃ
ರುದ್ರೋ ಯದ್ವೋ ಮರುತೋ ರುಕ್ಮವಕ್ಷಸೋ ವೃಷಾಜನಿ ಪೃಶ್ನ್ಯಾಃ ಶುಕ್ರ
ಊಧನಿ ॥ ೨ ॥

॥ ಪದಪಾಠಃ ॥

ದ್ಯಾವಃ । ನ । ಸ್ತೃಽಭಿಃ । ಚಿತಯಂತ । ಖಾದಿನಃ । ವಿ । ಅಭ್ರಿಯಾಃ । ನ । ದ್ಯುತಯಂತ । ವೃಷ್ಟಯಃ ।
ರುದ್ರಃ । ಯತ್ । ವಃ । ಮರುತಃ । ರುಕ್ಮಽವಕ್ಷಸಃ । ವೃಷಾ । ಅಜನಿ । ಪೃಶ್ನ್ಯಾಃ । ಶುಕ್ರೇ । ಊಧನಿ ॥

॥ ಸಾಯಣಭಾಷ್ಯಂ ॥

ಸ್ತೃಭಿಃ । ನಕ್ಷತ್ರನಾಮೈತತ್ । ಯದಾಹ ಯಾಸ್ಕಃ । ಋಕ್ಷಾಃ ಸ್ತೃಭಿರಿತಿ ನಕ್ಷತ್ರಾಣಾಂ । ನಿ. ೩-೨೦ । ಇತಿ । ನಕ್ಷತ್ರೈರ್ದ್ಯಾವೋ ನ ಯಥಾ ದ್ಯುಲೋಕಾಶ್ಚಿತಯಂತ ಚೇತಯಂತಿ ಸ್ವಾತ್ಮಾನಂ ಜ್ಞಾಪಯಂತಿ ॥ ಚಿತೀ ಸಂಜ್ಞಾನೇ । ಪ್ರಕಾಶಂತ ಇತ್ಯರ್ಥಃ । ತಥಾ ಖಾದಿನಃ ಶತ್ರೂಣಾಂ ಖಾದಕಾ ಮರುತಃ ಸ್ವಕೀಯೈರಾಭರಣೈರ್ಜ್ಞಾಯಂತೇ । ಯದ್ವಾ ಖಾದಃ ಕಟಕಂ । ತದ್ಯುಕ್ತಾಃ ಸಂತಃ ಪ್ರಕಾಶಂತೇ । ತಥಾ ವೃಷ್ಟಯೋ ವರ್ಷಕಾ ಮರುತೋಽಭ್ರಿಯಾ ನ । ಅಭ್ರೇಷು ಭವಾ ವಿದ್ಯುತ ಇವ

ವಿ ದ್ಯುತಯಂತ । ಸರ್ವಂ ಜಗದ್ವಿದ್ಯೋತಯಂತಿ । ಪ್ರಕಾಶಯಂತಿ ।' ಅಭ್ರಶಬ್ದಾದ್ಭವಾರ್ಥೇ ಸಮುದ್ರಾ-ಭ್ರಾದ್ಘ ಇತಿ ಘ ಪ್ರತ್ಯಯಃ । ಶೇಷಃ ಪ್ರತ್ಯಕ್ಷಕೃತಃ ರುಕ್ಮವಕ್ಷಸಃ ರುಕ್ಮಂ ರೋಚಮಾನಾಭರಣಂ ವಕ್ಷಸ್ಯುರಸಿ ಯೇಷಾಂ ತಾದೃಶಾ ಹೇ ಮರುತೋ ಯದ್ಯದಾ ವೋ ಯುಷ್ಮಾನ್ ವೃಷಾ ಸೇಚನಸಮರ್ಥೋ ರುದ್ರೋ ಮಹಾದೇವಃ ಪೃಶ್ನ್ಯಾಃ । ಪೃಶ್ನಿರ್ಮಾಧ್ಯಮಿಕಾ ವಾಕ್ । ತಸ್ಯಾಃ ಸಂಬಂಧಿನಿ ಶುಕ್ರೇ ನಿರ್ಮಲ ಊಧನ್ಯುಪ್ಪತೇ ಪ್ರದೇಶೇಽಜನಿ । ಅಜನಯತ್ । ತದಾನೀಮಿತಿ ಪೂರ್ವತ್ರ ಸಂಬಂಧಃ । ಯದ್ವಾ ಪೃಶ್ನಿರ್ನಾನಾವರ್ಣೇಯಂ ಭೂಮಿಃ ಪುರಾ ಗೋರೂಪಧರಾಸೀತ್ ತಸ್ಯಾಂ ಮಹೇಶೋ ವೃಷೋ ಭೂತ್ವಾ ಮರುತ ಉತ್ಪಾದಯಾಮಾಸೇತ್ಯಾಚಕ್ಷತೇ । ತದತ್ರೋಚ್ಯತೇ । ಹೇ ಮರುತೋ ಯದ್ಯಸ್ಮಾದ್ವೋ ಯುಷ್ಮಾನ್ ವೃಷಾ ವೃಷರೂಪೋ ರುದ್ರಃ ಪೃಶ್ನ್ಯಾ ಗೋಃ ಶುಕ್ರೇ ನಿರ್ಮಲ ಊಧನ್ಯೂಧಸಿ ಪಯಸ ಉತ್ಪತ್ತಿಸ್ಥಾನೇಽಜನಿ । ಅಜೀಜನತ್ । ತಸ್ಮಾದ್ಯೂಯಮೇವಂ ಮಹಾನುಭಾವಾ ಜಾತಾ ಇತ್ಯರ್ಥಃ । ತಥಾ ಚ ತೈತ್ತಿರೀಯಕಂ । ಪೃಶ್ನಿಯೈ ವೈ ಪಯಸೋ ಮರುತೋ ಜಾತಾಃ । ತೈ. ಸಂ. ೨-೨ ೧೧-೪ । ಇತಿ ॥

॥ ಪ್ರತಿಪದಾರ್ಥ ॥

**ರುಕ್ಮವಕ್ಷಸಃ**—ವಕ್ಷಸ್ಸಿನಲ್ಲಿ ಹೊಂಬಣ್ಣದ ಆಭರಣವನ್ನು ಧರಿಸಿರುವ । **ಮರುತಃ**—ಮರುತ್ತುಗಳೇ । **ಯತ್**—ಯಾವಾಗ । **ವಃ**—ನಿಮ್ಮನ್ನು । **ವೃಷಾ**—ಸೇಚನಸಮರ್ಥನಾದ । **ರುದ್ರಃ**—ರುದ್ರನು । **ಪೃಶ್ನ್ಯಾಃ**—ಪೃಶ್ನಿಯ । **ಶುಕ್ರೇ**—ನಿರ್ಮಲವಾದುದೂ । **ಊಧನಿ**—ಉದ್ಧತವಾದುದೂ ಆದ ಉದರದಲ್ಲಿ । **ಅಜನಿ**—ಸೃಷ್ಟಿಸಿದನೋ (ಆಗ) । **ಸ್ತೃಭಿಃ**—ನಕ್ಷತ್ರಗಳಿಂದ । **ದ್ಯಾವೋ ನ**—ಅಂತರಿಕ್ಷವು ತನ್ನನ್ನು ಪ್ರಕಾಶಪಡಿಸಿಕೊಳ್ಳುವಂತೆ **ಖಾದಿನಃ**—ಕಟಕವನ್ನು ಧರಿಸಿರುವ ನೀವು (ನಿಮ್ಮ ಆಭರಣಗಳಿಂದ) । **ಚಿತಯಂತ**—ಪ್ರಕಾಶಪಡಿಸಿಕೊಳ್ಳುತ್ತೀರಿ । **ವೃಷ್ಟಯಃ**—ವೃಷ್ಟಿಕಾರಕರಾದ ನೀವು । **ಅಭ್ರಿಯಾ ನ**—ಮೇಘಗಳಿಂದ ಜನಿತವಾದ ವಿದ್ಯುತ್ತುಗಳಂತೆ । **ವಿ ದ್ಯುತಯಂತ**—ಜಗತ್ತನ್ನು ಪ್ರಕಾಶಿಸುವಂತೆ ಮಾಡುತ್ತೀರಿ.

॥ ಭಾವಾರ್ಥ ॥

ವಕ್ಷಸ್ಸಿನಲ್ಲಿ ಹೊಂಬಣ್ಣದ ಆಭರಣವನ್ನು ಧರಿಸಿರುವ ಎಲೈ ಮರುತ್ತುಗಳೇ, ಸೇಚನಸಮರ್ಥನಾದ ರುದ್ರನು ಯಾವಾಗ ನಿಮ್ಮನ್ನು ಪೃಶ್ನಿಯ ನಿರ್ಮಲವಾದ ಹೃದಯದಲ್ಲಿ ಜನಿಸುವಂತೆ ಮಾಡಿದನೋ, ಆಗ, ಅಂತರಿಕ್ಷವು ನಕ್ಷತ್ರಗಳಿಂದ ತನ್ನನ್ನು ಪ್ರಕಾಶಪಡಿಸಿಕೊಳ್ಳುವಂತೆ ಕಟಕಧಾರಿಗಳಾದ ನೀವು ನಿಮ್ಮ ಆಭರಣಗಳಿಂದ ಪ್ರಕಾಶಪಡಿಸಿಕೊಳ್ಳುತ್ತೀರಿ. ವೃಷ್ಟಿಕಾರಕರಾದ ನೀವು ಮೇಘಗಳಿಂದ ಜನಿತವಾದ ವಿದ್ಯುತ್ತುಗಳಂತೆ ಜಗತ್ತನ್ನು ಪ್ರಕಾಶಿಸುವಂತೆ ಮಾಡುತ್ತೀರಿ.

## English Translation.

Since, golden-breasted Maruts, the vigorous (Rudra) begot you of the pure womb of Prishni, therefore they, the devourers (of their enemies), are conspicuous (by their ornaments), as the heavens are by the constellatoins; and, senders of rain, they are brilliant as the cloud-born (lightning).

॥ ವಿಶೇಷವಿಷಯಗಳು ॥

**ಸ್ತೃಭಿಃ ದ್ಯಾವೋ ನ ಚಿತಯಂತ--ನಕ್ಷತ್ರೈಃ ಯಥಾ ದ್ಯುಲೋಕಾಃ ಸ್ವಾತ್ಮಾನಂ ಚೇತಯಂತಿ ಪ್ರಕಾಶತೇ। ತಥಾ ಖಾದಿನಃ ಶತ್ರೂಣಾಂ ಖಾದಕಾಃ ಮರುತಃ ಸ್ವಕೀಯೈರಾಭರಣೈಃ ಜ್ಞಾಯಂತೇ। ಯದ್ವಾ ಖಾದಃ ಕಟಕಂ। ತದ್ಯುಕ್ತಾಸ್ಸಂತಃ ಪ್ರಕಾಶಂತೇ।** ಯಾಸ್ಕರು **ಸ್ತೃಭಿಃ** (ನಿ. ೩-೨೦) ಎಂದು ದ್ವಿಶ ಉತ್ತರಾಣಿ ನಾಮಾನಿ ಎಂಬ ಇಪ್ಪತ್ತಾರು ನಾಮಗಳ ಮಧ್ಯದಲ್ಲಿ ಪಾಠಮಾಡಿ, **ಋಕ್ಷಾಃ ಸ್ತೃಭಿರಿತಿ ನಕ್ಷತ್ರಾಣಾಂ** ಎಂದೂ, **ಸ್ತೃಭಿಸ್ತೀರ್ಣಾನೀವ ಖ್ಯಾಯಂತೇ** ಎಂದೂ (ನಿ. ೩-೨೦) ವ್ಯಾಖ್ಯಾನ ಮಾಡಿದ್ದಾರೆ. ಅಂತರಿಕ್ಷವೇ ಮೊದಲಾದ ಪ್ರಕಾಶದಿಂದ ಬೆಳಗುವ ಲೋಕಗಳು ನಕ್ಷತ್ರಗಳಿಂದ ತಮ್ಮ ಸ್ವರೂಪವನ್ನು ವ್ಯಕ್ತಗೊಳಿಸುವಹಾಗೆ ಶತ್ರುಗಳನ್ನು ನಾಶಪಡಿಸುವ ಮರುದ್ದೇವತೆಗಳು ತಮ್ಮ ಆಭರಣಗಳಿಂದ ತಿಳಿಯತಕ್ಕವರಾಗಿರುತ್ತಾರೆ ಅಥವಾ ಖಾದವೆಂದರೆ ಹಸ್ತದಲ್ಲಿ ಧರಿಸುವ ಕಡಗವೆಂಬ ಆಭರಣವು. ಈ ಮರುದ್ದೇವತೆಗಳು ತಮ್ಮ ಹಸ್ತದಲ್ಲಿ ಧರಿಸಿರುವ ಕಡಗಗಳಿಂದ ಪ್ರಕಾಶಿಸುತ್ತಾರೆ ಎಂದು ಎರಡು ವಿಧವಾದ ಅರ್ಥವನ್ನೂ ಸಾಯಣರು ವಿವರಿಸಿದ್ದಾರೆ.

**ವೃಷ್ಟಯಃ ಅಭ್ರಿಯಾ ನ ವಿದ್ಯೋತಯಂತ— ವರ್ಷಕಾಃ ಮರುತಃ ಅಭ್ರೇಷು ಭವಾ ವಿದ್ಯುತ ಇವ ಸರ್ವಂ ಜಗತ್ ಪ್ರಕಾಶಯಂತಿ।** ವೃಷ್ಟ್ಯುದಕಗಳನ್ನು ಸುರಿಸುವ ಮರುದ್ದೇವತೆಗಳು ಮೇಘಗಳಲ್ಲಿ ಉತ್ಪನ್ನವಾಗುವ ಮಿಂಚುಗಳು ಜಗತ್ತನ್ನು ಪ್ರಕಾಶಗೊಳಿಸುವಹಾಗೆ ಲೋಕಗಳೆಲ್ಲವನ್ನೂ ಪ್ರಕಾಶದಿಂದ ಇರುವಂತೆ ಮಾಡುವರು. ಈ ಎರಡು ವಾಕ್ಯಗಳಲ್ಲಿಯೂ ನ ಎಂಬುದು ಉಪಮಾವಾಚಕವಾಗಿ ಪ್ರಯುಕ್ತವಾಗಿದೆ.

**ವೃಷಾ ರುದ್ರಃ ಪೃಶ್ನ್ಯಾಃ ಶುಕ್ರೇ ಊಧನಿ ವಃ ಅಜನಯತ್— ಸೇಚನಸಮರ್ಥಃ ಮಹಾದೇವ ಮಾಧ್ಯಮಿಕಾ ವಾಕ್ ತಸ್ಯಾಃ ನಿರ್ಮಲೇ ಉದ್ಧತಪ್ರದೇಶೇ ಅಜನಯತ್।** ಯಾಸ್ಕರು **ಪೃಶ್ನಿಃ** ಎಂಬ ಪದವನ್ನು ಸಾಧಾರಣ ನಾಮಗಳಲ್ಲಿ (ನಿ. ೨-೧೪) ಪಠಿಸಿದ್ದಾರೆ. ಸೇಚನಮಾಡುವುದರಲ್ಲಿ ಶಕ್ತನಾದ ಮಹಾದೇವನು ಮಾಧ್ಯಮಿಕವಾಗ್ರೂಪದಿಂದ ಇರುವ ಪೃಶ್ನಿದೇವಿಯ ಪರಿಶುದ್ಧವಾದ ಉದರದಲ್ಲಿ ತನ್ನ ವೀರ್ಯವನ್ನು ಇರಿಸಿ ಮರುದ್ದೇವತೆಗಳನ್ನು ಉತ್ಪನ್ನಮಾಡಿದನೆಂದು ಒಂದು ವಿಧವಾದ ಅರ್ಥವು ವಿವೃತವಾಗಿದೆ. ಎರಡನೆಯದಾಗಿ **ಯದಾ ಪೃಶ್ನಿರ್ನಾನಾವರ್ಣೇಯಂ ಭೂಮಿಃ ಪುರಾ ಗೋರೂಪಧರಾ ಆಸೀತ್। ತಸ್ಯಾಂ ಮಹೇಶಃ ವೃಷೋ ಭೂತ್ವಾ ಮರುತಃ ಉತ್ಪಾದಯಾಮಾಸೇತ್ಯಾಚಕ್ಷತೇ। ತದತ್ರೋಚ್ಯತೇ।** ನಾನಾವಿಧವಾದ ಬಣ್ಣಗಳುಳ್ಳದ್ದಾದ ಈ ಭೂಮಿಯು ಪೂರ್ವದಲ್ಲಿ ಗೋವಿನ ಆಕಾರವನ್ನು ಧರಿಸಿದ್ದಾಗ ಮಹೇಶ್ವರನು ಗೂಳಿಯ ಆಕಾರವನ್ನು ಧರಿಸಿ ಮರುದ್ದೇವತೆಗಳನ್ನು ಉತ್ಪನ್ನಮಾಡಿದನು ಎಂದು ಹೇಳುತ್ತಾರೆ. ಈ ಉಪಾಖ್ಯಾನವು ಈ ವಾಕ್ಯದಿಂದ ಉಕ್ತವಾಗಿದೆ. ಈ ಅಭಿಪ್ರಾಯವನ್ನು ಸಾಯಣರು ವಿವರಿಸಿ ಈ ಮರುದ್ದೇವತೆಗಳ ಉತ್ಪತ್ತಿಯು ಈ ಪ್ರಕಾರದಿಂದ ಇರುವ ಕಾರಣ ಈ ಮರುದ್ದೇವತೆಗಳು **ರುಕ್ಮವಕ್ಷಸಃ-ರುಕ್ಮಂ ರೋಚಮಾನಾಭರಣಂ ಯೇಷಾಂ ತೇ**-ಪ್ರಕಾಶಿಸುತ್ತಿರುವ ಆಭರಣಗಳಿಂದ ಅಲಂಕೃತರಾಗಿರುವರೆಂದೂ, ಅಂತರಿಕ್ಷವನ್ನು ನಕ್ಷತ್ರಗಳು ಪ್ರಕಾಶಗೊಳಿಸುವಹಾಗೆ ಜಗತ್ತೆಲ್ಲವನ್ನೂ ತಮ್ಮ ಆಭರಣಗಳಿಂದ ಪ್ರಕಾಶಪಡಿಸುವರೆಂದೂ, ಮಹಾದೇವನಿಂದ ಉತ್ಪನ್ನರಾದುದರಿಂದ ಪ್ರಭೂತವಾದ ಮಹಿಮೆಯುಳ್ಳವರೆಂದೂ ವರ್ಣಿಸಿದ್ದಾರೆ.



॥ ಸಂಹಿತಾಪಾಠಃ ॥

ಉಕ್ಷಂತೇ ಅಶ್ವಾँ ಅತ್ಯಾँಇವಾಜಿಷು ನದಸ್ಯ ಕರ್ಣೈಸ್ತುರಯಂತ ಆಶುಭಿಃ ।
ಹಿರಣ್ಯಶಿಪ್ರಾ ಮರುತೋ ದವಿಧ್ವತಃ ಪೃಕ್ಷಂ ಯಾಥ ಪೃಷತೀಭಿಃ ಸಮನ್ಯವಃ ॥

॥ ಪದಪಾಠಃ ॥

ಉಕ್ಷಂತೇ । ಅಶ್ವಾನ್ । ಅತ್ಯಾನ್ऽಇವ । ಆಜಿಷು । ನದಸ್ಯ । ಕರ್ಣೈಃ । ತುರಯಂತೇ । ಆಶುऽಭಿಃ ।
ಹಿರಣ್ಯऽಶಿಪ್ರಾಃ । ಮರುತಃ । ದವಿಧ್ವತಃ । ಪೃಕ್ಷಂ । ಯಾಥ । ಪೃಷತೀಭಿಃ । ಸಽಮನ್ಯವಃ ॥ ೩ ॥

॥ ಸಾಯಣಭಾಷ್ಯಂ ॥

ಮರುತೋಽಶ್ವಾನ್ ವ್ಯಾಪ್ತಾನ್ ಲೋಕಾನುಕ್ಷಂತೇ । ಸಿಂಚಂತಿ । ಅಶೂ ವ್ಯಾಪ್ತೌ । ಔಣಾದಿಕಃ ಕ್ವನ್ಪ್ರತ್ಯಯಃ । ಆಜಿಷು ಸಂಗ್ರಾಮೇಷ್ವತ್ಯಾನಿವ ಸತತಗಾಮಿನಸ್ತುರಗಾನ್ ಯಥಾ ಸ್ವೇದಾಪನೋದಾಯೋದಕೈಃ ಸಿಂಚಂತಿ ತದ್ವತ್ । ಅಪಿ ಚ ತೇ ಮರುತ ಆಶುಭಿಃ ಶೀಘ್ರಗಮನೈರಶ್ವೈರ್ನದಸ್ಯ ಶಬ್ದವತೋ ಮೇಘಸ್ಯ ಕರ್ಣೈಃ ಕೃತೈರ್ಮಧ್ಯಪ್ರದೇಶೈಸ್ತುರಯಂತೇ । ವರ್ಷಣಾರ್ಥಂ ವೃಷ್ಟ್ಯುತ್ಪಾದನಾಯ ತ್ವರಿತಂ ಗಚ್ಛಂತಿ ॥ ತುರ ತ್ವರಣೇ ॥ ಶೇಷಃ ಪ್ರತ್ಯಕ್ಷಕೃತಃ । ಹೇ ಹಿರಣ್ಯಶಿಪ್ರಾಃ । ಶಿಪ್ರಂ ಶಿರಸ್ತ್ರಾಣಂ । ಸುವರ್ಣಮಯಶಿರಸ್ತ್ರಾಣಾಃ ಸಮನ್ಯವಃ ಸಮಾನಮನಸ್ಕಾಃ ಸಮಾನಕ್ರೋಧಾ ವಾ ಹೇ ಮರುತೋ ದವಿಧ್ವತೋ ಮಹೀರುಹಾದಿಕಂ ಕಂಪಯಂತೋ ಯೂಯಂ ॥ ಧೂಞ್ ಕಂಪನ ಇತ್ಯಸ್ಮಾದ್ದಾಧರ್ತ್ಯಾದಾವೇತದ್ರೂಪಂ ನಿಪಾತ್ಯತೇ ॥ ಪೃಷತೀಭಿರ್ಯುಷ್ಮದ್ರಥೇ ಯೋಜಿತಾಭಿಃ ಶ್ವೇತಬಿಂದ್ವಂಕಿತಾಭಿರ್ಮೃಗೀಭಿರ್ವಡವಾಭಿರ್ವಾ ಪೃಕ್ಷಂ । ಅನ್ನನಾಮೈತತ್ । ಹವಿರ್ಲಕ್ಷಣಾನ್ನವಂತಂ ಯಜಮಾನಂ ॥ ಅರ್ಶ ಆದಿತ್ವಾದಚ್ ॥ ಯಾಥ । ಗಚ್ಛತ ॥

॥ ಪ್ರತಿಪದಾರ್ಥ ॥

**ಆಜಿಷು**—ಸಂಗ್ರಾಮಗಳಲ್ಲಿ । **ಅತ್ಯಾನಿವ**—(ಆಯಾಸ ಪರಿಹಾರಕ್ಕಾಗಿ) ಅಶ್ವಗಳ ಮೇಲೆ ಉದಕವನ್ನು ಸುರಿಯುವಂತೆ । (**ಮರುತಃ**—ಮರುತ್ತುಗಳು) । **ಅಶ್ವಾನ್**—ವ್ಯಾಪ್ತವಾದ ಲೋಕಗಳನ್ನೆಲ್ಲಾ । **ಉಕ್ಷಂತೇ**—ಉದಕದಿಂದ ತೋಯಿಸುತ್ತವೆ । (ಅದೇ ಮರುತ್ತುಗಳು) **ಆಶುಭಿಃ**— ಶೀಘ್ರಗಾಮಿಗಳಾದ ಅಶ್ವಗಳೊಡನೆ । **ನದಸ್ಯ**—ಶಬ್ದಮಾಡತಕ್ಕ ಮೇಘಗಳ । **ಕರ್ಣೈಃ**—(ಮಧ್ಯಪ್ರದೇಶಗಳಲ್ಲಿ) ಮಾಡಲ್ಪಟ್ಟ ಮಾರ್ಗಗಳ ಮೂಲಕ । **ತುರಯಂತೇ**—(ವೃಷ್ಟ್ಯುತ್ಪಾದನಕ್ಕಾಗಿ) ವೇಗವಾಗಿ ನುಗ್ಗುತ್ತವೆ । **ಹಿರಣಶಿಪ್ರಾಃ**—ಸುವರ್ಣನಿರ್ಮಿತವಾದ ಶಿರಸ್ತ್ರಾಣವುಳ್ಳವರೂ । **ಸಮನ್ಯವಃ**—ಸಮಾನವಾದ ಮನಸ್ಸುಳ್ಳವರೂ ಆದ । **ಮರುತಃ**— ಎಲೈ ಮರುತ್ತುಗಳೇ । **ದವಿಧ್ವತಃ**—ವೃಕ್ಷಾದಿಗಳನ್ನು ಕಂಪಿಸುವಂತೆ ಮಾಡುವ ನೀವು । **ಪೃಷತೀಭಿಃ**—ಬಿಂದು ರೂಪವಾದ ವರ್ಣದೊಡನೆ

ಕೂಡಿದ ಅಶ್ವಗಳೊಡನೆ **ಪೃಕ್ಷಂ**—ಹವಿಸ್ಸಿನ ರೂಪವಾದ ಅನ್ನದಿಂದ ಯುಕ್ತನಾದ ಯಜಮಾನನ ಅಭಿಮುಖವಾಗಿ। **ಯಾಥ**—ಬನ್ನಿರಿ.

॥ ಭಾವಾರ್ಥ ॥

ಸಂಗ್ರಾಮಗಳಲ್ಲಿ ಆಯಾಸಪರಿಹಾರಕ್ಕಾಗಿ ಅಶ್ವಗಳ ಮೇಲೆ ಉದಕವನ್ನು ಸುರಿಯುವಂತೆ ಮರುತ್ತುಗಳು ಸಕಲ ಲೋಕಗಳನ್ನೂ ಉದಕದಿಂದ ತೋಯಿಸುತ್ತವೆ. ಅದೇ ಮರುತ್ತುಗಳು ಶಬ್ದಮಾಡತಕ್ಕ ಮೇಘಗಳ ಮಧ್ಯಪ್ರದೇಶದಲ್ಲಿ ಶೀಘ್ರಗಾಮಿಗಳಾದ ಅಶ್ವಗಳೊಡನೆ ಮಾರ್ಗಗಳನ್ನು ಮಾಡಿಕೊಂಡು ವೃಷ್ಟ್ಯುತ್ಪಾದನಕ್ಕಾಗಿ ವೇಗವಾಗಿ ನುಗ್ಗುತ್ತವೆ. ಸುವರ್ಣನಿರ್ಮಿತವಾದ ಶಿರಸ್ತ್ರಾಣವುಳ್ಳವರೂ, ಸಮಾನವಾದ ಮನಸ್ಸುಳ್ಳವರೂ ಆದ ಎಲೈ ಮರುತ್ತುಗಳೇ, ವೃಕ್ಷಾದಿಗಳನ್ನು ಕಂಪಿಸುವಂತೆ ಮಾಡುವ ನೀವು ಬಿಂದುರೂಪವಾದ ವರ್ಣದೊಡನೆ ಕೂಡಿದ ಅಶ್ವಗಳೊಡನೆ ಹವಿಸ್ಸಿನ ರೂಪದ ಅನ್ನದಿಂದ ಯುಕ್ತನಾದ ಯಜಮಾನನ ಅಭಿಮುಖವಾಗಿ ಬನ್ನಿರಿ.

## English Translation.

They sprinkle the wide-extended (lands) with water, as (men sprinkle) horses (when heated) in battles; and they rush along with swift (horses) on the skirts of the sounding (cloud): Maruts, golden-helmed, and of one mind, agitating (the trees), come with your spotted deer to (receive the sacrificial) food.

॥ ವಿಶೇಷವಿಷಯಗಳು ॥

**ಅಶ್ವಾನ್ ಆಜಿಷು ಅತ್ಯಾನಿವ ಸಿಂಚಂತಿ । ಮರುತಃ ವ್ಯಾಪ್ತಾನ್ ಲೋಕಾನ್ ಸಂಗ್ರಾಮೇಷು ಸತತಗಾಮಿನಸ್ತುರಗಾನ್ ಯಥಾ ಸ್ವೇದಾಪನೋದಾಯ ಉದಕೈಃ ಸಿಂಚಂತಿ ತದ್ವತ್ ।** ಯಾಸ್ಕರು ಅಶ್ವ ಅತ್ಯ ಎಂಬ ಎರಡು ಪದಗಳನ್ನು ಅಶ್ವನಾಮಗಳಲ್ಲಿ (ನಿ. ೧-೧೪) ಪಾಠಮಾಡಿದ್ದಾರೆ. ಸಾಯಣರು ಅಶ್ವ ಶಬ್ದಕ್ಕೆ ವ್ಯಾಪಿಸಿರುವುದು ಎಂದು ಅರ್ಥವನ್ನು ಹೇಳಿ ವ್ಯಾಪಿಸಿರುವ ಲೋಕಗಳನ್ನು ಮರುದ್ದೇವತೆಗಳು ವೃಷ್ಟ್ಯುದಕಗಳಿಂದ ಸಿಂಪಡಿಸಿರುವರು ಎಂಬ ವಿಷಯದಲ್ಲಿ ಯುದ್ಧಗಳಲ್ಲಿ ಸರ್ವದಾ ಸಂಚರಿಸುತ್ತಿರುವ ಕುದುರೆಗಳನ್ನು ಅವುಗಳ ಬೆವರು ಹೋಗುವುದಕ್ಕಾಗಿ ಉದಕಗಳಿಂದ ಚುಮುಕಿಸಿ ಆಯಾಸಪರಿಹಾರಮಾಡುವಹಾಗೆ ಎಂದು ದೃಷ್ಟಾಂತವು ಉಕ್ತವಾಗಿದೆ ಎಂದು ವಿವರಿಸಿದ್ದಾರೆ.

**ಆಶುಭಿಃ ನದಸ್ಯ ಕರ್ಣೈಃ ತುರಯಂತೇ—ತೇ ಮರುತಃ ಶೀಘ್ರಗಮನೈಃ ಅಶ್ವೈಃ ಶಬ್ದವತೋ ಮೇಘಸ್ಯ ಮಧ್ಯಪ್ರದೇಶೈಃ ವೃಷ್ಟ್ಯುತ್ಪಾದನಾಯ ತ್ವರಿತಂ ಗಚ್ಛಂತಿ ।** ಉದಕಗಳನ್ನು ತುಂಬಿಕೊಂಡು ಧ್ವನಿಯನ್ನು ಮಾಡುತ್ತಿರುವ ಮೇಘಗಳ ಮಧ್ಯಭಾಗದಲ್ಲಿ ಮರುದ್ದೇವತೆಗಳು ಮೇಘಗಳ ಮಧ್ಯಪ್ರದೇಶವನ್ನು ಶೀಘ್ರವಾಗಿ ಸಂಚರಿಸುವ ಕುದುರೆಗಳನ್ನಾಗಿ ಮಾಡಿಕೊಂಡು ಭೂಮಿಗೆ ಮೇಘದಲ್ಲಿರುವ ಉದಕಗಳು ವೃಷ್ಟಿಯರೂಪದಿಂದ ಸುರಿಸುವುದಕ್ಕಾಗಿ ವೇಗವಾಗಿ ಸಂಚರಿಸುತ್ತಾರೆ ಎಂದು ವಿವೃತವಾಗಿದೆ.

**ಹಿರಣ್ಯಶಿಪ್ರಾಃ—ಸುವರ್ಣಮಯಶಿರಸ್ತ್ರಾಣಾಃ । ಶಿಪ್ರಂ ಶಿರಸ್ತ್ರಾಣಂ ।** ಮರುದ್ದೇವತೆಗಳು ಚಿನ್ನದಿಂದ ರಚಿತವಾದ ಶಿರಸ್ಸಿನ ಆಭರಣವನ್ನು ಧರಿಸಿರುವವರು, **ಸಮನ್ಯವಃ—ಸಮಾನಮನಸ್ಕಾಃ ಸಮಾನಕ್ರೋಧಾ ವಾ**

(ಸಪ್ತಮರುತ್ತುಗಳೆಂದು ಪ್ರಸಿದ್ಧರಾಗಿರುವುದರಿಂದ) ಇವರು ಒಂದೇವಿಧವಾದ ಮನಸ್ಸುಳ್ಳವರಾಗಿರುವರು ಅಥವಾ ಒಂದೇವಿಧವಾದ ಕೋಪವುಳ್ಳವರಾಗಿರುವರು ಮತ್ತು **ದವಿಧ್ಯತಃ** ವೃಕ್ಷವೇ ಮೊದಲಾದವುಗಳನ್ನು ಅಲುಗಾಡಿಸುವರು ಎಂದು ಮರುದ್ದೇವತೆಗಳನ್ನು ವರ್ಣಿಸಿ, ಈ ಮರುತ್‌ದೇವತೆಗಳು **ಪೃಷತೀಭಿಃ ಪೃಕ್ಷಂ ಯಾತ—ಯುಷ್ಮದ್ರಥೇ ಯೋಜಿತಾಭಿಃ ಶ್ವೇತಬಿಂದ್ವಂಕಿತಾಭಿಃ ಮೃಗೀಭಿಃ ವಡವಾಭಿರ್ವಾ ಹವಿರ್ಲಕ್ಷಣಾನ್ನವಂತಂ ಯಜಮಾನಂ ಗಚ್ಛಥ** । ತಮ್ಮ ರಥಕ್ಕೆ ಕಟ್ಟಿರುವ ಬಿಳಿಯ ಚುಕ್ಕೆಗಳಿಂದ ಕೂಡಿರುವ ಜಿಂಕೆಗಳಿಂದ ಅಥವಾ ಕುದುರೆಗಳಿಂದ ಕೂಡಿರುವ ರಥಗಳಲ್ಲಿ ಉಪವಿಷ್ಟರಾಗಿ ಹವಿಸ್ಸಿನ ರೂಪವಾದ ಅನ್ನವನ್ನು ಅರ್ಪಿಸುವ ಯಜಮಾನನ ಯಾಗಶಾಲೆಗೆ ಬನ್ನಿರಿ ಎಂದು ಅರ್ಥವನ್ನು ವರ್ಣಿಸಿದೆ.

ಯಾಸ್ಕರು **ಹರೀ ಇಂದ್ರಸ್ಯ । ರೋಹಿತೋ ಅಗ್ನೇಃ । ಹರಿತ ಆದಿತ್ಯಸ್ಯ ರಾಸಭಾವಶ್ವಿನೋಃ । ಅಜಾಃ ಪೂಷ್ಣಃ । ಪೃಷತ್ಯೋ ಮರುತಾಂ । ಅರುಣ್ಯೋ ಗಾವ ಉಷಸಃ । ಶ್ಯಾವಾಃ ಸವಿತುಃ । ವಿಶ್ವರೂಪಾ ಬೃಹಸ್ಪತೇಃ ನಿಯುತೋ ವಾಯೋಃ । ಇತಿ ದಶಾದಿಷ್ಟೋಪಯೋಜನಾನಿ** (ನಿ.೨-೨೮) ಎಂದು ಆಯಾಯ ದೇವತೆಗಳ ವಾಹನಗಳನ್ನು ಹೇಳಿದ್ದಾರೆ. ಇಲ್ಲಿ ಮರುತ್ತುಗಳಿಗೆ ಪೃಷತಃ ಎಂದು ಉಕ್ತವಾಗಿದೆ. ಇದರ ವಿಸ್ತಾರವಾದ ವಿವರಣೆಯು ಹಿಂದಿನ ಸಂಪುಟಗಳಲ್ಲಿ ಉಕ್ತವಾಗಿದೆ.

॥ ಸಂಹಿತಾಪಾಠಃ ॥

**ಪೃಕ್ಷೇ ತಾ ವಿಶ್ವಾ ಭುವನಾ ವವಕ್ಷಿರೇ ಮಿತ್ರಾಯ ವಾ ಸದಮಾ ಜೀರದಾನವಃ ।**
**ಪೃಷದಶ್ವಾಸೋ ಅನವಭ್ರರಾಧಸ ಋಜಿಪ್ಯಾಸೋ ನ ವಯುನೇಷು ಧೂರ್ಷದಃ ॥**

॥ ಪದಪಾಠಃ ॥

**ಪೃಕ್ಷೇ । ತಾ । ವಿಶ್ವಾ । ಭುವನಾ । ವವಕ್ಷಿರೇ । ಮಿತ್ರಾಯ । ವಾ । ಸದಂ । ಆ । ಜೀರऽದಾನವಃ ।**
**ಪೃಷತ್‌ऽಅಶ್ವಾಸಃ । ಅನವಭ್ರऽರಾಧಸಃ । ಋಜಿಪ್ಯಾಸಃ । ನಃ । ವಯುನೇಷು । ಧೂಃऽಸದಃ ॥ ೪ ॥**

॥ ಸಾಯಣಭಾಷ್ಯಂ ॥

**ಪೃಕ್ಷೇ ಪೃಕ್ಷವತೇ ಹವಿರ್ಲಕ್ಷಣಾನ್ನಯುಕ್ತಾಯ ಯಜಮಾನಾಯ ತಾ ತಾನಿ ವಿಶ್ವಾ ಸರ್ವಾಣಿ ಭುವನಾನ್ಯುದಕಾನಿ ಮಿತ್ರಾಯ । ವಾಶಬ್ದ ಉಪಮಾರ್ಥಃ । ಮಿತ್ರಾಯೇವ ಸದಂ ಸದಾ ಆ ವವಕ್ಷಿರೇ । ಮರುತ ಆವಹಂತಿ । ಯದ್ವಾ ವಾಶಬ್ದೋऽವಧಾರಣೇ । ಮಿತ್ರಭೂತಾಯ ಯಜಮಾನಾಯೈವ ಪೃಕ್ಷೇऽನ್ನೇ ನಿಮಿತ್ತಭೂತೇ ಸತಿ ವೃಷ್ಟ್ಯುದಕಾನ್ಯಾವಹಂತಿ । ಕೀದೃಶಾ ಮರುತಃ । ಜೀರದಾನವಃ ।**

ಕ್ಷಿಪ್ರದಾನಾಃ । ಪೃಷದಶ್ವಾಸಃ ಪೃಷದ್ಭಿಃ ಶ್ವೇತಬಿಂದುಭಿರ್ಯುಕ್ತಾ ಅಶ್ವಾ ಯೇಷಾಂ ತೇ ತಥೋಕ್ತಾಃ । ಅನವಭ್ರರಾಧಸಃ । ಭೃಶು ಭೃಂಶು ಅಧಃಪತನೇ । ಅವಭೃಂಶನಮವಭ್ರಃ । ಡೋಽನ್ಯತ್ರಾಪಿ ದೃಶ್ಯತೇ । ಪಾ. ೩-೨.೪೮-೪ । ಇತಿ ಡಪ್ರತ್ಯಯಃ ನಾಸ್ತ್ಯವಭ್ರೋ ಯಸ್ಯೇತಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಅನವಭ್ರಂ ಭ್ರಂಶನರಹಿತಂ ರಾಧೋ ಧನಂ ಯೇಷಾಂ ತೇ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥ ಋಜಿಪ್ಯಾಸೋ ನ । ಋಜು ಅಕುಟಿಲಂ ಪ್ರಾಪ್ನುವಂತೋ ಗಚ್ಛಂತೋಽಶ್ವಾ ಇವ ವಯುನೇಷು ಗಂತೃಷು ಮಧ್ಯೇ ಧೂರ್ಷದೋ ಧುರಿ ಮೇಘಸ್ಯ ವಹನೇ ಸೀದಂತೋ ನಿಷಣ್ಣಾ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಜೀರದಾನವಃ**—ತಡವಿಲ್ಲದೇ ದಾನಮಾಡತಕ್ಕವರೂ । **ಅನವಭ್ರರಾಧಸಃ**—ನಾಶರಹಿತವಾದ ಧನವುಳ್ಳವರೂ **ಪೃಷದಶ್ವಾಸಃ**—ಬಿಂದುರೂಪವಾದ ವರ್ಣಯುಕ್ತವಾದ ಅಶ್ವಗಳುಳ್ಳವರೂ **ಋಜಿಪ್ಯಾಸೋ ನ**—ನೇರವಾಗಿ ಓಡುವ ಅಶ್ವಗಳಂತೆ **ವಯುನೇಷು**—ಹೋಗತಕ್ಕ ಮಾರ್ಗಗಳಲ್ಲಿ । **ಧೂರ್ಷದಃ**—ಮೇಘರೂಪವಾದ ರಥದಲ್ಲಿ ಕುಳಿತಿರುವವರೂ ಆದ ಮರುತ್ತುಗಳು । **ಪೃಕ್ಷೇ**—ಹವಿಸ್ಸಿನ ರೂಪದ ಅನ್ನವನ್ನು ಹೊಂದಿರುವ ಯಜಮಾನನಿಗೆ **ತಾ ವಿಶ್ವಾ ಭುವನಾ**—ಸಮಸ್ತವಾದ ಉದಕವನ್ನೂ । **ಮಿತ್ರಾಯ ವಾ**—ಮಿತ್ರನಿಗೆ ಆದರಪೂರ್ವಕವಾಗಿ ಕೊಡುವಂತೆ **ಸದಂ**—ಸರ್ವದಾ । **ಆ ವವಕ್ಷಿರೇ**—ತಂದೊಗಿಸುತ್ತಾರೆ.

॥ ಭಾವಾರ್ಥ ॥

ತಡವಿಲ್ಲದೇ ದಾನಮಾಡತಕ್ಕವರೂ, ನಾಶರಹಿತವಾದ ಧನವುಳ್ಳವರೂ, ಬಿಂದುರೂಪವಾದ ವರ್ಣದಿಂದ ಕೂಡಿದ ಅಶ್ವಗಳುಳ್ಳವರೂ, ಮಾರ್ಗಗಳಲ್ಲಿ ನೇರವಾಗಿ ಓಡುವ ಅಶ್ವಗಳಂತೆ ಮೇಘರೂಪವಾದ ರಥದಲ್ಲಿ ಕುಳಿತಿರುವವರೂ ಆದ ಮರುತ್ತುಗಳು ಹವಿಸ್ಸಿನ ರೂಪದ ಅನ್ನವನ್ನು ಹೊಂದಿರುವ ಯಜಮಾನನಿಗೆ ಸಮಸ್ತವಾದ ಉದಕವನ್ನೂ ಮಿತ್ರನಿಗೆ ಆದರಪೂರ್ವಕವಾಗಿ ಕೊಡುವಂತೆ ಸರ್ವದಾ ತಂದೊಗಿಸುತ್ತಾರೆ.

## English Translation.

The prompt-giving Maruts ever confer upon the (offerer of sacrificial) food, as upon a friend, all these (world-supporting) waters: they who have spotted deer for steeds, who are possessed of inexhaustible riches, and who, seated in their chariots, (proceed) amongst the moving (clouds), like horses going straight (to the goal).

॥ ವಿಶೇಷವಿಷಯಗಳು ॥

**ಪೃಕ್ಷೇ ವಿಶ್ವಾ ಭುವನಾ ಮಿತ್ರಾಯ ವಾ ಆವವಕ್ಷಿರೇ**—**ಹವಿರ್ಲಕ್ಷಣಾನ್ನಯುಕ್ತಾಯ ಯಜಮಾನಾಯ ಸರ್ವಾಣಿ ಉದಕಾನಿ ಮಿತ್ರಾಯೇವ ಮರುತಃ ಸದಾ ಆವಹಂತಿ । ಯದಾ ವಾ ಶಬ್ದೋ ಅವಧಾರಣೇ ಮಿತ್ರಭೂತಾಯ ಯಜಮಾನಾಯೈವ ಪೃಕ್ಷೇ ಅನ್ನೇ ನಿಮಿತ್ತಭೂತೇ ಸತಿ ವೃಷ್ಟ್ಯುದಕಾನ್ಯಾವಹಂತಿ ।** ಇಲ್ಲಿ ವಾ ಎಂಬ ನಿಪಾತಕ್ಕೆ ಉಪಮಾರ್ಥವನ್ನೂ ಅವಧಾರಣಾರ್ಥವನ್ನೂ ಹೇಳಿದೆ. ಇದರಿಂದ ಎರಡು

ವಿಧವಾದ ಅರ್ಥವೂ ವಿವೃತವಾಗಿದೆ. ಹವಿಸ್ಸಿನ ರೂಪದಿಂದ ಇರುವ ಅನ್ನವನ್ನು ಅರ್ಪಿಸುವ ಯಜಮಾನನಿಗೆ ಮರುದ್ದೇವತೆಗಳು ವೃಷ್ಟ್ಯುದಕಗಳೆಲ್ಲವನ್ನೂ ಲೋಕದಲ್ಲಿ ಜನರು ತಮ್ಮ ಸ್ನೇಹಿತರಿಗೆ ಉಚಿತವಾಗಿ ಅರ್ಪಿಸುವ ಹಾಗೆ ಸರ್ವಕಾಲದಲ್ಲಿಯೂ ಕೊಡುವರು ಎಂದು ಒಂದು ವಿಧವಾದ ಅರ್ಥವನ್ನು ವಾ ಶಬ್ದದ ಉಪಮಾನರೂಪವಾದ ಅರ್ಥವಿವರಣೆಯಿಂದ ಹೇಳಿದೆ. ಎರಡನೆಯ ಅವಧಾರಣಾರ್ಥದಲ್ಲಿ ಮರುದ್ದೇವತೆಗಳು ತಮ್ಮ (ಸ್ನೇಹಿತರಾದ) ಪ್ರೀತಿಗೆ ಪಾತ್ರರಾದ ಯಜಮಾನರಿಗೇನೇ ಹವಿಸ್ಸಿನರೂಪವಾದ ಅನ್ನವು ಉಂಟಾಗುವುದಕ್ಕಾಗಿ ವೃಷ್ಟ್ಯುದಕಗಳನ್ನು ಯಾವಾಗಲೂ ಕೊಡುವರು ಎಂದು ವರ್ಣಿಸಿದೆ.

ಯಾಸ್ಕರು **ಭುವನ** ಶಬ್ದವನ್ನು ಉದಕನಾಮಗಳಲ್ಲಿಯೂ (ನಿ. ೨-೨೪) **ಪೃಕ್ಷ** ಶಬ್ದವನ್ನು ಅನ್ನನಾಮಗಳಲ್ಲಿಯೂ (ನಿ. ೩-೯) ಪಾಠಮಾಡಿದ್ದಾರೆ.

**ಪೃಷದಶ್ವಾಸಃ—ಪೃಷದ್ಭಿಃ ಶ್ವೇತಬಿಂದುಭಿಃ ಯುಕ್ತಾ ಅಶ್ವಾ ಯೇಷಾಂ ತೇ ।** ಮರುದ್ದೇವತೆಗಳು ಬಿಳಿಯ ಚುಕ್ಕೆಗಳು ಉಳ್ಳ ಕುದುರೆಗಳನ್ನು ವಾಹನವಾಗಿ ಉಳ್ಳವರು ಎಂದು ಹೇಳಿದೆ.

**ಅನವಭ್ರರಾಧಸಃ — ಅವಭ್ರಂಶನಮವಭ್ರಃ ನಾಸ್ತ್ಯವಭ್ರೋ ಯಸ್ಯ ತತ್ ಅನವಭ್ರಂ ಭ್ರಂಶನ ರಹಿತಂ ಧನಂ ಯೇಷಾಂ ತೇ ।** ರಾಧಃ ಎಂಬ ಪದವು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಅವಭ್ರ ಎಂದರೆ ನಾಶವು. ನಾಶವಿಲ್ಲದುದು ಅನವಭ್ರವೆನಿಸಿರುವುದು. ನಾಶವನ್ನು ಹೊಂದದೆ ಇರುವ ಧನವನ್ನು ಮರುದ್ದೇವತೆಗಳು ಹೊಂದಿರುವರು ಎಂದು, ಅರ್ಥವು ವಿವೃತವಾಗಿದೆ ಮತ್ತು **ವಯುನೇಷು ಋಜಿಪ್ಯಾಸೋ ನ ಧೂರ್ಷದಃ— ಗಂತೃಷು ಮಧ್ಯೇ ಋಜು ಅಕುಟಿಲಂ ಗಚ್ಛಂತಃ ಅಶ್ವಾ ಇವ ಧುರಿ ಮೇಘಸ್ಯ ವಹನೇ ನಿಷಣ್ಣಾಃ ।** ವೇಗದಿಂದ ಸಂಚರಿಸುವವರಲ್ಲಿ ಮರುದ್ದೇವತೆಗಳು ವಕ್ರವಾಗಿ ಸಂಚರಿಸದೇ ಇರುವ ಕುದುರೆಗಳ ಹಾಗೆ ಸಂಚಾರಮಾಡುವ ಮರುದ್ದೇವತೆಗಳು ಮೇಘಗಳನ್ನು ವಹಿಸುವುದರಲ್ಲಿ ಉದ್ಯುಕ್ತರಾಗಿರುವರು ಎಂದು ವರ್ಣಿಸಿದೆ.

**ವಯುನಂ** ಎಂಬ ಪದವು ಪ್ರಜ್ಞಾನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ ಮತ್ತು **ವಯುನಂ ವೇತೇಃ ಕಾಂತಿರ್ವಾ ಪ್ರಜ್ಞಾ ವಾ** (ನಿ. ೫-೧೫) ಎಂದು ವಿವೃತವಾಗಿದೆ. ಇಲ್ಲಿ ಗಮನಶೀಲರೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

ಸಂಹಿತಾಪಾಠಃ ॥

ಇಂಧನ್ವಭಿರ್ಧೇನುಭೀ ರಪ್ಶದೂಧಭಿರಧ್ವಸ್ಮಭಿಃ ಪಥಿಭಿರ್ಭ್ರಾಜದೃಷ್ಟಯಃ ।
ಆ ಹಂಸಾಸೋ ನ ಸ್ವಸರಾಣಿ ಗಂತನ ಮಧೋರ್ಮದಾಯ ಮರುತಃ ಸಮನ್ಯವಃ ॥

॥ ಪದಪಾಠಃ ॥

ಇಂಧನ್ವಽಭಿಃ । ಧೇನುಽಭಿಃ । ರಪ್ಶದೂಧಽಭಿಃ । ಅಧ್ವಸ್ಮಽಭಿಃ । ಪಥಿಽಭಿಃ । ಭ್ರಾಜತ್ಽಋಷ್ಟಯಃ ।

ಆ । ಹಂಸಾಸಃ । ನ । ಸ್ವಸರಾಣಿ । ಗಂತನ । ಮಧೋಃ । ಮದಾಯ । ಮರುತಃ । ಸಽಮನ್ಯವಃ ॥ ೫ ॥

॥ ಸಾಯಣಭಾಷ್ಯಂ ॥

ಸಮನ್ಯವಃ ಸಮಾನಮನಸ್ಕಾಃ ಸಮಾನಕ್ರೋಧಾಃ ಸಮಾನತೇಜಸೋ ವಾ ಹೇ ಮರುತೋ ಭ್ರಾಜದೃಷ್ಟಯೋ ದೀಪ್ಯಮಾನಾಯುಧಾ ಯೂಯಮಿಂಧನ್ವಭಿಃ ಸಮಿಂಧನವದ್ಭಿಃ ॥ ಇಂಧನಶಬ್ದಾಚ್ಛಂದಸೀವನಿಪಾವಿತಿ ಮತ್ವರ್ಥೀಯೋ ವನಿಪ್ । ಛಾಂದಸೋ ವರ್ಣಲೋಪಃ ॥ ಧೇನುಭಿಃ ಪ್ರೀಣಯಿತೃಭಿಶ್ಚ ರಪ್ಶದೂಧಭಿಃ । ವಿರಪ್ಶೀತಿ ಮಹನ್ನಾಮ । ಮಹೋಧಸ್ಕೈಃ । ಊಧಾಂಸಿ ಜಲಸ್ರೋತೋಮಾರ್ಗಾಃ । ಯದ್ವಾ ರಪ ಲಪ ವ್ಯಕ್ತಾಯಾಂ ವಾಚಿ । ಶಬ್ದಾಯಮಾನೋಚ್ಛ್ರಿತಪ್ರದೇಶೈರಧ್ವಸ್ಮಭಿರ್ಧ್ವಂಸನರಹಿತೈಃ ಪಥಿಭಿಃ । ಪತಂತಿ ಗಚ್ಛಂತೀತಿ ಪಂಥಾನೋ ಮೋಕ್ಷಾಃ । ಏವಂಭೂತೈರ್ಮೋಕ್ಷೈ ಸಹ ಮಾರ್ಗೈರೇವ ವಾಗಂತನ । ಕಿಮರ್ಥಂ । ಮಧೋರ್ಮದಾಯ ಸೋಮಸ್ಯ ಮದಾರ್ಥಂ । ತತ್ರ ದೃಷ್ಟಾಂತಃ । ಹಂಸಾಸೋ ನ । ಯಥಾ ಹಂಸಾಃ ಸ್ವಸರಾಣಿ ಸ್ವಕೀಯಾನಿ ನಿವಾಸಸ್ಥಾನಾನಿ ಪ್ರಾಪ್ನುವಂತಿ ತದ್ವತ್ ॥

॥ ಪ್ರತಿಪದಾರ್ಥ ॥

**ಸಮನ್ಯವಃ**—ಸಮಾನವಾದ ಮನಸ್ಸುಳ್ಳ **ಮರುತಃ**—ಎಲೈ ಮರುತ್ತುಗಳೇ, **ಭ್ರಾಜದೃಷ್ಟಯಃ**—ಪ್ರಕಾಶಮಾನವಾದ ಆಯುಧವುಳ್ಳ ನೀವು । **ಇಂಧನ್ವಭಿಃ**—ಕಾಂತಿಯುತವಾದ, **ಧೇನುಭಿಃ**—ತೃಪ್ತಿಯನ್ನುಂಟುಮಾಡುವುದೂ **ರಪ್ಶದೂಧಭಿಃ**—ಮಹತ್ತಾದ ಜಲಪ್ರವಾಹಗಳುಳ್ಳವೂ । **ಅಧ್ವಸ್ಮಭಿಃ**—ನಾಶರಹಿತವಾದವೂ ಆದ **ಪಥಿಭಿಃ**—ಮೋಕ್ಷಮಾರ್ಗಗಳಿಂದ । **ಮಧೋಃ**—ಸೋಮರಸದ ಪಾನದಿಂದ ಲಭಿಸತಕ್ಕ । **ಮದಾಯ**—ಹರ್ಷಾರ್ಥವಾಗಿ । **ಸ್ವಸರಾಣಿ**—ತಮ್ಮ ನಿವಾಸಸ್ಥಾನಕ್ಕೆ ಹೋಗಿ ಸೇರತಕ್ಕ । **ಹಂಸಾಸೋ ನ**—ಹಂಸಪಕ್ಷಿಗಳಂತೆ ಗಂಭೀರವಾದ ಗಮನದಿಂದ **ಆ ಗಂತನ**—ಬನ್ನಿರಿ.

॥ ಭಾವಾರ್ಥ ॥

ಸಮಾನವಾದ ಮನಸ್ಸುಳ್ಳ ಎಲೈ ಮರುತ್ತುಗಳೇ, ಪ್ರಕಾಶಮಾನವಾದ ಆಯುಧವುಳ್ಳ ನೀವು ಕಾಂತಿಯುತವಾದ ಧೇನುಗಳೊಡನೆ ಮಹತ್ತಾದ ಜಲಪ್ರವಾಹಗಳುಳ್ಳವೂ, ನಾಶರಹಿತವೂ ಆದ ಮೋಕ್ಷಮಾರ್ಗಗಳಿಂದ ಸೋಮರಸ ಪಾನದಿಂದ ಲಭಿಸತಕ್ಕ ಹರ್ಷಾರ್ಥವಾಗಿ ಸ್ವನಿವಾಸಕ್ಕೆ ಗಂಭೀರವಾದ ಗಮನದಿಂದ ಹೋಗಿ ಸೇರತಕ್ಕ ಹಂಸಪಕ್ಷಿಗಳಂತೆ ಬನ್ನಿರಿ.

## English Translation.

Maruts, who are of one mind, and are armed with shining lances, come with the bright, full-uddered cows, by unobstructed paths, to partake of the exhilaration of the (soma) juice, as swans (fly) to their nests.

॥ ವಿಶೇಷವಿಷಯಗಳು ॥

**ಸಮನ್ಯವಃ—ಸಮಾನಮನಸ್ಕಾಃ, ಸಮಾನಕ್ರೋಧಾಃ ಸಮಾನತೇಜಸೋ ವಾ ।** ನಿರುಕ್ತಕಾರರು ಮನ್ಯುಪದವನ್ನು ಕ್ರೋಧನಾಮಗಳಲ್ಲಿ (ನಿ. ೩-೯) ಪಾಠಮಾಡಿ **ಮನ್ಯುರ್ಮನ್ಯತೇರ್ದೀಪ್ತಿಕರ್ಮಣಃ ಕ್ರೋಧಕರ್ಮಣೋ ವಧಕರ್ಮಣೋ ವಾ** (ನಿ. ೧೦-೩೧) ಎಂದು ವ್ಯಾಖ್ಯಾನಮಾಡಿದ್ದಾರೆ. ಮರುದ್ದೇವತೆಗಳು ಒಂದೇ ವಿಧವಾದ ಮನಸ್ಸನ್ನು ಹೊಂದಿರುವವರು, ಒಂದೇ ವಿಧವಾದ ಕೋಪವನ್ನೂ, ತೇಜಸ್ಸನ್ನೂ ಹೊಂದಿರುವವರು ಎಂದೂ, **ಭ್ರಾಜದೃಷ್ಟಯಃ—ದೀಪ್ಯಮಾನಾಯುಧಾಃ** ಕಾಂತಿಯುಳ್ಳ ಆಯುಧಗಳುಳ್ಳವರೂ ಆಗಿರುವರೆಂದೂ ಹೇಳಿ, ಇವರು ಯಾಗಶಾಲೆಗೆ ಆಗಮಿಸಲೆಂದು ವರ್ಣಿಸಿದೆ.

**ಧೇನುಭಿಃ ರಪ್ಶದೂಧಭಿಃ ಅಧ್ವಸ್ಮಭಿಃ ಪಥಿಭಿಃ ಹಂಸಾಸೋ ನ ಸ್ವಸರಾಣಿ—ಪ್ರೀಣಯಿತೃಭಿಃ ಮಹೋಧಸ್ಕೈಃ ಯದ್ವಾ ಶಬ್ದಾಯಮಾನೋಚ್ಛ್ರಿತಪ್ರದೇಶೈಃ ಮೇಘೈಸ್ಸಹ ಮಾರ್ಗೈರೇವ ವಾ ಯಥಾ ಹಂಸಾಃ ಸ್ವಕೀಯಾನಿ ನಿವಾಸಸ್ಥಾನಾನಿ ಪ್ರಾಪ್ನುವಂತಿ ತದ್ವತ್ ।** ಮರುದ್ದೇವತೆಗಳು ಯಾಗಗಳಲ್ಲಿ ಸೋಮಪಾನಕ್ಕಾಗಿ ಆಗಮಿಸುವ ಮಾರ್ಗವೂ ಕ್ರಮವೂ ಉಕ್ತವಾಗಿದೆ. ಇವರು ಜಗತ್ತೆಲ್ಲವನ್ನೂ ಸಂತೋಷಪಡಿಸುವ, ಪ್ರಭೂತವಾದ (ಸ್ಥೂಲವಾದ) ಜಲಧಾರೆಗಳಿಂದ ಕೂಡಿರುವ ಅಥವಾ ಧ್ವನಿಯನ್ನು ಮಾಡುತ್ತಿರುವ ಮತ್ತು ಉನ್ನತ ಪ್ರದೇಶಗಳಲ್ಲಿರುವ ಮೇಘಗಳ ಸಹಿತವಾಗಿಯಾಗಲಿ ಅಥವಾ ಮಾರ್ಗಗಳಿಂದಲಾಗಲಿ ಹಂಸಪಕ್ಷಿಗಳು ತಮ್ಮ ತಮ್ಮ ವಾಸಸ್ಥಾನಗಳನ್ನು ಹೊಂದುವಂತೆ ಯಾಗಶಾಲೆಗೆ ಆಗಮಿಸಲಿ ಎಂದು ವಿವರಿಸಿದೆ.

**ರಪ್ಶದೂಧಭಿಃ—ವಿರಪ್ಶೀತಿ ಮಹನ್ನಾಮ । ಊಧಾಂಸಿ ಜಲಸ್ರೋತೋ ಮಾರ್ಗಃ । ಮಹೋಧಸ್ಕೈಃ । ಯದ್ವಾ ಶಬ್ದಾಯಮಾನೋಚ್ಛ್ರಿತಪ್ರದೇಶಾಃ ।** ವಿರಪ್ಶೀ ಎಂದು ಮಹನ್ನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ಉದಕವು ಧಾರೆಯಾಗಿ ಸುರಿಯುವ ಮಾರ್ಗವು ಊಧಸ್ ಎನಿಸಿರುವುದು. ದಪ್ಪನಾದ ನೀರಿನ (ಧಾರೆ) ಹನಿಗಳುಳ್ಳವುಗಳು ಎಂದು ಅಥವಾ ಬಲವಾಗಿ ಧ್ವನಿಯನ್ನು ಉಂಟುಮಾಡುವ ಉನ್ನತ ಪ್ರದೇಶಗಳು ಎಂದು ಸಾಯಣರು ವಿವರಿಸಿದ್ದಾರೆ.

**ಪಥಿಭಿಃ—ಪತಂತಿ ಗಚ್ಛಂತೀತಿ ಪಂಥಾನೋ ಮೇಘಾಃ ।** ಗಮನಶೀಲಗಳಾದುದರಿಂದ ಮೇಘಗಳನ್ನು **ಪಂಥಾನಃ** ಎಂಬ ಪದದಿಂದ ಹೇಳಿದೆ.

**ಮಧೋರ್ಮದಾಯ—ಸೋಮಸ್ಯ ಮದಾರ್ಥಂ ।** ಮಧು ಎಂಬ ಪದವು ಉದಕನಾಮಗಳಲ್ಲಿ (ನಿ. ೨-೨೪) ಉಕ್ತವಾಗಿದೆ. ಮತ್ತು—

**ಮರುತ್ವಾಁ ಇಂದ್ರ ವೃಷಭೋ ರಣಾಯ ಪಿಬಾ ಸೋಮಮನುಷ್ವಧಂ ಮದಾಯ ।**
**ಆ ಸಿಂಚಸ್ವ ಜಠರೇ ಮಧ್ವ ಊರ್ಮಿಂ ತ್ವಂ ರಾಜಾಸಿ ಪ್ರದಿವಃ ಸುತಾನಾಂ ॥**
(ಋ. ಸಂ. ೩-೪೭-೧)

ಈ ಋಕ್ಕಿನಲ್ಲಿ **ಮಧು ನ ಊರ್ಮಿಂ । ಮಧು ಸೋಮಂ ಇತ್ಯೌಪಮಿಕಂ ಮಾದ್ಯತೇಃ । ಇದಮಪೀತರನ್ಮಧ್ವೇತಸ್ಮಾದೇವ ।** (ನಿ. ೪-೮) ಮದಜನಕವಾದುದರಿಂದ ಸೋಮವನ್ನು ಮಧು ಶಬ್ದದ ಅರ್ಥವನ್ನಾಗಿ ವರ್ಣಿಸಿದೆ.

॥ ಸಂಹಿತಾಪಾಠಃ ॥

ಆ ನೋ॒ ಬ್ರಹ್ಮಾ॑ಣಿ ಮರುತಃ ಸಮನ್ಯವೋ॒ ನರಾಂ॒ ನ ಶಂಸಃ॒ ಸವ॑ನಾನಿ ಗಂತನ
ಅಶ್ವಾ॑ಮಿವ ಪಿಪ್ಯತ ಧೇನು॑ಮೂಧನಿ ಕರ್ತಾ॒ ಧಿಯಂ॑ ಜರಿತ್ರೇ ವಾಜಪೇ॑ಶಸಂ ॥೬

॥ ಪದಪಾಠಃ ॥

ಆ । ನಃ । ಬ್ರಹ್ಮಾ॑ಣಿ । ಮರುತಃ । ಸಽಮನ್ಯವಃ । ನರಾಂ । ನ । ಶಂಸಃ॑ । ಸವ॑ನಾನಿ । ಗಂತನ ।
ಅಶ್ವಾಂ॑ಽಇವ । ಪಿಪ್ಯತ । ಧೇನುಂ । ಊಧ॑ನಿ । ಕರ್ತ॑ । ಧಿಯಂ॑ । ಜರಿತ್ರೇ । ವಾಜಽಪೇ॑ಶಸಂ ॥ ೬ ॥

ಸಾಯಣಭಾಷ್ಯಂ

ಸಮನ್ಯವಃ ಸಮಾನಮನಸಃ ಸಮಾನಕ್ರೋಧಾ ವಾ ಹೇ ಮರುತೋ ನೋಽಸ್ಮಾಕಂ ಬ್ರಹ್ಮಾಣಿ ॥ ಅನ್ನನಾಮೈತತ್ ॥ ಅನ್ನಾನಿ ಸವನಾನ್ಯಭಿಷುತಸೋಮಲಕ್ಷಣಾನಿ ಹವೀಂಷ್ಯಾಗಂತನ । ಆಗಚ್ಛತ ॥ ಗಮೇರ್ಲೋಟಿ ಛಾಂದಸಃ ಶಪೋ ಲುಕ್ । ತಪ್ತನಪ್ತನಥನಾಶ್ಚೇತಿ ತಸ್ಯ ತನಬಾದೇಶಃ । ಅತ ಏವ ಙಿತ್ತ್ವಾಭಾವಾದನುನಾಸಿಕಲೋಪಾಭಾವಃ ॥ ತತ್ರ ದೃಷ್ಟಾಂತಃ । ನರಾಂ ನ ಶಂಸಃ । ನರಾಮಸ್ಮಾಕಂ ಶಂಸಃ ಶಂಸನೀಯಂ ಸ್ತೋತ್ರಂ ಯಥಾಗಚ್ಛಥ ತದ್ವತ್ ॥ ನರಶಬ್ದಾತ್ ಷಷ್ಠೀಬಹುವಚನಸ್ಯಾನಿತ್ಯ-ಮಾಗಮಶಾಸನಮಿತಿ ನುಡಭಾವಃ । ಶಂಸಃ ಕರ್ಮಣಿ ಘಞಂತ ಆದ್ಯುದಾತ್ತಃ । ಸುಪಾಂ ಸುಲುಗಿತ್ಯಮಃ ಸುಆದೇಶಃ ॥ ಆಗತ್ಯ ಚ ಧೇನುಮುದಕದಾನೇನ ಪ್ರೀಣಯಿತಾರಮಶ್ವಾಮಿವೋಧನಿ ಪಿಪ್ಯತ । ಯಥಾಶ್ವಾಃ ಪೀನಾವಯವಾ ಭವಂತಿ ತದ್ವನ್ಮೇಘಂ ವರ್ಷಣಸಮರ್ಥಮಾಪ್ಯಾಯಿತಂ ಕುರುತೇತ್ಯರ್ಥಃ । ಅಪಿ ಚ ಜರಿತ್ರೇ ಸ್ತೋತ್ರೇ ವಾಜಪೇಶಸಂ ವಾಜೈರನ್ನೈರಾಶ್ಲಿಷ್ಟಂ ॥ ಪಿಶ ಅವಯವೇ ॥ ಧಿಯಂ ಕರ್ಮ ಕರ್ತ । ಕುರುತ ॥ ಕರೋತೇಶ್ಛಾಂದಸಃ ಶಪೋ ಲುಕ್ । ಪೂರ್ವವತ್ತಶಬ್ದಸ್ಯ ತಬಾದೇಶಃ ॥

॥ ಪ್ರತಿಪದಾರ್ಥ ॥

**ಸಮನ್ಯವಃ**—ಸಮಾನವಾದ ಮನಸ್ಸುಳ್ಳ । **ಮರುತಃ**—ಮರುತ್ತುಗಳೇ । **ನಃ**—ನಮ್ಮಿಂದ ಅರ್ಪಿತವಾಗತಕ್ಕ । **ಬ್ರಹ್ಮಾಣಿ**—ಅನ್ನವನ್ನು । **ಸವನಾನಿ**—ಹಿಂಡಲ್ಪಟ್ಟ ಸೋಮರಸವನ್ನು ಇಚ್ಛಿಸಿ । **ನರಾಂ**—(ನಮ್ಮಂತಹ) ಮಾನವರ । **ಶಂಸಃ ನ**—ಸ್ತುತಿಗಳನ್ನು ಇಚ್ಛಿಸಿಬರುವಂತೆಯೇ । **ಆ ಗಂತನ**—ಬನ್ನಿರಿ (ಅನಂತರ) **ಧೇನುಂ**—ಉದಕದಾನದಿಂದ ತೃಪ್ತಿಗೊಳಿಸತಕ್ಕ ಮೇಘವನ್ನು । **ಅಶ್ವಾಮಿವ ಊಧನಿ**—ನೀರನ್ನು ಕುಡಿಸುವುದರಿಂದ ಅಶ್ವಗಳ ಅವಯವಗಳನ್ನು ಪುಷ್ಟವಾಗಿ ಮಾಡುವಂತೆ । **ಪಿಪ್ಯತ**—ವೃಷ್ಟಿಕಾರಕವಾಗುವಂತೆ ವೃದ್ಧಿಪಡಿಸಿರಿ । **ಜರಿತ್ರೇ**—ಸ್ತೋತೃವಿಗೆ । **ವಾಜಪೇಶಸಂ**—ಅನ್ನವನ್ನು ಒದಗಿಸುವಂತೆ । **ಧಿಯಂ**—ಕರ್ಮವನ್ನು । **ಕರ್ತ**—ಮಾಡಿರಿ

॥ ಭಾವಾರ್ಥ ॥

ಸಮಾನವಾದ ಮನಸ್ಸುಳ್ಳ ಮರುತ್ತುಗಳೇ, ನಮ್ಮಿಂದ ಅರ್ಪಿತವಾಗತಕ್ಕ ಅನ್ನವನ್ನೂ ಹಿಂಡಲ್ಪಟ್ಟ ಸೋಮರಸವನ್ನೂ ಅಪೇಕ್ಷಿಸಿ ನಮ್ಮಂತಹ ಮಾನವರ ಸ್ತುತಿಗಳನ್ನು ಇಚ್ಛಿಸಿಬರುವಂತೆಯೇ ಬನ್ನಿರಿ. ಅನಂತರ ಉದಕದಾನದಿಂದ ತೃಪ್ತಿಗೊಳಿಸತಕ್ಕ ಮೇಘವನ್ನು, ನೀರನ್ನು ಕುಡಿಸುವುದರಿಂದ ಅಶ್ವಗಳ ಅವಯವಗಳನ್ನು ಪುಷ್ಟವಾಗಿ ಮಾಡುವಂತೆ, ವೃಷ್ಟಿಕಾರಕವಾಗುವಂತೆ ವೃದ್ಧಿಪಡಿಸಿರಿ. ಸ್ತೋತೃವಿಗೆ ಅನ್ನವನ್ನು ಒದಗಿಸುವ ರೀತಿಯಲ್ಲಿ ಕರ್ಮ ಮಾಡಿರಿ.

## English Translation·

Maruts, who are of one mind, come to the food that is offered at (our) sacrifices, as (you come) to the praises of men: nourish the milch cow, (the cloud), so that it may be like a mare with a full udder, and render the pious rite productive of abundant food to the worshipper.

॥ ವಿಶೇಷವಿಷಯಗಳು ॥

**ಹೇ ಮರುತಃ ನಃ ಬ್ರಹ್ಮಾಣಿ ಸವನಾನಿ ನರಾಂ ನ ಶಂಸಃ ಆ ಗಂತನ—ಅಸ್ಮಾಕಂ ಅನ್ನಾನಿ ಅಭಿಷುತಸೋಮಲಕ್ಷಣಾನಿ ಹವೀಂಷಿ ಅಸ್ಮಾಕಂ ಶಂಸನೀಯಂ ಸ್ತೋತ್ರಂ ಯಥಾ ಆಗಚ್ಛತ ತದ್ವತ್ ।** ಮರುದ್ದೇವತೆಗಳನ್ನು ಸಂಬೋಧಿಸಿ, ಯಜಮಾನರಾದ ನಾವು ಅರ್ಪಿಸುವ ಸಂಸ್ಕಾರಪೂರ್ವಕವಾಗಿ ಹಿಂಡಿರುವ ಸೋಮರಸವನ್ನೂ ಹವಿಸ್ಸಿನ ರೂಪವಾದ ಅನ್ನವನ್ನೂ ಸ್ವೀಕರಿಸುವುದಕ್ಕಾಗಿ ಮರುದ್ದೇವತೆಗಳು ನಾವು ಪಠಿಸುವ ಸ್ತೋತ್ರಗಳನ್ನು ಶ್ರವಣಮಾಡಲು ಆಗಮಿಸುವಹಾಗೆ ಆಗಮಿಸಲಿ ಎಂದು ಹೋಲಿಸಿ ಹೇಳಿದೆ.

**ಧೇನುಂ ಅಶ್ವಾಮಿವ ಊಧನಿ ಪಿಪ್ಯತ ಉದಕದಾನೇನ ಪ್ರೀಣಯಿತಾರಂ ಯಥಾ ಅಶ್ವಾಃ ಪೀನಾವಯವಾಃ ಭವಂತಿ ತದ್ವನ್ಮೇಘಂ ವರ್ಷಣಸಮರ್ಥಂ ಆಪ್ಯಾಯಿತಂ ಕುರುತ ।** ಮರುದ್ದೇವತೆಗಳು ಯಾಗಶಾಲೆಗೆ ಆಗಮಿಸಿ ನಾವು ಅರ್ಪಿಸಿದ ಹವಿಸ್ಸುಗಳನ್ನು ಸ್ವೀಕರಿಸಿ ವೃಷ್ಟ್ಯುದಕಗಳನ್ನು ಸುರಿಸುವುದರಿಂದ ಜಗತ್ತೆಲ್ಲವನ್ನೂ ಸಂತೋಷಪಡಿಸಲಿ. ಚೆನ್ನಾಗಿ ಪೋಷಿತವಾದ ಕುದುರೆಗಳು ಪುಷ್ಟವಾಗಿರುವಂತೆ ಮೇಘವು ಉದಕಗಳಿಂದ ಪೂರಿತವಾಗಿ ವೃಷ್ಟಿಯನ್ನು ಉಂಟುಮಾಡಲು ಸಮರ್ಥವಾಗಿರುವಂತೆಯೂ ನಮಗೆ ಆನಂದಜನಕವಾಗಿರುವಂತೆಯೂ ಮೇಘಗಳನ್ನು ವೃದ್ಧಿಗೊಳಿಸಲಿ ಎಂದು ಆಶಿಸಿದೆ ಮತ್ತು

**ಜರಿತ್ರೇ ವಾಜಪೇಶಸಂ ಧಿಯಂ ಕರ್ತ—ಸ್ತೋತ್ರೇ ವಾಜೈರನ್ನೈರಾಶ್ಲಿಷ್ಟಂ ಕರ್ಮ ಕುರುತ ।** ಯಾಗಗಳಲ್ಲಿ ಸ್ತುತಿಗಳನ್ನು ಪಠಿಸುವ ಋತ್ವಿಜರಾದ ಅಥವಾ ಯಜಮಾನರಾದ ನಮಗೆ ಅನ್ನವು ವೃದ್ಧಿಯಾಗುವಂತೆ ಕರ್ತವ್ಯಗಳನ್ನು ಮರುದ್ದೇವತೆಗಳು ಆಚರಿಸಲಿ ಎಂದು ವರ್ಣಿಸಿದೆ.

**ಬ್ರಹ್ಮಾಣಿ— ಅನ್ನಾನಿ** ಬ್ರಹ್ಮಶಬ್ದವು ಅನ್ನನಾಮಗಳಲ್ಲಿಯೂ (ನಿ. ೨-೯) ಧನನಾಮಗಳಲ್ಲಿಯೂ (ನಿ. ೨-೯) ಉಕ್ತವಾಗಿದೆ.

ಯೋಮಥರ್ವಾ ಮನುಷ್ಪಿತಾ ದಧ್ಯಙ್ಙ್ಧಿಯಮತ್ನತ ।
ತಸ್ಮಿನ್ ಬ್ರಹ್ಮಾಣಿ ಪೂರ್ವಥೇಂದ್ರ ಉಕ್ಥಾ ಸಮಗ್ಮತಾರ್ಚನ್ನನು ಸ್ವರಾಜ್ಯಂ ॥
(ಋ. ಸಂ. ೧-೮೦-೧೬)

ಎಂಬಲ್ಲಿ **ಬ್ರಹ್ಮಾಣಿ ಕರ್ಮಾಣಿ** ಎಂದು ಅರ್ಥವನ್ನು ವಿವರಿಸಿದೆ. ಇಲ್ಲಿ ಅನ್ನವೆಂದು ಅರ್ಥವನ್ನು ಹೇಳಿದೆ.

**ಧೇನು** ಶಬ್ದವು ವಾಙ್ನಾಮಗಳಲ್ಲಿ (ನಿ.೨-೨೩) ಉಕ್ತವಾಗಿದೆ. ಇಲ್ಲಿ **ಧೇನುಂ ಪ್ರೀಣಯಿತಾರಂ** ಸಂತೋಷಪಡಿಸುವವನೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಜರಿತ್ರೇ—ಸ್ತೋತ್ರೇ ।** ಜರಿತಾ ಎಂಬ ಪದವು ಸ್ತೋತೃನಾಮಗಳಲ್ಲಿ (ನಿ.೩-೧೯) ಉಕ್ತವಾಗಿದೆ. ಸ್ತುತಿಗಳನ್ನು ಪಠಿಸುವ ಋತ್ವಿಜರು ಎಂದು ಅರ್ಥವನ್ನು ವಿವರಿಸಿದೆ.

॥ ಸಂಹಿತಾಪಾಠಃ ॥

ತಂ ನೋ ದಾತ ಮರುತೋ ವಾಜಿನಂ ರಥ ಆಪಾನಂ ಬ್ರಹ್ಮ ಚಿತಯದ್ದಿವೇದಿವೇ ।
ಇಷಂ ಸ್ತೋತೃಭ್ಯೋ ವೃಜನೇಷು ಕಾರವೇ ಸನಿಂ ಮೇಧಾಮರಿಷ್ಟಂ ದುಷ್ಟರಂ
ಸಹಃ ॥ ೭ ॥

ಪದಪಾಠಃ ।

ತಂ । ನಃ । ದಾತ । ಮರುತಃ । ವಾಜಿನಂ । ರಥೇ । ಆಪಾನಂ । ಬ್ರಹ್ಮ । ಚಿತಯತ್ । ದಿವೇऽದಿವೇ ।
ಇಷಂ । ಸ್ತೋತೃऽಭ್ಯಃ । ವೃಜನೇಷು । ಕಾರವೇ । ಸನಿಂ । ಮೇಧಾಂ । ಅರಿಷ್ಟಂ । ದುಸ್ತರಂ । ಸಹಃ ॥೭॥

॥ ಸಾಯಣಭಾಷ್ಯಂ ॥

ಹೇ ಮರುತಃ ತಂ ಪುತ್ರಂ ನೋऽಸ್ಮಭ್ಯಂ ದಾತ । ದತ್ತ ಪ್ರಯಚ್ಛತ ॥ ಛಾಂದಸಃ ಶಪೋ ಲುಕ್ ॥ ಕೀದೃಶಂ । ವಾಜಿನಮನ್ನವಂತಂ ಬಲವಂತಂ ವಾ । ರಥೇ ರಂಹಣೇ ಯುಷ್ಮದೀಯ ಆಗಮನೇ ನಿಮಿತ್ತಭೂತೇ ಸತಿ ದಿವೇದಿವೇ ಪ್ರತಿದಿವಸಂ ಚಿತಯತ್ ಪ್ರಜ್ಞಾಪಯತ್ ಯುಷ್ಮದ್ಗುಣಪ್ರಖ್ಯಾಪಕಂ । ಬ್ರಹ್ಮ ಸ್ತೋತ್ರಮಾಪಾನಮಾಪ್ನುವಂತಂ । ಅಪಿ ಚ ಇಷಮನ್ನಂ ಸ್ತೋತೃಭ್ಯೋऽಸ್ಮಭ್ಯಂ ದಾತ । ಪ್ರಯಚ್ಛತ । ತಥಾ ವೃಜನೇಷು ಸಂಗ್ರಾಮೇಷು ಕಾರವೇ ಸ್ತೋತ್ರೇ ॥ ವಚನವ್ಯತ್ಯಯಃ ॥ ಮೇಧಾಂ ಯುದ್ಧಪ್ರಜ್ಞಾನಂ ಸನಿಂ ಧನದಾತೃತ್ವಂ ಚಾರಿಷ್ಟಂ ಶತ್ರುಭಿರಹಿಂಸಿತಂ ದುಸ್ತರಂ ಶತ್ರುಭಿಸ್ತರೀತುಮಶಕ್ಯಂ ಸಹೋ ಬಲಂ ಚ ಪ್ರಯಚ್ಛತ ॥

॥ ಪ್ರತಿಪದಾರ್ಥ ॥

**ಮರುತಃ**—ಎಲೈ ಮರುತ್ತುಗಳೇ । **ವಾಜಿನಂ**—ಅನ್ನವಂತನೂ । **ರಥೇ**—ನಿಮ್ಮ ಆಗಮನದ ನಿಮಿತ್ತವಾಗಿ । **ದಿವೇದಿವೇ**—ಪ್ರತಿದಿನವೂ । **ಚಿತಯತ್**—ನಿಮ್ಮ ಗುಣಗಳನ್ನು ವರ್ಣಿಸಿ ತಿಳಿಸತಕ್ಕ । **ಬ್ರಹ್ಮ**—

ಸ್ತೋತ್ರವನ್ನು **ಆಪಾನಂ**—ನಿರ್ಮಿಸಿ ಪಠಿಸುವವನೂ ಆದ । **ತಂ**—ಪುತ್ರನನ್ನು । **ನಃ**—ನಮಗೆ । **ದಾತ**—ಕೊಡಿರಿ । **ಇಷಂ**—ಅನ್ನವನ್ನು । **ಸ್ತೋತೃಭ್ಯಃ**—ಸ್ತುತಿಕರ್ತರಾದ ನಮಗೆ (ಕೊಡಿರಿ) । **ವೃಜನೇಷು**—ಸಂಗ್ರಾಮಗಳಲ್ಲಿ **ಕಾರವೇ**—ಸ್ತುತಿಕರ್ತನಿಗೆ । **ಮೇಧಾಂ**—ಯುದ್ಧದಲ್ಲಿ ಕುಶಲತೆಯಿಂದ ಕೂಡಿದ ಬುದ್ಧಿಯನ್ನೂ । **ಸನಿಂ**—ಧನದಾತೃತ್ವವನ್ನೂ । **ಅರಿಷ್ಟಂ**—ಶತ್ರುಗಳಿಂದ ಅಹಿಂಸೆಯನ್ನೂ **ದುಸ್ತರಂ**—ಶತ್ರುಗಳಿಂದ ಅಪ್ರತಿಹತವಾದ **ಸಹಃ**—ಶಕ್ತಿಯನ್ನೂ (ಕೊಡಿರಿ).

॥ ಭಾವಾರ್ಥ ॥

ಎಲೈ ಮರುತ್ತುಗಳೇ, ಅನ್ನವಂತನೂ, ನಿಮ್ಮ ಆಗಮನದ ನಿಮಿತ್ತವಾಗಿ ಪ್ರತಿದಿನವೂ ನಿಮ್ಮ ಗುಣಗಳನ್ನು ವರ್ಣಿಸಿ ತಿಳಿಸತಕ್ಕ ಸ್ತೋತ್ರವನ್ನು ನಿರ್ಮಿಸಿ ಪಠಿಸುವವನೂ ಆದ ಪುತ್ರನನ್ನೂ, ಅನ್ನವನ್ನೂ, ಸ್ತುತಿಕರ್ತರಾದ ನಮಗೆ ಕೊಡಿರಿ. ಸಂಗ್ರಾಮಗಳಲ್ಲಿ ಸ್ತುತಿಕರ್ತನಿಗೆ ಯುದ್ಧಮಾಡಲು ಬೇಕಾದ ಕುಶಲತೆಯನ್ನೂ, ಶತ್ರುಗಳಿಂದ ಅಹಿಂಸೆಯನ್ನೂ, ಅಪ್ರತಿಹತವಾದ ಶಕ್ತಿಯನ್ನೂ ಕೊಡಿರಿ.

English Translation.

Bestow upon us, Maruts, that (son) who shall enjoy abundance, and who shall be repeating your appropriate praises day by day to (induce) your coming: give food to those who praise you : to him who glorifies you in battles: (grant him) liberality. intelligence, and unimpaired unsurpassable vigour.

॥ ವಿಶೇಷವಿಷಯಗಳು ॥

ಹೇ ಮರುತಃ ಎಂದು ಮರುದ್ದೇವತೆಗಳನ್ನು ಸಂಬೋಧಿಸಿ ಯಜಮಾನರು **ನಃ ತಂ ಪುತ್ರಂ ದಾತ—ಅಸ್ಮಭ್ಯಂ ಪುತ್ರಂ ಪ್ರಯಚ್ಛತ** ನಮಗೆ ಮರುದ್ದೇವತೆಗಳು ಪುತ್ರರನ್ನು ಅನುಗ್ರಹಿಸಲಿ ಎಂದು ಪ್ರಾರ್ಥಿಸಿದ್ದಾರೆ, ಇವರು ಪ್ರಾರ್ಥಿಸುವ ಪುತ್ರನು—**ವಾಜಿನಂ ರಥೇ ದಿವೇ ದಿವೇ ಚಿತಯತ್** ಬ್ರಹ್ಮ **ಆಪಾನಂ—ಅನ್ನವಂತಂ ಬಲವಂತಂ ವಾ, ಯುಷ್ಮದೀಯೇ ಆಗಮನೇ ನಿಮಿತ್ತಭೂತೇ ಪ್ರತಿದಿವಸಂ ಯುಷ್ಮದ್ಗುಣಪ್ರಖ್ಯಾಪಕಂ ಸ್ತೋತ್ರಮಾಪ್ನುವಂತಂ ।** ಮರುದ್ದೇವತೆಗಳು ಯಜಮಾನರಿಗೆ ಅನುಗ್ರಹಿಸುವ ಪುತ್ರನು, ಅನ್ನವುಳ್ಳವನೂ, ಬಲವುಳ್ಳವನೂ,, ಯಾಗಕ್ಕಾಗಿ ಮರುದ್ದೇವತೆಗಳ ಆಗಮನ ಕಾಲದಲ್ಲಿ ಪ್ರತಿದಿನವೂ ಅವರ ಸ್ತುತಿಗಳನ್ನು ಪಠಿಸುವವನೂ, ಆಗಿರಬೇಕೆಂದು ಆಶಿಸಿದೆ. ಮತ್ತು ಯಜಮಾನರು **ಸ್ತೋತೃಭ್ಯಃ ಇಷಂ, ವೃಜಿನೇಷು ಕಾರವೇ ಮೇಧಾಂ, ಸನಿಂ, ಅರಿಷ್ಟಂ, ದುಸ್ತರಂ ಮಹಃ ಪ್ರಯಚ್ಛತ ।** ಸ್ತುತಿಗಳನ್ನು ಪಠಿಸುವ ಋತ್ವಿಜರಿಗೂ, ಅನ್ನವನ್ನೂ, ಯುದ್ಧಕಾಲದಲ್ಲಿ ಸ್ತುತಿಯನ್ನು ಪಠಿಸುವವನಿಗೆ ಯುದ್ಧದಲ್ಲಿ ಜಯವನ್ನು ಹೊಂದುವ ಬುದ್ಧಿಶಕ್ತಿಯನ್ನೂ, ಧನವನ್ನು ದಾನಮಾಡುವ ಔದಾರ್ಯವನ್ನೂ, ಶತ್ರುಗಳಿಂದ ತಿರಸ್ಕಾರವನ್ನು ಮಾಡಲಶಕ್ಯವಾದ ಬಲವನ್ನೂ ಮರುದ್ದೇವತೆಗಳು ಅನುಗ್ರಹಿಸಲಿ ಎಂದು ಆಶಿಸಿದ್ದಾರೆ.

**ಕಾರು** ಎಂಬ ಶಬ್ದವು **ಸ್ತೋತೃ**ನಾಮಗಳಲ್ಲಿ (ನಿ. ೩-೧೬) ಉಕ್ತವಾಗಿದೆ.

**ಸನಿಂ**—**ಧನದಾತೃತ್ವಂ** । ಎಂದು ಸಾಯಣರು ವಿವರಿಸಿದ್ದಾರೆ. ಯಾಸ್ಕರು --

**ಹಿನೋತಾ ನೋ ಅಧ್ವರಂ ದೇವಯಜ್ಯಾ ಹಿನೋತ ಬ್ರಹ್ಮ ಸನಯೇ ಧನಾನಾಂ ।**
**ಋತಸ್ಯ ಯೋಗೇ ವಿ ಷ್ಯಧ್ವಮೂಧಃ ಶ್ರುಷ್ಟೀವರೀರ್ಭೂತನಾಸ್ಮಭ್ಯಮಾಪಃ ॥**
(ಋ. ಸಂ. ೧೦-೩೦-೧೧)

ಇಲ್ಲಿ **ಸನಯೇ ಲಬ್ಧಯೇ** ಧನಪ್ರಾಪ್ತಿಗಾಗಿ ಎಂದು (ನಿ. ೬-೨೨) ಅರ್ಥವನ್ನು ವರ್ಣಿಸಿದ್ದಾರೆ.



ಸಂಹಿತಾಪಾಠಃ

## ಯದ್ಯುಂಜತೇ ಮರುತೋ ರುಕ್ಮವಕ್ಷಸೋಽಶ್ವಾನ್ರಥೇಷು ಭಗ ಆ ಸುದಾನವಃ ।
## ಧೇನುರ್ನ ಶಿಶ್ವೇ ಸ್ವಸರೇಷು ಪಿನ್ವತೇ ಜನಾಯ ರಾತಹವಿಷೇ ಮಹೀಮಿಷಂ ॥ ೮ ॥

॥ ಪದಪಾಠಃ ॥

**ಯತ್ । ಯುಂಜತೇ । ಮರುತಃ । ರುಕ್ಮऽವಕ್ಷಸಃ । ಅಶ್ವಾನ್ । ರಥೇಷು । ಭಗೇ । ಆ । ಸುऽದಾನವಃ ।**
**ಧೇನುಃ । ನ । ಶಿಶ್ವೇ । ಸ್ವಸರೇಷು । ಪಿನ್ವತೇ । ಜನಾಯ । ರಾತऽಹವಿಷೇ । ಮಹೀಂ । ಇಷಂ ॥ ೮ ॥**

॥ ಸಾಯಣಭಾಷ್ಯಂ ॥

**ರುಕ್ಮವಕ್ಷಸೋ ರೋಚಮಾನಾಭರಣೋರಸ್ಕಾಃ ಸುದಾನವಃ ಶೋಭನದಾನಾ ಮರುತೋ ಯದ್ಯದಾ ರಥೇಷು ಭಗೇ ಭಜನೀಯೇ ಸ್ಥಾನೇ । ಧುರೀತ್ಯರ್ಥಃ । ಅಶ್ವಾನಾಯುಂಜತೇ । ಅಭಿಮುಖ್ಯೇನ ಯುಕ್ತಾನ್ಕುರ್ವಂತಿ । ತದಾನೀಮೇವ ರಾತಹವಿಷೇ ದತ್ತಹವಿಷ್ಕಾಯ ಯಜಮಾನಾಯ ಮಹೀಂ ಮಹತೀಮಿಷಮನ್ನಂ ತತ್ಕಾರಣಭೂತಮುದಕಂ ವಾ ಸ್ವಸರೇಷು ಸ್ವಕೀಯೇಷು ಗೃಹೇಷು ಪಿನ್ವತೇ । ಸಿಂಚಂತಿ ಕಿರಂತಿ ॥ ಪಿವಿ ಸೇಚನೇ ॥ ತತ್ರ ದೃಷ್ಟಾಂತಃ । ಧೇನುರ್ನ ಶಿಶ್ವೇ । ಯಥಾ ಧೇನುಃ ಪ್ರಸ್ರುತಸ್ತನೀ ಸತೀ ಸ್ವಕೀಯಾಯ ವತ್ಸಾಯ ಕ್ಷೀರಂ ಪ್ರಯಚ್ಛತಿ ತದ್ವತ್ ॥**

॥ ಪ್ರತಿಪದಾರ್ಥ ॥

**ರುಕ್ಮವಕ್ಷಸಃ**—ಹೊಂಬಣ್ಣದ ಆಭರಣವುಳ್ಳ ವಕ್ಷಸ್ಸುಳ್ಳವರೂ । **ಸುದಾನವಃ**—ಶ್ರೇಷ್ಠವಾದ ದಾನವನ್ನು ಮಾಡುವವರೂ ಆದ । **ಮರುತಃ**—ಮರುತ್ತುಗಳು । **ಯತ್**—ಯಾವಾಗ । **ರಥೇಷು ಭಗೇ**—ರಥಗಳ ನೊಗಗಳ ಪ್ರದೇಶಗಳಲ್ಲಿ । **ಅಶ್ವಾನ್**—ಅಶ್ವಗಳನ್ನು । **ಆ ಯುಂಜತೇ**—ಅಭಿಮುಖವಾಗಿ ಕಟ್ಟುತ್ತಾರೆಯೋ

(ಆ ಒಡನೆಯೇ) **ರಾತಹವಿಷೇ**—ಹವಿಸ್ಸನ್ನು ಅರ್ಪಿಸಿದ । **ಜನಾಯ**—ಯಜಮಾನನಿಗೆ **ಮಹೀಂ**—ಮಹತ್ತಾದ । **ಇಷಂ**—ಅನ್ನವನ್ನು । **ಸ್ವಸರೇಷು**—ತಮ್ಮ ತಮ್ಮ ಮನೆಗಳಲ್ಲಿ **ಶಿಶ್ವೇ**—ತನ್ನ ಕರುವಿಗೆ । **ಧೇನುರ್ನ**—ಧೇನುವು ಪ್ರಭೂತವಾಗಿ ಕ್ಷೀರವನ್ನು ಕೊಡುವಂತೆ । **ಪಿನ್ವತೇ**—ಸುರಿಸುತ್ತಾರೆ.

॥ ಭಾವಾರ್ಥ ॥

ಹೊಂಬಣ್ಣದ ಆಭರಣದಿಂದ ಅಲಂಕೃತವಾದ ವಕ್ಷಸ್ಸುಳ್ಳವರೂ, ಶ್ರೇಷ್ಠವಾದ ದಾನವನ್ನು ಮಾಡುವವರೂ ಆದ ಮರುತ್ತುಗಳು ಯಾವಾಗ ತಮ್ಮ ರಥಕ್ಕೆ ಅಶ್ವಗಳನ್ನು ಕಟ್ಟುತ್ತಾರೆಯೋ ಆ ಒಡನೆಯೇ, ಹವಿಸ್ಸನ್ನು ಅರ್ಪಿಸಿದ ಯಜಮಾನರಿಗೆ ಮಹತ್ತಾದ ಅನ್ನವನ್ನು ಸ್ವಕೀಯ ಗೃಹಗಳಲ್ಲಿ ಧೇನುವು ತನ್ನ ಕರುವಿಗೆ ಪ್ರಭೂತವಾದ ಕ್ಷೀರವನ್ನು ಕೊಡುವಂತೆ ಸುರಿಸುತ್ತಾರೆ.

## English Translation.

When the golden-breasted munificent Maruts yoke their horses to their chariots on an auspicious (occasion), they shed in their peculiar (directions) abundant food upon him who offers them oblations, as a milch cow (gives milk) to her calf.

॥ ವಿಶೇಷವಿಷಯಗಳು ॥

**ರುಕ್ಮವಕ್ಷಸಃ ಸುದಾನವಃ ಮರುತಃ**—ಸುವರ್ಣಮಯವಾದ (ಆಭರಣಗಳನ್ನು) ಹಾರಗಳನ್ನು ವಕ್ಷಸ್ಥಳದಲ್ಲಿ ಧರಿಸಿ ಪ್ರಭೂತವಾದ ದಾನವನ್ನಾಚರಿಸುವ ಮರುದ್ದೇವತೆಗಳು ಯಾಗದಲ್ಲಿ ಹವಿಸ್ಸನ್ನು ಸ್ವೀಕರಿಸಲು ರಥದಲ್ಲಿ ಉಪವಿಷ್ಟರಾಗಿ, **ರಾತ ಹವಿಷೇ** ಹವಿರ್ಭಾಗಗಳನ್ನು ಅರ್ಪಿಸುವ ಯಜಮಾನರಿಗೆ **ಮಹೀಂ ಇಷಂ—ಮಹತೀಂ ಅನ್ನಂ ತತ್ಕಾರಣಭೂತಂ ಉದಕಂ ವಾ** ಪ್ರಭೂತವಾದ ಅನ್ನವನ್ನು ಅಥವಾ ಅನ್ನವು ಉಂಟಾಗುವ ಸಸ್ಯಾದಿಗಳ ವೃದ್ಧಿಗೆ ಕಾರಣವಾದ ವೃಷ್ಟ್ಯುದಕಗಳನ್ನು ಅನುಗ್ರಹಿಸುವರು ಎಂದು ವರ್ಣಿತವಾಗಿದೆ.

**ಸ್ವಸರೇಷು ಧೇನುರ್ನ ಶಿಶ್ವೇ—ಸ್ವಕೀಯೇಷು ಗೃಹೇಷು ಯಥಾ ಧೇನುಃ ಪ್ರಸ್ರುತಸ್ತನೀಯಾಯ ವತ್ಸಾಯ ಕ್ಷೀರಂ ಪ್ರಯಚ್ಛತಿ ತದ್ವತ್** । ತನ್ನ ವಾಸಸ್ಥಳದಲ್ಲಿ ಗೋವುಗಳು ತಮ್ಮ ಕರುಗಳಿಗಾಗಿ ಹಾಲನ್ನು ಕೊಡುವ ಹಾಗೆ ಮರುದ್ದೇವತೆಗಳೂ ತಮಗೆ ಹವಿಸ್ಸನ್ನು ಅರ್ಪಿಸುವ ಯಜಮಾನರಿಗೆ ಅನ್ನವನ್ನೂ ಉದಕಗಳನ್ನೂ ತಾವಾಗಿ ಅನುಗ್ರಹಿಸುವರೆಂದು ಹೇಳಿ ಅವರ ಔದಾರ್ಯವು ವರ್ಣಿತವಾಗಿದೆ.

**ಸ್ವಸರ** ಶಬ್ದವು ಗೃಹನಾಮಗಳಲ್ಲಿ (ನಿ. ೩–೧೩) ಅಹರ್ನಾಮಗಳಲ್ಲಿ (ನಿ. ೨-೨೧) ಉಕ್ತವಾಗಿ, **ಸ್ವಸರಾಣ್ಯಹಾನಿ ಭವಂತಿ ಸ್ವಯಂ ಸಾರೀಣ್ಯಪಿವಾ** (ನಿ. ೫-೪) ಎಂದು ಯಾಸ್ಕರಿಂದ ವ್ಯಾಖ್ಯಾತವಾಗಿದೆ. ಇಲ್ಲಿ ಗೃಹವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

॥ ಸಂಹಿತಾಪಾಠಃ ॥

ಯೋ ನೋ ಮರುತೋ ವೃಕತಾತಿ ಮರ್ತ್ಯೋ ರಿಪುರ್ದಧೇ ವಸವೋ ರಕ್ಷತಾ ರಿಷಃ ।
ವರ್ತಯತ ತಪುಷಾ ಚಕ್ರಿಯಾಭಿ ತಮವ ರುದ್ರಾ ಅಶಸೋ ಹಂತನಾ ವಧಃ ॥೯॥

॥ ಪದಪಾಠಃ ॥

ಯಃ । ನಃ । ಮರುತಃ । ವೃಕಽತಾತಿ । ಮರ್ತ್ಯಃ । ರಿಪುಃ । ದಧೇ । ವಸವಃ । ರಕ್ಷತ । ರಿಷಃ ।
ವರ್ತಯತ । ತಪುಷಾ । ಚಕ್ರಿಯಾ । ಅಭಿ । ತಂ । ಅವ । ರುದ್ರಾಃ । ಅಶಸಃ । ಹಂತನ । ವಧಃ ಇತಿ ॥ ೯ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಯೋ ಮರ್ತ್ಯೋ ಮನುಷ್ಯೋ ವೃಕತಾತಿ ಆದಾತಾ ವೃಕಃ ॥ ವೃಕ ಆದಾನೇ । ವೃಕಜ್ಯೇಷ್ಠಾಭ್ಯಾಂ ತಿಲ್ತಾತಿಲೌ ಚ ಛಂದಸಿ । ಪಾ. ೫-೪-೪೧. । ಇತಿ ಸ್ವಾರ್ಥಿಕಸ್ತಾತಿಲ್ಪ್ರತ್ಯಯಃ ॥ ತಾದೃಶಃ ಸನ್ ನೋಽಸ್ಮಾಕಂ ರಿಪುರ್ದಧೇ । ರಿಪುತಯಾತ್ಮಾನಂ ಧಾರಯತಿ । ಹೇ ವಸವೋ ವಾಸಯಿತಾರೋ ಮರುತೋ ರಿಷೋ ಹಿಂಸಕಾದಸ್ಮಾನ್ರಕ್ಷತ । ಪಾಲಯತ । ಅಸ್ಮಾಕಂ ಶತ್ರುಭೂತಂ ಮರ್ತ್ಯಂ ತಪುಷಾ ತಾಪಯಿತ್ರ್ಯಾ ಚಕ್ರಿಯಾ ಋಷ್ಟ್ಯಾಖ್ಯಯಾ ಶಕ್ತ್ಯಾಭಿವರ್ತಯತ । ಅಭಿತೋ ನಿವರ್ತಯತ । ಹೇ ರುದ್ರಾ ರುದ್ರಪುತ್ರಾಃ । ಯದ್ವಾ ರೋದಯಮಾನಾ ದ್ರವಂತಃ ಅಶಸೋ ಭಕ್ಷಕಸ್ಯ ॥ ಅಶ ಭೋಜನ ಇತ್ಯಸ್ಮಾದೌಣಾದಿಕೋಽಸಿಪ್ರತ್ಯಯಃ ॥ ತಾದೃಶಸ್ಯ ರಾಕ್ಷಸಾದೇರ್ವಧರ್ಹನನ-ಸಾಧನಮಾಯುಧಮವಹಂತನ । ಅವಯುತ್ಯಾಸ್ಮತ್ತಃ ಪೃಥಕ್ಕೃತ್ಯ ನಾಶಯತ ॥ ಹಂತೇರ್ಲೋಟಿ ತಪ್ತನಪ್ತನಥನಾಶ್ಚೇತಿ ತನಪ್ ॥

॥ ಪ್ರತಿಪದಾರ್ಥ ॥

**ವಸವಃ**—ವಾಸಸ್ಥಾನವನ್ನು ಕಲ್ಪಿಸಿಕೊಡತಕ್ಕ । **ಮರುತಃ**—ಎಲೈ ಮರುತ್ತುಗಳೇ । **ಯಃ ಮರ್ತ್ಯಃ**—ಯಾವ ಮಾನವನು । **ವೃಕತಾತಿ**—ಕ್ರೂರವಾದ ತೋಳನಂತೆ । **ನಃ**—ನಮ್ಮ ವಿಷಯದಲ್ಲಿ । **ರಿಪುಃ**—ಶತ್ರುತ್ವವನ್ನು । **ದಧೇ**—ಬೆಳೆಸುತ್ತಾನೆಯೋ । **ರಿಷಃ**—ಹಿಂಸಕನಾದ ಆ ಶತ್ರುವಿನಿಂದ । **ರಕ್ಷತ**—(ನಮ್ಮನ್ನು) ರಕ್ಷಿಸಿ । **ತಂ**—ಆ ಶತ್ರುವನ್ನು । **ತಪುಷಾ**—ದಹಿಸತಕ್ಕ । **ಚಕ್ರಿಯಾ**—ಋಷ್ಟಿಯೆಂಬ ಆಯುಧದಿಂದ । **ಅಭಿ ವರ್ತಯತ**—ನಮ್ಮಿಂದ ಹಿಂತಿರುಗುವಂತೆ ಮಾಡಿರಿ । **ರುದ್ರಾಃ**—ರುದ್ರಪುತ್ರರಾದ ಮರುತ್ತುಗಳೇ । **ಅಶಸಃ**—ಭಕ್ಷಕನಾದ ಅಂತಹ ಅಸುರನ । **ವಧಃ**—ವಧಸಾಧನವಾದ ಆಯುಧವನ್ನು । **ಅವ ಹಂತನ**—ನಾಶಪಡಿಸಿರಿ.

॥ ಭಾವಾರ್ಥ ॥

ವಾಸಸ್ಥಾನವನ್ನು ಕಲ್ಪಿಸಿಕೊಡತಕ್ಕ ಎಲೈ ಮರುತ್ತುಗಳೇ, ಯಾವ ಮಾನವನು ಕ್ರೂರವಾದ ತೋಳನಂತೆ ನಮ್ಮ ವಿಷಯದಲ್ಲಿ ಶತ್ರುತ್ವವನ್ನು ಬೆಳೆಸುತ್ತಾನೆಯೋ, ಹಿಂಸಕನಾದ ಆ ಶತ್ರುವಿನಿಂದ ನಮ್ಮನ್ನು ರಕ್ಷಿಸಿರಿ. ದಹಿಸತಕ್ಕ ನಿಮ್ಮ ಶಕ್ತ್ಯಾಯುಧದಿಂದ ಆ ಶತ್ರುವನ್ನು ನಮ್ಮಿಂದ ಹಿಂತಿರುಗುವಂತೆ ಮಾಡಿರಿ. ರುದ್ರಪುತ್ರರಾದ ಮರುತ್ತುಗಳೇ, ಭಕ್ಷಕನಾದ ಅಂತಹ ಅಸುರನ ವಧಸಾಧನವಾದ ಆಯುಧವನ್ನು ನಾಶಪಡಿಸಿ.

English Translation.

Maruts, grant :rs of dwellings, protect us from the malignity of the man who cherishes wolf-like enmity against us: encompass him with your burning diseases; ward off the murderous (weapon) of the devourer.

॥ ವಿಶೇಷವಿಷಯಗಳು ॥

**ವಸವಃ—ವಾಸಯಿತಾರಃ** ಸುಖವಾಗಿ ವಾಸಮಾಡುವಂತೆ ಯಜಮಾನರನ್ನು ಇರಿಸುವರು ಎಂದು ಮರುದ್ದೇವತೆಗಳನ್ನು ಸಂಬೋಧಿಸಿ, **ಯಃ ಮರ್ತ್ಯಃ ವೃಕತಾತಿ ರಿಪುರ್ದಧೇ ರಿಷಃ ರಕ್ಷತ—ಯಃ ಮನುಷ್ಯಃ ಆದಾತಾ ವೃಕಃ ಸನ್ ರಿಪುತಯಾ ಆತ್ಮಾನಂ ಧಾರಯತಿ ಹಿಂಸಕಾದಸ್ಮಾನ್ ಪಾಲಯತ ।** ಯಜಮಾನರ ವಿಷಯದಲ್ಲಿ ತೋಳದಂತೆ ಆಚರಿಸಿ ಯಜಮಾನರಿಗೆ ಶತ್ರುತ್ವವನ್ನು ಆಚರಿಸುತ್ತಿರುವ ಮನುಷ್ಯನು ನಮಗೆ ಹಿಂಸಕನಾದುದರಿಂದ ಅವನ ದೆಸೆಯಿಂದ ರಕ್ಷಣೆಯನ್ನು ಮಾಡಿರಿ ಎಂದೂ, **ಅಸ್ಮಾಕಂ ಶತ್ರುಭೂತಂ ಮರ್ತ್ಯಂ ತಪುಷಾ ಚಕ್ರಿಯಾ ಅಭಿವರ್ತಯತ—ತಾಪಯಿತ್ರ್ಯಾ ಋಷ್ಟ್ಯಾ ಶಕ್ತ್ಯಾ ನಿವರ್ತಯತ** ಯಜಮಾನರಾದ ನಮಗೆ ಶತ್ರುವಾದವನಿಂದ ಹಿಂಸೆಯು ಆಗದೆ ಇರುವಂತೆ. ಸರ್ವವನ್ನೂ ದಹಿಸುವ ನಿಮ್ಮ ಋಷ್ಟಿ ಎಂದು ಪ್ರಸಿದ್ಧವಾದ ಶಕ್ತಿಯಿಂದ ಹಿಂತಿರುಗಿಸಿರಿ ಎಂದೂ ಪ್ರಾರ್ಥಿಸಲಾಗಿದೆ. ಮತ್ತು

**ರುದ್ರಾಃ** ಎಂಬ ಪದಕ್ಕೆ **ರುದ್ರಪುತ್ರಾಃ ರೋರೂಯಮಾಣಾದ್ರವಂತಃ** ಮರುದ್ದೇವತೆಗಳನ್ನು ರುದ್ರಪುತ್ರರೆಂದೂ ಆರ್ಭಟವನ್ನು ಮಾಡುವ ಧ್ವನಿಯಿಂದ ವೇಗವಾಗಿ ಸಂಚರಿಸುವವರೆಂದೂ ಸಂಬೋಧಿಸಿ **ಅಶಸಃ ವಧಃ ಅವಹಂತನ—ಭಕ್ಷಕಸ್ಯ ರಾಕ್ಷಸಾದೇಃ ಹನನಸಾಧನಮಾಯುಧಂ ಅಸ್ಮತ್ತಃ ಪೃಥಕ್ಕೃತ್ಯ ನಾಶಯತ ।** ನಮ್ಮನ್ನು ನಾಶಪಡಿಸಲು ಇಚ್ಛೆಯುಳ್ಳ ರಾಕ್ಷಸರೇ ಮೊದಲಾದವರು ನಮ್ಮ ಹಿಂಸೆಗಾಗಿ ಪ್ರಯೋಗಿಸುವ ಆಯುಧವನ್ನು ನಮ್ಮಿಂದ ಹಿಂತಿರುಗಿಸಿ ರಾಕ್ಷಸಾದಿಗಳನ್ನು ನಾಶಪಡಿಸಿರಿ ಎಂದೂ ರಕ್ಷಣೆಯು ಪ್ರಾರ್ಥಿತವಾಗಿದೆ.

॥ ಸಂಹಿತಾಪಾಠಃ ॥

ಚಿತ್ರಂ ತದ್ವೋ ಮರುತೋ ಯಾಮ ಚೇಕಿತೇ ಪೃಶ್ನ್ಯಾ ಯದೂಧರಪ್ಯಾಪಯೋ ದುಹುಃ ।

ಯದ್ವಾ ನಿದೇ ನವಮಾನಸ್ಯ ರುದ್ರಿಯಾಸ್ತ್ರಿತಂ ಜರಾಯ ಜುರತಾಮದಾಭ್ಯಾಃ ॥೧೦॥

ಪದಪಾಠಃ ।

ಚಿತ್ರಂ । ತತ್ । ವಃ । ಮರುತಃ । ಯಾಮ । ಚೇಕಿತೇ । ಪೃಶ್ನ್ಯಾಃ । ಯತ್ । ಊಧಃ । ಅಪಿ ।

ಆಪಯಃ । ದುಹುಃ ।

ಯತ್ । ವಾ । ನಿದೇ । ನವಮಾನಸ್ಯ । ರುದ್ರಿಯಾಃ । ತ್ರಿತಂ । ಜರಾಯ । ಜುರತಾಂ । ಅದಾಭ್ಯಾಃ ॥೧೦॥

ಸಾಯಣಭಾಷ್ಯಂ ॥

ಹೇ ಮರುತೋ ವೋ ಯುಷ್ಮಾಕಂ ಚಿತ್ರಂ ಚಾಯನೀಯಂ ಯಾಮ ಪ್ರಾಪಣಂ ಚೇಕಿತೇ । ಸರ್ವೈರ್ಜ್ಞಾಯತೇ । ಇದಾನೀಂ ಪರೋಕ್ಷವದಾಹ । ಅಪಿಶಬ್ದಃ ಪ್ರಸಿದ್ಧೌ । ಯದ್ಯದಾ ಖಲು ಪೃಶ್ನ್ಯಾ ಮಾಧ್ಯಮಿಕಾಯಾ ವಾಚಃ ಸಂಬಂಧಿ ಸ್ವಮೂಧರುದ್ಧತಂ ಮೇಘಮಾಪಯಃ ಪ್ರಾಪಯಿತಾರೋ ಮರುತೋ ದುಹುಃ । ದುಹಂತಿ ॥ ದುಹೇಶ್ಛಾಂದಸೋ ಲಿಟ್ । ಛಂದಸಿ ಚೇತಿ ವಕ್ತವ್ಯಮಿತಿ ದ್ವಿರ್ವಚನಾಭಾವಃ ॥ ಯದ್ವಾ ಯದಾ ಚ ನವಮಾನಸ್ಯ ಸ್ತುವತಸ್ತ್ರಿತಸ್ಯ ನಿದೇ ನಿಂದಕಾಯ ಶತ್ರವೇ ಹಿಂಸಾಂ ಕೃತವಂತ ಇತಿ ಶೇಷಃ ॥ ನಿದಿ ಕುತ್ಸಾಯಾಂ । ಕ್ವಿಪ್ ಚೇತಿ ಕ್ವಿಪ್ ತದಾನೀಂ ಹೇ ಅದಾಭ್ಯಾ ಅಹಿಂಸ್ಯಾ ರುದ್ರಿಯಾ ರುದ್ರಸ್ಯ ಪುತ್ರಾ ಮರುತಸ್ತ್ರಿತಮೃಷಿಂ ಜುರತಾಂ ಹಿಂಸತಾಂ ಶತ್ರೂಣಾಂ ಜರಾಯ ಜರಣಾಯ ವಿನಾಶಾಯ ಅಭೂತೇತಿ ಶೇಷಃ ॥

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ **ವಃ**—ನಿಮ್ಮ **ಚಿತ್ರಂ**—ಆಶ್ಚರ್ಯಯುತವಾದ **ತತ್ ಯಾಮ**—ಆಗಮನವು **ಚೇಕಿತೇ**—ಸಕಲರಿಂದಲೂ ತಿಳಿಯಲ್ಪಡುತ್ತದೆ **ಯತ್** ಯಾವಾಗ **ಪೃಶ್ನ್ಯಾಃ**—ಪೃಶ್ನಿಯ ಸಂಬಂಧಿಯಾದ **ಊಧಃ**—ಎತ್ತರದಲ್ಲಿರುವ ಮೇಘವನ್ನು **ಆಪಯಃ** ಸಮೀಪಿಸತಕ್ಕ ಮರುತ್ತುಗಳು **ದುಹುಃ**—ವೃಷ್ಟ್ಯರ್ಥವಾಗಿ ಕರೆಯುತ್ತಾರೆಯೋ **ಯದ್ವಾ**—ಯಾವಾಗ ತಾನೇ **ನವಮಾನಸ್ಯ** ಸ್ತುತಿಸತಕ್ಕ ತ್ರಿತನ **ನಿದೇ**—ನಿಂದಕನಾದ ಅಸುರನಿಗೆ ಹಿಂಸೆಯನ್ನುಂಟುಮಾಡುವರೋ (ಆಗ) **ಅದಾಭ್ಯಾಃ**—ಅಹಿಂಸಿತರಾದವರೂ **ರುದ್ರಿಯಾಃ**—ರುದ್ರಪುತ್ರರೂ ಆದ ಮರುತ್ತುಗಳು **ತ್ರಿತಂ**—ತ್ರಿತನೆಂಬ ಋಷಿಯನ್ನು **ಜುರತಾಂ**—ಹಿಂಸಿಸುವ ಶತ್ರುಗಳಿಗೆ **ಜರಾಯ**—ನಾಶಕರಾಗಿ ಆಗುತ್ತಾರೆ.

ಭಾವಾರ್ಥ

ಎಲೈ ಮರುತ್ತುಗಳೇ, ನಿಮ್ಮ ಆಶ್ಚರ್ಯವಾದ ಆಗಮನವು ಸಕಲರಿಂದಲೂ ತಿಳಿಯಲ್ಪಡುತ್ತದೆ. ಯಾವಾಗ ಪೃಶ್ನಿಯ ಸಂಬಂಧಿಯಾದ ಎತ್ತರದಲ್ಲಿರುವ ಮೇಘವನ್ನು ಸಮೀಪಿಸತಕ್ಕ ಮರುತ್ತುಗಳು ವೃಷ್ಟ್ಯರ್ಥವಾಗಿ ಕರೆಯುತ್ತಾರೆಯೋ ಯಾವಾಗ ತಾನೇ ಸ್ತುತಿಕರ್ತನಾದ ತ್ರಿತನ ನಿಂದಕನಾದ ಅಸುರನಿಗೆ ಹಿಂಸೆಯನ್ನುಂಟುಮಾಡುವರೋ ಆಗ ಅಹಿಂಸ್ಯರಾದವರೂ, ರುದ್ರಪುತ್ರರೂ ಆದ ಮರುತ್ತುಗಳು ತ್ರಿತನೆಂಬ ಋಷಿಯನ್ನು ಹಿಂಸಿಸುವ ಶತ್ರುಗಳಿಗೆ ನಾಶಕರಾಗಿ ಆಗುತ್ತಾರೆ.

English Translation

Maruts, your moryeallous energy is well known, whereby, seizing the udder of heaven, you milked it (of the rain), destroyed the reviler of your worshipper, and (came), irresistible sons of Rudra, to Trita for the destruction of his enemies.

। ವಿಶೇಷವಿಷಯಗಳು ।

**ಯತ್ ಪೃಶ್ನ್ಯಾಃ ಊಧಃ ಆಪಯಃ ದುಹುಃ—ಯದಾ ಖಲು ಮಾಧ್ಯಮಿಕಾಯಾ ವಾಚಃ ಸಂಬಂಧಿನಂ ಉದ್ಧತಂ ಮೇಘಂ ಪ್ರಾಪಯಿತಾರೋ ಮರುತಃ ದುಹಂತಿ।** ಮಾಧ್ಯಮಿಕವಾಕ್ಸಂಬಂಧಿಯಾದ ಉದಕಗಳಿಂದ ತುಂಬಿರುವ ಮೇಘವನ್ನು ಮರುದ್ದೇವತೆಗಳು ಆವರಿಸಿ ವೃಷ್ಟ್ಯುದಕಗಳನ್ನು ಸುರಿಸುವ ಕಾಲದಲ್ಲಿ **ವಃ ಚಿತ್ರಂ ಯಾಮ ಚೇಕಿತೇ—ಯುಷ್ಮಾಕಂ ಚಾಯನೀಯಂ ಪ್ರಾಪಣಂ ಸರ್ವೈಃ ಜ್ಞಾಯತೇ।** ಮರುದ್ದೇವತೆಗಳ ಸ್ಪೃಹಣೀಯವಾದ ಆಗಮನವು ಎಲ್ಲರಿಂದಲೂ ತಿಳಿಯಲ್ಪಡುತ್ತದೆ ಎಂದೂ, **ಯದ್ವಾ ನವಮಾನಸ್ಯ ನಿದೇ ಅದಾಭ್ಯಾಃ ರುದ್ರಿಯಾಃ ತ್ರಿತಂ ಜುರತಾಂ ಜರಾಯ ಯದಾ ಚ ಸ್ತುವತಃ ತ್ರಿತಸ್ಯ ನಿಂದಕಾಯ ಹಿಂಸಾಂ ಕೃತವಂತಃ ಅಹಿಂಸ್ಯಾಃ ರುದ್ರಸ್ಯ ಪುತ್ರಾಃ ಮರುತಃ ತ್ರಿತಂ ಋಷಿಂ ಹಿಂಸತಾಂ ಶತ್ರೂಣಾಂ ವಿನಾಶಾಯ ಅಭೂತ—** ಇತರರು ಆಚರಿಸುವ ಹಿಂಸೆಗೆ ಒಳಪಡದವರೂ, ರುದ್ರಪುತ್ರರೂ ಆಗಿರುವ ಮರುದ್ದೇವತೆಗಳು ವಿಪತ್ತಿಗೆ ಒಳಗಾಗಿ ಸ್ತುತಿಮಾಡುತ್ತಿರುವ ತ್ರಿತನೆಂಬ ಋಷಿಯನ್ನು ಹಿಂಸೆಮಾಡುವವರನ್ನು ವಿನಾಶಮಾಡಿದಾಗಲೂ, ತ್ರಿತನೆಂಬ ಋಷಿಯು ಶತ್ರುಗಳ ವಿನಾಶಕ್ಕೆ ಕಾರಣರಾಗಿರುವರೆಂದೂ, ಸರ್ವರಿಂದಲೂ ಮರುದ್ದೇವತೆಗಳ ಆಗಮನವು ಜ್ಞಾತವಾಗಿರುವುದೆಂದೂ ವರ್ಣಿತವಾಗಿದೆ. ತ್ರಿತಶಬ್ದದ ಅರ್ಥವಿಚಾರವು ಹಿಂದೆ ವಿವೃತವಾಗಿದೆ.

॥ ಸಂಹಿತಾಪಾಠಃ ॥

ತಾನ್ವೋ ಮಹೋ ಮರುತ ಏವಯಾವ್ನೋ ವಿಷ್ಣೋರೇಷಸ್ಯ ಪ್ರಭೃಥೇ
ಹವಾಮಹೇ
ಹಿರಣ್ಯವರ್ಣಾನ್ಕಕುಹಾನ್ಯತಸ್ರುಚೋ ಬ್ರಹ್ಮಣ್ಯಂತಃ ಶಂಸ್ಯಂ ರಾಧ ಈಮಹೇ ॥

॥ ಪದಪಾಠಃ ॥

ತಾನ್ । ವಃ । ಮಹಃ । ಮರುತಃ । ಏವಽಯಾವ್ನಃ । ವಿಷ್ಣೋಃ । ಏಷಸ್ಯ । ಪ್ರಽಭೃಥೇ । ಹವಾಮಹೇ ।

ಹಿರಣ್ಯಽವರ್ಣಾನ್ । ಕಕುಹಾನ್ । ಯತಽಸ್ರುಚಃ । ಬ್ರಹ್ಮಣ್ಯಂತಃ । ಶಂಸ್ಯಂ । ರಾಧಃ । ಈಮಹೇ ॥

। ಸಾಯಣಭಾಷ್ಯಂ ।

**ಹೇ ಮರುತ ಏವಯಾವ್ನ ಏವಂ ಗಂತವ್ಯಂ ಸ್ತೋತ್ರಂ ಯಜ್ಞಂ ವಾ ಗಂತೄನ್ ಮಹೋ ಮಹತೋ ಮಹಾನುಭಾವಾಂಸ್ತಾನ್ವೋ ಯುಷ್ಮಾನ್ವಿಷ್ಣೋರ್ವ್ಯಾಪಕಸ್ಯ ಗ್ರಹಚಮಸಾದಿಷು ಸರ್ವತ್ರ ವ್ಯಾಪ್ಯ ವರ್ತಮಾನಸ್ಯೈಷಸ್ಯೈಷಣೀಯಸ್ಯ ಪ್ರಾರ್ಥನೀಯಸ್ಯ ಸೋಮಸ್ಯ ಪ್ರಭೃಥೇ ಪ್ರಭರಣೇಽಭಿಷವಾದಿಭಿಃ ಪ್ರಕರ್ಷೇಣ ಸಂಪಾದನೇ ಸತಿ ಹವಾಮಹೇ । ಆಹ್ವಯಾಮಹೇ । ಆಹೂಯ ಚ ಹಿರಣ್ಯವರ್ಣಾನ್ ಹಿತರಮಣೀಯವರ್ಣಾನ್ತ್ಸಾ ಕಕುಹಾನ್ ಶ್ರೇಷ್ಠಾನ್ ಸ್ತುತ್ಯಾನ್ತ್ಸಾ ಏವಂಭೂತಾಂಸ್ತಾನ್ ಯತಸ್ರುಚೋ ಯಾಗಾಯೋದ್ಯತಸ್ರುಚೋ ಬ್ರಹ್ಮಣ್ಯಂತಃ । ಬ್ರಹ್ಮ ಸ್ತೋತ್ರಂ । ತದಿಚ್ಛಂತೋ ವಯಂ ಶಂಸ್ಯಂ ಪ್ರಶಂಸನೀಯಂ ರಾಧೋ ಧನಮೀಮಹೇ ಯಾಚಾಮಹೇ ॥**

। ಪ್ರತಿಪದಾರ್ಥ ।

**ಮರುತಃ**—ಎಲೈ ಮರುತ್ತುಗಳೇ । **ಏವಯಾವ್ನಃ**—ನಮ್ಮ ಯಜ್ಞಾಭಿಮುಖವಾಗಿ ಬರುವವರೂ । **ಮಹಃ**—ಮಹಾನುಭಾವರೂ ಆದ **ತಾನ್ ವಃ**—ನಿಮ್ಮನ್ನು । **ವಿಷ್ಣೋಃ**—ಚಮಸಾದಿಗಳಲ್ಲಿ ವ್ಯಾಪಿಸಿರುವುದೂ । **ಏಷಸ್ಯ**—ಪ್ರಾರ್ಥನೀಯವಾದುದೂ ಆದ ಸೋಮದ **ಪ್ರಭೃಥೇ**—ಸಂಪಾದನೆಯ ನಿಮಿತ್ತವಾಗಿ । **ಹವಾಮಹೇ**—ಕರೆಯುತ್ತೇವೆ (ಮತ್ತು) । **ಹಿರಣ್ಯವರ್ಣಾನ್**—ಹೊಂಬಣ್ಣವುಳ್ಳವೂ । **ಕಕುಹಾನ್**—ಶ್ರೇಷ್ಠವಾದವೂ ಆದ ಆ ಸೋಮಪಾತ್ರೆಗಳನ್ನು **ಯತಸ್ರುಚಃ**—ಯಾಗಾರ್ಥವಾಗಿ ಎತ್ತಿ ಹಿಡಿದಿರುವವರೂ । **ಬ್ರಹ್ಮಣ್ಯಂತಃ**—ಸ್ತುತಿಯಿಂದ ಕೂಡಿದವರೂ ಆದ ನಾವು । **ಶಂಸ್ಯ**—ಪ್ರಶಸ್ತವಾದ । **ರಾಧಃ**—ಧನವನ್ನು । **ಈಮಹೇ**—ಯಾಚಿಸುತ್ತೇವೆ.

। ಭಾವಾರ್ಥ ।

ಎಲೈ ಮರುತ್ತುಗಳೇ, ನಮ್ಮ ಯಜ್ಞಾಭಿಮುಖವಾಗಿ ಬರುವವರೂ, ಮಹಾನುಭಾವರೂ ಆದ ನಿಮ್ಮನ್ನು ಚಮಸಾದಿಗಳಲ್ಲಿ ತುಂಬಿರುವುದೂ ಪ್ರಾರ್ಥನೀಯವಾದುದೂ ಆದ ಸೋಮದ ಸಂಪಾದನೆಯ ನಿಮಿತ್ತವಾಗಿ ಕರೆಯುತ್ತೇವೆ. ಮತ್ತು ಹೊಂಬಣ್ಣವುಳ್ಳವೂ, ಶ್ರೇಷ್ಠವಾದವೂ ಆದ ಆ ಸೋಮಪಾತ್ರೆಗಳನ್ನು ಯಾಗಾರ್ಥವಾಗಿ ಎತ್ತಿ ಹಿಡಿದಿರುವವರೂ ಸ್ತುತಿಯಿಂದ ಕೂಡಿದವರೂ ಆದ ನಾವು ಪ್ರಶಸ್ತವಾದ ಧನವನ್ನು ಯಾಚಿಸುತ್ತೇವೆ.

## English Translation.

We invoke you, mighty Maruts, who freqent such sacrifices (as this, to be present) at the offering of the diffusive and desirable (libation): lifting up our ladles, and reciting their praise, we solicit the golden-hued and lofty Maruts for excellent wealth.

॥ ವಿಶೇಷವಿಷಯಗಳು ॥

ಹೇ ಮರುತಃ—ಎಂದು ಮರುದ್ದೇವತೆಗಳನ್ನು ಸಂಬೋಧಿಸಿ—**ಏವಯಾವ್ನಃ ಮಹಃ ವಃ ವಿಷ್ಣೋಃ ಏಷಸ್ಯ ಪ್ರಭೃಥೇ ಹವಾಮಹೇ—ಏವಂ ಗಂತವ್ಯಂ ಸ್ತೋತ್ರಂ, ಯಜ್ಞಂ ವಾ ಗನ್ತೄನ್ ಮಹಾನುಭಾವಾನ್**

**ಯೋಷ್ಟಾರ್ಕ್ ಗ್ರಹಚಮಸಾದಿಷು ಸರ್ವತ್ರ ವ್ಯಾಪ್ಯ ವರ್ತಮಾನಸ್ಯ ಪ್ರಾರ್ಥನೀಯಸ್ಯ ಸೋಮಸ್ಯ ಅಭಿಷವಾದಿಭಿಃ ಪ್ರಕರ್ಷೇಣ ಸಂಪಾದನೇ ಸತಿ ಆಹ್ವಯಾಮಹೇ** । ಒಂದು ವಿಧವಾದ ಸ್ತಿಯಮಕ್ಕೆ ಒಳಗಾಗಿ ಪಠಿಸುವ ಸ್ತೋತ್ರವನ್ನು ಶ್ರವಣಮಾಡಿ ಆಗಮಿಸುವ ಅಥವಾ ವಿಧ್ಯುಕ್ತವಾದ ಕ್ರಮದಿಂದ ಉಚಿತವಾಗಿರುವ ಯಜ್ಞಗಳಿಗೆ ಆಗಮಿಸುವ ಪ್ರಭೂತವಾದ ಮಹಿಮೆಯುಳ್ಳ ಮರುದ್ದೇವತೆಗಳನ್ನು ಯಜಮಾನರು ಯಾಗಗಳಲ್ಲಿ ಹವಿಸ್ಸೇ ಮೊದಲಾದವುಗಳನ್ನು ಅಗ್ನಿಯಲ್ಲಿ ಅರ್ಪಿಸಲು ಅರ್ಹವಾದ ಸಾಧಕವಾದ ಗ್ರಹ, ಅಥವಾ ಚಮಸ ಎಂಬ ಪಾತ್ರಗಳಲ್ಲಿ ತುಂಬಿದುದೂ ಆಯಾಯ ಅಭಿಷವವೇ ಮೊದಲಾದ ಸಂಸ್ಕಾರಗಳಿಂದ ಸಿದ್ಧಪಡಿಸಿದುದೂ, ಸ್ತುತ್ಯವಾದುದೂ ಆಗಿರುವ ಸೋಮವನ್ನು ಸಿದ್ಧಮಾಡಿದ ನಂತರ ಆಹ್ವಾನಮಾಡುವರೆಂದು ವರ್ಣಿಸಿದೆ.

**ಕಕುಹಾರ್—ಶ್ರೇಷ್ಠಾರ್ ಸ್ತುತ್ಯಾರ್ ವಾ** । ಕುಕುಹ ಶಬ್ದವು ಯಾಸ್ಕರಿಂದ ಮಹನ್ನಾಮಗಳಲ್ಲಿ (ನಿ. ೩-೧೩) ಪಠಿತವಾಗಿದೆ. ಮರುದ್ದೇವತೆಗಳು ತಮ್ಮ ಮಹಿಮೆಯಿಂದ (ಶ್ರೇಷ್ಠ) ಸರ್ವರಿಗಿಂತಲೂ ಅಧಿಕರಾಗಿರುವರು ಅಥವಾ ಸ್ತುತಿಗಳಿಗೆ ಅರ್ಹರಾಗಿರುವರು ಎಂದೂ **ಹಿರಣ್ಯವರ್ಣಾನ್—ಹಿತರಮಣೀಯವರ್ಣಾನ್** ಸರ್ವರಿಗೂ ಅಂದವಾಗಿರುವ ಅಥವಾ ಮನೋಹರವಾದ ಕಾಂತಿಯುಳ್ಳವರು ಸುವರ್ಣದಂತಿರುವ ಶರೀರದ ಕಾಂತಿಯುಳ್ಳವರು ಎಂದು ಮರುದ್ದೇವತೆಗಳನ್ನು ವರ್ಣಿಸಿದೆ.

**ಬ್ರಹ್ಮಣ್ಯಂತಃ ಯತಸ್ರುಚಃ—ಬ್ರಹ್ಮ ಸ್ತೋತ್ರಂ ತದಿಚ್ಛಂತಃ ಉದ್ಯತಸ್ರುಚಃ** । ಯಾಗಕಾಲದಲ್ಲಿ ಋತ್ವಿಜರು ಸ್ತೋತ್ರಗಳನ್ನು ಪಠಿಸುವವರಾಗಿಯೂ, ಹವಿಸ್ಸುಗಳಿಂದ ಪೂರ್ಣವಾದ ಹೋಮವನ್ನಾಚರಿಸುವ ಪಾತ್ರೆಗಳನ್ನು ಹಸ್ತಗಳಲ್ಲಿ ಎತ್ತಿಹಿಡಿದುಕೊಂಡಿರುವವರೂ ಆಗಿರುವರೆಂದೂ ವರ್ಣಿಸಿದೆ.

**ಶಂಸ್ಯಂ ರಾಧಃ ಈಮಹೇ—ಪ್ರಶಂಸನೀಯಂ ಧನಂ ಪ್ರಾರ್ಥಯಾಮಹೇ** । ಯಾಗಗಳಲ್ಲಿ ಯಜಮಾನರೂ ಋತ್ವಿಜರೂ ಮರುದ್ದೇವತೆಗಳನ್ನು ಆಹ್ವಾನಮಾಡಿ, ಹೋಮವನ್ನಾಚರಿಸುವ ಪಾತ್ರೆಗಳಲ್ಲಿ ಹವಿರ್ದ್ರವ್ಯವನ್ನು ತುಂಬಿ ಸಿದ್ಧಮಾಡಿಕೊಂಡು, ಅಗ್ನಿಯಲ್ಲಿ ಹೋಮವನ್ನಾಚರಿಸಲು ಸಿದ್ಧರಾಗಿ ಮರುದ್ದೇವತೆಗಳಿಗಾಗಿ ಹವಿಸ್ಸನ್ನು ಅರ್ಪಿಸಿ, ಬಳಿಕ ಉತ್ತಮವಾದ ಧನವನ್ನು ಕೊಡಬೇಕೆಂದು ಪ್ರಾರ್ಥಿಸುತ್ತಾರೆ ಎಂದು ವಿವರಿಸಿದೆ.



॥ ಸಂಹಿತಾಪಾಠಃ ॥

ತೇ ದಶಗ್ವಾಃ ಪ್ರಥಮಾ ಯಜ್ಞಮೂಹಿರೇ ತೇ ನೋ ಹಿನ್ವಂತೂಷಸೋ ವ್ಯುಷ್ಟಿಷು ।
ಉಷಾ ನ ರಾಮೀರರುಣೈರಪೋರ್ಣುತೇ ಮಹೋ ಜ್ಯೋತಿಷಾ ಶುಚತಾ
ಗೋಅರ್ಣಸಾ ॥ ೧೨ ॥

ಪದಪಾಠಃ ।

ತೇ । ದಶऽಗ್ವಾಃ । ಪ್ರಥಮಾಃ । ಯಜ್ಞಂ । ಊಹಿರೇ । ತೇ । ನಃ । ಹಿನ್ವಂತು । ಉಷಸಃ । ವಿऽಉಷ್ಟಿಷು ।
ಉಷಾಃ । ನ । ರಾಮೀಃ । ಅರುಣೈಃ । ಅಪ । ಊರ್ಣುತೇ । ಮಹಃ । ಜ್ಯೋತಿಷಾ । ಶುಚತಾ ।
ಗೋऽಅರ್ಣಸಾ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಮರುತೋ ದಶಗ್ವಾಃ । ಯೇ ದಶಭಿರ್ಮಾಸೈಃ ಸಿದ್ಧಿಂ ಗತಾ ಅಂಗಿರಸಸ್ತದ್ರೂಪಾ ಭೂತಾ ಪ್ರಥಮಾ ಆದಿತ್ಯೇಭ್ಯಃ ಪ್ರಥಮಭಾವಿನಃ ಸಂತೋ ಯಜ್ಞಮೂಹಿರೇ । ಅವಹನ್ । ಆದಿತ್ಯಾನಾಮಂಗಿರಸಾಂ ಚ ಸ್ವರ್ಗಗಮನಂ ಪ್ರತಿ ಸ್ಪರ್ಧಮಾನಾನಾಂ ಮಧ್ಯೇ ಪೂರ್ವಮೇವಾಂಗಿರಸೋ ಯಾಗಾನನುಷ್ಠಾಯ ಸ್ವರ್ಗಂ ಪ್ರಾಪ್ತಾಃ । ತಥಾ ಚ ಶ್ರೂಯತೇ । ಆದಿತ್ಯಾಶ್ಚೈವೇಹಾಸನ್ನಂಗಿರಸಶ್ಚ ತೇऽಗ್ರೇऽಗ್ನಿನಾಗ್ನಿಮಯಜಂತೇತಿ । ತಾದೃಶಾಸ್ತ ಉಷಸೋ ವ್ಯುಷ್ಟಿಷು ವಿವಾಸೇಷು ಪ್ರಭಾತೇಷು ಸತ್ಸು ನೋऽಸ್ಮಾನ್ ಹಿನ್ವಂತು । ಪ್ರೇರಯಂತು ॥ ಹಿ ಗತೌ ವೃದ್ಧೌ ಚ ॥ ರಾಮೀಃ ಕೃಷ್ಣವರ್ಣಾ ರಾತ್ರೀರುಷಾ ನ ಯಥೋಷಾ ಅರುಣೈರಾರೋಚಮಾನೈಃ ಸ್ವತೇಜೋಭಿರಪೋರ್ಣುತೇ । ಅಪವೃಣೋತ್ಯಪಸಾರಯತಿ । ತಥಾ ಮಹೋ ಮಹತಾ ಶುಚತಾ ದೀಪ್ಯಮಾನೇನ ಗೋಅರ್ಣಸಾ ಗಚ್ಛದುದಕೇನ ಜ್ಯೋತಿಷಾ ಸೂರ್ಯಾಖ್ಯೇನ ತಮೋ ನಿವಾರಯಂತಿ । ಸೂರ್ಯಮಂಡಲಮಾವೃಣ್ವತೋ ವೃತ್ರಾದೀನ್ ಹತ್ವಾ ಸರ್ವಂ ಜಗತ್ಪ್ರಕಾಶಯಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ತೇ**—ಆದೇ ಮರುತ್ತುಗಳು । **ದಶಗ್ವಾಃ**—ಹತ್ತುಮಾಸಗಳಲ್ಲಿ ಸಿದ್ಧಿಯನ್ನು ಪಡೆದ ಅಂಗಿರಸ್ಸುಗಳ ರೂಪವನ್ನು ತಾಳಿದವರಾಗಿ । **ಪ್ರಥಮಾಃ**—ಆದಿತ್ಯರಿಗಿಂತ ಮೊದಲೇನೇ ಸಿದ್ಧರಾಗಿದ್ದು । **ಯಜ್ಞಮೂಹಿರೇ**—ಯಜ್ಞವನ್ನು ನಿರ್ವಹಿಸಿದರು । **ತೇ**—ಆದೇ ಮರುತ್ತುಗಳು । **ಉಷಸಃ**—ಉಷಸ್ಸಿನ । **ವ್ಯುಷ್ಟಿಷು**—ಆವಿರ್ಭಾವದ ಕಾಲದಲ್ಲಿ । **ನಃ**—ನಮ್ಮನ್ನು । **ಹಿನ್ವಂತು**—ಪ್ರೇರಿಸಲಿ । **ರಾಮೀಃ**—ಕೃಷ್ಣವರ್ಣದ ರಾತ್ರಿಗಳನ್ನು । **ಉಷಾಃ**—ಉಷಸ್ಸು । **ಅರುಣೈಃ**—ಆಕರ್ಷಕವಾದ ತೇಜಸ್ಸುಗಳಿಂದ । **ಅಪೋರ್ಣುತೇ ನ**—ದೂರಕ್ಕೆ ತಳ್ಳಿ ನಾಶಮಾಡುವಂತೆ (ಮರುತ್ತುಗಳೂ ಸಹ) । **ಮಹಃ**—ಮಹತ್ತಾದುದೂ । **ಶುಚತಾ**—ಪ್ರಕಾಶಮಾನವಾದುದೂ । **ಗೋಅರ್ಣಸಾ**—ಮಂಜಿನರೂಪದ ಉದಕವನ್ನು ಹೀರುವುದೂ ಆದ । **ಜ್ಯೋತಿಷಾ**—ಸೂರ್ಯಾಖ್ಯವಾದ ತೇಜಸ್ಸಿನಿಂದ (ತಮಸ್ಸನ್ನು ನಾಶಮಾಡುತ್ತಾರೆ)

ಭಾವಾರ್ಥ

ಆದೇ ಮರುತ್ತುಗಳು, ಹತ್ತುಮಾಸಗಳಲ್ಲಿ ಸಿದ್ಧಿಯನ್ನು ಪಡೆದ ಅಂಗಿರಸ್ಸುಗಳ ರೂಪವನ್ನು ತಾಳಿದವರಾಗಿ ಆದಿತ್ಯರಿಗಿಂತಲೂ ಮೊದಲೇ ಸಿದ್ಧವಾಗಿದ್ದು ಯಜ್ಞವನ್ನು ನಿರ್ವಹಿಸಿದರು. ಆದೇ ಮರುತ್ತುಗಳು ಉಷಸ್ಸಿನ ಆವಿರ್ಭಾವದ ಕಾಲದಲ್ಲಿ ನಮ್ಮನ್ನು ಪ್ರೇರಿಸಲಿ. ಉಷಸ್ಸು ಕೃಷ್ಣವರ್ಣದ ರಾತ್ರಿಗಳನ್ನು ತಮ್ಮ ಆಕರ್ಷಕವಾದ

ತೇಜಸ್ಸುಗಳಿಂದ ದೂರಕ್ಕೆ ತಳ್ಳಿ ನಾಶಮಾಡುವಂತೆ ಮರುತ್ತುಗಳೂ ಸಹ ಮಹತ್ತಾದುದೂ, ಪ್ರಕಾಶಮಾನವಾದುದೂ, ಮಂಜಿನರೂಪದ ಉದಕವನ್ನು ಹೀರುವುದೂ ಆದ ಸೂರ್ಯಾತ್ಮಕವಾದ ತಮ್ಮ ತೇಜಸ್ಸಿನಿಂದ ತಮಸ್ಸನ್ನು ನಾಶ ಮಾಡುತ್ತಾರೆ.

## English Translation.

May they, who, the first celebrators of the tenmonths' rite, accomplished this sacrifice, reanimate us at the rising dawn; for as the dawn with purple rays drives away the night, so (do they scatter the darkness) with great, and pure, and mist-dispelling radiance.

॥ ವಿಶೇಷವಿಷಯಗಳು ॥

**ತೇ ದಶಗ್ವಾಃ ಪ್ರಥಮಾಃ ಯಜ್ಞಮೂಹಿರೇ - ಮರುತಃ ಯೇ ದಶಭಿಃ ಮಾಸೈಃ ಸಿದ್ಧಿಂಗತಾಃ ಅಂಗಿರಸಃ ತದ್ರೂಪಾ ಭೂತ್ವಾ ಆದಿತ್ಯೇಭ್ಯಃ ಪ್ರಥಮಭಾವಿನಃ ಸಂತಃ ಯಜ್ಞಮವಹನ್ । ಆದಿತ್ಯಾನಾಂ ಅಂಗಿರಸಾಂ ಚ ಸ್ವರ್ಗಗಮನಂ ಪ್ರತಿ ಸ್ಪರ್ಧಮಾನಾನಾಂ ಮಧ್ಯೇ ಪೂರ್ವಮೇವಾಂಗಿರಸೋ ಯಾಗಾನನುಷ್ಠಾಯ ಸ್ವರ್ಗಂ ಪ್ರಾಪ್ತಾಃ ।** ಆದಿತ್ಯರಿಗೂ ಅಂಗಿರಸ್ಸುಗಳಿಗೂ ಒಂದು ಕಾಲದಲ್ಲಿ ಸ್ವರ್ಗಕ್ಕೆ ಹೋಗಿ ತಲುಪುವ ವಿಷಯದಲ್ಲಿ ಯಾರು ಮೊದಲು ಸೇರಬೇಕೆಂದು ಸ್ಪರ್ಧೆಯು ಉಂಟಾಯಿತು. ಆಗ ಅಂಗಿರಸ್ಸುಗಳು ಮೊದಲು ಯಜ್ಞವನ್ನು ಆಚರಿಸಿ ಆದಿತ್ಯರಿಗಿಂತ ಮೊದಲು ಸ್ವರ್ಗವನ್ನು ಹೊಂದಿದರು ಎಂದು, ಉಪಾಖ್ಯಾನವು ಐತರೇಯಬ್ರಾಹ್ಮಣದಲ್ಲಿ **"ಆದಿತ್ಯಾಶ್ಚೈವೇಹಾಸನ್ನಂಗಿರಸಶ್ಚ ತೇಽಗ್ರೇಽಗ್ನಿನಾಗ್ನಿಮಯಜಂತ"** (ಐ. ಬ್ರಾ. ೧-೧೬) ಉಕ್ತವಾಗಿರುವುದು ಎಂದೂ ವಿವರಿಸಿ, ಮರುದ್ದೇವತೆಗಳು ಹತ್ತು ತಿಂಗಳುಗಳಲ್ಲಿಯೇ ಸಿದ್ಧಿಯನ್ನು ಪಡೆದಿರುವ ಅಂಗಿರಸ್ಸುಗಳ ತಾದಾತ್ಮ್ಯವನ್ನು ಹೊಂದಿರುವವರೆಂದೂ, ಆದಿತ್ಯರಿಗಿಂತಲೂ ಮೊದಲು ಉತ್ಪನ್ನರಾಗಿ ಸ್ಥಿತಿಯನ್ನು ಹೊಂದಿ ಯಜ್ಞಗಳನ್ನು ಆಚರಿಸುವವರೆಂದೂ ಸಾಯಣರು ವರ್ಣಿಸಿದ್ದಾರೆ. ಈ ಅಂಗಿರಸ್ಸುಗಳಿಗೂ ಮರುದ್ದೇವತೆಗಳಿಗೂ ಇರುವ ತಾದಾತ್ಮ್ಯವಿಮರ್ಶೆಯು ಹಿಂದಿನ ಸಂಪುಟಗಳಲ್ಲಿ ವಿವರಿಸಿದೆ.

**ತೇ ಉಷಸಃ ವ್ಯುಷ್ಟಿಷು ನಃ ಹಿನ್ವಂತು ತಾದೃಶಾಃ ತೇ ಮರುತಃ ಪ್ರಭಾತೇಷು ಸತ್ಸು ಅಸ್ಮಾನ್ ಪ್ರೇರಯಂತು ।** ಪ್ರಭೂತವಾದ ಪ್ರಭಾವವುಳ್ಳ ಮರುದ್ದೇವತೆಗಳು ಉಷಃಕಾಲವು ಕಳೆದನಂತರ ಎಂದರೆ ಪ್ರಾತಃಕಾಲದಲ್ಲಿ ಯಜಮಾನರಾದ ನಮ್ಮನ್ನು ನಮ್ಮ ಅವಶ್ಯಕರ್ತವ್ಯಗಳಿಗಾಗಿ ಪ್ರೇರಿಸಲಿ ಎಂದು ಆಶಿಸಿದೆ.

**ರಾಮೀಃ ಉಷಾಃ ನ ಅರುಣೈಃ ಅಪೋರ್ಣುತೇ ಮಹಃ ಶುಚಿತಾ ಗೋಅರ್ಣಸಾ ಜ್ಯೋತಿಷಾ— ಕೃಷ್ಣವರ್ಣಾಃ ರಾತ್ರೀಃ ಉಷಾಃ ಯಥಾ ಆರೋಚಮಾನೈಃ ಸ್ವತೇಜೋಭಿಃ ಅಪಸಾರಯತಿ ತಥಾ ಮಹತಾ ದೀಪ್ಯಮಾನೇನ ಗಚ್ಛದುದಕೇನ ಸೂರ್ಯಾಖ್ಯೇನ ತಮಃ ನಿವಾರಯಂತಿ । ಸೂರ್ಯಮಂಡಲಮಾವೃಣ್ವತೋ ವೃತ್ರಾದೀನ್ ಹತ್ವಾ ಸರ್ವಂ ಜಗತ್ ಪ್ರಕಾಶಯಂತಿ ।** ಉಷಃಕಾಲವು ಚೆನ್ನಾಗಿ ಬೆಳಗುತ್ತಿರುವ ತನ್ನ ಪ್ರಕಾಶಗಳಿಂದ ಕತ್ತಲೆಯಿಂದ ಕಪ್ಪಾಗಿರುವ ರಾತ್ರಿಯನ್ನು ಓಡಿಸುವ ಹಾಗೆ ಮರುದ್ದೇವತೆಗಳು, ಉದಕಗಳನ್ನು ತುಂಬಿಕೊಂಡು ಸೂರ್ಯನನ್ನು ಆವರಿಸಿಕೊಂಡು ಕತ್ತಲೆಯನ್ನು ಮಾಡಿ ಸೂರ್ಯನ ಪ್ರಕಾಶವು

ಜಗತ್ತಿಗೆ ಉಂಟಾಗದಂತೆ ಮಾಡುತ್ತಿರುವ ಮೇಘವನ್ನು ಚೂರ್ಣವಾಗುವಂತೆ ಮಾಡಿ ಲೋಕಕ್ಕೆ ಪ್ರಕಾಶವು ಉಂಟಾಗುವಂತೆ ಮಾಡುವರು ಎಂದು ವರ್ಣಿಸಿದೆ.

॥ ಸಂಹಿತಾಪಾಠಃ ॥

**ತೇ ಕ್ಷೋಣೀಭಿರರುಣೇಭಿರ್ನಾಂಜಿಭೀ ರುದ್ರಾ ಋತಸ್ಯ ಸದನೇಷು ವಾವೃಧುಃ ।**
**ನಿಮೇಘಮಾನಾ ಅತ್ಯೇನ ಪಾಜಸಾ ಸುಶ್ಚಂದ್ರಂ ವರ್ಣಂ ದಧಿರೇ ಸುಪೇಶಸಂ ॥೧೩॥**

॥ ಪದಪಾಠಃ ॥

**ತೇ । ಕ್ಷೋಣೀಭಿಃ । ಅರುಣೇಭಿಃ । ನ । ಅಂಜಿಽಭಿಃ । ರುದ್ರಾಃ । ಋತಸ್ಯ । ಸದನೇಷು । ವವೃಧುಃ ।**
**ನಿಽಮೇಘಮಾನಾಃ । ಅತ್ಯೇನ । ಪಾಜಸಾ । ಸುಽಚಂದ್ರಂ । ವರ್ಣಂ । ದಧಿರೇ । ಸುಽಪೇಶಸಂ ॥ ೧೩ ॥**

॥ ಸಾಯಣಭಾಷ್ಯಂ ॥

**ರುದ್ರಾ ರುದ್ರಪುತ್ರಾಸ್ತೇ ಮರುತಃ ಕ್ಷೋಣೀಭಿಃ ಶಬ್ದಕಾರಿಭಿರ್ವೀಣಾಖ್ಯೈರ್ವೀಣಾವಿಶೇಷೈರರುಣೇಭಿರ್ನಾಂಜಭಿಃ ॥ ನಶಬ್ದಃ ಸಮುಚ್ಚಯೇ ॥ ಆರೋಚಮಾನೈರರುಣವರ್ಣೈರ್ವಾ ರೂಪಾಭಿವ್ಯಂಜಕೈರಲಂಕಾರೈಶ್ಚ ಸಮನ್ವಿತಾಃ ಸಂತ ಋತಸ್ಯೋದಕಸ್ಯ ಸದನೇಷು ನಿವಾಸಭೂತೇಷು ಮೇಘೇಷು ವಾವೃಧುಃ । ವರ್ಧಂತೇ । ಅಪಿ ಚ ಅತ್ಯೇನ ಸತತಗಾಮಿನಾ ಶೀಘ್ರಂ ವ್ಯಾಪ್ನುವತಾ ಪಾಜಸಾತ್ಮೀಯೇನ ಬಲೇನ ನಿಮೇಘಮಾನಾ ನಿತರಾಂ ಮೇಘಾದುದಕಂ ಚಿಂತಯಂತಸ್ತೇ ಸುಶ್ಚಂದ್ರಂ ಶೋಭನಾಹ್ಲಾದನಂ ಸುಪೇಶಸಂ ॥ ಪೇಶ ಇತಿ ರೂಪನಾಮ ॥ ಶೋಭನರೂಪಂ ವರ್ಣಂ ದಧಿರೇ । ಕಾಂತಿಂ ಧಾರಯಂತಿ ॥**

॥ ಪ್ರತಿಪದಾರ್ಥ ॥

**ರುದ್ರಾಃ**—ರುದ್ರಪುತ್ರರಾದ । **ತೇ**—ಮರುತ್ತುಗಳು । **ಕ್ಷೋಣೀಭಿಃ**—ಮನೋಹರವಾದ ಧ್ವನಿಗಳಿಂದ ಕೂಡಿದ ವೀಣಾಯುತರಾಗಿಯೂ । **ಅರುಣೇಭಿರ್ನ**—ಅರುಣವರ್ಣದಂತಿರುವ । **ಅಂಜಿಭಿಃ**—ಆಭರಣಗಳಿಂದ ಅಲಂಕೃತರಾಗಿಯೂ । **ಋತಸ್ಯ**—ಉದಕದ । **ಸದನೇಷು**—ನಿವಾಸಭೂತವಾದ ಮೇಘಗಳಲ್ಲಿ । **ವಾವೃಧುಃ**—ವೃದ್ಧಿಯನ್ನು ಪಡೆಯುತ್ತಾರೆ । **ಅತ್ಯೇನ**—ಶೀಘ್ರಗಾಮಿಯಾದ । **ಪಾಜಸಾ**—ಸ್ವಶಕ್ತಿಯಿಂದ । **ನಿಮೇಘಮಾನಾಃ**—ಮೇಘದಿಂದ ಉದಕವನ್ನು ಹಿಂಡುತ್ತಾ । **ಸುಶ್ಚಂದ್ರಂ**—ಆಹ್ಲಾದಕರವಾದುದೂ । **ಸುಪೇಶಸಂ**—ಆಕರ್ಷಕವಾದ ರೂಪವನ್ನು ತೋರಿಸುವುದೂ ಆದ । **ವರ್ಣಂ**—ಕಾಂತಿಯನ್ನು । **ದಧಿರೇ**—ಪಡೆಯುತ್ತಾರೆ.

॥ ಭಾವಾರ್ಥ ॥

ರುದ್ರಪುತ್ರರಾದ ಮರುತ್ತುಗಳು ಮನೋಹರವಾದ ಧ್ವನಿಗಳಿಂದ ಕೂಡಿದ ವೀಣಾಯುತರಾಗಿಯೂ, ಅರುಣ ವರ್ಣದಂತಿರುವ ಆಭರಣಗಳಿಂದ ಅಲಂಕೃತರಾಗಿಯೂ ಇದ್ದು ಉದಕಕ್ಕೆ ನಿವಾಸಭೂತವಾದ ಮೇಘಗಳಲ್ಲಿ ವೃದ್ಧಿಯನ್ನು ಪಡೆಯುತ್ತಾರೆ. ಶೀಘ್ರಗಾಮಿಯಾದ ತಮ್ಮ ಶಕ್ತಿಯಿಂದ ಮೇಘದ ಉದಕವನ್ನು ಹಿಂಡುತ್ತಾ ಆಹ್ಲಾದಕರವಾದುದೂ, ಆಕರ್ಷಕವಾದ ರೂಪವನ್ನು ತೋರಿಸುವುದೂ ಆದ ಕಾಂತಿಯನ್ನು ಹೊಂದಿರುತ್ತಾರೆ.

## English Translation·

They, the Rudras (equipped) with melodious (lutes), and decorated with purple ornaments, exalt in the dwellings of the waters ; and scattering the clouds with rapid vigour, they are endowed with delightful and beautiful forms.

॥ ವಿಶೇಷವಿಷಯಗಳು ॥

**ರುದ್ರಾಃ—ರುದ್ರಪುತ್ರಾಃ** ರುದ್ರ ಶಬ್ದಕ್ಕೆ ರುದ್ರನ ಮಕ್ಕಳು ಎಂದು ಅರ್ಥವನ್ನು ವಿವರಿಸಿ, ರುದ್ರಪುತ್ರರಾದ ಮರುದ್ದೇವತೆಗಳು **ಕ್ಷೋಣೀಭಿಃ—ಶಬ್ದಕಾರೀಭಿಃ ವಿಣಾಖ್ಯೈಃ ವೀಣಾವಿಶೇಷೈಃ ।** ಧ್ವನಿಯನ್ನು ಮಾಡುವ ವಾಣಿ ಎಂದು ಹೆಸರುಳ್ಳ ವೀಣೆಗಳಿಂದಲೂ ಯುಕ್ತರಾಗಿರುವರು. ಮತ್ತು **ಅರುಣೇಭಿಃ ನಾಂಜಿಭಿಃ—ಅರುಣವರ್ಣೈಃ ವಾ ರೂಪಾಭಿವ್ಯಂಜಕೈರಲಂಕಾರೈಶ್ಚ ಸಮನ್ವಿತಾಃ ।** ಮಹತ್ತಾದ ಪ್ರಕಾಶವುಳ್ಳ ಕೆಂಪುಬಣ್ಣದಿಂದ ಕೂಡಿದವರಾಗಿ, ಅಥವಾ ರೂಪ (ಆಕಾರ) ವನ್ನು ಚೆನ್ನಾಗಿರುವಹಾಗೆ (ಮಾಡುವ) ಅಭಿವ್ಯಕ್ತಿಗೊಳಿಸುವ ಅಲಂಕಾರಗಳಿಂದಲೂ ಕೂಡಿರುವವರಾಗಿ ಮೇಘಗಳ ಮಧ್ಯಭಾಗದಲ್ಲಿ ವೃದ್ಧಿಯನ್ನು ಹೊಂದುವರು ಎಂದೂ, **ಅತ್ಯೇನ ಪಾಜಸಾ ನಿಮೇಘಮಾನಾಃ ಸುಶ್ಚಂದ್ರಂ ಸುಪೇಶಸಂ ವರ್ಣಂ ದಧಿರೇ—ಶೀಘ್ರಂ ವ್ಯಾಪ್ನುವತಾ ಆತ್ಮೀಯೇನ ಬಲೇನ ಮೇಘಾದುದಕಂ ನಿತರಾಂ ಚಿತಯಂತಃ ಶೋಭನಾಹ್ಲಾದನಂ ಶೋಭನರೂಪಂ ಕಾಂತಿಂ ಧಾರಯಂತಿ ।** ಮರುದ್ದೇವತೆಗಳು ಜಾಗ್ರತೆಯಾಗಿ ವ್ಯಾಪಿಸುತ್ತಿರುವ ತಮ್ಮ (ಸಾಮರ್ಥ್ಯ) ಶಕ್ತಿಯಿಂದ ವೃಷ್ಟ್ಯುದಕಗಳು (ಪೂರ್ಣವಾಗಿ) ಸ್ವಲ್ಪವೂ ನಿಲ್ಲದಂತೆ ಮೇಘಗಳಿಂದ ಸುರಿಯುವ ಹಾಗೆ ಮಾಡುವವರೂ, ಬಹಳ ಆನಂದಕರವಾಗಿಯೂ, ಅಂದವಾದ ಆಕಾರವುಳ್ಳದ್ದಾಗಿಯೂ ಇರುವ ರೂಪವನ್ನು ಧರಿಸಿರುವವರೂ ಆಗಿರುವರು ಎಂದೂ ವಿವರಿಸಿದೆ.

**ಸುಪೇಶಸಂ—ಪೇಶ ಇತಿ ರೂಪನಾಮ ।** ಪೇಶಸಂ ಎಂಬ ಪದವು ರೂಪನಾಮಗಳಲ್ಲಿಯೂ (ನಿ. ೩-೧೩) ಹಿರಣ್ಯನಾಮಗಳಲ್ಲಿಯೂ ಉಕ್ತವಾಗಿ, **ಪೇಶ ಇತಿ ರೂಪನಾಮ ಪಿಂಶತೇರ್ವಿಪಿಶಿತಂ ಭವತಿ** (ನಿ. ೮-೧೨) ಎಂದು ವ್ಯಾಖ್ಯಾತವಾಗಿದೆ.



। ಸಂಹಿತಾಪಾಠಃ ।

ತಾಁ ಇಯಾನೋ ಮಹಿ ವರೂಥಮೂತಯ ಉಪ ಘೇದೇನಾ ನಮಸಾ
ಗೃಣೀಮಸಿ ।
ತ್ರಿತೋ ನ ಯಾನ್ಪಂಚ ಹೋತೄನಭಿಷ್ಟಯ ಆವವರ್ತದವರಾಞ್ಚಕ್ರಿಯಾವಸೇ ॥

॥ ಪದಪಾಠಃ ॥

ತಾನ್ । ಇಯಾನಃ । ಮಹಿ । ವರೂಥಂ । ಊತಯೇ । ಉಪ । ಘ । ಇತ್ । ಏನಾ । ನಮಸಾ ।
ಗೃಣೀಮಸಿ ।
ತ್ರಿತಃ । ನ । ಯಾನ್ । ಪಂಚ । ಹೋತೄನ್ । ಅಭಿಷ್ಟಯೇ । ಆಽವವರ್ತತ್ । ಅವರಾನ್ । ಚಕ್ರಿಯಾ ।
ಅವಸೇ ॥ ೧೪ ॥

॥ ಸಾಯಣಭಾಷ್ಯಂ ॥

ತಾನ್ ಮರುತೋ ಮಹಿ ಮಹದ್ವರೂಥಂ ವರಣೀಯಂ ಪ್ರಶಸ್ತಂ ಧನಂ ತನ್ಮರುತ ಊತಯೇ ರಕ್ಷಣಾರ್ಥಮಿಯಾನ ಇಯಾನಾ ಯಾಚಮಾನಾ ವಯಂ ॥ ಸುಪಾಂ ಸುಲುಗಿತಿ ಜಸಃ ಸುಃ ॥ ಏನಾನೇನ ನಮಸಾ ನಮಸ್ಕಾರೇಣ ಸ್ತೋತ್ರೇಣ ವೋಪೇತ್ ಉಪೇತ್ಯ ಗೃಣೀಮಸಿ । ಸ್ತುಮಃ ॥ ಘೇತಿ ಪಾದಪೂರಣಃ । ಏನೇತ್ಯತ್ರ ಸುಪಾಂ ಸುಲುಗಿತಿ ತೃತೀಯಾಯಾ ಆಜಾದೇಶಃ । ನಶಬ್ದಃ ಸಮುಚ್ಚಯೇ ॥ ತ್ರಿತ ಋಷಿಶ್ಚ ಯಾನೇತಾನ್ ಮರುತಃ ಪಂಚ ಹೋತೄನ್ ಅಧ್ಯಾತ್ಮಪ್ರಾಣಾಪಾನಾದಿಪಂಚವೃತ್ತ್ಯಾತ್ಮನಾ ವರ್ತಮಾನಾನ್ ಅತ ಏವ ಹೋಮನಿಷ್ಪಾದಕಾನ್ ಅವರಾನ್ ಮುಖ್ಯಾನಭಿಷ್ಟಯೇಽಭಿಲಷಿತಸಿದ್ಧ್ಯರ್ಥಂ ಚಕ್ರಿಯಾ ನಾಭಿಚಕ್ರೇಣಾವಸೇಽವಿತುಂ ಸಂಗಂತುಮಾವವರ್ತತ್ । ಸ್ವಸ್ಮಾನ್ನಿರ್ಜಿಗಮಿಷೂನ್ಪ್ರಾಣಾನ್ ಸ್ವಾತ್ಮಾಭಿಮುಖಮಾವರ್ತಯತ್ । ಯದ್ವಾ ಚಕ್ರಿಯಾ ಋಷ್ಟ್ಯಾಖ್ಯೇನಾಯುಧೇನ ಯುಕ್ತಾನ್ ಅವಸೇ ಸ್ತುತ್ಯಾದಿಭಿಸ್ತರ್ಪಯಿತುಮಾವರ್ತಯತ್ । ತಾನ್ ಸ್ತುಮ ಇತಿ ಸಂಬಂಧಃ ॥ ವವರ್ತದಿತಿ ವೃತೇರ್ಣ್ಯಂತಾಲ್ಲುಙಿ ಚಙಿ ರೂಪಂ ॥

॥ ಪ್ರತಿಪದಾರ್ಥ ॥

ನ—ಮತ್ತು । **ಪಂಚ**—ಪ್ರಾಣಾಪಾನಾದಿಪಂಚಸಂಖ್ಯಾತರಾದ । **ಯಾನ್**—ಯಾವ ಮರುತ್ತುಗಳನ್ನು । **ಅವರಾನ್**—ಬಹು ಮುಖ್ಯವಾದ । **ಹೋತೄನ್**—(ಯಾಗಕ್ಕೆ) ಋತ್ವಿಕ್ಕುಗಳನ್ನಾಗಿ । **ಅಭಿಷ್ಟಯೇ**—ತನ್ನ ಇಷ್ಟಾರ್ಥಸಿದ್ಧಿಗೋಸ್ಕರವೂ । **ಚಕ್ರಿಯಾ**—ಅವರ ಆಯುಧಗಳಿಂದ । **ಅವಸೇ**—ತನ್ನನ್ನು

ರಕ್ಷಿಸುವುದಕ್ಕೂ | **ತ್ರಿತಃ**—ತ್ರಿತನು | **ಆವವರ್ತತ್**—ಹೊರಕ್ಕೆ ಹೋಗದಂತೆ ಪ್ರಾರ್ಥಿಸಿ ತನ್ನಲ್ಲಿಯೇ ತಡೆದು ನಿಲ್ಲಿಸಿಕೊಂಡನೋ | **ತಾನ್**—ಆ ಮರುತ್ತುಗಳನ್ನು | **ಮಹಿ**—ಮಹತ್ತಾದುದೂ | **ವರೂಥಂ**—ಪ್ರಶಸ್ತ ವಾದುದೂ ಆದ ಧನವನ್ನು | **ಊತಯೇ**—ರಕ್ಷಣಾರ್ಥವಾಗಿ | **ಇಯಾನಃ**—ಪ್ರಾರ್ಥಿಸುವ ನಾವು | **ಏನಾ ನಮಸಾ**—ನಮಸ್ಕಾರ ಪೂರ್ವಕವಾದ ಈ ಸ್ತೋತ್ರದಿಂದ | **ಉಪ ಇತ್**—ಸಮೀಪಿಸಿ **ಗೃಣೀಮಸಿ**—ಸ್ತುತಿಸುತ್ತೇವೆ.

‖ ಭಾವಾರ್ಥ ‖

ಪ್ರಾಣಾಪಾನಾದಿ ಪಂಚಸಂಖ್ಯಾತರಾದ ಯಾವ ಮರುತ್ತುಗಳನ್ನು ಯಾಗಕ್ಕೆ ಬಹು ಮುಖ್ಯವಾದ ಋತ್ವಿಕ್ಕುಗಳನ್ನಾಗಿ ತನ್ನ ಇಷ್ಟಾರ್ಥಸಿದ್ಧಿಗೋಸ್ಕರವೂ, ಅವರ ಆಯುಧಗಳಿಂದ ತನ್ನನ್ನು ರಕ್ಷಿಸುವುದಕ್ಕೂ ತ್ರಿತನು ಹೊರಕ್ಕೆ ಹೋಗದಂತೆ ಪ್ರಾರ್ಥಿಸಿ ತನ್ನಲ್ಲಿಯೇ ತಡೆದು ನಿಲ್ಲಿಸಿಕೊಂಡನೋ, ಆ ಮರುತ್ತುಗಳನ್ನು ಮಹತ್ತಾದುದೂ, ಪ್ರಶಸ್ತವಾದುದೂ ಆದ ಧನವನ್ನು ರಕ್ಷಣಾರ್ಥವಾಗಿ ಪ್ರಾರ್ಥಿಸುವ ನಾವು ನಮಸ್ಕಾರಪೂರ್ವಕವಾದ ಈ ಸ್ತೋತ್ರದಿಂದ ಸಮೀಪಿಸಿ ಸ್ತುತಿಸುತ್ತೇವೆ.

## English Translation.

Imploring them for ample wealth, and (having recourse to him) for protection, we glorify them with this praise; like the five chief priests whom Trita detained for the (performance of) the sacrifice, and to protect it with their weapons.

‖ ವಿಶೇಷವಿಷಯಗಳು ‖

**ತ್ರಿತಃ ಯಾನ್ ಪಂಚ ಹೋತೄನ್ ಅಪರ್ರಾ ಅಭಿಷ್ಟಯೇ ಚಕ್ರಿಯಾ ಅವಸೇ ಆವವರ್ತತ್-ತ್ರಿತ ಋಷಿಃ ಏತಾನ್ ಮರುತಃ ಆಧ್ಯಾತ್ಮಪ್ರಾಣಾಪಾನಾದಿಪಂಚವೃತ್ತ್ಯಾತ್ಮನಾ ವರ್ತಮಾನಾನ್ ಅತ ಏವ ಹೋಮನಿಷ್ಪಾದಕಾನ್ ಮುಖ್ಯಾನ್ ಅಭಿಲಷಿತಸಿದ್ಧ್ಯರ್ಥಂ, ನಾಭಿಚಕ್ರೇಣ ಅವಿತುಂ ಸಂಗಂತುಂ ಸ್ವಸ್ಮಾನ್ನಿರ್ಜಿಗಮಿಷೂನ್ ಪ್ರಾಣಾನ್ ಸ್ವಾತ್ಮಾಭಿಮುಖಮಾವರ್ತಯತ್ | ಯದ್ವಾ ಚಕ್ರಿಯಾ ಋಷ್ಟ್ಯಾಖ್ಯೇನಾ ಯುಧೇನ ಯುಕ್ತಾನ್ ಸ್ತುತ್ಯಾದಿಭಿಃ ತರ್ಪಯಿತುಂ ಆವರ್ತಯತ್** | ಇಲ್ಲಿ ಪಂಚಹೋತೄನ್ ಎಂಬ ಪದವು ಈ ಶರೀರದಲ್ಲಿ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಹೆಸರುಗಳಿಂದಿರುವ (ವಾಯುವು) ಮರುತ್ತುಗಳು ಆತ್ಮನ ಸ್ಥಿತಿಸಂಪಾದಕರಾಗಿ ಆಯಾಯ ಕಾರ್ಯಗಳನ್ನು ಶರೀರಕ್ಕನುಗುಣವಾಗಿ ಮಾಡುತ್ತಾ ವಾಸಮಾಡುವರೆಂದು ಅರ್ಥದಲ್ಲಿ ಪ್ರಯುಕ್ತವಾಗಿದೆ. ಇದರಿಂದ ಶಾರೀರಕವಾದ ವೈಶ್ವಾನರಾಗ್ನಿಯ ಉಪಾಸನೆಯು ನೆರವೇರಲು ಕಾರಣವಾಗಿ ಮುಖ್ಯರಾಗಿರುವರು ಎಂದು ಸೂಚಿತವಾಗುತ್ತದೆ. ಇವರ ಸ್ಥಿತಿಯು ಹೃದಯದಲ್ಲಿ ಪ್ರಾಣರೂಪದಿಂದಲೂ, ಗುದ ಸ್ಥಾನದಲ್ಲಿ ಅಪಾನ ರೂಪದಿಂದಲೂ. ಸಮಾನ ರೂಪದಿಂದ ನಾಭಿಯಲ್ಲಿಯೂ ಇರುವ ಕಾರಣ ತ್ರಿತನೆಂಬ ಋಷಿಯು ಈ ಶರೀರದಿಂದ ಹೊರಗಡೆಗೆ ಹೊರಡಲು ಉದ್ಯುಕ್ತವಾಗಿರುವ ಈ ಮರುತ್ತುಗಳನ್ನೂ ನಾಭಿಯಲ್ಲಿರುವ ಸ್ವಾಧಿಷ್ಠಾನ ಚಕ್ರದಲ್ಲಿ ತಡೆದು ನಿಲ್ಲಿಸಿ, ತನಗೆ ಅಭಿಮುಖವಾಗಿರುವಂತೆ ಮಾಡಿಕೊಂಡಿರುವನೆಂದೂ, ಇದರಿಂದ ತ್ರಿತನ ರಕ್ಷಣೆಯು ಉಂಟಾಗಿ ಬೇಕಾದ ಇಷ್ಟಗಳೆಲ್ಲವೂ ಸಿದ್ಧಿಸುವುದಕ್ಕಾಗಿಯೂ ಆತ್ಮೋಪಾಸನಾ ರೂಪವಾದ ಧ್ಯಾನವು ಉಂಟಾಗಲು ಈ ಮರುತ್ತುಗಳು ಮುಖ್ಯವಾಗಿರುವರೆಂದೂ, ಮತ್ತು ಲೋಕದಲ್ಲಿ ಯಜಮಾನರು ಆಚರಿಸುವ ಯಾಗಗಳಲ್ಲಿ

ಮರುದ್ದೇವತೆಗಳು ಹವಿಸ್ಸುಗಳನ್ನು ಸ್ವೀಕರಿಸಿ ಯಜಮಾನರ ಇಷ್ಟಗಳನ್ನು ಸಿದ್ಧಮಾಡಿಕೊಡುವುದರಲ್ಲಿ ಮುಖ್ಯರಾಗಿ ವರೆಂಬೂ ಉಕ್ತವಾಗಿದೆ. ಮರುದ್ದೇವತೆಗಳ ಹೋಮನಿಷ್ಪಾದಕತ್ವವು ಎರಡು ವಿಧವಾಗಿಯೂ, ಅಭಿಲಷಿತಸಿದ್ಧಿಯ ವಿಷಯದಲ್ಲಿ ಮುಖ್ಯತ್ವವು ಮೂರುವಿಧವಾಗಿಯೂ ವರ್ಣಿತವಾಗಿದೆ. ಎರಡನೆಯ ಅರ್ಥದಲ್ಲಿ ಮರುದ್ದೇವತೆಗಳು ಋಷ್ಟಿ ಎಂಬ ಹೆಸರಿನ ಒಂದು ಶಸ್ತ್ರಾಯುಧವನ್ನು ಧರಿಸುವವರಾಗಿ, ಯಜಮಾನರನ್ನು ಅಥವಾ ತನ್ನನ್ನು ಸ್ತುತಿ ಮಾಡುವವರನ್ನು ರಕ್ಷಿಸುವ ನಿಮಿತ್ತವಾಗಿ, ತ್ರಿತನೆಂಬ ಋಷಿಯು ಸ್ತುತಿಯೇ ಮೊದಲಾದವುಗಳಿಂದ ಮರುತ್ತುಗಳನ್ನು ಸಂತೋಷಪಡಿಸುವುದಕ್ಕಾಗಿ ತನ್ನ ನಾಭಿಚಕ್ರದಲ್ಲಿರುವಂತೆ ಓಂತಿರುಗಿಸಿದನು ಎಂದು ವಿವರಿಸಿದೆ.

**ತಾನ್ ಮಹಿ ವರೂಥಂ ಊತಯೇ ಇಯಾನಃ ಉಪ ಇತ್ ಗೃಣೀಮಸಿ—ಮರುತಃ ಮಹತ್ ಪ್ರಶಸ್ತಂ ಧನಂ ತತ್| ಮರುತಃ ರಕ್ಷಣಾರ್ಥಂ ಯಜಮಾನಾಃ ವಯಂ ಅನೇನ ನಮಸ್ಕಾರೇಣ ಸ್ತೋತ್ರೇಣ ವಾ ಉಪೇತ್ಯ ಸ್ತುಮಃ**—ಯಜಮಾನರಾದ ನಾವು ನಮ್ಮ ರಕ್ಷಣೆಗೆ ಅವಶ್ಯವಾಗಿ ಲಭ್ಯವಾಗ ಬಹುದಾದ ಧನವನ್ನು ಹೊಂದುವುದಕ್ಕಾಗಿಯೂ, ನಮ್ಮನ್ನು ರಕ್ಷಿಸುವುದಕ್ಕಾಗಿಯೂ ಮರುದ್ದೇವತೆಗಳನ್ನು ಯಾಚಿಸುವವರಾಗಿ ನಮಸ್ಕಾರಗಳಿಂದಲೂ ಅಥವಾ ಸ್ತೋತ್ರಗಳಿಂದಲೂ ಪೂಜಿಸುವೆವು ಎಂದು ವರ್ಣಿಸಿದೆ.

**ವರೂಥ**—ಎಂಬ ಪದವು ಯಾಸ್ಕರಿಂದ ಗೃಹನಾಮಗಳಲ್ಲಿ (ನಿ. ೩ ೧೩) ಉಕ್ತವಾಗಿದೆ. ಸಾಯಣರು ಇಲ್ಲಿ ವರಣೀಯ ಎಂಬ ಅರ್ಥವನ್ನು ಮಾಡಿ ಪ್ರಶಸ್ತವಾದ ಧನವೆಂದು ಅರ್ಥವನ್ನು ವಿವರಿಸಿದ್ದಾರೆ.

**ತ್ರಿತಃ ನ**—ಎಂಬಲ್ಲಿ **ನಶಬ್ದಃ ಸಮುಚ್ಚಯೇ** ಎಂದು ನ ಶಬ್ದಕ್ಕೆ ಸಮುಚ್ಚಯಾರ್ಥದಲ್ಲಿ ಪ್ರಯೋಗವನ್ನು ಹೇಳಿದ್ದಾರೆ



॥ ಸಂಹಿತಾಪಾಠಃ ॥

ಯುಯಾ ರಥ್ಂ ಪಾರಯಥಾತ್ಯಂಹೋ ಯುಯಾ ನಿದೋ ಮುಂಚಥ ವಂದಿತಾರಂ ।

ಅರ್ವಾಚೀ ಸಾ ಮರುತೋ ಯಾ ವ ಊತಿರೋ ಷು ವಾಶ್ರೇವ ಸುಮತಿರ್ಜಿಗಾತು ॥ ೧೫ ॥

ಪದಪಾಠಃ ॥

ಯುಯಾ । ರಥ್ಂ । ಪಾರಯಥ । ಅತಿ । ಅಂಹಃ । ಯುಯಾ । ನಿದಃ । ಮುಂಚಥ । ವಂದಿತಾರಂ ।

ಅರ್ವಾಚೀ । ಸಾ । ಮರುತಃ । ಯಾ । ವಃ । ಊತಿಃ । ಓ ಇತಿ । ಸು । ವಾಶ್ರಾಽಇವ । ಸುಽಮತಿಃ ಜಿಗಾತು ॥ ೧೫ ॥

॥ ಸಾಯಣಭಾಷ್ಯಂ ॥

**ಹೇ ಮರುತೋ ಯಯೋತ್ಯಾ ರಧ್ರಮಾರಾಧಕಂ ಯಜಮಾನಮಂಹಃ ಪಾಪಮತಿ ಪಾರಯಥ। ಅತಿಕ್ರಮಯಥ । ಯಯೋತ್ಯಾ ವಂದಿತಾರಂ ಸ್ತೋತಾರಂ ನಿದೋ ನಿಂದಿತುಃ ಶತ್ರೋಃ ಸಕಾಶಾನ್ಮುಂಚಥ । ಮೋಚಯಥ । ಹೇ ಮರುತೋ ವೋ ಯುಷ್ಮದೀಯಾ ಯೋತಿಃ ಸಾರ್ವಾಚ್ಯಸ್ಮದಭಿಮುಖಾ ಭವತು । ತಥಾ ಸುಮತಿರ್ಯುಷ್ಮದೀಯಾ ಶೋಭನಾ ಮತಿರನುಗ್ರಹಾತ್ಮಿಕಾ ಬುದ್ಧಿಶ್ಚ ವಾಶ್ರೇವ ಹಂಭಾರವಂ ಕುರ್ವತೀ ಧೇನುರಿವ ವತ್ಸಂ ಸುಷ್ಠು ಓ ಜಿಗಾತು । ಏವಂ ಗಚ್ಛತು । ಅಸ್ಮಾನ್ ಪ್ರತಿ ಸರ್ವಥಾಗಚ್ಛತ್ವಿತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಮರುತಃ**—ಎಲೈ ಮರುತ್ತುಗಳೇ । **ಯಯಾ**—ಯಾವ ರಕ್ಷಣೆಯಿಂದ । **ರಧ್ರಂ**—ಆರಾಧಕನಾದ ಯಜಮಾನನನ್ನು । **ಅಂಹಃ**—ಪಾಪದಿಂದ । **ಅತಿ ಪಾರಯಥ**—ದಾಟಿಸಿದಿರೋ । **ಯಯಾ**—ಯಾವ ರಕ್ಷಣೆಯಿಂದ । **ವಂದಿತಾರಂ**—ನಿಮ್ಮನ್ನು ಸ್ತುತಿಸುವ ಭಕ್ತನನ್ನು । **ನಿದಃ**—ನಿಂದಕನಾದ ಶತ್ರುವಿನಿಂದ । **ಮುಂಚಥ**—ಬಿಡಿಸಿದಿರೋ । **ವಃ**—ನಿಮ್ಮ । **ಯಾ ಊತಿಃ**—ಪ್ರಸಿದ್ಧವಾದ ಯಾವ ಅದೇ ರಕ್ಷಣೆಯಿದೆಯೋ । **ಸಾ**—ಅದು । **ಅರ್ವಾಚೀ**—ನಮ್ಮ ಅಭಿಮುಖವಾಗಿರಲಿ । **ವಾಶ್ರೇವ**—ಧೇನುವು ತನ್ನ ಪ್ರೇಮಸೂಚಕವಾದ ಶಬ್ದವನ್ನು ಮಾಡಿಕೊಂಡು ಕರುವನ್ನು ಹೋಗಿ ಸೇರುವಂತೆ । **ಸುಮತಿಃ**—ಅನುಗ್ರಹಾತ್ಮಿಕವಾದ ನಿಮ್ಮ ಮತಿಯೂ ಸಹ **ಸು**—ಅತಿಶಯವಾಗಿ । **ಓ ಜಿಗಾತು**—ನಮ್ಮ ಅಭಿಮುಖವಾಗಿ ಬರಲಿ.

॥ ಭಾವಾರ್ಥ ॥

ಎಲೈ ಮರುತ್ತುಗಳೇ, ಯಾವ ರಕ್ಷಣೆಯಿಂದ ಆರಾಧಕನಾದ ಯಜಮಾನನನ್ನು ನೀವು ಪಾಪದಿಂದ ದಾಟಿಸಿದಿರೋ, ಯಾವ ರಕ್ಷಣೆಯಿಂದ ನಿಮ್ಮನ್ನು ಸ್ತುತಿಸುವ ಭಕ್ತನನ್ನು ನಿಂದಕನಾದ ಶತ್ರುವಿನಿಂದ ಬಿಡಿಸಿದರೋ ಅದೇ ರಕ್ಷಣೆಯು ನಮ್ಮ ಅಭಿಮುಖವಾಗಿಯೂ ಇರಲಿ. ಧೇನುವು ತನ್ನ ಪ್ರೇಮಸೂಚಕವಾದ ಶಬ್ದವನ್ನು ಮಾಡಿಕೊಂಡು ತನ್ನ ಕರುವನ್ನು ಹೋಗಿ ಸೇರುವಂತೆ ಅನುಗ್ರಹಾತ್ಮಕವಾದ ನಿಮ್ಮ ಮತಿಯೂ ಸಹ ಅತಿಶಯವಾಗಿ ನಮ್ಮ ಅಭಿಮುಖವಾಗಿ ಪ್ರಸರಿಸಲಿ.

## English Translation.

Maruts, may that protection wherewith you convey the worshipper beyond sin, wherewith you rescue thc reciter of your praise from the scoffer, be present with us: may your benign disposition tend towards us, like a loving (cow towards her calf).

॥ ವಿಶೇಷವಿಷಯಗಳು ॥

**ಯಯಾ ಊತ್ಯಾ ರಧ್ರಂ ಅಂಹಃ ಅತಿ ಪಾರಯಥ, ವಂದಿತಾರಂ ನಿದಃ ಮುಂಚಥ ವಃ ಸಾ ಅರ್ವಾಚೀ—ಆರಾಧಕಂ ಯಜಮಾನಂ ಪಾಪಮತಿಕ್ರಮಯಥ ಸ್ತೋತಾರಂ ನಿಂದಿತುಃ ಶತ್ರೋಃ ಸಕಾಶಾತ್ ಮೋಚಯಥ ಯುಷ್ಮದೀಯಾ ಸಾ ಊತಿಃ ಅಸ್ಮದಭಿಮುಖಾ ಭವತು ।** ಮರುದ್ದೇವತೆಗಳು

ತಮ್ಮನ್ನು ಸೇವಿಸುವ ಯಜಮಾನನನ್ನು ಪಾಪಗಳಿಂದ ದಾಟಿಸುವ ರಕ್ಷಣಾಕ್ರಮವನ್ನು ಹೊಂದಿರುವರು, ಎಂದೂ ಮತ್ತು ತಮ್ಮನ್ನು ಸ್ತುತಿಸುವವರನ್ನು ನಿಂದಿಸಿ ಹಿಂಸೆಗೆ ಒಳಪಡಿಸುವ ಶತ್ರುಗಳನ್ನು ನಾಶಪಡಿಸಿ ಅವರನ್ನು ರಕ್ಷಿಸುವುದೂ ಆದ ಮರುದ್ದೇವತೆಗಳ ಸಂಬಂಧಿಯಾದ ರಕ್ಷಣೆಯ ಶಕ್ತಿಯು ಯಜಮಾನರ ವಿಷಯದಲ್ಲಿ ಅಭಿಮುಖವಾಗಿರಲಿ ಎಂದು ಯಜಮಾನರ ಆಶಂಸೆಯು ವರ್ಣಿತವಾಗಿದೆ.

**ಸುಮತಿಃ ವಾಶ್ರೇವ ಸುಷ್ಟು ಓಜಿಗಾತು ಯುಷ್ಮದೀಯಾ ಶೋಭನಾ ಮತಿಃ ಅನುಗ್ರಹಾತ್ಮಿಕಾ ಬುದ್ಧಿಶ್ಚ ಹಂಭಾರವಂ ಕುರ್ವತೀ ಧೇನುರಿವ ವತ್ಸಮಿವ ಗಚ್ಛತು**—ಮರುದ್ದೇವತೆಗಳ ಸಂಬಂಧಿಯಾದ ಇತರರನ್ನು ರಕ್ಷಣೆಮಾಡುವ ಅಥವ ಅನುಗ್ರಹವನ್ನು ಮಾಡುವ ಬುದ್ಧಿಯು ಹಾಲನ್ನು ಹಿಂಡುವ (ಧೇನುವು) ಹಸುವು ತನ್ನ (ವತ್ಸ) ಕರುವಿನ ವಿಷಯದಲ್ಲಿ ಹುಂಕಾರವನ್ನು ಮಾಡುತ್ತಾ ಸಮೀಪಿಸುವಹಾಗೆ ಯಜಮಾನರಾದ ನಮ್ಮ ವಿಷಯದಲ್ಲಿ ಚೆನ್ನಾಗಿ ಇರಲಿ ಎಂದು ಆಶಿಸಿದೆ.



# ಮೂವತ್ತೈದನೆಯ ಸೂಕ್ತವು

**ಉಪೇಮಿತಿ ಪಂಚದಶರ್ಚಂ ತೃತೀಯಂ ಸೂಕ್ತಂ ಗಾರ್ತ್ಸಮದಂ ತ್ರೈಷ್ಟುಭಮಪಾಂನಪಾದ್ದೇವತಾಕಂ । ತಥಾ ಚಾನುಕ್ರಾಂತಂ । ಉಪೇಮಪೋನಪ್ತ್ರೀಯಮಿತಿ ॥ ಸೂಕ್ತವಿನಿಯೋಗೋ ಲೈಂಗಿಕಃ ॥**

ಅನುವಾದವು—**ಉಪೇಮಸೃಕ್ಷಿ** ಎಂಬ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು ಇದರಲ್ಲಿ ಹದಿನೈದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು ; ಅಪಾಂನಪಾತ್ ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ-**ಉಪೇಮಪೋನಪ್ತ್ರೀಯಮಿತಿ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೩೫

ಮಂಡಲ—೨ ॥ ಅನುವಾಕ—೪ ॥ ಸೂಕ್ತ—೩೫ ॥

ಅಷ್ಟಕ—೨ ॥ ಅಧ್ಯಾಯ—೭ ॥ ವರ್ಗ—೨೨, ೨೩, ೨೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥

॥ ಋಷಿಃ—ಗೃತ್ಸಮದಃ ॥

॥ ದೇವತಾ— ಅಪಾಂನಪಾತ್ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಉಪೇಮಸೃಕ್ಷಿ ವಾಜಯುರ್ವಚಸ್ಯಾಂ ಚನೋ ದಧೀತ ನಾದ್ಯೋ ಗಿರೋ ಮೇ**

**ಅಪಾಂ ನಪಾದಾಶುಹೇಮಾ ಕುವಿತ್ಸ ಸುಪೇಶಸಸ್ಕರತಿ ಜೋಷಿಷದ್ಧಿ ॥ ೧ ॥**

॥ ಪದಪಾಠಃ ॥

ಉಪ । ಈಂ । ಅಸೃಕ್ಷಿ । ವಾಜಽಯುಃ । ವಚಸ್ಯಾಂ । ಚನಃ । ದಧೀತ । ನಾದ್ಯಃ । ಗಿರಃ । ಮೇ ।

ಅಪಾಂ । ನಪಾತ್ । ಆಶುಽಹೇಮಾ । ಕುವಿತ್ । ಸಃ । ಸುಽಪೇಶಸಃ । ಕರತಿ । ಜೋಷಿಷತ್ । ಹಿ ॥ ೧ ॥

॥ ಸಾಯಣಭಾಷ್ಯಂ ॥

ವಾಜಯುರ್ವಾಜಮನ್ನಮಾತ್ಮನ ಇಚ್ಛನ್ನಹಮೀಮೇನಾಂ ವಚಸ್ಯಾಂ ವಚಸಃ ಸ್ತೋತ್ರಸ್ಯೇಚ್ಛಾಮುಪಾಸೃಕ್ಷಿ । ಉಪಾಸೃಜಾಮಿ । ಉತ್ಪಾದಯಾಮಿ । ಅಪಾಂ ನಪಾತಂ ಸ್ತೋತುಂ ಪ್ರವೃತ್ತೋಽಸ್ಮೀತ್ಯರ್ಥಃ ॥ ಸೃಜೇಶ್ಛಾಂದಸೋ ಲುಙ್ । ಲಿಙ್‌ಸಿಚಾವಾತ್ಮನೇಪದೇಷ್ವಿತಿ ಸಿಚಃ ಕಿತ್ತ್ವಾದ್ಗುಣಾಭಾವಃ॥ ಸ ಚ ನಾದ್ಯೋ ನದೀನಾಂ ಶಬ್ದಕಾರಿಣೀನಾಂ ಮೇಘಸ್ಥಾನಾಮಪಾಂ ಸಂಬಂಧೀ ಆಶುಹೇಮಾ ಆಶು ಶೀಘ್ರಂ ಗಂತಾ ॥ ಹಿ ಗತಾವಿತ್ಯಸ್ಮಾದನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ ॥ ಏವಂಭೂತೋಽಪಾಂ ನಪಾತ್ ಅಪಾಂ ಪೌತ್ರಸ್ಥಾನೀಯಃ । ಅದ್ಭ್ಯ ಓಷಧಿವನಸ್ಪತಯೋ ಜಾಯಂತೇ ಓಷಧಿವನಸ್ಪತಿಭ್ಯ ಏಷೋಽಗ್ನಿರ್ಜಾಯತ ಇತಿ ತತ್ಪೌತ್ರತ್ವಂ । ಏತತ್ಸಂಜ್ಞಕೋ ದೇವೋ ಗಿರಃ । ಗೃಣಾತೀತಿ ಗೀಃ ಸ್ತೋತಾ। ತಸ್ಯ ಮೇ ಮಮ ಕುವಿತ್ । ಬಹುನಾಮೈತತ್ । ಬಹುಲಂ ಚನೋಽನ್ನಂ ದಧೀತ । ದಧಾತು । ವಿದಧಾತು । ಪ್ರಯಚ್ಛತ್ವಿತ್ಯರ್ಥಃ । ಅಪಿ ಚಾಸ್ಮಾನ್ ಸುಪೇಶಸಃ ಶೋಭನರೂಪಾನ್ ಶೋಭನಾಲಂಕಾರಾನ್ವಾ ಕರತಿ । ಕರೋತು ॥ ಕರೋತೇರ್ವ್ಯತ್ಯಯೇನ ಶಪ್ । ಕಃಕರತ್ಕರತಿಕೃಧಿಕೃತೇಷ್ವನದಿತೇಃ । ಪಾ. ೮-೩-೫೦. ಇತಿ ವಿಸರ್ಜನೀಯಸ್ಯ ಸತ್ವಂ ॥ ಹಿ ಯಸ್ಮಾದಯಂ ದೇವೋ ಜೋಷಿಷತ್ । ಸ್ತೋತ್ರಾಣಿ ಸೇವತೇ ತಸ್ಮಾದಸ್ಮಾನೇವಮನುಗೃಹ್ಣಾತ್ವಿತ್ಯರ್ಥಃ ॥ ಜುಷೀ ಪ್ರೀತಿಸೇವನಯೋಃ । ಲೇಟ್ಯಡಾಗಮಃ । ವಿಕರಣಃ ಸಿಪ್ । ಇಡಾಗಮಶ್ಚ । ಹಿ ಚೇತಿ ನಿಘಾತಪ್ರತಿಷೇಧಃ ॥

॥ ಪ್ರತಿಪದಾರ್ಥ ॥

**ವಾಜಯುಃ**—ಅನ್ನವನ್ನು ಇಚ್ಛಿಸುವ ನಾನು । **ಈಂ ವಚಸ್ಯಾಂ**—ಈ ಸ್ತುತಿಯನ್ನು । **ಉಪ ಅಸೃಕ್ಷಿ**—ನಿರ್ಮಿಸುತ್ತೇನೆ । **ಹಿ**—ಏತಕ್ಕೆಂದರೆ । **ಸಃ**—ಅಗ್ನಿಯು (ಅಪಾಂ ನಪಾತ್ ರೂಪದಲ್ಲಿರುವ ಅಗ್ನಿಯು) **ಜೋಷಿಷತ್**—ಸ್ತುತಿಗಳನ್ನು ಸೇವಿಸುತ್ತಾನೆ । **ನಾದ್ಯಃ**—ಶಬ್ದಮಾಡುವ ಮೇಘಸ್ಥವಾದ ಉದಕಗಳಿಗೆ ಸಂಬಂಧಿಸಿದವನೂ । **ಆಶುಹೇಮಾ**—ಶೀಘ್ರಗಾಮಿಯೂ । **ಅಪಾಂ ನಪಾತ್**—ಅಪ್ಪುಗಳಿಗೆ ನಪ್ತೃವಾದವನೂ ಆದ ಅಗ್ನಿಯು । **ಗಿರಃ**—ಸ್ತುತಿಕರ್ತನಾದ । **ಮೇ**—ನನಗೆ । **ಕುವಿತ್**—ಪ್ರಭೂತವಾಗ । **ಚನಃ**—ಅನ್ನವನ್ನು । **ದಧೀತ**—ಒದಗಿಸಿಕೊಡಲಿ । **ಸುಪೇಶಃ**—ಶೋಭನಾತ್ಮಕವಾದ ರೂಪವುಳ್ಳವರನ್ನಾಗಿಯೂ । **ಕರತಿ**—(ನಮ್ಮನ್ನು) ಮಾಡಲಿ.

॥ ಭಾವಾರ್ಥ ॥

ಅಪಾಂ ನಪಾತ್ ಎಂದು ಪ್ರಸಿದ್ಧನಾದ ಅಗ್ನಿಯು ಸ್ತುತಿಯನ್ನು ಆದರದಿಂದ ಸೇವಿಸುತ್ತಾನೆ. ಆದುದರಿಂದ ಅನ್ನವನ್ನು ಇಚ್ಛಿಸುವ ನಾನು ಈ ಸ್ತುತಿಯನ್ನು ನಿರ್ಮಿಸುತ್ತೇನೆ. ಶಬ್ದಮಾಡುವ ಉದಕಗಳಿಗೆ ಸಂಬಂಧಿಸಿದವನೂ,

ಶೀಘ್ರಗಾಮಿಯೂ, ಉದಕಗಳಿಗೆ ಮೊಮ್ಮಗನಾದವನೂ ಆದ ಅಗ್ನಿಯು ಸ್ತುತಿಕರ್ತನಾದ ನನಗೆ ಪ್ರಭೂತವಾದ ಅನ್ನವನ್ನು ಒದಗಿಸಲಿ.

## English Translation.

Desiring food, I put forth this laudatory hymn: may the sounding and swift-moving grandson of the waters bestow abundant food upon me his worshipper: may he make us of goodly appearance, for verily he is propitiated by praise.

॥ ವಿಶೇಷವಿಷಯಗಳು ॥

**ವಾಜಯುಃ ಈಂ ವಚಸ್ಯಾಂ ಉಪ ಅಸೃಕ್ಷಿ—ಅನ್ನಮಾತ್ಮನ ಇಚ್ಛನ್ನಹಂ ಏನಾಂ ಸ್ತೋತ್ರ-ಸ್ಯೇಚ್ಛಾಂ ಉತ್ಪಾದಯಾಮಿ। ಅಪಾಂ ನಪಾತಂ ಸ್ತೋತುಂ ಪ್ರವೃತ್ತಃ ಅಸ್ಮಿ।** ಮಂತ್ರದ್ರಷ್ಟೃವಾದ ಋಷಿಯು ತನಗೆ ಅನ್ನವನ್ನು ಅನುಗ್ರಹಿಸುವ **ಅಪಾಂ ನಪಾತ್** ಎಂಬ ದೇವನನ್ನು ಅನ್ನವನ್ನು ಹೊಂದಲು ಇಚ್ಛೆಯುಳ್ಳವನಾಗಿ ಸ್ತುತಿಮಾಡುವೆನು ಎಂದು ಹೇಳಿದ್ದಾನೆ.

**ಸ ಚ ನಾದ್ಯಃ ಆಶುಹೇಮಾ ಅಪಾಂ ನಪಾತ್—ಸಃ ಶಬ್ದಕಾರಿಣೀನಾಂ ಮೇಘಸ್ಥಾನಾಮಪಾಂ ಸಂಬಂಧೀ, ಶೀಘ್ರಂಗಂತಾ, ಅಪಾಂ ಪೌತ್ರಸ್ಥಾನೀಯಃ ಅದ್ಭ್ಯಃ ಓಷಧಿವನಸ್ಪತಯೋ ಜಾಯಂತೇ ಓಷಧಿವನಸ್ಪತಿಭ್ಯೋ ಏಷ ಅಗ್ನಿಃ ಜಾಯತೇ ಇತಿ ತತ್ಪೌತ್ರತ್ವಂ।** ಈ ಅಪಾಂ ನಪಾತ್ ಎಂಬ ದೇವನು ಉದಕಗಳಿಂದ ಪೂರಿತವಾದ ಧ್ವನಿಮಾಡುತ್ತಿರುವ ಮೇಘಗಳಲ್ಲಿ ಇರುವ ಉದಕಗಳ ಸಂಬಂಧಿಯಾದವನು. ಎಂದರೆ ಉದಕಗಳಿಗೆ ಪುತ್ರನ ಮಗನು. ಆದುದರಿಂದಲೇ ಈ ದೇವನಿಗೆ ಅಪಾಂ ನಪಾತ್ ಎಂದು ಹೆಸರು ಬಂದಿರುವುದು. ಉದಕಗಳಿಂದ ಮೂಲಿಕೆಗಳೂ ವನಸ್ಪತಿಗಳೂ ಉತ್ಪನ್ನವಾಗಿ, ಈ ಓಷಧಿ ವನಸ್ಪತಿಗಳಿಂದ ಅಗ್ನಿಯು ಉತ್ಪನ್ನನಾಗುವ ಕಾರಣ ಅಗ್ನಿಯು ಉದಕಗಳ ಮೊಮ್ಮಗನು ಎಂದು ಪರಿಗಣಿತನಾಗಿದ್ದಾನೆ ಎಂದು ವಿವರಿಸಿದೆ. ನಿರುಕ್ತಕಾರರು ಅಪಾಂ ನಪಾತ್ ಎಂಬ ಪದದ ಅರ್ಥವನ್ನು ವಿವರಿಸುವಾಗ **ಅಪಾಂನಪಾತ್ ತನೂನಪಾತ್ರಾ ವ್ಯಾಖ್ಯಾತಃ** (ನಿ. ೧೦-೧೮) ಎಂದು ವ್ಯಾಖ್ಯಾನಮಾಡಿದ್ದಾರೆ. **ತನೂನ ಪಾತ್** ಎಂಬ ಪದವು **ತನೂನಪಾತ್ ಆಜ್ಯಮಿತಿ ಕಾತ್ಥಕ್ಯಃ ಅಗ್ನಿರಿತಿ ಶಾಕಪೂಣಿಃ** (ನಿ. ೮-೫) ಎಂದು ಎರಡು ವಿಧವಾದ ಅರ್ಥಬೋಧಕವಾಗಿ ವಿವೃತವಾಗಿದೆ. ಇಲ್ಲಿ ಶಾಕಪೂಣಿ ಆಚಾರ್ಯರ ಅಭಿಪ್ರಾಯವನ್ನು ಅನುಸರಿಸಿ ತನೂನಪಾತ್ ಎಂಬ ಪದದ ಅರ್ಥವಾದ ಅಗ್ನಿ ಎಂಬ ಪದವು ಅಪಾಂ ನಪಾತ್ ಎಂಬ ಪದದಿಂದ ಪರಿಗೃಹೀತವಾಗಿದೆ ಎಂದೂ ವಿವರಿಸಿದೆ.

**ಗಿರಃ ಮೇ ಕುವಿತ್ ಚನಃ ದಧೀತ—ಏತತ್ಸಂಜ್ಞಕೋ ದೇವಃ। ಗೃಣಾತೀತಿ ಗೀಃ ಸ್ತೋತಾ। ತಸ್ಯ ಬಹುಲಂ ಅನ್ನಂ ವಿದಧಾತು।** ಶಬ್ದಗಳನ್ನು ಉಚ್ಚರಿಸುವವನು ಎಂದು ಅರ್ಥವನ್ನು ಬೋಧಿಸುವ ಗೃಧಾತುವಿನಿಂದ ನಿಷ್ಪನ್ನವಾದ ಗಿರಃ ಎಂಬ ಪದವು (ಸ್ತೋತೃ) ಸ್ತೋತ್ರವನ್ನು ಪಠಿಸುವವನು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಎಂದೂ ಈ ಅಪಾಂ ನಪಾತ್ ಎಂಬ ದೇವನು ತನ್ನನ್ನು ಸ್ತುತಿಮಾಡತಕ್ಕವನಿಗೆ ಪ್ರಭೂತವಾದ ಅನ್ನವನ್ನು ಅನುಗ್ರಹಿಸಲಿ ಎಂದೂ ಆಶಂಸಿತವಾಗಿದೆ.

**ಜೋಷಿಷತ್ ಸುಪೇಶಸಃ ಕರತಿ—ಅಸ್ಮಾನ್ ಶೋಭನರೂಪಾನ್ ಶೋಭನಾಲಂಕಾರಾನ್ ವಾ ಕರೋತು । ಅಯಂ ದೇವಃ ಸ್ತೋತ್ರಾಣಿ ಸೇವತೇ ತಸ್ಮಾದಸ್ಮಾನೇವಮನುಗೃಹ್ಣಾತು ।** ಜೋಷಿಷತ್ ಎಂಬ ಪದವು ಸ್ತೋತ್ರಗಳನ್ನು ಶ್ರವಣಮಾಡಿ ಸಂತೋಷಪಡಿಸುವವನು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದರಿಂದ ಈ ದೇವನು ಸ್ತೋತ್ರಗಳನ್ನು ಪಠಿಸುವ ನಮ್ಮನ್ನು ಉತ್ತಮವಾದ ರೂಪವುಳ್ಳವರನ್ನಾಗಿಯೂ ಅಥವಾ ಮಂಗಳಕರವಾದ ಅಲಂಕಾರವುಳ್ಳವರನ್ನಾಗಿಯೂ ಮಾಡಲಿ ಎಂದು ಆಶಂಸಿದೆ.

**ಚನಃ** ಎಂಬ ಪದವು ಯಾಸ್ಕರಿಂದ ಉದಾಹೃತವಾದ—

**ಅದ್ರಿಣೇದಿಂದ್ರ ಪ್ರಸ್ಥಿತೇಮಾ ಹವೀಂಷಿ ಚನೋ ದಧಿಷ್ವ ಪಚತೋತ ಸೋಮಂ ।**
**ಪ್ರಯಸ್ವಂತಃ ಪ್ರತಿ ಹರ್ಯಾಮಸಿ ತ್ವಾ ಸತ್ಯಾಃ ಸಂತು ಯಜಮಾನಸ್ಯ ಕಾಮಾಃ ॥**

(ಋ. ಸಂ. ೧೦-೧೧೬-೮)

ಈ ಋಕ್ಕಿನಲ್ಲಿ **ಚನ** ಇತ್ಯನ್ನನಾಮ (ನಿ. ೬-೧೬) ಎಂದು ವ್ಯಾಖ್ಯಾತವಾಗಿದೆ.

**ಕುವಿತ್** ಎಂಬ ಪದವು ಬಹುನಾಮಗಳಲ್ಲಿ (ನಿ. ೩-೧೩) ಪಠಿತವಾಗಿದೆ. ಇಲ್ಲಿ ಬಹುಲಂ ಎಂದು ಅರ್ಥವನ್ನು ವಿವರಿಸಿದೆ.



ಸಂಹಿತಾಪಾಠಃ ॥

ಇಮಂ ಸ್ವಸ್ಮೈ ಹೃದ ಆ ಸುತಷ್ಟಂ ಮಂತ್ರಂ ವೋಚೇಮ ಕುವಿದಸ್ಯ ವೇದತ್ ।
ಅಪಾಂ ನಪಾದಸುರ್ಯಸ್ಯ ಮಹ್ನಾ ವಿಶ್ವಾನ್ಯರ್ಯೋ ಭುವನಾ ಜಜಾನ ॥ ೨ ॥

ಪದಪಾಠಃ

ಇಮಂ । ಸು । ಅಸ್ಮೈ । ಹೃದಃ । ಆ । ಸುಽತಷ್ಟಂ । ಮಂತ್ರಂ । ವೋಚೇಮ । ಕುವಿತ್ । ಅಸ್ಯ । ವೇದತ್ ।
ಅಪಾಂ । ನಪಾತ್ । ಅಸುರ್ಯಸ್ಯ । ಮಹ್ನಾ । ವಿಶ್ವಾನಿ । ಅರ್ಯಃ । ಭುವನಾ । ಜಜಾನ ॥ ೨ ॥

॥ ಸಾಯಣಭಾಷ್ಯಂ ॥

**ಅಸ್ಮಾ ಅಪಾಂನಪಾತ್ಸಂಜ್ಞಕಾಯ ದೇವಾಯ ಹೃದೋ, ಹೃದಯಾತ್ ಸುತಷ್ಟಂ ಸುಷ್ಠು ನಿರ್ಮಿತಮಿಮಂ ಮಂತ್ರಂ ಸುಷ್ಠು ಆಭಿಮುಖ್ಯೇನ ವೋಚೇಮ । ಬ್ರವಾಮ । ಅಸ್ಯಾಸ್ಮಾಭಿರುಕ್ತಮಿಮಂ ಮಂತ್ರಂ ಕುವಿದ್ವೇದತ್ । ಬಹುಲಂ ಜಾನಾತು ॥ ವೇತ್ತೇರ್ಲೇಟ್ಯಡಾಗಮಃ । ನಿಪಾತೈರ್ಯದ್ಯದಿಹಂತೇತಿ ನಿಘಾತಪ್ರತಿಷೇಧಃ ॥ ಕಿಂ ಸ್ತೋತ್ರಮಿತಿ ಚೇದುಚ್ಯತೇ । ಅರ್ಯಃ ಸ್ವಾಮ್ಯಪಾಂನಪಾ-**

**ತ್ಸಂಜ್ಞಕೋ ವೈದ್ಯುತೋಽಗ್ನಿರಸುರ್ಯಸ್ಯ । ಅಸುರಃ ಶತ್ರೂನ್ ಕ್ಷೇಪ್ತಾ । ತಸ್ಯ ಸ್ವಭೂತಸ್ಯ ಬಲಸ್ಯ ಮಹ್ನಾ ಮಹಿಮ್ನಾ ಮಹತ್ತ್ವೇನ ವಿಶ್ವಾನಿ ಸರ್ವಾಣಿ ಭುವನಾ ಭುವನಾನಿ ವೃಷ್ಟ್ಯುದಕಾನಿ ವೃಷ್ಟ್ಯುತ್ಪಾದನೇನ ಭೂತಜಾತಾನಿ ವಾ ಜಜಾನ । ಜನಯಾಮಾಸ ॥**

॥ ಪ್ರತಿಪದಾರ್ಥ ॥

**ಅಸ್ಮೈ**— ಅಪಾಂ ನಪಾತ್ ಸಂಜ್ಞಕನಾದ ಅಗ್ನಿಗೆ ಅರ್ಪಿಸಲು । **ಹೃದಃ**—ಅಂತಕರಣ ಪೂರ್ವಕವಾಗಿಯೂ । **ಸುತಷ್ಟಂ**— ಶ್ರೇಷ್ಠವಾಗಿ ನಿರ್ಮಿತವಾದುದೂ । **ಇಮಂ ಮಂತ್ರಂ**—ಸ್ತುತ್ಯಾತ್ಮಕವಾದುದೂ ಆದ ಈ ಮಂತ್ರವನ್ನು । **ಸು**—ಅತಿಶಯವಾಗಿ । **ಆ ವೋಚೇಮ**—ಎದುರಾಗಿ ನಿಂತು ಪಠಿಸುತ್ತೇವೆ । **ಅಸ್ಯ**—ಈ ಮಂತ್ರವನ್ನು । **ಕುವಿತ್**—ಪೂರ್ಣವಾಗಿ । **ವೇದತ್**—(ಅಗ್ನಿಯು) ತಿಳಿಯಲಿ । **ಅರ್ಯಃ**—ಪ್ರಭುವಾದ । **ಅಪಾಂ ನಪಾತ್**—ಅಪಾಂ ನಪಾತ್ ಸಂಜ್ಞಕನಾದ ಅಗ್ನಿಯು । **ಅಸುರಸ್ಯ**—ಶತ್ರುಗಳನ್ನು ಸೋಲಿಸುವ ತನ್ನ ಬಲದ । **ಮಹ್ನಾ**—ಮಹಿಮೆಯಿಂದ । **ವಿಶ್ವಾನಿ**—ಸಮಸ್ತವಾದ । **ಭುವನಾ**—ಭೂತಜಾತಗಳನ್ನೂ । **ಜಜಾನ**—ಸೃಷ್ಟಿಸಿದನು.

॥ ಭಾವಾರ್ಥ ॥

ಅಗ್ನಿಗೆ ಅರ್ಪಿಸಲು ಅಂತಃಕರಣ ಪೂರ್ವಕವಾಗಿಯೂ, ಶ್ರೇಷ್ಠವಾಗಿಯೂ ನಿರ್ಮಿತವಾದುದೂ ಸ್ತುತ್ಯಾತ್ಮಕವಾದುದೂ ಆದ ಈ ಮಂತ್ರವನ್ನು ಅಗ್ನಿಯ ಎದುರಾಗಿ ನಿಂತು ಅತಿಶಯವಾಗಿ ಪಠಿಸುತ್ತೇವೆ. ಅಗ್ನಿಯು ಈ ಮಂತ್ರವನ್ನು ಪೂರ್ಣವಾಗಿ ತಿಳಿಯಲಿ. ಪ್ರಭುವಾದವನೂ, ಅಪಾಂ ನಪಾತ್ ಸಂಜ್ಞಕನಾದವನೂ ಆದ ಅಗ್ನಿಯು ಶತ್ರುಗಳನ್ನು ಸೋಲಿಸುವ ತನ್ನ ಬಲದ ಮಹಿಮೆಯಿಂದ ಸಮಸ್ತವಾದ ಭೂತಜಾತಗಳನ್ನೂ ಸೃಷ್ಟಿಸಿದನು.

English Translation·

Let us address to him the prayer that is conceived in our hearts, and may he fully understand (its purport): for he the lord, the grandson of the waters, has generated all beings by the greatness of his might.

॥ ವಿಶೇಷವಿಷಯಗಳು ॥

**ಅರ್ಯಃ ಅಸುರ್ಯಸ್ಯ ಮಹ್ನಾ ವಿಶ್ವಾನಿ ಭುವನಾ ಜಜಾನ—ಸ್ವಾಮೀ ಅಪಾಂ ನಪಾತ್ಸಂಜ್ಞಕೋ ವೈದ್ಯುತೋಽಗ್ನಿಃ ಅಸುರಃ ಶತ್ರೂಣ್ ಕ್ಷೇಪ್ತಾ । ತಸ್ಯ ಸ್ವಭೂತಸ್ಯ ಬಲಸ್ಯ ಮಹತ್ತ್ವೇನ ಸರ್ವಾಣಿ ವೃಷ್ಟ್ಯುದಕಾನಿ ವೃಷ್ಟ್ಯುತ್ಪಾದನೇನ ಭೂತಜಾತಾನಿ ವಾ ಜನಯಾಮಾಸ । ಅರ್ಯ** ಶಬ್ದವು ಈಶ್ವರನಾಮಗಳಲ್ಲಿ (ನಿ. ೩–೧೧) ಉಕ್ತವಾಗಿದೆ. ಅಪಾಂ ನಪಾತ್ ಎಂಬ ಪದಕ್ಕೆ ವೈದ್ಯುತಾಗ್ನಿ ಎಂದು ಅರ್ಥವನ್ನು ವಿವರಿಸಿದೆ. ಈ ಅಗ್ನಿಯು ಸರ್ವಕ್ಕೂ ಅಧಿಪನಾಗಿರುವನು. ಶತ್ರುಗಳನ್ನು ನಾಶಪಡಿಸುವನು. ಆದುದರಿಂದ ಈ ದೇವನು ತನ್ನ ಸ್ವಾಭಾವಿಕವಾದ ಮಹತ್ವಪೂರಿತವಾದ ಮಹಿಮೆಯಿಂದ ವೃಷ್ಟ್ಯುದಕಗಳನ್ನು ಸೃಷ್ಟಿಮಾಡಿ ಆ ವೃಷ್ಟ್ಯುದಕಗಳಿಂದ ಎಲ್ಲಾ ಪ್ರಾಣಿಗಳನ್ನೂ ಸೃಷ್ಟಿಮಾಡಿರುವನು ಎಂದು ವಿವರಿಸಿದೆ.

**ಅಸ್ಮೈ ಹೃದಂ ಸುತಷ್ಟಂ ಇಮಂ ಮಂತ್ರಂ ಆ ವೋಚೇಮ—ಅಪಾಂ ನಪಾತ್ಸಂಜ್ಞಕಾಯ ದೇವಾಯ ಹೃದಯಾತ್ ಸುಷ್ಠು ನಿರ್ಮಿತಂ ಇಮಂ ಮಂತ್ರಂ ಸುಷ್ಠು ಅಭಿಮುಖ್ಯೇನ ಬ್ರವಾಮ ।** ಈ ಅಪಾಂ ನಪಾತ್ ಎಂದು ಹೆಸರುಳ್ಳ ಈ ದೇವನನ್ನು ನಮ್ಮ ಮನಃಪೂರ್ವಕವಾಗಿ ರಚಿತವಾಗಿರುವ ಸ್ತೋತ್ರವನ್ನು ಯಜಮಾನರಾದ ನಾವು ಪಠಿಸುತ್ತೇವೆ ಎಂದೂ, **ಅಸ್ಮಾಭಿರುಕ್ತಮಿಮಂ ಮಂತ್ರಂ ಕುವಿತ್ ವೇದತ್—ಬಹುಲಂ ಜಾನಾತು ।** ಯಜಮಾನರಾದ ನಾವು ಈ ದೇವನನ್ನು ಸಂತೋಷಪಡಿಸುವುದಕ್ಕಾಗಿ ಪಠಿಸಿರುವ ಈ ಸ್ತೋತ್ರವನ್ನು ಈ ದೇವನು ಚೆನ್ನಾಗಿ ಶ್ರವಣಮಾಡಲಿ ಎಂದೂ ಪ್ರಾರ್ಥನೆಯು ಉಕ್ತವಾಗಿದೆ. ವೈದ್ಯುತಾಗ್ನಿಯ ವಿವರಣೆಯು ಹಿಂದೆ ಉಕ್ತವಾಗಿದೆ.



॥ ಸಂಹಿತಾಪಾಠಃ ॥

## ಸಮನ್ಯಾ ಯಂತ್ಯುಪ ಯಂತ್ಯನ್ಯಾಃ ಸಮಾನಮೂರ್ವಂ ನದ್ಯಃ ಪೃಣಂತಿ ।
## ತಮೂ ಶುಚಿಂ ಶುಚಯೋ ದೀದಿವಾಂಸಮಪಾಂ ನಪಾತಂ ಪರಿ ತಸ್ಥುರಾಪಃ ॥ ೩ ॥

॥ ಪದಪಾಠಃ ॥

ಸಂ । ಅನ್ಯಾಃ । ಯಂತಿ । ಉಪ । ಯಂತಿ । ಅನ್ಯಾಃ । ಸಮಾನಂ । ಊರ್ವಂ । ನದ್ಯಃ । ಪೃಣಂತಿ ।

ತಂ । ಊಂ ಇತಿ । ಶುಚಿಂ । ಶುಚಯಃ । ದೀದಿಽವಾಂಸಂ । ಅಪಾಂ । ನಪಾತಂ । ಪರಿ । ತಸ್ಥುಃ । ಆಪಃ ॥೩॥

॥ ಸಾಯಣಭಾಷ್ಯಂ ॥

ಅಪೋನಪ್ತ್ರೀಯೇ ವಸತೀವರೀಸಮೀಪೇ ಏಕಧನಾಸು ಪ್ರಾಪ್ತಾಸು ಸಮನ್ಯಾ ಯಂತೀತ್ಯೇಷಾನುವಕ್ತವ್ಯಾ । ಸೂತ್ರಿತಂ ಚ । ಸಮನ್ಯಾ ಯಂತ್ಯುಪಯಂತ್ಯನ್ಯಾ ಇತಿ ತೀರ್ಥದೇಶೇ । ಆ. ೫-೧. । ಇತಿ ॥ ಸಾರಸ್ವತೇ ಚ ಶಸ್ತ್ರೇ ಯದ್ಯಪ್ಸು ಶಮ್ಯಾ ನಿಪತೇತ್ ತದಾನೀಮಪೋನಪ್ತ್ರೀಯಶ್ಚರುಃ ಕಾರ್ಯಃ। ತತ್ರೈಷೈವ ಯಾಜ್ಯಾ। ಸೂತ್ರಿತಂ ಚ। ಸಮನ್ಯಾ ಯಂತ್ಯುಪಯಂತ್ಯನ್ಯಾ ಇತ್ಯಾತಃಸಮಾನಂ ಸರ್ವೇಷಾಂ। ಆ. ೧೨-೬. । ಇತಿ ॥

ಅನ್ಯಾ ವರ್ಷ್ಯಾ ಆಪೋ ಸಂ ಯಂತಿ । ಭೂಮ್ಯಾ ಸಂಗಚ್ಛಂತೇ । ಅನ್ಯಾಶ್ಚ ಪೂರ್ವಂ ತತ್ರಾವಸ್ಥಿತಾ ಉಪಯಂತಿ । ಉಪಗಚ್ಛಂತಿ । ತಾಃ ಸರ್ವಾ ಆಪಃ ಸಮಾನಂ ಸಹ ನದ್ಯೋ ನದೀಭೂತಾ ಊರ್ವಂ ಸಮುದ್ರಮಧ್ಯೇ ವರ್ತಮಾನಂ ವಡವಾನಲಂ ಪೃಣಂತಿ ॥ ಪೃಣ ಪ್ರೀಣನೇ ತೌದಾದಿಕಃ ॥ ತಮು ತಮೇವಾಪಾಂ ನಪಾತಂ ಶುಚಿಂ ನಿರ್ಮಲಂ ದೀದಿವಾಂಸಂ ದೀಪ್ಯಮಾನಂ ॥ ದೀದೇತಿಶ್ಛಾಂದಸೋ ದೀಪ್ತಿಕರ್ಮಾ । ಲಿಟಃ ಕ್ವಸುಃ । ವಸ್ವೇಕಾಜಾದ್ಘಸಾಮಿತಿ ನಿಯಮಾದಿಡಭಾವಃ । ಛಂದಸಿ ವೇತಿ ವಕ್ತ-

**ವ್ಯಮಿತಿ ವಚನಾದ್ದ್ವಿರ್ವಚನಾಭಾವಃ । ಏವಂಭೂತಂ ಶುಚಯಃ ಶುದ್ಧಾ ಆಪಃ ಪರಿತಸ್ಥುಃ । ಪರಿವೃತ್ಯ ತಿಷ್ಠಂತಿ । ಏಷ ಹಿ ವೈದ್ಯುತಾಗ್ನಿರೂಪೇಣ ಮೇಘೇ ವರ್ತಮಾನೋಽಸ್ಮಾನಜೀಜನದಿತಿ ಬುದ್ಧ್ಯಾ ವಡವಾನಲರೂಪೇಣ ವರ್ತಮಾನಂ ತಂ ಪರ್ಯುಪಾಸತ ಇತ್ಯರ್ಥಃ । ಯದ್ವಾ ಅನ್ಯಾ ಏಕಧನಾಖ್ಯಾ ಆಪಃ ಸಂಯಂತಿ । ಚಾತ್ವಾಲೋತ್ಕರಯೋರ್ಮಧ್ಯೇ ವಸತೀವರೀಭಿಃ ಸಂಗಚ್ಛಂತೇ । ಅನ್ಯಾ ವಸತೀವರ್ಯಾಖ್ಯಾ ಆಪಶ್ಚೋಪಯಂತಿ । ಉಪಗಚ್ಛಂತಿ । ಐಕಮತ್ಯಂ ಪ್ರಾಪ್ತಾ ಭವಂತಿ । ಏತಾಶ್ಚ ಮಿಲಿತ್ವಾ ಯಜ್ಞಂ ಸಾಧಯಂತ್ಯಸ್ತತ್ಸಾಧ್ಯವೃಷ್ಟಿದ್ವಾರಾ ನದ್ಯೋ ಭೂತ್ವೋರ್ವಂ ಪೃಣಂತೀತ್ಯಾದಿ ಸಮಾನಂ । ಏವಂ ಹಿ ಆಪೋ ವಾ ಅಸ್ಪರ್ಧಂತ । ವಯಂ ಪೂರ್ವಂ ಯಜ್ಞಂ ವಕ್ಷ್ಯಾಮಃ । ಐ. ಬ್ರಾ. ೨-೨೦. । ಇತ್ಯಾದಿಕಂ ಬ್ರಾಹ್ಮಣವಿನಿಯೋಗಶ್ಚಾನುಗೃಹ್ಯತೇ ।**

॥ ಪ್ರತಿಪದಾರ್ಥ ॥

**ಅನ್ಯಾಃ**—ವೃಷ್ಟಿಯಿಂದ ಉತ್ಪನ್ನವಾದ ಉದಕಗಳು । **ಸಂ ಯಂತಿ**—ಒಟ್ಟಿಗೆ ಭೂಮಿಯನ್ನು ಸೇರುತ್ತವೆ । **ಅನ್ಯಾಃ**—ಭೂಮಿಯ ಮೇಲೆ ಮೊದಲೇ ಇದ್ದಂತಹ ಉದಕಗಳು । **ಉಪ ಯಂತಿ**—ಈ ವೃಷ್ಟ್ಯುದಕಗಳೊಡನೆ ಸೇರಿಕೊಳ್ಳುತ್ತವೆ । **ಸಮಾನಂ**—ಈ ಎಲ್ಲಾ ಉದಕಗಳೂ ಒಟ್ಟಿಗೆ ಕಲೆತು **ನದ್ಯಃ**—ನದೀರೂಪಗಳಿಂದ । **ಊರ್ವಂ**—ಸಮುದ್ರಮಧ್ಯದಲ್ಲಿರುವ ಒಡಬಾನಲನನ್ನು । **ಪೃಣಂತಿ**—ತೃಪ್ತಿಪಡಿಸುತ್ತವೆ । **ಶುಚಿಂ**—ನಿರ್ಮಲನೂ । **ದೀದಿವಾಂಸಂ**—ಪ್ರಕಾಶಮಾನನೂ । **ತಮು ಅಪಾಂ ನಪಾತಂ**—ಅಪಾಂನಪಾತ್ ಸಂಜ್ಞಕನೂ ಆದ ಅದೇ ಅಗ್ನಿಯನ್ನು । **ಶುಚಯಃ** ಶುದ್ಧವಾದ । **ಆಪಃ**—ಉದಕಗಳು । **ಪರಿ ತಸ್ಥುಃ**—ಸುತ್ತುವರಿದು ನಿಂತು ಉಪಚರಿಸುತ್ತವೆ.

॥ ಭಾವಾರ್ಥ ॥

ವೃಷ್ಟಿಯಿಂದ ಉತ್ಪನ್ನವಾದ ಉದಕಗಳು ಒಟ್ಟಿಗೆ ಭೂಮಿಯನ್ನು ಸೇರುತ್ತವೆ. ಭೂಮಿಯ ಮೇಲೆ ಮೊದಲೇ ಇದ್ದ ಉದಕಗಳು ಈ ವೃಷ್ಟ್ಯುದಕಗಳೊಡನೆ ಸೇರಿಕೊಳ್ಳುತ್ತವೆ ಈ ಎಲ್ಲಾ ಉದಕಗಳೂ ಒಟ್ಟಿಗೆ ಕಲೆತು ನದೀರೂಪಗಳಿಂದ ಸಮುದ್ರದಲ್ಲಿರುವ ಒಡಬಾನಲನನ್ನು ತೃಪ್ತಿಪಡಿಸುತ್ತವೆ. ನಿರ್ಮಲನೂ, ಪ್ರಕಾಶಮಾನನೂ, ಅಪಾಂ ನಪಾತ್ ಸಂಜ್ಞಕನೂ ಆದ ಅದೇ ಅಗ್ನಿಯನ್ನು ಶುದ್ಧವಾದ ಉದಕಗಳು ಸುತ್ತುವರಿದು ನಿಂತು ಉಪಚರಿಸುತ್ತವೆ.

## English Translation.

Some waters collect together (from the rain): others, (already collected on earth), unite with them: as rivers they flow together to propitiate the ocean-fire: the pure waters are gathered round the pure and brilliant grandsons of the waters.

॥ ವಿಶೇಷವಿಷಯಗಳು ॥

ಅಪ್ತೋರ್ನಪ್ತ್ರೀಯವೆಂಬ ಯಾಗದಲ್ಲಿ ವಸತೀವರೀಸಮೀಪದಲ್ಲಿ **ಸಮನ್ಯಾ ಯಂತಿ** ಎಂಬ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ **ಸಮನ್ಯಾ ಯಂತ್ಯುಪಯಂತ್ಯನ್ಯಾ ಇತಿ ತೀರ್ಥದೇಶೇ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೫-೧); ಸಾರಸ್ವತಶಸ್ತ್ರಪಠನಕಾಲದಲ್ಲಿಯೂ ಕೂಡ

ಶಮ್ಯಾ ಎಂಬ ಆಯುಧವು ನೀರಿನಲ್ಲಿ ಬಿದ್ದಲ್ಲಿ ಆಗ ಅಪೋನಪ್ತ್ರೀಯಚರುಹೋಮವನ್ನು ಮಾಡಬೇಕು. ಆಗ **ಸಮನ್ಯಾ ಯಂತಿ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಸಮನ್ಯಾ ಯಂತ್ಯುಪಯಂತ್ಯನ್ಯಾ ಇತ್ಯಾತಿಃ ಸಮಾನಂ ಸರ್ವೇಷಾಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ ೧೨-೬)

**ಅನ್ಯಾಃ ಸಂ ಯಂತಿ, ಅನ್ಯಾಃ ಉಪ ಯಂತಿ, ಸಮಾನಂ ನದ್ಯಃ ಊರ್ವಂ ಪೃಣಂತಿ—ವರ್ಷಾರ್ಥಾಃ ಆಪಃ ಭೂಮ್ಯಾ ಸಂಗಚ್ಛಂತೇ ಅನ್ಯಾಶ್ಚ ಪೂರ್ವಂ ತತ್ರಾವಸ್ಥಿತಾಃ ಉಪಗಚ್ಛಂತಿ ತಾಃ ಸರ್ವಾಃ ಆಪಃ ನದೀಭೂತಾಃ ಸಮುದ್ರಮಧ್ಯೇ ವರ್ತಮಾನಂ ವಡವಾನಲಂ ಪ್ರೀಣಯಂತಿ ।** ವೃಷ್ಟಿರೂಪದಿಂದ ಭೂಮಿಯಲ್ಲಿ ಸುರಿದ ಉದಕಗಳೂ ಭೂಮಿಯಮೇಲೆ ಮೊದಲೇ ಇದ್ದ ಉದಕಗಳೂ ಒಟ್ಟಿಗೆ ಒಂದಾಗಿ ಕಲೆತು ಸೇರುವುವು. ಈ ಉದಕಗಳೆಲ್ಲವೂ ಒಟ್ಟುಗೂಡಿ ನದಿಯ ರೂಪವಾಗಿ ಸಮುದ್ರವನ್ನು ಸೇರುವುವು. ಸಮುದ್ರ ಮಧ್ಯವಲ್ಲಿರುವ ಬಡಬಾಗ್ನಿಯನ್ನು ಈ ನದೀರೂಪದಿಂದ ಸಮುದ್ರವನ್ನು ಸೇರಿದ ಉದಕಗಳು ಸಂತೋಷಪಡಿಸುತ್ತವೆ ಎಂದೂ ವರ್ಣಿಸಿದೆ.

**ತಂ ಅಪಾಂ ನಪಾತಂ ಶುಚಿಂ ನಿರ್ಮಲಂ ದೀದಿವಾಂಸಂ ಶುಚಯಃ ಆಪಃ ಪರಿ ತಸ್ಥುಃ—ನಿರ್ಮಲಂ ದೀಪ್ಯಮಾನಂ ಶುದ್ಧಾಃ ಆಪಃ ಪರಿವೃತ್ಯ ತಿಷ್ಠಂತಿ । ಏಷ ಹಿ ವೈದ್ಯುತಾಗ್ನಿರೂಪೇಣ ಮೇಘೇ ವರ್ತಮಾನಃ ಅಸ್ಮಾನಜೀಜನದಿತಿ ಬುದ್ಧ್ಯಾ ಬಡಬಾನಲರೂಪೇಣ ವರ್ತಮಾನಂ ತಂ ಪರ್ಯುಪಾಸತ ಇತ್ಯರ್ಥಃ ।** ಈ ಅಪಾಂನಪಾತ್ ಎಂಬ ದೇವನು ಪರಿಶುದ್ಧನಾಗಿಯೂ ಕಾಂತಿಯಿಂದ ಬೆಳಗುವವನಾಗಿಯೂ ಇರುವನು. ಈ ದೇವನು ವೈದ್ಯುತಾಗ್ನಿಯ ರೂಪವಾದ ಮೇಘದಲ್ಲಿ ಇರುವವನಾದುದರಿಂದ ಉದಕರೂಪದಿಂದ ಇರುವ ನಮ್ಮನ್ನು ಸೃಷ್ಟಿಮಾಡಿರುವನು ಎಂದು ತಿಳಿದು ಸಮುದ್ರಮಧ್ಯದಲ್ಲಿ ಬಡಬಾಗ್ನಿಯ ರೂಪದಿಂದಲೂ ಇರುವ ಈ ದೇವನನ್ನು ಉದಕಗಳು ಇವನ ಸುತ್ತಲೂ ವ್ಯಾಪಿಸಿ ಇವನನ್ನು ಸೇವಿಸುತ್ತವೆ ಎಂದು ಒಂದು ವಿಧವಾದ ಅರ್ಥವನ್ನು ವರ್ಣಿಸಿದೆ ಎರಡನೆಯದಾಗಿ,

**ಯದ್ವಾ ಅನ್ಯಾ ಏಕಧನಾಖ್ಯಾ ಆಪಃ ಸಂಯಂತಿ ಚಾತ್ವಾಲೋತ್ಕರಯೋರ್ಮಧ್ಯೇ ವಸತೀ ವರೀಭಿಃ ಸಂಗಚ್ಛಂತೇ । ಅನ್ಯಾ ವಸತೀವರ್ಯಾಖ್ಯಾ ಆಪಶ್ಚೋಪಯಂತಿ ಉಪಗಚ್ಛಂತಿ । ಐಕಮತ್ಯಂ ಪ್ರಾಪ್ತಾ ಭವಂತಿ । ಏತಾಶ್ಚ ಮಿಲಿತ್ವಾ ಯಜ್ಞಂ ಸಾಧಯಂತ್ಯಃ ತತ್ಸಾಧ್ಯವೃಷ್ಟಿದ್ವಾರಾ ನದ್ಯೋ ಭೂತ್ವಾ ಊರ್ವಂ ಪ್ರೀಣಂತಿ । ಏವಂ ಹಿ ಆಪೋ ವಾ ಅಸ್ಪರ್ಧಂತ ವಯಂ ಪೂರ್ವಂ ಯಜ್ಞಂ ವಕ್ಷ್ಯಾಮಃ (ಐ. ಬ್ರಾ. ೨-೨೦) ಇತ್ಯಾದಿ ಬ್ರಾಹ್ಮಣವಿನಿಯೋಗ ಅನುಗೃಹ್ಯತೇ ।**

ಎರಡನೆಯ ಅರ್ಥದಲ್ಲಿ—ಯಾಗಗಳಲ್ಲಿ ಕರ್ಮಗಳಲ್ಲಿ ಉಪಯೋಗಿಸುವ ಉದಕಗಳ ಪೈಕಿ ಏಕಧನ ಎಂದು ಹೆಸರಿನಿಂದ ಪ್ರಸಿದ್ಧವಾದ ಉದಕಗಳು ಹರಿಯುತ್ತಿರುತ್ತದೆ. ಯಾಗಶಾಲೆಯಲ್ಲಿ ಚಾತ್ವಾಲವೆಂಬ ಪ್ರದೇಶಕ್ಕೂ ಉತ್ಕರವೆಂಬ ಪ್ರದೇಶಕ್ಕೂ ಮಧ್ಯಪ್ರದೇಶದಲ್ಲಿ ವಸತೀವರೀ ಎಂಬ ಉದಕಗಳೊಡನೆ (ಇನ್ನು ಕೆಲವು ಉದಕಗಳು) ಸೇರುತ್ತವೆ ಹೀಗೆ ಈ ಉದಕಗಳೆಲ್ಲವೂ ಒಟ್ಟಾಗಿ ಸೇರುತ್ತವೆ, ಇವೆಲ್ಲವೂ ಸೇರಿ ಯಜ್ಞಕರ್ಮವನ್ನು ಸಂಪೂರ್ಣಗೊಳಿಸುತ್ತವೆ. ಯಜ್ಞದಿಂದ ಸಾಧಿಸಬೇಕಾದ ವೃಷ್ಟಿಯು ಆದ ನಂತರ ನದಿಗಳ ರೂಪದಿಂದ ಉದಕಗಳು ಪ್ರವಹಿಸಿ ಸಮುದ್ರಮಧ್ಯದಲ್ಲಿರುವ ಬಡಬಾಗ್ನಿಯನ್ನು ಸೇವಿಸುತ್ತವೆ. ಎಂದು ಐತರೇಯ ಬ್ರಾಹ್ಮಣದಲ್ಲಿ ಹೇಳಿರುವ ವಾಕ್ಯವನ್ನು ಅನುಸರಿಸಿ ಅರ್ಥವು ವಿವೃತವಾಗಿದೆ.

॥ ಸಂಹಿತಾಪಾಠಃ ॥

ತಮಸ್ಮೇರಾ ಯುವತಯೋ ಯುವಾನಂ ಮರ್ಮೃಜ್ಯಮಾನಾಃ ಪರಿ ಯಂತ್ಯಾಪಃ ।
ಸ ಶುಕ್ರೇಭಿಃ ಶಿಕ್ವಭೀ ರೇವದಸ್ಮೇ ದೀದಾಯಾನಿಧ್ಮೋ ಘೃತನಿರ್ಣಿಗಪ್ಸು ॥ ೪ ॥

॥ ಪದಪಾಠಃ ॥

ತಂ ಅಸ್ಮೇರಾಃ । ಯುವತಯಃ । ಯುವಾನಂ । ಮರ್ಮೃಜ್ಯಮಾನಾಃ । ಪರಿ । ಯಂತಿ । ಆಪಃ ।
ಸಃ । ಶುಕ್ರೇಭಿಃ । ಶಿಕ್ವಽಭಿಃ । ರೇವತ್ ಅಸ್ಮೇ ಇತಿ ದೀದಾಯ । ಅನಿಧ್ಮಃ । ಘೃತಽನಿರ್ಣಿಕ್ । ಅಪ್ಽಸು ॥

॥ ಸಾಯಣಭಾಷ್ಯಂ ॥

ತಮಪಾಂ ನಪಾತಮಗ್ನಿಮಸ್ಮೇರಾ ಅಸ್ಮಯಮಾನಾ ದರ್ಪರಹಿತಾ ಯುವತಯೋ ಯುವಾನಂ ಯುವರಾಜಮಿವ ಮರ್ಮೃಜ್ಯಮಾನಾ ಅತ್ಯರ್ಥಮಲಂಕುರ್ವಾಣಾ ಆಪಃ ॥ ಮೃಜೂ ಶೌಚಾಲಂಕಾರಯೋಃ ॥ ಪರಿ ಯಂತಿ । ಪರಿತೋ ಗಚ್ಛಂತಿ ಪ್ರಾಪ್ನುವಂತಿ । ಘೃತನಿರ್ಣಿಕ್ ಕ್ಷರಣಶೀಲೋದಕನಿರ್ಣೇಜನಃ । ಯದ್ವಾ ನಿರ್ಣಿಗಿತಿ ರೂಪನಾಮ । ದೀಪ್ತರೂಪಃ ಸೋಽಪಾಂ ನಪಾದಗ್ನಿರಪ್ಸು ಮೇಘಾಂತರ್ಗತಾಸು ಸಮುದ್ರಗತಾಸು ವಾ ಮಧ್ಯೇಽನಿಧ್ಮ ಇಂಧನರಹಿತ ಏವ ಸನ್ ಅಸ್ಮೇ ಅಸ್ಮಾಕಂ ರೇವದ್ಧನಯುಕ್ತಮನ್ನಂ ಯಥಾ ಭವತಿ ತಥಾ ಶುಕ್ರೇಭಿಃ ಶುಭ್ರೈರ್ನಿರ್ಮಲೈಃ ಶಿಕ್ವಭಿಸ್ತೇಜೋಭಿರ್ದೀದಾಯ । ದೀಪ್ಯತೇ ॥

॥ ಪ್ರತಿಪದಾರ್ಥ ॥

**ಅಸ್ಮೇರಾಃ**—ಲಜ್ಜಾವತಿಯರಾದ । **ಯುವತಯಃ**—ತರುಣಿಯರು । **ಯುವಾನಂ**—ತರುಣರಾದ ಪುರುಷನನ್ನು । **ಮರ್ಮೃಜ್ಯಮಾನಾಃ**—ಸುತ್ತುವರಿದು ಅಲಂಕರಿಸುವಂತೆ । **ಆಪಃ**—ಉದಕಗಳು । **ತಂ**—ಅಪಾಂ ನಪಾತ್ ಸಂಜ್ಞನಾದ ಅಗ್ನಿಯನ್ನು । **ಪರಿ ಯಂತಿ**—ಸುತ್ತುವರಿದು ಉಪಚರಿಸುತ್ತವೆ । **ಘೃತನಿರ್ಣಿಕ್**—ಆಜ್ಯದಿಂದ ಶುದ್ಧವಾದ ರೂಪವುಳ್ಳ । **ಸಃ**—ಆ ಅಗ್ನಿಯು । **ಅಪ್ಸು**—ಉದಕಗಳ ಮಧ್ಯದಲ್ಲಿ । **ಅನಿಧ್ಮಃ**—ಇಂಧನರಹಿತನಾಗಿಯೇ ಇದ್ದು । **ಅಸ್ಮೇ**—ನಮಗೆ । **ರೇವತ್**—ಧನಯುಕ್ತವಾದ ಅನ್ನವು ಲಭಿಸುವಂತೆ । **ಶುಕ್ರೇಭಿಃ**—ಶುಭ್ರವಾದ । **ಶಿಕ್ವಭಿಃ**—ತೇಜಸ್ಸುಗಳಿಂದ । **ದೀದಾಯ**—ಪ್ರಕಾಶಿಸುತ್ತಾನೆ.

॥ ಭಾವಾರ್ಥ ॥

ಲಜ್ಜಾವತಿಯರಾದ ತರುಣಿಯರು ತರುಣನಾದ ಪುರುಷನನ್ನು ಸುತ್ತುವರಿದು ಅಲಂಕರಿಸುವಂತೆ ಉದಕಗಳು ಅಪಾಂ ನಪಾತ್ ಸಂಜ್ಞಕನಾದ ಅಗ್ನಿಯನ್ನು ಸುತ್ತುವರಿದು ಉಪಚರಿಸುತ್ತವೆ. ಆಜ್ಯದಿಂದ ಶುದ್ಧವಾದ ರೂಪವುಳ್ಳ ಆ ಅಗ್ನಿಯು ಉದಕಗಳ ಮಧ್ಯದಲ್ಲಿ ಇಂಧನರಹಿತನಾಗಿಯೇ ಇದ್ದು ಧನಯುಕ್ತವಾದ ಅನ್ನವು ನಮಗೆ ಲಭಿಸುವ ರೀತಿಯಲ್ಲಿ ಶುಭ್ರವಾದ ತೇಜಸ್ಸುಗಳಿಂದ ಪ್ರಕಾಶಿಸುತ್ತಾನೆ.

English Translation.

The young and modest (waters) wait upon the youth, assiduous in bathing him, and he, although unfed with fuel, yet cleansed with clarified butter, shines with bright rays amidst the waters, that abundanee (may be) to us.

ವಿಶೇಷವಿಷಯಗಳು.

**ತಂ ಆಪಃ ಅಸ್ಮೇರಾಃ ಯುವತಯಃ ಯುವಾನಂ ಮರ್ಮೃಜ್ಯಮಾನಾಃ ಪರಿ ಯಂತಿ— ಅಪಾಂನಪಾತಮಗ್ನಿಂ ಅಸ್ಮಯಮಾನಾಃ ದರ್ಪರಹಿತಾಃ ಯುವತಯಃ ಯುವಾನಾಂ ಯುವರಾಜಮಿವ ಅತ್ಯರ್ಥಮಲಂಕುರ್ವಾಣಾಃ ಆಪಃ ಪರಿತಃ ಪ್ರಾಪ್ನುವಂತಿ ।** ಯೌವನದಿಂದ ಇರುವ ಸ್ತ್ರೀಯರು ಗರ್ವ ಸಿಲ್ಲದವರಾಗಿ ಯೌವನಸ್ಥನಾಗಿರುವ ಯುವರಾಜನನ್ನು ಸೇವಿಸುವ ಹಾಗೆ ಸಮುದ್ರವನ್ನು ಸೇರುವ ನದಿಗಳ ಉದಕಗಳು ಅಪಾಂನಪಾತ್ ಎಂಬ ಅಗ್ನಿಯನ್ನು ಬಹಳವಾಗಿ ಉಪಚರಿಸಿ ಸೇವಿಸುತ್ತವೆ. ಎಂದು ಅರ್ಥವನ್ನು

**ಸಃ ಅಪ್ಸು ಅನಿಧ್ಮಃ—ಅಪಾಂ ನಪಾದಗ್ನಿಃ ಮೇಘಾಂತರ್ಗತಾಸು ಸಮುದ್ರಗತಾಸು ವಾಮಧ್ಯೇ ವಾ ಇಂಧನರಹಿತಃ—**ಅಪಾಂನಪಾತ್ ಎಂಬ ಅಗ್ನಿಯು ಮೇಘಗಳ ಮಧ್ಯದಲ್ಲಿರುವ ಅಥವಾ ಸಮುದ್ರಗತವಾದ ಉದಕಗಳ ಮಧ್ಯದಲ್ಲಿ ಜ್ವಲಿಸಲು ಯಾವ ಸಾಧನವೂ ಇಲ್ಲದಿರುವನು ಎಂದರೆ ಉದಕವನ್ನೇ ಇಂಧನವನ್ನಾಗಿ ಹೊಂದಿರುವನು ಎಂದೂ, **ಅಸ್ಮೇ ರೇವತ್ ಶುಕ್ರೇಭಿಃ ಶಿಕ್ವಭಿಃ ದೀದಾಯ—ಅಸ್ಮಾಕಂ ಧನಯುಕ್ತಂ ಅನ್ನಂ ಯಥಾ ಭವತಿ ತಥಾ ಶುಭ್ರೈಃ ನಿರ್ಮಲೈಃ ತೇಜೋಭಿಃ ದೀಪ್ಯತೇ ।** ಈ ಅಗ್ನಿಯು ಯಜಮಾನರಾದ ನಮಗೆ ಧನಗಳಿಂದ ಯುಕ್ತವಾಗಿರುವ ಅನ್ನವನ್ನು ಅನುಗ್ರಹಿಸುವವನಾಗಿ ಪರಿಶುದ್ಧವಾದ ಮತ್ತು ಶುಭ್ರವಾದ ತೇಜಸ್ಸುಗಳಿಂದ ಪ್ರಕಾಶಿಸುವನೆಂದೂ ವರ್ಣಿಸಿದೆ.

॥ ಸಂಹಿತಾಪಾಠಃ ॥

ಅಸ್ಮೈ ತಿಸ್ರೋ ಅವ್ಯಥ್ಯಾಯ ನಾರೀರ್ದೇವಾಯ ದೇವೀರ್ದಿಧಿಷಂತ್ಯನ್ನಂ ।
ಕೃತಾ ಇವೋಪ ಹಿ ಪ್ರಸರ್ಸ್ರೇ ಅಪ್ಸು ಸ ಪೀಯೂಷಂ ಧಯತಿ ಪೂರ್ವಸೂನಾಂ॥

॥ ಪದಪಾಠಃ ॥

ಅಸ್ಮೈ । ತಿಸ್ರಃ । ಅವ್ಯಥ್ಯಾಯ । ನಾರೀಃ । ದೇವಾಯ । ದೇವೀಃ । ದಿಧಿಷಂತಿ । ಅನ್ನಂ ।
ಕೃತಾಃऽಇವ । ಉಪ । ಹಿ । ಪ್ರऽಸಸ್ರೇ । ಅಪ್ऽಸು । ಸಃ । ಪೀಯೂಷಂ । ಧಯತಿ । ಪೂರ್ವऽಸೂನಾಂ॥೫॥

॥ ಸಾಯಣಭಾಷ್ಯಂ ॥

ನಾರೀರ್ನೇತ್ರ್ಯಸ್ತಿಸ್ರೋ ದೇವೀರ್ದೇವ್ಯ ಇಳಾಸರಸ್ವತೀಭಾರತ್ಯಾಖ್ಯಾ ಅವ್ಯಥ್ಯಾಯಾವ್ಯಥನಾಯಾಸ್ಮೈ ದೇವಾಯಾಪಾಂ ನಪಾತ್ರೇಽನ್ನಂ ಸೋಮಾಖ್ಯಂ ದಿಧಿಷಂತಿ । ಧಾರಯಂತಿ ॥ ಧಿಷ ಶಬ್ದೇ ಜೌಹೋತ್ಯಾದಿಕಃ । ವ್ಯತ್ಯಯೇನಾಂತ್ಯಾದೇಶಃ । ಧಾತೂನಾಮನೇಕಾರ್ಥತ್ವಾದತ್ರ ಧಾರಣಾರ್ಥಃ ॥ ಅಪ್ಸೂದಕೇಷು ಕೃತಾ ಇವೋಪಪ್ರಸಸ್ರೇ । ಪ್ರಸರಂತಿ ॥ ಸೃ ಗತೌ । ಲಿಟೀರಯೋ ರೇ ಇತಿ ರೇಆದೇಶಃ। ಛಾಂದಸೋ ಹಲಾದಿಶೇಷಾಭಾವಃ ॥ ಯಸ್ಮಾದೇವಂ ತಸ್ಮಾತ್ಪೂರ್ವಸೂನಾಂ ಪೂರ್ವಂ ಬ್ರಹ್ಮಣಃ ಸಕಾಶಾದುತ್ಪನ್ನಾನಾಮಪಾಂ ಪೀಯೂಷಂ ಸಾರಭೂತಂ ಸೋಮಾಖ್ಯಮಮೃತಂ ಸೋಽಪಾಂನಪಾದಗ್ನಿರ್ಧಯತಿ । ಪಿಬತಿ ॥

॥ ಪ್ರತಿಪದಾರ್ಥ ॥

**ದೇವೀಃ**—ದೇವತಾತ್ಮರಾದ । **ತಿಸ್ರಃ ನಾರೀಃ**—ಇಳಾ, ಸರಸ್ವತೀ ಮತ್ತು ಭಾರತೀ ಎಂಬ ಮೂರು ಜನ ಸ್ತ್ರೀಯರು **ಅವ್ಯಥ್ಯಾಯ**—ಅಹಿಂಸಿತನಾದ । **ಅಸ್ಮೈ ದೇವಾಯ**—ಅಪಾಂ ನಪಾತ್ ಎಂಬ ಈ ಅಗ್ನಿಗೆ । **ಅನ್ನಂ**—ಸೋಮರೂಪವಾದ ಅನ್ನವನ್ನು **ದಿಧಿಷಂತಿ**—ವಹಿಸಿಕೊಂಡು ಹೋಗಿ ಅರ್ಪಿಸುತ್ತಾರೆ । **ಅಪ್ಸು**—ಉದಕಗಳಲ್ಲಿಯೇ **ಕೃತಾ ಇವ**—ನಿರ್ಮಿತರಾದಂತೆ । **ಉಪ ಪ್ರಸಸ್ರೇ**—ಅವರು ಪ್ರಸರಿಸಿ ಹರಡುತ್ತಾರೆ। **ಪೂರ್ವಸೂನಾಂ**--ಹಿಂದೆ ಬ್ರಹ್ಮನಿಂದಲೇ ಉತ್ಪನ್ನವಾದ ಉದಕಗಳ **ಪೀಯೂಷಂ**—ಸಾರಭೂತವೂ ಸೋಮರೂಪವೂ ಆದ ಅಮೃತವನ್ನು । **ಸಃ**—ಅಪಾಂ ನಪಾತ್ ಸಂಜ್ಞಕನಾದ ಅಗ್ನಿಯು । **ಧಯತಿ**—ಪಾನಮಾಡುತ್ತಾನೆ.

॥ ಭಾವಾರ್ಥ ॥

ದೇವತಾತ್ಮರಾದ ಇಳಾ, ಸರಸ್ವತೀ ಮತ್ತು ಭಾರತೀ ಎಂಬ ಮೂರುಜನ ಸ್ತ್ರೀಯರು ಅಹಿಂಸಿತನಾದ ಅಪಾಂ ನಪಾತ್ ಸಂಜ್ಞಕನಾದ ಈ ಅಗ್ನಿಗೆ ಸೋಮರೂಪವಾದ ಅನ್ನವನ್ನು ವಹಿಸಿಕೊಂಡು ಹೋಗಿ ಅರ್ಪಿಸುತ್ತಾರೆ. ಉದಕಗಳಲ್ಲಿಯೇ ನಿರ್ಮಿತರಾದಂತೆ ಅವರು ಪ್ರಸರಿಸಿ ಹರಡುತ್ತಾರೆ. ಹಿಂದೆ ಬ್ರಹ್ಮನಿಂದಲೇ ಉತ್ಪನ್ನವಾದ ಉದಕಗಳ ಸಾರಭೂತವೂ, ಸೋಮರೂಪವೂ ಆದ ಅಮೃತವನ್ನು ಈ ಅಗ್ನಿಯು ಪಾನಮಾಡುತ್ತಾನೆ.

English Translation.

Three divine females present food to that uninjuiable divinity ; as if formed in the waters they spread abroad, and he drinks the ambrosia of the first-created (element).

॥ ವಿಶೇಷವಿಷಯಗಳು ॥

**ನಾರೀಃ ತಿಸ್ರಃ ದೇವೀಃ ಅವ್ಯಥ್ಯಾಯ ಅಸ್ಮೈ ದೇವಾಯ ಅನ್ನಂ ದಿಧಿಷಂತಿ— ನೇತ್ರ್ಯಃ ಇಳಾಸರಸ್ವತೀಭಾರತ್ಯಾಖ್ಯಾಃ ತಿಸ್ರಃ ದೇವ್ಯಃ ಅಪಾಂನಪಾತೇ ಸೋಮಾಖ್ಯಂ ಅನ್ನಂ ಧಾರಯಂತಿ** । ಇಲ್ಲಿ ಅನ್ನ ಶಬ್ದಕ್ಕೆ ಸೋಮವೆಂದು ಅರ್ಥವನ್ನು ವಿವರಿಸಿದೆ. ಲೋಕವನ್ನು ನಿಯಮನಮಾಡುತ್ತಿರುವ ಎಂದರೆ ಲೋಕನಿಯಾಮಕರಾದ ಇಳಾ, ಸರಸ್ವತೀ ಭಾರತೀದೇವಿಯರು ಮೂರು ಜನರೂ **ಅಪಾಂ ನಪಾತ್** ದೇವನಿಗಾಗಿ ಸೋಮವೆಂಬ

ಅನ್ನವನ್ನು ಧರಿಸಿಕೊಂಡು ಸೇವಿಸುತ್ತಿರುವರು ಎಂದೂ, **ಅಪ್ಸು ಕೃತಾ ಇವ** ಈ ಸೋಮವು ಉದಕಗಳಲ್ಲಿಯೇ ಸೃಷ್ಟವಾಗಿರುವುದು ಎನ್ನುವ ಹಾಗೆ ಪ್ರಭೂತವಾಗಿ ಈ ದೇವಿಯರು ಸೋಮವನ್ನು ಈ ದೇವನಿಗಾಗಿ ಅರ್ಪಿಸುವರು. ಆದುದರಿಂದಲೇ ಈ ದೇವನು **ಪೂರ್ವಸೂನಾಂ ಪೀಯೂಷಂ**—ಬ್ರಹ್ಮನಿಂದ ಮೊದಲು (ಸೃಷ್ಟವಾದವುಗಳಲ್ಲಿ) ಉತ್ಪತ್ತಿಯನ್ನು ಹೊಂದಿದ ಉದಕಗಳ ಸಾರವಾದ ಸೋಮ ಎಂದು ಹೆಸರುಳ್ಳ ಅಮೃತವನ್ನು ಅಪಾಂನಪಾತ್ ದೇವನು ಪಾನಮಾಡುತ್ತಾನೆ ಎಂದೂ ವರ್ಣಿಸಿ ಇಳಾ, ಭಾರತೀ, ಸರಸ್ವತೀದೇವಿಯರೂ ಸೇವಿಸತಕ್ಕ ಮಹಿಮೆಯುಳ್ಳವನೆಂದು ಈ ದೇವನ ಮಹಿಮೆಯನ್ನೂ ಸೋಮದ ಪ್ರಾಶಸ್ತ್ಯವನ್ನೂ ವರ್ಣಿಸಿದೆ.

ಯಾಸ್ಕರು **ತಿಸ್ರೋಃ ದೇವೀಃ**—**ತಿಸ್ರಃ ದೇವ್ಯಃ** ಎಂದು ವ್ಯಾಖ್ಯಾನಮಾಡಿ,

**ಆ ನೋ ಯಜ್ಞಂ ಭಾರತೀ ತೂಯಮೇತ್ವಿಳಾ ಮನುಷ್ವದಿಹ ಚೇತಯಂತೀ।**
**ತಿಸ್ರೋ ದೇವೀರ್ಬರ್ಹಿರೇದಂ ಸ್ಯೋನಂ ಸರಸ್ವತೀ ಸ್ವಪಸಃ ಸದಂತು ॥**

(ಋ. ಸಂ. ೧೦-೧೧೦-೮)

ಈ ಋಕ್ಕನ್ನು ಉದಹರಿಸಿ,

**ಏತು ನೋ ಭಾರತೀ ಯಜ್ಞಂ ಕ್ಷಿಪ್ರಂ। ಭರತ ಆದಿತ್ಯಸ್ತಸ್ಯ ಭಾ ಇಳಾ ಚ ಮನುಷ್ಯವದಿಹ ಚೇತಯಮಾನಾ ತಿಸ್ರೋ ದೇವ್ಯೋ ಬರ್ಹಿರಿದಂ ಸುಖಂ ಸರಸ್ವತೀ ಚ ಸುಕರ್ಮಾಣ ಆಸೀದಂತು।** ನಿ. ೮-೧೩) ಸಕಲ ಪ್ರಾಣಿಗಳನ್ನು ಉದಕಗಳಿಂದ ಪೋಷಿಸುವ ಆದಿತ್ಯನ ಕಾಂತಿರೂಪವಾದ ಭಾರತೀದೇವಿಯೂ, ಇಳಾ ಎಂದು ಪ್ರಸಿದ್ಧವಾದ ಪೃಥಿವಿಸ್ಥಾನದೇವತೆಯೂ, ಸರಸ್ವತೀ ಎಂಬ ಮಧ್ಯಮಸ್ಥಾನದೇವತೆಯೂ ಕೂಡ ಯಜಮಾನರ ಯಜ್ಞಕರ್ಮಗಳಲ್ಲಿ ಮನುಷ್ಯರಂತೆ ಆಹೂತರಾಗಿ ಯಜಮಾನರು ಅರ್ಪಿಸಿದ ಹವಿಸ್ಸುಗಳನ್ನು ಸ್ವೀಕರಿಸಲು ಯಾಗಶಾಲೆಯಲ್ಲಿರುವ ಬರ್ಹಿಸ್ಸಿನ ಪ್ರದೇಶದಲ್ಲಿ ಉಪವಿಷ್ಟರಾಗಲಿ ಎಂದು ಅರ್ಥವನ್ನು ವಿವರಿಸಿದ್ದಾರೆ.



॥ ಸಂಹಿತಾಪಾಠಃ ॥

ಅಶ್ವಸ್ಯಾತ್ರ ಜನಿಮಾಸ್ಯ ಚ ಸ್ವರ್ದ್ರುಹೋ ರಿಷಃ ಸಂಪೃಚಃ ಪಾಹಿ ಸೂರೀನ್
ಆಮಾಸು ಪೂರ್ಷು ಪರೋ ಅಪ್ರಮೃಷ್ಯಂ ನಾರಾತಯೋ ವಿ ನಶನ್ನಾನೃತಾನಿ

॥ ಪದಪಾಠಃ ॥

ಅಶ್ವಸ್ಯ । ಅತ್ರ । ಜನಿಮ । ಅಸ್ಯ । ಚ । ಸ್ವಃ । ದ್ರುಹಃ । ರಿಷಃ । ಸಂಽಪೃಚಃ । ಪಾಹಿ । ಸೂರೀನ್ ।
ಆಮಾಸು । ಪೂರ್ಷು । ಪರಃ । ಅಪ್ರಽಮೃಷ್ಯಂ । ನ । ಅರಾತಯಃ । ವಿ । ನಶನ್ । ನ । ಅನೃತಾನಿ ॥ ೬

॥ ಸಾಯಣಭಾಷ್ಯಂ ॥

ಅತ್ರಾಸ್ಮಿನ್ನಪಾಂನಪಾತ್ಸಂಜ್ಞಕೇ ದೇವೇಽಶ್ವಸ್ಯ ಜನಿಮ ಜನ್ಮ ಭವತಿ । ಅಪಾಂನಪ್ತ್ರಧಿಷ್ಠಿತಾತ್ಸಮುದ್ರಾದುಚ್ಚೈಃಶ್ರವಸೋ ಜಾತತ್ವಾತ್ । ಕಿಂ ಬಹುನಾ । ಅಸ್ಯ ಚ ಸ್ವಃ ಸುಷ್ಠ್ವರಣೀಯಸ್ಯ ಸರ್ವಸ್ಯ ಜಗತೋ ಜನ್ಮಾಸ್ಮಿನ್ನೇವ ಭವತಿ । ಅಯಂ ಹಿ ಮೇಘಮಧ್ಯೇ ವರ್ತಮಾನೋ ವೃಷ್ಟಿದ್ವಾರೇಣ ಸರ್ವಂ ಜಗಜ್ಜನಯತಿ । ತಾದೃಶೋಽಪಾಂನಪಾತ್ತ್ವಂ ದ್ರುಹೋ ದ್ರೋಗ್ಧುರಪಹರ್ತುರ್ ರಿಷೋ ಹಿಂಸಕಸ್ಯ ಚ ಸಂಪೃಚಃ ಸಂಪರ್ಕಾತ್ಸೂರೀನ್ ಸ್ತೋತೄನಸ್ಮಾನ್ಪಾಹಿ । ರಕ್ಷ । ಆಮಾಸ್ವಪರಿಪಕ್ವಾಸು ಪೂರ್ಷು ಪೂರಯಿತವ್ಯಾಸ್ವಪ್ಸು ಪರಃ ಪರಸ್ತಾದ್ವರ್ತಮಾನಮಪ್ರಮೃಷ್ಯಮಪ್ರಧೃಷ್ಯಮಾಣಂ ದೇವಮರಾತಯೋಽದಾತಾರಃ ಪುರುಷಾ ನ ವಿನಶನ್ । ನ ಪ್ರಾಪ್ನುವಂತಿ ॥ ನಶತಿರ್ವ್ಯಾಪ್ತಿಕರ್ಮಾ । ಲೇಟ್ಯಡಾಗಮಃ ॥ ಅನೃತಾನಿ ಮಾಯಾವಿನೋ ರಕ್ಷಾಂಸಿ ಚ ನ ಪ್ರಾಪ್ನುವಂತಿ ॥

॥ ಪ್ರತಿಪದಾರ್ಥ ॥

**ಅಶ್ವಸ್ಯ**—ಉಚ್ಚೈಃಶ್ರವಸ್ಸೆಂಬ ಅಶ್ವದ , **ಜನಿಮ**—ಉತ್ಪತ್ತಿಯು ; **ಅತ್ರ**—ಈ ಅಗ್ನಿಯಲ್ಲಿಯೇ ಆಗಿದೆ ; **ಅಸ್ಯ ಚ ಸ್ವಃ**—ಜಂಗಮಾತ್ಮಕವಾದ ಸಕಲ ಜಗತ್ತಿನ ಉತ್ಪತ್ತಿಯೂ ಅಪಾಂ ನಪಾತ್ ಸಂಜ್ಞಕನಾದ ಈ ಅಗ್ನಿಯಲ್ಲಿಯೇ ಆಗಿದೆ । **ದ್ರುಹಃ**—ದ್ರೋಹವನ್ನು ಆಚರಿಸುವವನೂ , **ರಿಷಃ**—ಹಿಂಸಕನೂ ಆದ ಶತ್ರುವಿನ । **ಸಂಪೃಚಃ**—ಸಂಪರ್ಕದಿಂದ । **ಸೂರೀನ್**—ಸ್ತೋತೃಗಳಾದ ನಮ್ಮನ್ನು । **ಪಾಹಿ**—ರಕ್ಷಿಸು **ಆಮಾಸು**—ಪರಿಪಕ್ವವಾಗಿಲ್ಲದಿರುವುವೂ. **ಪೂರ್ಷು**—ಪೂರ್ಣವಾಗಿಲ್ಲದಿರುವುವೂ ಆದ ಉದಕಗಳಲ್ಲಿ ; **ಪರಃ**—ಉತ್ತಮವಾದ ಸ್ಥಾನದಲ್ಲಿರುವವನೂ । **ಅಪ್ರಮೃಷ್ಯಂ**—ಅಪ್ರತಿಹತನೂ ಆದ ಈ ಅಗ್ನಿಯನ್ನು । **ಅರಾತಯಃ**—ಕರ್ಮಭ್ರಷ್ಟರಾದ ಮಾನವರು । **ನ ವಿ ನಶನ್**—ಸಮೀಪಿಸಲಾರರು ; **ಅನೃತಾನಿ**—ಅಸತ್ಯಾತ್ಮಕವಾದ ಅಸುರರೂ ಸಹ **ನ**—ಸಮೀಪಿಸಲಾರರು.

॥ ಭಾವಾರ್ಥ ॥

ಉಚ್ಚೈಃಶ್ರವಸ್ಸೆಂಬ ಅಶ್ವದ ಉತ್ಪತ್ತಿಯು ಅಪಾಂನಪಾತ್ ಸಂಜ್ಞಕನಾದ ಈ ಅಗ್ನಿಯಲ್ಲಿಯೇ ಆಗಿದೆ. ಜಂಗಮಾತ್ಮಕವಾದ ಸಕಲ ಜಗತ್ತಿನ ಉತ್ಪತ್ತಿಯೂ ಈ ಅಗ್ನಿಯಲ್ಲಿಯೇ ಆಗಿದೆ ಎಲೈ ಅಗ್ನಿಯೇ, ದ್ರೋಹವನ್ನಾಚರಿಸುವವನೂ, ಹಿಂಸಕನೂ ಆದ ಶತ್ರುವಿನ ಸಂಪರ್ಕದಿಂದ ಸ್ತೋತೃಗಳಾದ ನಮ್ಮನ್ನು ರಕ್ಷಿಸು. ಪರಿಪಕ್ವವಿಲ್ಲದಿರುವವೂ, ಪೂರ್ಣವಾಗಿಲ್ಲದಿರುವುವೂ ಆದ ಉದಕಗಳಲ್ಲಿ ಉತ್ತಮವಾದ ಸ್ಥಾನದಲ್ಲಿರುವವನೂ, ಅಪ್ರತಿಹನೂ ಆದ ಈ ಅಗ್ನಿಯನ್ನು ಕರ್ಮಭ್ರಷ್ಟರಾದ ಮಾನವರಾಗಲಿ, ಅಸತ್ಯಾತ್ಮಕವಾದ ಅಸುರರಾಗಲಿ ಸಮೀಪಿಸಲಾರರು.

English Translation.

In hin is the birth of the horse ; of him is (the origin of) the world : grandson of the (waters), protect the pious worshippers from the malevolence of the oppressor : those who give no offerings. those who practise untruths, attain not the inconceivable deity, wether abiding in the immature or the perfect waters.

॥ ವಿಶೇಷವಿಷಯಗಳು ॥

**ಅತ್ರ ಅಶ್ವಸ್ಯ ಜನಿಮ— ಅಪಾಂನಪಾತ್ಸಂಜ್ಞಕೇ ದೇವೇ ಅಶ್ವಸ್ಯ ಜನ್ಮ ಭವತಿ ।** ಈ ಅಪಾಂನಪಾತ್ ಎಂಬುದಾಗಿ ಹೆಸರಿನಿಂದ ಪ್ರಸಿದ್ಧನಾದ ದೇವನಿಂದಲೇ ಉಚ್ಚೈಃಶ್ರವಸ್ಸೆಂಬ ಉತ್ತಮವಾದ ಅಶ್ವದ ಉತ್ಪತ್ತಿಯು ಉಂಟಾಗುತ್ತದೆ. **ಅಸ್ಯ ಚ ಸ್ವಃ— ಸುಷ್ಠು ಅರಣೀಯಸ್ಯ ಸರ್ವಸ್ಯ ಜಗತಃ ಜನ್ಮ ಅಸ್ಮಿನ್ನೇವ ಭವತಿ ಅಯಂ ಹಿ ಮೇಘಮಧ್ಯೇ ವರ್ತಮಾನಃ ವೃಷ್ಟಿದ್ವಾರೇಣ ಸರ್ವಂ ಜಗತ್ ಜನಯತಿ ।** ಈ ದೇವನು ಮೇಘಗಳ ಮಧ್ಯದಲ್ಲಿರುವಾಗ ವೃಷ್ಟ್ಯುದಕಗಳನ್ನು ಸುರಿಸುವುದರ ಮೂಲಕವಾಗಿ ಜಂಗಮಾತ್ಮಕವಾಗಿರುವ ಈ ಜಗತ್ತೆಲ್ಲವೂ ಉತ್ಪನ್ನವಾಗುವಂತೆ ಮಾಡುವ ಮಹಿಮೆಯುಳ್ಳವನು ಎಂದು ಈ ದೇವನ ಮಹಿಮೆಯು ಉಕ್ತವಾಗಿದೆ. ಮತ್ತು **ದ್ರುಹಃ ರಿಷಃ ಸಂಪೃಚಃ ಸೂರೀನ್ ಪಾಹಿ—** ಈ ದೇವನ ಪ್ರಭಾವವನ್ನು ವಿವರಿಸಿ, ಈ ದೇವನನ್ನು ಸ್ತುತಿಮಾಡುವ ಯಜಮಾನರಾದ ಅಥವಾ ಋತ್ವಿಜರಾದ ನಮಗೆ ಹಿಂಸೆಯನ್ನು ಉಂಟುಮಾಡುವವರಿಂದ ಯಾವ ವಿಧವಾದ (ಸಂಸರ್ಗ) ಸಂಬಂಧವೂ ಉಂಟಾಗದಿರುವಂತೆ ನಮ್ಮನ್ನು ಈ ದೇವನು ರಕ್ಷಿಸಲಿ ಎಂದು ರಕ್ಷಣೆಯು ಪ್ರಾರ್ಥಿತವಾಗಿದೆ

**ಪೂರ್ಷು ಪರಃ ಅರಾತಯಃ ನ ವಿ ನಶನ್— ಪೂರಯಿತವ್ಯಾಸು ಅಪ್ಸು ಪರಸ್ತಾತ್ ವರ್ತಮಾನಂ ಅಪ್ರಧೃಷ್ಯಮಾಣಂ ದೇವಂ ಅದಾತಾರಃ ನ ಪ್ರಾಪ್ನುವಂತಿ ।** ಈ ದೇವನು ಉದಕಗಳು ಪ್ರಭೂತವಾಗಿ ಸಮುದ್ರದಲ್ಲಿ ತುಂಬುತ್ತಿರುವಾಗಲೂ ಆ ಉದಕಗಳಿಂದ ಪ್ರತ್ಯೇಕವಾಗಿ ಇರುವವನು ಮತ್ತು ಯಾರಿಂದಲೂ (ದರ್ಶನಮಾಡಲು) ತಿರಸ್ಕರಿಸಲಶಕ್ಯನಾದುದರಿಂದ ದಾನಮಾಡದಿರುವವರು ಯಾರೂ ಈ ದೇವನ ಸಮೀಪವನ್ನು ಹೊಂದಲಾರರು ಎಂದೂ, **ಅನೃತಾನಿ ನ** ವಂಚನೆಯನ್ನು ಮಾಡುವ ಕುಟಿಲಮಾರ್ಗವನ್ನು ಅವಲಂಬಿಸಿರುವವರು ಈ ದೇವನ ಸಮೀಪವನ್ನು ಹೊಂದುವುದಕ್ಕಾಗುವುದಿಲ್ಲ ಎಂದೂ ವರ್ಣಿಸಿದೆ.

**ಸೂರಿ** ಎಂಬ ಪದವು— **ಸ್ತೋತೃ** ನಾಮಗಳಲ್ಲಿ (ನಿ. ೩-೧೯) ಪಠಿತವಾಗಿದೆ. **ನಶತ್** ಎಂಬ ಪದವು ವ್ಯಾಪ್ತಿಕರ್ಮಗಳಲ್ಲಿ (ನಿ. ೩-೧೦) ಪಠಿತವಾಗಿದೆ. **ಸ್ವಃ** ಎಂಬ ಪದಕ್ಕೆ ಅನೇಕ ವಿಧವಾದ ಅರ್ಥಗಳು (ನಿ. ೨-೧೪) ಇದ್ದರೂ ಇಲ್ಲಿ **ಸುಷ್ಠು ಅರಣೀಯಸ್ಯ** ಎಂದು ಅರ್ಥವು ವಿವೃತವಾಗಿದೆ.

॥ ಸಂಹಿತಾಪಾಠಃ ॥

**ಸ್ವ ಆ ದಮೇ ಸುದುಘಾ ಯಸ್ಯ ಧೇನುಃ ಸ್ವಧಾಂ ಪೀಪಾಯ ಸುಭ್ವನ್ನಮತ್ತಿ ।**

**ಸೋ ಅಪಾಂ ನಪಾದೂರ್ಜಯನ್ನಪ್ಸ್ವ೧ನ್ತರ್ವಸುದೇಯಾಯ ವಿಧತೇ ವಿ ಭಾತಿ ॥**

॥ ಪದಪಾಠಃ ॥

**ಸ್ವೇ । ಆ । ದಮೇ । ಸುऽದುಘಾ । ಯಸ್ಯ । ಧೇನುಃ । ಸ್ವಧಾಂ । ಪೀಪಾಯ । ಸುऽಭು । ಅನ್ನಂ । ಅತ್ತಿ ।**

**ಸಃ । ಅಪಾಂ । ನಪಾತ್ । ಊರ್ಜಯನ್ । ಅಪ್ऽಸು । ಅಂತಃ । ವಸುऽದೇಯಾಯ । ವಿಧತೇ । ವಿ । ಭಾತಿ ॥ ೭ ॥**

॥ ಸಾಯಣಭಾಷ್ಯಂ ॥

ಯೋಽಪಾಂನಪಾತ್ ಸ್ವೇ ದಮೇ ಸ್ವಕೀಯೇ ಗೃಹೇಽನ್ತರಿಕ್ಷಲಕ್ಷಣ ಆಸೀದತಿ। ಯಸ್ಯ ಚ ಧೇನುರ್ಮಾಧ್ಯಮಿಕಾ ವಾಕ್ ಸುದುಘಾ ಸುಖೇನ ದೋಗ್ಧ್ವ್ಯಾ ಭವತಿ। ಸ ದೇವಃ ಸ್ವಧಾಂ ವೃಷ್ಟ್ಯುದಕಂ ಪೀಪಾಯ। ವರ್ಧಯತಿ॥ ಪ್ಯಾಯೀ ವೃದ್ಧೌ। ಲಿಡ್ಯಜೋಶ್ಚೇತಿ ಪೀಭಾವಃ॥ ಸುಭು ಸುಷ್ಠು ಭೂತಂ ವೃಷ್ಟೇಃ ಸಕಾಶಾದುತ್ಪನ್ನಂ ಹವಿರ್ಲಕ್ಷಣಮನ್ನಂ ಚಾತ್ತಿ। ಭಕ್ಷಯತಿ। ಸೋಽಪಾಂನಪಾತ್ಸಂಜ್ಞಕೋ ದೇವ ಊರ್ಜಯನ್ ಬಲಂ ಕುರ್ವನ್ ಅಪ್ಸ್ವಂತರ್ಮೇಘಸ್ಥಾಸ್ವಪ್ಸು ಮಧ್ಯೇ ವಿಧತೇ ಪರಿಚರತೇ ಯಜಮಾನಾಯ ವಸುದೇಯಾಯ ಧನದಾನಾರ್ಥಂ ವಿಭಾತಿ। ವಿಶೇಷೇಣ ದೀಪ್ಯತೇ॥

॥ ಪ್ರತಿಪದಾರ್ಥ ॥

**ಅಪಾಂ ನಪಾತ್**—ಅಪಾಂ ನಪಾತ್ ಸಂಜ್ಞಕನಾದ ಅಗ್ನಿಯು। **ಸ್ವೇ ದಮೇ**—ಅಂತರಿಕ್ಷರೂಪವಾದ ತನ್ನ ಗೃಹದಲ್ಲಿ। **ಆ (ಸೀದತಿ)**—ಸ್ಥಿತನಾಗಿದ್ದಾನೆ। **ಯಸ್ಯ**—ಯಾವ ಅಗ್ನಿಯ ಸಂಬಂಧಿಯಾದ। **ಧೇನುಃ**—ಮಾಧ್ಯಮಿಕಾ ವಾಕ್ಕೆಂಬ ಧೇನುವು। **ಸುದುಘಾ**—ಶ್ರೇಷ್ಠವಾಗಿ ಕರೆಯತಕ್ಕದ್ದಾಗಿದೆಯೋ। **ಸಃ**—ಆ ದೇವನು। **ಸ್ವಧಾಂ**—ವೃಷ್ಟಿರೂಪವಾದ ಉದಕವನ್ನು। **ಪೀಪಾಯ**—ವೃದ್ಧಿಪಡಿಸುತ್ತಾನೆ। **ಸುಭು**—ವೃಷ್ಟಿಯಿಂದ ಶ್ರೇಷ್ಠವಾದ ರೀತಿಯಲ್ಲಿ ಉತ್ಪನ್ನವಾದ **ಅನ್ನಂ**—ಹವಿಸ್ಸಿನ ರೂಪವಾದ ಅನ್ನವನ್ನು। **ಅತ್ತಿ**—ಭಕ್ಷಿಸುತ್ತಾನೆ। (ಮತ್ತು) **ಊರ್ಜಯನ್**—ಶಕ್ತಿಯನ್ನು ಪಡೆದು। **ಅಪ್ಸ್ವಂತಃ**—ಮೇಘಸ್ಥವಾದ ಉದಕಗಳ ಮಧ್ಯದಲ್ಲಿ। **ವಿಧತೇ**—ಪೂಜಕನಾದ ಯಜಮಾನನಿಗೆ **ವಸುದೇಯಾಯ**—ಧನವನ್ನು ದಾನಮಾಡುವುದಕ್ಕಾಗಿ। **ವಿ ಭಾತಿ**—ಅತಿಶಯವಾಗಿ ಪ್ರಕಾಶಿಸುತ್ತಾನೆ.

ಭಾವಾರ್ಥ

ಅಪಾಂ ನಪಾತ್ ಸಂಜ್ಞಕನಾದ ಅಗ್ನಿಯು ಅಂತರಿಕ್ಷರೂಪವಾದ ತನ್ನ ಗೃಹದಲ್ಲಿ ಕುಳಿತಿದ್ದಾನೆ. ಯಾವ ಅಗ್ನಿಯ ಸಂಬಂಧಿಯಾದ ಮಾಧ್ಯಮಿಕಾ ವಾಕ್ಕೆಂಬ ಧೇನುವು ಶ್ರೇಷ್ಠವಾಗಿ ಕರೆಯತಕ್ಕದ್ದಾಗಿದೆಯೋ ಆ ದೇವನು ವೃಷ್ಟಿರೂಪವಾದ ಉದಕವನ್ನು ವೃದ್ಧಿಪಡಿಸುತ್ತಾನೆ. ವೃಷ್ಟಿಯಿಂದ ಶ್ರೇಷ್ಠವಾದ ರೀತಿಯಲ್ಲಿ ಉತ್ಪನ್ನವಾದ ಹವಿಸ್ಸಿನ ರೂಪದ ಅನ್ನವನ್ನು ಭಕ್ಷಿಸುತ್ತಾನೆ. ಪೂಜಕನಾದ ಯಜಮಾನನಿಗೆ ಧನವನ್ನು ದಾನಮಾಡುವುದಕ್ಕಾಗಿ ತಾನು ಉತ್ತಮವಾದ ಶಕ್ತಿಯನ್ನು ಪಡೆದು ಮೇಘಸ್ಥವಾದ ಉದಕಗಳ ಮಧ್ಯದಲ್ಲಿ ಅತಿಶಯವಾಗಿ ಪ್ರಕಾಶಿಸುತ್ತಾನೆ.

English Translation.

He, the grandson of the waters, who abides in his own dwelling; of whom is the readily-milked cow; who augments the nectar (of the skies and thence) eats the sacrificial food: he, gatheing strength in the midst of the waters, shines for the sake of conferring wealth upon his worshipper.

॥ ವಿಶೇಷವಿಷಯಗಳು ॥

**ಅಪಾಂ ನಪಾತ್** ಎಂಬ ಈ ದೇವನು **ಸ್ವೇ ದಮೇ—ಸ್ವಕೀಯೇ ಅಂತರಿಕ್ಷಲಕ್ಷಣೇ** ಅಂತರಿಕ್ಷರೂಪವಾಗಿರುವ ತನ್ನ ಗೃಹದಲ್ಲಿ ವಾಸಮಾಡುತ್ತಿರುವನು ಎಂದೂ, **ಧೇನುಃ ಸುದುಘಾ**—ಈ ದೇವನ ಸಂಬಂಧಿಯಾದ ಮಾಧ್ಯಮಿಕಾವಾಕ್ಕೆಂಬ (ಸಾಮರ್ಥ್ಯವು) ಗೋವು ಎಲ್ಲರಿಂದಲೂ ಸುಖವನ್ನು ಉಂಟುಮಾಡುವುದಕ್ಕೆ ಕರೆಯಲ್ಪಡುವುದಾದ ಕಾರಣ ಸರ್ವರಿಗೂ ಉಪಕಾರವಾಗಿರುವುದೆಂದೂ, **ಸ್ವಧಾಂ ಪೀಪಾಯ** ಈ ದೇವನು (ಅನ್ನವನ್ನು) ವೃಷ್ಟ್ಯುದಕವನ್ನು (ಅಂತರಿಕ್ಷರೂಪವಾದ ಗೃಹದಲ್ಲಿರುವ ನಿಮಿತ್ತ) ವೃದ್ಧಿಗೊಳಿಸುವವನೆಂದೂ, ವರ್ಣಿಸಿ, ಈ ದೇವನು **ಸುಭ್ವ ಅನ್ನಂ ಚ ಅತ್ತಿ** ವೃಷ್ಟ್ಯುದಕಗಳಿಂದ ಅತಿಶಯವಾಗಿ ಉತ್ಪನ್ನವಾದ ಹವಿಸ್ಸಿನ ರೂಪದಿಂದ ಇರುವ ಅನ್ನವನ್ನು ಭಕ್ಷಿಸುವವನು ಎಂದೂ, **ಸಃ ದೇವಃ ಅಪ್ಸ್ವಂತಃ**—ಅಪಾಂ ನಪಾತ್ ದೇವನು ಮೇಘಗಳಲ್ಲಿರುವ ಉದಕಗಳ ಮಧ್ಯದಲ್ಲಿರುವವನಾಗಿ, **ವಿಧತೇ ಊರ್ಜಯ್ಯೆ ವಸುದೇಯಾಯ ವಿಭಾತಿ** ಮೇಘಗಳಿಗೂ, ತನ್ನನ್ನು ಸೇವಿಸುವ ಯಜಮಾನರಿಗೂ ಬಲವನ್ನೂ ಪ್ರಭೂತವಾದ ಧನವನ್ನೂ ಅನುಗ್ರಹಿಸುವುದಕ್ಕಾಗಿ ಅತಿಶಯವಾದ ತನ್ನ ತೇಜಸ್ಸುಗಳಿಂದ ಬೆಳಗುತ್ತಿದ್ದಾನೆ ಎಂದೂ ವರ್ಣಿಸಿದೆ.

ಸಂಹಿತಾಪಾಠಃ ॥

ಯೋ ಅಪ್ಸ್ವಾ ಶುಚಿನಾ ದೈವ್ಯೇನ ಋತಾವಾಜಸ್ರ ಉರ್ವಿಯಾ ವಿಭಾತಿ ।
ವಯಾ ಇದನ್ಯಾ ಭುವನಾನ್ಯಸ್ಯ ಪ್ರ ಜಾಯಂತೇ ವೀರುಧಶ್ಚ ಪ್ರಜಾಭಿಃ ॥ ೮ ॥

॥ ಪದಪಾಠಃ ॥

ಯಃ । ಅಪ್ಽಸು । ಆ । ಶುಚಿನಾ । ದೈವ್ಯೇನ । ಋತಽವಾ । ಅಜಸ್ರಃ । ಉರ್ವಿಯಾ । ವಿಽಭಾತಿ ।
ವಯಾಃ । ಇತ್ । ಅನ್ಯಾ । ಭುವನಾನಿ । ಅಸ್ಯ । ಪ್ರ । ಜಾಯಂತೇ । ವೀರುಧಃ । ಚ । ಪ್ರಽಜಾಭಿಃ ॥೮॥

॥ ಸಾಯಣಭಾಷ್ಯಂ ॥

ಯೋಽಪಾಂನಪಾದೃತಾವಾ । ಋತಮಿತ್ಯುದಕನಾಮ । ತದ್ವಾನ್ ಸತ್ಯವಾನ್ವಾ ಅಜಸ್ರೋ ನಿತ್ಯ ಏಕರೂಪೇಣ ಸದಾ ವರ್ತಮಾನ ಉರ್ವಿಯಾ ಉರುವಿಸ್ತೀರ್ಣೋಽಪ್ಸು ಮೇಘಸ್ಥಾಸು ಮಧ್ಯೇ ಶುಚಿನಾ ಶೋಚಕೇನ ದೈವ್ಯೇನ ದೇವಸಂಬಂಧಿನಾ ತೇಜಸಾ ಆ ಸಮಂತಾದ್ವಿಭಾತಿ । ವಿಶೇಷೇಣ ಪ್ರಕಾಶತೇ । ಅಸ್ಯಾಪಾಂನಪಾತೋಽನ್ಯಾ ಅನ್ಯಾನಿ ಭುವನಾನಿ ಸರ್ವಾಣಿ ಭೂತಜಾತಾನಿ ವಯಾ ಇತ್ ಶಾಖಾ ಏವ । ವೀರುಧ ಓಷಧಯಃ ಪ್ರಜಾಭಿಃ ಸ್ವಕೀಯಾಭಿಃ ಪುಷ್ಪಫಲಾದಿಭಿಃ ಸಹಾಸ್ಮಾದೇವ ಪ್ರಜಾಯಂತೇ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಅಪಾಂ ನಪಾತ್ ದೇವತೆಯು । **ಋತಾವಾ**—ಸತ್ಯವಂತನಾಗಿಯೂ । **ಅಜಸ್ರಃ**—ನಿತ್ಯನಾಗಿಯೂ ಮತ್ತು ಏಕರೂಪವುಳ್ಳವನಾಗಿಯೂ । **ಉರ್ವಿಯಾ**—ಅತ್ಯಂತ ವಿಸ್ತೃತನಾಗಿಯೂ । **ಅಪ್ಸು**—ಮೇಘಸ್ಥವಾದ ಉದಕಗಳ ಮಧ್ಯದಲ್ಲಿ **ಶುಚಿನಾ**—ಪ್ರಕಾಶಮಾನವಾದುದೂ **ದೈವ್ಯೇನ**—ದೇವತಾತ್ಮವಾದುದೂ ಆದ ತೇಜಸ್ಸಿನಿಂದ **ಆ**—ಸುತ್ತಲೂ **ವಿಭಾತಿ**—ಅತಿಶಯವಾಗಿ ಪ್ರಕಾಶಿಸುತ್ತಾನೆಯೋ । **ಅಸ್ಯ**—ಅದೇ ದೇವತೆಯ **ವಯಾ ಇತ್**—ಶಾಖೆಗಳಾಗಿಯೇ । **ಅನ್ಯಾ ಭುವನಾನಿ**—ಇತರ ಸಕಲ ಭೂತಜಾತಗಳೂ ಇವೆ । **ವೀರುಧಶ್ಚ**—ಓಷಧಿಗಳೂ ಸಹ । **ಪ್ರಜಾಭಿಃ**—ತಮ್ಮ ಫಲಪುಷ್ಪರೂಪವಾದ ಪ್ರಜೆಗಳೊಡನೆ । **ಪ್ರಜಾಯಂತೇ**-ಈ ಅಗ್ನಿಯಿಂದಲೇ ಉತ್ಪನ್ನವಾಗುತ್ತವೆ.

॥ ಭಾವಾರ್ಥ ॥

ಯಾವ ಅಪಾಂ ನಪಾತ್ ದೇವತೆಯು ಸತ್ಯವಂತನಾಗಿಯೂ, ನಿತ್ಯನಾಗಿಯೂ, ಏಕರೂಪವುಳ್ಳವನಾಗಿಯೂ, ಅತ್ಯಂತ ವಿಸ್ತೃತನಾಗಿಯೂ, ಮೇಘಸ್ಥವಾದ ಉದಕಗಳ ಮಧ್ಯದಲ್ಲಿ ಪ್ರಕಾಶಮಾನವಾದುದೂ, ದೇವತಾತ್ಮವಾದುದೂ ಆದ ತೇಜಸ್ಸಿನಿಂದ ಸುತ್ತಲೂ ಅತಿಶಯವಾಗಿ ಪ್ರಕಾಶಿಸುತ್ತಾನೆಯೋ ಆ ದೇವತೆಯ ಶಾಖೆಗಳಾಗಿಯೇ ಇತರ ಸಕಲ ಭುವನಗಳೂ ಇವೆ. ಓಷಧಿಗಳೂ ಸಹ ತಮ್ಮ ಫಲಪುಷ್ಪಗಳೊಡನೆ ಈ ಅಗ್ನಿಯಿಂದಲೇ ಉತ್ಪನ್ನವಾಗುತ್ತವೆ.

## English Translation.

All other beings are, as it were, branches of him, who, truthful, eternal, and vast, shines amidst the waters with pure and divine (radiance); and the shrubs, with their products, are born (of him).

॥ ವಿಶೇಷವಿಷಯಗಳು ॥

**ಯಃ ಋತಾವಾ—ತದ್ವಾನ್ ಸತ್ಯವಾನ್ ವಾ ।** ಋತ ಶಬ್ದಕ್ಕೆ ಸತ್ಯ ಅಥವಾ ಉದಕ, ಪ್ರಜ್ಞಾ ಎಂಬ ಅರ್ಥಗಳಿದ್ದರೂ ಇಲ್ಲಿ ಉದಕ ಅಥವಾ ಸತ್ಯ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆಯೆಂದು ಅರ್ಥವನ್ನು ಮಾಡಿ, ಸಾಯಣರು ಅಪಾಂನಪಾತ್ ದೇವನು ಉದಕವುಳ್ಳವನು ಅಥವಾ ಸತ್ಯವಂತನೆಂದು ಅರ್ಥವನ್ನು ವರ್ಣಿಸಿದ್ದಾರೆ.

**ಅಜಸ್ರಃ—ನಿತ್ಯಃ ಸದಾ ಏಕರೂಪೇಣ ವರ್ತಮಾನಃ** ಈ ದೇವನು ನಾಶರಹಿತನಾದವನು ಮತ್ತು ಸರ್ವಕಾಲದಲ್ಲಿಯೂ ಒಂದೇವಿಧವಾಗಿರುವವನು ಎಂದೂ, **ಉರ್ವಿಯಾ ಉರು ವಿಸ್ತೀರ್ಣಃ** ಅತಿಶಯವಾಗಿ ವ್ಯಾಪಿಸಿರುವವನಾಗಿರುವ ಈ ದೇವನು **ಅಪ್ಸು ಶುಚಿನಾ ದೈವ್ಯೇನ ಆ ವಿಭಾತಿ** ಮೇಘದಲ್ಲಿರುವ ಉದಕಗಳ ಮಧ್ಯ ಪ್ರದೇಶಗಳಲ್ಲಿ ದೇವತಾಸಂಬಂಧಿಯಾದ ತೇಜಸ್ಸಿನಿಂದ ಎಲ್ಲಾ ಕಡೆಗಳಲ್ಲಿಯೂ ಪ್ರಕಾಶಿಸುತ್ತಿರುವನು ಎಂದೂ, **ಅಸ್ಯ ಅನ್ಯಾ ಭುವನಾನಿ ವಯಾ ಇತ್** ಲೋಕಗಳಲ್ಲಿರುವ ನಾನಾವಿಧವಾದ ಪ್ರಾಣಿಗಳೆಲ್ಲವೂ ಈ ದೇವನಿಂದಲೇ ಉತ್ಪನ್ನವಾಗಿರುವ ನಿಮಿತ್ತ ಈ ದೇವನಿಗೆ ಸಂಬಂಧಪಟ್ಟವುಗಳೆಂದೂ, (ಮರಕ್ಕೆ ಕೊಂಬೆಗಳ

ಹಾಗೆ) ವೀರುಧಃ ಪ್ರಜಾಭಿಃ ಪ್ರಜಾಯಂತೇ—(ಪ್ರಜಾ ಶಬ್ದಕ್ಕೆ ಬಳ್ಳಿಗಳಲ್ಲಿ ಉತ್ಪನ್ನವಾಗುವ ಹೂವುಗಳು ಮತ್ತು ಹಣ್ಣುಗಳು ಎಂದು ಅರ್ಥವನ್ನು ವಿವರಿಸಿದೆ) ಲತೆಗಳೂ ಇವುಗಳ ಹೂವುಗಳು ಮತ್ತು ಹಣ್ಣುಗಳೂ ಕೂಡ, ಈ ದೇವನಿಂದಲೇ ಉತ್ಪನ್ನವಾಗಿರುತ್ತವೆ ಎಂದೂ, ಈ ದೇವನ ಪ್ರಭೂತವಾದ ಪ್ರಭಾವವು ವರ್ಣಿತವಾಗಿದೆ.



॥ ಸಂಹಿತಾಪಾಠಃ ॥

ಅಪಾಂ ನಪಾದಾ ಹ್ಯಸ್ಥಾದುಪಸ್ಥಂ ಜಿಹ್ಮಾನಾಮೂರ್ಧ್ವೋ ವಿದ್ಯುತಂ ವಸಾನಃ।
ತಸ್ಯ ಜ್ಯೇಷ್ಠಂ ಮಹಿಮಾನಂ ವಹಂತೀರ್ಹಿರಣ್ಯವರ್ಣಾಃ ಪರಿ ಯಂತಿ ಯಹ್ವೀಃ ॥೯॥

ಪದಪಾಠಃ

ಅಪಾಂ । ನಪಾತ್ । ಆ । ಹಿ । ಅಸ್ಥಾತ್ । ಉಪऽಸ್ಥಂ । ಜಿಹ್ಮಾನಾಂ । ಊರ್ಧ್ವಃ । ವಿऽದ್ಯುತಂ । ವಸಾನಃ ।
ತಸ್ಯ । ಜ್ಯೇಷ್ಠಂ । ಮಹಿಮಾನಂ । ವಹಂತೀಃ । ಹಿರಣ್ಯऽವರ್ಣಾಃ । ಪರಿ । ಯಂತಿ । ಯಹ್ವೀಃ ॥ ೯ ॥

॥ ಸಾಯಣಭಾಷ್ಯಂ ॥

ಪೂರ್ವೋಕ್ತೇ ಸಾರಸ್ವತಸತ್ರಸ್ಯಾಪೋನಪ್ತ್ರೀಯೇ ಚರಾವಪಾಂ ನಪಾದಾ ಹೀತ್ಯೇಷಾನುವಾಕ್ಯಾ। ಸೂತ್ರಿತಂ ಚ । ಅಪಾಂ ನಪ್ತ್ರೇ ಚರುಮಪಾಂ ನಪಾದಾ ಹ್ಯಸ್ಥಾದುಪಸ್ಥಂ । ಆ. ೧೨-೬. । ಇತಿ ॥

ಅಪಾಂನಪಾತ್ಸಂಜ್ಞಕೋಽಗ್ನಿರುಪಸ್ಥಮಪಾಮುಪಸ್ಥಾನಮಂತರಿಕ್ಷಮಾ ಹ್ಯಸ್ಥಾತ್ । ಆಸ್ಥಿತವಾನ್ ಆರೂಢವಾನ್ ಖಲು । ಕಿಂ ಕುರ್ವನ್ । ಜಿಹ್ಮಾನಾಂ ಕುಟಿಲಗತೀನಾಮಪಾಂ ಮಧ್ಯ ಊರ್ಧ್ವಃ ಸ್ವಯಮೂರ್ಧ್ವಂ ಜ್ವಲನ್ ವಿದ್ಯುತಂ ವಿದ್ಯೋತಮಾನಂ ಮೇಘಂ ವಸಾನ ಆಚ್ಛಾದಯನ್ । ಅಂತರಿಕ್ಷಮಾಸ್ಥಾಯ ವರ್ಷಣಂ ಕೃತವಾನ್ । ತಸ್ಯ ವರ್ಷಿತುರಪಾಂನಪಾತೋ ಜ್ಯೇಷ್ಠಂ ಪ್ರಶಸ್ಯತಮಂ ಮಹಿಮಾನಂ ಮಾಹಾತ್ಮ್ಯಂ ವಹಂತೀರ್ವಹಂತ್ಯಃ ಸರ್ವತ್ರ ಪ್ರಾಪಯಂತ್ಯೋ ಯಹ್ವೀರ್ಯಹ್ವ್ಯೋ ಮಹತ್ಯೋ ಹಿರಣ್ಯವರ್ಣಾಃ । ನದೀನಾಮೈತತ್ । ಹಿರಣ್ಯವನ್ನಿರ್ಮಲರೂಪಾ ನದ್ಯಃ ಪರಿಯಂತಿ । ಪರಿತೋ ಗಚ್ಛಂತಿ । ಅಪಾಂನಪಾತ್ರಾ ಮಹತೀ ವೃಷ್ಟಿರಸ್ಮಾಕಂ ಪ್ರವಾಹನಾಯೋತ್ಪಾದಿತೇತಿ ಕೃತಜ್ಞಾ ಯಾ ತದೀಯಂ ಮಾಹಾತ್ಮ್ಯಂ ಸರ್ವತ್ರ ಪ್ರಕಟಯಂತ್ಯ ಇವ ನದ್ಯಃ ಪ್ರವಹಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಪಾಂ ನಪಾತ್**—ಅಪಾಂ ನಪಾತ್ ಸಂಜ್ಞಕನಾದ ಅಗ್ನಿಯು । **ಜಿಹ್ಮಾನಾಂ**—ಕುಟಿಲಗತಿಯುಳ್ಳ ಉದಕಗಳ ಮಧ್ಯದಲ್ಲಿ । **ಊರ್ಧ್ವಃ**—ಉನ್ನತವಾದ ಪ್ರದೇಶದಲ್ಲಿ ಪ್ರಕಾಶಿಸುತ್ತಲೂ । **ವಿದ್ಯುತಂ**—ಪ್ರಕಾಶ್ಯ

ಮಾನವಾದ ಮೇಘವನ್ನು । ವಸಾನಃ—ಧರಿಸಿದವನಾಗಿಯೂ । ಉಪಸ್ಥಂ—(ಉದಕಗಳಿಗೆ) ಉಪಸ್ಥಾನವಾದ ಅಂತರಿಕ್ಷವನ್ನು । ಆ ಹ್ಯಸ್ಥಾತ್—ಆಶ್ರಯಿಸಿ ನಿಂತಿದ್ದಾನೆ । ತಸ್ಯ—ವೃಷ್ಟಿಕಾರಕನಾದ ಈ ಅಪಾಂನಪಾತಿನ । ಜ್ಯೇಷ್ಠಂ—ಪ್ರಶಸ್ತವಾದ । ಮಹಿಮಾನಂ—ಮಾಹಾತ್ಮ್ಯವನ್ನು । ವಹಂತೀಃ—ವಹಿಸಿಕೊಂಡು ಬರುವವೂ । ಯಹ್ವೀಃ—ಮಹತ್ತಾದುದುವೂ ಆದ । ಹಿರಣ್ಯವರ್ಣಾಃ—ನದಿಗಳು । ಪರಿ ಯಂತಿ—ಸುತ್ತಲೂ ಪ್ರವಹಿಸುತ್ತವೆ.

॥ ಭಾವಾರ್ಥ ॥

ಅಪಾಂನಪಾತ್ ಸಂಜ್ಞನಾದ ಅಗ್ನಿಯು ಕುಟಿಲಗತಿಯುಳ್ಳ ಉದಕಗಳ ಮಧ್ಯವಲ್ಲಿ ಉನ್ನತವಾದ ಪ್ರದೇಶದಲ್ಲಿ ಪ್ರಕಾಶಿಸುತ್ತಲೂ, ಪ್ರಕಾಶಮಾನವಾದ ಮೇಘವನ್ನು ಆಚ್ಛಾದನರೂಪದಲ್ಲಿ ಧರಿಸಿದವನಾಗಿಯೂ ಉದಕಗಳಿಗೆ ಉಪಸ್ಥಾನವಾದ ಅಂತರಿಕ್ಷವನ್ನು ಆಶ್ರಯಿಸಿ ನಿಂತಿದ್ದಾನೆ. ವೃಷ್ಟಿಕಾರಕನಾದ ಈ ಅಪಾಂನಪಾತಿನ ಪ್ರಶಸ್ತವಾದ ಮಾಹಾತ್ಮ್ಯವನ್ನು ವಹಿಸಿಕೊಂಡು ಬರುವವೂ ಮಹತ್ತಾದವೂ ಆದ ನದಿಗಳು ಸುತ್ತಲೂ ಪ್ರವಹಿಸುತ್ತವೆ.

## English Translation.

The grandson of the waters has ascended the firmament above (the region) of the tortuously-moving (clouds), arrayed in lightnlng : the broad and golden-coloured (rivers) spread around, bearing (to all quarters) his exceeding glory.

॥ ವಿಶೇಷವಿಷಯಗಳು ॥

ಹಿಂದೆ ಹೇಳಿದ ಸಾರಸ್ವತಯಾಗದ ಅಪೋನಪ್ತ್ರೀಯಸಂಬಂಧವಾದ ಚರುಹೋಮದಲ್ಲಿ— **ಅಪಾಂನಪಾದಾ ಹಿ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಅಪಾಂ ನಪ್ತ್ರೇ ಚರುಮಪಾಂ ನಪಾದಾ ಹ್ಯಸ್ಥಾದುಪಸ್ಥಂ** ಎಂಬ ಸೂತ್ರದಿಂದ ವಿಧ್ಯುಕ್ತವಾಗಿರುವುದು. (ಆ ೧೨-೬)

**ಜಿಹ್ಮಾನಾಂ ಊರ್ಧ್ವಃ ವಿದ್ಯುತಂ ವಸಾನಃ—ಕುಟಿಲಗತೀನಾಮಪಾಂ ಮಧ್ಯೇ ಸ್ವಯಮೂರ್ಧ್ವಂ ಜ್ವಲನ್ ವಿದ್ಯೋತಮಾನಂ ಮೇಘಮಾಚ್ಛಾದಯನ್ ಅಂತರಿಕ್ಷಮಾಸ್ಥಾಯ ವರ್ಷಣಂ ಕೃತವಾನ್ ।** ವಕ್ರವಾದ ರೀತಿಯಿಂದ (ಹರಿಯುವ) ಪ್ರವಹಿಸುತ್ತಿರುವ ಉದಕಗಳ ಮಧ್ಯದಲ್ಲಿ ಈ ದೇವನು ಊರ್ಧ್ವಮುಖವಾಗಿರುವ ತನ್ನ ತೇಜಸ್ಸುಗಳಿಂದ ಪ್ರಕಾಶಿಸುತ್ತಿರುವನು. ತನ್ನ ಕಾಂತಿಗಳಿಂದಲೇ ಬೆಳಗುತ್ತಿರುವ ಮೇಘವನ್ನು ಆವರಿಸಿಕೊಂಡಿರುವ ಈ ದೇವನು ಅಂತರಿಕ್ಷವನ್ನೂ ವ್ಯಾಪಿಸಿಕೊಂಡು (ವೃಷ್ಟಿಯು) ವೃಷ್ಟ್ಯುದಕಗಳು ಸುರಿಯುವಂತೆ ಮಾಡುವನು.

**ಯಹ್ವೀಃ ಹಿರಣ್ಯವರ್ಣಾಃ ಪರಿಯಂತಿ – ಮಹತ್ಯಃ ಹಿರಣ್ಯವನ್ನಿರ್ಮಲರೂಪಾ ನದ್ಯಃ ಪರಿತೋ ಗಚ್ಛಂತಿ । ಅಪಾಂನಪ್ತ್ರಾ ಮಹತೀ ವೃಷ್ಟಿರಸ್ಮಾಕಂ ಪ್ರವಹನಾಯ ಉತ್ಪಾದಿತಾ ಇತಿ ಕೃತಜ್ಞತಯಾ ತದೀಯಂ ಮಾಹಾತ್ಮ್ಯಂ ಸರ್ವತ್ರ ಪ್ರಕಟಯಂತ್ಯ ಇವ ನದ್ಯಃ ಪ್ರವಹಂತಿ ।** ಹಿರಣ್ಯವರ್ಣಾಃ ಎಂದು ನದೀನಾಮಗಳಲ್ಲಿ (ನಿ. ೨-೪) ಉಕ್ತವಾಗಿದೆ. ಬಹಳ ದೊಡ್ಡವುಗಳಾಗಿಯೂ ಸುವರ್ಣದ ಹಾಗೆ ಪರಿಶುದ್ಧವಾಗಿ ಕಾಂತಿಯುಳ್ಳವೂ

ಆಗಿರುವ ನದಿಗಳು ಪ್ರಭೂತವಾದ ವೃಷ್ಟ್ಯುದಕಗಳು ತಮ್ಮ ಪ್ರವಾಹಕ್ಕನುಗುಣವಾಗಿ ಈ ಅಪಾಂ ನಪಾತ್ ಎಂಬ ದೇವನಿಂದ ಉತ್ಪನ್ನವಾಗಿರುತ್ತವೆ ಎಂದು ಈ ದೇವನು ಆಚರಿಸಿರುವ ಉಪಕಾರದ (ವಿಷಯದ) ಲ್ಲಿ ಕೃತಜ್ಞತೆಯನ್ನು ಪ್ರಕಟಗೊಳಿಸುತ್ತಿರುವವೋ ಎಂಬಂತೆ ಈ ದೇವನ ಮಾಹಾತ್ಮ್ಯವನ್ನು ಎಲ್ಲಾ ಕಡೆಗಳಲ್ಲಿಯೂ ಹರಡುತ್ತಾ ಉದಕಗಳಿಂದ ವ್ಯಾಪ್ತವಾಗಿ ಪ್ರವಹಿಸುತ್ತಿರುವವು ಎಂದು ವರ್ಣಿಸಿವೆ.



॥ ಸಂಹಿತಾಪಾಠಃ ॥

ಹಿರಣ್ಯರೂಪಃ ಸ ಹಿರಣ್ಯಸಂದೃಗಪಾಂ ನಪಾತ್ಸೇದು ಹಿರಣ್ಯವರ್ಣಃ ।
ಹಿರಣ್ಯಯಾತ್ಪರಿ ಯೋನೇರ್ನಿಷದ್ಯಾ ಹಿರಣ್ಯದಾ ದದತ್ಯನ್ನಮಸ್ಮೈ ॥ ೧೦ ॥

॥ ಪದಪಾಠಃ ॥

ಹಿರಣ್ಯಽರೂಪಃ । ಸಃ । ಹಿರಣ್ಯಽಸಂದೃಕ್ । ಅಪಾಂ । ನಪಾತ್ । ಸಃ । ಇತ್ । ಊಂ ಇತಿ । ಹಿರಣ್ಯಽವರ್ಣಃ ।
ಹಿರಣ್ಯಯಾತ್ । ಪರಿ । ಯೋನೇಃ । ನಿಽಸದ್ಯ । ಹಿರಣ್ಯಽದಾಃ । ದದತಿ । ಅನ್ನಂ । ಅಸ್ಮೈ ॥ ೧೦ ॥

॥ ಸಾಯಣಭಾಷ್ಯಂ ॥

**ಸೋಽಪಾಂನಪಾತ್ ಹಿರಣ್ಯರೂಪಃ । ರೂಪ್ಯತೆ ಇತಿ ರೂಪಂ ಶರೀರಂ । ಸುವರ್ಣಮಯಶರೀರೋ ಹಿತರಮಣೀಯಶರೀರೋ ವಾ । ತಥಾ ಹಿರಣ್ಯಸಂದೃಕ್ । ಸಮ್ಯಕ್ ಪಶ್ಯಂತೀತಿ ಸಂದೃಶ ಇಂದ್ರಿಯಾಣಿ । ಸುವರ್ಣಮಯೇಂದ್ರಿಯೋ ಹಿತರಮಣೀಯೇಂದ್ರಿಯೋ ವಾ । ಸೇದು ಸ ಏವಾಪಾಂನಪಾತ್ ಹಿರಣ್ಯವರ್ಣೋ ಹಿರಣ್ಯಸದೃಶಕಾಂತಿಯುಕ್ತಃ । ಏವಂಭೂತಃ ಸನ್ ಹಿರಣ್ಯಯಾತ್ಸುವರ್ಣಮಯಾದ್ಯೋನೇಃ ಸ್ಥಾನಾತ್ ಪರ್ಯುಪರಿ ನಿಷದ್ಯೋಪವಿಶ್ಯ ರಾಜತೆ ಇತಿ ಶೇಷಃ । ಅಸ್ಮಾ ಈದೃಗ್ವಿಧಾಯಾಪಾಂ ನಪಾತೇ ಹಿರಣ್ಯದಾ ದಕ್ಷಿಣಾರೂಪಸ್ಯ ಹಿರಣ್ಯಸ್ಯ ದಾತಾರೋ ಯಜಮಾನಾ ಅನ್ನಂ ಹವಿರ್ಲಕ್ಷಣಂ ದದತಿ । ಪ್ರಯಚ್ಛಂತಿ ॥**

॥ ಪ್ರತಿಪದಾರ್ಥ ॥

**ಸಃ ಅಪಾಂ ನಪಾತ್**—ಅಪಾಂನಪಾತ್ ದೇವತೆಯು । **ಹಿರಣ್ಯರೂಪಃ**—ಸುವರ್ಣಮಯವಾದ ಸ್ವರೂಪವುಳ್ಳವನೂ । **ಹಿರಣ್ಯಸಂದೃಕ್**—ಆಕರ್ಷಕವಾದ ಇಂದ್ರಿಯವುಳ್ಳವನೂ । **ಸೇದು**—ಅವನೇ । **ಹಿರಣ್ಯವರ್ಣಃ**—ಹೊಂಬಣ್ಣವುಳ್ಳವನೂ ಆಗಿ । **ಹಿರಣ್ಯಯಾತ್**—ಸುವರ್ಣಮಯವಾದ । **ಯೋನೇಃ**—ಸ್ಥಾನದ । **ಪರಿ**—ಮೇಲೆ । **ನಿಷದ್ಯ**—ಕುಳಿತು (ಪ್ರಕಾಶಿಸುತ್ತಾನೆ) । **ಅಸ್ಮೈ**—ಈ ಅಪಾಂ ನಪಾತ್

ದೇವತೆಯನ್ನು ಉದ್ದೇಶಿಸಿ। **ಹಿರಣ್ಯದಾಃ**—ಸುವರ್ಣವನ್ನು (ದಕ್ಷಿಣಾರೂಪದಲ್ಲಿ) ಅರ್ಪಿಸುವ ಯಜಮಾನರು **ಅನ್ನಂ**—ಹವಿಸ್ಸಿನ ರೂಪದ ಅನ್ನವನ್ನು **ದದತಿ**—ಅರ್ಪಿಸುತ್ತಾರೆ.

। ಭಾವಾರ್ಥ ।

ಅಪಾಂ ನಪಾತ್ ದೇವತೆಯು ಸುವರ್ಣಮಯವಾದ ಸ್ವರೂಪವುಳ್ಳವನೂ, ಆಕರ್ಷಕವಾದ ಇಂದ್ರಿಯವುಳ್ಳವನೂ, ಹೊಂಬಣ್ಣವುಳ್ಳವನೂ ಆಗಿ ಸುವರ್ಣಮಯವಾದ ಸ್ಥಾನದ ಮೇಲೆ ಕುಳಿತು ಪ್ರಕಾಶಿಸುತ್ತಾನೆ. ಈ ಅಗ್ನಿಯನ್ನುದ್ದೇಶಿಸಿ ಸುವರ್ಣವನ್ನು ದಕ್ಷಿಣಾರೂಪದಲ್ಲಿ ಅರ್ಪಿಸುವ ಯಜಮಾನರು ಹವಿಸ್ಸಿನ ರೂಪದ ಅನ್ನವನ್ನೂ ಅರ್ಪಿಸುತ್ತಾರೆ.

## English Translation.

The grandson of the waters is of golden form, of golden aspect, of golden hue, and (shines) seated upon a seat of gold : the givers of gold (at solemn rites) present to him (sacrificial) food.

। ವಿಶೇಷವಿಷಯಗಳು ।

**ಸಃ ಅಪಾಂ ನಪಾತ್ ಹಿರಣ್ಯರೂಪಃ—ರೂಪ್ಯತೆ ಇತಿ ರೂಪಂ ಶರೀರಂ। ಸುವರ್ಣಮಯಶರೀರಃ ಹಿತರಮಣೀಯಶರೀರೋ ವಾ।** ಇಲ್ಲಿ ರೂಪಶಬ್ದವು ಶರೀರ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು. ಅಪಾಂ ನಪಾತ್ ದೇವನು ಸುವರ್ಣಮಯವಾದ ಎಂದರೆ ಚಿನ್ನದ ಕಾಂತಿಯನ್ನು ಹೊಂದಿರುವ ಶರೀರವನ್ನು ಧರಿಸಿರುವನು ಅಥವಾ ಸರ್ವರಿಗೂ ಸುಖಕರವಾದ ಮತ್ತು ಮನೋಹರವಾದ ಶರೀರವನ್ನು ಧರಿಸಿರುವನು ಎಂದು ವಿವರಿಸಿದೆ.

**ಹಿರಣ್ಯಸಂದೃಕ್—ಸಮ್ಯಕ್ ಪಶ್ಯಂತೀತಿ ಸಂದೃಶ ಇಂದ್ರಿಯಾಣಿ। ಸುವರ್ಣಮಯೇಂದ್ರಿಯೋ ಹಿತರಮಣೀಯೇಂದ್ರಿಯೋ ವಾ।** ಸಂದೃಶ ಶಬ್ದವು ಪೂರ್ಣವಾಗಿ ತಿಳಿಯುವ ಸಾಧನಗಳಾದ ಇಂದ್ರಿಯಗಳೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಈ ದೇವನ ಇಂದ್ರಿಯಗಳು ಸುವರ್ಣದ ಹಾಗೆ ಕಾಂತಿಯುಳ್ಳವುಗಳೂ ಅಥವಾ ಸುಖಜನಕವಾಗಿ ಮನೋಹರವಾಗಿಯೂ ಇರುವುವು ಎಂದೂ ಈ ರೀತಿಯಾದ ಇಂದ್ರಿಯಗಳನ್ನು ಈ ದೇವನು ಹೊಂದಿರುವನೆಂದೂ ವಿವರಿಸಿದೆ.

**ಹಿರಣ್ಯಯಾತ್ ಯೋನೇಃ ಪರಿ ನಿಷದ್ಯ—ಸುವರ್ಣಮಯಾತ್ ಸ್ಥಾನಾದುಪರಿ ಉಪವಿಶ್ಯ ರಾಜತೇ।** ಈ ದೇವನು ಸುವರ್ಣದ ಕಾಂತಿಯನ್ನು ಹೊಂದಿರುವ ಪ್ರದೇಶದ ಮೇಲುಭಾಗದಲ್ಲಿ ಸುಖವಾಗಿ ಉಪವಿಷ್ಟನಾಗಿರುತ್ತಾ ಪ್ರಕಾಶಿಸುತ್ತಿರುವನು.

**ಅಸ್ಮೈ ಹಿರಣ್ಯದಾಃ ಅನ್ನಂ ದದತಿ—ಈದೃಗ್ವಿಧಾಯ ಅಪಾಂ ನಪಾತೇ ದಕ್ಷಿಣಾರೂಪಸ್ಯ ದಾತಾರಃ ಯಜಮಾನಾಃ ಹವಿರ್ಲಕ್ಷಣಮನ್ನಂ ಪ್ರಯಚ್ಛಂತಿ।** ಈ ಪ್ರಕಾರವಾದ ಪ್ರಭೂತವಾದ ಪ್ರಭಾವದಿಂದ ಇರುವ ಈ ದೇವನನ್ನು ಉದ್ದೇಶಿಸಿ ಯಜಮಾನರು ಯಾಗಗಳಲ್ಲಿ ದಕ್ಷಿಣೆಯನ್ನು ಸುವರ್ಣರೂಪದಿಂದ ದಾನಮಾಡುವವರಾಗಿಯೂ. ಹವಿಸ್ಸಿನ ರೂಪದಿಂದ ಅನ್ನವನ್ನು ಅರ್ಪಿಸುವವರಾಗಿಯೂ ಇರುತ್ತಾರೆ ಎಂದು ವರ್ಣಿಸಿದೆ.

॥ ಸಂಹಿತಾಪಾಠಃ ॥

ತದಸ್ಯಾನೀಕಮುತ ಚಾರು ನಾಮಾಪೀಚ್ಯಂ ವರ್ಧತೇ ನಪ್ತುರಪಾಂ

ಯಮಿಂಧತೇ ಯುವತಯಃ ಸಮಿತ್ಥಾ ಹಿರಣ್ಯವರ್ಣಂ ಘೃತಮನ್ನಮಸ್ಯ ॥ ೧೧ ॥

॥ ಪದಪಾಠಃ ॥

ತತ್ । ಅಸ್ಯ । ಅನೀಕಂ । ಉತ । ಚಾರು । ನಾಮ । ಅಪೀಚ್ಯಂ । ವರ್ಧತೇ । ನಪ್ತುಃ । ಅಪಾಂ ।

ಯಂ । ಇಂಧತೇ । ಯುವತಯಃ । ಸಂ । ಇತ್ಥಾ । ಹಿರಣ್ಯಽವರ್ಣಂ । ಘೃತಂ । ಅನ್ನಂ । ಅಸ್ಯ ॥ ೧೧ ॥

॥ ಸಾಯಣಭಾಷ್ಯಂ ॥

ಅಸ್ಯಾಪಾಂನಪ್ತುರ್ದೇವಸ್ಯಾನೀಕಂ ರಶ್ಮಿಸಮೂಹರೂಪಂ ಶರೀರಂ ಚಾರು ಶೋಭನಂ । ಉತ ಅಪಿ ಚ ಅಸ್ಯ ನಾಮ ಸಂಜ್ಞಾ ಚ ಚಾರು ಶೋಭನಂ ನ ಪಾತಯತಿ ನ ವಿನಾಶಯತೀತಿ ನಪಾದಿತಿ ತದ್ವ್ಯುತ್ಪತ್ತೇಃ । ತದುಭಯಮಪೀಚ್ಯಂ । ಅಂತರ್ಹಿತನಾಮ್ಯೇತತ್ । ಮೇಘಾಂತರ್ಹಿತಂ ಸದ್ವರ್ಧತೇ । ಯುವತಯಃ ಸಂಗಮನಸ್ವಭಾವಾ ಆಪೋ ಹಿರಣ್ಯವರ್ಣಂ ಹಿರಣ್ಯಸಮಾನತೇಜಸಂ ಯಮಪಾಂನಪಾತಮಿತ್ಥಾಮುತ್ರಾಂತರಿಕ್ಷೇ ಸಮಿಂಧತೇ । ಸಮ್ಯಕ್ ದೀಪಯಂತಿ । ಅಸ್ಯ ಚ ದೇವಸ್ಯ ಘೃತಂ ಕ್ಷರಣಶೀಲಮುದಕಮನ್ನಂ ಭಕ್ಷ್ಯಂ । ಅಬಿಂಧನೋ ಹ್ಯಸೌ ವೈದ್ಯುತೋಽಗ್ನಿಃ ॥

॥ ಪ್ರತಿಪದಾರ್ಥ ॥

**ಹಿರಣ್ಯವರ್ಣಂ**—ಸುವರ್ಣದಂತೆ ಆಕರ್ಷಕವಾದ ರೂಪವುಳ್ಳ । **ಯಂ**—ಯಾವ ಅಪಾಂ ನಪಾತ್ ಸಂಜ್ಞಕನಾದ ಅಗ್ನಿಯನ್ನು । **ಯುವತಯಃ**—ಸಂಯುಕ್ತರಾಗುವ ಸ್ವಭಾವವುಳ್ಳ ಉದಕಗಳು । **ಇತ್ಥಾ**—ಅಂತರಿಕ್ಷದಲ್ಲಿ । **ಸಂ ಇಂಧತೇ**—ಪ್ರಜ್ವಲಿಸುವಂತೆ ಮಾಡುತ್ತಾರೆಯೋ । **ಅಸ್ಯ**—ಅಂತಹ । **ಅಪಾಂ ನಪ್ತುಃ**—ಉದಕಗಳ ಪೌತ್ರನಾದ ಅಗ್ನಿಯು । **ತತ್ ಅನೀಕಂ**—ರಶ್ಮಿಗಳ ಸಮೂಹರೂಪವಾದ ಶರೀರವು । **ಚಾರು**—ಮನೋಹರವಾಗಿದೆ । **ಉತ**—ಮತ್ತು । **ನಾಮ**—ಈ ಅಗ್ನಿಯ ಸಂಜ್ಞೆಯೂ ಚಿತ್ತಾಕರ್ಷಕವಾಗಿದೆ (ಆಕರ್ಷಕವಾದ ಈ ರೂಪ ಮತ್ತು ಸಂಜ್ಞೆ ಎರಡೂ ಸಹ) । **ಅಪೀಚ್ಯಂ**—ಮೇಘಾಂತರ್ಗತವಾಗಿ । **ವರ್ಧತೇ**—ಬೆಳೆಯುತ್ತವೆ । **ಅಸ್ಯ**—ಈ ದೇವನಿಗೆ । **ಘೃತಂ**—ಉದಕವು । **ಅನ್ನಂ**—ಪೋಷಕವಾದ ಅನ್ನವಾಗಿದೆ.

॥ ಭಾವಾರ್ಥ ॥

ಸುವರ್ಣದಂತೆ ಆಕರ್ಷಕವಾದ ರೂಪವುಳ್ಳ ಯಾವ ಅಪಾಂನಪಾತ್ ಸಂಜ್ಞಕನಾದ ಅಗ್ನಿಯನ್ನು ಸಂಯುಕ್ತರಾಗುವ ಸ್ವಭಾವವುಳ್ಳ ಉದಕಗಳು ಅಂತರಿಕ್ಷದಲ್ಲಿ ಪ್ರಜ್ವಲಿಸುವಂತೆ ಮಾಡುತ್ತಾರೆಯೋ, ಅಂತಹ ಉದಕಗಳಿಗೆ ಪೌತ್ರನಾದ ಅಗ್ನಿಯ ರಶ್ಮಿಸಮೂಹರೂಪವಾದ ಶರೀರವು ಮನೋಹರವಾಗಿದೆ. ಈ ಅಗ್ನಿಯ ಸಂಜ್ಞೆಯೂ

ಮನೋಹರವಾಗಿದೆ. ಆಕರ್ಷಕವಾದ ಈ ರೂಪ ಮತ್ತು ಸಂಜ್ಞೆ ಎರಡೂ ಸಹ ಮೇಘದಲ್ಲಿ ಅಂತರ್ಗತವಾಗಿ ಬೆಳೆಯುತ್ತವೆ. ಈ ದೇವನಿಗೆ ಉದಕವು ಪೋಷಕವಾದ ಅನ್ನವಾಗಿದೆ.

## English Translation

Beautiful is his form (of aggregated lustre, beautiful) is the name of the grandson of the waters: (both) flourish, though hidden (by the clouds): the youthful waters collectively kindle the golden-coloured divinity in the firmament, for water is his food.

॥ ವಿಶೇಷವಿಷಯಗಳು ॥

**ಅಸ್ಯಂ ಅನೀಕಂ ಚಾರು--ರಶ್ಮಿಸಮೂಹರೂಪಂ ಶರೀರಂ ಶೋಭನಂ ।** ಅನೀಕಶಬ್ದಕ್ಕೆ ಕಿರಣಗಳ ಸಮೂಹರೂಪವಾದ ಶರೀರ ಎಂದು ಅರ್ಥವಾಗಿ, ಈದೇವನ ಶರೀರವು ಕಿರಣಗಳ (ತೇಜಸ್ಸುಗಳ) ಸಮೂಹದಿಂದ ಯುಕ್ತವಾಗಿ ಚಂದವಾಗಿರುವುದು.

**ಅಸ್ಯ ನಾಮ ಚಾರು—ಅಸ್ಯ ಸಂಜ್ಞಾ ಚ ಚಾರು ಶೋಭನಂ. ನ ಪಾತಯತಿ ನ ವಿನಾಶಯತೀತಿ ನಪಾದಿತಿ ವ್ಯುತ್ಪತ್ತೇಃ ।** ನ ಪಾತಯತಿ-ತ್ಯಾಗಮಾಡುವುದಿಲ್ಲ ಅಥವಾ ನ ವಿನಾಶಯತಿ—ನಾಶವನ್ನು ಹೊಂದಿಸುವುದಿಲ್ಲ ಎಂದು ನಪಾತ್ ಎಂಬ ಶಬ್ದಕ್ಕೆ ಅರ್ಥವು ಇರುವುದರಿಂದ ಈ ದೇವನು ತನ್ನನ್ನು ಆಶ್ರಯಿಸಿದವರನ್ನು ತ್ಯಜಿಸುವುದಿಲ್ಲ ಅಥವಾ ಕೆಳಕ್ಕೆ ಬೀಳಿಸುವುದಿಲ್ಲ, ನಾಶಗೊಳಿಸುವುದಿಲ್ಲವಾದ ನಿಮಿತ್ತ ಈ ದೇವನ ಹೆಸರೂ ಶುಭಕರವಾಗಿರುತ್ತದೆ.

**ಯಂ ಯುವತಯಃ ಅಪೀಚ್ಯಂ ಹಿರಣ್ಯವರ್ಣಂ ಇತ್ಥಾ ಸಮಿಂಧತೇ — ಸಂಗಮನಸ್ವಭಾವಾಃ ಆಪಃ ಮೇಘಾಂತರ್ಹಿತಂ ಹಿರಣ್ಯಸಮಾನತೇಜಸಂ ಅಮುತ್ರಾಂತರಿಕ್ಷೇ ಸಮಿಂಧತೇ ।** ಅಪಾಂನಪಾತ್ ದೇವನು ಮೇಘಗಳ ಮಧ್ಯದಲ್ಲಿ ಅಂತರ್ಹಿತನಾಗಿರುವನು. ಸುವರ್ಣಕ್ಕೆ ಸಮಾನವಾದ ತೇಜಸ್ಸನ್ನು ಹೊಂದಿರುವನು. ಈ ದೇವನನ್ನು ಪ್ರವಹಿಸುವ ಅಥವಾ ವ್ಯಾಪಿಸುವ ಸ್ವಭಾವವುಳ್ಳ ಉದಕಗಳು ಅಂತರಿಕ್ಷದಲ್ಲಿ ವೃದ್ಧಿಗೊಳಿಸುತ್ತಿರುತ್ತವೆ ಎಂದೂ, **ಅಸ್ಯ ಘೃತಂ ಅನ್ನಂ—ಅಸ್ಯ ಚ ದೇವಸ್ಯ ಕ್ಷರಣಶೀಲಮುದಕಂ ಭಕ್ಷ್ಯಂ ।** ಈ ದೇವನ ಆಹಾರವು ಪ್ರವಹಿಸುವ ಸ್ವಭಾವದಿಂದ ಇರುವ ಉದಕವೇ ಆಗಿರುವುದು ಎಂದೂ ಈದೇವನೇ ಅಧಿಸಂಧವಾಗಿರುವ ವೈದ್ಯುತಾಗ್ನಿಯಾಗಿರುವನೆಂದೂ ವರ್ಣಿಸಿದೆ.

**ಅಪೀಚ್ಯಂ—** ಎಂಬ ಪದವು ಯಾಸ್ಕರಿಂದ (ನಿ ೩-೧೯) ಅಂತರ್ಹಿತನಾಮಗಳಲ್ಲಿ ಉಕ್ತವಾಗಿದೆ.



ಸಂಹಿತಾ

**ಅಸ್ಮೈ ಬಹೂನಾಮವಮಾಯ ಸಖ್ಯೇ ಯಜ್ಞೈರ್ವಿಧೇಮ ನಮಸಾ ಹವಿರ್ಭಿಃ ।**

**ಸಂ ಸಾನು ಮಾರ್ಜ್ಮಿ ದಿಧಿಷಾಮಿ ಬಿಲ್ಮೈರ್ದಧಾಮ್ಯನ್ನೈಃ ಪರಿ ವಂದ ಋಗ್ಭಿಃ॥೧೨॥**

॥ ಪದಪಾಠಃ ॥

ಅಸ್ಮೈ । ಬಹೂನಾಂ । ಅವಮಾಯ । ಸಖ್ಯೇ । ಯಜ್ಞೈಃ । ವಿಧೇಮ । ನಮಸಾ । ಹವಿಃಭಿಃ ।
ಸಂ । ಸಾನು । ಮಾರ್ಜ್ಮಿ । ದಿಧಿಷಾಮಿ । ಬಿಲ್ಮೈಃ । ದಧಾಮಿ । ಅನ್ನೈಃ । ಪರಿ । ವಂದೇ । ಋಕ್ಭಿಃ ।

॥ ಸಾಯಣಭಾಷ್ಯಂ ॥

ಅಸ್ಮೈ ಪುರೋವರ್ತಿನೇ ಬಹೂನಾಂ ದೇವಾನಾಮವಮಾಯೋಪಾಯ ಸಖ್ಯೇಽಸ್ಮಾಭಿಃ ಸಮಾನಖ್ಯಾನಾಯಾಪಾಂ ನಪಾತೇ ಯಜ್ಞೈರ್ಯಾಗಸಾಧನೈರ್ಹವಿರ್ಭಿಶ್ಚರುಪುರೋಡಾಶಾದಿಭಿರ್ನಮಸಾ ನಮಸ್ಕಾರೇಣ ಚ ವಿಧೇಮ । ಪರಿಚರೇಮ । ಅಸ್ಯಾಪಾಂನಪಾತಃ ಸಾನು ಸಮುಚ್ಛ್ರಿತಪ್ರದೇಶಂ ಸಂಮಾರ್ಜ್ಮಿ । ಸಮ್ಯಕ್ ಶೋಧಯಾಮಿ ಅಲಂಕರೋಮಿ ವಾ ॥ ಮೃಜೂ ಶೌಚಾಲಂಕಾರಯೋಃ । ಚಾದಿಲೋಪೇ ವಿಭಾಷೇತ್ಯಸ್ಯ ನಿಘಾತಪ್ರತಿಷೇಧಃ ॥ ದಿಧಿಷಾಮಿ ಧಾರಯಾಮಿ ಚ ಬಿಲ್ಮೈರ್ಭಾಸನೈಃ ಕಾಷ್ಠೈರೇನಂ ॥ ಧಿಷ ಶಬ್ದೇ । ಅಯಂ ಧಾರಣಾರ್ಥೋಽಪಿ । ಜುಹೋತ್ಯಾದಿತ್ವಾತ್ ಶಪಃ ಶ್ಲುಃ । ಮಿಪ್ರೋ ವ್ಯತ್ಯಯೇನಾಡಾಗಮಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥ ದಧಾಮಿ ಧಾರಯಾಮಿ ಚೈನಂ ಗಾರ್ಹಪತ್ಯಾದಿರೂಪೇಣಾನ್ನೈರ್ಹವಿರ್ಲಕ್ಷಣೈಃ । ತಥಾ ಋಗ್ಭಿರ್ಮಂತ್ರೈಃ ಪರಿವಂದೇ । ಪರಿತಃ ಸ್ತೌಮಿ ॥

॥ ಪ್ರತಿಪದಾರ್ಥ ॥

**ಬಹೂನಾಂ**— ಅನೇಕ ದೇವತೆಗಳಲ್ಲಿ । **ಅವಮಾಯ**—ಅಧ್ಯನಾದವನೂ । **ಸಖ್ಯೇ**—ನಮ್ಮ ಸಖನಾದವನೂ ಆದ । **ಅಸ್ಮೈ**—ಅಪಾಂ ನಪಾತ್ ಸಂಜ್ಞಕನಾದ ಈ ಅಗ್ನಿಗೆ **ಯಜ್ಞೈಃ**—ಯಾಗಸಾಧನಗಳಾದ । **ಹವಿರ್ಭಿಃ**—ಚರುಪುರೋಡಾಶಾದಿಗಳಿಂದಲೂ । **ನಮಸಾ**—ನಮಸ್ಕಾರಾದಿಗಳಿಂದಲೂ । **ವಿಧೇಮ**—ಉಪಚಾರವನ್ನು ಹೊಡುತ್ತೇನೆ **ಸಾನು**—ಅಗ್ನಿಯ ಉನ್ನತವಾದ ಪ್ರದೇಶವನ್ನು । **ಸಂ ಮಾರ್ಜ್ಮಿ**—ಶೋಧಿಸಿ ಅಲಂಕರಿಸುತ್ತೇನೆ **ಬಿಲ್ಮೈಃ**—ಪ್ರಜ್ವಲಿಸುವಂತೆ ಮಾಡುವ ಕಾಷ್ಠಗಳಿಂದ । **ದಿಧಿಷಾಮಿ**—ಪೋಷಿಸುತ್ತೇನೆ । **ಅನ್ನೈಃ**—ಹವಿಸ್ಸಿನ ರೂಪದ ಅನ್ನಗಳಿಂದ **ದಧಾಮಿ**—ಧರಿಸುತ್ತೇನೆ । **ಋಗ್ಭಿಃ**—ಸ್ತುತಿಮಂತ್ರಗಳಿಂದ **ಪರಿ ವಂದೇ**—ಪ್ರದಕ್ಷಿಣಪೂರ್ವಕವಾಗಿ ನಮಸ್ಕರಿಸುತ್ತೇನೆ.

॥ ಭಾವಾರ್ಥ ॥

ಅನೇಕ ದೇವತೆಗಳಲ್ಲಿ ಅಧ್ಯನಾದವನೂ, ನಮ್ಮ ಸಖನೂ ಆದ ಅಪಾಂನಪಾತ್ ಸಂಜ್ಞಕನಾದ ಈ ಅಗ್ನಿಗೆ ಯಾಗಸಾಧನಗಳಾದ ಚರುಪುರೋಡಾಶಗಳಿಂದಲೂ ನಮಸ್ಕಾರಗಳಿಂದಲೂ ಉಪಚರಿಸುತ್ತೇನೆ. ಈ ಅಗ್ನಿಯ ಉನ್ನತವಾದ ಪ್ರದೇಶವನ್ನು ಶೋಧಿಸಿ ಅಲಂಕರಿಸುತ್ತೇನೆ. ಪ್ರಜ್ವಲಿಸುವಂತೆ ಮಾಡುವ ಕಾಷ್ಠಗಳಿಂದ ಪೋಷಿಸುತ್ತೇನೆ. ಹವಿಸ್ಸಿನ ರೂಪದ ಅನ್ನಗಳಿಂದ ಧರಿಸುತ್ತೇನೆ. ಸ್ತುತಿಮಂತ್ರಗಳಿಂದ ಪ್ರದಕ್ಷಿಣ ಪೂರ್ವಕವಾಗಿ ನಮಸ್ಕರಿಸುತ್ತೇನೆ.

## English Translation

To him our friend, the first of many (deities), we offer worship with sacrifices, oblations, and prostration: I decorate the high place

(of his presence) : I nourish him with fuel : I nourish him with (sacrificial) viands : I glorify him with hymns.

॥ ವಿಶೇಷವಿಷಯಗಳು ॥

**ಅಸ್ಮೈ ಬಹೂನಾಂ ಅವಮಾಯ—ಪುರೋವರ್ತಿನೇ ದೇವಾನಾಂ ಆದ್ಯಾಯ।** ಬಹುಶಬ್ದವು ಪ್ರಭೂತ (ಬಹಳ) ಎಂಬ ಅರ್ಥದಲ್ಲಿ ರೂಢವಾಗಿರುವುದು. ಇಲ್ಲಿ ಯಾವಾಗಲೂ ವಿಶೇಷಣವಾಗಿ ಪ್ರಯುಕ್ತವಾಗುವ ಈ ಪದಕ್ಕೆ ದೇವಾನಾಂ ಎಂಬ ಪದವನ್ನು ವಿಶೇಷ್ಯವನ್ನಾಗಿ ಅಧ್ಯಾಹಾರಮಾಡಿದೆ. ಅವಮಶಬ್ದವು ಯಾವಾಗಲೂ ನಿಕೃಷ್ಟವೆಂಬ ಅರ್ಥವನ್ನು ಬೋಧಿಸುವುದು. ಇಲ್ಲಿ ಮೊದಲನೆಯ ಎಂಬ ಅರ್ಥವನ್ನು ಹೇಳಿ ಈ ಅಪಾಂ ನಪಾತ್ ದೇವನು ಯಾಗಾರ್ಹರಾದ ದೇವತೆಗಳಲ್ಲಿ ಮೊದಲನೆಯವನು ಆಗಿರುವವನೂ, **ಸಖ್ಯೇ—ಸಮಾನಖ್ಯಾನಾಯ** ಯಜಮಾನನನ್ನು ಸ್ನೇಹಿತರಹಾಗೆ ತಿಳಿದು ಇರುವವನೂ ಆದ ನಿಮಿತ್ತ ಈ ದೇವನನ್ನು **ನಮಸಾ ಹವಿರ್ಭಿಃ** ನಮಸ್ಕಾರಗಳಿಂದಲೂ ಹವಿಸ್ಸಿನ ಅರ್ಪಣೆಗಳಿಂದಲೂ ಯಜಮಾನರು ಪೂಜಿಸುವರು ಎಂದು ವರ್ಣಿಸಿದೆ.

**ಸಾನು ಸಂಮಾರ್ಜ್ಮಿ—ಸಮುಚ್ಛ್ರಿತಪ್ರದೇಶಂ ಸಮ್ಯಕ್ ಶೋಧಯಾಮಿ ಅಲಂಕರೋಮಿ ವಾ** ಈ ಅಪಾಂ ನಪಾತ್ ಎಂಬ ಅಗ್ನಿಯನ್ನು ಇಡುವ ಪ್ರದೇಶವು ಯಾಗಶಾಲೆಯಲ್ಲಿ ವೇದಿಯಾಗಿರುವ ಕಾರಣ ಈ ಎತ್ತರವಾದ ಪ್ರದೇಶವನ್ನು ಯಜಮಾನರು ಅಥವಾ ಋತ್ವಿಜರು ಪರಿಶುದ್ಧವನ್ನಾಗಿ ಮಾಡುವರು ಅಥವಾ ಅಲಂಕಾರ ಮಾಡುವರು ಎಂದೂ ವಿವರಿಸಿದೆ.

**ಬಿಲ್ಮೈಃ—ಭಾಸನೈಃ ಕಾಷ್ಠೈಃ।** ಯಾಸ್ಕರು ಬಿಲ್ಮ ಶಬ್ದಕ್ಕೆ **ಬಿಲ್ಮಂ ಭಿಲ್ಮಂ ಭಾಸನಮಿತಿ ವಾ** (ನಿ. ೧–೨೦) ಎಂದು ವಿವರಿಸಿದ್ದಾರೆ. ದುರ್ಗಾಚಾರ್ಯರು **ಭಿದೇರ್ಭಾಸತೇರ್ವಾ ಬಿಲ್ಮ ಶಬ್ದಃ** ಎಂದು **ಬಿಲ್ಮ** ಶಬ್ದದ ರೂಪನಿಷ್ಪತ್ತಿಯನ್ನು ವಿವರಿಸಿ, **ಭೇದೋ ವ್ಯಾಸಃ** ಅಥವಾ **ಭಾಸನಮೇವ ಬಿಲ್ಮಶಬ್ದೇನೋಚ್ಯತೇ** ವಿವರಿಸುವುದು ಅಥವಾ ಪ್ರಕಾಶಗೊಳಿಸುವುದು ಎಂದು ಬಿಲ್ಮಶಬ್ದಾರ್ಥವನ್ನು ವರ್ಣಿಸಿದ್ದಾರೆ. ಇಲ್ಲಿ ಅಗ್ನಿಯನ್ನು ಪ್ರಕಾಶಗೊಳಿಸುವ ಸಾಧನವಾದ ಇಂಧನ (ಕಟ್ಟಿಗೆ) ಎಂದು ಅರ್ಥವನ್ನು ಸಾಯಣರು ಹೇಳಿದ್ದಾರೆ

॥ ಸಂಹಿತಾಪಾಠಃ ॥

ಸ ಈಂ ವೃಷಾಜನಯತ್ತಾಸು ಗರ್ಭಂ ಸ ಈಂ ಶಿಶುರ್ಧಯತಿ ತಂ ರಿಹಂತಿ ।
ಸೋ ಅಪಾಂ ನಪಾದನಭಿಮ್ಲಾತವರ್ಣೋಽನ್ಯಸ್ಯೇವೇಹ ತನ್ವಾ ವಿವೇಷ ॥ ೧೩

॥ ಪದಪಾಠಃ ॥

ಸಃ । ಈಂ । ವೃಷಾ ಅಜನಯತ್ । ತಾಸು । ಗರ್ಭಂ । ಸಃ । ಈಂ । ಶಿಶುಃ । ಧಯತಿ । ತಂ । ರಿಹಂತಿ ।
ಸಃ । ಅಪಾಂ । ನಪಾತ್ । ಅನಭಿಮ್ಲಾತಽವರ್ಣಃ । ಅನ್ಯಸ್ಯಽಇವ । ಇಹ । ತನ್ವಾ । ವಿವೇಷ ॥ ೧೩

॥ ಸಾಯಣಭಾಷ್ಯಂ ॥

ಸ ಈಂ ಸೋಽಯಮಪಾಂನಪಾತ್ಸಂಜ್ಞಕೋ ದೇವೋ ವೃಷಾ ಸೇಕ್ತಾ ಭೂತ್ವಾ ತಾಸು ಮೇಘಸ್ಥಾಸ್ವಪ್ಸು ಗರ್ಭಮಜನಯತ್ ಸ್ವಾತ್ಮಾನಮೇವ ಗರ್ಭರೂಪೇಣ ವರ್ಷಣಾರ್ಥಂ ಕೃತವಾನಿತ್ಯರ್ಥಃ। ಗರ್ಭೋ ಭೂತ್ವಾ ಚ ಸ ಈಂ ಸೋಽಯಂ ಮಾಧ್ಯಮಿಕೋ ವೈದ್ಯುತೋಽಗ್ನಿಸ್ತಾಸಾಂ ಶಿಶುಃ ಪುತ್ರಃ ಸನ್ ಧಯತಿ। ಮೇಘಸ್ಥಾಸ್ತಾಃ ಪಿಬತಿ। ಅಬಿಂಧನೋ ಹ್ಯಸೌ। ತಂ ಪುತ್ರಸ್ಥಾನೀಯಮದ್ಭಿರಾಪಶ್ಚ ರಿಹಂತಿ। ಲಿಹಂತಿ॥ ಲಿಹ ಆಸ್ವಾದನೇ। ಕಪಿಲಕಾದಿತ್ವಾಲ್ಲತ್ವವಿಕಲ್ಪಃ॥ ಸೋಽಯಮಪಾಂನಪಾತ್ ವೃಷ್ಣ್ಯಾ ಸಹ ಭೂಮೌ ನಿಪತಿತೋಽನಭಿಮ್ಲಾತವರ್ಣಃ। ಅಭಿತೋ ಮ್ಲಾತೋ ಮ್ಲಾನಃ ಕ್ಷೀಣೋ ವರ್ಣೋ ಯಸ್ಯ ತದ್ವಿಪರೀತೋಽತ್ಯರ್ಥಂ ದೀಪ್ಯಮಾನಃ ಸನ್ ಇಹಾಸ್ಮಿನ್ ಲೋಕೇಽನ್ಯಸ್ಯೇವ। ಇವಶಬ್ದೋಽವಧಾರಣೇ। ಅನ್ಯಸ್ಯ ಪಾರ್ಥಿವಸ್ಯೈವಾಗ್ನೇಸ್ತನ್ವಾ ಶರೀರೇಣ ಕಾಷ್ಠೇಂಧನಲಕ್ಷಣೇನ ವಿವೇಷ। ವ್ಯಾಪ್ತೋ ಬಭೂವ॥ ವಿಷ್ಲೃ ವ್ಯಾಪ್ತೌ॥

॥ ಪ್ರತಿಪದಾರ್ಥ ॥

**ಸ ಈಂ** — ಅದೇ ಅಪಾಂನಪಾತ್ ಸಂಜ್ಞಕನಾದ ಅಗ್ನಿಯು **ವೃಷಾ** — ಸೇಚನಸಾಮರ್ಥ್ಯವುಳ್ಳವನಾಗಿ। **ತಾಸು** — ಮೇಘಸ್ಥವಾದ ಉದಕಗಳಲ್ಲಿ। **ಗರ್ಭಂ** — ಗರ್ಭವನ್ನು। **ಅಜನಯತ್** — (ತಾನೇ) ಉತ್ಪನ್ನಮಾಡಿಕೊಂಡನು। **ಸ ಈಂ** — ತನ್ನ ಗರ್ಭವನ್ನು ತಾನೇ ಸೃಷ್ಟಿಸಿದ ಅದೇ ಅಗ್ನಿಯು। **ಶಿಶುಃ** — ವಿದ್ಯುದ್ರೂಪದಲ್ಲಿ ಶಿಶುವಾಗಿ ಜನಿಸಿ। **ಧಯತಿ** — (ಮೇಘಸ್ಥವಾದ ಉದಕಗಳನ್ನು) ಪಾನಮಾಡುತ್ತಾನೆ। **ತಂ** — ಈ ಅಗ್ನಿಯನ್ನು। **ರಿಹಂತಿ** — (ಉದಕಗಳು) ಸ್ಪರ್ಶಿಸುತ್ತವೆ। **ಸಃ ಅಪಾಂ ನಪಾತ್** — ಅದೇ ಅಪಾಂನಪಾತ್ ಎಂಬ ಅಗ್ನಿಯು। **ಅನಭಿಮ್ಲಾತವರ್ಣಃ** — ಕೊಂಚವೂ ಕ್ಷಯಿಸದ ಪ್ರಕಾಶವುಳ್ಳವನಾಗಿ। **ಇಹ** — ಈ ಪೃಥ್ವಿಯಲ್ಲಿ। **ಅನ್ಯಸ್ಯೇವ ತನ್ವಾ** — ವಿದ್ಯುದ್ರೂಪಕ್ಕಿಂತಲೂ ಬೇರೆಯಾದ ಪಾರ್ಥಿವಾಗ್ನಿಯ ಕಾಷ್ಠಾದಿ ಶರೀರಗಳಿಂದ। **ವಿವೇಷ** — ವ್ಯಾಪ್ತನಾಗಿದ್ದಾನೆ.

॥ ಭಾವಾರ್ಥ ॥

ಅದೇ ಅಪಾಂನಪಾತ್ ಸಂಜ್ಞಕನಾದ ಅಗ್ನಿಯು ಸೇಚನಸಾಮರ್ಥ್ಯವುಳ್ಳವನಾಗಿ ಮೇಘಸ್ಥವಾದ ಉದಕಗಳಲ್ಲಿ ತನ್ನ ಗರ್ಭವನ್ನು ತಾನೇ ಸೃಷ್ಟಿಸಿಕೊಂಡನು. ಅನಂತರ ತಾನೇ ವಿದ್ಯುದ್ರೂಪದ ಶಿಶುವಾಗಿ ಜನಿಸಿ ಮೇಘಸ್ಥವಾದ ಉದಕಗಳನ್ನು ಪಾನಮಾಡುತ್ತಾನೆ. ಈ ಅಗ್ನಿಯನ್ನು ಉದಕಗಳು ಸ್ಪರ್ಶಿಸುತ್ತವೆ. ಅದೇ ಅಗ್ನಿಯು ಕೊಂಚವೂ ಕ್ಷಯಿಸದ ಪ್ರಕಾಶವುಳ್ಳವನಾಗಿ ಈ ಪೃಥ್ವಿಯಲ್ಲಿ ವಿದ್ಯುದ್ರೂಪಕ್ಕಿಂತಲೂ ಬೇರೆಯಾದ ಪಾರ್ಥಿವಾಗ್ನಿಯ ಕಾಷ್ಠಾದಿ ಶರೀರಗಳಿಂದ ವ್ಯಾಪ್ತನಾಗಿದ್ದಾನೆ

## English Translation.

Vigorous, he has generated himself as an embryo in those (waters): he is their infant; he sucks them; they bedew him (with moisture); the grandson of the waters of untarnished splendour has descended to this (earth) in the form of a different (fire).

॥ ವಿಶೇಷವಿಷಯಗಳು ॥

**ಸ ಈಂ ವೃಷಾ ತಾಸು ಗರ್ಭಂ ಅಜನಯತ್—ಸೋऽಯಮಪಾಂ ನಪಾತ್ಸಂಜ್ಞಕೋ ದೇವಃ ಸೇಕ್ತಾ ಭೂತ್ವಾ ಮೇಘಸ್ಥಾಸ್ವಪ್ಸು ಸ್ವಾತ್ಮಾನಮೇವ ಗರ್ಭರೂಪೇಣ ವರ್ಷಣಾರ್ಥಂ ಕೃತವಾನ್ ।** ಅಪಾಂ ನಪಾತ್ ಎಂಬ ದೇವನು ವೈದ್ಯುತಾಗ್ನಿಯ ರೂಪದಿಂದ ಮೇಘಗಳ ಮಧ್ಯದಲ್ಲಿಯೂ, ಬಡಬಾಗ್ನಿಯ ರೂಪದಿಂದ ಸಮುದ್ರಮಧ್ಯದಲ್ಲಿಯೂ ಇರುವನೆಂದು ಹಿಂದೆ ವಿವರಿಸಿದೆ. ಮೇಘ ಮಧ್ಯದಲ್ಲಿರುವ ಈ ದೇವನು ಲೋಕರೀತಿಯಾಗಿ ಉತ್ಪನ್ನನಾದನು, ಶಿಶುರೂಪದಿಂದ ಇರುವವನಾದ ಈ ದೇವನು ವೃದ್ಧಿಯನ್ನು ಹೊಂದಿ, ಲೋಕದಲ್ಲಿ ವ್ಯಾಪಿಸಿರುವನು ಎಂಬ ಅಂಶವು ಒಂದು ಪ್ರಾಣಿಯು ಗರ್ಭಕ್ಕೆ ಬಂದು ಉತ್ಪನ್ನವಾಗಿ ವೃದ್ಧಿಹೊಂದಿ ಲೋಕದಲ್ಲಿ ವ್ಯಾಪಿಸಿರುವಿಕೆಯ ಕ್ರಮವನ್ನು ದೃಷ್ಟಾಂತವಾಗಿ ತೋರಿಸಿ ಇಲ್ಲಿ ವಿವರಿಸಿದೆ. ಮೇಘಗಳಲ್ಲಿರುವ ಉದಕಗಳು ಘನರೂಪದಿಂದ (ಗಟ್ಟಿಯಾಗಿ) ಇರುವ ಕಾರಣ ವೃಷ್ಟ್ಯುದಕಗಳು ಭೂಮಿಗೆ ಬೀಳುವುದಕ್ಕಾಗಿ ಈ ದೇವನು ಮೇಘಗಳ ಮಧ್ಯದಲ್ಲಿರುವುದು. ನಿತ್ಯನಾದ (ಜನ್ಮಮರಣಗಳು ಇಲ್ಲದ) ಈದೇವನಿಗೆ ಗರ್ಭಸ್ಥತ್ವರೂಪವೆಂದು ಉಕ್ತವಾಗಿದೆ. ಗರ್ಭದಿಂದ ಹೊರಗೆ ಬಂದನಂತರ (ಉತ್ಪನ್ನನಾದನಂತರ) ಶಿಶುವು ವೃದ್ಧಿಯಾಗಲು ಆಹಾರಪದಾರ್ಥವು ಅವಶ್ಯಕವಾಗಿರುವಂತೆ **ಸ ಈಂ ಶಿಶುಃ ಧಯತಿ—ಸೋऽಯಂ ಮಾಧ್ಯಮಿಕಃ ವೈದ್ಯುತಃ ಅಗ್ನಿಃ ತಾಸಾಂ ಶಿಶುಪುತ್ರಸ್ಸನ್ ಮೇಘಸ್ಥಾಃ ತಾಃ ಪಿಬತಿ । ಅಬಿಂಧನೋऽಸೌ ।** ಮಧ್ಯಮಸ್ಥಾನ ದೇವನಾದ ವೈದ್ಯುತಾಗ್ನಿರೂಪದಿಂದ ಇರುವ ಈ ದೇವನು ಉದಕಗಳ ಶಿಶುವಾಗಿ, ಶಿಶುವು ತನ್ನ ಶರೀರಾಭಿವೃದ್ಧಿಗಾಗಿ ಆಹಾರವನ್ನು ಸ್ವೀಕರಿಸುವಹಾಗೆ, ಮೇಘಗಳಲ್ಲಿರುವ ಉದಕವನ್ನೇ ಪಾನಮಾಡುವನು ಎಂದು ವರ್ಣಿಸಿದೆ.

**ಅಪಾಂನಪಾತ್ ಅನಭಿಮ್ಲಾತವರ್ಣಃ ಇಹ ಅನ್ಯಸ್ಯೇವ ತನ್ವಾ ವಿವೇಶ ಅಯಂ ವೃಷ್ಟ್ಯಾ ಸಹ ಭೂಮೌ ನಿಪತಿತಃ ಮ್ಲಾತಃ ಮ್ಲಾನಃ ಕ್ಷೀಣಃ ವರ್ಣೋ ಯಸ್ಯ ತದ್ವಿಪರೀತಃ ಅತ್ಯರ್ಥಂ ದೀಪ್ಯಮಾನಃ ಅಸ್ಮಿನ್ ಲೋಕೇ ಪಾರ್ಥಿವಸ್ಯೈವಾಗ್ನೇಃ ಕಾಷ್ಠೇಂಧನತ್ವಲಕ್ಷಣೇನ ಶರೀರೇಣ ವ್ಯಾಪ್ತೋ ಬಭೂವ ।** ಮೇಘಗಳು ವೃಷ್ಟ್ಯುದಕಗಳ ಸಂಗಡ ಭೂಮಿಯನ್ನು ವ್ಯಾಪಿಸಿ, ತನ್ನ ವೈದ್ಯುತಾಗ್ನಿರೂಪದಿಂದ ಇರುವ ಆಹಾರಕ್ಕಿಂತಲೂ ಬೇರೆಯಾದ ಪಾರ್ಥಿವಾಗ್ನಿಯ ರೂಪವನ್ನು ಹೊಂದಿ ಜಗತ್ತೆಲ್ಲವನ್ನೂ ವ್ಯಾಪಿಸಿರುವನೆಂದೂ, ಈ ಪಾರ್ಥಿವಾಗ್ನಿಯು ತನ್ನ ಅಭಿವೃದ್ಧಿಗೆ ಅವಶ್ಯಕವಾದ ಕಾಷ್ಠೇಂಧನಗಳನ್ನೂ ಈ ದೇವನು ತನ್ನ ರೂಪದಿಂದ ಸ್ವೀಕರಿಸುವನೆಂದೂ ವರ್ಣಿಸಿದೆ.

**ಅನಭಿಮ್ಲಾತವರ್ಣಃ—ಅಭಿತಃ ಕ್ಷೀಣಃ ವರ್ಣಃ ಯಸ್ಯ ತದ್ವಿಪರೀತಃ ಅತ್ಯರ್ಥಂ ದೀಪ್ಯಮಾನಃ।** ಸರ್ವಪ್ರಕಾರದಿಂದಲೂ ಕಾಂತಿರಹಿತವಾದುದು ಅಭಿಮ್ಲಾತವರ್ಣವೆಂದೂ ಅದಕ್ಕೆ ವಿರುದ್ಧವಾಗಿ ಬಹಳ ಕಾಂತಿಯಿಂದ ಕೂಡಿರುವುದು ಅನಭಿಮ್ಲಾತವರ್ಣವೆಂದೂ ಅರ್ಥವನ್ನು ವರ್ಣಿಸಿದೆ.

। ಸಂಹಿತಾಪಾಠಃ ।

ಅಸ್ಮಿನ್ಪದೇ ಪರಮೇ ತಸ್ಥಿವಾಂಸಮಧ್ವಸ್ಮಭಿರ್ವಿಶ್ವಹಾ ದೀದಿವಾಂಸಂ ।

ಆಪೋ ನಪ್ತ್ರೇ ಘೃತಮನ್ನಂ ವಹಂತೀಃ ಸ್ವಯಮತ್ಕೈಃ ಪರಿ ದೀಯಂತಿ ಯಹ್ವೀಃ ॥

॥ ಪದಪಾಠಃ ॥

ಅಸ್ಮಿನ್ । ಪದೇ । ಪರಮೇ । ತಸ್ಥಿಽವಾಂಸಂ ಅಧ್ವಸ್ಮಽಭಿಃ । ವಿಶ್ವಹಾ । ದೀದಿಽವಾಂಸಂ ।

ಆಪಃ । ನಪ್ತ್ರೇ । ಘೃತಂ । ಅನ್ನಂ । ವಹಂತೀಃ ಸ್ವಯಂ । ಅತ್ಕೈಃ । ಪರಿ । ದೀಯಂತಿ । ಯಹ್ವೀಃ ॥

॥ ಸಾಯಣಭಾಷ್ಯಂ ॥

ಪರಮ ಉತ್ಕೃಷ್ಟೇಽಸ್ಮಿನ್ಪದೇಂಽತರಿಕ್ಷಲಕ್ಷಣೇ ಸ್ಥಾನೇ ತಸ್ಥಿವಾಂಸಂ ಸ್ಥಿತವಂತಮಧ್ವಸ್ಮಭಿರ್ಧ್ವಂಸನರಹಿತೈಸ್ತೇಜೋಭಿರ್ವಿಶ್ವಹಾ ಸರ್ವಾಣ್ಯಹಾನಿ ದೀದಿವಾಂಸಂ ದೀಪ್ಯಮಾನಮಪಾಂ ನಪಾತಂ ಯಹ್ವೀರ್ಯಹ್ವ್ಯೋ ಮಹತ್ಯ ಆಪಃ ಸ್ವಯಮಾತ್ಮನೈವಾತ್ಕೈರತನಶೀಲೈಃ ಸತತಗಂತೃಭಿಃ ಸ್ವಕೀಯೈ ರೂಪೈಃ ಪರಿದೀಯಂತಿ । ಪರಿಗಚ್ಛಂತಿ ॥ ದೀಯತಿರ್ಗತಿಕರ್ಮಾ । ದೀಙ್ ಕ್ಷಯೇ । ವ್ಯತ್ಯಯೇನ ಪರಸ್ಮೈಪದಂ ॥ ಕಿಂ ಕುರ್ವತ್ಯಃ । ನಪ್ತ್ರೇಽಪಾಂ ನಪಾತೇ ಘೃತಂ ಕ್ಷರಣಶೀಲಮುದಕಾತ್ಮಕಮನ್ನಂ ವಹಂತೀರ್ವಹಂತ್ಯಃ ॥

। ಪ್ರತಿಪದಾರ್ಥ ।

ಪರಮೇ—ಅತ್ಯುತ್ಕೃಷ್ಟವಾದುದೂ । ಅಸ್ಮಿನ್ ಪದೇ—ಅಂತರಿಕ್ಷರೂಪವಾದುದೂ ಆದ ಸ್ಥಾನದಲ್ಲಿ । ತಸ್ಥಿವಾಂಸಂ—ಇರುವವನೂ ಅಧ್ವಸ್ಮಭಿಃ—ನಾಶರಹಿತವಾದ ತೇಜಸ್ಸುಗಳಿಂದ । ವಿಶ್ವಹಾ—ಸಮಸ್ತದಿನಗಳಲ್ಲಿಯೂ . ದೀದಿವಾಂಸಂ—ಪ್ರಕಾಶಿಸುವವನೂ ಆದ ಅಪಾಂನಪಾತ್ ಸಂಜ್ಞಕನಾದ ಅಗ್ನಿಯನ್ನು । ಯಹ್ವೀಃ—ಮಹತ್ತಾದ ಸ್ವರೂಪವುಳ್ಳ । ಆಪಃ—ಉದಕಗಳು । ನಪ್ತ್ರೇ—ತಮ್ಮ ಪೌತ್ರನಿಗೆ । ಘೃತಂ—ಉದಕಾತ್ಮಕವಾದ । ಅನ್ನಂ—ಅನ್ನವನ್ನು । ವಹಂತೀಃ—ವಹಿಸಿಕೊಂಡು । ಸ್ವಯಂ—ಸ್ವಪ್ರೇರಣೆಯಿಂದಲೇ । ಅತ್ಕೈಃ—ಸತತಗಾಮಿಯಾದ ತಮ್ಮ ಸ್ವರೂಪಗಳಿಂದ । ಪರಿ ದೀಯಂತಿ—ಸುತ್ತುವರಿದು ಪ್ರವಹಿಸುತ್ತವೆ.

ಭಾವಾರ್ಥ ॥

ಅತ್ಯುತ್ಕೃಷ್ಟವಾದುದೂ, ಅಂತರಿಕ್ಷರೂಪವಾದುದೂ ಆದ ಸ್ಥಾನದಲ್ಲಿ ಇರುವವನೂ, ನಾಶರಹಿತವಾದ ತೇಜಸ್ಸುಗಳಿಂದ ಸಮಸ್ತದಿನಗಳಲ್ಲಿಯೂ ಪ್ರಕಾಶಿಸುವವನೂ ಆದ ಅಪಾಂನಪಾತ್ ಸಂಜ್ಞಕನಾದ ಅಗ್ನಿಯನ್ನು ಉದ್ದೇಶಿಸಿ ಮಹತ್ತಾದ ಸ್ವರೂಪವುಳ್ಳ ಉದಕಗಳು ತಮ್ಮ ಪೌತ್ರನಿಗೆ ಉದಕಾತ್ಮಕವಾದ ಅನ್ನವನ್ನು ವಹಿಸಿಕೊಂಡು ಸ್ವಪ್ರೇರಣೆಯಿಂದಲೇ ಸತತಗಾಮಿಯಾದ ತಮ್ಮ ಸ್ವರೂಪಗಳಿಂದ ಸುತ್ತುವರೆದು ಪ್ರವಹಿಸುತ್ತವೆ.

## English Translation.

The abundant waters, bearing sustenance to their grandson, flow round him wiih spontaneous movements; when abiding in his supreme sphere, and shining daily with imperishable (rays).

॥ ವಿಶೇಷವಿಷಯಗಳು ॥

ಅಪಾಂನಪಾತ್ ಎಂಬ ದೇವನು **ಪರಮೇ ಪದೇ ತಸ್ಥಿವಾಂಸಂ— ಉತ್ಕೃಷ್ಟೇ ಅಂತರಿಕ್ಷಲಕ್ಷಣೇ ಸ್ಥಾನೇ ಸ್ಥಿತವಂತಂ**–ಪರಮಪದ ಶಬ್ದಕ್ಕೆ ಸರ್ವಕ್ಕೂ ಉನ್ನತವಾದ ಅಥವಾ ಅತಿಶಯವಾದ ಅಂತರಿಕ್ಷವೆಂದು ಅರ್ಥವನ್ನು ಹೇಳಿದೆ. ಅಂತರಿಕ್ಷದಲ್ಲಿ ಇರುವವನೆಂದೂ ವರ್ಣಿಸಿದೆ.

**ಅಧ್ವಸ್ಮಭಿಃ ವಿಶ್ವಹಾ ದೀದಿವಾಂಸಂ—ಧ್ವಂಸನರಹಿತೈಃ ತೇಜೋಭಿಃ ಸರ್ವಾಣ್ಯಹಾನಿ ದೀಪ್ಯಮಾನಂ**–ಇತರ ಪ್ರಕಾಶಗಳಿಂದ ತಿರಸ್ಕಾರ ಹೊಂದದೆ ಇರುವ ಅಥವಾ ಚ್ಯುತಿಯಿಲ್ಲದಿರುವ ತನ್ನ ತೇಜಸ್ಸುಗಳಿಂದ ಸರ್ವಕಾಲದಲ್ಲಿಯೂ ಈ ದೇವನು ಪ್ರಕಾಶಿಸುತ್ತಿರುವನು ಎಂದು ವಿವರಿಸಿದೆ.

**ಯಹ್ವೀಃ ಆಪಃ ಸ್ವಯಮತ್ಕೈಃ ಪರಿ ದೀಯಂತಿ—ಮಹತ್ಯಃ ಆಪಃ ಆತ್ಮನಾ ಸತತಗಂತೃಭಿಃ ಸ್ವಕೀಯೈಃ ರೂಪೈಃ ಪರಿಗಚ್ಛಂತಿ ।** ಪ್ರಭೂತವಾದ ಉದಕಗಳು ಸರ್ವಕಾಲದಲ್ಲಿಯೂ ಪ್ರವಹಿಸುವ ಸ್ವಭಾವದಿಂದ ಯುಕ್ತವಾದ ತಮ್ಮ ತಮ್ಮ ಸ್ವರೂಪಗಳಿಂದ ತಾವಾಗಿಯೇ ಸುತ್ತಲೂ ಇರುವವುಗಳಾಗಿ ಈ ದೇವನನ್ನು ಸೇವಿಸುತ್ತವೆ. ಮತ್ತು, **ನದ್ಯಃ ಅಪಾಂನಪಾತೇ ಘೃತಮನ್ನಂ ವಹಂತೀಃ**—ನದಿಗಳು ಕೂಡ ಪ್ರವಹಿಸುವ ಸ್ವಭಾವದಿಂದ ಇರುತ್ತಾ ಉದಕರೂಪವಾದ ಅನ್ನವನ್ನು ಈ ದೇವನಿಗಾಗಿ ವಹಿಸುತ್ತವೆ ಎಂದು ಅರ್ಥವನ್ನು ಹೇಳಿದೆ. ಇದರಿಂದ ಉನ್ನತವಾದ ಗೌರವಾಸ್ಪದವಾದ ಸ್ಥಾನದಲ್ಲಿರುವ ಕಾಂತಿಯುತನಾಗಿರುವ ಪ್ರಭುವನ್ನು ಆಪ್ತರಾದ, ಅವನಿಂದ ಉಪಕೃತರಾದ ಭೃತ್ಯರು ಅಥವಾ ಬಂಧುಗಳು ಸೇವಿಸುವಂತೆ ಉದಕಗಳೂ ನದಿಗಳೂ ಈ ದೇವನನ್ನು ಸೇವಿಸುವರೆಂದು ಲೋಕರೀತಿಯು ಉಕ್ತವಾಗಿದೆ ಎಂದು ಸೂಚಿತವಾಗಿದೆ ಎಂದೂ ತಿಳಿಯಬಹುದಾಗಿದೆ.

ಪರಮಪದ ಶಬ್ದಾರ್ಥವು ಬೇರೆಯಕಡೆಯಲ್ಲಿ ವಿಶದವಾಗಿ ವಿವೃತವಾಗಿದೆ.



॥ ಸಂಹಿತಾಪಾಠಃ ॥

ಅಯಾಂಸಮಗ್ನೇ ಸುಕ್ಷಿತಿಂ ಜನಾಯಾಯಾಂಸಮು ಮಘವದ್ಭ್ಯಃ ಸುವೃಕ್ತಿಂ ।
ವಿಶ್ವಂ ತದ್ಭದ್ರಂ ಯದವಂತಿ ದೇವಾ ಬೃಹದ್ವದೇಮ ವಿದಥೇ ಸುವೀರಾಃ ॥ ೧೫ ॥

ಪದಪಾಠಃ ॥

ಅಯಾಂಸಂ । ಅಗ್ನೇ । ಸುऽಕ್ಷಿತಿಂ । ಜನಾಯ । ಅಯಾಂಸಂ । ಊಂ ಇತಿ । ಮಘವತ್ऽಭ್ಯಃ ಸುऽವೃಕ್ತಿಂ ।

ವಿಶ್ವಂ । ತತ್ । ಭದ್ರಂ । ಯತ್ । ಅವಂತಿ । ದೇವಾಃ । ಬೃಹತ್ । ವದೇಮ । ವಿದಥೇ । ಸುऽವೀರಾಃ

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸುಕ್ಷಿತಿಂ ಶೋಭನನಿವಾಸಂ ತ್ವಾಮಯಾಂಸಂ । ಉಪಾಗಚ್ಛಂ । ಕಿಮರ್ಥಂ । ಜನಾಯ । ಅಸ್ಮದೀಯಪುತ್ರಾದಿಜನನಾರ್ಥಂ । ತಥಾ ಮಘವದ್ಭ್ಯಃ ಹವಿರ್ಲಕ್ಷಣಧನಯುಕ್ತೇಭ್ಯೋ ಯಜಮಾನೇಭ್ಯಶ್ಚ ಸುವೃಕ್ತಿಂ ಶೋಭನಾವರ್ಜಕಂ ತ್ವದ್ವಿಷಯಂ ಸ್ತೋತ್ರಮಯಾಂಸಂ । ಉಪಾಗಚ್ಛಂ॥ ಯಮ ಉಪರಮೇ ॥ ಅತಃ ಕಾರಣಾದ್ಯದ್ಭದ್ರಂ ಸರ್ವೇ ದೇವಾ ಅವಂತಿ ರಕ್ಷಂತಿ ವಿಶ್ವಂ ಸರ್ವಂ ತದ್ಭದ್ರಮಸ್ಮಾಕಂ ಭವತು । ಸುವೀರಾಃ ಸುಪುತ್ರಾ ವಯಂ ವಿದಥೇ ಯಜ್ಞೇ ಗೃಹೇ ವಾ ಬೃಹತ್ ಪ್ರೌಢಂ ಸ್ತೋತ್ರಂ ವದೇಮ । ಉಚ್ಚಾರಯಾಮ ॥

॥ ಪ್ರತಿಪದಾರ್ಥ ॥

**ಅಗ್ನೇ** — ಎಲೈ ಅಗ್ನಿಯೇ । **ಸುಕ್ಷಿತಿಂ** — ಶ್ರೇಷ್ಠವಾದ ನಿವಾಸವುಳ್ಳ ನಿನ್ನನ್ನು । **ಜನಾಯ**— ಸಂತಾನಾರ್ಥವಾಗಿ । **ಅಯಾಂಸಂ**—(ಯಾಚಿಸಲು) ಸಮೀಪಿಸಿದ್ದೇನೆ । **ಮಘವದ್ಭ್ಯಃ**—ಹವಿಸ್ಸಿನ ರೂಪದ ಧನದಿಂದ ಕೂಡಿದ ಯಜಮಾನರಿಗೋಸ್ಕರ । **ಸುವೃಕ್ತಿಂ**—ಶೋಭನಾತ್ಮಕವಾದ ಸ್ತುತಿಯನ್ನು । **ಅಯಾಂಸಂ**— ಅರ್ಪಿಸುತ್ತಾ ಸಮೀಪಿಸಿದ್ದೇನೆ । **ಯತ್ ಭದ್ರಂ**—ಯಾವ ಕಲ್ಯಾಣವನ್ನು । **ದೇವಾಃ**—ಸಕಲದೇವತೆಗಳೂ । **ಅವಂತಿ**—ರಕ್ಷಿಸುತ್ತಾರೆಯೋ । **ವಿಶ್ವಂ ತತ್**—ಆ ಸಮಸ್ತ ಕಲ್ಯಾಣವೂ (ನಮಗೂ ಸೇರಲಿ) । **ಸುವೀರಾಃ**— ಶ್ರೇಷ್ಠವಾದ ಪುತ್ರರೊಡಗೂಡಿದ ನಾವು । **ವಿದಥೇ**—ಯಜ್ಞಗೃಹದಲ್ಲಿ । **ಬೃಹತ್**—ಪ್ರೌಢವಾದ ಸ್ತುತಿಯನ್ನು । **ವದೇಮ**— ಪಠಿಸುವೆವು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಶ್ರೇಷ್ಠವಾದ ನಿವಾಸವುಳ್ಳ ನಿನ್ನನ್ನು ಸಂತಾನಾರ್ಥವಾಗಿ ಯಾಚಿಸಲು ಸಮೀಪಿಸಿದ್ದೇನೆ. ಹವಿಸ್ಸಿನ ರೂಪದ ಧನದಿಂದ ಕೂಡಿದ ಯಜಮಾನರಿಗೋಸ್ಕರ ಶೋಭನಾತ್ಮಕವಾದ ಸ್ತುತಿಯನ್ನು ಅರ್ಪಿಸುತ್ತಾ ಸಮೀಪಿಸಿದ್ದೇನೆ. ಯಾವ ಕಲ್ಯಾಣವನ್ನು ಸಕಲದೇವತೆಗಳೂ ರಕ್ಷಿಸುತ್ತಾರೆಯೋ, ಆ ಸಮಸ್ತಕಲ್ಯಾಣವೂ ನಮಗೂ ಸೇರಲಿ. ಶ್ರೇಷ್ಠವಾದ ಪುತ್ರರೊಡಗೂಡಿದ ನಾವು ಯಜ್ಞಗೃಹದಲ್ಲಿ ಪ್ರೌಢವಾದ ಸ್ತುತಿಯನ್ನು ಪಠಿಸುವೆವು.

## English Translation.

I have come, Agni, to you, (the giver) of good dwellings, for the sake of offspring : I have come with a propitiatory hymn for the sake of the opulent (offerers of oblations) : may all the good which the gods defend (be ours) ; that, blessed with excellent descendants, we may worthily glorify you at this sacrifice.

॥ ವಿಶೇಷವಿಷಯಗಳು ॥

ಈ ಋಕ್ಕಿನ ಪೂರ್ವಾರ್ಧದ ಅರ್ಥವು ಮಂತ್ರದೃಷ್ಟೃವಾದ ಋಷಿಯ ಪ್ರಾರ್ಥನಾರೂಪವಾಗಿಯೂ ಉತ್ತರಾರ್ಧವು (ಯಾಗವನ್ನಾಚರಿಸುವ ಯಜಮಾನರ) ಪ್ರಾರ್ಥನೆಯಾಗಿಯೂ ಇರುವುದೆಂದು ಹೇಳಬಹುದಾಗಿದೆ.

ಅಗ್ನೇ ಎಂದು ಅಗ್ನಿಯನ್ನು ಸಂಬೋಧಿಸಿ **ಸುಕ್ಷಿತಿಂ ಜನಾಯ ಆಯಾಸಂ—ಶೋಭನನಿವಾಸಂ ಅಸ್ಮದೀಯಪುತ್ರಾದಿಜನನಾರ್ಥಂ ಉಪಾಗಚ್ಛಂ ।** ಉತ್ತಮವಾದ ವಾಸಸ್ಥಾನವನ್ನು ಹೊಂದಿರುವ ಅಗ್ನಿಯು ತನ್ನನ್ನು ಸೇವಿಸುವ ನಮಗೆ ಪುತ್ರರೇ ಮೊದಲಾದವರು ಉತ್ಪನ್ನರಾಗುವಂತೆ ಮಾಡಲಿ ಎಂದು ಪ್ರಾರ್ಥಿತವಾಗಿದೆ. ಇಲ್ಲಿ **ಜನಾಯ** ಎಂಬ ಪದಕ್ಕೆ **ಪುತ್ರಾದಿಜನನಂ** ಪುತ್ರರು ಉತ್ಪನ್ನರಾಗುವಿಕೆ ಎಂಬ ಅರ್ಥವನ್ನು ವಿವರಿಸಿದೆ. ಮಘ ಶಬ್ದವು ಧನನಾಮಗಳಲ್ಲಿ (ನಿ. ೩–೯) ಉಕ್ತವಾಗಿದ್ದರೂ **ಮಘವದ್ಭ್ಯಃ** ಎಂಬ ಪದಕ್ಕೆ **ಹವಿರ್ಲಕ್ಷಣಧನಯುಕ್ತೇಭ್ಯಃ** ಹವಿಸ್ಸಿನ ರೂಪವಾದ ಧನವುಳ್ಳವರಾದ ಯಜಮಾನರಿಗೋಸ್ಕರವಾಗಿ ಉತ್ತಮವಾದ ಸ್ತುತಿಯನ್ನು ಅಗ್ನಿಯ ವಿಷಯವಾಗಿ ಪಠಿಸುತ್ತೇವೆ ಎಂದು ವರ್ಣಿಸಿದೆ.

ಯಜಮಾನರಾದ ನಾವು ಅಗ್ನಿಯನ್ನು ಕುರಿತು ಮಾಡುವ ಪ್ರಾರ್ಥನೆಯು **ಯತ್ ಭದ್ರಂ ಸರ್ವೇ ದೇವಾಃ ಅವಂತಿ** ಸಮಸ್ತ ದೇವತೆಗಳು ಅಪೇಕ್ಷಿಸುತ್ತಿರುವ ರಕ್ಷಣಾರ್ಹವಾದ ಕಲ್ಯಾಣವು ಯಜಮಾನರಾದ ನಮಗೂ ಉಂಟಾಗಲಿ ಎಂದು ಆಶಿಸಿದೆ.



## ಮೂವತ್ತಾರನೆಯ ಸೂಕ್ತವು

**ತುಭ್ಯಮಿತಿ ಷಡೃಚಂ ಚತುರ್ಥಂ ಸೂಕ್ತಂ ಗಾರ್ತ್ಸಮದಂ ಜಾಗತಂ । ಪ್ರಥಮಾಯಾ ಇಂದ್ರೋ ಮಧುಶ್ಚ ದೇವತಾ । ದ್ವಿತೀಯಾಯಾ ಮರುತೋ ಮಾಧವಶ್ಚ । ತೃತೀಯಾಯಾಸ್ತ್ವಷ್ಟಾ ಶುಕ್ರಶ್ಚ । ಚತುರ್ಥ್ಯಾ ಅಗ್ನಿಃ ಶುಚಿಶ್ಚ । ಪಂಚಮ್ಯಾ ಇಂದ್ರೋ ನಭಶ್ಚ । ಷಷ್ಠ್ಯಾ ಮಿತ್ರಾವರುಣೌ ನಭಸ್ಯಶ್ಚ ॥ ತಥಾ ಚಾನುಕ್ರಾಂತಂ । ತುಭ್ಯಂ ಷಡೃತವ್ಯಂ ತು ಜಾಗತಂ ತ್ವಿತಿ ॥ ದಶರಾತ್ರೇ ಷಷ್ಠೇಽಹನಿ ಋತುಯಾಜೇಷು ಋಕ್ಶಿರಸ್ಕೈಃ ಪ್ರೈಷೈಃ ಪ್ರೇಷಿತವ್ಯಂ ಯಷ್ಟವ್ಯಂ ಚ । ತತಾದ್ಯಾನಾಂ ಷಣ್ಣಾಂ ಪ್ರೈಷಾಣಾಮುಪರಿಷ್ಟಾದೇವ ತಾಃ ಷಡೃಚೋಽಹೋರಾತ್ರಾದಿಭಿಃ ಕ್ರಮೇಣಾವಪನೀಯಾಃ । ತಥಾ ಚ ಸೂತ್ರಿತಂ । ಉಪರಿಷ್ಟಾತ್ತ್ವೃಚ ಋತುಯಾಜಾನಾಮಿತ್ಯುಪಕ್ರಮ್ಯ ತುಭ್ಯಂ ಹಿನ್ವಾನೋ ವಸಿಷ್ಟ ಗಾ ಅಪ ಇತಿ ದ್ವಾದಶೇತ್ಯಂತೇನ । ಆ. ೮–೧. ॥**

ಅನುವಾದವು—**ತುಭ್ಯಂ ಹಿನ್ವಾನಃ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು; ಜಗತೀಛಂದಸ್ಸು; ಈ ಸೂಕ್ತದ ಮೊದಲನೆಯ ಋಕ್ಕಿಗೆ ಇಂದ್ರ ಮತ್ತು ಮಧುಮಾಸವು (ಚೈತ್ರಮಾಸವು) ದೇವತೆಯು; ಎರಡನೆಯ ಋಕ್ಕಿಗೆ ಮರುದ್ದೇವತೆಗಳೂ ಮಾಧವ ಎಂದರೆ ವೈಶಾಖಮಾಸವೂ ದೇವತೆಯು; ಮೂರನೆಯ ಋಕ್ಕಿಗೆ ತ್ವಷ್ಟ್ರುವು ಮತ್ತು ಶುಕ್ರ ಅಥವಾ ಜ್ಯೇಷ್ಠಮಾಸವು ದೇವತೆಯು; ಐದನೆಯ ಋಕ್ಕಿಗೆ ಇಂದ್ರ ಮತ್ತು ನಭ ಅಥವಾ ಶ್ರಾವಣಮಾಸವು ದೇವತೆಯು; ಆರನೆಯ ಋಕ್ಕಿಗೆ ಮಿತ್ರಾವರುಣರು ಮತ್ತು ನಭಸ್ಯ ಅಥವಾ ಭಾದ್ರಪದಮಾಸವು ದೇವತೆಯು;

ಅನುಕ್ರಮಣಿಕೆಯಲ್ಲಿ—**ತುಭ್ಯಂ ಷಡೃತವ್ಯಂ ತು ಜಾಗತಂ ತ್ವಿತಿ** ಎಂದು ಹೇಳಿರುವುದು. ಪರರಾತ್ರವೆಂಬ ಯಾಗದ ಆರನೆಯ ದಿವಸದಲ್ಲಿ ಋತುಪ್ರಯಾಜಗಳೆಂಬ ಹೋಮಮಾಡುವಾಗ ಈ ಸೂಕ್ತದ ಋಕ್ಕುಗಳನ್ನೇ ಪ್ರೈಷ ಮಂತ್ರಗಳನ್ನಾಗಿಯೂ ಯಾಜ್ಯಮಂತ್ರಗಳನ್ನಾಗಿಯೂ ಉಪಯೋಗಿಸಬೇಕು. ಪ್ರೈಷಮಂತ್ರಗಳಲ್ಲಿ ಮೊದಲನೆಯ ಆರುಮಂತ್ರಗಳಿಗೆ ಈ ಸೂಕ್ತದ ಆರು ಋಕ್ಕುಗಳ ವಿನಿಯೋಗವು ಉಕ್ತವಾಗಿದೆ. ಅನಂತರ ಅದೇ ಆರು ಋಕ್ಕುಗಳನ್ನು ಅಹೋರಾತ್ರಿಗಳಲ್ಲಿ ಕ್ರಮವಾಗಿ ಅವಸಾನೀಯಮಂತ್ರಗಳಿಗಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ—**ಉಪರಿಷ್ಟಾತ್ತ್ರ್ಯೃಚ ಋತುಯಾಜಾನಾಮಿತ್ಯುಪಕ್ರಮ್ಯ ತುಭ್ಯಂ ಹಿನ್ವಾನೋ ವಸಿಷ್ಟಗಾ ಅಪ ಇತಿ ದ್ವಾದಶೇತ್ಯಂತೇನ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೫-೧)

## ಸೂಕ್ತ—೩೬

ಮಂಡಲ—೨ ‖ ಅನುವಾಕ—೪ ‖ ಸೂಕ್ತ—೩೬ ‖

ಅಷ್ಟಕ—೨ ‖ ಅಧ್ಯಾಯ—೭ ‖ ವರ್ಗ—೨೫ ‖

‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ‖

‖ ಋಷಿಃ—ಗೃತ್ಸಮದಃ ‖

‖ ದೇವತಾ—೧. ಇಂದ್ರೋ ಮಧುಶ್ಚ । ೨. ಮರುತೋ ಮಾಧವಶ್ಚ ।
೩. ತ್ವಷ್ಟಾ ಶುಕ್ರಶ್ಚ । ೪. ಅಗ್ನಿಃ ಶುಚಿಶ್ಚ । ೫. ಇಂದ್ರೋ ನಭಶ್ಚ ।
೬. ಮಿತ್ರಾವರುಣೌ ನಭಸ್ಯಶ್ಚ ‖

‖ ಛಂದಃ—ಜಗತೀ ‖

‖ ಸಂಹಿತಾಪಾಠಃ ‖

ತುಭ್ಯಂ ಹಿನ್ವಾನೋ ವಸಿಷ್ಟ ಗಾ ಅಪೋಽಧುಕ್ಷನ್ತ್ಸೀಮವಿಭಿರದ್ರಿಭಿರ್ನರಃ ।
ಪಿಬೇಂದ್ರ ಸ್ವಾಹಾ ಪ್ರಹುತಂ ವಷಟ್ಕೃತಂ ಹೋತ್ರಾದಾ ಸೋಮಂ ಪ್ರಥಮೋ
ಯ ಈಶಿಷೇ ‖ ೧ ‖

‖ ಪದಪಾಠಃ ‖

ತುಭ್ಯಂ । ಹಿನ್ವಾನಃ । ವಸಿಷ್ಟ । ಗಾಃ । ಅಪಃ । ಅಧುಕ್ಷನ್ । ಸೀಂ । ಅವಿಽಭಿಃ । ಅದ್ರಿಽಭಿಃ । ನರಃ ।
ಪಿಬ । ಇಂದ್ರ । ಸ್ವಾಹಾ । ಪ್ರಽಹುತಂ । ವಷಟ್ಽಕೃತಂ । ಹೋತ್ರಾತ್ । ಆ । ಸೋಮಂ । ಪ್ರಥಮಃ ।
ಯಃ । ಈಶಿಷೇ ‖ ೧ ‖

॥ ಸಾಯಣಭಾಷ್ಯಂ ॥

ಹೇ ಇಂದ್ರ ತುಭ್ಯಂ ತ್ವದರ್ಥಂ ಹಿನ್ವಾನಃ ಪ್ರೇರ್ಯಮಾಣಃ ಸೋಮೋ ಗಾ ಗೋವಿಕಾರಾಣಿ ದಧಿಪಯಃಪ್ರಭೃತೀನಿ ಶ್ರಪಣದ್ರವ್ಯಾಣಿ ವಸತೀವರ್ಯಾಖ್ಯಾ ಅಪಶ್ಚ ವಸಿಷ್ಟ। ವಸ್ತೇ । ಆಚ್ಛಾದಯತಿ। ತೈಃ ಸಂಯುಜ್ಯತ ಇತ್ಯರ್ಥಃ। ನರೋ ಯಜ್ಞಸ್ಯ ನೇತಾರೋಽಧ್ವರ್ಯವಶ್ಚ ಸೀಮೇನಂ ಸೋಮಮವಿಭಿರವೇರ್ವಾಲಮಯೈರ್ದಶಾಪವಿತ್ರೈರದ್ರಿಭಿರ್ಗ್ರಾವಭಿಶ್ಚಾಧುಕ್ಷನ್ । ಅಕ್ಷಾರಯನ್ । ಗ್ರಾವಭಿರಭಿಷುತ್ಯ ದಶಾಪವಿತ್ರೇಣ ಪುನಂತೀತ್ಯರ್ಥಃ। ಹೇ ಇಂದ್ರ ಯಸ್ತ್ವಮಿಶಿಷೇ। ಸರ್ವಸ್ಯ ಜಗತ ಈಶ್ವರೋ ಭವಸಿ ತ್ವಂ ಪ್ರಥಮೋಽನ್ಯೇಭ್ಯೋ ದೇವೇಭ್ಯಃ ಪೂರ್ವಭಾವೀ ಸನ್ ಸ್ವಾಹಾ ಸ್ವಾಹಾಕಾರೇಣ ಪ್ರಹುತಂ ಪ್ರಕರ್ಷೇಣಾಗ್ನೌ ಕ್ಷಿಪ್ತಂ ವಷಟ್ಕೃತಂ ವಷಟ್ಕಾರೇಣ ಚ ತ್ಯಕ್ತಂ ತಂ ಸೋಮಂ ಹೋತ್ರಾದ್ಧೋತುರ್ಯಾಗಾದಾ ಸಮಂತಾತ್ಪಿಬ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ। **ತುಭ್ಯಂ**—ನಿನ್ನನ್ನುದ್ದೇಶಿಸಿ। **ಹಿನ್ವಾನಃ**—ಹಿಂಡಲ್ಪಟ್ಟ ಸೋಮವು। **ಗಾಃ**—ಗೋವಿಕಾರವಾದ ಕ್ಷೀರಾದಿಗಳನ್ನೂ **ಅಪಃ**—ವಸತೀವರ್ಯಾದಿ ಉದಕಗಳನ್ನೂ। **ವಸಿಷ್ಟ**—ಕೂಡಿಕೊಂಡಿದೆ। **ನರಃ**—ನೇತೃಗಳಾದ ಅಧ್ವರ್ಯುಗಳು। **ಸೀಂ**—ಈ ಸೋಮವನ್ನು। **ಅವಿಭೀಃ**—ದಶಾಪವಿತ್ರಗಳಿಂದಲೂ। **ಅದ್ರಿಭಿಃ**—ಕಲ್ಲುಗಳಿಂದಲೂ। **ಅಧುಕ್ಷನ್**—ಹಿಂಡಿ ಶೋಧಿಸಿದ್ದಾರೆ। **ಇಂದ್ರ**—ಎಲೈ ಇಂದ್ರನೇ। **ಯಃ**—ಯಾವ ನೀನು। **ಈಶಿಷೇ**—ಸಕಲ ಜಗತ್ತಿಗೂ ಪ್ರಭುವಾಗಿದ್ದೀಯೋ (ಅಂತಹ ನೀನು)। **ಪ್ರಥಮಃ**—ಇತರ ದೇವತೆಗಳಿಗಿಂತಲೂ ಮೊದಲೇ। **ಸ್ವಾಹಾ**—ಸ್ವಾಹಾಕಾರಪೂರ್ವಕವಾಗಿ। **ಪ್ರಹುತಂ**—ಅಗ್ನಿಯಲ್ಲಿ ಪ್ರಕ್ಷಿಪ್ತವಾದುದೂ। **ವಷಟ್ಕೃತಂ**—ವಷಟ್ಕಾರ ಪೂರ್ವಕವಾಗಿ ಅರ್ಪಿತವಾದುದೂ ಆದ। **ಸೋಮಂ**—ಸೋಮವನ್ನು। **ಹೋತ್ರಾತ್**—ಹೋತೃವಿನ ಯಾಗದಿಂದ ಸ್ವೀಕರಿಸಿ। **ಆ ಪಿಬ**—ಕುಡಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ಹಿಂಡಲ್ಪಟ್ಟ ಸೋಮವು ಗೋವಿಕಾರವಾದ ಕ್ಷೀರಾದಿಗಳನ್ನೂ, ವಸತೀವರ್ಯಾದಿ ಉದಕಗಳನ್ನೂ ಕೂಡಿಕೊಂಡಿದೆ. ನೇತೃಗಳಾದ ಅಧ್ವರ್ಯುಗಳು ಈ ಸೋಮವನ್ನು ಗ್ರಾವಗಳಿಂದ ಹಿಂಡಿ ದಶಾಪವಿತ್ರಗಳಿಂದ ಶೋಧಿಸಿದ್ದಾರೆ ಎಲೈ ಇಂದ್ರನೇ, ಸಕಲ ಜಗತ್ತಿಗೂ ಪ್ರಭುವಾಗಿರುವ ನೀನು ಇತರ ದೇವತೆಗಳಿಗಿಂತಲೂ ಮೊದಲಾಗಿ ಬಂದು ಸ್ವಾಹಾಕಾರಪೂರ್ವಕವಾಗಿ ಅರ್ಪಿತವಾದುದೂ, ವಷಟ್ಕಾರದಿಂದ ಪ್ರೀತವಾದುದೂ ಆದ ಸೋಮವನ್ನು ಹೋತೃವಿನ ಯಾಗದಿಂದ ಸ್ವೀಕರಿಸಿ ಕುಡಿ.

English Translation.

(The libation) that is being presented, Indra, to you, comprises the (products of the) cow, and the (consecrated) water; and the leaders (of the rite) have expressed it with stones, and strained it through woollen (filters): Indra, you are the first (of the gods), and rule (over the world), drink the Soma off ered by the Hotri, and sanctificed bythe exclamations Swaha and Vashat.

। ವಿಶೇಷವಿಷಯಗಳು

**ಗಾಃ—ಗೋವಿಕಾರಾಣಿ ದಧಿಪಯಃಪ್ರಭೃತೀನಿ ಶ್ರಯಣದ್ರವ್ಯಾಣಿ ।** ಇಲ್ಲಿ ಗೋಶಬ್ದಕ್ಕೆ ಗೋವಿನ ಸಂಬಂಧವಾದ ಹಾಲು, ಮೊಸರು ಮುಂತಾದ ಸೋಮರಸಕ್ಕೆ ಮಿಶ್ರಮಾಡುವ ದ್ರವ್ಯಗಳೆಂದೂ, **ಅಪಃ—ವಸತೀವರ್ಯಾಖ್ಯಾ ಅಪಶ್ಚ ।** ಅಪ್ ಶಬ್ದವು ವಸತೀವರೀ ಎಂಬ ಹೆಸರುಳ್ಳ ಉದಕಗಳು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದೆಂದೂ ಅರ್ಥವನ್ನು ವರ್ಣಿಸಿ ಇಂದ್ರನಿಗಾಗಿ ಹಿಂಡಿದ ಸೋಮರಸವು ಗೋವಿನಸಂಬಂಧವಾದ ದಧಿ, ಆಜ್ಯ, ಕ್ಷೀರಾದಿಗಳಿಂದಲೂ, ವಸತೀವರೀ ಎಂಬ ಉದಕಗಳಿಂದಲೂ ಕೂಡಿರುವುದೆಂದು ವರ್ಣಿಸಿದೆ.

**ನರಃ—ಯಜ್ಞಸ್ಯ ನೇತಾರೋ ಅಧ್ವರ್ಯವಶ್ಚ ।** ನರ ಶಬ್ದವು ಯಾಸ್ಕರಿಂದ ಮನುಷ್ಯನಾಮಗಳಲ್ಲಿ (ನಿ.೨-೩) ಉಕ್ತವಾಗಿದೆ. ಸಾಯಣರು ಈ ಪದಕ್ಕೆ ಯಜ್ಞವನ್ನಾಚರಿಸುವ ಯಜಮಾನರು ಮತ್ತು ಅಧ್ವರ್ಯುವೇ ಮೊದಲಾದ ಋತ್ವಿಜರು ಎಂದು ಅರ್ಥವನ್ನು ವಿವರಿಸಿ, **ಸೀಂ ಆವಿಭಿಃ ಅದ್ರಿಭಿಃ ಅಧುಕ್ಷನ್—ಗ್ರಾವಭಿಃ ಅಭಿಷುತ್ಯ ದಶಾಪವಿತ್ರೇಣ ಪುನಂತಿ** ಯಜಮಾನರೂ ಋತ್ವಿಜರೂ ಕೂಡ ಈ ಸೋಮವನ್ನು ಕಲ್ಲುಗಳಿಂದ ಜಜ್ಜಿ ರಸವನ್ನು ಹಿಂಡಿ ದಶಾಪವಿತ್ರಗಳಿಂದ ಶುದ್ಧಿಮಾಡಿ ಸಿದ್ಧಪಡಿಸಿರುವರೆಂದು ಹೇಳಿದೆ.

ಇಂದ್ರನನ್ನು ಸಂಬೋಧಿಸಿ, ಈ ಇಂದ್ರನು ಸರ್ವಕ್ಕೂ ಅಧಿಪತಿಯಾಗಿರುವನೆಂದೂ, **ಪ್ರಥಮಃ—ಅನ್ಯೇಭ್ಯೋ ದೇವೇಭ್ಯಃ ಪೂರ್ವಭಾವೀ ಸನ್** ಇತರ ದೇವತೆಗಳಿಗಿಂತ ಮೊದಲು ಯಾಗಕ್ಕೆ ಆಗಮಿಸಿ, ವಷಟ್ಕಾರ ಮತ್ತು ಸ್ವಾಹಾ ಎಂಬ ಶಬ್ದಗಳಿಂದ ಅಗ್ನಿಯಲ್ಲಿ ಇಂದ್ರನಿಗಾಗಿ ಅರ್ಪಿಸಿದ ಸೋಮವನ್ನು ಸಂಪೂರ್ಣವಾಗಿ ಪಾನಮಾಡಲಿ ಎಂದೂ ವರ್ಣಿಸಿದೆ.



॥ ಸಂಹಿತಾಪಾಠಃ ॥

ಯಜ್ಞೈಃ ಸಂಮಿಶ್ಲಾಃ ಪೃಷತೀಭಿರ್ಋಷ್ಟಿಭಿರ್ಯಾಮಂಛುಭ್ರಾಸೋ ಅಂಜಿಷು ಪ್ರಿಯಾ ಉತ ।
ಆಸದ್ಯಾ ಬರ್ಹಿರ್ಭರತಸ್ಯ ಸೂನವಃ ಪೋತ್ರಾದಾ ಸೋಮಂ ಪಿಬತಾ ದಿವೋ ನರಃ ॥ ೨ ॥

॥ ಪದಪಾಠಃ ॥

ಯಜ್ಞೈಃ । ಸಂಽಮಿಶ್ಲಾಃ । ಪೃಷತೀಭಿಃ । ಋಷ್ಟಿಽಭಿಃ । ಯಾಮನ್ । ಶುಭ್ರಾಸಃ । ಅಂಜಿಷು । ಪ್ರಿಯಾಃ । ಉತ ।
ಆಽಸದ್ಯ । ಬರ್ಹಿಃ । ಭರತಸ್ಯ । ಸೂನವಃ । ಪೋತ್ರಾತ್ । ಆ । ಸೋಮಂ । ಪಿಬತ । ದಿವಃ । ನರಃ ॥೨॥

॥ ಸಾಯಣಭಾಷ್ಯಂ ॥

**ಹೇ ಮರುತೋ ಯಜ್ಞೈರ್ಯಾಗೈಃ ಸಂಮಿಶ್ಲಾಃ ಸಂಯುಕ್ತಾಃ ಪೃಷತೀಭಿಃ ಸ್ವವಾಹನಭೂತಾಭಿಃ ಪೃಷದ್ವತೀಭಿರ್ವಡವಾಭಿರ್ಯುಕ್ತೇ ಯಾಮನ್ ಯಾಮನಿ ಗಮನಸಾಧನೇ ರಥೇಽವಸ್ಥಿತಾ ಋಷ್ಟಿಭಿಃ ಸ್ವಕೀಯೈರಾಯುಧೈಃ ಶುಭ್ರಾಸಃ ಶುಭ್ರಾಃ ಶೋಭಮಾನಾಃ । ಉತಶಬ್ದಶ್ಚಾರ್ಥೇ । ಅಂಜಿಷ್ವಾಭರಣೇಷು ಪ್ರಿಯಾಶ್ಚ ಹೇ ಭರತಸ್ಯ ಸೂನವಃ ಸರ್ವಸ್ಯ ಜಗತೋ ಭರ್ತೂ ರುದ್ರಸ್ಯ ಪುತ್ರಾ ದಿವೋ ನರೋ ದಿವೋಽಂತರಿಕ್ಷಸ್ಯ ನೇತಾರಃ ಏವಂಭೂತಾ ಹೇ ಮರುತಃ ತೇ ಯೂಯಂ ಬರ್ಹಿರಾಸ್ತೀರ್ಣೇ ಬರ್ಹಿಷ್ಯಾ-ಸದ್ಯೋಪವಿಶ್ಯ ಪೋತ್ರಾತ್ ಪೋತುರ್ಯಾಗಾತ್ ಸೋಮಮಾಪಿಬತ ॥**

॥ ಪ್ರತಿಪದಾರ್ಥ ॥

**ಯಜ್ಞೈಃ**—ಯಾಗಗಳಿಂದ । **ಸಂಮಿಶ್ಲಾಃ**—ಒಟ್ಟಿಗೆ ಪೂಜಿಸಲ್ಪಡುವವರೂ । **ಪೃಷತೀಭಿಃ**—ಪೃಷದ್ವತಿಗಳೆಂಬ ಅಶ್ವಗಳಿಂದ ಯುಕ್ತವಾದ **ಯಾಮನ್**—ರಥದಲ್ಲಿ ಕುಳಿತಿರುವವರೂ । **ಋಷ್ಟಿಭಿಃ**—ಆಯುಧಗಳಿಂದ । **ಶುಭ್ರಾಸಃ**—ಪ್ರಕಾಶಿಸುವವರೂ । **ಅಂಜಿಷು**—ಆಭರಣಗಳಲ್ಲಿ । **ಪ್ರಿಯಾಃ**—ಪ್ರಿಯರೂ । **ಭರತಸ್ಯ**—ಜಗದ್ಭರ್ತೃವಾದ ರುದ್ರನಿಗೆ । **ಸೂನವಃ**—ಪುತ್ರರೂ । **ದಿವಃ**—ಅಂತರಿಕ್ಷಕ್ಕೆ । **ನರಃ**—ನೇತೃಗಳೂ ಆದ ಎಲೈ ಮರುತ್ತುಗಳೇ । **ಬರ್ಹಿಃ**—ವಿಸ್ತೃತವಾದ ದರ್ಭಾಸನದ ಮೇಲೆ **ಆ ಸದ್ಯ**—ಕುಳಿತುಕೊಂಡು । **ಪೋತ್ರಾತ್**—ಪೋತೃವಿನಿಂದ ಅರ್ಪಿತವಾದ । **ಸೋಮಂ**—ಸೋಮವನ್ನು । **ಆ ಪಿಬತ**—ಪಾನಮಾಡಿರಿ.

॥ ಭಾವಾರ್ಥ ॥

ಯಾಗಗಳಲ್ಲಿ ಒಟ್ಟಿಗೆ ಪೂಜಿಸಲ್ಪಡುವವರೂ, ಪೃಷದ್ವತಿಗಳೆಂಬ ಅಶ್ವಗಳಿಂದ ಯುಕ್ತವಾದ ರಥದಲ್ಲಿ ಕುಳಿತಿರುವವರೂ, ಆಯುಧಗಳಿಂದ ಪ್ರಕಾಶಿಸುವವರೂ, ಆಭರಣಗಳಲ್ಲಿ ಪ್ರಿಯರೂ, ಜಗದ್ಭರ್ತೃವಾದ ರುದ್ರನಿಗೆ ಪುತ್ರರೂ, ಅಂತರಿಕ್ಷಕ್ಕೆ ನೇತೃಗಳೂ ಆದ ಎಲೈ ಮರುತ್ತುಗಳೇ, ವಿಸ್ತೃತವಾದ ದರ್ಭಾಸನದ ಮೇಲೆ ಕುಳಿತುಕೊಂಡು ಪೋತೃವಿನಿಂದ ಅರ್ಪಿತವಾದ ಸೋಮರಸವನ್ನು ಪಾನಮಾಡಿರಿ.

English Translation.

Maruts, together worshipped with sacrifices, standing in the car drawn by spotted mares, radiant with lances, and delighted by ornaments, sons of Bharata, leaders in the firmament, seated on the sacred grass, drink the Soma presented by the Potri.

ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಮರುದ್ದೇವತೆಗಳು ವರ್ಣಿತವಾಗಿದ್ದಾರೆ. ಈ ಮರುತ್ತುಗಳು **ಪೃಷತೀಭಿಃ ಯಾಮನ್—ಸ್ವವಾಹನಭೂತಾಭಿಃ ಪೃಷದ್ವತೀಭಿರ್ವಡವಾಭಿಃ ಯುಕ್ತೇ ಗಮನಸಾಧನೇ ರಥೇ ಅವಸ್ಥಿತಾಃ** । ಸಂಚರಿಸಲು ಸಾಧನವಾಗಿರುವ ತಮ್ಮ ವಾಹನವಾದ ಬಿಳಿಯ ಚುಕ್ಕಿಗಳಿಂದ ಕೂಡಿರುವ ಕುದುರೆಗಳನ್ನು ಕಟ್ಟಿದ ರಥಗಳಲ್ಲಿ ಉಪವಿಷ್ಟ

ರಾಗಿರುವರೆಂದೂ. **ಋಷ್ಟಿಭಿಃ ಶುಭ್ರಾಸಃ**—ತಮ್ಮ ಋಷ್ಟಿ ಎಂದು ಪ್ರಸಿದ್ಧವಾದ ಶಸ್ತ್ರಾಯುಧದಿಂದ ಪ್ರಕಾಶಿಸುವವರೆಂದೂ, **ಭರತಸ್ಯ ಸೂನವಃ—ಸರ್ವಸ್ಯಭ ಜಗತೋ ಭರ್ತುಃ ರುದ್ರಸ್ಯ ಪುತ್ರಾಃ ।** ಸರ್ವಲೋಕಗಳಿಗೂ ಒಡೆಯನಾದ ರುದ್ರನ ಪುತ್ರರೆಂದು ವರ್ಣಿಸಿ, ಇವರು **ದಿವೋ ನರಃ—ಅಂತರಿಕ್ಷಸ್ಯ ನೇತಾರಃ** ಅಂತರಿಕ್ಷಕ್ಕೆ ಅಧಿಪತಿಗಳಾಗಿರುವರೆಂದೂ ಇವರ ಪ್ರಭಾವವನ್ನು ವಿವರಿಸಿ, ಇವರು **ಪೋತ್ರಾತ್ ಸೋಮಮಾಪಿಬತ**—ಪೋತ್ರ ಎಂಬ ಋತ್ವಿಜನಿಂದ ಅರ್ಪಿತವಾದ ಸೋಮವನ್ನು ಪಾನಮಾಡಲಿ ಎಂದು ವರ್ಣಿಸಿದೆ.



॥ ಸಂಹಿತಾಪಾಠಃ ॥

ಅಮೇವ ನಃ ಸುಹವಾ ಆ ಹಿ ಗಂತನ ನಿ ಬರ್ಹಿಷಿ ಸದತನಾ ರಣಿಷ್ಟನ ।
ಅಥಾ ಮಂದಸ್ವ ಜುಜುಷಾಣೋ ಅಂಧಸಸ್ತ್ವಷ್ಟರ್ದೇವೇಭಿರ್ಜನಿಭಿಃ ಸುಮ-
ದ್ಗಣಃ ॥ ೩ ॥

॥ ಪದಪಾಠಃ

ಅಮಾಽಇವ । ನಃ । ಸುಽಹವಾಃ । ಆ । ಹಿ । ಗಂತನ । ನಿ । ಬರ್ಹಿಷಿ । ಸದತನ । ರಣಿಷ್ಟನ ।
ಅಥ । ಮಂದಸ್ವ । ಜುಜುಷಾಣಃ । ಅಂಧಸಃ । ತ್ವಷ್ಟಃ । ದೇವೇಭಿಃ । ಜನಿಽಭಿಃ । ಸುಮತ್ಽಗಣಃ ॥ ೩ ॥

॥ ಸಾಯಣಭಾಷ್ಯಂ ॥

ತೃತೀಯಸವನೇಽಮೇವ ನ ಇತ್ಯೇಷಾ ನೇಷ್ಟುಃ ಪ್ರಸ್ಥಿತಯಾಜ್ಯಾ ಚ । ತಥಾ ಚ ಸೂತ್ರಿತಂ । ಅಮೇವ ನಃ ಸುಹವಾ ಆ ಹಿ ಗಂತನೇಂದ್ರಾವಿಷ್ಣೂ ಪಿಬತಂ ಮಧ್ವೋ ಅಸ್ಯ । ಆ. ೫-೫. । ಇತಿ ॥

ಇವಶಬ್ದೋಽವಧಾರಣೇ । ಹೇ ಸುಹವಾಃ ಶೋಭನಾಹ್ವಾನಾಸ್ತ್ವಷ್ಟೃಪ್ರಭೃತಯೋ ನೋಽಸ್ಮಾನ್ ಅಮೇವ ಸಹೈವಾಗಂತನ । ಆಗಚ್ಛತ ॥ ಗಮೇಶ್ಛಾಂದಸಃ ಶಪೋ ಲುಕ್ । ತಪ್ತನಪ್ತನಥನಾಶ್ಚೇತಿ ತನಬಾದೇಶಃ । ಹಿಶಬ್ದಃ ಪೂರಣಃ ॥ ಆಗತ್ಯ ಚ ಬರ್ಹಿಷಿ ವೇದ್ಯಾಮಾಸ್ತೀರ್ಣೇ ನಿಷದತನ । ನಿಷಣ್ಣಾ ಭವತ ॥ ಸದೇಶ್ಛಾಂದಸಃ ಸೀದಾದೇಶಾಭಾವಃ ॥ ಉಪವಿಶ್ಯ ಚ ರಣಿಷ್ಟನ । ರಮಧ್ವಂ ॥ ರಣ ಶಬ್ದಾರ್ಥಃ । ಅತ್ರ ಕ್ರೀಡಾಯಾಂ ವರ್ತತೇ ಧಾತೂನಾಮನೇಕಾರ್ಥತ್ವಾತ್ । ಅಸ್ಮಾಚ್ಛಾಂದಸೋ ಲುಙ್ । ಪೂರ್ವವತ್ತನಬಾದೇಶಃ ॥ ಅಥಾನಂತರಂ ಹೇ ತ್ವಷ್ಟಃ ದೇವೇಭಿರನ್ಯೈರ್ದೇವೈರ್ಜನಿಭಿರ್ದೇವಪತ್ನೀಭಿಶ್ಚ ಸುಮದ್ಗಣಃ ಶೋಭನಗಣಸ್ತ್ವಮಂಧಸಃ ಸೋಮಲಕ್ಷಣಸ್ಯಾನ್ನಸ್ಯ ॥ ದ್ವಿತೀಯಾರ್ಥೇ ಷಷ್ಠೀ ॥ ಸೋಮಲಕ್ಷಣಮನ್ನಂ ಜುಜುಷಾಣಃ ಸೇವಮಾನೋ ಮಂದಸ್ವ । ತೃಪ್ತೋ ಭವ ॥

॥ ಪ್ರತಿಪದಾರ್ಥ ॥

**ಸುಹವಾಃ**—ಉತ್ತಮವಾದ ರೀತಿಯಲ್ಲಿ ಕರೆಯಲ್ಪಡುವ ಎಲೈ ತ್ವಷ್ಟೃಪ್ರಭೃತಿಗಳೇ। **ನಃ**—ನಮ್ಮಲ್ಲಿಗೆ। **ಅಮೇವ**—ಎಲ್ಲರೂ ಒಟ್ಟಿಗೂಡಿಯೇ। **ಆ ಗಂತನ**—ಬನ್ನಿರಿ। **ಬರ್ಹಿಷಿ**—ದರ್ಭೆಯ ಮೇಲೆ। **ನಿ ಸದತನ**—ಕುಳಿತುಕೊಳ್ಳಿ। **ರಣಿಷ್ಟನ**—ವಿಶ್ರಾಂತಿಯನ್ನು ತೆಗೆದುಕೊಂಡು ಕ್ರೀಡಿಸಿ। **ಅಥ**—ಅನಂತರ। **ತ್ವಷ್ಟಃ**—ಎಲೈ ತ್ವಷ್ಟೃವೇ। **ದೇವೇಭಿಃ** — ಇತರ ದೇವತೆಗಳೊಂದಿಗೂ। **ಜನಿಭಿಃ** — ದೇವಪತ್ನಿಯರೊಂದಿಗೂ। **ಸುಮದ್ಗಣಃ**—ಶ್ರೇಷ್ಠವಾದ ಗುಂಪನ್ನು ಕೂಡಿಕೊಂಡಿರುವ ನೀನು। **ಅಂಧಸಃ**—ಸೋಮರೂಪವಾದ ಅನ್ನವನ್ನು। **ಜುಜುಷಾಣಃ**—ಸೇವಿಸುತ್ತಾ। **ಮಂದಸ್ವ**—ತೃಪ್ತನಾಗು.

॥ ಭಾವಾರ್ಥ ॥

ಉತ್ತಮವಾದ ರೀತಿಯಲ್ಲಿ ಆಹೂತರಾಗುವ ಎಲೈ ತ್ವಷ್ಟೃಪ್ರಭೃತಿಗಳೇ, ನಮ್ಮಲ್ಲಿಗೆ ನೀವೆಲ್ಲರೂ ಒಟ್ಟುಗೂಡಿಯೇ ಬನ್ನಿರಿ. ಬರ್ಹಿಯ ಮೇಲೆ ಕುಳಿತು ವಿಶ್ರಾಂತಿಯನ್ನು ತೆಗೆದುಕೊಂಡು ಕ್ರೀಡಿಸಿ. ಅನಂತರ, ಎಲೈ, ತ್ವಷ್ಟೃವೇ, ಇತರ ದೇವತೆಗಳೊಂದಿಗೂ, ದೇವಪತ್ನಿಯರೊಂದಿಗೂ ಶ್ರೇಷ್ಠವಾದ ಗಣವನ್ನು ಮಾಡಿಕೊಂಡಿರುವ ನೀನು ಸೋಮರೂಪವಾದ ಅನ್ನವನ್ನು ಸೇವಿಸುತ್ತಾ ತೃಪ್ತನಾಗು.

## English Translation.

You, who are devoutly invoked, come to us together, and seated on the sacrificial grass, enjoy your rest: and then, Twashtri, you head a brilliant cohort, (come) with the gods and their wives, and rejoice, being pleased with the (sacrificial) food.

॥ ವಿಶೇಷವಿಷಯಗಳು ॥

ತೃತೀಯಸವನಕಾಲದಲ್ಲಿ **ಅಮೇವ ನಃ** ಎಂಬ ಈ ಋಕ್ಕನ್ನು ನೇಷ್ಟೃವು ಪಠಿಸಬೇಕಾದ ಪ್ರಸ್ಥಿತಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಅಮೇವ ನಃ ಸುಹವಾ ಆ ಹಿ ಗಂತನೇಂದ್ರಾವಿಷ್ಣೂ ಪಿಬತಂ ಮಧ್ವೋ ಅಸ್ಯ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೫-೫).

**ಅಮೇವ**—ಎಂಬಲ್ಲಿ ಇವ ಶಬ್ದವು ಉಪಮಾವಾಚಕವೆಂಬ ಅರ್ಥದಲ್ಲಿ ಪ್ರಯುಕ್ತವಾಗಿಲ್ಲ. ಅವಧಾರಣಾರ್ಥದಲ್ಲಿ ಉಕ್ತವಾಗಿರುವುದರಿಂದ ಒಟ್ಟಾಗಿಯೇನೆ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಸುಹವಾಃ—ಶೋಭನಾಹ್ವಾನಾಃ**—ತ್ವಷ್ಟೃವೇ ಮೊದಲಾದ ದೇವತೆಗಳ ಆಹ್ವಾನವು ಕಲ್ಯಾಣಕರವೆಂದು ವರ್ಣಿಸಿ, ಈ ದೇವತೆಗಳು ಯಜಮಾನರಾದ ನಮ್ಮ ಯಾಗಶಾಲೆಗೆ ಒಟ್ಟಾಗಿ ಬರಲೆಂದು ಆಶಿಸಿದೆ.

**ಬರ್ಹಿಷಿ ನಿ ಸದತನ— ವೇದ್ಯಾಮಾಸ್ತೀರ್ಣೇ ನಿಷಣ್ಣಾ ಭವತ ।** ಇವರು ಯಾಗಶಾಲೆಗೆ ಆಗಮಿಸಿ ವೇದಿಯಲ್ಲಿ ಹಾಸಿರುವ ದರ್ಭೆಗಳ ಮೇಲೆ ಉಪವಿಷ್ಟರಾಗಲಿ ಎಂದೂ, **ರಣಿಷ್ಟನ—ರಮಧ್ವಂ । ರಣಶಬ್ದಾರ್ಥಃ ಅತ್ರ ಕ್ರೀಡಾಯಾಂ ವರ್ತತೇ ಧಾತೂನಾಮನೇಕಾರ್ಥತ್ವಾತ್ ।** ರಣಧಾತುವು ಇಲ್ಲಿ

ಧಾತುಗಳಿಗೆ ಅನೇಕಾರ್ಥಗಳಿರುವುವು ಎಂಬ ಅನುಶಾಸನದಂತೆ ಕ್ರಿಯಾರ್ಥದಲ್ಲಿ ಪ್ರಯುಕ್ತವಾಗಿರುವ ನಿಮಿತ್ತ ಈ ತ್ವಷ್ಟೃದೇವ ಮೊದಲಾದ ದೇವತೆಗಳು ಯಾಗಶಾಲೆಗೆ ಬಂದು, ಬರ್ಹಿಸ್ಸಿನಲ್ಲಿ ಉಪವಿಷ್ಟರಾಗಿ ವಿಹರಿಸಲಿ ಎಂದೂ ಅರ್ಥವನ್ನು ವಿವರಿಸಿದೆ.

**ಜನಿಭಿಃ ದೇವೇಭಿಃ ಸುಮದ್ಗಣಃ– ಅನ್ಯೈಃ ದೇವೈಃ ದೇವಪತ್ನೀಭಿಶ್ಚ ಶೋಭನಗಣಃ ।** ಈ ತ್ವಷ್ಟೃದೇವನು ತನ್ನ ಪರಿವಾರದ ದೇವತೆಗಳಿಂದಲೂ ಇತರದೇವತೆಗಳಿಂದಲೂ, ದೇವಪತ್ನಿಯರಿಂದಲೂ ಯುಕ್ತನಾಗಿರುವ ಕಾರಣ ಈ ದೇವನು ತನ್ನ ಗಣದಿಂದ ಯುಕ್ತನಾಗಿ ಸೋಮರೂಪದಿಂದ ಇರುವ ಹವಿಸ್ಸನ್ನು ಸೇವಿಸಿ ತೃಪ್ತನಾಗಲಿ ಎಂದು ಆಶಿಸಿದೆ.

**ಅಂಧಸಃ —ಸೋಮಲಕ್ಷಣಸ್ಯಾನ್ನಸ್ಯ ।** ಅಂಧಃ ಎಂಬ ಪದವು ಅನ್ನನಾಮಗಳಲ್ಲಿ (ನಿ. ೨-೭) ಉಕ್ತವಾಗಿದೆ. ಇಲ್ಲಿ ಸೋಮರೂಪವಾಗಿರುವ ಅನ್ನವೆಂದು ಅರ್ಥವನ್ನು ವಿವರಿಸಿದೆ.



॥ ಸಂಹಿತಾಪಾಠಃ ॥

**ಆ ವಕ್ಷಿ ದೇವಾँ ಇಹ ವಿಪ್ರ ಯಕ್ಷಿ ಚೋಶನ್ಹೋತರ್ನಿ ಷದಾ ಯೋನಿಷು ತ್ರಿಷು ।**
**ಪ್ರತಿ ವೀಹಿ ಪ್ರಸ್ಥಿತಂ ಸೋಮ್ಯಂ ಮಧು ಪಿಬಾಗ್ನೀಧ್ರಾತ್ತವ ಭಾಗಸ್ಯ ತೃಪ್ಣುಹಿ ॥**

॥ ಪದಪಾಠಃ ॥

**ಆ । ವಕ್ಷಿ । ದೇವಾನ್ । ಇಹ । ವಿಪ್ರ । ಯಕ್ಷಿ । ಚ । ಉಶನ್ । ಹೋತಃ । ನಿ । ಸದ । ಯೋನಿಷು । ತ್ರಿಷು ।**

**ಪ್ರತಿ । ವೀಹಿ । ಪ್ರऽಸ್ಥಿತಂ । ಸೋಮ್ಯಂ । ಮಧು । ಪಿಬ । ಆಗ್ನೀಧ್ರಾತ್ । ತವ । ಭಾಗಸ್ಯ । ತೃಪ್ಣುಹಿ ॥**

॥ ಸಾಯಣಭಾಷ್ಯಂ ॥

**ಹೇ ವಿಪ್ರ ಮೇಧಾವಿನ್ನಗ್ನೇ ದೇವಾನ್ ಯಷ್ಟವ್ಯಾನಿಂದ್ರಾದೀನಾವಕ್ಷಿ । ಆವಹ । ಯಕ್ಷಿ ಚ । ತಾನ್ಯಜ ಚ । ಹೇ ಹೋತರ್ದೇವಾನಾಮಾಹ್ವಾತಸ್ತ್ವಂ ಚೋಶನ್ನಸ್ಮದೀಯಂ ಕಾಮಯಮಾನಃ ಸನ್ ತ್ರಿಷು ಯೋನಿಷು ಸ್ಥಾನೇಷು ಗಾರ್ಹಪತ್ಯಾದಿಲಕ್ಷಣೇಷು ನಿಷದ । ಉಪವಿಶ । ಉಪವಿಶ್ಯ ಚ ಪ್ರಸ್ಥಿತಂ ಹೋಮಾರ್ಥಮುತ್ತರವೇದಿಂ ಪ್ರತ್ಯಾನೀತಂ ಸೋಮ್ಯಂ ಸೋಮಮಯಂ ಮಧು ಪ್ರತಿವೀಹಿ । ಪ್ರತಿಕಾಮಯಸ್ವ । ಕಾಮಯಿತ್ವಾ ಚಾಗ್ನೀಧ್ರಾದಗ್ನೀಧ್ರಯಾಗಾತ್ಸೋಮಂ ಪಿಬ । ಪೀತ್ವಾ ಚ ತವ ಭಾಗಸ್ಯ ತ್ವದೀಯೇನ ಭಾಗೇನ ತೃಪ್ಣುಹಿ । ತೃಪ್ತೋ ಭವ ॥**

‖ ಪ್ರತಿಪದಾರ್ಥ ‖

**ವಿಪ್ರ**—ಮೇಧಾವಿಯಾದ ಎಲೈ ಅಗ್ನಿಯೇ! **ದೇವಾನ್**—ಪೂಜ್ಯರಾದ ಇಂದ್ರಾದಿ ದೇವತೆಗಳನ್ನು। **ಇಹ**—ಈ ಯಾಗಕ್ಕೆ। **ಆ ವಕ್ಷಿ**—ಕರೆದುಕೊಂಡು ಬಾ। **ಯಕ್ಷಿ ಚ**—ಅವರನ್ನು ಉದ್ದೇಶಿಸಿ ಯಾಗಮಾಡು। **ಹೋತಃ**—ದೇವತೆಗಳನ್ನು ಯಾಗಕ್ಕೆ ಕರೆಯುತಕ್ಕ ನೀನು। **ಉಶನ್**—ನಮ್ಮ ಯಾಗವನ್ನು ಇಚ್ಛಿಸಿ। **ತ್ರಿಷು ಯೋನಿಷು**—ಗಾರ್ಹಪತ್ಯಾದಿ ಮೂರು ಸ್ಥಾನಗಳಲ್ಲಿಯೂ। **ನಿ ಷದ**—ಕುಳಿತುಕೊ। **ಪ್ರಸ್ಥಿತಂ**—ಉತ್ತರವೇದಿಗೆ ತರಲ್ಪಟ್ಟ। **ಸೋಮ್ಯಂ**—ಸೋಮಮಯವಾದ। **ಮಧು**—ಮಧುವನ್ನು। **ಪ್ರತಿ ವೀಹಿ**—ಆದರದಿಂದ ಇಚ್ಛಿಸು। **ಆಗ್ನೀಧ್ರಾತ್**—ಆಗ್ನೀಧ್ರನೆಂಬ ಋತ್ವಿಜನ ಯಾಗದಿಂದ। **ಪಿಬ**—ಸೋಮರಸವನ್ನು ಪಾನ ಮಾಡು। **ತವ ಭಾಗಸ್ಯ**—ನಿನಗೆ ನಾವು ಅರ್ಪಿಸುವ ಭಾಗದಿಂದ। **ತೃಪ್ಣುಹಿ**—ತೃಪ್ತಿಯನ್ನು ಹೊಂದು.

‖ ಭಾವಾರ್ಥ ‖

ಮೇಧಾವಿಯಾದ ಎಲೈ ಅಗ್ನಿಯೇ, ಪೂಜ್ಯರಾದ ಇಂದ್ರಾದಿದೇವತೆಗಳನ್ನು ಈ ಯಾಗಕ್ಕೆ ಕರೆದುಕೊಂಡು ಬಾ. ಅವರನ್ನು ಉದ್ದೇಶಿಸಿ ಯಾಗಮಾಡು. ದೇವತೆಗಳನ್ನು ಯಾಗಕ್ಕೆ ಕರೆಯುತಕ್ಕ ನೀನು ನಮ್ಮ ಯಾಗವನ್ನು ಇಚ್ಛಿಸಿ ಗಾರ್ಹಪತ್ಯಾದಿ ಮೂರು ಸ್ಥಾನಗಳಲ್ಲಿಯೂ ಕುಳಿತುಕೊ. ಉತ್ತರವೇದಿಗೆ ತರಲ್ಪಟ್ಟ ಸೋಮಮಯವಾದ ಮಧುವನ್ನು ಆದರದಿಂದ ಇಚ್ಛಿಸು. ಆಗ್ನೀಧ್ರನ ಯಾಗದಿಂದ ಸೋಮರಸವನ್ನು ಪಾನಮಾಡು. ನಿನ್ನ ಭಾಗದಿಂದ ತೃಪ್ತಿಯನ್ನು ಹೊಂದು.

English Translation.

Sage Agni, bring hither the gods, and sacrifice to them : invoker of the gods, propitions to us, sit down in thə three altars : accept the libation of Soma that is offered to you from the Agnidhra, and be satisfied with your portion.

‖ ವಿಶೇಷವಿಷಯಗಳು ‖

**ವಿಪ್ರ** ಶಬ್ದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಉಕ್ತವಾಗಿದೆ. ಇಲ್ಲಿ ಈ ಪದದಿಂದ ಅಗ್ನಿಯು ಮೇಧಾವಿಯಾಗಿರುವನು ಎಂದು ಅರ್ಥವನ್ನು ವಿವರಿಸಿ ಸಂಬೋಧಿಸಿದೆ.

**ದೇವಾನ್ ಆವಕ್ಷಿ—ಯಷ್ಟವ್ಯಾನಿಂದ್ರಾದೀನ್ ಆವಹ** । ಮೇಧಾವಿಯಾದ ಅಗ್ನಿಯು ಯಜಮಾನರು ಆಚರಿಸುವ ಯಾಗಗಳಲ್ಲಿ ಯಾಗಾರ್ಹರಾದ ಇಂದ್ರನೇ ಮೊದಲಾದ ದೇವತೆಗಳನ್ನು, ಯಾಗದಲ್ಲಿ ಅರ್ಪಿಸುವ ಹವಿಸ್ಸುಗಳ ಸ್ವೀಕಾರಕ್ಕಾಗಿ ಕರದುಕೊಂಡು ಬರಲೆಂದು ಆಶಿಸಿದೆ.

**ಹೋತಃ ಉಶನ್ ತ್ರಿಷು ಯೋನಿಷು ನಿಷದ—ದೇವಾನಾಮಾಹ್ವಾತಃ ತ್ವಂ ಅಸ್ಮದೀಯಂ ಕಾಮಯಮಾನಃ ಗಾರ್ಹಪತ್ಯಾದಿ ಲಕ್ಷಣೇಷು ತ್ರಿಷು ಸ್ಥಾನೇಷು ಉಪವಿಶ** । ಹೋತಃ ಎಂಬ ಪದಕ್ಕೆ ದೇವತೆಗಳ ಯಾಗಾರ್ಥವಾಗಿ ಆಹ್ವಾನಮಾಡುವವನೆಂದು ಅರ್ಥವನ್ನು ವಿವರಿಸಿ, ದೇವತೆಗಳನ್ನು ಆಹ್ವಾನಿಸುವ ಅಗ್ನಿಯು

ಯಜಮಾನರ ಯಾಗಗಳಲ್ಲಿ ಹವಿಸ್ಸಿನ ಅರ್ಪಣೆಯನ್ನು ಅಪೇಕ್ಷಿಸುವವನಾಗಿರುವನೆಂದೂ, ಈ ಅಗ್ನಿಯು ಯಾಗಶಾಲೆಯಲ್ಲಿ ತನಗಾಗಿ ನಿಯಮಿತವಾಗಿರುವ ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿ ಎಂದು ಪ್ರಸಿದ್ಧವಾದ ಆಯಾಯ ಪ್ರದೇಶಗಳಲ್ಲಿ ಉಪವಿಷ್ಟನಾಗಿರಲೆಂದೂ ಆಶಿಸಿದೆ

**ಪ್ರಸ್ಥಿತಂ ಸೋಮ್ಯಂ ಮಧು ಪ್ರತಿ ವೀಹಿ— ಉಪವಿಶ್ಯಚ ಹೋಮಾರ್ಥಮುತ್ತರವೇದಿಂ ಪ್ರತ್ಯಾನೀತಂ ಸೋಮಮಯಂ ಮಧು ಪ್ರತಿಕಾಮಯಸ್ವ**— ಅಗ್ನಿಗಳನ್ನು ಉದ್ದೇಶಿಸಿ ನಿಯಮಿತವಾಗಿರುವ ಪ್ರದೇಶಗಳಲ್ಲಿ ಆಯಾಯ ಕರ್ಮಾನುಗುಣವಾಗಿ ಹೋಮವನ್ನಾಚರಿಸಿರುವ ಯಜಮಾನರು ಪಾಶುಕ ಮತ್ತು ಸೋಮಿಕ ಕರ್ಮಾಚರಣೆಗಳನ್ನು ಮಾಡುವಾಗ ಉತ್ತರವೇದಿ ಎಂಬ ಬೇರೆಯಕಡೆಯಲ್ಲಿ ಈ ಅಗ್ನಿಯನ್ನು ಇರಿಸಿ, ಅಲ್ಲಿ ಸೋಮವನ್ನೂ ಆಜ್ಯವನ್ನೂ, ಇತರ ಹವಿಸ್ಸುಗಳನ್ನೂ ಅಗ್ನಿಯಲ್ಲಿ ಹೋಮಮಾಡುವರು. ಆಯಾಯ ಕರ್ಮಗಳಲ್ಲಿ ಉತ್ತರವೇದಿಯಲ್ಲಿ ಉಪವಿಷ್ಟನಾದ ಅಗ್ನಿಯು ಸೋಮವೆಂದು ಪ್ರಸಿದ್ಧವಾದ ಮಧುವನ್ನು ಸ್ವೀಕರಿಸಲಿ ಎಂದು ಯಜಮಾನರ ಆಶಂಸೆಯು ವರ್ಣಿತವಾಗಿದೆ.

॥ ಸಂಹಿತಾಪಾಠಃ ॥

**ಏಷ ಸ್ಯ ತೇ ತನ್ವೋ ನೃಮ್ಣವರ್ಧನಃ ಸಹ ಓಜಃ ಪ್ರದಿವಿ ಬಾಹ್ವೋರ್ಹಿತಃ ।**
**ತುಭ್ಯಂ ಸುತೋ ಮಘವನ್ತುಭ್ಯಮಾಭೃತಸ್ತ್ವಮಸ್ಯ ಬ್ರಾಹ್ಮಣಾದಾ ತೃಪತ್ಪಿಬ ॥**

॥ ಪದಪಾಠಃ

ಏಷಃ । ಸ್ಯಃ । ತೇ । ತನ್ವಃ । ನೃಮ್ಣಽವರ್ಧನಃ । ಸಹಃ । ಓಜಃ । ಪ್ರಽದಿವಿ । ಬಾಹ್ವೋಃ । ಹಿತಃ ।
ತುಭ್ಯಂ । ಸುತಃ । ಮಘಽವನ್ । ತುಭ್ಯಂ । ಆಽಭೃತಃ । ತ್ವಂ । ಅಸ್ಯ । ಬ್ರಾಹ್ಮಣಾತ್ । ಆ । ತೃಪತ್ ।
ಪಿಬ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಸ್ಯಃ ಸ ಏಷ ಸೋಮಸ್ತೇ ತವ ತನ್ವಃ ಶರೀರಸ್ಯ ನೃಮ್ಣವರ್ಧನಃ । ಬಲಸ್ಯ ವರ್ಧಕಃ। ತುಭ್ಯಂ ಸುತ ಇತ್ಯುತ್ತರತ್ರ ಸಂಬಂಧಃ । ಯೇನ ಸೋಮೇನ ಪ್ರದಿವಿ ಪುರಾಣೇ ತ್ವಯಿ ಬಾಹ್ವೋರ್ಹಸ್ತಯೋಃ ಸಹಃ ಪರೇಷಾಮಭಿಭವನಲಕ್ಷಣಂ ಸಾಮರ್ಥ್ಯಮೋಜಸ್ತತ್ಕಾರಣಭೂತಂ ಬಲಂ ಚ ಹಿತಃ । ನಿಹಿತಂ ಭವತಿ ॥ ಲಿಂಗವ್ಯತ್ಯಯಃ ॥ ಹೇ ಮಘವನ್ ಧನವನ್ನಿಂದ್ರ ತುಭ್ಯಂ ತ್ವದರ್ಥಂ ತಾದೃಶಃ ಸೋಮಃ ಸುತೋಽಧ್ವರ್ಯುಭಿರಭಿಷುತಃ । ತುಭ್ಯಂ ಹೋತುಮಾಭೃತಃ । ಉತ್ತರವೇದ್ಯಾಂ ಪ್ರತ್ಯಾ-

ಹೃತಶ್ಚ । ಅಸ್ಯೇಮಂ ಸೋಮಂ ಬ್ರಾಹ್ಮಣಾತ್ ಬ್ರಾಹ್ಮಣಾಚ್ಛಂಸಿನೋ ಯಾಗಾತ್ತೃಪತ್ ತೃಪ್ಯಂಸ್ತ್ವಮಾಪಿಬ । ಅಭಿಮುಖ್ಯೇನ ಪಿಬ ॥ ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾದಸ್ಯೇತಿ ಚತುರ್ಥ್ಯರ್ಥೇ ಷಷ್ಠೀ ॥

॥ ಪ್ರತಿಪದಾರ್ಥ ॥

(ಇಂದ್ರ—ಇಂದ್ರನೇ) । **ಸ್ಯಃ**—ಪ್ರಸಿದ್ಧವಾದ । **ಏಷಃ**—ಈ ಸೋಮರಸವು । **ತೇ**—ನಿನ್ನ । **ತನ್ವಃ**—ಶರೀರದ । **ನೃಮ್ಣವರ್ಧನಃ**—ಶಕ್ತಿಯನ್ನು ವೃದ್ಧಿಪಡಿಸುವುದಾಗಿದೆ (ಇದೇ ಸೋಮರಸದಿಂದ) । **ಪ್ರದಿವಿ**—ಪುರಾತನನಾದ ನಿನ್ನ । **ಬಾಹ್ವೋಃ**—ಬಾಹುಗಳಲ್ಲಿ । **ಸಹಃ**—ಶತ್ರುಗಳನ್ನು ಸೋಲಿಸುವ ಬಲವೂ । **ಓಜಃ**—ಅದಕ್ಕೆ ಮೂಲವಾದ ಅಂತಶ್ಶಕ್ತಿಯೂ । **ಹಿತಃ**—ಸ್ಥಾಪಿತವಾಗಿದೆ । **ಮಘವನ್**—ಧನವಂತನಾದ ಇಂದ್ರನೇ । **ತುಭ್ಯಂ**—ನಿನಗಾಗಿಯೇ । **ಸುತಃ**—(ಈ ರಸವು) ಹಿಂಡಲ್ಪಟ್ಟಿದೆ । **ತುಭ್ಯಂ**—ನಿನ್ನನ್ನು ಉದ್ದೇಶಿಸಿ ಯಾಗಮಾಡುವುದಕ್ಕಾಗಿಯೇ **ಆಭೃತಃ**—ಉತ್ತರವೇದಿಗೆ ತರಲ್ಪಟ್ಟಿದೆ । **ಅಸ್ಯ**—ಈ ಸೋಮವನ್ನು । **ಬ್ರಾಹ್ಮಣಾತ್**—ಬ್ರಾಹ್ಮಣಾಚ್ಛಂಸಿಯ ಯಾಗದಿಂದ । **ತೃಪತ್**—ತೃಪ್ತನಾಗತಕ್ಕ । **ತ್ವಂ**—ನೀನು । **ಆ ಪಿಬ**—ಅಭಿಮುಖವಾಗಿ ಬಂದು ಪಾನಮಾಡು.

॥ ಭಾವಾರ್ಥ ॥

ಇಂದ್ರನೇ, ಪ್ರಸಿದ್ಧವಾದ ಈ ಸೋಮರಸವು ನಿನ್ನ ಶರೀರದ ಶಕ್ತಿಯನ್ನು ವೃದ್ಧಿಪಡಿಸುವುದಾಗಿದೆ. ಇದೇ ಸೋಮರಸದಿಂದ ಪುರಾತನನಾದ ನಿನ್ನ ಬಾಹುಗಳಲ್ಲಿ ಶತ್ರುಗಳನ್ನು ಸೋಲಿಸುವ ಬಲವೂ ಅದಕ್ಕೆ ಮೂಲವಾದ ಅಂತಶ್ಶಕ್ತಿಯೂ ಸ್ಥಾಪಿತವಾಗಿದೆ. ಧನವಂತನಾದ ಇಂದ್ರನೇ, ನಿನಗಾಗಿಯೇ ಈ ರಸವು ಹಿಂಡಲ್ಪಟ್ಟಿದೆ. ನಿನ್ನನ್ನು ಉದ್ದೇಶಿಸಿ ಯಾಗಮಾಡುವುದಕ್ಕಾಗಿಯೇ ಉತ್ತರವೇದಿಗೆ ತರಲ್ಪಟ್ಟಿದೆ. ಬ್ರಾಹ್ಮಣಾಚ್ಛಂಸಿಯ ಯಾಗದಲ್ಲಿ ಅಭಿಮುಖನಾಗಿ ಬಂದು ಸೋಮವನ್ನು ಪಾನಮಾಡಿ ತೃಪ್ತನಾಗು.

English Translation.

This (libation), Indra, is the augmenter of your bodily (vigour), favourable of old to the resistless strength of (your) arms: it is effused Maghavan, for you: it is brought to you from the Brahmana: drink and be satisfied.

॥ ವಿಶೇಷವಿಷಯಗಳು ॥

**ನೃಮ್ಣವರ್ಧನಃ—ಬಲಸ್ಯ ವರ್ಧನಃ। ನೃಮ್ಣಂ ಸಹಃ, ಓಜಃ,** ಎಂಬ ಪದಗಳು ಯಾಸ್ಕರಿಂದ ಬಲನಾಮ್ಮಗಳಲ್ಲಿ (ನಿ. ೨-೯) ಪಠಿತವಾಗಿವೆ. ನೃಮ್ಣವರ್ಧನಃ ಎಂಬಶಬ್ದಕ್ಕೆ ಸಾಯಣರು **ಶರೀರಸ್ಯ ಬಲಸ್ಯ ವರ್ಧಕಃ** ಶರೀರ ಸಂಬಂಧವಾದ ಶಕ್ತಿಯನ್ನು ಸೋಮವು ವೃದ್ಧಿಗೊಳಿಸುವುದೆಂದು ಅರ್ಥಮಾಡಿರುತ್ತಾರೆ. ಇವರಿಂದ ನೃಮ್ಣಶಬ್ದಕ್ಕೆ ಶಾರೀರ ಬಲವೆಂಬ ಅರ್ಥದಲ್ಲಿ ಪ್ರಯೋಗವನ್ನು ಹೇಳಿರುತ್ತದೆ. **ಬಾಹ್ವೋಃ ಸಹಃ—ಹಸ್ತಯೋಃ ಪರೇಷಾಮಭಿಭವನಲಕ್ಷಣಂ ಸಾಮರ್ಥ್ಯಂ । ಓಜಃ—ತತ್ಕಾರಣಭೂತಂ ಬಲಂ** ಎಂದು ವ್ಯಾಖ್ಯಾನಮಾಡಿದೆ. ಇದರಿಂದ **ಸಹಃ**

ಶತ್ರುಗಳನ್ನು ತಿರಸ್ಕರಿಸುವುದರಲ್ಲಿ ಪ್ರಸಿದ್ಧವಾಗಿರುವ ಶೌರ್ಯವು ಎಂದೂ, ಇದಕ್ಕೆ ಕಾರಣವಾಗಿರುವ ಮನಶ್ಶಕ್ತಿಯು ಓಜಃ ಎಂದೂ, ಅರ್ಥವು ವಿವೃತವಾಗಿದೆ. ಸೋಮವು ಈ ಮೂರು ವಿಧವಾದ ಸಾಮರ್ಥ್ಯಗಳನ್ನು ಇಂದ್ರನಿಗೆ ಉಂಟುಮಾಡಿರುವುದೆಂದು ಉಕ್ತವಾಗಿದೆ ಎಂದೂ ವಿವರಿಸಿದೆ. ಇದರಿಂದ ಸೋಮರಸದ ಪ್ರಭಾವವನ್ನು ವರ್ಣಿಸಿ **ಮಘವನ್—ಧನವನ್** ಧನವುಳ್ಳವನೆಂದು ಇಂದ್ರನನ್ನು ಸಂಬೋಧಿಸಿ, ಈ ಇಂದ್ರನಿಗಾಗಿ **ತುಭ್ಯಂ ಸುತಃ, ತುಭ್ಯಮಾಭೃತಃ**—ಅಧ್ವರ್ಯುವೇ ಮೊದಲಾದ ಋತ್ವಿಜರಿಂದ ಹಿಂಡಿದ್ದಾಗಿಯೂ, ಉತ್ತರವೇದಿಯಲ್ಲಿ ಇಂದ್ರನನ್ನು ಉದ್ದೇಶಿಸಿ ಹೋಮಮಾಡಲು ಸಿದ್ಧವಾಗಿರುವುದಾಗಿಯೂ ಇರುವ ಸೋಮವನ್ನು **ಬ್ರಾಹ್ಮಣಾತ್ ತೃಪತ್ ಆ ಪಿಬ—ಬ್ರಾಹ್ಮಣಾಂಚ್ಛಂಸಿನೋ ಯಾಗಾತ್ ತೃಪ್ಯನ್** (ಆ ಪಿಬ) **ಅಭಿಮುಖ್ಯೇನ ಪಿಬ**—ಬ್ರಾಹ್ಮಣಾಚ್ಛಂಸಿ ಎಂಬ ಋತ್ವಿಜನು ಅಗ್ನಿಯಲ್ಲಿ ಹೋಮಮಾಡುವುದನ್ನು ಇಂದ್ರನು ತನಗೆ ತೃಪ್ತಿಯಾಗುವವರೆಗೂ ಪಾನಮಾಡಲಿ ಎಂದು ಯಜಮಾನನ ಆಶಂಸನೆಯು ವರ್ಣಿತವಾಗಿದೆ.



॥ ಸಂಹಿತಾಪಾಠಃ ॥

ಜುಷೇಥಾಂ ಯಜ್ಞಂ ಬೋಧತಂ ಹವಸ್ಯ ಮೇ ಸತ್ತೋ ಹೋತಾ ನಿವಿದಃ
ಪೂರ್ವ್ಯಾ ಅನು ।
ಅಚ್ಛಾ ರಾಜಾನಾ ನಮ ಏತ್ಯಾವೃತಂ ಪ್ರಶಾಸ್ತ್ರಾದಾ ಪಿಬತಂ ಸೋಮ್ಯಂ ಮಧು ॥

॥ ಪದಪಾಠಃ ॥

ಜುಷೇಥಾಂ । ಯಜ್ಞಂ । ಬೋಧತಂ । ಹವಸ್ಯ । ಮೇ । ಸತ್ತಃ । ಹೋತಾ । ನಿऽವಿದಃ । ಪೂರ್ವ್ಯಾಃ ।
ಅನು ।
ಅಚ್ಛ । ರಾಜಾನಾ । ನಮಃ । ಏತಿ । ಆऽವೃತಂ । ಪ್ರऽಶಾಸ್ತ್ರಾತ್ । ಆ । ಪಿಬತಂ । ಸೋಮ್ಯಂ । ಮಧು ॥

॥ ಸಾಯಣಭಾಷ್ಯಂ ॥

ಹೇ ಮಿತ್ರಾವರುಣೌ ಮದೀಯಮಿಮಂ ಯಜ್ಞಂ ಜುಷೇಥಾಂ । ಸೇವೇಥಾಂ । ಮೇ ಮಮ ಹವಸ್ಯ ಹವಮಾಹ್ವಾನಂ ॥ ಪೂರ್ವವತ್ಕರ್ಮಣಿ ಷಷ್ಠೀ ॥ ಬೋಧತಂ । ಅವಗಚ್ಛತಂ । ತಥಾ ಸತ್ತೋ ನಿಷಣ್ಣೋऽಸ್ಮದೀಯೋ ಹೋತಾ ಪೂರ್ವ್ಯಾಃ ಶ್ರೇಷ್ಠಾಃ ರಂತನೀರ್ನಿವಿದಃ ॥ ವಾಜ್ಯಾಮೈತತ್ ॥ ಶಸ್ತ್ರಲಕ್ಷಣಾ ವಾಚೋऽನು ಶಂಸತೀತಿ ಶೇಷಃ । ಉದ್ಗಾತೃಭಿಃ ಕೃತಸ್ಯ ಸ್ತೋತ್ರಸ್ಯಾನುಗುಣ್ಯೇನಾಜ್ಯಾದೀನಿ

**ಶಸ್ತ್ರಾಣಿ ಶಂಸತೀತ್ಯರ್ಥಃ । ಅಪಿ ಚ ನಮಃ ಸೋಮಲಕ್ಷಣಮನ್ನಮಾವೃತಮೃತ್ವಿಗ್ಭಿರ್ವೇಷ್ಟಿತಂ ರಾಜಾನಾ ರಾಜಮಾನೌ ಯುವಾಮಚ್ಛಾಭಿಮುಖ್ಯೇನೈತಿ । ಗಚ್ಛತಿ ಪ್ರಾಪ್ನೋತಿ । ತಾದೃಶಂ ಸೋಮ್ಯಂ ಸೋಮಮಯಂ ಮಧು ಮಾದಕಂ ಹವಿಃ ಪ್ರಶಾಸ್ತ್ರಾತ್ ಪ್ರಶಾಸ್ತುರ್ಯಾಗಾದಾಪಿಬತಂ ಆಭಿಮುಖ್ಯೇನ ಪಿಬತಂ ॥**

॥ ಪ್ರತಿಪದಾರ್ಥ ॥

**ಮಿತ್ರಾವರುಣಾ**—ಎಲೈ ಮಿತ್ರಾವರುಣರೇ । **ಯಜ್ಞಂ**— ಈ ಯಜ್ಞವನ್ನು । **ಜುಷೇಥಾಃ**—ಸೇವಿಸಿರಿ । **ಮೇ**— ನನ್ನ । **ಹವಸ್ಯ**—ಆಹ್ವಾನವನ್ನು । **ಬೋಧತಂ**—ತಿಳಿಯಿರಿ । **ಸತ್ತಃ**—ಕುಳಿತಿರತಕ್ಕ । **ಹೋತಾ**—ಹೋತೃವು । **ಪೂರ್ವ್ಯಾಃ**—ಪುರಾತನಗಳಾದ । **ನಿವಿದಃ**—ನಿವಿದ್ ಮಂತ್ರಗಳನ್ನು । **ಅನು**—ಪಠಿಸುತ್ತಾನೆ । **ಆವೃತಂ**- ಋತ್ವಿಕ್ಕುಗಳಿಂದ ಸುತ್ತುವರೆಯಲ್ಪಟ್ಟ **ನಮಃ**—ಸೋಮರೂಪವಾದ ಅನ್ನವು । **ರಾಜಾನಾ**—ಪ್ರಕಾಶಮಾನರಾವ ನಿಮ್ಮನ್ನು । **ಅಚ್ಛ**— ಅಭಿಮುಖವಾಗಿ ಬಂದು । **ಏತಿ** — ಸಮಿೀಪಿಸುತ್ತದೆ । **ಸೋಮ್ಯಂ**—ಸೋಮಮಯವೂ । **ಮಧು**—ಮದಕರವೂ ಆದ ಹವಿಸ್ಸನ್ನು । **ಪ್ರಶಾಸ್ತ್ರಾತ್**— ಪ್ರಶಾಸ್ತೃವಿನ ಯಾಗದಿಂದ **ಆ ಪಿಬತಂ**—ಪಾನಮಾಡಿರಿ.

॥ ಭಾವಾರ್ಥ ॥

ಎಲೈ ಮಿತ್ರಾವರುಣರೇ, ಈ ಯಜ್ಞವನ್ನು ಸೇವಿಸಿರಿ. ನನ್ನ ಆಹ್ವಾನವನ್ನು ತಿಳಿಯಿರಿ. ಇಲ್ಲಿ ಕುಳಿತಿರತಕ್ಕ ಹೋತೃವು ಪುರಾತನಗಳಾದ ನಿವಿದ್ ಮಂತ್ರಗಳನ್ನು ಪಠಿಸುತ್ತಾನೆ. ಋತ್ವಿಕ್ಕುಗಳಿಂದ ವೇಷ್ಟಿತವಾದ ಸೋಮರೂಪವಾದ ಅನ್ನವು ಪ್ರಕಾಶಮಾನರಾವ ನಿಮ್ಮನ್ನು ಎದುರುಮಾಡಿಕೊಂಡು ಬಂದು ಸಮಿೀಪಿಸುತ್ತದೆ. ಸೋಮಮಯವೂ ಮಾದಕವೂ ಆದ ಹವಿಸ್ಸನ್ನು ಪ್ರಶಾಸ್ತೃವಿನ ಯಾಗದಿಂದ ಪಾನಮಾಡಿರಿ.

English Translation.

Mitra and Varuna, both be gratified with the sacrifice: hear my invocation as the seated Hotri repeates in succession the ancient praises: the (sacrificial) food, encompassed (by the priests), attends the royal pair; drink both of you, the sweet Soma libation, offered by the Prasastri.

॥ ವಿಶೇಷವಿಷಯಗಳು ॥

**ಯಜ್ಞಂ ಜುಷೇಥಾಂ—ಹೇ ಮಿತ್ರಾವರುಣೌ ಮದೀಯಮಿಮಂ ಯಜ್ಞಂ ಸೇವೇಥಾಂ** । ಮಿತ್ರಾವರುಣರನ್ನು ಸಂಬೋಧಿಸಿ ಅವರು ಯಜಮಾನರ ಯಾಗಗಳನ್ನು ಸೇವಿಸಲಿ ಎಂದೂ, **ಮೇ ಹವಸ್ಯ ಬೋಧತಂ—ಮಮ ಹವಮಾಹ್ವಾನಂ ಅವಗಚ್ಛತಂ** । ಹವ ಶಬ್ದಕ್ಕೆ ಆಹ್ವಾನವೆಂದು ಅರ್ಥವು ವಿವೃತವಾಗಿದೆ. ಯಜಮಾನನು ಯಾಗಕ್ಕಾಗಿ ಬರಲಿ ಎಂದು ಮಿತ್ರಾವರುಣರನ್ನು ಆಹ್ವಾನಮಾಡಿರುವುದನ್ನು ಈ ಮಿತ್ರಾವರುಣರು ಗಮನಿಸಲೆಂದೂ ಆಶಂಸಿತವಾಗಿದೆ.

**ಹೋತಾ ಪೂರ್ವ್ಯಾಃ ನಿವಿದ: ಅನು — ಅಸ್ಮದೀಯಃ ಹೋತಾ ಚಿರಂತನೀಃ ಶಸ್ತ್ರಲಕ್ಷಣಾ ವಾಚಃ ಅನುಶಂಸಂತಿ । ಉದ್ಗಾತೃಭಿಃ ಕೃತಸ್ಯ ಸ್ತೋತ್ರಸ್ಯಾನುಗುಣ್ಯೇನಾಜ್ಯಾದೀನಿ ಶಂಸತಿ ।** ದೇವತೆಗಳನ್ನು ಯಾಗಕ್ಕಾಗಿ ಆಯಾಯ ಮಂತ್ರಗಳಿಂದ ಆಹ್ವಾನಮಾಡುವ ಋತ್ವಿಜನು ಯಾಗವನ್ನಾಚರಿಸುವಾಗ ಹಿಂದಿನ ಕಾಲದಿಂದಲೂ ಆಯಾಯ ಕರ್ಮಗಳ ಆಚರಣೆಯ ಕಾಲಗಳಲ್ಲಿ ಅವಶ್ಯವಾಗಿ ಪಠಿಸಬೇಕಾಗಿರುವ ಶಸ್ತ್ರ ಎಂದು ಪ್ರಸಿದ್ಧವಾದ ಮಂತ್ರಗಳನ್ನು ಉದ್ಗಾತೃವೆಂಬ ಋತ್ವಿಜನು ಪಠಿಸುವ ಸ್ತುತಿಗಳಿಗನುಗುಣವಾಗಿ ಪಠಿಸುವನು ಎಂದು ಹೇಳಿದೆ.

**ಅವೃತಂ ನಮಃ ರಾಜಾನಾ ಅಚ್ಛ ಏತಿ — ಋತ್ವಿಗ್ಭಿಃ ವೇಷ್ಟಿತಂ ಸೋಮಲಕ್ಷಣಮನ್ನಂ ರಾಜಮಾನೌ ಯುವಾಂ ಅಭಿಮುಖ್ಯೇನ ಪ್ರಾಪ್ನೋತಿ ।** ನಮಃ ಎಂಬ ಪದಕ್ಕೆ ಅನ್ನ ಎಂದು ಅರ್ಥವನ್ನು ವಿವರಿಸಿದೆ. ಋತ್ವಿಜರಿಂದ ಸುತ್ತುವರಿಯಲ್ಪಟ್ಟಿದ್ದಾಗಿ ಅಗ್ನಿಯಲ್ಲಿ ಹೋಮ ಮಾಡಲ್ಪಟ್ಟ ಸೋಮರೂಪದಿಂದ ಇರುವ ಅನ್ನವು ತಮ್ಮ ತೇಜಸ್ಸುಗಳಿಂದ ಪ್ರಕಾಶಿಸುತ್ತಿರುವ ಮಿತ್ರಾವರುಣರ ಸಮೀಪಕ್ಕೆ ಬರುವುದೆಂದೂ, **ಪ್ರಶಾಸ್ತುರ್ಯೋಗಾತ್ ಅಭಿಮುಖ್ಯೇನ ಪಿಬತಂ** ಪ್ರಶಾಸ್ತೃವೆಂಬ ಋತ್ವಿಜನು ಈ ಸೋಮವನ್ನು ಅಗ್ನಿಯಲ್ಲಿ ಅರ್ಪಿಸಿರುವುದರಿಂದ ಮದಕರವಾದ ಈ ಸೋಮವನ್ನು ಮಿತ್ರಾವರುಣರು ಪಾನಮಾಡಲಿ ಎಂದೂ ಯಜಮಾನರ ಆಶಂಸನೆಯು ವರ್ಣಿತವಾಗಿದೆ.

**ನಿವಿದಃ**— ನಿವಿದ್ ಶಬ್ದವು ಬ್ರಾಹ್ಮಣಗಳಲ್ಲಿ ಪಠಿತವಾಗಿದೆ (ನಿ. ೨-೧೩) ; ದೇವತೆಗಳ ಮಹಿಮೆಯನ್ನು ವರ್ಣಿಸುವ ವಾಕ್ಯಗಳು ಎಂದಭಿಪ್ರಾಯವು.

ಆದಿಯಲ್ಲಿ ಪ್ರಜಾಪತಿಯು ಒಬ್ಬಂಟಿಗನಾಗಿದ್ದುದರಿಂದ ಪ್ರಜಾಸೃಷ್ಟಿಯನ್ನು ಮಾಡಿ ಬಹುಸಂಖ್ಯಾತನಾಗಬೇಕೆಂದಪೇಕ್ಷಿಸಿ ಒಂದು ವರ್ಷಕಾಲ ಮೌನವನ್ನಾಶ್ರಯಿಸುತ್ತಾ ತಪಸ್ಸನ್ನಾಚರಿಸಿದನು. ಅನಂತರ ಹನ್ನೆರಡು ಮಹಾವಾಕ್ಯಗಳನ್ನೊಳಗೊಂಡ **ನಿವಿದ್** ಮಂತ್ರಗಳನ್ನು ಹನ್ನೆರಡು ಸಲ ಪಠಿಸಿದನಂತರ ಜಗತ್ತಿನಲ್ಲಿ ಭೂತಗಳೆಲ್ಲವೂ ಸೃಷ್ಟವಾದವು ಎಂದು ಈ ಮಂತ್ರಗಳ ಪ್ರಭಾವವನ್ನು ತಿಳಿಸಿ ಅನಂತರ ಇವುಗಳ ರಹಸ್ಯವನ್ನರಿತುಕೊಂಡ ಕುತ್ಸನನ್ನೂ ಅವನು ಪಠಿಸಿರುವ ಈ ಋಕ್ಕಿನ ಮಹಿಮೆಯನ್ನೂ ಪ್ರಶಂಸಿಸಿದೆ.

**ತದೇತದೃಷಿಃ ಪಶ್ಯನ್ನಭ್ಯನೂವಾಚ ಸ ಪೂರ್ವಯಾ ನಿವಿದಾ ಕವ್ಯತಾಯೋರಿಮಾಃ ಪ್ರಜಾ ಅಜನಯನ್ಮನೂನಾಮಿತಿ ।**

**ನಿವಿದ್** ಮಂತ್ರಗಳ ಪ್ರಭಾವದಿಂದ ಜಗತ್ತಿನ ಭೂತಗಳೆಲ್ಲವೂ ಸೃಷ್ಟವಾದವು ಎಂಬ ತತ್ತ್ವಾಂಶವನ್ನು ಕುತ್ಸಋಷಿಯು ಗ್ರಹಿಸಿ '**ಸ ಪೂರ್ವಯಾ** (ಋ. ಸಂ. ೧-೯೬-೨)' ಎಂಬ ಮಂತ್ರವನ್ನು ಪಠಿಸಿದನು.

**ತಸ್ಮಾದೇತಾಂ ಪುರಸ್ತಾತ್ ಸೂಕ್ತಸ್ಯ ನಿವಿದಂ ದಧಾತಿ ಪ್ರಜಾತ್ಯೈ । ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ।**

ಈ ಕಾರಣದಿಂದಲೇ ಹೋತೃವು ಸೂಕ್ತದ ಪ್ರಾರಂಭದಲ್ಲಿ **ನಿವಿದ್** ಮಂತ್ರವನ್ನು ಪಠಿಸುವುದರ ಫಲವಾಗಿ ಸಂತಾನವನ್ನು ಪಡೆಯುತ್ತಾನೆ. ಈ ವಿಧವಾದ ತಿಳುವಳಿಕೆಯುಳ್ಳವರಿಗೆ ಸತ್ಸಂತಾನವೇ ಮೊದಲಾದ ಸಕಲ ಧನವೂ ಪ್ರಾಪ್ತವಾಗುವುದು.

ಒಂದು ದೇವತೆಯನ್ನಾಗಲಿ, ಅಥವಾ ದೇವತೆಗಳ ಒಂದು ಗುಂಪನ್ನಾಗಲಿ ಉದ್ದೇಶಿಸಿ ಅವರ ಅಸಾಧಾರಣವಾದ ಗುಣಗಳನ್ನು ವರ್ಣಿಸಿ ಅವರನ್ನು ಆಹ್ವಾನಮಾಡುವ ಮಂತ್ರವು **ನಿವಿದ್** ಮಂತ್ರವೆಂದು ಪ್ರಸಿದ್ಧವಾಗಿವೆ.

**ಕರ್ಮೈವ ತಾವತ್ಸಾವಿತ್ರ್ಯಂ ನಿವಿದಿ ಸ್ತೌತಿ ಕರ್ಮಣಾ ।**
**ಯದ್ಧೇನುಃ ಸಪ್ತ್ಯನಡ್ವಾಹೌ ವೋಳ್ಹಾ ದೋಗ್ಧ್ರ್ಯಾಶುರೇವ ವಾ ॥**

(ಬೃಹದ್ದೇವತಾ ೩-೫೦)

ಉದಾಹರಣೆಗೆ ಋ. ಸಂ. ೧-೩೪-೩ ನೇ ಋಕ್ಕಿನಲ್ಲಿ **ಸವಿತೃ** ದೇವತೆಯನ್ನುದ್ದೇಶಿಸಿ **ನಿವಿದ್** ಮಂತ್ರವು **ಸವಿತೃವಿನ** ವೈಶಿಷ್ಟ್ಯವನ್ನು ಅವನ ಅಸಾಧಾರಣವಾದ ಕರ್ಮದ ವಿವರಣೆಯನ್ನೂ ತಿಳಿಸುತ್ತದೆ. **ದೋಗ್ಧ್ರೀ** ಎನ್ನುವುದರಿಂದ ಹಾಲನ್ನು ಕರೆಯುವ ಹಸುವೆಂದೂ, **ಆಶು** (ವೇಗಗಾಮಿನಿ) ಎನ್ನುವುದರಿಂದಲೂ, **ವೋಳ್ಹಾ**, ಹೊರೆಯನ್ನು ವಹಿಸುವುದು ಎನ್ನುವುದರಿಂದ ಎತ್ತೆಂದೂ ಅವುಗಳ ವೈಶಿಷ್ಟ್ಯವನ್ನು ತಿಳಿಯುತ್ತೇವೆ. ಅದರಂತೆಯೇ **ನಿವಿದ್** ಮಂತ್ರವೂ ಆಯಾ ದೇವತೆಯ ವೈಯಕ್ತಿಕವಾದ ಗುಣಗಳನ್ನು ಆಯಾ ಕರ್ಮಗಳ ವಿವರಣೆಯಿಂದ ತಿಳಿಸಿ ಸ್ತುತಿಸುವುದು.

ಮೂವತ್ತಾರನೆಯ ಸೂಕ್ತವು ಮುಗಿದುದು.

**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀವೀರಬುಕ್ಕಭೂಪಾಲಸಾಮ್ರಾಜ್ಯಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ದ್ವಿತೀಯಾಷ್ಟಕೇ ಸಪ್ತಮೋಽಧ್ಯಾಯಃ ಸಮಾಪ್ತಃ**

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ದ್ವಿತೀಯಾಷ್ಟಕದಲ್ಲಿ
ಏಳನೆಯ ಅಧ್ಯಾಯವು ಸಮಾಪ್ತವಾದುದು.



ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥





॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥



ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

## ॥ ದ್ವಿತೀಯಾಷ್ಟಕೇಽಷ್ಟಮೋಽಧ್ಯಾಯಃ ॥

### ಎರಡನೆಯ ಅಷ್ಟಕದಲ್ಲಿ ಎಂಟನೆಯ ಅಧ್ಯಾಯವು

## ಎರಡನೆಯ ಮಂಡಲದಲ್ಲಿ ಮೂವತ್ತೇಳನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಅಥ ದ್ವಿತೀಯಾಷ್ಟಕಸ್ಯಾಷ್ಟಮೋಽಧ್ಯಾಯ ಆರಭ್ಯತೇ । ದ್ವಿತೀಯಮಂಡಲಸ್ಯ ಚತುರ್ಥಾನುವಾಕೇ ಮಂದಸ್ವೇತಿ ಷಡೃಚಂ ಪಂಚಮಂ ಸೂಕ್ತಂ ಗಾರ್ತ್ಸಮದಂ । ಮಂದಸ್ವೇತ್ಯನುಕ್ರಾಂತಂ । ಪೂರ್ವತ್ರ ಋತವ್ಯಂ ತು ಜಾಗತಂ ತ್ವಿತಿ ತುಶಬ್ದಪ್ರಯೋಗಾದಿದಮಪಿ ಜಾಗತಮೃತವ್ಯಂ । ತತ್ರಾದ್ಯಾಶ್ಚತಸ್ರ ಋಚೋ ದ್ರವಿಣೋದೋದೇವತಾಕಾಃ ಪಂಚಮ್ಯಾಶ್ವಿನೀ ಷಷ್ಠ್ಯಾಗ್ನೇಯೀ ॥

**ದಶರಾತ್ರೇ ಷಷ್ಠೇಽಹನಿ ಋತುಯಾಜೇಷು ಪ್ರೈಷಾನ್ಪಕ್ಷಿರಸ್ಕಾನ್ ಕೃತ್ವಾ ತೈಃ ಪ್ರೈಷೈಃ ಪ್ರೇಷಿತವ್ಯಂ ಯಷ್ಟವ್ಯಂ ಚ । ತತ್ರ ಸಪ್ತಮಾದೀನಾಂ ಪ್ರೈಷಾಣಾಮುಪರಿಷ್ಟಾತ್ ಮಂದಸ್ವೇತ್ಯಾದ್ಯಾಃ ಷಡೃಚಃ ಕ್ರಮೇಣ ಪ್ರಕ್ಷೇಪಣೀಯಾಃ । ಸೂತ್ರಂ ತು ಪೂರ್ವಮೇವೋದಾಹೃತಂ ॥**

ಅನುವಾದವು—ಈಗ ಎರಡನೆಯ ಅಷ್ಟಕದಲ್ಲಿ ಎಂಟನೆಯ ಅಧ್ಯಾಯವು ಪ್ರಾರಂಭಿಸಲ್ಪಡುವುದು. ಎರಡನೆಯ ಮಂಡಲದ ನಾಲ್ಕನೆಯ ಅನುವಾಕದಲ್ಲಿ—**ಮಂದಸ್ವ ಹೋತ್ರಾತ್** ಎಂಬ ಈ ಸೂಕ್ತವು ಐದನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು. ಅನುಕ್ರಮಣಿಕೆಯಲ್ಲಿ—**ಮಂದಸ್ವ** ಎಂದು ಮೊದಲಾಗಿ ಹೇಳಿರುವುದು. ಹಿಂದೆ ಅನುಕ್ರಮಣಿಕೆಯಲ್ಲಿ **ಋತವ್ಯಂ ತು ಜಾಗತಂ ತ್ವಿತಿ** ಎಂದು ಹೇಳಿ ತುಶಬ್ದಪ್ರಯೋಗಮಾಡಿರುವುದರಿಂದ ಈ ಸೂಕ್ತವು ಜಗತೀಛಂದಸ್ಸಿನ ಋಕ್ಕುಗಳಿಂದ ಕೂಡಿದ ಋತುದೇವತಾಕವಾದ ಸೂಕ್ತವು. ಋತುದೇವತಾಕವಾದ ಸೂಕ್ತಗಳಲ್ಲಿ ಋತುದೇವತೆಗಳೊಡನೆ ಇತರ ದೇವತೆಗಳೂ ಸ್ತುತರಾಗಿರುವುದು ಸಾಮಾನ್ಯವಾಗಿದೆ ಆದ್ದರಿಂದ ಋತುದೇವತೆಗಳ ಸಹಿತವಾಗಿ ಈ ಸೂಕ್ತದ ಋಕ್ಕುಗಳಿಗೆ ಬೇರೆ ಬೇರೆ ದೇವತೆಗಳೂ ಇರುವರು. ಆದುದರಿಂದ ಈ ಸೂಕ್ತದ ಮೊದಲಿನ ನಾಲ್ಕು ಋಕ್ಕುಗಳು ದ್ರವಿಣೋದಾದೇವತಾಕವು; ಐದನೆಯ ಋಕ್ಕು ಅಶ್ವಿನೀದೇವತಾಕವು; ಆರನೆಯ ಋಕ್ಕು ಅಗ್ನಿದೇವತಾಕವು. ದಶರಾತ್ರವೆಂಬ ಯಾಗದ ಆರನೆಯ ದಿವಸದಲ್ಲಿ ಮಾಡುವ ಋತುಯಾಗದಲ್ಲಿ ಋಗ್ವೇದದ ಋಕ್ಕುಗಳನ್ನೇ ಪ್ರೈಷಮಂತ್ರವನ್ನಾಗಿ ಉಪಯೋಗಿಸಿ ಆ ಋಕ್ಕುಗಳಿಂದ ಪ್ರೇಷಮಂತ್ರಪಠನವನ್ನೂ, ಹೋಮವನ್ನೂ ಮಾಡಬೇಕು. ಅಂತಹ ಪ್ರೈಷಮಂತ್ರಗಳಲ್ಲಿ ಏಳನೆಯ ಪ್ರೈಷಮಂತ್ರಾನಂತರ ಈ ಸೂಕ್ತದ **ಮಂದಸ್ವ** ಎಂದು ಮೊದಲಾಗುವ ಆರು ಋಕ್ಕುಗಳನ್ನು ಕ್ರಮವಾಗಿ ಪ್ರೈಷಮಂತ್ರಗಳಿಗೂ ಯಾಜ್ಯಾಮಂತ್ರಗಳಿಗೂ ಉಪಯೋಗಿಸುವರು. ಈ ವಿಷಯದಲ್ಲಿ ಸೂತ್ರವಾಕ್ಯವನ್ನು ಹಿಂದೆಯೇ ಹೇಳಲಾಗಿದೆ.

## ಪೀಠಿಕೆ

ಋತುಗಳನ್ನುದ್ದೇಶಿಸಿ ಮಾಡುವ ಋತುಪ್ರಯಾಜಹೋಮಗಳಲ್ಲಿ ಹಿಂದಿನ ಸೂಕ್ತದ ಆರು ಋಕ್ಕುಗಳೂ ಈ ಸೂಕ್ತದ ಆರು ಋಕ್ಕುಗಳೂ ಸಹ ಪ್ರೈಷಮಂತ್ರಗಳಾಗಿಯೂ, ಯಾಜ್ಯಾಮಂತ್ರಗಳಾಗಿಯೂ ಉಪಯೋಗಿಸಲ್ಪಡುವವು. ಋತುದೇವತಾಕವಾದ ಋಕ್ಕುಗಳಿಗೆ ಋತುಗಳ ಜತೆಗೆ ಇತರ ದೇವತೆಗಳೂ ಸೇರಿರುವರು ಉದಾಹರಣೆಗೆ ಈ ಸೂಕ್ತದ ಮೊದಲಿನ ನಾಲ್ಕು ಋಕ್ಕುಗಳಿಗೆ ಋತುಗಳ ಜತೆಗೆ **ದ್ರವಿಣೋದಾ** ಎಂಬ ದೇವತೆಗಳೂ, ಐದನೇ ಋಕ್ಕಿಗೆ ಅಶ್ವಿನೀ ದೇವತೆಗಳೂ ಆರನೆಯ ಋಕ್ಕಿಗೆ ಅಗ್ನಿಯೂ ದೇವತೆಗಳೆಂದು ಉಕ್ತವಾಗಿದೆ. ಇದರಂತೆಯೇ ಪ್ರಥಮ ಮಂಡಲದ **ಇಂದ್ರ ಸೋಮಂ ಪಿಬ** ಎಂಬ ಹನ್ನೆರಡು ಋಕ್ಕಿನ ಹದಿನೈದನೆಯ ಸೂಕ್ತದಲ್ಲಿಯೂ ಇದೇ ಕ್ರಮವಿರುವುದು. ಎಂದರೆ ೧, ೨, ೩, ೪, ೫, ೬ ನೆಯ ಋಕ್ಕುಗಳಿಗೆ ಕ್ರಮವಾಗಿ ಋತುಸಹಿತರಾದ **ಇಂದ್ರ, ಮರುತ್, ತ್ವಷ್ಟಾ, ಅಗ್ನಿಃ, ಇಂದ್ರ, ಮಿತ್ರಾವರುಣೌ** ಎಂಬುವರು ದೇವತೆಗಳು. ಕೊನೆಯ ಆರು ಋಕ್ಕುಗಳಲ್ಲಿ ಪ್ರಕೃತ ಸೂಕ್ತದಂತೆಯೇ ನಾಲ್ಕು ಋಕ್ಕುಗಳಿಗೆ ಋತುಸಹಿತರಾದ **ದ್ರವಿಣೋದಾ** ಎಂಬ ದೇವತೆಯೂ, ಮುಂದಿನ ಋಕ್ಕಿಗೆ ಅಶ್ವಿನೀ ದೇವತೆಗಳೂ, ಕೊನೆಯ ಋಕ್ಕಿಗೆ ಅಗ್ನಿಯೂ ದೇವತೆಗಳು.

ಹಿಂದಿನ ಸೂಕ್ತದಲ್ಲಿಯೂ ಈ ಸೂಕ್ತದಲ್ಲಿಯೂ ಋತುಸಹಿತರಾಗಿ ಸೋಮವನ್ನು ಪಾನಮಾಡಬೇಕೆಂದು ದೇವತೆಗಳನ್ನು ಪ್ರಾರ್ಥಿಸಲಾಗಿದೆ. ಆದುದರಿಂದ ಋತುಗಳ ಸ್ವರೂಪನಿರೂಪಣೆಯು ಇಲ್ಲಿ ಅವಶ್ಯಕವಾಗಿದೆ. ಋತುಗಳೆಂದರೆ ಮಾಸಾಧಿಮಾನಿ ದೇವತೆಗಳು. ಒಂದು ಸಂವತ್ಸರದಲ್ಲಿ ಹನ್ನೆರಡು ಮಾಸಗಳಿರುವುವು. ಈ ಹನ್ನೆರಡು ಮಾಸಗಳಲ್ಲಿ ಎರಡೆರಡು ಮಾಸಗಳಿಗೆ ಒಂದೊಂದು ಋತುವೆಂದು ಪ್ರಸಿದ್ಧವಾಗಿರುವುದು. ಆದುದರಿಂದ ಹನ್ನೆರಡು ಮಾಸಗಳಿಗೆ ಒಟ್ಟು ಆರು ಋತುಗಳಾಗುವುವು. ಲೋಕವ್ಯವಹಾರದಲ್ಲಿ ಸಂವತ್ಸರದಲ್ಲಿ ಸಾಧಾರಣವಾಗಿ ಬೇಸಿಗೆಕಾಲ, ಮಳೆಗಾಲ, ಛಳಿಗಾಲ ಎಂದು ಮೂರು ವಿಭಾಗಗಳಿರುವುವು. ಆದರೆ ವೇದಗಳಲ್ಲಿ ಎರಡು ಮಾಸಗಳಿಗೆ ಒಂದು ಋತುವಿನಂತೆ ಆರು ಋತುಗಳೆಂದು ಪರಿಗಣಿಸಲಾಗಿದೆ. ಈ ವಿಷಯದಲ್ಲಿ—

**ವಸಂತೇನರ್ತುನಾ ದೇವಾಃ । ವಸವಸ್ತ್ರಿವೃತಾ ಸ್ತುತಂ । ರಥಂತರೇಣ ತೇಜಸಾ । ಹವಿರಿಂದ್ರೇ ವಯೋಃ ದಧುಃ ॥**

**ಗ್ರೀಷ್ಮೇಣ ದೇವಾ ಋತುನಾ । ರುದ್ರಾಃ ಪಂಚದಶೇ ಸ್ತುತಂ । ಬೃಹತಾ ಯಶಸಾ ಬಲಂ । ಹವಿರಿಂದ್ರೇ ವಯೋ ದಧುಃ ॥**

**ವರ್ಷಾಭಿರ್ಋತುನಾದಿತ್ಯಾಃ । ಸ್ತೋಮೇ ಸಪ್ತದಶೇ ಸ್ತುತಂ । ವೈರೂಪೇಣ ವಿಶೌಜಸಾ । ಹವಿರಿಂದ್ರೇ ವಯೋ ದಧುಃ ॥**

**ಶಾರದೇನರ್ತುನಾ ದೇವಾಃ । ಏಕವಿಗ್ಂಶ ಋಭವಃ ಸ್ತುತಂ । ವೈರಾಜೇನ ಶ್ರಿಯಾ ಶ್ರಿಯಂ । ಹವಿರಿಂದ್ರೇ ವಯೋ ದಧುಃ ॥**

**ಹೇಮಂತೇನರ್ತುನಾ ದೇವಾಃ । ಮರುತಸ್ತ್ರಿಣವೇ ಸ್ತುತಂ । ಬಲೇನ ಶಕ್ವರೀಃ ಸಹಃ । ಹವಿರಿಂದ್ರೇ ವಯೋ ದಧುಃ ॥**

**ಶೈಶಿರೇಣರ್ತುನಾ ದೇವಾಃ । ತ್ರಯಸ್ತ್ರಿಗ್ಂಶೇಽಮೃತಗ್ಂ ಸ್ತುತಂ । ಸತ್ಯೇನ ರೇವತೀಃ ಕ್ಷತ್ರಂ । ಹವಿರಿಂದ್ರೇ ವಯೋ ದಧುಃ ॥**

(ತೈ. ಬ್ರಾ. ೨-೬-೧೯-೧, ೨)

ಎಂಬ ತೈತ್ತಿರೀಯ ಬ್ರಾಹ್ಮಣದಲ್ಲಿರುವ ಅನುವಾಕದಲ್ಲಿ ದೇವತೆಗಳು ವಸಂತಋತುವನ್ನು ತ್ರಿವೃತ್‌ಸ್ತೋಮದಿಂದಲೂ, ಗ್ರೀಷ್ಮಋತುವನ್ನು ಪಂಚದಶಸ್ತೋಮದಿಂದಲೂ, ವರ್ಷಋತುವನ್ನು ಸಪ್ತದಶಸ್ತೋಮದಿಂದಲೂ, ಶರದೃತುವನ್ನು ಏಕವಿಂಶಸ್ತೋಮದಿಂದಲೂ, ಹೇಮಂತಋತುವನ್ನು ತ್ರಿಣವಸ್ತೋಮದಿಂದಲೂ, ಶೈಶಿರಋತುವನ್ನು ತ್ರಯಸ್ತ್ರಿಂಶ ಸ್ತೋಮದಿಂದಲೂ ಸ್ತುತಿಸಿ, ಹವಿಸ್ಸನ್ನು ಹೋಮಮಾಡಿ, ಬಲ, ಯಶಸ್ಸು, ಐಶ್ವರ್ಯ ಮೊದಲಾದ ಇಷ್ಟಗಳನ್ನು ಪಡೆದರೆಂದು ಹೇಳಿದೆ. ಆದುದರಿಂದ ಒಂದು ಸಂವತ್ಸರದಲ್ಲಿ—ವಸಂತ, ಗ್ರೀಷ್ಮ, ವರ್ಷ, ಶರತ್, ಹೇಮಂತ, ಶೈಶಿರ ಎಂದು ಒಟ್ಟು ಆರು ಋತುಗಳಿರುವವು. ಕೆಲವು ಸಂದರ್ಭಗಳಲ್ಲಿ ಹೇಮಂತ ಮತ್ತು ಶೈಶಿರಋತುಗಳನ್ನು ಒಟ್ಟಿಗೆ ಸೇರಿಸಿ ಹೇಮಂತಶಿಶಿರ ಎಂದು ಒಂದೇ ಋತುವಿನಂತೆ ಪರಿಗಣನೆ ಮಾಡಲಾಗಿದೆ.

**ವಸಂತಮೃತೂನಾಂ ಪ್ರೀಣಾಮಿ ಸ ಮಾ ಪ್ರೀತಃ ಪ್ರೀಣಾತು**
**ಗ್ರೀಷ್ಮಮೃತೂನಾಂ ಪ್ರೀಣಾಮಿ ಸ ಮಾ ಪ್ರೀತಃ ಪ್ರೀಣಾತು**
**ವರ್ಷಾಋತೂನಾಂ ಪ್ರೀಣಾಮಿ ತಾ ಮಾ ಪ್ರೀತಾಃ ಪ್ರೀಣಂತು**

ಶರದಮೃತೂನಾಂ ಪ್ರೀಣಾಮಿ ಸಾ ಮಾ ಪ್ರೀತಾ ಪ್ರೀಣಾತು
ಹೇಮಂತಶಿಶಿರಾವೃತೂನಾಂ ಪ್ರೀಣಾಮಿ ತೌ ಮಾ ಪ್ರೀತೌ ಪ್ರೀಣೀತಾಂ

(ತೈ. ಸಂ. ೧-೬-೨-೩)

ಎಂಬಲ್ಲಿ ಹೇಮಂತ ಮತ್ತು ಶಿಶಿರ ಎಂಬ ಎರಡು ಋತುಗಳನ್ನು ಒಂದೇ ಋತುವಿನಂತೆ ಪರಿಗಣಿಸಿ ಒಟ್ಟು ಐದು ಋತುಗಳಿರುವಂತೆ ವಿವರಿಸಲಾಗಿದೆ. ಯಾಸ್ಕರು—ಋತು ಶಬ್ದಕ್ಕೆ ನಿರ್ವಚನವನ್ನು ಹೇಳುತ್ತಾ, **ಋತುರರ್ತೇರ್ಗತಿಕರ್ಮಣಃ** (ನಿ. ೨-೨೫) **ಋತುಭಿಃ ಕಾಲೈಃ** (ನಿ. ೮-೩) ಎಂದು ಹೇಳಿದಾರೆ. ಎಂದರೆ, ಋತು ಶಬ್ದವು ಋ ಗತೌ ಎಂಬ ಗತ್ಯರ್ಥವಾಚಕವಾದ ಧಾತುವಿನಿಂದ ನಿಷ್ಪನ್ನವಾಗಿ ಋತು ಎಂದರೆ ಕಾಲ ಎಂಬರ್ಥವನ್ನು ಸೂಚಿಸುವುದಾಗಿರುವುದು ಎಂದು ಅರ್ಥವಿವರಣೆಮಾಡಿದಾರೆ. ಯಾವ ಯಾವ ಮಾಸಗಳು ಸೇರಿ ಯಾವ ಯಾವ ಋತುಗಳಾಗಿವೆ ಎಂಬುದನ್ನೂ ಸಹ ಯಜುರ್ವೇದದಲ್ಲಿಯೇ ಹೇಳಲಾಗಿದೆ.

ಮಧುಶ್ಚ ಮಾಧವಶ್ಚ ವಾಸಂತಿಕಾವೃತೂ
ಶುಕ್ರಶ್ಚ ಶುಚಿಶ್ಚ ಗ್ರೈಷ್ಮಾವೃತೂ
ನಭಶ್ಚ ನಭಸ್ಯಶ್ಚ ವಾರ್ಷಿಕಾವೃತೂ
ಇಷಶ್ಚೋರ್ಜಶ್ಚ ಶಾರದಾವೃತೂ
ಸಹಶ್ಚ ಸಹಸ್ಯಶ್ಚ ಹೈಮಂತಿಕಾವೃತೂ
ತಪಶ್ಚ ತಪಸ್ಯಶ್ಚ ಶೈಶಿರಾವೃತೂ

(ತೈ. ಸಂ. ೪-೪-೧೧-೧)

ಎಂದರೆ, ಚೈತ್ರ ವೈಶಾಖಮಾಸಗಳು ಸೇರಿ ವಸಂತಋತುವೆಂದೂ, ಜ್ಯೇಷ್ಠ ಆಷಾಢ ಮಾಸಗಳು ಸೇರಿ ಗ್ರೀಷ್ಮಋತುವೆಂದೂ, ಶ್ರಾವಣ ಭಾದ್ರಪದಮಾಸಗಳು ಸೇರಿ ವರ್ಷಋತುವೆಂದೂ, ಆಶ್ವಯುಜ, ಕಾರ್ತಿಕಮಾಸಗಳು ಸೇರಿ ಶರದೃತುವೆಂದೂ, ಮಾರ್ಗಶಿರ ಪುಷ್ಯಮಾಸಗಳು ಸೇರಿ ಹೇಮಂತಋತುವೆಂದೂ, ಮಾಘ ಫಾಲ್ಗುಣಮಾಸಗಳು ಸೇರಿ ಶಿಶಿರಋತುವೆಂದೂ ಪ್ರಸಿದ್ಧವಾಗಿರುವುದು ಎಂದು ಋತುಗಳ ವರ್ಣನೆ ಇದೆ. ಆದುದರಿಂದ ಇಲ್ಲಿ ಎಂದರೆ ಈ ಸೂಕ್ತದಲ್ಲಿಯೂ ಹಿಂದಿನ ಸೂಕ್ತದಲ್ಲಿಯೂ ಋತು ಎಂದರೆ ಋತುವಿನ ಅಭಿಮಾನದೇವತೆ ಎಂದರ್ಥವು. ಈ ಋತ್ವಭಿಮಾನಿ ದೇವತೆಗಳೊಡನೆ ದ್ರವಿಣೋದಾಃ (ಅಗ್ನಿ) ಮೊದಲಾದ ದೇವತೆಗಳು ಯಜ್ಞಭೂಮಿಗೆ ಬಂದು ಸೋಮಪಾನಮಾಡಬೇಕೆಂದು ಈ ಸೂಕ್ತದ ಋಕ್ಕುಗಳಲ್ಲಿ ಪ್ರಾರ್ಥಿಸಲಾಗಿದೆ.

ಋತುಯಾಜ ಹೋಮಗಳು

ಋತುಯಾಜಹೋಮಗಳಲ್ಲಿ ಹನ್ನೆರಡು ಮಂತ್ರಗಳಿರುವವು. ಈ ಹನ್ನೆರಡು ಹೋಮಗಳಿಗೆ ಪ್ರೈಷ ಮಂತ್ರಗಳೂ ಯಾಜ್ಯಾಮಂತ್ರಗಳೂ ಒಂದೇ ಆಗಿರುವವು. ತೈತ್ತಿರೀಯ ಸಂಹಿತೆಯಲ್ಲಿ—

**ಮಧುಶ್ಚ ಮಾಧವಶ್ಚ ಶುಕ್ರಶ್ಚ ಶುಚಿಶ್ಚ ನಭಶ್ಚ ನಭಸ್ಯಶ್ಚೇಷಶ್ಚೋರ್ಜಶ್ಚ ಸಹಶ್ಚ ಸಹಸ್ಯಶ್ಚ ತಪಶ್ಚ ತಪಸ್ಯಶ್ಚೋಪಯಾಮಗೃಹೀತೋಽಸಿ ಸಗ್ಂಸರ್ಪೋಽಸ್ಯಗ್ಂಹಸ್ಪತ್ಯಾಯ ತ್ವಾ ॥**

(ತೈ. ಸಂ. ೧-೪-೧೪-೧)

ಇಲ್ಲಿ ಹನ್ನೆರಡು ಮಾಸಗಳ ಹೆಸರುಗಳನ್ನು ಹೇಳಿದೆ. ಈ ಮಂತ್ರಕ್ಕೆ ಬ್ರಾಹ್ಮಣವು—

ಯಜ್ಞೇನ ವೈ ದೇವಾಃ ಸುವರ್ಗಂ ಲೋಕಮಾಯನ್ತೇಽಮನ್ಯಂತ ಮನುಷ್ಯಾ ನೋಽನ್ವಾಭವಿಷ್ಯಂತೀತಿ ತೇ ಸಂವತ್ಸರೇಣ ಯೋಪಯಿತ್ವಾ ಸುವರ್ಗಂ ಲೋಕಮಾಯನ್ ತಮೃಷಯ ಋತುಗ್ರಹೈರೇವಾನು ಪ್ರಾಜಾನನ್ ಯದೃತುಗ್ರಹಾ ಗೃಹ್ಯಂತೇ ಸುವರ್ಗಸ್ಯ ಲೋಕಸ್ಯ ಪ್ರಜ್ಞಾತ್ಯೈ ದ್ವಾದಶ ಗೃಹ್ಯಂತೇ ದ್ವಾದಶ ಮಾಸಾಃ ಸಂವತ್ಸರಃ ಸಂವತ್ಸರಸ್ಯ ಪ್ರಜ್ಞಾತ್ಯೈ ಸಹ ಪ್ರಥಮೌ ಗೃಹ್ಯೇತೇ ಸಹೋತ್ತಮೌ ತಸ್ಮಾದ್ದ್ವೌದ್ವಾವೃತೂ ಉಭಯತೋ ಮುಖಮೃತುಪಾತ್ರಂ ಭವತಿ ಕೋ ಹಿ ತದ್ವೇದ ಯತ ಋತೂನಾಂ ಮುಖಮೃತುನಾ ಪ್ರೇಷ್ಯೇತಿ ಷಟ್ಕೃತ್ವ ಆಹ ಷಡ್ವಾ ಋತವ ಋತೂನೇವ ಪ್ರೀಣಾತ್ಯೃತುಭಿರಿತಿ ಚತುಶ್ಚತುಷ್ಪದ ಏವ ಪಶೂನ್ಪ್ರೀಣಾತಿ ದ್ವಿಃ ಪುನರ್ಋತುನಾಹ ದ್ವಿಪದ ಏವ ಪ್ರೀಣಾತ್ಯೃತುನಾ ಪ್ರೇಷ್ಯೇತಿ ಷಟ್ಕೃತ್ವ ಆಹರ್ತುಭಿರಿತಿ ಚತುಸ್ತಸ್ಮಾಚ್ಚತುಷ್ಪಾದಃ ಪಶವ ಋತೂನುಪಜೀವಂತಿ ದ್ವಿಃ ಪುನರ್ಋತುನಾಹ ತಸ್ಮಾದ್ದ್ವಿಪಾದಶ್ಚತುಷ್ಪದಃ ಪಶೂನುಪಜೀವಂತ್ಯೃತುನಾ ಪ್ರೇಷ್ಯೇತಿ ಷಟ್ಕೃತ್ವ ಆಹರ್ತುಭಿರಿತಿ ಚತುರ್ದ್ವಿಃ ಪುನರ್ಋತುನಾಹಾಕ್ರಮಣಮೇವ ತತ್ಸೇತುಂ ಯಜಮಾನಃ ಕುರುತೇ ಸುವರ್ಗಸ್ಯ ಲೋಕಸ್ಯ ಸಮಷ್ಟ್ಯೈ ನಾನ್ಯೋಽನ್ಯಮನು ಪ್ರಪದ್ಯೇತ ಯದನ್ಯೋಽನ್ಯಮನುಪ್ರಪದ್ಯೇತರ್ತುರೃತುಮನು ಪ್ರಪದ್ಯೇತರ್ತವೋ ಮೋಹುಕಾಸ್ಯುಃ ಪ್ರಸಿದ್ಧಮೇವಾಧ್ವರ್ಯುರ್ದಕ್ಷಿಣೇನ ಪ್ರಪದ್ಯತೇ ಪ್ರಸಿದ್ಧಂ ಪ್ರತಿಪ್ರಸ್ಥಾತೋತ್ತರೇಣ ತಸ್ಮಾದಾದಿತ್ಯಃ ಷಣ್ಮಾಸೋ ದಕ್ಷಿಣೇನೈತಿ ಷಡುತ್ತರೇಣೋಪಯಾಮಗೃಹೀತೋಽಸಿ ಸಗ್ಂಸರ್ಪೋಽಸ್ಯಗ್ಂ ಹಸ್ಪತ್ಯಾಯತ್ವೇತ್ಯಾಹಾಸ್ತಿ ತ್ರಯೋದಶೋ ಮಾಸ ಇತ್ಯಾಹುಸ್ತಮೇವ ತತ್ಪ್ರೀಣಾತಿ ॥ (ತೈ. ಸಂ. ೬–೫–೩)

ಪೂರ್ವದಲ್ಲಿ ದೇವತೆಗಳು ಯಜ್ಞವನ್ನು ಮಾಡಿ ಅದರಿಂದ ಸ್ವರ್ಗಲೋಕಕ್ಕೆ ಹೋದರು. ಅನಂತರ ಅವರು ಹಾಗೆಯೇ ಯೋಚಿಸಿ, ಮನುಷ್ಯರೂ ನಮ್ಮಂತೆಯೇ ಯಜ್ಞಮಾಡಿ ನಮ್ಮನ್ನನುಸರಿಸಿ ನಮ್ಮ ಹಿಂದೆಯೇ ಸ್ವರ್ಗಲೋಕಕ್ಕೆ ಬರುವರು. ಅವರು ಬರದಂತೆ ಮಾಡಬೇಕೆಂದು ಯೋಚಿಸಿ ದಾರಿಗೆ ಅಡ್ಡಲಾಗಿ ಸಂವತ್ಸರವನ್ನು ತಡೆಗಟ್ಟಿ ಸ್ವರ್ಗಕ್ಕೆ ಹೋದರು. ಆದರೂ ಋಷಿಗಳು, ದೇವತೆಗಳು ಬಿಟ್ಟುಹೋಗಿದ್ದ ಋತುಪಾತ್ರೆಗಳಿಂದ ಅವನ್ನು ಕಂಡುಕೊಂಡರು. ಸಂವತ್ಸರದಲ್ಲಿ ಹನ್ನೆರಡು ಮಾಸಗಳಿರುವವು. ಆದುದರಿಂದ ಹನ್ನೆರಡು ಋತುಪಾತ್ರೆಗಳನ್ನು ಸ್ವೀಕರಿಸಬೇಕು. ಹಾಗೆ ಮಾಡಿದರೆ ಸಂವತ್ಸರ ಸ್ವರೂಪವು ತಿಳಿದು ಸ್ವರ್ಗಲೋಕವು ಲಭಿಸುವುದು. ಮೊದಲಿನ ಎರಡು ಋತುಪಾತ್ರೆಗಳನ್ನು ಒಟ್ಟಿಗೆ ಸ್ವೀಕರಿಸುವರು. ಅದರಂತೆ ಕೊನೆಯ ಎರಡು ಪಾತ್ರೆಗಳನ್ನು ಒಟ್ಟಿಗೆ ಸ್ವೀಕರಿಸುವರು. ಅದ್ದರಿಂದ ಋತುಗಳು ಎರಡೆರಡು ಮಾಸಗಳು ಸೇರಿ ಜತೆಯಾಗಿರುವವು. ಋತುಪಾತ್ರೆಗಳಿಗೆ ಎರಡುಕಡೆಯಲ್ಲಿಯೂ ಮುಖವಿರುವುದು. ಹೀಗಿರುವುದು ಯಾರಿಗೆ ಗೊತ್ತು? ಋತುಗಳಿಗಾಗಿಪ್ರೈಷಮಂತ್ರವನ್ನು ಆರಾವರ್ತಿ ಪಠಿಸುವನು. ಏಕೆಂದರೆ ಋತುಗಳು ಆರು. ಅದರಿಂದ ಋತುಗಳನ್ನು ಸಂತೋಷಪಡಿಸಿದಂತಾಗುವುದು. ಅನಂತರ ಋತುಗಳಿಗಾಗಿ ನಾಲ್ಕಾವರ್ತಿ ಮಂತ್ರಗಳನ್ನು ಪಠಿಸುವನು. ಅದರಿಂದ ನಾಲ್ಕುಪಾದಗಳುಳ್ಳ ಪಶುಗಳನ್ನು ಸಂತೋಷಪಡಿಸಿದಂತಾಗುವುದು. ಬಳಿಕ ಋತುಗಳಿಗಾಗಿ ಎರಡಾವರ್ತಿ ಮಂತ್ರವನ್ನು ಪಠಿಸುವುದರಿಂದ ಎರಡುಕಾಲುಗಳುಳ್ಳ (ಮನುಷ್ಯ) ಪ್ರಾಣಿಗಳನ್ನು ಸಂತೋಷಪಡಿಸಿ

ದಂತಾಗುವುದು. ಮತ್ತೆ ಋತುಗಳಿಗಾಗಿ ಪ್ರೈಷಮಂತ್ರಗಳನ್ನು ಪಠಿಸಬೇಕೆಂದು ಆರಾವರ್ತಿ ಹೇಳುವನು. ಅದರಂತೆ ನಾಲ್ಕಾವರ್ತಿಯೂ ಎರಡಾವರ್ತಿಯೂ ಪಠಿಸಬೇಕೆಂದೂ ಹೇಳುವನು. ಏಕೆಂದರೆ, ಚತುಷ್ಪಾದವುಳ್ಳ ಪಶುಗಳು ಋತುಗಳನ್ನೇ ಅನುಸರಿಸಿ ಜೀವಿಸುವವು. ದ್ವಿಪಾದವುಳ್ಳ ಪ್ರಾಣಿಗಳು (ಮನುಷ್ಯರು) ಚತುಷ್ಪಾದ ಪ್ರಾಣಿಗಳನ್ನು ಅವಲಂಬಿಸಿ ಜೀವಿಸುವವು. ಮತ್ತೆ ಹಿಂದೆ ಹೇಳಿದಂತೆ ಋತುಗಳಿಗಾಗಿ ಮಂತ್ರಗಳನ್ನು ಆರಾವರ್ತಿಯೂ, ನಾಲ್ಕಾವರ್ತಿಯೂ, ಎರಡಾವರ್ತಿಯೂ ಪಠಿಸಬೇಕೆಂದು ಹೇಳುವನು. ಈ ರೀತಿಯಾಗಿ ಮಂತ್ರಗಳನ್ನು ಪಠಿಸುವುದರಿಂದ ಯಜಮಾನನು ಸ್ವರ್ಗಕ್ಕೆ ಹೋಗಲು ಸೇತುವೆಯನ್ನು ಕಲ್ಪಿಸಿಕೊಂಡಂತಾಗುವುದು. ಒಬ್ಬರನ್ನೊಬ್ಬರು ಅನುಸರಿಸಿ ಹೋಗಬಾರದು. ಹಾಗೆ ಮಾಡಿದರೆ ಋತುಗಳೂ ಅರೀತಿಯಾಗುವುದರಿಂದ ಋತುಗಳ ಕ್ರಮದಲ್ಲಿ ವ್ಯತ್ಯಾಸವುಂಟಾಗುವುದು. ಆದುದರಿಂದ ಅಧ್ವರ್ಯುವು ದಕ್ಷಿಣದಿಕ್ಕಿನ ಬಾಗಿಲಿನಿಂದಲೂ, ಪ್ರತಿಪ್ರಸ್ಥಾತೃವು ಉತ್ತರಬಾಗಿಲಿನಿಂದಲೂ ಹೋಗುವನು. ಈ ಕ್ರಮವನ್ನೇ ಅನುಸರಿಸಿ ಸೂರ್ಯನು ಆರುತಿಂಗಳವರೆಗೆ ದಕ್ಷಿಣದಿಕ್ಕಿನಲ್ಲಿಯೂ, ಇನ್ನು ಆರು ತಿಂಗಳವರೆಗೆ ಉತ್ತರದಿಕ್ಕಿನಲ್ಲಿಯೂ ಸಂಚರಿಸುವನು. (ದಕ್ಷಿಣಾಯನ ಉತ್ತರಾಯನಗಳನ್ನು ಸೂಚಿಸುವುವು) ಕೆಲವರು ಹದಿಮೂರನೇ ಮಾಸವೂ ಇರುವುದೆಂದು ಹೇಳುವರು. ಅಧ್ವರ್ಯುವು ಅದನ್ನೂ ಸಂತೋಷಪಡಿಸುವನು.

ಮೇಲೆ ಹೇಳಿದ ವಿವರಣೆಯಲ್ಲಿ ಋತುಯಾಜಹೋಮಗಳು ಮೂರು ವಂಗಡಗಳಾಗಿ ವಿಭಾಗಿಸಲ್ಪಟ್ಟಿವೆ. ಮೊದಲು ಆರು, ಅನಂತರ ನಾಲ್ಕು, ಅನಂತರ ಎರಡು ಒಟ್ಟು ಹನ್ನೆರಡು. ಮೊದಲನೇ ಆರು ಮಂತ್ರಗಳಲ್ಲಿ **ಋತುನಾ** ಎಂಬ ಏಕವಚನ ಪ್ರಯೋಗವಿರುವುದು. ಈ ಆರು ಮಂತ್ರಗಳಿಗೆ ಕ್ರಮವಾಗಿ ಇಂದ್ರ, ಮರುತ್ತುಗಳು, ತ್ವಷ್ಟಾ, ಅಗ್ನಿ, ಇಂದ್ರ-ಬ್ರಹ್ಮ, ಮಿತ್ರಾವರುಣರು ಎಂಬುವರು ದೇವತೆಗಳು. ಅನಂತರ ಎರಡನೇ ವಂಗಡದ ನಾಲ್ಕು ಮಂತ್ರಗಳಿಗೆ ಎಂದರೆ ಏಳು, ಎಂಟು, ಒಂಭತ್ತು, ಹತ್ತು ಮಂತ್ರಗಳಿಗೆ ದ್ರವಿಣೋದಾಃ (ಎಂಬ ಅಗ್ನಿಯ ರೂಪಾಂತರವು) ದೇವತೆಯು: ಈ ನಾಲ್ಕು ಮಂತ್ರಗಳಲ್ಲಿ **ಋತುಭಿಃ** ಎಂಬ ಬಹುವಚನಪ್ರಯೋಗವಿರುವುದು. ಮೂರನೆಯ ವಂಗಡದ ಎರಡುಮಂತ್ರಗಳಲ್ಲಿ ಹನ್ನೊಂದನೆಯ ಮಂತ್ರಕ್ಕೆ ಅಶ್ವಿನೀದೇವತೆಗೂ, ಹನ್ನೆರಡನೆಯ ಮಂತ್ರಕ್ಕೆ ಅಗ್ನಿಯೂ ದೇವತೆಗಳು. ಈ ಎರಡು ಮಂತ್ರಗಳಲ್ಲಿಯೂ ಸಹ ಋತುನಾ ಎಂಬ ಏಕವಚನ ಪ್ರಯೋಗವೇ ಇರುವುದು. (ಋ. ಸಂ. ೧-೧೫ ನೆಯ ಸೂಕ್ತವನ್ನು ನೋಡಿ).

ಈ ಋತುಯಾಜಹೋಮಗಳಿಗಾಗಿ ಪಠಿಸುವ ೧೨ ಪ್ರೈಷ ಮಂತ್ರಗಳನ್ನು ಮೈತ್ರಾವರುಣನೆಂಬ ಋತ್ವಿಜನೇ ನಿರ್ದೇಶಿಸುವನು. ಮೊದಲನೇ ಪ್ರೈಷ ಮಂತ್ರವನ್ನು ಮೈತ್ರಾವರುಣನು ಹೋತೃವನ್ನು ಸಂಬೋಧಿಸಿ ಹೇಳುವನು. **ಹೋತಾಯಕ್ಷದಿಂದ್ರಂ ಹೋತ್ರಾತ್ಸಜೂರ್ದಿವ ಆ ಪೃಥಿವ್ಯಾ ಋತುನಾ ಸೋಮಂ ಪಿಬತು ಹೋತರ್ಯಜ.** ಈ ಪ್ರಥಮ ಮಂತ್ರಕ್ಕೆ ಇಂದ್ರನು ದೇವತೆಯಾಗಿರುವನು. ಇದರ ಅರ್ಥವು ಹೋತೃವು ಇಂದ್ರನಿಗಾಗಿ ಯಾಜ್ಯಾಮಂತ್ರವನ್ನು ಪಠಿಸಲಿ. ಆ ಇಂದ್ರನು ಋತುದೇವತೆಯಿಂದ ಸಹಿತನಾಗಿ ಹೋತೃಪಾತ್ರೆಯಿಂದ ಸೋಮವನ್ನು ಪಾನಮಾಡಲಿ, ಎಂದಿರುವುದು. ಯಾಜ್ಯಾಮಂತ್ರವೂ ಇದರಂತೆಯೇ ಇರುವುದು. ಆದರೆ ಮಂತ್ರದ ಪ್ರಾರಂಭದಲ್ಲಿ **ಹೋತಾಯಕ್ಷತ್** ಎನ್ನುವುದಕ್ಕೆ ಬದಲಾಗಿ **ಯೇ ೩ ಯಜಾಮಹೇ** ಎಂದು **ಪ್ರಾ**ರಂಭವಾಗುವುದು. ಇದು ಮೊದಲನೆಯ ಋತುಯಾಜ ಹೋಮವು.

ಎರಡನೆಯ ಹೋಮವನ್ನು ಮಾಡುವಾಗ ಮೈತ್ರಾವರುಣರು ಪೋತೃವನ್ನು ಸಂಬೋಧಿಸಿ ಮರುದ್ದೇವತಾಕವಾದ ಪ್ರೈಷ ಮಂತ್ರವನ್ನು ನಿರ್ದೇಶಿಸುವನು. ಬಳಿಕ ಪೋತೃವು ಮರುದ್ದೇವತಾಸಂಬಂಧವಾದ ಮಂತ್ರವನ್ನು

(ಎರಡನೇ ಋಕ್ಕನ್ನು) ಪಠಿಸಿ ಮರುದ್ದೇವತೆಗಳು ಋತುದೇವತೆಯೊಡನೆ ಬಂದು ಸೋಮ ಪಾನವನ್ನು ಮಾಡಬೇಕೆಂದು ಅರ್ಥವಿರುವ ಎರಡನೇ ಋಕ್ಕನ್ನು ಪಠಿಸುವನು.

ಇದರಂತೆ ಮೂರನೆಯ ಮಂತ್ರ ಪಠನೆಗಾಗಿ ಪ್ರೈಷ ಮಂತ್ರವನ್ನು ನೇಷ್ಟೃವನ್ನು ಸಂಬೋಧಿಸಿ ಹೇಳುವನು. ನೇಷ್ಟೃವು ತ್ವಷ್ಟೃದೇವತಾಕವಾದ ಮಂತ್ರವನ್ನು ಪಠಿಸುವನು. ನಾಲ್ಕನೆಯ ಅಗ್ನಿದೇವತಾಕವಾದ ಮಂತ್ರವನ್ನು ಆಗ್ನೀಧ್ರನೂ, ಐದನೆಯ ಇಂದ್ರದೇವತಾಕವಾದ ಮಂತ್ರವನ್ನು ಬ್ರಹ್ಮನೆಂಬ ಋತ್ವಿಜನೂ, ಆರನೆಯ ಮಿತ್ರಾವರುಣ ದೇವತಾಕವಾದ (ಪ್ರಶಾಸ್ತಾರೌ) ಮಂತ್ರವನ್ನು ಮೈತ್ರಾವರುಣನೂ ಪಠಿಸಿ ಹೋಮಮಾಡುವರು. ಏಳು, ಎಂಟು, ಒಂಭತ್ತು, ಹತ್ತನೆಯ ಮಂತ್ರಗಳು ದ್ರವಿಣೋದಾಃ ಎಂಬ ದೇವತಾಕವು. ಇವುಗಳಲ್ಲಿ ಏಳನೆಯ ಋಕ್ಕನ್ನು ಹೋತೃವೂ, ಎಂಟನೆಯ ಋಕ್ಕನ್ನು ಪೋತೃವೂ, ಒಂಭತ್ತನೆಯ ಋಕ್ಕನ್ನು ನೇಷ್ಟೃವೂ, ಹತ್ತನೆಯ ಋಕ್ಕನ್ನು ಅಚ್ಛಾವಾಕವೆಂಬ ಋತ್ವಿಜನೂ ಪಠಿಸುವರು. ಈ ನಾಲ್ಕು ಮಂತ್ರಗಳಲ್ಲಿಯೂ ಋತುಭಿಃ ಎಂದು ಋತುಶಬ್ದದ ಬಹುವಚನಪ್ರಯೋಗವಿರುವುದು. ಹನ್ನೊಂದು ಮತ್ತು ಹನ್ನೆರಡನೆಯ ಮಂತ್ರಗಳನ್ನು ಹೋತೃವೇ ಪಠಿಸುವನು. ಹನ್ನೊಂದನೆಯ ಮಂತ್ರಕ್ಕೆ ಅಶ್ವಿನೀ ದೇವತೆಗಳೂ, ಹನ್ನೆರಡನೆಯ ಮಂತ್ರಕ್ಕೆ (ಗೃಹಪತಿಯೆಂಬ) ಅಗ್ನಿಯೂ ದೇವತೆಗಳು. ಈ ಕೊನೆಯ ಎರಡು ಋಕ್ಕುಗಳಲ್ಲಿಯೂ ಋತುನಾ ಎಂಬ ಏಕವಚನ ಪ್ರಯೋಗವೇ ಇರುವುದು. ಈ ಕೆಳಗಿನ ಪಟ್ಟಿಯು ಇದನ್ನು ವಿಶದಗೊಳಿಸುವುದು.

| ಮಂತ್ರಸಂಖ್ಯೆ | ಪ್ರೈಷಮಂತ್ರವು | ಉದ್ದೇಶಿಸಲ್ಪಟ್ಟ ಋತ್ವಿಜನು | ಮಂತ್ರದ ದೇವತೆಯು | ಋತುದೇವತೆ ಉಚ್ಚರಿಸುವವನು. |
|---|---|---|---|---|
| ೧ | ಮೈತ್ರಾವರುಣನೆಂಬ ಋತ್ವಿಕ್ | ಹೋತೃ | ಇಂದ್ರ | ಮಧು (ಋತು) |
| ೨. | ,, | ಪೋತೃ | ಮರುತಃ | ಮಾಧವಃ (ಋತು) |
| ೩. | ,, | ನೇಷ್ಟೃ | ತ್ವಷ್ಟಾ | ಶುಕ್ರಃ (ಋತು) |
| ೪. | ,, | ಆಗ್ನೀಧ್ರ | ಅಗ್ನಿಃ | ಶುಚಿಃ (ಋತು) |
| ೫. | ,, | ಬ್ರಹ್ಮ | ಇಂದ್ರ | ನಭಃ (ಋತು) |
| ೬. | ,, | ಪ್ರಶಾಸ್ತೃ (ಮೈತ್ರಾವರುಣ) | ಮಿತ್ರಾವರುಣೌ | ನಭಸ್ಯಃ (ಋತು) |
| ೭. | ,, | ಹೋತೃ | ದ್ರವಿಣೋದಾಃ | ಋತವಃ (ಇಷಃ) |
| ೮. | ,, | ಪೋತೃ | ,, | ,, (ಊರ್ಜಃ) |
| ೯. | ,, | ನೇಷ್ಟೃ | ,, | ,, (ಸಹಃ) |
| ೧೦. | ,, | ಹೋತೃ | ,, | ,, (ಸಹಸ್ಯ) |
| ೧೧. | ,, | ಅಧ್ವರ್ಯು | ಅಶ್ವಿನೌ | ಋತು (ತಪಃ) |
| ೧೨. | ,, | ಗೃಹಪತಿ | ಅಗ್ನಿಃ | ಋತು (ತಪಸ್ಯಃ) |

ಇಲ್ಲಿ ಮಧು, ಮಾಧವ ಮೊದಲಾದ ಶಬ್ದಗಳು ಚೈತ್ರ ವೈಶಾಖ ಮೊದಲಾದ ಮಾಸಗಳ ಹೆಸರನ್ನು ಸೂಚಿಸುವುವು. ಇಂದ್ರ ಮೊದಲಾದ ಒಂದೊಂದು ದೇವತೆಯೊಡನೆ ಮಧು ಮೊದಲಾದ ಒಂದೊಂದು ಮಾಸವು ಆಯಾ ಮಂತ್ರದ ಋತುಸಹಿತವಾದ ದೇವತೆಯೆಂದು ನಿರ್ದೇಶಿಸಲ್ಪಟ್ಟಿದೆ. ದ್ರವಿಣೋದಾಃ ಎಂಬ ದೇವತೆಯೊಡನೆ (ಋತವಃ)

ಋತುಗಳು ಎಂದು ಬಹುವಚನಪ್ರಯೋಗವಿರುವುದರಿಂದ ಇಷ, ಊರ್ಜ, ಸಹಃ ಸಹಸ್ಯಃ ಎಂಬ ನಾಲ್ಕು ಮಾಸಗಳು ಋತುದೇವತೆಗಳೆಂದು ನಿರ್ದೇಶಿಸಲ್ಪಟ್ಟಿರಬಹುದು. ದ್ರವಿಣೋದಾ ಎಂಬ ದೇವತೆಗೆ ೭, ೮, ೯ ನೇ ಋಕ್ಕುಗಳಲ್ಲಿ ಹೇಳಿರುವಂತೆ ಹೋತೃ, ಪೋತೃ, ನೇಷ್ಟೃ ಎಂಬ ಋತ್ವಿಜರ ಪಾತ್ರೆಯಿಂದ ಸೋಮವನ್ನು ಅರ್ಪಿಸಿದ ಬಳಿಕ ೧೦ನೇ ಮಂತ್ರದಿಂದ ಹೋತೃವು ತುರೀಯಪಾತ್ರೆ (ನಾಲ್ಕನೆಯ) ಯಿಂದ ಸೋಮವನ್ನು ಅರ್ಪಿಸುವುದಾಗಿ ಹೇಳಿದೆ. ಈ ತುರೀಯಪಾತ್ರೆಯೆಂಬುದು ಅಮರ್ತ್ಯಂ (ಅಮೃತಾತ್ಮಕವಾದುದು, ಮರಣರಹಿತವಾದುದು) ಎಂದು ಹೇಳಲ್ಪಟ್ಟಿದೆ. ಹನ್ನೊಂದನೆಯ ಮಂತ್ರದಲ್ಲಿ ಅಧ್ವರ್ಯುಪಾತ್ರೆಯಿಂದ ಅಶ್ವಿನೀದೇವತೆಗಳೂ, ಹನ್ನೆರಡನೆಯ ಮಂತ್ರದಲ್ಲಿ ಗೃಹಪತಿ (ಗಾರ್ಹಪತ್ಯ) ಪಾತ್ರೆಯಿಂದ ಅಗ್ನಿಯೂ (ತಪಃ ಮತ್ತು ತಪಸ್ಯ : ಎಂಬ) ಋತುದೇವತೆಗಳೊಡನೆ ಸೋಮಪಾನ ಮಾಡುವಂತೆ ಪ್ರಾರ್ಥಿತರಾಗಿರುವರು.

ಋತುಯಾಜಹೋಮವನ್ನು ನಿರ್ದೇಶಿಸುವ ೧೨ ಮಂತ್ರಗಳು ಋ. ಸಂ. ೧-೧೫ ರಲ್ಲಿ ಹೇಳಿದೆ. ಈ ಸೂಕ್ತದಲ್ಲಿ ೧೨ ಋಕ್ಕುಗಳಿರುವವು. ಈ ಹನ್ನೆರಡು ಋಕ್ಕುಗಳೂ ಮೇಲೆ ವಿವರಿಸಿದಂತೆ ಹನ್ನೆರಡು ಋತುಯಾಜಹೋಮ ಮಂತ್ರಗಳನ್ನು ವಿವರಿಸುವವು. ಪ್ರಕೃತ ಸಂದರ್ಭದಲ್ಲಿ ಎಂದರೆ ಎರಡನೆಯ ಮಂಡಲದಲ್ಲಿ ಆರು ಆರು ಋಕ್ಕುಗಳುಳ್ಳ ೩೬ ಮತ್ತು ೩೭ ನೆಯ ಸೂಕ್ತಗಳನ್ನು ಒಟ್ಟಾಗಿ ಸೇರಿಸಿದರೆ ೧೨ ಋತುಯಾಜಮಂತ್ರಗಳಾಗುವವು. ಎಂದರೆ ೩೬ ನೇ ಸೂಕ್ತದಲ್ಲಿ ಋತುಯಾಜಹೋಮದ ೧-೬ ವರೆಗಿನ ಮಂತ್ರಗಳೂ ೩೭ ನೇ ಸೂಕ್ತದಲ್ಲಿ ೭-೧೨ ವರೆಗಿನ ಮಂತ್ರಗಳೂ ಉಕ್ತವಾಗಿವೆ. ೩೬ ನೇ ಸೂಕ್ತವು ಹಿಂದಿನ ಅಧ್ಯಾಯದಲ್ಲಿ ಸೇರಿದೆ. ಅಲ್ಲಿ ಋತುಯಾಜಸಂಬಂಧವಾದ ಯಾವ ವಿಶೇಷವಿವರಣೆಯನ್ನೂ ಕೊಟ್ಟಿಲ್ಲ. ಈ ಅಧ್ಯಾಯದಲ್ಲಿರುವ ೩೭ ನೆಯ ಸೂಕ್ತದ ಪೀಠಿಕೆಯಲ್ಲಿ ಈ ವಿಷಯಗಳನ್ನೆಲ್ಲಾ ವಿವರಿಸಲಾಗಿದೆ.

ಈಗ ಐತರೇಯ ಬ್ರಾಹ್ಮಣದಲ್ಲಿ ವಿವರಿಸಿರುವ ಋತುಯಾಜಹೋಮಗಳ ಸಂಬಂಧವಾದ ವಿಷಯಗಳನ್ನು ಇಲ್ಲಿ ವಿವರಿಸಲಾಗುವುದು—

**ಪ್ರಾಣಾ ವಾ ಋತುಯಾಜಾಸ್ತದ್ಯದೃತುಯಾಜೈಶ್ಚರಂತಿ ಪ್ರಾಣಾನೇವ ತದ್ಯಜಮಾನೇ ದಧತಿ ।**
ಮಧು, ಮಾಧವ ಮೊದಲಾದ ಋತ್ವಭಿಮಾನಿದೇವತೆಗಳನ್ನುದ್ದೇಶಿಸಿ ಮಾಡುವ ಹೋಮಗಳಿಗೆ ಋತುಯಾಜವೆಂದು ಹೆಸರು. ಋತುಯಾಜಗಳು ಪ್ರಾಣಸ್ವರೂಪವಾಗಿರುವವು. ಇಲ್ಲಿ ಪ್ರಾಣವೆಂದರೆ ಪ್ರಾಣ, ಅಪಾನ ವ್ಯಾನಗಳೆಂದರ್ಥವು. ಈ ಋತುಯಾಜಹೋಮಗಳನ್ನು ಮಾಡುವುದರಿಂದ ಯಜ್ಞಮಾಡುವ ಯಜಮಾನನಲ್ಲಿ ಪ್ರಾಣಾಪಾನಾದಿಗಳು ಸ್ಥಿರವಾಗಿ ನಿಲ್ಲುವಂತೆ ಅನುಕೂಲವಾಗುವುದು. ಮನುಷ್ಯನು ಬಹುಕಾಲ ಜೀವಿಸಿರಬೇಕಾದರೆ ಪ್ರಾಣಾಪಾನಗಳು ಅವನಲ್ಲಿ ಸ್ಥಿರವಾಗಿ ನೆಲೆಸಿರಬೇಕು. ಹಾಗಿಲ್ಲದೆ ಪ್ರಾಣಾಪಾನಗಳು ಶರೀರವನ್ನು ಬಿಟ್ಟು ಹೊರಟುಹೋದರೆ ಮೃತ್ಯುವು ಸಂಭವಿಸುವುದು. ಆದುದರಿಂದಲೇ—**ಪ್ರಾಣಾಪಾನೌ ಮೃತ್ಯೋರ್ಮಾ ಪಾತಂ ಪ್ರಾಣಾಪಾನೌ ಮಾ ಮಾ ಹಾಸಿಷ್ಟಂ**—(ತೈ. ಸಂ. ೩-೧-೭-೧) ನನ್ನಲ್ಲಿ ನೆಲಸಿರುವ ಪ್ರಾಣಾಪಾನಗಳು ಮೃತ್ಯುವಿನಿಂದ ನನ್ನನ್ನು ರಕ್ಷಿಸಲಿ, ಆ ಪ್ರಾಣಾಪಾನಗಳು ನನ್ನನ್ನು ಬಿಟ್ಟು ಹೋಗದಿರಲಿ ಎಂದು ಪ್ರಾರ್ಥಿಸಿರುವ ಶ್ರುತಿವಾಕ್ಯವಿರುವುದು. ಆದುದರಿಂದ ಪ್ರಾಣಾಪಾನಗಳು ಯಜ್ಞಮಾಡುವ ಯಜಮಾನನಲ್ಲಿ ಸ್ಥಿರವಾಗಿ ನೆಲೆಸಿ ಅವನು ದೀರ್ಘಾಯುವಾಗಿರುವುದಕ್ಕಾಗಿ ಈ ಋತುಯಾಜಗಳೆಂಬ ಹೋಮವನ್ನು ಮಾಡುವರು. ಈ ಋತುಯಾಜಗಳು ಅಥವಾ ಋತುಗ್ರಹಗಳು ಹನ್ನೆರಡು ಇರುವವು. ಅವುಗಳಲ್ಲಿ ಮೊದಲನೆಯ ಆರು ಋತುಯಾಜಗಳಲ್ಲಿ ಕೆಲವು ವಿಶೇಷಗಳಿರುವವು. ಅವನ್ನು ಇಲ್ಲಿ ವಿವರಿಸಲಾಗುವುದು—

**ಷಳ್ ಋತೂನೇತಿ ಯಜಂತಿ ಪ್ರಾಣಮೇವ ತದ್ಯಜಮಾನೇ ದಧತಿ |**

ಯಜ್ಞದಲ್ಲಿ ಅಧ್ವರ್ಯುವು ಮೈತ್ರಾವರುಣನನ್ನುದ್ದೇಶಿಸಿ ಪ್ರೈಷಮಂತ್ರವನ್ನು ಪಠಿಸುವಂತೆ ಹೇಳುವನು. ಆಗ ಮೈತ್ರಾವರುಣನು ಹೋತೃವೇ ಮೊದಲಾದ ಆರು ಮಂದಿ ಋತ್ವಿಕ್ಕುಗಳನ್ನು ಪ್ರೈಷಮಂತ್ರದಿಂದ ಸಂಬೋಧಿಸಿ ಪ್ರತಿಯೊಬ್ಬರೂ ಒಂದೊಂದು ಮಂತ್ರದಂತೆ ಆರು ಯಾಜ್ಯಾಮಂತ್ರಗಳನ್ನು ಪಠಿಸಿ ಹೋಮಮಾಡುವಂತೆ ನಿರ್ದೇಶಿಸುವನು. ಅದರಂತೆ ಹೋತೃವೇ ಮೊದಲಾದ ಋತ್ವಿಜರು (ಹೋತೃ, ಪೋತೃ, ನೇಷ್ಟೃ, ಆಗ್ನೀಧ್ರ, ಬ್ರಹ್ಮ, ಮೈತ್ರಾವರುಣರೆಂಬ ಆರು ಮಂದಿ ಋತ್ವಿಜರು) **ಋತುನಾ ಸೋಮಂ ಪಿಬತು** ಎಂಬ ಋತುಶಬ್ದದ ಏಕವಚನಪ್ರಯೋಗವಿರುವ ಆರು ಮಂತ್ರಗಳನ್ನು ಪಠಿಸಿ ಇಂದ್ರಾದಿದೇವತೆಗಳನ್ನು ಋತುದೇವತೆಗಳೊಡನೆ ಸೋಮಪಾನಾರ್ಥವಾಗಿ ಆಹ್ವಾನಮಾಡಿ ಹೋಮಮಾಡುವರು. ಈ ಆರು ಋತುಯಾಜಹೋಮಗಳೂ ಪ್ರಾಣಸ್ವರೂಪವಾಗಿರುವವು. (ಇಲ್ಲಿ ಪ್ರಾಣವೆಂದರೆ ಹೊರಗಿನ ವಾಯುವನ್ನು ಶರೀರದೊಳಗೆ ಆಕರ್ಷಿಸುವುದು. ಎಂದರೆ ಉಸಿರನ್ನು ಒಳಕ್ಕೆ ಎಳೆದುಕೊಳ್ಳುವುದು ಎಂದರ್ಥವು) ಹೋತ್ರಾದಿಋತ್ವಿಕ್ಕುಗಳು ಪ್ರಾಣರೂಪವಾದ ಈ ಆರು ಹೋಮಮಾಡುವುದರಿಂದ ಪ್ರಾಣವಾಯುವು ಯಜಮಾನನಲ್ಲಿ ಸ್ಥಿರವಾಗಿ ನಿಲ್ಲುವಂತೆ ಮಾಡುವರು.

**ಚತ್ವಾರ ಋತುಭಿರಿತಿ ಯಜಂತ್ಯಪಾನಮೇವ ತದ್ಯಜಮಾನೇ ದಧತಿ |**

ಈಗ ಏಳನೇ ಮಂತ್ರದಿಂದ ಹತ್ತನೇ ಮಂತ್ರಗಳವರೆಗೆ ಇರುವ ವಿಶೇಷ ಸಂಗತಿಯನ್ನು ವಿವರಿಸುವರು. ಹಿಂದೆ ಹೇಳಿದ ಕ್ರಮದಂತೆಯೇ ಅಧ್ವರ್ಯುವಿನಿಂದ ಆಜ್ಞಪ್ತನಾದ ಮೈತ್ರಾವರುಣನು ಹೋತ್ರಾದಿ ಋತ್ವಿಜರಿಗೆ ಪ್ರೈಷಮಂತ್ರಗಳ ಮೂಲಕ ಸೂಚಿಸಿ ಏಳರಿಂದ ಹತ್ತರವರೆಗೆ ಇರುವ ನಾಲ್ಕು ಮಂತ್ರಗಳನ್ನು **ಋತುಭಿಃ ಸೋಮಂ** ಎಂಬ ಋತುಶಬ್ದದ ಬಹುವಚನ ಪ್ರಯೋಗವುಳ್ಳ ದ್ರವಿಣೋದಾದೇವತಾಕವಾದ ನಾಲ್ಕು ಮಂತ್ರಗಳನ್ನು ಪಠಿಸಿ ಹೋಮಮಾಡಬೇಕೆಂದು ನಿರ್ದೇಶಿಸುವನು. ಅದರಂತೆ ಹೋತ್ರಾದಿ ಋತ್ವಿಜರು ನಾಲ್ಕು ಹೋಮಗಳನ್ನು ಮಾಡುವರು. ಈ ನಾಲ್ಕು ಹೋಮಗಳು ಅಪಾನವಾಯುಸ್ವರೂಪವಾಗಿರುವುವು. (ಅಪಾನವಾಯುವೆಂದರೆ ಶರೀರದಲ್ಲಿರುವ ವಾಯುವನ್ನು ಹೊರಗೆ ಬಿಡುವುದು. ಉಸಿರನ್ನು ಹೊರಕ್ಕೆ ಬಿಡುವುದು). ಹೋತ್ರಾದಿಋತ್ವಿಕ್ಕುಗಳು ಅಪಾನರೂಪವಾದ ಈ ನಾಲ್ಕು ಹೋಮಗಳನ್ನು ಮಾಡುವುದರಿಂದ ಅಪಾನವಾಯುವು ಯಜಮಾನನಲ್ಲಿ ನೆಲಸುವಂತೆ ಮಾಡುವರು.

**ದ್ವಿಋರ್ತುನೇತ್ಯುಪರಿಷ್ಟಾದ್ವ್ಯಾನಮೇವ ತದ್ಯಜಮಾನೇ ದಧತಿ |**

ಈಗ ಹನ್ನೊಂದು ಮತ್ತು ಹನ್ನೆರಡನೆಯ ಮಂತ್ರಗಳನ್ನು ವಿವರಿಸುವರು. ಹಿಂದಿನಂತೆ ಅಧ್ವರ್ಯುವಿನಿಂದ ಆಜ್ಞಪ್ತನಾದ ಮೈತ್ರಾವರುಣನು ಅಧ್ವರ್ಯು ಮತ್ತು ಯಜಮಾನರನ್ನು ಉದ್ದೇಶಿಸಿ ಪ್ರೈಷ ಮಂತ್ರವನ್ನು ಪಠಿಸುವನು ಆ ಪ್ರೈಷ ಮಂತ್ರವನ್ನು ಕೇಳಿ ಅಧ್ವರ್ಯುಯಜಮಾನರು **ಋತುನಾ ಸೋಮಂ** ಎಂಬ ಏಕವಚನಪ್ರಯೋಗದಿಂದ ಸಹಿತವಾದ ಅಶ್ವಿನೀ ಮತ್ತು ಅಗ್ನಿದೇವತಾಕವಾದ ಎರಡು ಮಂತ್ರಗಳನ್ನು ಪಠಿಸಿ ಹೋಮಮಾಡುವರು. ಈ ಎರಡು ಹೋಮಗಳು ವ್ಯಾನಸ್ವರೂಪವಾಗಿರುವುವು (ವ್ಯಾನವೆಂದರೆ ಶರೀರದಲ್ಲಿರುವ ವಾಯುವು ಶರೀರವನ್ನೆಲ್ಲಾ ವ್ಯಾಪಿಸಿ ಶರೀರದಲ್ಲಿ ಸಂಚರಿಸುತ್ತಿರುವುದು) ಅಧ್ವರ್ಯು ಮತ್ತು ಯಜಮಾನರು ಈ ಹೋಮ ಮಾಡುವುದರಿಂದ ವ್ಯಾನವಾಯುವನ್ನು ಎಲ್ಲಾ ಋತ್ವಿಜರೂ ಯಜಮಾನನಲ್ಲಿ ಸ್ಥಿರವಾಗಿ ನಿಲ್ಲುವಂತೆ ಮಾಡುವರು. ಈ ಕ್ರಮವನ್ನು ಎಂದರೆ ಅಧ್ವರ್ಯವು ಮೈತ್ರಾವರುಣನಿಗೆ ಪ್ರೈಷ ಮಂತ್ರವನ್ನು ಹೇಳುವಂತೆ ಸೂಚಿಸುವುದು ಇತ್ಯಾದಿ ಕ್ರಮವನ್ನು

ಆಪಸ್ತಂಬ ಮಹರ್ಷಿಗಳು ಈ ರೀತಿ ಹೇಳಿರುವರು. **ಋತುನಾ ಪ್ರೇಷ್ಯೇತಿ ತ್ರಿಷ್ವಾದ್ಯೇಷ್ವಧ್ವರ್ಯುಃ ಸಂಪ್ರೇಷ್ಯ-ತ್ಯೇವಂ ಪ್ರತಿಪ್ರಸ್ಥಾತಾ ಪಾತ್ರಯೋರ್ಮುಖೇ ಪರ್ಯಾವೃತ್ಯರ್ತುಭಿಃ ಪ್ರೇಷ್ಯೇತಿ ದ್ವಯೋರಧ್ವರ್ಯು-ರೇವಂ ಪ್ರತಿಪ್ರಸ್ಥಾತಾ ಪುನಃ ಪರ್ಯಾವೃತ್ಯರ್ತುನಾ ಪ್ರೇಷ್ಯೇತಿ ಸಕೃದಧ್ವರ್ಯುರೇವಂ ಪ್ರತಿಪ್ರಸ್ಥಾತಾ ।** ಎಂದು ಹೇಳಿರುವರು. ಈ ರೀತಿ ಮೊದಲಿನ ಆರು ಮಂತ್ರಗಳನ್ನು ಋತುಶಬ್ದದ ಏಕವಚನಪ್ರಯೋಗದಿಂದಲೂ ಅನಂತರ ಏಳರಿಂದ ಹತ್ತರವರೆಗಿನ ಮಂತ್ರಗಳನ್ನು ಋತುಶಬ್ದದ ಬಹುವಚನ ಪ್ರಯೋಗದಿಂದಲೂ ಅನಂತರ ಹನ್ನೊಂದು ಮತ್ತು ಹನ್ನೆರಡನೆಯ ಮಂತ್ರಗಳನ್ನು ಪುನಃ ಋತುಶಬ್ದದ ಏಕವಚನ ಪ್ರಯೋಗದಿಂದಲೂ ಪಠಿಸಬೇಕೆಂಬ ವಿಷಯದಲ್ಲಿ **ಋತುನಾ ಪ್ರೇಷ್ಯೇತಿ ಷಟ್ಕೃತ್ವ ಆಹ ಷಡ್ವಾ ಋತವ ಋತೂನೇವ ಪ್ರೀಣಾತಿ ಋತುಭಿರಿತಿ ಚತುಶ್ಚತುಷ್ಪದ ಏವ ಪಶೂನ್ಪ್ರೀಣಾತಿ ದ್ವಿಃ ಪುನರ್ಋತುನಾಹ ದ್ವಿಪದ ಏವ ಪ್ರೀಣಾತಿ ॥** ಎಂದು ತೈತ್ತಿರೀಯ ಸಂಹಿತೆಯ ವಾಕ್ಯವಿರುವುದು.

**ಸ ವಾ ಅಯಂ ಪ್ರಾಣಸ್ತ್ರೇಧಾ ವಿಹಿತಃ ಪ್ರಾಣೋಽಪಾನೋ ವ್ಯಾನ ಇತಿ ತದ್ಯದೃತುನ ಋತುಭಿ-ರ್ಋತುನೇತಿ ಯಜಂತಿ ಪ್ರಾಣಾನಾಂ ಸಂತತ್ಯೈ ಪ್ರಾಣಾನಾಮವ್ಯವಚ್ಛೇದಾಯ ।**

ಈ ಪ್ರಾಣವಾಯುವು ಮೂರುವಿಧವಾಗಿರುವುದು—ಪ್ರಾಣ, ಅಪಾನ, ವ್ಯಾನ ಎಂದು. ಪ್ರಾಣವೆಂದರೆ, ಹೊರಗಿನ ವಾಯುವನ್ನು ಶರೀರದೊಳಕ್ಕೆ ಎಳೆದುಕೊಳ್ಳುವುದು; ಅಪಾನವೆಂದರೆ ಶರೀರದೊಳಗಿರುವ ವಾಯುವನ್ನು ಹೊರಗೆ ಬಿಡುವುದು; ವ್ಯಾನವೆಂದರೆ ಶರೀರದ ಎಲ್ಲಾ ಭಾಗಗಳಲ್ಲಿಯೂ ವ್ಯಾಪಿಸಿ ಸಂಚಾರಮಾಡುತ್ತಿರುವ ವಾಯುವು. ಈ ಹನ್ನೆರಡು ಋತುಯಾಜಹೋಮಗಳನ್ನು ಮೂರು ಪಂಗಡಗಳನ್ನಾಗಿ ವಿಭಾಗಿಸಿರುವರು. ಒಂದನೆಯ ಪಂಗಡದಲ್ಲಿ ಒಂದರಿಂದ ಆರರವರೆಗಿನ (ಆರು) ಮಂತ್ರಗಳನ್ನು ಋತುನಾ ಎಂಬ ಋತುಶಬ್ದದ ಏಕವಚನಪ್ರಯೋಗದಿಂದ ಸಹಿತವಾಗಿ ಹೋಮ ಮಾಡುವರು. ಇದರಿಂದ ಪ್ರಾಣವಾಯುವು ಯಜಮಾನನ ಶರೀರದಲ್ಲಿ ಸ್ಥಿರವಾಗಿ ನೆಲೆಸುವುದು; ಎರಡನೆಯ ಪಂಗಡದಲ್ಲಿ ಏಳರಿಂದ ಹತ್ತರವರೆಗಿನ (ನಾಲ್ಕು) ಮಂತ್ರಗಳನ್ನು ಋತುಭಿಃ ಎಂಬ ಋತುಶಬ್ದದ ಬಹುವಚನಪ್ರಯೋಗದಿಂದ ಸಹಿತವಾಗಿ ಹೋಮಮಾಡುವರು. ಇದರಿಂದ ಅಪಾನವಾಯುವು ಸ್ಥಿರವಾಗಿ ನಿಲ್ಲುವುದು. ಮೂರನೆಯ ಪಂಗಡದಲ್ಲಿ ಹನ್ನೊಂದು ಮತ್ತು ಹನ್ನೆರಡನೆಯ ಮಂತ್ರಗಳಿರುವವು(ಎರಡು ಮಂತ್ರಗಳು) ಇವುಗಳನ್ನು ಮತ್ತೆ ಋತುನಾ ಎಂಬ ಋತುಶಬ್ದದ ಏಕವಚನಪ್ರಯೋಗದಿಂದ ಸಹಿತವಾಗಿ ಹೋಮ ಮಾಡುವರು. ಇದರಿಂದ ವ್ಯಾನವಾಯುವು ಶರೀರದಲ್ಲಿ ಸ್ಥಿರವಾಗಿ ನೆಲೆಸುವುದು. ಈ ರೀತಿ ಹನ್ನೆರಡು ಋತುಯಾಜಗಳನ್ನು ೬+೪+೨=೧೨ ಎಂದು ಮೂರು ಪಂಗಡಗಳಾಗಿ ವಿಭಾಗಿಸಿ ಹೋಮ ಮಾಡುವುದರಿಂದ ಮೂರುವಿಧವಾದ ಪ್ರಾಣ, ಅಪಾನ, ವ್ಯಾನ ಎಂಬ ಪ್ರಾಣವಾಯುಗಳು ಯಜಮಾನನ ಶರೀರದಲ್ಲಿ ಸ್ಥಿರವಾಗಿ ನೆಲೆಸುವುದಕ್ಕೂ ಅವುಗಳು ಹೊರಟುಹೋಗದಂತೆ ವಿಚ್ಛಿತ್ತಿಯುಂಟಾಗದಿರುವುದಕ್ಕೂ ಸಹಾಯಮಾಡಿದಂತಾಗುವುದು.

**ಪ್ರಾಣಾ ವಾ ಋತುಯಾಜಾ ನರ್ತುಯಾಜಾನಾಮನು ವಷಟ್ಕುರ್ಯಾದಸಂಸ್ಥಿತಾ ವಾ ಋತವ ಏಕೈಕ ಏವ । ಯದೃತುಯಾಜಾನಾಮನು ವಷಟ್ಕುರ್ಯಾದಸಂಸ್ಥಿತಾನೃತೂನ್ಸಂಸ್ಥಾಪಯೇ-ತ್ಸಂಸ್ಥಾ ವಾ ಏಷಾ ಯದನುವಷಟ್ಕಾರೋ ಯ ಏನಂ ತತ್ರ ಬ್ರೂಯಾದಸಂಸ್ಥಿತಾನೃತೂನ್ಸ-ಮತಿಷ್ಠಿಪದ್ದುಃಷಮಂ ಭವಿಷ್ಯತೀತಿ ಶಶ್ವತ್ತಥಾ ಸ್ಯಾತ್ತಸ್ಮಾನ್ನರ್ತುಯಾಜಾನಾಮನುವಷ-ಟ್ಕುರ್ಯಾತ್ ॥**

(ಐ. ಬ್ರಾ. ೯-೨೯)

ಋತುಯಾಜಹೋಮಗಳು ಪ್ರಾಣವಾಯುಸ್ವರೂಪವಾಗಿರುವವು. (ಈ ವಿಷಯವು ಕೌಷೀತಕೀಬ್ರಾಹ್ಮಣ ೧೩-೯; ಗೋಪಥಬ್ರಾಹ್ಮಣ ೮-೭ ರಲ್ಲಿಯೂ ಉಕ್ತವಾಗಿದೆ). ಲೋಕವ್ಯವಹಾರದಲ್ಲಿ ನಮಗೆ ಅನುಭವಗೋಚರವಾಗಿರುವಂತೆ ವಸಂತಾದಿ ಋತುಗಳಿಗೆ ಕೊನೆಯೆಂಬುದಿಲ್ಲ. ಒಂದಾಗುತ್ತಲೇ ಮತ್ತೊಂದು ಋತುವು ಒಂದರಹಿಂದೊಂದರಂತೆ ಪರಂಪರೆಯಾಗಿ ನಡೆಯುತ್ತಿರುವುದು. ವಸಂತ, ಗ್ರೀಷ್ಮ, ವರ್ಷಾ, ಶರತ್, ಹೇಮಂತ, ಶಿಶಿರ ಎಂಬ ಆರು ಋತುಗಳೂ ಮುಗಿದ ಮೇಲೆ ಮತ್ತೆ ವಸಂತಾದಿ ಋತುಗಳು ಪ್ರಾರಂಭವಾಗುವುವು. ಅವುಗಳಿಗೆ ವಿಚ್ಛಿತ್ತಿ ಇಲ್ಲ. ಆದುದರಿಂದ ಹೋತೃವು ಋತುಯಾಜಹೋಮಗಳಲ್ಲಿ ಯಾಜ್ಯಾಮಂತ್ರಗಳನ್ನು ಪಠಿಸುವಾಗ ಮಂತ್ರಾಂತ್ಯದಲ್ಲಿ ವಷಟ್ಕಾರವನ್ನು ಉಚ್ಚರಿಸಕೂಡದು. ಋತುಗಳು ಒಂದಾಗುತ್ತಲೊಂದು ಪರಿವರ್ತನ ಕ್ರಮದಿಂದ ಪ್ರಾಪ್ತವಾಗುವುದರಿಂದ ಈ ಋತುಗಳಿಗೆ ಅಂತ್ಯವೆಂಬುದೇ ಇಲ್ಲ. ಆದ್ದರಿಂದಲೇ ಹೋಮದಲ್ಲಿ ವಷಟ್ಕಾರವನ್ನು ಪಠಿಸಕೂಡದೆಂದು ಹೇಳಿರುವುದು. ಒಂದುವೇಳೆ ವಷಟ್ಕಾರವನ್ನು ಪಠಿಸಿದಲ್ಲಿ ಋತುಗಳ ಪರಿವರ್ತನ ಕ್ರಮಕ್ಕೆ ವಿಚ್ಛಿತ್ತಿಯುಂಟಾಗಿ, ಅದರಿಂದ ಯಜಮಾನನಿಗೆ ರೋಗ ದಾರಿದ್ರ್ಯಾದಿ ದುಃಖಗಳು ಪ್ರಾಪ್ತವಾಗುವುವು. ಆದುದರಿಂದ ಯಜಮಾನನಿಗೆ ದುಃಖ ದಾರಿದ್ರ್ಯಗಳು ಸಂಭವಿಸದಿರುವುದಕ್ಕಾಗಿ ಋತುಯಾಜಹೋಮಗಳಲ್ಲಿ ಯಾಜ್ಯಾಮಂತ್ರಗಳನ್ನು ವಷಟ್ಕಾರಪೂರ್ವಕವಾಗಿ ಹೋಮ ಮಾಡಕೂಡದು.



## ಸೂಕ್ತ—೩೭

ಮಂಡಲ—೨ ॥ ಅನುವಾಕ—೪ ॥ ಸೂಕ್ತ—೩೭ ॥
ಅಷ್ಟಕ—೨ ॥ ಅಧ್ಯಾಯ—೮ ॥ ವರ್ಗ—೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ— ಗೃತ್ಸಮದಃ ॥
॥ ದೇವತಾ—೧-೪. ದ್ರವಿಣೋದಾಃ । ೫. ಅಶ್ವಿನೌ । ೬. ಅಗ್ನಿಃ ॥
॥ ಛಂದಃ— ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಮಂದಸ್ವ ಹೋತ್ರಾದನು ಜೋಷಮಂಧಸೋಽಧ್ವರ್ಯವಃ ಸ ಪೂರ್ಣಾಂ
ವಷ್ಟ್ಯಾಸಿಚಂ ।
ತಸ್ಮಾ ಏತಂ ಭರತ ತದ್ವಶೋ ದದಿರ್ಹೋತ್ರಾತ್ಸೋಮಂ ದ್ರವಿಣೋದಃ ಪಿಬ
ಋತುಭಿಃ ॥ ೧ ॥

॥ ಪದಪಾಠಃ ॥

ಮಂದಸ್ವ । ಹೋತ್ರಾತ್ । ಅನು । ಜೋಷಂ । ಅಂಧಸಃ । ಅಧ್ವರ್ಯವಃ । ಸಃ । ಪೂರ್ಣಾಂ । ವಷ್ಟಿ । ಆऽಸಿಚಂ ।

ತಸ್ಮೈ । ಏತಂ । ಭರತ । ತತ್ऽವಶಃ । ದದಿಃ । ಹೋತ್ರಾತ್ । ಸೋಮಂ । ದ್ರವಿಣಃऽದಃ । ಪಿಬ । ಋತುऽಭಿಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ದ್ರವಿಣೋದೋ ದ್ರವಿಣಸೋಽಧನಸ್ಯ ದಾತರೇತನ್ನಾಮಕ ದೇವ ಅಂಧಸೋ ದೇವಾನಾಮನ್ನರೂಪಸ್ಯ ಸೋಮಸ್ಯ ಸೋಮೇನ ಹೋತ್ರಾತ್ ಹೋತೃಕರ್ತೃಕಾದ್ಯಾಗಾದನು ಜೋಷಂ ಪ್ರೀತಮನು ಮಂದಸ್ವ । ಹೇ ಅಧ್ವರ್ಯವಃ ಸ ದ್ರವಿಣೋದಾಃ ಪೂರ್ಣಾಂ ಸಂಪೂರ್ಣಾಮಾಸಿಚಂ ಸಿಚ್ಯಮಾನಾಮಾಹುತಿಂ ವಷ್ಟಿ । ಕಾಮಯತೇ । ಅತಸ್ತಸ್ಮೈ ದ್ರವಿಣೋದಸೇಽಗ್ನಯೆ ಏತಂ ಸೋಮಂ ಭರತ । ಪ್ರಾಪಯತ । ತದ್ವಶಸ್ತತ್ಕಾಮೋ ದ್ರವಿಣೋದಾ ದದಿರ್ದಾತಾ ಯುಷ್ಮಾಕಮಭೀಷ್ಟಫಲಸ್ಯ ದಾತಾ ಭವತೀತಿ ಶೇಷಃ। ಕಿಂಚ ಹೇ ದ್ರವಿಣೋದೋ ಹೋತ್ರಾತ್ ಹೋತುರ್ಯಾಗಾತ್ ಋತುಭಿರಿಷಮಾಸಾಭಿಮಾನಿಭಿರ್ಋತುದೇವೈಃ ಸಹ ಸೋಮಂ ಪಿಬ ॥

॥ ಪ್ರತಿಪದಾರ್ಥ ॥

(**ದ್ರವಿಣೋದಃ**—ಎಲೈ ದ್ರವಿಣೋದನೇ) । **ಹೋತ್ರಾತ್**—ಹೋತೃಕರ್ತೃಕವಾದ ಯಾಗದಿಂದ ಲಬ್ಧವಾದುದೂ । **ಅಂಧಸಃ**—ಸೋಮರೂಪವಾದುದೂ ಆದ ಅನ್ನದಿಂದ । **ಅನು ಜೋಷಂ**—ಪ್ರೀತನಾಗಿ । **ಮಂದಸ್ವ**—ತೃಪ್ತಿಯನ್ನು ಹೊಂದು । **ಅಧ್ವರ್ಯವಃ**—ಎಲೈ ಅಧ್ವರ್ಯುಗಳೇ । **ಸಃ**—ಅದೇ ದ್ರವಿಣೋದನು । **ಪೂರ್ಣಾಂ**—ಸಂಪೂರ್ಣವಾದ । **ಆಸಿಚಂ**—ಆಹುತಿಯನ್ನು । **ವಷ್ಟಿ**—ಇಚ್ಛಿಸುತ್ತಾನೆ । **ತಸ್ಮೈ**—ಆ ದ್ರವಿಣೋದನಿಗೆ । **ಏತಂ**—ಈ ಸೋಮವನ್ನು । **ಭರತ**—ಹೊಂದಿಸಿ (ತಂದರ್ಪಿಸಿ) । **ತದ್ವಶಃ**—ಅದನ್ನು ಅಪೇಕ್ಷಿಸಿದ ಆ ದೇವನು । **ದದಿಃ**—ಫಲದಾತನಾಗಿರುತ್ತಾನೆ । **ದ್ರವಿಣೋದಃ**—ಎಲೈ ದ್ರವಿಣೋದನೇ । **ಹೋತ್ರಾತ್**—ಹೋತೃಕರ್ತೃಕವಾದ ಯಾಗದಿಂದ ಲಬ್ಧವಾದ । **ಸೋಮಂ**—ಸೋಮವನ್ನು । **ಋತುಭಿಃ**—ಋತುದೇವತೆಗಳೊಡನೆ । **ಪಿಬ**—ಪಾನಮಾಡು.

॥ ಭಾವಾರ್ಥ ॥

ಎಲೈ ದ್ರವಿಣೋದನೇ, ಹೋತೃಕರ್ತೃಕವಾದ ಯಾಗದಿಂದ ಲಬ್ಧವಾದುದೂ ಸೋಮರೂಪವಾದುದೂ ಆದ ಅನ್ನದಿಂದ ಪ್ರೀತನಾಗಿ ತೃಪ್ತಿಯನ್ನು ಹೊಂದು. ಎಲೈ ಅಧ್ವರ್ಯುಗಳೇ, ಅದೇ ದ್ರವಿಣೋದನು, ಸಂಪೂರ್ಣವಾದ ಆಹುತಿಯನ್ನು ಇಚ್ಛಿಸುತ್ತಾನೆ. ಆ ದ್ರವಿಣೋದನಿಗೆ ಈ ಸೋಮವನ್ನು ಅರ್ಪಿಸಿ. ಅದನ್ನು ಇಚ್ಛಿಸಿದ ಆ ದೇವನು ಫಲದಾತನಾಗಿರುತ್ತಾನೆ. ಎಲೈ ದ್ರವಿಣೋದನೇ, ಹೋತೃಕರ್ತೃಕವಾದ ಯಾಗದಿಂದ ಲಬ್ಧವಾದ ಸೋಮವನ್ನು ಋತುದೇವತೆಗಳೊಡನೆ ಪಾನಮಾಡು.

## English Translation.

Be gratified, Dravinodas, by the sacrificial food presented as the offering of the Hotri; He desires, priests, a full libation: present it to him, and influenced (by it, he will be your) benefactor: drink, Dravinodas, along with the Ritus, the Soma, the offering of the Hatri.

॥ ವಿಶೇಷವಿಷಯಗಳು ॥

ದ್ರವಿಣೋದಾಃ—ಈ ಶಬ್ದಕ್ಕೆ ಯಾಸ್ಕರು ವಿಸ್ತಾರವಾದ ವಿವರಣೆಯನ್ನು ಬರೆದಿರುವವರು—

**ದ್ರವಿಣೋದಾಃ । ದ್ರವಿಣೋದಾಃ ಕಸ್ಮಾದ್ಧನಂ ದ್ರವಿಣಮುಚ್ಯತೇ । ಯದೇನದಭಿದ್ರವಂತಿ । ಬಲಂ ವಾ ದ್ರವಿಣಂ ಯದೇನೇನಾಭಿದ್ರವಂತಿ । ತಸ್ಯ ದಾತಾ ದ್ರವಿಣೋದಾಃ ॥** (ನಿ. ೮-೧)

ಇಲ್ಲಿ **ದ್ರವಿಣೋದಾಃ** ಎಂಬ ಶಬ್ದದ ನಿಷ್ಪತ್ತಿಯು, **ದ್ರವಿಣಂ ದದಾತೀತಿ ದ್ರವಿಣೋದಾಃ** ದ್ರವಿಣ ಶಬ್ದಕ್ಕೆ ಧನ, ಬಲ ಎಂದು ಎರಡು ಅರ್ಥಗಳಿರುವುವು. ಆದುದರಿಂದ ದ್ರವಿಣೋದಾಃ ಎಂದರೆ ಧನವನ್ನು ಅಥವಾ ಬಲವನ್ನು ಕೊಡುವವನು ಎಂದರ್ಥವು. ಇದು ಈ ಶಬ್ದದ ಅವಯವಾರ್ಥವು. ಇದಲ್ಲದೆ ಯಾಸ್ಕರು ದ್ರವಿಣೋದಾಃ ಎಂಬ ಋಕ್ಕಿಗೆ ನಿರ್ವಚನವನ್ನು ಹೀಗೆ ಹೇಳಿರುವರು—

**ದ್ರವಿಣೋದಾ ಯಸ್ತ್ವಂ । ದ್ರವಿಣಸ ಇತಿ ದ್ರವಿಣಸಾದಿನ ಇತಿ ವಾ ದ್ರವಿಣಸಾನಿನ ಇತಿ ವಾ ದ್ರವಿಣಸಸ್ತಸ್ಮಾತ್ ಪಿಬತ್ವಿತಿ ವಾ । ಯಜ್ಞೇಷು ದೇವಮೀಳತೇ । ಯಾಚಂತಿ ಸ್ತುವಂತಿ, ವರ್ಧಯಂತಿ ಪೂಜಯಂತೀತಿ ವಾ ॥**

ಎಂದರೆ ಧನ, ಹವಿಸ್ಸು ಮುಂತಾದುವುಗಳನ್ನು ಅಪೇಕ್ಷಿಸುವ ಋತ್ವಿಜರು ದ್ರವಿಣೋದಾ ಎಂಬ ನಿನ್ನನ್ನು ಯಜ್ಞಗಳಲ್ಲಿ ಸೋಮಪಾನ ಮಾಡುವಂತೆ, ಪ್ರಾರ್ಥಿಸುತ್ತಾರೆ ಎಂದು ಮುಖ್ಯಾರ್ಥವು ಇಲ್ಲಿ ದ್ರವಿಣೋದಾಃ ಎಂಬುದು ಪ್ರಥಮಾ ವಿಭಕ್ತಿಯ ಏಕವಚನವಾಗಿದ್ದರೂ ದೇವಂ ಎಂಬ ದ್ವಿತೀಯೈಕವಚನಕ್ಕೆ ಹೇಗೆ ವಿಶೇಷಣವಾಯಿತೆಂದರೆ—ದ್ರವಿಣೋದಾ ಯಃ ದೇವಃ ತಂ ದೇವಂ, ಯಾವ ದೇವನು ಧನದಾತನೋ ಆ ದೇವನನ್ನು ಎಂದು ಅರ್ಥವಾಗುವಂತೆ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. **ದ್ರವಿಣಸಃ** ಎಂದರೆ ಧನ ಅಥವಾ ಹವಿಸ್ಸನ್ನು ದೇವತಾಯಜನಾರ್ಥವಾಗಿ ಯಾಚಿಸುತ್ತಾರೆ, ಪ್ರಶಂಸೆಮಾಡುತ್ತಾರೆ, ಪೂಜಿಸುತ್ತಾರೆ ಎಂಬ ಅನೇಕ ಅರ್ಥಗಳನ್ನು ಹೇಳಬಹುದು.

**ತತ್ಕೋ ದ್ರವಿಣೋದಾ ಇಂದ್ರ ಇತಿ ಕ್ರೌಷ್ಟುಕಿಃ ।**
**ಸ ಬಲಧನಯೋರ್ದಾತೃತಮಸ್ತಸ್ಯ ಚ ಸರ್ವಾ ಬಲಕೃತಿಃ ॥**

ದ್ರವಿಣೋದಾಃ ಎಂಬ ಶಬ್ದದ ಅವಯವಾರ್ಥವನ್ನೇನೋ ಹೇಳಿದ್ದಾಯಿತು. ಆದರೆ ಈ ದ್ರವಿಣೋದಾಃ ಎಂಬ ದೇವತೆಯು ಯಾರು ? ಎಂದರೆ, ಇಂದ್ರನೇ ದ್ರವಿಣೋದಾಃ ಎಂಬುದಾಗಿ ಹೇಳಲ್ಪಡುವನು, ಏಕೆಂದರೆ ದ್ರವಿಣ ಶಬ್ದವು ಸೂಚಿಸುವ ಬಲ, ಧನ, ಇವುಗಳನ್ನು ಅತಿಶಯವಾಗಿ ಕೊಡುವವನು ಇಂದ್ರನೇ ಆದುದರಿಂದ ಇಂದ್ರನನ್ನೇ ದ್ರವಿಣೋದಾಃ ಎಂಬದಾಗಿ ಹೇಳಬೇಕೆಂದು ಕ್ರೌಷ್ಟುಕಿ ಎಂಬುವರ ಅಭಿಪ್ರಾಯವು.

**ಅಥಾಪ್ಯಗ್ನಿಂ ದ್ರವಿಣೋದಸಮಾಹೈಷ ಪುನರೇತಸ್ಮಾಜ್ಜಾಯತೇ ।**
**ಯೋ ಅಶ್ಮನೋರಂತರಗ್ನಿಂ ಜಜಾನ ಇತ್ಯಪಿ ನಿಗಮೋ ಭವತಿ ॥**

ಮತ್ತು ಇವರು ಈ ಶಬ್ದಕ್ಕೆ ಮತ್ತೊಂದು ಅರ್ಥವನ್ನು ಹೇಳುವರು. ಇಂದ್ರನು ದ್ಯಾವಾಪೃಥಿವಿಗಳನ್ನು ಸೃಷ್ಟಿಸಿದನು. ಅವುಗಳ ಮಧ್ಯದಲ್ಲಿ ಅಗ್ನಿಯನ್ನೂ ಸೃಷ್ಟಿಸಿದನು. ಆದುದರಿಂದ ದ್ರವಿಣೋದಾಃ ಶಬ್ದಕ್ಕೆ ಅಗ್ನಿಯೆಂದೂ ಹೇಳಬಹುದು ಎಂದು. ಈ ಅರ್ಥವನ್ನು ಸಮರ್ಥಿಸುವುದಕ್ಕಾಗಿ "ಅಶ್ಮನೋರಂತರಗ್ನಿಂ ಜಜಾನ" ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವನು

**ಅಥಾಪ್ಯೃತುಯಾಜೇಷು ದ್ರವಿಣೋದಸಾಃ ಪ್ರವಾದಾ ಭವಂತಿ । ತೇಷಾಂ ಪುನಃ ಪಾತ್ರಸ್ಯೇಂದ್ರಪಾನಮಿತಿ ಭವತಿ ॥ ಅಥಾಪ್ಯೇನಂ ಸೋಮಪಾನೇನ ಸ್ತೌತಿ । ಅಥಾಪ್ಯಾಹ ದ್ರವಿಣೋದಾಃ ಪಿಬತು ದ್ರವಿಣೋದಸ ಇತಿ ॥**

ಋತುಗಳನ್ನು ಉದ್ದೇಶಿಸಿ ಮಾಡುವ ಯಜ್ಞಗಳಲ್ಲಿ ಋತ್ವಿಜರ ಹಸ್ತದಲ್ಲಿರುವ ಪಾತ್ರೆಯಿಂದ ಇಂದ್ರನು ಸೋಮಪಾನ ಮಾಡುವನೆಂದು ಹೇಳಿರುವುದರಿಂದಲೂ ಇಂದ್ರನನ್ನು ಸೋಮಪಾನ ಸಂಬಂಧವಾದ ಮಂತ್ರಗಳಿಂದ ಸ್ತೋತ್ರಮಾಡುವುದರಿಂದಲೂ, ಋತ್ವಿಜರನ್ನು ದ್ರವಿಣೋದಸರೆಂದು ಕರೆಯುವ ರೂಢಿ ಇದೆ. ಇದೆಲ್ಲವೂ ಕ್ರೌಷ್ಟುಕಿ ಎಂಬುವರ ಮತವು.

**ಅಯಮೇವಾಗ್ನಿರ್ದ್ರವಿಣೋದಾ ಇತಿ ಶಾಕಪೂಣಿಃ ಆಗ್ನೇಯೇಷ್ವೇವ ಹಿ ಸೂಕ್ತೇಷು ದ್ರವಿಣೋದಸಾಃ ಪ್ರವಾದಾ ಭವಂತಿ ॥**

ಅಗ್ನಿಯೇ ದ್ರವಿಣೋದಾಃ ಎಂದು ಶಾಕಪೂರ್ಣಿಯವರ ಮತವು; ಏಕಂದರೆ ಅಗ್ನಿಸಂಬಧವಾದ ಸೂಕ್ತಗಳಲ್ಲಿ ಋತ್ವಿಜರು ಅಗ್ನಿಯನ್ನು ಸ್ತುತಿಸುವಾಗ ದ್ರವಿಣೋದಾಃ ಎಂಬ ಶಬ್ದವನ್ನು ಅಗ್ನಿಗೆ ವಿಶೇಷಣಪದವನ್ನಾಗಿ ಉಪಯೋಗಿಸುವರು.

**ಯಥೋ ಏತತ್ಸ ಬಲಧನಯೋರ್ದಾತೃತಮ ಇತಿ ಸರ್ವಾಸು ದೇವತಾಸ್ವೈಶ್ವರ್ಯಂ ವಿದ್ಯತೇ ಯಥೋ "ಏತದೋಜಸೋಜಾತಮುತಮನ್ಯ ಏನಂ" ಇತಿ ಚಾಹೇತ್ಯಯಮಪ್ಯಗ್ನಿರೋಜಸಾ ಬಲೇನ ಮಥ್ಯಮಾನೋ ಜಾಯತೇ ತಸ್ಮಾದೇನಮಾಹ ಸಹಸಸ್ಪುತ್ರಂ ಸಹಸಃ ಸೂನುಂ ಸಹಸೋ ಯಹುಂ ॥**

ಸಮಸ್ತ ದೇವತೆಗಳಲ್ಲಿಯೂ ಐಶ್ವರ್ಯವಿರುವುದು. ಆದುದರಿಂದ ಅಗ್ನಿಯೂ ಬಲ, ಧನ ಇವುಗಳನ್ನು ಕೊಡುವನು. ಬಲಧನವನ್ನು ಕೊಡುವುದರಿಂದ ಅಗ್ನಿಯನ್ನೂ ದ್ರವಿಣೋದಾಃ ಎಂದು ಹೇಳಬಹುದು. ಇದಲ್ಲದೆ ದ್ರವಿಣ ಶಬ್ದಕ್ಕೆ ಬಲವೆಂದು ಅರ್ಥವಿರುವುದಷ್ಟೆ. ಅಗ್ನಿಯನ್ನು ಉತ್ಪತ್ತಿಮಾಡುವಾಗ ಬಲವನ್ನು ಉಪಯೋಗಿಸಿ (ಬಲವಾಗಿ) ಮಥನ ಮಾಡುವುದರಿಂದ ಅಗ್ನಿಯು ಬಲದಿಂದ ಹುಟ್ಟಿದನೆಂದು ಹೇಳುವ ಪ್ರತೀತಿ ಇದೆ. ಆದುದರಿಂದಲೇ ಅಗ್ನಿಯನ್ನು ಸಹಸಸ್ಪುತ್ರಂ, (ಸಹಸಃ–ಬಲದ, ಪುತ್ರಂ–ಪುತ್ರನಾದ ಅಗ್ನಿಯನ್ನು) ಸಹಸಃ ಸೂನುಂ, ಸಹಸೋ ಯಹುಂ ಎಂಬ ಶಬ್ದಗಳಿಂದ ಸ್ತುತಿಸುವರು—

**ದ್ರ್ವನ್ನಃ ಸರ್ಪಿರಾಸುತಿಃ ಪ್ರತ್ನೋ ಹೋತಾ ವರೇಣ್ಯಃ ।**
**ಸಹಸಸ್ಪುತ್ರೋ ಅದ್ಭುತಃ ॥** (ಋ. ಸಂ. ೨-೭-೬)

ತ್ವಂ ಹ ಯದ್ಯವಿಷ್ಠ್ಯ ಸಹಸಃಸೂನವಾಹುತ ।
ಋತಾ ವಾ ಯಜ್ಞಿಯೋ ಭುವಃ ॥ (ಋ. ಸಂ. ೮-೭೫-೩)

ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।
ಅಸ್ಮೇ ಧೇಹಿ ಜಾತವೇದೋ ಮಹಿ ಶ್ರವಃ ॥ (ಋ. ಸಂ. ೧-೭೯-೪)

ಎಂಬ ಋಕ್ಕುಗಳಲ್ಲಿ ಕ್ರಮವಾಗಿ ಸಹಸಸ್ಪುತ್ರ- ಸಹಸಃ ಸೂನು, ಸಹಸೋ ಯಹು ಎಂಬ ಶಬ್ದಗಳು ಅಗ್ನಿಯನ್ನು ಸ್ತುತಿಸುವಾಗ ಉಪಯೋಗಿಸಲ್ಪಟ್ಟಿರುವುವು. ಆದುದರಿಂದ ಬಲಗಳನ್ನು ಇತರ ದೇವತೆಗಳು ಕೊಡುವವರಾದರೂ ಅಗ್ನಿಯೇ ವಿಶೇಷವಾಗಿ ದ್ರವಿಣೋದಾಃ ಎಂಬ ಶಬ್ದದಿಂದ ಪ್ರತಿಪಾದಿತನಾಗಿರುವನು.

ಇಲ್ಲಿ **ಬೃಹದ್ದೇವತಾ** ವಾಕ್ಯಗಳನ್ನುದಹರಿಸಿ ಈ ವಿಶೇಷಣವು ಮುಖ್ಯವಾಗಿ ಯಾವ ದೇವತೆಗೆ ಸಂಬಂಧಿಸಿದುದು, ಇದರಿಂದ ಆ ದೇವತೆಯ ಯಾವ ಯಾವ ಗುಣಗಳು ತಿಳಿಯುವುವು ಎಂದು ನೋಡೋಣ.

ಬೃಹದ್ದೇವತೆಯಲ್ಲಿ ಮೊದಲು **ಅಗ್ನಿ**ಯೆಂಬ ಶಬ್ದದ ನಿರ್ವಚನವನ್ನು ತಿಳಿಸಿ ಅನಂತರ **ದ್ರವಿಣೋದಾಃ** ಎಂಬ ವಿಶೇಷಣವು ಅಗ್ನಿಗೆ ಏತಕ್ಕೆ ಉಪಯೋಗಿಸಲ್ಪಟ್ಟಿದೆ ಎಂಬುದನ್ನು ವಿಮರ್ಶಿಸಿದೆ.

**ಜಾತೋ ಯದಗ್ರೇ ಭೂತಾನಾಂ ಅಗ್ರಣೀರಧ್ವರೇ ಚ ಯತ್ ।**
**ನಾಮ್ನಾ ಸಂನಯತೇ ವಾಂಗಂ ಸ್ತುತೋಽಗ್ನಿರಿತಿ ಸೂರಿಭಿಃ ॥**
(ಬೃ. ದೇ. ೨-೨೪)

ಸಕಲ ಭೂತಗಳಿಗೂ ಪ್ರಥಮದಲ್ಲಿ ಉತ್ಪನ್ನನಾಗಿರುವುದರಿಂದಲೂ, ಯಜ್ಞಯಾಗಾದಿಗಳಲ್ಲಿ ನೇತೃವಾಗಿರುವುದರಿಂದಲೂ, ತಾನು ಯಾವ ವಸ್ತುಗಳಲ್ಲಿ ಪ್ರವೇಶಿಸಿದರೂ ಅದನ್ನು ತನ್ನಲ್ಲಿಯೇ ಲೀನವಾಗಿ ಮಾಡಿಕೊಳ್ಳುವುದರಿಂದಲೂ ಸಹ **ಅಗ್ನಿ**ಯೆಂದು ಋಷಿಗಳಿಂದ ಸ್ತುತನಾಗಿದ್ದಾನೆ. ಈ ನಿರ್ವಚನವು ನಿರುಕ್ತದಲ್ಲಿ ಹೇಳಿರುವ **ಅಗ್ರಣೀರ್ಭವತಿ ಅಗ್ರಂ ಯಜ್ಞೇಷು ಪ್ರಣೀಯತೇ, ಅಂಗಂ ನಯತಿ ಸನ್ನಮಮಾನಃ** । (ನಿ. ೭-೧೪) ಎಂಬ ನಿರ್ವಚನಗಳಿಗೆ ಅನುರೂಪವಾಗಿದೆ. ಅಗ್ನಿಶಬ್ದವನ್ನು ವಿವರಿಸಿದನಂತರ, **ದ್ರವಿಣೋದಾಃ** ಎಂಬ ಶಬ್ದದ ನಿರ್ವಚನವನ್ನು ತಿಳಿಸುತ್ತಾ—

ದ್ರವಿಣಂ ಧನಂ ಬಲಂ ವಾಪಿ ಪ್ರಾಯಚ್ಛದ್ಯೇನ ಕರ್ಮಣಾ ।
ತತ್ಕರ್ಮ ದೃಷ್ಟ್ವಾ ಕುತ್ಸಸ್ತು ಪ್ರಾಹೈನಂ ದ್ರವಿಣೋದಸಂ ॥
(ಬೃ. ದೇ. ೨-೨೫)

ಉದಾರವಾಗಿ ಧನವನ್ನೂ ಬಲವನ್ನೂ ಕೊಡತಕ್ಕ ಅಗ್ನಿಯ ಕರ್ಮಗಳನ್ನು ಕುತ್ಸಋಷಿಯು ಗ್ರಹಿಸಿ ಅಗ್ನಿಯನ್ನು ಧನದ ಅಥವಾ ಬಲದ ದಾತನಾದ **ದ್ರವಿಣೋದಾಃ** ಎಂದು ಸ್ತುತಿಸಿರುವನು.

**ದ್ರವಿಣೋದಾ ದ್ರವಿಣಸಸ್ತುರಸ್ಯ ದ್ರವಿಣೋದಾಃ ಸನರಸ್ಯ ಪ್ರ ಯಂಸತ್ ।**
**ದ್ರವಿಣೋದಾ ವೀರವತೀಮಿಷಂ ನೋ ದ್ರವಿಣೋದಾ ರಾಸತೇ ದೀರ್ಘಮಾಯುಃ ॥**
(ಋ. ಸಂ. ೧-೯೬-೮)

ಎಂಬ ಋಕ್ಕಿನಲ್ಲಿರುವ ಕುತ್ಸಕೃತವಾದ ಅಗ್ನಿಪ್ರಶಂಸೆಯನ್ನು ಸೂಚಿಸಿ, ಪುನಃ ಈ ಸೂಚನೆಯು ಅಗ್ನಿದೇವತಾಕವಾದದ್ದೇ ಹೊರತು ಇತರ ದೇವತೆಗಳನ್ನು ಉದ್ದೇಶಿಸಿದುದಲ್ಲ ಎಂದು ಸಮರ್ಥಿಸಿದೆ.

**ಅಯಂ ಹಿ ದ್ರವಿಣೋದೋಽಗ್ನಿರಯಂ ದಾತಾ ಬಲಸ್ಯ ಹಿ ।**
**ಜಾಯತೇ ಚ ಬಲೇನಾಯಂ ಮಥ್ಯಮಾನೋ ಮಹರ್ಷಿಭಿರಧ್ವರೇ ॥**
**ದ್ರವಿಣೋದೋಽಗ್ನಿರೇವಾಯಂ ದ್ರವಿಣೋದಾಸ್ತದೋಚ್ಯತೇ ।**
**ಅಗ್ನೇಯೇಷ್ವೇವ ದೃಶ್ಯಂತೇ ಪ್ರವಾದಾ ದ್ರವಿಣೋದಸಃ ॥**

(ಬೃ. ದೇ. ೩-೬೧; ೩-೬೫)

ಧನದಾತನೂ, ಬಲದಾತನೂ, ಬಲದಿಂದ ಉತ್ಪನ್ನನೂ ಆದುದರಿಂದಲೇ ಅಗ್ನಿಗೆ ದ್ರವಿಣೋದಾಃ ಎಂಬ ಪ್ರಶಂಸೆಯು ಸಲ್ಲುವುದು. ಆದುದರಿಂದ ಈ ವಿಶೇಷಣವು ಅಗ್ನಿದೇವತಾಕವೇ ಆಗಿರುವುದು ಎಂದು ಬೃಹದ್ದೇವತಾಕಾರರು ಸಮರ್ಥಿಸಿರುವರು

**ಅಂಧಸಃ—ದೇವಾನಾಮನ್ನರೂಪಸ್ಯ ಸೋಮಸ್ಯ ।** ಅಂಧಃ ಎಂಬ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ (ನಿ. ೩-೯). ದೇವತೆಗಳಿಗೆ ಸೋಮವೇ ಅನ್ನವೆಂದು ಹೇಳಲ್ಪಡುವುದು. ಆದುದರಿಂದ ಅನ್ನರೂಪದಿಂದಿರುವ ಸೋಮರಸವೆಂದು ಅಂಧಸಃ ಎಂಬ ಶಬ್ದಕ್ಕೆ ಅರ್ಥವು. ಇದಲ್ಲದೆ ಅಂಧಶ್ಶಬ್ದವು ಸಾಧಾರಣವಾಗಿ ಋಗ್ವೇದದಲ್ಲಿ ಸೋಮರಸವೆಂಬ ಅರ್ಥವನ್ನೇ ಸೂಚಿಸುವುದಾಗಿರುವುದು.

**ಹೋತ್ರಾತ್ ಅನು ಜೋಷಂ ಮಂದಸ್ವ**—ಇಲ್ಲಿ ಹೋತ್ರಾತ್ ಎಂಬ ಶಬ್ದಕ್ಕೆ **ಹೋತೃಕರ್ತೃಕಾದ್ಯಾಗಾತ್**—ಹೋತೃವೆಂಬ ಋತ್ವಿಜನು ನೆರವೇರಿಸುವ ಯಾಗದಲ್ಲಿ ಅರ್ಪಿಸಲ್ಪಡುವ ಎಂದರ್ಥವು. ಎಂದರೆ ಹೋತೃವು ದ್ರವಿಣೋದ ಎಂಬ ದೇವತೆಯನ್ನುದ್ದೇಶಿಸಿ ಅಗ್ನಿಯಲ್ಲಿ ಹೋಮಮಾಡಿ ಅರ್ಪಿಸುವ ಸೋಮರಸವನ್ನು ಪಾನಮಾಡಿ ಸಂತೃಪ್ತಿಯನ್ನು ಹೊಂದುವನು ಎಂದಭಿಪ್ರಾಯವು.

**ಅಧ್ವರ್ಯವಃ**—ಅಧ್ವರ್ಯು ಎಂಬ ಋತ್ವಿಜನು. ಯಜ್ಞದಲ್ಲಿ ಹೋತೃ ಮತ್ತು ಅಧ್ವರ್ಯು ಎಂಬ ಋತ್ವಿಜರ ಪಾತ್ರವೇ ವಿಶೇಷವಾಗಿರುವುದು. ಹೋತೃವು ದೇವತೆಗಳನ್ನು ಆಹ್ವಾನಮಾಡುವುದಕ್ಕಾಗಿ ಆಯಾ ಕಾಲಕ್ಕೆ ಅನುರೂಪವಾದ ಮಂತ್ರಗಳನ್ನು ಪಠಿಸುವನು. ಅಧ್ವರ್ಯುವು ಆ ಮಂತ್ರಗಳಿಗನುಸಾರವಾಗಿ ಹೋಮಾದಿ ಕರ್ಮಗಳನ್ನು ನೆರವೇರಿಸುವನು. ಆದುದರಿಂದಲೇ **ಅಧ್ವರ್ಯುರ್ವಾ ಋತ್ವಿಜಾಂ ಪ್ರಥಮೋ ಯುಜ್ಯತೇ**—ಋತ್ವಿಕ್ಕುಗಳಲ್ಲೆಲ್ಲಾ ಅಧ್ವರ್ಯುವೇ ಮುಖ್ಯನಾದವನು ಎಂದು ಶ್ರುತಿವಾಕ್ಯವಿರುವುದು.

ಅಧ್ವರ ಶಬ್ದಕ್ಕೆ ನಾಶವಾಗದಿರುವ ಫಲವನ್ನುಂಟುಮಾಡುವ ಯಜ್ಞವೆಂದರ್ಥವು. ನಿರುಕ್ತದಲ್ಲಿ—**ಅಧ್ವರ ಇತಿ ಯಜ್ಞನಾಮ ಧ್ವರತಿರ್ಹಿಂಸಾ ಕರ್ಮ ತತ್ಪ್ರತಿಷೇಧಃ ।** (ನಿ. ೧-೮) ಅಧ್ವರ ಎಂಬ ಶಬ್ದವು ಯಜ್ಞ ಎಂಬರ್ಥವನ್ನು ಬೋಧಿಸುವುದು. **ಧ್ವರತಿ ಧೂರ್ವತಿ** ಎಂಬ ಧಾತುಗಳು ಹಿಂಸೆಮಾಡುವುದು ಎಂಬ ಅರ್ಥವನ್ನು ಬೋಧಿಸುವವು. ಆದುದರಿಂದ ಆ ಧಾತುಗಳಿಂದ ನಿಷ್ಪನ್ನವಾದ ಅಧ್ವರ ಶಬ್ದಕ್ಕೆ ಹಿಂಸೆ ಇಲ್ಲದಿರುವ ಕರ್ಮವೆಂಬ ಅರ್ಥವನ್ನು ಯಾಸ್ಕರು ಹೇಳಿದ್ದಾರೆ. ಮತ್ತು ಅಧ್ವರ ಶಬ್ದವು ಹದಿನಾರು ಅಂತರಿಕ್ಷನಾಮಗಳಲ್ಲಿಯೂ (ನಿ. ೨-೧೦) ಹದಿನೈದು ಯಜ್ಞನಾಮಗಳಲ್ಲಿಯೂ (ನಿ. ೩-೧೯) ಉಕ್ತವಾಗಿದೆ. ಆದುದರಿಂದ ಅಧ್ವರ್ಯು ಶಬ್ದಕ್ಕೆ—

**ಅಧ್ವರ್ಯುರಧ್ವರಯುರಧ್ವರಂ ಯುನಕ್ತ್ಯಧ್ವರಸ್ಯ ನೇತಾಧ್ವರಂ ಕಾಮಯತ ಇತಿ ವಾ । ಅಪಿ ವಾಧೀಯಾನೇ ಯುರುಪಬಂಧಃ ಅಧ್ವರ ಇತಿ ಯಜ್ಞನಾಮ । ಧ್ವರತಿರ್ಹಿಂಸಾಕರ್ಮ ತತ್ಪ್ರತಿಷೇಧಃ ॥** (ನಿ. ೧-೮)

ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ **ಅಧ್ವರಯು** ಎಂಬ ಶಬ್ದದಲ್ಲಿ ರಕಾರದಲ್ಲಿರುವ ಅಕಾರವು ಲೋಪವಾಗಿ ಅಧ್ವರ್ಯು ಎಂದಾಗಿರುವುದು. ಯಜ್ಞಕರ್ಮವನ್ನು ಸೇರಿಸುವವನು ಎಂದರೆ ಯಾವ ಯಾವ ಕಾಲದಲ್ಲಿ ಯಾವ ಯಾವ ಕರ್ಮಗಳು ನಡೆಯಬೇಕೋ ಅವುಗಳನ್ನು ಆಯಾ ಋತ್ವಿಕ್ಕುಗಳಿಂದ ಮಾಡಿಸಿ ಯಜ್ಞವನ್ನು ನೆರವೇರಿಸುವವನು ಎಂದರ್ಥವು. ಅಥವಾ ಯಜ್ಞವು ಸಾಂಗವಾಗಿ ನೆರವೇರುವಂತೆ ಅದನ್ನು ನೋಡಿಕೊಳ್ಳುವನು. ಅಥವಾ ಯಜ್ಞವನ್ನು ಇಚ್ಛಿಸುವವನು ಎಂದು ಅರ್ಥ ವಿವರಣೆ ಮಾಡಿರುವರು.

**ಅಧ್ವರ್ಯವಃ ಸಃ ಪೂರ್ಣಾಂ ಆಸಿಚಂ ವಷ್ಟಿ**—ಎಲೈ ಅಧ್ವರ್ಯುಗಳೇ, ಆ ದ್ರವಿಣೋದನೆಂಬ ದೇವನು ಪೂರ್ಣವಾದ ಸೋಮರಸದ ಆಹುತಿಯನ್ನು ಇಚ್ಛಿಸುತ್ತಾನೆ. ಆದುದರಿಂದ ಸೋಮಾಹುತಿಯನ್ನು ದ್ರವಿಣೋದನಿಗಾಗಿ ಅಗ್ನಿಯಲ್ಲಿ ಅರ್ಪಿಸಿರಿ ಎಂದು ಯಜಮಾನನು ಅಧ್ವರ್ಯುಗಳೆಂಬ ಋತ್ವಿಜರನ್ನು ಸಂಬೋಧಿಸಿ ಹೇಳುವನು.

**ತಸ್ಮೈ ಏತಂ ಭರತ ತದ್ವಶಃ ದದಿಃ**—ಎಲೈ ಅಧ್ವರ್ಯುಗಳೇ, ಆ ದ್ರವಿಣೋದನಿಗೆ ಈ ಸೋಮರಸದ ಆಹುತಿಯನ್ನು ಧರಿಸಿರಿ ಎಂದರೆ ಅರ್ಪಿಸಿರಿ. ಆ ಸೋಮರಿಂದ ಸಂತುಷ್ಟನಾದ ದ್ರವಿಣೋದನು ನಿಮ್ಮ ಇಷ್ಟಾರ್ಥಗಳನ್ನು ಕೊಡುವನು.

**ದ್ರವಿಣೋದಃ ಹೋತ್ರಾತ್ ಋತುಭಿಃ ಸೋಮಂ ಪಿಬ**—ಈ ವಾಕ್ಯದಲ್ಲಿ ಯಜಮಾನನು ದ್ರವಿಣೋದನನ್ನೇ ಸಂಬೋಧಿಸಿ, ಎಲೈ ದ್ರವಿಣೋದನೇ, ಹೋತೃವೆಂಬ ಋತ್ವಿಜನು ನೆರವೇರಿಸುವ ಈ ಯಾಗದಲ್ಲಿ (ಅಥವಾ ಹೋಮದಲ್ಲಿ) ಇಷ (ಆಶ್ವಯುಜ) ಮಾಸಾಭಿಮಾನಿಗಳಾದ ಋತುದೇವತೆಗಳೊಡನೆ ಕೂಡಿ ಸೋಮರಸವನ್ನು ಪಾನಮಾಡು ಎಂದು ಪ್ರಾರ್ಥಿಸಿರುವನು. ಇದರಂತೆಯೇ ಮುಂದಿನ ಋಕ್ಕನ್ನು ಪೋತೃವೆಂಬ ಋತ್ವಿಜನ ಯಾಗದಲ್ಲಿಯೂ, ಅದರ ಮುಂದಿನ ಋಕ್ಕಿನಲ್ಲಿ ನೇಷ್ಟೃವೆಂಬ ಋತ್ವಿಜನ ಯಾಗದಲ್ಲಿಯೂ, ಅದರ ಮುಂದಿನ ಋಕ್ಕಿನಲ್ಲಿ ಚತುರ್ಥಪಾತ್ರೆಯಲ್ಲಿರುವ ಸೋಮವನ್ನು ಋತುದೇವತೆಗಳೊಡನೆ ಪಾನಮಾಡಬೇಕೆಂದೂ ಪ್ರಾರ್ಥಿಸಲಾಗಿದೆ.



ಸಂಹಿತಾಪಾಠಃ

ಯಮು ಪೂರ್ವಮಹುವೇ ತಮಿದಂ ಹುವೇ ಸೇದು ಹವ್ಯೋ ದದಿರ್ಯೋ ನಾಮ
ಪತ್ಯತೇ ।
ಅಧ್ವರ್ಯುಭಿಃ ಪ್ರಸ್ಥಿತಂ ಸೋಮ್ಯಂ ಮಧು ಪೋತ್ರಾತ್ಸೋಮಂ ದ್ರವಿಣೋದಃ
ಪಿಬ ಋತುಭಿಃ ॥ ೨ ॥

॥ ಪದಪಾಠಃ ॥

ಯಂ । ಊಂ ಇತಿ । ಪೂರ್ವಂ । ಅಹುವೇ । ತಂ । ಇದಂ । ಹುವೇ । ಸಃ । ಇತ್ । ಊಂ ಇತಿ । ಹವ್ಯಃ

ದದಿಃ । ಯಃ । ನಾಮ । ಪತ್ಯತೇ ।

ಅಧ್ವರ್ಯುಽಭಿಃ । ಪ್ರಽಸ್ಥಿತಂ । ಸೋಮ್ಯಂ । ಮಧು । ಪೋತ್ರಾತ್ । ಸೋಮಂ । ದ್ರವಿಣಃಽದಃ

ಪಿಬ । ಋತುಽಭಿಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ದ್ರವಿಣೋದೋ ಯಮು ಯಂ ತ್ವಾಮೇವ ಪೂರ್ವಂ ಹೋತೃಕರ್ತೃಕೇ ಸೋಮಯಾಗೇಽಹುವೇ । ಆಹೂತವಾನಸ್ಮಿ ಇದಂ ಸಂಪ್ರತಿ ತಂ ತಮೇವ ಪೋತೃಕರ್ತೃಕೇ ಸೋಮಯಾಗೇ ಹುವೇ । ಆಹ್ವಯಾಮಿ । ಸೇತ್ ಸ ಏವ ದ್ರವಿಣೋದಾ ಹವ್ಯೋ ಹ್ವಾತವ್ಯಃ ॥ ಉ ಇತಿ ಪೂರಣೇ ॥ ದದಿರಭೀಷ್ಟ-ಫಲಸ್ಯ ದಾತಾ ಯೋ ನಾಮ ಯಃ ಖಲು ಪತ್ಯತೇ ದೇವತಾತ್ವೇನೇಷ್ಟೇ ತಸ್ಮೈ ದ್ರವಿಣೋದಸೇ ಸೋಮ್ಯಂ ಸೋಮಾತ್ಮಕಂ ಮಧ್ವಧ್ವರ್ಯುಭಿಃ ಪ್ರಸ್ಥಿತಂ ಪ್ರಣೀತಮಾಸೀತ್ । ಹೇ ದ್ರವಿಣೋದಃ ಪೋತ್ರಾತ್ ಪೋತುರ್ಯಾಗಾದೃತುಭಿರೂರ್ಜಸಂಜ್ಞಕೈಃ ಸಹ ಸೋಮಂ ಪಿಬ ॥

॥ ಪ್ರತಿಪದಾರ್ಥ ॥

(**ದ್ರವಿಣೋದಃ**—ಎಲೈ ದ್ರವಿಣೋದನೇ) । **ಯಮು**—ಯಾವ ನಿನ್ನನ್ನೇ । **ಪೂರ್ವಂ**—ಹಿಂದೆ (ಹೋತೃಕರ್ತೃಕವಾದ ಸೋಮಯಾಗದಲ್ಲಿ) । **ಅಹುವೇ**—ಪ್ರಾರ್ಥಿಸಿ ಕರೆದಿದ್ದೆನೋ । **ಇದಂ**—ಈಗ (ಪೋತೃಕರ್ತೃಕವಾದ ಯಾಗದಲ್ಲೂ ಸಹ) । **ತಂ**—ಅದೇ ನಿನ್ನನ್ನು । **ಹುವೇ**—ಕರೆಯುತ್ತೇನೆ । **ಸೇತ್**—ದ್ರವಿಣೋದನೆಂದು ಪ್ರಸಿದ್ಧನಾದ ಅದೇ ನೀನು । **ಹವ್ಯಃ**—ಆಹ್ವಾನಕ್ಕೆ ಯೋಗ್ಯನಾಗಿದ್ದೀಯೆ । **ಯೋ ನಾಮ**—ಯಾವ ಅದೇ ದೇವತೆಯು । **ದದಿಃ**—ಇಷ್ಟಾರ್ಥಪ್ರದನೆಂದು । **ಪತ್ಯತೇ**—ಪ್ರಸಿದ್ಧನಾಗಿದ್ದಾನೆಯೋ । (ಆ ದ್ರವಿಣೋದನಿಗಾಗಿ) **ಸೋಮ್ಯಂ**—ಸೋಮಮಯವಾದುದೂ । **ಮಧು**—ಮಾದಕವಾದುದೂ ಆದ ಹವಿಸ್ಸು । **ಅಧ್ವರ್ಯುಭಿಃ**—ಅಧ್ವರ್ಯುಗಳಿಂದ । **ಪ್ರಸ್ಥಿತಂ**—ತರಲ್ಪಟ್ಟಿದೆ । **ದ್ರವಿಣೋದಃ**—ಎಲೈ ದ್ರವಿಣೋದನೇ । **ಪೋತ್ರಾತ್**—ಪೋತೃಕರ್ತೃಕವಾದ ಯಾಗದಲ್ಲಿ । **ಋತುಭಿಃ**—ಊರ್ಜಸಂಜ್ಞಕವಾದ ದೇವತೆಗಳೊಡನೆ । **ಸೋಮಂ**—ಸೋಮವನ್ನು । **ಪಿಬ**—ಕುಡಿ.

॥ ಭಾವಾರ್ಥ ॥

ಎಲೈ ದ್ರವಿಣೋದನೇ, ಯಾವ ನಿನ್ನನ್ನು ಹಿಂದೆ ಹೋತೃಕರ್ತೃಕವಾದ ಸೋಮಯಾಗದಲ್ಲಿ ಪ್ರಾರ್ಥಿಸಿ ಕರೆದಿದ್ದೆನೋ, ಈಗ ಪೋತೃಕರ್ತೃಕವಾದ ಯಾಗದಲ್ಲೂ ಸಹ ಅದೇ ನಿನ್ನನ್ನು ಕರೆಯುತ್ತೇನೆ. ದ್ರವಿಣೋದನೆಂದು ಪ್ರಸಿದ್ಧನಾದ ಅದೇ ನೀನು, ಆಹ್ವಾನಕ್ಕೆ ಯೋಗ್ಯನಾಗಿದ್ದೀಯೆ. ಯಾವ ದೇವತೆಯು ಇಷ್ಟಾರ್ಥಪ್ರದನೆಂದು ಪ್ರಸಿದ್ಧ

ನಾಗಿದ್ದಾನೆಯೋ ಆ ದ್ರವಿಣೋದನಿಗಾಗಿ ಸೋಮಮಯವಾದುದೂ, ಮಾದಕವಾದುದೂ ಆದ ಹವಿಸ್ಸು ಅಧ್ವರ್ಯುಗಳಿಂದ ತರಲ್ಪಟ್ಟಿದೆ. ಎಲೈ ದ್ರವಿಣೋದನೇ, ಪೋತೃಕರ್ತೃಕವಾದ ಯಾಗದಲ್ಲಿ ಊರ್ಜಸಂಜ್ಞಕವಾದ ದೇವತೆಗಳೊಡನೆ ಸೋಮವನ್ನು ಪಾನಮಾಡು.

## English Translation.

He, whom I formerly invoked, and whom I now invoke, is verily worthy of invocation, for he is renowned as a benefactor: the Soma libation has been brought by thc priests: drink, Dravinodas, along with the Ritus, the Soma, the offering of the Potri.

॥ ವಿಶೇಷವಿಷಯಗಳು ॥

**ಯಂ ಉ ಪೂರ್ವಂ ಅಹುವೇ ಇದಂ ತಂ ಹುವೇ—ಹೇ ದ್ರವಿಣೋದಃ ಯಂ ತ್ವಾಂ ಹೋತೃಕರ್ತೃಕೇ ಸೋಮಯಾಗೇ ಆಹೂತವಾನಸ್ಮಿ ಸಂಪ್ರತಿ ತಮೇವ ಪೋತೃಕರ್ತೃಕೇ ಸೋಮಯಾಗೇ ಆಹ್ವಯಾಮಿ।** ಯಜಮಾನನು ದ್ರವಿಣೋದದೇವತೆಯನ್ನು ಸಂಬೋಧಿಸಿ ಮತ್ತೆ ಹೇಳುವನು—ಎಲೈ ದ್ರವಿಣೋದನೇ, ಹಿಂದೆ (ಹಿಂದಿನ ಋಕ್ಕಿನಲ್ಲಿ) ಹೋತೃಯಾಗದಲ್ಲಿ ಋತುಗಳೊಡನೆ ಸೋಮಪಾನ ಮಾಡಬೇಕೆಂದು ನಿನ್ನನ್ನು ಆಹ್ವಾನಮಾಡಿದ್ದೇನೆ. ಈಗ ಪೋತೃವೆಂಬ ಋತ್ವಿಜನು ಮಾಡುವ ಸೋಮಯಾಗದಲ್ಲಿಯೂ ಸಹ ಊರ್ಜಸಂಜ್ಞಕ (ಕಾರ್ತಿಕ) ಮಾಸಾಭಿಮಾನಿ ದೇವತೆಗಳೊಡನೆ ಯಜ್ಞ ಭೂಮಿಗೆ ಬಂದು ಸೋಮರಸವನ್ನು ಪಾನಮಾಡಬೇಕೆಂದು ಆಹ್ವಾನಿಸುತ್ತೇನೆ.

**ಸಃ ಇತ್ ಹವ್ಯಃ ಉ**—ಆ ದ್ರವಿಣೋದನೇ ಸೋಮಪಾನಾರ್ಥವಾಗಿ ಆಹ್ವಾನಿಸಲ್ಪಡಲು ಯೋಗ್ಯನಾಗಿದ್ದಾನೆ. ಈ ವಿಷಯವು ಪ್ರಸಿದ್ಧವಾಗಿದೆ.

**ಯೋ ನಾಮ ದದಿಃ ಪತ್ಯತೇ ಸೋಮ್ಯಂ ಮಧು ಅಧ್ವರ್ಯುಭಿಃ ಪ್ರಸ್ಥಿತಂ**—ಯಜಮಾನರೇ ಮೊದಲಾದವರಿಗೆ ಇಷ್ಟಾರ್ಥಪ್ರದನೆಂದು ಪ್ರಸಿದ್ಧನಾಗಿರುವನೋ ಆ ದ್ರವಿಣೋದನಿಗಾಗಿಯೇ ರುಚಿಕರವಾದ ಸೋಮರಸವು ಅಧ್ವರ್ಯುಗಳೆಂಬ ಋತ್ವಿಜರಿಂದ ತಂದು ಸಿದ್ಧಮಾಡಲ್ಪಟ್ಟು ಇರಿಸಲಾಗಿದೆ.

**ದ್ರವಿಣೋದಃ ಪೋತ್ರಾತ್ ಋತುಭಿಃ ಸೋಮಂ ಪಿಬ—ಹೇ ದ್ರವಿಣೋದಃ ಪೋತುರ್ಯಾಗಾತ್ ಊರ್ಜಸಂಜ್ಞಕೈಃ ಋತುಭಿಃ ಸಹ ಸೋಮಂ ಪಿಬ।** ಎಲೈ ದ್ರವಿಣೋದನೇ, ಅಧ್ವರ್ಯುಗಳು ನಿನಗಾಗಿ ಸಿದ್ಧಮಾಡಿ ಯಜ್ಞವೇದಿಯಲ್ಲಿ ತಂದು ಇರಿಸಿರುವ ಈ ಸೋಮರಸವನ್ನು ಊರ್ಜ (ಕಾರ್ತಿಕ) ಮಾಸಾಭಿಮಾನಿ ದೇವತೆಗಳೊಡನೆ ಪಾನಮಾಡು ಎಂದು ಯಜಮಾನನ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ.

**ಇತ್ ಉ ಇತ್ ಉ** ಎಂಬ ನಿಪಾತಗಳು ಪಾದಪೂರಣಾರ್ಥವಾಗಿ ಉಪಯೋಗಿಸಲ್ಪಡುವುವು. ಯಾಸ್ಕರು **ಅಥಾಪಿ ಪದಪೂರಣ ಇದಮು ತದು** ।(ನಿ. ೧-೫) ಎಂದು ಹೇಳಿದ್ದಾರೆ. **ಉಕಾರಃ ಪದಪೂರಣಃ** ಎಂದು ನಿರುಕ್ತ ವ್ಯಾಖ್ಯಾಕಾರರಾದ ದುರ್ಗಾಚಾರ್ಯರೂ ಹೇಳಿದ್ದಾರೆ.

॥ ಸಂಹಿತಾಪಾಠಃ ॥

ಮೋದ್ಯಂತು ತೇ ವಹ್ನಯೋ ಯೇಭಿರೀಯಸೇಽರಿಷಣ್ಯನ್ವೀಳಯಸ್ವಾ ವನಸ್ಪತೇ ।
ಆಯೂಯಾ ಧೃಷ್ಣೋ ಅಭಿಗೂರ್ಯಾ ತ್ವಂ ನೇಷ್ಟ್ರಾತ್ಸೋಮಂ ದ್ರವಿಣೋದಃ
ಪಿಬ ಋತುಭಿಃ ॥ ೩ ॥

॥ ಪದಪಾಠಃ ॥

ಮೋದ್ಯಂತು । ತೇ । ವಹ್ನಯಃ । ಯೇಭಿಃ । ಈಯಸೇ । ಅರಿಷಣ್ಯನ್ । ವೀಳಯಸ್ವ । ವನಸ್ಪತೇ ।
ಆಽಯೂಯ । ಧೃಷ್ಣೋ ಇತಿ । ಅಭಿಽಗೂರ್ಯ । ತ್ವಂ । ನೇಷ್ಟ್ರಾತ್ । ಸೋಮಂ । ದ್ರವಿಣಃಽದಃ ।
ಪಿಬ । ಋತುಽಭಿಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ದ್ರವಿಣೋದೋ ಯೇಭಿರ್ಯೈರ್ವಾಹೈರೀಯಸೇ ಪ್ರಾಪ್ನೋಷಿ ॥ ತೇ ತವ ವಹ್ನಯೋ ವೋಢಾರ ಇತಿ ಯಾಸ್ಕೇನೋಕ್ತತ್ವಾತ್ । ನಿ. ೮-೩ ॥ ತೇ ಮೋದ್ಯಂತು । ತೃಪ್ಯಂತು । ಹೇ ವನಸ್ಪತೇ ವನಾನಾಂ ಪತೇ ಅರಿಷಣ್ಯನ್ ಅಹಿಂಸನ್ ವೀಳಯಸ್ವ । ದೃಢೀಭವ । ಹೇ ಧೃಷ್ಣೋ ಧರ್ಷಕ ತ್ವಮಾಯೂಯಾಗತ್ಯ ಅಭಿಗೂರ್ಯೋದ್ಯಮ್ಯ ನೇಷ್ಟ್ರಾತ್ ನೇಷ್ಟುರ್ಯಾಗಾದೃತುಭಿಃ ಸಹಃಸಂಜ್ಞಕೈಃ ಸಹ ಸೋಮಂ ಪಿಬ ॥

॥ ಪ್ರತಿಪದಾರ್ಥ ॥

**ದ್ರವಿಣೋದಃ**—ಎಲೈ ದ್ರವಿಣೋದನೇ **ಯೇಭಿಃ**— ಯಾವ ವಾಹಕರಿಂದ । **ಈಯಸೇ**—ಕರೆತರಲ್ಪಡುತ್ತೀಯೋ । **ತೇ ವಹ್ನಯಃ**—ಆ ನಿನ್ನ ವಾಹಕರು । **ಮೋದ್ಯಂತು**—ತೃಪ್ತರಾಗಲಿ । **ವನಸ್ಪತೇ**—ಅರಣ್ಯಗಳ ಅಧಿಪತಿಯೇ । **ಅರಿಷಣ್ಯನ್**—ಹಿಂಸಕನಾಗದೇ । **ವೀಳಯಸ್ವ**—ದೃಢವಾದ ಗಾತ್ರವುಳ್ಳವನಾಗು । **ಧೃಷ್ಣೋ**—ಶತ್ರುಧರ್ಷಕನೇ । **ತ್ವಂ**—ನೀನು । **ಆಯೂಯ**—ಬಂದು । **ಅಭಿಗೂರ್ಯ**— ನಮ್ಮ ಯಾಗವನ್ನು ಅನುಮೋದಿಸಿ । **ನೇಷ್ಟ್ರಾತ್**—ನೇಷ್ಟೃಕರ್ತೃಕವಾದ ಯಾಗದಲ್ಲಿ । **ಋತುಭಿಃ**—ಸಹಃಸಂಜ್ಞಕರಾದ ದೇವತೆಗಳೊಡನೆ । **ಸೋಮಂ**—ಸೋಮರಸವನ್ನು । **ಪಿಬ**—ಪಾನಮಾಡು.

॥ ಭಾವಾರ್ಥ ॥

ಎಲೈ ದ್ರವಿಣೋದನೇ. ಯಾವ ವಾಹಕರಿಂದ ನೀನು ಕರೆತರಲ್ಪಡುತ್ತೀಯೋ, ಆ ನಿನ್ನ ವಾಹಕರು ತೃಪ್ತರಾಗಲಿ. ಎಲೈ ವನಸ್ಪತಿಯೇ, ನೀನು ದೃಢವಾದ ಗಾತ್ರವುಳ್ಳವನಾಗು; ಆದರೆ ಹಿಂಸಕನಾಗಬೇಡ. ಶತ್ರುಧರ್ಷಕನೇ, ಎಲೈ

ನೀನು ಬಂದು ನನ್ನ ಯಾಗವನ್ನು ಅನುಮೋದಿಸಿ, ನೇಷ್ಟೃಕರ್ತೃಕವಾದ ಯಾಗದಲ್ಲಿ ಋತುಸಂಜ್ಞಕರಾದ ದೇವತೆಗಳೊಡನೆ ಸೋಮರಸವನ್ನು ಪಾನಮಾಡು.

## English Translation.

May these your bearers, by whom you are borne along, be satisfied ; lord of the forest, be firm, doing no injury, steadfast of resolve; come, and being gracious, drink, Dravinodas, along with the Ritus, the Soma, the offering the Neshtri.

॥ ವಿಶೇಷವಿಷಯಗಳು ॥

**ದ್ರವಿಣೋದಃ ಯೇಭಿಃ ಈಯಸೇ ತೇ ವಹ್ನಯಃ ಮೇದ್ಯಂತು । ಹೇ ದ್ರವಿಣೋದಃ ಯೈರ್ವಾಹಕೈಃ ನೀಯಸೇ ತವ ವೋಢಾರಃ ತೃಪ್ಯಂತು ।** ಎಲೈ ದ್ರವಿಣೋದನೇ, ಅರಣಿಗಳಲ್ಲಿ ಉತ್ಪನ್ನನಾದ ನಿನ್ನನ್ನು ಯಾವ ಋತ್ವಿಜರು ಯಜ್ಞವೇದಿಗೆ ತರುವರೋ ಅವರು ತೃಪ್ತರಾಗಲಿ ಎಂದು ಪ್ರಾರ್ಥಿಸಲಾಗಿದೆ.

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದ್ದಾರೆ—

> **ಮೇದ್ಯಂತು ತೇ ವಹ್ನಯೋ ವೋಢಾರೋ ಯೈರ್ಯಾಸ್ಯರಿಷ್ಯನ್ ದೃಢೀಭವಾಯುಯು ಧೃಷ್ಣೋ-ಅಭಿಗೂರ್ಯ ತ್ವಂ ನೇಷ್ಟ್ರೀಯೊಧಿಷ್ಣ್ಯಾದ್ಧಿಷ್ಣ್ಯೇ ಧಿಷಣ್ಯೋ ಧಿಷಣಾಭವಃ ಧಿಷಣಾ ವಾಗ್ಧಿಷೇರ್ದಧಾತ್ಯರ್ಥೇ । ಧೀಸಾದಿನೀತಿ ವಾ । ಧೀಸಾನಿನೀತಿ ವಾ । ವನಸ್ಪತ ಇತ್ಯೇನಮಾಹೈಷ ಹಿ ವನಾನಾಂ ಪಾತಾ ವಾ ಪಾಲಯಿತಾ ವಾ । ವನಂ ವನೋತೇಃ । ಪಿಬರ್ತುಭಿಃ ಕಾಲೈಃ ॥** (ನಿ. ೮–೩)

ಈ ನಿರ್ವಚನದ ಪ್ರಕಾರ **ಮೇದ್ಯಂತು** ಎಂಬ ಶಬ್ದವು **ಞಿಮಿದಾ ಸ್ನೇಹನೇ ತಸ್ಯ ಲೋಟಿ ಮೇದ್ಯಂತು ಇತಿ ಭವತಿ ।** ಸ್ನೇಹದಿಂದಿರು ಎಂಬರ್ಥವುಳ್ಳ **ಞಿಮಿದಾ** ಎಂಬ ಧಾತುವಿನಿಂದ ಮೇದ್ಯಂತು ಎಂಬ ರೂಪವು ನಿಷ್ಪನ್ನವಾಗಿದೆ. ಲೋಟ್ ಪ್ರಥಮ ಪುರುಷ ಬಹುವಚನಾಂತರೂಪವು. ಸಂತೋಷಪಡಲಿ, ತೃಪ್ತಿಯನ್ನು ಹೊಂದಲಿ ಎಂದರ್ಥವು; **ವಹ್ನಯಃ ವೋಢಾರಃ ।** ವಹಿಸು, ಧರಿಸು, ಹೊಂದು ಎಂಬರ್ಥವುಳ್ಳ **ವಹ ಪ್ರಾಪಣೇ** ಎಂಬ ಧಾತುವಿನಿಂದ ವಹ್ನಿಶಬ್ದವು ನಿಷ್ಪನ್ನವಾಗಿ ವಹ್ನಯಃ ಎಂಬ ಶಬ್ದಕ್ಕೆ ವಹಿಸುವವರು ಎಂದರ್ಥವಾಗುವುದು. ಈ ಶಬ್ದಕ್ಕೆ ಭಾರವನ್ನು ವಹಿಸುವ ಅಶ್ವವೆಂದೂ ಅರ್ಥವಾಗಬಹುದು. ಇಲ್ಲಿ ಅಗ್ನಿ (ದ್ರವಿಣೋದ) ಯನ್ನು ವಹಿಸುವ ಋತ್ವಿಗ್ಜನರೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ; **ಅರಿಷಣ್ಯತ್-ಅಹಿಂಸ್ಯನ್** ಹಿಂಸಿಸಲ್ಪಡದಿರುವ ಎಂದು ಅಗ್ನಿಗೆ ವಿಶೇಷಣವಾಗಿದೆ; **ಧೃಷ್ಣೋ-ಶತ್ರೂಣಾಂ ಧರ್ಷಯಿತಃ ।** ಶತ್ರುಗಳನ್ನು ಧ್ವಂಸಮಾಡುವವನು ಎಂದು ಧೃಷ್ಣು ಶಬ್ದದ ಸಾಮಾನ್ಯಾರ್ಥವು.

**ಧಿಷ್ಣ್ಯಃ ಧಿಷಣ್ಯಃ ಧಿಷಣಾ ವಾಕ್ ।** **ಧಿಷಣಾ** ಎಂದರೆ ವಾಕ್ಕು ಎಂದರ್ಥವು. **ತದರ್ಥಮುಸಾಸಾದ್ಯತೇ ತಸ್ಯ ಪಶ್ಚಾದುಪವಿಷ್ಟೋ ಹೋತಾ ಶಂಸತಿ ।** ದೇವತೆಯ ಸಮೀಪದಲ್ಲಿ ಹೋತೃವು ಕುಳಿತು ಸ್ತೋತ್ರ

ರೂಪವಾದ ವಾಕ್ಯಗಳಿಂದ ಸ್ತುತಿಸುವುದರಿಂದ **ಧಿಷ್ಣ್ಯಃ** ಎಂದರೆ ಸ್ತುತಿಸಲ್ಪಡುವವನು ಎಂದು **ಧಿಷ್ಣ್ಯ** ಅಥವಾ ಧಿಷಣ್ಯ ಶಬ್ದದ ಅರ್ಥವು. ಅಥವಾ **ಧೀಸಾದಿನೀತಿ ವಾ ಧೀಸಾನಿನೀತಿ ವಾ** ಎಂದರೆ—**ಧೀಃ** ಎಂದರೆ ಪ್ರಜ್ಞಾ ಅಥವಾ ಕರ್ಮ. ಪ್ರಜ್ಞೆ ಅಥವಾ ಕರ್ಮ (ಯಜ್ಞಕರ್ಮ) ದಿಂದ ಹೊಂದಲ್ಪಡುವವನಾದ್ದರಿಂದ ಧಿಷ್ಣ್ಯ ಎಂದೂ, **ಧೀಃ ತಯೋಃ ಸೀದತಿ ಸನೋತಿ ವಾ ತನ್ನಿಮಿತ್ತತ್ವಾತ್ ।** ಪ್ರಜ್ಞೆ ಅಥವಾ ಕರ್ಮವು ಇವನಲ್ಲಿರುವುದರಿಂದ ಅಥವಾ ಅವುಗಳನ್ನು ತನ್ನನ್ನು ಭಜಿಸುವವರಿಗೆ ಕೊಡುವುದರಿಂದ ಧಿಷ್ಣ್ಯ ಎಂಬ ಶಬ್ದವು ನಿಷ್ಪನ್ನವಾಗಬಹುದೆಂದೂ ವಿವರಿಸಿದಾರೆ. ಧಿಷ್ಣ್ಯ ಶಬ್ದಕ್ಕೆ ಯಜ್ಞಕರ್ಮ ಅಥವಾ ಯಜ್ಞಭೂಮಿ ಎಂದೂ ಅರ್ಥವಾಗಬಹುದು. ಇಲ್ಲಿ ನೇಷ್ಟೃವೆಂಬ ಋತ್ವಿಜನು ಮಾಡುವ ಯಜ್ಞದಲ್ಲಿ ಸೋಮಪಾನಮಾಡಬೇಕೆಂದು ಪ್ರಾರ್ಥಿಸಲಾಗಿದೆ.

ವನಸ್ಪತೇ ಎಂಬ ಶಬ್ದವು ಅಗ್ನಿಯನ್ನು ಸಂಬೋಧಿಸುವುದಾಗಿದೆ. ಅಗ್ನಿಯನ್ನು ವನಸ್ಪತಿಶಬ್ದದಿಂದ ಕರೆಯುವುದು ಹೇಗೆ ಎಂದರೆ, **ಏಷ ಹಿ ವನಾನಾಂ ಪಾತಾ ವಾ ಪಾಲಯಿತಾ ವಾ । ವನಂ ವನೋತೇಃ । ಯಸ್ಮಾತ್ ಏಷಃ ವನಾನಾಂ ವೃಕ್ಷಾದೀನಾಂ ಅಂತರ್ಗತೋಽಪಿ ಸಮರ್ಥೋಽಪಿ ದಗ್ಧುಂ ನ ತಾನಿ ದಹತಿ ತಸ್ಮಾತ್ ಅಯಂ ತೇಷಾಂ ಪಾತಾ ರಕ್ಷಿತಾ ಪಾಲಯಿತಾ ವೇತಿ ।** ವನಶಬ್ದವು ಇರು, ನೆಲೆಸು ಎಂದರ್ಥವುಳ್ಳ ವನಧಾತುವಿನಿಂದ ನಿಷ್ಪನ್ನವಾಗಿದೆ. ಇಲ್ಲಿ ವನಸ್ಪತಿಯೆಂದರೆ ವೃಕ್ಷಗಳಿಗೆ ಒಡೆಯನು ಅಥವಾ ಪಾಲಕನು. ಅಗ್ನಿಯು ವೃಕ್ಷಗಳಲ್ಲಿ ಅಂತರ್ಭೂತನಾಗಿ ಇದ್ದರೂ ಅವುಗಳನ್ನು ದಹಿಸದೆ ಕಾಪಾಡುವವನಾದ್ದರಿಂದ ಅಗ್ನಿಯು ವನಸ್ಪತಿ—ವೃಕ್ಷಗಳ ಪಾಲಕನೆಂದು ಹೇಳಲ್ಪಡುವನು.

**ಋತುಭಿಃ—ಕಾಲೈಃ ।** ಋತುಗಳೆಂದರೆ ಒಂದು ನಿರ್ದಿಷ್ಟವಾದ ಕಾಲವು. ಒಂದು ಸಂವತ್ಸರವನ್ನು ಸಮನಾದ ಆರುಭಾಗಗಳನ್ನಾಗಿ ವಿಭಾಗಿಸಿದರೆ ಪ್ರತಿಯೊಂದು ಭಾಗವೂ ಎರಡು ಮಾಸಗಳನ್ನೊಳಗೊಂಡಿರುವ ಒಂದು ನಿರ್ದಿಷ್ಟವಾದ ಕಾಲಪರಿಮಿತಿಯನ್ನು ಸೂಚಿಸುವುದು. ಅಂತಹ ಕಾಲವನ್ನೇ ಋತುಶಬ್ದದಿಂದ ವಿವರಿಸಲಾಗಿದೆ.

॥ ಸಂಹಿತಾಪಾಠಃ ॥

ಅಪಾದ್ಧೋತ್ರಾದುತ ಪೋತ್ರಾದಮತ್ತೋತ ನೇಷ್ಟ್ರಾದಜುಷತ ಪ್ರಯೋ ಹಿತಂ ।
ತುರೀಯಂ ಪಾತ್ರಮಮೃಕ್ತಮಮರ್ತ್ಯಂ ದ್ರವಿಣೋದಾಃ ಪಿಬತು ದ್ರಾವಿಣೋದಸಃ ॥ ೪ ॥

॥ ಪದಪಾಠಃ ॥

ಅಪಾತ್ । ಹೋತ್ರಾತ್ । ಉತ । ಪೋತ್ರಾತ್ । ಅಮತ್ತ । ಉತ । ನೇಷ್ಟ್ರಾತ್ । ಅಜುಷತ । ಪ್ರಯಃ । ಹಿತಂ ।

ತುರೀಯಂ । ಪಾತ್ರಂ । ಅಮೃಕ್ತಂ । ಅಮರ್ತ್ಯಂ । ದ್ರವಿಣಃऽದಾಃ । ಪಿಬತು । ದ್ರಾವಿಣಃऽದಸಃ ॥ ೪ ॥

॥ ಸಾಯಣಭಾಷ್ಯಂ ॥

ಅಚ್ಛಾವಾಕಸ್ಯೇಯಂ । ಯೋ ದ್ರವಿಣೋದಾ ಹೋತ್ರಾದ್ಧೋತುರ್ಯಾಗಾತ್ ಸೋಮಮಪಾತ್ ಪೀತವಾನ್ ಉತ ಕಿಂಚ ಪೋತ್ರಾತ್ಪೋತುರ್ಯಾಗಾದಮತ್ತ ಸೋಮಂ ಪೀತ್ವಾಮಾದ್ಯತ್ । ಉತ ಅಪಿ ಚ ನೇಷ್ಟ್ರಾತ್ ನೇಷ್ಟುರ್ಯಾಗಾದ್ಧಿತಂ ದತ್ತಂ ಪ್ರಯೋ ದೇವಾನಾಮನ್ನರೂಪಂ ಸೋಮಮಜುಷತ । ಅಸೇವಿಷ್ಟ । ಸ ದ್ರಾವಿಣೋದಸೋ ಹವೀರೂಪದ್ರವಿಣಸ್ಯ ಪ್ರದಾತೃಭ್ಯ ಋತ್ವಿಗ್ಭ್ಯೋ ಹಿತಃ ॥ ಋತ್ವಿಜೋಽತ್ರ ದ್ರವಿಣೋದಸ ಉಚ್ಯಂತೇ ಹವಿಷೋ ದಾತಾರಸ್ತೇ ಚೈನಂ ಜನಯಂತಿ । ನಿ. ೮-೨ । ಇತಿ ಯಾಸ್ಕೇನೋಕ್ತತ್ವಾತ್ ॥ ತಾದೃಶೋ ದ್ರವಿಣೋದಾ ಅಮೃಕ್ತಂ ದಶಾಪವಿತ್ರೇಣಾಮೃಷ್ಟಮಮರ್ತ್ಯಮಮರಣಸಾಧನಂ ತುರೀಯಂ ಪಾತ್ರಂ ಚತುರ್ಥಪಾತ್ರಸ್ಥಂ ಸೋಮಂ ಪಿಬತು ॥

॥ ಪ್ರತಿಪದಾರ್ಥ ॥

(**ಯಃ**—ಯಾವ ದ್ರವಿಣೋದನು) **ಹೋತ್ರಾತ್**—ಹೋತೃಕರ್ತೃಕವಾದ ಯಾಗದಲ್ಲಿ । **ಅಪಾತ್**—ಸೋಮವನ್ನು ಪಾನಮಾಡಿದನೋ । **ಉತ**—ಮತ್ತು **ಪೋತ್ರಾತ್**—ಪೋತೃಕರ್ತೃಕವಾದ ಯಾಗದಲ್ಲಿ **ಅಮತ್ತ**—ಸೋಮಪಾನದಿಂದ ತೃಪ್ತನಾದನೋ । **ಉತ**—ಮತ್ತು । **ನೇಷ್ಟ್ರಾತ್**—ನೇಷ್ಟೃಕರ್ತಕವಾದ ಯಾಗದಲ್ಲಿ । **ಹಿತಂ**—ಅರ್ಪಿತವಾದುದೂ । **ಪ್ರಯಃ**—ದೇವತೆಗಳಿಗೆ ಅನ್ನಪ್ರಾಯದುದೂ ಆದ ಸೋಮವನ್ನು । **ಅಜುಷತ**—ಸೇವಿಸಿದನೋ । (**ಸಃ**—ಆ ದ್ರವಿಣೋದನು) । **ದ್ರವಿಣೋದಸಃ**—ಹವಿಸ್ಸಿನ ರೂಪದ ದ್ರವಿಣವನ್ನು ಅರ್ಪಿಸುವ ಋತ್ವಿಕ್ಕುಗಳಿಗಾಗಿ ಇದ್ದಾನೆ । **ದ್ರವಿಣೋದಾಃ**—ಅದೇ ದೇವನು । **ಅಮೃಕ್ತಂ**—ಅಹಿಂಸಿತವಾದುದೂ । **ಅಮರ್ತ್ಯಂ**—ಮರಣರಹಿತವಾದುದೂ । **ತುರಿಯಂ ಪಾತ್ರಂ**—ಚತುರ್ಥಪಾತ್ರಸ್ಥವಾದುದೂ ಆದ ಸೋಮವನ್ನು **ಪಿಬತು**—ಪಾನಮಾಡಲಿ.

॥ ಭಾವಾರ್ಥ ॥

ಯಾವ ದ್ರವಿಣೋದನು ಹೋತೃಕರ್ತೃಕವಾದ ಯಾಗದಲ್ಲಿ ಸೋಮವನ್ನು ಪಾನಮಾಡಿದನೋ ಮತ್ತು ಪೋತೃಕರ್ತೃಕವಾದ ಯಾಗದಲ್ಲಿ ಸೋಮಪಾನದಿಂದ ತೃಪ್ತನಾದನೋ ಮತ್ತು ನೇಷ್ಟೃಕರ್ತೃಕವಾದ ಯಾಗದಲ್ಲಿ ಅರ್ಪಿತವಾದುದೂ ದೇವತೆಗಳಿಗೆ ಅನ್ನಪ್ರಾಯವಾದುದೂ ಆದ ಸೋಮವನ್ನು ಸೇವಿಸಿದನೋ ಅವನು ಹವಿಸ್ಸಿನ ರೂಪದ ದ್ರವಿಣವನ್ನು ಅರ್ಪಿಸುವ ಋತ್ವಿಕ್ಕುಗಳಿಗಾಗಿ ಇದ್ದಾನೆ. ಅದೇ ದೇವನು ಅಹಿಂಸಿತವಾದುದೂ, ಮರಣರಹಿತವಾದುದೂ, ಚತುರ್ಥಪಾತ್ರಸ್ಥವಾದುದೂ ಆದ ಸೋಮವನ್ನು ಪಾನಮಾಡಲಿ.

## English Translation.

Whether he has drink the Soma from the offering of the Hotri ; whether he has been exhilarated by the offering of the Potri ; whether he has been pleased with the (sacrificial) food presented as the act of the Neshtri ; still let Dravinodas quaff the unstrained amborsial cup the forrth offered by the priest.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಮೈತ್ರಾವರುಣನೆಂಬ ಋತ್ವಿಜನು ಅಚ್ಛಾವಾಕನೆಂಬ ಋತ್ವಿಜನನ್ನು ಕುರಿತು ಹೇಳುವನು. ಹಿಂದಿನ ಮೂರು ಋಕ್ಕುಗಳಲ್ಲಿ ದ್ರವಿಣೋದನೆಂಬ ದೇವತೆಯು ಹೋತೃ, ಪೋತೃ, ನೇಷ್ಟೃ ಎಂಬ ಋತ್ವಿಜರು ಮಾಡುವ ಯಾಗದಲ್ಲಿ ಅರ್ಪಿಸುವ ಸೋಮವನ್ನು ಪಾನಮಾಡಬೇಕೆಂದು ಪ್ರಾರ್ಥಿಸಲಾಗಿದೆ. ಈ ವಿಷಯವನ್ನೇ ಈ ಋಕ್ಕಿನ ಪೂರ್ವಾರ್ಧದಲ್ಲಿ ಪುನಃ ಹೇಳಿದೆ. ಈಗ ಋತ್ವಿಜರು ಅರ್ಪಿಸುವ ನಾಲ್ಕನೆಯ ಪಾತ್ರೆಯಲ್ಲಿರುವ ಸೋಮವನ್ನು ಪಾನಮಾಡಬೇಕೆಂದು ಪ್ರಾರ್ಥಿಸಿದೆ.

**ತುರೀಯಂ ಪಾತ್ರಂ**—ನಾಲ್ಕನೆಯ ಪಾತ್ರೆಯಲ್ಲಿರುವ ಸೋಮರಸ. ಇದುವರೆಗೆ ಹೇಳಿದ ಹೋತೃ, ಪೋತೃ, ನೇಷ್ಟೃ ಎಂಬ ಋತ್ವಿಜರ ಪಾತ್ರೆಗಳಲ್ಲಿರುವುದು ಕ್ರಮವಾಗಿ ಮೂರು ಪಾತ್ರೆಗಳಲ್ಲಿರುವ ಸೋಮರಸವೆಂದೂ ಈ ಋತ್ವಿಜರು ಅರ್ಪಿಸುವ ಸೋಮರಸವು ನಾಲ್ಕನೆಯ ಪಾತ್ರೆಯಲ್ಲಿರುವುದೆಂದು ವಿವರಿಸಲಾಗಿದೆ.

**ಅಮೃಕ್ತಂ—ಅಮೃಷ್ಟಂ, ಅಶುದ್ಧಂ, ಅಪೂರ್ಣಮಿತ್ಯರ್ಥಃ ।** ಎಲೈ ದ್ರವಿಣೋದನೇ ಇದುವರೆಗೂ ಹೋತೃ, ಪೋತೃ, ನೇಷ್ಟೃಗಳೆಂಬ ಋತ್ವಿಜರು ಅರ್ಪಿಸಿದ ಸೋಮವು ಅಪೂರ್ಣವಾಗಿರುವುದು ಎಂದರೆ ಅವರು ಅರ್ಪಿಸಿದ ಸೋಮಪಾನದಿಂದ ನಿನಗೆ ಪೂರ್ಣವಾಗಿ ತೃಪ್ತಿಯಾಗಿರುವುದಿಲ್ಲ. ಆದುದರಿಂದ ಈಗ ಋತ್ವಿಜರು ಅರ್ಪಿಸುವ ನಾಲ್ಕನೆಯ ಪಾತ್ರೆಯಲ್ಲಿರುವ ಸೋಮರಸವನ್ನು ಪಾನಮಾಡಿ ತೃಪ್ತನಾಗು ಎಂದಭಿಪ್ರಾಯವು.

**ಅಮರ್ತ್ಯಂ—ಅಮರಣಸಾಧನಂ । ಯತ್ ಪೀತ್ವಾ ನ ಮ್ರಿಯತೇ । ಅಮನುಷ್ಯಯೋಗ್ಯಂ ।** ಮರಣವನ್ನು ತಪ್ಪಿಸುವ ಎಂದರೆ ಈ ಸೋಮವನ್ನು ಪಾನಮಾಡುವುದರಿಂದ ಮೃತನಾಗುವುದಿಲ್ಲ. ಆದುದರಿಂದ ಈ ದಿವ್ಯವಾದ ಸೋಮವು ಮನುಷ್ಯರಿಗೆ ಯೋಗ್ಯವಾದುದಲ್ಲ. ದೇವಯೋಗ್ಯವಾದುದು, ಅಮೃತಸಮಾನವಾದುದು ಎಂದಭಿಪ್ರಾಯವು.

**ದ್ರವಿಣೋದಸಃ—ಹವೀರೂಪದ್ರವಿಣಸ್ಯ ಪ್ರದಾತಾರಃ ।** ಹವಿಸ್ಸನ್ನು ಅರ್ಪಿಸುವ ಋತ್ವಿಗ್ಗನರೆಂದು ಭಾಷ್ಯಕಾರರು ಅರ್ಥವಿವರಣೆ ಮಾಡಿರುವರು. ಯಾಸ್ಕರು ಸಹ—

> **ಏತದಗ್ನಿಂ ದ್ರವಿಣೋದಸಮಾಹೇತ್ಯೃತ್ವಿಜೋಽತ್ರ ದ್ರವಿಣೋದಸ ಉಚ್ಯಂತೇ ಹವಿಷೋ ದಾತಾರಸ್ತೇ ಚೈನಂ ಜನಯಂತಿ ॥** (ನಿ. ೮-೨)

ಎಂದು ನಿರ್ವಚನವನ್ನು ಹೇಳಿದ್ದಾರೆ. ಎಂದರೆ ಅಗ್ನಿಗೂ ದ್ರವಿಣೋದನೆಂದು ಹೆಸರು. ಆ ಅಗ್ನಿಗೆ ಹವಿಸ್ಸನ್ನರ್ಪಿಸುವುದರಿಂದ ಋತ್ವಿಜರಿಗೂ ದ್ರವಿಣೋದರೆಂದು ಹೆಸರು.



॥ ಸಂಹಿತಾಪಾಠಃ ॥

ಅರ್ವಾಂಚಮದ್ಯ ಯಯ್ಯಂ ನೃವಾಹಣಂ ರಥಂ ಯುಂಜಾಥಾಮಿಹ ವಾಂ
ವಿಮೋಚನಂ ।
ಪೃಂಕ್ತಂ ಹವೀಂಷಿ ಮಧುನಾ ಹಿ ಕಂ ಗತಮಥಾ ಸೋಮಂ ಪಿಬತಂ ವಾಜಿನೀ-
ವಸೂ ॥ ೫ ॥

॥ ಪದಪಾಠಃ ॥

ಅರ್ವಾಂಚಂ । ಅದ್ಯ । ಯಯ್ಯಂ । ನೃಽವಾಹನಂ । ರಥಂ । ಯುಂಜಾಥಾಂ । ಇಹ । ವಾಂ ।
ವಿಽಮೋಚನಂ ।
ಪೃಂಕ್ತಂ । ಹವೀಂಷಿ । ಮಧುನಾ । ಆ । ಹಿ । ಕಂ । ಗತಂ । ಅಥ । ಸೋಮಂ । ಪಿಬತಂ । ವಾಜಿನೀ-
ವಸೂ ಇತಿ ವಾಜಿನೀಽವಸೂ ॥ ೫ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಅದ್ಯಾಸ್ಮಿನ್ನಹನಿ ಯಯ್ಯಂ ಯಯಿಂ ಗಂತಾರಂ ನೃವಾಹಣಂ ನೇತ್ರೋರ್ಯುವಯೋರ್ವೋಢಾರಮಿಹ ಯಜ್ಞೇ ವಾಂ ಯುವಯೋರ್ವಿಮೋಚನಂ ವಿಮೋಚಯಿತಾರಂ ರಥಮರ್ವಾಂಚಂ ಯಥಾರ್ವಾಗ್ಭವತಿ ತಥಾ ಯುಂಜಾಥಾಂ । ಕಿಂಚ ಮಧುನಾ ಸ್ವಾದುರಸೇನ ಹವೀಂಷಿ ಪೃಂಕ್ತಂ । ಸಂಯೋಜಯತಂ । ಅಥ ಚಾ ಗತಂ । ಆಗಚ್ಛತಂ ॥ ಹಿ ಕಮಿತಿ ಪೂರಣೇ ॥ ಅಥಾನಂತರಂ ಹೇ ವಾಜಿನೀವಸೂ। ವಾಜ ಏವ ವಾಜಿನೀ । ಅನ್ನೇನ ವಾಸಯಿತಾರೌ ಬಲವರ್ಧನೌ ವಾ ಸೋಮಂ ಪಿಬತಂ॥

॥ ಪ್ರತಿಪದಾರ್ಥ ॥

(**ಅಶ್ವಿನೌ**—ಎಲೈ ಅಶ್ವಿನೀ ದೇವತೆಗಳೇ) **ಅದ್ಯ**—ಈ ಯಾಗಕಾಲದಲ್ಲಿ । **ಯಯ್ಯಂ**—ಸಂಚರಿಸತಕ್ಕದ್ದೂ **ನೃವಾಹಣಂ**—ನೇತೃಗಳಾದ ನಿಮ್ಮನ್ನು ವಹಿಸತಕ್ಕದ್ದೂ **ಇಹ**—ನಮ್ಮ ಈ ಯಜ್ಞದಲ್ಲಿ । **ವಾಂ**—ನಿಮ್ಮನ್ನು । **ವಿಮೋಚನಂ**—ತಂದಿಳಿಸತಕ್ಕದ್ದೂ ಆದ । **ರಥಂ**—ರಥವನ್ನು । **ಅರ್ವಾಂಚಂ**—ನಮ್ಮ ಅಭಿಮುಖವಾಗಿ ಬರುವಂತೆ । **ಯುಂಜಾಥಾಂ**—ಹೂಡಿ ಸಿದ್ಧಪಡಿಸಿರಿ । **ಮಧುನಾ**—ಮಧುರವಾದ ರಸದಿಂದ **ಹವೀಂಷಿ**—ಹವಿಸ್ಸುಗಳನ್ನು । **ಪೃಂಕ್ತಂ**—ಸೇರಿಸಿರಿ । **ಆ ಗತಂ ಹಿ**—ದಯಮಾಡಿ । **ಅಥ**—ಅನಂತರ । **ವಾಜಿನೀವಸೂ**—ಅನ್ನವನ್ನೂ ವಸತಿಯನ್ನೂ ಕೊಡತಕ್ಕ ಎಲೈ ಅಶ್ವಿನೀ ದೇವತೆಗಳೇ । **ಸೋಮಂ**—ಸೋಮರಸವನ್ನು । **ಪಿಬತಂ**—ಪಾನಮಾಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀ ದೇವತೆಗಳೇ, ಈ ಯಾಗಕಾಲದಲ್ಲಿ ಸಂಚರಿಸತಕ್ಕದ್ದೂ ನೇತೃಗಳಾದ ನಿಮ್ಮನ್ನು ವಹಿಸ ತಕ್ಕದ್ದೂ, ನಮ್ಮ ಈ ಯಜ್ಞದಲ್ಲಿ ನಿಮ್ಮನ್ನು ತಂದಿಳಿಸತಕ್ಕದ್ದೂ ಆದ ರಥವನ್ನು ನಮ್ಮ ಅಭಿಮುಖವಾಗಿ ಬರುವಂತೆ ಹೂಡಿ ಸಿದ್ಧಪಡಿಸಿರಿ. ಮಧುರವಾದ ರಸದಿಂದ ಹವಿಸ್ಸುಗಳನ್ನು ಸೇರಿಸಿ. ಇಲ್ಲಿಗೆ ಬಂದನಂತರ ಅನ್ನವನ್ನೂ, ವಸತಿಯನ್ನೂ ಕೊಡತಕ್ಕ ಎಲೈ ಅಶ್ವಿನಿಗಳೇ ಸೋಮರಸವನ್ನು ಪಾನಮಾಡಿ.

English Translation.

Yoke to-day, Ashwins, your rolling car, conveying (you), the leaders (of the rite) : and setting you down before us : mix the oblations with the sweet juice : come, you are affluent with (abundant) food, and the Soma.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಶ್ವಿನೀದೇವತೆಗಳು ಯಜ್ಞಭೂಮಿಗೆ ಬಂದು ಯಜಮಾನರೇ ಮುಂತಾದವರು ಅರ್ಪಿಸುವ ಸೋಮವನ್ನು ಪಾನಮಾಡಬೇಕೆಂದು ಪ್ರಾರ್ಥಿಸಲಾಗಿದೆ

**ಅದ್ಯ—ಅಸ್ಮಿನ್ನಹನಿ ಯಜ್ಞೇ ವಾ ।** ಈ ದಿವಸ ಅಥವಾ ಈಗ ನಾವು ಮಾಡುತ್ತಿರುವ ಯಜ್ಞದಲ್ಲಿ ಎಂದರ್ಥವು.

**ನೃವಾಹಣಂ—ನೇತ್ರೋಃಯುರ್ಯುವಯೋಃವೋಢಾರಂ ।** ಜನರಿಗೆ ನಾಯಕರಾದ ಅಶ್ವಿನೀದೇವತೆಗಳಾದ ನಿಮ್ಮಿಬ್ಬರನ್ನು ನಮ್ಮ ಯಜ್ಞಭೂಮಿಗೆ ವಹಿಸಿ ತರುವ ಎಂದರ್ಥವು. ಈ ಪದವು ರಥಂ ಎಂಬ ಶಬ್ದಕ್ಕೆ ವಿಶೇಷಣಪದವು.

**ಇಹ ವಾಂ ವಿಮೋಚನಂ ರಥಂ ಅರ್ವಾಂಚಂ ಯುಂಜಾಥಾಂ—ಇಹ ಯಜ್ಞೇ ಯುವಯೋಃ ವಿಮೋಚಯಿತಾರಂ ರಥಂ ಯಥಾ ಅರ್ವಾಕ್ ಭವತಿ ತಥಾ ಯುಂಜಾಥಾಂ ।** ಎಲೈ ಅಶ್ವಿನೀದೇವತೆಗಳೇ ಈಗ ನಾವು ಮಾಡುತ್ತಿರುವ ಯಜ್ಞದ ಅಭಿಮುಖವಾಗಿ ನೀವು ಬರುವಂತೆಯೂ ನಿಮ್ಮ ರಥವನ್ನು ನಮಗೆದುರಾಗಿ ತಂದು ನಿಲ್ಲಿಸಿ ಅಶ್ವಗಳನ್ನು ಬಿಚ್ಚುವಂತೆಯೂ ಸಿದ್ಧಪಡಿಸಿ ಎಂದರೆ ನಿಮ್ಮ ರಥವು ನಮ್ಮ ಯಜ್ಞಭೂಮಿಗೆ ಬರುವುದಕ್ಕೆ ಅನುಕೂಲವಾಗುವಂತೆ ಯಜ್ಞಾಭಿಮುಖವಾಗಿ ನಿಮ್ಮ ರಥವನ್ನು ತಿರುಗಿಸಿ ಈ ರೀತಿಯಾಗುವಂತೆ ನಿಮ್ಮ ರಥಕ್ಕೆ ಅಶ್ವಗಳನ್ನು ಹೂಡಿರಿ ಎಂದಭಿಪ್ರಾಯವು

**ವಾಜಿನೀವಸೂ—ವಾಜಃ**ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ (ನಿ. ೨-೭) **ಅನ್ನೇನ ವಾಸಯಿತಾರೌ ಬಲವರ್ಧನೌ ವಾ ।** ತಮ್ಮನ್ನು ಸೇವಿಸುವವರಿಗೆ ಅನ್ನಾದಿಗಳನ್ನು ಕೊಟ್ಟು ಪೋಷಿಸುವವರು ಅಥವಾ—ಬಲ ಅಥವಾ ಶಕ್ತಿಯನ್ನು ವೃದ್ಧಿಮಾಡುವವರು ಎಂದರ್ಥವು.

ಎಲೈ ಅಶ್ವಿನೀದೇವತೆಗಳೇ, ನಮ್ಮ ಯಜ್ಞಭೂಮಿಗೆ ಬರುವುದಕ್ಕಾಗಿ ನಿಮ್ಮ ರಥವನ್ನು ನಮಗೆ ಅಭಿಮುಖ ವಾಗಿ ತಿರುಗಿಸಿ ಅಶ್ವಗಳನ್ನು ಹೂಡಿ. ಅನಂತರ ನಮ್ಮ ಯಜ್ಞಭೂಮಿಗೆ ಬಂದು ಸಿಹಿಯಾದ ಅಥವಾ ರುಚಿಕರವಾದ ಸೋಮರಸವನ್ನು ಪಾನಮಾಡಿ. ನೀವು ನಿಮ್ಮನ್ನು ಭಜಿಸುವವರಿಗೆ ಅನ್ನವನ್ನು ಕೊಡತಕ್ಕವರು ಅಥವಾ ಬಲವನ್ನು ಕೊಡತಕ್ಕವರು. ಇಂತಹ ನೀವು ನಮ್ಮ ಯಜ್ಞದಲ್ಲಿ ಸೋಮಪಾನಮಾಡಿರಿ ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಜೋಷ್ಯಗ್ನೇ ಸಮಿಧಂ ಜೋಷ್ಯಾಹುತಿಂ ಜೋಷಿ ಬ್ರಹ್ಮ ಜನ್ಯಂ ಜೋಷಿ ಸುಷ್ಟುತಿಂ ।
ವಿಶ್ವೇಭಿರ್ವಿಶ್ವಾಁ ಋತುನಾ ವಸೋ ಮಹ ಉಶನ್ದೇವಾಁ ಉಶತಃ ಪಾಯಯಾ ಹವಿಃ ॥ ೬ ॥

॥ ಪದಪಾಠಃ ॥

ಜೋಷಿ । ಅಗ್ನೇ । ಸಂಽಇಧಂ । ಜೋಷಿ । ಆಽಹುತಿಂ । ಜೋಷಿ । ಬ್ರಹ್ಮ । ಜನ್ಯಂ । ಜೋಷಿ । ಸುಽಸ್ತುತಿಂ ।
ವಿಶ್ವೇಭಿಃ । ವಿಶ್ವಾನ್ । ಋತುನಾ । ವಸೋ ಇತಿ । ಮಹಃ । ಉಶನ್ । ದೇವಾನ್ । ಉಶತಃ । ಪಾಯಯ । ಹವಿಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸಮಿಧಂ ಜೋಷಿ । ಜುಷಸ್ವ । ಆಹುತಿಂ ಜೋಷಿ । ಜುಷಸ್ವ । ಬ್ರಹ್ಮ ಶಸ್ತ್ರಂ ಜನ್ಯಂ ಜನೇಭ್ಯೋ ಹಿತಂ ಜೋಷಿ ಜುಷಸ್ವ । ಸುಷ್ಟುತಿಂ ಶೋಭನಸ್ತೋತ್ರಂ ಜೋಷಿ । ಜುಷಸ್ವ । ಕಿಂಚ ವಸೋ ಸರ್ವೇಷಾಮಾವಾಸಭೂತ ಹೇ ಅಗ್ನೇ ಉಶತಃ ಕಾಮಯಮಾನಾನ್ ಮಹೋ ಮಹತೋ ವಿಶ್ವಾನ್ ಸರ್ವಾನ್ದೇವಾನ್ ಉಶನ್ ಕಾಮಯಮಾನಸ್ತ್ವಮೃತುನಾ ತಪಸ್ಯಸಂಜ್ಞಕೇನ ಸಹ ತಥಾ ವಿಶ್ವೇಭಿಃ ಸರ್ವೈರ್ದೇವೈಃ ಸಹ ಹವಿರ್ಹವೀರೂಪಂ ಸೋಮಂ ಪಾಯಯ ॥

॥ ಪ್ರತಿಪದಾರ್ಥ ॥

**ಅಗ್ನೇ**— ಎಲೈ ಅಗ್ನಿಯೇ, **ಸಮಿಧಂ**—ಸಮಿತ್ತನ್ನು **ಜೋಷಿ**—ಸೇವಿಸಿ ತೃಪ್ತಿಯನ್ನು ಹೊಂದು **ಆಹುತಿಂ**—ಆಹುತಿಯನ್ನು, **ಜೋಷಿ**—ಸೇವಿಸು, **ಬ್ರಹ್ಮ**—ಶಸ್ತ್ರರೂಪವಾದ ಸ್ತುತಿಯನ್ನು । **ಜನ್ಯಂ**—ಮಾನವರಿಗೆ ಹಿತವಾಗುವಂತೆ । **ಜೋಷಿ**—ಸೇವಿಸು **ಸುಷ್ಟುತಿಂ**—ಉತ್ತಮವಾದ ಸ್ತೋತ್ರವನ್ನು । **ಜೋಷಿ**—ಸೇವಿಸು, **ವಸೋ**—ಸಕಲರಿಗೂ ನಿವಾಸಭೂತನಾದ ಎಲೈ ಅಗ್ನಿಯೇ ; **ಉಶತಃ**—ಹವಿಸ್ಸನ್ನು ಇಚ್ಛಿಸುವವರೂ, **ಮಹಃ**—ಮಹದ್ಗುಣಗಳಿಂದ ಕೂಡಿದವರೂ ಆದ ! **ವಿಶ್ವಾನ್ ದೇವಾನ್**—ಸಕಲ ದೇವತೆಗಳನ್ನೂ, **ಉಶನ್**—ಅಪೇಕ್ಷಿಸುವ ನೀನು ! **ಋತುನಾ**—ತಪಸ್ಯಸಂಜ್ಞಕವಾದ ದೇವತೆಯೊಡನೆಯೂ, **ವಿಶ್ವೇಭಿಃ**—ಸಮಸ್ತವಾದ ದೇವತೆಗಳೊಡನೆಯೂ, **ಹವಿಃ**— ಹವಿಸ್ಸಿನ ರೂಪದ ಸೋಮವನ್ನು । **ಪಾಯಯ**— ಪಾನಮಾಡು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಸಮಿತ್ತನ್ನೂ, ಆಹುತಿಯನ್ನೂ, ಶಸ್ತ್ರರೂಪವಾದ ಸ್ತುತಿಯನ್ನೂ, ಉತ್ತಮವಾದ ಸ್ತೋತ್ರವನ್ನೂ ಸೇವಿಸಿ ತೃಪ್ತಿಯನ್ನು ಹೊಂದು. ಅದರಿಂದ ಮಾನವರಿಗೆ ಹಿತವಾಗುವಂತೆ ಮಾಡು. ಸಕಲರಿಗೂ ನಿವಾಸಭೂತನಾದ ಎಲೈ ಅಗ್ನಿಯೇ, ಹವಿಸ್ಸನ್ನು ಇಚ್ಛಿಸುವವರೂ, ಮಹದ್ಗುಣಗಳಿಂದ ಕೂಡಿದವರೂ ಆದ ಸಕಲ ದೇವತೆಗಳನ್ನೂ ಅಪೇಕ್ಷಿಸುವ ನೀನು ತಪಸ್ಯಸಂಜ್ಞಕನಾದ ಋತು ದೇವತೆಯೊಡನೆಯೂ, ಉಳಿದ ಸಮಸ್ತವಾದ ದೇವತೆಗಳೊಡನೆಯೂ ಹವಿಸ್ಸಿನ ರೂಪದ ಸೋಮವನ್ನು ಪಾನಮಾಡು.

English Translation.

Be pleased, Agni, with the fuel ; be pleased with the oblation ; be pleased with the sacred prayer that is good for men ; be pleased with holy praise, asylum of all : Agni, willing (to accept oblations), render all the great gods desirous (of the same), and with them all, and with the Ritu drink the oblation.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಗ್ನಿಯು ಸೋಮಪಾನಮಾಡಬೇಕೆಂದು ಪ್ರಾರ್ಥಿತವಾಗಿರುವನು. ಎಲೈ ಅಗ್ನಿಯೇ, ನಾವು ಅಗ್ನಿಯಲ್ಲಿ ಹೋಮಮಾಡುವ ಸಮಿತ್ತುಗಳನ್ನು (ಕಾಷ್ಠಗಳನ್ನು) ಸೇವಿಸು; ನಾವು ಅರ್ಪಿಸುವ ಆಹುತಿಯನ್ನು (ಹವಿಸ್ಸನ್ನು) ಸೇವಿಸು; ನಾವು ಪಠಿಸುವ ಶಸ್ತ್ರಮಂತ್ರಗಳನ್ನು ಕೇಳಿ ಸಂತೋಷಪಡು; ಮತ್ತು ನಿನ್ನನ್ನು ತೃಪ್ತಿಪಡಿಸುವುದಕ್ಕಾಗಿ ನಾವು ಉಚ್ಚರಿಸುವ ಉತ್ತಮವಾದ ಸ್ತುತಿಯನ್ನು ಆದರದಿಂದ ಲಾಲಿಸು. ಈ ರೀತಿ ಸಂತೋಷಚಿತ್ತನಾದ ನೀನು ಸಮಸ್ತ ದೇವತೆಗಳೊಡನೆ ಯಜ್ಞಭೂಮಿಗೆ ಬಂದು ನಿನಗಾಗಿ ಸಿದ್ಧಪಡಿಸಿರುವ ಸೋಮರಸವನ್ನು ತಪಸ್ಯಸಂಜ್ಞಕಮಾಸಾಭಿಮಾನಿ ದೇವತೆಯೊಡನೆ ಕೂಡಿ ಪಾನಮಾಡು. ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

**ಸಮಿಧಂ**—ಅಗ್ನಿಯಲ್ಲಿ ಹೋಮಮಾಡುವುದಕ್ಕಾಗಿ ಉಪಯೋಗಿಸುವ ಚೆನ್ನಾಗಿ ಒಣಗಿದ ಕಾಷ್ಠಗಳು. ಈ ಕಾಷ್ಠಗಳು ಅಗ್ರ (ತುದಿ) ಯಿಂದ ಕೂಡಿ ಸುಮಾರು ನಾಲ್ಕು ಅಂಗುಲ ಪ್ರಮಾಣವುಳ್ಳದ್ದಾಗಿರಬೇಕು. ಮತ್ತು ಅಶ್ವತ್ಥ, ಪಲಾಶ ಮೊದಲಾದ ಕೆಲವು ನಿರ್ದಿಷ್ಟ ವೃಕ್ಷಗಳ ಸಂಬಂಧವಾಗಿರಬೇಕು.

**ಬ್ರಹ್ಮ**—ಬ್ರಹ್ಮಶಬ್ದವು ಅನ್ನನಾಮಗಳಲ್ಲಿಯೂ, ಸ್ತೋತ್ರನಾಮಗಳಲ್ಲಿಯೂ ಪಠಿತವಾಗಿದೆ. ಇಲ್ಲಿ ಅಗ್ನಿಯನ್ನು ಪ್ರಶಂಸೆಮಾಡುವ ಶಸ್ತ್ರರೂಪವಾದ ಮಂತ್ರವೆಂದು ಭಾಷ್ಯಕಾರರು ಅರ್ಥವಿವರಣೆ ಮಾಡಿದಾರೆ



# ಮೂವತ್ತೆಂಟನೆಯ ಸೂಕ್ತವು

**ಉದು ಷ್ಯ ಇತ್ಯೇಕಾದಶರ್ಚಂ ಷಷ್ಠಂ ಸೂಕ್ತಂ ಗಾರ್ತ್ಸಮದಂ ತ್ರೈಷ್ಟುಭಂ ಸವಿತೃದೇವತಾಕಂ । ಅತ್ರಾನುಕ್ರಮಣಿಕಾ । ಉದು ಷ್ಯ ಏಕಾದಶ ಸಾವಿತ್ರಮಿತಿ ॥ ವ್ಯೂಢೇ ದಶರಾತ್ರೇ ಷಷ್ಠೇಽಹನಿ ವೈಶ್ವದೇವಶಸ್ತ್ರ ಏತತ್ಸೂಕ್ತಂ ಸಾವಿತ್ರನಿವಿದ್ಧಾನೀಯಂ । ವ್ಯೂಳ್ಹಶ್ಛೇದಿತಿ ಖಂಡೇ ಸೂತ್ರಿತಂ । ಷಷ್ಠಸ್ಯೋದು ಷ್ಯ ದೇವ ಇತಿ ಗಾರ್ತ್ಸಮದಂ । ಆ. ೮–೮ । ಇತಿ ॥**

ಅನುವಾದವು—**ಉದು ಷ್ಯಃ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು; ಸವಿತೃವು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಉದು ಷ್ಯಃ ಏಕಾದಶ ಸಾವಿತ್ರಂ** ಎಂದು ಹೇಳಿರುವುದು. ವ್ಯೂಢವೆಂಬ ದಶರಾತ್ರ ಯಾಗದಲ್ಲಿ ಆರನೆಯ ದಿವಸ ವೈಶ್ವದೇವಶಸ್ತ್ರಮಂತ್ರಗಳನ್ನು ಪಠಿಸುವಾಗ ಸವಿತೃದೇವತಾಕವಾದ ನಿವಿನ್ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ವ್ಯೂಳ್ಹಶ್ಛೇತ್** ಎಂಬ ಖಂಡದ **ಷಷ್ಠಸ್ಯೋದು ಷ್ಯ ದೇವ ಇತಿ ಗಾರ್ತ್ಸಮದಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೮-೮).

## ಸೂಕ್ತ—೩೮

ಮಂಡಲ—೨ ॥ ಅನುವಾಕ—೪ ॥ ಸೂಕ್ತ—೩೮ ॥

ಅಷ್ಟಕ—೨ ॥ ಅಧ್ಯಾಯ—೮ ॥ ವರ್ಗ—೨, ೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥

॥ ಋಷಿಃ—ಗೃತ್ಸಮದಃ ॥

॥ ದೇವತಾ—ಸವಿತಾ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಉದು ಷ್ಯ ದೇವಃ ಸವಿತಾ ಸವಾಯ ಶಶ್ವತ್ತಮಂ ತದಪಾ ವಹ್ನಿರಸ್ಥಾತ್ ।
ನೂನಂ ದೇವೇಭ್ಯೋ ವಿ ಹಿ ಧಾತಿ ರತ್ನಮಥಾಭಜದ್ವೀತಿಹೋತ್ರಂ ಸ್ವಸ್ತೌ ॥ ೧ ॥

॥ ಪದಪಾಠಃ ॥

**ಉತ್ । ಊಂ ಇತಿ । ಸ್ಯಃ । ದೇವಃ । ಸವಿತಾ । ಸವಾಯ । ಶಶ್ವತ್ಽತಮಂ । ತತ್ಽಅಪಾಃ । ವಹ್ನಿಃ । ಆಸ್ಥಾತ್ ।**

**ನೂನಂ । ದೇವೇಭ್ಯಃ । ವಿ । ಹಿ । ಧಾತಿ । ರತ್ನಂ । ಅಥ । ಆ । ಅಭಜತ್ । ವೀತಿಽಹೋತ್ರಂ । ಸ್ವಸ್ತೌ ॥ ೧ ॥**

॥ ಸಾಯಣಭಾಷ್ಯಂ ॥

**ಸ್ಯಃ ಸ ದೇವೋ ದ್ಯೋತಮಾನಃ ಸವಿತಾ ಸವಾಯ ಲೋಕಾನಾಂ ಪ್ರಸವಾಯಾನುಜ್ಞಾಯೈ ಶಶ್ವತ್ತಮಂ ಪ್ರತಿದಿನಮುದಸ್ಥಾತ್। ಉತ್ತಿಷ್ಠತಿ। ಕೀದೃಶಃ ಸವಿತಾ। ತದಪಾಃ ತತ್ಪ್ರಸವಕರ್ಮಾ॥ ಅಪಃ ಅಪ್ನ ಇತಿ ಕರ್ಮನಾಮಸು ಪಾಠಾತ್॥ ವಹ್ನಿರ್ವೋಢಾ ಜಗತಾಂ। ಕಿಂಚ ನೂನಂ ಸಂಪ್ರತಿ ದೇವೇಭ್ಯಃ ಸ್ತೋತೃಭ್ಯೋ ರತ್ನಂ ಧನಂ ವಿ ಹಿ ಧಾತಿ। ಪ್ರಯಚ್ಛತಿ॥ ಹೀತಿ ಪೂರಣೇ॥ ಅಥ ಅಪಿ ಚ ವೀತಿಹೋತ್ರಂ ಕಾಂತಯಜ್ಞಂ ಯಜಮಾನಂ ಸ್ವಸ್ತೌ ಅವಿನಾಶೇ ಕ್ಷೇಮೇಽಭಜತ್। ಭಾಗಿನಂ ಕರೋತು। ಯದ್ಯಪಿ ಸ್ವಸ್ತಿಶಬ್ದೋ ವಿಭಕ್ತ್ಯಂತನಿರ್ದಿಷ್ಟಶಬ್ದಪರಸ್ತಥಾಪ್ಯಪರ್ಯವಸಾನಾದರ್ಥಪರೋ ಭವತಿ॥**

॥ ಪ್ರತಿಪದಾರ್ಥ ॥

**ತದಪಾಃ**—ಜಗತ್ ಸೃಷ್ಟಿಯ ಕರ್ಮವುಳ್ಳವನೂ। **ವಹ್ನಿಃ**—ಜಗತ್ತಿನ ಹೊರೆಯನ್ನು ವಹಿಸಿರುವವನೂ। **ಸ್ಯಃ**—ಪ್ರಸಿದ್ಧನೂ। **ದೇವಃ**—ಪ್ರಕಾಶಮಾನನೂ ಆದ। **ಸವಿತಾ**—ಸವಿತೃವು। **ಸವಾಯ**—ಲೋಕದ ಪ್ರಸವಕ್ಕಾಗಿ। **ಶಶ್ವತ್ತಮಂ**—ಪ್ರತಿದಿನವೂ। **ಉತ್ ಅಸ್ಥಾತ್**—ಉದಯಿಸಿ ಮೇಲಕ್ಕೆ ಬರುತ್ತಾನೆ। **ನೂನಂ**—ನಿಶ್ಚಯವಾಗಿಯೂ। **ದೇವೇಭ್ಯಃ**—ಸ್ತೋತೃಗಳಿಗೆ। **ರತ್ನಂ**—ಧನವನ್ನು। **ವಿ ಹಿ ಧಾತಿ**—ಕೊಡುತ್ತಾನೆ। **ಅಥ**—ಮತ್ತು **ವೀತಿಹೋತ್ರಂ**—ಯಜ್ಞಕರ್ತನಾದ ಯಜಮಾನನನ್ನು। **ಸ್ವಸ್ತೌ**—ಕ್ಷೇಮಕ್ಕೆ ಅ **ಅಭಜತ್**—ಭಾಗಿಯನ್ನಾಗಿ ಮಾಡಲಿ.

॥ ಭಾವಾರ್ಥ ॥

ಜಗತ್ಸೃಷ್ಟಿಯ ಕರ್ಮವುಳ್ಳವನೂ, ಜಗತ್ತಿನ ಹೊರೆಯನ್ನು ವಹಿಸಿರುವವನೂ, ಪ್ರಸಿದ್ಧನೂ, ಪ್ರಕಾಶಮಾನನೂ ಆದ ಸವಿತೃವು ಲೋಕದ ಉತ್ಪತ್ತಿಗಾಗಿ ಪ್ರತಿದಿನವೂ ಉದಯಿಸಿ ಮೇಲಕ್ಕೆ ಬರುತ್ತಾನೆ, ಮತ್ತು ಸ್ತೋತೃಗಳಿಗೆ ಧನದಾತನಾಗಿದ್ದಾನೆ. ಹಾಗೆಯೇ ಯಜ್ಞಕರ್ತನಾದ ಯಜಮಾನನಿಗೆ ಕ್ಷೇಮವನ್ನುಂಟುಮಾಡಲಿ.

## English Translation·

In truth, the divine Savitri, the bearer (of the world), has perpetually been present for the generation (of mankind), for such is his office: verily he grants wealth to the pious (worshippers); may he, therefore, bestow upon the offerer of the oblation (sufficient) for his well-being.

॥ ವಿಶೇಷವಿಷಯಗಳು ॥

**ದೇವಃ ಸವಿತಾ**—ಯಾಸ್ಕರು ಸವಿತೃದೇವತೆಯ ವಿಷಯವಾಗಿ—**ಸವಿತಾ ಸರ್ವಸ್ಯ ಪ್ರಸವಿತಾ। ಆದಿತ್ಯೋಽಪಿ ಸವಿತೋಚ್ಯತೇ** (ನಿ. ೧೦-೩೧, ೩೨, ೩೩) ಎಂದರೆ ಸಮಸ್ತ ಜಗತ್ತನ್ನೂ ಉತ್ಪತ್ತಿಮಾಡುವವನು, ಸಕಲ ಜಗದುತ್ಪತ್ತಿಗೆ ಕಾರಣನು. ಆದಿತ್ಯನೂ (ಸೂರ್ಯನೂ ಕೂಡ) ಸವಿತೃವೆಂದು ಹೇಳಲ್ಪಡುವನು ಎಂದು ನಿರ್ವಚನವನ್ನು ಹೇಳಿದ್ದಾರೆ.

ಋಗ್ವೇದದಲ್ಲಿ ಹನ್ನೊಂದು ಸೂಕ್ತಗಳೂ ಮತ್ತು ಕೆಲವು ಸೂಕ್ತಗಳ ಭಾಗಗಳೂ ಸವಿತೃದೇವತೆಯನ್ನು ಸ್ತುತಿಸುತ್ತವೆ. ಆಗತಾನೆ ಉದಯವಾಗುತ್ತಿರುವ ಸೂರ್ಯನೇ ಸವಿತೃದೇವತೆಯೆಂದೂ ಅನಂತರ ಸೂರ್ಯನೆಂದೂ ಭಾಷ್ಯಕಾರರ ಅಭಿಮತವು. ಸವಿತೃವು ಬಹುಮಟ್ಟಿಗೆ ಸುವರ್ಣಮಯನಾದ ದೇವತೆ. ಅವನ ಕಣ್ಣು (ಋ. ಸ. ೧-೩೫-೮) ಕೈಗಳೂ (೧-೩೫-೯, ೧೦) ನಾಲಿಗೆ (೬-೭೧-೩) ಮುಂತಾದ ಅವಯವಗಳೆಲ್ಲವೂ ಸುವರ್ಣಮಯವೆಂದು ವರ್ಣಿತವಾಗಿದೆ. ಅವನ ರಥವೂ ಸ್ವರ್ಣಮಯವಾದುದು (೧-೩೫-೨, ೫).

ಸವಿತೃದೇವನ ತೇಜಸ್ಸು ಅಪಾರವಾದುದು. ಅವನ ಸುವರ್ಣಮಯವಾದ ಕಾಂತಿಯು ಸಮಸ್ತ ಪ್ರಪಂಚವನ್ನೂ ವಿಸ್ತರಿಸಿ ಬೆಳಗುವುದು. ಅವನು ತನ್ನ ಹಿರಣ್ಯಮಯವಾದ ತೋಳುಗಳನ್ನೆತ್ತಿ ರಾತ್ರಿಕಾಲದಲ್ಲಿ ನಿದ್ರಿಸುತ್ತಿದ್ದ ಸಕಲ ಜೀವರಾಶಿಗಳನ್ನು ಎಚ್ಚರಗೊಳಿಸುತ್ತಾನೆ (೨-೩೮-೨; ೪-೫೩-೩, ೪; ೬-೭೧-೧, ೫; ೭-೪೫-೨). ಅವನು ತನ್ನ ಸುವರ್ಣಮಯ ರಥದಲ್ಲಿ ಕುಳಿತು ಸಮಸ್ತ ಪ್ರಾಣಿಗಳನ್ನೂ ಅವಲೋಕಿಸುತ್ತಾ ಹೋಗುತ್ತಾನೆ (೧-೩೫-೨, ೩) ಸೂರ್ಯರಶ್ಮಿಗಳಿಂದ ಪ್ರಕಾಶಿಸುತ್ತಾ ಹರಿಪ್ರಕೇಶನಾದ ಸವಿತೃವು ಪೂರ್ವದಿಕ್ಕಿನಿಂದ ತನ್ನ ಕಾಂತಿಯನ್ನು ಸತತವೂ ಬೀರುತ್ತಿರುತ್ತಾನೆ (೧೦-೧೩೯-೧) ಅವನು ವಾಯುಮಂಡಲವನ್ನೂ, ಆಕಾಶವನ್ನೂ ಬೆಳಗುತ್ತಿರುವ ಮೂರು ಊರ್ಧ್ವಲೋಕದ ಪ್ರದೇಶಗಳನ್ನೂ ಮೂರುಸಲ ಸುತ್ತಿಬರುತ್ತಾನೆ (೪-೫೩-೫); ದೇವತೆಗಳಿಗೆ ಅಮರತ್ವವನ್ನೂ, ಮನುಷ್ಯರಿಗೆ ದೀರ್ಘಾಯುಸ್ಸನ್ನೂ ಕೊಡುವವನು ಅವನೇ (೪-೫೪-೨). ಸೂರ್ಯನನ್ನು ಪ್ರಾರ್ಥಿಸುವಂತೆ ಸವಿತೃವನ್ನೂ ದುಸ್ಸ್ವಪ್ನ ಪರಿಹಾರಕ್ಕಾಗಿಯೂ (೫-೮೨-೪) ಪಾಪವಿಮೋಚನೆಗಾಗಿಯೂ (೪-೫೪-೩) ಪ್ರಾರ್ಥಿಸುತ್ತಾರೆ. ನೀರು ಮತ್ತು ಗಾಳಿಗಳು ಅವನ ನಿಯಮಕ್ಕೊಳಪಟ್ಟಿವೆ (೨-೩೮-೨). ಇತರ ದೇವತೆಗಳು ಇವನ ಮೇಲ್ಪಂಕ್ತಿಯನ್ನನುಸರಿಸುತ್ತಾರೆ (೫-೮೧-೩). ಅವನ ಮನೋನಿರ್ಧಾರವನ್ನೂ, ಸ್ವಾತಂತ್ರ್ಯವನ್ನೂ ಇಂದ್ರ, ಮಿತ್ರ, ವರುಣ, ಅರ್ಯಮಾ, ರುದ್ರ ಮೊದಲಾದವರೂ ಪ್ರತಿಭಟಿಸಲಾರರು (೨-೩೮-೭, ೯; ೫-೮೨-೨) ವಸುಗಳು, ಅದಿತಿ, ವರುಣ, ಮಿತ್ರ, ಅರ್ಯಮಾ ಇವರುಗಳು ಅವನ ಕೀರ್ತಿಯನ್ನು ಪ್ರಶಂಸಿಸುತ್ತಾರೆ (೭-೩೮-೩, ೪) ಪೂಷಣ ಮತ್ತು ಸೂರ್ಯರಂತೆ ಸವಿತೃವು ಚರಾಚರವಸ್ತುಗಳಿಗೆ ಒಡೆಯನು (೪-೫೩-೬). ಸರ್ವರೂ ಬಯಸುವ ವಸ್ತುಗಳೆಲ್ಲವೂ ಅವನ ಅಧೀನ. ಅವನೇ ಸ್ವರ್ಗ, ಭೂಮಿ ಮತ್ತು ಆಕಾಶಗಳಲ್ಲಿದ್ದು ಶುಭವನ್ನುಂಟುಮಾಡುತ್ತಾನೆ (೧-೨೪-೩ : ೨-೩೮-೧೧); ಇತರ ದೇವತೆಗಳಂತೆ ಇವನೂ ಆಕಾಶಕ್ಕೆ ಆಧಾರಭೂತನು (೪-೫೩-೨ : ೧೦-೧೪೯-೪) ಪ್ರಪಂಚಕ್ಕೆಲ್ಲಾ ಆಧಾರನು (೪-೫೪-೪) ಭೂಮಿಯನ್ನು ಕಟ್ಟುಗಳಿಂದ ಬಂಧಿಸಿ ಸ್ಥಿರವಾಗಿ ನಿಲ್ಲುವಂತೆ ಇಟ್ಟಿದಾನೆ ಮತ್ತು ಆಕಾಶವನ್ನು ತೊಳೆ ತೇರುಗಳಿಲ್ಲದ ಅಂತರಾಳದಲ್ಲಿ ನಿಲ್ಲಿಸಿದಾನೆ (೧೦-೧೪೯-೧).

ಸವಿತೃವು ವೃಷ್ಟಿಕಾರಕನಾದುದರಿಂದಲೂ, ವಾಯುಮಂಡಲದಲ್ಲಿಯೇ ಇವನ ಪಥವಿರುವುದರಿಂದಲೂ, ಮಧ್ಯಮಸ್ಥಾನದೇವತೆಯೆಂದು ವ್ಯವಹೃತನಾಗಿದಾನೆ. ಶತಪಥಬ್ರಾಹ್ಮಣದಲ್ಲಿ (ಶ. ಬ್ರಾ. ೧೨-೩-೫-೧) ಸವಿತೃ ಮತ್ತು ಪ್ರಜಾಪತಿ ಎಂಬುವರಿಬ್ಬರೂ ಒಂದೇ ದೇವತೆಯೆಂಬ ಅಭಿಪ್ರಾಯ ವ್ಯಕ್ತವಾಗಿದೆ. ತೈತ್ತಿರೀಯ ಬ್ರಾಹ್ಮಣದಲ್ಲಿ ೧-೬-೪-೧) ಪ್ರಜಾಪ್ರತಿಯೇ ಸವಿತೃವಾಗಿ ಪ್ರಾಣಿಗಳನ್ನು ಸೃಷ್ಟಿಮಾಡಿದನೆಂದು ಹೇಳಿದೆ. ಋ. ಸಂ. ೩-೬೨-೧೦ನೆಯ ಋಕ್ಕಿನಲ್ಲಿ ಸವಿತೃವಿನ ಓಜಸ್ಸನ್ನೂ, ಮಹಿಮೆಯನ್ನೂ ಧ್ಯಾನಮಾಡಿ ಅವನ ಓಜಸ್ಸು ನಮ್ಮನ್ನು ಪ್ರೇರಿಸಲಿ ಎಂದು ಉಕ್ತವಾಗಿದೆ. ಈ ಮಂತ್ರವೇ ಗಾಯತ್ರಿಯೆಂದು ವೇದಗಳಲ್ಲಿ ಪ್ರಸಿದ್ಧವಾಗಿ ವೇದಮಂತ್ರಗಳಲ್ಲೆಲ್ಲಾ ಪ್ರಾಮುಖ್ಯತೆಯನ್ನು ಪಡೆದಿದೆ. ಸಾಧಾರಣವಾಗಿ ಸವಿತೃಶಬ್ದದ ಜತೆಯಲ್ಲಿ ದೇವಶಬ್ದವು ಉಪಯೋಗಿಸಲ್ಪಡುವ

ರೂಢಿ ಇರುವುದು. ಪ್ರಪಂಚದಲ್ಲಿ ಚೇತನವನ್ನುಂಟುಮಾಡುವ ಮತ್ತು ಪ್ರಾಣಿಗಳಿಗೆ ಚಲನಶಕ್ತಿಯನ್ನು ಕೊಡುವ ಸೂರ್ಯನ ಒಂದು ಶಕ್ತಿವಿಶೇಷಕ್ಕೆ ಸವಿತೃವೆಂದು ಹೆಸರು. ಸೂರ್ಯನು ಈ ಸ್ಥೂಲವಾದ ಮತ್ತು ಆಕಾಶದಲ್ಲಿ ಪರಿದೃಶ್ಯಮಾನವಾದ ತೇಜಃಪುಂಜವಾದ ಮಂಡಲವೆಂತಲೂ, ಸವಿತೃವು ಮೂರ್ತಿಮತ್ತಾದ ಆ ಸೂರ್ಯನ ದೈವೀಶಕ್ತಿಯೆಂತಲೂ ಕೆಲವರ ಮತವಾಗಿದೆ.

ಸವಿತೃದೇವತೆಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ನಾವು ಋ. ಸಂ. ೩-೬೨-೧೦ (ಗಾಯತ್ರೀ) ಎಂಬ ಋಕ್ಕಿನ ವಿವರಣೆಯನ್ನು ತಿಳಿಸುವಾಗ ವಿಸ್ತಾರವಾಗಿ ವಿವರಿಸುವೆವು.

**ಸವಾಯ—ಲೋಕಾನಾಂ ಪ್ರಸವಾಯ ।** ಲೋಕದಲ್ಲಿರುವ ಪ್ರಾಣಿಗಳ ಉತ್ಪತ್ತಿಸ್ಥಿತಿ ಮೊದಲಾದ ವ್ಯವಹಾರಗಳು ನಡೆಯುವುದಕ್ಕಾಗಿ ಎಂದರ್ಥವು. ಸೂರ್ಯನು (ಸವಿತೃವು) ಉದಯಿಸದಿದ್ದರೆ ಪ್ರಾಣಿಗಳ ಉತ್ಪತ್ತಿಯಾಗಲಿ, ಸಂಚಾರಾದಿ ವ್ಯವಹಾರಗಳಾಗಲಿ ನಡೆಯುವುದಿಲ್ಲ. ಲೋಕದ ಸಮಸ್ತ ವ್ಯವಹಾರಗಳಿಗೂ ಸವಿತೃವೇ ಕಾರಣಭೂತನು ಎಂದಭಿಪ್ರಾಯವು.

**ತದಪಾಃ—ಅಪಃ** ಎಂಬ ಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿದೆ (ನಿ. ೩-೨) ಇಲ್ಲಿ **ತದಪಾಃ—** ಆ ಕರ್ಮಗಳಿಂದ ಸಹಿತನಾದವನು ಎಂದರೆ ಸೃಷ್ಟಿಸ್ಥಿತ್ಯಾದಿ ಕರ್ಮಗಳಿಗೆ ಕಾರಣಭೂತನು ಎಂದರ್ಥವು.

**ವಹ್ನಿಃ—ವಹ ಪ್ರಾಪಣೇ** ಎಂಬ ಧಾತುನಿಂದ ನಿಷ್ಪನ್ನವಾದ ವಹ್ನಿಶಬ್ದಕ್ಕೆ ವಹಿಸುವವನು ಎಂದರೆ ಜಗತ್ತನ್ನು ಧರಿಸಿರುವವನು. ಎಂದರೆ ಈ ಸವಿತೃದೇವನಿಂದಲೇ ಜಗತ್ತಿನ ಸಕಲ ವ್ಯಾಪಾರಗಳೂ ನಡೆಯುವುವು. ಇವನೇ ಜಗತ್ತಿಗೆ ಧಾರಕನಾಗಿಯೂ, ಪೋಷಕನಾಗಿಯೂ ಇರುವನು ಎಂದಭಿಪ್ರಾಯವು.

**ದೇವೇಭ್ಯಃ—ಸ್ತೋತೃಭ್ಯಃ ।** ದೇವ ಶಬ್ದಕ್ಕೆ ಯಾಸ್ಕರು— **ದೇವೋ ದಾನಾದ್ವಾ ದೀಪನಾದ್ವಾ ದ್ಯೋತನಾದ್ವಾ ದ್ಯುಸ್ಥಾನೋ ಭವತೀತಿ ವಾ ।** ಎಂದು ನಿರ್ವಚನವನ್ನು ಹೇಳಿರುವರು. ಎಂದರೆ ದೇವ ಶಬ್ದಕ್ಕೆ ಕೊಡುವವನು ಎಂದರ್ಥವಾಗಬಹುದು. ಅಥವಾ ಪ್ರಕಾಶಪಡಿಸುವವನಾದ್ದರಿಂದಲಾಗಲಿ ಗುಣಗಳನ್ನು ವರ್ಣಿಸಿ ಹೊಗಳುವುದರಿಂದಾಗಲಿ, ಸ್ವರ್ಗದಲ್ಲಿ ಇರುವವನಾದ್ದರಿಂದಾಗಲಿ ದೇವನೆಂಬ ಹೆಸರು ಎಂದು ಅರ್ಥವಿವರಣೆ ಮಾಡಿರುವರು. ಪ್ರಕೃತ ಋಕ್ಕಿನಲ್ಲಿ **ದೀಪನ** ಅಥವಾ **ದ್ಯೋತನ**ವೆಂದರೆ ಸವಿತೃದೇವನ ಗುಣವರ್ಣನೆ ಮಾಡಿ ಗುಣಗಳನ್ನು ಪ್ರಕಾಶಪಡಿಸುವುದು ಎಂಬರ್ಥವನ್ನು ಸ್ವೀಕರಿಸಿ ದೇವತೆಯ ಗುಣವರ್ಣನೆಮಾಡುವ ಎಂದರೆ ಸ್ತೋತ್ರಮಾಡುವ ಋತ್ವಿಗ್ಜನರೆಂಬ ಅರ್ಥವನ್ನು ವಿವರಿಸಲಾಗಿದೆ.

**ರತ್ನಂ—ರಮಣೀಯಂ ಧನಂ ।** ಮನೋಹರವಾದ ಎಂದರೆ ಜನರಿಗೆ ಆಕರ್ಷಕವಾದ ಧನವೆಂದರ್ಥವು.

**ವೀತಿಹೋತ್ರಂ—ಕಾಂತಯಜ್ಞಂ ಯಜಮಾನಂ ।** ಯಜ್ಞವನ್ನು ಅಪೇಕ್ಷಿಸುವ ಎಂದರೆ ದೇವತೆಗಳನ್ನುದ್ದೇಶಿಸಿ ಯಜ್ಞಮಾಡಬೇಕೆಂದು ಅಪೇಕ್ಷಿಸುವ ಯಜಮಾನನಿಗೆ ಎಂದಭಿಪ್ರಾಯವು.

**ಸ್ವಸ್ತೌ—ಅವಿನಾಶೇ ಕ್ಷೇಮೇ । ಸ್ವಸ್ತೀತ್ಯವಿನಾಶಿ ನಾಮ** ಎಂದು ಯಾಸ್ಕರ ನಿರ್ವಚನವಿದೆ (ನಿ.೩-೨೧) ನಾಶವಾಗದಿರತಕ್ಕ ಕ್ಷೇಮ ಅಥವಾ ಧನವೇ ಮೊದಲಾದ ಸಂಪತ್ತು.

**ತತ್ ಪದಾಃ ವಹ್ನಿಃ ಸ್ಯಃ ದೇವಃ ಸವಿತಾ ಸವಾಯ ಶಶ್ವತ್ತಮಂ ಉತ್ ಅಸ್ಥಾತ್**— ಈ ಸವಿತೃದೇವನು ಜಗದ್ವ್ಯಾಪಾರಾದಿಗಳಿಗೆ ಕಾರಣಭೂತನಾದವನು, ಜಗತ್ತನ್ನು ಪೋಷಿಸುವವನು. ಇಂತಹ ಪ್ರಸಿದ್ಧನಾದ ಸವಿತೃದೇವನು ಜಗತ್ತಿನ ಪ್ರಾಣಿಗಳ ಸೃಷ್ಟಿಸ್ಥಿತ್ಯಾದಿ ಸಮಸ್ತವ್ಯಾಪಾರಾದಿಗಳು ನಡೆಯುವುದಕ್ಕಾಗಿ ಪ್ರತಿದಿನವೂ ಉದಯವಾಗುತ್ತಾನೆ.

**ನೂನಂ ದೇವೇಭ್ಯಃ ರತ್ನಂ ವಿ ಹಿ ಧಾತಿ**— ಈ ದೇವನು ಈಗ ಸ್ತೋತ್ರಮಾಡುತ್ತಿರುವ ಋತ್ವಿಗ್ಯಜಮಾನರಿಗಾಗಿ ರಮಣೀಯವಾದ ಧನಾದಿಗಳನ್ನು ಕೊಡುವನು.

**ಅಥ ವೀತಿಹೋತ್ರಂ ಸ್ವಸ್ತೌ ಆ ಅಭಜತ್— ಅಥ** ಎಂಬ ಶಬ್ದಕ್ಕೆ ಇಲ್ಲಿ ಸಮುಚ್ಚಯಾರ್ಥವನ್ನು ಹೇಳಿದೆ. ಮತ್ತು ಈ ದೇವನು ತನ್ನನ್ನು ಉದ್ದೇಶಿಸಿ ಯಜ್ಞಮಾಡಬೇಕೆಂದು ಅಪೇಕ್ಷಿಸುತ್ತಿರುವ ಅಥವಾ ಯಜ್ಞ ಮಾಡುತ್ತಿರುವ ಯಜಮಾನನಿಗೆ ಕ್ಷೇಮವನ್ನುಂಟುಮಾಡುವ ವಿಷಯದಲ್ಲಿ ಭಾಗಿಯಾಗಲಿ ಎಂದರೆ ಯಜಮಾನನಿಗೆ ಕ್ಷೇಮವನ್ನುಂಟುಮಾಡಲಿ ಎಂದಭಿಪ್ರಾಯವು.

ಹಿ— ಹಿ ಎಂಬ ಶಬ್ದವು ಪಾದಪೂರಣಾರ್ಥವಾಗಿ ಇಲ್ಲಿ ಪ್ರಯುಕ್ತವಾಗಿದೆ.



॥ ಸಂಹಿತಾಪಾಠಃ ॥

ವಿಶ್ವಸ್ಯ ಹಿ ಶ್ರುಷ್ಟಯೇ ದೇವ ಊರ್ಧ್ವಃ ಪ್ರ ಬಾಹವಾ ಪೃಥುಪಾಣಿಃ ಸಿಸರ್ತಿ ।
ಆಪಶ್ಚಿದಸ್ಯ ವ್ರತ ಆ ನಿಮೃಗ್ರಾ ಅಯಂ ಚಿದ್ವಾತೋ ರಮತೇ ಪರಿಜ್ಮನ್ ॥ ೨ ॥

ಪದಪಾಠಃ ॥

ವಿಶ್ವಸ್ಯ । ಹಿ । ಶ್ರುಷ್ಟಯೇ । ದೇವಃ । ಊರ್ಧ್ವಃ । ಪ್ರ । ಬಾಹವಾ । ಪೃಥುಽಪಾಣಿಃ । ಸಿಸರ್ತಿ ।
ಆಪಃ । ಚಿತ್ । ಅಸ್ಯ । ವ್ರತೇ । ಆ । ನಿಽಮೃಗ್ರಾಃ । ಅಯಂ । ಚಿತ್ । ವಾತಃ । ರಮತೇ । ಪರಿಽಜ್ಮನ್॥

॥ ಸಾಯಣಭಾಷ್ಯಂ ॥

ದೇವೋ ದ್ಯೋತಮಾನಃ ಸವಿತಾ ಪೃಥುಪಾಣಿರ್ಮಹತ್ಕರೋ ವಿಶ್ವಸ್ಯ ಶ್ರುಷ್ಟಯೇ ಜಗತಃ ಸುಖಾಯೋರ್ಧ್ವ ಉದ್ಗತಃ ಸನ್ ಬಾಹವಾ ಬಾಹೂ ಪ್ರಸಿಸರ್ತಿ । ಪ್ರಸಾರಯತಿ । ಆಪಶ್ಚಿತ್ ಆಪೋಽಪ್ಯಸ್ಯ ವ್ರತೇ ಪ್ರಸವಾಖ್ಯೇ ಕರ್ಮಣಿ ಸತಿ ॥ ವ್ರತಂ ಕರ್ಮೇತಿ ತನ್ನಾಮಸು ಪಾಠಾತ್ ॥ ಆ ಸ್ಯಂದಂತ ಇತಿ ಶೇಷಃ। ತಾಶ್ಚ ನಿಮೃಗ್ರಾ ನಿತರಾಂ ಶೋಧಯಿತ್ರ್ಯೋ ಗಂಗಾದಿರೂಪೇಣ ಜಗತ್ಪಾವಯಂತೀತ್ಯರ್ಥಃ। ಅಯಂ ಚಿದ್ವಾತೋಽಯಮಪಿ ವಾಯುಃ ಪರಿಜ್ಮನ್ ಪರಿತೋ ಗತೇ ವ್ಯಾಪ್ತೇಽಂತರಿಕ್ಷೇ ರಮತೇ ॥

॥ ಪ್ರತಿಪದಾರ್ಥ ॥

**ದೇವಃ**—ಪ್ರಕಾಶಮಾನನಾದ ಸವಿತೃವು । **ಪೃಥುಪಾಣಿಃ**—ವಿಸ್ತೃತವಾದ ಕರ (ಕಿರಣ) ವುಳ್ಳವನಾಗಿ । **ವಿಶ್ವಸ್ಯ**—ಜಗತ್ತಿನ । **ಶ್ರುಷ್ಟಯೇ ಹಿ**—ಸುಖಕ್ಕಾಗಿಯೇ । **ಊರ್ಧ್ವಃ**—ಮೇಲೆದ್ದು ಉದಯಿಸಿ । **ಬಾಹವಾ**—ತನ್ನ ಬಾಹುಗಳನ್ನು । **ಪ್ರ ಸಿಸರ್ತಿ**—ಪ್ರಸರಿಸುತ್ತಾನೆ । **ನಿಮೃಗ್ರಾಃ**—ಗಂಗಾದಿ ರೂಪಗಳಲ್ಲಿ ಜಗತ್ತನ್ನು ಶುದ್ಧಿಗೊಳಿಸುವ । **ಆಪಶ್ಚಿತ್**—ಉದಕಗಳೂ ಸಹ । **ಅಸ್ಯ ವ್ರತೇ**—(ಸೃಷ್ಟಿರೂಪವಾದ) ಈ ಸವಿತೃವಿನ ಕರ್ಮದ ನಿಮಿತ್ತವಾಗಿ । **ಆ (ಸ್ಯಂದಂತೆ)**—ಪ್ರವಹಿಸಿ ಹರಿಯುತ್ತವೆ । **ಅಯಂ ಚಿದ್ವಾತಃ**—ಈ ವಾಯುವೂ ಸಹ । **ಪರಿಜ್ಮನ್**—ಸರ್ವತ್ರ ವ್ಯಾಪಿಸಿರುವ ಈ ಅಂತರಿಕ್ಷದಲ್ಲಿ । **ರಮತೇ**—ಕ್ರೀಡಿಸುತ್ತದೆ.

॥ ಭಾವಾರ್ಥ ॥

ಪ್ರಕಾಶಮಾನನಾದ ಸವಿತೃವು ವಿಸ್ತೃತವಾದ ಕಿರಣವುಳ್ಳವನಾಗಿ ಜಗತ್ತಿನ ಸುಖಕ್ಕಾಗಿ ಮೇಲೆದ್ದು ಉದಯಿಸಿ ತನ್ನ ಬಾಹುಗಳನ್ನು ಪ್ರಸರಿಸುತ್ತಾನೆ. ಗಂಗಾದಿ ರೂಪಗಳಲ್ಲಿ ಜಗತ್ತನ್ನು ಶುದ್ಧಿಗೊಳಿಸುವ ಉದಕಗಳೂ ಸಹ ಈ ಸವಿತೃವಿನ ಸೃಷ್ಟಿರೂಪವಾದ ಕರ್ಮನಿಮಿತ್ತವಾಗಿ ಪ್ರವಹಿಸಿ ಹರಿಯುತ್ತವೆ. ಈ ವಾಯುವೂ ಸಹ ಸರ್ವತ್ರ ವ್ಯಾಪಿಸಿರುವ ಈ ಅಂತರಿಕ್ಷದಲ್ಲಿ ಕ್ರೀಡಿಸುತ್ತದೆ.

English Translation.

The divine, vast-handed (Savitri), having risen, stretches forth his arms for the delight of all : the purifying waters (flow).for (the fulfilment of) his rites, and this circumambient air sports (in the firmament).

॥ ವಿಶೇಷವಿಷಯಗಳು ॥

**ವಿಶ್ವಸ್ಯ ಶ್ರುಷ್ಟಯೇ—ಜಗತಃ ಸುಖಾಯ ।** ಶ್ರುಷ್ಟಿಯೆಂದರೆ ಸುಖವು. ಸಮಸ್ತ ಜಗತ್ತಿನ ಸುಖಕ್ಕಾಗಿ ಎಂದರ್ಥವು. ಯಾಸ್ಕರು ಶ್ರುಷ್ಟಿ ಶಬ್ದವನ್ನು ಕ್ಷಿಪ್ರನಾಮಗಳಲ್ಲಿ ಪಾಠಮಾಡಿದ್ದಾರೆ. **ಶ್ರುಷ್ಟೀತಿ ಕ್ಷಿಪ್ರನಾಮ— ಆಶು ಅಷ್ಟೀತಿ** (ನಿ. ೬-೧೩) ಎಂದು ನಿರ್ವಚನವನ್ನು ಹೇಳಿ ಮತ್ತೊಂದುಕಡೆ **ಶ್ರುಷ್ಟೀವರೀಃ-ಸುಖವತ್ಯಃ** (ನಿ. ೬-೨೨) ಎಂದೂ ಹೇಳಿರುವುದರಿಂದ ಪ್ರಕೃತ ಋಕ್ಕಿನಲ್ಲಿ ಶ್ರುಷ್ಟಿ ಶಬ್ದಕ್ಕೆ ಸುಖವೆಂಬ ಅರ್ಥವನ್ನು ಭಾಷ್ಯಕಾರರು ಸ್ವೀಕರಿಸಿ ಅರ್ಥವಿವರಣೆಮಾಡಿದ್ದಾರೆ.

**ವ್ರತೇ**— ವ್ರತಂ ಎಂಬ ಶಬ್ದವು ಕರ್ಮನಾಮಗಳಲ್ಲಿ ಉಕ್ತವಾಗಿದೆ (ನಿ. ೩-೧) ಈ ಶಬ್ದಾರ್ಥವನ್ನು [illegible]

**ವ್ರತಮಿತಿ ಕರ್ಮನಾಮ ವೃಣೋತೀತಿ ಸತಃ ।**
**ಇದಮಪೀತರತ್ ವ್ರತಮೇತಸ್ಮಾದೇವ ನಿವೃತ್ತಿಕರ್ಮ ವಾರಯತೀತಿ ಸತಃ**
**ಅನ್ನಮಪಿ ವ್ರತಮುಚ್ಯತೇ ಯದಾವೃಣೋತಿ ಶರೀರಂ ।**

(ನಿ. ೨-೧೩)

ಎಂದು ವ್ರತಶಬ್ದಕ್ಕೆ ಮೂರು ವಿಧವಾದ ಅರ್ಥವನ್ನು ಹೇಳಿರುವರು. ಎಂದರೆ ಪುರುಷನು ಮಾಡುವ ಶುಭ ಅಥವಾ ಅಶುಭಕರ್ಮವು ಇವನನ್ನು ವ್ಯಾಪಿಸಿರುವುದರಿಂದ ಕರ್ಮಕ್ಕೆ ವ್ರತವೆಂದು ಹೆಸರು : ಅಥವಾ ಈ ಕರ್ಮವು ನಿವೃತ್ತಿ ಕರ್ಮವಾಗಿಯೂ ಆಗಿರಬಹುದು ಎಂದರೆ ತನಗೆ ಬೇಡದ ಅಥವಾ ಶಾಸ್ತ್ರನಿಷಿದ್ಧವಾದ ಕರ್ಮವನ್ನು ತಡೆಯುವುದರಿಂದ ಎಂದರೆ ನಿವಾರಣೆಮಾಡುವುದರಿಂದ ಇದಕ್ಕೆ ವ್ರತವೆಂದು ಹೆಸರು : ಮತ್ತು ಶರೀರವನ್ನು ವ್ಯಾಪಿಸುವುದರಿಂದ ಅನ್ನಕ್ಕೆ ವ್ರತವೆಂದು ಹೆಸರು ಎಂದು ವಿವರಿಸಿರುವರು.

(೧) ವ್ರತಶಬ್ದವು ನಿವಾರಿಸು, ತಡೆಗಟ್ಟು ರಕ್ಷಿಸು ಎಂಬರ್ಥದಲ್ಲಿ ಉಪಯೋಗಿಸಲ್ಪಡುವುದು—

**ಯಾಃ ಪಾರ್ಥಿವಾಸೋ ಯಾ ಅಪಾಮಪಿ ವ್ರತೇ ತಾ ನೋ ದೇವೀಃ ಸುಹವಾಃ ಶರ್ಮ ಯಚ್ಛತ ।**

(ಋ. ಸಂ. ೫-೪೬-೭)

ಎಂಬ ಋಕ್ಕಿನಲ್ಲಿರುವ ವ್ರತೇ ಎಂಬ ಶಬ್ದಕ್ಕೆ ವೃಜಿನ ಎಂದರೆ ಕೆಡಕನ್ನು **ನಿವಾರಿಸಿ** ಮಾಡುವ ರಕ್ಷಣೆ (protection) ಎಂದಭಿಪ್ರಾಯವು—ಭೂಮಿಯಲ್ಲಿ ಇರುವ ದೇವತೆಯರೂ, ನೀರಿನಲ್ಲಿ ಇರುವ ದೇವತೆಯರೂ ನಮ್ಮನ್ನು ಕಷ್ಟದಿಂದ ಬಿಡಿಸಿ ನಮಗೆ ರಕ್ಷಣೆಯನ್ನೂ ಸುಖವನ್ನೂ ಉಂಟುಮಾಡಲಿ ಎಂದು ಪ್ರಾರ್ಥಿಸಿದೆ. ಇಲ್ಲಿ ವ್ರತೇ ಎಂದರೆ ಕಷ್ಟದಿಂದ ಬಿಡಿಸಿ ಮಾಡುವ ಸಂರಕ್ಷಣೆ ಎಂದರ್ಥವು.

**ತಾಸಾಂ ನಿ ಚಿಕ್ಯುಃ ಕವಯೋ ನಿದಾನಂ ಪರೇಷು ಯಾ ಗುಹ್ಯೇಷು ವ್ರತೇಷು ।**

(ಋ. ಸಂ. ೧೦-೧೧೪-೨)

ಕವಿಗಳು (ನಿರ್ಮಾತೃಗಳು) ಯಾರಿಗೂ ಕಾಣದಂತೆ ಗುಹೆಗಳಲ್ಲಿ ಮುಚ್ಚಿಡಲ್ಪಟ್ಟಿರುವುದನ್ನು ಕಂಡುಹಿಡಿದರು—ಇಲ್ಲಿ ವ್ರತೇಷು ಎಂದರೆ ಮುಚ್ಚಿಡಲ್ಪಟ್ಟದ್ದು ಎಂಬ ಅರ್ಥದಿಂದ ಗುಹ್ಯೇಷು ಎಂಬ ಶಬ್ದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿದೆ.

**ದದೃಶ್ರ ಏಷಾಮವಮಾ ಸದಾಂಸಿ ಪರೇಷು ಯಾ ಗುಹ್ಯೇಷು ವ್ರತೇಷು ।**

(ಋ. ಸಂ. ೩-೫೪-೫)

**ಅಸಿ ಯಮೋ ಅಸ್ಯಾದಿತ್ಯೋ ಅರ್ವನ್ನಸಿ ತ್ರಿತೋ ಗುಹ್ಯೇನ ವ್ರತೇನ ।**

(ಋ. ಸಂ. ೧-೧೬೩-೩)

ಇಲ್ಲಿಯೂ ಸಹ ವ್ರತೇನ ಎಂಬ ಶಬ್ದವು ಮುಚ್ಚಿಡಲ್ಪಟ್ಟ ಎಂಬ ಅರ್ಥದಲ್ಲಿಯೇ ಪ್ರಯುಕ್ತವಾಗಿರುವುದು.

(೨) ವ್ರತವೆಂದರೆ ಇಂತಹ ಕೆಲಸವನ್ನು ಮಾಡಬಾರದು ಎಂದು **ನಿಷೇಧವಿಧಿಯನ್ನೂ** ಅಥವಾ ಇಂತಹ ಕೆಲಸವನ್ನೇ ಮಾಡಬೇಕು ಎಂಬ **ಧರ್ಮನಿಯಮವನ್ನೂ** (law or ordinance) ಸೂಚಿಸುವುದು—

**ಯಚ್ಚಿದ್ಧಿ ತೇ ವಿಶೋ ಯಥಾ ಪ್ರ ದೇವ ವರುಣ ವ್ರತಂ । ಮಿನೀಮಸಿ ದ್ಯವಿದ್ಯವಿ ॥**

(ಋ. ಸಂ. ೧-೨೫-೧)

ಎಲೈ ವರುಣನೇ, ನಾವು ಮನುಷ್ಯಮಾತ್ರದವರಾದ್ದರಿಂದ ನಿನ್ನ ಯಾವ **ನಿಯಮಗಳನ್ನು** ಉಲ್ಲಂಘಿಸುತ್ತೇವೆಯೋ (ಅದನ್ನು ಗಮನಿಸದೆ ಕರ್ಮವನ್ನು ಪೂರ್ಣಮಾಡು)

**ಯ ಉ ಶ್ರಿಯಾ ದಮೇಷ್ವಾ ದೋಷೋಷಸಿ ಪ್ರಶಸ್ಯತೇ । ಯಸ್ಯ ವ್ರತಂ ನ ಮೀಯತೇ ।**

ಯಾವ (ಅಗ್ನಿಯ) ನಿಯಮವು ಉಲ್ಲಂಘಿಸಲ್ಪಡುವುದಿಲ್ಲವೊ.............................. ।

(ಋ. ಸಂ. ೨-೮-೩)

**ಇಂದ್ರಸ್ಯ ಕರ್ಮ ಸುಕೃತಾ ಪುರೂಣಿ ವ್ರತಾನಿ ದೇವಾ ನ ಮಿನಂತಿ ವಿಶ್ವೇ ।**
(ಋ. ಸಂ. ೩-೩೨-೮)

ಇಂದ್ರನ ಸಾಹಸಕೃತ್ಯಗಳು ಬಹಳವಾಗಿರುವುವು ಮತ್ತು ಚೆನ್ನಾಗಿ ಮಾಡಲ್ಪಟ್ಟಿರುವವು. ದೇವತೆಗಳು ಇಂದ್ರನ ವಿಧಿನಿಯಮಗಳನ್ನು ಮುರಿಯುವುದಿಲ್ಲ. (ಅತಿಕ್ರಮಿಸುವುದಿಲ್ಲ).

**ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚನ ಪ್ರ ಮಿನಂತಿ ವ್ರತಂ ವಾಂ ।**
(ಋ. ಸಂ. ೨-೨೪-೧೨)

ಎಲೈ ಬಲಶಾಲಿಯಾದ ದೇವತೆಗಳೇ, ನಿಮ್ಮದೆಲ್ಲವೂ ಸತ್ಯವು. ನೀರುಗಳೂ ಸಹ ನಿಮ್ಮ ವಿಧಿನಿಯಮಗಳನ್ನು ಮೀರುವುದಿಲ್ಲ.

**ವನಾನಿ ವಿಭ್ಯೋ ನಕಿರಸ್ಯ ತಾನಿ ವ್ರತಾ ದೇವಸ್ಯ ಸವಿತುರ್ಮಿನಂತಿ ।**
(ಋ. ಸಂ ೨-೩೮-೭)

**ಅಮಿನತೀ ದೈವ್ಯಾನಿ ವ್ರತಾನಿ ಸೂರ್ಯಸ್ಯ ಚೇತಿ ರಶ್ಮಿಭಿರ್ದೃಶಾನಾ ।**
(ಋ. ಸಂ. ೧-೯೨-೧೨)

ಈ ಸವಿತೃದೇವನ ನಿಯಮಗಳನ್ನು ಯಾರೂ ಉಲ್ಲಂಘಿಸುವುದಿಲ್ಲ.

**ಅಮಿನತೀ ದೈವ್ಯಾನಿ ವ್ರತಾನಿ ಸೂರ್ಯಸ್ಯ ಚೇತಿ ರಶ್ಮಿಭಿರ್ದೃಶಾನಾ ।**
(ಋ. ಸಂ. ೧-೯೨-೧೨)

**ಅಮಿನತೀ ದೈವ್ಯಾನಿ ವ್ರತಾನಿ ಪ್ರಮಿನತೀ ಮನುಷ್ಯಾ ಯುಗಾನಿ ।**
(ಋ. ಸಂ. ೧-೧೨೪-೧೨)

ಈ ಉಷೋದೇವಿಯು ದೇವತೆಗಳ ವಿಧಿನಿಯಮಗಳನ್ನು ಮೀರುವುದಿಲ್ಲ.

**ಕಿಂ ಸ್ವಿನ್ನೋ ರಾಜಾ ಜಗೃಹೇ ಕದಸ್ಯಾತಿ ವ್ರತಂ ಚಕೃಮಾ ಕೋ ವಿ ವೇದ ।**
(ಋ. ಸಂ. ೧೦-೧೨-೫)

(ಈ ಅಗ್ನಿಯು) ಯಾವ ನಿಯಮವನ್ನು ನಾವು ಉಲ್ಲಂಘಿಸುವೆವು?

**ಅಯಮೇಕ ಇತ್ಥಾ ಪುರೂರು ಚಷ್ಟೇ ವಿ ವಿಶ್ಪತಿಃ । ತಸ್ಯ ವ್ರತಾನ್ಯನು ವಶ್ಚರಾಮಸಿ ।**
(ಋ. ಸಂ. ೮-೨೫-೧೬)

ಅವನ ನಿಯಮಗಳನ್ನು ಅನುಸರಿಸುವೆವು (ಪಾಲಿಸುವೆವು) ಇತ್ಯಾದಿ ಋಕ್ಕುಗಳಲ್ಲಿಯೂ ಮತ್ತು ಋ.ಸಂ. ೧೦-೩೩-೯; ೭-೫-೪; ೭-೮೭-೭; ಎಂಬ ಋಕ್ಕಗಳಲ್ಲಿಯೂ ವ್ರತಶಬ್ದವು ವಿಧಿನಿಯಮಗಳೆಂಬ ಅರ್ಥವನ್ನು ಸೂಚಿಸುವುದು. ಮತ್ತು ಋ. ಸಂ. ೨-೩೮-೩; ೨-೩೮-೬; ೮-೪೦-೮; ೧-೧೩೬-೫; ೩-೬೧-೧; ೪-೧೩-೨; ೫-೬೯-೧ ಇತ್ಯಾದಿ ಋಕ್ಕುಗಳಲ್ಲಿರುವ **ಅನುವ್ರತಂ** ಎಂಬ ಶಬ್ದವು ವಿಧಿನಿಯಮಗಳಿಗನುಸಾರವಾಗಿ ಎಂಬರ್ಥವನ್ನು ಸೂಚಿಸುವುದು.

(೩) ದೇವತೆಗಳ ವಿಧಿನಿಯಮಗಳು ಕೆಲವು ಸಂದರ್ಭಗಳಲ್ಲಿ ಯಜ್ಞ ಅಥವಾ ಯಜ್ಞ ಕರ್ಮಗಳೆಂಬ ಅರ್ಥದಲ್ಲಿ ವಿವರಿಸುವಾಗ ವ್ರತಶಬ್ದವನ್ನು ಉಪಯೋಗಿಸಲಾಗಿರುವುದು. ಯಜ್ಞಾದಿಗಳನ್ನು ನೇರವೇರಿಸುವುದರಿಂದ

ದೇವತೆಗಳ ಇಷ್ಟವನ್ನು ಅಥವಾ ವಿಧಿನಿಯಮವನ್ನು ಪಾಲಿಸದಂತಾಗುವುದೆಂದು ಹೇಳಲ್ಪಡುವುದು—

**ಯೋ ಅಗ್ನೀಷೋಮಾ ಹವಿಷಾ ಸಪರ್ಯಾದ್ದೇವದ್ರೀಚಾ ಮನಸಾ ಯೋ ಘೃತೇನ ।**
**ತಸ್ಯ ವ್ರತಂ ರಕ್ಷತಂ ಪಾತಮಂಹಸೋ ವಿಶೇ ಜನಾಯ ಮಹಿ ಶರ್ಮ ಯಚ್ಛತಂ ।**

(ಋ. ಸಂ. ೧-೯೩-೮)

ಎಲೈ ಅಗ್ನೀಸೋಮರೇ, ಯಾವ ಪುರುಷನು (ಯಜಮಾನನು) ಅಗ್ನಿಯನ್ನು, ಸೋಮನನ್ನು ಹವಿರಾದಿದ್ರವ್ಯಗಳಿಂದ ಮನಃಪೂರ್ವಕವಾಗಿ ಆರಾಧಿಸುವನೋ ಅವನ ಯಜ್ಞವನ್ನು ಸಂರಕ್ಷಿಸಿ, ಅವನಿಗೆ ಕೇಡಾಗದಂತೆ ಕಾಪಾಡಿ.

**ತ್ವಮಗ್ನೇ ಪ್ರಥಮೋ ಅಂಗಿರಸ್ತಮಃ ಕವಿರ್ದೇವಾನಾಂ ಪರಿ ಭೂಷಸಿ ವ್ರತಂ ।**

(ಋ. ಸಂ. ೧-೩೧-೨)

ಎಲೈ ಅಗ್ನಿಯೇ, ನೀನು ಅಂಗಿರಾ ಋಷಿಗಳಲ್ಲಿ ಶ್ರೇಷ್ಠನೂ, ಮೊದಲನೆಯವನೂ, ಕವಿಯೂ ಆಗಿದ್ದೀಯೆ. ನೀನು ದೇವತೆಗಳ ಯಜ್ಞವನ್ನು ನೆರವೇರಿಸು.

**ತಸ್ಯ ವ್ರತಾನಿ ಭೂರಿಪೋಷಿಣೋ ವಯಮುಪ ಭೂಷೇಮ ದಮ ಆ ಸುವೃಕ್ತಿಭಿಃ ।**

(ಋ. ಸಂ. ೩-೩-೯)

ಧನಾಢ್ಯೈಶ್ವರ್ಯಯುಕ್ತರಾದ ನಾವು ಸ್ತೋತ್ರಾದಿಗಳಿಂದ ಅಗ್ನಿಯ ಯಜ್ಞಕರ್ಮಗಳನ್ನು ನಮ್ಮ ಮನೆಯಲ್ಲಿ ನೆರವೇರಿಸೋಣ ಇತ್ಯಾದಿ ಋಕ್ಕುಗಳಲ್ಲಿಯೂ ಋ. ಸಂ. ೩-೬-೫; ೮-೪೨-೧; ೬-೧೪-೩; ೧-೨೪-೧೫; ೬-೫೪-೯; ೧೦-೩೬-೧೩; ೫-೧೮-೫; ಎಂಬ ಋಕ್ಕುಗಳಲ್ಲಿಯೂ ಇರುವ ವ್ರತ ಶಬ್ದವು ಯಜ್ಞ, ಯಜ್ಞಕರ್ಮ ಅಥವಾ ಕರ್ಮ ಎಂಬ ಯಾವುದಾದರೂ ಒಂದು ಅರ್ಥದಲ್ಲಿ ಪ್ರಯುಕ್ತವಾಗಿರುವುದು. ನಾನಾಮಂತ್ರಗಳಲ್ಲಿರುವ ಶಬ್ದಗಳಿಗೆ ಅರ್ಥವು ಹೊಂದಿಕೊಳ್ಳುವಂತೆ ಹೇಳುವಾಗ ವ್ರತಶಬ್ದಕ್ಕೆ ಸಂದರ್ಭಾನುಸಾರವಾಗಿ ಯಾಸ್ಕರು ಹೇಳಿರುವ ಮೂರು ವಿಧವಾದ ಅರ್ಥಗಳಲ್ಲಿ ಯಾವುದು ಸರಿಯಾಗಿ ಹೊಂದುವುದೋ ಅದನ್ನು ಹೇಳಬೇಕು. ಇದೇ ವ್ರತಶಬ್ದದ ಮುಖ್ಯಾರ್ಥವು ಮತ್ತು ಪ್ರಯೋಗವು.

**ದೇವಃ ಪೃಥುಪಾಣಿಃ ವಿಶ್ವಸ್ಯ ಶ್ರುಷ್ಟ್ಯೈ ಯೇ ಹಿ ಊರ್ಧ್ವಃ ಬಾಹವಾ ಪ್ರ ಸಿಸರ್ತಿ**—ಸಮಸ್ತಜಗತ್ತಿಗೂ ಸುಖವನ್ನುಂಟುಮಾಡುವುದಕ್ಕಾಗಿ ಈ ಸವಿತೃದೇವನು ಮೇಲೆ ಉದಯಿಸಿ ತನ್ನ ಬಾಹುಗಳನ್ನು ಪ್ರಸರಿಸುತ್ತಾನೆ. ಇಲ್ಲಿ ಬಾಹುಗಳೆಂದರೆ ಕಿರಣಗಳು. ಸೂರ್ಯನು (ಸವಿತೃವು) ಉದಯಿಸಿ ತನ್ನ ಕಿರಣಗಳನ್ನು ಎಲ್ಲಾ ಕಡೆಗಳಲ್ಲಿಯೂ ಹರಡುವಂತೆ ಮಾಡಿ ಜಗತ್ತಿನ ಪ್ರಾಣಿಗಳಿಗೆ ಸುಖವನ್ನುಂಟುಮಾಡುತ್ತಾನೆ.

**ನಿಮೃಗ್ರಾಃ ಆಪಃ ಚಿತ್ ಅಸ್ಯ ವ್ರತೇ ಆ (ಸ್ಯಂದಂತಿ)**—ಈ ದೇವನ ನಿಯಮದಿಂದ ಎಂದರೆ ಸೃಷ್ಟಿಯೆಂಬ ಕರ್ಮದಿಂದ ಉಂಟಾದ ಉದಕಗಳು ಗಂಗಾದಿ ನದಿಗಳ ರೂಪದಿಂದ ಹರಿಯುತ್ತಾ ಲೋಕದ ಜನಗಳನ್ನು ಶುದ್ಧರನ್ನಾಗಿ ಮಾಡುತ್ತವೆ. ಈ ವಾಕ್ಯದಲ್ಲಿ ಸ್ಯಂದಂತಿ ಎಂಬ ಕ್ರಿಯಾಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಸೂರ್ಯನ ಕಿರಣಗಳಿಂದ ಸಮುದ್ರಾದಿಜಲಾಶಯಗಳಲ್ಲಿರುವ ಉದಕಗಳು ತಪ್ತವಾಗಿ ಆವಿಯರೂಪದಿಂದ ಅಂತರಿಕ್ಷದಲ್ಲಿ ಸೇರಿ ಮೇಘರೂಪದಲ್ಲಿ ಕೆಲವು ಕಾಲವಿದ್ದು ಆ ಉದಕಗಳನ್ನು ಭೂಮಿಯ ಮೇಲೆ ವೃಷ್ಟಿ (ಮಳೆ) ಯ ರೂಪದಲ್ಲಿ ಬೀಳುವಂತೆ ಮಾಡುವನು. ಆ ವೃಷ್ಟ್ಯುದಕಗಳು ಒಟ್ಟಾಗಿ ಸೇರಿ ನದಿಯ ರೂಪದಲ್ಲಿ ಪ್ರವಹಿಸುವವು. ಆ ನದಿಗಳ

ಜಲದಿಂದ ಜನರು ಶುದ್ಧರಾಗುವುದಲ್ಲದೆ ಸಸ್ಯಾದಿಗಳ ಉತ್ಪತ್ತಿದ್ವಾರಾ ಅನ್ನಾದ್ಯಾಹಾರಗಳನ್ನು ಪಡೆದು ಸುಖದಿಂದಿರುವರು. ಇವುಗಳಿಗೆಲ್ಲಾ ಸವಿತೃದೇವನ ವ್ರತವೇ ಎಂದರೆ ಕರ್ಮವೇ (ನಿಯಮವೇ) ಕಾರಣವೆಂದು ಇಲ್ಲಿ ಸೂಚಿತವಾಗಿದೆ.

**ಅಯೆಂ ಚಿತ್ ವಾತಃ ಪರಿಜ್ಮನ್ ರಮತೇ**—ವಾಯುವೂ ಸಹ ಎಂದರೆ ನಮ್ಮ ಸುತ್ತಲೂ ಇರುವ ಗಾಳಿಯು ಸರ್ವತ್ರ ವ್ಯಾಪ್ತವಾಗಿರುವ ಅಂತರಿಕ್ಷದಲ್ಲಿ ಕ್ರೀಡಿಸುತ್ತಿರುತ್ತದೆ. ಎಂದರೆ ವಿಸ್ತಾರವಾದ ಅಂತರಿಕ್ಷದಲ್ಲಿ ಜನರ ಹಿತಕ್ಕಾಗಿ ಗಾಳಿಯು ಬೀಸುತ್ತಿರುವುದು ಸಹ ಆ ಸವಿತೃದೇವನ ನಿಯಮವೇ ಆಗಿದೆ ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಆಶುಭಿಶ್ಚಿದ್ಯಾನ್ವಿ ಮುಂಚಾತಿ ನೂನಮರೀರಮದತಮಾನಂ ಚಿದೇತೋಃ ।
ಅಹ್ಯರ್ಷೂಣಾಂ ಚಿನ್ನ್ಯಯಾಁ ಅವಿಷ್ಯಾಮನು ವ್ರತಂ ಸವಿತುರ್ಮೋಕ್ಯಾಗಾತ್ ॥

॥ ಪದಪಾಠಃ ॥

ಆಶುऽಭಿಃ । ಚಿತ್ । ಯಾನ್ । ವಿ । ಮುಂಚಾತಿ । ನೂನಂ । ಅರೀರಮತ್ । ಅತಮಾನಂ । ಚಿತ್ । ಏತೋಃ ।
ಅಹ್ಯರ್ಷೂಣಾಂ । ಚಿತ್ । ನಿ । ಅಯಾನ್ । ಅವಿಷ್ಯಾಂ । ಅನು । ವ್ರತಂ । ಸವಿತುಃ । ಮೋಕೀ । ಆ । ಅಗಾತ್ ॥ ೩ ॥

॥ ಸಾಯಣಭಾಷ್ಯಂ ॥

**ಯಾನ್ ಗಚ್ಛನ್ ಸವಿತಾಶುಭಿಶ್ಚಿಚ್ಛೀಘ್ರಗಾಮಿಭಿರಪಿ ರಶ್ಮಿಭಿರ್ವಿಮುಂಚಾತಿ । ವಿಮುಚ್ಯತೇ । ನೂನಮಿತಿ ಪೂರಣಃ । ಅತಮಾನಂ ಚಿತ್ಸತತಂ ಗಚ್ಛಂತಮಪಿ ಜನಮೇತೋರ್ಗಮನಾದರೀರಮತ್ । ಉಪರಮಯತಿ । ಕಿಂಚ ಅಹ್ಯರ್ಷೂಣಾಂ । ಅಹಿಮಾಹಂತಾರಂ ಶತ್ರುಮರ್ಷಂತ್ಯಭಿಗಚ್ಛಂತೀತ್ಯಹ್ಯರ್ಷವಃ । ತೇಷಾಮಪ್ಯವಿಷ್ಯಾಂ ಗಮನೇಚ್ಛಾಂ ನ್ಯಯಾನ್ । ನಿಯಚ್ಛತಿ । ಸವಿತುಃ ಪ್ರೇರಕಸ್ಯ ಸೂರ್ಯಸ್ಯ ವ್ರತಂ ಕರ್ಮಾನು ಪಶ್ಚಾನ್ಮೋಕೀ ರಾತ್ರಿಃ । ಮೋಕೀ ಶೋಕೀತಿ ರಾತ್ರಿನಾಮಸು ಪಾಠಾತ್ ॥ ಆಗಾತ್ । ಆಗಚ್ಛತಿ । ಸವಿತುಶ್ಚೇಷ್ಟೋಪರತೌ ರಾತ್ರಿರಾಗಚ್ಛತೀತಿ ಯಾವತ್ ॥**

॥ ಪ್ರತಿಪದಾರ್ಥ ॥

**ಯಾನ್**—ಸಂಚಾರವುಳ್ಳ ಸವಿತೃವು । **ಆಶುಭಿಶ್ಚಿತ್**—ಶೀಘ್ರಗಾಮಿಗಳಾದ ಕಿರಣಗಳಿಂದ । **ವಿ ಮುಂಚಾತಿ**—ವಿಮುಕ್ತನಾಗುತ್ತಾನೆ । **ಅತಮಾನಂ ಚಿತ್**—ಸತತವಾಗಿ ಸಂಚರಿಸುವ ಜನರನ್ನೂ । **ಏತೋಃ**—ಅವರ ಸಂಚಾರದಿಂದ । **ಅರೀರಮತ್**—ನಿಲ್ಲಿಸುತ್ತಾನೆ । **ಅಹ್ಯರ್ಷೂಣಾಂ**—ಶತ್ರುಧರ್ಷಕರಾದ ಯೋಧರ ।

**ಅವಿಷ್ಯಾಂ**— ಯುದ್ಧಾಭಿಮುಖವಾದ ಗಮನೇಚ್ಛೆಯನ್ನೂ | **ನ್ಯಯಾನ್**—ತಡೆದು ನಿಲ್ಲಿಸುತ್ತಾನೆ | **ಸವಿತುಃ**— ಸೂರ್ಯನ | **ವ್ರತಂ ಅನು**—ಸಂಚಾರರೂಪವಾದ ಕರ್ಮದನಂತರ | **ಮೋಕೀ**—ರಾತ್ರಿಯು | **ಆಗಾತ್**— ಆವಿರ್ಭವಿಸುತ್ತದೆ.

॥ ಭಾವಾರ್ಥ ॥

ಸಂಚಾರಕರ್ಮವುಳ್ಳ ಸವಿತೃವು ಶೀಘ್ರಗಾಮಿಗಳಾದ ಕಿರಣಗಳಿಂದ ಮುಕ್ತನಾಗುತ್ತಾನೆ. ಸತತವಾಗಿ ಸಂಚರಿಸುವ ಜನರನ್ನೂ ಅವರ ಸಂಚಾರದಿಂದ ನಿಲ್ಲಿಸುತ್ತಾನೆ. ಶತ್ರುಧರ್ಷಕರಾದ ಯೋಧರ ಯುದ್ಧಾಭಿಮುಖವಾದ ಗಮನೇಚ್ಛೆಯನ್ನೂ ತಡೆದು ನಿಲ್ಲಿಸುತ್ತಾನೆ. ಸಂಚಾರರೂಪವಾದ ಕರ್ಮದನಂತರ ರಾತ್ರಿಯು ಆವಿರ್ಭವಿಸುತ್ತದೆ.

## English Translation.

The moving (Sun) is liberated by his rapid rays: verily he has stopped the traveller from his journey: he restrains the desire of warriors for combat, for night follows (the cessation of) the function of Savitri.

॥ ವಿಶೇಷವಿಷಯಗಳು ॥

ಇದುವರೆಗೆ ಸವಿತೃದೇವನ ವ್ರತದಿಂದ (ನಿಯಮದಿಂದ) ಜಗದ್ವ್ಯಾಪಾರಗಳು ನಡೆಯುತ್ತವೆಂದೂ ಜನರ ಸುಖಕ್ಕಾಗಿ ಸವಿತೃವಿನ ಉದಯವಾಗುವುದೆಂದೂ ಹೇಳಿ ಈಗ ಸವಿತೃವು ಅಸ್ತಂಗತನಾದಮೇಲೆ ಜಗದ್ವ್ಯಾಪಾರವೆಲ್ಲವೂ ನಿಂತು ಹೋಗಿ ರಾತ್ರಿಯು ಆವಿರ್ಭವಿಸುವುದೆಂದು ಋಷಿಯು ಆ ಋಕ್ಕಿನಲ್ಲಿ ವರ್ಣಿಸಿದಾನೆ.

**ಆಶುಭಿಃ—ಶೀಘ್ರಗಾಮಿಭಿಃ ರಶ್ಮಿಭಿಃ |** ಶೀಘ್ರವಾಗಿ ಪ್ರಸರಿಸುವ ರಶ್ಮಿಗಳಿಂದ ಎಂದರ್ಥವು. ಆಶು ಶಬ್ದವು ಅಶ್ವನಾಮಗಳಲ್ಲಿಯೂ (ನಿ. ೨-೨೭) ಕ್ಷಿಪ್ರನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಮತ್ತು ಆಶ ಇತಿ ಚ ಶು ಇತಿ ಚ ಕ್ಷಿಪ್ರನಾಮನೀ ಭವತಃ (ನಿ. ೬-೧) ಆಶವಃ ಕ್ಷಿಪ್ರಕಾರಿಣಃ (ನಿ. ೯-೯) ಎಂದು ನಿರ್ವಚನವನ್ನು ಹೇಳಿದ್ದಾರೆ. ಬಹುಬೇಗನೆ ಸರ್ವತ್ರ ವ್ಯಾಪಿಸಿ ಹರಡುವುದರಿಂದ ಆಶು ಶಬ್ದಕ್ಕೆ ಕಿರಣಗಳೆಂದು ಇಲ್ಲಿ ಅರ್ಥಮಾಡಿದೆ.

**ನೂನಂ**— ಈ ಶಬ್ದಕ್ಕೆ ಯಾಸ್ಕರು—

**ನೂನಮಿತಿ ವಿಚಿಕಿತ್ಸಾರ್ಥೀಯೋ ಭಾಷಾಯಾಮುಭಯಮನ್ವಧ್ಯಾಯಂ ವಿಚಿಕಿತ್ಸಾರ್ಥೀಯಶ್ಚ ಪದಪೂರಣಶ್ಚ ||** (ನಿ. ೧-೫)

**ನೂನಂ** ಎಂಬ ಶಬ್ದವು ವಿಚಿಕಿತ್ಸಾರ್ಥದಲ್ಲಿ ಎಂದರೆ ವಿವೇಕ ಪೂರ್ವಕವಾಗಿ ವಿಮರ್ಶೆಮಾಡಿ ನಿಶ್ಚಯವನ್ನು ಬೋಧಿಸುವುದರಲ್ಲಿ ಪ್ರಯುಕ್ತವಾಗುವುದು ಅಥವಾ ಪಾದಪೂರಣಕ್ಕಾಗಿಯೂ ಪ್ರಯುಕ್ತವಾಗುವುದು ಎಂದು ವಿವರಿಸಿದ್ದಾರೆ. **ನೂನಂ** ಎಂಬ ಪದವು ಛಂದಸ್ಸುಗಳಲ್ಲಲ್ಲದೆ ಬೇರೆ ಕಡೆಗಳಲ್ಲಿಯೂ ವಿಚಿಕಿತ್ಸಾರ್ಥದಲ್ಲಿ ಪ್ರಯುಕ್ತವಾಗಿರುವುದು. ಛಂದಸ್ಸಿನಲ್ಲಿ ವಿಚಿಕಿತ್ಸಾರ್ಥದಲ್ಲಿಯೂ ಪದಪೂರಣಾರ್ಥದಲ್ಲಿಯೂ ಪ್ರಯುಕ್ತವಾಗಿರುತ್ತದೆ ಎಂದು ವರ್ಣಿಸಿದ್ದಾರೆ. ನಿರುಕ್ತವ್ಯಾಖ್ಯಾಕಾರರಾದ ದುರ್ಗಾಚಾರ್ಯರು—**ವಿಚಿಕಿತ್ಸಾ ನಾಮ ವಿವೇಕಪೂರ್ವಕೋಽವಧಾರಣಾಭಿಪ್ರಾಯಃ**—ಸಂಶಯವು ಉಂಟಾಗುವ ಸನ್ನಿವೇಶಗಳಲ್ಲಿ ವಿಮರ್ಶೆಯಿಂದ ನಿಶ್ಚಯ ಮಾಡುವುದಕ್ಕೆ

ವಿಚಿಕಿತ್ಸಾ ಎಂದು ಹೆಸರು ಎಂದು ಹೇಳಿರುವರು. ಪ್ರಕೃತ ಋಕ್ಕಿನಲ್ಲಿ ಇದು ಪದಪೂರಣಾರ್ಥವಾಗಿ ಪ್ರಯುಕ್ತವಾಗಿದೆ. ಎಂದು ಭಾಷ್ಯಕಾರರು ಹೇಳಿರುವರು

**ಅತಮಾನಂ—ಅತ ಸಾತತ್ಯಗಮನೇ।** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಸದಾ ಕಾಲದಲ್ಲಿಯೂ ಸಂಚರಿಸುವ (ಅಥವಾ ಯಾವುದಾದರೂ ಒಂದು ಕೆಲಸಮಾಡುತ್ತಿರುವ) ಜನರನ್ನು ಎಂದರ್ಥವು.

**ಅಹ್ಯರ್ಷೂಣಾಂ ಅವಿಷ್ಯಾಂ—ಅಹಿಮಾಹಂತಾರಂ ಶತ್ರುಮರ್ಷಂತ್ಯಭಿಗಚ್ಛಂತೀತ್ಯಹ್ಯರ್ಷವಃ ತೇಷಾಮಪಿ ಗಮನೇಚ್ಛಾಂ।** ಅಹಿ ಎಂದರೆ ಕೊಲ್ಲಲು ಇಚ್ಛಿಸುತ್ತಿರುವ ಜನರು ಎಂದರೆ ಶತ್ರುಗಳು. ಆ ಶತ್ರುಗಳಿಗೆ ಎದುರಾಗಿ ಮುನ್ನುಗ್ಗಿ ಹೋಗುವ ಯೋಧರಿಗೆ ಅಹ್ಯರ್ಷವಃ ಎಂದು ಹೆಸರು. ಅವರುಗಳ ಗಮನೇಚ್ಛೆಯನ್ನು ಎಂದರೆ ಯುದ್ಧಮಾಡುವ ಆಸಕ್ತಿಯನ್ನು ಎಂದಭಿಪ್ರಾಯವು.

**ಯೋನ್ ಆಶುಭಿಶ್ಚಿತ್ ವಿ ಮುಚಾತಿ ಅತಮಾನಂ ಚಿತ್ ಏತೋಃ ಅರೀರಮತ್—ಗಚ್ಛನ್ ಸವಿತಾ ಶೀಘ್ರಗಾಮಿಭಿರಪಿ ರಶ್ಮಿಭಿಃ ವಿಮುಚ್ಯತೇ ನೂನಂ ಸತತಂ ಗಚ್ಛಂತಮಪಿ ಜನಂ ಗಮನಾತ್ ಉಪರಮಯತಿ।** ಪ್ರಾತಃಕಾಲದಿಂದ ಸಾಯಂಕಾಲದವರೆಗೂ ಸಂಚರಿಸತಕ್ಕ ಸವಿತೃವು (ಸೂರ್ಯನು) ತನ್ನ ರಶ್ಮಿಗಳಿಂದ ನಿವೃತ್ತನಾದ ಮೇಲೆ ಎಂದರೆ ಅಸ್ತಂಗತನಾದ ಮೇಲೆ ಸಂಚಾರಸ್ವಭಾವವುಳ್ಳ ಅಥವಾ ಕೆಲಸಕಾರ್ಯಗಳಲ್ಲಿ ಉದ್ಯುಕ್ತರಾಗಿರುವ ಜನರನ್ನೂ ಸಹ ಅವರವರ ಕಾರ್ಯಗಳನ್ನು ನಿಲ್ಲಿಸುವಂತೆ ಮಾಡುತ್ತಾನೆ. ಸವಿತೃವು (ಸೂರ್ಯನು) ಪ್ರಕಾಶಿಸುತ್ತಿರುವ ಹಗಲಿನಲ್ಲಿ ಜನರೆಲ್ಲರೂ ಸಂಚಾರದಲ್ಲಿಯೂ ಇತರ ಕಾರ್ಯಗಳಲ್ಲಿಯೂ ತೊಡಗಿರುತ್ತಾರೆ. ಸೂರ್ಯನು ಮುಳುಗಿದ ಮೇಲೆ ಕತ್ತಲೆಯಾಗುವುದರಿಂದ ಜನರು ಯಾವ ಕಾರ್ಯವನ್ನು ಮಾಡುವುದಕ್ಕೂ ಸಾಧ್ಯವಾಗುವುದಿಲ್ಲ, ಸುಮ್ಮನಿರಬೇಕಾಗುತ್ತದೆ ಎಂದಭಿಪ್ರಾಯವು.

**ಅಹ್ಯರ್ಷೂಣಾಂ ಅವಿಷ್ಯಾಂ ನಿ ಅಯೋನ್**—ಸೂರ್ಯನು ಅಸ್ತನಾದಾಗ ಜನರ ಸಂಚಾರಾದಿವ್ಯಾಪಾರಾದಿಗಳು ನಿಂತುಹೋಗುವುದಲ್ಲದೆ ಯುದ್ಧಾಪೇಕ್ಷಿಗಳಾದ ಯೋಧರೂ ಸಹ ತಾವು ಮಾಡುತ್ತಿರುವ ಯುದ್ಧವನ್ನು ನಿಲ್ಲಿಸುವರು. ಎಂದರೆ ಸವಿತೃವು ಅಸ್ತಂಗತನಾಗಿ ಕತ್ತಲೆಯಾಗುವುದರಿಂದ ಯುದ್ಧಕರ್ಮವು ನಿಂತುಹೋಗುವುದು ಎಂದಭಿಪ್ರಾಯವು.

**ಸವಿತುಃ ವ್ರತಂ ಅನು ಮೋಕೀ ಆಗಾತ್—ಮೋಕೀ** ಎಂಬ ಶಬ್ದವು ರಾತ್ರಿನಾಮಗಳಲ್ಲಿ ಪಠಿತವಾಗಿದೆ (ನಿ. ೨–೧೮) ಸವಿತೃವು (ಸೂರ್ಯನು) ತನ್ನ ಸಂಚಾರಕರ್ಮವನ್ನು ನಿಲ್ಲಿಸಿದನಂತರ ಎಂದರೆ ಅಸ್ತಂಗತನಾದ ಮೇಲೆ ರಾತ್ರಿಯು ಬರುವುದು ಎಂದಭಿಪ್ರಾಯವು.



॥ ಸಂಹಿತಾಪಾಠಃ ॥

**ಪುನಃ ಸಮವ್ಯದ್ವಿತತಂ ವಯಂತೀ ಮಧ್ಯಾ ಕರ್ತೋರ್ನ್ಯಧಾಚ್ಛಕ್ಮ ಧೀರಃ ।**

**ಉತ್ಸಂಹಾಯಾಸ್ಥಾದ್ವ್ಯೃ೧ತೂಂರದರ್ಧರರಮತಿಃ ಸವಿತಾ ದೇವ ಆಗಾತ್ ॥ ೪**

॥ ಪದಪಾಠಃ ॥

ಪುನರಿತಿ । ಸಂ । ಅವ್ಯತ್ । ವಿऽತತಂ । ವಯಂತೀ । ಮಧ್ಯಾ । ಕರ್ತೋಃ । ನಿ । ಅಧಾತ್ । ಶಕ್ಮ । ಧೀರಃ ।
ಉತ್ । ಸಂऽಹಾಯ । ಅಸ್ಥಾತ್ । ವಿ । ಋತೂನ್ । ಅದರ್ಧಃ । ಅರಮತಿಃ । ಸವಿತಾ । ದೇವಃ । ಆ ।
ಅಗಾತ್ ॥ ೪ ॥

॥ ಸಾಯಣಭಾಷ್ಯಂ ॥

ವಯಂತೀ ವಸ್ತ್ರಂ ವಯಂತೀ ನಾರೀವ ರಾತ್ರಿರ್ವಿತತಮಾಲೋಕಂ ಪುನಃ ಸಮವ್ಯತ್ । ಸಂವೇಷ್ಟಯತೇ । ಪುನಃಶಬ್ದಃ ಪೂರ್ವೇದ್ಯುರಪ್ಯೇವಮಕಾರ್ಷೀದಿತಿ ದ್ಯೋತಯತಿ । ಧೀರಃ ಪ್ರಜ್ಞೋऽಪಿ ಸರ್ವೋ ಲೋಕಃ ಕರ್ತೋಃ ಕ್ರಿಯಮಾಣಂ ಕರ್ಮ ॥ ಕರ್ತೋಃ ಕರ್ತವಾ ಇತಿ ತನ್ನಾಮಸು ಪಾಠಾತ್॥ ಶಕ್ಮ ಕರ್ತುಂ ಶಕ್ಯಮಪಿ ಮಧ್ಯಾ ಮಧ್ಯ ಉಪಕ್ರಾಂತಂ ಕರ್ಮಾಪರಿಸಮಾಪ್ಯೇತ್ಯರ್ಥಃ । ನ್ಯಧಾತ್ । ನಿಹಿತವಾನ್ । ಸವಿತರ್ಯುಪರತ ಇತಿ ಶೇಷಃ । ಸರ್ವೋ ಲೋಕಃ ಸಂಹಾಯ ಶಯ್ಯಾಂ ವಿಹಾಯೋದಸ್ಥಾತ್ । ಅವಶಿಷ್ಟಂ ಕರ್ಮ ಕರ್ತುಂ ಪುನರುತ್ತಿಷ್ಠತಿ ॥ ಸಂಪೂರ್ವೋ ಜಹಾತಿಃ ಶಯ್ಯಾಪರಿತ್ಯಾಗೇ ವರ್ತತೇ । ತಥಾ ಚ ಶ್ರೂಯತೇ । ಕಲಿಃ ಶಯಾನೋ ಭವತಿ ಸಂಜಿಹಾನಸ್ತು ದ್ವಾಪರಃ । ಐ. ಬ್ರಾ. ೭-೧೫। ಇತಿ । ಸವಿತಾ ಸರ್ವಸ್ಯ ಪ್ರಸವಿತಾ ಸೂರ್ಯೋऽರಮತಿರನುಪರತಿರ್ದೇವೋ ದ್ಯೋತಮಾನ ಆಗಾತ್ । ಆಗಚ್ಛತಿ । ಉದೇತೀತಿ ಯಾವತ್ । ಋತೂನ್ ಕಾಲವಿಶೇಷಾಂಶ್ಚ ವ್ಯದರ್ಧಃ । ವಿದಾರಯತಿ ॥

॥ ಪ್ರತಿಪದಾರ್ಥ ॥

**ವಯಂತೀ**—ವಸ್ತ್ರವನ್ನು ಹೆಣೆಯುವ ಸ್ತ್ರೀಯಂತೆ । **ವಿತತಂ**—ವಿಸ್ತೃತವಾದ ಲೋಕವನ್ನು । **ಪುನಃ**—ತಿರುಗಿಯೂ । **ಸಮವ್ಯತ್**— (ರಾತ್ರಿಯು) ಆವರಿಸುತ್ತದೆ । **ಧೀರಃ**—ಪ್ರಜ್ಞಾವಂತನು (ಲೋಕವು) । **ಕರ್ತೋಃ**—ಮಾಡಬೇಕಾದ ಕರ್ಮದಿಂದ । **ಶಕ್ಮ**—ಕಾರ್ಯವನ್ನು ಮಾಡುವ ಶಕ್ತಿಯಿದ್ದರೂ ಸಹ । **ಮಧ್ಯಾ**—ಕಾರ್ಯದ ಮಧ್ಯದಲ್ಲಿಯೇ । **ನ್ಯಧಾತ್**—ನಿಲ್ಲಿಸುತ್ತಾನೆ (ಪುನಃ ಸವಿತೃವಿನ ಉದಯಾನಂತರ) । **ಸಂಹಾಯ**—ಶಯ್ಯೆಯನ್ನು ಬಿಟ್ಟು । **ಉತ್ ಅಸ್ಥಾತ್**—ಮೇಲೇಳುತ್ತಾನೆ । **ಸವಿತಾ**—ಲೋಕಕ್ಕೆ ಪ್ರಸವಿತೃವಾದ ಸೂರ್ಯನು। **ಅರಮತಿಃ**—ಕೊಂಚವೂ ನಿಲುವಿಲ್ಲದೇ । **ದೇವಃ**—ಪ್ರಕಾಶಮಾನನಾಗಿ । **ಅಗಾತ್**—ಪುನಃ ಆವಿರ್ಭವಿಸುತ್ತಾನೆ । **ಋತೂನ್**—ಕಾಲವಿಶೇಷಗಳನ್ನು । **ವಿ ಅದರ್ಧಃ**—ಬಿಡಿಸಿ ವಿಭಾಗಮಾಡುತ್ತಾನೆ.

॥ ಭಾವಾರ್ಥ ॥

ವಸ್ತ್ರವನ್ನು ಹೆಣೆಯುವ ಸ್ತ್ರೀಯಂತೆ ರಾತ್ರಿಯು ವಿಸ್ತೃತವಾದ ಲೋಕವನ್ನು ಪುನಃ ಆವರಿಸುತ್ತದೆ. ಪ್ರಜ್ಞಾವಂತನು ತನಗೆ ಕಾರ್ಯಮಾಡುವ ಶಕ್ತಿಯಿದ್ದರೂ ಸಹ ರಾತ್ರಿಯು ಆಗಮಿಸಿದನಂತರ ಕಾರ್ಯವನ್ನು ಅರ್ಧದಲ್ಲಿಯೇ ನಿಲ್ಲಿಸುತ್ತಾನೆ. ಪುನಃ ಸವಿತೃವಿನ ಉದಯಾನಂತರ ಶಯ್ಯೆಯನ್ನು ಬಿಟ್ಟು ಮೇಲೇಳುತ್ತಾನೆ. ಲೋಕಕ್ಕೆ ಪ್ರಸವಿತೃವಾದ ಸೂರ್ಯನು ಕೊಂಚವೂ ನಿಲುವಿಲ್ಲದೆ ಪ್ರಕಾಶಮಾನನಾಗಿ ಪುನಃ ಆವಿರ್ಭವಿಸುತ್ತಾನೆ. ಕಾಲವಿಶೇಷಗಳನ್ನು ಬಿಡಿಸಿ ವಿಭಾಗಮಾಡುತ್ತಾನೆ.

## English Translation

She, (Night) enwarps the extended (world) like (a woman) weaving (a garment): the prudent man lays aside the work he is able (to execute) iu the midst (of his labour); but all spring up (from repose) when the divine, unwearied Sun, who has divided the seasons, again appears.

॥ ವಿಶೇಷವಿಷಯಗಳು ॥

ಈ ಋಕ್ಕಿನಯೂ ಸಹ ರಾತ್ರಿಯು ಪ್ರಾಪ್ತವಾದ ಕೂಡಲೇ ಜನರ ವ್ಯವಹಾರವ್ಯಾಪಾರಾದಿಗಳೆಲ್ಲವೂ ಅರ್ಧದಲ್ಲಿಯೇ ನಿಂತು ಹೋಗುವವೆಂದೂ, ಸೂರ್ಯನ ಉದಯಾನಂತರ ಮತ್ತೆ ಮುಂದುವರೆಯುವುದೆಂದೂ ಉಕ್ತವಾಗಿದೆ.

**ವಯಂತೀ ವಿತತಂ ಪುನಃ ಸಮವ್ಯತ್—ವಸ್ತ್ರಂ ವಯಂತೀ ನಾರೀವ ರಾತ್ರಿಃ ಆಲೋಕಂ ಪುನಃ ಸಂವೇಷ್ಟಯತೇ ।** ವಸ್ತ್ರವನ್ನು ನೇಯುತ್ತಿರುವ ಸ್ತ್ರೀಯು ವಸ್ತ್ರದಿಂದ ಎಲ್ಲವನ್ನೂ ಮುಚ್ಚುವಂತೆ ರಾತ್ರಿಯು ಮತ್ತೆ ಎಂದರೆ ಹಿಂದಿನದಿನದಂತೆ ಈ ದಿನವೂ ಕೂಡ ಕತ್ತಲೆಯಿಂದ ಸಮಸ್ತ ಲೋಕವನ್ನೂ ವ್ಯಾಪಿಸುವುದು. ಸೂರ್ಯನು ಮುಳುಗಿದ ನಂತರ ಎಲ್ಲೆಲ್ಲಿಯೂ ಕತ್ತಲೆ ಕವಿದು ರಾತ್ರಿಯಾಗುವುದು. ಇಂತಹ ಕತ್ತಲೆಯಿಂದ ಕೂಡಿದ ರಾತ್ರಿ ಕಾಲದಲ್ಲಿ ಜನರಿಗೆ ಕಣ್ಣುಕಾಣಿಸದಿರುವುದರಿಂದ ಯಾವ ಕಾರ್ಯವನ್ನೂ ಮಾಡಲಾಗುವುದಿಲ್ಲ. ಕತ್ತಲೆಯಾಗುವ ವರೆಗೆ ಎಷ್ಟು ಕೆಲಸವಾಗಿರುವುದೋ ಅಷ್ಟಕ್ಕೆ ನಿಲ್ಲಿಸಬೇಕಾಗಿರುವುದು.

**ಧೀರಃ ಕರ್ತೋಃ ಶಕ್ಮ ಮಧ್ಯಾ ನ್ಯಧಾತ್ ಸಂಹಾಯ ಉತ್ ಅಸ್ಥಾತ್— ಸವಿತರ್ಯುಪರತೇ ಸತಿ ಪ್ರಜ್ಞೋಽಪಿ ಸರ್ವೋ ಲೋಕಃ ಕ್ರಿಯಮಾಣಂ ಕರ್ಮ ಕರ್ತುಂ ಶಕ್ಯಮಪಿ ಮಧ್ಯೇ ಉಪಕ್ರಾಂತಂ ಕರ್ಮಾಪರಿಸಮಾಪ್ಯ ನಿಹಿತವಾನ್ । ತತಃ ಸವಿತುರುದಯಾನಂತರಂ ಸರ್ವೋ ಲೋಕಃ ಶಯ್ಯಾಂ ವಿಹಾಯ ಅವಶಿಷ್ಟಂ ಕರ್ಮ ಕರ್ತುಂ ಪುನರುತ್ತಿಷ್ಠತಿ ।** ಸವಿತೃದೇವನು ಅಸ್ತನಾದಕೂಡಲೆ ಕತ್ತಲೆ ಕವಿಯುವು ದರಿಂದ ಕೆಲಸಮಾಡುವ ಮನುಷ್ಯನು ಎಷ್ಟೇ ಬುದ್ಧಿವಂತನಾಗಿದ್ದರೂ ಕತ್ತಲಲ್ಲಿ ಕೆಲಸಮಾಡಲು ಸಾಧ್ಯವಿಲ್ಲದೆ ಅರ್ಧಾಂತಕವಾಗಿರುವ ಕೆಲಸವನ್ನು ಮಧ್ಯದಲ್ಲಿಯೇ ನಿಲ್ಲಿಸುವನು. ಪುನಃ ಸೂರ್ಯನು ಉದಯವಾದ ಮೇಲೆ ಹಾಸಿಗೆಯಿಂದೆದ್ದು ಪೂರ್ತಿಯಾಗದೆ ಹಾಗೆಯೇ ಉಳಿದಿದ್ದ ಕೆಲಸವನ್ನು ಪೂರ್ತಿಮಾಡಲು ಪ್ರಾರಂಭಮಾಡುವನು. ಎಂದರೆ ಲೋಕದಲ್ಲಿರುವ ಜನರು ಸೂರ್ಯಾಸ್ತಮವಾದ ಮೇಲೆ ಅವರವರು ಮಾಡುತ್ತಿದ್ದ ಕೆಲಸಗಳನ್ನು ಕತ್ತಲೆಯಲ್ಲಿ ಮಾಡಲಾರದೆ ಮಧ್ಯದಲ್ಲಿಯೇ ನಿಲ್ಲಿಸಿ ಸೂರ್ಯೋದಯಾನಂತರ ಬೆಳಕಾಗಿರುವ ಹಗಲು ಹೊತ್ತಿನಲ್ಲಿ ಹಿಂದೆ ನಿಲ್ಲಿಸಿದ್ದ ಕೆಲಸಗಳನ್ನು ಮುಂದುವರಿಸಿ ಪೂರ್ತಿಮಾಡುವರು ಎಂದಭಿಪ್ರಾಯವು.

**ಸವಿತಾ ಅರಮತಿಃ ದೇವಃ ಆಗಾತ್—ಸರ್ವಸ್ಯ ಪ್ರಸವಿತಾ ಸೂರ್ಯಃ ಅನುಪರತಿಃ ದ್ಯೋತಮಾನ ಆಗಚ್ಛತಿ ।** ಸಮಸ್ತ ಜಗತ್ತಿಗೂ ಉತ್ಪತ್ತಿಸ್ಥಾನವಾದ ಸವಿತೃದೇವನು ಯಾವಾಗಲೂ ವಿರಾಮವನ್ನು ಹೊಂದದೆ ಪ್ರಕಾಶಿಸುತ್ತಾ ಪುನಃ ಪುನಃ ಎಂದರೆ ಪ್ರತಿದಿವಸದಲ್ಲಿಯೂ ಬರುತ್ತಾನೆ ಎಂದರೆ ಉದಯವಾಗುತ್ತಾನೆ. ಲೋಕದಲ್ಲಿ ಜನರು ಪ್ರತಿದಿವಸವೂ ಕೆಲಸಮಾಡುತ್ತಿದ್ದರೆ ಆಗಾಗ ವಿರಾಮವನ್ನಪೇಕ್ಷಿಸುವರು. ಆದರೆ- ಸವಿತೃದೇವನು

ಪ್ರತಿದಿವಸವೂ ತಪ್ಪದೆ ಸಂಚಾರ ಮಾಡುತ್ತಿದ್ದರೂ ಅವನಿಗೆ ವಿರಾಮವೆಂಬುದೇ ಇಲ್ಲ. ಹಿಂದಿನ ದಿನಗಳಲ್ಲಿ ಉದಯವಾದಂತೆ ಮುಂದೆಯೂ ತಪ್ಪದೆ ಉದಯವಾಗುವನು ಎಂದು ಮುಖ್ಯಾಭಿಪ್ರಾಯವು.

**ಋತೂನ್ ವಿ ಅದರ್ಧಃ—ಕಾಲವಿಶೇಷಾಂಶ್ಚ ವಿದಾರಯತಿ** | ಋತುವೆಂದರೆ ಕಾಲವಿಶೇಷವೆಂದು ಹಿಂದೆಯೇ ಹೇಳಿದೆ. ಸವಿತೃದೇವನು ತಪ್ಪದೆ ಪ್ರತಿದಿನವೂ ಉದಯವಾಗುತ್ತಿರುವುದರಿಂದ ಇವನ ಉದಯಾಸ್ತಮಗಳಿಂದ ಸಂವತ್ಸರದ ವಿಭಾಗಗಳಾದ ಋತು, ಮಾಸ, ಪಕ್ಷ, ದಿನ ಮೊದಲಾದವುಗಳನ್ನು ತಿಳಿಯಬಹುದು. ಆದುದರಿಂದ ಸವಿತೃವು ಕಾಲದ ವಿಭಾಗಗಳನ್ನು ಮಾಡುವನೆಂದು ಇಲ್ಲಿ ಹೇಳಿದೆ.



॥ ಸಂಹಿತಾಪಾಠಃ ॥

**ನಾನೌಕಾಂಸಿ ದುರ್ಯೋ ವಿಶ್ವಮಾಯುರ್ವಿ ತಿಷ್ಠತೇ ಪ್ರಭವಃ ಶೋಕೋ ಅಗ್ನೇಃ।**

**ಜ್ಯೇಷ್ಠಂ ಮಾತಾ ಸೂನವೇ ಭಾಗಮಾಧಾದನ್ವಸ್ಯ ಕೇತಮಿಷಿತಂ ಸವಿತ್ರಾ ॥ ೫ ॥**

॥ ಪದಪಾಠಃ ॥

**ನಾನಾ । ಓಕಾಂಸಿ । ದುರ್ಯಃ । ವಿಶ್ವಂ । ಆಯುಃ । ವಿ । ತಿಷ್ಠತೇ । ಪ್ರಽಭವಃ । ಶೋಕಃ । ಅಗ್ನೇಃ ।**

**ಜ್ಯೇಷ್ಠಂ । ಮಾತಾ । ಸೂನವೇ । ಭಾಗಂ । ಆ । ಅಧಾತ್ । ಅನು । ಅಸ್ಯ । ಕೇತಂ । ಇಷಿತಂ । ಸವಿತ್ರಾ ॥**

॥ ಸಾಯಣಭಾಷ್ಯಂ ॥

**ಪ್ರಭವಃ ಪ್ರಭೂತೋಽಗ್ನೇಃ ಶೋಕಸ್ತೇಜೋ ದುರ್ಯೋ ಗೃಹ್ಯೋ ಗೃಹೇ ಭವೋ ನಾನೌಕಾಂಸಿ ಯಜಮಾನಾನಾಂ ಪೃಥಗ್ಭೂತಾನ್ಗೃಹಾನ್ವಿತಿಷ್ಠತೇ । ಅಧಿತಿಷ್ಠತಿ । ವಿಶ್ವಮಾಯುಃ ಸರ್ವಮನ್ನಂ ಚಾಧಿತಿಷ್ಠತಿ ॥ ಆಯುಃ ಸೂನೃತೇತ್ಯನ್ನನಾಮಸು ಪಾಠಾತ್ ॥ ಮಾತೋಷಾಃ ಸವಿತ್ರಾನ್ವಿಷಿತಂ ಪ್ರೇಷಿತಮಸ್ಯ ಕೇತಂ ಪ್ರಜ್ಞಾಪಕಮಗ್ನೇರ್ಜ್ಯೇಷ್ಠಂ ಪ್ರಥಮಮಗ್ನಿಹೋತ್ರಾಖ್ಯಂ ಭಾಗಂ ಸೂನವೇಽಗ್ನಯೆ ಆಧಾತ್ । ಆದಧಾತಿ ॥**

॥ ಪ್ರತಿಪದಾರ್ಥ ॥

**ದುರ್ಯಃ**—ಗೃಹಸಂಬಂಧಿಯಾದ | **ಅಗ್ನೇಃ ಶೋಕಃ**—ಅಗ್ನಿಯ ತೇಜಸ್ಸು | **ಪ್ರಭವಃ**—ಪ್ರಭೂತವಾಗಿ | **ನಾನಾ ಓಕಾಂಸಿ**—ಅನೇಕ ಯಜ್ಞಗೃಹಗಳಲ್ಲಿ | **ವಿ ತಿಷ್ಠತೇ**—ಪ್ರಸರಿಸಿ ಆಕ್ರಮಿಸುತ್ತದೆ | **ವಿಶ್ವಂ ಆಯುಃ**—ಸಕಲವಾದ ಅನ್ನಕ್ಕೂ (ಅಧಿಪತಿಯಾಗಿರುತ್ತದೆ) | **ಮಾತಾ**—ಮಾತೆಯಾದ ಉಷಸ್ಸು | **ಸವಿತ್ರಾ**—ಸವಿತೃವಿನಿಂದ | **ಅನು ಈಷಿತಂ**—ಪ್ರೇಷಿತವಾದುದೂ | **ಅಸ್ಯ ಕೇತಂ**—ಈ ಅಗ್ನಿಯ ಪ್ರಜ್ಞಾಪಕವಾದುದೂ | **ಜ್ಯೇಷ್ಠಂ**—ಪ್ರಥಮವೂ ಆದ ಅಗ್ನಿಹೋತ್ರಾಖ್ಯವಾದ | **ಭಾಗಂ**—ಭಾಗವನ್ನು | **ಸೂನವೇ**—ಪುತ್ರನಾದ ಅಗ್ನಿಗೆ | **ಆಧಾತ್**—ಕಲ್ಪಿಸಿದ್ದಾಳೆ.

॥ ಭಾವಾರ್ಥ ॥

ಗೃಹಸಂಬಂಧಿಯಾದ ಅಗ್ನಿಯ ತೇಜಸ್ಸು ಅನೇಕ ಯಜ್ಞಗೃಹಗಳಲ್ಲಿ ಪ್ರಭೂತವಾಗಿ ಪ್ರಸರಿಸಿ ಆಕ್ರಮಿಸುತ್ತದೆ. ಸಕಲವಾದ ಅನ್ನಕ್ಕೂ ಅಧಿಪತಿಯಾಗಿರುತ್ತದೆ. ಮಾತೆಯಾದ ಉಷಸ್ಸು ಸವಿತೃವಿನಿಂದ ಪ್ರೇಷಿತವಾದುದೂ, ಈ ಅಗ್ನಿಯ ಪ್ರಜ್ಞಾಪಕವಾದುದೂ, ಪ್ರಥಮವೂ, ಆದ ಅಗ್ನಿಹೋತ್ರಾಖ್ಯವಾದ ಭಾಗವನ್ನು ಪುತ್ರನಾದ ಅಗ್ನಿಗೆ ಕಲ್ಪಿಸಿದ್ದಾಳೆ.

English Translation.

The engendered domestic radiance of Agni spreads through various dewellings, and presides over all (sorts of sacrificial) food : the mother, (Dawn), has assigned to her son, (Agni), the best portion (at sacrifices), which is the manifestation of him imparted by Savitri.

॥ ವಿಶೇಷವಿಷಯಗಳು ॥

ರಾತ್ರಿಕಾಲವು ಕಳೆದು ಸವಿತೃವು ಉದಯವಾಗುತ್ತಿರುವ ಪ್ರಾತಃಕಾಲದ ವರ್ಣನೆಯು ಈ ಋಕ್ಕಿನಲ್ಲಿ ವಿವರಿಸಲ್ಪಟ್ಟಿದೆ.

**ಓಕಾಂಸಿ—ಯಜಮಾನಾನಾಂ ಪೃಥಗ್ಭೂತಾನ್ ಗೃಹಾನ್ ।** ಅನೇಕ ಯಜಮಾನರ ಬೇರೆಬೇರೆಯಾದ ಮನೆಗಳನ್ನು ; ಯಾಸ್ಕರು ಓಕ ಇತಿ ನಿವಾಸನಾಮೋಚ್ಯತೇ (ನಿ. ೩-೩) ಓಕವೆಂದರೆ ವಾಸಮಾಡುವ ಮನೆಗೆ ಹೆಸರು ಎಂದು ನಿರ್ವಚನವನ್ನು ಹೇಳಿದಾರೆ. ಅನೇಕ ಯಜಮಾನರು ಏಕಕಾಲದಲ್ಲಿ ಎಂದರೆ ಪ್ರಾತಃಕಾಲದಲ್ಲಿ ಅವರವರ ಪ್ರತ್ಯೇಕವಾದ ಮನೆಗಳಲ್ಲಿ ಯಜ್ಞಮಾಡುವುದರಿಂದ **ನಾನಾ ಓಕಾಂಸಿ** ಅನೇಕ ಮನೆಗಳನ್ನು ಎಂದು ಬಹುವಚನೋಕ್ತಿ ಇರುವುದು.

**ದುರ್ಯಃ—**ದುರ್ಯಶಬ್ದವು ಗೃಹನಾಮಗಳಲ್ಲಿ ಪಠಿತವಾಗಿದೆ (ನಿ.-೧೩) **ಗೃಹ್ಯೋ ಗೃಹೇ ಭವಃ—**ಯಜಮಾನರ ಮನೆಯಲ್ಲಿ ಪ್ರತಿಷ್ಠಿತನಾಗಿರುವ ಅಗ್ನಿಯನ್ನು ಇಲ್ಲಿ ದುರ್ಯಶಬ್ದದಿಂದ ವರ್ಣಿಸಿದೆ

**ಆಯುಃ—** ಆಯುಃಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ಆಯುವೆಂದರೆ ಜೀವಿತಕಾಲವೆಂದೂ ಅರ್ಥವಾಗಬಹುದು.

**ಶೋಕಃ—ಶುಚ ದೀಪ್ತೌ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಪ್ರಕಾಶ, ತೇಜಸ್ಸು ಎಂದರ್ಥವು.

**ಜ್ಯೇಷ್ಠಂ—ಪ್ರಥಮಮಗ್ನಿಹೋತ್ರಾಖ್ಯಂ ।** ಪ್ರಾತಃಕಾಲದಲ್ಲಿ ಎಲ್ಲಾ ಕರ್ಮಗಳಿಗಿಂತಲೂ ಮೊದಲು ಮಾಡುವ ಅಗ್ನಿಹೋತ್ರವೆಂಬ ಕರ್ಮ ಎಂದು ಭಾಷ್ಯಕಾರರ ವಿವರಣೆಯು.

**ಮಾತಾ ಸೂನವೇ ಭಾಗಂ—**ಇಲ್ಲಿ ಉಷೋದೇವತೆಯನ್ನು ಅಗ್ನಿಯ ಮಾತೆಯೆಂದು ಹೇಳಿದೆ. ಉಷಃಕಾಲಾನಂತರ ಅಗ್ನಿಯನ್ನು ಪ್ರತಿಷ್ಠಿಸಿ ಹೋಮಾದಿಗಳನ್ನು ಮಾಡುವುದರಿಂದ ಅಗ್ನಿಗೆ ಉಷಸ್ಸು ತಾಯಿಯೆಂದು ವರ್ಣಿಸಿದೆ.

**ದುರ್ಯಃ ಅಗ್ನೇಃ ಶೋಕಃ ಪ್ರಭವಃ ನಾನಾ ಓಕಾಂಸಿ ವಿ ತಿಷ್ಠತೇ—ಗೃಹಸಂಬಂಧಿ ಅಗ್ನೇಸ್ತೇಜಃ ಯಜಮಾನಾನಾಂ ಪೃಥಗ್ಭೂತಾನ್ ಗೃಹಾನ್ ಅಧಿತಿಷ್ಠತಿ ।** ಪ್ರಾತಃಕಾಲದಲ್ಲಿ ಯಜ್ಞಮಾಡುವ ಅನೇಕ ಯಜಮಾನರು ತಮ್ಮ ತಮ್ಮ ಮನೆಗಳಲ್ಲಿ ಪ್ರತ್ಯೇಕವಾಗಿ ಅಗ್ನಿಯನ್ನು ಪ್ರತಿಷ್ಠಿಸಿ ಅಗ್ನಿಹೋತ್ರಾದಿ ಕರ್ಮಗಳನ್ನು ಆಚರಿಸುವರು. ಯಜ್ಞಮಾಡುವ ಯಜಮಾಸರು ಬಹಳ ಮಂದಿ ಇರುವುದರಿಂದ ಅವರ ಮನೆಗಳೂ ಅನೇಕ ವಾಗಿರುವವು. ಇಷ್ಟು ಮನೆಗಳಲ್ಲಿಯೂ ಅಗ್ನಿಯು ಏಕಕಾಲದಲ್ಲಿ ಪ್ರತಿಷ್ಠಿತನಾಗಿ ತನ್ನ ತೇಜಸ್ಸಿನಿಂದ ಬೆಳಗುತ್ತಾ ಇಪುವನು. ಹೀಗೆ ಏಕಕಾಲದಲ್ಲಿ ಅನೇಕ ಗೃಹಗಳಲ್ಲಿ ತೇಜಸ್ಸಿನಿಂದ ಬೆಳಗುವುದು ಅಗ್ನಿಯ ಮಹಿಮೆಯು ಎಂದು ಇಲ್ಲಿ ವರ್ಣಿಸಿದೆ.

**ವಿಶ್ವಂ ಆಯುಃ—ಸರ್ವಮನ್ನಂ ಚಾಧಿತಿಷ್ಠತಿ ।** ಯಜಮಾನರಿಗೂ, ಋತ್ವಿಗ್ಜನರಿಗೂ ತನ್ನನ್ನು ಸ್ತೋತ್ರಮಾಡುವವರಿಗೂ ಅಗ್ನಿಯು ಅನ್ನಪ್ರದನಾಗಿರುವುದರಿಂದ ಸಮಸ್ತವಾದ ಅನ್ನಾದ್ಯಾಹಾರಗಳಿಗೆ ಅಗ್ನಿಯು ಅಧಿಪತಿಯಾಗಿರುವನು ಎಂದು ವರ್ಣಿಸಿದೆ.

**ಮಾತಾ ಸವಿತ್ರಾ ಅನು ಈಷಿತಂ ಅಸ್ಯ ಕೇತಂ ಜ್ಯೇಷ್ಠಂ ಭಾಗಂ ಸೂನವೇ ಆಧಾತ್—ಉಷಾಃ ಸವಿತ್ರಾ ಪ್ರೇಷಿತಂ ಪ್ರಜ್ಞಾಪಕಮಗ್ನೇಃ ಪ್ರಥಮಮಗ್ನಿಹೋತ್ರಾಖ್ಯಂ ಭಾಗಂ ಸೂನವೇಽಗ್ನಯೇ ಆದಧಾತಿ ।** ಸವಿತೃದೇವನ ಆಜ್ಞೆಯಿಂದ ಅಗ್ನಿಗೆ ಮಾತೆಯಾದ ಎಂದರೆ ಅಗ್ನಿಗೆ ಪೂರ್ವದಲ್ಲಿಯೇ ಉದಯಿಸುವ ಉಷೋದೇವಿಯು ತನ್ನ ಪುತ್ರನಾದ ಅಗ್ನಿಗೆ ಯಜಮಾನರು ಪ್ರಾತಃಕಾಲದಲ್ಲಿ ಆಚರಿಸುವ ಅಗ್ನಿಹೋತ್ರಾದಿ ಕರ್ಮಗಳಲ್ಲಿ ಮೊದಲನೆಯ ಭಾಗವನ್ನೇ ಅರ್ಪಿಸುವಂತೆ ಕಲ್ಪಿಸಿರುವಳು. ಉಷಸ್ಸಿನ ಪ್ರಾದುರ್ಭಾವಾನಂತರ ಪ್ರಾಪ್ತವಾಗುವ ಪ್ರಾತಃಕಾಲದಲ್ಲಿ ಯಜಮಾನರು ಅಗ್ನಿಯನ್ನು ಪ್ರತಿಷ್ಠಿಸುವರು. ಆದುದರಿಂದ ಅಗ್ನಿಪ್ರತಿಷ್ಠಾಪನೆಗಿಂತ ಮೊದಲೇ ಉಷಃಕಾಲವು ಪ್ರಾಪ್ತವಾಗುವುದರಿಂದ ಉಷೋದೇವತೆಯು ಅಗ್ನಿಗೆ ತಾಯಿಯೆಂದು ಹೇಳಲ್ಪಟ್ಟಿದೆ. ತಾಯಿಯಾದ ವಳು ಪುತ್ರನಿಗೆ ಹಿತವನ್ನು ಬಯಸುವುದು ಸಹಜವಷ್ಟೆ. ಅದರಂತೆ ಯಜಮಾನರು ಪ್ರಾತಃಕಾಲವಾದ ಕೂಡಲೆ ನೆರವೇರಿಸುವ ಅಗ್ನಿಹೋತ್ರಾದಿಕರ್ಮಗಳಲ್ಲಿ ಅಗ್ನಿಗೆ ಪ್ರಥಮಾಹುತಿಯನ್ನು ಅರ್ಪಿಸುವಂತೆ ಉಷೋದೇವತೆಯು ಕಲ್ಪಿಸಿರುವಳು ಎಂದೂ ಈ ರೀತಿ ಉಷೋದೇವಿಯು ಕಲ್ಪಿಸುವ ಕಾರ್ಯವು ಸವಿತೃದೇವನಿಂದ ಪ್ರೇರಿತವಾದುದೆಂದೂ ಸವಿತೃವಿನ ಮಾಹಾತ್ಮ್ಯೆಯು ಇಲ್ಲಿ ವರ್ಣಿತವಾಗಿದೆ.



ಸಂಹಿತಾಪಾಠಃ ॥

**ಸಮಾವವರ್ತಿ ವಿಷ್ಠಿತೋ ಜಿಗೀಷುರ್ವಿಶ್ವೇಷಾಂ ಕಾಮಶ್ಚರತಾಮಮಾಭೂತ್ ।**

**ಶಶ್ವಾಁ ಅಪೋ ವಿಕೃತಂ ಹಿತ್ವ್ಯಾಗಾದನು ವ್ರತಂ ಸವಿತುರ್ದೈವ್ಯಸ್ಯ ॥ ೬ ॥**

॥ ಪದಪಾಠಃ ॥

ಸಂऽಅವವರ್ತಿ । ವಿऽಸ್ಥಿತಃ । ಜಿಗೀಷುಃ । ವಿಶ್ವೇಷಾಂ । ಕಾಮಃ । ಚರತಾಂ । ಅಮಾ । ಅಭೂತ್ ।

ಶಶ್ವಾನ್ । ಅಪಃ । ವಿऽಕೃತಂ । ಹಿತ್ವೀ । ಆ । ಅಗಾತ್ । ಅನು । ವ್ರತಂ । ಸವಿತುಃ । ದೈವ್ಯಸ್ಯ ॥ ೬ ॥

॥ ಸಾಯಣಭಾಷ್ಯಂ ॥

ಜಿಗೀಷುರ್ವಿಜಯೇಚ್ಛುರ್ಯೋದ್ಧಾ ವಿಷ್ಠಿತೋ ಯುದ್ಧಾರ್ಥಂ ಪ್ರಸ್ಥಿತಃ **ಸಮಾವವರ್ತಿ । ಸಮಾವರ್ತಯತಿ** । **ವಿಶ್ವೇಷಾಂ** ಸರ್ವೇಷಾಂ **ಚರತಾಂ** ಜಂಗಮಾನಾಮ**ಮಾ । ಅಮಾ** ದಮ ಇತಿ ಗೃಹನಾಮಸು ಪಾಠಾತ್ । ಗೃಹಂ ಪ್ರತಿ **ಕಾಮೋऽಭೂತ್ । ಭವತಿ । ಶಶ್ವಾನ್** ನಿತ್ಯಂ ಕರ್ಮರತೋऽಪಃ ಕರ್ಮ **ವಿಕೃತ**ಮರ್ಧಕೃತಂ **ಹಿತ್ವೀ** ಹಿತ್ವಾ**ಗಾತ್ । ಗೃಹಮಾಗಚ್ಛತಿ** । ಏತತ್ಸರ್ವಂ **ದೈವ್ಯಸ್ಯ** ದಿವಿ ಭವಸ್ಯ **ಸವಿತುಃ** ಪ್ರೇರಕಸ್ಯ ಸೂರ್ಯಸ್ಯ **ವ್ರತ**ಮಸ್ತಮಯಾಖ್ಯಂ ಕರ್ಮಾನು ಜಾಯತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಜಿಗೀಷುಃ**—ಜಯವನ್ನು ಪಡೆಯಲು ಇಚ್ಛೆಯುಳ್ಳ । **ವಿಷ್ಠಿತಃ**—ಯುದ್ಧಕ್ಕಾಗಿ ಹೊರಟಿರುವ ಯೋಧನು । **ಸಮಾವವರ್ತಿ**—ಹಿಂತಿರುಗುತ್ತಾನೆ । **ವಿಶ್ವೇಷಾಂ**—ಸಮಸ್ತವಾದುದೂ, **ಚರತಾಂ**—ಜಂಗಮಾತ್ಮಕವಾದುದೂ ಆದ ಪ್ರಾಣಿಗಳಿಗೆ । **ಅಮಾ**—ಗೃಹವು । **ಕಾಮಃ**—ಅಪೇಕ್ಷಿತವಾದ ಸ್ಥಾನವಾಗಿ । **ಅಭೂತ್**—ಆಗಿರುತ್ತದೆ । **ದೈವ್ಯಸ್ಯ**—ದ್ಯುಲೋಕೋತ್ಪನ್ನನಾದ । **ಸವಿತುಃ**—ಸೂರ್ಯನ । **ವ್ರತಂ**—ಅಸ್ತಮಯಾಖ್ಯವಾದ ಕರ್ಮವನ್ನು । **ಅನು**—ತಿಳಿದಾಗ । **ಶಶ್ವಾನ್**—ನಿತ್ಯವಾಗಿಯೂ ಕರ್ಮರತನಾಗಿರುವವನೂ ಸಹ । **ಅಪಃ**—ತನ್ನ ಕಾರ್ಯವನ್ನು । **ವಿಕೃತಂ**—ಅರ್ಧಕೃತವಾಗಿದ್ದರೂ । **ಹಿತ್ವೀ**—ಅಲ್ಲಿಗೇ ನಿಲ್ಲಿಸಿ । **ಆಗಾತ್**—ಮನೆಗೆ ಬರುತ್ತಾನೆ.

॥ ಭಾವಾರ್ಥ ॥

ಜಯವನ್ನು ಪಡೆಯಲು ಇಚ್ಛೆಯುಳ್ಳವನೂ, ಯುದ್ಧಕ್ಕಾಗಿ ಹೊರಟಿರುವವನೂ ಆದ ಯೋಧನು ಮನೆಗೆ ಹಿಂತಿರುಗುತ್ತಾನೆ. ಸಕಲ ಪ್ರಾಣಿಗಳಿಗೂ ಗೃಹವೇ ಅಭಿಮತವಾದ ಸ್ಥಾನವಾಗಿರುತ್ತದೆ. ದ್ಯುಲೋಕೋತ್ಪನ್ನನಾದ ಸೂರ್ಯನ ಅಸ್ತಮಯಾಖ್ಯವಾದ ಕರ್ಮವನ್ನು ತಿಳಿದಾಗ ನಿತ್ಯವಾಗಿಯೂ ಕರ್ಮರತನಾಗಿರುವವನೂ ಸಹ ತನ್ನ ಕಾರ್ಯವನ್ನು ಅರ್ಧಕೃತವಾಗಿದ್ದರೂ ಅಲ್ಲಿಗೇ ನಿಲ್ಲಿಸಿ ಮನೆಗೆ ಬರುತ್ತಾನೆ.

## English Translation.

The warrior, eager for victory, who has gone forth (to battle), turns back; (for) home is the desire of all moving beings: abandoning his half-wrought toil, the labourer returns (home) when the function of the divine Savitri ( is suspended).

॥ ವಿಶೇಷವಿಷಯಗಳು ॥

ಸವಿತೃವು (ಸೂರ್ಯನು) ಅಸ್ತಂಗತನಾದ ಮೇಲೆ ಜನರು ಮಾಡುತ್ತಿರುವ ಕಾರ್ಯಗಳನ್ನು ಎಷ್ಟು ಆಗಿದ್ದರೆ ಅಷ್ಟಕ್ಕೇ ನಿಲ್ಲಿಸಿ ತಮ್ಮ ಗೃಹಾಭಿಮುಖವಾಗಿ ಹಿಂತಿರುಗುವುದೆಂಬುದನ್ನು ಈ ಋಕ್ಕಿನಲ್ಲಿ ವರ್ಣಿಸಿದೆ.

**ಜಿಗೀಷುಃ ವಿಷ್ಠಿತಃ ನ್ಯಸವಾವವರ್ತಿ—ವಿಜಯೇಚ್ಛುಃ ಯೋದ್ಧಾ ಯುದ್ಧಾರ್ಥಂ ಪ್ರಸ್ಥಿತಃ ಸಮಾವರ್ತಯತಿ** । ಶತ್ರುಗಳೊಡನೆ ಯುದ್ಧಮಾಡಿ ಜಯಿಸಬೇಕೆಂದು ಹೊರಟಿರುವ ಭಟನು ಸಾಯಂಕಾಲವಾದ:ಕೂಡಲೇ ಯುದ್ಧವನ್ನು ನಿಲ್ಲಿಸಿ ಮನೆಗೆ ಹಿಂತಿರುಗುವನು. ಏಕೆಂದರೆ ಸೂರ್ಯನು ಮುಳುಗಿದ ಮೇಲೆ ಕತ್ತಲೆಯಾಗಿ ಏನೂ ಕಾಣಿಸದಿರುವುದರಿಂದ ಯಾವ ಕಾರ್ಯವನ್ನು ಮಾಡಲೂ ಸಾಧ್ಯವಿಲ್ಲ. ಆದುದರಿಂದ ಪ್ರಾರಂಭಿಸಿರುವ ಯುದಾದ್ಧಿ ಕಾರ್ಯಗಳನ್ನು ಅಷ್ಟಕ್ಕೇ ನಿಲ್ಲಿಸಿ ಗೃಹಾಭಿಮುಖನಾಗುವನು.

**ವಿಶ್ವೇಷಾಂ ಚರತಾಂ ಅಮಾ ಕಾಮಃ ಅಭೂತ್—ಸರ್ವೇಷಾಂ ಜಂಗಮಾನಾಂ ಪ್ರಾಣಿನಾಂ ಗೃಹಂ ಪ್ರತಿ ಕಾಮೋ ಭವತಿ** । **ಅಮಾ** ಎಂಬ ಶಬ್ದವು ಗೃಹನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩–೧೩) ಮನೆ ಎಂದರ್ಥವು. ಸೂರ್ಯಾಸ್ತಮಯವಾದನಂತರ ಸಂಚರಿಸುವ ಸ್ವಭಾವವುಳ್ಳ ಸಕಲಪ್ರಾಣಿಗಳೂ ತಮ್ಮ ತಮ್ಮ ಗೃಹ ಅಥವಾ ನಿವಾಸಸ್ಥಾನಕ್ಕೆ ಹೋಗಲು ಅಪೇಕ್ಷಿಸುತ್ತವೆ. ಹಗಲು ಹೊತ್ತಿನಲ್ಲಿ ಪ್ರಾಣಿಗಳೂ, ಜನರೂ ಸಹ ಅನ್ನಾದ್ಯಾಹಾರಗಳ ಸಂಪಾದನೆಗಾಗಿ ಅಥವಾ ಇತರ ಕರ್ತವ್ಯಕರ್ಮಗಳನ್ನು ಮಾಡುವುದಕ್ಕಾಗಿ ತಮ್ಮ ಮನೆಯನ್ನು ಬಿಟ್ಟು ನಾನಾಸ್ಥಳಗಲ್ಲಿ ಸಂಚರಿಸುತ್ತಾರೆ. ಸಾಯಂಕಾಲವಾಗಿ ಕತ್ತಲೆಯಾದ ಮೇಲೆ ಯಾವ ಕೆಲಸವನ್ನು ಮಾಡಲೂ ಸಾಧ್ಯವಿಲ್ಲದಿರುವಾಗ ಅವರು ವಿಶ್ರಾಂತಿಗಾಗಿ ತಮ್ಮ ತಮ್ಮ ನಿವಾಸಸ್ಥಾನಗಳಿಗೆ ಹೋಗಲು ಅಪೇಕ್ಷಿಸುವರು ಎಂದಭಿಪ್ರಾಯವು.

**ದೇವಸ್ಯ ಸವಿತುಃ ವ್ರತಂ ಅನು ಶಶ್ವಾನ್ ಅಪಃ ವಿಕೃತಂ ಹಿತ್ವೀ ಆಗಾತ್—ದಿವಿ ಭವಸ್ಯ ಸವಿತುಃ ಪ್ರೇರಕಸ್ಯ ಸೂರ್ಯಸ್ಯ ಅಸ್ತಮಯಾಖ್ಯಂ ಕರ್ಮ ಅನು ಅರ್ಧಕೃತಂ ಕರ್ಮ ಹಿತ್ವಾ ಗೃಹಮಾಗಚ್ಛತಿ** । ಸೂರ್ಯಾಸ್ತಮಯವಾದ ಮೇಲೆ ಕೆಲಸಮಾಡುತ್ತಿರುವ ಪುರುಷನು ತಾನು ಮಾಡುತ್ತಿರುವ ಕೆಲಸವನ್ನು ಅರ್ಧದಲ್ಲಿಯೇ ನಿಲ್ಲಿಸಿ ಹಿಂತಿರುಗಿ ಮನೆಗೆ ಬರುತ್ತಾನೆ. ಈ ರೀತಿ ಕೆಲಸವನ್ನು ಮುಗಿಸದೆ ಅರ್ಧದಲ್ಲಿಯೇ ಬಿಟ್ಟು ಬರುವುದು ಸವಿತೃದೇವನ ಅಸ್ತಮಯಾಖ್ಯಕರ್ಮದ (ನಿಯಮದ) ಮಹಿಮೆಯೇ ಆಗಿದೆಯೆಂದು ಮುಖ್ಯಾಭಿಪ್ರಾಯವು.



॥ ಸಂಹಿತಾಪಾಠಃ ॥

ತ್ವಯಾ ಹಿತಮಪ್ಯಮಪ್ಸು ಭಾಗಂ ಧನ್ವಾನ್ವಾ ಮೃಗಯಸೋ ವಿ ತಸ್ಥುಃ ।
ವನಾನಿ ವಿಭ್ಯೋ ನಕಿರಸ್ಯ ತಾನಿ ವ್ರತಾ ದೇವಸ್ಯ ಸವಿತುರ್ಮಿನಂತಿ ॥ ೭ ॥

॥ ಪದಪಾಠಃ ॥

ತ್ವಯಾ । ಹಿತಂ । ಅಪ್ಯಂ । ಅಪ್ऽಸು । ಭಾಗಂ । ಧನ್ವ । ಅನು । ಆ । ಮೃಗಯಸಃ । ವಿ । ತಸ್ಥುಃ ।
ವನಾನಿ । ವಿऽಭ್ಯಃ । ನಕಿಃ । ಅಸ್ಯ । ತಾನಿ । ವ್ರತಾ । ದೇವಸ್ಯ । ಸವಿತುಃ । ಮಿನಂತಿ ॥ ೭ ॥

॥ ಸಾಯಣಭಾಷ್ಯಂ ॥

ಹೇ ಸವಿತಸ್ತ್ವಯಾಪ್ಸ್ವಂತರಿಕ್ಷೇ ॥ ಆಪಃ ಪೃಥಿವೀತ್ಯಂತರಿಕ್ಷನಾಮಸು ಪಾಠಾತ್ ॥ ಜಲಾಧಾರೇ ವಾ ಹಿತಂ ನಿಹಿತಮಪ್ಯಮಪಾಂ ಸಂಬಂಧಿನಂ ಭಾಗಂ ಧನ್ವಾನು ನಿರ್ಜಲಪ್ರದೇಶೇಷ್ವರಣ್ಯೇಷು ಮೃಗಯಸೋ ಮೃಗಯಮಾಣಾ ಮೃಗಾ ಆ ಸಮಂತಾದ್ವಿತಸ್ಥುಃ । ಅಧಿತಿಷ್ಠಂತಿ । ಕಿಂಚ ವನಾನಿ ವೃಕ್ಷಾ ವಿಭ್ಯಃ ಪಕ್ಷಿಭ್ಯ ಆವಾಸಾದಿರೂಪೇಣ ತ್ವಯಾ ಭಾಗೋ ದತ್ತಃ । ಅಸ್ಯ ದೇವಸ್ಯ ಸವಿತುಸ್ತಾನಿ ತಾದೃಶಾನಿ ವ್ರತಾ ವ್ರತಾನಿ ಕರ್ಮಾಣಿ ನಕಿರ್ಮಿನಂತಿ । ಕೇऽಪಿ ನ ಹಿಂಸಂತಿ ॥

॥ ಪ್ರತಿಪದಾರ್ಥ ॥

(**ಸವಿತಃ**—ಎಲೈ ಸವಿತೃವೇ) । **ತ್ವಯಾ**—ನಿನ್ನಿಂದ । **ಅಪ್ಸು**—ಅಂತರಿಕ್ಷದಲ್ಲಿ । **ಹಿತಂ**—ನಿಹಿತವಾದುದೂ । **ಅಪ್ಯಂ**—ಉದಕಸಂಬಂಧವಾದುದೂ ಆದ । **ಭಾಗಂ**—ಭಾಗವನ್ನು । **ಧನ್ವಾನು**—ನಿರ್ಜಲವಾದ ಅರಣ್ಯಪ್ರದೇಶಗಳಲ್ಲಿ । **ಮೃಗಯಸಃ**—ಹುಡುಕತಕ್ಕ ಮೃಗಗಳು । **ಆ**—ಸುತ್ತಲೂ । **ವಿ ತಸ್ಥುಃ**—ಆಕ್ರಮಿಸಿ ನಿಂತಿವೆ । **ವನಾನಿ**—ವನವೃಕ್ಷಗಳು । **ವಿಭ್ಯಃ**—ಪಕ್ಷಿಗಳಿಗೆ (ಆವಾಸರೂಪವಾಗಿರುವಂತೆ ನೀನು ಕಲ್ಪಿಸಿದ್ದೀಯೆ) । **ಅಸ್ಯ ದೇವಸ್ಯ ಸವಿತುಃ**—ದೇವತಾತ್ಮಕನಾದ ಈ ಸವಿತೃವಿನ । **ತಾನಿ ವ್ರತಾ**—ಅಂತಹ ಅಸಾಧಾರಣವಾದ ಕರ್ಮಗಳನ್ನು । **ನಕಿಃ ಮಿನಂತಿ**—ಯಾರೂ ತಡೆಯಲಾರರು.

॥ ಭಾವಾರ್ಥ ॥

ಎಲೈ ಸವಿತೃವೇ, ಅಂತರಿಕ್ಷದಲ್ಲಿ ನಿನ್ನಿಂದ ನಿಹಿತವಾದುದೂ, ಉದಕಸಂಬಂಧವಾದುದೂ, ಆದ ಭಾಗವನ್ನು ನಿರ್ಜಲವಾದ ಅರಣ್ಯ ಪ್ರದೇಶಗಳಲ್ಲಿ ಹುಡುಕತಕ್ಕ ಮೃಗಗಳು ಸುತ್ತಲೂ ಆಕ್ರಮಿಸಿ ನಿಂತಿವೆ. ಪಕ್ಷಿಗಳಿಗೆ ವನವೃಕ್ಷಗಳು ಆವಾಸಭೂತವಾಗಿರುವಂತೆ ಕಲ್ಪಿಸಿದ್ದೀಯೆ. ದೇವತಾತ್ಮನಾದ ಈ ಸವಿತೃವಿನ ಅಸಾಧಾರಣವಾದ ಕರ್ಮಗಳನ್ನು ಯಾರೂ ತಡೆಯಲಾರರು.

English Translation.

The animals search in dry places for the watery element which has been collected in the firmament by you: the woods are assigned (by you) to the birds: no one obstructs these functions of the divine Savitri.

॥ ವಿಶೇಷವಿಷಯಗಳು ॥

**ಅಪ್ಯಂ—ಅಪಾಂ ಸಂಬಂಧಿನಂ ಭಾಗಂ**—ನೀರಿಗೆ ಸಂಬಂಧಪಟ್ಟ ಭಾಗ ಎಂದರೆ ನೀರಿನ ಪ್ರದೇಶ.

**ಅಪ್ಸು—ಅಂತರಿಕ್ಷೇ ।** ಆಪಃ ಪೃಥಿವೀ ಎಂಬ ಶಬ್ದಗಳು ಅಂತರಿಕ್ಷನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨—೧೦) ಅಪ್ಸು ಎಂದರೆ ಅಂತರಿಕ್ಷದಲ್ಲಿ ಎಂದರ್ಥವು.

**ಧನ್ವ**—ಧನ್ವಶಬ್ದವು ಅಂತರಿಕ್ಷನಾಮಗಳಲ್ಲಿ ಪಠಿತವಾಗಿದೆ. (ನಿ. ೨—೧೦) ಮತ್ತು **ಧನ್ವಾಂತರಿಕ್ಷಂ—ಧನ್ವಂತ್ಯಸ್ಮಾದಾಪಃ**—ಎಂದು ನಿರ್ವಚನವೂ ಇದೆ. (ನಿ. ೫–೫). ಭಾಷ್ಯಕಾರು ನಿರ್ಜಲಪ್ರದೇಶೇಷ್ವರಣ್ಯೇಷು-ಜಲರಹಿತವಾದ (ನೀರಿಲ್ಲದ) ಅರಣ್ಯಪ್ರದೇಶವೆಂದು ಅರ್ಥವಿವರಣೆಮಾಡಿದಾರೆ.

**ನಕಿಃ—ನಕಿಃ** ಎಂಬ ನಿಪಾತವು ಹಿಕಂ ನುಕಂ ಮೊದಲಾದ ಒಂಭತ್ತು ಸರ್ವಪದಸಮ್ನಾಯಗಳಲ್ಲಿ ಪಠಿತವಾಗಿದೆ. (೩-೧೨). ಇಲ್ಲವೇ ಇಲ್ಲ ಎಂದರ್ಥವು.

**ತ್ವಯಾ ಅಪ್ಸು ಹಿತಂ ಅಪ್ಯಂ ಭಾಗಂ ಧನ್ವ ಅನು ಮೃಗಯಸಃ ಆ ವಿ ತಸ್ಥುಃ—ಹೇ ಸವಿತಃ ತ್ವಯಾ ಅಂತರಿಕ್ಷೇ ನಿಹಿತಂ ಅಪಾಂ ಸಂಬಂಧಿನಂ ಭಾಗಂ ನಿರ್ಜಲಪ್ರದೇಶೇಷ್ವರಣ್ಯೇಷು ಮೃಗಯಮಾಣಾ ಮೃಗಾಃ ಆಸಮಂತಾತ್ ಅಧಿತಿಷ್ಠಂತಿ ।** ಎಲೈ ಸವಿತೃದೇವನೇ, ವೃಷ್ಟಿವರ್ಷಣಕ್ಕಾಗಿ ನೀನು ಜಲವನ್ನು ಅಂತರಿಕ್ಷದಲ್ಲಿ ಮೇಘರೂಪದಲ್ಲಿ ಸ್ಥಾಪಿಸಿದ್ದೀಯೆ. ವೃಷ್ಟಿಯಾಗಿಲ್ಲವಾದ್ದರಿಂದ ಭೂಮಿಯ ಮೇಲೆ ಎಲ್ಲಿಯೂ ನೀರಿಲ್ಲ. ಆದುದರಿಂದ ವನದಲ್ಲಿರುವ ಮೃಗಗಳು ಜೀವನಾಧಾರವಾದ ನೀರನ್ನು ಹುಡುಕುತ್ತಾ ನಿರ್ಜಲಪ್ರದೇಶವಾದ ಅರಣ್ಯಗಳಲ್ಲಿ ಸಂಚರಿಸುತ್ತಿವೆ.

**ವನಾನಿ ವಿಭ್ಯಃ—ವೃಕ್ಷಾ ಆವಾಸಾದಿರೂಪೇಣ ತ್ವಯಾ ಭಾಗೋ ದತ್ತಃ ।** ವೃಕ್ಷಾದಿಗಳು ಪಕ್ಷಿಗಳಿಗೆ ಆವಾಸಸ್ಥಾನವಾಗಿ ನಿನ್ನಿಂದ ಕಲ್ಪಿಸಲಾಗಿದೆ.

**ಅಸ್ಯ ದೇವಸ್ಯ ಸವಿತುಃ ತಾನಿ ವ್ರತಾ ನಕಿಃ ಮಿನಂತಿ—ತಾದೃಶಾನಿ ಸವಿತುಃ ಕರ್ಮಾಣಿ ಕೇಽಪಿ ನ ಹಿಂಸಂತಿ ।** ಸವಿತೃವಿನ ಈ ನಿಯಮಗಳು ಎಂದರೆ ಮೇಲೆ ಹೇಳಿದ, ಅರಣ್ಯದಲ್ಲಿ ಮೃಗಗಳು ನೀರಿಗಾಗಿ ಅಲೆದಾಡುವುದೂ, ಪಕ್ಷಿಗಳು ವೃಕ್ಷಗಳಲ್ಲಿ ಗೂಡುಕಟ್ಟಿ ವಾಸಮಾಡುವುದೂ ಎಂಬ ಕರ್ಮಗಳು ಸವಿತೃವಿನ ಆಜ್ಞೆಯಂತೆ ನಡೆಯುತ್ತವೆ. ಅವುಗಳನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ ಎಂದಭಿಪ್ರಾಯವು.



॥ ಸಂಹಿತಾಪಾಠಃ ॥

ಯಾದ್ರಾಧ್ಯಂ ವರುಣೋ ಯೋನಿಮಪ್ಯಮನಿಶಿತಂ ನಿಮಿಷಿ ಜರ್ಭುರಾಣಃ ।

ವಿಶ್ವೋ ಮಾರ್ತಾಂಡೋ ವ್ರಜಮಾ ಪಶುರ್ಗಾತ್ಸ್ಥಶೋ ಜನ್ಮಾನಿ ಸವಿತಾ ವ್ಯಾಕಃ ॥

॥ ಪದಪಾಠಃ ॥

ಯಾತ್ऽರಾಧ್ಯಂ । ವರುಣಃ । ಯೋನಿಂ । ಅಪ್ಯಂ । ಅನಿऽಶಿತಂ । ನಿऽಮಿಷಿ । ಜರ್ಭುರಾಣಃ ।

ವಿಶ್ವಃ । ಮಾರ್ತಾಂಡಃ । ವ್ರಜಂ । ಆ । ಪಶುಃ । ಗಾತ್ । ಸ್ಥಃಶಃ । ಜನ್ಮಾನಿ । ಸವಿತಾ । ವಿ । ಆ ।

ಅಕರಿತ್ಯಕಃ ॥ ೮ ॥

॥ ಸಾಯಣಭಾಷ್ಯಂ ॥

ವರುಣೋ ಯಾದ್ರಾಧ್ಯಂ ಯಾತಾಂ ಗಚ್ಛತಾಂ ರಾಧ್ಯಂ ರಾಧನೀಯಮಪ್ಯಮಾಪ್ತುಂ ಯೋಗ್ಯಮನಿಶಿತಮತೀಕ್ಷ್ಣಂ । ಸುಖಕರಮಿತಿ ಯಾವತ್ । ಯೋನಿಂ ಸ್ಥಾನಂ ನಿಮಿಷಿ ನಿಮೇಷೇ ಸವಿತುರಸ್ತಮಯೇ ಸತಿ ವಿಶ್ರಮಾರ್ಥಂ ಪ್ರಾಣಿಭ್ಯಃ ಪ್ರಯಚ್ಛತಿ । ವರುಣಸ್ಯ ರಾತ್ರೇರ್ನಿರ್ವಾಹಕತ್ವಾತ್ । ಜರ್ಭುರಾಣೋ ಭೃಶಂ ಗಚ್ಛನ್ ವಿಶ್ವಃ ಸರ್ವೋ ಮಾರ್ತಾಂಡೋ ಮೃತಾದ್ಭಿನ್ನಾದಂಡಾದುತ್ಪದ್ಯಮಾನಃ ಪಕ್ಷ್ಯಾಗಾತ್ । ಆಗಚ್ಛತಿ । ವಿಶ್ವಃ ಪಶುರಪಿ ವ್ರಜಂ ಗೋಷ್ಠಮಾಗಾತ್ । ಸವಿತಾ ಪ್ರೇರಕಃ ಸ್ಥಶಃ ಸ್ಥಾನೇ ಸ್ಥಾನೇ ಜನ್ಮಾನಿ ಜಾತಾನಿ ಭೂತಾನಿ ವ್ಯಾಕಃ । ಪೃಥಗಕಾರ್ಷೀತ್ ॥

॥ ಪ್ರತಿಪದಾರ್ಥ ॥

**ವರುಣಃ**—ವರುಣನು । **ಯಾದ್ರಾಧ್ಯಂ**—ಜಂಗಮಾತ್ಮಕವಾದ ಪ್ರಾಣಿಗಳಿಗೆ ಪೂಜ್ಯವಾದುದೂ । **ಅಪ್ಯಂ**—ಪ್ರವೇಶಿಸಲು ಯೋಗ್ಯವಾದುದೂ । **ಅನಿಶಿತಂ**—ಸುಖಕರವಾದುದೂ ಆದ । **ಯೋನಿಂ**—ವಾಸಸ್ಥಾನವನ್ನು । **ನಿಮಿಷೇ**—ಸೂರ್ಯಾಸ್ತಮಯವಾದ ನಂತರ (ಪ್ರಾಣಿಗಳ ವಿಶ್ರಾಂತಿಗಾಗಿ ಕಲ್ಪಿಸಿ ಕೊಡುತ್ತಾನೆ) । **ಜರ್ಭುರಾಣಃ**—ಆತುರದಿಂದ ಹಾರತಕ್ಕವೂ । **ವಿಶ್ವಃ**—ಸಮಸ್ತವಾದವೂ ಆದ । **ಮಾರ್ತಾಂಡಃ**—ಪಕ್ಷಿಗಳು । **ಆ ಗಾತ್**—(ಗೂಡುಗಳಿಗೆ) ಬಂದು ಸೇರುತ್ತವೆ । **ಪಶುಃ**—ಪಶುಗಳೂ ಸಹ । **ವ್ರಜಂ**—ಕೊಟ್ಟಿಗೆಗೆ ಬಂದು ಸೇರುತ್ತವೆ । **ಸವಿತಾ**—ಪ್ರೇರಕನಾದ ಸವಿತೃವು । **ಸ್ಥಶಃ**—ಆಯಾ ದಿಕ್ಕುಗಳಲ್ಲಿ । **ಜನ್ಮಾನಿ**—ಪ್ರಾಣಿಗಳನ್ನು । **ವ್ಯಾಕಃ**—ಬೇರೆಬೇರೆಯಾಗಿ ಬಿಡಿಸಿದನು.

॥ ಭಾವಾರ್ಥ ॥

ಜಂಗಮಾತ್ಮಕವಾದ ಪ್ರಾಣಿಗಳಿಗೆ ಪೂಜ್ಯವಾದುದೂ, ಪ್ರವೇಶಿಸಲು ಯೋಗ್ಯವಾದುದೂ, ಸುಖಕರವಾದುದೂ ಆದ ವಾಸಸ್ಥಾನಗಳನ್ನು ವರುಣನು ಸೂರ್ಯಾಸ್ತಮಯವಾದನಂತರ ಪ್ರಾಣಿಗಳ ವಿಶ್ರಾಂತಿಗಾಗಿ ಕಲ್ಪಿಸಿಕೊಡುತ್ತಾನೆ. ಆತುರದಿಂದ ಹಾರತಕ್ಕ ಸಮಸ್ತ ಪಕ್ಷಿಗಳೂ ಗೂಡುಗಳಿಗೆ ಬಂದು ಸೇರುತ್ತವೆ. ಪಶುಗಳು ಕೊಟ್ಟಿಗೆಗಳನ್ನೂ ಸೇರುತ್ತವೆ. ಪ್ರೇರಕನಾದ ಸವಿತೃವು ಸಕಲ ದಿಕ್ಕುಗಳಲ್ಲಿಯೂ ಪ್ರಾಣಿಗಳನ್ನು ಬೇರೆಬೇರೆಯಾಗಿ ಬಿಡಿಸಿದನು.

## English Translation.

The ever-going Varuna grants a cool, accessible, and agreeable place (of rest), to all moving (creachers), on the closing of eyes (of Savitri);

and every bird and every beast repairs to its lair when Savitri has dispersed (all) beings in various directions.

॥ ವಿಶೇಷವಿಷಯಗಳು ॥

**ಯೊದ್ರಾಧ್ಯಂ—ಯಾತಾಂ ಗಚ್ಛತಾಂ ಸಂರಾಧನೀಯಂ ।** ಸಂಚರಿಸುವ ಸ್ವಭಾವವುಳ್ಳ ಪ್ರಾಣಿಗಳಿಗೆ ಪೂಜ್ಯವಾದ ಎಂದರೆ ಅಪೇಕ್ಷಿತವಾದ; ಹಗಲೆಲ್ಲಾ ಆಹಾರಾದಿಗಳಿಗಾಗಿ ಸಂಚರಿಸಿ ಬಳಲಿ ಬೆಂಡಾಗಿರುವ ಪ್ರಾಣಿಗಳೂ ಮನುಷ್ಯರೂ ತಮ್ಮ ವಿಶ್ರಾಂತಿ ಕಾಲವಾದ ರಾತ್ರಿಯನ್ನು ಆತುರದಿಂದ ಎದುರುನೋಡುತ್ತಿರುವರು. ಆದುದರಿಂದ ರಾತ್ರಿಯು ಸರ್ವರಿಂದಲೂ ಆದರಿಸಲ್ಪಡುವುದು ಎಂದಭಿಪ್ರಾಯವು.

**ಯೋನಿಂ—** ಸ್ಥಾನವು ಅಥವಾ ನಿವಾಸಸ್ಥಾನವು. ಯೋನಿಶಬ್ದವು ಗೃಹನಾಮಗಳಲ್ಲಿ (ನಿ. ೩-೧೩) ಪಠಿತವಾಗಿದೆ.

**ವರುಣಃ—**ವರುಣನೆಂಬ ದೇವತೆಯು. **ವರುಣೋ ವೃಣೋತೀತಿ ಸತಃ** (ನಿ. ೧೦-೩) **ಸ ಹಿ ವಿಯತ್ ವೃಣೋತಿ ಮೇಘಜಾಲೇನ ।** ಮೇಘಸಮೂಹದಿಂದ ಅಂತರಿಕ್ಷವನ್ನು ವ್ಯಾಪಿಸಿ ಆಚ್ಛಾದನೆ ಮಾಡುವವನಾದ್ದರಿಂದ ವರುಣನೆಂದು ಹೆಸರು ಎಂದು ಯಾಸ್ಕರ ವಿವರಣೆ ಇವೆ ವರುಣದೇವತೆಯ ವಿಷಯವು ಮುಂದಿನ ಋಕ್ಕಿನಲ್ಲಿ ವಿವರಿಸಲಾಗಿದೆ. ವರುಣನು ರಾತ್ರಿಗೆ ಅಭಿಮಾನಿದೇವತೆಯೆಂದು ಮೈತ್ರಂ ವಾ ಅಹರ್ವಾರುಣೀ ರಾತ್ರಿಃ (ತೈ. ಸಂ. ೨-೧-೭-೪) ಎಂದು ಯಜುರ್ವೇದದಲ್ಲಿ ಉಕ್ತವಾಗಿದೆ.

**ಅಪ್ಯಂ—ಆಪ್ತುಂ ಯೋಗ್ಯಂ ।** ಹೊಂದುವುದಕ್ಕೆ ಅರ್ಹವಾದ, ಎಲ್ಲರೂ ಬೇಕೆಂದು ಅಪೇಕ್ಷಿಸುವ.

**ಅನಿಶಿತಂ—ಅತೀಕ್ಷ್ಣಂ ಸುಖಕರಮಿತಿ ಯಾವತ್ ।** ನಿಶಿತವೆಂದರೆ ತೀಕ್ಷ್ಣವಾದುದು, ಅನಿಶಿತವೆಂದರೆ ತೀಕ್ಷ್ಣವಲ್ಲದ್ದು, ಸುಖಕರವಾದುದು. ವಿಶ್ರಾಂತಿಕಾಲವಾದ ರಾತ್ರಿಯು ಸರ್ವರಿಗೂ ಸುಖಕರವೆಂದಭಿಪ್ರಾಯವು.

**ಮಾರ್ತಾಂಡಃ— ಮೃತಾದ್ಭಿನ್ನಾತ್ ಅಂಡಾದುತ್ಪದ್ಯಮಾನಃ ಪಕ್ಷೀ ।** ಪಕ್ಷಿಯು ಮೊಟ್ಟೆಯಿಂದ ಉತ್ಪನ್ನವಾಗುವುದು ಆ ಮೊಟ್ಟೆಯು (ಅಂಡವು) ಮೃತವಲ್ಲದೆ ಸಜೀವವಾಗಿರುವುದರಿಂದ ಅದರಿಂದ ಹುಟ್ಟಿದ ಪಕ್ಷಿಗೆ ಮಾರ್ತಾಂಡವೆಂದು ಹೆಸರು ಎಂದು ಭಾಷ್ಯಕಾರರು ಅರ್ಥವಿವರಣೆಮಾಡಿರುವರು.

**ಸ್ಥಶಃ—ಸ್ಥಾನೇ ಸ್ಥಾನೇ ।** ಬೇರೆ ಬೇರೆಯಾದ ಅನೇಕ ಸ್ಥಾನಗಳಲ್ಲಿ ಅಥವಾ ಅನೇಕ ದಿಕ್ಕುಗಳಲ್ಲಿ.

**ವರುಣಃ ಯೊದ್ರಾಧ್ಯಂ ಅಪ್ಯಂ ಅನಿಶಿತಂ ಯೋನಿಂ ನಿಮಿಷೇ ವರುಣೋ ರಾತ್ರ್ಯಭಿಮಾನೀ ದೇವಃ ಗಚ್ಛತಾಂ ಸಂರಾಧನೀಯಂ ಪ್ರಾಪ್ತುಂ ಯೋಗ್ಯಂ ಸುಖಕರಂ ಸ್ಥಾನಂ ಸವಿತುರಸ್ತಮಯೇ ವಿಶ್ರಮಾರ್ಥಂ ಪ್ರಯಚ್ಛತಿ ।** ವರುಣದೇವನು ರಾತ್ರಿಗೆ ಅಭಿಮಾನಿದೇವತೆಯು. ಆದುದರಿಂದ ಹಗಲೆಲ್ಲಾ ಆಹಾರಾರ್ಥವಾಗಿ ಕಷ್ಟಪಟ್ಟು ಸಂಚಾರಮಾಡಿ ಬಳಲಿರುವ ಪ್ರಾಣಿಗಳಿಗೆ ಸೂರ್ಯಾಸ್ತಮಯವಾದ ಮೇಲೆ ಅವುಗಳು ವಿಶ್ರಾಂತಿಗಾಗಿ ಅಪೇಕ್ಷಿಸುವ ಸುಖಕರವಾದ ನಿವಾಸಸ್ಥಾನವನ್ನು ಕಲ್ಪಿಸಿಕೊಡುವನು. ಅದು ಹೇಗೆಂದರೆ—ಮುಂದಿನ ವಾಕ್ಯಗಳಲ್ಲಿ ಅದನ್ನೇ ವಿಶದಪಡಿಸಲಾಗಿದೆ.

**ಜರ್ಭುರಾಣಃ ವಿಶ್ವಃ ಮಾರ್ತಾಂಡಃ ಆ ಗಾತ್—ಭೃಶಂ ಗಚ್ಛನ್ ಅಂಡಾದುತ್ಪದ್ಯಮಾನಃ ಸರ್ವಃ ಪಕ್ಷೀ ಆ ಗಚ್ಛತಿ ।** ಮೊಟ್ಟೆಯಿಂದ ಜನಿಸಿದ ಪಕ್ಷಿಗಳೆಲ್ಲಾ ಹಗಲು ಕಾಲದಲ್ಲಿ ಬಹಳವಾಗಿ ಸಂಚರಿಸುತ್ತಿದ್ದು

ಸೂರ್ಯಾಸ್ತಮಯವಾದನಂತರ ತಮ್ಮ ತಮ್ಮ ವಾಸಸ್ಥಾನವಾದ ಗೂಡುಗಳಿಗೆ ಬಂದು ಸೇರುತ್ತವೆ. ಇಲ್ಲಿ ಪಕ್ಷಿವಾಚಕವಾದ ಮಾರ್ತಾಂಡಶಬ್ದವು ಜಾತ್ಯೇಕವಚನದಲ್ಲಿರುವುದೆಂದು ಭಾವಿಸಿ ಅದಕ್ಕೆ ಬಹುವಚನಾರ್ಥವನ್ನು ಹೇಳಬೇಕು.

**ಪಶುಃ ವ್ರಜಂ ಅಗಾತ್—ವಿಶ್ವಃ ಪಶುಃ ಗೋಷ್ಠಮಾಗಾತ್ ।** ಇಲ್ಲಿಯೂ ಪಶುಶಬ್ದವು ಜಾತ್ಯೇಕವಚನವಲ್ಲಿ ಪ್ರಯುಕ್ತವಾಗಿದೆ. ಗೋವುಗಳೇ ಮೊದಲಾದ ಸಮಸ್ತ ಪಶುಗಳೂ ತಮ್ಮ ತಮ್ಮ ಕೊಟ್ಟಿಗೆಗೆ ಹೋಗಿ ಸೇರುತ್ತವೆ.

**ಸವಿತಾ ಶ್ಥಶಃ ಜನ್ಮಾನಿ ವ್ಯಾಕಃ—ಅಸೌ ಪ್ರೇರಕಃ ಸವಿತಾ ಸ್ಥಾನೇ ಸ್ಥಾನೇ ಜಾತಾನಿ ಭೂತಾನಿ ಪೃಥಗಕಾರ್ಷೀತ್ ।** ಸಮಸ್ತವನ್ನೂ ಪ್ರೇರಿಸತಕ್ಕ ಈ ಸವಿತೃದೇವನು ಭೂಮಿಯ ಮೇಲೆ ಹುಟ್ಟಿರುವ ಸಮಸ್ತ ಪ್ರಾಣಿಗಳನ್ನೂ ತಮ್ಮ ತಮ್ಮ ಬೇರೆಬೇರೆಯಾದ ನಿವಾಸಸ್ಥಳಗಳಿಗೆ ಹೋಗುವಂತೆ ಮಾಡುತ್ತಾನೆ. ಎಂದರೆ ಸಮಸ್ತ ಪ್ರಾಣಿಗಳೂ ರಾತ್ರಿಕಾಲದಲ್ಲಿ ಒಂದೆಡೆ ಸೇರುವುದಿಲ್ಲ. ಪಕ್ಷಿಗಳು ವೃಕ್ಷಗಳಲ್ಲಿರುವ ತಮ್ಮ ಗೂಡುಗಳಿಗೆ ಹೋಗಿ ಸೇರುತ್ತವೆ, ಗೋವುಗಳೇ ಮೊದಲಾದ ಪಶುಗಳು ತಮಗೆ ನಿರ್ದಿಷ್ಟವಾಗಿರುವ ಕೊಟ್ಟಿಗೆಗೆ ಹೋಗುತ್ತವೆ. ಮನುಷ್ಯರು ತಮ್ಮ ಗೃಹಗಳಿಗೆ ಹೋಗುತ್ತಾರೆ. ಈ ರೀತಿ ಪ್ರಾಣಿಗಳಿಗೆ ಬೇರೆಬೇರೆಯಾದ ವಿಶ್ರಾಂತಿಸ್ಥಾನವನ್ನು ಕಲ್ಪಿಸಿರುವನೆಂದು ಸವಿತೃವಿನ ಮಹಿಮೆಯು ವರ್ಣಿತವಾಗಿದೆ.

॥ ಸಂಹಿತಾಪಾಠಃ ॥

ನ ಯಸ್ಯೇಂದ್ರೋ ವರುಣೋ ನ ಮಿತ್ರೋ ವ್ರತಮರ್ಯಮಾ ನ ಮಿನಂತಿ ರುದ್ರಃ ।
ನಾರಾತಯಸ್ತಮಿದಂ ಸ್ವಸ್ತಿ ಹುವೇ ದೇವಂ ಸವಿತಾರಂ ನಮೋಭಿಃ ॥ ೯ ॥

ಪದಪಾಠಃ ॥

ನ । ಯಸ್ಯ । ಇಂದ್ರಃ । ವರುಣಃ । ನ । ಮಿತ್ರಃ । ವ್ರತಂ । ಅರ್ಯಮಾ । ನ । ಮಿನಂತಿ । ರುದ್ರಃ ।
ನ । ಅರಾತಯಃ । ತಂ । ಇದಂ । ಸ್ವಸ್ತಿ । ಹುವೇ । ದೇವಂ । ಸವಿತಾರಂ । ನಮಃऽಭಿಃ ॥ ೯ ॥

॥ ಸಾಯಣಭಾಷ್ಯಂ ॥

ಯಸ್ಯ ಸವಿತುರ್ದೇವಸ್ಯ ವ್ರತಂ ಪ್ರಸವಾಖ್ಯಂ ಕರ್ಮೇಂದ್ರೋ ನ ಮಿನಾತಿ । ನ ಹಿನಸ್ತಿ । ವರುಣಶ್ಚ ನ ಮಿನಾತಿ ಮಿತ್ರಶ್ಚಾರ್ಯಮಾ ಚ ನ ಮಿನಾತಿ ರುದ್ರಶ್ಚ ನ ಮಿನಾತಿ । ಅರಾತಯೋऽಸುರಾಶ್ಚ ನ ಮಿನಂತಿ ॥ ಮಿನಾತೀತಿ ಶ್ರುತಮಾಖ್ಯಾತಂ ಯಥಾಯೋಗಂ ವಿಪರಿಣಾಮೇನ ಪ್ರತ್ಯೇಕಮಭಿಸಂಬಧ್ಯತೇ । ತಂ ಸವಿತಾರಂ ಸರ್ವಸ್ಯ ಪ್ರೇರಕಂ ದೇವಂ ದ್ಯೋತಮಾನಮಿದಮಿದಾನೀಂ ನಮೋಭಿರನ್ನರೂಪೈರ್ಹವಿರ್ಭಿಃ ಸಹ ॥ ನಮ ಇತ್ಯನ್ನನಾಮಸು ಪಾಠಾತ್ ॥ ಸ್ವಸ್ತಿ ಕ್ಷೇಮಾಯ ಹುವೇ । ಸ್ತೌಮಿ ॥

॥ ಪ್ರತಿಪದಾರ್ಥ ॥

**ಯಸ್ಯ**—ಯಾವ ಸವಿತೃವಿನ | **ವ್ರತಂ**—ಅಸಾಧಾರಣವಾದ ಕರ್ಮವನ್ನು | **ಇಂದ್ರಃ**—ಇಂದ್ರನು | **ನ (ಮಿನಾತಿ)**—ತಡೆಯಲಾರನೋ | **ವರುಣಃ**—ವರುಣನೂ | **ನ**—ತಡೆಯಲಾರನೋ | **ಮಿತ್ರಃ**—ಮಿತ್ರನೂ | **ಅರ್ಯಮಾ**—ಅರ್ಯಮನೂ | **ನ**—ತಡೆಯಲಾರರೋ | **ರುದ್ರಃ**—ರುದ್ರನೂ | **ನ**—ತಡೆಯಲಾರನೋ | **ಅರಾತಯಃ**—ಶತ್ರುಗಳೂ ಸಹ | **ನ ಮಿನಂತಿ**—ಹಿಂಸಿಸಲಾರರೋ | **ತಂ**—ಅಂತಹ | **ದೇವಂ**—ಪ್ರಕಾಶಮಾನನಾದ | **ಸವಿತಾರಂ**—ಸವಿತೃವನ್ನು | **ಇದಂ**—ಈಗ | **ನಮೋಭಿಃ**—ಅನ್ನರೂಪವಾದ ಹವಿಸ್ಸುಗಳೊಡನೆ | **ಸ್ವಸ್ತಿ**—ಕಲ್ಯಾಣಾರ್ಥವಾಗಿ | **ಹುವೇ**—ಆಹ್ವಾನಿಸಿ ಸ್ತುತಿಸುತ್ತೇನೆ.

॥ ಭಾವಾರ್ಥ ॥

ಯಾವ ಸವಿತೃವಿನ ಅಸಾಧಾರಣವಾದ ಕರ್ಮವನ್ನು ಇಂದ್ರನಾಗಲಿ, ವರುಣನಾಗಲಿ, ಮಿತ್ರ ಅಥವಾ ಅರ್ಯಮನಾಗಲಿ, ಅಥವಾ ರುದ್ರನಾಗಲಿ ತಡೆಯಲಾರರೋ ಮತ್ತು ಶತ್ರುಗಳು ಹಿಂಸಿಸಲಾರರೋ ಅಂತಹ ಪ್ರಕಾಶಮಾನನಾದ ಸವಿತೃವನ್ನು ಈಗ ಅನ್ನರೂಪವಾದ ಹವಿಸ್ಸುಗಳೊಡನೆ ಕಲ್ಯಾಣಾರ್ಥವಾಗಿ ಆಹ್ವಾನಿಸಿ ಸ್ತುತಿಸುತ್ತೇನೆ.

English Translation.

I invite to this place, with reverential salutations, for my good, that divine Savitri, whose functions neither Indaa, nor Varuna, nor Mitra, nor Aryaman, nor Rudra, nor the enemies (of the gods), impede.

॥ ವಿಶೇಷವಿಷಯಗಳು ॥

ಸವಿತೃದೇವನ ಅಸಾಧಾರಣವಾದ ಕರ್ಮವನ್ನು (ನಿಯಮವನ್ನು) ಇಂದ್ರ, ವರುಣ, ಮಿತ್ರ, ಅರ್ಯಮಾ, ರುದ್ರ ಮುಂತಾದ ಯಾವ ದೇವತೆಗಳೂ ತಡೆಯಲಾರರು ಅಥವಾ ಮೀರಲಾರರು. ಈ ದೇವನನ್ನು ಯಾವ ಶತ್ರುಗಳೂ ಹಿಂಸಿಸಲಾರರು. ಇಂತಹ ಮಹಾಮಹಿಮನಾದ ಸವಿತೃದೇವನಿಗೆ ಅನ್ನರೂಪವಾದ ಹವಿಸ್ಸುಗಳನ್ನರ್ಪಿಸಿ ಸ್ತುತಿಸುತ್ತೇನೆ ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

**ಇಂದ್ರಃ**—ಇಂದ್ರನ ವಿಷಯವನ್ನು ನಾವು ಹಿಂದೆಯೇ ವಿಸ್ತಾರವಾಗಿ ಬರೆದಿದೇವೆ.

**ಮಿತ್ರಃ, ವರುಣಃ, ಅರ್ಯಮಾ**—ಈ ಮೂರು ದೇವತೆಗಳೂ ಪ್ರತ್ಯೇಕ ದೇವತೆಗಳೆಂದು ಭಾವಿಸಲ್ಪಟ್ಟಿದ್ದರೂ ಇವರು ಸೂರ್ಯನ ಅನೇಕ ರೂಪಗಳಾದ ಎಂದರೆ ದ್ವಾದಶಾದಿತ್ಯರಲ್ಲಿ ಈ ಹೆಸರಿನ ಅಂಶದೇವತೆಗಳೆಂದು ಇಲ್ಲಿ ವಿವರಿಸಲ್ಪಟ್ಟಿರುವಂತೆ ತೋರುತ್ತದೆ. ಇದಲ್ಲದೆ ಈ ಮೂರು ದೇವತೆಗಳೂ ಅಗ್ನಿಯ ಬೇರೆ ರೂಪಗಳೆಂದು ಕೆಲವು ಕಡೆ ಹೇಳಿದೆ.

**ತ್ವಮಗ್ನೇ ವರುಣೋ ಜಾಯಸೇ ಯತ್ತ್ವಂ ಮಿತ್ರೋ ಭವಸಿ ಯತ್ಸಮಿದ್ಧಃ ।**
(ಋ. ಸಂ. ೫-೩-೧)

**ತ್ವಮರ್ಯಮಾ ಭವಸಿ ಯತ್ಕನೀನಾಂ ನಾಮ ಸ್ವಧಾವನ್ ಗುಹ್ಯಂ ಬಿಭರ್ಷಿ ।**
(ಋ. ಸಂ. ೫-೩-೨)

ಎಂಬ ಋಕ್ಕುಗಳಲ್ಲಿ ಅಗ್ನಿಯು ಉತ್ಪನ್ನನಾದಾಗ ಅವನಿಗೆ ವರುಣನೆಂದೂ, ಚೆನ್ನಾಗಿ ಹೊತ್ತಿಸಲ್ಪಟ್ಟು ಧಗಧಗನೆ ಉರಿಯುತ್ತಿರುವಾಗ ಆ ಅಗ್ನಿಗೆ ಮಿತ್ರನೆಂದೂ, ಕನ್ಯಾಸಂಬಂಧವಾದ ಹೋಮಾದಿಗಳಲ್ಲಿ ಅರ್ಯಮಾ ಎಂದೂ ಅಗ್ನಿಗೆ ಈ ಮೂರು ಹೆಸರುಗಳಿವೆಯೆಂದು ಹೇಳಿದೆ. ಇದಲ್ಲದೆ ತೈತ್ತಿರೀಯ ಬ್ರಾಹ್ಮಣದಲ್ಲಿ—

**ಮಿತ್ರೋಽಸಿ ವರುಣೋಽಸೀತ್ಯಾಹ । ಮೈತ್ರಂ ವಾ ಅಹಃ । ವಾರುಣೀ ರಾತ್ರಿಃ । ಅಹೋರಾತ್ರಾಭ್ಯಾಮೇವೈನಮುಪಾವಹರತಿ ॥**

(ತೈ. ಬ್ರಾ. ೧-೭-೧೦-೧)

ಮಿತ್ರನು ಹಗಲಿಗೆ ಅಧಿಪತಿಯೆಂದೂ, ವರುಣನು ರಾತ್ರಿಗೆ ಅಧಿಪತಿಯೆಂದೂ ಹೇಳಿದೆ. ಆದುದರಿಂದ ಈ ಮೂರು ದೇವತೆಗಳೂ ಕೆಲವುಕಡೆ ಸೂರ್ಯನ ಅಂಶದೇವತೆಗಳೆಂದೂ ಕೆಲವುಕಡೆ ಅಗ್ನಿಯ ಬೇರೆ ಬೇರೆ ಹೆಸರುಗಳೆಂದೂ ಹೇಳಿರುವುದನ್ನು ಗಮನಿಸಬೇಕು.

ಪುರಾಣಾದಿಗಳಲ್ಲಿ ಮಿತ್ರನು ದ್ವಾದಶಾದಿತ್ಯರಲ್ಲಿ ಒಬ್ಬನು. ಋಗ್ವೇದದಲ್ಲಿ ಮಿತ್ರನು ಸೂರ್ಯನ ಬೇರೊಂದು ಹೆಸರಾದರೂ ಮಿತ್ರನಿಗೇ ಸ್ಪಷ್ಟವಾದ ವೈಶಿಷ್ಟ್ಯವಿದೆ ಎಂದರೆ ವೈಯಕ್ತಿಕ ಪ್ರಾಧಾನ್ಯವಿದೆ. ಋಗ್ವೇದದಲ್ಲಿ ಮಿತ್ರ, ವರುಣ, ಅರ್ಯಮಾ ಎಂಬುವರು ಅದಿತಿಯ ಪುತ್ರರೆಂದು ಹೇಳಿದೆ. ಆದ್ದರಿಂದ ಇವರನ್ನು ಆದಿತ್ಯರೆಂದು ಅನೇಕ ಕಡೆಗಳಲ್ಲಿ ಕರೆದಿದೆ. ಈ ಆದಿತ್ಯರು ಎಂದರೆ ಅದಿತಿಪುತ್ರರು ಆರು ಜನರೆಂದು—

**ಇಮಾ ಗಿರ ಆದಿತ್ಯೇಭ್ಯೋ ಘೃತಸ್ನೂಃ ಸನಾದ್ರಾಜಭ್ಯೋ ಜುಹ್ವಾ ಜುಹೋಮಿ ।**
**ಶೃಣೋತು ಮಿತ್ರೋ ಅರ್ಯಮಾ ಭಗೋ ನಸ್ತುವಿಜಾತೋ ವರುಣೋ ದಕ್ಷೋ ಅಂಶಃ ॥**

(ಋ. ಸಂ. ೨-೨೭-೧)

ಎಂದರೆ ಮಿತ್ರ, ಅರ್ಯಮಾ, ಭಗ, ವರುಣ, ದಕ್ಷ, ಅಂಶ, ಎಂದು ಆರು ಜನರ ಹೆಸರನ್ನು ಮಾತ್ರ ಹೇಳಿದೆ.

**ದೇವಾ ಆದಿತ್ಯಾ ಯೇ ಸಪ್ತ ತೇಭಿಃ ಸೋಮಾಭಿ ರಕ್ಷ ನ ಇಂದ್ರಾಯೇಂದೋ ಪರಿ ಸ್ರವ ।**

(ಋ. ಸಂ. ೯-೧೧೪-೩)

ಎಂಬ ಋಕ್ಕಿನಲ್ಲಿ ಅದಿತಿಪುತ್ರರು ಏಳು ಜನರೆಂದಿದೆ—

**ಅಷ್ಟೌ ಪುತ್ರಾಸೋ ಅದಿತೇರ್ಯೇ ಜಾತಾಸ್ತನ್ವ೧ ಸ್ಪರಿ ।**
**ದೇವಾಁ ಉಪಪ್ರೈತ್ಸಪ್ತಭಿಃ ಪರಾ ಮಾರ್ತಂಡಮಾಸ್ಯತ್ ।**
**ಸಪ್ತಭಿಃ ಪುತ್ರೈರದಿತಿರುಪ ಪ್ರೈತ್ಪೂರ್ವ್ಯಂ ಯುಗಂ ।**
**ಪ್ರಜಾಯೈ ಮೃತ್ಯವೇ ತ್ವತ್ಪುನರ್ಮಾರ್ತಂಡಮಾಭರತ್ ॥**

(ಋ. ಸಂ. ೧೦-೭೨-೮, ೯)

ಎಂಬ ಋಕ್ಕುಗಳಲ್ಲಿ ಅದಿತಿಗೆ ಮೊದಲು ಏಳು, ಅನಂತರ ಮಾರ್ತಂಡನೆಂದು ಒಟ್ಟು ಎಂಟು ಮಂದಿ ಪುತ್ರರಿದ್ದರೆಂದು ಹೇಳಿದೆ. ಇದಲ್ಲದೆ ತೈತ್ತಿರೀಯ ಆರಣ್ಯಕದಲ್ಲಿ—

**ಅಷ್ಟಾ ಪುತ್ರಾಸೋ ಅದಿತೇಃ । ಯೇ ಜಾತಾಸ್ತನ್ವಃ ಪರಿ । ದೇವಾಁ ಉಪಪ್ರೈತ್ಸಪ್ತಭಿಃ । ಪರಾಮಾರ್ತಾಂಡಮಾಸ್ಯತ್ । ಸಪ್ತಭಿಃ ಪುತ್ರೈರದಿತಿಃ । ಉಪಪ್ರೈತ್ಪೂರ್ವ್ಯಂ ಯುಗಂ ।**

**ಪ್ರಜಾಯೈ ಮೃತ್ಯವೇ ತತ್ । ಪರಾಮಾರ್ತಾಂಡಮಾಭರದಿತಿ। ತಾನನುಕ್ರಮಿಷ್ಯಾಮಃ ಮಿತ್ರಶ್ಚ ವರುಣಶ್ಚ । ಧಾತಾ ಚಾರ್ಯಮಾ ಚ। ಅಗ್ಂಶಶ್ಚ ಭಗಶ್ಚ । ಇಂದ್ರಶ್ಚ ವಿವಸ್ವಾಗ್‌ಶ್ಚೇತ್ಯೇತೇ ॥**

(ತೈ. ಆ. ೧-೧೩-೩)

ಅದಿತಿಗೆ ಇದ್ದ ಎಂಟು ಮಂದಿ ಪುತ್ರರ ಹೆಸರನ್ನೂ ಹೇಳಿದೆ. ಮಿತ್ರ, ವರುಣ, ಧಾತಾ, ಅರ್ಯಮಾ, ಅಂಶ, ಭಗ, ಇಂದ್ರ, ವಿವಸ್ವಾನ್ ಎಂಬುವರೇ ಆ ಎಂಟು ಜನರು ಎಂದಿದೆ. ಇದೇ ವಿಷಯವು ತೈತ್ತಿರೀಯಬ್ರಾಹ್ಮಣದಲ್ಲಿ—

**ಅದಿತಿಃ ಪುತ್ರಕಾಮಾ । ಸಾಧ್ಯೇಭ್ಯೋ ದೇವೇಭ್ಯೋ ಬ್ರಹ್ಮೌದನಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಧತ್ತ । ತಸ್ಯೈ ಧಾತಾ ಚಾರ್ಯಮಾ ಚಾಜಾಯೇತಾಂ । ಸಾ ದ್ವಿತೀಯಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಧತ್ತ । ತಸ್ಯೈ ಮಿತ್ರಶ್ಚ ವರುಣಶ್ಚಾಜಾಯೇತಾಂ । ಸಾ ತೃತೀಯಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯಾ ಅಗ್ಂಶಶ್ಚ ಭಗಶ್ಚಾಜಾಯೇತಾಂ । ಸಾ ಚತುರ್ಥಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯಾ ಇಂದ್ರಶ್ಚ ವಿವಸ್ವಾಗ್‌ಂಶ್ಚಾಜಾಯೇತಾಂ ॥**

(ತೈ. ಬ್ರಾ. ೧-೧-೯-೧, ೨, ೩)

ಉಕ್ತವಾಗಿದೆ. ಅದಿತಿಯು ಎಂಟು ಮಂದಿ ಪುತ್ರರನ್ನು ಪಡೆದ ವಿಷಯವು ಇಲ್ಲಿ ಸ್ಪಷ್ಟವಾಗಿ ವಿವರಿಸಿದೆ. ಈ ಎಂಟು ಮಂದಿಯಲ್ಲಿ ಮಿತ್ರ, ವರುಣ, ಅರ್ಯಮಾ ಎಂಬ ಮೂರು ಮಂದಿಯೇ ಋಗ್ವೇದದಲ್ಲಿ ವಿಶೇಷವಾಗಿ ಪ್ರಸಿದ್ಧರಾದವರು. ಋ. ಸಂ. ೨-೭ ನೇ ಸೂಕ್ತದಲ್ಲಿ ಮಿತ್ರ, ವರುಣ, ಅರ್ಯಮಾ ಎಂಬುವರ ಲೋಕೋಪಕಾರಕವಾದ ಸಾಹಸಕೃತ್ಯಗಳ ವಿಸ್ತಾರವಾದ ವರ್ಣನೆ ಇದೆ.

**ಮಿತ್ರಃ**—ಮಿತ್ರಶಬ್ದದ ನಿರ್ವಚನವನ್ನು ಯಾಸ್ಕರು ತಮ್ಮ ನಿರುಕ್ತದಲ್ಲಿ ಈ ರೀತಿ ತಿಳಿಸಿದ್ದಾರೆ—

**ಮಿತ್ರಃ ಪ್ರಮೀತೇಸ್ತ್ರಾಯತೇ । ಸಂಮಿನ್ವಾನೋ ದ್ರವತೀತಿ ವಾ । ಮೇದಯತೇರ್ವಾ ।**

(ನಿ. ೧೦-೨೧)

ಮಿತ್ರ ಶಬ್ದಕ್ಕೆ ಅರ್ಥವೇನು ಎಂದರೆ—**ಮಿತ್ರಃ ಕಸ್ಮಾತ್ । ಸ ಹಿ ಪ್ರಮೀತೇಃ ತ್ರಾಯತೇ । ಪ್ರಮೀತಿಃ ಮರಣಂ । ತತಃ ಸರ್ವಲೋಕಂ ತ್ರಾಯತೇ ವರ್ಷದ್ವಾರೇಣ ।** ಪ್ರಮೀತಿ ಎಂದರೆ ಮರಣವು. ಲೋಕದಲ್ಲಿ ಜನರಿಗೆ ವೃಷ್ಟಿಯನ್ನುಂಟುಮಾಡಿ ಆ ಮೂಲಕ ಅನ್ನಾದ್ಯಹಾರಗಳನ್ನು ಒದಗಿಸಿ, ಹಸಿವಿನಿಂದ ಉಂಟಾಗಬಹುದಾದ ಮರಣಭಯವನ್ನು ತಪ್ಪಿಸಿ ರಕ್ಷಿಸುತ್ತಾನಾದ್ದರಿಂದ ಈ ದೇವತೆಗೆ ಮಿತ್ರನೆಂದು ಹೆಸರು.

**ಸಮಂತತೋ ಮಿನ್ವಾನಃ ಉದಕೇನ ದ್ರವತಿ ಅಂತರಿಕ್ಷಲೋಕೇ ।** ಈ ದೇವತೆಯು ಉದಕಕ್ಕೆ ಅಧಿಪತಿಯಾಗಿ ಅಂತರಿಕ್ಷದಲ್ಲಿ ಇದ್ದುಕೊಂಡು ಮೇಘಗಳ ಮೂಲಕ ಸುತ್ತಲೂ ಎಂದರೆ ಸಮಸ್ತ ಪ್ರದೇಶವನ್ನು ತೊಯ್ದುಹೋಗುವಂತೆ ಎಂದರೆ ನೀರಿನಿಂದ ನೆನೆಯುವಂತೆ ಮಾಡುವುದರಿಂದ ಈ ದೇವತೆಗೆ ಮಿತ್ರನೆಂದು ಹೆಸರು.

**ಅಥವಾ—ಸ್ನೇಹನಾರ್ಥಸ್ಯ ಸರ್ವಂ ಹ್ಯಸಾವುದಕೇನ ಸ್ನೇಹಯತಿ ।** ಈ ದೇವತೆಯು ಉದಕದಿಂದ ಸಮಸ್ತವನ್ನೂ ಅಂಟಿಕೊಳ್ಳುವಂತೆ, ಎಂದರೆ ಒಂದಾಗಿ ಸೇರಿಕೊಳ್ಳುವಂತೆ ಮಾಡುತ್ತಾನಾದ್ದರಿಂದ ಈ ದೇವತೆಗೆ ಮಿತ್ರನೆಂದು ಹೆಸರು ಎಂದು ಮೂರು ವಿಧವಾದ ನಿಷ್ಪತ್ತಿಯನ್ನು ಹೇಳಿ ಅದನ್ನು ಸಮರ್ಥಿಸುವುದಕ್ಕಾಗಿ—

**ಮಿತ್ರೋ ಜನಾನ್ ಯಾತಯತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ।**
**ಮಿತ್ರಃ ಕೃಷ್ಟೀರನಿಮಿಷಾಭಿ ಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ ॥**

(ಋ. ಸಂ. ೩-೫೯-೧)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು. ಈ ಋಕ್ಕಿನಲ್ಲಿ ಮಿತ್ರನು ಕೃಷ್ಯಾದಿಕರ್ಮಗಳಿಗೆ ಸಹಾಯಕನಾಗಿ ವೃಷ್ಟ್ಯಾದಿಗಳನ್ನು ಸುರಿಸಿ ಜನರಿಗೆ ಅನ್ನಾದ್ಯಾಹಾರಗಳನ್ನು ಒದಗಿಸುತ್ತಾ ಭೂಲೋಕದ ಜನರನ್ನೂ ಸ್ವರ್ಗನಿವಾಸಿಗಳನ್ನೂ ಧರಿಸುವನು ಎಂದರೆ ಪೋಷಿಸುವನು. ಎಲೈ ಮನುಷ್ಯರೇ, ಇಂತಹ ಮಿತ್ರದೇವನಿಗೆ ಘೃತಮಿಶ್ರಿತವಾದ ಹವಿರಾದಿಗಳನ್ನು ಅರ್ಪಿಸಿ ಎಂದು ಮಿತ್ರನ ಅಸಾಧಾರಣ ಗುಣಗಳನ್ನೂ, ಲೋಕೋಪಕಾರವನ್ನೂ ಬಹು ಚೆನ್ನಾಗಿ ವರ್ಣಿಸಿದೆ. ಋಗ್ವೇದದಲ್ಲಿ ಮಿತ್ರನ ಪರವಾಗಿ ಇರುವ ಸೂಕ್ತವೆಂದರೆ ೯ ಋಕ್ಕುಗಳುಳ್ಳ ಈ ಸೂಕ್ತ ಮಾತ್ರ (ಋ. ಸಂ. ೩-೫೯) ಇತರ ಕಡೆ ಮಿತ್ರನು, ವರುಣ ಮೊದಲಾದ ಇತರ ದೇವತೆಗಳ ಜೊತೆಯಲ್ಲಿ ಸ್ತುತನಾಗಿದ್ದಾನೆ.

ಮಿತ್ರ ಮತ್ತು ವರುಣರ ಸಾಹಚರ್ಯವು ಬಹಳ ಹೆಚ್ಚಾಗಿರುವುದರಿಂದ ಮಿತ್ರನೊಬ್ಬನೇ ದೇವತೆಯಾಗಿವುಳ್ಳ ಸೂಕ್ತವು ಋಗ್ವೇದದಲ್ಲಿ ಹಿಂದೆ ಹೇಳಿದಂತೆ ಒಂದು ಮಾತ್ರವಿರುವುದು (ಋ. ಸಂ. ೩-೫೯) ಅಲ್ಲಿಯೂ ಆ ದೇವತೆಯ ಸ್ತುತಿಭಾಗವು ಅಸ್ಪಷ್ಟ. ಆದರೆ ಮೊದಲನೆಯ ಋಕ್ಕಿನಲ್ಲಿ ಮಾತ್ರ ಮಿತ್ರನ ವೈಶಿಷ್ಟ್ಯವು ಚೆನ್ನಾಗಿ ಹೇಳಲ್ಪಟ್ಟಿದೆ. ಅದೇ ಸೂಕ್ತದ ಐದನೆಯ ಋಕ್ಕಿನಲ್ಲಿ —

**ಮಹಾँ ಆದಿತ್ಯೋ ನಮಸೋಪಸದ್ಯೋ ಯಾತಯಜ್ಜನೋ ಗೃಣತೇ ಸುಶೇವಃ ।**

(ಋ. ಸಂ. ೩-೫೯-೫)

ಈ ಮಿತ್ರನನ್ನು ಮನುಷ್ಯರನ್ನೆಲ್ಲಾ ಒಟ್ಟಾಗಿ ಸೇರಿಸುವ ಮಹನೀಯನಾದ ಆದಿತ್ಯನೆಂದು ಕರೆದಿದೆ. ಈ ಅರ್ಥವನ್ನು ಕೊಡುವ **ಯಾತಯಜ್ಜನ** ಎಂಬ ಶಬ್ದವು—

**ವ್ರತೇನ ಸ್ಥೋ ಧ್ರುವಕ್ಷೇಮಾ ಧರ್ಮಣಾ ಯಾತಯಜ್ಜನಾ ।**

(ಋ. ಸಂ. ೫-೭೨-೨)

ಎಂಬ ಋಕ್ಕಿನಲ್ಲಿ ಮಿತ್ರಾವರುಣರ ಪರವಾಗಿಯೂ—

**ಮಿತ್ರಸ್ತಯೋರ್ವರುಣೋ ಯಾತಯಜ್ಜನೋऽರ್ಯಮಾ ಯಾತಯಜ್ಜನಃ ।**

(ಋ. ಸಂ. ೧-೧೩೬-೩)

ಎಂಬ ಋಕ್ಕಿನಲ್ಲಿ ಮಿತ್ರ, ವರುಣ, ಅರ್ಯಮಾ ಎಂದು ಮೂರುಮಂದಿಯ ಪರವಾಗಿಯೂ ಪ್ರಯುಕ್ತವಾಗಿದೆ. ಮೇಲೆ ಹೇಳಿದ ಋ. ಸಂ ೩-೫೯ ನೆಯ ಸೂಕ್ತದ ಪ್ರಕಾರ ಮಿತ್ರನು ಸ್ವರ್ಗ ಮತ್ತು ಭೂಮಿಗಳಿಗೆ ಆಧಾರನಾಗಿದಾನೆ. ಮನುಷ್ಯರ ಐದು ಪಂಗಡಗಳು (ಪಂಚಜನಾಃ) ಅವನಿಗೆ ವಿಧೇಯರಾಗಿದಾರೆ, ಇತರ ದೇವತೆಗಳಿಗೆಲ್ಲಾ ಅವನು ಜೀವನಾಧಾರವಾಗಿದಾನೆ, ಎಂದು ಮಿತ್ರನ ಗುಣವರ್ಣನೆ ಇದೆ. ಋ. ಸಂ. ೫-೮೧-೪ ರಲ್ಲಿ ಸವಿತೃ ಮತ್ತು ಮಿತ್ರರು ಒಂದೇ ಎಂದೂ, ವಾಜಸನೇಯಸಂಹಿತೆಯಲ್ಲಿ (ವಾ. ಸಂ. ೪-೩) ಮಿತ್ರನ ನಿಯಮಗಳನ್ನನುಸರಿಸಿಯೇ ವಿಷ್ಣುವು ಮೂರು ಹೆಜ್ಜೆಗಳನ್ನಿಟ್ಟನೆಂದೂ, ಋ. ಸಂ. ೧೦-೮-೪ ರಲ್ಲಿ ಉಷಃಕಾಲಕ್ಕೆ ಮುಂಚೆ ಸ್ಥಾಪಿತನಾದ ಅಗ್ನಿಯು ಮಿತ್ರನನ್ನು ತಾನೇ ತನಗೋಸ್ಕರ ಉತ್ಪತ್ತಿಮಾಡುತ್ತಾನೆಂದೂ, ಋ. ಸಂ. ೩-೫-೪ ರಲ್ಲಿ ದೀಪ್ತನಾದ ಅಗ್ನಿಯೇ ಮಿತ್ರನು ಎಂದೂ, ಋ. ಸಂ. ೫-೩-೧ ರಲ್ಲಿ ಅಗ್ನಿಯು ಜನಿತನಾದಾಗ ಮಿತ್ರನು ಎಂದೂ,

**ಮಿತ್ರೋ ಅಗ್ನಿರ್ಭವತಿ ಯತ್ಸಮಿದ್ಧೋ ಮಿತ್ರೋ ಹೋತಾ ವರುಣೋ ಜಾತವೇದಾಃ ।**
**ಮಿತ್ರೋ ಅಧ್ವರ್ಯುರಿಷಿರೋ ದಮೂನಾ ಮಿತ್ರಃ ಸಿಂಧೂನಾಮುತ ಪರ್ವತಾನಾಂ ॥**

(ಋ. ಸಂ. ೩-೫-೪)

ಎಂಬಲ್ಲಿ ಚೆನ್ನಾಗಿ ಪ್ರಜ್ವಲಿತನಾದ ಅಗ್ನಿಯೇ ಮಿತ್ರನೆಂದೂ, ಈ ಮಿತ್ರನೇ ಯಜ್ಞದಲ್ಲಿ ಹೋತ್ರವೂ, ಅಧ್ವರ್ಯವೂ, ವರುಣನೂ, ಜಾತವೇದಸ್ಸೆಂಬ ಅಗ್ನಿಯೂ, ಆಗಿರುವನೆಂದೂ, ಇವನು ನದಿಗಳಿಗೂ ಪರ್ವತಗಳಿಗೂ ಮಿತ್ರ (ಸ್ನೇಹಿತ, ಹಿತಕಾರಿ) ನೆಂದೂ ಮಿತ್ರನ ಗುಣಗಳ ವರ್ಣನೆ ಇದೆ.

**ವರುಣಃ—ವರುಣೋ ವೃಣೋತೀತಿ ಸತಃ** (ನಿ. ೧೦-೨) ಮೇಘ ಸಮೂಹದಿಂದ ಆವೃತನಾದ್ದರಿಂದ ಈ ದೇವತೆಗೆ ವರುಣನೆಂದು ಹೆಸರು ಎಂದು ಯಾಸ್ಕರ ನಿರ್ವಚನವಿದೆ.

ವರುಣನು ಅತಿ ಶ್ರೇಷ್ಠನಾದ ದೇವತೆ, ಸಾಮರ್ಥ್ಯಾದಿಗಳಲ್ಲಿ ಇಂದ್ರನಿಗೆ ಸಮಾನನು. ವರುಣದೇವತಾಕವಾದ ಮಂತ್ರಗಳ ಸಂಖ್ಯೆ ಬಹಳ ಕಡಿಮೆ. ವರುಣದೇವತಾಕವಾದ ಸೂಕ್ತಗಳು ಋಗ್ವೇದದಲ್ಲಿ ಹನ್ನೆರಡಿವೆ. ಆದರೆ ಮಿತ್ರಾವರಣನ್ನು ಒಟ್ಟಾಗಿ ಸ್ತುತಿಸುವ ಸೂಕ್ತಗಳು ಇಪ್ಪತ್ತುನಾಲ್ಕು ಇವೆ.

ವರುಣನಿಗೆ ಮಾನುಷದೇಹ, ಮಾನುಷವ್ಯಾಪಾರಗಳುಂಟು. ಆದರೆ ಭೌತಿಕಶರೀರ ಮತ್ತು ವ್ಯಾಪಾರಗಳಿಗಿಂತ ಹೆಚ್ಚಾಗಿ ಅವನ ನೈತಿಕವ್ಯಾಪಾರಾದಿಗಳ ಮತ್ತು ಕಾರ್ಯಗಳ ವರ್ಣನೆಯೇ ಹೆಚ್ಚಾಗಿ ಸೂಚಿತವಾಗಿದೆ. ಅವನಿಗೆ ಮುಖ, ಕಣ್ಣು, ತೋಳುಗಳು, ಕೈಗಳು ಮತ್ತು ಪಾದಗಳಿವೆ; ರಥ ನಡೆಯಿಸುತ್ತಾನೆ, ಕುಳಿತುಕೊಳ್ಳುತ್ತಾನೆ, ತಿನ್ನುತ್ತಾನೆ, ಪಾನಮಾಡುತ್ತಾನೆ ಇತ್ಯಾದಿ ಅವನ ಶರೀರವ್ಯಾಪಾರಗಳ ವಿವರಣೆ ಇದೆ. ಅಗ್ನಿ, ಮಿತ್ರ ಮತ್ತು ವರುಣರಿಗೆ ಸೂರ್ಯನೇ ನೇತ್ರನೆಂದು,

**ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।**

(ಋ. ಸಂ. ೧-೧೧೫-೧)

**ಉದು ತ್ಯಚ್ಚಕ್ಷುರ್ಮಹಿ ಮಿತ್ರಯೋರಾँ ಏತಿ ಪ್ರಿಯಂ ವರುಣಯೋರದಬ್ಧಂ ।**

(ಋ. ಸಂ. ೬-೫೧-೧)

**ಉದ್ವಾಂ ಚಕ್ಷುರ್ವರುಣ ಸುಪ್ರತೀಕಂ ದೇವಯೋರೇತಿ ಸೂರ್ಯಸ್ತತನ್ವಾನ್ ।**

(ಋ. ಸಂ. ೭-೬೧-೧)

**ಚಕ್ಷುರ್ಮಿತ್ರಸ್ಯ ವರುಣಸ್ಯ ದೇವಶ್ಚರ್ಮೇವ ಯಃ ಸಮವಿವ್ಯಕ್ ತಮಾಂಸಿ ।**

(ಋ ಸಂ. ೭-೬೩-೧)

**ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ ಮಹೋ ದೇವಾಯ ತದೃತಂ ಸಪರ್ಯತ ।**

(ಋ. ಸಂ. ೧೦-೩೭-೧)

ಎಂಬ ಋಕ್ಕುಗಳಲ್ಲಿ ಸ್ಪಷ್ಟವಾಗಿ ಹೇಳಿದೆ. ಸೂರ್ಯನು ಇವನಿಗೆ ನೇತ್ರಪ್ರಾಯನೆಂಬ ವಿಷಯವು ಮಿತ್ರಾವರುಣ ದೇವತಾಕವಾದ ಸೂಕ್ತಗಳ ಮೊದಲನೆಯ ಋಕ್ಕಿನಲ್ಲಿಯೇ ಇರುವುದರಿಂದ ಮಿತ್ರಾವರುಣರ ಪ್ರಸ್ತಾಪ ಬಂದಾಗಲೆಲ್ಲಾ ಮೊದಲು ಗೋಚರವಾಗುವುದೇ ಈ ಅಂಶವೆಂದು ತೋರುತ್ತದೆ. ಮತ್ತು ಋ. ಸಂ. ೭-೬೬-೧೦ ನೆಯ ಋಕ್ಕಿನಲ್ಲಿ

ಅರ್ಯಮಾ, ಮಿತ್ರ, ವರುಣರು ಸೂರ್ಯನೇತ್ರರೆಂದು ಹೇಳಿದೆ. ವರುಣನು ದೂರದೃಷ್ಟಿಯುಳ್ಳವನು (**ಉರುಚಕ್ಷಸಂ**) ಎಂದು ಋ. ಸಂ. ೧-೨೫-೫ ; ೧-೨೫-೧೬ ; ಮೊದಲಾದ ಋಕ್ಕುಗಳಲ್ಲಿ ಹೇಳಿದೆ.

**ಆ ನೋ॑ ಬರ್ಹಿ॑ ರಿಶಾದಸೋ॒ ವರುಣೋ॒ ಮಿತ್ರೋ॑ ಅರ್ಯಮಾ । ಸೀದಂತು ಮನುಷೋ॒ ಯಥಾ ॥**

(ಋ. ಸಂ. ೧-೨೬-೪)

**ವ್ರತೇನ ಸ್ಥೋ॑ ಧ್ರುವಕ್ಷೇಮಾ ಧರ್ಮಣಾ ಯಾತಯಜ್ಜನಾ । ನಿ ಬರ್ಹಿಷಿ ಸದತಂ ಸೋಮ- ಪೀತಯೇ॑ ॥**

(ಋ. ಸಂ. ೫-೭೨-೨)

ಇತ್ಯಾದಿ ಋಕ್ಕುಗಳಲ್ಲಿ ಸೋಮಪಾನಕ್ಕಾಗಿ ಮಿತ್ರ, ವರಣ, ಅರ್ಯಮರನ್ನು ಯಜ್ಞವೇದಿಯಲ್ಲಿ ಹಾಸಿರುವ ದರ್ಭೆಯ ಮೇಲೆ ಬಂದು ಕುಳಿತುಕೊಳ್ಳಬೇಕೆಂದು ಪ್ರಾರ್ಥಿಸಲಾಗಿದೆ.

**ಯದೀ॑ ಸಖಾಯಾ ಸಖ್ಯಾ॑ಯ ಸೋಮೈ॑ಃ ಸುತೇಭಿಃ ಸುಪ್ರಯಸಾ ಮಾದಯೈತೇ॑ ।**

(ಋ. ಸಂ. ೪-೪೧-೩)

ಇತ್ಯಾದಿ ಋಕ್ಕುಗಳಲ್ಲಿ ವರುಣನು ಇಂದ್ರಾದಿ ದೇವತೆಗಳೊಡನೆ ಸೋಮಪಾನ ಮಾಡುತ್ತಾನೆಂದು ಹೇಳಿದೆ.

**ಬಿಭ್ರದ್ದ್ರಾಪಿಂ ಹಿರಣ್ಯಯಂ ವರುಣೋ॑ ವಸ್ತ ನಿರ್ಣಿಜಂ । ಪರಿ ಸ್ಪಶೋ॒ ನಿ ಷೇದಿರೇ ।**

(ಋ. ಸಂ. ೧-೨೫-೧೩)

ಎಂಬ ಋಕ್ಕಿನಲ್ಲಿ ವರುಣನು ಸುವರ್ಣಮಯವಾದ ಮೇಲುಹೊದಿಕೆ ಅಥವಾ ನಿಲುವಂಗಿಯನ್ನೂ ಮತ್ತು ಹೊಳೆಯುವ ಉಡುಪನ್ನೂ ಧರಿಸುತ್ತಾನೆಂಬ ವರ್ಣನೆಯಿದೆ. ವರುಣನ ರಥವು ಸುವರ್ಣಮಯವಾದುದು, ಮತ್ತು ಸೂರ್ಯನಂತೆ ಕಾಂತಿಯುಕ್ತವಾದದ್ದು ಮತ್ತು ಅದರಲ್ಲಿ ಅಶ್ವಪ್ರಚೋದಕವಾದ ಚಾವಟಿಗಳಿವೆ. ಮಿತ್ರಾವರುಣರು ಆಕಾಶದಲ್ಲಿ ಬಹಳ ಎತ್ತರವಾದ ಪ್ರದೇಶದಲ್ಲಿ ರಥಾರೋಹಣಮಾಡುತ್ತಾರೆ (ಋ. ಸಂ. ೫-೬೩-೧) ಇತ್ಯಾದಿ ವರ್ಣನೆಗಳಿವೆ.

ಮಿತ್ರಾವರುಣರ ವಾಸಗೃಹವು ಸುವರ್ಣಮಯವಾದುದು ಮತ್ತು ಅದು ಮೇಲು ಲೋಕದಲ್ಲಿದೆ. ಮತ್ತು ವರುಣನು ತನ್ನ ಪ್ರಾಸಾದದಲ್ಲಿ ಕುಳಿತು—

**ನಿ ಷಸಾದ ಧೃತವ್ರತೋ॒ ವರುಣಃ ಪಸ್ತ್ಯಾ॒ಸ್ವಾ । ಸಾಮ್ರಾಜ್ಯಾಯ ಸುಕ್ರತುಃ ।**

**ಅತೋ॒ ವಿಶ್ವಾನ್ಯದ್ಭುತಾ ಚಿಕಿತ್ವಾ ಅಭಿ ಪಶ್ಯತಿ । ಕೃತಾನಿ ಯಾ ಚ ಕರ್ತ್ವಾ ॥**

(ಋ. ಸಂ. ೧-೨೫-೧೦, ೧೧)

ಪ್ರಪಂಚದಲ್ಲಿ ನಡೆಯುವುದನ್ನೆಲ್ಲಾ ಸೋಡುತ್ತಾನೆ. ಮಿತ್ರಾವರುಣರ ವಾಸಸ್ಥಾನವು ಬಹಳ ದೊಡ್ಡದು, ಬಹಳ ಎತ್ತರವಾದುದು, ಸಹಸ್ರಸ್ತಂಭಗಳನ್ನಾಶ್ರಯಿಸಿ ದೃಢವಾಗಿದೆ. ಮತ್ತು ಅವರ ಮನೆಗೆ ಸಹಸ್ರದ್ವಾರಗಳಿವೆ. (ಋ. ಸಂ. ೭-೮೮-೫) ಸರ್ವದರ್ಶಿಯಾದ ಸೂರ್ಯನು ತನ್ನ ವಾಸಸ್ಥಾನದಿಂದ ಹೊರಟು ಮಿತ್ರಾವರುಣರ ಮನೆಗೆ ಮನುಷ್ಯರ ಕೆಲಸಗಳನ್ನು ತಿಳಿಸಲು ಹೋಗುತ್ತಾನೆ. ಮತ್ತು ಅವರ ಪ್ರಿಯವಾದ ಮನೆಯನ್ನು ಪ್ರವೇಶಿಸುತ್ತಾನೆ ಇತ್ಯಾದಿ ವರ್ಣನೆಗಳೂ ಇವೆ.

ವರುಣನು ಒಂಟಿಯಾಗಿ ಅಥವಾ ಮಿತ್ರಸಹಿತನಾಗಿ ಇತರ ದೇವತೆಗಳಂತೆ ಅನೇಕ ಕಡೆ ರಾಜನೆಂದು ಕರೆಯಲ್ಪಟ್ಟಿದ್ದಾನೆ.

**ಅಬುಧ್ನೇ ರಾಜಾ ವರುಣೋ ವನಸ್ಯೋರ್ಧ್ವಂ ಸ್ತೂಪಂ ದದತೇ ಪೂತದಕ್ಷಃ ।**

(ಋ. ಸಂ. ೧-೨೪-೭)

**ತ್ವಂ ವಿಶ್ವೇಷಾಂ ವರುಣಾಸಿ ರಾಜಾ ಯೇ ಚ ದೇವಾ ಅಸುರ ಯೇ ಚ ಮರ್ತಾಃ ।**

(ಋ ಸಂ. ೨-೨೭-೧೦)

**ತೇನ ವಿಶ್ವಸ್ಯ ಭುವನಸ್ಯ ರಾಜಾ ಯವಂ ನ ವೃಷ್ಟಿರ್ವ್ಯುನತ್ತಿ ಭೂಮ ।**

(ಋ. ಸಂ. ೫-೮೫-೩)

ಇತ್ಯಾದಿಋಕ್ಕುಗಳಲ್ಲಿ ವರುಣನು ಮನುಷ್ಯರಿಗೆ ಮಾತ್ರವೇ ಅಲ್ಲ. ದೇವತೆಗಳಿಗೂ, ಸಕಲ ಲೋಕಗಳಿಗೂ ರಾಜನೆಂದು ಹೇಳಿದೆ. ವರುಣನಲ್ಲದೆ ಇಂದ್ರ, ಯಮ, ಸೋಮ ಮೊದಲಾದ ದೇವತೆಗಳಿಗೂ ರಾಜನೆಂಬ ಗೌರವಸೂಚಕವಾದ ಹೆಸರಿದೆ.

ಇಂದ್ರನ ಸಂಬಂಧವಾದ ಕಥೆಗಳು ಅನೇಕವಿದೆ. ಆದರೆ ವರುಣನ ವಿಷಯದಲ್ಲಿ ಇದಕ್ಕೆ ತೀರಾ ವಿರುದ್ಧ ವಾಗಿದೆ. ಒಂದಾದರೂ ಕಥೆಗಳಿಲ್ಲ. ವರುಣನು ಭೌತಿಕ ಮತ್ತು ನೈತಿಕ ವಿಧಿಗಳ (**ವರುಣಸ್ಯ ವ್ರತಾನಿ**) ನಿಯಾಮಕನೆಂದು ಬಹಳವಾಗಿ ಹೊಗಳಿದೆ. ಮಿತ್ರಾವರುಣರ ದೈವಶಕ್ತಿಯನ್ನು **ಮಾಯಾ** ಎಂಬ ಪದದಿಂದ ವರ್ಣಿಸಿದೆ. ಇದು ದೇವತೆಗಳಿಗೆ ಅನ್ವಯಿಸಿದರೆ ಒಳ್ಳೆಯದನ್ನು ಮಾಡಲು ಅವರಿಗಿರುವ ಗೂಢವಾದ ಶಕ್ತಿ ಎಂತಲೂ, ರಾಕ್ಷಸರಿಗೆ ಅನ್ವಯಿಸುವ ಸಂದರ್ಭದಲ್ಲಿ ಅದೇ ಪದಕ್ಕೆ ಕೆಟ್ಟದ್ದನ್ನು ಮಾಡಲು ಅವರಿಗಿರುವ ಕುಟಿಲವಾದ ಶಕ್ತಿ ಎಂತಲೂ ಅರ್ಥ. ಒಳ್ಳೆಯ ಅರ್ಥದಲ್ಲಿ ಮಿತ್ರಾವರುಣರಿಗೆ ಈ ಪದವು ಸಲ್ಲುತ್ತದೆ. ಕೆಟ್ಟ ಅರ್ಥದಲ್ಲಿ ರಾಕ್ಷಸ ರಿಗೆ ಅನ್ವಯಿಸುತ್ತದೆ. ಅಸುರಶಬ್ದಾರ್ಥವಂತೆ ಮಾಯಾಶಬ್ದಕ್ಕೂ ಎರಡರ್ಥಗಳಲ್ಲಿಯೂ ಪ್ರಯೋಗವಿದೆ. ತನ್ನಲ್ಲಿ ನಿಗೂಢವಾದ ಈ ಮಾಯಾಶಕ್ತಿಯಿಂದ ವರುಣನು ವಾಯುಮಂಡಲದಲ್ಲಿ ನಿಂತು ಅಳತೆಕಡ್ಡಿಯಿಂದ ಅಳೆಯುವಂತೆ ಸೂರ್ಯನಿಂದ ಭೂಮಿಯನ್ನು ಅಳೆಯುತ್ತಾನೆ. ಸೂರ್ಯನು ಅಂತರಿಕ್ಷವನ್ನು ದಾಟುವಂತೆ ಮಾಡಿ ಅವನನ್ನು ಮಳೆ ಮೋಡಗಳಿಂದ ಮುಸಕಾಗುವಂತೆ ಮಾಡುತ್ತಾನೆ. ಆಗ ಮಧುಮಿಶ್ರಿತವಾದ (ಸಿಹಿಯಾದ) ಹನಿಗಳು ಉದುರುತ್ತವೆ. (ಋ. ಸಂ. ೫-೬೩-೪) ಆಕಾಶವು ಮಳೆಗರೆಯುವಂತೆ ಮಾಡುತ್ತಾನೆ. ಆದ್ದರಿಂದ ಈ **ಮಾಯಾ** ಎಂಬ ಪದವು ಋ. ಸಂ. ೬-೪೮-೧೪; ೭-೨೮-೪; ೧೦-೯೯-೧೦: ೧೦-೧೪೭-೫; ಮೊದಲಾದ ಋಕ್ಕುಗಳಲ್ಲೆಲ್ಲಾ ದೇವತೆಗಳಲ್ಲಿ ಮುಖ್ಯವಾಗಿ ವರುಣನಿಗೇ ಹೇಳಿದೆ.

ಪ್ರಕೃತಿನಿಯಮಗಳನ್ನು ವಿಧಿಸುವವನು ವರುಣನು. ಅವನೇ ಭೂಮಿ ಮತ್ತು ಸ್ವರ್ಗವನ್ನು ಸ್ಥಾಪಿಸಿ ದನು. ಮತ್ತು

**ಆಸೀದದ್ವಿಶ್ವಾ ಭುವನಾನಿ ಸಂರಾಡ್ವಿಶ್ವೇತ್ತಾನಿ ವರುಣಸ್ಯ ವ್ರತಾನಿ ।**

(ಋ. ಸಂ. ೮-೪೨-೧)

ಎಂಬ ಋಕ್ಕಿನಲ್ಲಿ ವರುಣನು ಸಮಸ್ತ ಲೋಕಗಳಲ್ಲಿಯೂ ವಾಸಮಾಡುವನೆಂದೂ, ಅವನ ನಿಯಮಾದಿಗಳು ಅಲ್ಲೆಲ್ಲಾ ಆಚರಿಸಲ್ಪಡುವುದೆಂದೂ,

**ತಿಸ್ರೋ ದ್ಯಾವೋ ನಿಹಿತಾ ಅಂತರಸ್ಮಿನ್ ತಿಸ್ರೋ ಭೂಮೀರುಪರಾಃ ಷಡ್ವಿಧಾನಾಃ ।**

(ಋ. ಸಂ. ೭-೮೭-೫)

ಎಂಬಲ್ಲಿ ಮೂರು ಊರ್ಧ್ವಲೋಕಗಳೂ, ಮೂರು ಭೂಲೋಕಗಳೂ (ಅಧೋಲೋಕಗಳೂ) ಅವನ ವಶದಲ್ಲಿವೆಯೆಂದೂ ಹೇಳಿದೆ. ವರುಣ ಮತ್ತು ಮಿತ್ರರು ಪ್ರಪಂಚವೆಲ್ಲವನ್ನೂ ಆಳುತ್ತಾರೆ. (ಋ. ಸಂ. ೫-೬೩-೭) ಅವರೇ ಸಮಸ್ತ ಜಗತ್ತಿಗೂ ರಕ್ಷಕರು. (ಋ. ಸಂ. ೨-೨೭-೪) ವರುಣನು ಸ್ವರ್ಗ, ಭೂಮಿ, ಆಕಾಶಗಳಿಗೆ ಆಧಾರಭೂತನಾಗಿದ್ದಾನೆ. (ಋ. ಸಂ. ೫-೬೯-೧, ೪) ಅವನು ಉದಕವಲ್ಲಿ ಅಗ್ನಿಯನ್ನೂ, ಆಕಾಶದಲ್ಲಿ ಸೂರ್ಯನನ್ನೂ, ಕಲ್ಲಿನಮೇಲೆ ಸೋಮವನ್ನೂ ಇಟ್ಟಿದ್ದಾನೆ. ಸೂರ್ಯನಿಗೋಸ್ಕರ ಅಗಲವಾದ ದಾರಿಯನ್ನು ಮಾಡಿದಾನೆ. ವರುಣ, ಮಿತ್ರ ಮತ್ತು ಅರ್ಯಮರು ಸೂರ್ಯನಿಗೋಸ್ಕರ ದಾರಿಯನ್ನು ಬಿಡಿಸುತ್ತಾರೆ. (ಋ. ಸಂ. ೭-೬೦-೪) ಇತ್ಯಾದ್ಯನೇಕ ಋಕ್ಕುಗಳಲ್ಲಿ ವರುಣನ ಅಧಿಕಾರ ವರ್ಣನೆ ಇದೆ.

ತೈತ್ತಿರೀಯ ಸಂಹಿತೆಯಲ್ಲಿ (ತೈ.ಸಂ. ೬-೪-೮-೪) **ಮಿತ್ರೋಽಹರಜನಯದ್ವರುಣೋ ರಾತ್ರಿಂ**—ಎಂದರೆ ಮಿತ್ರನು ಹಗಲನ್ನೂ, ವರುಣನು ರಾತ್ರಿಯನ್ನೂ ಸೃಷ್ಟಿಮಾಡಿದರೆಂದಿದೆ. ಆದ್ದರಿಂದ—**ಮೈತ್ರಂ ವಾ ಅಹಃ । ವಾರುಣೀ ರಾತ್ರಿಃ**—ಎಂದರೆ ಮಿತ್ರನು ಹಗಲಿಗೆ ಅಧಿಪತಿಯೆಂದೂ, ವರುಣನು ರಾತ್ರಿಗೆ ಅಧಿಪತಿಯೆಂದೂ ಅನೇಕ ಕಡೆಗಳಲ್ಲಿ ಹೇಳಿದೆ. (ತೈ. ಸಂ. ೨-೧-೭-೪) ಒಂದು ಸ್ಥಳದಲ್ಲಿ ವರುಣನು ಋತುಗಳನ್ನು ವಿಭಜಿಸಿದನೆಂದು ಹೇಳಿದೆ.

**ವೇದ ಮಾಸೋ ಧೃವವ್ರತೋ ದ್ವಾದಶ ಪ್ರಜಾವತಃ । ವೇದಾ ಯ ಉಪಜಾಯತೇ ।**

(ಋ. ಸಂ. ೧-೨೫-೮)

ಎಂಬಲ್ಲಿ ವರುಣನಿಗೆ ಹನ್ನೆರಡು ತಿಂಗಳೂ ತಿಳಿದಿವೆಯೆಂದೂ,

**ವಿ ಯೇ ದಧುಃ ಶರದಂ ಮಾಸಮಾದಹರ್ಯಜ್ಞಮಕ್ತುಂ ಚಾದೃಚಂ ।**
**ಅನಾಪ್ಯಂ ವರುಣೋ ಮಿತ್ರೋ ಅರ್ಯಮಾ ಕ್ಷತ್ರಂ ರಾಜಾನ ಆಶತ ॥**

(ಋ. ಸಂ. ೭-೬೬-೧೧)

ಎಂಬ ಋಕ್ಕಿನಲ್ಲಿ ಮಿತ್ರ, ವರುಣ, ಅರ್ಯಮರು, ಶರತ್ಕಾಲ, ತಿಂಗಳು, ಹಗಲು ಮತ್ತು ರಾತ್ರಿಗಳನ್ನು ವಿಂಗಡಿಸಿದರು ಎಂದು ಹೇಳಿದೆ.

ಉದಕವನ್ನು ಕ್ರಮಪಡಿಸುವವನೂ ಅವನೇ ಎಂದು ಅನೇಕ ಕಡೆಗಳಲ್ಲಿ ಹೇಳಿದೆ. ನದಿಗಳು ಹರಿಯುವಂತೆ ಮಾಡಿದವನೂ ಅವನೇ. ಅವನ ಅಪ್ಪಣೆಯ ಮೇರೆಯೇ ಅವು ಸತತವಾಗಿ ಪ್ರವಹಿಸುತ್ತವೆ. (ಋ ಸಂ. ೨-೨೮-೪) ನದಿಗಳು ವೇಗವಾಗಿ ಸಮುದ್ರದೊಳಕ್ಕೆ ನೀರು ತಂದು ಸುರಿಯುತ್ತಿದ್ದರೂ ಅದನ್ನು ತುಂಬದಿರುವುದು ಅವನ ಹುದುಗಿದ ಶಕ್ತಿಯಿಂದಲೇ; (ಋ. ಸಂ. ೫-೮೫-೬) ವರುಣ ಮತ್ತು ಮಿತ್ರರು ನದಿಗಳಿಗೆ ಒಡೆಯರು. ವರುಣನು ಸಾಗರಗಳಿಗೆ ಒಡೆಯನೆಂಬುದು ಸಿದ್ಧವಾದ ಅಂಶವಾದರೂ ಋಗ್ವೇದದಲ್ಲಿ ಬರುವುದು ಬಹಳ ಅಪರೂಪ. ಪ್ರಾಯಶಃ ಇದು ಅಮುಖ್ಯವೆಂಬುದೇ ಇದಕ್ಕೆ ಕಾರಣವಿರಬಹುದು. ಪುರಾಣಾದಿಗಳಲ್ಲಿ ವರುಣನು ಜಲಾಧಿಪತಿಯೆಂದು ಪ್ರಸಿದ್ಧನಾಗಿದಾನೆ. ಮತ್ತು ವರುಣನು ಅಷ್ಟದಿಕ್ಪಾಲಕರಲ್ಲಿ ಒಬ್ಬನಾಗಿ ಪಶ್ಚಿಮ ದಿಕ್ಕಿಗೆ ಅಧಿಪತಿಯೆಂಬುದು ಪುರಾಣಾದಿಗಳಲ್ಲಿ ಹೇಳಿರುವ ವಿಷಯ. ಋಗ್ವೇದದಲ್ಲಿ ಅದಕ್ಕೆ ಯಾವ ಸಮರ್ಥನೆಯೂ ಇಲ್ಲ. ಸಾಧಾರಣವಾಗಿ ವರುಣನಿಗೆ ಸಂಬಂಧವಿರುವುದೆಲ್ಲಾ ವಾಯುಮಂಡಲದೊಡನೆ ಇರುವ ನೀರಿನೊಡನೆಯೇ. ವೃಷ್ಟಿಗಾಗಿ ಪ್ರಾರ್ಥಿಸಲ್ಪಡುವ ದೇವತೆ

ಗಳಲ್ಲಿ ವರುಣ ಮತ್ತು ಮಿತ್ರರೇ ಪ್ರಮುಖರು. ಪರ್ವತಗಳೆಲ್ಲಾ ಮೋಡಗಳಿಂದ ಆವೃತವಾಗಿರುವಾಗ ಬುಡಮೇಲಾದ ಬಾನಿಯಿಂದ (ಮೋಡದಿಂದ) ಸ್ವರ್ಗ, ಭೂಮಿ ಮತ್ತು ಆಕಾಶಗಳಿಗೆ ನೀರ್ಗರೆದು ಭೂಮಿಯನ್ನೆಲ್ಲಾ ವರುಣನು ತೇವವಾಗಿ ಮಾಡುವನು ಎಂದು ಋ. ಸಂ. ೫-೮೫-೩, ೪ನೆಯ ಋಕ್ಕುಗಳಲ್ಲಿ ಹೇಳಿದೆ. ಒಂದು ಇಡೀ ಸೂಕ್ತವೇ (ಎಂದರೆ ಋ. ಸಂ. ೫-೬೩ನೆಯ ಸೂಕ್ತವು) ಅವರ ಮಳೆಗರೆಯುವ ಶಕ್ತಿಯನ್ನೂ ಸೂಚಿಸುತ್ತದೆ. ಯಜುರ್ವೇದ ಸಂಹಿತೆಯಲ್ಲಿ (ತೈ. ಸಂ. ೫-೫-೪-೧) **ಆಪೋ ವರುಣಸ್ಯ ಪತ್ನಯ ಆಸನ್**—ನೀರುಗಳು ವರುಣನ ಪತ್ನಿಯ ರೆಂದೂ (ತೈ ಸಂ. ೬-೪-೩-೨) **ಮಿತ್ರಾವರುಣೌ ವಾ ಅಪಾಂ ನೇತಾರೌ**—ಮಿತ್ರಾವರುಣರು ನೀರಿಗೆ ನಾಯಕರು ಎಂದೂ ಹೇಳಿದೆ.

ವರುಣನ ಶಾಸನಗಳು ಚೆನ್ನಾಗಿ ಸ್ಥಾಪಿತವಾಗಿವೆಯೆಂದು ಪದೇ ಪದೇ ಹೇಳಲ್ಪಟ್ಟಿವೆ. ಈ ಕಾರಣದಿಂದಲೇ ಅವನಿಗೆ **ಧೃತವ್ರತ** ಎಂದು ಹೆಸರು. ಮಿತ್ರಾವರುಣರಿಬ್ಬರಿಗೂ ಈ ವಿಶೇಷಣವು ಸಂದಿದೆ.

**ಪರಿ ಧಾಮಾನಿ ಮರ್ಮೃಶದ್ವರುಣಸ್ಯ ಪುರೋ ಗಯೇ ವಿಶ್ವೇ ದೇವಾ ಅನು ವ್ರತಂ ನಭಂತಾಮನ್ಯಕೇ ಸಮೇ ||**

(ಋ. ಸಂ. ೮-೪೧-೭)

**ನ ವಾಂ ದೇವಾ ಅಮೃತಾ ಆ ಮಿನಂತಿ ವ್ರತಾನಿ ಮಿತ್ರಾವರುಣಾ ಧ್ರುವಾಣಿ |**

(ಋ. ಸಂ. ೫-೬೯-೪)

ಇತ್ಯಾದಿ ಋಕ್ಕುಗಳಲ್ಲಿ ದೇವತೆಗಳೇ ಮಿತ್ರಾವರುಣಾರ್ಯಮರ ಅಪ್ಪಣೆಗಳನ್ನು ಪಾಲಿಸುತ್ತಾರೆಂದೂ ಅನಾದಿ ದೇವತೆಗಳೂ ಕೂಡ ಅವರ ಧೃತವ್ರತಗಳನ್ನು ಮೀರಲಾರರೆಂದೂ ಹೇಳಿದೆ. ಮಿತ್ರಾವರುಣರು ನಿಯಮ (ಋತ) ಮತ್ತು ಬೆಳಕಿಗೆ ನಿಯಾಮಕರು. ಈ ಶಾಸನಗಳ ಬಲದಿಂದಲೇ ಅವರು ನಿಯಮಗಳಿಗೆ ಬೆಂಬಲ ಕೊಡಲು ಸಾಧ್ಯ ವಾಗಿದೆ. ಈ ಗುಣವು ವಿಶೇಷವಾಗಿ ಇವರಿಬ್ಬರಲ್ಲಿ, ಒಂದೊಂದುವೇಳೆ ಆದಿತ್ಯರಲ್ಲಿ, ಅಥವಾ ಇತರ ಸಾಧಾರಣ ದೇವತೆಗಳಲ್ಲಿಯೂ ಕಂಡುಬರುತ್ತದೆ. ಅವರು ಸತ್ಯ (ಋತ) ಮತ್ತು ನ್ಯಾಯವನ್ನೂ ಅಭಿವೃದ್ಧಿಗೊಳಿಸುವವರು **(ಋತಸ್ಯ ಗೋಪಾಃ)** ಎಂದರೆ ನಿಯಮಗಳನ್ನು ಪಾಲಿಸುವವರು (ಅಥವಾ ಪಾಲಿಸುವಂತೆ ಮಾಡುವವರು) ಎಂಬ ವಿಶೇಷಣವು ಮಿತ್ರಾವರುಣರಿಗೆ ಅನೇಕ ವೇಳೆ ಪ್ರಯೋಗಿಸಿರುವುದು ಕಂಡುಬರುತ್ತದೆ.

ವರುಣನ ಶಕ್ತಿಯು ಅಗಾಧವಾದುದು. ಹಾರುವ ಪಕ್ಷಿಗಳಾಗಲಿ, ಹರಿಯುವ ನದಿಗಳಾಗಲಿ ಅವನ ರಾಜ್ಯದ ಗಡಿಯ ಮೇರೆಯನ್ನು ಸೇರಲಾರವು; ಅವನ ಶಕ್ತಿಯನ್ನು ಮೀರಲಾರವು; ಅವನ ಕೋಪವನ್ನು ತಡೆಯಲಾರವು. ಮಿತ್ರಾವರುಣರ ಸೀಮೆಯ ಎಲ್ಲೆಕಟ್ಟನ್ನು ಆಕಾಶ ಮತ್ತು ನದಿಗಳು ಕೂಡ ತಲಪಿಲ್ಲ. ಸಮಸ್ತವೂ ವರುಣನಲ್ಲಿಯೇ ಅಡಗಿವೆ. ಎಲ್ಲಾ ಪ್ರಾಣಿಗಳ ವಸತಿಗಳೂ, ಮೂರು ಸ್ವರ್ಗಲೋಕಗಳೂ, ಮೂರು ಭೂಲೋಕಗಳೂ ಅವನಲ್ಲಿಯೇ ನಿಹಿತವಾಗಿವೆ. ವರುಣನು ಸರ್ವಜ್ಞನು. ಆಕಾಶದಲ್ಲಿ ಪಕ್ಷಿಗಳ ಹಾರಾಟ, ಸಮುದ್ರದಲ್ಲಿ ನಾವೆಗಳ ಸಂಚಾರ, ದೂರ ಗಾಮಿಯಾದ ವಾಯುವಿನ ಗತಿ, ಇವೆಲ್ಲವೂ ಅವನಿಗೆ ತಿಳಿದಿದೆ. ಹಿಂದೆ ಕಳೆದುಹೋದ ಅಥವಾ ಮುಂದೆ ಬರುವ ಎಲ್ಲಾ ಪದಾರ್ಥಗಳನ್ನೂ ಅವನು ನೋಡುತ್ತಾನೆ. ಮನುಷ್ಯರ ಸತ್ಯಾಸತ್ಯಕರ್ಮಗಳ ಸಾಕ್ಷಿಯಾಗಿದ್ದಾನೆ. ಪ್ರತಿಯೊಬ್ಬ ಮನುಷ್ಯನು ಮಾಡುವ ಕಾರ್ಯಗಳು, ಯೋಚನೆಗಳು, ಉಪಾಯಗಳು ಎಲ್ಲವೂ ವರುಣನಿಗೆ ತಿಳಿಯುತ್ತವೆ. ಸ್ವರ್ಗ

ಮತ್ತು ಭೂಲೋಕಗಳಲ್ಲಿ ಮತ್ತು ಅವುಗಳಿಂದಾಚೆ ಇರುವುದೆಲ್ಲವನ್ನೂ ಅವನು ಗ್ರಹಿಸಬಲ್ಲನು. ಆಕಾಶದಾಚೆ ಎಷ್ಟೋ ದೂರ ಓಡಿಹೋದರೂ ಯಾರೂ ವರುಣನ ದೃಷ್ಟಿಪಥವನ್ನು ಬಿಟ್ಟುಹೋಗಲಾಗುವುದಿಲ್ಲ.

ನೀತಿನಿಯಾಮಕನಾದುದರಿಂದ ವರುಣನಿಗೆ ಪಾಪವೆಂದರೆ ಬಹಳ ಕೋಪ ಬರುತ್ತದೆ. ಅವನ ನಿಯಮಗಳನ್ನುಲ್ಲಂಘಿಸಿದರೂ ಕೋಪ, ಇನಿರಡಕ್ಕೂ ಅವನು ಬಹಳ ಕ್ರೂರ ಶಿಕ್ಷೆಯನ್ನು ವಿಧಿಸುತ್ತಾನೆ. ಪಾಪಿಗಳನ್ನು ಬಂಧಿಸುವ ವರುಣನ ಪಾಶವು ಋ. ಸಂ. ೧–೨೪–೧೫; ೧–೨೫–೧೧: ೬–೭೪–೪; ೧೦–೮೫–೨೪ ಮೊದಲಾದ ಋಕ್ಕುಗಳಲ್ಲಿ ಉಕ್ತವಾಗಿವೆ. ಆ ಪಾಶವು ಅನೃತವಾದಿಯನ್ನು ಬಂಧಿಸುತ್ತದೆ; ಸತ್ಯವಾದಿಯನ್ನು ಬಿಟ್ಟುಬಿಡುತ್ತದೆ.

**ಯುವೋ ರಾಷ್ಟ್ರಂ ಬೃಹದಿನ್ವತಿ ದ್ಯೌರ್ಯೌ ಸೇತೃಭಿರರಜ್ಜುಭಿಃ ಸಿನೀಥಃ ।**
**ಪರಿ ನೋ ಹೇಳೋ ವರುಣಸ್ಯ ವೃಜ್ಯಾ ಉರುಂ ನ ಇಂದ್ರಃ ಕೃಣವದು ಲೋಕಂ ॥**

(ಋ. ಸಂ. ೭–೮೪–೨)

ಎಂಬ ಋಕ್ಕಿನಲ್ಲಿ ಇಂದ್ರಸಹಚರಿತನಾದ ವರುಣನು ಹಗ್ಗವಲ್ಲದ ಬಂಧನಗಳಿಂದ ಕಟ್ಟುತ್ತಾನೆ ಎಂದು ಹೇಳಿದೆ. ಈ ಪಾಶವೆಂಬ ಶಬ್ದವು ಇಡೀ ಋಗ್ವೇದದಲ್ಲಿ ಒಂದು ಕಡೆ ಮಾತ್ರ ಅಗ್ನಿದೇವತಾಕವಾದ ಮಂತ್ರದಲ್ಲಿ ಬಂದಿದೆ. ಅದೂ ಅವನ ಭಕ್ತರನ್ನು ಬಂಧಿಸಿರುವ ಪಾಶವನ್ನು ಬಿಡಿಸು ಎಂದು ಪ್ರಾರ್ಥಿಸುವ ಸಂದರ್ಭದಲ್ಲಿ. ಆದ್ದರಿಂದ ಈ ಪಾಶಬಂಧನ ಮತ್ತು ಮೋಚನ (ಪಾಶ ಬಿಡಿಸುವ) ಕಾರ್ಯಗಳು ವರುಣನಿಗೆ ಮಾತ್ರ ಸಂಬಂಧಿಸಿದೆಯೆಂದು ಹೇಳಬಹುದು. ಮಿತ್ರನಿಂದ ಕೂಡಿದ ವರುಣನು ಅನೃತವನ್ನು ಓಡಿಸುವವನು, ದ್ವೇಷಿಸುವವನು ಮತ್ತು ಶಿಕ್ಷಿಸುವವನು. ಮಿತ್ರಾವರುಣರು ತಮ್ಮ ಪೂಜೆಯ ವಿಷಯದಲ್ಲಿ ತಾತ್ಸಾರದಿಂದಿರುವವರನ್ನು ಶಿಕ್ಷಿಸುತ್ತಾರೆ. ಆದರೆ ವರುಣನು ಪಶ್ಚಾತ್ತಾಪಪಡುವವರನ್ನು ಮನ್ನಿಸುತ್ತಾನೆ; ಹಗ್ಗದಂತೆ ಬಿಚ್ಚುತ್ತಾನೆ; ಮತ್ತು ಪಾಪಪರಿಹಾರ ಮಾಡುತ್ತಾನೆ. ಸ್ವತಃ ಮಾಡಿದ ಪಾಪದಿಂದ ಮಾತ್ರವಲ್ಲ. ಅವನ ಪೂರ್ವೀಕರು ಮಾಡಿದ ಪಾಪದಿಂದಲೂ ಮನುಷ್ಯನನ್ನು ಬಿಡುಗಡೆ ಮಾಡುತ್ತಾನೆ. ತನ್ನಿಂದ ವಿಧಿಸಲ್ಪಟ್ಟ ನಿಯಮಗಳನ್ನೇ ಪ್ರತಿನಿತ್ಯವೂ ಉಲ್ಲಂಘಿಸಿ, ಅನಂತರ ಪಶ್ಚಾತ್ತಾಪಪಡುವವರನ್ನೂ ಉಳಿಸಿ ಕೊಡುತ್ತಾನೆ. ಮತ್ತು ತನ್ನ ಆಜ್ಞೆಗಳನ್ನು ವಿಸ್ಮೃತಿಯಿಂದ ಉಲ್ಲಂಘಿಸಿದವರಲ್ಲಿ ಕನಿಕರ ತೋರಿಸುತ್ತಾನೆ. ವರುಣನಲ್ಲಿ ನೂರುಗಟ್ಟಲೆ, ಸಾವಿರಗಟ್ಟಲೆ ಔಷಧಿಗಳಿವೆ. ಅವನು ಮೃತ್ಯುವನ್ನು ದೂರಮಾಡುತ್ತಾನೆ; ಮತ್ತು ಪಾಪವನ್ನು ಪರಿಹಾರ ಮಾಡುತ್ತಾನೆ ಅವನು ಪ್ರಾಣಾಪಹಾರ ಮಾಡಬಲ್ಲನು; ಜೀವದಾನವನ್ನೂ ಮಾಡಬಲ್ಲನು. ನಿತ್ಯತ್ವವನ್ನು ರಕ್ಷಣೆ ಮಾಡುವುದರಲ್ಲಿ ಬಹಳ ಕುಶಲನು ಇತ್ಯಾದಿಯಾಗಿ ವರುಣನ ಗುಣವರ್ಣನೆಯು ಅನೇಕ ಋಕ್ಕುಗಳಲ್ಲಿವೆ ಇಲ್ಲಿ ನಾವು ಅದನ್ನು ಅತಿ ಸೂಕ್ಷ್ಮವಾಗಿ ವಿವರಿಸಿದ್ದೇವೆ. ಉಚಿತ ಸಂದರ್ಭದಲ್ಲಿ ಅದನ್ನು ವಿಸ್ತಾರವಾಗಿ ವಿವರಿಸುತ್ತೇವೆ.

ತೈತ್ತಿರೀಯಸಂಹಿತೆಯಲ್ಲಿ—**ಫಲ್ಗುನೀನಕ್ಷತ್ರಮರ್ಯಮಾ ದೇವತಾ .... .... .... .... ಅನೂರಾಧಾ ನಕ್ಷತ್ರಂ ಮಿತ್ರೋ ದೇವತಾ .... .... .... ....** (ತೈ. ಸಂ. ೪–-೪–೯–೨) ಎಂದರೆ—ಅರ್ಯಮನು ಪೂರ್ವ ಫಲ್ಗುನೀ ನಕ್ಷತ್ರಕ್ಕೂ,; ಮಿತ್ರನು ಅನೂರಾಧಾ ನಕ್ಷತ್ರಕ್ಕೂ ಅಧಿಪತಿಗಳೆಂದು ಹೇಳಿದೆ.

**ಅರ್ಯಮಾ**—ಆದಿತ್ಯರ ಪರವಾದ ಸೂಕ್ತಗಳಲ್ಲಿ ಸಾಧಾರಣವಾಗಿ ಆದಿತ್ಯರೆಂದರೆ ಮಿತ್ರ, ವರುಣ ಮತ್ತು ಅರ್ಯಮರೇ ಉದ್ದಿಷ್ಟರು. ನಾವು ಹಿಂದೆ ತಿಳಿಸಿದಂತೆ ಋಗ್ವೇದದಲ್ಲಿ (ಋ. ಸಂ. ೨-೨೭-೧) ಮಿತ್ರ, ಅರ್ಯಮ, ಭಗ,

ವರುಣ, ದಕ್ಷ, ಅಂಶ ಎಂಬ ಆರು ಜನರ ಹೆಸರುಮಾತ್ರವಿದೆ. ಋ. ಸಂ. ೯–೧೧೪–೩ ನೆಯ ಋಕ್ಕಿನಲ್ಲಿ ಆದಿತ್ಯರ ಸಂಖ್ಯೆ ಏಳೆಂದೂ, ಋ. ಸಂ. ೧೦–೭೨–೮ ರಲ್ಲಿ ಅದಿತಿಯು ಮೊದಲು ಏಳುಜನ ಪುತ್ರರನ್ನು ದೇವತೆಗಳಿಗೆ ಒಪ್ಪಿಸಿ, ಎಂಟ ನೆಯ ಮಾರ್ತಂಡನನ್ನು ಅನಂತರ ಪಡೆದಳೆಂದೂ ಇದೆ. ಅ. ವೇ. ೮–೯–೨೧ ರಲ್ಲಿಯೂ, ತೈ. ಬ್ರಾ. ೧–೧–೯–೧ ರಲ್ಲಿಯೂ, ಅದಿತಿಗೆ ಮಿತ್ರ, ಅರ್ಯಮಾ, ವರುಣ, ಅಂಶ, ಭಗ, ಧಾತೃ, ಇಂದ್ರ, ವಿವಸ್ವಾನ್ ಎಂಬ ಎಂಟುಮಂದಿ ಪುತ್ರರೆಂದು ಹೇಳಿದೆ. ಶತಪಥಬ್ರಾಹ್ಮಣದಲ್ಲಿ (ಶ. ಬ್ರಾ. ೬–೧–೨–೮ ; ೧೧–೬–೩–೮) ಆದಿತ್ಯರು ತಿಂಗಳಿಗೊಬ್ಬ ರಂತೆ ಹನ್ನೆರಡು ಜನರೆಂದು ಹೇಳಿದೆ. ಪುರಾಣಾದಿಗಳಲ್ಲಿಯೂ ಆದಿತ್ಯರು ಹನ್ನೆರಡುಮಂದಿಯೆಂದೇ ಇದೆ.

**ಅರ್ಯಮಾ** ಎಂಬ ದೇವತೆಯ ಹೆಸರು ಋಗ್ವೇದದಲ್ಲಿ ಸುಮಾರು ನೂರುಕಡೆ ಬಂದಿದ್ದರೂ, ಸಂಪೂರ್ಣ ವಾಗಿ ವ್ಯಕ್ತಿತ್ವವಿಲ್ಲದಿರುವುದರಿಂದ ಯಾಸ್ಕರು ತಮ್ಮ ನಿರುಕ್ತದಲ್ಲಿ (ನಿಘಂಟುವಿನಲ್ಲಿ) ದೇವತೆಗಳ ಹೆಸರುಗಳ ರೂಪ ನಿಷ್ಪತ್ತಿಯನ್ನು ವಿವರಿಸುವಾಗ ಈ ಅರ್ಯಮಾದೇವತೆಯ ಹೆಸರನ್ನು ಬಿಟ್ಟಿದಾರೆ. ಎರಡು ಮಂತ್ರಗಳಲ್ಲಿ ಹೊರತಾಗಿ ಬಾಕಿ ಕಡೆಗಳಲ್ಲೆಲ್ಲಾ ಬೇರೆ ದೇವತೆಗಳ ಜೊತೆಯಲ್ಲಿಯೇ ಪ್ರಸ್ತಾಪ; ಅದೂ ಹೆಚ್ಚಾಗಿ ಮಿತ್ರ ಮತ್ತು ವರುಣರ ಜೊತೆಯಲ್ಲಿಯೇ. ಅಗ್ನಿಯನ್ನುದ್ದೇಶಿಸಿ ಕನ್ಯೆಯರನ್ನು ಒಲಿಕೊಳ್ಳುವಾಗ,

**ತ್ವಮರ್ಯಮಾ ಭವಸಿ ಯತ್ಕನೀನಾಂ ನಾಮ ಸ್ವಧಾವನ್ ಗುಹ್ಯಂ ಬಿಭರ್ಷಿ ।**

(ಋ. ಸಂ. ೫-೩-೨)

ನೀನೇ ಅರ್ಯಮಾ ಎಂದು ಹೇಳಿದೆ.

**ಭಗೋ ಅರ್ಯಮಾ ಸವಿತಾ ಪುರಂಧಿರ್ಮಹ್ಯಂ ತ್ವಾದುರ್ಗಾರ್ಹಪತ್ಯಾಯ ದೇವಾಃ ।**

(ಋ. ಸಂ. ೧೦–೮೫–೩೬)

ಎಂಬ ಋಕ್ಕಿನಲ್ಲಿ—ಎಲೈ ದೇವತೆಗಳೇ, ಭಗ, ಅರ್ಯಮಾ, ಸವಿತೃ, ಪುರಂಧಿ ಇವರುಗಳು ಈ ವಧುವನ್ನು ನನ್ನ ಗೃಹಸ್ಥಾಶ್ರಮಕ್ಕೆ ನೆರವಾಗುವುದಕ್ಕಾಗಿ ನನಗೆ ಕೊಟ್ಟರು ಎಂದು ವರನು ಹೇಳುತ್ತಾನೆ.

**ನ ತಮಂಹೋ ನ ದುರಿತಂ ದೇವಾಸೋ ಅಷ್ಟ ಮರ್ತ್ಯಂ ।**
**ಸಜೋಷಸೋ ಯಮರ್ಯಮಾ ಮಿತ್ರೋ ನಯಂತಿ ವರುಣೋ ಅತಿ ದ್ವಿಷಃ ॥**

(ಋ. ಸಂ. ೧೦–೧೨೬–೧)

**ಶುನಮಸ್ಮಭ್ಯಮೂತಯೇ ವರುಣೋ ಮಿತ್ರೋ ಅರ್ಯಮಾ ।**
**ಶರ್ಮ ಯಚ್ಛಂತು ಸಪ್ರಥ ಆದಿತ್ಯಾಸೋ ಯದೀಮಹೇ ಅತಿ ದ್ವಿಷಃ ॥**

(ಋ. ಸಂ. ೧೦–೧೨೬–೭)

ಋ. ಸಂ. ೧೦–೧೨೬ ನೆಯ ಸೂಕ್ತದಲ್ಲಿ ದೇವತೆಗಳು ವಿಶ್ವದೇವತೆಗಳೆಂದು ಹೇಳಿದ್ದರೂ ಮೇಲೆ ಉದಹರಿಸಿರುವ ಋಕ್ಕು ಗಳಿಂದ ಮುಖ್ಯವಾಗಿ ಆದಿತ್ಯರನ್ನೇ ಇಲ್ಲಿ ಸ್ತುತಿಸಲಾಗಿದೆ. ಇವಲ್ಲದೆ **ದೇವಾಸಃ ಅಷ್ಟ** ಎಂದು ಮೊದಲನೆಯ ಋಕ್ಕಿನಲ್ಲಿ ಹೇಳಿರುವುದು ಎಂಟು ಮಂದಿ ಆದಿತ್ಯರನ್ನೇ (ವೇದದ ಆದಿತ್ಯರ ಸಂಖ್ಯೆ ಎಂಟು ಮಂದಿಗಿಂತ ಹೆಚ್ಚಾಗಿ ಎಲ್ಲಿಯೂ ಹೇಳಿಲ್ಲ) ಉದ್ದೇಶಿಸಿದೆ. ಇದಲ್ಲದೆ ೭ ನೇ ಋಕ್ಕಿನಲ್ಲಿ **ಆದಿತ್ಯಾಸಃ** ಎಂಬ ಶಬ್ದವೂ ಇದನ್ನೇ ಸ್ಪಷ್ಟವಾಗಿ ತಿಳಿಸುತ್ತದೆ. ಈ ಸೂಕ್ತದ ಪ್ರತಿ ಋಕ್ಕಿನಲ್ಲಿಯೂ (ಕೊನೆಯ ಋಕ್ಕುಹೊರತು) ವರುಣೋ ಮಿತ್ರೋ ಅರ್ಯಮಾ

ಎಂದು ಮಿತ್ರಾವರುಣಾರ್ಯಮರ ಹೆಸರು ಪಲ್ಲವಿಯಂತೆ ಪುನಃ ಪುನಃ ಪಠಿತವಾಗಿರುವುದು ಆದಿತ್ಯರಲ್ಲಿ ಈ ಮಿತ್ರಾವರುಣಾರ್ಯಮರ ಪ್ರಧಾನಸ್ಥಾನವನ್ನು ಪಡೆದಿರುವುದನ್ನು ಸೂಚಿಸುವುದಾಗಿದೆ. ಅರ್ಯಮನ ವಿಷಯವು ಋಗ್ವೇದದಲ್ಲಿ ಹೆಚ್ಚಾಗಿ ವಿವರಿಸಲ್ಪಟ್ಟಿಲ್ಲವಾದ್ದರಿಂದ ವಿಶೇಷ ವಿವರಣೆಯು ಸಾಧ್ಯವಿಲ್ಲ.

**ರುದ್ರಃ**—ರುದ್ರಶಬ್ದಕ್ಕೆ ನಿರುಕ್ತಕಾರರ ನಿರ್ವಚನವು ಈ ರೀತಿ ಇದೆ,

**ರುದ್ರೋ ರೌತೀತಿ ಸತಃ ರೋರೂಯಮಾಣೋ ದ್ರವತೀತಿ ವಾ ರೋದಯತೇರ್ವಾ । ಯದರುದತ್ತದ್ರುದ್ರಸ್ಯ ರುದ್ರತ್ವಂ ಇತಿ ಕಾಠಕಂ । ಯದರೋದೀತ್ತದ್ರುದ್ರಸ್ಯ ರುದ್ರತ್ವಂ ಇತಿ ಹಾರಿದ್ರವಿಕಂ ॥** (ನಿ. ೧೦-೫)

ರುದ್ರನೆಂದರೆ **ರೌತಿ-ಸ್ತನಯಿತ್ನುಃ ಶಬ್ದಂ ಕರೋತಿ ।** ಮೇಘದ ಗುಡುಗಿನಂತೆ ಶಬ್ದಮಾಡುವವನು, ಅಥವಾ **ರೋರೂಯಮಾಣೋ ದ್ರವತಿ** ಗರ್ಜನೆಯನ್ನು ಮಾಡುತ್ತಾ ವೇಗವಾಗಿ ಸಂಚರಿಸುವವನು, ಅಥವಾ **ರೋದಯತೇಃ** ಶತ್ರುಗಳನ್ನು ಅಳಿಸುವಂತೆ (ರೋದನಮಾಡುವಂತೆ) ಮಾಡುವವನು ಇತ್ಯಾದ್ಯರ್ಥಗಳಾಗುತ್ತವೆ. ಋಗ್ವೇದದಲ್ಲಿ ರುದ್ರನು ಪ್ರಭಾವಶಾಲಿಯಾದ ದೇವತೆಯಲ್ಲವಿದ್ದರೂ ಯಜುರ್ವೇದ ಮತ್ತು ಪುರಾಣಾದಿಗಳಲ್ಲಿ ರುದ್ರನು ಬಹುಮುಖ್ಯವಾದ ದೇವತೆಯೆಂದು ಪರಿಗಣಿತನಾಗಿದಾನೆ.



॥ ಸಂಹಿತಾಪಾಠಃ ॥

ಭಗಂ ಧಿಯಂ ವಾಜಯಂತಃ ಪುರಂಧಿಂ ನರಾಶಂಸೋ ಗ್ನಾಸ್ಪತಿರ್ನೋ ಅವ್ಯಾಃ ।
ಆಯೇ ವಾಮಸ್ಯ ಸಂಗಥೇ ರಯೀಣಾಂ ಪ್ರಿಯಾ ದೇವಸ್ಯ ಸವಿತುಃ ಸ್ಯಾಮ ॥ ೧೦ ॥

ಪದಪಾಠಃ ॥

ಭಗಂ । ಧಿಯಂ । ವಾಜಯಂತಃ । ಪುರಂऽಧಿಂ । ನರಾಶಂಸಃ । ಗ್ನಾಃಪತಿಃ । ನಃ । ಅವ್ಯಾಃ ।
ಆऽಆಯೇ । ವಾಮಸ್ಯ । ಸಂऽಗಥೇ । ರಯೀಣಾಂ । ಪ್ರಿಯಾಃ । ದೇವಸ್ಯ । ಸವಿತುಃ । ಸ್ಯಾಮ ॥ ೧೦ ॥

॥ ಸಾಯಣಭಾಷ್ಯಂ ॥

ಭಗಂ ಭಜನೀಯಂ ಧಿಯಂ ಧ್ಯಾತವ್ಯಂ ಪುರಂಧಿಂ ಪುರಸ್ಯ ಧಾರಯಿತಾರಂ ಬಹುಪ್ರಜ್ಞಂ ವಾ ಸವಿತಾರಂ ॥ ಪುರಂಧಿರ್ಬಹುಧೀರಿತಿ ಯಾಸ್ಕಃ ॥ ವಾಜಯಂತೋ ವಾಜಿನಂ ಬಲಿನಂ ಕುರ್ವತಃ ॥ ವಿಭಕ್ತಿವ್ಯತ್ಯಯಃ ॥ ನಃ ಸ್ತುವತೋಽಸ್ಮಾನ್ ನರಾಶಂಸೋ ನರೈಃ ಶಂಸನೀಯೋ ಗ್ನಾಸ್ಪತಿರ್ದೇವಪತ್ನೀನಾಂ ಪತಿಶ್ಛಂದಸಾಂ ಪತಿರ್ವಾ ॥ ತಥಾ ಚ ಶ್ರೂಯತೇ ಛಂದಾಂಸಿ ವೈ ಗ್ನಾ ಇತಿ ಉತ ಗ್ನಾ ವ್ಯಂತು ದೇವಪತ್ನೀಃ । ಋಗ್ವೇ. ೫-೪೬-೮ । ಇತಿ ಚ ॥ ಸವಿತಾವ್ಯಾಃ । ಅವ್ಯಾತ್ । ಕಿಂಚ ವಾಮಸ್ಯ ಧನಸ್ಯ

ರಯೀಣಾಂ ಪಶೂನಾಂ ಚ || ತಥಾ ಚ ಶ್ರೂಯತೇ ಪಶವೋ ವೈ ರಯಿರಿತಿ || ಆಯೇ ಆಗಮನೇ ಸಂಗಥೇ ಸಂಗಮನೇ ಚ ನಿಮಿತ್ತೇ ದೇವಸ್ಯ ದ್ಯೋತಮಾನಸ್ಯ ಸವಿತುಃ ಪ್ರೇರಕಸ್ಯ ವಯಂ ಪ್ರಿಯಾಃ ಸ್ಯಾಮ | ಭವೇಮ ||

|| ಪ್ರತಿಪದಾರ್ಥ ||

**ಭಗಂ**—ಪೂಜ್ಯನೂ | **ಧಿಯಂ**—ಧ್ಯಾನಕ್ಕೆ ಅರ್ಹನೂ | **ಪುರಂಧಿಂ**—ಸರ್ವಪ್ರಜ್ಞನೂ ಆದ ಸವಿತೃವನ್ನು | **ವಾಜಯಂತಃ**—ಪೂಜಿಸತಕ್ಕ | **ನಃ**—ನಮ್ಮನ್ನು | **ನರಾಶಂಸಃ**—ಮಾನವರಿಂದ ಸ್ತುತಿಸಲ್ಪಡುವವನೂ | **ಗ್ನಾಸ್ಪತಿಃ**—ದೇವಪತ್ನಿಯರ ಪಾಲಕನೂ ಆದ ಸವಿತೃವು | **ಅವ್ಯಾಃ**—ರಕ್ಷಿಸಲಿ | **ವಾಮಸ್ಯ**—ಧನದ (ಮತ್ತು) | **ರಯೀಣಾಂ**—ಪಶುಗಳ | **ಆಯೇ**—ಲಾಭಕ್ಕಾಗಿಯೂ | **ಸಂಗಥೇ**—ಶೇಖರಣೆಗಾಗಿಯೂ | **ದೇವಸ್ಯ**—ದೇವತಾತ್ಮನಾದ | **ಸವಿತುಃ**—ಸವಿತೃವಿಗೆ | **ಪ್ರಿಯಾಃ**—(ನಾವು) ಪ್ರೀತಿಪಾತ್ರರಾಗಿ | **ಸ್ಯಾಮ**—ಇರುವಂತಾಗಲಿ.

|| ಭಾವಾರ್ಥ ||

ಪೂಜ್ಯನೂ, ಧ್ಯಾನಕ್ಕೆ ಅರ್ಹನೂ, ಸರ್ವಜ್ಞನೂ ಆದ ಸವಿತೃವನ್ನು ಪೂಜಿಸುವ ನಮ್ಮನ್ನು ಮಾನವರಿಂದ ಸ್ತುತಿಸಲ್ಪಡುವವನೂ, ದೇವಪತ್ನಿಯರ ಪಾಲಕನೂ ಆದ ಸವಿತೃವು ರಕ್ಷಿಸಲಿ. ಧನದ ಮತ್ತು ಪಶುಗಳ ಲಾಭಕ್ಕಾಗಿಯೂ, ಶೇಖರಣೆಗಾಗಿಯೂ ಸಹ ದೇವತಾತ್ಮನಾದ ಸವಿತೃವಿಗೆ ನಾವು ಪ್ರೀತಿಪಾತ್ರರಾಗಿರೋಣ.

## English Translation.

May he, who is adored by men, the protector of the wives (of the gods), preserve us; when worshipping him, who is auspicious, the object of meditation, and the all-wise : may we be the beloved of the divinc Savitri, that we may (thence be successful) in accumulation of wealth and the acquisition of cattle.

|| ವಿಶೇಷವಿಷಯಗಳು ||

**ಪುರಂಧಿಂ— ಪುರಸ್ಯ ಧಾರಯಿತಾರಂ ಬಹುಪ್ರಜ್ಞಂ ವಾ |** ನಮ್ಮ ಪುರಗಳನ್ನು ಧರಿಸಿ ಪೋಷಿಸುವವನು. ಅಥವಾ ಧೀ ಶಬ್ದಕ್ಕೆ ಪ್ರಜ್ಞೆಯೆಂದೂ ಅರ್ಥವಾಗುವುದರಿಂದ ಪುರಂಧಿ ಎಂದರೆ ಬಹುಪ್ರಜ್ಞೆಯುಳ್ಳವನು ಎಂದೂ ಅರ್ಥವಾಗುವುದು. ಯಾಸ್ಕರು **ಪುರಂಧಿರ್ಬಹುಧೀಃ** ಎಂದು ಪುರಂಧಿ ಶಬ್ದಕ್ಕೆ ನಿರ್ವಚನವನ್ನು ಹೇಳಿದಾರೆ. (ನಿ. ೬-೧೩) ಬಹಳವಾದ ಬುದ್ಧಿಯುಳ್ಳವನು, ವಿವೇಕಶಾಲಿಯು ಎಂದರ್ಥವು.

**ನರಾಶಂಸಃ—ನರೈಃ ಶಂಸನೀಯಃ |** ಮನುಷ್ಯರಿಂದ ಸ್ತುತಿಸಲ್ಪಡುವವನು. ನರಾಶಂಸನೆಂಬ ಪ್ರತ್ಯೇಕ ದೇವತೆಯೂ ಇರುವುದು. ಈ ದೇವತೆಯು ಅಗ್ನಿಯ ರೂಪಾಂತರವೆಂದು ಹೇಳುವರು. ಈ ದೇವತೆಯ ವಿಷಯವಾದ ವಿಸ್ತಾರವಾದ ವಿವರಣೆಯನ್ನು ನಾವು ಆಪ್ರೀಸೂಕ್ತಗಳಲ್ಲಿ ವಿವರಿಸಿದೇವೆ. (ಋ. ಸಂ. ಭಾಗ ೮ ಪೇಜು 546 ನೋಡಿ)

**ಗ್ನಾಸ್ಪತಿಃ**—**ಗ್ನಾಃ** ಎಂಬ ಶಬ್ದವು ವಾಙ್ನಾಮಗಳಲ್ಲಿಯೂ (ನಿ. ೨-೨೩) ಸ್ತ್ರೀನಾಮಗಳಲ್ಲಿಯೂ (ನಿ. ೩-೨೧) ಪಠಿತವಾಗಿದೆ. **ಅಪಿ ಚ ಗ್ನಾ ವ್ಯಂತು ದೇವಪತ್ನ್ಯಃ** (ನಿ. ೨೪-೪೬) ಎಂದು ಯಾಸ್ಕರ ನಿರ್ವಚನವಿದೆ. **ಛಂದಾಂಸಿ ವೈ ಗ್ನಾಃ** ಎಂದರೆ ಛಂದಸ್ಸುಗಳಿಗೂ **ಗ್ನಾ** ಎಂದು ಹೆಸರು ಎಂಬ ಶ್ರುತಿವಾಕ್ಯವನ್ನೂ ಭಾಷ್ಯಕಾರರು ಉದಾಹರಿಸಿದ್ದಾರೆ. ಆದುದರಿಂದ **ಗ್ನಾಸ್ಪತಿಃ** ಎಂದರೆ ಛಂದಸ್ಸುಗಳಿಗೆ ಅಧಿಪತಿಯು ಅಥವಾ ದೇವಪತ್ನಿ ಎಂದರೆ ದೇವತಾಸ್ತ್ರೀಗೆ ಪತಿಯಾದ ಎಂಬರ್ಥಗಳನ್ನು ಹೇಳಬಹುದು. ಯಾಸ್ಕರು—

**ಉತ ಗ್ನಾ ವ್ಯಂತು ದೇವಪತ್ನೀರಿಂದ್ರಾಣ್ಯ೧ ಗ್ನಾಯ್ಯಶ್ವಿನೀ ರಾಟ್ ।**
**ಆ ರೋದಸೀ ವರುಣಾನೀ ಶೃಣೋತು ವ್ಯಂತು ದೇವೀರ್ಯ ಋತುರ್ಜನೀನಾಂ ॥**

(ಋ. ಸಂ. ೫-೪೬-೮)

ಎಂಬ ಋಕ್ಕನ್ನು ಉದಾಹರಿಸಿ ದೇವಪತ್ನಿಯರ ಹೆಸರುಗಳನ್ನು ನಿರ್ವಚನದಲ್ಲಿ ತಿಳಿಸಿದ್ದಾರೆ—

**ಅಪಿ ಚ ಗ್ನಾ ವ್ಯಂತು ದೇವಪತ್ನ್ಯಃ । ಇಂದ್ರಾಣೀಂದ್ರಸ್ಯ ಪತ್ನ್ಯಗ್ನಾಯ್ಯಗ್ನೇಃ ಪತ್ನ್ಯಶ್ವಿನ್ಯ-ಶ್ವಿನೋಃ ಪತ್ನೀ ರಾಟ್ ರಾಜತೇ । ರೋದಸೀ ರುದ್ರಸ್ಯ ಪತ್ನೀ । ವರುಣಾನೀ ಚ ವರುಣಸ್ಯ ಪತ್ನೀ ॥**

(ನಿ. ೧೨-೪೬)

ಎಂದರೆ ಇಂದ್ರನ ಪತ್ನಿಗೆ ಇಂದ್ರಾಣೀ ಎಂದೂ, ಅಗ್ನಿಯ ಪತ್ನಿಗೆ ಅಗ್ನಾಯೀ ಎಂದೂ, ಅಶ್ವಿನೀದೇವತೆಗಳ ಪತ್ನಿಗೆ ಅಶ್ವಿನೀ ಎಂದೂ, ರುದ್ರನ ಪತ್ನಿಗೆ ರೋದಸೀ ಎಂದೂ, ವರುಣನ ಪತ್ನಿಗೆ ವರುಣಾನೀ ಎಂದೂ ಹೆಸರು.

ಮುಖ್ಯಾಭಿಪ್ರಾಯವು—ಈ ಸವಿತೃದೇವನು ಪೂಜ್ಯನು ಮತ್ತು ಧ್ಯಾನಾರ್ಹನು, ಮನುಷ್ಯರಿಂದ ಸ್ತುತಿಸಲ್ಪಡುವವನು, ದೇವಪತ್ನಿಯರ ಪಾಲಕನು ಅಥವಾ ಛಂದಸ್ಸುಗಳಿಗೆ ಅಧಿಪತಿಯು. ಇಂತಹ ದೇವನನ್ನು ಪೂಜಿಸತಕ್ಕ ನಮ್ಮನ್ನು ಸವಿತೃವು ರಕ್ಷಿಸಲಿ. ಧನಲಾಭಕ್ಕಾಗಿಯೂ ಪಶುಸಂಪತ್ತನ್ನು ಪಡೆಯುವುದಕ್ಕಾಗಿಯೂ ನಾವು ಈ ಸವಿತೃದೇವನನ್ನು ಅರ್ಚಿಸಿ ಅವನ ಪ್ರೀತಿಗೆ ಪಾತ್ರರಾಗೋಣ ಎಂಬ ಅರ್ಥವು ಉಕ್ತವಾಗಿದೆ.

—೧೧—

॥ ಸಂಹಿತಾಪಾಠಃ ॥

ಅಸ್ಮಭ್ಯಂ ತದ್ದಿವೋ ಅದ್ಭ್ಯಃ ಪೃಥಿವ್ಯಾಸ್ತ್ವಯಾ ದತ್ತಂ ಕಾಮ್ಯಂ ರಾಧ ಆ ಗಾತ್।
ಶಂ ಯತ್ಸ್ತೋತೃಭ್ಯ ಆಪಯೇ ಭವಾತ್ಯುರುಶಂಸಾಯ ಸವಿತರ್ಜರಿತ್ರೇ ॥ ೧೧ ॥

॥ ಪದಪಾಠಃ ॥

**ಅಸ್ಮಭ್ಯಂ । ತತ್ । ದಿವಃ । ಅತ್ಽಭ್ಯಃ । ಪೃಥಿವ್ಯಾಃ । ತ್ವಯಾ । ದತ್ತಂ । ಕಾಮ್ಯಂ । ರಾಧಃ । ಆ । ಗಾತ್ ।**

**ಶಂ । ಯತ್ । ಸ್ತೋತೃಽಭ್ಯಃ । ಆಪಯೇ । ಭವಾತಿ । ಉರುಽಶಂಸಾಯ । ಸವಿತಃ । ಜರಿತ್ರೇ ॥ ೧೧ ॥**

॥ ಸಾಯಣಭಾಷ್ಯಂ ॥

**ಹೇ ಸವಿತಃ ಅಸ್ಮಭ್ಯಂ ತ್ವಯಾ ದತ್ತಂ ತತ್ ಪ್ರಸಿದ್ಧಂ ಕಾಮ್ಯಂ ಕಮನೀಯಂ ರಾಧೋ ಧನಂ ದಿವೋ ದ್ಯುಲೋಕಾತ್ ಅದ್ಭ್ಯೋಽನ್ತರಿಕ್ಷಲೋಕಾತ್ ಪೃಥಿವ್ಯಾ ಭೂಮೇಶ್ಚಾ ಗಾತ್ । ಆಗಚ್ಛತು । ಕಿಂಚ ಸ್ತೋತೃಭ್ಯಃ ಸ್ತೋತೄಣಾಮಾಪಯೇ ಬಂಧವೇ ತದ್ವಂಶಜಾಯ ಯದ್ಧನಂ ಶಂ ಸುಖಕರಂ ಭವಾತಿ ಭವೇತ್ ಉರುಶಂಸಾಯ ಬಹುಸ್ತುತಯೇ ಜರಿತ್ರೇ ಸ್ತೋತ್ರೇ ಮಹ್ಯಂ ॥ ಜರಿತಾ ಕಾರುರಿತಿ ಸ್ತೋತೃನಾಮಸು ಪಾಠಾತ್ ॥ ಹೇ ಸವಿತಃ ತತ್ಪ್ರಯಚ್ಛ ॥**

॥ ಪ್ರತಿಪದಾರ್ಥ ॥

**ಸವಿತಃ**—ಎಲೈ ಸವಿತೃವೇ । **ಅಸ್ಮಭ್ಯಂ**— ನಮಗೆ । **ತ್ವಯಾ**—ನಿನ್ನಿಂದ । **ದತ್ತಂ**—ಕೊಡಲ್ಪಡ ತಕ್ಕದ್ದೂ । **ತತ್**— ಪ್ರಸಿದ್ಧವಾದುದೂ । **ಕಾಮ್ಯಂ**—ಆಕರ್ಷಕವಾದುದೂ ಆದ । **ರಾಧಃ**—ಧನವು । **ದಿವಃ**—ದ್ಯುಲೋಕದಿಂದಲೂ । **ಅದ್ಭ್ಯಃ**—ಅಂತರಿಕ್ಷದಿಂದಲೂ । **ಪೃಥಿವ್ಯಾಃ**—ಪೃಥಿವಿಯಿಂದಲೂ । **ಆ ಗಾತ್**—ಬಂದು ಸೇರಲಿ । **ಸ್ತೋತೃಭ್ಯಃ**--ನಿನ್ನನ್ನು ಸ್ತುತಿಸತಕ್ಕವರ । **ಆಪಯೇ**—ಬಂಧುಜನರಿಗೆ । **ಯತ್**—ಯಾವ ಧನವು । **ಶಂ**—ಸುಖಕರವಾಗಿ । **ಭವಾತಿ**—ಆಗುತ್ತದೆಯೋ । (**ತತ್**—ಅದು) । **ಉರುಶಂಸಾಯ**—ನಿನ್ನನ್ನು ಬಹಳವಾಗಿ ಸ್ತುತಿಸುವವನೂ । **ಜರಿತ್ರೇ**—ಭಕ್ತನಾದ ಸ್ತುತಿಕರ್ತನೂ ಆದ ನನಗೆ (ಲಭಿಸಲಿ) ।

॥ ಭಾವಾರ್ಥ ॥

ಎಲೈ ಸವಿತೃವೇ. ನಿನ್ನಿಂದ ದತ್ತವಾಗತಕ್ಕದ್ದೂ, ಪ್ರಸಿದ್ಧವಾದುದೂ, ಆಕರ್ಷಕವಾದುದೂ ಆದ ಧನವು ದ್ಯುಲೋಕದಿಂದಲೂ, ಅಂತರಿಕ್ಷದಿಂದಲೂ, ಪೃಥಿವಿಯಿಂದಲೂ ಬಂದು ನನ್ನನ್ನು ಸೇರಲಿ. ನಿನ್ನನ್ನು ಸ್ತುತಿಸತಕ್ಕ ಬಂಧುಜನರಿಗೆ ಯಾವ ಧನವು ಸುಖಕರವಾಗಿ ಆಗುತ್ತದೆಯೋ, ಅದೇ ಧನವು ನಿನ್ನನ್ನು ಪೂಜಿಸುವವನೂ ಸ್ತುತಿ ಕರ್ತನೂ ಆದ ನನಗೂ ಲಭಿಸಲಿ.

English Translation·

May that desirable wealth which is granted to us, Savitri, by you proceed from the sky, from the waters, from the earth ; and may the happiness (which belongs) to the race of those who eulogise you, devolve upon me, repeating diligently you praises·

॥ ವಿಶೇಷವಿಷಯಗಳು ॥

**ಅದ್ಭ್ಯಃ—ಅಂತರಿಕ್ಷಲೋಕಾತ್ ।** ಅಪ್ ಶಬ್ದವು ಅಂತರಿಕ್ಷನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೧೦) **ಅದ್ಭ್ಯಃ** ಎಂದರೆ ಅಂತರಿಕ್ಷಲೋಕದಿಂದ ಎಂದರ್ಥವು.

**ರಾಧಃ**— ರಾಧಃಶಬ್ದವು ಧನನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ ೩-೯) **ರಾಧಃ** ಎಂದರೆ ಧನವನ್ನು ಎಂದರ್ಥವು.

**ಆಪಯೇ—ಬಂಧವೇ ತದ್ವಂಶಜಾಯ** । ಬಂಧುಜನರಿಗೂ ಅವರ ವಂಶದಲ್ಲಿ ಉತ್ಪನ್ನರಾದವರಿಗೂ ಸಹ.

**ಉರುಶಂಸಾಯ—ಬಹುಸ್ತುತಯೇ** । ಉರು ಶಬ್ದವು ಬಹುನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩) ನಿನ್ನನ್ನು ಬಹಳ ವಿಧವಾಗಿ ಸ್ತೋತ್ರಮಾಡುತ್ತಿರುವ ಎಂದರ್ಥವು

**ಜರಿತ್ರೇ—ಸ್ತೋತ್ರೇ ಮಹ್ಯಂ** । ಸ್ತೋತ್ರಮಾಡುತ್ತಿರುವ ನನಗೆ; ಜರಿತಾ ಎಂಬ ಶಬ್ದವು ಸ್ತೋತೃನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೯)

ಮುಖ್ಯಾಭಿಪ್ರಾಯವು—ಎಲೈ ಸವಿತೃದೇವನೇ, ನೀನು ಇತರ ಸ್ತೋತೃಗಳಿಗೆ ಪೃಥಿವ್ಯಂತರಿಕ್ಷ ಸ್ವರ್ಗಗಳಿಂದ ಲಭ್ಯವಾಗುವ ಯಾವ ಧನವನ್ನು ಕೊಡುತ್ತೀಯೋ ಅಂತಹ ಧನವನ್ನು ನಿನ್ನನ್ನು ನಾನಾವಿಧವಾಗಿ ಸ್ತೋತ್ರಮಾಡುವ ನನಗೂ ನನ್ನ ಬಂಧುಗಳಿಗೂ ಕೊಡು. ನೀನು ಕೊಡುವ ಆಕರ್ಷಕವಾದ ಆ ಧನದಿಂದ ನನಗೆ ಸುಖವುಂಟಾಗಲಿ.



# ಮೂವತ್ತೊಂಭತ್ತನೆಯ ಸೂಕ್ತವು

**ಗ್ರಾವೇಣೇವೇತ್ಯಷ್ಟರ್ಚಂ ಸಪ್ತಮಂ ಸೂಕ್ತಂ ಗಾರ್ತ್ಸಮದಂ ತ್ರೈಷ್ಟುಭಮಾಶ್ವಿನಂ ಗ್ರಾವಾಣೇವಾಷ್ಟಾವಾಶ್ವಿನಮಿತ್ಯನುಕ್ರಾಂತತ್ವಾತ್ ॥ ಪ್ರವರ್ಗ್ಯೇಽಭಿಷ್ಟವೇ ಪೂರ್ವೇ ಪಟಲೇಽಸ್ಯ ವಿನಿಯೋಗಃ । ಸೂತ್ರಿತಂ ಚ । ಗ್ರಾವಾಣೇವೇಳೇ ದ್ಯಾವಾಪೃಥಿವೀ । ಆ. ೪-೬ । ಇತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರಪೀದಂ ಸೂಕ್ತಂ । ಸೂತ್ರಿತಂ ಚ । ಗ್ರಾವಾಣೇವ ನಾಸತ್ಯಾಭ್ಯಾಮಿತಿ ತ್ರೀಣಿ । ಆ. ೪-೧೫। ಇತಿ ॥**

ಅನುವಾದವು—**ಗ್ರಾವಾಣೇವ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು; ಅಶ್ವಿನೀದೇವತೆಗಳು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಗ್ರಾವಾಣೇವಾಷ್ಟಾವಾಶ್ವಿನಂ** ಎಂದು ಹೇಳಿರುವುದು. ಪ್ರವರ್ಗ್ಯವೆಂಬ ಯಾಗದ ಅಭಿಷ್ಟವದಲ್ಲಿ ಪೂರ್ವಪಟಲದಲ್ಲಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಗ್ರಾವಾಣೇವೇಳೇ ದ್ಯಾವಾಪೃಥಿವೀ** ಎಂಬ ಸೂತ್ರದಿಂದಲೂ (ಆ. ೪-೬) ಮತ್ತು ಪ್ರಾತರನುವಾಕ ಮತ್ತು ಆಶ್ವಿನ ಶಸ್ತ್ರಪಠನದಲ್ಲಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಗ್ರಾವಾಣೇವ ನಾಸತ್ಯಾಭ್ಯಾಮಿತಿ ತ್ರೀಣಿ** ಎಂಬ ಸೂತ್ರದಿಂದಲೂ (ಆ. ೪-೧೫) ವಿಸ್ತೃತವಾಗಿರುವುದು.

## ಸೂಕ್ತ—೩೯

ಮಂಡಲ—೨ ॥ ಅನುವಾಕ—೪ ॥ ಸೂಕ್ತ—೩೯ ॥

ಅಷ್ಟಕ—೨ ॥ ಅಧ್ಯಾಯ—೮ ॥ ವರ್ಗ—೪, ೫ ॥

**ಸೂಕ್ತದಲ್ಲಿರುವ ಋಕ್ಸಂಖ್ಯೆ—೮**

**॥ ಋಷಿಃ—ಗೃತ್ಸಮದಃ ॥**

**॥ ದೇವತಾ—ಅಶ್ವಿನೌ ॥**

**॥ ಛಂದಃ—ತ್ರಿಷ್ಟುಪ್ ॥**

॥ ಸಂಹಿತಾಪಾಠಃ ॥

ಗ್ರಾವಾಣೇವ ತದಿದರ್ಥಂ ಜರೇಥೇ ಗೃಧ್ರೇವ ವೃಕ್ಷಂ ನಿಧಿಮಂತಮಚ್ಛ ।
ಬ್ರಹ್ಮಾಣೇವ ವಿದಥ ಉಕ್ಥಶಾಸಾ ದೂತೇವ ಹವ್ಯಾ ಜನ್ಯಾ ಪುರುತ್ರಾ ॥ ೧ ॥

॥ ಪದಪಾಠಃ ॥

ಗ್ರಾವಾಣಾಽಇವ । ತತ್ । ಇತ್ । ಅರ್ಥಂ । ಜರೇಥೇ ಇತಿ । ಗೃಧ್ರಾಽಇವ । ವೃಕ್ಷಂ । ನಿಧಿಽಮಂತಂ ಅಚ್ಛ ।
ಬ್ರಹ್ಮಾಣಾಽಇವ । ವಿದಥೇ । ಉಕ್ಥಽಶಸಾ । ದೂತಾಽಇವ । ಹವ್ಯಾ । ಜನ್ಯಾ । ಪುರುಽತ್ರಾ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಗ್ರಾವಾಣೇವ ಅರಾತಿಂ ಪ್ರತಿ ಪ್ರೇಷಿತೌ ಪಾಷಾಣಾವಿವ ತದರ್ಥಂ ॥ ಅರ್ತೇರ್ಥಾ-ತೋರರ್ಥಶಬ್ದಃ । ಅರ್ಥೋಽರ್ತೇರಿತಿ ಯಾಸ್ಕಃ । ನಿ. ೧-೧೮ ॥ ತಮರಾತಿಮಿತ್ಯರ್ಥಃ । ಇದಿತಿ ಪೂರಣಃ । ಜರೇಥೇ । ಜರಯೇಥೇ । ಅರಾತಿಂ ಬಾಧೇಥಾಂ । ಯದ್ವಾ ಯಥಾ ಗುರೂ ಗ್ರಾವಾಣೌ ಕ್ಷಿಪ್ತೌ ತದಾನೀಮೇವ ಶೀಘ್ರಂ ಗಚ್ಛತಸ್ತಥಾ ತತ್ ತಮರ್ಥಂ ಗಂತಾರಂ ಜರೇಥೇ । ಶೀಘ್ರಂ ಗತ್ವಾ ಸ್ತುತಮಿ-ತ್ಯರ್ಥಃ ॥ ಜರತಿಃ ಸ್ತುತಿಕರ್ಮಾ ॥ ಕಿಂಚ ಗೃಧ್ರೇವ ಗೃಧ್ರಾವಿವ ಪಕ್ಷಿಣಾವಿವ ವೃಕ್ಷಂ ಫಲಿತಂ ವೃಕ್ಷಂ ನಿಧಿಮಂತಂ ಧನವಂತಂ ಯಜಮಾನಮಚ್ಛ । ಆಗಚ್ಛತಮಿತಿ ಶೇಷಃ । ವಿದಥೇ ಯಜ್ಞೇ ॥ ವಿದಥಃ ಸವನಮಿತಿ ಯಜ್ಞನಾಮಸು ಪಾಠಾತ್ ॥ ಉಕ್ಥಶಾಸೋಕ್ಥಶಂಸಿತಾರೌ ಬ್ರಹ್ಮಾಣೇವ ಬ್ರಾಹ್ಮಣಾವಿವ । ಜನ್ಯಾ ಜನಪದೇಷು ದೂತೇವ ರಾಜ್ಞಾ ಪ್ರೇಷಿತೌ ದೂತಾವಿವ ಪುರುತ್ರಾ ಬಹುಭಿಃ ಪುರುಷೈರ್ಹವ್ಯಾ ಹ್ವಾತವ್ಯೌ ಯುವಾಂ । ಅತ್ರೋಪಮೇಯದ್ವಿತ್ವಾನುಸಾರೇಣೋಪಮಾನದ್ವಿತ್ವಂ ॥

॥ ಪ್ರತಿಪದಾರ್ಥ ॥

(**ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ) । **ಗ್ರಾವಾಣೇವ**—ಶತ್ರುವಿನ ಮೇಲೆ ಎಸೆಯಲ್ಪಟ್ಟ ಕಲ್ಲುಗಳಂತೆ । **ತತ್ ಅರ್ಥಂ**—ಆ ಶತ್ರುವನ್ನು । **ಜರೇಥೇ**—ಹಿಂಸಿಸಿರಿ । **ವೃಕ್ಷಂ**—ವೃಕ್ಷಕ್ಕೆ ಅಭಿಮುಖವಾಗಿ ಹೋಗುವ । **ಗೃಧ್ರೇವ**—ಗೃಧ್ರ ಪಕ್ಷಿಯಂತೆಯೂ । **ವಿದಥೇ**—ಯಜ್ಞ ಗೃಹದಲ್ಲಿ । **ಉಕ್ಥಶಾಸಾ**—ಉಕ್ಥವನ್ನು ಪಠಿಸುವ । **ಬ್ರಹ್ಮಾಣೇವ**— ಬ್ರಾಹ್ಮಣರಂತೆಯೂ । **ಜನ್ಯಾ**— ದೇಶದಲ್ಲಿ । **ದೂತೇವ**— ರಾಜದೂತರಂತೆಯೂ । **ಪುರುತ್ರಾ**—ಅನೇಕ ಯಜಮಾನರಿಂದ । **ಹವ್ಯಾ**—ಕರೆಯಲ್ಪಡತಕ್ಕ ನೀವು । **ನಿಧಿಮಂತಂ**—ಧನವಂತನಾದ ಯಜಮಾನನನ್ನು ಕುರಿತು । **ಅಚ್ಛ**—ಅಭಿಮುಖವಾಗಿ ಬನ್ನಿರಿ.

‖ ಭಾವಾರ್ಥ ‖

ಎಲೈ ಅಶ್ವಿನೀದೇವತೆಗಳೇ, ಶತ್ರುವಿನ ಮೇಲೆ ಎಸೆಯಲ್ಪಟ್ಟ ಕಲ್ಲುಗಳಂತೆ ನೀವೂ ವೇಗವಾಗಿ ಇಳಿದು ಬಂದು ಶತ್ರುಗಳನ್ನು ಹಿಂಸಿಸಿರಿ. ವೃಕ್ಷಕ್ಕೆ ಅಭಿಮುಖವಾಗಿ ಹೋಗುವ ಗೃಧ್ರಪಕ್ಷಿಯಂತೆಯೂ, ಯಜ್ಞಗೃಹದಲ್ಲಿ ಉಕ್ಥವನ್ನು ಪಠಿಸುವ ಬ್ರಾಹ್ಮಣರಂತೆಯೂ, ದೇಶದಲ್ಲಿ ರಾಜದೂತರಂತೆಯೂ ಅನೇಕ ಯಜಮಾನರಿಂದ ಕರೆಯಲ್ಪಡತಕ್ಕ ನೀವು ಧನವಂತನಾದ ಯಜಮಾನನ ಅಭಿಮುಖವಾಗಿ ಬನ್ನಿರಿ.

English Translation.

Descend, Ashwins, like falling stones, for the purpose (of destroying our foes); hasten to the presence of the wealth-possessing (worshippers), like, vultures to a tree: like two Brahmanas repeating hymns, (be present) at the sacrifice, and come like (royal) messengers in the land, welcomed by many people.

‖ ವಿಶೇಷವಿಷಯಗಳು ‖

ಈ ಸೂಕ್ತದಲ್ಲಿ ಅಶ್ವಿನೀ ದೇವತೆಗಳನ್ನು ಸ್ತುತಿಸಲಾಗಿದೆ ಈ ಸೂಕ್ತದ ಕೊನೆಯ ಒಂದು ಋಕ್ಕನ್ನು ಬಿಟ್ಟು ಉಳಿದ ಏಳು ಋಕ್ಕಗಳಲ್ಲಿಯೂ ನಾನಾವಿಧವಾದ ಉಪಮಾನಗಳನ್ನು (ದೃಷ್ಟಾಂತಗಳನ್ನು) ವರ್ಣಿಸಿ ಅಶ್ವಿನೀ ದೇವತೆಗಳನ್ನು ಪ್ರಾರ್ಥಿಸಿದೆ. ಅನೇಕ ಉಪಮಾನಗಳಿಂದ ಕೂಡಿದ ವರ್ಣನೆಗಳಿರುವುದೇ ಈ ಸೂಕ್ತದ ವೈಶಿಷ್ಟ್ಯವು. ಅನೇಕ ಸದಂರ್ಭಗಳಲ್ಲಿ ಉಪಮಾನವು ಸರಿಯಾಗಿ ಹೊಂದುವುದಿಲ್ಲ ಅಥವಾ ಸಮಯೋಚಿತವಾಗಿರುವುದಿಲ್ಲ.

**ಗ್ರಾವಾಣೇವ ತತ್ ಅರ್ಥಂ ಇತ್ ಜರೇಥೇ—ಗ್ರಾವಾಣೇವ ಅರಾತಿಂ ಪ್ರತಿ ಪ್ರೇಷಿತೌ ಪಾಷಾಣಾವಿವ ತಮರಾತಿಂ ಬಾಧೇಥಾಂ** | ಇಲ್ಲಿ ಅರ್ಥಂ ಎಂಬ ಶಬ್ದಕ್ಕೆ ಅರಾತಿ-ಶತ್ರುವೆಂದು ಭಾಷ್ಯಕಾರರು ವಿವರಿಸಿದ್ದಾರೆ. ಋ ಗತೌ ಎಂಬ ಧಾತುವಿನಿಂದ ನಿಷ್ಪನ್ನವಾದ ಅರ್ಥಶಬ್ದಕ್ಕೆ (ಯುದ್ಧದಲ್ಲಿ) ಮುನ್ನುಗ್ಗಿ ಹೋಗುವ ಶತ್ರುವು ಎಂದು ಅರ್ಥವು. ಯಾಸ್ಕರು-**ಅರ್ಥೋಽರ್ತೇಃ** ಎಂದು ನಿರ್ವಚನವನ್ನು ಹೇಳಿರುವರು. ಎಂದರೆ ಗತ್ಯರ್ಥವನ್ನು ಸೂಚಿಸುವ ಅರ್ತಿಧಾತುವಿನಿಂದ ಅರ್ಥಶಬ್ದವು ನಿಷ್ಪನ್ನವಾಗಿರುವುದೆಂದು ನಿರ್ವಚನದ ಅಭಿಪ್ರಾಯವು. ಎಲೈ ಅಶ್ವಿನೀದೇವತೆಗಳೇ, ಶತ್ರುಗಳ ಮೇಲೆ ಕಲ್ಲುಗಳನ್ನು ಎಸೆದರೆ ಅದರಿಂದ ಅವರಿಗೆ ಯಾವ ರೀತಿ ಬಾಧೆಯುಂಟಾಗುವುದೋ ಅದರಂತೆ ನೀವು ಅವರನ್ನು ಹಿಂಸಿಸಿ ಎಂದಭಿಪ್ರಾಯವು.

**ವೃಕ್ಷಂ ಗೃಧ್ರೇವ ನಿಧಿಮಂತಂ ಅಚ್ಛ—ಪಕ್ಷಿಣಾವಿವ ಫಲಿತಂ ವೃಕ್ಷಂ** | ಫಲಭರಿತವಾದ ವೃಕ್ಷಗಳನ್ನು ಪಕ್ಷಿಗಳು ಯಾವ ರೀತಿ ಶೀಘ್ರವಾಗಿ ಸಮೀಪಿಸುತ್ತವೆಯೋ ಅದರಂತೆ ನೀವು ನಮ್ಮ ಐಶ್ವರ್ಯವಂತನಾದ ಯಜಮಾನನ ಅಭಿಮುಖವಾಗಿ ಬನ್ನಿ.

**ವಿದಥೇ ಉಕ್ಥಶಾಸಾ ಬ್ರಹ್ಮಾಣೇವ—ಯಜ್ಞೇ ಉಕ್ಥಶಂಸಿತಾರೌ ಬ್ರಾಹ್ಮಣಾವಿವ** | ವಿದಥ ಶಬ್ದವು ಯಜ್ಞನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೯) ಯಜ್ಞದಲ್ಲಿ ಉಕ್ಥಾದಿ ಮಂತ್ರಗಳನ್ನು ಪಠಿಸುವ ಬ್ರಾಹ್ಮಣರು ಯಾವ ರೀತಿ ಆಗಮಿಸುವರೋ ಅದರಂತೆ ನೀವು ನಮ್ಮ ಯಜ್ಞಭೂಮಿಗೆ ಬನ್ನಿ.

**ಜನ್ಯಾ ದೂತೇವ—ಜನಪದೇಷು ರಾಜ್ಞಾ ಪ್ರೇಷಿತೌ ದೂತಾವಿವ** । ರಾಜನು ತನ್ನ ದೂತರನ್ನು ತನ್ನ ರಾಜ್ಯದಲ್ಲಿ ಯಾವರೀತಿ ಕಳುಹಿಸುವನೋ, ಕಳುಹಿಸಿದ ಆ ದೂತರು ಯಾವರೀತಿ ಜನರಿಂದ ಪುರಸ್ಕಾರವನ್ನು ಪಡೆಯುವರೋ ಅದರಂತೆ ನೀವು ನಮ್ಮ ಯಜ್ಞಭೂಮಿಗೆ ಬಂದು ಪೂಜಾದಿಗಳಿಂದ ಸತ್ಕೃತರಾಗಿ ಎಂದಭಿಪ್ರಾಯವು.

**ಪುರುತ್ರಾ ಹವ್ಯಾ—ಬಹುಭಿಃ ಪುರುಷೈಃ ಹ್ವಾತವ್ಯೌ** । ಯಜ್ಞಮಾಡತಕ್ಕ ಅನೇಕ ಪುರುಷರಿಂದ ಯಜ್ಞಭೂಮಿಗೆ ಬರಬೇಕೆಂದು ಕರೆಯಲ್ಪಡುವವರು. ಇಂತಹ ಮಹಿಮೆಯಿಂದ ಕೂಡಿದ ನೀವು ನಮ್ಮ ಯಜ್ಞಭೂಮಿಗೂ ಬರಬೇಕೆಂದು ಆಶಿಸಲಾಗಿದೆ.

॥ ಸಂಹಿತಾಪಾಠಃ ॥

ಪ್ರಾತರ್ಯಾವಾಣಾ ರಥ್ಯೇವ ವೀರಾಜೇವ ಯಮಾ ವರಮಾ ಸಚೇಥೇ ।
ಮೇನೇಇವ ತನ್ವಾ೩ ಶುಂಭಮಾನೇ ದಂಪತೀವ ಕ್ರತುವಿದಾ ಜನೇಷು ॥ ೨ ॥

॥ ಪದಪಾಠಃ ॥

ಪ್ರಾತಃऽಯಾವಾನಾ । ರಥ್ಯಾऽಇವ । ವೀರಾ । ಅಜಾऽಇವ । ಯಮಾ । ವರಂ । ಆ । ಸಚೇಥೇಇತಿ । ಮೇನೇ ಇವೇತಿ ಮೇನೇऽಇವ । ತನ್ವಾ । ಶುಂಭಮಾನೇ ಇತಿ । ದಂಪತೀ ಇವೇತಿ ದಂಪತೀऽಇವ । ಕ್ರತುऽವಿದಾ । ಜನೇಷು ॥ ೨ ॥

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ಪ್ರಾತರ್ಯಾವಾಣಾ ಪ್ರಾತರೇವ ಯಜ್ಞಾರ್ಥಂ ಗಂತಾರೌ ರಥ್ಯೇವ ರಥಿನಾವಿವ ವೀರೌ ಸ್ವಕರ್ಮಣಿ ಶೂರೌ । ಅಜೇವಾಜಾವಿವ ಛಾಗಾವಿವ ಯಮಾ ಯಮಲೌ । ಮೇನೇ ಇವ ನಾರ್ಯಾವಿವ ತನ್ವಾ ಶರೀರೇಣ ಶುಂಭಮಾನೇ ಶೋಭಮಾನೌ। ದಂಪತೀವ ಜಾಯಾಪತೀ ಇವ ಸಂಗತೌ ಜನೇಷು ವಿಷಯೇಷು ಕ್ರತುವಿದಾ ಕರ್ಮವಿದೌ ಯುವಾಂ ವರಂ ಸಂಭಕ್ತಾರಮಾಸಚೇಥೇ । ಆಗಚ್ಛತಂ ॥**

॥ ಪ್ರತಿಪದಾರ್ಥ ॥

(**ಅಶ್ವಿನೌ**—ಎಲೈ ಅಶ್ವಿನೀ ದೇವತೆಗಳೇ) । **ರಥ್ಯೇವ ವೀರಾ**—ರಥದಲ್ಲಿ ಕುಳಿತಿರುವ ಇಬ್ಬರು ಶೂರರಂತೆ । **ಪ್ರಾತರ್ಯಾವಾಣಾ**—ಪ್ರಾತಃಕಾಲದಲ್ಲಿಯೇ ಯಜ್ಞಾರ್ಥವಾಗಿ ಹೋಗುವವರೂ । **ಅಜೇವ**—ಅಜದ್ವಯದಂತೆ । **ಯಮಾ**—ಯಮಳರೂ । **ತನ್ವಾ**—ಆಕರ್ಷಕವಾದ ಶರೀರಗಳಿಂದ । **ಶುಂಭಮಾನೇ**— ಶೋಭಿಸುತ್ತಿರುವ ।

**ಮೇನೇ ಇವ**—ಇಬ್ಬರು ಸುಂದರಸ್ತ್ರೀಯರಂತೆಯೂ | **ದಂಪತೀವ** — ದಂಪತಿಗಳಂತೆ ಸೇರಿಕೊಂಡಿರುವವರೂ | **ಜನೇಷು**—ಯಜ್ಞಕರ್ತರಾದ ಪ್ರಜೆಗಳಲ್ಲಿ | **ಕ್ರತುವಿದಾ**—ಆಚರಿತವಾಗುವ ಕರ್ಮದ ಸ್ವರೂಪವನ್ನು ತಿಳಿಯುವವರೂ ಆದ ನೀವು | **ವರಂ**—ಶ್ರೇಷ್ಠವಾಗಿ ಪೂಜಿಸುವ ಯಜಮಾನನಲ್ಲಿಗೆ | **ಆ ಸಚೇಥೇ**—ಇಬ್ಬರೂ ಜೊತೆಯಾಗಿ ಸೇರಿಕೊಂಡು ಬನ್ನಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ರಥದಲ್ಲಿ ಕುಳಿತಿರುವ ಇಬ್ಬರು ಶೂರರಂತೆ ಪ್ರಾತಃಕಾಲದಲ್ಲಿಯೇ ಯಜ್ಞಾರ್ಥವಾಗಿ ಹೋಗತಕ್ಕವರೂ, ಅಜದ್ವಯದಂತೆ ಯಮಳರೂ, ಆಕರ್ಷಕವಾದ ಶರೀರಗಳಿಂದ ಶೋಭಿಸುತ್ತಿರುವ ಇಬ್ಬರು ಸುಂದರ ಸ್ತ್ರೀಯರಂತೆಯೂ. ದಂಪತಿಗಳಂತೆಯೂ, ಯಜ್ಞಕರ್ತರಾದ ಪ್ರಜೆಗಳಲ್ಲಿ ಆಚರಿತವಾಗುವ ಕರ್ಮದ ಸ್ವರೂಪವನ್ನು ತಿಳಿಯುವವರೂ ಆದ ನೀವು ಶ್ರೇಷ್ಠವಾಗಿ ಪೂಜಿಸುವ ಯಜಮಾನನಲ್ಲಿಗೆ ಇಬ್ಬರೂ ಜೊತೆಯಾಗಿಬನ್ನಿರಿ.

## English Translation.

Moving at dawn like two heroes in a car; like a pair of goats; like two women lovely in form; or like husband and wife; come together, knowing (how sacred) rites (are to be celebrated) amongst men, (to bestow) happiness (on the worshipper)

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಶ್ವಿನೀದೇವತೆಗಳನ್ನು ಕೆಲವು ದೃಷ್ಟಾಂತಗಳಿಂದ ವರ್ಣಿಸಲಾಗಿದೆ. **ಪ್ರಾತರ್ಯಾವಾಣಾ—ಪ್ರಾತರೇವ ಯಜ್ಞಾರ್ಥಂ ಗಂತಾರೌ |** ಪ್ರಾತಃಕಾಲದಲ್ಲಿಯೇ ಯಜ್ಞಾಭಿಮುಖವಾಗಿ ಹೋಗುವವರು. ಸಾಧಾರಣವಾಗಿ ಅಶ್ವಿನೀದೇವತೆಗಳು, ಉಷಸ್ಸು, ಸವಿತೃ ಎಂಬ ದೇವತೆಗಳು ಪ್ರಾತಃಕಾಲದಲ್ಲಿ ಆಹ್ವಾನಿಸಲ್ಪಡುವರು. ಆದುದರಿಂದ ಇವರು ಪ್ರಾತಃಕಾಲದಲ್ಲಿ ಯಜ್ಞಾರ್ಥವಾಗಿ ಹೋಗುವ ದೇವತೆಗಳು. ಮತ್ತು ಈ ಅಶ್ವಿನೀದೇವತೆಗಳು ರಥದಲ್ಲಿ ಕುಳಿತಿರುವ ಇಬ್ಬರು ಶೂರರಂತೆ ಕಾಣುವರು; ಒಂದೇ ಆಕಾರವುಳ್ಳ ಎಂದರೆ ಸಮಾನಾಕಾರವುಳ್ಳ ಎರಡು ಮೇಕೆಗಳಂತೆ ಕಾಣಿಸುತ್ತಿರುವರು ಎಂದರೆ ಅಶ್ವಿನೀದೇವತೆಗಳಲ್ಲಿ ಇಬ್ಬರ ಆಕಾರವೂ ಒಂದೇ ಸಮನಾಗಿ ಇರುವುದು. ಇಬ್ಬರಿಗೂ ಯಾವ ವ್ಯತ್ಯಾಸವೂ ಕಾಣಿಸುವುದಿಲ್ಲ. ಆದುದರಿಂದ ಇವರು ಯಮಳರಂತೆ ಸಮಾನಾಕಾರವುಳ್ಳವರು ಎಂದು ವರ್ಣಿಸಿದೆ; ಆಕರ್ಷಕವಾದ ಶರೀರಗಳಿಂದ ಶೋಭಿಸುತ್ತಿರುವ ಇಬ್ಬರು ಸುಂದರಸ್ತ್ರೀಯರಂತೆಯೂ ಇರುವರು. ರೂಪಯೌವನಸಂಪನ್ನರಾದ ದಂಪತಿಗಳಂತೆ ಶೋಭಿಸುತ್ತಿರುವರು. ಜನರು ನೆರವೇರಿಸುವ ಯಜ್ಞಾದಿಕರ್ಮಗಳನ್ನು ತಿಳಿಯುವವರು ಎಂದರೆ ದೇಶದಲ್ಲಿ ಯಾರು ಯಾರು ಯಾವ ಕಾಲಗಳಲ್ಲಿ ಯಜ್ಞಮಾಡುತ್ತಿರುವರು ಎಂಬುದನ್ನು ತಿಳಿದು ಅವರ ಆಹ್ವಾನದಂತೆ ಅಲ್ಲಿಗೆ ಹೋಗುವವರು. ಇಂತಹ ಗುಣವಿಶಿಷ್ಟರಾದ ಅಶ್ವಿನೀದೇವತೆಗಳು ಇಬ್ಬರೂ ಒಟ್ಟಿಗೆ ಸೇರಿ ನಮ್ಮ ಯಜ್ಞಭೂಮಿಗೆ ಬರಲಿ ಎಂದು ತಿಳಿಸಿದೆ.



॥ ಸಂಹಿತಾಪಾಠಃ ॥

ಶೃಂಗೇವ ನಃ ಪ್ರಥಮಾ ಗಂತಮರ್ವಾಕ್ಛಫಾವಿವ ಜರ್ಭುರಾಣಾ ತರೋಭಿಃ ।
ಚಕ್ರವಾಕೇವ ಪ್ರತಿ ವಸ್ತೋರುಸ್ರಾರ್ವಾಂಚಾ ಯಾತಂ ರಥ್ಯೇವ ಶಕ್ರಾ ॥ ೩ ॥

॥ ಪದಪಾಠಃ ॥

ಶೃಂಗಾಽಇವ । ನಃ । ಪ್ರಥಮಾ । ಗಂತಂ । ಅರ್ವಾಕ್ । ಶಫೌಽಇವ । ಜರ್ಭುರಾಣಾ । ತರಃಽಭಿಃ ।
ಚಕ್ರವಾಕಾಽಇವ । ಪ್ರತಿ । ವಸ್ತೋಃ । ಉಸ್ರಾ । ಅರ್ವಾಂಚಾ । ಯಾತಂ । ರಥ್ಯಾಽಇವ । ಶಕ್ರಾ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಶೃಂಗೇವ ಪಶೋಃ ಶೃಂಗೇ ಇವ ಪ್ರಥಮಾ ದೇವಾನಾಂ ಪ್ರಥಮೌ ಶಫಾವಿವಾಶ್ವಾದೇಃ ಖುರಾವಿವ ತರೋಭಿರ್ವೇಗೈರ್ಜರ್ಭುರಾಣಾ ಭೃಶಂ ಗಚ್ಛಂತೌ ಯುವಾಂ ನೋಽಸ್ಮಾನ್ಪ್ರತ್ಯರ್ವಾಗಭಿಮುಖಮಾಗಂತಂ। ಆಗಚ್ಛತಂ । ಕಿಂಚ ಹೇ ಅಶ್ವಿನೌ ವಸ್ತೋಃ ಪ್ರತಿ ಅಹಃ ಪ್ರತಿ ಚಕ್ರವಾಕೇವ ಚಕ್ರವಾಕಾವಿವ ಹೇ ಉಸ್ರಾ ಶತ್ರೂಣಾಮುತ್ಸಾರಕೌ ಗಮನಶೀಲೌ ವಾ ರಥ್ಯೇವ ರಥಿನಾವಿವ ಹೇ ಶಕ್ರಾ ಸ್ವಕರ್ಮಣಿ ಶಕ್ತಾವರ್ವಾಂಚಾಸ್ಮದಭಿಮುಖೌ ಯಾತಂ । ಗಚ್ಛತಂ ॥

॥ ಪ್ರತಿಪದಾರ್ಥ ॥

**(ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ) । **ಶೃಂಗೇವ**—ಪಶುವಿನ ಶೃಂಗಗಳಂತಿರುವವರೂ । **ಪ್ರಥಮಾ**—ದೇವತೆಗಳಲ್ಲಿ ಮುಖ್ಯರೂ । **ಶಫಾವಿವ**—ಅಶ್ವಗಳ ಗೊರಸುಗಳಂತಿರುವವರೂ । **ತರೋಭಿಃ**—ತ್ವರಿತವಾದ ಗತಿಗಳಿಂದ । **ಜರ್ಭುರಾಣಾ**—ವೇಗವಾಗಿ ಸಂಚರಿಸುವವರೂ ಆದ ನೀವು । **ನಃ ಅರ್ವಾಕ್**—ನಮ್ಮ ಅಭಿಮುಖವಾಗಿ । **ಗಂತಂ**—ಬನ್ನಿರಿ । **ವಸ್ತೋಃ ಪ್ರತಿ**—ಅಹಸ್ಸನ್ನು ನಿರೀಕ್ಷಿಸುತ್ತಿರುವ । **ಚಕ್ರವಾಕೇವ**—ಚಕ್ರವಾಕ ಪಕ್ಷಿಗಳಂತಿರತಕ್ಕವರೂ । **ಉಸ್ರಾ**—ಶತ್ರುಧರ್ಷಕರೂ ಆದ ಅಶ್ವಿನೀದೇವತೆಗಳೇ । **ರಥ್ಯೇವ**—ರಥಿಕರಾದ ಶೂರರಂತೆ । **ಶಕ್ರಾ**—ನಿಮ್ಮ ಕಾರ್ಯಗಳಲ್ಲಿ ಸಮರ್ಥರಾದ ನೀವು । **ಅರ್ವಾಂಚಾ**—ನಮ್ಮ ಅಭಿಮುಖವಾಗಿ । **ಯಾತಂ**—ಬನ್ನಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಪಶುವಿನ ಶೃಂಗಗಳಂತಿರುವವರೂ, ದೇವತೆಗಳಲ್ಲಿ ಮುಖ್ಯರೂ, ಅಶ್ವಗಳ ಗೊರಸುಗಳಂತಿರುವವರೂ, ತ್ವರಿತವಾದ ಗತಿಗಳಿಂದ ವೇಗವಾಗಿ ಸಂಚರಿಸುವವರೂ ಆದ ನೀವು ನಮ್ಮ ಅಭಿಮುಖವಾಗಿ ಬನ್ನಿರಿ. ಅಹಸ್ಸನ್ನು ನಿರೀಕ್ಷಿಸುತ್ತಿರುವ ಚಕ್ರವಾಕಪಕ್ಷಿಗಳಂತಿರುವವರೂ, ಶತ್ರುಧರ್ಷಕರೂ ಆದ ಎಲೈ ಅಶ್ವಿನೀ ದೇವತೆಗಳೇ ರಥಿಕರಾದ ಶೂರರಂತೆ ನಿಮ್ಮ ಕಾರ್ಯದಲ್ಲಿ ಸಮರ್ಥರಾದ ನೀವು ನಮ್ಮ ಅಭಿಮುಖವಾಗಿ ಬನ್ನಿರಿ.

## English Translation

Come to us, the first (before other gods), like a pair of horns or like two hoofs, travelling with rapid (steps); like a pair of Chakravakas, awaiting day; overthrowers of foes, like warriors in cars, able (to perform all things), come to our presence.

॥ ವಿಶೇಷವಿಷಯಗಳು ॥

ಎಲೈ ಅಶ್ವಿನೀ ದೇವತೆಗಳೇ, ನೀವು ಪಶುವಿನ ಎರಡು ಕೊಂಬುಗಳಂತೆ ಉನ್ನತವಾಗಿರುವವರು; ದೇವತೆಗಳಲ್ಲಿ ಶ್ರೇಷ್ಠರಾದವರು ಅಥವಾ ಎಲ್ಲಾ ದೇವತೆಗಳಿಗಿಂತಲೂ ಮೊದಲೇ ಯಜ್ಞಭೂಮಿಗೆ ಬರತಕ್ಕವರು; ಅಶ್ವಗಳ ಗೊರಸಿನಂತೆ ವೇಗವಾದ ಗಮನವುಳ್ಳವರು ಎಂದರೆ ವೇಗವಾಗಿ ಸಂಚರಿಸುವವರು; ಇಂತಹ ನೀವು ಚಕ್ರವಾಕ ಪಕ್ಷಿಯು ಯಾವರೀತಿ ಅಹಸ್ಸನ್ನೇ ನಿರೀಕ್ಷಿಸುತ್ತದೆಯೋ ಅದರಂತೆ ನಮ್ಮ ಅಭಿಮುಖವಾಗಿ ಬನ್ನಿರಿ; ಮತ್ತು ರಥದಲ್ಲಿ ಕುಳಿತಿರುವ ಶೂರರಂತೆ ಇರುವವರೂ ಶತ್ರುಗಳನ್ನು ಧ್ವಂಸಮಾಡುವವರೂ, ನಿಮ್ಮ ಕಾರ್ಯಗಳಲ್ಲಿ ಸಮರ್ಥರೂ ಆದ ನೀವು ನಮ್ಮ ಅಭಿಮುಖವಾಗಿ ಯಜ್ಞಭೂಮಿಗೆ ಬನ್ನಿ ಎಂದು ಮುಖ್ಯಾಭಿಪ್ರಾಯವು.

~~~

॥ ಸಂಹಿತಾಪಾಠಃ ॥

ನಾವೇವ ನಃ ಪಾರಯತಂ ಯುಗೇವ ನಭ್ಯೇವ ನ ಉಪಧೀವ ಪ್ರಧೀವ ।
ಶ್ವಾನೇವ ನೋ ಅರಿಷಣ್ಯಾ ತನೂನಾಂ ಖೃಗಲೇವ ವಿಸ್ರಸಃ ಪಾತಮಸ್ಮಾನ್ ॥ ೪ ॥

॥ ಪದಪಾಠಃ ॥

ನಾವಾಽಇವ । ನಃ । ಪಾರಯತಂ । ಯುಗಾಽಇವ । ನಭ್ಯಾಽಇವ । ನಃ । ಉಪಧೀ ಇವೇತ್ಯುಪಧೀಽ-
ಇವ । ಪ್ರಧೀ ಇವೇತಿ ಪ್ರಧೀಽಇವ ।
ಶ್ವಾನಾಽಇವ । ನಃ । ಅರಿಷಣ್ಯಾ । ತನೂನಾಂ । ಖೃಗಲಾಽಇವ । ವಿಽಸ್ರಸಃ । ಪಾತಂ । ಅಸ್ಮಾನ್ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ನಾವೇವ ನಾವಾವಿವ ಸಿಂಧೂನ್ ನೋಽಸ್ಮಾನ್ ದುರ್ಗಾಣಿ ಪಾರಯತಂ । ಯುಗೇವ ಯಥಾ ರಥಸ್ಯ ಯುಗೇ ನಭ್ಯೇವ ಯಥಾ ಚ ರಥಚಕ್ರನಾಭಿಫಲಕೇ । ಉಪಧೀ ಇವ ಯಥಾ ತತ್ಪಾರ್ಶ್ವಸ್ಥೇ ಫಲಕೇ ಪ್ರಧೀ ಇವ ಯಥಾ ವಾ ಚಕ್ರಬಾಹ್ಯವಲಯೌ ರಥಂ ಪಾರಯತಃ ತಥಾ
~~~

**ನೋಽಸ್ಮಾನ್ದುರ್ಗಾಣಿ ಪಾರಯತಂ । ಕಿಂಚ ಶ್ವಾನೇವ ಶ್ವಾನಾವಿವ ಯಥಾ ಶ್ವಾನೌ ಬಾಧಕೇಭ್ಯೋ ರಕ್ಷಂತೌ ತನೋರ್ಹಿಂಸಾಮುಪನಯತಃ ತಥಾ ನೋಽಸ್ಮಾಕಂ ತನೂನಾಮಂಗಾನಾಮರಿಷಣ್ಯಾವಹಿಂಸೌ ಭವತಂ । ಖೃಗಲೇವ ಯಥಾ ತನು ತ್ರಾಣೇ ತನು ಹಿಂಸಾಯಾ ರಕ್ಷತಃ ತಥಾ ವಿಸ್ರಸೋ ಜರಾಯಾ ಅಸ್ಮಾನ್ಯುವಾಂ ಪಾತಂ ॥**

॥ ಪ್ರತಿಪದಾರ್ಥ ॥

(**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ) । **ನಾವೇವ**—ದೋಣಿಗಳು ನದಿಯನ್ನು ದಾಟಿಸುವಂತೆ । **ನಃ**—ನಮ್ಮನ್ನು । **ಪಾರಯತಂ**—ದುಃಖದಿಂದ ದಾಟಿಸಿ ರಕ್ಷಿಸಿರಿ । **ಯುಗೇವ**—ರಥದ ನೊಗಗಳಂತೆಯೂ । **ನಭ್ಯೇವ**—ನಾಭಿಗಳಂತೆಯೂ । **ಉಪಧೀವ**—ಇರಚಿಗಳಂತೆಯೂ । **ಪ್ರಧೀ ಇವ**—ಹೊರವಲಯಗಳಂತೆಯೂ । (ಇವೆಲ್ಲವೂ ಹೇಗೆ ಚಕ್ರದ್ವಯವುಳ್ಳ ರಥವನ್ನು ದಾಟಿಸುತ್ತವೆಯೋ ಹಾಗೆ) **ನಃ**—ನಮ್ಮನ್ನು (ದುಃಖದಿಂದ ದಾಟಿಸಿ) । **ಶ್ವಾನೇವ**—ಶ್ವಾನಗಳು ಹಿಂಸಕರಿಂದ ರಕ್ಷಿಸುವಂತೆ । **ನಃ**—ನಮ್ಮ । **ತನೂನಾಂ**—ದೇಹಗಳ । **ಅರಿಷಣ್ಯಾ**—ಅಹಿಂಸಕರಾಗಿರಿ । **ಖೃಗಲೇವ**—ರಕ್ಷಣಾಕವಚಗಳು ಶತ್ರುಗಳ ಹಿಂಸೆಯಿಂದ ರಕ್ಷಿಸುವಂತೆ । **ವಿಸ್ರಸಃ**—ಮುಪ್ಪಿನಿಂದ । **ಅಸ್ಮಾನ್**—ನಮ್ಮನ್ನು । **ಪಾತಂ**—ರಕ್ಷಿಸಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ದೋಣಿಗಳು ನದಿಯನ್ನು ದಾಟಿಸುವಂತೆ ನಮ್ಮನ್ನು ದುಃಖದಿಂದ ದಾಟಿಸಿ ರಕ್ಷಿಸಿರಿ. ರಥದ ನೊಗಗಳೂ, ನಾಭಿಗಳೂ, ಇರಚಿಗಳೂ, ಹೊರವಲಯಗಳೂ ಚಕ್ರದ್ವಯವುಳ್ಳ ರಥವನ್ನು ಯಾವ ರೀತಿ ದುರ್ಗಪ್ರದೇಶಗಳಿಂದ ದಾಟಿಸುತ್ತವೆಯೋ ಅದೇ ರೀತಿ ನಮ್ಮನ್ನು ದುಃಖದಿಂದ ದಾಟಿಸಿ. ಶ್ವಾನಗಳಂತೆಯೂ, ರಕ್ಷಣಾ ಕವಚಗಳಂತೆಯೂ ನಮ್ಮನ್ನು ಶತ್ರುಗಳ ಹಿಂಸೆಯಿಂದ ರಕ್ಷಿಸಿ. ನಮ್ಮನ್ನು ಮುಪ್ಪಿನಿಂದ ರಕ್ಷಿಸಿ.

English Translation.

Bear us across (the sea of life), like two vessels, or (over difficult places), like the poles of a cas, the axles, the spokes, the fellies (of two wheels): Be like two dogs, warding off injury to our persons, and, like two coats of mail, defend us from decay.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಶ್ವಿನೀದೇವತೆಗಳು ಸ್ತೋತ್ರಮಾಡುತ್ತಿರುವ ನಮ್ಮನ್ನು ಕಷ್ಟಗಳಿಂದ ಪಾರುಮಾಡಬೇಕೆಂದು ಅನೇಕ ದೃಷ್ಟಾಂತಗಳ ಮೂಲಕ ಪ್ರಾರ್ಥಿಸಲಾಗಿದೆ.

**ನಾವೇವ ನಃ ಪಾರಯತಂ—ಹೇ ಅಶ್ವಿನೌ ನಾವಾವಿವ ಸಿಂಧೂನ್ ದುರ್ಗಾಣಿ ಪಾರಯತಂ ।** ಎಲೈ ಅಶ್ವಿನೀದೇವತೆಗಳೇ, ನಾವೆಯು ಅಥವಾ ದೋಣಿಯು ನದಿಗಳನ್ನು ದಾಟಿಸುವಂತೆ ನೀವು ನಮ್ಮ ಕಷ್ಟಗಳನ್ನು ಪರಿಹರಿಸಿ ತೊಂದರೆಗಳಿಂದ ನಮ್ಮನ್ನು ದಾಟಿಸಿರಿ. ನಾವೆಯಿಂದ ನದಿಗಳನ್ನು ಯಾವರೀತಿ ಸುಲಭವಾಗಿ ದಾಟಬಹುದೋ ಅದೇ ರೀತಿಯಲ್ಲಿ ನಿಮ್ಮ ಅನುಗ್ರಹದಿಂದ ನಾವು ನಮ್ಮ ಕಷ್ಟಗಳಿಂದ ಪಾರಾಗುವಂತೆ ಮಾಡಿರಿ ಎಂದಭಿಪ್ರಾಯವು.

**ಯುಗೇವ ನಭ್ಯೇವ ಉಪಧೀವ ಪ್ರಧೀವ ನಃ (ಪಾರಯತಂ)**—ರಥದ ನೊಗಗಳು, ರಥದ ಅಚ್ಚು, ಇರಚಿಗಳು, ರಥದ ಹೊರವಲಯಗಳು ಇವೆಲ್ಲವೂ ಹೇಗೆ ರಥವನ್ನು (ಸುಲಭವಾಗಿ ಸಂಚಾರಮಾಡುವಂತೆ) ದಾಟಿಸುತ್ತವೆಯೋ ಅದರಂತೆ ನೀವು ನಮ್ಮನ್ನು ದುಃಖದಿಂದ ಪಾರುಮಾಡಿರಿ.

**ಶ್ವಾನೇವ ನಃ ತನೂನಾಂ ಅರಿಷಣ್ಯಾ—ಯಥಾ ಶ್ವಾನೌ ಬಾಧಕೇಭ್ಯೋ ರಕ್ಷಂತೌ ತನೋರ್ಹಿಂಸಾಮಪನಯತಃ ತಥಾ ಅಸ್ಮಾಕಂ ಅಂಗಾನಾಂ ಅಹಿಂಸಕೌ ಭವತಂ ।** ನಮ್ಮ ಬಳಿ ಇರುವ ನಾಯಿಗಳು, ನಮಗೆ ಹಿಂಸೆಯನ್ನು ಮಾಡತಕ್ಕ ಶತ್ರುಗಳಿಂದ ಯಾವರೀತಿ ನಮ್ಮನ್ನು ರಕ್ಷಿಸುವವೋ ಅದರಂತೆ ನೀವು ನಮ ಶರೀರಾದಿಗಳಿಗೆ ಹಿಂಸೆಯುಂಟಾಗದಂತೆ ನಮ್ಮನ್ನು ರಕ್ಷಿಸಿರಿ.

**ಋಗಲೇವ ವಿಸ್ರಸಃ ಅಸ್ಮಾನ್ ಪಾತಂ—ಯಥಾ ತನುತ್ರಾಣೇ ತನುಹಿಂಸಾಯಾ ರಕ್ಷತಃ ತಥಾ ಯುವಾಂ ಜರಾಯಾಃ ಅಸ್ಮಾನ್ ಪಾತಂ ।** ಯುದ್ಧಾದಿಗಳಲ್ಲಿ ನಾವು ಧರಿಸಿರುವ ರಕ್ಷಣಾ (ಕಬ್ಬಿಣದ ಕವಚ Armour) ಕವಚಗಳು ನಮ್ಮ ಶರೀರವನ್ನು ಶತ್ರುಗಳ ಆಯುಧಗಳಿಂದ ಹೇಗೆ ರಕ್ಷಿಸುವವೋ ಅದರಂತೆ ನೀವು ನಮಗೆ ಮುಪ್ಪಿನ ಬಾಧೆಯುಂಟಾಗದಂತೆ ರಕ್ಷಿಸಿರಿ ಎಂದು ಮುಖ್ಯಾಭಿಪ್ರಾಯವು.



॥ ಸಂಹಿತಾಪಾಠಃ ॥

ವಾತೇವಾಜುರ್ಯಾ ನದ್ಯೇವ ರೀತಿರಕ್ಷೀ ಇವ ಚಕ್ಷುಷಾ ಯಾತಮರ್ವಾಕ್ ।
ಹಸ್ತಾವಿವ ತನ್ವೇ೩ ಶಂಭವಿಷ್ಠಾ ಪಾದೇವ ನೋ ನಯತಂ ವಸ್ಯೋ ಅಚ್ಛ ॥ ೫ ॥

॥ ಪದಪಾಠಃ ॥

ವಾತಾಽಇವ । ಅಜುರ್ಯಾ । ನದ್ಯಾಽಇವ । ರೀತಿಃ । ಅಕ್ಷೀ ಇವೇತ್ಯಕ್ಷೀ ಇವ । ಚಕ್ಷುಷಾ । ಆ । ಯಾತಂ । ಅರ್ವಾಕ್ ।
ಹಸ್ತಾಽಇವ । ತನ್ವೇ । ಶಂಽಭವಿಷ್ಠಾ । ಪಾದಾಽಇವ । ನಃ । ನಯತಂ । ವಸ್ಯಃ । ಅಚ್ಛ ॥ ೫ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ವಾತೇವ ವಾತಾವಿವಾಜುರ್ಯಾ ಜರಿತುಮಶಕ್ಯೌ ನದ್ಯೇವ ನದ್ಯಾವಿವ ರೀತಿಃ ॥ ವ್ಯತ್ಯಯೇನೈಕವಚನಂ ॥ ಶೀಘ್ರಂ ಗಂತಾರೌ ಯುವಾಂ । ಅಕ್ಷೀ ಇವ ಅಕ್ಷಿಣೀ ಇವ ಚಕ್ಷುಷಾ ದರ್ಶನೇನಾರ್ವಾಗಸ್ಮದಭಿಮುಖಮಾಯಾತಂ । ಆಗಚ್ಛತಂ । ಕಿಂಚ ಹಸ್ತೇವ ಹಸ್ತಾವಿವ ಪಾದೇವ ಪಾದಾವಿವ ತನ್ವೇ ಶರೀರಾಯ ಶಂಭವಿಷ್ಠಾ ಸುಖಸ್ಯ ಭಾವಯಿತೃತಮೌ ಯುವಾಂ ನೋಽಸ್ಮಾನ್ ವಸ್ಯೋ ವಸೀಯಃ ಶ್ರೇಷ್ಠಂ ಧನಮಚ್ಛ ಪ್ರತಿ ನಯತಂ । ಪ್ರಾಪಯತಂ ॥

॥ ಪ್ರತಿಪದಾರ್ಥ ॥

**(ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ) | **ಅಜುರ್ಯಾ**—ಅಪ್ರತಿಹತವಾದ ಶಕ್ತಿಯುಳ್ಳ | **ವಾತೇವ**—ಬಿರುಗಾಳಿಗಳಂತೆಯೂ | **ರೀತಿಃ**—ಶೀಘ್ರವಾಗಿ ಪ್ರವಹಿಸುವ | **ನದ್ಯೇವ**—ನದಿಗಳಂತೆಯೂ | **ಚಕ್ಷುಷಾ**—ದರ್ಶನ ಶಕ್ತಿಯುಳ್ಳ | **ಅಕ್ಷೀವ**—ಕಣ್ಣುಗಳಂತೆಯೂ | **ಅರ್ವಾಕ್**—ನಮ್ಮ ಅಭಿಮುಖವಾಗಿ | **ಆ ಯಾತಂ**-ಬನ್ನಿರಿ | **ಹಸ್ತೌ ಇವ**—ಎರಡು ಹಸ್ತಗಳಂತೆಯೂ | **ಪಾದಾ ಇವ**—ಎರಡು ಪಾದಗಳಂತೆಯೂ | **ತನ್ವೇ** ಶರೀರಕ್ಕೆ | **ಶಂಭವಿಷ್ಠಾ**—ಸುಖಕಾರಕರಾದ ನೀವು | **ನಃ**—ನಮ್ಮನ್ನು | **ವಸ್ಯಃ ಅಚ್ಛ**—ಶ್ರೇಷ್ಠವಾದ ಧನದ ಅಭಿಮುಖವಾಗಿ | **ನಯತಂ**—ಕರೆದುಕೊಂಡು ಹೋಗಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಅಪ್ರತಿಹತವಾದ ಶಕ್ತಿಯುಳ್ಳ ಬಿರುಗಾಳಿಗಳಂತೆಯೂ, ಶೀಘ್ರವಾಗಿ ಪ್ರವಹಿಸುವ ನದಿಗಳಂತೆಯೂ, ದರ್ಶನಶಕ್ತಿಯುಳ್ಳ ಕಣ್ಣುಗಳಂತೆಯೂ, ನಮ್ಮ ಅಭಿಮುಖವಾಗಿ ಬನ್ನಿರಿ. ಎರಡು ಹಸ್ತಗಳಂತೆಯೂ, ಎರಡು ಪಾದಗಳಂತೆಯೂ ಶರೀರಕ್ಕೆ ಸುಖಕಾರಕರಾದ ನೀವು ನಮ್ಮನ್ನು ಶ್ರೇಷ್ಠವಾದ ಧನದ ಅಭಿಮುಖವಾಗಿ ಕರೆದುಕೊಂಡು ಹೋಗಿರಿ.

## English Translation.

Irresistible as two winds, rapid as two rivers, and quick of sight, come like two eyes before ns; like two hands; like two feet; subservient to the well-being of our bodies, conduct us to (the acquirement) of excellent (wealth).

॥ ವಿಶೇಷವಿಷಯಗಳು ॥

**ಅಜುರ್ಯಾ ವಾತೇವ, ರೀತಿಃ ನದ್ಯೇವ, ಚಕ್ಷುಷಾ ಅಕ್ಷೀ ಇವ ಅರ್ವಾಕ್ ಆ ಯಾತಂ |** ಅಶ್ವಿನೀ ದೇವತೆಗಳು ನಮ್ಮ ಬಳಿಗೆ ಶೀಘ್ರವಾಗಿ ಬರಬೇಕೆಂದು ದೃಷ್ಟಾಂತಗಳ ಮೂಲಕ ಋಷಿಯು ಪ್ರಾರ್ಥಿಸಿರುವನು. ಬಿರುಗಾಳಿಯ ವೇಗವನ್ನು ಯಾವುದೂ ತಡೆಯಲಾರದು. ಅದು ತನಗೆ ಎದುರಿಗೆ ಸಿಕ್ಕುವ ವೃಕ್ಷಾದಿಗಳನ್ನು ಬುಡಸಹಿತ ಉರುಳಿಸುವುದು. ಅನೇಕವೇಳೆ ಗುಡಿಸಲುಗಳೂ, ಮನೆಗಳೂ ಅದರ ರಭಸವನ್ನು ಸಹಿಸಲಾರದೆ ದೂರ ಪ್ರದೇಶಕ್ಕೆ ಎಸೆಯಲ್ಪಡುವವು. ಸಮುದ್ರದಲ್ಲಿ ಅದು ನಾವೆಗಳನ್ನು ಮುಳುಗಿಸುವುದು. ಆದುದರಿಂದ ಬಿರುಗಾಳಿಯ ರಭಸವು ಅಪ್ರತಿಹತವಾದುದು ಅದಕ್ಕೆ ಯಾವುದೂ ಎದುರಿಲ್ಲ. ಅದರಂತೆಯೇ ವೇಗವಾಗಿ ಪ್ರವಹಿಸುವ ನದಿಯೂ ಸಹ ತನ್ನ ಮಾರ್ಗದಲ್ಲಿ ಸಿಕ್ಕುವ ಎಲ್ಲವನ್ನೂ ಕೊಚ್ಚಿಕೊಂಡು ಹೋಗುವುದು ನದಿಯ ಪ್ರವಾಹವನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ. ಚೆನ್ನಾಗಿ ಕಾಣಿಸುತ್ತಿರುವ ಕಣ್ಣುಗಳಿಗೂ ಮುಚ್ಚುಮರೆ ಯಾವುದೂ ಇರುವುದಿಲ್ಲ. ಆ ಕಣ್ಣುಗಳು ಹತ್ತಿರದಲ್ಲಿರುವುದನ್ನೂ, ದೂರದಲ್ಲಿರುವುದನ್ನೂ ನೋಡಬಲ್ಲವು. ಅವುಗಳ ದರ್ಶನಶಕ್ತಿಯು ಅಗಾಧವಾದುದು. ಆದುದರಿಂದ ಎಲೈ ಅಶ್ವಿನೀದೇವತೆಗಳೇ, ನೀವು ಬಿರುಗಾಳಿಯ ರಭಸದಂತೆಯೂ, ವೇಗವಾಗಿ ಪ್ರವಹಿಸುವ ನದಿಯಂತೆಯೂ, ಎಲ್ಲವನ್ನೂ ನೋಡುವ ಕಣ್ಣುಗಳಂತೆಯೂ ಅಪ್ರತಿಹತವಾದ ಗಮನವುಳ್ಳವರಾಗಿ ನಮಗೆ ಅಭಿಮುಖವಾಗಿ ಬನ್ನಿ. ನಮಗೆ ಎದುರಾಗಿ ಬರುತ್ತಿರುವ ನಿಮ್ಮ ಆಗಮನವನ್ನು ತಡೆಯುವ ಶಕ್ತಿಯು ಯಾರಿಗೂ ಇಲ್ಲ.

**ಹಸ್ತಾವಿವ ಪಾದೇವ ತನ್ವೇ ಶಂಭವಿಷ್ಠಾ ನಃ ವಸ್ಯ ಅಚ್ಛ ನಯತಂ—ಯಥಾ ಹಸ್ತೌ ಪಾದೌ ಶರೀರಾಯ ಸುಖಸ್ಯ ಭಾವಯಿತೃತಮೌ ತಥಾ ಯುವಾಂ ಅಸ್ಮಾನ್ ಶ್ರೇಷ್ಠಂ ಧನಂ ಪ್ರತಿ ಪ್ರಾಪಯತಂ।** ಶರೀರದಲ್ಲಿರುವ ಕಾಲುಗಳು, ಕೈಗಳು ಯಾವರೀತಿ ಶರೀರದ ಹಿತವನ್ನೇ ಬಯಸುತ್ತಾ ಶರೀರಕ್ಕೆ ಸುಖವನ್ನುಂಟು ಮಾಡುವದರಲ್ಲಿ ಪ್ರವರ್ತಿಸುವವೋ ಅದರಂತೆ ನೀವಿಬ್ಬರೂ ನಮ್ಮ ಸುಖಕ್ಕಾಗಿ ನಮಗೆ ಬೇಕಾದ ಶ್ರೇಷ್ಠವಾದ ಧನವನ್ನು ನಮಗೆ ಒದಗಿಸಿಕೊಡಿ ಎಂದಭಿಪ್ರಾಯವು.



ಸಂಹಿತಾಪಾಠಃ ॥

ಓಷ್ಠಾ॑ವಿವ॒ ಮಧ್ವಾ॒ಸ್ನೇ ವದ॑ಂತಾ॒ ಸ್ತನಾ॑ವಿವ ಪಿಪ್ಯತಂ ಜೀ॒ವಸೇ॑ ನಃ
ನಾಸೇ॑ವ ನಸ್ತ॒ನ್ವೋ॑ ರಕ್ಷಿ॒ತಾರಾ॒ ಕರ್ಣಾ॑ವಿವ ಸು॒ಶ್ರುತಾ॑ ಭೂತಮ॒ಸ್ಮೇ ॥ ೬ ॥

॥ ಪದಪಾಠಃ ॥

ಓಷ್ಠೌ॑ಽಇವ । ಮಧು॑ । ಆ॒ಸ್ನೇ । ವದ॑ಂತಾ । ಸ್ತನೌ॑ಽಇವ । ಪಿ॒ಪ್ಯ॒ತ॒ಂ । ಜೀ॒ವಸೇ॑ । ನ॒ಃ ।
ನಾಸಾ॑ಽಇವ । ನ॒ಃ । ತ॒ನ್ವಃ॑ । ರ॒ಕ್ಷಿ॒ತಾರಾ॑ । ಕರ್ಣೌ॑ಽಇವ । ಸು॒ಽಶ್ರುತಾ॑ । ಭೂ॒ತ॒ಂ । ಅ॒ಸ್ಮೇ ಇತಿ॑ ॥ ೬ ॥

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ಓಷ್ಠಾವಿವಾಸ್ನ ಆಸ್ಯಾಯ ಮಧುರರಸವದ್ವಚನಂ ವದಂತೌ ಸ್ತನಾವಿವ ನೋಽಸ್ಮಾನ್ ಜೀವಸೇ ಜೀವನಾಯ ಪಿಪ್ಯತಂ। ಪ್ಯಾಯಯತಂ। ಕಿಂಚ ನಾಸೇವ ನಾಸಿಕೇ ಇವ ನೋಽಸ್ಮಾಕಂ ತನ್ವಸ್ತನೋ ರಕ್ಷಿತಾರಾ ರಕ್ಷಿತಾರೌ ಭೂತಂ। ಭವತಂ। ಅಪಿ ಚ ಕರ್ಣಾವಿವಾಸ್ಮೇ ಅಸ್ಮಾಕಂ ಸುಶ್ರುತಾ ಸುಶ್ರವಣೇ ಯುವಾಂ ಭೂತಂ। ಭವತಂ॥**

॥ಪ್ರತಿಪದಾರ್ಥ॥

(**ಅಶ್ವಿನೌ**—ಎಲೈ ಅಶ್ವಿನೀ ದೇವತೆಗಳೇ)। **ಆಸ್ನೇ**—ಬಾಯಿನಲ್ಲಿರುವ। **ಓಷ್ಠಾವಿವ**—ತುಟಿಗಳಂತೆ। **ಮಧು**—ಮಧುರವಾಗಿ। **ವದಂತಾ**—ಮಾತುಗಳನ್ನಾಡುವವರಾಗಿಯೂ। **ಸ್ತನಾವಿವ**—ಸ್ತನಗಳಂತೆ। **ನಃ**—ನಮ್ಮನ್ನು। **ಜೀವಸೇ**—ಜೀವನಾರ್ಥವಾಗಿ। **ಪಿಪ್ಯತಂ**—ಪೋಷಿಸುವವರಾಗಿಯೂ ಇರಿ। **ನಾಸೇವ**—ಮೂಗಿನಂತೆ। **ನಃ**—ನಮ್ಮ। **ತನ್ವಃ**—ಶರೀರದ। **ರಕ್ಷಿತಾರಾ**—ರಕ್ಷಕರಾಗಿಯೂ ಇರಿ। **ಕರ್ಣಾವಿವ**—ಶ್ರೋತ್ರಗಳಂತೆ। **ಸುಶ್ರುತಾ**—ಶ್ರೇಷ್ಠವಾದ ಸ್ತುತ್ಯಾದಿಗಳನ್ನು। **ಅಸ್ಮೇ**—ನಮ್ಮ ಭಾಗಕ್ಕೆ ಕೇಳುವವರಾಗಿಯೂ। **ಭೂತಂ**—ಇರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಬಾಯಿನಲ್ಲಿರುವ ತುಟಿಗಳಂತೆ ಮಧುರವಾಗಿ ಮಾತನಾಡುವವರಾಗಿಯೂ, ಸ್ತನಗಳಂತೆ ನಮ್ಮನ್ನು ಜೀವನಾರ್ಥವಾಗಿ ಪೋಷಿಸುವವರಾಗಿಯೂ ಇರಿ. ಮೂಗಿನಂತೆ ನಮ್ಮ ಶರೀರದ ರಕ್ಷಕರಾಗಿಯೂ ಇರಿ. ನಮ್ಮ ಭಾಗಕ್ಕೆ ಶ್ರೋತ್ರಗಳಂತೆ ಶ್ರೇಷ್ಠವಾದ ಸ್ತುತ್ಯಾದಿಗಳನ್ನು ಕೇಳುವವರಾಗಿರಿ.

English Translation.

Like two lips uttering sweet words; like two breasts yielding nourishment for our existence; be to us like two noses, preserving our persons, and like two ears for the hearing of agreeable (sounds).

॥ ವಿಶೇಷವಿಷಯಗಳು ॥

**ಆಸ್ನೇ ಓಷ್ಠಾವಿವ ಮಧು ವದಂತಾ**— **ಹೇ ಅಶ್ವಿನೌ ಓಷ್ಠಾವಿವ ಆಸ್ಯಾಯ ಮಧುರರಸವದ್ವಚನಂ ವದಂತೌ** । ಎಲೈ ಅಶ್ವಿನೀದೇವತೆಗಳೇ, ನಮ್ಮ ಮುಖದಲ್ಲಿ (ಬಾಯಿಯಲ್ಲಿ) ಇರುವ ಎರಡು ತುಟಿಗಳು ಪ್ರಿಯವಾದ ಅಥವಾ ಮಧುರರಸದಂತೆ ಹಿತಕರವಾದ ಮಾತುಗಳನ್ನು ಆಡಿದರೆ ನಮಗೆ ಯಾವ ರೀತಿ ಸಂತೋಷವುಂಟಾಗುವುದೋ ಆದರಂತೆ ನೀವು ನಮಗೆ ಹಿತವನ್ನುಂಟುಮಾಡಿ.

**ಸ್ತನಾವಿವ ನಃ ಜೀವಸೇ ಪಿಪ್ಯತಂ** — ನಾವು ಶಿಶುಗಳಾಗಿದ್ದಾಗ ಮಾತೆಯ ಸ್ತನಗಳು ನಮಗೆ ಹಾಲನ್ನು ಕೊಟ್ಟು ಹೇಗೆ ವೃದ್ಧಿಯಾಗುವಂತೆ ಮಾಡಿದವೋ ಅದರಂತೆ ನೀವು ನಮಗೆ ಆಹಾರಾದಿಗಳನ್ನು ಕೊಟ್ಟು ನಮ್ಮನ್ನು ಪೋಷಿಸಿರಿ.

**ನಾಸೇವ ನಃ ತನ್ವಃ ರಕ್ಷಿತಾರಾ**— ನಮ್ಮ ನಾಸಿಕವು ದುರ್ಗಂಧ ಪೂರಿತವಾದ ಸ್ಥಳಗಳಿಗೆ ಹೋಗದಂತೆ ಎಚ್ಚರಿಕೆಯಿತ್ತು ಯಾವ ರೀತಿ ರಕ್ಷಿಸುವುದೋ ಆದರಂತೆ ನೀವು ನಮಗೆ ಶತ್ರುಗಳಿಂದ ಯಾವ ಬಾಧೆಯೂ ಉಂಟಾಗದಂತೆಯೂ ಇತರ ವಿಧವಾದ ಅಪಾಯಗಳಿಂದಲೂ ನಮ್ಮನ್ನು ರಕ್ಷಿಸಿರಿ.

**ಕರ್ಣಾವಿವ ಸುಶ್ರುತಾ ಅಸ್ಮೇ ಭೂತಂ**— ಪ್ರಿಯವಚನಗಳನ್ನು ಕೇಳಿದರೆ ನಮ್ಮ ಕರ್ಣಗಳಿಗೆ ಯಾವ ರೀತಿ ಸಂತೋಷವುಂಟಾಗುವದೋ ಅದರಂತೆ ನಾವು ಪಠಿಸುವ ಶ್ರೇಷ್ಠವಾದ ಸ್ತುತಿಗಳನ್ನು ಕೇಳಿ ಆನಂದವನ್ನನುಭವಿಸಿ.

**ಅಸ್ಮೇ**— ಈ ಶಬ್ದವು ಏಳು ವಿಭಕ್ತಿಗಳ ಅರ್ಥದಲ್ಲಿಯೂ ಉಪಯೋಗಿಸಲ್ಪಡುವುದು. ಉದಾಹರಣೆ—

**(೧) ಅಸ್ಮೇ ತೇ ಬಂಧುಃ । ವಯಮಿತ್ಯರ್ಥಃ ॥**

**ಅಸ್ಮೇ ಇತ್ಯೇತತ್ಪದಂ ಸರ್ವವಿಭಕ್ತ್ಯಂತಂ । ತಸ್ಮಾದನೇಕಾರ್ಥಂ । ಏಕಮೇವ ಹ್ಯೇತಚ್ಛಬ್ದರೂಪಂ ಸಪ್ತಸ್ವಪಿ ವಿಭಕ್ತ್ಯರ್ಥೇಷು ವರ್ತತೇ । ಪ್ರಕರಣಾದಿವಶಾತ್ ತಸ್ಯ ನಿಯಮೋ ಭವತಿ । ತದ್ಯಥಾ— ಪ್ರಥಮಾಯಾಸ್ತಾವತ್— ಅಸ್ಮೇ ತೇ ಬಂಧುಃ । ವಯಮಿತ್ಯರ್ಥಃ ॥** ಎಂದರೆ ಅಸ್ಮೇ ಎಂಬ ಶಬ್ದವು ಏಳು ವಿಭಕ್ತಿಗಳ ಅರ್ಥದಲ್ಲಿಯೂ ಸಂದರ್ಭಾನುಸಾರವಾಗಿ ಉಪಯೋಗಿಸಲ್ಪಡುವುದು. ಅಂದರೆ ಆಯಾ ಪ್ರಕರಣಾನುಸಾರವಾಗಿ ಈ ಶಬ್ದಕ್ಕೆ ಏಳು ವಿಭಕ್ತಿಗಳಲ್ಲಿ ಯಾವ ವಿಭಕ್ತಿಯ ಅರ್ಥವನ್ನಾದರೂ ಹೇಳಬಹುದು ಹೇಗೆಂದರೆ— **ಅಸ್ಮೇ**

**ತೇ ಬಂಧುಃ** ಎಂಬ ವಾಕ್ಯದಲ್ಲಿ **ಆಸ್ಮೇ** ಎಂಬ ಶಬ್ದಕ್ಕೆ **ವಯಂ**—ನಾವು ಎಂದರ್ಥವಿರುವುದು. ಇದು ಪ್ರಥಮಾ ವಿಭಕ್ತಿಯ ಅರ್ಥಕ್ಕೆ ಉದಾಹರಣೆಯು.

**(೨) ಆಸ್ಮೇ ಯಾತಂ ನಾಸತ್ಯಾ ಸಜೋಷಾಃ । ಅಸ್ಮಾನಿತ್ಯರ್ಥಃ ॥**

**ದ್ವಿತೀಯಾಯಾಸ್ತಾವತ್**—ಅಸ್ಮೇ ಎಂಬ ಶಬ್ದಕ್ಕೆ ದ್ವಿತೀಯಾ ವಿಭಕ್ತಿಯಾದ ಅಸ್ಮಾನ್–ನಮ್ಮನ್ನು ಎಂದು ಅರ್ಥವು ಈ ಅರ್ಥದ ಉದಾಹರಣೆಗಾಗಿ—

**ಆ ಶ್ಯೇನಸ್ಯ ಜವಸಾ ನೂತನೇನಾಸ್ಮೇ ಯಾತಂ ನಾಸತ್ಯಾ ಸಜೋಷಾಃ ।**
**ಹವೇ ಹಿ ವಾಮಶ್ವಿನಾ ರಾತಹವ್ಯಃ ಶಶ್ವತ್ತಮಾಯಾ ಉಷಸೋ ವ್ಯುಷ್ಟೌ ॥**

(ಋ. ಸಂ. ೧-೧೧೮-೧೧)

ಎಂಬ ಋಕ್ಕನ್ನು ಕೊಟ್ಟಿರುವರು. ಈ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮಾನ್–ನಮ್ಮನ್ನು ಎಂದರ್ಥವು.

**(೩) ಅಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ । ಅಸ್ಮಾಭಿರಿತ್ಯರ್ಥಃ ।**

**ತೃತೀಯಾಯಾಸ್ತಾವತ್**—ಇಲ್ಲಿ ಅಸ್ಮೇ ಎಂದರೆ ಅಸ್ಮಾಭಿಃ–ನಮ್ಮಿಂದ ಎಂದು ತೃತೀಯಾ ವಿಭಕ್ತ್ಯರ್ಥವು ಈ ವಿಷಯದಲ್ಲಿ—

**ಭೂರಿ ಚಕರ್ಥ ಯುಜ್ಯೇಭಿರಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ ।**
**ಭೂರೀಣಿ ಹಿ ಕೃಣವಾಮಾ ಶವಿಷ್ಠೇಂದ್ರ ಕ್ರತ್ವಾ ಮರುತೋ ಯದ್ವಶಾಮ ॥**

(ಋ. ಸಂ ೧-೧೬೫-೭)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು ಇಲ್ಲಿ ಅಸ್ಮೇ ಎಂದರೆ ಅಸ್ಮಾಭಿಃ–ನಮ್ಮಿಂದ ಎಂದರ್ಥವು.

**(೪) ಅಸ್ಮೇ ಪ್ರಯಂಧಿ ಮಘವನ್ನೃಜೀಷಿನ್ । ಅಸ್ಮಭ್ಯಮಿತ್ಯರ್ಥಃ ॥**

**ಚತುರ್ಥ್ಯಾಸ್ತಾವತ್**–ಇಲ್ಲಿ ಅಸ್ಮೇ ಎಂದರೆ ಅಸ್ಮಭ್ಯಂ–ನಮಗಾಗಿ ಎಂದು ಚತುರ್ಥೀ ವಿಭಕ್ತ್ಯರ್ಥವು ಉದಾಹರಣೆ—

**ಅಸ್ಮೇ ಪ್ರಯಂಧಿ ಮಘವನ್ನೃಜೀಷಿನ್ನಿಂದ್ರ ರಾಯೋ ವಿಶ್ವವಾರಸ್ಯ ಭೂರೇಃ ।**
**ಅಸ್ಮೇ ಶತಂ ಶರದೋ ಜೀವಸೇ ಧಾ ಅಸ್ಮೇ ವೀರಾಞ್ಛಶ್ವತ ಇಂದ್ರ ಶಿಪ್ರಿನ್ ॥**

(ಋ. ಸಂ. ೩-೩೬-೧೦)

ಎಂಬ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಗಳಿಗೆ ಅಸ್ಮಭ್ಯಂ–ನಮಗಾಗಿ ಎಂದು ಚತುರ್ಥೀ ವಿಭಕ್ತ್ಯರ್ಥವು.

**(೫) ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು । ಅಸ್ಮದಿತ್ಯರ್ಥಃ ।**

**ಪಂಚಮ್ಯಾಸ್ತಾವತ್** ಇಲ್ಲಿ ಅಸ್ಮೇ ಎಂದರೆ ಅಸ್ಮತ್–ನಮ್ಮ ಬಳಿಯಿಂದ ಎಂದರ್ಥವು. ಉದಾಹರಣೆ—

**ತಸ್ಯ ವಯಂ ಸುಮತೌ ಯಜ್ಞಿಯಸ್ಯಾಪಿ ಭದ್ರೇ ಸೌಮನಸೇ ಸ್ಯಾಮ ।**
**ಸ ಸುತ್ರಾಮಾ ಸ್ವವಾँ ಇಂದ್ರೋ ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು ॥**

(ಋ. ಸಂ. ೬-೪೭-೧೩)

ಎಂಬ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮತ್-ನಮ್ಮ ದೆಸೆಯಿಂದ ಎಂದು ಪಂಚಮೀ ವಿಭಕ್ತ್ಯರ್ಥವು.

(೬) ಊರ್ವ ಇವ ಪಪ್ರಥೇ ಕಾಮೋ ಅಸ್ಮೇ । ಅಸ್ಮಾಕಮಿತ್ಯರ್ಥಃ ।

**ಷಷ್ಠ್ಯಾಸ್ಸ್ಥಾವತ್**—ಇಲ್ಲಿ ಅಸ್ಮೇ ಎಂದರೆ ಅಸ್ಮಾಕಂ-ನಮಗೆ ಎಂದರ್ಥವು. ಈ ಅರ್ಥವಿವರಣೆಗಾಗಿ—

**ಆ ನೋ ಭರ ಭಗಮಿಂದ್ರ ದ್ಯುಮಂತಂ ನಿ ತೇ ದೇಷ್ಣಸ್ಯ ಧೀಮಹಿ ಪ್ರರೇಕೇ ।**
**ಊರ್ವ ಇವ ಪಪ್ರಥೇ ಕಾಮೋ ಅಸ್ಮೇ ತಮಾ ಪೃಣ ವಸುಪತೇ ವಸೂನಾಂ ॥**

(ಋ. ಸಂ. ೩-೩೦-೧೯)

ಎಂಬ ಋಕ್ಕನ್ನುದಹರಿಸಿರುವರು. ಈ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮಾಕಂ-ನಮ್ಮ, ನಮಗೆ ಎಂದು ಷಷ್ಠೀ ವಿಭಕ್ತ್ಯರ್ಥವು.

(೭) **ಅಸ್ಮೇ ಧತ್ತ ವಸವೋ ವಸೂನಿ । ಅಸ್ಮಾಸ್ವಿತ್ಯರ್ಥಃ ॥**

**ಸಪ್ತಮ್ಯಾಸ್ಸ್ಥಾವತ್**—ಇಲ್ಲಿ ಅಸ್ಮೇ ಎಂದರೆ ನಮ್ಮಲ್ಲಿ ಎಂದರ್ಥವು. ಉದಾಹರಣೆಗೆ—

**ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।**
**ಅಸ್ಮೇ ಧೇಹಿ ಜಾತವೇದೋ ಮಹಿ ಶ್ರವಃ ॥**

(ಋ. ಸಂ. ೧-೭೯-೪)

ಈ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮಾಸು ನಮ್ಮಲ್ಲಿ ಎಂದು ಸಪ್ತಮೀ ವಿಭಕ್ತ್ಯರ್ಥವು.



॥ ಸಂಹಿತಾಪಾಠಃ ॥

## ಹಸ್ತೇವ ಶಕ್ತಿಮಭಿ ಸಂದದೀ ನಃ ಕ್ಷಾಮೇವ ನಃ ಸಮಜತಂ ರಜಾಂಸಿ ।
## ಇಮಾ ಗಿರೋ ಅಶ್ವಿನಾ ಯುಷ್ಮಯಂತೀಃ ಕ್ಷ್ಣೋತ್ರೇಣೇವ ಸ್ವಧಿತಿಂ ಸಂ ಶಿಶೀತಂ॥

॥ ಪದಪಾಠಃ ॥

ಹಸ್ತಾ॑ಽಇವ । ಶಕ್ತಿಂ । ಅಭಿ । ಸಂದದೀ ಇತಿ ಸಂಽದದೀ । ನಃ । ಕ್ಷಾಮ॑ಽಇವ । ನಃ । ಸಂ । ಆಜತಂ । ರಜಾಂಸಿ ।

ಇಮಾಃ । ಗಿರಃ । ಅಶ್ವಿನಾ । ಯುಷ್ಮಽಯಂತೀಃ । ಕ್ಷ್ಣೋತ್ರೇಣಽಇವ । ಸ್ವಽಧಿತಿಂ । ಸಂ । ಶಿಶೀತಂ ॥೭॥

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ಹಸ್ತೇವ ಹಸ್ತಾವಿವ ಶಕ್ತಿಂ ಸಾಮರ್ಥ್ಯಂ ನೋಽಸ್ಮಾಕಮಭಿಸಂದದೀ ಅಭಿಮುಖ್ಯೇನ ಸಮ್ಯಕ್ ಪ್ರಯಚ್ಛಂತೌ ಭವತಂ । ಕಿಂಚ ಕ್ಷಾಮೇವ ರೋದಸೀ ಇವ ರಜಾಂಸಿ ಸ್ಥಾನಾನ್ಯುದಕಾನಿ ವಾ ॥ ಉದಕಂ ರಜ ಉಚ್ಯತ ಇತಿ ಯಾಸ್ಕಃ ॥ ನೋಽಸ್ಮಾಕಂ ಸಮಜತಂ । ಪ್ರೇರಯತಂ । ಅಪಿಚ ಅಶ್ವಿನಾ ಹೇ ಅಶ್ವಿನೌ ಇಮಾ ಗಿರೋಽಸ್ಮಾಭಿಃ ಕೃತಾಃ ಸ್ತುತೀರ್ಯುಷ್ಮಯಂತೀರ್ಯುವಾಮಿಚ್ಛಂತೀಃ ಸ್ವಧಿತಿಮಸಿಂ ಕ್ಷ್ಣೋತ್ರೇಣೇವ ತೇಜನಶಾಣವತ್ ಸಂಶಿಶೀತಂ । ಸಮ್ಯಕ್ ತೀಕ್ಷ್ಣೀಕುರುತಂ ॥**

॥ ಪ್ರತಿಪದಾರ್ಥ

**ಅಶ್ವಿನೌ**—ಎಲೈ ಅಶ್ವಿನೀ ದೇವತೆಗಳೇ । **ಹಸ್ತೇವ**—ಎರಡು ಕೈಗಳಂತೆ । **ಶಕ್ತಿಂ**—ಸಾಮರ್ಥ್ಯವನ್ನು । **ನಃ**—ನಮಗೆ । **ಅಭಿ ಸಂದದೀ**—ಕೊಡುವವರಾಗಿರಿ । **ಕ್ಷಾಮೇವ**—ದ್ಯಾವಾಪೃಥಿವಿಗಳಂತೆ । **ರಜಾಂಸಿ**—ಉದಕಗಳನ್ನು (ಅಥವಾ ಸ್ಥಾನಗಳನ್ನು) । **ನಃ**—ನಮಗೆ । **ಸಮಜತಂ**—ಪ್ರೇರಿಸಿರಿ । **ಸ್ವಧಿತಿಂ**—ಕತ್ತಿಯನ್ನು । **ಕ್ಷ್ಣೋತ್ರೇಣೇವ**—ಸಾಣೆಯಕಲ್ಲಿನ ಮೇಲೆ ಉಜ್ಜಿ ತೀಕ್ಷ್ಣವಾಗಿ ಮಾಡುವಂತೆ । **ಇಮಾ ಗಿರಃ**—ನಮ್ಮ ಸ್ತುತಿವಾಕ್ಯಗಳನ್ನು । **ಯುಷ್ಮಯಂತೀಃ**—ನಿಮ್ಮನ್ನು ಸಮೀಪಿಸಿ ನಿಮಗೆ ತೃಪ್ತಿಪಡಿಸುವಂತೆ । **ಸಂ ಶಿಶೀತಂ**—ತೀಕ್ಷ್ಣವಾಗಿ ಮಾಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಎರಡು ಹಸ್ತಗಳಂತೆ ನಮಗೆ ಸಾಮರ್ಥ್ಯವನ್ನು ಒದಗಿಸಿಕೊಡುವವರಾಗಿರಿ. ದ್ಯಾವಾಪೃಥಿವಿಗಳಂತೆ ನಮಗೆ ಉದಕಗಳನ್ನು ಪ್ರೇರಿಸಿ, (ಕೊಡಿ) ಕತ್ತಿಯನ್ನು ಸಾಣೆಯಕಲ್ಲಿನ ಮೇಲೆ ಉಜ್ಜಿ ತೀಕ್ಷ್ಣವಾಗಿ ಮಾಡುವಂತೆ ಈ ನಮ್ಮ ಸ್ತುತಿವಾಕ್ಯಗಳನ್ನು ಅವು ನಿಮ್ಮನ್ನು ಸಮೀಪಿಸಿ ನಿಮಗೆ ತೃಪ್ತಿಯನ್ನು ಕೊಡುವಷ್ಟು ತೀಕ್ಷ್ಣವಾಗಿ ಮಾಡಿರಿ.

English Translation.

Like two hands, Ashwins, be ever investing us with vigour; like heaven and earth, bestow upon us rain: give sharpness to the praises that are addressed to you, as they whet an axe upon a grindstone.

॥ ವಿಶೇಷವಿಷಯಗಳು ॥

**ಕ್ಷಾಮಾ—ರೋದಸೀ ಇವ ।** **ಕ್ಷ್ಮಾ** ಅಥವಾ **ಕ್ಷಾಮಾ** ಎಂಬ ಶಬ್ದವು ಪೃಥಿವೀನಾಮಗಳಲ್ಲಿ ಉಕ್ತವಾಗಿದ್ದರೂ ಇದು ದ್ವಿವಚನಾಂತಶಬ್ದವಾಗಿ ದ್ಯಾವಾಪೃಥಿವಿಗಳನ್ನು ಸೂಚಿಸುವುದಕ್ಕೆ ಉಪಯೋಗಿಸಲ್ಪಡುವುದು. ಈ ಸೂಕ್ತದಲ್ಲಿ ಅಶ್ವಿನೀದೇವತೆಗಳನ್ನು ವರ್ಣಿಸುವ ವಿಶೇಷಣಪದಗಳೆಲ್ಲವೂ ದ್ವಿವಚನಾಂತವಾಗಿಯೇ ಇರುವುದರಿಂದ **ಕ್ಷಾಮಾ** ಎಂಬ ಶಬ್ದವನ್ನೂ ಸಹ ದ್ವಿವಚನಾಂತಶಬ್ದವೆಂತಲೇ ಪರಿಗಣಿಸಿ ಇದಕ್ಕೆ **ರೋದಸೀ** ಅಥವಾ **ದ್ಯಾವಾಪೃಥಿವೀ** ಎಂಬರ್ಥವನ್ನು ಹೇಳಬೇಕು.

**ರಜಾಂಸಿ—ರಜೋ ರಜತೇರ್ಜ್ಯೋತೀ ರಜ ಉಚ್ಯತೇ। ಉದಕಂ ರಜ ಉಚ್ಯತೇ। ಲೋಕಾ ರಜಾಂಸ್ಯುಚ್ಯಂತೇ** (ನಿ. ೪-೧೯) ಎಂದು ಯಾಸ್ಕರು ನಿರ್ವಚನವನ್ನು ಹೇಳಿರುವುದರಿಂದ ಪ್ರಕೃತಸಂದರ್ಭದಲ್ಲಿ ಉದಕ ಅಥವಾ ಲೋಕಗಳು ಎಂಬ ಎರಡು ಅರ್ಥಗಳನ್ನೂ ಹೇಳಬಹುದು.

**ಕ್ಷ್ಣೋತ್ರೇಣೇವ—ತೇಜನಶಾಣವತ್** । ಕತ್ತಿ, ಚಾಕು ಮೊದಲಾದ ಆಯುಧಗಳನ್ನು ಉಜ್ಜಿ ಹರಿತ ಮಾಡುವುದಕ್ಕೆ ಉಪಯೋಗಿಸುವ ಸಾಣೆಕಲ್ಲು ಅಥವಾ ಇತರವಿಧವಾದ ಕಲ್ಲು ಎಂದರ್ಥವು.

**ಸ್ವಧಿತಿಂ**—ಸ್ವಧಿತಿಶಬ್ದವು ವಜ್ರನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೧) ಹರಿತವಾದ ಕತ್ತಿ ಮೊದಲಾದ ಆಯುಧಗಳಿಗೂ ಸ್ವಧಿತಿ ಎಂದು ಹೇಳುವುದು ರೂಢಿಯಿದೆ—**ಓಷಧೇ ತ್ರಾಯಸ್ವೈನಂ ಸ್ವಧಿತೇ ಮೈನಗ್ಂ ಹಿಗ್ಂಸೀಃ** ಎಂದು ಶ್ರುತಿವಾಕ್ಯದಲ್ಲಿಯೂ, ಸ್ವಧಿತಿಶಬ್ದವು ಕತ್ತಿ (ಕ್ಷೌರದ ಕತ್ತಿ) ಎಂಬರ್ಥದಲ್ಲಿ ಪ್ರಯುಕ್ತವಾಗಿದೆ.

**ಶಿಶೀತಂ—ಸಮ್ಯಕ್ ತೀಕ್ಷ್ಣೀಕುರುತಂ** । ಚೆನ್ನಾಗಿ ಹರಿತವುಳ್ಳದ್ದನ್ನಾಗಿ ಮಾಡಿರಿ. ಯಾಸ್ಕರು **ಶಿಶೀತೇ** ಎಂಬ ಪದಕ್ಕೆ—

> **ಶಿಶೀತೇ । ಶಿಶೀತೇ ಶೃಂಗೇ ರಕ್ಷಸೇ ವಿನಿಕ್ಷೇ । ನಿಶ್ಯತಿ ಶೃಂಗೇ ರಕ್ಷಸೋ ವಿನಿಕ್ಷಣಾಯ । ರಕ್ಷೋ ರಕ್ಷಿತವ್ಯಮಸ್ಮಾತ್ । ರಹಸಿ ಕ್ಷಣೋತೀತಿ ವಾ । ರಾತ್ರೌ ನಕ್ಷತ ಇತಿ ವಾ ॥**
>
> (ನಿ. ೪-೧೮)

ಎಂದು ನಿರ್ವಚನವನ್ನು ಹೇಳಿದಾರೆ. ಶಿಶೀತೇ ಶೃಂಗೇ ರಕ್ಷಸೇ ವಿನಿಕ್ಷೇ ಎಂಬ ಮಂತ್ರವನ್ನುದಾಹರಿಸಿ ವೃಷಭವು (ಅಥವಾ ಮೃಗವು) ಶತ್ರುಗಳನ್ನು ಕೊಲ್ಲುವುದಕ್ಕಾಗಿ ಅಥವಾ ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿ ತನ್ನ ಕೊಂಬನ್ನು ಉಜ್ಜಿ ತೀಕ್ಷ್ಣವನ್ನಾಗಿ (ಹರಿತವುಳ್ಳದ್ದನ್ನಾಗಿ) ಮಾಡುವುದು ಎಂದು ಶಿಶೀತೇ ಎಂಬ ಶಬ್ದಕ್ಕೆ ಅರ್ಥವನ್ನು ವಿವರಿಸಿದಾರೆ.

**ಅಶ್ವಿನಾ ಹಸ್ತೇವ ಶಕ್ತಿಂ ನಃ ಅಭಿ ಸಂದದೀ—ಹೇ ಅಶ್ವಿನೌ ಹಸ್ತಾವಿವ ಸಾಮರ್ಥ್ಯಂ ಅಸ್ಮಾಕಮಾಭಿಮುಖ್ಯೇನ ಪ್ರಯಚ್ಛಂತೌ ಭವತಂ** । ಯಾವ ಕೆಲಸವನ್ನು ಮಾಡಬೇಕಾದರೂ ಹಸ್ತಗಳ (ಕೈಗಳ) ಸಹಾಯವಿಲ್ಲದೆ ಆಗುವುದಿಲ್ಲ. ಆದುದರಿಂದ ಹಸ್ತಗಳಲ್ಲಿ ಕೆಲಸಮಾಡುವ ಶಕ್ತಿ ಇರುವುದೆಂದು ಪ್ರಸಿದ್ಧವಾಗಿದೆ. ಆದುದರಿಂದ ಎಲೈ ಅಶ್ವಿನೀದೇವತೆಗಳೇ, ನಮ್ಮ ಹಸ್ತಗಳು ನಮಗೆ ಸಮಸ್ತ ಕಾರ್ಯಗಳಲ್ಲಿಯೂ ಶಕ್ತಿಯನ್ನು ಕೊಟ್ಟು ಕೆಲಸವನ್ನು ನೆರವೇರಿಸುವಂತೆ ನೀವಿಬ್ಬರೂ ಎರಡು ಹಸ್ತಗಳಂತೆ ನಮಗೆ ಸಕಲ ವಿಷಯಗಳಲ್ಲಿಯೂ ಶಕ್ತಿಸಾಮರ್ಥ್ಯಗಳನ್ನು ಉಂಟುಮಾಡಿ ಎಂದಭಿಪ್ರಾಯವು.

**ಕ್ಷಾಮೇವ ರಜಾಂಸಿ ನಃ ಸಮಜತಂ—ರೋದಸೀ ಇವ ನಃ ಸ್ಥಾನಾನ್ಯುದಕಾನಿ ವಾ ಪ್ರಯಚ್ಛತಂ** । ದ್ಯಾವಾಪೃಥಿವಿಗಳು ನಮಗೆ ವಾಸಮಾಡಲು ವಾಸಸ್ಥಾನಗಳನ್ನು ಕಲ್ಪಿಸಿಕೊಟ್ಟು ಜೀವನಾಧಾರವಾದ ವೃಷ್ಟ್ಯುದಕಗಳನ್ನೂ ಕೊಟ್ಟು ಕಾಪಾಡುವಂತೆ ನೀವೂ ನಮಗೆ ವಾಸಸ್ಥಾನಗಳನ್ನೂ, ವೃಷ್ಟಿಯನ್ನೂ ಒದಗಿಸಿಕೊಟ್ಟು ಕಾಪಾಡಿರಿ.

**ಸ್ವಧಿತಿಂ ಕ್ಷ್ಣೋತ್ರೇಣೇವ ಇಮಾ ಗಿರಃ ಯುಷ್ಮಯಂತೀಃ ಸಂ ಶಿಶೀತಂ—ಅಪಿ ಚ ಹೇ ಅಶ್ವಿನೌ ಅಸ್ಮಾಭಿಃ ಕೃತಾಃ ಸ್ತುತೀಃ ಯುವಾಮಿಚ್ಛಂತೀಃ ಅಸಿಂ ತೇಜನಶಾಣವತ್ ಸಮುಕ್ತೀಕ್ಷ್ಣೀ-**

**ಕುರುತಂ** । ಮತ್ತು ಎಲೈ ಅಶ್ವಿನೀದೇವತೆಗಳೇ, ಕತ್ತಿಯನ್ನು ಸಾಣೆಯಕಲ್ಲಿನ ಮೇಲೆ ಉಜ್ಜಿ ಹರಿತವಾಗಿ ಮಾಡುವಂತೆ ನಿಮ್ಮ ವಿಷಯದಲ್ಲಿ ನಾವು ಮಾಡುವ ಸ್ತುತಿವಾಕ್ಯಗಳನ್ನು ತೀಕ್ಷ್ಣವನ್ನಾಗಿ ಮಾಡಿರಿ ಎಂದರೆ ನಮ್ಮ ಸ್ತುತಿವಾಕ್ಯಗಳನ್ನು ಆದರದಿಂದ ಕೇಳಿರಿ ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಏತಾನಿ ವಾಮಶ್ವಿನಾ ವರ್ಧನಾನಿ ಬ್ರಹ್ಮ ಸ್ತೋಮಂ ಗೃತ್ಸಮದಾಸೋ ಅಕ್ರನ್ ।
ತಾನಿ ನರಾ ಜುಜುಷಾಣೋಪ ಯಾತಂ ಬೃಹದ್ವದೇಮ ವಿದಥೇ ಸುವೀರಾಃ ॥ ೮ ॥

॥ ಪದಪಾಠಃ ॥

ಏತಾನಿ । ವಾಂ । ಅಶ್ವಿನಾ । ವರ್ಧನಾನಿ । ಬ್ರಹ್ಮ । ಸ್ತೋಮಂ । ಗೃತ್ಸ॑ಽಮದಾಸಃ । ಅಕ್ರನ್ ।
ತಾನಿ । ನರಾ । ಜುಜುಷಾಣಾ । ಉಪ । ಯಾತಂ । ಬೃಹತ್ । ವದೇಮ । ವಿದಥೇ । ಸುಽವೀರಾಃ ॥ ೮ ॥

॥ ಸಾಯಣಭಾಷ್ಯಂ ॥

ಅಶ್ವಿನಾ ಹೇ ಅಶ್ವಿನೌ ವಾಂ ಯುವಯೋರೇತಾನಿ ವರ್ಧನಾನಿ ವೃದ್ಧಿಸಾಧನಾನಿ ಬ್ರಹ್ಮ ಬ್ರಹ್ಮಾಣಿ ಮಂತ್ರಾನ್ ಸ್ತೋಮಂ ಸ್ತೋತ್ರಂ ಚ ಗೃತ್ಸಮದಾಸೋ ಗೃತ್ಸಮದಾ ಅಕ್ರನ್ । ಅಕುರ್ವನ್ । ತಾನಿ ಬ್ರಹ್ಮಾಣಿ ನರಾ ನೇತಾರೌ ಜುಜುಷಾಣಾ ಭೃಶಂ ಪ್ರೀಯಮಾಣೌ ಯುವಾಮುಪಯಾತಂ । ಉಪಗಚ್ಛತಂ । ಕಿಂಚ ಸುವೀರಾಃ ಶೋಭನಪುತ್ರಾ ವಯಂ ವಿದಥೇ ಯಜ್ಞೇ ಯುವಾಂ ಬೃಹದ್ವದೇಮ । ಪ್ರಭೂತಂ ಸ್ತುಮಃ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮಿಬ್ಬರ । **ವರ್ಧನಾನಿ**—ವೃದ್ಧಿ (ತೃಪ್ತಿ) ಸಾಧನಗಳಾದ **ಏತಾನಿ ಬ್ರಹ್ಮ**—ಈ ಸ್ತುತಿರೂಪವಾದ ಮಂತ್ರಗಳನ್ನೂ । **ಸ್ತೋಮಂ**—ಸ್ತೋಮರೂಪವಾದ ಸ್ತುತಿಯನ್ನೂ । **ಗೃತ್ಸಮದಾಸಃ**—ಗೃತ್ಸಮದಋಷಿಗಳು । **ಅಕ್ರನ್**—ನಿರ್ಮಿಸಿದ್ದಾರೆ । **ತಾನಿ**—ಆ ಸ್ತುತಿಗಳನ್ನು । **ನರಾ**—ನೇತೃಗಳಾದ ನೀವು । **ಜುಜುಷಾಣಾ** — ಆದರದಿಂದ ಸೇವಿಸುತ್ತಾ । **ಉಪಯಾತಂ** — ನಮ್ಮಲ್ಲಿಗೆ ಬನ್ನಿರಿ । **ಸುವೀರಾಃ** — ಶ್ರೇಷ್ಠವಾದ ವೀರಪುತ್ರರಿಂದೊಡಗೂಡಿದ ನಾವು । **ವಿದಥೇ** — ಯಜ್ಞಗೃಹದಲ್ಲಿ । **ಬೃಹತ್**—ಪ್ರಭೂತವಾದ ಸ್ತೋತ್ರವನ್ನು । **ವದೇಮ**—ಪಠಿಸುತ್ತೇವೆ.

॥ ಭಾವಾರ್ಥ ॥

ಎಲೈ ಅಶ್ವಿನಿದೇವತೆಗಳೇ, ನಿಮ್ಮಿಬ್ಬರಿಗೂ ತೃಪ್ತಿಸಾಧನಗಳಾದ ಈ ಸ್ತುತಿರೂಪವಾದ ಮಂತ್ರಗಳನ್ನೂ, ಸ್ತೋಮರೂಪವಾದ ಸ್ತುತಿಯನ್ನೂ ಗೃತ್ಸಮದ ಋಷಿಗಳು ನಿರ್ಮಿಸಿದ್ದಾರೆ ನೇತೃಗಳಾದ ನೀವು ಆ ಸ್ತುತಿಗಳನ್ನು ಆದರದಿಂದ ಸೇವಿಸುತ್ತಾ ನಮ್ಮಲ್ಲಿಗೆ ಬನ್ನಿರಿ. ಶ್ರೇಷ್ಠವಾದ ವೀರಪುತ್ರರಿಂದೊಡಗೂಡಿದ ನಾವು ಯಜ್ಞಗೃಹದಲ್ಲಿ ಪ್ರಭೂತವಾದ ಸ್ತೋತ್ರವನ್ನು ಪಠಿಸುತ್ತೇವೆ.

English Translation.

The Gritsmadas have composed this prayer, these praises, Ashwins, for your exaltation : be propitiated by them leaders of ceremonies, and come hither ; that, blessed with excellent descendants, we may worthily glorify you at this sacrifice.

॥ ವಿಶೇಷವಿಷಯಗಳು ॥

**ವರ್ಧನಾನಿ—ವೃದ್ಧಿಸಾಧನಾನಿ ।** ಮಂತ್ರಗಳಿಂದ ದೇವತೆಗಳ ಗುಣಗಾನಮಾಡಿದರೆ ಅವರ ಶಕ್ತಿಸಾಮರ್ಥ್ಯಗಳು ವೃದ್ಧಿಯಾಗುವುದೆಂದು ಹೇಳುವ ರೂಢಿ ಇದೆ. ಆದುದರಿಂದ ಇಲ್ಲಿ **ಬ್ರಹ್ಮ, ಸ್ತೋಮಂ** ಎಂಬ ಸ್ತೋತ್ರಗಳ ವಿಷಯದಲ್ಲಿ ಅವು ವೃದ್ಧಿಸಾಧನವೆಂದು ಹೇಳಲಾಗಿದೆ. ಈ ವಿಷಯದಲ್ಲಿ—**ಇಮಾ ವರ್ಧಂತು ವಾಂ ಗಿರಃ । ವರ್ಧಂತು ತ್ವಾ ಸುಷ್ಟುತಯಃ । ಗೀರ್ಭಿರ್ವರ್ಧಯೋನೋ ವಚೋಭಿಃ ।** ಇತ್ಯಾದ್ಯನೇಕ ಶ್ರುತಿವಾಕ್ಯಗಳನ್ನು ಉದಾಹರಿಸಬಹುದು.

**ಬ್ರಹ್ಮ—ಬ್ರಹ್ಮಾಣಿ ಸ್ತೋತ್ರಾಣಿ ।** ಬ್ರಹ್ಮಶಬ್ದವು ಅನ್ನನಾಮಗಳಲ್ಲಿಯೂ ಸ್ತೋತ್ರನಾಮಗಳಲ್ಲಿಯೂ ಪಠಿತವಾಗಿದೆ. ಇಲ್ಲಿ ಸ್ತೋತ್ರವೆಂಬರ್ಥದಲ್ಲಿ ಪ್ರಯುಕ್ತವಾಗಿದೆ. ಈ ಋಕ್ಕಿನಲ್ಲಿ ಸ್ತೋತ್ರವೆಂಬ ಅರ್ಥವನ್ನು ಸೂಚಿಸುವ ಬ್ರಹ್ಮಶಬ್ದವೂ ಇರುವುದರಿಂದ ಇವುಗಳಿಗೆ ಅರ್ಥದಲ್ಲಿಯೂ, ವಿವರಣೆಯಲ್ಲಿಯೂ ವ್ಯತ್ಯಾಸವಿರುವುದು. ಸ್ತೋಮವೆಂದರೇನು, ಅದರ ಸ್ವರೂಪವೇನು, ಅವುಗಳ ಭೇದಪ್ರಭೇದಗಳು ಮುಂತಾದ ವಿಷಯಗಳನ್ನು ನಾವು ಋ. ಸಂ. ಭಾಗ—೨ ಪುಟ 137-150 ಗಳಲ್ಲಿ ವಿಸ್ತಾರವಾಗಿ ವಿವರಿಸಿದೇವೆ.

**ಗೃತ್ಸಮದಾಸಃ**— ಇಲ್ಲಿ ಗೃತ್ಸಮದ ಶಬ್ದದ ಬಹುವಚನ ಪ್ರಯೋಗವಿರುವುದರಿಂದ ಈ ಶಬ್ದಕ್ಕೆ ಗೃತ್ಸಮದ ಋಷಿಯೂ ಅವನ ವಂಶಸ್ಥರೂ, ಇತರ ಸಂಬಂಧಿಗಳೂ ಮುಂತಾದವರನ್ನು ನಿರ್ದೇಶಿಸಿ ಬಹುವಚನಪ್ರಯೋಗ ಮಾಡಿರುವುದೆಂದು ತಿಳಿಯಬೇಕು.

**ಜುಜುಷಾಣಾ—ಭೃಶಂ ಪ್ರೀಯಮಾಣೌ । ಜುಷೀ ಪ್ರೀತಿಸೇವನಯೋಃ ।** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಅತ್ಯಂತ ಪ್ರೀತರಾಗಿ ಎಂದರ್ಥವು. ಎಲೈ ಅಶ್ವಿನೀದೇವತೆಗಳೇ, ಗೃತ್ಸಮದಋಷಿಯ ವಂಶಸ್ಥರಾದ ನಮ್ಮಿಂದ ರಚಿತವಾದ ಈ ಸ್ತೋತ್ರಗಳು ನಿಮ್ಮ ಶಕ್ತಿಯನ್ನು ವೃದ್ಧಿಗೊಳಿಸಿ ನಿಮಗೆ ಸಂತೋಷವನ್ನುಂಟುಮಾಡಲಿ. ನಮ್ಮ ಸ್ತೋತ್ರಗಳಿಂದ ನೀವು ನಮ್ಮ ವಿಷಯದಲ್ಲಿ ಅತ್ಯಂತ ಪ್ರೀತರಾಗಿ ನಮ್ಮ ಯಜ್ಞಭೂಮಿಗೆ ಬನ್ನಿ. ಈ ಯಜ್ಞದಲ್ಲಿ ಪುತ್ರಪೌತ್ರರಿಂದೊಡಗೂಡಿ ನಾವು ನಿಮ್ಮ ವಿಷಯದಲ್ಲಿ ಪ್ರಭೂತವಾದ ಸೋತ್ರವನ್ನು ಪಠಿಸುತ್ತೇವೆ ಎಂದು ಮುಖ್ಯಾಭಿಪ್ರಾಯವು.

# ನಲವತ್ತನೆಯ ಸೂಕ್ತವು

**ಸೋಮಾಪೂಷಣೇತಿ ಷಡೃಚಮಷ್ಟಮಂ ಸೂಕ್ತಂ ಗಾರ್ತ್ಸಮದಂ ತ್ರೈಷ್ಟುಭಂ ಸೋಮಾಪೂಷದೇವತಾಕಂ । ತಥಾ ಚಾನುಕ್ರಾಂತಂ । ಸೋಮಾಪೂಷಣಾ ಷಟ್ ಸೋಮಾಪೌಷ್ಣಮಂತ್ಯೋಽರ್ಧರ್ಚೋಽಪ್ಯದಿತೇರಿತಿ । ಅವತು ದೇವ್ಯದಿತಿರಿತ್ಯಸ್ಯಾಂತ್ಯಾರ್ಧರ್ಚಸ್ಯಾದಿತಿರ್ದೇವತಾ ॥ ಸೋಮಾಪೌಷ್ಣೇ ಪಶೌ ವಪಾಪುರೋಡಾಶಹವಿಷಾಮಾದ್ಯಾಸ್ತಿಸ್ರಃ ಕ್ರಮೇಣಾನುವಾಕ್ಯಾ ಉತ್ತರಾಸ್ತಿಸ್ರೋ ಯಾಜ್ಯಾಃ । ಅಗ್ನೀಷೋಮಾವಿತಿ ಖಂಡೇ ಸೂತ್ರಿತಂ । ಸೋಮಾಪೂಷಣಾ ಜನನಾ ರಯೀಣಾಂ । ಆ. ೩–೮ । ಇತಿ ॥**

ಅನುವಾದವು—**ಸೋಮಾಪೂಷಣಾ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು; ತ್ರಿಷ್ಟುಪ್ ಛಂದಸ್ಸು; ಸೋಮಾ ಮತ್ತು ಪೂಷನ್ ಎಂಬ ಇಬ್ಬರು ದೇವತೆಗಳು ಈ ಸೂಕ್ತಕ್ಕೆ ದೇವತೆಯು. ಅನುಕ್ರಮಣಿಕೆಯಲ್ಲಿ—**ಸೋಮಾಪೂಷಣಾ ಷಟ್ ಸೋಮಾಪೌಷ್ಣಮಂತ್ಯೋಽರ್ಧರ್ಚೋಽಪ್ಯದಿತೇಃ** ಎಂದು ಹೇಳಿರುವುದು. **ಅವತು ದೇವ್ಯದಿತಿಃ** ಎಂಬ ಈ ಸೂಕ್ತದ ಕೊನೆಯ ಋಕ್ಕಿನ ಉತ್ತರಾರ್ಧಕ್ಕೆ ಅದಿತಿಯು ದೇವತೆಯು. ಸೋಮಾಪೂಷಣರನ್ನು ಉದ್ದೇಶಿಸಿ ಮಾಡುವ ಪಶುಯಾಗದಲ್ಲಿ ವಪಾಪುರೋಡಾಶಹವಿಸ್ಸುಗಳನ್ನು ಹೋಮಮಾಡುವಾಗ ಈ ಸೂಕ್ತದ ಮೊದಲಿನ ಮೂರು ಋಕ್ಕುಗಳು ಅನುವಾಕ್ಯಾಮಂತ್ರಗಳನ್ನಾಗಿಯೂ, ಕೊನೆಯ ಮೂರು ಋಕ್ಕುಗಳನ್ನು ಯಾಜ್ಯಾಮಂತ್ರಗಳನ್ನಾಗಿಯೂ ವಿನಿಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಗ್ನೀಷೋಮೌ** ಎಂಬ ಖಂಡದ **ಸೋಮಾಪೂಷಣಾ ಜನನಾ ರಯೀಣಾಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೩–೮).

## ಸೂಕ್ತ—೪೦

ಮಂಡಲ—೧ ॥ ಅನುವಾಕ—೪ ॥ ಸೂಕ್ತ—೪೦ ॥

ಅಷ್ಟಕ—೧ ॥ ಅಧ್ಯಾಯ—೮ ॥ ವರ್ಗ—೬ ॥

॥ **ಸೂಕ್ತದಲ್ಲಿರುವ ಋಕ್ಸಂಖ್ಯೆ—೬** ॥

॥ ಋಷಿಃ—ಗೃತ್ಸಮದಃ ॥

॥ ದೇವತಾ—೧-೫. ೬ ರಲ್ಲಿ ಪೂರ್ವಾರ್ಧ. ಸೋಮಾಪೂಷಣಾ ।
೬ ರಲ್ಲಿ ಉತ್ತರಾರ್ಧ. ಅದಿತಿಃ ॥

॥ ಛಂದಃ—ತ್ರಿಷ್ಟುಪ್ ॥

## ಪೀಠಿಕೆ.

ಈ ಸೂಕ್ತಕ್ಕೆ ಸೋಮ ಮತ್ತು ಪೂಷನ್ ಎಂಬುವರು ದೇವತೆಗಳು. ಋಗ್ವೇದದಲ್ಲಿ ಇಬ್ಬಿಬ್ಬರು ದೇವತೆಗಳನ್ನು ಒಟ್ಟಾಗಿ ಸೇರಿಸಿ ಆಹ್ವಾನಮಾಡುವುದೂ, ಸ್ತೋತ್ರಮಾಡುವುದೂ ವಿಶೇಷವಾಗಿ ಕಂಡುಬರುವುದು.

ಈ ವಿಧವಾದ ಎರಡು ದೇವತೆಗಳನ್ನು (ದೇವತಾದ್ವಂದ್ವಗಳನ್ನು) ಪ್ರತಿಪಾದಿಸುವ ಮಂತ್ರಗಳಿಗೆ **ಸಂಸ್ತವಿಕ** ಮಂತ್ರವೆಂದು ಹೆಸರು. ಇವುಗಳಲ್ಲಿ ಮುಖ್ಯವಾದ ದೇವತೆಗಳು—ಅಗ್ನಿಃ, ಸೋಮಃ, ವರುಣಃ, ಪೂಷಾ, ಬೃಹಸ್ಪತಿಃ, ಬ್ರಹಣಸ್ಪತಿಃ, ಪರ್ವತಃ, ಕುತ್ಸಃ, ವಿಷ್ಣುಃ, ವಾಯುಃ, ಮಿತ್ರಃ, ರುದ್ರಃ, ವಾತಃ, ಪರ್ಜನ್ಯ ಎಂದು ಹದಿನಾಲ್ಕು ಮಂದಿ ದೇವತೆಗಳಿರುವರು. ಹೇಗೆಂದರೆ—

**ಇಂದ್ರಾಗ್ನೀ**—(ಇಂದ್ರ + ಅಗ್ನಿ)—
**ಇಂದ್ರಾಗ್ನೀ ರೋಚನಾ ದಿವಃ** (ಋ. ಸಂ. ೩-೧೨-೯).

**ಇಂದ್ರಾಸೋಮಾ**—(ಇಂದ್ರ + ಸೋಮ)—
**ಇಂದ್ರಾಸೋಮಾ ಸಮಘಶಂಸಂ** (ಋ. ಸಂ. ೭-೧೦೪-೨).

**ಇಂದ್ರಾವರುಣಾ**—(ಇಂದ್ರ + ವರುಣ)—
**ಇಂದ್ರಾವರುಣಾ ಯುವಮಧ್ವರಾಯ ನಃ** (ಋ. ಸಂ. ೭-೮೨-೧).

**ಇಂದ್ರಾಪೂಷಣಾ** (ಇಂದ್ರ + ಪೂಷಾ)—
**ಇಂದ್ರಾಪೂಷಣಾ ವಯಂ** (ಋ. ಸಂ. ೬-೫೭-೧).

**ಇಂದ್ರಾಬೃಹಸ್ಪತೀ** (ಇಂದ್ರ + ಬೃಹಸ್ಪತಿ)—
**ಇದಂ ವಾಮಾಸ್ಯೇ ಹವಿಃ ಪ್ರಿಯಮಿಂದ್ರಾಬೃಹಸ್ಪತೀ** (ಋ. ಸಂ. ೪-೪೯-೧).

**ಇಂದ್ರಾಬ್ರಹ್ಮಣಸ್ಪತೀ** (ಇಂದ್ರ + ಬ್ರಹ್ಮಣಸ್ಪತಿ)—
**ಅಚ್ಛೇಂದ್ರಾಬಹ್ಮಣಸ್ಪತೀ ಹವಿರ್ನಃ** (ಋ. ಸಂ. ೨-೨೪-೧೨).

**ಇಂದ್ರಾಪರ್ವತಾ** (ಇಂದ್ರ + ಪರ್ವತಾ)—
**ಇಂದ್ರಾಪರ್ವತಾ ಬೃಹತಾ ರಥೇನ** (ಋ. ಸಂ. ೩-೫೩-೧).

**ಇಂದ್ರಾಕುತ್ಸಾ** (ಇಂದ್ರ + ಕುತ್ಸ)—
**ಇಂದ್ರಾಕುತ್ಸಾ ವಹಮಾನಾ ರಥೇನ** (ಋ. ಸಂ. ೫-೩೧-೯).

**ಇಂದ್ರಾವಿಷ್ಣೂ** (ಇಂದ್ರ + ವಿಷ್ಣು)—
**ಇಂದ್ರಾವಿಷ್ಣೂ ದೃಂಹಿತಾಃ ಶಂಬರಸ್ಯ** (ಋ. ಸಂ. ೭-೯೯-೫).

**ಇಂದ್ರವಾಯೂ** (ಇಂದ್ರ + ವಾಯು)—
**ಇಂದ್ರವಾಯೂ ಇಮೇ ಸುತಾಃ** (ಋ. ಸಂ. ೧-೨-೪).

**ಮಿತ್ರಾವರುಣಾ** (ಮಿತ್ರ + ವರುಣ)—
**ಆ ನೋ ಮಿತ್ರಾವರುಣಾ** (ಋ. ಸಂ. ೩-೬೨-೧೬).

**ಸೋಮಾಪೂಷಣಾ** (ಸೋಮ + ಪೂಷಾ)—
**ಸೋಮಾಪೂಷಣಾ ಜನನಾ ರಯೀಣಾಂ** (ಋ. ಸಂ. ೨-೪೦-೧).

**ಸೋಮಾರುದ್ರಾ** (ಸೋಮ + ರುದ್ರ)—

**ಸೋಮಾರುದ್ರಾ ಯುವಮೇತಾನ್ಯಸ್ಮೇ** (ಋ. ಸಂ. ೬–೭೪–೩).

**ವಾತಾಪರ್ಜನ್ಯಾ** (ವಾತ + ಪರ್ಜನ್ಯ)—

**ಧರ್ತಾರೋ ದಿವ ಋಭವಃ ಸುಹಸ್ತಾ ವಾತಾಪರ್ಜನ್ಯಾ ಮಹಿಷಸ್ಯ ತನ್ಯತೋಃ** (ಋ. ಸಂ. ೧೦–೬೬–೧೦).

**ಅಗ್ನೀಷೋಮೌ** (ಅಗ್ನಿ + ಸೋಮ)—

**ಅಗ್ನೀಷೋಮಾವಿಮಂ ಸು ಮೇ** (ಋ. ಸಂ. ೧–೯೩–೧).

**ಅಗ್ನೀಪರ್ಜನ್ಯಾ** (ಅಗ್ನಿ + ಪರ್ಜನ್ಯ)—

**ಅಗ್ನೀಪರ್ಜನ್ಯಾವವತಂ ಧಿಯಂ ಮೇ** (ಯ. ಸಂ. ೬–೫೨–೧೬).

**ಅಗ್ನಾವಿಷ್ಣೂ** (ಅಗ್ನಿ + ವಿಷ್ಣು)—

**ಅಗ್ನಾವಿಷ್ಣೂ ಸಜೋಷಸಾ** (ತೈ. ಸಂ. ೪–೭–೧).

ಇಂತಹ ಸಂಸ್ತವ ಮಂತ್ರಗಳು ಋಗ್ವೇದದಲ್ಲಿ ಬಹಳವಾಗಿವೆ. ಅನೇಕ ಸಂದರ್ಭಗಳಲ್ಲಿ ದೇವತಾದ್ವಂದ್ವವನ್ನು ನಿರ್ದೇಶಿಸುವಾಗ ದ್ವಿವಚನವನ್ನು ಉಪಯೋಗಿಸದೆ ಪ್ರತ್ಯೇಕವಾಗಿ ಏಕವಚನವನ್ನು ಉಪಯೋಗಿಸುವ ಋಕ್ಕುಗಳೂ ಅನೇಕವಾಗಿವೆ. ಉದಾಹರಣೆಗಾಗಿ—

**ಅಗ್ನ ಇಂದ್ರಶ್ಚ ದಾಶುಷೋ ದುರೋಣೇ** (ಋ. ಸಂ. ೩–೨೫–೪).

**ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನ್** (ಋ. ಸಂ. ೪–೧–೪).

**ಮರುತಃ ಪಿಬತ ಋತುನಾ** (ಋ. ಸಂ. ೧–೧೫–೨).

ಇತ್ಯಾದಿ. ಈ ಋಕ್ಕುಗಳಲ್ಲಿ ಅಗ್ನಿ + ಇಂದ್ರ, ಅಗ್ನಿ + ವರುಣ, ಮರುತಃ + ಋತು ಎಂಬ ದೇವತಾದ್ವಂದ್ವಗಳನ್ನು ನಿರ್ದೇಶಿಸಿದ್ದರೂ ದ್ವಿವಚನಪ್ರಯೋಗವನ್ನು ಮಾಡಿಲ್ಲ. ಪ್ರತ್ಯೇಕಪ್ರತ್ಯೇಕವಾಗಿ ಏಕವಚನದಲ್ಲಿಯೇ ದೇವತೆಗಳನ್ನು ನಿರ್ದೇಶಿಸಿರುವುದು.

**ಸೋಮ**—ಸೋಮಲತೆಯ ವಿಷಯವಾಗಿ ನಾವು ಅನೇಕಾವರ್ತಿ ವಿವರಣೆಯನ್ನು ಮಾಡಿದೇವೆ. ಆದರೆ ಅಲ್ಲೆಲ್ಲಾ ಸೋಮವು ಸೋಮವೆಂಬ ಒಂದುವಿಧವಾದ ಲತೆಗಳಿಂದ ತೆಗೆಯುವ ರಸವೆಂದೂ, ಅದನ್ನು ಪಾನಮಾಡುವವರಿಗೆ ಉತ್ಸಾಹವನ್ನೂ ಸಂತೋಷವನ್ನೂ ಮಾಡುವುದೆಂದೂ, ದೇವತೆಗಳನ್ನು ಆಹ್ವಾನಮಾಡುವಾಗ ಆ ದೇವತೆಗಳು ಯಜ್ಞಭೂಮಿಗೆ ಬಂದು ಸೋಮರಸವನ್ನು ಪಾನಮಾಡಬೇಕೆಂದೂ ಅನೇಕ ವರ್ಣನೆಗಳು ಉಕ್ತವಾಗಿವೆ. ಸೋಮವನ್ನು ದೇವತೆಯೆಂದೇ ಭಾವಿಸಿ ಸ್ತೋತ್ರಮಾಡಿರುವ ಸೂಕ್ತಗಳು ಒಂಭತ್ತನೆಯ ಮಂಡಲವನ್ನು ಬಿಟ್ಟರೆ ಇತರ ಮಂಡಲಗಳಲ್ಲಿ ಅತಿವಿರಳ. ಒಂಭತ್ತನೆಯ ಮಂಡಲದಲ್ಲಿರುವ ಸೂಕ್ತಗಳೆಲ್ಲಾ ಸೋಮದೇವತೆಯನ್ನು ಮಾತ್ರವೇ ಸ್ತುತಿಸುವುದಾಗಿದೆ. ಆ ಸಂದರ್ಭದಲ್ಲಿ ಸೋಮವಿಷಯವಾದ ವಿಸ್ತಾರವಾದ ವಿವರಣೆಯು ಅವಶ್ಯಕವಾದರೂ ಇಲ್ಲಿ ಸೂಕ್ಷ್ಮವಾದ ವಿವರಣೆಯು ಅಪ್ರಕೃತವಾಗಲಾರದು.

ಸೋಮಯಾಗಗಳು ಋಗ್ವೇದದ ಕರ್ಮಗಳಲ್ಲಿ ಬಹು ಮುಖ್ಯವಾದುದರಿಂದ, ಸೋಮದೇವತೆಯೂ ಪ್ರಧಾನ ದೇವತೆಗಳಲ್ಲಿ ಒಂದಾಗಿರುವುದು ಸ್ವಾಭಾವಿಕವಾದುದೇ. ಒಂಭತ್ತನೆಯ ಮಂಡಲದಲ್ಲಿರುವ ೧೧೪ ಸೂಕ್ತಗಳೂ, ಬೇರೆ ೬ ಸೂಕ್ತಗಳೂ ಸೇರಿ ಒಟ್ಟು ೧೨೦ ಸೂಕ್ತಗಳು ಸೋಮದೇವತೆಯನ್ನು ಹೊಗಳುತ್ತವೆ. ೪-೫ ಸೂಕ್ತಭಾಗ ಗಳೂ, ಮತ್ತು ಇಂದ್ರ, ಅಗ್ನಿ, ಪೂಷಣ, ಅಥವಾ ರುದ್ರರ ಜೊತೆಯಲ್ಲಿ ೫-೭ ಸೂಕ್ತಗಳೂ ಸೋಮದೇವತೆಯನ್ನು ಸ್ತುತಿಸುತ್ತವೆ. ಸೋಮ ಎಂಬ ಹೆಸರು ಒಂಟಿಯಾಗಿ ಅಥವಾ ಸಮಸ್ತಪದವಾಗಿ, ಸುಮಾರು ೧೨೦ ಸಲ ಬರುತ್ತದೆ. ಸಂಖ್ಯಾದೃಷ್ಟಿಯಿಂದ, ಸೋಮದೇವತೆಯು ಮೂರನೆಯದು. ಮನುಷ್ಯತ್ವಾರೋಪಣೆಯು ಬಹಳ ಮಿತವಾಗಿದೆ. ಸೋಮಲತೆ ಮತ್ತು ಅದರ ರಸಗಳು ಪದೇಪದೇ ಉಕ್ತವಾಗಿರುವುದರಿಂದ, ಸಂಪೂರ್ಣವಾಗಿ ಅವುಗಳನ್ನು ಮರೆಯು ವುದು ಅಸಾಧ್ಯ. ಅದರಿಂದಲೇ ಆ ದೇವತೆಯ ರೂಪ, ಅಂಗಾಂಗಳು ಅಥವಾ ಚಲನವಲನಾದಿಗಳ ಪ್ರಸಕ್ತಿಯೂ ಅಪರೂಪ. ಪರಾಕ್ರಮಕಾರ್ಯಗಳೇನಾದರೂ ಉಕ್ತವಾಗಿದ್ದರೂ, ಇತರ ದೇವತೆಗಳಿಗೆ ಸಮಾನವಾಗಿದ್ದು, ನಿರ್ವರ್ಣ ಅಥವಾ ಅಪ್ರಧಾನವಾಗಿವೆ. ಇತರ ದೇವತೆಗಳಂತೆ, ಇಂದು ಅಥವಾ ಸೋಮ ಎಂಬ ಹೆಸರಿನಿಂದ, ಯಾಗಕ್ಕೆ ಬಂದು, ದರ್ಭಾಸನದಲ್ಲಿ ಮಂಡಿಸಿ, ಹೋಮದ್ರವ್ಯಗಳನ್ನು ಸ್ವೀಕರಿಸಬೇಕೆಂದು, ಇವನಿಗೂ ಆಹ್ವಾನವಿದೆ. ಒಂಭತ್ತನೆಯ ಮಂಡಲ ಪೂರ್ತಿ, ಸೋಮರಸದ ವಿಷಯವೇ ಪ್ರಸ್ತುತವಾಗಿರುವುದು; ಶಿಲೆಗಳಿಂದ ರಸವನ್ನು ಹಿಂಡುವುದು, ಊರ್ಣ ಮಯವಾದ ಜರಡಿಯ ಮೂಲಕ ಮರದಪಾತ್ರೆಗಳಿಗೆ ಶೋಧಿಸುವುದು, ದೇವತೆಗಳಿಗೆ ಪಾನೀಯವಾಗಿ ಅಗ್ನಿಯ ಮೂಲಕ ಅರ್ಪಿಸುವುದು (೧-೯೪-೧೪; ೫-೫೧-೧; ೮-೪೩-೧೧ ಇತ್ಯಾದಿ), ಅಥವಾ ಋತ್ವಿಜರು ಪಾನಮಾಡು ವುದು, ಇತ್ಯಾದಿ ವಿಷಯಗಳೇ ಉಕ್ತವಾಗಿವೆ.

ಸೋಮರಸವು ಮೂರು ವಿಧವಾಗಿ ಮಿಶ್ರಿತವಾಗುತ್ತದೆ. (ತ್ರ್ಯಾಶಿರಃ ೫-೨೭-೫), ಕ್ಷೀರಮಿಶ್ರಿತ(ಗವಾಶಿರ), ದಧಿಮಿಶ್ರಿತ (ದಧ್ಯಾಶಿರ) ಮತ್ತು ಯವ ಮಿಶ್ರಿತ (ಯವಾಶಿರ); ಈ ಮಿಶ್ರಣಕ್ಕೆ ವಸ್ತ್ರಧಾರಣವೆಂದು (ವಸ್ತ್ರ, ವಾಸಃ, ಅತ್ಕ) ಹೇಳಿದೆ: 'ನಿರ್ಣಿಕ್' (ಹೊಳೆಯುವ ಉಡುಪು ೯-೧೪-೫) ಎಂದು ಹೇಳುವುದೂ ಉಂಟು. ಈ ಪದವು ಜರಡಿಗೂ ಪ್ರಯೋಗಿಸಿದೆ (೯-೭೦-೭) ಇದರಿಂದಲೇ ಸೋಮವನ್ನು ಸೌಂದರ್ಯಯುಕ್ತವಾದುದು (೯-೩೪-೪; ಇತ್ಯಾದಿ) ಮತ್ತು ಯಥೇಚ್ಛವಾಗಿ ಒಡವೆಗಳಿಂದ ಅಲಂಕೃತವಾದುದು (೯-೮೧-೨) ಎಂದು ವರ್ಣಿಸಿರುವುದು. ಅಪರೂಪವಾಗಿ ಘೃತ (೯-೮೨-೨) ಅಥವಾ ಉದಕ ಮಿಶ್ರಣವೂ ಉಕ್ತವಾಗಿದೆ; ಆದರೆ ಇವುಗಳಿಗೆ ಆಶಿರಪದವನ್ನು ಉಪಯೋಗಿಸಿಲ್ಲ.

ಯಾಗಗಳಲ್ಲಿ ಆಪ್ಯಾಯನ (ಅರ್ಧ ಹಿಂಡಲ್ಪಟ್ಟ ಸೋಮಲತೆಗಳನ್ನು ಪುನಃ ನೀರಿನಲ್ಲಿ ನೆನೆಯಿಸುವುದು.) ವೆನ್ನುವುದೊಂದು ಕರ್ಮ (ಮೈ. ಸಂ. ೪-೫-೫). ಋಗ್ವೇದದಲ್ಲಿ ಈ ಧಾತುವು (ಆಪ್ಯಾ) ಸೋಮಕ್ಕೆ ಸಂಬಂಧಿಸಿದಂತೆ ಪ್ರಯೋಗಿಸಲ್ಪಟ್ಟಿದೆ ಆದರೆ ಇಲ್ಲಿ ಸೋಮನು ಚಂದ್ರನಿಗೆ ಸಮಾನನು ಎಂದು ಸೂಚಿಸುವುದಕ್ಕಾಗಿ ಆ ಧಾತು ಉಪಯೋಗಿಸಿರುವುದು. ಒಂದು ಸ್ಥಳದಲ್ಲಿ (೯-೩೧-೪) ಮಾತ್ರ ಈ ಯಜ್ಞಾಂಗಕರ್ಮವನ್ನು ಸೂಚಿಸಬಹುದು. ಸೋಮರಸವು, ನದಿ ಅಥವಾ ಸಮುದ್ರದಂತೆ ಉಬ್ಬುತ್ತದೆ. (೯-೬೪-೮, ೯-೧೦೭-೧೨) ಎಂದು ಹೇಳಿದೆ.

ಸೋಮವು ದಿನಕ್ಕೆ ಮೂರುಸಲ ಹಿಂಡಲ್ಪಡುತ್ತದೆ. ಋಭು ದೇವತೆಗಳು ಸಾಯಂಸವನಕ್ಕೂ (೪-೩೩-೧೧: ಇತ್ಯಾದಿ), ಇಂದ್ರನು ಒಬ್ಬನೇ (೪-೩೬-೭) ಮಧ್ಯಾಹ್ನ ಸವನಕ್ಕೂ (೩-೨೧-೧ ಮತ್ತು ೨: ೮-೩೭-೧), ಮತ್ತು ಇಂದ್ರನು ಪ್ರಥಮ ಪಾನಮಾಡಲು ಪ್ರಾತಃಸವನಕ್ಕೂ ಆಹೂತರಾಗುತ್ತಾರೆ (೧೦-೧೧೨-೧).

ಸಾಧಾರಣವಾದ ಆಹಾರ ಅಥವಾ ಪಾನೀಯಗಳಲ್ಲಿ ಇರದೇಇರುವ, ಅನಿರ್ವಾಚ್ಯವಾದ ಒಂದು ಶಕ್ತಿ ಸೋಮರಸಕ್ಕೆ ಇದೆ. ಈ ಶಕ್ತಿಯಿಂದ ಮನುಷ್ಯರನ್ನು ಅಥವಾ ಅದನ್ನು ಪಾನಮಾಡಿದವರು ಯಾರೇ ಆಗಲಿ, ಅವರನ್ನು ಚೇತನಗೊಳಿಸಿ, ಮನುಷ್ಯರಿಗೆ ಸಾಧ್ಯವಲ್ಲದ ಕಾರ್ಯಗಳನ್ನೂ ಸಾಧಿಸುವಂತೆ ಮಾಡುತ್ತದೆ. ಆದುದರಿಂದಲೇ, ಇದು ದಿವ್ಯವಾದ ಪಾನೀಯ, ಅಮೃತಕ್ಕೆ ಸಮಾನವಾದುದು, ಅದೇ ಅಮೃತ ಎಂಬ ಭಾವನೆಗೆ ಅವಕಾಶವಾಗಿದೆ. ಇದನ್ನು ಪಾನಮಾಡಿದರೆ ಅಮರರಾಗುತ್ತಾರೆ ಎಂದು ಹೇಳಿದರೂ ಅತಿಶಯೋಕ್ತಿಯಾಗಲಾರದು. ದೇವತೆಗಳಿಗೆ ಪ್ರಿಯವಾದ (೯-೮೫-೨) ಮತ್ತು ಅಮರತ್ವಸಾಧಕವಾದ ಮದ್ಯ (೧-೮೪-೪); ಮನುಷ್ಯರಿಂದ ಸುತವಾಗಿ, ಕ್ಷೀರ ಮಿಶ್ರಿತವಾದ, ಈ ರಸವನ್ನು ದೇವತೆಗಳೆಲ್ಲರೂ ಪಾನಮಾಡುತ್ತಾರೆ (೯-೧೦೯-೧೫); ಇದರಿಂದ ಅವರಿಗೆ ಶೀಘ್ರವಾಗಿ ಉಲ್ಲಾಸವುಂಟಾಗುತ್ತದೆ (೮-೨-೧೮) ಮತ್ತು ಪಾನಮಾಡಿ ಹೃಷ್ಟರಾಗುತ್ತಾರೆ (೮-೫೮-೧೧). ಸೋಮವು ನಿತ್ಯ ವಾದುದು (೧-೪೩-೯; ೮-೪೮-೧೨; ೯-೩-೧ ಇತ್ಯಾದಿ), ದೇವತೆಗಳು ಅಮರತ್ವಪ್ರಾಪ್ತಿಗಾಗಿ ಅದನ್ನು ಪಾನ ಮಾಡಿದರು (೯-೧೦೬-೮). ಅವನು (ಸೋಮದೇವತೆಯು) ದೇವತೆಗಳಿಗೆ (೧-೯೧-೬; ೯-೧೦೮-೩) ಮತ್ತು ಮನುಷ್ಯರಿಗೆ ಅಮರತ್ವವನ್ನು ಅನುಗ್ರಹಿಸುತ್ತಾನೆ (೧-೯೧-೧; ೮-೪೮-೩). ಶಾಶ್ವತವಾದ ತೇಜಸ್ಸು ಮತ್ತು ಯಶಸ್ಸುಗಳಿಗೆ ಸ್ಥಾನವೂ, ಅವಿನಾಶಿಯೂ, ವೈವಸ್ವತನ ವಾಸಸ್ಥಳವೂ ಆದ ಲೋಕದಲ್ಲಿ, ತನ್ನ ಆರಾಧಕನನ್ನು ಅಮರ ನನ್ನಾಗಿ ಮಾಡಿ, ಇರಿಸುತ್ತಾನೆ (೯-೧೧೩-೭ ಮತ್ತು ೮).

ಸೋಮರಸಪಾನದಿಂದ ಮನುಷ್ಯನಿಗೆ ಉತ್ಸಾಹವು ಹೆಚ್ಚುತ್ತದೆ. ಆದರೆ ಸೋಮರಸವು ಮುಖ್ಯವಾಗಿ ದೇವತೆ ಗಳಿಗೆ ಅರ್ಪಿತವಾಗುತ್ತದೆ. ಆದುದರಿಂದ ಸೋಮಜನ್ಯವಾದ ಸಂತೋಷ, ಉತ್ಸಾಹಗಳು ದೇವತೆಗಳಿಗೆ ಉಂಟಾಗು ತ್ತವೆ. ಸೋಮಜನ್ಯವಾದ ಮದದ ಪರಿಣಾಮವು ಹೆಚ್ಚಾಗಿ ಇಂದ್ರನ ಮೇಲೆಯೇ ಆಗಿದೆ. ವಾಯುಮಂಡಲದಲ್ಲಿರುವ ವಿರುದ್ಧಶಕ್ತಿಗಳನ್ನು ಅಡಗಿಸುವುದಕ್ಕೆ ಇಂದ್ರನಿಗೆ ಸಹಕಾರಿಯಾಗುತ್ತದೆ. ವೃತ್ರನೊಡನೆ ಯುದ್ಧಮಾಡಲು ಬೇಕಾದ ವಿಶೇಷ ಶಕ್ತಿಯು, ಸಾಮರ್ಥ್ಯವು ಸೋಮರಸದಿಂದ ಬಂದಿತೆಂದು ಅನೇಕಸಲ ಉಕ್ತವಾಗಿದೆ (೮-೮೧-೧೭ ಇತ್ಯಾದಿ) ಸೋಮರಸದಿಂದುಂಟಾದ ಮದದಲ್ಲಿ, ಇಂದ್ರನು ಎಲ್ಲಾ ಶತ್ರುಗಳನ್ನೂ ಸೋಲಿಸುತ್ತಾನೆ (೯-೧-೧೦) ಮತ್ತು ಸೋಮ ಪಾನಮಾಡಿದ ಇಂದ್ರನನ್ನು ಸಂಗ್ರಾಮದಲ್ಲಿ ಯಾರೂ ಎದುರಿಸಲಾರರು (೬-೪೭-೧). ಸೋಮವೇ ಇಂದ್ರನ ಆತ್ಮ (೯-೮೫-೩); ಶುಭಕಾರಕನಾದ ಮಿತ್ರನು (೧೦-೨೫-೯) ಇಂದ್ರನ ಪರಾಕ್ರಮವನ್ನು ಅಭಿವೃದ್ಧಿಪಡಿಸುತ್ತಾನೆ (೯-೭೬-೨); ಮತ್ತು ವೃತ್ರವಧೆಯಲ್ಲಿ ಸಹಾಯಮಾಡುತ್ತಾನೆ (೯-೬೧-೨೨). ಸೋಮಸಹಚರಿತನಾಗಿ, ಇಂದ್ರನು ಮನುಷ್ಯರಿಗೋಸ್ಕರ ನೀರು ಹರಿಯುವಂತೆ ಮಾಡಿದನು ಮತ್ತು ಸರ್ಪವನ್ನು ವಧಿಸಿದನು (೪-೨೮-೧). ಇದರಿಂದ ಒಂದೊಂದುಸಲ ಸೋಮವೇ ಇಂದ್ರನ ವಜ್ರಾಯುಧವೆಂದೂ ಹೇಳಲ್ಪಡುತ್ತದೆ (೯-೭೨-೭; ೯-೭೭-೧; ೯-೧೧೧-೩). ಇಂದ್ರಸಂಬಂಧಿಯಾದ, ಈ ಸೋಮರಸವು ಸಹಸ್ರಜಯಪ್ರಾಪಕವಾದ ವಜ್ರಾಯುಧವಾಗುತ್ತದೆ (೯-೪೭-೩). ನೂರಾರು ದುರ್ಗಗಳನ್ನು ನಾಶಮಾಡಬಲ್ಲ ಮದ್ಯವು ಸೋಮರಸ (೯-೪೮-೨) ಮತ್ತು ವೃತ್ರವಧಕಾರಿಯೂ, ಮದ ಕಾರಿಯೂ ಆದ ಲತೆ (೬-೧೭-೧೧). ಈರೀತಿಯಲ್ಲಿ ಸೋಮದೇವತೆಯೇ ಇಂದ್ರನಂತೆ, ವೃತ್ರವಧೆಯನ್ನು ಮಾಡು ವವನು ಮತ್ತು ದುರ್ಗಗಳನ್ನು ಭೇದಿಸುವವನು (೯-೮೮-೪) ಎನ್ನಿಸಿಕೊಳ್ಳುತ್ತಾನೆ. ಇಂದ್ರನ ವೈಯಕ್ತಿಕವಿಶೇಷಣ ವಾದ 'ವೃತ್ರಹಾ' ಎಂಬುದು ಸೋಮನಿಗೆ ಐದಾರುಸಲ ಪ್ರಯೋಗಿಸಲ್ಪಟ್ಟಿದೆ.

ಅತಿ ಮುಖ್ಯವಾದ ಲತೆಯಾದುದರಿಂದ, ಸೋಮಲತೆಯನ್ನು ಸಸ್ಯಗಳಿಗೆಲ್ಲಾ ಅಧಿಪತಿಯೆಂತಲೂ (೯ ೧೧೪-೨), ರಾಜನೆಂತಲೂ (೯-೯೭-೧೮ ಮತ್ತು ೧೯) ವನಸ್ಪತಿ (೧-೯೧-೬ ; ೯-೧೨-೭) ಮತ್ತು ಸಸ್ಯಗಳಿಗೆಲ್ಲಾ

ಮೂಲಭೂತವಾದುದು (೧–೯೧–೨೨) ಎಂದೂ ಹೇಳಿದೆ. ಬ್ರಾಹ್ಮಣಗಳಲ್ಲಿ ವೃಕ್ಷಗಳಿಗೆಲ್ಲಾ, ಸೌಮ್ಯ (ಸೋಮಸಂಬಂಧ ಪುಳ್ಳವು, ಶ ಬ್ರಾ. ೧೨-೧-೧-೨) ಎಂದು ಹೆಸರಿದೆ. ಅಲ್ಲದೆ, ಇತರ ಪ್ರಮುಖ ದೇವತೆಗಳಂತೆ, ಸೋಮನಿಗೂ ರಾಜನೆಂಬ ಹೆಸರಿದೆ. ನದಿಗಳಿಗೆ (೯-೮೯-೨) ಇಡೀ ಪ್ರಪಂಚಕ್ಕೆ (೯-೯೭-೫೮) ರಾಜನು. ದೇವತೆಗಳಿಗೆ ರಾಜ ಅಥವಾ ತಂದೆ (೯-೮೬-೧೦; ೯-೮೭-೨; ೯-೧೮೯-೪); ದೇವಮಾನವರಿಗೆ (೯-೯೭-೨೪), ಬ್ರಾಹ್ಮಣರಿಗೆ (ವಾ. ಸಂ. ೯-೪೦; ತೈ. ಸಂ. ೧-೮-೧೦; ಮೈ. ಸಂ. ೨-೬-೯) ರಾಜನು. ದೇವತೆಯೆಂಬುದೇನೋ ಅನೇಕಸಲ ಹೇಳಲ್ಪಟ್ಟಿದೆ; ಒಂದು ಕಡೆ ಮಾತ್ರ ಅವನು ದೇವತೆಗಳಿಗೋಸ್ಕರ ಸುತ (ಹಿಂಡಲ್ಪಡುವನಾಗುವ) ದೇವತೆ (೯–೩–೬ ಮತ್ತು ೭) ಎಂದು ಉಕ್ತವಾಗಿದೆ.

ಈಚಿನ ಸಾಹಿತ್ಯದಲ್ಲಿ 'ಸೋಮ' ಎಂಬುದು ಚಂದ್ರನ ಹೆಸರು. ದೇವತೆಗಳು ಇವನನ್ನು ಪಾನಮಾಡಿದುದ ರಿಂದ ಅವನು ಕ್ಷಯಿಸಿಹೋದಾಗ, ಸೂರ್ಯನು ಅವನನ್ನು ಪೂರ್ಣಮಾಡುತ್ತಾನೆ. ಛಾಂದೋಗ್ಯೋಪನಿಷತ್ತಿನಲ್ಲಿ (೫-೧೦-೧), ಚಂದ್ರನೇ ಸೋಮನೆಂದೂ, ಅವನು ದೇವತೆಗಳ ಆಹಾರವೆಂದೂ, ಅವರು ಅವನನ್ನು ಪಾನಮಾಡಿಬಿಡು ವರೆಂದೂ ಇದೆ. ಬ್ರಾಹ್ಮಣಗಳಲ್ಲಿಯೇ ಚಂದ್ರ ಸೋಮರ ಐಕ್ಯವು ಸಾಧಾರಣವಾದ ವಿಷಯವಾಗಿದೆ: ರಾಜನಾದ ಸೋಮನು ದೇವತೆಗಳ ಆಹಾರ ಮತ್ತು ಅವನೇ ಚಂದ್ರ. (ಶ. ಬ್ರಾ. ೧-೬-೪-೫) ಯೊಗೋಪಯುಕ್ತವಾದ ಆ ಗಿಡ ಅಥವಾ ಅದರ ರಸವು ಚಂದ್ರದೇವತೆಯನ್ನು ಸೂಚಿಸುತ್ತದೆ. (ಕೌ. ಬ್ರಾ. ೭-೧೦; ೪-೪), ಪಿತೃಗಳು ಮತ್ತು ದೇವತೆ ಗಳು ಅಮೃತಸ್ವರೂಪಿಯಾದ ಅವನನ್ನು ಭಕ್ಷಿಸುವುದರಿಂದ ಚಂದ್ರನು ದಿನೇ ದಿನೇ ಕ್ಷಯಿಸಿಹೋಗುತ್ತಾನೆ ಎಂಬುದೇ ಬ್ರಾಹ್ಮಣಗಳ ಅಭಿಪ್ರಾಯ. ಯಜುರ್ವೇದದಲ್ಲಿ, ಚಂದ್ರನಿಗೆ ಪ್ರಜಾಪತಿಯ ಪುತ್ರಿಯರು ಪತ್ನಿಯರೆಂದೂ, ಅವರೇ ನಕ್ಷತ್ರಪುಂಜವೆಂದೂ ಉಕ್ತವಾಗಿದೆ. ಅಥರ್ವವೇದದಲ್ಲಿ (ಅ. ವ. ೭–೮೧–೩ ಮತ್ತು ೪; ೧೧-೬-೭ ಇತ್ಯಾದಿ) ಸಾಧಾರಣವಾಗಿ ಸೋಮ ಎಂದಿರುವೆಡೆಯಲ್ಲೆಲ್ಲಾ ಚಂದ್ರನೆಂದೇ ಅಭಿಪ್ರಾಯ. ಚಂದ್ರಸೋಮರ ಐಕ್ಯವನ್ನು ಹೇಳುವ ವಾಕ್ಯಗಳಲ್ಲಿ ಸೋಮ ಮತ್ತು ಸೂರ್ಯೆಯರ ವಿವಾಹವನ್ನು ವರ್ಣಿಸುವ ೧೦–೮೫ ನೇ ಸೂಕ್ತವೇ ಮುಖ್ಯವಾದುದು. ಇಲ್ಲಿ ಸೋಮವು ನಕ್ಷತ್ರಗಳ ಅಂಕದಲ್ಲಿದೆ. ಋತ್ವಿಜರಿಗೆ ಪರಿಚಿತವಾದ ಸೋಮವನ್ನು ಯಾರೂ ಭುಜಿಸುವುದಿಲ್ಲ ಮತ್ತು ಈ ಸೋಮಕ್ಕೂ, ಅವರು ಅಭಿಷವ ಮಾಡಬೇಕಾದುದಕ್ಕೂ ಭೇದವಿದೆ ಎಂದು ಹೇಳಿದೆ. ಇವರ ಗುಟ್ಟು ಬ್ರಾಹ್ಮಣರಿಗೆ ಮಾತ್ರ ತಿಳಿದಿದೆ. ಸೋಮವು ಸ್ವರ್ಗೀಯ, ಕಾಂತಿಯುಕ್ತ, ತಮೋನಿವಾರಕ ಇತ್ಯಾದಿಯಾಗಿ ವರ್ಣನೆಗಳು ಇದ್ದೇ ಇವೆ; ಅಲ್ಲದೆ ಅದಕ್ಕೆ 'ಇಂದು' ಎಂದು ಹೆಸರು (೬-೪೪-೨೧). ಪಾತ್ರೆಗಳಲ್ಲಿರುವ ನೀರಿನಲ್ಲಿ ಪ್ರತಿಬಿಂಬಿತವಾದ ಚಂದ್ರನಿಗೆ ಹೋಲಿಸಿದೆ (೮-೭೧-೮; ೧-೧೦೫-೧ ನ್ನು ಹೋಲಿಸಿ). ದ್ರಪ್ಸ (ಹನಿ, ಬಿಂದು) ಎಂದು ವರ್ಣಿತವಾಗಿ, ಸಮುದ್ರಕ್ಕೆ ಹೋಗುವ (೧೦-೧೨೩-೮) ಸೋಮವೂ ಚಂದ್ರನೇ ಇರಬೇಕು

ಕೆಲವರ ಅಭಿಪ್ರಾಯದಲ್ಲಿ ಸೋಮವೆಂದರೆ ಚಂದ್ರನೇ ಹೊರತು ಬೇರೆ ದೇವತೆಯೇ ಅಲ್ಲ. ಒಂಭತ್ತನೆಯ ಮಂಡಲವೆಲ್ಲಾ ಈ ಚಂದ್ರನನ್ನೇ ಸ್ತುತಿಸುತ್ತವೆ ಋಗ್ವೇದದಲ್ಲಿ ಈ ಪದವು ಎಲ್ಲಿ ಬಂದರೂ ಸೋಮಲತೆ ಅಥವಾ ಚಂದ್ರ ಇವೆರಡನ್ನೇ ಸೂಚಿಸುವುದು. ಆ ಲತೆಯಿಂದ ಬರುವ ರಸವೇ ಅಮೃತವೆಂತಲೂ, ಆ ಅಮೃತಕ್ಕೆ ಚಂದ್ರನು ಆಶ್ರಯ ನೆಂತಲೂ, ಸೂರ್ಯನಿಗಿಂತಲೂ ಚಂದ್ರನೇ ಮುಖ್ಯ ದೇವತೆ ಮತ್ತು ಇವನನಂತರ ಇಂದ್ರನು ಎಂತಲೂ ವಾದಿಸುತ್ತಾರೆ.

ಮತ್ತೆ ಕೆಲವರು ಈ ಮೇಲಿನ ಅಭಿಪ್ರಾಯಕ್ಕೆ ಋಗ್ವೇದದಲ್ಲಿ ಆಧಾರ ಸಾಲದು ಅಥವಾ ಇಲ್ಲವೆಂತಲೇ ಹೇಳು ತ್ತಾರೆ. ಈಚಿನ ಗ್ರಂಥಗಳಲ್ಲಿ ಚಂದ್ರಸೋಮರ ಐಕ್ಯಕ್ಕೆ ಪುಷ್ಟಿಯು ಎಷ್ಟೇ ದೊರೆತರೂ ಋಗ್ವೇದದಲ್ಲಿ ಸೋಮದೇವ

ತಾಕವಾದ ನೂರಾರು ಋಕ್ಕುಗಳಲ್ಲಿ ಅಪರೂಪವಾಗಿ ಒಂದೊಂದುಕಡೆ ಇದು ಸೂಚಿತವಾದವರೂ ಎಲ್ಲಿಯೂ ಸ್ಪಷ್ಟವಾಗಿ ಹೇಳಿಲ್ಲ. ಅದೂ ಅಲ್ಲದೆ ವ್ಯಾಖ್ಯಾನಕಾರರು ಯಾರೂ ಈ ಅಂಶಕ್ಕೆ ವೇದದಲ್ಲಿ ಆಧಾರವಿದೆಯೆಂದು ಹೇಳಿಲ್ಲ.

**ಪೂಷಾ—ಪೂಷನ್** ಎಂಬ ದೇವತೆಯ ವಿಷಯವಾಗಿಯೂ ಇಲ್ಲಿ ಸೂಕ್ಷ್ಮವಿವರಣೆಯನ್ನು ಕೊಡುವೆವು. ಈ ದೇವತೆಯು ಕಳೆದುಹೋದ ವಸ್ತುವನ್ನು ಹುಡುಕಿ ಹಿಂದಕ್ಕೆ ತಂದುಕೊಡುವನೆಂದು ಪ್ರಸಿದ್ಧಿ ಇರುವುದರಿಂದ ಅನೇಕ ಋಕ್ಕುಗಳಲ್ಲಿ ಈ ವಿಧವಾದ ವರ್ಣನೆ ಇರುವುದು. ಈ ಶಬ್ದಕ್ಕೆ ಯಾಸ್ಕರು—

**ಪೂಷಾ । ಅಥ ಯದ್ರಶ್ಮಿಪೋಷಂ ಪುಷ್ಯತಿ ತತ್ಪೂಷಾ ಭವತಿ ॥**

(ನಿ. ೧೨-೧೬)

ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ ರಶ್ಮಿ ಅಥವಾ ಕಿರಣಗಳಿಂದ ಪೋಷಿಸುವವನಾದುದರಿಂದ ಈ ದೇವತೆಗೆ ಪೂಷಾ ಎಂದು ಹೆಸರು. ಈ ಪದದ ನಿರ್ವಚನದಿಂದಲೇ ಈ ದೇವತೆಯನ್ನು ವರ್ಣಿಸುವಾಗ ತೇಜಸ್ಸಿನಿಂದ ಯುಕ್ತ ನಾದವನು, ಪ್ರಕಾಶಮಾನನು, ದೀಪ್ತಿಯುಕ್ತನು ಮೊದಲಾದ ವಿಶೇಷಣಪದಗಳನ್ನು ಉಪಯೋಗಿಸುವರು. ಈ ವರ್ಣನೆಯಿಂದಲೇ ಪೂಷನು ದ್ವಾದಶಾದಿತ್ಯರಲ್ಲಿ ಒಬ್ಬನೆಂದೂ ಸೂರ್ಯನ ರೂಪವಿಶೇಷವೆಂದೂ ಹೇಳುವರು.

**ಪುಷ್ಯನ್ ಕ್ಷಿತಿಂ ಪೋಷಯತಿ ಪ್ರಣುದನ್ ರಶ್ಮಿಭಿಸ್ತಮಃ ।**
**ತೇನೈನಮಸ್ತೌತ್ಪೂಷೇತಿ ಭರದ್ವಾಜಸ್ತು ಪಂಚಭಿಃ ॥**

(ಬೃ. ದೇ. ೨-೬೩)

ಎಂದರೆ ಕತ್ತಲನ್ನು ನಾಶಮಾಡುತ್ತಾ ಪೃಥ್ವಿಯು ವೃದ್ಧಿಯನ್ನು ಹೊಂದುವಂತೆ ಅದನ್ನು ಪೋಷಿಸುವುದರಿಂದ ಪೂಷನ್ ಎಂಬ ಹೆಸರು ಈ ದೇವತೆಗೆ ಸಲ್ಲುವುದು. ಭರದ್ವಾಜಋಷಿಯು ಈ ದೇವತೆಯನ್ನು ಐದು ಸೂಕ್ತಗಳಿಂದ ಸ್ತುತಿಸಿ ರುವನು ಎಂದು ಬೃಹದ್ದೇವತೆಯೆಂಬ ಗ್ರಂಥದಲ್ಲಿಯೂ ಹೇಳಿರುವುದು.

ಪೂಷಣನು ಎಲ್ಲಾ ಪ್ರಾಣಿಗಳನ್ನೂ ಸ್ಪಷ್ಟವಾಗಿ ಏಕಕಾಲದಲ್ಲಿ ನೋಡುತ್ತಾನೆ. (೩-೬೨-೯) ಸೂರ್ಯನಂತೆ ಇವನೂ ಚಲಿಸುವ ಮತ್ತು ಚಲಿಸದಿರುವ ವಸ್ತುಗಳೆಲ್ಲಕ್ಕೂ ಒಡೆಯನು (೧-೧೧೫-೧; ೭-೬೦-೨) ಇವನಿಗೆ ಎಲ್ಲಾ ಪ್ರಾಣಿಗಳೂ ಪರಿಚಿತರು ಮತ್ತು ಎಲ್ಲಾ ಪ್ರಾಣಿಗಳನ್ನೂ ಅವಲೋಕಿಸುತ್ತಾನೆ. ಪೂಷಣನು ದೂರವಾದ ಸ್ವರ್ಗದ ಮತ್ತು ಭೂಮಿಯ ದಾರಿಯಲ್ಲಿ ಜನಿಸಿದನು. ಅವನ ವಾಹನವು ಟಗರು (ಅಜ) ದಾರಿಗಳ ಪರಿಚಯವಿರುವುದರಿಂದ ಅವನನ್ನು ವೀಥಿಗಳ ರಕ್ಷಕನೆನ್ನುವರು. ಎಲ್ಲಾ ದಾರಿಗೂ ಅವನೇ ರಕ್ಷಕ (೬-೪೯-೮) ದಾರಿಯಲ್ಲಿ ಬರಬಹುದಾದ ತೊಂದರೆಯನ್ನು ಪರಿಹರಿಸಿ (೬-೫೪-೯) ದಾರಿಯನ್ನು ಶುಭಪ್ರದವನ್ನಾಗಿ ಮಾಡಲಿ (೧೦-೫೯-೭) ಎಂದು ಪ್ರಾರ್ಥಿತ ನಾಗಿದಾನೆ. ರಸ್ತೆಯಲ್ಲಿಯೂ, ಕಾಡಿನಲ್ಲಿಯೂ ಅವನೇ ದಾರಿತೋರಿಸುವವನು. ಆದ್ದರಿಂದಲೇ ಪ್ರಯಾಣೋ ನ್ಮುಖನಾದ ಪ್ರತಿಯೊಬ್ಬನೂ ರಸ್ತೆಗಳಿಗೆ ಅಧಿಪತಿಯಾದ ಪೂಷಣನನ್ನು ಪ್ರಾರ್ಥಿಸುತ್ತಾ ೬-೫೩ ನೆಯ ಸೂಕ್ತ ವನ್ನುಚ್ಚರಿಸುತ್ತಾ ಪ್ರಯಾಣಮಾಡಬೇಕೆಂದು ಹೇಳಿದೆ. ದಾರಿತಪ್ಪಿದವರೆಲ್ಲಾ ಪೂಷಣನನ್ನೇ ಮರೆಹೊಗಬೇಕು (ಆ. ಗೃ. ೩-೬-೮; ಸಾಂ. ಶ್ರೌ. ೩-೪-೯) ಎಂದು ಹೇಳಿದೆ. ದನಕರುಗಳನ್ನು ಹಿಂಬಾಲಿಸಿ ಅವುಗಳನ್ನು ರಕ್ಷಿಸು ವುದೂ, (೬-೫೪-೫, ೬, ೧೦ ಮತ್ತು ೬-೫೮-೨) ಹಳ್ಳದಲ್ಲಿ ಬಿದ್ದು ಗಾಯಗೊಳ್ಳದಂತೆ ಕಾಪಾಡಿ ಅಪಾಯವಾಗದಂತೆ

ಮನೆಗೆ ಅಟ್ಟಿಕೊಂಡುಬರುವುದೂ, ತಪ್ಪಿಸಿಕೊಂಡಿರುವ ದನಕರುಗಳನ್ನು ಪುನಃ ತರುವುದೂ ಇವನ ಕೆಲಸ (೬-೫೪-೭, ೧೦) ಇತ್ಯಾದಿ.

ಪೂಷಣನನ್ನು ದ್ವಿವಚನಾಂತವಾಗಿ ಉಪಯೋಗಿಸಿರುವುದು, ಸೋಮ (೨-೪೦) ಮತ್ತು ಇಂದ್ರ (೬-೫೭) ಇಬ್ಬರೊಡನೆ ; ಇಂದ್ರನ ಸೋದರನೆಂದು ಒಂದು ಸಲ (೬-೫೫-೫) ಕರೆದಿದೆ. ಇವರಿಬ್ಬರನ್ನು ಬಿಟ್ಟರೆ ಭಗನ ಜೊತೆಯಲ್ಲಿಯೇ ಹೆಚ್ಚಾಗಿ ಸಂಬೋಧಿಸಿರುವುದು (೧-೯೦-೪ ; ೪-೩೦-೨೪ ; ೫-೪೧-೪ ; ೫-೪೬-೨ ; ೧೦-೧೨೫-೨ ; ಶ. ಬ್ರಾ. ೧೧-೪-೩-೩ ; ಕಾ. ಶ್ರೌ. ಸೂ. ೫-೧೩-೧ ಗಳನ್ನು ಹೋಲಿಸಿ). ಮತ್ತು ವಿಷ್ಣುವಿನ ಜೊತೆಯಲ್ಲಿ (೧-೯೦-೫ ; ೫-೪೬-೩ ; ೬-೨೧-೯ ; ೭-೪೪-೧ ; ೧೦-೬೬.೫) ಈ ಎಲ್ಲಾ ಮಂತ್ರಗಳಲ್ಲಿಯೂ ಪೂಷಣನು ಮತ್ತು ಬೇರೆ ದೇವತೆಯೂ ಸರಿಸಮಾನರಾಗಿ ಹೇಳಲ್ಪಟ್ಟಿದಾರೆ. ಇತರ ದೇವತೆಗಳೊಡನೆಯೂ ಅಲ್ಲೊಂದು ಇಲ್ಲೊಂದು ಪ್ರಯೋಗವಿದೆ.

ಇದುವರೆಗೆ ಉದಹರಿಸಿರುವ ವಾಕ್ಯಗಳಿಂದ ಪೂಷಣನು ಪ್ರಕೃತಿಯ ಒಂದಂಶವೆಂದು ವ್ಯಕ್ತಪಡುವುದಿಲ್ಲ. ಆದರೆ ಅನೇಕ ವಾಕ್ಯಗಳು ಅವನು ಸೂರ್ಯನಿಗೆ ಸಂಬಂಧವುಳ್ಳವನೆಂದು ತೋರಿಸುತ್ತವೆ. ಯಾಸ್ಕರೂ (ನಿ. ೭-೯) ಇವನನ್ನು ಎಲ್ಲಾ ವಸ್ತುಗಳನ್ನೂ ರಕ್ಷಿಸುವ ಆದಿತ್ಯನೆಂದು ಹೇಳಿದಾರೆ. ಇವನ ಮುಖ್ಯವಾದ ಕಾರ್ಯಗಳೆಂದರೆ— ಮಾರ್ಗಗಳನ್ನು ಸರಿಪಡಿಸುವುದು ಮತ್ತು ಮೃತರನ್ನು ಸತ್ಪುರುಷರಿರುವೆಡೆ ಸೇರಿಸುವುದು. ಮೊದಲನೆಯ ಗುಣದಿಂದ, ಮಾರ್ಗದರ್ಶಕ ಮತ್ತು ಪಶುಗಳ ರಕ್ಷಕನಾಗಿದಾನೆ ಎಂದರೆ ಜನರ ಸ್ಥಿತಿಗತಿಗಳನ್ನು ಉತ್ತಮಗೊಳಿಸುವವನು ಎನ್ನಬಹುದು.

ಪೂಷಣ ಎಂಬ ಈ ಪದವು ಪುಷ್ (ಪುಷ್ಟಿಯನ್ನುಂಟುಮಾಡು) ಎಂಬ ಧಾತುವಿನಿಂದ ಆಗಿದೆ. ಈ ಗುಣವು, ಅವನ ಈ ವಿಶೇಷಣಗಳಿಂದಲೂ (ವಿಶ್ವವೇದಾಃ ಅನಷ್ಟವೇದಾಃ, ಪುರೂವಸು, ಪುಷ್ಟಿಂಭರ) ಮತ್ತು ಐಶ್ವರ್ಯಕ್ಕಾಗಿ ಪ್ರಾರ್ಥನೆಗಳಿಂದಲೂ (೬-೪೮-೧೫; ಇತ್ಯಾದಿ) ಸ್ಪಷ್ಟವಾಗಿದೆ. ಅವನು ಅಪಾರ ಸಂಪತ್ತಿಗೂ, ಐಶ್ವರ್ಯ ಪ್ರವಾಹಕ್ಕೂ ರಾಶಿಗೂ ಒಡೆಯ (೬-೫೫-೨ ಮತ್ತು ೩). ಆದರೆ ಪೂಷಣನಿಂದ ಲಬ್ಧವಾದ ಐಶ್ವರ್ಯವು ಇಂದ್ರ, ಪರ್ಜನ್ಯ, ಮರುದಾದಿಗಳಿಂದ ಲಬ್ಧವಾದ ಸಂಪತ್ತಿನಂತೆ ವೃಷ್ಟಿಸಂಬಂಧವಾದುದಲ್ಲ, ತೇಜಸ್ಸಿಗೆ [ಬೆಳಕಿಗೆ] ಸಂಬಂಧಿಸಿದುದು. ಇಹಲೋಕದಲ್ಲಿ ಮನುಷ್ಯರಿಗೆ, ದನಕರುಗಳಿಗೆ, ಅವನ ನಿರ್ಭಯವಾದ ಆಶ್ರಯ ; ಪರಲೋಕದಲ್ಲಿ ಆನಂದಕರವಾದ ಪ್ರದೇಶಗಳಿಗೆ ದಾರಿ ತೋರಿಸುವುದು. ಇವುಗಳಿಂದ ಜನರ ಸ್ಥಿತಿಯು ಉತ್ತಮಗೊಳ್ಳುತ್ತದೆ, ಜನರು ಸುಖಿಗಳಾಗುತ್ತಾರೆ. ಎಂದರೆ, ಪೂಷಣನು ಪ್ರಜೆಗಳಿಗೆ ಉಪಕಾರವಾದ ಸೂರ್ಯನ ಅಂಶವೆನ್ನಬಹುದು.

॥ ಸಂಹಿತಾಪಾಠಃ ॥

**ಸೋಮಾಪೂಷಣಾ ಜನನಾ ರಯೀಣಾಂ ಜನನಾ ದಿವೋ ಜನನಾ ಪೃಥಿವ್ಯಾಃ ।**
**ಜಾತೌ ವಿಶ್ವಸ್ಯ ಭುವನಸ್ಯ ಗೋಪೌ ದೇವಾ ಅಕೃಣ್ವನ್ನಮೃತಸ್ಯ ನಾಭಿಂ ॥ ೧ ॥**

॥ ಪದಪಾಠಃ ॥

**ಸೋಮಾಪೂಷಣಾ । ಜನನಾ । ರಯೀಣಾಂ । ಜನನಾ । ದಿವಃ । ಜನನಾ । ಪೃಥಿವ್ಯಾಃ ।**

**ಜಾತೌ । ವಿಶ್ವಸ್ಯ । ಭುವನಸ್ಯ । ಗೋಪೌ । ದೇವಾಃ । ಅಕೃಣ್ವನ್ । ಅಮೃತಸ್ಯ । ನಾಭಿಂ ॥ ೧ ॥**

॥ ಸಾಯಣಭಾಷ್ಯಂ ॥

**ಸೋಮಾಪೂಷಣಾ ಹೇ ಸೋಮಾಪೂಷಣೌ ಯುವಾಂ ರಯೀಣಾಂ ಧನಾನಾಂ ಜನನಾ ಜನಯಿತಾರೌ ದಿವೋ ದ್ಯುಲೋಕಸ್ಯಾಪಿ ಜನನಾ ಜನಯಿತಾರೌ ಪೃಥಿವ್ಯಾಃ ಪ್ರಥಿತಾಯಾಶ್ಚ ಜನಯಿತಾರೌ ಭವಥಃ । ಕಿಂಚ ಜಾತೌ ಜಾತಮಾತ್ರಾವೇವ ಯುವಾಂ ವಿಶ್ವಸ್ಯ ಭುವನಸ್ಯ ಕೃತ್ಸ್ನಸ್ಯ ಜಗತೋ ಗೋಪೌ ಗೋಪ್ತಾರೌ ದೇವಾ ಅಮೃತಸ್ಯಾಮರಣಸ್ಯ ನಾಭಿಂ ಹೇತುಮಕೃಣ್ವನ್ । ಅಕಾರ್ಷುಃ ॥**

॥ ಪ್ರತಿಪದಾರ್ಥ ॥

**ಸೋಮಾಪೂಷಣಾ**— ಎಲೈ ಸೋಮ ಮತ್ತು ಪೂಷ ದೇವತೆಗಳೇ (ನೀವಿಬ್ಬರೂ ಸಹ) । **ರಯೀಣಾಂ**— ಧನಕ್ಕೆ । **ಜನನಾ**— ಉತ್ಪಾದಕರಾಗಿದ್ದೀರಿ । **ದಿವಃ**— ದ್ಯುಲೋಕಕ್ಕೂ । **ಜನನಾ**— ನಿರ್ಮಾತೃಗಳಾಗಿದ್ದೀರಿ । **ಪೃಥಿವ್ಯಾಃ**— ಪೃಥಿವಿಗೂ । **ಜನನಾ**— ಸೃಷ್ಟಿಕರ್ತರಾಗಿದ್ದೀರಿ । **ಜಾತೌ**— ಉತ್ಪನ್ನರಾದೊಡನೆಯೇ । **ವಿಶ್ವಸ್ಯ ಭುವನಸ್ಯ**— ಸಕಲಲೋಕಕ್ಕೂ । **ಗೋಪೌ**— ರಕ್ಷಕರಾದ ನಿಮ್ಮನ್ನು । **ದೇವಾಃ**— ದೇವತೆಗಳು । **ಅಮೃತಸ್ಯ**— ಅಮೃತತ್ವಕ್ಕೆ । **ನಾಭಿಂ**— ಹೇತುವನ್ನಾಗಿ । **ಅಕೃಣ್ವನ್**— ಮಾಡಿದರು.

॥ ಭಾವಾರ್ಥ ॥

ಎಲೈ ಸೋಮ ಮತ್ತು ಪೂಷದೇವತೆಗಳೇ, ನೀವಿಬ್ಬರೂ ಸಹ ಧನಕ್ಕೂ, ದ್ಯುಲೋಕಕ್ಕೂ ಪೃಥ್ವಿಗೂ ನಿರ್ಮಾತೃಗಳಾಗಿದ್ದೀರಿ. ಉತ್ಪನ್ನರಾದೊಡನೆಯೇ ಸಕಲ ಲೋಕಕ್ಕೂ ರಕ್ಷಕರಾದ ನಿಮ್ಮನ್ನು ದೇವತೆಗಳು ಅಮೃತತ್ವಕ್ಕೆ ಹೇತುವನ್ನಾಗಿ ಮಾಡಿದರು.

English Translation.

Soma and Pushan, you two are the generators of riches, the generators of heaven, the generators of earth ; as soon as born you are the guardians of the whole world : the gods have made you the source of immortality.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸ್ಪಷ್ಟವಾಗಿದೆ. ಎಲೈ ಸೋಮ ಮತ್ತು ಪೂಷನ್ ಎಂಬ ದೇವತೆಗಳೇ ನೀವಿಬ್ಬರೂ ಧನಕ್ಕೆ ಅಧಿಪತಿಗಳಾಗಿರುವಿರಿ ಎಂದರೆ ಧನವನ್ನು (ಪಶುಸಂಪತ್ತನ್ನು) ಉತ್ಪನ್ನಮಾಡುವಿರಿ. ದ್ಯುಲೋಕ ಎಂದರೆ ಸ್ವರ್ಗವನ್ನೂ, ಭೂಮಿಯನ್ನೂ ನೀವೇ ಉತ್ಪನ್ನಮಾಡಿರುವಿರಿ ನಿಮ್ಮಿಂದಲೇ ಸ್ವರ್ಗವೂ ಭೂಮಿಯೂ ಉಂಟಾದವು.

ಇದಲ್ಲದೆ ಹುಟ್ಟಿದ ಕೂಡಲೇ ಎಂದರೆ ಜನ್ಮಾರಭ್ಯ ನೀವು ಸಮಸ್ತ ಜಗತ್ತಿಗೂ ಪಾಲಕರಾಗಿರುವಿರಿ. ಆದುದರಿಂದಲೇ ದೇವತೆಗಳು ನಿಮ್ಮನ್ನು ಮರಣರಹಿತವಾದ ಪದವಿಗೆ ಮುಖ್ಯಕಾರಣರನ್ನಾಗಿ ಮಾಡಿದರು ಅಥವಾ ಮರಣರಹಿತವಾದ ಪದವಿಗೆ ನೀವೇ ಕಾರಣರಾಗುವಂತೆ ಮಾಡಿದರು ಎಂದರೆ ನಿಮ್ಮಿಂದಲೇ ಎಲ್ಲರೂ ಅಮರ್ತ್ಯಪದವಿಯನ್ನು (ಮರಣವಿಲ್ಲದಿರುವಿಕೆಯನ್ನು) ಪಡೆಯುವಂತಾಯಿತು ಎಂದು ಮುಖ್ಯಾಭಿಪ್ರಾಯವು.

**ಅಮೃತಸ್ಯ**— ಮೃತವೆಂದರೆ ಸಾಯುವುದು, ಅಮೃತವೆಂದರೆ ಅದಿಲ್ಲದಿರುವ ಸ್ಥಿತಿ, ಚಿರಂಜೀವಿತ್ವ. ದೇವತೆಗಳು ಮರಣಕ್ಕೆ ಒಳಗಾಗದೆ ಸದಾಕಾಲದಲ್ಲಿಯೂ ಬದುಕುವರೆಂಬ ಪ್ರತೀತಿ ಇದೆ. ಅಮೃತವೆಂದರೆ ಸೋಮರಸವೆಂದೂ, ಉದಕವೆಂದೂ, ದೇವತೆಗಳ ಅತ್ಯುತ್ತಮ ಆಹಾರವೆಂದೂ, ನಾನಾವಿಧ ಅರ್ಥಗಳಾಗುವುವು.



॥ ಸಂಹಿತಾಪಾಠಃ ॥

ಇಮೌ ದೇವೌ ಜಾಯಮಾನೌ ಜುಷಂತೇಮೌ ತಮಾಂಸಿ ಗೂಹತಾಮಜುಷ್ಟಾ ।
ಆಭ್ಯಾಮಿಂದ್ರಃ ಪಕ್ವಮಾಮಾಸ್ವಂತಃ ಸೋಮಾಪೂಷಭ್ಯಾಂ ಜನದುಸ್ರಿಯಾಸು ॥

॥ ಪದಪಾಠಃ ॥

ಇಮೌ । ದೇವೌ । ಜಾಯಮಾನೌ । ಜುಷಂತ । ಇಮೌ । ತಮಾಂಸಿ । ಗೂಹತಾಂ । ಅಜುಷ್ಟಾ ।
ಆಭ್ಯಾಂ । ಇಂದ್ರಃ । ಪಕ್ವಂ । ಆಮಾಸು । ಅಂತರಿತಿ । ಸೋಮಾಪೂಷಽಭ್ಯಾಂ । ಜನತ್ । ಉಸ್ರಿಯಾಸು ॥

॥ ಸಾಯಣಭಾಷ್ಯಂ ॥

ಇಮೌ ಸೋಮಾಪೂಷಣೌ ದೇವೌ ದ್ಯೋತಮಾನೌ ಜಾಯಮಾನಾವುತ್ಪನ್ನಮಾತ್ರಾವೇವ ಜುಷಂತ । ಸರ್ವೇ ದೇವಾ ಅಜುಷಂತ । ಸೇವಿತವಂತ ಇತಿ ಯಾವತ್ । ಕಿಂಚ ಇಮೌ ಸೋಮಾಪೂಷಣಾವಜುಷ್ಟಾಸೇವ್ಯಾನಿ ತಮಾಂಸಿ ಸರ್ವಸ್ಯ ಗೂಹತಾಂ । ನಾಶಯತಃ । ಕಿಂಚ ಆಭ್ಯಾಮೇತಾಭ್ಯಾಂ ಸೋಮಾಪೂಷಭ್ಯಾಂ ಸಹೇಂದ್ರ ಆಮಾಸು ತರುಣೀಷೂಸ್ರಿಯಾಸು ಗೋಷ್ವಂತರ್ಮಧ್ಯ ಊಧಃಪ್ರದೇಶೇ ಪಕ್ವಂ ಪರಿಪಕ್ವಂ ಪಯೋ ಜನತ್ । ಜನಯತಿ ॥

॥ ಪ್ರತಿಪದಾರ್ಥ ॥

**ಇಮೌ ದೇವೌ**—ದೇವತಾತ್ಮರಾದ ಈ ಸೋಮ ಮತ್ತು ಪೂಷದೇವತೆಗಳನ್ನು । **ಜಾಯಮಾನೌ**— ಉತ್ಪನ್ನರಾದೊಡನೆಯೇ । **ಜುಷಂತ**—(ಸಕಲ ದೇವತೆಗಳೂ) ಪೂಜಿಸುತ್ತಾರೆ । **ಇಮೌ**—ಇವರು । **ಅಜುಷ್ಟಾ**— ಸೇವಿಸಲು ಅರ್ಹವಲ್ಲದ । **ತಮಾಂಸಿ**—ಅಂಧಕಾರಗಳನ್ನು । **ಗೂಹತಾಂ**—ನಾಶಮಾಡುತ್ತಾರೆ । **ಆಭ್ಯಾಂ**

**ಸೋಮಾಪೂಷಭ್ಯಾಂ**—ಈ ಸೋಮಪೂಷರ ಸಹಾಯದಿಂದಲೇ । **ಇಂದ್ರಃ**—ಇಂದ್ರನು । **ಆಮಾಸು**—ತಾರುಣ್ಯಾವಸ್ಥೆಯಲ್ಲಿದ್ದ । **ಉಸ್ರಿಯಾಸು**—ಗೋವುಗಳ । **ಅಂತಃ**—ಕೆಚ್ಚಲು ಪ್ರದೇಶಗಳಲ್ಲಿ । **ಪಕ್ವಂ**—ಪರಿಪಕ್ವವಾದ ಕ್ಷೀರವನ್ನು । **ಜನತ್**—ಉಂಟು ಮಾಡಿದನು.

॥ ಭಾವಾರ್ಥ ॥

ದೇವತಾತ್ಮರಾದ ಈ ಸೋಮಪುರುಷರು ಉತ್ಪನ್ನರಾದೊಡನೆಯೇ ಸಕಲ ದೇವತೆಗಳೂ ಇವರನ್ನು ಪೂಜಿಸುತ್ತಾರೆ. ಇವರು ಸೇವಿಸಲು ಅರ್ಹವಲ್ಲದ (ಎಂದರೆ ಯಾರಿಗೂ ಬೇಡದ) ಅಂಧಕಾರಗಳನ್ನು ನಾಶಮಾಡುತ್ತಾರೆ. ಈ ಸೋಮ ಮತ್ತು ಪೂಷ ದೇವತೆಗಳ ಸಹಾಯದಿಂದಲೇ, ಇಂದ್ರನು ತಾರುಣ್ಯಾವಸ್ಥೆಯಲ್ಲಿದ್ದ ಗೋವುಗಳ ಕೆಚ್ಚಲು ಪ್ರದೇಶಗಳಲ್ಲಿ ಪರಿಪಕ್ವವಾದ ಕ್ಷೀರವನ್ನು ನಿರ್ಮಿಸಿದನು.

English Translation.

(The gods) propitiate these two divinities at the moment of their birth, for they drive away the disagreeable glooms : with these two, Soma and Pushan, Indra generates the mature (milk) in the immature heifers.

॥ ವಿಶೇಷವಿಷಯಗಳು ॥

**ಪಕ್ವಂ—ಪರಿಪಕ್ವಂ ಪಯಃ ।** ಸೇವಿಸುವುದಕ್ಕೆ ಅರ್ಹವಾಗುವಂತೆ ಸಿದ್ಧವಾಗಿರುವ ಹಾಲು. ಪಕ್ವಶಬ್ದಕ್ಕೆ ಯಾಸ್ಕರು **ಪಕ್ವಮೌಷಧಂ** ಎಂದೂ (ನಿ. ೫–೨೮) **ಪಕ್ವಂ-ಉದಕದಾನಂ ಮೇಘಂ । ಬಹೂನಾಂ ಮೇಘಾನಾಂ ಮಧ್ಯೇ ಯಃ ಪಕ್ವೋ ಮೇಘಃ ಉದಕದಾನೇ ಸಮರ್ಥಃ ತಂ** ಎಂದೂ (ನಿ. ೬–೩೪) ನಿರ್ವಚನವನ್ನು ಹೇಳಿರುವರು. ಎಂದರೆ ವನಸ್ಪತಿ ಮೊದಲಾದ ವೃಕ್ಷಾದಿಗಳಲ್ಲಿ ರಸಾದಿಗಳಿಂದ ತುಂಬಿ ಉಪಯೋಗಕ್ಕೆ ಸಿದ್ಧವಾಗಿರುವ ಫಲಗಳು ಅಥವಾ ಓಷಧಿಗಳು ; ಅಥವಾ ಮೇಘಪರವಾಗಿ ಅರ್ಥವಾಗುವುದಾದರೆ ಉದಕವನ್ನು ತನ್ನಲ್ಲಿ ಸಂಗ್ರಹಮಾಡಿ ಮಳೆಯನ್ನು ಸುರಿಸಲು ಸಮರ್ಥವಾದ ಮೇಘವು ಎಂದೂ ಅರ್ಥ ಮಾಡಿರುವರು. ಪಕ್ವ ಶಬ್ದವನ್ನು ಯಾವ ಸಂದರ್ಭದಲ್ಲಿ ಉಪಯೋಗಿಸಿದರೂ ಅದಕ್ಕೆ—ಉಪಯೋಗಕ್ಕೆ ಅರ್ಹವಾದುದೂ ಸಿದ್ಧವಾದುದೂ ಆದ ವಸ್ತುವೆಂದು ಅರ್ಥವನ್ನು ಹೇಳಬಹುದು. ಪ್ರಕೃತ ಋಕ್ಕಿನಲ್ಲಿ **ಉಸ್ರಿಯಾಸು ಅಂತಃ** ಎಂಬ ಶಬ್ದಗಳ ಪ್ರಯೋಗವಿರುವುದರಿಂದ ಗೋವುಗಳ ಕೆಚ್ಚಲಿನಲ್ಲಿ ತುಂಬಿ ಉಪಯೋಗಕ್ಕೆ ಸಿದ್ಧವಾಗಿರುವ ವಸ್ತುವೆಂದರೆ **ಪಯಃ**— ಹಾಲು ಎಂದಭಿಪ್ರಾಯವು.

**ಆಮಾಸು— ಅಪಕ್ವಾಸು ।** ಚೆನ್ನಾಗಿ ಬಲಿತಿಲ್ಲದಿರುವ, ಎಂದರೆ ವಯಸ್ಸಾಗದಿರುವ, ತರುಣಾವಸ್ಥೆಯಲ್ಲಿರುವ, ಹೊಸದಾಗಿ ಕರುಹಾಕಿರುವ ಎಂದರ್ಥವು.

**ಉಸ್ರಿಯಾಸು— ಉಸ್ರಿಯಾ** ಎಂಬ ಶಬ್ದವು ಗೋನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ಮತ್ತು **ಉಸ್ರಿಯಾಯಾಃ । ಉಸ್ರಿಯೇತಿ ಗೋನಾಮ । ಉಸ್ರಾವಿಣೋಽಸ್ಯಾಂ ಭೋಗಾಃ । ಉಸ್ರೇತಿ ಚ** (ನಿ. ೪–೧೯) ಎಂದು ನಿರ್ವಚನವೂ ಇರುವುದು. ಎಂದರೆ ಇವರಲ್ಲಿ (ಗೋವಿನಲ್ಲಿ) ಭೋಗಸಾಧನವಾದ ರಸವು (ಹಾಲು) ಸ್ರವಿಸುವುದರಿಂದ (ಕರೆಯುವುದರಿಂದ) ಉಸ್ರಿಯಾ ಅಥವಾ ಉಸ್ರಾ ಎಂದರೆ ಗೋವು ಎಂದು ಹೆಸರು. ಅದರಲ್ಲಿಯೂ ಎಂದರೆ ಹಾಲನ್ನು ಕೊಡುವುದಕ್ಕೆ ಯೋಗ್ಯವಾದ ಎಂದರೆ ತರುಣಾವಸ್ಥೆಯಲ್ಲಿರುವ ಗೋವು ಎಂದರ್ಥವು.

**ಆಭ್ಯಾಂ ಸೋಮಾಪೂಷಭ್ಯಾಂ ಇಂದ್ರಃ ಆಮಾಸು ಉಸ್ರಿಯಾಸು ಅಂತಃ ಪಕ್ವಂ ಜನತ್— ಏತಾಭ್ಯಾಂ ಸೋಮಾಪೂಷಭ್ಯಾಂ ಸಹ ಇಂದ್ರಃ ತರುಣೀಷು ಗೋಷು ಮಧ್ಯೇ ಊಧಃ ಪ್ರದೇಶೇ ಪರಿಪಕ್ವಂ ಜನಯತಿ** । ಈ ಸೋಮಾಪೂಷರೆಂಬ ದೇವತೆಗಳೊಡನೆ ಸೇರಿ ಇಂದ್ರನು ತರುಣಾವಸ್ಥೆಯಲ್ಲಿರುವ ಗೋವುಗಳ ಕೆಚ್ಚಲಿನಲ್ಲಿ ಪರಿಪಕ್ವವಾದ ಎಂದರೆ ಉಪಯೋಗಿಸುವುದಕ್ಕೆ ಅರ್ಹವಾದ ಹಾಲನ್ನು ತುಂಬಿ ಸಿದ್ಧಪಡಿಸುತ್ತಾನೆ ಎಂದಭಿಪ್ರಾಯವು. ಇಂದ್ರನು ಮಾಡುವ ಈ ಕಾರ್ಯವು—

**ಆಮಾಸು ಪಕ್ವಮೈರಯ ಆ ಸೂರ್ಯಂ ರೋಹಯೋ ದಿವಿ ।**

(ಋ. ಸಂ. ೮-೮೯-೭)

**ಆಮಾಸು ಚಿದ್ದಧಿಷೇ ಪಕ್ವಮಂತಃ ಪಯಃ ಕೃಷ್ಣಾಸು ರುಶದ್ರೋಹಿಣೀಷು ।**

(ಋ. ಸಂ. ೧-೬೨-೯)

ಎಂಬ ಋಕ್ಕುಗಳಲ್ಲಿ ವರ್ಣಿತವಾಗಿದೆ. ಮೇಲೆ ಉದಹರಿಸಿರುವ ಎರಡನೆಯ ಉದಾಹರಣೆಯಲ್ಲಿ ಇಂದ್ರನು ಕಪ್ಪಾಗಿರುವ ಅಥವಾ ಕೆಂಪಾಗಿರುವ ಗೋವುಗಳಲ್ಲಿಯೂ ಸಹ ಬೆಳ್ಳಗಿರುವ ಹಾಲನ್ನೇ ತುಂಬುತ್ತಾನೆಂದು ವರ್ಣಿಸಿದೆ. ಗೋವು ಯಾವ ವರ್ಣವುಳ್ಳದ್ದಾದರೂ ಅದರ ಹಾಲು ಮಾತ್ರ ಬೆಳ್ಳಗಿರುವುದು. ಈ ಕಾರ್ಯವು ಇಂದ್ರನ ಪ್ರಭಾವಾತಿಶಯದಿಂದಲೇ ಉಂಟಾಗುವುದು ಎಂದು ವರ್ಣಿಸಿದೆ. ಮೊದಲನೆಯ ಉದಾಹರಣೆಯಲ್ಲಿ ಉಕ್ತವಾಗಿರುವ **ಆ ಸೂರ್ಯಂ ರೋಹಯೋ ದಿವಿ** ಎಂಬ ವಿಷಯದಲ್ಲಿ ಭಾಷ್ಯಕಾರರು ಒಂದು ಪೂರ್ವೇತಿಹಾಸವನ್ನು ಹೇಳಿರುವರು—

**ಪೂರ್ವಂ ಪಣಯೋ ನಾಮಾಸುರಾ ಅಂಗಿರಸಾಂ ಗಾ ಅಪಹೃತ್ಯಾಂಧಕಾರಾವೃತೇ ಕಸ್ಮಿಂಶ್ಚಿತ್ಪರ್ವತೇ ತಾಃ ಸ್ಥಾಪಿತವಂತಃ । ತತೋಽಙ್ಗಿರಸ ಇಂದ್ರಂ ಸ್ತುತ್ವಾ ಗಾಃ ಪುನರಸ್ಮಭ್ಯಮಾಹರೇತಿ ತೈರುಕ್ತ ಇಂದ್ರೋ ಗವಾಂ ಸ್ಥಾನಂ ತಮಸಾವೃತಂ ದೃಷ್ಟ್ವಾ ತತ್ರ ಗೋದರ್ಶನಾಯ ದ್ಯುಲೋಕೇ ಸರ್ವಪ್ರಕಾಶಕಂ ಸೂರ್ಯಮಾರೋಹಿತವಾನ್ ಸ್ಥಾಪಿತವಾನ್ ॥**

(ಋ. ಸಂ. ೮-೮೯-೭ ಸಾ. ಭಾ.)

ಪೂರ್ವದಲ್ಲಿ ಪಣಿಗಳೆಂಬ ಅಸುರರು ಅಂಗಿರಸರ ಗೋವುಗಳನ್ನು ಅಪಹರಿಸಿಕೊಂಡು ಹೋಗಿ ಒಂದಾನೊಂದು ಪರ್ವತದಲ್ಲಿ ಮಹಾಗಾಢಾಂಧಕಾರದಿಂದ ಕೂಡಿದ ಗುಹೆಯಲ್ಲಿ ಅವುಗಳನ್ನು ಇಟ್ಟಿದ್ದರು ಆಗ ಅಂಗಿರಾಋಷಿಗಳು ಇಂದ್ರನನ್ನು ಸ್ತೋತ್ರಮಾಡಿ ಮೆಚ್ಚಿಸಿ ತಮ್ಮ ಗೋವುಗಳನ್ನು ಪುನಃ ತಂದುಕೊಡಬೇಕೆಂದು ಪ್ರಾರ್ಥಿಸಲಾಗಿ ಇಂದ್ರನು ಗೋವುಗಳು ಇರುವ ಸ್ಥಳವು ಬಹಳ ಕತ್ತಲೆಯಿಂದ ಕೂಡಿ ಹುಡುಕಲು ಸಾಧ್ಯವಿಲ್ಲದ್ದರಿಂದ ಗೋವುಗಳನ್ನು ಹುಡುಕಲು ಬೆಳಕು ಅವಶ್ಯಕವೆಂದು ತಿಳಿದು ಅಂತರಿಕ್ಷದಲ್ಲಿ ಸರ್ವವನ್ನೂ ತನ್ನ ಪ್ರಕಾಶದಿಂದ ಬೆಳಗುವ ಸೂರ್ಯನನ್ನು ಸ್ಥಾಪಿಸಿದನು ಆ ಸೂರ್ಯನ ಪ್ರಕಾಶದಿಂದ ಎಲ್ಲಾ ಕಡೆಯಲ್ಲಿಯೂ ಬೆಳಕಾಗಿ ಗೋವುಗಳನ್ನು ಹುಡುಕಿ ತರಲು ಸಾಧ್ಯವಾಯಿತು ಎಂದು ಪೂರ್ವೇತಿಹಾಸವಿದೆ. ಪ್ರಕೃತ ಋಕ್ಕಿನಲ್ಲಿಯೂ ಸಹ **ಇಮೌ ತಮಾಂಸಿ ಗೂಹತಾಮಜುಷ್ಟಾ**— ಇಲ್ಲಿ ಆವರಿಸಿರುವ ಕತ್ತಲೆಯನ್ನು ಸೋಮಾಪೂಷಣರು ನಾಶಮಾಡಿದರು ಎಂಬ ವಿಷಯವು ಸೋಮಾಪೂಷಣರ ಪರವಾಗಿದ್ದರೂ ಇಂದ್ರನು ಗೋವುಗಳನ್ನು ಹುಡುಕಿ ತರುವುದಕ್ಕಾಗಿ ಸೂರ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದ ವಿಷಯವನ್ನೇ ಸಮರ್ಥಿಸುವುದು ಎಂದು ಊಹಿಸಬಹುದು.

॥ ಸಂಹಿತಾಪಾಠಃ ॥

ಸೋಮಾಪೂಷಣಾ ರಜಸೋ ವಿಮಾನಂ ಸಪ್ತಚಕ್ರಂ ರಥಮವಿಶ್ವಮಿನ್ವಂ ।
ವಿಷೂವೃತಂ ಮನಸಾ ಯುಜ್ಯಮಾನಂ ತಂ ಜಿನ್ವಥೋ ವೃಷಣಾ ಪಂಚರಶ್ಮಿಂ ॥

॥ ಪದಪಾಠಃ ॥

ಸೋಮಾಪೂಷಣಾ । ರಜಸಃ । ವಿಽಮಾನಂ । ಸಪ್ತಽಚಕ್ರಂ । ರಥಂ । ಅವಿಶ್ವಽಮಿನ್ವಂ ।
ವಿಷುಽವೃತಂ । ಮನಸಾ । ಯುಜ್ಯಮಾನಂ । ತಂ । ಜಿನ್ವಥಃ । ವೃಷಣಾ । ಪಂಚಽರಶ್ಮಿಂ ॥ ೩ ॥

॥ ಸಾಯಣಭಾಷ್ಯಂ ॥

ವೃಷಣಾ ವೃಷಣೌ ಕಾಮಾನಾಂ ವರ್ಷಿತಾರೌ ಸೋಮಾಪೂಷಣಾ ಹೇ ಸೋಮಾಪೂಷಣೌ ರಜಸೋ ಲೋಕಸ್ಯ । ಲೋಕಾ ರಜಾಂಸ್ಯುಚ್ಯಂತ ಇತಿ ಯಾಸ್ಕಃ । ವಿಮಾನಂ ಪರಿಚ್ಛೇದಕಂ । ಸರ್ವಮಾನಮಿತ್ಯರ್ಥಃ । ಸಪ್ತಚಕ್ರಂ ಸಪ್ತರ್ತುಚಕ್ರಂ । ತ್ರಯೋದಶೋ ಮಾಸಃ ಸಪ್ತಮ ಋತುಃ । ಅಸ್ತಿ ತ್ರಯೋದಶೋ ಮಾಸ ಇತಿ ಶ್ರುತೇಃ । ಅವಿಶ್ವಮಿನ್ವಂ ವಿಶ್ವಸ್ಯಾಪರಿಚ್ಛೇದ್ಯಂ ವಿಷುವೃತಂ ವಿಷ್ವಕ್ ಸರ್ವತ್ರ ಪರಿವರ್ತಮಾನಂ ಪಂಚರಶ್ಮಿಂ ಪಂಚರ್ತುರಶ್ಮಿಂ । ಹೇಮಂತಶಿಶಿರಯೋಃ ಸಮಾಸೇನರ್ತವಃ ಪಂಚ । ತಥಾ ಚ ಶ್ರೂಯತೇ । ದ್ವಾದಶ ಮಾಸಾಃ ಪಂಚರ್ತವೋ ಹೇಮಂತಶಿಶಿರಯೋಃ ಸಮಾಸೇನ । ಐ. ಬ್ರಾ. ೧-೧ । ಇತಿ । ಮನಸಾ ಯುಜ್ಯಮಾನಂ ಮನೋಮಾತ್ರೇಣ ಯುಜ್ಯಮಾನಂ । ತಂ ಪ್ರಸಿದ್ಧಂ ರಥಂ ಜಿನ್ವಥಃ । ಅಸ್ಮಾನ್ಪ್ರತಿ ಪ್ರೇರಯಥಃ ॥

॥ ಪ್ರತಿಪದಾರ್ಥ ॥

**ವೃಷಣಾ**—ಕಾಮವರ್ಷಕರಾದ । **ಸೋಮಾಪೂಷಣಾ**— ಎಲೈ ಸೋಮ ಮತ್ತು ಪೂಷದೇವತೆಗಳೇ । **ರಜಸಃ**—ಲೋಕವನ್ನು । **ವಿಮಾನಂ**—ವಿಭಾಗವಮಾಡಿ ಆಳಿಯತಕ್ಕದ್ದೂ । **ಸಪ್ತಚಕ್ರಂ**— ಋತುರೂಪವಾದ ಏಳು ಚಕ್ರವುಳ್ಳದ್ದೂ । **ಅವಿಶ್ವಮಿನ್ವಂ**— ವಿಶ್ವಕ್ಕಿಂತಲೂ ಬೇರೆಯಾಗದಿರುವುದೂ । **ವಿಷುವೃತಂ**—ಸರ್ವತ್ರ ವ್ಯಾಪ್ತವಾದುದೂ । **ಪಂಚರಶ್ಮಿಂ**—ಐದು ಕಡಿವಾಣಗಳುಳ್ಳದೂ । **ಮನಸಾ**—ಮನಸ್ಸಿನಿಂದಲೇ । **ಯುಜ್ಯಮಾನಂ**—ಯೋಜಿಸಿ ಸಿದ್ಧಪಡಿಸಕ್ಕದ್ದೂ । **ತಂ**—ಪ್ರಸಿದ್ಧವಾದುದೂ ಆದ । **ರಥಂ**—ರಥವನ್ನು । **ಜಿನ್ವಥಃ**—ನಮ್ಮಲ್ಲಿಗೆ ಪ್ರೇರಿಸಿರಿ.

॥ ಭಾವಾರ್ಥ ॥

ಕಾಮವರ್ಷಕರಾದ ಸೋಮ ಮತ್ತು ಪೂಷದೇವತೆಗಳೇ, ಲೋಕವನ್ನು ವಿಭಾಗಮಾಡಿ ಆಳಿಯತಕ್ಕದ್ದೂ, ಋತುರೂಪವಾದ ಏಳು ಚಕ್ರವುಳ್ಳದ್ದೂ, ವಿಶ್ವಕ್ಕಿಂತಲೂ ಭಿನ್ನವಾದ ಸ್ಥಿತಿಯಿಲ್ಲದಿರುವುದೂ ಸರ್ವತ್ರ ವ್ಯಾಪ್ತವಾದುದೂ, ಐದು ಕಡಿವಾಣಗಳುಳ್ಳದ್ದೂ ಮನಸ್ಸಿನಿಂದಲೇ ಯೋಜಿಸಿ ಸಿದ್ಧಪಡಿಸತಕ್ಕದ್ದೂ, ಪ್ರಸಿದ್ಧವಾದುದೂ ಆದ ರಥವನ್ನು ನಮ್ಮಲ್ಲಿಗೆ ಪ್ರೇರಿಸಿ.

## English Translation·

Soma and Pushan, showeres (of benifits), direct towards us the seven-wheeled car, the measure of the spheres, undistinguishable from the universe, everywhere existing, (guided) by five reins, and to be harnessed by the mind.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಸೋಮಾಪೂಷಣರನ್ನುದ್ದೇಶಿಸಿ, ಅವರ ಏಳು ಚಕ್ರಗಳಿಂದ ಕೂಡಿದುದೂ ಐದು (ಕುದುರೆಗಳ) ಕಡಿವಾಣವುಳ್ಳದ್ದೂ ಸರ್ವತ್ರ ಸಂಚರಿಸಲು ಶಕ್ತಿಯುಳ್ಳದ್ದೂ, ಮನೋನಿಶ್ಚಯಮಾತ್ರದಿಂದ ಹೂಡಿ ಸಿದ್ಧಪಡಿಸ ತಕ್ಕದ್ದೂ ಆದ ರಥವನ್ನು ನಮ್ಮಲ್ಲಿಗೆ ಬರುವಂತೆ ಪ್ರೇರಿಸಿರಿ ಎಂದು ಋಷಿಯು ಪ್ರಾರ್ಥಿಸಿದಾನೆ.

ಇಲ್ಲಿ ರಥವೆಂದರೆ ಸಂವತ್ಸರವು. ಸಂವತ್ಸರದಲ್ಲಿರುವ ಆರು ಋತುಗಳೂ, ಅಧಿಕಮಾಸವಾದ ಹದಿಮೂರನೆಯ ಮಾಸವೂ ಸೇರಿ ಆಗುವ ಏಳು ಋತುಗಳೂ, ಏಳು ಚಕ್ರಗಳು. ಐದು ಋತುಗಳು ಎಂದರೆ ಆರು ಋತುಗಳಲ್ಲಿ ಕೊನೆಯ ಎರಡು ಋತುಗಳೂ ಒಟ್ಟಿಗೆ ಸೇರಿ ಹೇಮಂತಶಿಶಿರೌ ಎಂಬ ಹೆಸರಿನಿಂದ ಕರೆಯಲ್ಪಡುವ ರೂಢಿ ಇರುವುದ ರಿಂದ ಒಟ್ಟು ಐದು ಋತುಗಳೆಂದು ಇಲ್ಲಿ ನಿರ್ದೇಶಿಸಿದೆ. ಅಂತಹ ಐದು ಋತುಗಳೇ ಐದು ಕುದುರೆಗಳ ಕಡಿವಾಣಗಳು ಇಂತಹ ಸಂವತ್ಸರವೆಂಬ ರಥವು ಸರ್ವತ್ರವ್ಯಾಪ್ತವಾದುದು. ಎಂದರೆ ಕಾಲವು ಸಮಸ್ತವನ್ನು ಒಳಗೊಂಡಿರುವುದು. ಅದರಿಂದ ಭಿನ್ನವಾದ ವಸ್ತುವಿಲ್ಲ. ಅಂತಹ ರಥದೊಡನೆ ನಮ್ಮಲ್ಲಿಗೆ ಬನ್ನಿ ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ. ಪೂಷನ್ ಎಂಬ ದೇವತೆಯು ಆದಿತ್ಯಸ್ವರೂಪನೆಂದು ಈ ಸೂಕ್ತದ ಪೀಠಿಕೆಯಲ್ಲಿ ಹೇಳಿದೇವೆ. ಸೂರ್ಯನ ಸಂಚಾರ ಕ್ರಮದಿಂದ ಸಂವತ್ಸರ, ಋತುಗಳು, ಮಾಸಗಳು, ದಿನಗಳು ಮೊದಲಾದ ಕಾಲವಿಭಾಗಗಳು ಉಂಟಾಗುವುದರಿಂದ ಅದನ್ನೇ ಇಲ್ಲಿ ಸೋಮಪೂಷಣರ ರಥವೆಂದು ವರ್ಣಿಸಿ ಅದನ್ನು ಆಹ್ವಾನ ಮಾಡಲಾಗಿದೆ.

**ವೃಷಣಾ ಸೋಮಾಪೂಷಣಾ ರಜಸಃ ವಿಮಾನಂ**—ಇಷ್ಟಾರ್ಥಗಳನ್ನು ಸುರಿಸುವ ಎಲೈ ಸೋಮಾ ಪೂಷಣರೇ ನಿಮ್ಮ (ರಥವು) ಲೋಕವನ್ನು ವಿಭಾಗಮಾಡಿ ಅಳೆಯುವುದು. ಇಲ್ಲಿ **ರಜಸಃ** ಎಂದರೆ **ಲೋಕಸ್ಯ । ಲೋಕಾಃ ರಜಾಂಸ್ಯುಚ್ಯಂತೇ** (ನಿ. ೪-೧೯) ಎಂಬ ಯಾಸ್ಕರ ನಿರ್ವಚನ ಪ್ರಕಾರ ರಜಃ ಶಬ್ದಕ್ಕೆ ಲೋಕ ವೆಂದರ್ಥವು. ಲೋಕವನ್ನು ವಿಭಾಗಮಾಡಿ ಅಳತೆಮಾಡುವುದು ಎಂದರೆ ರಥಸಂಚಾರದಿಂದ ಭೂಪ್ರದೇಶವನ್ನು ಅಳತೆಮಾಡುವಂತೆ, ಕಾಲವೆಂಬ ರಥದಿಂದ ಲೋಕಗಳ ಪರಿಮಿತಿ ಅಥವಾ ಕಾಲಪರಿಮಿತಿಯನ್ನು ವಿಭಾಗಮಾಡುವುದು ಎಂದರ್ಥವು. ಸೋಮಾಪೂಷಣರ ಅಥವಾ (ಆದಿತ್ಯನ) ಸಂಚಾರದಿಂದ (ರಥಸಂಚಾರದಿಂದ) ಸಂವತ್ಸರ, ಋತು, ಮಾಸ, ಪಕ್ಷ, ದಿನ ವಿಭಾಗಗಳೇರ್ಪಡುವುವು ಎಂದಭಿಪ್ರಾಯವು. ಇದನ್ನೇ ಇಲ್ಲಿ **ಲೋಕಸ್ಯ ವಿಮಾನಂ** ಎಂಬ ಪದಗಳಿಂದ ವರ್ಣಿಸಿದೆ.

**ಸಪ್ತಚಕ್ರಂ ರಥಂ ಅವಿಶ್ವಮಿನ್ವಂ ವಿಷೂವೃತಂ**— ಇಲ್ಲಿ ಸಪ್ತಚಕ್ರಗಳೆಂದರೆ ಸಪ್ತಋತುಗಳು. ಸಾಧಾರಣವಾಗಿ ಒಂದು ಸಂವತ್ಸರದಲ್ಲಿ ಎರಡೆರಡು ಮಾಸಗಳಿಗೆ ಒಂದೊಂದು ಋತುವಿನಂತೆ ಆರು ಋತುಗಳಿರುವವು. ಅಧಿಕಮಾಸವು ಬಂದಾಗ ಸಂವತ್ಸರದಲ್ಲಿ ಹದಿಮೂರು ಮಾಸಗಳಿರುವವು. ಆ ಹದಿಮೂರನೇ ಮಾಸವನ್ನೇ ಒಂದು

ಋತುವನ್ನಾಗಿ ಪರಿಗಣಿಸಿ ಒಟ್ಟು ಏಳು ಋತುಗಳಿರುವುದೆಂದು ಹೇಳಿದೆ. ಸಂವತ್ಸರದಲ್ಲಿ ಹದಿಮೂರು ಮಾಸಗಳಿರುವ ವಿಚಾರದಲ್ಲಿ—ಅಸ್ತಿ ತ್ರಯೋದಶೋ ಮಾಸ ಇತ್ಯಾಹುಃ (ತೈ. ಸಂ. ೬–೫–೩–೪) ಎಂಬ ಶ್ರುತಿವಚನವನ್ನೂ ಭಾಷ್ಯಕಾರರು ಉದಾಹರಿಸಿದ್ದಾರೆ. ಈ ಋತುಗಳು ಒಂದಾಗುತ್ತಲೊಂದು ಪರಿವರ್ತನ ಕ್ರಮದಿಂದ ಸಾಗುವವು. ಏಳು ಋತುಗಳೂ ಒಂದಾವರ್ತಿ ಬಂದು ಮುಗಿದ ಮೇಲೆ ಪುನಃ ಮೊದಲನೇ ಋತುವೇ ಬರುವುದು. ಆದುದರಿಂದ ಈ ಏಳು ಋತುಗಳನ್ನು ಯಾವಾಗಲೂ ಸುತ್ತುತ್ತಿರುವ ರಥದ ಏಳು ಚಕ್ರಗಳಿಗೆ ಹೋಲಿಸಿದೆ. **ಅವಿಶ್ವಮಿನ್ವಂ** ಎಂಬ ಶಬ್ದಕ್ಕೆ **ವಿಶ್ವಸ್ಯಾಪರಿಚ್ಛೇದ್ಯಂ** ವಿಶ್ವಕಿಂತಲೂ ಬೇರೆಯಾಗದಿರುವ ಎಂಬರ್ಥವು. ಎಲ್ಲವೂ ಎಂದರೆ ದೇಶಕಾಲಗಳೆಲ್ಲವೂ ವಿಶ್ವದಲ್ಲಿಯೇ ಸೇರಿಹೋಗಿರುವುದರಿಂದ ವಿಶ್ವದಿಂದ ಭಿನ್ನವಾದ (ಬೇರೆಯಾದ) ವಸ್ತುವೇ ಇರುವುದಿಲ್ಲವೆಂಬ ಸಿದ್ಧಾಂತವನ್ನನುಸರಿಸಿ ಈ ಕಾಲವೆಂಬ ರಥವು ವಿಶ್ವದಿಂಬ ಅಭಿನ್ನವೆಂದು ಇಲ್ಲಿ ವರ್ಣಿಸಿದೆ. ಮತ್ತು **ವಿಷೂವೃತಂ—ವಿಷ್ವಕ್ ಸರ್ವತ್ರ ಪರಿವರ್ತಮಾನಂ** ಎಂಬ ಪದಕ್ಕೂ ಸಹ ಮೇಲಿನ ಸಿದ್ಧಾಂತವನ್ನೇ ಅನುಸರಿಸಿ ಕಾಲವು ಸರ್ವವನ್ನೂ ವ್ಯಾಪಿಸಿರುವುದರಿಂದಲೂ ಕಾಲದೇಶಗಳಿಂದ ಬಾಹ್ಯವಾದ ವಸ್ತುವಿಲ್ಲದಿರುವುದರಿಂದಲೂ ಕಾಲವೆಂಬ ರಥವು ಸರ್ವತ್ರ ವ್ಯಾಪ್ತವಾಗಿರುವುದೆಂದೂ ಇಲ್ಲಿ ವರ್ಣಿಸಿದೆ.

**ಪಂಚರಶ್ಮಿಂ—ಪಂಚರ್ತುರಶ್ಮಿಂ । ಹೇಮಂತಶಿಶಿರಯೋಃ ಸಮಾಸೇನ ಋತವಃ ಪಂಚ ।** ಎರಡೆರಡು ಮಾಸಗಳಿಗೆ ಒಂದೊಂದು ಋತುವೆಂದು ವರ್ಷದಲ್ಲಿ ಆರು ಋತುಗಳಿರುವುದಾದರೂ ಕೊನೆಯ ಎರಡು ಋತುಗಳನ್ನು ಎಂದರೆ ಹೇಮಂತ, ಶಿಶಿರ ಎಂಬ ಋತುಗಳನ್ನು ಒಂದೇ ಋತುವೆಂದು ಭಾವಿಸಿ ಹೇಮಂತಶಿಶಿರೌ ಎಂಬ ಒಂದೇ ಪದದಿಂದ ವ್ಯವಹರಿಸುವುದು ರೂಢಿಯಾಗಿದೆ. ಆದುದರಿಂದ ಐದು ಋತುಗಳು ಎಂದು ಹೇಳುವುದೂ ರೂಢಿಯಲ್ಲಿದೆ ಈ ವಿಷಯವು—**ದ್ವಾದಶಮಾಸಾಃ ಪಂಚರ್ತವೋ ಹೇಮಂತಶಿಶಿರಯೋಃ ಸಮಾಸೇನ** (ಐ. ಬ್ರಾ. ೧–೧) ಎಂಬ ಐತರೇಯ ಬ್ರಾಹ್ಮಣ ವಾಕ್ಯದಲ್ಲಿ ಉಕ್ತವಾಗಿದೆಯೆಂದು ಶ್ರುತಿಪ್ರಮಾಣವನ್ನು ಭಾಷ್ಯಕಾರರು ಉದಾಹರಿಸಿದಾರೆ. ಈ ಐದು ಋತುಗಳೇ ಐದು ರಶ್ಮಿಗಳು (ಹಗ್ಗಗಳು) ಎಂದರೆ ಕುದುರೆಗಳ ಐದು ಲಗಾಮು (ಕಡಿವಾಣಗಳು) ಎಂದು ಇಲ್ಲಿ ವಿವರಿಸಿದೆ.

**ಮನಸಾ ಯುಜ್ಯಮಾನಂ ತಂ ರಥಂ ಜಿನ್ವಥಃ—ಮನೋಮಾತ್ರೇಣ ಯುಜ್ಯಮಾನಂ ಪ್ರಸಿದ್ಧಂ ರಥಂ ಪ್ರೇರಯಥಃ ।** ಈ ರಥವನ್ನು ಹೂಡುವುದಕ್ಕೆ ಹಸ್ತಾದ್ಯವಯವಗಳ ಸಹಾಯವು ಬೇಕಾಗಿರುವುದಿಲ್ಲ. ಕೇವಲ ಮನೋನಿಶ್ಚಯಮಾತ್ರದಿಂದಲೇ ರಥವು ಹೂಡಿ ಸಿದ್ಧವಾಗುವುದು. ಅಂತಹ ರಥವನ್ನು ನಮ್ಮ ಬಳಿಗೆ ಬರುವಂತೆ ಪ್ರೇರಿಸಿರಿ ಎಂದು ಋಷಿಯು ಸೋಮಾಪೂಷಣರನ್ನು ಪ್ರಾರ್ಥಿಸಿರುವನು.



॥ ಸಂಹಿತಾಪಾಠಃ ॥

ದಿವ್ಯ1ನ್ಯಃ ಸದನಂ ಚಕ್ರ ಉಚ್ಚಾ ಪೃಥಿವ್ಯಾಮನ್ಯೋ ಅಧ್ಯಂತರಿಕ್ಷೇ ।
ತಾವಸ್ಮಭ್ಯಂ ಪುರುವಾರಂ ಪುರುಕ್ಷುಂ ರಾಯಸ್ಪೋಷಂ ವಿ ಷ್ಯತಾಂ ನಾಭಿಮಸ್ಮೇ ॥

॥ ಪದಪಾಠಃ ॥

ದಿವಿ । ಅನ್ಯಃ । ಸದನಂ । ಚಕ್ರೇ । ಉಚ್ಚಾ । ಪೃಥಿವ್ಯಾಂ । ಅನ್ಯಃ । ಅಧಿ । ಅಂತರಿಕ್ಷೇ ।

ತಾ । ಅಸ್ಮಭ್ಯಂ । ಪುರುऽವಾರಂ । ಪುರುऽಕ್ಷುಂ । ರಾಯಃ । ಪೋಷಂ । ವಿ । ಸ್ಯತಾಂ । ನಾಭಿಂ । ಅಸ್ಮೇ-

ಇತಿ ॥ ೪ ॥

॥ ಸಾಯಣಭಾಷ್ಯಂ ॥

ಅನ್ಯಸ್ತಯೋರೇಕಃ ಪೂಷೋಚ್ಚಾ ಉಚ್ಚೈರುಚ್ಛ್ರಿತೇ ದಿವಿ ದ್ಯುಲೋಕೇ ಸದನಂ ಸ್ಥಾನಂ ಚಕ್ರೇ । ಚಕಾರ । ಅನ್ಯೋऽಪರಃ ಸೋಮಃ ಪೃಥಿವ್ಯಾಮೋಷಧಿರೂಪೇಣ ಅಧ್ಯಂತರಿಕ್ಷೇऽಂತರಿಕ್ಷೇ ಚ ಚಂದ್ರರೂಪೇಣ ಸದನಂ ಚಕ್ರೇ। ತಾ ಸೋಮಾಪೂಷಣಾ ಯುವಾಂ ಪುರುವಾರಂ ಬಹುಭಿರ್ವರಣೀಯಂ ಪುರುಕ್ಷುಂ ಬಹುಕೀರ್ತಿಂ ರಾಯಸ್ಪೋಷಂ ಧನಸ್ಯ ಪುಷ್ಟಿಂ । ಪಶ್ವಾತ್ಮಕಂ ಧನಮಿತ್ಯರ್ಥಃ । ತಥಾ ಚ ಬ್ರಾಹ್ಮಣಂ ಪಶವೋ ವೈ ರಾಯಸ್ಪೋಷ ಇತಿ । ಅಸ್ಮೇ ಅಸ್ಮಾಕಂ ನಾಭಿಂ ವಿಶ್ವಸ್ಯ ಭೋಗಸ್ಯ ಹೇತುಭೂತಮಸ್ಮಭ್ಯಂ ವಿಷ್ಯತಾಂ । ವಿಮುಂಚತಾಂ । ಪ್ರಯಚ್ಛತಾಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅನ್ಯಃ**—(ಸೋಮಾಪೂಷರಲ್ಲಿ) ಒಬ್ಬನಾದ ಪೂಷದೇವನು । **ಉಚ್ಚಾ**—ಅತ್ಯುನ್ನತವಾಗಿರುವ । **ದಿವಿ**—ದ್ಯುಲೋಕದಲ್ಲಿ । **ಸದನಂ**—ವಾಸಸ್ಥಾನವನ್ನು । **ಚಕ್ರೇ**—ಮಾಡಿಕೊಂಡಿದ್ದಾನೆ । **ಅನ್ಯಃ**—ಇನ್ನೊಬ್ಬನಾದ ಸೋಮನು । **ಪೃಥಿವ್ಯಾಂ**—(ಓಷಧಿ ರೂಪದಲ್ಲಿ) ಪೃಥಿವಿಯಲ್ಲಿಯೂ । **ಅಧ್ಯಂತರಿಕ್ಷೇ**—(ಚಂದ್ರರೂಪದಿಂದ) ಅಂತರಿಕ್ಷದಲ್ಲಿಯೂ ಸದನವನ್ನು ಮಾಡಿಕೊಂಡಿದ್ದಾನೆ । **ತಾ**—ಆ ಸೋಮಾಪೂಷರಿಬ್ಬರೂ । **ಅಸ್ಮೇ**—ನಮ್ಮ । **ನಾಭಿಂ**—(ಸಕಲ ಭೋಗಗಳಿಗೂ) ಹೇತು ಭೂತವಾದುದೂ । **ಪುರುವಾರಂ**—ಅನೇಕರಿಂದ ಅಪೇಕ್ಷಿತವಾದುದೂ । **ಪುರುಕ್ಷುಂ**—ಬಹಳವಾದ ಕೀರ್ತಿಯುಳ್ಳದ್ದೂ । **ರಾಯಸ್ಪೋಷಂ**—ಪಶ್ವಾತ್ಮಕವಾದದ್ದೂ ಆದ ಧನದ ಪುಷ್ಟಿಯನ್ನು । **ಅಸ್ಮಭ್ಯಂ**—ನಮಗೆ । **ವಿ ಷ್ಯತಾಂ**—ಒದಗಿಸಿಕೊಡಲಿ.

॥ ಭಾವಾರ್ಥ ॥

ಸೋಮಾಪೂಷರಲ್ಲಿ ಒಬ್ಬನಾದ ಪೂಷದೇವನು ಅತ್ಯುನ್ನತವಾಗಿರುವ ದ್ಯುಲೋಕದಲ್ಲಿ ವಾಸಸ್ಥಾನವನ್ನು ಮಾಡಿಕೊಂಡಿದ್ದಾನೆ. ಇನ್ನೊಬ್ಬನಾದ ಸೋಮನು ಓಷಧಿರೂಪದಿಂದ ಪೃಥಿವಿಯಲ್ಲಿಯೂ, ಚಂದ್ರರೂಪದಿಂದ ಅಂತರಿಕ್ಷದಲ್ಲಿಯೂ ಸದನವನ್ನು ಮಾಡಿಕೊಂಡಿದ್ದಾನೆ. ಆ ಸೋಮಾಪೂಷರಿಬ್ಬರೂ ನಮ್ಮ ಸಕಲಭೋಗಗಳಿಗೂ ಹೇತುಭೂತವಾದುದೂ, ಅನೇಕರಿಂದ ಅಪೇಕ್ಷಿತವಾದುದೂ ಬಹಳವಾದ ಕೀರ್ತಿಯುಳ್ಳದ್ದೂ, ಪಶ್ವಾತ್ಮಕವಾದದ್ದೂ ಆದ ಧನದ ಪುಷ್ಟಿಯನ್ನು ನಮಗೆ ಒದಗಿಸಿಕೊಡಲಿ.

## English Translation.

One of them, (Pushan) has made his dwelling above in heaven ; the other, (soma), upon earth, and in the firmament : may they both grant

us much-desired and much-commended abundant wealth of cattle, the source to us (of enjoyments.)

॥ ವಿಶೇಷವಿಷಯಗಳು ॥

**ಪುರುವಾರಂ— ಬಹುಭಿರ್ವರಣೀಯಂ |** ಅನೇಕರಿಂದ ಅಪೇಕ್ಷಿಸಲ್ಪಡುವ; ಎಲ್ಲರಿಗೂ ಬೇಕಾದ.

**ಪುರುಕ್ಷುಂ—ಬಹುಕೀರ್ತಿಂ—**ಬಹಳವಾದ ಕೀರ್ತಿಯನ್ನು. ಇಲ್ಲಿ **ಕ್ಷು** ಎಂಬ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೭) ಬಹಳವಾದ ಅನ್ನವನ್ನು ಎಂದೂ ಅರ್ಥವನ್ನು ಹೇಳಬಹುದು.

**ರಾಯಸ್ಪೋಷಂ— ಧನಸ್ಯ ಪುಷ್ಟಿಂ | ಪಶ್ವಾತ್ಮಕಂ ಧನಮಿತ್ಯರ್ಥಃ |** ಧನದ ಪುಷ್ಟಿಯನ್ನು ಎಂದರೆ ಧನಬಾಹುಳ್ಯವನ್ನು ಎಂದರ್ಥವು. ಪಶುಸಂಪತ್ತನ್ನು, ಪಶುರೂಪವಾದ ಧನವನ್ನು ಎಂದೂ ಹೇಳಬಹುದೆಂದು ಸೂಚಿಸಿ ಅದರ ಸಮರ್ಥನೆಗಾಗಿ—ಪಶವೋ ವೈ ರಾಯಸ್ಪೋಷಃ (ತೈ. ಸಂ. ೫-೪-೬-೨) ಎಂಬ ಶ್ರುತಿವಾಕ್ಯವನ್ನು ಉದಾಹರಿಸಿರುವರು. ಪ್ರಕೃತ ಋಕ್ಕಿನಲ್ಲಿ ರಾಯಃ ಪೋಷಃ ಎಂಬಿವು ಪ್ರತ್ಯೇಕವಾದ ಎರಡು ಪದಗಳಾಗಿರುವುದರಿಂದ ಈ ಎರಡು ಶಬ್ದಗಳಿಗೂ ರಾಯಃ-ಧನವನ್ನು, ಪೋಷಃ-ಪುಷ್ಟಿಯನ್ನು ಎಂದು ಪ್ರತ್ಯೇಕವಾಗಿ ಅರ್ಥಮಾಡಬಹುದು.

**ದಿವ್ಯಃ ಅನ್ಯಃ ಉಚ್ಚಾ ಸದನಂ ಚಕ್ರೇ-ತಯೋರೇಕಃ ಪೂಷಾ ಉಚ್ಛ್ರಿತೇ ದ್ಯುಲೋಕೇ ಸ್ಥಾನಂ ಚಕಾರ |** ಸೋಮಾಪೂಷಣರೆಂಬ ಈರ್ವರಲ್ಲಿ ಒಬ್ಬನಾದ ಪೂಷಣನು ಅತ್ಯುನ್ನತಪ್ರದೇಶವಾದ ಸ್ವರ್ಗಲೋಕದಲ್ಲಿ ತನ್ನ ನಿವಾಸಸ್ಥಾನವನ್ನು ಕಲ್ಪಿಸಿಕೊಂಡಿರುವನು.

**ಅನ್ಯಃ ಪೃಥಿವ್ಯಾಂ ಅಧಿ ಅಂತರಿಕ್ಷೇ—ಅಪರಃ ಸೋಮಃ ಪೃಥಿವ್ಯಾಂ ಓಷಧಿರೂಪೇಣ ಅಂತರಿಕ್ಷೇ ಚ ಚಂದ್ರರೂಪೇಣ ಸದನಂ ಚಕ್ರೇ |** ಮತ್ತೊಬ್ಬನಾದ ಸೋಮದೇವತೆಯು ಪೃಥಿವಿಯಲ್ಲಿಯೂ, ಅಂತರಿಕ್ಷದಲ್ಲಿಯೂ ನಿವಾಸಸ್ಥಾನವನ್ನು ಕಲ್ಪಿಸಿಕೊಂಡಿರುವನು; ಪೃಥಿವಿಯಲ್ಲಿ ಓಷಧಿರೂಪದಿಂದ ಎಂದರೆ ಸೋಮಲತೆಯ ರೂಪದಿಂದಲೂ ಅಂತರಿಕ್ಷದಲ್ಲಿ ಚಂದ್ರನ ರೂಪದಿಂದಲೂ ಇರುವನು ಎಂದಭಿಪ್ರಾಯವು.

ಇಲ್ಲಿ ಒಂದು ವಿಷಯವು ವಿಮರ್ಶಾರ್ಹವಾಗಿದೆ. ಸೋಮದೇವತೆಯು ಚಂದ್ರ ರೂಪದಿಂದ ಅಂತರಿಕ್ಷದಲ್ಲಿ ನೆಲಸಿರುವನು ಎಂಬ ವಿಷಯವು ಭಿನ್ನಾಭಿಪ್ರಾಯಕ್ಕೆ ಎಡೆಗೊಡುವುದಾಗಿದೆ. ಸೋಮಶಬ್ದವು ಚಂದ್ರನೆಂಬ ಅರ್ಥದಲ್ಲಿ ಋಗ್ವೇದದಲ್ಲೆಲ್ಲಿಯೂ ಪ್ರಯುಕ್ತವಾಗಿಲ್ಲ. ಸೋಮವೆಂದರೆ ಸೋಮಲತೆಯು, ಸೋಮರಸವು ಅಥವಾ ಸೋಮಲತೆಯ ಅಭಿಮಾನಿಯಾದ ದೇವನು ಎಂಬರ್ಥಗಳಲ್ಲಿಯೇ ಈ ಶಬ್ದದ ಪ್ರಯೋಗವಿರುವುದು. ಯಜುರ್ವೇದದಲ್ಲಿಯೂ. ಪುರಾಣಾದಿಗಳಲ್ಲಿಯೂ ಸೋಮಶಬ್ದಕ್ಕೆ ಸೋಮರಸವೆಂಬರ್ಥವಲ್ಲದೆ ಚಂದ್ರನೆಂದೂ, ಈಶ್ವರ ಅಥವಾ ರುದ್ರನೆಂದೂ, (ಉಮಯಾ ಸಹಿತಃ ಸೋಮಃ) ಅರ್ಥ ಹೇಳುವ ರೂಢಿಯಿದೆ. ಸೋಮ ಓಷಧೀನಾಮಧಿಪತಿಃ ಎಂಬ ಶ್ರುತಿವಾಕ್ಯಕ್ಕೆ ಸೋಮಲತೆಯು ಓಷಧಿ ವನಸ್ಪತಿಗಳಿಗೆ ಅಧಿಪತಿ ಅಥವಾ ರಾಜನೆಂದು ಅರ್ಥಮಾಡುವುದು ಯುಕ್ತವಾಗಿರುವುದು. ಪುರಾಣಾದಿಗಳಲ್ಲಿ ಇದಕ್ಕೆ ಚಂದ್ರನು ಅಧಿಪತಿಯು ಎಂಬ ಅರ್ಥವನ್ನು ವಿವರಿಸಲಾಗಿದೆ. ಯಜುರ್ವೇದದಲ್ಲಿ—

**ಸೋಮಾಭೂಯೋ ಭರೇತ್ಯಾಹಾಪರಿಮಿತಾನೇವ ಪಶೂನವರುಂಧೇ ಚಂದ್ರಮಸಿ ಮಮ ಭೋಗಾಯ ಭವೇತ್ಯಾಹ |**

(ತೈ. ಸಂ. ೬-೧-೪-೮)

ಎಂಬ ವಾಕ್ಯದಲ್ಲಿ ಸೋಮನನ್ನು ಚಂದ್ರರೂಪದಲ್ಲಿದ್ದೀಯೆ ಎಂದು ಸಂಬೋಧನೆ ಮಾಡಲಾಗಿದೆ. ಸೋಮಶಬ್ದಕ್ಕೆ ರುದ್ರನೆಂಬ ಅರ್ಥದಲ್ಲಿಯೂ ಸಹ—

**ನಮಃ ಸೋಮಾಯ ಚ ರುದ್ರಾಯ ಚ ।** (ತೈ. ಸಂ. ೪-೫-೮-೧)

ಇತ್ಯಾದ್ಯನೇಕ ವಾಕ್ಯಗಳನ್ನು ಯಜುರ್ವೇದಾದಿಗಳಲ್ಲಿ ಉದಾಹರಿಸಬಹುದು. ಆದರೆ ಋಗ್ವೇದದಲ್ಲಿ ಮಾತ್ರ ಸೋಮ ಶಬ್ದಕ್ಕೆ ಸೋಮಲತೆ ಅಥವಾ ಅದರ ಅಭಿಮಾನಿಯಾದ ಸೋಮದೇವತೆಯೆಂದೇ ಅರ್ಥವು. **ಯಾ ಓಷಧೀ ಸೋಮರಾಜ್ಞೀಃ** (ಋ. ಸಂ. ೧೦-೯೭-೧೮, ೧೯) **ಓಷಧಯಃ ಸಂ ವದಂತೇ ಸೋಮೇನ ಸಹ ರಾಜ್ಞಾ ।** (೧೦-೯೭-೨೨) ಇತ್ಯಾದಿ ಋಕ್ಕುಗಳಲ್ಲಿಯೂ ಸೋಮಲತೆಯು ಅಥವಾ ಅದರ ಅಭಿಮಾನಿದೇವತೆಯಾದ ಸೋಮನು ಓಷಧಿವನಸ್ಪತಿಗಳಿಗೆ ರಾಜನು ಅಥವಾ ಅಧಿಪತಿಯು ಎಂದು ಸ್ಪಷ್ಟವಾಗಿಯೇ ಹೇಳಿದೆ. ಆದುದರಿಂದ ಪುರಾಣಾದಿಗಳಲ್ಲಿ ಹೇಳಿರುವಂತೆ ಸೋಮಶಬ್ದಕ್ಕೆ ಚಂದ್ರನೆಂದು ಇಲ್ಲಿ ಅರ್ಥಮಾಡುವುದು ಅಷ್ಟು ಸಮಂಜಸವಾಗಿಲ್ಲ.

ಇದಲ್ಲದೆ **ದಿವ್ಯಃ ಅನ್ಯಃ ಸದನಂ ಚಕ್ರೇ ಉಚ್ಚಾ** ಎಂಬ ವಾಕ್ಯಕ್ಕೆ ಬೇರೆವಿಧವಾಗಿಯೂ ಅರ್ಥಮಾಡ ಬಹುದು. ಎಂದರೆ ಇಲ್ಲಿ ಅನ್ಯಃ ಎಂಬ ಶಬ್ದಕ್ಕೆ ಸೋಮಪೂಷಣರಲ್ಲಿ ಒಬ್ಬನಾದ ಪೂಷನ್ ಎಂಬ ದೇವತೆಯು ಎಂದು ಭಾಷ್ಯಕಾರರು ಹೇಳಿದಾರೆ. ಆದರೆ ಅನ್ಯಃ ಎಂಬ ಶಬ್ದಕ್ಕೆ ಸೋಮಪೂಷರಲ್ಲಿ ಒಬ್ಬನಾದ ಸೋಮನೆಂಬ ದೇವತೆಯು ಎಂದು ಅರ್ಥವನ್ನು ಹೇಳಬಹುದು. ಆ ಸಂದರ್ಭದಲ್ಲಿ ಸೋಮಾಪೂಷಣರಲ್ಲಿ ಒಬ್ಬನಾದ ಸೋಮನು ಅತ್ಯುನ್ನತವಾದ ಸ್ವರ್ಗಲೋಕದಲ್ಲಿ ತನ್ನ ನಿವಾಸಸ್ಥಾನವನ್ನು ಮಾಡಿಕೊಂಡಿರುವನು ಎಂದು ಅರ್ಥವನ್ನು ಹೇಳಬಹು ದಾಗಿದೆ. ಈ ವಿಷಯವನ್ನು ಸಮರ್ಥಿಸಲು **ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್** (ತೈ. ಬ್ರಾ. ೩-೨-೧-೧) **ತೃತೀಯಸ್ಯಾಮಿತೋ ದಿವಿ ಸೋಮಸ್ತಮಾಹರ** (ತೈ. ಸಂ. ೬-೧-೬-೧) ಇತ್ಯಾದಿ ಅನೇಕ ಶ್ರುತಿವಾಕ್ಯಗಳ ಆಧಾರಗಳಿವೆ

ಇನ್ನು ಎರಡನೆಯ ವಾಕ್ಯವಾದ **ಪೃಥಿವ್ಯಾಂ ಅನ್ಯಃ ಅಧಿ ಅಂತರಿಕ್ಷೇ** ಎಂಬ ವಾಕ್ಯಕ್ಕೆ ಪೂಷಣನ ಪರ ವಾಗಿ ಅರ್ಥಮಾಡಬಹುದು. ಈ ಪೂಷಣನು ಪೃಥಿವಿಯಲ್ಲಿ ಪೂಷನ್ ಎಂಬ ದೇವತೆಯ ರೂಪದಲ್ಲಿದ್ದು ಜನರಿಗೆ ಕಳೆದುಹೋದ ವಸ್ತುಗಳನ್ನು ದೊರಕಿಸಿಕೊಡುವುದರಲ್ಲಿಯೂ, ದಾರಿತಪ್ಪಿದವರಿಗೆ ಮಾರ್ಗದರ್ಶಕನಾಗಿಯೂ ಸಹಾಯ ಮಾಡುವನು ಪೂಷಣನು ಆದಿತ್ಯನ ಅಥವಾ ಸೂರ್ಯನ ಅಂಶವೇ ಆಗಿರುವುದರಿಂದ ಅಥವಾ ದ್ವಾದಶಾದಿತ್ಯರಲ್ಲಿ ಒಬ್ಬನಾಗಿರುವುದರಿಂದ ಈ ದೇವನು ಅಂತರಿಕ್ಷದಲ್ಲಿ (ಸೂರ್ಯನ ಸ್ಥಾನದಲ್ಲಿ) ನೆಲಸಿರುವುದು ಸಹಜವಾಗಿಯೇ ಇದೆ. ಆದುದರಿಂದ ಈ ಪೂಷನ್ ಎಂಬ ದೇವನು ಭೂಮಿಯಲ್ಲಿಯೂ ಅಂತರಿಕ್ಷದಲ್ಲಿಯೂ ತನಗೆ ಸ್ಥಾನವನ್ನು ಕಲ್ಪಿಸಿ ಕೊಂಡಿರುವನು ಎಂದು ಈ ವಾಕ್ಯಕ್ಕೆ ಅರ್ಥಮಾಡಬಹುದಾಗಿದೆ.

**ತೌ ಅಸ್ಮೇ ನಾಭಿಂ ಪುರುವಾರಂ ಪುರುಕ್ಷುಂ ರಾಯಃ ಪೋಷಂ ಅಸ್ಮಭ್ಯಂ ವಿ ಷ್ಯತಾಂ—ಹೇ ಸೋಮಾಪೂಷಣೌ ಯುವಾಂ ಬಹುಭಿರ್ವರಣೀಯಂ ಬಹುಕೀರ್ತಿಂ ಧನಸ್ಯ ಪುಷ್ಟಿಂ ವಿಶ್ವಸ್ಯ ಭೋಗಸ್ಯ ನಾಭಿಂ ಹೇತುಭೂತಂ ಅಸ್ಮಭ್ಯಂ ಪ್ರಯಚ್ಛತಾಂ ॥** ಎಲೈ ಸೋಮಾ ಪೂಷಣರೇ, ನೀವಿಬ್ಬರೂ, ಅನೇಕರು ಅಪೇಕ್ಷಿಸುವ ಬಹುಕೀರ್ತಿಯನ್ನೂ (ಅಥವಾ ಅನ್ನವನ್ನೂ) ಭೋಗಸಾಧನವಾದ ಧನದಪುಷ್ಟಿಯನ್ನು ಎಂದರೆ ಧನ ಬಾಹುಳ್ಯವನ್ನೂ, ಪಶುಸಂಪತ್ತನ್ನೂ, ನಮಗೆ ಕೊಡಿ ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ.



॥ ಸಂಹಿತಾಪಾಠಃ ॥

ವಿಶ್ವಾನ್ಯನ್ಯೋ ಭುವನಾ ಜಜಾನ ವಿಶ್ವಮನ್ಯೋ ಅಭಿಚಕ್ಷಾಣ ಏತಿ ।
ಸೋಮಾಪೂಷಣಾವವತಂ ಧಿಯಂ ಮೇ ಯುವಾಭ್ಯಾಂ ವಿಶ್ವಾಃ ಪೃತನಾ ಜಯೇಮ ॥ ೫ ॥

॥ ಪದಪಾಠಃ ॥

ವಿಶ್ವಾನಿ । ಅನ್ಯಃ । ಭುವನಾ । ಜಜಾನ । ವಿಶ್ವಂ । ಅನ್ಯಃ । ಅಭಿಽಚಕ್ಷಾಣಃ । ಏತಿ ।
ಸೋಮಾಪೂಷಣಾ । ಅವತಂ । ಧಿಯಂ । ಮೇ । ಯುವಾಭ್ಯಾಂ । ವಿಶ್ವಾಃ । ಪೃತನಾಃ । ಜಯೇಮ ॥೫॥

॥ ಸಾಯಣಭಾಷ್ಯಂ ॥

ಹೇ ಸೋಮಾಪೂಷಣೌ ಅನ್ಯೋ ಯುವಯೋರೇಕಃ ಸೋಮೋ ವಿಶ್ವಾನಿ ಭುವನಾ ಭುವನಾನಿ ಭೂತಜಾತಾನಿ ಜಜಾನ । ಅಜನಯತ್ । ತಥಾ ಚ ಮಂತ್ರಃ । ಸೋಮಃ ಪವತೇ ಜನಿತಾ ಮತೀನಾಂ । ಋಗ್ವೇ. ೯-೯೬-೫ । ಇತಿ । ಅನ್ಯೋಽಪರಃ ಪೂಷಾದಿತ್ಯೋ ವಿಶ್ವಮಭಿಚಕ್ಷಾಣೋಽಭಿಪಶ್ಯನ್ನೇತಿ । ಗಚ್ಛತಿ । ತೌ ಯುವಾಂ ಸೋಮಾಪೂಷಣೌ ಮೇ ಧಿಯಂ ಕರ್ಮ ॥ ಧೀಃ ಶಚೀತಿ ಕರ್ಮನಾಮಸು ಪಾಠಾತ್ ॥ ಅವತಂ । ರಕ್ಷತಂ । ಕಿಂಚ ವಯಂ ಯುವಾಭ್ಯಾಂ ಹೇತುಭ್ಯಾಂ ವಿಶ್ವಾಃ ಪೃತನಾಃ ಸರ್ವಾಃ ಶತ್ರುಸೇನಾ ಜಯೇಮ । ಅಭಿಭವೇಮ ॥

॥ ಪ್ರತಿಪದಾರ್ಥ ॥

(**ಸೋಮಾಪೂಷಣೌ**—ಎಲೈ ಸೋಮ ಮತ್ತು ಪೂಷದೇವತೆಗಳೇ) । **ಅನ್ಯಃ**—ನಿಮ್ಮಲ್ಲಿ ಒಬ್ಬನಾದ ಸೋಮನು । **ವಿಶ್ವಾನಿ**—ಸಮಸ್ತವಾದ । **ಭುವನಾ**—ಭೂತಜಾತಗಳನ್ನೂ । **ಜಜಾನ**—ಸೃಷ್ಟಿಸಿದನು । **ಅನ್ಯಃ**—ಇನ್ನೊಬ್ಬನಾದ ಪೂಷನು (ಆದಿತ್ಯನು) । **ವಿಶ್ವಂ**—ಜಗತ್ತನ್ನೆಲ್ಲಾ । **ಅಭಿಚಕ್ಷಾಣಃ**—ವೀಕ್ಷಿಸುತ್ತಾ । **ಏತಿ**—ಸಂಚರಿಸುತ್ತಾನೆ । **ಸೋಮಾಪೂಷಣೌ**—ಎಲೈ ಸೋಮ ಮತ್ತು ಪೂಷ ದೇವತೆಗಳೇ । **ಮೇ**—ನನ್ನ । **ಧಿಯಂ**—ಕರ್ಮವನ್ನು । **ಅವತಂ**—ರಕ್ಷಿಸಿರಿ । **ಯುವಾಭ್ಯಾಂ**—ನಿಮ್ಮ ಸಹಾಯದಿಂದ । **ವಿಶ್ವಾಃ**—ಸಮಸ್ತವಾದ । **ಪೃತನಾಃ**—ಶತ್ರುಸೇನೆಗಳನ್ನೂ । **ಜಯೇಮ**—ನಾವು ಜಯಿಸುವಂತಾಗಲಿ.

॥ ಭಾವಾರ್ಥ ॥

ಎಲೈ ಸೋಮ ಮತ್ತು ಪೂಷದೇವತೆಗಳೇ, ನಿಮ್ಮಲ್ಲಿ ಒಬ್ಬನಾದ ಸೋಮನು ಸಮಸ್ತವಾದ ಭೂತಜಾತಗಳನ್ನೂ ಸೃಷ್ಟಿಸಿದನು ಇನ್ನೊಬ್ಬನಾದ ಪೂಷನು ಜಗತ್ತನ್ನೆಲ್ಲಾ ವೀಕ್ಷಿಸುತ್ತಾ ಸಂಚರಿಸುತ್ತಾನೆ. ಎಲೈ ಸೋಮ ಮತ್ತು ಪೂಷ ದೇವತೆಗಳೇ, ನನ್ನ ಕರ್ಮವನ್ನು ರಕ್ಷಿಸಿರಿ. ನಿಮ್ಮ ಸಹಾಯದಿಂದ ಸಮಸ್ತವಾದ ಶತ್ರುಸೇನೆಗಳನ್ನೂ ನಾವು ಜಯಿಸುವಂತಾಗಲಿ.

## English Translation.

One of you, (Soma), has generated all beings: the other proceeds looking upon the universe: Soma and Pushan, protect my (pious) rite: through you, may we overcome all the hosts of our enemies.

॥ ವಿಶೇಷವಿಷಯಗಳು ॥

**ಸೋಮಾಪೂಷಣಾ ಅನ್ಯಃ ವಿಶ್ವಾನಿ ಭುವನಾನಿ ಜಜಾನ—ಹೇ ಸೋಮಾಪೂಷಣಾ ಯುವಯೋ-ರೇಕಃ ವಿಶ್ವಾನಿ ಭುವನಾನಿ ಭೂತಾನಿ ಅಜನಯತ್** । ಎಲೈ ಸೋಮ ಮತ್ತು ಪೂಷನ್ ಎಂಬ ದೇವತೆಗಳೇ ನಿಮ್ಮಲ್ಲಿ ಒಬ್ಬನಾದ ಸೋಮದೇವತೆಯು ಸಮಸ್ತ ಲೋಕಗಳನ್ನು ಅಥವಾ ಸಮಸ್ತ ಭೂತಜಾತಗಳನ್ನು (ಪ್ರಾಣಿಗಳನ್ನು) ಸೃಷ್ಟಿಸಿದನು. ಈ ವಿಷಯದಲ್ಲಿ—

**ಸೋಮಃ ಪವತೇ ಜನಿತಾ ಮತೀನಾಂ ಜನಿತಾ ದಿವೋ ಜನಿತಾ ಪೃಥಿವ್ಯಾಃ ।**
**ಜನಿತಾಗ್ನೇರ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತ ವಿಷ್ಣೋಃ ॥**
(ಋ. ಸಂ. ೯–೯೬–೫)

ಎಂಬ ಋಕ್ಕಿನಲ್ಲಿ ಸೋಮದೇವತೆಯು ಎಲ್ಲವನ್ನೂ ಪವಿತ್ರಗೊಳಿಸುತ್ತಾನೆ. ಅವನು ನಮ್ಮೆಲ್ಲರ ಬುದ್ಧಿಗಳನ್ನು ಪ್ರೇರಿಸುವವನು ಅಥವಾ ಮಂತ್ರಗಳಿಗೆ ಕರ್ತೃವು; ದ್ಯುಲೋಕವನ್ನು (ಸ್ವರ್ಗವನ್ನು) ಭೂಮಿಯನ್ನೂ ಅವನೇ ಸೃಷ್ಟಿಸಿದನು; ಅವನೇ ಅಗ್ನಿ, ಸೂರ್ಯ, ಇಂದ್ರ, ವಿಷ್ಣು ಎಂಬ ದೇವತೆಗಳನ್ನು ಉತ್ಪತ್ತಿಮಾಡಿದನು ಎಂದು ಹೇಳಿದೆ.

**ವಿಶ್ವಂ ಅನ್ಯಃ ಅಭಿಚಕ್ಷಾಣಃ ಏತಿ—ಅಪರಃ ಪೂಷಾ ಆದಿತ್ಯಃ ವಿಶ್ವಂ ಅಭಿಪಶ್ಯನ್ ಗಚ್ಛತಿ ।** ನಿಮ್ಮಲ್ಲಿ ಇನ್ನೊಬ್ಬನಾದ ಪೂಷನೆಂಬುವನು ಆದಿತ್ಯರೂಪದಿಂದದ್ದು ಸಮಸ್ತವಿಶ್ವವನ್ನೂ ಯಾವಾಗಲೂ ನೋಡುತ್ತಾ ಸಂಚರಿಸುತ್ತಾನೆ. **ಆ ದೇವೋ ಯಾತಿ ಭುವನಾನಿ ಪಶ್ಯನ್** (ಋ. ಸಂ. ೧–೩೫–೨) ಎಂಬ ವಾಕ್ಯದಂತೆ ಸವಿತೃರೂಪಿಯಾದ ಆದಿತ್ಯನು ಯಾವಾಗಲೂ ಸಮಸ್ತಭೂತಜಾತಗಳನ್ನು ಸಮಸ್ತ ಲೋಕಗಳನ್ನೂ ನೋಡುತ್ತಾ ಸಂಚಾರ ಮಾಡುತ್ತಾನೆ, ಇವನ ದೃಷ್ಟಿಗೆ ಬೀಳದಿರುವ ವಸ್ತುವಿಲ್ಲ. ಎಂದೂ ಹೇಳಿದೆ.

**ಮೇ ಧಿಯಂ ಅವತಂ—ಮೇ ಕರ್ಮ ಅವತಂ ।** ಧೀಃ ಎಂಬ ಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ ಧಿಯಂ ಎಂದರೆ ಕರ್ಮವನ್ನು ಎಂದರ್ಥವು (ನಿ. ೩–೧) ಎಲೈ ಸೋಮಾಪೂಷಣರೇ, ನೀವಿಬ್ಬರೂ ನನ್ನ ಕರ್ಮವನ್ನು ಎಂದರೆ ನಾನು ಈಗ ನೆರವೇರಿಸುತ್ತಿರುವ ಯಜ್ಞಕರ್ಮವನ್ನು ಸಾಂಗವಾಗಿ ಸಮಾಪ್ತವಾಗುವಂತೆ ರಕ್ಷಿಸಿರಿ ಎಂದರ್ಥವು.

**ಯುವಭ್ಯಾಂ ವಿಶ್ವಾಃ ಪೃತನಾಃ ಜಯೇಮ—ಪೃತನಾಃ** ಎಂಬ ಶಬ್ದವು ಸಂಗ್ರಾಮ ನಾಮಗಳಲ್ಲಿ ಪಠಿತವಾಗಿದೆ. (ನಿ. ೩–೯) ಎಲೈ ಸೋಮಾಪೂಷಣರೆಂಬ ದೇವತೆಗಳೇ, ನಿಮ್ಮ ದೆಶೆಯಿಂದ ಎಂದರೆ ನಿಮ್ಮ ಸಹಾಯದಿಂದ ನಾವು ಯುದ್ಧದಲ್ಲಿ ಸಮಸ್ತ ಶತ್ರುಸೇನೆಗಳನ್ನೂ ಜಯಿಸುವಂತಾಗಲಿ ಎಂದು ಪ್ರಾರ್ಥಿಸಲಾಗಿದೆ.

॥ ಸಂಹಿತಾಪಾಠಃ ॥

ಧಿಯಂ ಪೂಷಾ ಜಿನ್ವತು ವಿಶ್ವಮಿನ್ವೋ ರಯಿಂ ಸೋಮೋ ರಯಿಪತಿರ್ದಧಾತು ।
ಅವತು ದೇವ್ಯದಿತಿರನರ್ವಾ ಬೃಹದ್ವದೇಮ ವಿದಥೇ ಸುವೀರಾಃ ॥ ೬ ॥

॥ ಪದಪಾಠಃ ॥

ಧಿಯಂ । ಪೂಷಾ । ಜಿನ್ವತು । ವಿಶ್ವಂಽಇನ್ವಃ । ರಯಿಂ । ಸೋಮಃ । ರಯಿಽಪತಿಃ । ದಧಾತು ।
ಅವತು । ದೇವೀ । ಅದಿತಿಃ । ಅನರ್ವಾ । ಬೃಹತ್ । ವದೇಮ । ವಿದಥೇ । ಸುಽವೀರಾಃ ॥ ೬ ॥

॥ ಸಾಯಣಭಾಷ್ಯಂ ॥

ಪೂಷಾದಿಶ್ಯೋ ವಿಶ್ವಮಿನ್ವೋ ವಿಶ್ವಸ್ಯ ಪ್ರೀಣಯಿತಾ ಧಿಯಮಸ್ಮಾಕಂ ಕರ್ಮ ಜಿನ್ವತು । ತರ್ಪಯತು । ರಯಿಪತಿರ್ಧನಪತಿಃ ಸೋಮೋ ರಯಿಂ ಧನಂ ದಧಾತು । ಅಸ್ಮಭ್ಯಂ ದದಾತು । ಕಿಂಚ ದೇವೀ ದ್ಯೋತಮಾನಾನರ್ವಾಪ್ರತ್ಯೃತಾ ಕೇನಾಪಿ ಪ್ರಾತಿಕೂಲ್ಯಮಪ್ರಾಪಿತಾದಿತಿರವತು । ಅಸ್ಮಾನ್ ರಕ್ಷತು । ಅನ್ಯತ್ ಸಿದ್ಧಂ ॥

॥ ಪ್ರತಿಪದಾರ್ಥ ॥

**ವಿಶ್ವಮಿನ್ವಃ**—ಜಗತ್ಪೋಷಕನಾದ । **ಪೂಷಾ**—ಪೂಷದೇವನು (ಆದಿತ್ಯನು) । **ಧಿಯಂ**—ನಮ್ಮ ಕರ್ಮವನ್ನು । **ಜಿನ್ವತು**—ಪೂರ್ಣಗೊಳಿಸಲಿ । **ರಯಿಪತಿಃ**—ಧನಪತಿಯಾದ । **ಸೋಮಃ**—ಸೋಮ ದೇವನು । **ರಯಿಂ**—ಧನವನ್ನು । **ದಧಾತು**—ನಮಗೆ ಕೊಡಲಿ । **ದೇವೀ**—ದೇವತಾತ್ಮಳೂ । **ಅನರ್ವಾ**—ಪ್ರತಿಕೂಲರಹಿತಳೂ ಆದ । **ಅದಿತಿಃ**—ಅದಿತಿಯು । **ಅವತು**—(ನಮ್ಮನ್ನು) ರಕ್ಷಿಸಲಿ । **ಸುವೀರಾಃ**—ಶ್ರೇಷ್ಠರಾದ ಪುತ್ರರಿಂದೊಡಗೂಡಿ । **ವಿದಥೇ**—ಯಜ್ಞಗೃಹದಲ್ಲಿ । **ಬೃಹತ್**—ಪ್ರಭೂತವಾದ ಸ್ತೋತ್ರವನ್ನು । **ವದೇಮ**—ಪಠಿಸುವೆವು.

॥ ಭಾವಾರ್ಥ ॥

ಜಗತ್ಪೋಷಕನಾದ ಪೂಷದೇವನು ನಮ್ಮ ಕರ್ಮವನ್ನು ಪೂರ್ಣಗೊಳಿಸಲಿ. ಧನಪತಿಯಾದ ಸೋಮ ದೇವನು ನಮಗೆ ಧನವನ್ನು ಕೊಡಲಿ. ದೇವತಾತ್ಮಳೂ, ಪ್ರತಿಕೂಲರಹಿತಳೂ ಆದ ಅದಿತಿಯು ನಮ್ಮನ್ನು ರಕ್ಷಿಸಲಿ ನಾವು ಶ್ರೇಷ್ಠವಾದ ಪುತ್ರರಿಂದೊಡಗೂಡಿ ಯಜ್ಞಗೃಹದಲ್ಲಿ ಪ್ರಭೂತವಾದ ಸ್ತುತಿಯನ್ನು ಪಠಿಸುವೆವು.

English Translation.

May Pushan, who is the benefactor of all, be propitious to (this pious) rite; may Soma, the lord of wealth, grant us affluence; may Aditi, who is without an adversary, protect us so that, blessed with excellent descendants, we may worthily glorify (you) at this sacrifice.

‖ ವಿಶೇಷವಿಷಯಗಳು ‖

**ವಿಶ್ವಮಿನ್ವಃ ಪೂಷಾ ಧಿಯಂ ಜಿನ್ವತು—ವಿಶ್ವಸ್ಯ ಪ್ರೀಣಯಿತಾ ಆದಿತ್ಯಃ ಅಸ್ಮಾಕಂ ಕರ್ಮ ತರ್ಪಯತು ।** ಸಮಸ್ತವನ್ನೂ ಸಂತೋಷಗೊಳಿಸುವ ಸ್ವಭಾವವುಳ್ಳ ಆದಿತ್ಯರೂಪಿಯಾದ ಪೂಷಣನು ನಮ್ಮ ಯಜ್ಞ ಕರ್ಮವನ್ನು ಪೂರ್ಣವಾಗುವಂತೆ ನೆರವೇರಿಸಲಿ.

**ರಯಿಪತಿಃ ಸೋಮಃ ರಯಿಂ ದಧಾತು—ಧನಪತಿಃ ಸೋಮಃ ಅಸ್ಮಭ್ಯಂ ಧನಂ ದದಾತು—** ಧನಗಳಿಗೆ ಅಧಿಪತಿಯಾದ ಸೋಮದೇವನು ನಮಗೆ ಧನವನ್ನು ಕೊಡಲಿ.

**ದೇವೀ ಅನರ್ವಾ ಅದಿತಿಃ ಅವತು—ದ್ಯೋತಮಾನಾ ಅಪ್ರತ್ಯೃತಾ ಕೇನಾಪಿ ಪ್ರಾತಿಕೂಲ್ಯಮ ಪ್ರಾಪಿತಾ ಅದಿತಿಃ ಅಸ್ಮಾನ್ ರಕ್ಷತು—** ಪ್ರಕಾಶಮಾನಳೂ, ಯಾರಿಗೂ ಕೇಡನ್ನು ಮಾಡದಿರುವವಳೂ, ದೇವ ಮಾತೆಯೂ ಆದ ಅದಿತಿಯು ನಮ್ಮನ್ನು ರಕ್ಷಿಸಲಿ.

**ಸುವೀರಾಃ ವಿದಥೇ ಬೃಹತ್ ವದೇಮ—**ಶ್ರೇಷ್ಠರೂ ಪರಾಕ್ರಮಶಾಲಿಗಳೂ ಆದ ಪುತ್ರಪೌತ್ರಸಹಿತ ರಾಗಿ ನಾವು ಈ ಯಜ್ಞದಲ್ಲಿ ನಿಮ್ಮ ವಿಷಯದಲ್ಲಿ ಪ್ರಭೂತವಾದ ಸ್ತೋತ್ರವನ್ನು ಪಠಿಸುವೆವು ಎಂದು ಮುಖ್ಯಾಭಿ ಪ್ರಾಯವು.



# ನಲವತ್ತೊಂದನೆಯ ಸೂಕ್ತವು.

**ವಾಯೋ ಯೇ ತ ಇತ್ಯೇಕವಿಂಶತ್ಯೃಚಂ ನವಮಂ ಸೂಕ್ತಂ ಗಾರ್ತ್ಸಮದಂ ಗಾಯತ್ರಂ । ಅಂಬಿತಮ ಇತಿ ಷಷ್ಠಸ್ಯ ತೃಚಸ್ಯಾದಿತೋ ದ್ವೇ ಅನುಷ್ಟುಭೌ ತೃತೀಯಾ ಬೃಹತೀ । ವಾಯೋ ಯೇ ತ ಇತ್ಯಾದಿಕೇ ದ್ವೇ ಋಚೌ ವಾಯವ್ಯೌ । ಶುಕ್ರಸ್ಯಾದ್ಯೇತ್ಯೇಷೈಂದ್ರವಾಯವೀ । ಅಯಂ ವಾ ಮಿತ್ರಾವ- ರುಣೇತಿ ಪಂಚಾನಾಂ ಮಿತ್ರಾವರುಣಾವಶ್ವಿನಾವಿಂದ್ರೋ ವಿಶ್ವೇ ದೇವಾಃ ಸರಸ್ವತೀತಿ ಕ್ರಮೇಣ ದೇವತಾಃ । ಪ್ರೇತಾಂ ಯಜ್ಞಸ್ಯೇತ್ಯಂತ್ಯಸ್ತೃಚೋ ಬ್ರಾಹ್ಮಣಸೂತ್ರಯೋರ್ಹವಿರ್ಧಾನಪ್ರವರ್ತನೇ ದ್ಯಾವಾಪೃಥಿವ್ಯನಿವಿದ್ಧಾನತ್ವೇನ ಚ ವಿನಿಯುಕ್ತತ್ವಾತ್ ದ್ಯಾವಾಪೃಥಿವ್ಯೋ ಹವಿರ್ಧಾನದೇವತ್ಯೋ ವಾ । ಅಗ್ನಿಂ ಚ ಹವ್ಯವಾಹನಮಿತಿ ಪಾದೋಽಗ್ನಿದೇವತ್ಯೋ ವಾ । ತಥಾ ಚಾನುಕ್ರಾಂತಂ । ವಾಯೋ ಸೈಕಾ ಗಾಯತ್ರಮುಕ್ತ್ವಾ ದೇವತಾಃ ಪ್ರಉಗೇಣಾದ್ಯೇ ತು ತೃಚೇಽತ್ಯೈಂದ್ರವಾಯವೀ ದ್ಯಾವಾಪೃಥಿವ್ಯೋಽಂತ್ಯಸ್ತೃಚೋ ಹಾವಿರ್ಧಾನೋ ವಾ ತೃತೀಯಃ ಪಾದೋ ವಾಗ್ನೇಯೋಽಂ- ಬಿತಮೇಽನುಷ್ಟುಭೌ ಬೃಹತೀ ಚೇತಿ ॥ ಪೃಷ್ಠ್ಯಾಭಿಪ್ಲವಷಡಹಯೋರ್ದ್ವಿತೀಯೇಽಹನಿ ಪ್ರಉ- ಗೇಽಂತ್ಯತೃಚವರ್ಜಮೇತತ್ಸೂಕ್ತಂ । ವಾಯವ್ಯತೃಚಸ್ಯ ವಾಯೋ ಯೇ ತೇ ಸಹಸ್ರಿಣ ಇತ್ಯಾದ್ಯೇ ದ್ವೇ ಋಚೌ ಐಂದ್ರವಾಯವತೃಚಸ್ಯ ಶುಕ್ರಸ್ಯಾದ್ಯೇತ್ಯೇಷಾ ತೃತೀಯಾ। ತಥಾಚ ಸೂತ್ರಿತಂ । ವಾಯೋ ಯೇ ತೇ ಸಹಸ್ರಿಣ ಇತಿ ದ್ವೇ ತೀವ್ರಾಃ ಸೋಮಾಸ ಆ ಗಹೀತ್ಯೇಕೋಭಾ ದೇವಾ ದಿವಿಸ್ಪೃಶೇತಿ ದ್ವೇ**

ಶುಕ್ರಸ್ಯಾದ್ಯ ಗವಾಶಿರ ಇತ್ಯೇಕಾಯಂ ವಾಂ ಮಿತ್ರಾವರುಣೇತಿ ಪಂಚ ತೃಚಾಃ । ಆ. ೭-೬ । ಇತಿ ॥ ಚಾತುರ್ವಿಂಶಿಕೇಽಹನಿ ಪ್ರಾತಃಸವನೇ ಮೈತ್ರಾವರುಣಶಸ್ತ್ರೇಽಯಂ ವಾಂ ಮಿತ್ರಾವರುಣೇತಿ ಷಳಹ-ಸ್ತೋತ್ರಿಯಸಂಜ್ಞಕಃ । ಚತುರ್ವಿಂಶೇ ಹೋತ್ರಾಜನಿಷ್ವೇತಿ ಖಂಡೇ ಸೂತ್ರಿತಂ । ಅಯಂ ವಾ ಮಿತ್ರಾವರುಣಾ ಪುರೂರುಣಾ ಚಿದ್ಧ್ಯಸ್ತಿ । ಆ. ೭-೨ । ಇತಿ ॥ ಅಭಿಪ್ಲವಿಕೇಷ್ವಹಃಸು ಪ್ರಾತಃಸವನೇ ಮೈತ್ರಾ-ವರುಣಶಸ್ತ್ರೇಽಯಮೇವ ತೃಚಃ ಪಂಚದಶಾದಿಸ್ತೋಮನಿಮಿತ್ತಮಾವಾಪನೀಯಃ । ಅಯಂ ವಾಂ ಮಿತ್ರಾವರುಣಾ ನೋ ಮಿತ್ರಾವರುಣೇತಿ ತೃಚಾಃ । ಆ. ೭-೫ । ಇತಿ ಸೂತ್ರಿತತ್ವಾತ್ ॥ ಆದ್ಯಾ ಮೈತ್ರಾ-ವರುಣಗ್ರಹಸ್ಯಾನುವಾಕ್ಯಾ । ಸೂತ್ರಿತಂ ಚ । ಮೈತ್ರಾವರುಣಸ್ಯ ಅಯಂ ವಾಂ ಮಿತ್ರಾವರುಣಾ । ಆ. ೫-೫ । ಇತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ಗಾಯತ್ರೇ ಛಂದಸಿ ಗೋಮದೂ ಷ್ವಿತಿ ತೃಚೋ ವಿನಿಯುಕ್ತಃ । ಗೋಮದೂ ಷು ನಾಸತ್ಯೇತಿ ತೃಚಾಃ । ಆ. ೪-೧೫ । ಇತಿ ಸೂತ್ರಿತತ್ವಾತ್ ॥ ಅತಿರಾತ್ರೇ ಪ್ರಥಮೇ ಪರ್ಯಾಯೇ ಬ್ರಾಹ್ಮಣಾಚ್ಛಂಸಿಶಸ್ತ್ರ ಇಂದ್ರೋ ಅಂಗ ಮಹದ್ಭಯಮಿತಿ ತೃಚಃ । ಅತಿರಾತ್ರೇ ಪರ್ಯಾಯಾಣಾಮಿತಿ ಖಂಡೇ ಸೂತ್ರಿತಂ । ಇಂದ್ರೋ ಅಂಗ ಮಹದ್ಭಯಮಭಿ ನ್ಯೂ ಷು ವಾಚಂ । ಆ. ೬-೪ । ಇತಿ ॥ ಆಗ್ರಯಣೇ ವೈಶ್ವದೇವಸ್ಯ ಹವಿಷೋ ವಿಶ್ವೇ ದೇವಾಸ ಇತ್ಯನುವಾಕ್ಯಾ । ಆಗ್ರಯ-ಣಮಿತಿ ಖಂಡೇ ಸೂತ್ರಿತಂ । ವಿಶ್ವೇ ದೇವಾಸ ಆ ಗತ ಯೇ ಕೇ ಚ ಜ್ಮಾ ಮಹಿನೋ ಅಹಿಮಾಯಾಃ । ಆ. ೨-೯ । ಇತಿ ॥ ದಶರಾತ್ರೇ ಪ್ರಥಮೇಽಹನಿ ಪ್ರಉಗಶಸ್ತ್ರೇಂಽಬಿತಮೇ ನದೀತಮ ಇತಿ ಸಾರಸ್ವತಃ ಸಪ್ತಮಸ್ತೃಚಃ । ಚತುರ್ಥೇಽಹನೀತಿ ಖಂಡೇ ಸೂತ್ರಿತಂ । ಅಬಿಂತಮೇ ನದೀತಮ ಇತ್ಯಾನುಷ್ಟುಭಂ ಪ್ರಉಗಂ । ಆ. ೭-೧೧ । ಇತಿ ॥ ವ್ಯೂಢೇ ದಶರಾತ್ರೇ ಪ್ರಥಮೇ ಛಂದೋಮೇ ವೈಶ್ವದೇವಶಸ್ತ್ರೇ ಪ್ರೇತಾಂ ಯಜ್ಞಸ್ಯ ಶಂಭುವೇತಿ ದ್ಯಾವಾಪೃಥಿವ್ಯನಿವಿದ್ಧಾನೀಯಸ್ತೃಚಃ । ಅಥ ಛಂದೋಮಾ ಇತಿ ಖಂಡೇ ಸೂತ್ರಿತಂ । ಪ್ರೇತಾಂ ಯಜ್ಞಸ್ಯ ಶಂಭುವಾಯುಂ ದೇವಾಯು ಜನ್ಮನ ಇತಿ ತೃಚಾಃ । ಆ. ೮-೯। ಇತಿ ॥ ಹವಿರ್ಧಾನಪ್ರವರ್ತನೇಽಪ್ಯಯಂ ತೃಚೋ ವಿನಿಯುಕ್ತಃ । ಸೂತ್ರಿತಂ ಚ । ಪ್ರೇತಾಂ ಯಜ್ಞಸ್ಯ ಶಂಭುವಾ ಯುವೋ ಇವ ಯತಮಾನೇ ಯದೈತಂ । ಆ. ೪-೯. ; ಐ. ಬ್ರಾ. ೧-೨೯ । ಇತಿ ॥

ಅನುವಾದವು— **ವಾಯೋ ಯೇ ತೇ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಇಪ್ಪತ್ತೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು ; ಅಂಬಿತಮೇ ಎಂಬ ಋಕ್ಕೂ ಅದರ ಮುಂದಿನ ಋಕ್ಕೂ (ಈ ಸೂಕ್ತದ ೧೬, ೧೭ ನೇ ಋಕ್ಕುಗಳು) ಅನುಷ್ಟುಪ್ ಛಂದಸ್ಕವು ; ಅದರ ಮುಂದಿನ ಋಕ್ಕು ಎಂದರೆ ೧೮ ನೆಯ ಋಕ್ಕು ಬೃಹತೀ ಛಂದಸ್ಕವು ; ಉಳಿದ ಋಕ್ಕುಗಳು ಗಾಯತ್ರೀ ಛಂದಸ್ಕವು. ಈ ಸೂಕ್ತದಲ್ಲಿ **ವಾಯೋ ಯೇ ತೇ** ಎಂದು ಮೊದಲಾಗುವ ಎರಡು ಋಕ್ಕುಗಳು ವಾಯುದೇವತಾಕವು ; **ಶುಕ್ರಸ್ಯಾದ್ಯ** ಎಂಬ ಮೂರನೆಯ ಋಕ್ಕು ಇಂದ್ರ ವಾಯೂದೇವತಾಕವು ; ಅಲ್ಲಿಂದ ಮುಂದಕ್ಕೆ **ಅಯಂ ವಾಂ ಮಿತ್ರಾವರುಣಾ** ಎಂದು ಮೊದಲಾಗುವ ಐದು ತೃಚಗಳಿಗೆ (ತೃಚವೆಂದರೆ ಮೂರು ಋಕ್ಕುಗಳು) ಕ್ರಮವಾಗಿ **ಮಿತ್ರಾವರುಣೌ, ಅಶ್ವಿನೌ, ಇಂದ್ರಃ, ವಿಶ್ವೇ ದೇವಾಃ, ಸರಸ್ವತೀ** ಎಂಬುವರು ದೇವತೆಗಳು. ಎಂದರೆ ಈ ಸೂಕ್ತದ ೪-೬ ಋಕ್ಕುಗಳಿಗೆ ಮಿತ್ರಾವರುಣರೂ, ೭-೯ ಋಕ್ಕುಗಳಿಗೆ ಅಶ್ವಿನೀದೇವತೆಗೂ, ೧೦-೧೨ ಋಕ್ಕುಗಳಿಗೆ ಇಂದ್ರನೂ, ೧೩-೧೫ ಋಕ್ಕುಗಳಿಗೆ ವಿಶ್ವೇದೇವತೆಗಳೂ, ೧೬-೧೮ ಋಕ್ಕುಗಳಿಗೆ ಸರಸ್ವತಿಯೂ ಕ್ರಮವಾಗಿ ದೇವತೆಗಳು

**ಪ್ರೇತಾಂ ಯಜ್ಞಸ್ಯ** ಎಂದು ಮೊದಲಾಗುವ ಕೊನೆಯ ಮೂರು ಋಕ್ಕುಗಳಲ್ಲಿ ೧೯ ನೆಯ ಋಕ್ಕಾದ **ಪ್ರೇತಾಂ ಯಜ್ಞಸ್ಯ** ಎಂಬ ಋಕ್ಕಿನ ಮೂರನೇ ಪಾದವನ್ನು ಬಿಟ್ಟು ಮಿಕ್ಕ ಭಾಗಗಳಿಗೆ ಬ್ರಾಹ್ಮಣಸೂಕ್ತದಲ್ಲಿ ಹೇಳಿರುವಂತೆ ಹವಿರ್ಧಾನಮಂತ್ರಗಳಲ್ಲಿ ದ್ಯಾವಾಪೃಥಿವೀಸಂಬಂಧವಾದ ನಿವಿನ್ಮಂತ್ರಗಳಿಗಾಗಿ ವಿನಿಯೋಗವಿರುವುದರಿಂದ ದ್ಯಾವಾ ಪೃಥಿವೀ ಅಥವಾ ಹವಿರ್ಧಾನ ಎಂಬುವರೇ ದೇವತೆಗಳು. ಹತ್ತೊಂಭತ್ತನೆಯ ಋಕ್ಕಿನ ಮೂರನೇ ಪಾದವಾದ **ಅಗ್ನಿಂ ಚ ಹವ್ಯವಾಹನಂ** ಎಂಬ ಪಾದಕ್ಕೆ ದ್ಯಾವಾಪೃಥಿವೀ ಹವಿರ್ಧಾನೇ ವಾಗ್ನಿರ್ವಾ ಎಂಬುವರು ದೇವತೆಗಳು. ಅನುಕ್ರಮಣಿಕೆಯಲ್ಲಿ—**ವಾಯೋ ಸೈಕಾ ಗಾಯತ್ರಮುಕ್ತಾ ದೇವತಾಃ ಪ್ರ ಉಗೇಣಾದ್ಯೇ ತು ತೃಚೇऽನ್ತ್ಯೈಂದ್ರವಾಯವೀ ದ್ಯಾವಾಪೃಥಿವ್ಯೋऽನ್ತ್ಯಸ್ತೃಚೋ ಹಾವಿರ್ಧಾನೋ ವಾ ತೃತೀಯಃ ಪಾದೋ ವಾಗ್ನೇಯೋऽಷ್ಟಿತಮೋऽನುಷ್ಟುಭೌ ಬೃಹತೀ** ಎಂದು ಹೇಳಿರುವುದು. ಪೃಷ್ಠ್ಯ ಮತ್ತು ಅಭಿಪ್ಲವಷಡಹವೆಂಬ ಯಾಗಗಳ ಆರನೆಯ ದಿವಸದಲ್ಲಿ ಪ್ರಉಗಶಸ್ತ್ರಮಂತ್ರಪಠನದಲ್ಲಿ ಈ ಸೂಕ್ತದ ಕೊನೆಯ ಮೂರು ಋಕ್ಕುಗಳನ್ನು ಬಿಟ್ಟು ಉಳಿದ ಋಕ್ಕುಗಳ ವಿನಿಯೋಗವಿರುವುದು. ವಾಯವ್ಯತೃಚಕ್ಕಾಗಿ (ವಾಯು ದೇವತಾಕವಾದ ಮೂರು ಋಕ್ಕುಗಳು) ಈ ಸೂಕ್ತದ **ವಾಯೋ ಯೇ ತೇ ಸಹಸ್ರಿಣಃ** ಎಂಬ ಋಕ್ಕೂ, ಅದರ ಮುಂದಿನ ಋಕ್ಕೂ ಒಟ್ಟು ಎರಡು ಋಕ್ಕುಗಳೂ; ಐಂದ್ರವಾಯವತೃಚದಲ್ಲಿ (ಇಂದ್ರವಾಯುದೇವತಾಕವಾದ ಮೂರು ಋಕ್ಕುಗಳು) **ಶುಕ್ರಸ್ಯಾದ್ಯ** ಎಂಬ ಋಕ್ಕನ್ನು ಮೂರನೆಯ ಋಕ್ಕನ್ನಾಗಿಯೂ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ—**ವಾಯೋ ಯೇ ತೇ ಸಹಸ್ರಿಣ ಇತಿ ದ್ವೇ ತೀವ್ರಾಃ ಸೋಮಾಸ ಆ ಗಹೀತ್ಯೇಕೋಭಾ ದೇವಾ ದಿವಿಸ್ಪೃಶೇತಿ ದ್ವೇ ಶುಕ್ರಸ್ಯಾದ್ಯ ಗವಾಶಿರ ಇತ್ಯೇಕಾಯಂ ವಾಂ ಮಿತ್ರಾವರುಣೇತಿ ಪಂಚ ತೃಚಾಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೬); ಇಪ್ಪತ್ತನಾಲ್ಕನೆಯ ದಿವಸದಲ್ಲಿ ಪ್ರಾತಸ್ಸವನಕಾಲದಲ್ಲಿ ಮೈತ್ರಾ ವರುಣ ಶಸ್ತ್ರಮಂತ್ರಗಳನ್ನು ಪಠಿಸುವಾಗ **ಅಯಂ ವಾಂ ಮಿತ್ರಾವರುಣಾ** (ಈ ಸೂಕ್ತದ ೪ ನೆಯ ಋಕ್ಕು) ಎಂಬ ಋಕ್ಕು ಷಳಹಸ್ತೋತ್ರಿಯವೆಂದು ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ — **ಚತುರ್ವಿಂಶೇ ಹೋತಾಜನಿಷ್ಟ** ಎಂಬ ಖಂಡದ **ಅಯಂ ವಾ ಮಿತ್ರಾವರುಣಾ ಪುರೂರುಣಾ ಚಿದ್ಧ್ಯಸ್ತಿ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೭-೩); ಅಭಿಪ್ಲವವೆಂಬ ಯಾಗದ ದಿವಸಗಳಲ್ಲಿಯೂ, ಪ್ರಾತಸ್ಸವನಕಾಲದಲ್ಲಿ ಮೈತ್ರಾ ವರುಣಶಸ್ತ್ರಮಂತ್ರಪಠನಮಾಡುವಾಗ ಈ ತೃಚವೇ ಎಂದರೆ **ಅಯಂ ವಾಂ** ಎಂದು ಮೊದಲಾಗುವ ಮೂರು ಋಕ್ಕುಗಳು ಪಂಚದಶಾದಿ ಸ್ತೋಮಗಳ ಆವಾಪಕ್ಕಾಗಿ (ವೃದ್ಧಿಗಾಗಿ) ಉಪಯೋಗಿಸಲ್ಪಡಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಅಯಂ ವಾಂ ಮಿತ್ರಾವರುಣಾ ನೋ ಮಿತ್ರಾವರುಣೇತಿ ತೃಚಾಃ** ಎಂಬ ಸೂತ್ರದಿಂದ ವಿವೃತ ವಾಗಿರುವುದು (ಆ. ೭-೫); ಈ ತೃಚದಲ್ಲಿ ಮೊದಲನೆಯ ಋಕ್ಕಾದ—**ಅಯಂ ವಾ ಮಿತ್ರಾವರುಣಾ** ಎಂಬ ಋಕ್ಕು ಮೈತ್ರಾವರುಣಗ್ರಹಕ್ಕೆ ಅನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಮೈತ್ರಾವರುಣಸ್ಯ ಅಯಂ ವಾಂ ಮಿತ್ರಾವರುಣಾ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೫-೫); ಮತ್ತು ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳ ಗಾಯತ್ರೀ ಛಂದಸ್ಸಿನ ಋಕ್ಕುಗಳಿಗಾಗಿ **ಗೋಮದೂ ಷು** ಎಂಬ ತೃಚದ (ಈ ಸೂಕ್ತದ ೭-೯ ಋಕ್ಕುಗಳು) ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—**ಗೋಮದೂ ಷು ನಾಸತ್ಯೇತಿ ತೃಚಾಃ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೪-೧೫); ಅತಿರಾತ್ರವೆಂಬ ಯಾಗದಲ್ಲಿ ಪ್ರಥಮಪರ್ಯಾಯದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಿಗಾಗಿ **ಇಂದ್ರೋ ಅಂಗ ಮಹದ್ಭಯಂ** ಎಂಬ ತೃಚದ (ಈ ಸೂಕ್ತದ ೧೦-೧೨ ಋಕ್ಕುಗಳು) ವಿನಿಯೋಗವಿರುವುದೆಂದು ಆಶ್ವಲಾಯನ

ಶ್ರೌತಸೂತ್ರದ **ಅತಿರಾತ್ರೇ ಪರ್ಯಾಯಾಣಾಂ** ಎಂಬ ಖಂಡದ **ಇಂದ್ರೋ ಅಂಗ ಮಹದ್ಭಯಮಭಿ ಷ್ಟಾ ಷು ವಾಚೆಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೬-೪); ಆಗ್ರಯಣದಲ್ಲಿ, ವಿಶ್ವೇದೇವತಾಕವಾದ ಹವಿಸ್ಸನ್ನು ಹೋಮಮಾಡುವಾಗ **ವಿಶ್ವೇ ದೇವಾಸಃ** ಎಂಬ ಋಕ್ಕನ್ನೂ (ಈ ಸೂಕ್ತದ ೧೩ನೇ ಋಕ್ಕು) ಅನುವಾಕಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಆಗ್ರಯಣಂ** ಎಂಬ ಖಂಡದ **ವಿಶ್ವೇ ದೇವಾಸ ಆ ಗತ ಯೇ ಕೇ ಚ ಜ್ಮಾ ಮಹಿನೋ ಅಹಿಮಾಯಾಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೨-೯); ದಶರಾತ್ರವೆಂಬ ಯಾಗದ ಮೊದಲನೆಯ ದಿವಸದಲ್ಲಿ ಪ್ರಉಗಶಸ್ತ್ರಮಂತ್ರಪಠನಮಾಡುವಾಗ **ಅಂಬಿತಮೇ ನದೀತಮೇ** ಎಂಬ ಸರಸ್ವತೀದೇವತಾಕವಾದ ತೃಚದ (ಈ ಸೂಕ್ತದ ೧೯-೧೯ ಋಕ್ಕುಗಳು) ವಿನಿಯೋಗವಿರುವುದೆಂದೂ ಆಶ್ವಲಾಯನಶ್ರೌತಸೂತ್ರದ—**ಚತುರ್ಥೇಽಹನಿ** ಎಂಬ ಖಂಡದ **ಅಂಬಿತಮೇ ನದೀತಮ ಇತ್ಯಾನುಷ್ಟುಭಂ ಪ್ರಉಗಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೭-೧೧); ವ್ಯೂಳ್ಹದಶರಾತ್ರವೆಂಬ ಯಾಗದಲ್ಲಿ ಪ್ರಥಮ ಛಂದೋಮಕಾಲದಲ್ಲಿ ವೈಶ್ವದೇವಶಸ್ತ್ರಮಂತ್ರಪಠನಕಾಲದಲ್ಲಿ **ಪ್ರೇತಾಂ ಯಜ್ಞಸ್ಯ ಶಂಭುವಾ** (ಈ ಸೂಕ್ತದ ೧೯-೨೧ ನೇ ಋಕ್ಕುಗಳು) ಎಂಬ ತೃಚವನ್ನು ದ್ಯಾವಾಪೃಥಿವೀದೇವತಾಕವಾದ ನಿವಿದ್ಧಾನೀಯ ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಥ ಛಂದೋಮಾ** ಎಂಬ ಖಂಡದ **ಪ್ರೇತಾಂ ಯಜ್ಞಸ್ಯ ಶಂಭುವಾಯುಂ ದೇವಾಯ ಜನ್ಮನ ಇತಿ ತೃಚಾಃ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೮-೯) ಮತ್ತು ಹವಿರ್ಧಾನಪ್ರವರ್ತನದಲ್ಲಿಯೂ ಈ ತೃಚದ (ಈ ಸೂಕ್ತದ ೧೮-೨೧ ನೇ ಋಕ್ಕುಗಳು) ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಪ್ರೇತಾಂ ಯಜ್ಞಸ್ಯ ಶಂಭುವಾ ಯಮೇ ಇವ ಯತಮಾನೇ ಯದೈತಂ** ಎಂಬ ಸೂತ್ರದಿಂದ ವಿವೃತವಾಗಿರುವುದು ಮತ್ತು ಐತರೇಯಬ್ರಾಹ್ಮಣದಲ್ಲಿಯೂ ಈ ವಿಷಯವು ಉಕ್ತವಾಗಿರುವುದು. (ಆ. ೪-೮ ; ಐ. ಬ್ರಾ. ೧-೨೯).

---

## ಸೂಕ್ತ—೪೧

ಮಂಡಲ—೨ ॥ ಅನುವಾಕ—೪ ॥ ಸೂಕ್ತ—೪೧ ॥

ಅಷ್ಟಕ—೨ ॥ ಅಧ್ಯಾಯ—೮ ॥ ವರ್ಗ—೭, ೮, ೯, ೧೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೧ ॥

॥ ಋಷಿಃ— ಗೃತ್ಸಮದಃ ॥

॥ ದೇವತಾ—೧, ೨. ವಾಯುಃ | ೩. ಇಂದ್ರವಾಯೂ | ೪-೬. ಮಿತ್ರಾವರುಣೌ | ೭-೯. ಅಶ್ವಿನೌ | ೧೦-೧೨. ಇಂದ್ರಃ | ೧೩-೧೫. ವಿಶ್ವೇದೇವಾಃ | ೧೬-೧೮. ಸರಸ್ವತೀ | ೧೯ ನೆಯ ಋಕ್ಕಿನಲ್ಲಿ ೧, ೨, ೪ ನೆಯ ಪಾದಗಳು, ೨೦, ೨೧. ದ್ಯಾವಾಪೃಥಿವ್ಯೌ ಹವಿರ್ಧಾನೇ ವಾ | ೧೯ ನೇ ಋಕ್ಕಿನಲ್ಲಿ ೩ ನೇ ಪಾದ. ದ್ಯಾವಾಪೃಥಿವ್ಯೌ ಹವಿರ್ಧಾನೇ ವಾಗ್ನಿರ್ವಾ ॥

॥ ಛಂದಃ—೧-೧೫, ೧೯-೨೧. ಗಾಯತ್ರೀ | ೧೬, ೧೭. ಅನುಷ್ಟುಪ್ | ೧೮. ಬೃಹತೀ ॥

॥ ಸಂಹಿತಾಪಾಠಃ ॥

ವಾಯೋ ಯೇ ತೇ ಸಹಸ್ರಿಣೋ ರಥಾಸಸ್ತೇಭಿರಾ ಗಹಿ ।

ನಿಯುತ್ವಾನ್ತ್ಸೋಮಪೀತಯೇ ॥ ೧ ॥

॥ ಪದಪಾಠಃ ॥

ವಾಯೋ ಇತಿ । ಯೇ । ತೇ । ಸಹಸ್ರಿಣಃ । ರಥಾಸಃ । ತೇಭಿಃ । ಆ । ಗಹಿ ।

ನಿಯುತ್ವಾನ್ । ಸೋಮಽಪೀತಯೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ವಾಯೋ ತೇ ತ್ವದೀಯಾ ಯೇ ಸಹಸ್ರಿಣಃ ಸಹಸ್ರಸಂಖ್ಯಾಕಾ ರಥಾಸೋ ರಥಾಃ ತೇಭಿಸ್ತೈರ್ನಿಯುತ್ವಾನ್ ನಿಯುದ್ಭಿರ್ಯುಕ್ತಸ್ತ್ವಂ ಸೋಮಪೀತಯೇ ಸೋಮಪಾನಾರ್ಥಮಾ ಗಹಿ । ಆಗಚ್ಛ। ನಾನಾರೂಪತ್ವಾದ್ವಾಯೋಃ ಸರ್ವಾಭಿರ್ವಿಭೂತಿಭಿಃ । ಸಹಾಗಮನಂ ಪ್ರಾರ್ಥ್ಯತೆ ಇತಿ ಭಾವಃ ॥

॥ ಪ್ರತಿಪದಾರ್ಥ ॥

**ವಾಯೋ**—ಎಲೈ ವಾಯುವೇ । **ತೇ**—ನಿನ್ನ । **ಯೇ**—ಯಾವ । **ಸಹಸ್ರಿಣಃ**—ಸಹಸ್ರಸಂಖ್ಯಾಕವಾದ । **ರಥಾಸಃ**—ರಥಗಳು ಇವೆಯೋ । **ತೇಭಿಃ**—ಅವುಗಳೊಡನೆ । **ನಿಯುತ್ವಾನ್**—ನಿಯುತ್ತುಗಳೆಂಬ ನಿನ್ನ ಅಶ್ವಗಳನ್ನು ಯೋಜಿಸಿರುವ ನೀನು । **ಸೋಮಪೀತಯೇ**—ಸೋಮಪಾನಾರ್ಥವಾಗಿ । **ಆ ಗಹಿ**—ಬಾ.

॥ ಭಾವಾರ್ಥ ॥

ಎಲೈ ವಾಯುವೇ, ಯಾವ ನಿನ್ನ ಸಹಸ್ರಸಂಖ್ಯಾಕವಾದ ರಥಗಳಿವೆಯೋ ಅವುಗಳೊಡನೆ ನಿಯುತ್ತುಗಳೆಂಬ ನಿನ್ನ ಅಶ್ವಗಳನ್ನು ಯೋಜಿಸಿರುವ ನೀನು ಸೋಮಪಾನಾರ್ಥವಾಗಿ ಬಾ.

English Translation.

Vayu, whose are a thousand chariots, and the Niyut steeds, come to drink the Soma juice.

॥ ವಿಶೇಷವಿಷಯಗಳು ॥

ಈ ಋಕ್ಕೂ ಮುಂದಿನ ಋಕ್ಕೂ ವಾಯುದೇವತಾಕವು; ಮೂರನೆಯ ಋಕ್ಕು ಇಂದ್ರವಾಯೂದೇವತಾಕವು. ಈ ಋಕ್ಕಿನಲ್ಲಿ ವಾಯುವಿಗೆ ಸಹಸ್ರರಥಗಳಿರುವುವೆಂದು ಹೇಳಿದೆ. ಸಾಯಣರು। ವಾಯುವಿಗೆ ನಾನಾರೂಪಗಳಿರುವುದರಿಂದ ಆ ಸಮಸ್ತರೂಪಗಳೊಡನೆಯೂ ತನ್ನ ಅನೇಕ ವಿಧವಾದ ಸಾಮರ್ಥ್ಯಾತಿಶಯಗಳೊಡನೆಯೂ ಬರಬೇಕೆಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆಯೆಂದು ಹೇಳಿದಾರೆ.

**ನಿಯುತ್ವಾನ್—ನಿಯುತ್** ಎಂಬುವುದು ವಾಯುವಿನ ವಾಹನವಾದ ಅಶ್ವಕ್ಕೆ ಹೆಸರು. ಯಾಸ್ಕರು ಈ ವಿಷಯದಲ್ಲಿ—

**ಹರೀ ಇಂದ್ರಸ್ಯ । ರೋಹಿತೋಽಗ್ನೇಃ । ಹರಿತ ಆದಿತ್ಯಸ್ಯ । ರಾಸಭಾವಶ್ವಿನೋಃ । ಅಜಾಃ ಪೂಷ್ಣಃ । ಪೃಷತ್ಯೋ ಮರುತಾಂ । ಅರುಣ್ಯೋ ಗಾವ ಉಷಸಃ । ಶ್ಯಾವಾ ಸವಿತುಃ । ವಿಶ್ವರೂಪಾ ಬೃಹಸ್ಪತೇಃ । ನಿಯುತೋ ವಾಯೋಃ ॥**

(ನಿ. ೨-೨೮)

ಎಂದು ನಿರ್ವಚನವನ್ನು ಹೇಳಿ ನಾನಾದೇವತೆಗಳ ವಾಹನಗಳ ಹೆಸರುಗಳನ್ನು ವಿವರಿಸಿದಾರೆ—ಎಂದರೆ ಇಂದ್ರನ ವಾಹನಗಳಿಗೆ **ಹರೀ** ಎಂಬ ಎರಡು ಕುದುರೆಗಳೆಂದು ಹೆಸರು; ಅಗ್ನಿಯ ವಾಹನಕ್ಕೆ **ರೋಹಿತ**ವೆಂದೂ, ಆದಿತ್ಯನ ವಾಹನಗಳಿಗೆ ಹರಿತಃ ಎಂಬ ಹಸರು ಬಣ್ಣದ ಕುದುರೆಗಳೆಂದೂ, ಅಶ್ವಿನೀದೇವತೆಗಳ ವಾಹನಗಳಿಗೆ ರಾಸಭೌ ಎಂಬ ಎರಡು ಕತ್ತೆಗಳೆಂದೂ, ಪೂಷನ್ ಎಂಬ ದೇವತೆಯ ವಾಹನಗಳಿಗೆ **ಅಜಾಃ** ಎಂಬ ಮೇಕೆಗಳೆಂದೂ, ಮರುದ್ದೇವತೆಗಳ ವಾಹನಗಳಿಗೆ **ಪೃಷತ್ಯಃ** ಎಂಬ ಹೆಸರಿನ ಚುಕ್ಕೆಗಳಿರುವ ಜಿಂಕೆಗಳೆಂದೂ, ಉಷೋದೇವತೆಯ ವಾಹನಕ್ಕೆ **ಅರುಣ್ಯೋ ಗಾವಃ** ಎಂಬ ಕೆಂಪುಬಣ್ಣದ ಗೋವುಗಳೆಂದೂ, ಸವಿತೃದೇವನ ವಾಹನಕ್ಕೆ **ಶ್ಯಾವಾ** ಎಂಬ ಮಾಸಲು ಕೆಂಪುಬಣ್ಣದ ಕುದುರೆಯೆಂದೂ, ಬೃಹಸ್ಪತಿಯ ವಾಹನಕ್ಕೆ **ವಿಶ್ವರೂಪಾ** ಎಂಬ ನಾನಾರೂಪದ ಕುದುರೆಗಳೆಂದೂ ವಾಯುವಿನ ವಾಹನಕ್ಕೆ **ನಿಯುತಃ** ಎಂಬ ಹೆಸರಿನ ವೇಗವಾದ ಕುದುರೆಗಳೆಂದೂ ಅರ್ಥವಿವರಣೆ ಮಾಡಿದಾರೆ. ಇಲ್ಲಿ ನಿಯುತ್ವಾನ್ ಎಂಬ ಶಬ್ದಕ್ಕೆ **ನಿಯುತಃ** ಎಂಬ ವಾಯುವಿನ ವಾಹನಗಳುಳ್ಳ ವಾಯುವೆಂದು ಅರ್ಥವು.

**ಶುಕ್ರಃ—ದೀಪ್ಯಮಾನಃ ಸೋಮಃ ।** ಪ್ರಕಾಶಮಾನವಾದ ಸೋಮವೆಂದು ಅರ್ಥವು. ಆಗತಾನೇ ದೋಷದಾಗಿ ಹಿಂಡಿ ಸಿದ್ಧಪಡಿಸಿರುವ ಮತ್ತು ಅದಕ್ಕೆ ಯಾವ ವಿಧವಾದ ಆಶಿರದ್ರವ್ಯಗಳನ್ನೂ ಸೇರಿಸದಿರುವ ಶುದ್ಧವಾದ್ದ ಸೋಮರಸವನ್ನು **ಶುಕ್ರಃ, ಶುಚಿಃ** ಎಂಬ ಪ್ರಕಾಶಾತ್ಮಕವಾದ ವಿಶೇಷಣಗಳಿಂದ ಕರೆಯುವುದು ರೂಢಿಯು.



॥ ಸಂಹಿತಾಪಾಠಃ ॥

ನಿಯುತ್ವಾನ್ವಾಯವಾ ಗಹ್ಯಯಂ ಶುಕ್ರೋ ಅಯಾಮಿ ತೇ ।
ಗಂತಾಸಿ ಸುನ್ವತೋ ಗೃಹಂ ॥ ೨ ॥

॥ ಪದಪಾಠಃ ॥

**ನಿಯುತ್ವಾನ್ । ವಾಯೋ ಇತಿ । ಆ । ಗಹಿ । ಅಯಂ । ಶುಕ್ರಃ । ಅಯಾಮಿ । ತೇ ।**
**ಗಂತಾ । ಅಸಿ । ಸುನ್ವತಃ । ಗೃಹಂ ॥ ೨ ॥**

॥ ಸಾಯಣಭಾಷ್ಯಂ ॥

**ಹೇ ವಾಯೋ ನಿಯುತ್ವಾನ್ । ನಿಯುತೋ ವಾಹನಾನಿ ವಾಯೋಃ । ತೈರ್ಯುಕ್ತಸ್ತ್ವಮಾಗಹಿ । ಆಗಚ್ಛ । ಅಯಂ ಶುಕ್ರೋ ದೀಪ್ಯಮಾನಃ ಸೋಮಸ್ತೇ ತುಭ್ಯಮಯಾಮಿ । ನಿಯತೋ ಗೃಹೀತ ಆಸೀತ್ ॥ ಯಮೋಃ ಕರ್ಮಣಿ ಲುಙ್ ॥ ಸುನ್ವತಃ ಸೋಮಾಭಿಷವಂ ಕುರ್ವತೋ ಯಜಮಾನಸ್ಯ ಗೃಹಂ ಗಂತಾಸಿ । ಯಾತಾ ಭವಸಿ ॥**

॥ ಪ್ರತಿಪದಾರ್ಥ ॥

**ವಾಯೋ**—ಎಲೈ ವಾಯುವೇ । **ನಿಯುತ್ವಾನ್**—ನಿಯುತ್ತುಗಳೆಂಬ ನಿನ್ನ ಅಶ್ವಗಳೊಡನೆ ಕೂಡಿ । **ಆ ಗಹಿ**—ಬಾ । **ಅಯಂ ಶುಕ್ರಃ**—ಪ್ರಕಾಶಮಾನವಾದ ಈ ಸೋಮವು । **ತೇ**—ನಿನಗಾಗಿ । **ಅಯಾಮಿ**—ಸಿದ್ಧಪಡಿಸಲ್ಪಟ್ಟಿದೆ । **ಸುನ್ವತಃ**—ಸೋಮವನ್ನು ಹಿಂಡತಕ್ಕ ಯಜಮಾನನ । **ಗೃಹಂ**—ಮನೆಗೆ । **ಗಂತಾಸಿ**—ಹೋಗುವವನಾಗು.

॥ ಭಾವಾರ್ಥ ॥

ಎಲೈ ವಾಯುವೇ, ನಿಯುತ್ತುಗಳೆಂಬ ನಿನ್ನ ಅಶ್ವಗಳೊಡಗೂಡಿ ಬಾ. ಪ್ರಕಾಶಮಾನವಾದ ಈ ಸೋಮವು ನಿನಗಾಗಿ ಸಿದ್ಧಪಡಿಸಲ್ಪಟ್ಟಿದೆ, ಸೋಮವನ್ನು ಹಿಂಡತಕ್ಕ ಯಜಮಾನನ ಮನೆಗೆ ಹೋಗು.

English Translation.

Vayu, of the Niyut steeds, approach: this bright (juice) has been accepted by you, for you go to the dwelling of the offerer of the libation.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಹಿಂದಿನ ಋಕ್ಕಿನಲ್ಲಿ ಹೇಳಿದ ವಿಷಯವನ್ನೇ ಮತ್ತೆ ಹೇಳಲಾಗಿದೆ. **ಗಂತಾಸಿ ಸುನ್ವತೋ ಗೃಹಂ** ಎಂಬ ಒಂದು ವಾಕ್ಯ ಮಾತ್ರ ಹೆಚ್ಚಾಗಿದೆ.

**ಗಂತಾ ಆಸಿ ಸುನ್ವತಃ ಗೃಹಂ—ಸೋಮಾಭಿಷವಂ ಕುರ್ವತೋ ಯಜಮಾನಸ್ಯ ಗೃಹಂ ಪ್ರತಿ ಯಾತಾ ಭವಸಿ** । ಎಲೈ ವಾಯುವೇ ನಿನಗಾಗಿ ಸೋಮರಸವನ್ನು ಸಿದ್ಧಪಡಿಸಿ ಇಟ್ಟುಕೊಂಡಿರುವ ಯಜಮಾನನ ಮನೆಗೆ ಹೋಗು ಎಂದು ಪ್ರಾರ್ಥಿಸಲಾಗಿದೆ.

॥ ಸಂಹಿತಾಪಾಠಃ ॥

ಶುಕ್ರಸ್ಯಾದ್ಯ ಗವಾಶಿರ ಇಂದ್ರವಾಯೂ ನಿಯುತ್ವತಃ
ಆ ಯಾತಂ ಪಿಬತಂ ನರಾ ॥ ೩ ॥

॥ ಪದಪಾಠಃ ॥

ಶುಕ್ರಸ್ಯ । ಅದ್ಯ । ಗೋಽಆಶಿರಃ । ಇಂದ್ರವಾಯೂ ಇತಿ । ನಿಯುತ್ವತಃ ।

ಆ । ಯಾತಂ । ಪಿಬತಂ । ನರಾ ॥ ೩ ॥

॥ ಸಾಯಣಭಾಷ್ಯಂ ॥

ಹೇ ನರಾ ನೇತಾರೌ ಹೇ ಇಂದ್ರವಾಯೂ ಅದ್ಯಾಸ್ಮಿನ್ನಹನಿ ನಿಯುತ್ವತಃ ॥ ವಿಭಕ್ತಿವ್ಯತ್ಯಯಃ ॥ ನಿಯುತ್ವಂತೌ ಯುವಾಂ ಗವಾಶಿರಃ । ಗವ್ಯಂ ಪಯ ಆಶೀರಾಶ್ರಪಣಸಾಧನಂ ಯಸ್ಯ ತಸ್ಯ ಶುಕ್ರಸ್ಯ ದೀಪ್ತಸ್ಯ ಸೋಮಸ್ಯ ಪಾನಾರ್ಥಮಾಯಾತಂ । ಆಗಚ್ಛತಂ । ಆಗತ್ಯ ಸೋಮಂ ಪಿಬತಂ ॥

॥ ಪ್ರತಿಪದಾರ್ಥ ॥

ನರಾ—ನೇತೃಗಳಾದ । ಇಂದ್ರವಾಯೂ—ಇಂದ್ರ ಮತ್ತು ವಾಯುದೇವತೆಗಳೇ । ಅದ್ಯ—ಇಂದು । ನಿಯುತ್ವತಃ—ನಿಯುತ್ತುಗಳೆಂಬ ಅಶ್ವಗಳೊಡನೆ ಕೂಡಿದವರಾಗಿ । ಗವಾಶಿರಃ—ಹಾಲು ಮಿಶ್ರಿತವಾದುದೂ । ಶುಕ್ರಸ್ಯ—ಪ್ರಕಾಶಮಾನವಾದುದೂ ಆದ ಸೋಮರಸದ (ಪಾನಾರ್ಥವಾಗಿ) । ಆಯಾತಂ—ಬನ್ನಿರಿ । ಪಿಬತಂ—ಸೋಮಪಾನವನ್ನು ಮಾಡಿರಿ.

॥ ಭಾವಾರ್ಥ ॥

ನೇತೃಗಳಾದ ಎಲೈ ಇಂದ್ರ ಮತ್ತು ವಾಯುದೇವತೆಗಳೇ, ನಿಯುತ್ತುಗಳೆಂಬ ಅಶ್ವಗಳೊಡನೆ ಕೂಡಿದವರಾಗಿ ಹಾಲು ಮಿಶ್ರಿತವಾದುದೂ, ಪ್ರಕಾಶಮಾನವಾದುದೂ ಆದ ಸೋಮರಸದ ಪಾನಾರ್ಥವಾಗಿ ಈ ಯಜ್ಞಕಾಲದಲ್ಲಿ ನಮ್ಮಲ್ಲಿಗೆ ಬನ್ನಿರಿ. ಮತ್ತು ಸೋಮಪಾನವನ್ನು ಮಾಡಿರಿ.

English Translation.

Leaders (of rites), Indra and Vayu, lords of the Niyut steeds, come and drink to-day the mixture of milk and of the pure Soma juice.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರನನ್ನೂ, ವಾಯುವನ್ನೂ ಸೋಮಪಾನಾರ್ಥವಾಗಿ ಆಹ್ವಾನಿಸಲಾಗಿದೆ.

ನರಾ ನೇತಾರೌ । ನಾಯಕರು, ಮುಖಂಡರು ಎಂದರ್ಥವು. ಅಥವಾ ಯಜ್ಞಕರ್ಮವನ್ನು ಲೋಪದೋಷಗಳುಂಟಾಗದಂತೆ ನೋಡಿಕೊಂಡು ಸಾಂಗವಾಗಿ ನೆರವೇರಿಸುವವರು ಎಂದೂ ಅರ್ಥವನ್ನು ಹೇಳಬಹುದು.

ನಿಯುತ್ವತಃ—ನಿಯುತ್ ಎಂಬ ಅಶ್ವಗಳೇ ವಾಹನನಾಗಿವುಳ್ಳವರು ಇಲ್ಲಿ ವಾಯುವಿಗೆ ಮಾತ್ರ ನಿಯುತ್ ಎಂಬ ಅಶ್ವವು ವಾಹನವಾಗಿದ್ದರೂ ಇಂದ್ರವಾಯುಗಳಿಬ್ಬರನ್ನೂ ಅದೇ ವಾಹನವುಳ್ಳವರೆಂದು ವರ್ಣಿಸಿದೆ. ಮತ್ತು ನಿಯುತ್ವಂತೌ ಎಂದು ದ್ವಿವಚನಪ್ರಯೋಗಕ್ಕೆ ಬದಲಾಗಿ ನಿಯುತ್ವತಃ ಎಂದು ವಿಭಕ್ತಿವ್ಯತ್ಯಯವಿದೆ.

**ಗವಾಶಿರಃ—ಗವ್ಯಂ ಪಯ ಆಶೀರಾಶ್ರಯಣಸಾಧನಂ ಯಸ್ಯ ತಸ್ಯ** । ಗವಾಶಿರವೆಂದರೆ ಸೋಮರಸದ ಜತೆಗೆ ಹಾಲನ್ನು ಮಿಶ್ರಮಾಡಿರುವ ರಸವು. ಸೋಮರಸವು ರುಚಿಕರವಾಗುವುದಕ್ಕಾಗಿ ಇದಕ್ಕೆ ಕೆಲವು ದ್ರವ್ಯಗಳನ್ನು ಮಿಶ್ರಮಾಡುವರು ಆ ಮಿಶ್ರದ್ರವ್ಯಗಳಿಗೆ ಆಶಿರದ್ರವ್ಯಗಳೆಂದು ಹೆಸರು. ಸೋಮರಸಕ್ಕೆ ಹಾಲನ್ನು ಮಿಶ್ರಮಾಡಿದರೆ ಗವಾಶಿರವೆಂದೂ ಮೊಸರನ್ನು ಮಿಶ್ರಮಾಡಿದರೆ ದಧ್ಯಾಶಿರವೆಂದೂ ಯವಧಾನ್ಯದ ಹಿಟ್ಟನ್ನು ಮಿಶ್ರಮಾಡಿದರೆ ಯವಾಶಿರವೆಂದೂ ಹೇಳುವ ರೂಢಿ ಇರುವುದು.



॥ ಸಂಹಿತಾಪಾಠಃ ॥

**ಅಯಂ ವಾಂ ಮಿತ್ರಾವರುಣಾ ಸುತಃ ಸೋಮ ಋತಾವೃಧಾ ।**

**ಮಮೇದಿಹ ಶ್ರುತಂ ಹವಂ ॥ ೪ ॥**

॥ ಪದಪಾಠಃ ॥

**ಅಯಂ । ವಾಂ । ಮಿತ್ರಾವರುಣಾ । ಸುತಃ । ಸೋಮಃ । ಋತ್ವವೃಧಾ ।**

**ಮಮ । ಇತ್ । ಇಹ । ಶ್ರುತಂ । ಹವಂ ॥ ೪ ॥**

॥ ಸಾಯಣಭಾಷ್ಯಂ ॥

**ಮಿತ್ರಾವರುಣಾ ಹೇ ಮಿತ್ರಾವರುಣೌ ವಾಂ ಯುವಾಭ್ಯಾಮಯಂ ಸೋಮಃ ಸುತಃ । ಅಭಿಷುತಃ । ಋತಾವೃಧಾ ಹೇ ಸತ್ಯಸ್ಯ ಯಜ್ಞಸ್ಯ ವಾ ವರ್ಧಕೌ ಮಮೇತ್ ಮಮೈವ ಹವಮಾಹ್ವಾನಂ ಶ್ರುತಂ । ಶೃಣುತಂ ॥**

॥ ಪ್ರತಿಪದಾರ್ಥ ॥

**ಮಿತ್ರಾವರುಣಾ**—ಎಲೈ ಮಿತ್ರಾವರುಣರೇ । **ವಾಂ**—ನಿಮಗಾಗಿಯೇ । **ಅಯಂ ಸೋಮಃ**—ಈ ಸೋಮರಸವು । **ಸುತಃ**—ಹಿಂಡಲ್ಪಟ್ಟಿದೆ । **ಋತಾವೃಧಾ**—ಎಲೈ ಸತ್ಯವರ್ಧಕರೇ । **ಮಮೇತ್ ಹವಂ**—ನನ್ನ ಆಹ್ವಾನವನ್ನೇ । **ಇಹ**—ಈ ಯಜ್ಞದಲ್ಲಿ । **ಶ್ರುತಂ**—ಕೇಳಿರಿ.

॥ ಭಾವಾರ್ಥ ॥

ಎಲೈ ಮಿತ್ರಾವರುಣರೇ, ಈ ಸೋಮರಸವು ನಿಮಗಾಗಿಯೇ ಹಿಂಡಲ್ಪಟ್ಟಿದೆ. ಎಲೈ ಸತ್ಯವರ್ಧಕರೇ, ಈ ಯಜ್ಞದಲ್ಲಿ ನನ್ನ ಆಹ್ವಾನವನ್ನೇ ಕೇಳಿರಿ.

## English Translation.

This libation is offered to you, Mitra and Varuna, cherishers of truth; hear, verily, this my present invocation.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಮುಂದಿನ ಎರಡು ಋಕ್ಕುಗಳಲ್ಲಿಯೂ ಮಿತ್ರಾವರುಣರನ್ನು ಪ್ರಾರ್ಥಿಸಿ ಸೋಮಪಾನಕ್ಕಾಗಿ ಬರಬೇಕೆಂದು ಆಹ್ವಾನಿಸಲಾಗಿದೆ.

**ಋತಾವೃಧಾ—ಸತ್ಯಸ್ಯ ಯಜ್ಞಸ್ಯ ವಾ ವರ್ಧಕೌ ।** ಋತಶಬ್ದಕ್ಕೆ ನಾನಾರ್ಥಗಳಿರುವವು. ಅವುಗಳನ್ನು ನಾವು ಹಿಂದೆ ವಿಸ್ತಾರವಾಗಿ ವಿವರಿಸಿದೇವೆ. ಇಲ್ಲಿ ಭಾಷ್ಯಕಾರರು ಋತಶಬ್ದಕ್ಕೆ ಸತ್ಯ ಅಥವಾ ಯಜ್ಞವನ್ನು ವೃದ್ಧಿ ಪಡಿಸುವವರು ಎಂದು ಮಿತ್ರಾವರುಣರ ಗುಣವನ್ನು ವರ್ಣಿಸುವ ವಿಶೇಷಣವೆಂದು ಹೇಳಿದಾರೆ.

**ಇತ್—ಕಂ ಈಂ ಇತ್ ಉ** ಎಂಬ ಮಿತಾಕ್ಷರ ಶಬ್ದಗಳು ಪಾದಪೂರಣಾರ್ಥವಾಗಿ ಉಪಯೋಗಿಸಲ್ಪಡುವುವು. ಈ ವಿಷಯದಲ್ಲಿ ಯಾಸ್ಕರು—

> **ಅಥ ಯೇ ಪ್ರವೃತ್ತೇಽರ್ಥೇಽಮಿತಾಕ್ಷರೇಷು ಗ್ರಂಥೇಷು ವಾಕ್ಯಪೂರಣಾ ಆಗಚ್ಛಂತಿ ಪದಪೂರಣಾಸ್ತೇ ಮಿತಾಕ್ಷರೇಷ್ವನರ್ಥಕಾಃ ಕಮೀಮಿದ್ವಿತಿ ।**
>
> (ನಿ. ೧-೯)

**ಕಂ ಈಂ ಇತ್ ಉ** ಎಂಬ ಶಬ್ದಗಳು (ನಿಪಾತಗಳು) ಛಂದೋಬದ್ಧವಲ್ಲದ (ಅಮಿತಾಕ್ಷರ ವಾಕ್ಯಗಳಲ್ಲಿ ವಾಕ್ಯ ಪೂರಣಾರ್ಥವಾಗಿಯೂ, ಛಂದೋಬದ್ಧವಾದ ಋಕ್ಕುಗಳಲ್ಲಿ ಅಥವಾ ಮಂತ್ರಗಳಲ್ಲಿ (ಮಿತಾಕ್ಷರ) ಪಾದಪೂರಣಾರ್ಥವಾಗಿಯೂ ಉಪಯೋಗಿಸಲ್ಪಡುವುವು. ಆದ್ದರಿಂದ ಈ ಶಬ್ದಗಳಿಗೆ ನಿರ್ದಿಷ್ಟವಾದ ಯಾವ ಅರ್ಥವೂ ಇರಬೇಕಾದುದುದಿಲ್ಲ ಎಂದು ವಿವರಿಸಿದ್ದಾರೆ.

॥ ಸಂಹಿತಾಪಾಠಃ ॥

ರಾಜಾನಾವನಭಿದ್ರುಹಾ ಧ್ರುವೇ ಸದಸ್ಯುತ್ತಮೇ ।
ಸಹಸ್ರಸ್ಥೂಣ ಆಸಾತೇ ॥ ೫ ॥

॥ ಪದಪಾಠಃ ॥

ರಾಜಾನೌ । ಅನಭಿಽದ್ರುಹಾ । ಧ್ರುವೇ । ಸದಸಿ । ಉತ್ಽತಮೇ ।
ಸಹಸ್ರಽಸ್ಥೂಣೇ । ಆಸಾತೇ ಇತಿ ॥ ೫ ॥

॥ ಸಾಯಣಭಾಷ್ಯಂ ॥

**ರಾಜಾನಾವೀಶ್ವರೌ ದೀಪ್ಯಮಾನೌ ವಾ ಅನಭಿದ್ರುಹಾನಭಿದ್ರೋಗ್ಧಾರೌ ಯೌ ಮಿತ್ರಾವರುಣೌ ಧ್ರುವೇ ಸ್ಥಿರ ಉತ್ತಮ ಉತ್ಕೃಷ್ಟೇ ಸಹಸ್ರಸ್ಥೂಣೇ ಸದಸಿ ಸ್ಥಾನ ಆಸಾತೇ ಉಪವಿಶತಃ ತಾವಾಗಚ್ಛತ-ಮಿತಿ ಶೇಷಃ ॥**

॥ ಪ್ರತಿಪದಾರ್ಥ ॥

**ರಾಜಾನೌ**—ಜಗದೀಶ್ವರರೂ ಅಥವಾ ಪ್ರಕಾಶಮಾನರೂ । **ಅನಭಿದ್ರುಹಾ**—ಕೇಡನ್ನು ಬಯಸದೇ ಇರುವವರೂ ಆದ ಎಲೈ ಮಿತ್ರಾವರುಣರೇ । **ಧ್ರುವೇ**—ಸ್ಥಿರವಾದುದೂ । **ಉತ್ತಮೇ**—ಉತ್ಕೃಷ್ಟವಾದುದೂ । **ಸಹಸ್ರಸ್ಥೂಣೇ**—ಸಹಸ್ರಸ್ತಂಭದಿಂದ ಕೂಡಿರುದೂ ಆದ । **ಸದಸಿ**– ಈ ಯಜ್ಞಸ್ಥಾನದಲ್ಲಿ । **ಆಸಾತೇ**—ಬಂದು ಕುಳಿತುಕೊಳ್ಳಿ.

॥ ಭಾವಾರ್ಥ ॥

ಜಗದೀಶ್ವರರೂ, ಕೇಡನ್ನು ಬಯಸದೇ ಇರುವವರೂ ಆದ ಎಲೈಮಿತ್ರಾವರುಣರೇ, ಸ್ಥಿರವಾದುದೂ ಉತ್ಕೃಷ್ಟವಾದುದೂ ಸಹಸ್ರಸ್ತಂಭದಿಂದ ಕೂಡಿರುದೂ, ಆದ ಈ ಯಜ್ಞಸ್ಥಾನದಲ್ಲಿ ಬಂದು ಕುಳಿತುಕೊಳ್ಳಿ.

English Translation.

Sovereigns, exercising no oppression, sit down in this substantial and elegant hall, (built) with a thousand columns.

॥ ವಿಶೇಷವಿಷಯಗಳು ॥

**ರಾಜಾನೌ—ಈಶ್ವರೌ ದೀಪ್ಯಮಾನೌ ವಾ ।** ಪ್ರಭುಗಳಾದವರು ಅಥವಾ ಪ್ರಕಾಶಮಾನರಾಗಿ ಬೆಳಗುತ್ತಿರುವವರು. ಮಿತ್ರಾವರುಣರ ವಿಷಯದಲ್ಲಿ ರಾಜಾನಾ ಮತ್ತು ಸಮ್ರಾಜಾ ಎಂಬ ಶಬ್ದಕ್ಕೆ (ಮುಂದಿನ ಋಕ್ಕಿನಲ್ಲಿ) ಆಜ್ಞಯೈವ ಸರ್ವೇಷಾಂ ಶಾಸ್ತಾರೌ—ತಮ್ಮ ಆಜ್ಞೆಯಿಂದಲೇ ಎಲ್ಲರನ್ನೂ ನಿಯಮಗಳಿಗೆ ಒಳಪಡಿಸಿ ಆಳುವವರೆಂದು ಅರ್ಥಮಾಡಿದ್ದಾರೆ. ಇದಲ್ಲದೆ **ವರುಣಸ್ಯ ವ್ರತಾನಿ** ಎಂಬ ಶಬ್ದಗಳಿಗೆ ಸರ್ವರನ್ನೂ ಬದ್ಧಪಡಿಸತಕ್ಕ ವರುಣನ ನಿಯಮಗಳು ಎಂಬರ್ಥವು ಹಿಂದೆಯೇ ವಿವರಿಸಲ್ಪಟ್ಟು ಅವುಗಳು ಇಂದ್ರಾದಿದೇವತೆಗಳಿಂದಲೂ ಮೀರಲು ಸಾಧ್ಯವಿಲ್ಲವೆಂದು ಹೇಳಿದೆ. ಈ ಕಾರಣಕ್ಕಾಗಿಯೂ ಈ ಮಿತ್ರಾವರುಣರು **ರಾಜಾನಾ ಸಾಮ್ರಾಜಾ** ಎಂಬ ಶಬ್ದಗಳಿಂದ ಸಂಬೋಧಿತರಾಗಿರಬಹುದು.

**ಅನಭಿದ್ರುಹಾ**— ಈ ಶಬ್ದವು ಮಿತ್ರಾವರುಣರಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. ಯಾರ ವಿಷಯದಲ್ಲಿಯೂ ದ್ರೋಹವನ್ನು (ಕೆಟ್ಟದ್ದನ್ನು) ಬಯಸದಿರುವವರು ಎಂದಭಿಪ್ರಾಯವು.

**ಸಹಸ್ರಸ್ಥೂಣೇ**—ಈ ಶಬ್ದವು ಸದಸಿ ಎಂಬ ಶಬ್ದಕ್ಕೆ ವಿಶೇಷಣವಾಗಿರುವುದರಿಂದ ಸಾವಿರಾರು (ಅನೇಕ) ಸ್ತಂಭಗಳುಳ್ಳ ಯಜ್ಞಗೃಹ ಅಥವಾ ಸಭಾಸ್ಥಾನವೆಂದರ್ಥವು.

॥ ಸಂಹಿತಾಪಾಠಃ ॥

ತಾ ಸಮ್ರಾಜಾ ಘೃತಾಸುತೀ ಆದಿತ್ಯಾ ದಾನುನಸ್ಪತೀ ।
ಸಚೇತೇ ಅನವಹ್ವರಂ ॥ ೬ ॥

॥ ಪದಪಾಠಃ ॥

ತಾ । ಸಂ೭ರಾಜಾ । ಘೃತಾಸುತೀ ಇತಿ ಘೃತ೭ಆಸುತೀ । ಆದಿತ್ಯಾ । ದಾನುನಃ । ಪತೀ ಇತಿ ।
ಸಚೇತೇ ಇತಿ । ಅನವ೭ಹ್ವರಂ ॥ ೬ ॥

॥ ಸಾಯಣಭಾಷ್ಯಂ ॥

ಸಮ್ರಾಜಾವಾಜ್ಞಯೈವ ಸರ್ವೇಷಾಂ ಶಾಸ್ತಾರೌ ಘೃತಾಸುತೀ ಘೃತಾನ್ನೌ । ತದ್ವಾಂ ಮಹಿತ್ವಂ ಘೃತಾನ್ನಾವಸ್ತ್ವಿತಿ ಮಂತ್ರಾಂತರಾತ್ । ಋಗ್ವೇ. ೬-೬೭-೮ । ಆದಿತ್ಯಾದಿತೇಃ ಪುತ್ರೌ ದಾನುನಸ್ಪತೀ ದಾನುನೋ ದಾನಸ್ಯ ದೇವಸ್ಯ ವಾ ಧನಸ್ಯ ಪತೀ ಸ್ವಾಮಿನೌ । ತಾ ತೌ ಮಿತ್ರಾವರುಣಾವನವಹ್ವರಮಕುಟಿಲಂ ಯಜಮಾನಂ ಸಚೇತೇ । ಸೇವೇತೇ ॥

॥ ಪ್ರತಿಪದಾರ್ಥ ॥

**ಸಮ್ರಾಜಾ**—ಜಗತ್ಪ್ರಭುಗಳೂ । **ಘೃತಾಸುತೀ**—ಘೃತರೂಪದ ಅನ್ನವುಳ್ಳವರೂ । **ಆದಿತ್ಯಾ**—ಅದಿತಿಪುತ್ರರೂ । **ದಾನುನಸ್ಪತೀ**—ದಾನಕ್ಕೆ ಯೋಗ್ಯವಾದ ಧನಕ್ಕೆ ಒಡೆಯರೂ ಆದ । **ತಾ**—ಮಿತ್ರಾವರುಣರು । **ಅನವಹ್ವರಂ**—ಕಾಪಟ್ಯವಿಲ್ಲದ ಯಜಮಾನನನ್ನು । **ಸಚೇತೇ**—ಅನುಗ್ರಹಿಸುತ್ತಾರೆ.

॥ ಭಾವಾರ್ಥ ॥

ಜಗತ್ಪ್ರಭುಗಳೂ, ಘೃತರೂಪದ ಅನ್ನವುಳ್ಳವರೂ, ಅದಿತಿಪುತ್ರರೂ, ದಾನಕ್ಕೆ ಯೋಗ್ಯವಾದ ಧನಕ್ಕೆ ಒಡೆಯರೂ ಆದ ಮಿತ್ರಾವರುಣರು ಕಾಪಟ್ಯವಿಲ್ಲದ ಯಜಮಾನನನ್ನು ಅನುಗ್ರಹಿಸುತ್ತಾರೆ.

English Translation.

May these two universal monarchs, fed with clarified butter, sons of Aditi, lords of liberality, show favour to their sincere (worshipper).

॥ ವಿಶೇಷವಿಷಯಗಳು ॥

**ಘೃತಾಸುತೀ—ಘೃತಾನ್ನೌ** । ಘೃತಮಿಶ್ರಿತವಾದ ಅನ್ನವನ್ನು ಭಕ್ಷಿಸತಕ್ಕವರು. ಈ ವಿಷಯದಲ್ಲಿ ಭಾಷ್ಯಕಾರರು—

**ತದ್ವಾಂ ಮಹಿತ್ವಂ ಘೃತಾನ್ನಾವಸ್ತು ಯುವಂ ದಾಶುಷೇ ವಿ ಚಯಿಷ್ಟಮಂಹಃ ॥**

(ಋ. ಸಂ. ೬-೬೭-೮)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು.

**ಆದಿತ್ಯಾ—ಅದಿತೇಃ ಪುತ್ರೌ ।** ದೇವಮಾತೆಯಾದ ಅದಿತಿಯ ಪುತ್ರರೆಂಬ ವಿಷಯವನ್ನು ನಾವು ಹಿಂದೆಯೇ ವಿವರಿಸಿದೇವೆ. ಈ ವಿಷಯವು—

> **ಅಷ್ಟೌ ಪುತ್ರಾಸೋ ಅದಿತೇಃ । ಯೇ ಜಾತಾಸ್ತನ್ವಃ ಪರಿ । ದೇವಾಁ ಉಪಪ್ರೈತ್ಸಪ್ತಭಿಃ । ಪರಾ ಮಾರ್ತಾಂಡಮಾಸ್ಯತ್ । ಸಪ್ತಭಿಃ ಪುತ್ರೈರದಿತಿಃ। ಉಪಪ್ರೈತ್ಪೂರ್ವ್ಯಂ ಯುಗಂ। ಪ್ರಜಾಯೈ ಮೃತ್ಯವೇ ತತ್। ಪರಾಮಾರ್ತಾಂಡಮಾಭರದಿತಿ। ತಾನನುಕ್ರಮಿಷ್ಯಾಮಃ । ಮಿತ್ರಶ್ಚ ವರುಣಶ್ಚ। ಧಾತಾಚಾರ್ಯಮಾ ಚ । ಅಗ್ಂಶಶ್ಚ ಭಗಶ್ಚ । ಇಂದ್ರಶ್ಚ ವಿವಸ್ವಾಗ್ಶ್ಚೇತ್ಯೇತೇ ।**
>
> (ತೈ. ಆ. ೧-೧೩-೨, ೩)

ಎಂದು ತೈತ್ತರೀಯ ಆರಣ್ಯಕದಲ್ಲಿಯೂ ಹೇಳಲ್ಪಟ್ಟಿರುವುದು. ಎಂದರೆ, ಅದಿತಿದೇವಿಗೆ ಎಂಟು ಮಂದಿ ಪುತ್ರರು. ಅವರ ಹೆಸರುಗಳು ಕ್ರಮವಾಗಿ–ಮಿತ್ರ, ವರುಣ, ಧಾತಾ, ಅರ್ಯಮಾ, ಅಂಶ, ಭಗ, ಇಂದ್ರ, ವಿವಸ್ವಾನ್ ಎಂದಿರುವುದು.

**ದಾನುನಃ ಪತೀ—ದಾನುನೋ ದಾನಸ್ಯ ದೇಯಸ್ಯ ವಾ ಧನಸ್ಯ ಸ್ವಾಮಿನೌ ।** ತಮ್ಮನ್ನು ಸ್ತೋತ್ರ ಮಾಡುವವರಿಗೆ ಕೊಡಬೇಕಾದ ಧನಕ್ಕೆ ಸ್ವಾಮಿಯಾದವರು ಎಂದರೆ ತಮ್ಮಲ್ಲಿರುವ ವಿಪುಲವಾದ ಧನವನ್ನು ಸ್ತೋತ್ರ ಮಾಡುವವರಿಗೆ ಕೊಡುವವರು ಎಂದಭಿಪ್ರಾಯವು.

**ಅನವಹ್ವರಂ ಅಕುಟಿಲಂ ಯಜಮಾನಂ ।** ಹ್ವರಶಬ್ದವು ಕ್ರೋಧನಾಮಗಳಲ್ಲಿ ಪಠಿತವಾಗಿದೆ. (ನಿ. ೩-೪) ಇಲ್ಲಿ ಅನಹ್ವರವೆಂದರೆ—ಕುಟಿಲಸ್ವಭಾವವೆಂದು ಅರ್ಥಮಾಡಿ ಅನವಹ್ವರಂ ಎಂದರೆ ಕುಟಿಲಸ್ವಭಾವವಿಲ್ಲದಿರುವ ಯಜಮಾನನನ್ನು ಎಂದರ್ಥವಿವರಣೆಮಾಡಿದಾರೆ.



॥ ಸಂಹಿತಾಪಾಠಃ ॥

## ಗೋಮ॑ದೂ॒ ಷು ನಾ॑ಸ॒ತ್ಯಾಶ್ವಾ॑ವದ್ಯಾತಮಶ್ವಿನಾ ।
## ವ॒ರ್ತೀ ರು॑ದ್ರಾ ನೃ॒ಪಾಯ್ಯಂ॑ ॥ ೭ ॥

॥ ಪದಪಾಠಃ ॥

**ಗೋಽಮ॑ತ್ । ಊ॒ಂ ಇತಿ॑ । ಸು । ನಾ॒ಸ॒ತ್ಯಾ॒ । ಅಶ್ವ॑ಽವತ್ । ಯಾ॒ತಂ॒ । ಅ॒ಶ್ವಿ॒ನಾ॒ ।**

**ವ॒ರ್ತಿಃ । ರು॒ದ್ರಾ॒ । ನೃ॒ಽಪಾಯ್ಯ॑ಂ ॥ ೭ ॥**

॥ ಸಾಯಣಭಾಷ್ಯಂ ॥

**ಅಶ್ವಿನಾ ಹೇ ಅಶ್ವಿನೌ ಹೇ ನಾಸತ್ಯಾನೃತಭಾಷಣರಹಿತೌ ಹೇ ರುದ್ರಾ ರೋರೂಯಮಾಣೌ ಪ್ರವಂತೌ ಯುವಾಂ ವರ್ತಿರ್ಮಾರ್ಗಃ । ತೇನ ಮಾರ್ಗೇಣ ರಥೇನ ವಾ ನೃಪಾಯ್ಯಂ ನೃಭಿರ್ನೇತೃಭಿರ್ದೇವೈಃ ಪಾತವ್ಯಂ ಸೋಮಂ ಗೋಮತ್ ಗೋಮದ್ಯಥಾ ಭವತಿ ತಥಾ ಅಶ್ವವತ್ ಅಶ್ವವಚ್ಚ ಯಥಾ ಭವತಿ ತಥಾ ಯಾತಂ । ಗಚ್ಛತಂ । ಉ ಷ್ವಿತಿ ಪೂರಣೌ ॥**

॥ ಪ್ರತಿಪದಾರ್ಥ ॥

**ನಾಸತ್ಯಾ**—ಅಸತ್ಯರಹಿತರೂ । **ರುದ್ರಾ**—ಶಬ್ದಮಾಡತಕ್ಕವರೂ ಆದ । **ಅಶ್ವಿನಾ**—ಎಲೈ ಅಶ್ವಿನೀ ದೇವತೆಗಳೇ । **ವರ್ತಿಃ**—ನೀವು ಪ್ರಯಾಣಮಾಡುವ ಮಾರ್ಗವು । **ನೃಪಾಯ್ಯಂ**—ದೇವತೆಗಳಿಂದ ಕುಡಿಯಲ್ಪಡುವ ಸೋಮವುಳ್ಳದ್ದಾಗಿಯೂ । **ಗೋಮತ್**—ಗೋವುಗಳಿಂದ ಕೂಡಿರುವುದಾಗಿ ಆಗುವಂತೆಯೂ । **ಅಶ್ವವತ್**—ಅಶ್ವಗಳಿಂದ ಕೂಡಿರುವುದಾಗಿ ಆಗುವಂತೆಯೂ ಆಗಿ । **ಯಾತಂ**—(ಯಜ್ಞಗೃಹಕ್ಕೆ) ಹೋಗಿರಿ (ಬನ್ನಿರಿ).

॥ ಭಾವಾರ್ಥ ॥

ಅಸತ್ಯರಹಿತರೂ ಶಬ್ದಮಾಡತಕ್ಕವರೂ, ಆದ ಎಲೈ ಅಶ್ವಿನೀದೇವತೆಗಳೇ, ದೇವತೆಗಳಿಂದ ನೀವು ಬರುವ ಮಾರ್ಗವು ಪಾನಮಾಡಲ್ಪಡುವ ಸೋಮದಿಂದಲೂ, ಗೋವುಗಳಿಂದಲೂ, ಅಶ್ವಗಳಿಂದಲೂ, ಕೂಡಿರುವುದಾಗಿ ಆಗುವಂತೆಯೂ ಆಗಿ ನಮ್ಮ ಯಜ್ಞಗೃಹಕ್ಕೆ ಹೋಗಿರಿ (ಬನ್ನಿರಿ).

## English Translation.

Ashwins, in whom there is no untruth; Rudras, go by the (direct) road to (the sacrifice at which the libation) is to be drunk by the leaders (of sacred rites), for which (the offerer may receive the reward of) cows and horses.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಮುಂದಿನ ಎರಡು ಋಕ್ಕುಗಳಲ್ಲಿಯೂ ಅಶ್ವಿನೀದೇವತೆಗಳನ್ನು ಸ್ತುತಿಸಿ ಆಹ್ವಾನಿಸಲಾಗಿದೆ.

**ಅಶ್ವಿನಾ**—**ಅಶ್ವಿನಾ** ಅಥವಾ **ಅಶ್ವಿನೌ** ಎಂಬ ದೇವತೆಗಳ ವಿಚಾರದಲ್ಲಿ ಯಾಸ್ಕರು ಈ ರೀತಿ ನಿರ್ವಚನವನ್ನು ಹೇಳಿದಾರೆ—

**ಅಶ್ವಿನೌ ಯದ್ವ್ಯಶ್ನುವಾತೇ ಸರ್ವಂ ರಸೇನಾನ್ಯೋ ಜ್ಯೋತಿಷಾನ್ಯಃ । ಅಶ್ವೈರಶ್ವಿನಾವಿತ್ಯೌರ್ಣವಾಭಃ । ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತ್ಯೇಕೇ । ಅಹೋರಾತ್ರಾವಿತ್ಯೇಕೇ । ಸೂರ್ಯಾಚಂದ್ರಮಸಾವಿತ್ಯೇಕೇ । ರಾಜಾನೌ ಪುಣ್ಯಕೃತಾವಿತ್ಯೈತಿಹಾಸಿಕಾಃ ॥**

(ನಿ. ೧೨-೧)

ಈ ದೇವತೆಗಳಲ್ಲಿ ಒಬ್ಬನು ಉದಕದಿಂದಲೂ, ಇನ್ನೊಬ್ಬನು ಪ್ರಕಾಶದಿಂದಲೂ ಸರ್ವತ್ರ ವ್ಯಾಪಿಸಿರುವುದರಿಂದ ಇವರಿಗೆ ಅಶ್ವಿನೀದೇವತೆಗಳೆಂದು ಹೆಸರು ಎಂದು ಒಂದು ಮತ. ಅಶ್ವಗಳಿಂದ ಯುಕ್ತರಾದುದರಿಂದ ಇವರಿಗೆ ಅಶ್ವಿನೀದೇವತೆಗಳೆಂದು ಹೆಸರು ಎಂದು ಔರ್ಣವಾಭರ ಮತ. ಕೆಲವರ ಅಭಿಪ್ರಾಯದಂತೆ ಇವರು ದ್ಯಾವಾಪೃಥಿವಿಗಳು. ಮತ್ತೆ ಕೆಲವರು ಇವರನ್ನು ಅಹೋರಾತ್ರಿಗಳೆಂದು ಹೇಳುವರು. ಮತ್ತೆ ಕೆಲವರ ಅಭಿಪ್ರಾಯದಂತೆ ಇವರೇ ಸೂರ್ಯಚಂದ್ರರು. ಇತಿಹಾಸಕಾರರ ಮತದಂತೆ ಪುಣ್ಯಕರ್ತರಾದ ಇಬ್ಬರು ರಾಜರುಗಳು ಈ ಪದವಿಯನ್ನು ಪಡೆದಿರುವರು ಎಂದಾಗುತ್ತದೆ. ಹೀಗೆ ಅನೇಕ ಮತಭೇದಗಳಿವೆ.

**ನಾಸತ್ಯಾ**—ಅಶ್ವಿನೀದೇವತೆಗಳು ಇಬ್ಬರು. ಅವರಲ್ಲಿ ಒಬ್ಬನ ಹೆಸರು ದಸ್ರಾ ಎಂತಲೂ ಇನ್ನೊಬ್ಬನ ಹೆಸರು ನಾಸತ್ಯಾ ಎಂತಲೂ ಹೇಳುವ ರೂಢಿ ಇದೆ. ಆದರೂ ಈ ಶಬ್ದಗಳನ್ನು ಅನೇಕ ಸಂದರ್ಭಗಳಲ್ಲಿ ಇಬ್ಬರನ್ನೂ ಒಟ್ಟಿಗೆ ಸಂಬೋಧನೆಮಾಡುವುದರಲ್ಲಿ ಉಪಯೋಗಿಸುವುದು ಕಂಡುಬರುವುದು. ನಾಸತ್ಯಾ ಎಂಬ ಶಬ್ದಾರ್ಥದ ವಿಚಾರದಲ್ಲಿ ಯಾಸ್ಕರು—

**ಸತ್ಯಾವೇವ ನಾಸತ್ಯಾವಿತ್ಯೌರ್ಣವಾಭಃ । ಸತ್ಯಸ್ಯ ಪ್ರಣೇತಾರಾವಿತ್ಯಾಗ್ರಾಯಣಃ । ನಾಸಿಕಾಪ್ರಭವೌ ಬಭೂವತುರಿತಿ ವಾ ॥**

(ನಿ. ೬-೧೩)

ಎಂದು ನಿರ್ವಚನವನ್ನು ಹೇಳಿದ್ದಾರೆ. ಎಂದರೆ ಸತ್ಯವಲ್ಲದ್ದು ಅಸತ್ಯ. ಅಸತ್ಯವಲ್ಲದ್ದು ನ+ಅಸತ್ಯ=ನಾಸತ್ಯಾ ಎಂದರೆ ಸತ್ಯವೆಂದೇ ನಾಸತ್ಯಶಬ್ದದ ಅರ್ಥವು. ಈ ದೇವತೆಗಳು ಆಡುವ ಮಾತುಗಳೂ ಮಾಡುವ ಕರ್ಮಗಳೂ ಅಸತ್ಯವಲ್ಲವಾದ್ದರಿಂದ ಇವರಿಗೆ ನಾಸತ್ಯಾ ಎಂದು ಹೆಸರು ಎಂದು ಔರ್ಣವಾಭರ ಮತವು; ಯಾವಾಗಲೂ ಸತ್ಯವನ್ನೇ ಪ್ರತಿಪಾದಿಸುತ್ತಾ ಅದಕ್ಕೆ ಪ್ರೋತ್ಸಾಹ ಕೊಡುವವರಾದ್ದರಿಂದ ಇವರಿಗೆ ನಾಸತ್ಯಾ ಎಂಬ ಹೆಸರು ಬಂದಿತು ಎಂದು ಆಗ್ರಾಯಣ ಎಂಬುವರ ಮತವು; ನಾಸಿಕದಿಂದ ಉತ್ಪನ್ನರಾದುದರಿಂದ ಇವರಿಗೆ ನಾಸತ್ಯಾ ಎಂಬ ಹೆಸರು ಎಂದೂ ಕೆಲವರೂ ಹೇಳುವರು. ಈ ವಿಷಯವಾಗಿ ಪುರಾಣಾದಿಗಳಲ್ಲಿ ಒಂದು ಉಪಾಖ್ಯಾನವಿದೆ. ಪೂರ್ವದಲ್ಲಿ ಸೂರ್ಯನ ಪತ್ನಿಯಾದ ಸಂಜ್ಞಾದೇವಿಯು ಕಾರಣಾಂತರದಿಂದ ಸೂರ್ಯನ ವಿಷಯದಲ್ಲಿ ಅಸಮಾಧಾನಗೊಂಡು ಕಾಡಿಗೆ ಹೋಗಿ ಹೆಣ್ಣು ಕುದುರೆಯ ರೂಪದಿಂದ ತಪಸ್ಸನ್ನು ಮಾಡುತ್ತಿದ್ದಳೆಂದೂ ಅದನ್ನು ಸೂರ್ಯನು ತಿಳಿದು ತಾನೂ ಗಂಡು ಕುದುರೆಯ ರೂಪದಿಂದ ಅವಳಿದ್ದಲ್ಲಿಗೆ ಹೋಗಿ ಕೆಲವು ಕಾಲ ಇದ್ದನೆಂದೂ ಆಗ ಅವರಿಗೆ ಅಶ್ವಿನೀದೇವತೆಗಳು ಪುತ್ರರಾಗಿ ಜನಿಸಿದರೆಂದೂ ಹೇಳಲ್ಪಟ್ಟಿದೆ.

ಋಗ್ವೇದದಲ್ಲಿ ಅಶ್ವಿನೀದೇವತೆಗಳ ವಿಷಯಕವಾದ ಅನೇಕ ಸೂಕ್ತಗಳಿವೆ. ಇವು ಬಹು ಗಂಭೀರವಾಗಿಯೂ ಇವರ ಗುಣಗಳನ್ನೂ ಪರಾಕ್ರಮಗಳನ್ನೂ ಇತರರಿಗೆ ಇವರು ಮಾಡಿರುವ ಉಪಕಾರಗಳನ್ನು ವರ್ಣಿಸುವುದಾಗಿಯೂ ಇವೆ. ಇವುಗಳನ್ನೆಲ್ಲಾ ನಾವು ಆಯಾ ಸಂದರ್ಭಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ. ಯಜುರ್ವೇದಾದಿಗಳಲ್ಲಿ ಇವರು—**ಅಶ್ವಿನೌ ವೈ ದೇವಾನಾಂ ಭಿಷಜೌ**—ಅಶ್ವಿನೀದೇವತೆಗಳು ದೇವತೆಗಳ ವೈದ್ಯರೆಂದು ಹೇಳಿರುವುದು. ಇವರ ವಿಷಯವಾದ ವಿಸ್ತಾರವಾದ ವಿವರಣೆಗಾಗಿ ಋ. ಸಂ. ಭಾಗ ೨ ಪುಟ 11–12, 20–21, ಭಾಗ ೧೩ ಪುಟ 566 ಗಳನ್ನು ನೋಡಿ.

ಮುಖ್ಯಾಭಿಪ್ರಾಯವು—ಎಲೈ ಅಶ್ವಿನೀ ದೇವತೆಗಳೇ. ನಿಮ್ಮಲ್ಲಿ ಅಸತ್ಯವೆಂಬುದು ಇಲ್ಲ. ನೀವು ಯಜ್ಞ ಕರ್ಮಗಳಿಗೆ ನೇತೃ (ಮುಖಂಡರು) ಆಗಿದೀರಿ. ನೀವು ಯಜ್ಞಭೂಮಿಗೆ ನೇರವಾಗಿ ರಥದಲ್ಲಿ ಕುಳಿತು ಹೋಗಿರಿ. ನಿಮಗೆ ಸೋಮವನ್ನು ಅರ್ಪಿಸುವ ಯಜಮಾನನಿಗೆ ಗೋವುಗಳನ್ನೂ, ಅಶ್ವಗಳನ್ನೂ ಯಜ್ಞಕರ್ಮದ ಫಲರೂಪವಾಗಿ ಹೊಂದುವಂತೆ ಅನುಗ್ರಹಿಸಿ.

॥ ಸಂಹಿತಾಪಾಠಃ ॥

ನ ಯತ್ಪರೋ ನಾಂತರ ಆದಧರ್ಷದ್ವೃಷಣ್ವಸೂ ।

ದುಃಶಂಸೋ ಮರ್ತ್ಯೋ ರಿಪುಃ ॥ ೮ ॥

॥ ಪದಪಾಠಃ ॥

ನ । ಯತ್ । ಪರಃ । ನ । ಅಂತರಃ । ಆಽದಧರ್ಷತ್ । ವೃಷಣ್ವಸೂ ಇತಿ ವೃಷಣ್ಽವಸೂ ।

ದುಃಽಶಂಸಃ । ಮರ್ತ್ಯಃ । ರಿಪುಃ ॥ ೮ ॥

॥ ಸಾಯಣಭಾಷ್ಯಂ ॥

**ವೃಷಣ್ವಸೂ ಹೇ ಧನಸ್ಯ ವರ್ಷಿತಾರೌ ಯದ್ಧನಂ ಪರೋ ದೂರಸ್ಥೋ ದುಃಶಂಸಃ ಶಂಸನಾಯೋಗ್ಯೋ ಮರ್ತ್ಯೋ ರಿಪುರ್ಯನ್ನಾದಧರ್ಷತ್ ತಥೋಕ್ತಲಕ್ಷಣೋತರೋಽಂತರಃ ಸಮೀಪವರ್ತೀ ಮರ್ತ್ಯೋ ರಿಪುರಪಿ ಯನ್ನಾದಧರ್ಷತ್ ತದ್ಧನಮಾವೋರ್ಲಭ್ಯಮಿತಿ ಶೇಷಃ ॥**

॥ ಪ್ರತಿಪದಾರ್ಥ ॥

**ವೃಷಣ್ವಸೂ**—ಎಲೈ ಧನವರ್ಷಕರೇ । **ಯತ್**—ಯಾವ ಧನವನ್ನು । **ಪರಃ**—ದೂರದಲ್ಲಿರತಕ್ಕವನೂ । **ದುಃಶಂಸಃ**—ಪ್ರಶಂಸೆಗೆ ಯೋಗ್ಯನಲ್ಲದವನೂ । **ಮರ್ತ್ಯಃ**—ಮಾನವನೂ ಆದ । **ರಿಪುಃ**—ಶತ್ರುವು । **ನ ಆದಧರ್ಷತ್**—ಅಪಹರಿಸಲಾರನೋ (ಅದರಂತೆಯೆ) । **ಅಂತರಃ**—ಸಮೀಪವರ್ತಿಯಾದ ಶತ್ರುವೂ ಸಹ । **ನ**—ಕಸಿಯಲಾರನೋ (ಅಂತಹ ಧನವನ್ನು ನಮಗೆ ಒದಗಿಸಿ).

॥ ಭಾವಾರ್ಥ ॥

ಧನವರ್ಷಕರಾದ ಎಲೈ ಅಶ್ವಿನೀದೇವತೆಗಳೇ, ಯಾವ ಧನವನ್ನು ಪ್ರಶಂಸೆಗೆ ಅರ್ಹನಲ್ಲದ ದೂರದಲ್ಲಿರುವ ಶತ್ರುವಾಗಲಿ ಅಥವಾ ಸಮೀಪದಲ್ಲಿರುವ ಶತ್ರುವಾಗಲಿ ಕದಿಯಲಾರನೋ ಅಂತಹ ಧನವನ್ನು ನಮಗೆ ಒದಗಿಸಿ.

English Translation.

Showerers of wealth, (bring to us) such (riches) that the malevolent man, or foe, whether he be far off or nigh, may not take (it) away.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಧನವನ್ನು ಸೂಚಿಸುವ ಯಾವ ಶಬ್ದವೂ ಇರುವುದಿಲ್ಲ. ಆದರೂ ಭಾಷ್ಯಕಾರರು ಅನೇಕ ಶಬ್ದಗಳನ್ನು ಅಧ್ಯಾಹಾರಮಾಡಿ ಅರ್ಥವು ಒಂದುವಿಧವಾಗಿ ಹೊಂದುವಂತೆ ವಿವರಿಸಿದಾರೆ.

**ವೃಷಣ್ವಸೂ—ವೃಷು ವರ್ಷಣೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ದ್ವಿವಚನಾಂತಶಬ್ದಕ್ಕೆ ಧನ ಅಥವಾ ಇಷ್ಟಾರ್ಥಗಳನ್ನು ವರ್ಷಿಸುವವರು ಎಂದರೆ ಕೊಡುವವರು ಎಂದರ್ಥವು.

**ಪರಃ—ದೂರಸ್ಥಃ ।** ದೂರದಲ್ಲಿರುವ ಎಂದು ಭಾಷ್ಯಕಾರರ ವಿವರಣೆಯು. ಪರಶಬ್ದಕ್ಕೆ ಈ ಅರ್ಥವು ಹೊಂದುವುದಿಲ್ಲವಾದರೂ ಈ ಋಕ್ಕಿನಲ್ಲಿ **ಅಂತರಃ**—ಸಮೀಪವರ್ತಿ ಎಂಬ ಶಬ್ದಪ್ರಯೋಗವಿರುವುದರಿಂದ ಆ ಅರ್ಥಕ್ಕೆ ವಿರುದ್ಧವಾಗಿರುವಂತೆ ಪರಶಬ್ದಕ್ಕೆ ಅರ್ಥಮಾಡಿರುವುದು ಸಹಜವಾಗಿದೆ.

ಸಂಹಿತಾಪಾಠಃ

ತಾ ನ ಆ ವೋ᳚ಳ್ಹಮಶ್ವಿನಾ ರಯಿಂ ಪಿಶಂ᳚ಗಸಂದೃಶಂ

ಧಿಷ್ಣ್ಯಾ᳚ ವರಿವೋ᳚ವಿದಂ ॥ ೯ ॥

॥ ಪದಪಾಠಃ ॥

**ತಾ । ನಃ । ಆ । ವೋಳ್ಹಂ । ಅಶ್ವಿನಾ । ರಯಿಂ । ಪಿಶಂ᳚ಗऽಸಂದೃಶಂ ।**

**ಧಿಷ್ಣ್ಯಾ᳚ । ವರಿವಃऽವಿದಂ᳚ ॥ ೯ ॥**

॥ ಸಾಯಣಭಾಷ್ಯಂ ॥

**ಹೇ ಧಿಷ್ಣ್ಯಾ ಧಿಷಣಾರ್ಹಾವಶ್ವಿನಾ ಹೇ ಅಶ್ವಿನೌ ತಾ ತೌ ಯುವಾಂ ಪಿಶಂಗಸಂದೃಶಂ ನಾನಾರೂಪಂ ವರಿವೋವಿದಂ ಧನಸ್ಯ ಲಂಭಕಂ ರಯಿಂ ಪಶುಂ ನೋऽಸ್ಮಭ್ಯಮಾವೋಳ್ಹಂ । ಆವಹತಂ ॥**

॥ ಪ್ರತಿಪದಾರ್ಥ ॥

**ಧಿಷ್ಣ್ಯಾ**—ಶತ್ರುಧರ್ಷಕರಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ತಾ**—ನೀವು । **ಪಿಶಂಗಸಂದೃಶಂ**—ನಾನಾರೂಪವುಳ್ಳದ್ದೂ । **ವರಿವೋವಿದಂ**—ಧನವನ್ನು ವೃದ್ಧಿಪಡಿಸತಕ್ಕದ್ದೂ ಆದ । **ರಯಿಂ**—ಧನವನ್ನು । **ನಃ**—ನಮಗೆ । **ಆ ವೋಳ್ಹಂ**—ತೆಗೆದುಕೊಂಡು ಬನ್ನಿ ।

॥ ಭಾವಾರ್ಥ ॥

ಶತ್ರುಧರ್ಷಕರಾದ ಎಲೈ ಅಶ್ವಿನಿದೇವತೆಗಳೇ, ನಾನಾರೂಪವುಳ್ಳದ್ದೂ, ಧನವನ್ನು ವೃದ್ಧಿಪಡಿಸತಕ್ಕದ್ದೂ ಆದ ಧನವನ್ನೂ ನಮಗೆ ನೀವು ತೆಗೆದುಕೊಂಡು ಬನ್ನಿ.

English Translation·

Resolute Ashwins, bring to us riches of various sorts, and wealth begetting wealth.

॥ ವಿಶೇಷವಿಷಯಗಳು ॥

**ರಯಿಂ**—ರಯಿಶಬ್ದವು ಉದಕನಾಮಗಳಲ್ಲಿಯೂ (ನಿ. ೧-೧೪) ಧನನಾಮಗಳಲ್ಲಿಯೂ (ನಿ. ೩-೯) ಪಠಿತ ವಾಗಿದೆ. ಮತ್ತು **ರಯಿರಿತಿ ಧನನಾಮ ರಾತೇರ್ದಾನಕರ್ಮಣಃ** (ನಿ. ೪-೧೭) ಎಂಬ ನಿರ್ವಚನವೂ ಇದೆ. ಕೊಡು ಎಂಬರ್ಥವು **ರಾ** ಎಂಬ ಧಾತುವಿನಿಂದ ನಿಷ್ಪನ್ನವಾದ ರಯಿ ಶಬ್ದಕ್ಕೆ ಧನವೆಂದು ಯಾಸ್ಕರು ಅರ್ಥಮಾಡಿದಾರೆ. ಇಲ್ಲಿ ಭಾಷ್ಯಕಾರರು ಪಶುಂ ಎಂದರ್ಥಮಾಡಿದ್ದರೂ ಪಶುಸಂಪತ್ತು ಸಹ ಧನವೆಂದೇ ಪರಿಗಣಿಸಲ್ಪಡುವುದರಿಂದ ಇಲ್ಲಿ ಧನ ಅಥವಾ ಪಶು ಎಂಬ ಯಾವ ಅರ್ಥವನ್ನಾದರೂ ಹೇಳಬಹುದು.

**ಪಿಶಂಗಸಂದೃಶಂ—ನಾನಾರೂಪಂ** । ಭಾಷ್ಯಕಾರರು ಪಿಶಂಗಶಬ್ದಕ್ಕೆ ನಾನಾರೂಪವೆಂದು ಅರ್ಥಮಾಡಿ ದಾರೆ ಎಂದರೆ ಧನವು, ದ್ರವ್ಯ, ರತ್ನ, ಪಶು, ಆಹಾರ ಮೊದಲಾದ ರೂಪಗಳಲ್ಲಿರಬಹುದು. ಆದುದರಿಂದ ನಾನಾ ರೂಪಗಳಲ್ಲಿರುವ ಎಂಬ ಅರ್ಥವೂ ಹೊಂದುವುದು. ಅಥವಾ ಪಿಶಂಗಶಬ್ದಕ್ಕೆ ಪಿಶಂಗವರ್ಣ ಹಳದಿಯವರ್ಣವುಳ್ಳ ಎಂದರ್ಥಮಾಡಿದರೆ ಸುವರ್ಣಾದಿಗಳು ಹಳದಿಯಬಣ್ಣವುಳ್ಳದ್ದಾಗಿರುವುದರಿಂದ ಸುವರ್ಣಾದಿಧನಗಳನ್ನು ಎಂದೂ ಅರ್ಥಮಾಡಬಹುದು.

**ವರಿವೋವಿದಂ—ಧನಸ್ಯ ಲಂಭಕಂ** । ಧನವನ್ನು ಒದಗಿಸಿಕೊಡುವ ಅಥವಾ ಧನವನ್ನು ವೃದ್ಧಿಪಡಿಸುವ ಎಂದರ್ಥವು. ವರಿವಃ ಎಂಬ ಶಬ್ದವು ಧನನಾಮಗಳಲ್ಲಿ ಪಠಿತವಾಗಿದೆ (ನಿ- ೩-೯).

**ಧಿಷ್ಣ್ಯಾ—ಧಿಷಣಾರ್ಹೌ** । ಯಾಸ್ಕರು ಈ ಶಬ್ದದ ನಿರ್ವಚನವನ್ನು ಹೇಳುತ್ತಾ—

**ಧಿಷ್ಣ್ಯೇ—ಧಿಷಣಾಭಾವಃ ಧಿಷಣಾ ವಾಗ್ಧಿಷೇರ್ದಧಾತ್ಯರ್ಥೇ । ಧೀಸಾದಿನೀತಿ ವಾ । ಧೀಸಾನಿನೀತಿ ವಾ ॥** (ನಿ. ೮-೩)

ಎಂದು ವಿವರಿಸಿದಾರೆ. ಎಂದರೆ—ಧಿಷಣಾ ಎಂದರೆ ವಾಕ್ಕು. ಆ ವಾಕ್ಕನ್ನು ಧರಿಸಿರುವ ಸಾಮರ್ಥ್ಯಕ್ಕೆ ಧಿಷ್ಣ್ಯ ಎಂದು ಹೆಸರು. ವಾಕ್ಸಾಮರ್ಥ್ಯವುಳ್ಳವರು ಎಂದರ್ಥವು. ಅಥವಾ ಧೀ ಶಬ್ದಕ್ಕೆ ಪ್ರಜ್ಞಾ ಅಥವಾ ಕರ್ಮ ಎಂದೂ ಅರ್ಥವಾಗುವುದರಿಂದ ಆ ಪ್ರಜ್ಞೆಯು ಅಥವಾ ಕರ್ಮವು (ಯಜ್ಞಕರ್ಮವು) ಇವರಲ್ಲಿ ಕುಳಿತಿರುವುದರಿಂದ ಎಂದರೆ ನೆಲೆಸಿರುವುದರಿಂದ ಇವರಿಗೆ ಧಿಷ್ಣ್ಯಾ ಎಂದು ಹೆಸರು. ಋ. ಸಂ. ೧-೩-೨ ನೇ ಋಕ್ಕಿನಲ್ಲಿರುವ ಧಿಷ್ಣ್ಯಾ ಎಂಬ ಶಬ್ದಕ್ಕೆ ವ್ಯಾಖ್ಯಾನಮಾಡುವಾಗ ಭಾಷ್ಯಕಾರರು **ಧಿಷ್ಣ್ಯಾ ಧಾರ್ಷ್ಟ್ಯಯುಕ್ತೌ**—ಧೈರ್ಯಶಾಲಿಗಳು ಅಥವಾ ಬುದ್ಧಿ ಶಾಲಿಗಳು ಎಂದರ್ಥಮಾಡಿರುವರು ಸ್ಕಂದಸ್ವಾಮಿಯು—

**ಧಿಷಣೇತಿ ವಾಙ್ನಾಮ । ತಸ್ಯಾಃ ಪುತ್ರಾ ಧಿಷ್ಣ್ಯಾಃ । ಅಪತ್ಯೇ ಯತ್ಪ್ರತ್ಯಯೋ ದ್ರಷ್ಟವ್ಯಃ । ಅಥವಾ ಧೀರಿತಿ ಪ್ರಜ್ಞಾನಾಮ । ಷ್ಣೈ ವೇಷ್ಟನೇ । ಧೀಃ ವೇಷ್ಟಯಿತ್ರೀ ಸರ್ವಾರ್ಥಗ್ರಹಣ-ಸಮರ್ಥಾಃ ಯೇಯೋಸ್ತಾ ಧಿಷ್ಣಾ । ಧಿಷ್ಣಾ ಏವ ಧಿಷ್ಣ್ಯಾಃ । ಅತ್ಯಂತಪ್ರಜ್ಞಾ ಇತ್ಯರ್ಥಃ ॥**

ಎಂದರೆ—**ಧಿಷಣಾ** ಎಂದರೆ ವಾಕ್ಕಿನ ಹೆಸರು. ಅದರ ಪುತ್ರರು, ಅಥವಾ **ಧೀಃ** ಎಂದರೆ ಪ್ರಜ್ಞೆಯು. **ಷ್ಣೈ**—ಯುಕ್ತ ರಾದವರು ಎಂದರೆ ಪ್ರಜ್ಞೆಯಿಂದ ಕೂಡಿದವರು, ಸರ್ವಾರ್ಥಗ್ರಹಣಸಮರ್ಥರು, ಅತ್ಯಂತಪ್ರಜ್ಞಾಶಾಲಿಗಳು ಎಂದರ್ಥವು. **ಧಿಷಣಾ** ಎಂದರೆ ವಾಕ್ಯವು ಅಥವಾ ಶಬ್ದಜಾಲವು ಈ ಶಬ್ದವು **ಧೀಃ** ಎಂಬ ಧಾತುವಿನಿಂದ ನಿಷ್ಪನ್ನವಾಗಿರುತ್ತದೆ. ಆದುದರಿಂದ **ಧಿಷ್ಣ್ಯ** ಶಬ್ದಕ್ಕೆ ಮನಸ್ಸನ್ನು (ಅಥವಾ ವಾಕ್ಯಗಳನ್ನು) ಪ್ರೇರಿಸತಕ್ಕವರು ಎಂಬ ಅರ್ಥದಲ್ಲಿ ಇತರ ಭಾಷ್ಯಕಾರರು ಈ ಶಬ್ದಕ್ಕೆ ಅರ್ಥಮಾಡಿರುವರು.

**ಧಿಷ್ಣ್ಯ**—ಎಂಬ ಶಬ್ದಕ್ಕೆ ಸಾಯಣರು **ಉನ್ನತಸ್ಥಾನಾರ್ಹಾ** । ಉನ್ನತವಾದ ಸ್ಥಾನಕ್ಕೆ ಅಥವಾ ಪದವಿಗೆ ಅರ್ಹರು ಎಂದರ್ಥಮಾಡಿದ್ದಾರೆ. ಪೂಜಾರ್ಹರೆಂದರ್ಥ. ಅಗ್ನೀಧ್ರಾದಿಸ್ಥಾನಗಳಿಗೂ ಈ ಪರ್ಯಾಯಪದವಿರುವುದರಿಂದ ಇಲ್ಲಿ ಅಂತಹ ಸ್ಥಾನಕ್ಕೆ ಅರ್ಹರೆಂದೂ ಅರ್ಥವಾಗಬಹುದು **ಧಿಷಣಾ, ಧಿಷ್ಣ್ಯ** ಎಂಬ ಎರಡು ಪದಗಳಿಗೂ ಸಾಧಾರಣವಾಗಿ ಒಂದೇ ಅರ್ಥವಾಗುತ್ತದೆ (ಈ ಎರಡು ಪದಗಳಿಗೂ ಅರ್ಥವ್ಯತ್ಯಾಸವಾಗುವುದು ಬಹಳ ಅಪರೂಪ).

**ಧಿಷಣಾ** ಎಂಬ ಪದವನ್ನು ನಿರುಕ್ತಕಾರರು **ವಾಙ್**ನಾಮಗಳಲ್ಲೂ (ನಿ. ೨–೨೩) ಮತ್ತು **ದ್ಯಾವಾಪೃಥಿವೀ** ನಾಮಗಳಲ್ಲೂ (ನಿ. ೩–೩೧) ಸೇರಿಸಿದ್ದಾರೆ.

**ಮೇದ್ಯಂತು ತೇ ವಹ್ನಯೋ ಯೇಭಿರೀಯಸೇಽರಿಷಣ್ಯನ್ವೀಳಯಸ್ವಾ ವನಸ್ಪತೇ ।**
**ಆಯೂಯಾ ಧೃಷ್ಣೋ ಅಭಿಗೂರ್ಯಾ ತ್ವಂ ನೇಷ್ಟ್ರಾತ್ಸೋಮಂ ದ್ರವಿಣೋದಃ ಪಿಬ ಋತುಭಿಃ ॥**
(ಋ. ಸಂ. ೨–೩೭–೩)

ಎಂಬ ಋಕ್ಕನ್ನುದಾಹರಿಸಿ ಅಲ್ಲಿ **ಧಿಷ್ಣ್ಯದ್ಧಿಷ್ಣ್ಯೇ ಧಿಷಣ್ಯೇ ಧಿಷಣಾಭವಃ । ಧಿಷಣಾ ವಾಕ್ ಧಿಷೇರ್ದ-ಧಾತ್ಯರ್ಥೇ । ಧೀಸಾದಿನೀತಿ ವಾ । ಧೀ ಸಾನಿನೀತಿ ವಾ ।** "ಹಿಡಿದಿರು" ಎಂಬರ್ಥವನ್ನು ಕೊಡುವ **ಧಿಷ್** ಧಾತುವಿನಿಂದ ನಿಷ್ಪನ್ನವಾಗಿ **ವಾಕ್** ಎಂದರ್ಥವಾಗಿದೆ. ಅಥವಾ ಬುದ್ಧಿಯನ್ನು ಪ್ರಸರಿಸು ಅಥವಾ ಸಂಪಾದಿಸು ಎಂದೂ ತಾತ್ಪರ್ಯವನ್ನು ಕೊಡುತ್ತದೆ. ಆದ್ದರಿಂದ **ಧಿಷಣಾ** ಎಂಬ ಪದಕ್ಕೆ **ವಾಕ್** ಎಂದರ್ಥ, ಎಂಬ ನಿರ್ವಚನ ವನ್ನು ತೋರಿಸಿರುತ್ತಾರೆ. ಆದರೆ ಈ ಪದಕ್ಕೆ ಇತರ ಅರ್ಥಗಳೂ ಸಾಧ್ಯವಾಗುತ್ತವೆ.

**ಆಪಶ್ಚ ಮಿತ್ರಂ ಧಿಷಣಾ ಚ ಸಾಧನ್ದೇವಾ ಅಗ್ನಿಂ ಧಾರಯನ್ದ್ರವಿಣೋದಾಂ ।**
(ಋ ಸಂ. ೧–೯೬–೧)

**ಇಮಾಂ ತೇ ಧಿಯಂ ಪ್ರ ಭರೇ ಮಹೋ ಮಹೀಮಸ್ಯ ಸ್ತೋತ್ರೇ ಧಿಷಣಾ ಯತ್ತ ಆನಜೇ ।**
(ಋ. ಸಂ. ೧–೧೦೨–೧)

ಇತ್ಯಾದಿ ಋಕ್ಕುಗಳಲ್ಲಿ **ವಾಕ್ಕು** ಅಥವಾ **ಬುದ್ಧಿ** ಎಂದರ್ಥವಾಗುತ್ತದೆ. **ವಾಕ್** ಎನ್ನುವುದಕ್ಕೆ ಸ್ತುತಿರೂಪವಾದ **ವಾಕ್** ಎಂದು ಅರ್ಥಮಾಡಿದರೆ **ಧಿಷ್ಣ್ಯ** ಎಂಬ ಪದಕ್ಕೆ **ಸ್ತುತ್ಯರ್ಹರು,** ಪೂಜಾರ್ಹರು ಎಂಬುದಾಗಿ ಈ ಅರ್ಥದಲ್ಲಿ ಇದೇ ಪದವು ಅನೇಕ ಕಡೆಗಳಲ್ಲಿ ಪ್ರಯೋಗಿಸಲ್ಪಟ್ಟಿದೆ.

**ತನ್ನೋ ವಾತೋ ಮಯೋಭು ವಾತು ಭೇಷಜಂ ತನ್ಮಾತಾ ಪೃಥಿವೀ ತತ್ಪಿತಾ ದ್ಯೌಃ ।**
**ತದ್ಗ್ರಾವಾಣಃ ಸೋಮಸುತೋ ಮಯೋಭುವಸ್ತದಶ್ವಿನಾ ಶೃಣುತಂ ಧಿಷ್ಣ್ಯಾ ಯುವಂ ॥**
(ಋ. ಸಂ. ೧-೮೯-೪)

ಎಂಬಲ್ಲಿ **ಧಿಷ್ಣ್ಯಾ** ಎಂಬ ಪದವು ಅಶ್ವಿನೀ ದೇವತೆಗಳಿಗೇ ವಿಶೇಷಣವಾಗಿದೆ. ಇದಕ್ಕೆ ಸಾಯಣರು **ಧಿಷಣಾ ಬುದ್ಧಿಃ, ತದಾರ್ಹಾವಶ್ವಿನೌ** ಎಂದರೆ ಧ್ಯಾನಾರ್ಹರು ಎಂದು ಅರ್ಥಮಾಡಿದ್ದಾರೆ. ಇದರಂತೆಯೇ,

**ಯುವಂ ಶ್ರೀಭಿರ್ದರ್ಶತಾಭಿರಾಭಿಃ ಶುಭೇ ಪುಷ್ಟಿಮೂಹಥುಃ ಸೂರ್ಯಾಯಾಃ ।**
**ಪ್ರ ವಾಂ ವಯೋ ವಪುಷೋಽನು ಪಪ್ತನ್ನಕ್ಷದ್ವಾಣೀ ಸುಷ್ಟುತಾ ಧಿಷ್ಣ್ಯಾ ವಾಂ ॥**
(ಋ. ಸಂ ೬-೬೩-೬)

ಇತ್ಯಾದಿ ಸನ್ನಿವೇಶಗಳಲ್ಲೂ ಸಹ (ಋ. ಸಂ. ೮-೫-೧೪; ೨-೨೬-೧೨) ಈ ವಿಶೇಷಣವು ಅಶ್ವಿನೀ ದೇವತೆಗಳ ಪರವಾಗಿಯೇ ಉಪಯೋಗಿಸಲ್ಪಟ್ಟು ಅಲ್ಲೆಲ್ಲಾ **ಸ್ತುತ್ಯರ್ಹೌ, ಪೂಜಾರ್ಹೌ** ಎಂಬರ್ಥದಲ್ಲಿ ಪ್ರಯುಕ್ತವಾಗಿದೆ

**ಕದ್ಧಿಷ್ಣ್ಯಾಸು ವೃಧಸಾನೋ ಅಗ್ನೇ ಕದ್ವಾತಾಯ ಪ್ರತವಸೇ ಶುಭಂ ಯೇ ।**
**ಪರಿಜ್ಮನೇ ನಾಸತ್ಯಾಯ ಕ್ಷೇ ಬ್ರವಃ ಕದಗ್ನೇ ರುದ್ರಾಯ ನೃಘ್ನೇ ॥**
(ಋ. ಸಂ. ೪-೩-೬)

ಇತ್ಯಾದಿ ಋಕ್ಕುಗಳಲ್ಲಿ **ಧಿಷ್ಣ್ಯ** ಪದಕ್ಕೆ ಸ್ಥಾನವೆಂದರ್ಥವಾಗಿ ಉದಾಹೃತವಾಗಿರುವ ಈ ಸ್ಥಳದಲ್ಲಿ ಆಗ್ನೀಧ್ರಿಯಾದಿ ಸ್ಥಾನೇಷು ಎಂದರ್ಥವಾಗಿದೆ. (ಋ. ಸಂ. ೧೦-೧೧೪-೯) ಪೂಜಾರ್ಹವಾಗಿರುವ ಎಂಬ ಸಾಮಾನ್ಯಾರ್ಥವಿದ್ದರೂ ಸಹ ಕೆಲವೆಡೆಗಳಲ್ಲಿ ಈ ಪದವನ್ನು ದ್ಯಾವಾಪೃಥಿವೀನಾಮಗಳಲ್ಲಿ ಸೇರಿಸಿದ್ದಾರೆ (ನಿ ೩-೨೧).

**ಮಹಸ್ಕರಥೋ ವರಿವೋ ಯಥಾ ನೋಽಸ್ಮೇ ಕ್ಷಯಾಯ ಧಿಷಣೇ ಅನೇಹಃ ।**
(ಋ. ಸಂ. ೬-೫೦-೩)

**ಸಮೀಚೀನೇ ಧಿಷಣೇ ವಿ ಷ್ಕಭಾಯತಿ ವೃಷ್ಣಃ ಪೀತ್ವಾ ಮದ ಉಕ್ಥಾನಿ ಶಂಸತಿ ॥**
(ಋ. ಸಂ. ೧೦-೪೪-೮)

ಇತ್ಯಾದಿ ಋಕ್ಕುಗಳಲ್ಲಿ ದ್ಯಾವಾಪೃಥಿವಿಯೆಂದೇ ಅರ್ಥ. ಕೆಲವು ಸನ್ನಿವೇಶಗಳಲ್ಲಿ ಸೋಮರಸವನ್ನು ತುಂಬುವ ಚೀಲವೆಂದೂ ಈ ಪದಕ್ಕೆ ಅರ್ಥವಾಗುತ್ತದೆ. ಕೆಲವೆಡೆಗಳಲ್ಲಿ ಸಾಯಣರು ಮೇಲ್ಕಂಡರ್ಥಗಳಲ್ಲಿ ಯಾವುದೂ ಅಲ್ಲದೇ ಈ ಪದಕ್ಕೆ ಬೇರೆ ವಿಧವಾದ ನಿಷ್ಪತ್ತಿಯನ್ನು ತೋರಿಸಿ ಅಪರೂಪವಾದ ಅರ್ಥವನ್ನು ತಿಳಿಸಿದ್ದಾರೆ. ಉದಾಹರಣೆಗೆ—

**ಅಗ್ನೇ ದಿವೋ ಅರ್ಣಮಚ್ಛಾ ಜಿಗಾಸ್ಯಚ್ಛಾ ದೇವಾಁ ಊಚಿಷೇ ಧಿಷ್ಣ್ಯಾ ಯೇ ।**
**ಯಾ ರೋಚನೇ ಪರಸ್ತಾತ್ಸೂರ್ಯಸ್ಯ ಯಾಶ್ಚಾವಸ್ತಾದುಪತಿಷ್ಠಂತ ಆಪಃ ॥**
(ಋ. ಸಂ. ೩-೨೨-೩)

ಎಂಬಲ್ಲಿ **ಧಿಯಂ ಬುದ್ಧ್ಯಾಸಹಿತಂ ದೇಹಂ ಉಪ್ಣಂತ್ಯಭಿಷ್ಣೀಕುರ್ವಂತಿ ಇತಿ ಧಿಷ್ಣ್ಯಾಃ** ಬುದ್ಧಿಯುಕ್ತವಾದ ದೇಹದಲ್ಲಿ ಅಭಿಮಾನವನ್ನು ತೋರಿಸುವುದರಿಂದ **ಧಿಷ್ಣ್ಯ**ವೆಂಬ ಹೆಸರು. ಉದಾಹೃತವಾದ ಈ ಋಕ್ಕಿನಲ್ಲಿ ದೇವತೆಗಳಿಗೆ ವಿಶೇಷಣವಾಗಿದೆ. ಈ ರೀತಿ ಅನೇಕವಾದ ಅರ್ಥಗಳಲ್ಲಿ ಈ ಪದದ ಪ್ರಯೋಗವಿರುವುದರಿಂದ ಪ್ರಕೃತವಾದ ಋಕ್ಕಿನಲ್ಲಿ ಪೂಜ್ಯಸ್ಥಾನವನ್ನಾಕ್ರಮಿಸಿರುವ **ಅಶ್ವಿನೀ** ದೇವತೆಗಳೆಂದರ್ಥ.

॥ ಸಂಹಿತಾಪಾಠಃ ॥

**ಇಂದ್ರೋ ಅಂಗ ಮಹದ್ಭಯಮಭೀ ಷದಪ ಚುಚ್ಯವತ್**

**ಸ ಹಿ ಸ್ಥಿರೋ ವಿಚರ್ಷಣಿಃ ॥ ೧೦ ॥**

॥ ಪದಪಾಠಃ ॥

**ಇಂದ್ರಃ । ಅಂಗ । ಮಹತ್ । ಭಯಂ । ಅಭಿ । ಸತ್ । ಅಪ । ಚುಚ್ಯವತ್ ।**

**ಸಃ । ಹಿ । ಸ್ಥಿರಃ । ವಿऽಚರ್ಷಣಿಃ ॥ ೧೦ ॥**

॥ ಸಾಯಣಭಾಷ್ಯಂ ॥

**ಇಂದ್ರೋ ಮಹದಧಿಕಮಭೀಷದಭಿಭವದ್ಭಯಂ ಭಯಕಾರಣಮಪಚುಚ್ಯವತ್ । ಅಪಚ್ಯಾವಯೇತ್ । ಹಿ ಯಸ್ಮಾತ್ಕಾರಣಾತ್ ಸ ಸ್ಥಿರಃ ಕೇನಾಪಿ ಚಾಲಯಿತುಮಶಕ್ಯೋ ವಿಚರ್ಷಣಿರ್ವಿಶ್ವಸ್ಯ ದ್ರಷ್ಟಾ ॥**

॥ ಪ್ರತಿಪದಾರ್ಥ ॥

**ಇಂದ್ರಃ**—ಇಂದ್ರನು । **ಅಂಗ**—ನಮ್ಮನ್ನು ಆವರಿಸಿರುವುದೂ । **ಮಹತ್**—ಅತ್ಯಧಿಕವಾದುದೂ । **ಅಭೀಷತ್**—ನಮ್ಮನ್ನು ಕುಗ್ಗಿಸುವುದೂ ಆದ । **ಭಯಂ**—ಭೀತಿಯನ್ನು । **ಅಪ ಚುಚ್ಯವತ್**—ನಾಶಮಾಡಲಿ । **ಹಿ**—ಏತಕ್ಕೆಂದರೆ । **ಸಃ**—ಆ ಇಂದ್ರನು । **ಸ್ಥಿರಃ**—ಅಚಲನೂ । **ವಿಚರ್ಷಣಿಃ**—ಸರ್ವಜ್ಞನೂ ಆಗಿದ್ದಾನೆ.

॥ ಭಾವಾರ್ಥ ॥

ಇಂದ್ರನು ಅಚಲನೂ, ಸರ್ವಜ್ಞನೂ ಆಗಿರುವುದರಿಂದ ಅವನು ಅತ್ಯಧಿಕವಾದುದೂ, ನಮ್ಮನ್ನು ಕುಗ್ಗಿಸುವುದೂ ಆದ ಭೀತಿಯನ್ನು ನಾಶಮಾಡಲಿ.

## English Translation.

May Indra dissipate all great and overpowering danger, for he is resolute, and the beholder of all.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಮುಂದಿನ ಎರಡು ಋಕ್ಕುಗಳಲ್ಲಿಯೂ ಶತ್ರುಗಳಿಂದ ಉಂಟಾಗಬಹುದಾದ ಭಯವನ್ನು ನಿವಾರಣೆಮಾಡಿ ರಕ್ಷಿಸಬೇಕೆಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ.

**ಅಂಗ**—ಅಂಗಶಬ್ದಕ್ಕೆ ಯಾಸ್ಕರು—**ಅಂಗಮಂಗನಾದಂಚನಾದ್ವಾ ।** ಎಂದು ನಿರ್ವಚನವನ್ನು ಹೇಳಿದ್ದಾರೆ (ನಿ. ೪–೩). ದುರ್ಗಾಚಾರ್ಯರು **ಅಂಗನಾತ್ ಅಂಗಿತಂ ತತ್ಕಾಲೇನ ಭವತಿ ಗತಮಿತ್ಯರ್ಥಃ । ಅಂಚನಾದ್ವಾ । ಅಂಚತಿರಪಿ ಗತ್ಯರ್ಥ ಏವ ಧಾತ್ವನ್ಯತ್ವಮರ್ಥೈಕತ್ವಂ ।** ಎಂದು ಅರ್ಥವಿವರಣೆ ಮಾಡಿದ್ದಾರೆ. ಅಂಗ ಶಬ್ದವು ಗತ್ಯರ್ಥವನ್ನು ಸೂಚಿಸುವ ಅಂಗನಾತ್ ಎಂಬುದರಿಂದಾಗಲಿ, ಅಂಚನಾತ್ ಎಂಬುದರಿಂದಾಗಲಿ ನಿಷ್ಪನ್ನವಾಗಿದೆ. ಈ ಎರಡು ಧಾತುಗಳು ಪ್ರತ್ಯೇಕವಾಗಿದ್ದರೂ ಅರ್ಥ ಮಾತ್ರ ಒಂದೇ ಆಗಿರುವುದು. ಆದುದರಿಂದ ಪ್ರಕೃತ ಋಕ್ಕಿನಲ್ಲಿ ಅಂಗ ಶಬ್ದವು ಭಯಂ ಎಂಬ ಶಬ್ದಕ್ಕೆ ವಿಶೇಷಣವಾಗಿ—ನಮ್ಮನ್ನು ಹೊಂದಿರುವ ಎಂದರೆ ಆವರಿಸಿರುವ ಎಂಬರ್ಥವನ್ನು ವಿವರಿಸುವುದು.

**ಸಃ ಹಿ ಸ್ಥಿರಃ ವಿಚರ್ಷಣಿಃ—ಸಃ ಇಂದ್ರಃ ಕೇನಾಪಿ ಚಾಲಯಿತುಮಶಕ್ಯಃ ವಿಶ್ವಸ್ಯ ದ್ರಷ್ಟಾ।** ನಮ್ಮನ್ನು ಆವರಿಸಿರುವ ಮಹದ್ಭಯವನ್ನು ನಿವಾರಣೆ ಮಾಡಬೇಕೆಂದು ಈ ಋಕ್ಕಿನ ಪೂರ್ವಾರ್ಧದಲ್ಲಿ ಪ್ರಾರ್ಥಿಸಲಾಗಿದೆಯಷ್ಟೆ. ಆದರೆ ಭಯನಿವಾರಣೆಯ ವಿಷಯದಲ್ಲಿ ಇಂದ್ರನಿಗೆ ಶಕ್ತಿಸಾಮರ್ಥ್ಯಗಳಿವೆಯೇ ಎಂಬುದನ್ನು ಈ ಋಕ್ಕಿನ ಉತ್ತರಾರ್ಧದಲ್ಲಿ ಹೇಳಿದೆ. ಇಂದ್ರನ ಶಕ್ತಿಯು ಅಗಾಧವಾದುದು. ಏಕೆಂದರೆ ಅವನು ಸ್ಥಿರವಾಗಿರುವವನು. ಅವನನ್ನು ಚಲಿಸುವಂತೆ ಮಾಡಲು ಯಾರಿಂದಲೂ ಸಾಧ್ಯವಿಲ್ಲ. ಅದಲ್ಲದೆ ಅವನು ಸರ್ವವನ್ನೂ ನೋಡಿ ತಿಳಿಯುವವನು. ನಮ್ಮ ಪ್ರಾರ್ಥನೆಯನ್ನು ಕೇಳಿ ತಿಳಿದುಕೊಳ್ಳುವ ಶಕ್ತಿಯೂ ಅದನ್ನು ನೆರವೇರಿಸುವ ಶಕ್ತಿಯೂ ಇಂದ್ರನಿಗೆ ಇರುವುದು. ಆದುದರಿಂದಲೇ ಇಂದ್ರನು **ಸರ್ವಸ್ಯ ದ್ರಷ್ಟಾ**—ಸರ್ವವನ್ನೂ ನೋಡುವವನು, ಸರ್ವಜ್ಞ ಎಂದು ಹೇಳಿದೆ.

॥ ಸಂಹಿತಾಪಾಠಃ ॥

ಇಂದ್ರಶ್ಚ ಮೃಳಯಾತಿ ನೋ ನ ನಃ ಪಶ್ಚಾದಘಂ ನಶತ್

ಭದ್ರಂ ಭವಾತಿ ನಃ ಪುರಃ ॥ ೧೧ ॥

॥ ಪದಪಾಠಃ ॥

**ಇಂದ್ರಃ । ಚ । ಮೃಳಯಾತಿ । ನಃ । ನ । ನಃ । ಪಶ್ಚಾತ್ । ಅಘಂ । ನಶತ್**

**ಭದ್ರಂ । ಭವಾತಿ । ನಃ । ಪುರಃ ॥ ೧೧ ॥**

॥ ಸಾಯಣಭಾಷ್ಯಂ ॥

**ಇಂದ್ರಶ್ಚ ಪರಮೈಶ್ವರ್ಯವಾನಿಂದ್ರಶ್ಚೇತ್ ನೋಽಸ್ಮಾನ್ ಮೃಳಯಾತಿ ಸುಖಯೇತ್ । ಪಶ್ಚಾತ್ ಪೃಷ್ಠತೋ ನೋಽಸ್ಮಾನಘಂ ದುರಿತಂ ನ ನಶತ್ । ಪ್ರಾಪ್ನೋತಿ । ನೋಽಸ್ಮಾಕಂ ಪುರಃ ಪುರಸ್ತಾದ್ಭದ್ರಂ ಕಲ್ಯಾಣಂ ಚ ಭವಾತಿ । ಭವತಿ ॥**

॥ ಪ್ರತಿಪದಾರ್ಥ ॥

**ಇಂದ್ರಶ್ಚ**—ಇಂದ್ರನಾದರೋ । **ನಃ**—ನಮ್ಮನ್ನು । **ಮೃಳಯಾತಿ**—ಸುಖಪಡಿಸಿದ್ದೇ ಆದರೆ । **ಪಶ್ಚಾತ್**—ಹಿಂಭಾಗದಿಂದ । **ನಃ** - ನಮ್ಮನ್ನು । **ಅಘಂ**—ಪಾಪವು । **ನ ನಶತ್**—ಸಮೀಪಿಸುವುದಿಲ್ಲ । **ನಃ**—ನಮ್ಮ । **ಪುರಃ**—ಮುಂಭಾಗದಿಂದ । **ಭದ್ರಂ**—ಕಲ್ಯಾಣವು । **ಭವಾತಿ**—ಬಂದು ಸೇರುತ್ತದೆ.

॥ ಭಾವಾರ್ಥ ॥

ಇಂದ್ರನು ನಮಗೆ ಸುಖದಾತನಾದರೆ, ನಮ್ಮನ್ನು ಹಿಂಭಾಗದಿಂದ ಪಾಪವು ಸಮೀಪಿಸುವುದಿಲ್ಲ. ನಮ್ಮ ಮುಂಭಾಗದಿಂದ ಕಲ್ಯಾಣವು ಬಂದು ಸೇರುತ್ತದೆ.

## English Translation.

If Indra provide for our happiness, evil will not come behind us, good will be before us.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸ್ಪಷ್ಟವಾಗಿಯೇ ಇದೆ. ಸಕಲೈಶ್ವರ್ಯಸಂಪನ್ನನಾದ ಇಂದ್ರನು ನಮಗೆ ಸುಖವನ್ನು ಉಂಟುಮಾಡುವುದಾದರೆ ನಾವು ಇದುವರೆಗೆ ಮಾಡಿದ ಪಾಪಗಳು, ದುಷ್ಕೃತ್ಯಗಳು ಎಲ್ಲವೂ ನಾಶವಾಗಿ ಮುಂದೆ ನಮಗೆ ಸುಖವೇ ಉಂಟಾಗುವುದು ಎಂದು ಮುಖ್ಯಾಭಿಪ್ರಾಯವು.

**ಇಂದ್ರಃ**—ಇಂದ್ರಶಬ್ದದ ನಿಷ್ಪತ್ತಿಯನ್ನು ನಾನಾವಿಧ ಅರ್ಥಗಳನ್ನೂ ನಿರ್ವಚನವನ್ನೂ ನಾವು ಹಿಂದೆಯೇ ವಿವರಿಸಿದೇವೆ.

**ಅಘಂ—ಆಙ್ಪೂರ್ವಾತ್ ಹಂತೇಃ ಅನ್ಯೇಷ್ವಪಿ ದೃಶ್ಯತೇ ಇತಿ ಡಃ । ಪೃಷೋದರಾದಿತ್ವಾತ್ ಆಙ್ ಹ್ರಸ್ವತ್ವಂ ಹಕಾರಸ್ಯ ಘತ್ವಂ ಚ ।** ಹನ ಹಿಂಸಾಗತ್ಯೋಃ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಆಙ್ ಉಪಸರ್ಗದಿಂದ ಕೂಡಿರುವ ಈ ಶಬ್ದಕ್ಕೆ ಕೊಲ್ಲುವುದು, ಬಾಧೆಪಡಿಸುವುದು ಎಂದರ್ಥವಾಗುವುದು. ಆದುದರಿಂದ ಅಘ ಶಬ್ದಕ್ಕೆ ಬಾಧೆಯನ್ನುಂಟುಮಾಡುವ ಪಾಪವು, ದುರಿತವು ಎಂದಭಿಪ್ರಾಯವು.



॥ ಸಂಹಿತಾಪಾಠಃ ॥

ಇಂದ್ರ ಆಶಾಭ್ಯಸ್ಪರಿ ಸರ್ವಾಭ್ಯೋ ಅಭಯಂ ಕರತ್ ।
ಜೇತಾ ಶತ್ರೂನ್ವಿಚರ್ಷಣಿಃ ॥ ೧೨ ॥

॥ ಪದಪಾಠಃ ॥

ಇಂದ್ರಃ । ಆಶಾಭ್ಯಃ । ಪರಿ । ಸರ್ವಾಭ್ಯಃ । ಅಭಯಂ । ಕರತ್ ।
ಜೇತಾ । ಶತ್ರೂನ್ । ವಿऽಚರ್ಷಣಿಃ ॥ ೧೨ ॥

॥ ಸಾಯಣಭಾಷ್ಯಂ ॥

ವಿಚರ್ಷಣಿರ್ವಿವಿಧಂ ದ್ರಷ್ಟಾ ಜೇತಾ ಶತ್ರೂನಸುರಾನ್ ಜೇತಾ ॥ ತೃನಂತತ್ವಾತ್ ಷಷ್ಠ್ಯಭಾವಃ ॥ ಇಂದ್ರಃ ಪರಮೈಶ್ವರ್ಯವಾನ್ ಸರ್ವಾಭ್ಯ ಆಶಾಭ್ಯೋ ದಿಗ್ಭ್ಯೋऽಸ್ಮಾಕಮಭಯಂ ಕರತ್। ಕರೋತು॥ ಪರೀತಿ ಪಂಚಮ್ಯಾದ್ಯೋತಕಃ ॥

॥ ಪ್ರತಿಪದಾರ್ಥ ॥

**ವಿಚರ್ಷಣಿಃ**—ಸರ್ವಜ್ಞನೂ । **ಶತ್ರೂನ್ ಜೇತಾ**—ಶತ್ರುಗಳನ್ನು ಜಯಿಸುವವನೂ ಆದ । **ಇಂದ್ರಃ**—ಇಂದ್ರನು । **ಸರ್ವಾಭ್ಯಃ**—ಸಮಸ್ತವಾದ । **ಆಶಾಭ್ಯಃ ಪರಿ**—ದಿಕ್ಕುಗಳಿಂದಲೂ । **ಅಭಯಂ**—ಭಯರಾಹಿತ್ಯವನ್ನು । **ಕರತ್**—ಉಂಟುಮಾಡಲಿ.

॥ ಭಾವಾರ್ಥ ॥

ಸರ್ವಜ್ಞನೂ, ಶತ್ರುಗಳನ್ನು ಜಯಿಸುವವನೂ ಆದ ಇಂದ್ರನು ಸಮಸ್ತವಾದ ದಿಕ್ಕುಗಳಿಂದಲೂ ಭಯರಾಹಿತ್ಯವನ್ನುಂಟುಮಾಡಲಿ.

## English Translation.

Let Indra, the beholder of all, the conqueror of foes, tend us security from all quarters.

॥ ವಿಶೇಷವಿಷಯಗಳು ॥

**ವಿಚರ್ಷಣಿಃ**—**ವಿಚರ್ಷಣಿಃ** ಅಥವಾ **ವಿಶ್ವಚರ್ಷಣಿಃ** ಎಂಬ ಶಬ್ದವು **ಚಿಕ್ಯತ್, ಚಾಕನತ್** ಮೊದಲಾದ ಎಂಟು ಪಶ್ಯತಿಕರ್ಮವಾಚಕಶಬ್ದಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ (ನಿ. ೩-೧೧) ವಿಚರ್ಷಣಿಃ ಎಂದರೆ ನೋಡುವವನು. **ವಿಶೇಷೇಣ ಸರ್ವಸ್ಯ ದ್ರಷ್ಟಾ**—ಸಮಸ್ತವನ್ನೂ ವಿಶೇಷವಾಗಿ ನೋಡುವವನು ಎಂದು ಈ ಶಬ್ದವು ಅಗ್ನಿ, ಇಂದ್ರ ಮೊದಲಾದ ಅನೇಕ ದೇವತೆಗಳ ಪರವಾಗಿ ಉಪಯೋಗಿಸಲ್ಪಡುವುದು.

ಈ ಋಕ್ಕಿನಲ್ಲಿ ಶತ್ರುಗಳನ್ನು ಜಯಿಸುವವನೂ, ಸಮಸ್ತವನ್ನೂ (ಎಂದರೆ ಜಗದ್ವ್ಯಾಪಾರವೆಲ್ಲವನ್ನೂ) ನೋಡುವವನೂ ಆದ ಇಂದ್ರನು ಸಮಸ್ತದಿಕ್ಕುಗಳಿಂದಲೂ ನಮಗೆ ಒದಗಬಹುದಾದ ಭಯವನ್ನು ನಿವಾರಣೆಮಾಡಿ ರಕ್ಷಿಸಬೇಕೆಂದು ಪ್ರಾರ್ಥಿಸಲಾಗಿದೆ.

ಸಂಹಿತಾಪಾಠಃ

ವಿಶ್ವೇ ದೇವಾಸ ಆ ಗತ ಶೃಣುತಾ ಮ ಇಮಂ ಹವಂ

ಏದಂ ಬರ್ಹಿರ್ನಿ ಷೀದತ ॥ ೧೩ ॥

ಪದಪಾಠಃ

ವಿಶ್ವೇ । ದೇವಾಸಃ । ಆ । ಗತ । ಶೃಣುತ । ಮೇ । ಇಮಂ । ಹವಂ ।

ಆ । ಇದಂ । ಬರ್ಹಿಃ । ನಿ । ಸೀದತ ॥ ೧೩ ॥

ಸಾಯಣಭಾಷ್ಯಂ

ಹೇ ವಿಶ್ವೇದೇವಾ ಆ ಗತ । ಇಹಾಗಚ್ಛತ । ಮೇ ಮದೀಯಮಿಮಂ ಹವಮಾಹ್ವಾನಂ ಶೃಣುತ । ಇದಂ ಬರ್ಹಿರಸ್ಮಿನ್ಬರ್ಹಿಷ್ಯಾನಿಷೀದತ । ಉಪವಿಶತ ॥

ಪ್ರತಿಪದಾರ್ಥ

ವಿಶ್ವೇ ದೇವಾಸಃ—ಎಲೈ ವಿಶ್ವೇದೇವತೆಗಳೇ । ಆ ಗತ—ಬನ್ನಿ । ಮೇ—ನನ್ನ । ಇಮಂ ಹವಂ—ಈ ಆಹ್ವಾನವನ್ನು । ಶೃಣುತ—ಕೇಳಿರಿ । ಇದಂ ಬರ್ಹಿಃ—ಈ ಆಸನದ ಮೇಲೆ । ಆ ನಿಷೀದತ—ಕುಳಿತುಕೊಳ್ಳಿ

ಭಾವಾರ್ಥ

ಎಲೈ ವಿಶ್ವೇದೇವತೆಗಳೇ, ನನ್ನ ಆಹ್ವಾನವನ್ನು ಕೇಳಿ ಇಲ್ಲಿ ಬನ್ನಿ. ಈ ಆಸನದ ಮೇಲೆ ಕುಳಿತುಕೊಳ್ಳಿ.

English Translation.

Universal gods, come hither; hear this my invocation; sit down upon this sacred grass.

ವಿಶೇಷವಿಷಯಗಳು

ಈ ಋಕ್ಕೂ ಮುಂದಿನ ಎರಡು ಋಕ್ಕುಗಳೂ ಸೇರಿ ಒಟ್ಟು ಮೂರು ಋಕ್ಕುಗಳು ವೈಶ್ವದೇವತ್ಯವೆಂದು ಹೇಳಲ್ಪಡುವವು ಎಂದರೆ ಈ ಮೂರು ಋಕ್ಕುಗಳಿಗೂ ವಿಶ್ವೇದೇವತೆಗಳೇ ದೇವತೆಯು.

**ವಿಶ್ವೇ ದೇವಾಸಃ**—ಅಶ್ವಿನೌ ಮೊದಲಾದ ದೇವತಾವಿಶೇಷಗಳನ್ನು ಸೂಚಿಸುವ ಮೂವತ್ತೊಂದು ನಾಮಗಳ ಮಧ್ಯದಲ್ಲಿ ಈ ದೇವತೆಗಳ ಹೆಸರು ಪಠಿತವಾಗಿರುವುದು. ಇವರು ಪ್ರತ್ಯೇಕವಾದ ವಿಶೇಷದೇವತೆಗಳೆಂದು ಭಾಷ್ಯಕಾರರು ಹೇಳಿರುವರು. ಕೆಲವರು ಎಲ್ಲಾ ದೇವತೆಗಳೆಂದು ಹೇಳುವರು. ಆದರೆ ವಿಶ್ವೇದೇವತೆಗಳೆಂದು ಪ್ರತ್ಯೇಕವಾದ ದೇವತೆಗಳನ್ನು ಋಷಿಗಳು ಆರಾಧಿಸುತ್ತಿದ್ದರೆಂದು ಇತರ ಸೂಕ್ತಗಳಲ್ಲಿರುವ ವಿಷಯಗಳಿಂದ ಸ್ಪಷ್ಟವಾಗಿ ಹೇಳಬಹುದು. ಈ ವಿಚಾರದಲ್ಲಿ ಯಾಸ್ಕರು ಈ ಋಕ್ಕಿಗೆ ವಿವರಣೆಯನ್ನು ಬರೆದಿರುವರು— **ಅವಿತಾರೋ ವಾವನೀಯಾ ವಾ ಮನುಷ್ಯಧೃತಃ ಸರ್ವೇ ದೇವಾ ಇಹಾಗಚ್ಛತ ದತ್ತವಂತೋ ದತ್ತವತಃ ಸುತಮಿತಿ, ತದೇತದೇಕಮೇವ ವೈಶ್ವದೇವಂ ಗಾಯತ್ರಂ ತೃಚಂ ದಶತಯೀಷು ವಿದ್ಯತೇ ಯತ್ತು ಕಿಂಚಿದ್ಬಹುದೈವತಂ ತದ್ವೈಶ್ವ-ದೇವಾನಾಂ ಸ್ಥಾನೇ ಯುಜ್ಯತೇ ಯದೇವ ವಿಶ್ವಲಿಂಗಮಿತಿ ಶಾಕಪೂಣಿಃ** (ನಿ. ೧೨-೪೦) ಈ ಋಕ್ಕಿನ ಅರ್ಥ ವಿಚಾರದಲ್ಲಿ ನಾವು ಹೇಳಿರುವ ಅರ್ಥಕ್ಕೂ ಯಾಸ್ಕರ ಅರ್ಥಕ್ಕೂ ಏನೂ ವ್ಯತ್ಯಾಸವಿಲ್ಲ. ಆದರೆ ಯಾಸ್ಕರ ಅಭಿಪ್ರಾಯದಂತೆ **ವಿಶ್ವೇದೇವಾಃ** ಎಂದರೆ ಎಲ್ಲಾ ದೇವತೆಗಳು ಎಂದು; ಮತ್ತು ವಿಶ್ವೇದೇವರೆಂದರೆ ಆ ಹೆಸರಿನಿಂದ ಕರೆಯಲ್ಪಡುವ ವಿಶೇಷದೇವತೆಗಳೆಂದು ಶಾಕಪೂಣಿ ಎಂಬುವರ ಮತವೆಂದು ಯಾಸ್ಕರೇ ಹೇಳಿರುವರು ಆದುದರಿಂದ ಅವರ ಕಾಲದಲ್ಲಿಯೇ ಈ ವಿಚಾರದಲ್ಲಿ ಭಿನ್ನಾಭಿಪ್ರಾಯವಿತ್ತೆಂದು ದೃಢವಾಗಿ ಹೇಳಬಹುದು ಈಗ ಗೃಹ್ಯಾದಿಕರ್ಮಗಳಲ್ಲಿ ರೂಢಿಯಿರುವಂತೆ ಹೇಳುವುದಾದರೆ ಈ ವಿಶ್ವೇದೇವತೆಗಳು ಸಾಧಾರಣ ದೇವತೆಗಳ ಗುಂಪಿಗೆ ಸೇರಿದವರಲ್ಲವೆಂದೂ ಇವರದೇ ಹದಿಮೂರು ಜನರ ವಿಶೇಷ ಗುಂಪೆಂದೂ ತಿಳಿಯಬರುವುದು. ಅದು ಹೇಗಾದರೂ ಇರಲಿ, ಋಗ್ವೇದದಲ್ಲಿ ವರ್ಣಿಸಿರುವ ವಿಶ್ವೇದೇವತೆಗಳು ಪ್ರತ್ಯೇಕವಾದ ದೇವತೆಗಳ ಗುಂಪಿಗೆ ಸೇರಿದವರೆಂದು ಹೇಳುವುದೇ ಯುಕ್ತವಾಗಿ ತೋರುವುದು.

ವಿಶ್ವೇದೇವತೆಗಳ ವಿಷಯದಲ್ಲಿ ಕೆಲವು ಮುಖ್ಯಾಂಶಗಳನ್ನು ಇಲ್ಲಿ ಹೇಳುವುದು ಅವಶ್ಯಕವಾಗಿರುವುದು. ಋಗ್ವೇದದಲ್ಲಿ ವಿಶ್ವೇದೇವತೆಗಳನ್ನು ಮಾತ್ರ ಸ್ತೋತ್ರಮಾಡಿರುವ ೬೩ ಸೂಕ್ತಗಳಿವೆ. ಇವಲ್ಲದೆ ಋ. ಸಂ. ೧-೧೬೪ನೆಯ ಸೂಕ್ತದಲ್ಲಿ ಮೊದಲನೆಯ ೪೧ ಋಕ್ಕುಗಳು ವಿಶ್ವದೇವತೆಗಳ ಪರವಾಗಿವೆ. ಇವುಗಳಲ್ಲೆಲ್ಲಾ— ಋ. ಸಂ. ೧೦-೧೫೫ ಈ ಸೂಕ್ತವನ್ನು ಬಿಟ್ಟು—ಉಳಿದ ಎಲ್ಲಾ ಸೂಕ್ತಗಳಲ್ಲಿಯೂ ಅನೇಕ ದೇವತೆಗಳನ್ನು ಸ್ತುತಿಸಿರುವುದಲ್ಲದೆ, ವೃಕ್ಷಗಳು, ನದಿಗಳು, ಪರ್ವತಗಳು, ಗೋವುಗಳು, ಅಶ್ವಗಳು ಮೊದಲಾದುವುಗಳೂ ಪ್ರತಿಪಾದಿಸಲ್ಪಟ್ಟಿವೆ. ಇವುಗಳಲ್ಲದೆ ಇತರ ದೇವತಾಕವಾದ ಸೂಕ್ತಗಳಲ್ಲಿ ಅನೇಕ ಕಡೆ ಒಟ್ಟು ೧೭ ಋಕ್ಕುಗಳು ವಿಶ್ವೇದೇವತಾಕವಾಗಿವೆ. ಈ ಸ್ಥಳಗಳಲ್ಲೆಲ್ಲಾ ವಿಶ್ವೇದೇವತೆಗಳೇ ಈ ಋಕ್ಕುಗಳಿಗೆ ದೇವತೆಗಳೆಂದು ಹೇಳಲ್ಪಟ್ಟಿದೆ. ಮತ್ತು ಋ. ಸಂ. ೧೦-೧೨೫-೧ನೆಯ ಮಂತ್ರದಲ್ಲಿ ವಿಶ್ವೇದೇವತೆಗಳ ಜೊತೆಯಲ್ಲಿ ವಸುರುದ್ರಾದಿತ್ಯರೂ ಸೇರಿದಾರೆ.

ವಾಜಸನೇಯ ಸಂಹಿತೆಯ (ಶುಕ್ಲಯಜುರ್ವೇದ) ೨-೨೨ ನೆಯ ಮಂತ್ರದಲ್ಲಿ ಇಂದ್ರನು, ಆದಿತ್ಯರು, ವಸುಗಳು, ಮರುತ್ತು ವಿಶ್ವೇದೇವತೆಗಳೊಡನೆ ಸೇರಬೇಕೆಂದು ಪ್ರಾರ್ಥಿಸಲ್ಪಟ್ಟಿರುವರು. ಅದೇ ಸಂಹಿತೆಯ ೩೩-೪೫ ರಿಂದ ೪೭ ಮಂತ್ರಗಳಲ್ಲಿ ಇಂದ್ರ, ವಾಯು ಮತ್ತು ಇತರ ದೇವತೆಗಳು ವಿಶ್ವೇದೇವತೆಗಳ ಜೊತೆಯಲ್ಲಿ ಸ್ತುತಿಸಲ್ಪಟ್ಟಿದ್ದಾರೆ.

ಅಥರ್ವಣವೇದದ ೨೦-೬೨-೬ ನೆಯ ಮಂತ್ರದಲ್ಲಿ ವಿಶ್ವೇದೇವತೆಗಳನ್ನು ಏಕವಚನದಲ್ಲಿ ಸೂಚಿಸಲಾಗಿದೆ ಮತ್ತು ವಿಶ್ವೇದೇವತೆಗಳ ಪರವಾದ ಅನೇಕ ಸೂಕ್ತಗಳು ಅಥರ್ವಣವೇದದಲ್ಲಿವೆ.

ಬ್ರಾಹ್ಮಣಗಳಲ್ಲಿಯೂ ಸಹ ವಿಶ್ವೇದೇವತೆಗಳ ಹೆಸರು ಅಲ್ಲಲ್ಲಿ ಸೂಚಿತವಾಗಿದೆ. ಕೌಶೀತಕೀ ಬ್ರಾಹ್ಮಣದ ೪–೧೪, ಗೋಪಥ ಬ್ರಾಹ್ಮಣದ ೧–೨೦ ನೆಯ ಮಂತ್ರಗಳಲ್ಲಿ ಎಲ್ಲಾ ದೇವತೆಗಳನ್ನು ವಿಶ್ವದೇವತೆಗಳೆಂಬ ಹೆಸರಿನಿಂದಲೇ ಸಂಬೋಧನೆಮಾಡಲಾಗಿದೆ. ಶಥಪಥ ಬ್ರಾಹ್ಮಣದ ೩-೯-೨-೬ ನೆಯ ಮಂತ್ರದಲ್ಲಿ ವಿಶ್ವೇದೇವತೆಗಳು ಸೂರ್ಯನ ಕಿರಣಗಳೆಂದೂ, ಶ ಬ್ರಾ ೧೪-೨-೨-೩೭ ರಲ್ಲಿ ಪ್ರಾಣಾದಿವಾಯುಗಳೆಂದೂ ಶ. ಬ್ರಾ. ೭-೧-೧-೪೨ ರಲ್ಲಿ ಯಜ್ಞಕರ್ಮಗಳೆಂದೂ. ಶ. ಬ್ರಾ. :೨-೪-೪–೧೩ ರಲ್ಲಿ ಇಂದ್ರಾಗ್ನಿಗಳೆಂದೂ ಕರೆಯಲ್ಪಟ್ಟಿದ್ದಾರೆ. ತೈತ್ತಿರೀಯ ಆರಣ್ಯಕದಲ್ಲಿ (ತೈ. ಆ. ೫-೧-೬) ವಿಶ್ವೇದೇವತೆಗಳ ಜೊತೆಯಲ್ಲಿ ಇಂದ್ರಾಗ್ನಿಗಳು ಸ್ತುತಿಸಲ್ಪಟ್ಟಿದಾರೆ.

ಪುರಾಣಗಳಲ್ಲಿ ಕೆಲವುಕಡೆ ಈ ವಿಶ್ವೇದೇವತೆಗಳು ದಿಕ್ಕುಗಳಿಗೆ ಅಧಿಪತಿಗಳೆಂದು ಹೇಳಲ್ಪಟ್ಟಿದೆ. ನಿರುಕ್ತದಲ್ಲಿ (ನಿ. ೧೨–೩೯) ವಿಶ್ವೇದೇವತೆಗಳೆಂದರೆ ಎಲ್ಲಾ ದೇವತೆಗಳೂ ಎಂದಿದೆ. ನಿರುಕ್ತದ ಭಾಷ್ಯಕಾರರಾದ ದುರ್ಗಾಚಾರ್ಯರೆಂಬುವರು ವಿಶ್ವೇದೇವತೆಗಳೆಂದರೆ ಸೂರ್ಯನ ಕಿರಣಗಳೆಂದು ಅರ್ಥಮಾಡಿದಾರೆ. ನಿರುಕ್ತಕಾರರಾದ ಯಾಸ್ಕರು ವಿಶ್ವೇದೇವತೆಗಳೆಂದರೆ ಸಮಸ್ತ ದೇವತೆಗಳು ಎಂದು ಅಭಿಪ್ರಾಯವನ್ನು ಹೇಳಿರುವುದಲ್ಲದೆ ಶಾಕಪೂಣಿ ಎಂಬುವರ ಅಭಿಪ್ರಾಯವನ್ನೂ ಸೂಚಿಸುವರು. ಶೌನಕರು ತಮ್ಮ ಬೃಹದ್ದೇವತಾ ಎಂಬ ಗ್ರಂಥದಲ್ಲಿ (ಬೃ. ದೇ. ೨-೧೨೮ ರಿಂದ ೧೩೪ ಶ್ಲೋಕಗಳು) ಈ ವಿಷಯವಾಗಿ ಹೇಳುವಾಗ, ವಿಶ್ವೇದೇವಾಃ ಎಂದರೆ ಸಮಸ್ತ ದೇವತೆಗಳು ಎಂದು ಯಾಸ್ಕರು ಮತ್ತು ಶಾಂಡಿಲ್ಯರು ಅಭಿಪ್ರಾಯ ಪಡುವರೆಂದು ಹೇಳಿದಾರೆ. ಶೌನಕರ ಮತವೂ ಅದೇ ರೀತಿ ಇದೆ.

ಸಾಯಣಾಚಾರ್ಯರು ಈ ಋಕ್ಕಿಗೆ ವ್ಯಾಖ್ಯಾನಮಾಡುವಾಗ ವಿಶ್ವೇದೇವತೆಗಳೆಂದರೆ ಅಶ್ವಿನೀದೇವತೆಗಳೇ ಮೊದಲಾದ ಮೂವತ್ತೊಂದು ಮಂದಿ ದೇವತೆಗಳು ಸೇರಿ ವಿಶ್ವೇದೇವತೆಗಳೆಂದು ಕರೆಯಲ್ಪಡುವರೆಂಬುದಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದಾರೆ.

ಪಾಶ್ಚಾತ್ಯಪಂಡಿತರಲ್ಲಿ Langlois, Kaegi, Hopkins ಎಂಬುವರು ವಿಶ್ವೇದೇವತೆಗಳೆಂದರೆ ಸಮಸ ದೇವತೆಗಳು ಎಂದೂ Wilson, Griffith, Macdonell ಎಂಬುವರು ವಿಶ್ವೇದೇವತೆಗಳೆಂದರೆ ಸಮಸ್ತ ದೇವತೆಗಳು ಅಥವಾ ವಿಶ್ವೇದೇವತೆಗಳೆಂಬ ಪ್ರತ್ಯೇಕವಾದ ದೇವತೆಗಳ ಸಮೂಹ ಎಂಬ ಎರಡು ವಿಧವಾದ ಅರ್ಥವನ್ನು ಅನುಮೋದಿಸುವರು.

ಮುಖ್ಯಾಭಿಪ್ರಾಯವೇನೆಂದರೆ— ಪೂರ್ವದಲ್ಲಿ ಎಂದರೆ ಬಹು ಪ್ರಾಚೀನಕಾಲದಲ್ಲಿ ವಿಶ್ವೇದೇವತೆಗಳೆಂದರೆ ಸಮಸ್ತ ದೇವತೆಗಳೆಂಬ ಅರ್ಥವೇ ರೂಢಿಯಲ್ಲಿದ್ದು ಕಾಲಕ್ರಮೇಣ ವಿಶ್ವೇದೇವತೆಗಳೆಂದರೆ, ಆ ಹೆಸರಿನ ಪ್ರತ್ಯೇಕ ದೇವತೆಗಳ ಸಮೂಹವೆಂದು ಭಾವಿಸುವುದು ಬಳಕೆಗೆ ಬಂತೆಂದೂ ಹೇಳಬಹುದು. ಅನೇಕ ಬ್ರಾಹ್ಮಣಗಳಲ್ಲಿಯೂ ಪುರಾಣಗಳಲ್ಲಿಯೂ ವಿಶ್ವೇದೇವತೆಗಳೇ ಒಂದು ಪ್ರತ್ಯೇಕವಾದ ದೇವತೆಗಳ ಗುಂಪೆಂದು ಸೂಚಿಸಲ್ಪಟ್ಟಿದೆ. ಆದರೆ ಯಾಸ್ಕರ ಕಾಲದಲ್ಲಿಯೂ ಸಹ ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿತ್ತೆಂದು ಯಾಸ್ಕರ ನಿರುಕ್ತದಿಂದಲೇ ತಿಳಿದುಬರುತ್ತದೆ.

**ಬರ್ಹಿಃ—ಪರಿಬರ್ಹಣಾತ್, ಪರಿಚ್ಛೇದನಾತ್**—ದರ್ಭೆಗಳು ಒಂದೇ ಸಮನಾದ ಅಳತೆಗೆ ಕತ್ತರಿಸಲ್ಪಟ್ಟು ಯಜ್ಞವೇದಿಕೆಯಲ್ಲಿ ಮೆತ್ತಗಿರುವಂತೆ ಹರಲ್ಪಡುವುವು. ಇದರ ಮೇಲೆ ದೇವತೆಗಳನ್ನು ಬಂದು ಕೂಡುವಂತೆ

ಆಹ್ವಾನಿಸುವರು ಮತ್ತು ಹೋಮುಮಾಡುವ ಘೃತ ಹವಿಸ್ಸು ಮೊದಲಾದ ದ್ರವ್ಯಗಳನ್ನು ಇವರ ಮೇಲೆ ಇಡುವರು ಈ ರೀತಿ ಹರಡಿರುವ ದರ್ಭೆಗೆ ಬರ್ಹಿಃ ಎಂದು ಹೆಸರು. ಯಾಸ್ಕರು ಈ ವಿಷಯದಲ್ಲಿ ಯಾಸ್ಕರು—

**ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸ್ತೋರಸ್ಯಾ ವೃಜ್ಯತೇ ಅಗ್ರೇ ಅಹ್ನಾಂ ।**
**ವ್ಯು ಪ್ರಥತೇ ವಿತರಂ ವರೀಯೋ ದೇವೇಭ್ಯೋ ಅದಿತಯೇ ಸ್ಯೋನಂ ॥**

(ಋ. ಸಂ. ೧೦-೧೧೦-೪)

**ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸನಾಯಾಸ್ಯಾಃ ಪ್ರವೃಜ್ಯತೇ ಅಗ್ರೇ ಅಹ್ನಾಂ ಬರ್ಹಿಃ ಪೂರ್ವಾಹ್ಣೇ ತದ್ವಿಪ್ರಥತೇ ವಿತರಂ ವಿಕೀರ್ಣತರಮಿತಿ ವಾ ವಿಸ್ತೀರ್ಣತರಮಿತಿ ವಾ ವರಿಯೋ ವರತರಮುರುತರಂ ವಾ ದೇವೇಭ್ಯಶ್ಚಾದಿತಯೇ ಚ ಸ್ಯೋನಂ । ಸ್ಯೋನಮಿತಿ ಸುಖನಾಮ ಸ್ಯತೇರವಸ್ಯಂತ್ಯೇತತ್ ಸೇವಿತವ್ಯಂ ಭವತೀತಿ ವಾ ॥**

(ನಿ. ೮-೯)

ಎಂಬ ಮೇಲಿನ ಋಕ್ಕನ್ನು ಉದಾಹರಿಸಿ ಅದಕ್ಕೆ ನಿರ್ವಚನವನ್ನು ಹೇಳಿರುವರು. ಯಜ್ಞಕಾಲದಲ್ಲಿ ಆಹ್ವಾನಿತರಾದ ದೇವತೆಗಳು ಬಂದು ಕುಳಿತುಕೊಳ್ಳಲು ಆಸನವನ್ನು ಸಿದ್ಧಪಡಿಸುವುದಕ್ಕಾಗಿ ದರ್ಭೆಗಳನ್ನು ಒಂದೇ ಸಮನಾಗಿ ಕತ್ತರಿಸಿ ಒಂದರ ಮೇಲೊಂದು ಪದರದಂತೆ (ಮೆತ್ತಗಿರುವುದಕ್ಕಾಗಿ) ಮೂರು ಪದರಗಳನ್ನು ಹಾಸಿ ಸಿದ್ಧಪಡಿಸುವರು. **ತ್ರಿವೃದ್ಬರ್ಹಿರ್ಭವತಿ** ಎಂದು ಶ್ರುತಿವಾಕ್ಯವೂ ಇರುವುದು. ಈ ರೀತಿ ಆಸನಕ್ಕಾಗಿ ಹರಡಿರುವ ದರ್ಭೆಯ ಚೂರುಗಳಿಗೆ ಬರ್ಹಿಸ್ಸೆಂದು ಹೆಸರು ಎಂದು ಬರ್ಹಿಶ್ಶಬ್ದಕ್ಕೆ ಅರ್ಥವಿವರಣೆ ಮಾಡಿರುವರು.



॥ ಸಂಹಿತಾಪಾಠಃ ॥

ತೀವ್ರೋ ವೋ ಮಧುಮಾ ಅಯಂ ಶುನಹೋತ್ರೇಷು ಮತ್ಸರಃ ।
ಏತಂ ಪಿಬತ ಕಾಮ್ಯಂ ॥ ೧೪ ॥

॥ ಪದಪಾಠಃ ॥

ತೀವ್ರಃ । ವಃ । ಮಧುऽಮಾನ್ । ಅಯಂ । ಶುನऽಹೋತ್ರೇಷು । ಮತ್ಸರಃ ।
ಏತಂ । ಪಿಬತ । ಕಾಮ್ಯಂ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ವಿಶ್ವೇ ದೇವಾಃ ತೀವ್ರಸ್ತೀವ್ರಮದೋ ಮಧುಮಾನ್ ರಸವಾನ್ ಮತ್ಸರೋ ಮದಕರಃ **ಸೋಮೋಽಯಂ ವೋ ಯುಷ್ಮದರ್ಥಂ ಶುನಹೋತ್ರೇಷು ಗೃತ್ಸಮದೇಷ್ವಸ್ಮಾಸು ಸ್ಥಿತಃ । ಕಾಮ್ಯಂ ಕಮನೀಯಮೇತಂ ಸೋಮಂ ಪಿಬತ ॥**

॥ ಪ್ರತಿಪದಾರ್ಥ ॥

(ಎಲೈ ವಿಶ್ವೇದೇವತೆಗಳೇ) **ತೀವ್ರಃ**—ತೀವ್ರವಾದ ಶಕ್ತಿಯುಳ್ಳದ್ದೂ । **ಮಧುಮಾನ್**—ರಸವತ್ತಾದುದೂ । **ಮತ್ಸರಃ**—ಮದಕರವಾದುದೂ ಆದ । **ಅಯಂ**—ಈ ಸೋಮರಸವು । **ವಃ**—ನಿಮಗಾಗಿ । **ಶುನಹೋತ್ರೇಷು**—ಶುನಹೋತ್ರವಂಶಸ್ಥರಾದ ನಮ್ಮಲ್ಲಿ (ಹಿಂಡಿ ಸಿದ್ಧವಾಗಿದೆ) । **ಕಾಮ್ಯಂ**—ಹಿತಕರವಾದ । **ಏತಂ**—ಈ ಸೋಮರಸವನ್ನು । **ಪಿಬತ**—ಕುಡಿಯಿರಿ.

॥ ಭಾವಾರ್ಥ ॥

ಎಲೈ ವಿಶ್ವೇದೇವತೆಗಳೇ, ತೀವ್ರವಾದ ಶಕ್ತಿಯುಳ್ಳದ್ದೂ, ರಸವತ್ತಾದುದೂ, ಮದಕರವಾದುದೂ, ಆದ ಈ ಸೋಮರಸವು ನಿಮಗಾಗಿ ಶುನಹೋತ್ರವಂಶಸ್ಥರಾದ ನಮ್ಮಲ್ಲಿ ಹಿಂಡಿ ಸಿದ್ಧವಾಗಿದೆ. ಹಿತಕರವಾದ ಈ ಸೋಮರಸವನ್ನು ಕುಡಿಯಿರಿ.

## English Translation.

This sharp, savoury, exhilarating (beverage), is (prepared) for you by the Shunahotras; drink of it at your pleasure.

॥ ವಿಶೇಷವಿಷಯಗಳು ॥

**ತೀವ್ರಃ—ತೀವ್ರಮದಕರಃ** । ಬಹಳ ತೀವ್ರವಾಗಿ, ಬಹುಬೇಗನೆ ಅಥವಾ ಬಹಳ ಹೆಚ್ಚಾಗಿ ಮದವನ್ನುಂಟುಮಾಡುವ ಎಂದರ್ಥವು **ತೀವ್ರಃ ಸೋಮಃ** ಎಂದರೆ ಆಗತಾನೇ ಹೊಸದಾಗಿ ಹಿಂಡಿರುವ ಸೋಮರಸವು. ಇದಕ್ಕೆ ಹಾಲು ಮೊದಲಾದ ಯಾವ ಆಶಿರದ್ರವ್ಯಗಳನ್ನು ಬೆರೆಸಿರುವುದಿಲ್ಲ. ಆದುದರಿಂದ ಅದರ ತೀಕ್ಷ್ಣತೆಯು ಹೆಚ್ಚಾಗಿದ್ದು ಪಾನಮಾಡಿದ ಕೂಡಲೇ ಬಹುಬೇಗ ಅಥವಾ ಅಧಿಕವಾದ ಮದವನ್ನುಂಟುಮಾಡುವ ಸೋಮರಸವು ಎಂದಭಿಪ್ರಾಯವು.

**ಮಧುಮಾನ್—ರಸವಾನ್** । ರಸವುಳ್ಳ, ಸಿಹಿಯಾದ ಅಥವಾ ರುಚಿಕರವಾದ ಎಂಬರ್ಥಗಳಲ್ಲಿ ಯಾವುದನ್ನು ಬೇಕಾದರೂ ಹೇಳಬಹುದು.

**ಮತ್ಸರಃ—ಮದಕರಃ** । **ಮದೀ ಹರ್ಷಗ್ಲಾಪನಯೋಃ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಮದವನ್ನು (ಹರ್ಷವನ್ನು) ಉಂಟುಮಾಡುವ ಎಂದರ್ಥವು.

**ಕಾಮ್ಯಂ—ಕಮನೀಯಂ, ಅಪೇಕ್ಷಣೀಯಂ** । ಬೇಕೆಂದು ಅಪೇಕ್ಷಿಸುವ, ಎಲ್ಲರೂ ಇಷ್ಟಪಡುವ ಎಂದರ್ಥವು.

**ಶುನಹೋತ್ರೇಷು**—ಶುನಹೋತ್ರರೆಂದರೆ ಈ ಮಂಡಲದ್ರಷ್ಟೃವಾದ ಗೃತ್ಸಮದಋಷಿ ಮತ್ತು ಅವನ ವಂಶಸ್ಥರು ಮತ್ತು ಸಂಬಂಧಿಗಳು ಎಂದಭಿಪ್ರಾಯವು. ಗೃತ್ಸಮದನಿಗೆ ಶುನಹೋತ್ರನೆಂಬ ಹೆಸರು ಬರಲು ಕಾರಣವೇನೆಂದರೆ, ಈ ಗೃತ್ಸಮದಋಷಿಯು ಮೊದಲು ಅಂಗಿರಾ ಋಷಿಗೋತ್ರೋದ್ಭವನಾದ ಶುನಹೋತ್ರನೆಂಬ ಋಷಿಯ ಪುತ್ರನಾಗಿದ್ದನು. ಒಂದಾನೊಂದು ಕಾಲದಲ್ಲಿ ಇವನು ಯಜ್ಞಮಾಡುತ್ತಿರುವಾಗ ಅಸುರರು ಬಂದು ಇವನನ್ನು ಎತ್ತಿ

ಕೊಂಡುಹೋದರು. ಗೃತ್ಸಮದನು ಇಂದ್ರನನ್ನು ಪ್ರಾರ್ಥಿಸಲು ಇಂದ್ರನು ಬಂದು ಇವನನ್ನು ಬಿಡಿಸಿ ತಂದನು. ಇಂದ್ರನ ಅಪ್ಪಣೆಯಿಂದಲೇ ಇವನಿಗೆ ಗೃತ್ಸಮದನೆಂಬ ಹೆಸರು ರೂಢಿಯಾಯಿತು. ಗೃತ್ಸಮದವೆಂದರೆ ಗೃತ್ಸಮದನವು; ಸ್ತುತಿ ಕರ್ಮವೆಂಬ ಅರ್ಥವನ್ನು ಕೊಡುವ ಗೃಣಾತಿಧಾತುವಿನಿಂದ ಗೃತ್ಸ ಎಂಬ ಶಬ್ದದ ನಿಷ್ಪತ್ತಿಯಾಗಿದೆ. ಗೃತ್ಸಶಬ್ದಕ್ಕೆ ಮೇಧಾವಿ (ಬುದ್ಧಿವಂತ) ಎಂದೂ ಹೆಸರು. ಮದನ ಶಬ್ದಕ್ಕೆ ಹರ್ಷಾದಿಗಳು ಅಥವಾ ಹರ್ಷವುಳ್ಳವನು ಎಂದರ್ಥವು. **ಗೃತ್ಸಶ್ಚಾಸೌ ಮದನಶ್ಚ ಗೃತ್ಸಮದನಃ** ಎಂದು ವಿಗ್ರಹವು. ಆದ್ದರಿಂದ ಗೃತ್ಸಮದಶಬ್ದಕ್ಕೆ ಬುದ್ಧಿವಂತನೂ ಹರ್ಷ ದಿಂದಿರುವವನೂ (ಹಸನ್ಮುಖಿ) ಆದ ಪುರುಷನೆಂದರ್ಥವು. ಮತ್ತು ಭೃಗುಕುಲದ ಶುನಕ ಅಥವಾ ಶೌನಕನ ಪುತ್ರನೆಂದು ಇವನ ಹೆಸರು ಪ್ರಸಿದ್ಧವಾಯಿತು. ಮತ್ತು ಶೌನಕಋಷಿಯ ಶಿಷ್ಯನಾದ ಕಾತ್ಯಾಯನ ಮಹರ್ಷಿಯಿಂದ ರಚಿತವಾದ ಋಷ್ಯನುಕ್ರಮಣಿಕೆ ಎಂಬ ಗ್ರಂಥದಲ್ಲಿಯೂ ನಾನಾಸೂಕ್ತಗಳ ಋಷಿಗಳ ಹೆಸರನ್ನು ಹೇಳುವಾಗ—

**ತ್ವಮಗ್ನ ಇತಿ ಗೃತ್ಸಮದಃ ಶೌನಕೋ ಭೃಗುತಾಂ ಗತಃ ।**
**ಶೌನಹೋತ್ರಃ ಪ್ರಕೃತ್ಯಾ ತು ಯ ಆಂಗಿರಸ ಉಚ್ಯತೆ ಇತಿ ॥**

ಎಂದು ಹೇಳಿರುವರುವರು. ಎಂದರೆ **ತ್ವಮಗ್ನೇ ದ್ಯುಭಿಃ** ಎಂಬ ಸೂಕ್ತದ ಋಷಿಯಾದ ಗೃತ್ಸಮದನೆಂಬುವನು ಆಂಗೀರಸರ ವಂಶಸ್ಥನಾದ ಶುನಹೋತ್ರನ ಪುತ್ರನಾಗಿ ಜನಿಸಿದರೂ ಬಳಿಕ (ಕಾರಣಾಂತರದಿಂದ) ಭೃಗುಕುಲೋತ್ಪನ್ನ ವಾದ ಶುನಕನ ಪುತ್ರನೆಂದು ಪ್ರಸಿದ್ಧಿಯಾಗಿರುವನು ಎಂದಭಿಪ್ರಾಯವು.



॥ ಸಂಹಿತಾಪಾಠಃ ॥

ಇಂದ್ರಜ್ಯೇಷ್ಠಾ ಮರುದ್ಗಣಾ ದೇವಾಸಃ ಪೂಷರಾತಯಃ ।
ವಿಶ್ವೇ ಮಮ ಶ್ರುತಾ ಹವಂ ॥ ೧೫ ॥

॥ ಪದಪಾಠಃ ॥

ಇಂದ್ರऽಜ್ಯೇಷ್ಠಾಃ । ಮರುತ್ऽಗಣಾಃ । ದೇವಾಸಃ । ಪೂಷ್ಽರಾತಯಃ ।
ವಿಶ್ವೇ । ಮಮ । ಶ್ರುತ । ಹವಂ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಜ್ಯೇಷ್ಠಾ ಇಂದ್ರಪುರೋಗಮಾ ಮರುದ್ಗಣಾ ಮರುತ್ಸಮೂಹರೂಪಾಃ ಪೂಷರಾತಯಃ ಪೂಷಾಖ್ಯೋ ದೇವೋ ರಾತಿರ್ದಾತಾ ಯೇಷಾಂ ತೇ ಪೂಷರಾತಯೋ ದೇವಾಸ ಹೇ ದ್ಯೋತಮಾನಾ ದೇವಾ ವಿಶ್ವೇ ಸರ್ವೇ ಯೂಯಂ ಮಮ ಮದೀಯಂ ಹವಮಾಹ್ವಾನಂ ಶ್ರುತ । ಶೃಣುತ ॥ ಇಂದ್ರ-ಜ್ಯೇಷ್ಠಾದಯಃ ಸಂಬೋಧನಾಂತಾಃ । ಋಗ್ವೇ. ೧-೨೩-೮ ॥

॥ ಪ್ರತಿಪದಾರ್ಥ ॥

**ಇಂದ್ರಜ್ಯೇಷ್ಠಾಃ**—ಇಂದ್ರನೇ ಪ್ರಧಾನನಾಗಿ ಉಳ್ಳ | **ಮರುದ್ಗಣಾಃ**—ಮರುತ್ತುಗಳ ಸಮೂಹಗಳಿಂದ ಸಹಿತರಾದ | **ಪೂಷರಾತಯಃ**—ಧನಪ್ರದನಾದ ಪೂಷನ್ ಎಂಬ ದೇವತೆಯಿಂದ ಸಹಿತರಾದ | **ವಿಶ್ವೇದೇವಾಸಃ**—ಎಲೈ ವಿಶ್ವೇದೇವತೆಗಳೇ | **ಮಮ**—ನನ್ನ | **ಹವಂ**—ಆಹ್ವಾನವನ್ನು | **ಶ್ರುತ**—ಕೇಳಿರಿ.

॥ ಭಾವಾರ್ಥ ॥

ಇಂದ್ರನೇ ಪ್ರಧಾನನಾಗಿ ಉಳ್ಳ ಮರುತ್ಸಮೂಹಗಳಿಂದಲೂ ಧನಪ್ರದನಾದ ಪೂಷನೆಂಬ ದೇವತೆಯಿಂದಲೂ ಸಹಿತರಾಗಿರುವ ಎಲೈ ವಿಶ್ವೇದೇವತೆಗಳೇ, ನೀವು ನನ್ನ ಆಹ್ವಾನವನ್ನು ಕೇಳಿರಿ.

English Translation.

Maruts, of whom Indra is the chief; divinites, of whom Pushan is the benefactor; do you all hear my invocation.

॥ ವಿಶೇಷವಿಷಯಗಳು ॥

ಈ ಋಕ್ಕು ಪ್ರಥಮ ಮಂಡಲದಲ್ಲಿ ಇಪ್ಪತ್ತಮೂರನೆಯ ಸೂಕ್ತದಲ್ಲಿ ಎಂಟನೆಯ ಋಕ್ಕಾಗಿ (ಋ. ಸಂ. ೧-೨೩-೮) ಪಠಿತವಾಗಿರುವುದು.

**ಇಂದ್ರಜ್ಯೇಷ್ಠಾಃ**—**ಜ್ಯೇಷ್ಠಶಬ್ದಃ ಪ್ರಧಾನವಚನಃ | ಇಂದ್ರಃ ಪ್ರಧಾನಭೂತೋ ಯೇಷಾಂ ತೇ ಇಂದ್ರಜ್ಯೇಷ್ಠಾಃ** | ಜ್ಯೇಷ್ಠ ಎಂದರೆ ಮುಖ್ಯ, ಪ್ರಧಾನ ಎಂದರ್ಥವು. ಆದುದರಿಂದ ಇಂದ್ರಜ್ಯೇಷ್ಠಾಃ ಎಂಬ ಶಬ್ದಕ್ಕೆ ಇಂದ್ರನನ್ನು ಪ್ರಧಾನನನ್ನಾಗಿವುಳ್ಳ, ಇಂದ್ರನೇ ಮುಖಂಡನಾಗಿರುವ ದೇವತೆಗಳು. ಎಂದರೆ, ದೇವತೆಗಳಿಗೆ ಇಂದ್ರನೇ ನಾಯಕನು. Leader (Indra at their Heads) ಅವನನ್ನೇ ಮುಂದೆ ಮಾಡಿಕೊಂಡು ಹೊರಟಿರುವ ದೇವತೆಗಳು ಎಂದರ್ಥವು.

**ಪೂಷರಾತಯಃ**—**ಪೂಷಾಖ್ಯೋ ದೇವೋ ರಾತಿರ್ದಾತಾ ಯೇಷಾಂ ತೇ ಪೂಷರಾತಯಃ** | ರಾತಿ ಎಂದರೆ ದಾತಾ, ಧನಪ್ರದನು. ಧನಪ್ರದನಾದ ಪೂಷನ್ ಎಂಬ ದೇವತೆಯಿಂದ ಸಹಿತರಾದ ವಿಶ್ವೇದೇವತೆಗಳು ಎಂದಭಿಪ್ರಾಯವು.

**ಮರುದ್ಗಣಾಃ**—ಮರುತ್ ಎಂಬ ದೇವಗಣದಿಂದ ಸಹಿತರಾದವರು ಎಂದರ್ಥವು. ಈ ಮರುದ್ಗಣಗಳು ಯಾರು? ಇವರ ಸ್ವರೂಪವೇನು? ಎಂಬ ವಿಷಯಗಳನ್ನು ಸೂಕ್ಷ್ಮವಾಗಿ ತಿಳಿಯಬೇಕಾದುದು ಅವಶ್ಯಕವು.

ಮರುದ್ದೇವತೆಗಳ ಉತ್ಪತ್ತಿ ವಿಚಾರದಲ್ಲಿ ಒಂದು ಉಪಾಖ್ಯಾನವಿರುವುದು. ಇವರಿಗೆ ರುದ್ರಪುತ್ರರೆಂದೂ ಹೇಳುವ ರೂಢಿಯಿರುವುದು. **ಮರುತೋಽಪಿ ರುದ್ರಾ ಉಚ್ಯಂತೇ ಜನ್ಯಜನಕಯೋರಭೇದಾತ್** | ರುದ್ರಾಃ ಎಂದರೆ ಇಲ್ಲಿ ರುದ್ರಪುತ್ರರು. ತಂದೆಯ ಹೆಸರಿನಿಂದಲೇ ಪುತ್ರನನ್ನು ಕರೆಯುವ ವಾಡಿಕೆಯಾದ್ದರಿಂದಲೂ, ವ್ಯವಹಾರಾದಿಗಳಲ್ಲಿ ಜನ್ಯಜನಕರಿಗೆ ಭೇದವು ಎಣಿಸಲ್ಪಡದಿರುವುದರಿಂದಲೂ, ಇಲ್ಲಿ ರುದ್ರಪುತ್ರರಾದ ಮರುದ್ದೇವತೆ

ಗಳನ್ನು ರುದ್ರಶಬ್ದದಿಂದಲೇ ವರ್ಣಿಸಿರುವುದು. ಮರುತ್ತುಗಳು ರುದ್ರಪುತ್ರರು ಹೇಗಾದರು ಎಂಬ ವಿಷಯದಲ್ಲಿ ಸಾಯಣರು ಋ. ಸಂ. ೧-೧೧೪-೬ನೆಯ ಋಕ್ಕಿನ ಭಾಷ್ಯದಲ್ಲಿ ಒಂದು ಪೂರ್ವೇತಿಹಾಸವನ್ನು ಹೇಳಿರುವರು.

> ರುದ್ರಸ್ಯ ಚ ಮರುತಾಂ ಪಿತೃತ್ವಮೇವಮಾಖ್ಯಾಯತೇ । ಪುರಾ ಕದಾಚಿದಿಂದ್ರೋಽಸುರಾನ್ ಜಿಗಾಯ । ತದಾನೀಂ ದಿತಿರಸುರಮಾತೇಂದ್ರಹನನಸಮರ್ಥಂ ಪುತ್ರಂ ಕಾಮಯಮಾನಾ ತಪಸಾ ಭರ್ತುಃ ಸಕಾಶಾದ್ಗರ್ಭಂ ಲೇಭೇ । ಇಮಂ ವೃತ್ತಾಂತಮವಗಚ್ಛನ್ನಿಂದ್ರೋ ವಜ್ರಹಸ್ತಃ ಸನ್ ಸೂಕ್ಷ್ಮರೂಪೋ ಭೂತ್ವಾ ತಸ್ಯಾ ಉದರಂ ಪ್ರವಿಶ್ಯ ತಂ ಗರ್ಭಂ ಸಪ್ತಧಾ ಬಿಭೇದ । ಪುನರಪ್ಯೇಕೈಕಂ ಸಪ್ತಖಂಡಮಕರೋತ್ । ತೇ ಸರ್ವೇ ಗರ್ಭೈಕದೇಶಾ ಯೋನೇರ್ನಿರ್ಗತ್ಯಾರುದನ್ । ಏತಸ್ಮಿನ್ನವಸರೇ ಲೀಲಾರ್ಥಂ ಗಚ್ಛಂತೌ ಪಾರ್ವತೀಪರಮೇಶ್ವರಾವಿಮಾನ್ ದದೃಶತುಃ । ತದಾ ಶಂಭುಂ ಪ್ರತಿ ಪಾರ್ವತ್ಯೇವಮವೋಚತ್ । ಇಮೇ ಮಾಂಸಖಂಡಾ ಯಥಾ ಪ್ರತ್ಯೇಕಂ ಪುತ್ರಾಃ ಸಂಪದ್ಯಂತಾಮೇವಂ ತ್ವಯಾ ಕಾರ್ಯಂ ಮಯಿ ಚೇತ್ಪ್ರೀತಿರಸ್ತೀತಿ । ಸ ಚ ಮಹೇಶ್ವರಸ್ತಾನ್ಸಮಾನರೂಪಾನ್ ಸಮಾನವಯಸಃ ಸಮಾನಾಲಂಕಾರಾನ್ಪುತ್ರಾನ್ಕೃತ್ವಾ ಗೌರ್ಯೈ ಪ್ರದದೌ ತವೈತೇ ಪುತ್ರಾಃ ಸಂತ್ವಿತಿ । ಅತಃ ಸರ್ವೇಷು ಮಾರುತೇಷು ಸೂಕ್ತೇಷು ಮರುತೋ ರುದ್ರಪುತ್ರಾ ಇತಿ ಸ್ತೂಯಂತೇ । ಶಾಸ್ತ್ರೇಷು ಚ ಮರುತಾಂ ಪಿತಾ ರುದ್ರ ಇತಿ ॥

ಎಂದರೆ—ಹಿಂದೆ ಒಂದಾನೊಂದುಕಾಲದಲ್ಲಿ ಇಂದ್ರನು ಅಸುರರನ್ನು ಜಯಿಸಿದಾಗ ಅಸುರಮಾತೆಯಾದ ದಿತಿಯು ಇಂದ್ರನನ್ನು ನಿಗ್ರಹಮಾಡಲು ಸಮರ್ಥನಾದ ಪುತ್ರನನ್ನು ಪಡೆಯುವ ಉದ್ದೇಶದಿಂದ ತಪಸ್ಸನ್ನು ಆಚರಿಸಿ, ತನ್ನ ಪತಿಯ ಕೃಪೆಯಿಂದ ಗರ್ಭವತಿಯಾದಳು. ಇಂದ್ರನು ಈ ವರ್ತಮಾನವನ್ನು ತಿಳಿದು ಮಾತೃಸೇವೆಯನ್ನು ಆಚರಿಸುವ ನೆಪದಿಂದ ದಿತಿಯ ಸಮೀಪದಲ್ಲಿ ಇರುತ್ತಾ ಸೂಕ್ಷ್ಮವಾದ ಆಕಾರವನ್ನು ಹೊಂದಿ, ತನ್ನ ವಜ್ರಾಯುಧ ಸಹಿತನಾಗಿ ದಿತಿಯ ಉದರವನ್ನು ಪ್ರವೇಶಿಸಿ, ಆ ಗರ್ಭವನ್ನು ಮೊದಲು ಏಳುಭಾಗವಾಗಿಯೂ, ಅನಂತರ ಅವುಗಳಲ್ಲಿ ಪ್ರತಿಯೊಂದನ್ನೂ ಮತ್ತೆ ಏಳು ಏಳು ಚೂರುಗಳನ್ನಾಗಿ ಎಂದರೆ ನಲವತ್ತೊಂಭತ್ತು ಚೂರುಗಳನ್ನಾಗಿ ಸೀಳಿದನು. ಇದರಿಂದ ಆ ಗರ್ಭದ ಚೂರುಗಳು ಉದರದಿಂದ ಹೊರಗಡೆಗೆ ಬಂದು ಭೂಮಿಯಲ್ಲಿ ಬಿದ್ದು ಅಳುತ್ತಿರುವುದನ್ನು ಲೋಕಾನುಗ್ರಹಕ್ಕಾಗಿ ಸಂಚರಿಸುತ್ತಿರುವ ಪಾರ್ವತೀಪರಮೇಶ್ವರರು ನೋಡಿದರು. ಆಗ ಪಾರ್ವತಿಯು ಆ ಮಾಂಸಖಂಡಗಳ ವಿಷಯದಲ್ಲಿ ದಯೆಯನ್ನು ಹೊಂದಿ ತನ್ನ ಪತಿಯನ್ನು ಕುರಿತು ಇವುಗಳೆಲ್ಲ (ಜೀವ) ಪ್ರಾಣವನ್ನು ಹೊಂದಿ ಜೀವಿಸುವ ಹಾಗೆ ಮಾಡಬೇಕು ಎಂದು ಬೇಡಿಕೊಂಡ ಕಾರಣ ಪರಮೇಶ್ವರನು ಆ ನಲವತ್ತೊಂಭತ್ತು ಮಾಂಸಖಂಡಗಳೂ, ಒಂದೇ ಸಮನಾದ ರೂಪ, ಅಲಂಕಾರ, ವಯಸ್ಸು ಉಳ್ಳ ಪುತ್ರರನ್ನಾಗಿ ಮಾಡಿದನು. ಮತ್ತು ಇವರು ನಿನ್ನ ಮಕ್ಕಳು ಎಂದು ಪಾರ್ವತಿಗೆ ಹೇಳಿದನು. ಈ ಇತಿಹಾಸದಿಂದ ಮರುತ್ತುಗಳು ರುದ್ರಪುತ್ರರೆಂದೂ, ರುದ್ರನು ಮರುತ್ಪಿತನೆಂದೂ ಆಯಾಯ ಸೂಕ್ತಗಳಲ್ಲಿ ಹೇಳಲ್ಪಟ್ಟಿರುವುದು.

ಇಂದ್ರನೂ ಮರುತ್ತುಗಳೂ ಇಬ್ಬರೂ ಬಹಳ ಸಾಮರ್ಥ್ಯವುಳ್ಳವರಾಗಿರುವರು. ಇವರು ಇಬ್ಬರೂ ತಮ್ಮ ತಮ್ಮ ಕಾರ್ಯಾಚರಣೆಯಲ್ಲಿ ನಿರಪೇಕ್ಷರಾಗಿರುತ್ತಾ ಒಬ್ಬರು ಇನ್ನೊಬ್ಬರ ಸಹಾಯವನ್ನು ಅಪೇಕ್ಷಿಸುವವರಲ್ಲವಾದರೂ ಇಂದ್ರನಿಗೂ ಮರುತ್ತುಗಳಿಗೂ ಇರುವ ಸ್ನೇಹವು ಅತ್ಯಧಿಕವಾಗಿರುವುದರಿಂದ ಇಂದ್ರನು ಯಾವಾಗಲೂ ಮರುದ್ವಾನ್ವತಿ

ಗಳೊಡನೆ ಇರುವುದೂ, ಅವರೊಡನೆಯೇ ಯಜ್ಞಾದಿಗಳಿಗೆ ಆಹ್ವಾನಿತರಾಗಿರುವುದೂ, ಮರುದ್ದೇವತೆಗಳೂ ಸಹ ಇಂದ್ರನಿಗೆ ಸಹಾಯ ಮಾಡಿರುವುದೂ ಅನೇಕ ಕಡೆ ಉಕ್ತವಾಗಿದೆ.

**ಮರುತ್ವಾನ್**—ಇಂದ್ರನಿಗೂ ಮರುತ್ತುಗಳಿಗೂ ಇರುವ ಶಾಶ್ವತವಾದ ಸಾಹಚರ್ಯವು ಪ್ರತಿಪ್ರಸಿದ್ಧವಾದುದು. ಇಂದ್ರನಿಗೂ ಮರುತ್ತುಗಳಿಗೂ ಇರುವ ರಾಜಪ್ರಜಾಸಂಬಂಧವೂ, ಮರುತ್ತುಗಳೊಡಗೂಡಿದ ಇಂದ್ರನಿಗೆ ಮುಖ್ಯವಾದ ಯಜ್ಞಕ್ರಿಯೆಗಳಲ್ಲಿ ಹವಿಸ್ಸಿನ ಅರ್ಪಣೆಯೂ, ಮತ್ತು ವೃತ್ರಾಸುರನೊಡನೆ ಯುದ್ಧವನ್ನು ನಡೆಸುವಾಗ ಇಂದ್ರನಿಗೆ ಮರುತ್ತುಗಳು ಸಹಾಯಮಾಡುವುದೂ ಸಂಹಿತೆಗಳಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಅನೇಕಕಡೆ ವಿವರಿಸಲ್ಪಟ್ಟಿವೆ. ಇಂದ್ರನು ಮರುತ್ತುಗಳೊಡನೆ ಸೇರಿಕೊಂಡು ಉಳಿದ ದೇವತೆಗಳಿಂದ ಪ್ರತ್ಯೇಕವಾಗಿದ್ದುದನ್ನು ಹೇಳುವ ಪೂರ್ವಕಥೆಯೊಂದನ್ನು ಶತಪಥ ಬ್ರಾಹ್ಮಣದಲ್ಲಿ ನೋಡಬಹುದು.

> ಆತಿಥ್ಯೇನ ವೈ ದೇವಾ ಇಷ್ಟ್ವಾ । ತಾನ್ತ್ಸಮದವಿಂದತ್ತೇ ಚತುರ್ಧಾ ವ್ಯದ್ರವನ್ನನ್ಯೋನ್ಯಸ್ಯ
> ಶ್ರಿಯಾ ಅತಿಷ್ಠಮಾನಾ ಅಗ್ನಿರ್ವಸುಭಿಃ, ಸೋಮೋ ರುದ್ರೈರ್ವರುಣ ಆದಿತ್ಯೈರಿಂದ್ರೋ
> ಮರುದ್ಭಿರ್ಬೃಹಸ್ಪತಿರ್ವಿಶ್ವೇದೇವೈಃ ।
>
> (ಶ. ಬ್ರಾ. ೩-೪-೨-೧).

ಹಿಂದೆ ದೇವತೆಗಳು ಆತಿಥ್ಯಕ್ರಿಯೆಯನ್ನು ನೆರವೇರಿಸಿದಾಗ ಅವರವರಲ್ಲೇ ವೈಮನಸ್ಯವುಂಟಾಗಿ ಒಬ್ಬರಿಗೊಬ್ಬರು ಸೋಲಲಿಷ್ಟಪಡದೇ ನಾಲ್ಕು ಗುಂಪುಮಾಡಿಕೊಂಡು ಬೇರೆ ಬೇರೆಯಾದರು. ಅಗ್ನಿಯು ವಸುಗಳೊಂದಿಗೂ, ಸೋಮನು ರುದ್ರರೊಂದಿಗೂ, ವರುಣನು ಆದಿತ್ಯರೊಂದಿಗೂ, ಇಂದ್ರನು ಮರುತ್ತುಗಳೊಂದಿಗೂ ಮತ್ತು ಬೃಹಸ್ಪತಿಯು ವಿಶ್ವೇದೇವತೆಗಳೊಂದಿಗೂ ಕೂಡಿಕೊಂಡು ಪ್ರತ್ಯೇಕವಾಗಿ ಗುಂಪುಮಾಡಿಕೊಂಡರು. ಎಂಬ ಈ ಕಥೆಯಲ್ಲಿ ಇಂದ್ರನು ಮರುತ್ತುಗಳೊಡನೆ ಸಾಹಚರ್ಯವನ್ನು ಬೆಳೆಸಿ ಅವರೊಡನೆ ಇಟ್ಟುಕೊಂಡಿರುವ ನಿಕಟವಾದ ಸಂಬಂಧವನ್ನು ಹೇಳಿರುವುದು. ಇದೂ ಅಲ್ಲದೇ, ಇಂದ್ರನೇ ದೊರೆಯೆಂದೂ ಮರುತ್ತುಗಳೇ ಪ್ರಜೆಗಳೆಂದೂ ಅನೇಕ ಕಡೆ ಹೇಳಿವೆ. ಉದಾಹರಣೆಗೆ—

> **ಕ್ಷತ್ರಂ ವಾ ಇಂದ್ರೋ ವಿಶೋ ಮರುತೋ ವಿಶಾ ವೈ ಕ್ಷತ್ರಿಯೋ ಬಲವಾನ್ ಭವತಿ ।**
>
> (ಶ. ಬ್ರಾ. ೪-೩-೩-೬).

ಇಂದ್ರನು ಕ್ಷಾತ್ರತೇಜಸ್ಸುಳ್ಳ ರಾಜನು, ಮರುತ್ತುಗಳೇ ಪ್ರಜೆಗಳು. ಪ್ರಜೆಗಳ ಸಹಕಾರದಿಂದಲೇ ರಾಜನು ಶಕ್ತಿಯುಳ್ಳವನಾಗಿ ಆಗುತ್ತಾನೆಂದೂ ಮರುತ್ತುಗಳ ಸಹಾಯದಿಂದ ಇಂದ್ರನ ಪರಾಕ್ರಮ ವೃದ್ಧಿಯಾಯಿತೆಂದೂ ಸೂಚಿಸಿದೆ. ಈ ರೀತಿಯಾದ ನಿಕಟವಾದ ಸಂಬಂಧವೂ, ಸಾಹಚರ್ಯವೂ ಇರುವುದರಿಂದಲೇ ಇಂದ್ರನನ್ನೂ, ಮರುತ್ತುಗಳನ್ನೂ ಒಟ್ಟಿಗೆ ಉದ್ದೇಶಿಸಿ ಹವಿಸ್ಸುಗಳನ್ನು ಅರ್ಪಿಸುವ ಕ್ರಮವೂ ಶ್ರುತಿಗಳಲ್ಲಿ ಕಂಡುಬರುತ್ತದೆ.

> **ಅನವದ್ಯೈರಭಿದ್ಯುಭಿರ್ಮಖಃ ಸಹಸ್ವದರ್ಚತಿ ।**
> **ಗಣೈರಿಂದ್ರಸ್ಯ ಕಾಮ್ಯೈಃ ॥**
>
> (ಋ. ಸಂ. ೧-೬-೮).

> **ಮಂದ್ರಾಃ ಸುಜಿಹ್ವಾಃ ಸ್ವರಿತಾರ ಆಸಭಿಃ ಸಂಮಿಶ್ಲಾ ಇಂದ್ರೇ ಮರುತಃ ಪರಿಷ್ಟುಭಃ ।**
>
> (ಋ. ಸಂ. ೧-೧೬೬-೧೧).

**ಸ ನೋ ಮರುದ್ಭಿರ್ವೃಷಭ ಶ್ರವೋಧಾ ಉಗ್ರ ಉಗ್ರೇಭಿಃ ಸ್ಥವಿರಃ ಸಹೋದಾಃ ।**

(ಋ. ಸಂ. ೧-೧೭೧-೫).

ಎಂಬಿವೇ ಮುಂತಾದ ಋಕ್ಕುಗಳಿಂದ ಇಂದ್ರನಿಗೂ ಮರುತ್ತುಗಳಿಗೂ ಒಟ್ಟಿಗೆ ಸೇರಿಸಿ ಆಹ್ವಾನವೂ ಹವಿಸ್ಸಿನ ಅರ್ಪಣೆಯೂ ಇದೆ. ಈ ರೀತಿಯ ಸಾಹಚರ್ಯವಿರುವುದರಿಂದಲೇ ಇಲ್ಲಿಯೂ ಸಹ **ಮರುತ್ವಾನ್** ಎಂಬ ವಿಶೇಷಣವಿದೆ. ಮರುತ್ತುಗಳೊಡಗೂಡಿರುವ ಇಂದ್ರನನ್ನು ಉದ್ದೇಶಿಸಿರುವ ಸಮಯಗಳಲ್ಲೆಲ್ಲಾ **ಮರುತ್ವಾನ್** ಎಂದು ಕರೆದಿದೆ ಯೆಂದು ಬೃಹದ್ದೇವತೆಯಲ್ಲಿ ಈ ದೇವತೆಗಳ ಸಂಬಂಧಸೂಚಕವಾದ ವಿಶೇಷಣವನ್ನು ವಿವರಿಸಿದೆ.

**ಮರುದ್ಭಿಃ ಸಹ ಯತ್ರೇಂದ್ರೋ ಮರುತ್ವಾಂಸ್ತತ್ರ ಸೋಽಭವತ್ ।**

(ಬೃ. ದೇ. ೪-೫೬)

॥ ಸಂಹಿತಾಪಾಠಃ ॥

ಅಂಬಿತಮೇ ನದೀತಮೇ ದೇವಿತಮೇ ಸರಸ್ವತಿ ।

ಅಪ್ರಶಸ್ತಾ ಇವ ಸ್ಮಸಿ ಪ್ರಶಸ್ತಿಮಂಬ ನಸ್ಕೃಧಿ ॥ ೧೬

॥ ಪದಪಾಠಃ ॥

ಅಂಬಿಽತಮೇ । ನದೀಽತಮೇ । ದೇವಿಽತಮೇ । ಸರಸ್ವತಿ ।

ಅಪ್ರಶಸ್ತಾಃಽಇವ । ಸ್ಮಸಿ । ಪ್ರಽಶಸ್ತಿಂ । ಅಂಬ । ನಃ । ಕೃಧಿ ॥ ೧೬ ॥

॥ ಸಾಯಣಭಾಷ್ಯಂ ॥

ಅಂಬಿತಮೇ ಮಾತೄಣಾಂ ಶ್ರೇಷ್ಠೇ ನದೀತಮೇ ನದೀನಾಂ ಶ್ರೇಷ್ಠೇ ದೇವಿತಮೇ ದೇವೀನಾಂ ಶ್ರೇಷ್ಠೇ ಹೇ ಸರಸ್ವತಿ ಅಪ್ರಶಸ್ತಾ ಇವ ಧನಾಭಾವಾದಸಮೃದ್ಧಾ ಇವ ವಯಂ ಸ್ಮಸಿ । ಭವಾಮಃ । ಅಂಬ ಹೇ ಮಾತಃ ಸರಸ್ವತಿ ನೋಽಸ್ಮಭ್ಯಂ ಪ್ರಶಸ್ತಿಂ ಧನಸಮೃದ್ಧಿಂ ಕೃಧಿ । ಕುರು । ಪ್ರಯಚ್ಛೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಂಬಿತಮೇ**—ಮಾತೃಗಳಲ್ಲಿ ಶ್ರೇಷ್ಠಳಾದವಳೂ । **ನದೀತಮೇ**—ನದಿಗಳಲ್ಲಿ ಶ್ರೇಷ್ಠಳಾದವಳೂ । **ದೇವಿತಮೇ**—ದೇವತಾತ್ಮರಲ್ಲಿ ಶ್ರೇಷ್ಠಳಾದವಳೂ ಆದ । **ಸರಸ್ವತಿ**—ಎಲೈ ಸರಸ್ವತಿಯೇ । **ಅಪ್ರಶಸ್ತಾ ಇವ**—ಧನಾಭಾವದಿಂದ ನಾವು ಪ್ರಶಸ್ತ್ಯರಹಿತರಾದಂತೆ । **ಸ್ಮಸಿ**—ಆಗಿದ್ದೇವೆ । **ಅಂಬ**—ಎಲೈ ಮಾತೆಯೇ । **ನಃ**—ನಮಗೆ । **ಪ್ರಶಸ್ತಿಂ**—ಧನಸಮೃದ್ಧಿಯನ್ನು । **ಕೃಧಿ**—ಉಂಟುಮಾಡು.

॥ ಭಾವಾರ್ಥ ॥

ಮಾತೃಗಳಲ್ಲಿಯೂ, ನದಿಗಳಲ್ಲಿಯೂ, ದೇವತಾತ್ಮರಲ್ಲೂ ಅತ್ಯಂತ ಶ್ರೇಷ್ಠಳಾದ ಎಲೈ ಸರಸ್ವತಿಯೇ, ಧನಾಭಾವದಿಂದ ನಾವು ಪ್ರಶಸ್ತ್ಯರಹಿತರಾದಂತೆ ಆಗಿದ್ದೇವೆ. ಎಲೈ ಮಾತೆಯೇ, ನಮಗೆ ಧನಸಮೃದ್ಧಿಯನ್ನುಂಟುಮಾಡು.

English Translation.

Saraswathi, best of mothers, best of rivers, best of goddessess, we are, as it were, of no repute ; grant us, mother, distinction.

॥ ವಿಶೇಷವಿಷಯಗಳು ॥

**ಅಂಬಿತಮೇ, ನದೀತಮೇ, ದೇವಿತಮೇ—ಮಾತೄಣಾಂ ಶ್ರೇಷ್ಠೇ, ನದೀನಾಂ ಶ್ರೇಷ್ಠೇ, ದೇವೀನಾಂ ಶ್ರೇಷ್ಠೇ**—ಸಾಯಣರು-ತಮೇ ಎಂಬ ಪ್ರತ್ಯಯಕ್ಕೆ ಶ್ರೇಷ್ಠವೆಂದರ್ಥವಿರುವುದರಿಂದ **ಅಂಬಿತಮೇ**—ಎಂದರೆ ತಾಯಿಯರಲ್ಲಿ ಶ್ರೇಷ್ಠಳೆಂದೂ, **ನದೀನಾಂ ಶ್ರೇಷ್ಠೇ**—ನದಿಗಳಲ್ಲಿಯೂ ಶ್ರೇಷ್ಠಳೆಂದೂ, **ದೇವೀನಾಂ ಶ್ರೇಷ್ಠೇ**—ಸ್ತ್ರೀದೇವತೆಗಳಲ್ಲಿಯೂ ಶ್ರೇಷ್ಠಳೆಂದೂ ಅರ್ಥವಿವರಣೆ ಮಾಡಿದಾರೆ. ಇಲ್ಲಿ ಒಂದುವಿಧವಾದ ಸಂಶಯಕ್ಕೆ ಅವಕಾಶವಿದೆ. ಸರಸ್ವತಿಯು ನದಿಗಳಲ್ಲಿ ಶ್ರೇಷ್ಠಳೆಂದೂ, ದೇವತೆಗಳಲ್ಲಿ ಶ್ರೇಷ್ಠಳೆಂದೂ ಹೇಳುವಾಗ ಆ ಅರ್ಥವು ಸಹಜವಾಗಿದೆ. ಆದರೆ ತಾಯಿಯರಲ್ಲಿ ಶ್ರೇಷ್ಠಳು ಎನ್ನುವಾಗ ಅನೇಕ ಮನುಷ್ಯರ ಅನೇಕ ತಾಯಿಯರೇ ಅಥವಾ ಒಬ್ಬ ಪುರುಷನಿಗೆ ಅನೇಕ ತಾಯಿಯರಿರುವರೇ ಎಂಬ ಸಂಶಯವುಂಟಾಗುವುದು ಸಹಜವಷ್ಟೆ. ಅನೇಕ ಪುರುಷರಿಗೆ (ಒಬ್ಬೊಬ್ಬ ಪುರುಷನಿಗೆ ಒಬ್ಬೊಬ್ಬ ತಾಯಿಯಂತೆ) ಅನೇಕ ತಾಯಿಯರು ಇರುವುದು ಲೋಕಪ್ರಸಿದ್ಧವಾದ ವಿಷಯವು. ಈ ವಿಚಾರದಲ್ಲಿ ಸಂಶಯಕ್ಕೆ ಕಾರಣವಿಲ್ಲ. ಒಬ್ಬ ಪುರುಷನಿಗೆ ಅನೇಕಮಂದಿ ತಾಯಿಯರು ಎಂದು ಹೇಳುವ ಸಂದರ್ಭದಲ್ಲಿ ತಾಯಿಯೆಂಬ ಶಬ್ದಕ್ಕೆ ನಾನಾರ್ಥಗಳನ್ನು ಕಲ್ಪಿಸಬೇಕಾಗುವುದು. ಈ ಸಂದರ್ಭದಲ್ಲಿ ತಾಯಿಯೆಂದರೆ ಆಹಾರಾದಿಗಳನ್ನು ಕೊಟ್ಟು ಪೋಷಿಸಿ ಕಾಪಾಡುವವಳು ಎಂದು ಅರ್ಥವನ್ನು ಹೇಳಬೇಕು. ಆದುದರಿಂದ ಸಸ್ಯಾದಿಗಳನ್ನು ವೃದ್ಧಿಮಾಡಿ ನಮಗೆ ಆಹಾರವನ್ನು ಒದಗಿಸಿಕೊಡುವ ಭೂಮಿಯೂ, ಸಸ್ಯಪೋಷಣೆಗೆ ಅವಶ್ಯಕವಾದ ನೀರನ್ನು (ಕಾಲುವೆಗಳ ಮೂಲಕ) ಒದಗಿಸಿಕೊಡುವ ನದಿಗಳೂ, ನಮಗೆ ಹಾಲನ್ನು ಕೊಟ್ಟು ಕಾಪಾಡುವ ಗೋವೂ, ಹೆತ್ತ ತಾಯಿಯೂ, ನಮ್ಮ ಕಷ್ಟಗಳನ್ನು ಪರಿಹರಿಸಿ ನಮ್ಮನ್ನು ಸಂರಕ್ಷಿಸುವ ಸ್ತ್ರೀದೇವತೆಗಳೂ (ಎಂದರೆ ದೇವಪತ್ನಿಯರು) ಇವರೆಲ್ಲರೂ ತಾಯಿಯರೆಂದು ಹೇಳಬೇಕು ಇವರುಗಳಲ್ಲೆಲ್ಲಾ ಸರಸ್ವತಿಯು ಅತ್ಯಂತ ಶ್ರೇಷ್ಠಳೆಂದು ಭಾಷ್ಯಕಾರರ ಅಭಿಪ್ರಾಯವು.

**ಸರಸ್ವತಿ ಅಪ್ರಶಸ್ತಾ ಇವ ಸ್ಮಸಿ ಅಂಬ ನಃ ಪ್ರಶಸ್ತಿಂ ಕೃಧಿ-ಹೇ ಸರಸ್ವತಿ ವಯಂ ಧನಾಭಾವಾದ-ಸಮೃದ್ಧಾ ಇವ ಭವಾಮಃ। ತಸ್ಮಾತ್ ಹೇ ಅಂಬ ಅಸ್ಮಭ್ಯಂ ಧನಸಮೃದ್ಧಿಂ ಪ್ರಯಚ್ಛ।** ಎಲೈ ಸರಸ್ವತಿಯೇ, ನಮ್ಮಲ್ಲಿ ಧನವಿಲ್ಲದಿರುವುದರಿಂದ ನಮ್ಮನ್ನು ಯಾರೂ ಗೌರವಿಸುವುದಿಲ್ಲ, ನಾವು ಪ್ರಶಂಸೆಗೆ ಅರ್ಹರಾಗಿಲ್ಲ. ಆದುದರಿಂದ ಎಲೈ ಮಾತೆಯೇ, ನಮಗೆ ನೀನು ಸಮೃದ್ಧವಾದ ಧನವನ್ನು ಕೊಟ್ಟು ನಮ್ಮನ್ನು ಎಲ್ಲರೂ ಗೌರವಿಸುವಂತೆ ಮಾಡು ಎಂದಭಿಪ್ರಾಯವು.

**ಸರಸ್ವತಿ**—ಸಾಯಣಾಚಾರ್ಯರು ಋಗ್ವೇದಮಂತ್ರಗಳಲ್ಲಿ ಉಪಯೋಗಿಸಲ್ಪಟ್ಟಿರುವ ಸರಸ್ವತೀಶಬ್ದಕ್ಕೆ ಐದುವಿಧವಾದ ಅರ್ಥವಿವರಣೆಯನ್ನು ಕೊಟ್ಟಿದಾರೆ.

(1) **ನದೀ**—ಋ. ಸಂ. ೧-೧೪೨-೯ ; ೧-೧೬೪-೫೨ ; ೨-೩೦-೮. ಇತ್ಯಾದಿ

(2) **ನದಿಯ ಹೆಸರು**—ಋ. ಸಂ. ೧-೩-೧೨; ೨-೧೪-೧೬; ೩-೨೩-೪; ೬-೪೧ ರಲ್ಲಿ ೪, ೭, ೧೦, ೧೧, ೧೩ ನೆಯ ಋಕ್ಕುಗಳು ; ೬-೫೨-೬ ; ೬-೬೧-೨ ; ೭-೩೬-೬ ; ೭-೯೫-೧ & ೨ ; ೭-೯೬-೧; ೮-೨೧-೧೭ & ೧೮ ; ೧೦-೬೪-೯ ; ೧೦-೬೫-೧೩,

(3) **ದೇವತೆಯ ಹೆಸರು**—ಋ. ಸಂ. ೫-೪೩-೧೧ ; ೫-೪೬-೨ ; ೬-೪೯-೭ ; ೫-೫೦-೧೨ ; ೧೦-೧೭-೭ ; ೧೦-೩೦-೧೨.

(4) **ಆಕಾಶಾಭಿಮಾನಿದೇವತೆ**—(ಇಳಾ, ಭಾರತೀ, ಸರಸ್ವತೀ ಎಂಬ ಮೂವರು ದೇವತೆಗಳಲ್ಲಿ ಒಂದು) ಋ. ಸಂ. ೧-೧೮೮-೮.

(5) **ವಾಗ್ದೇವೀ**—ಋ ಸಂ. ೨-೧-೧೧; ೩-೪-೮ ; ೩-೫೪-೧೩ ; ೫-೪೨-೧೨; ೭-೩೯-೫; ೭-೪೦-೩; ೯-೬೭-೩೨.

ಋಗ್ವೇದದಲ್ಲಿ ಸರಸ್ವತೀದೇವಿಯನ್ನು ಸ್ತೋತ್ರಮಾಡುವ ಅನೇಕ ಮಂತ್ರಗಳಿವೆ. ಆದರೆ ಆ ಸರಸ್ವತೀದೇವಿಯು ಯಾರು ಅವಳ ಸ್ವರೂಪವೇನು ಎಂಬ ವಿಷಯದಲ್ಲಿ ನಿರುಕ್ತಕಾರರು ಏನನ್ನೂ ಹೇಳಿರುವುದಿಲ್ಲ. **ನದೀವದ್ದೇವತಾವಚ್ಚ ನಿಗಮಾ ಭವಂತಿ** ಎಂದು ಮಾತ್ರ ಹೇಳಿದಾರೆ. ಎಂದರೆ, ಸರಸ್ವತೀದೇವತಾಕವಾದ ಕೆಲವು ಮಂತ್ರಗಳಲ್ಲಿ ಸರಸ್ವತಿಯು ನದಿಯೆಂದೂ ಕೆಲವು ಮಂತ್ರಗಳಲ್ಲಿ ಒಂದು ದೇವತೆಯೆಂದೂ ವರ್ಣನೆ ಇದೆ. ಆದರೆ ಸರಸ್ವತಿಯೆಂಬ ನದಿಯೇ ಓರ್ವ ದೇವತೆಯೆಂದು ಭಾವಿಸಿ ಸ್ತುತಿಸಲ್ಪಟ್ಟಿದೆಯೇ ಅಥವಾ ದೇವತೆಯನ್ನೇ ನದಿಯೆಂದು ಭಾವಿಸಿ ಸ್ತುತಿಸಲ್ಪಟ್ಟಿದೆಯೇ ಎನ್ನುವುದು ವಿಶದವಾಗಿಲ್ಲ. ಆದುದರಿಂದ ಸರಸ್ವತೀ ಎನ್ನುವುದು ನದೀ, ಮತ್ತು ದೇವತೆಗಳೆರಡನ್ನೂ ಸೂಚಿಸುವುದೆಂದು ಹೇಳಬೇಕಾಗಿದೆ. ಸರಸ್ವತಿಯು ಒಂದು ದೇವತೆಯೆಂದು ಹೇಳುವ ಪಕ್ಷದಲ್ಲಿ ಆ ದೇವತೆ ಯಾರು ? ಅದರ ಸ್ವರೂಪವೇನು ? ಆ ದೇವತೆಯ ಸ್ಥಾನಮಾನಗಳಾವುವು ? ಇವೇ ಮೊದಲಾದ ವಿಷಯಗಳಿಗೆ ಸಮಂಜಸವಾದ ಉತ್ತರವನ್ನು ಹೇಳುವುದು ಸುಲಭಸಾಧ್ಯವಲ್ಲ. ಸರಸ್ವತಿಯು ಒಂದು ನದಿಯೆಂದು ಹೇಳುವ ಪಕ್ಷದಲ್ಲಿ ಆ ಹೆಸರಿನ ಪ್ರಸಿದ್ಧವಾದ ಒಂದು ನದಿಯು ಪೂರ್ವದಲ್ಲಿ ಇತ್ತೆಂದೂ (ಈಗಿನ ಸರಸುತಿ the modern Sarsuti) ಅದನ್ನೇ ಋಗ್ವೇದದಲ್ಲಿ ಸ್ತುತಿಸಲ್ಪಟ್ಟಿರುವುದೆಂದೂ ಹೇಳಬಹುದು ಹೀಗೆ ಹೇಳುವ ಸಂದರ್ಭದಲ್ಲಿ ಕೆಲವು ನಿರ್ದಿಷ್ಟವಾದ ದೇವತೆಗಳನ್ನುದ್ದೇಶಿಸಿ ಮಾಡುವ ಯಜ್ಞಯಾಗಾದಿಗಳಲ್ಲಿ ನದೀ ಮೊದಲಾದ ಅಚೇತನ ವಸ್ತುಗಳ ಪ್ರತಿಪಾದನೆಯು ನಿಷಿದ್ಧವಲ್ಲವೇ ಎಂಬ ಸಂಶಯವು ತಲೆದೋರುವುದು. ಈ ವಿಷಯದಲ್ಲಿ ಜೈಮಿನಿಮಹರ್ಷಿಯು ತಮ್ಮ ಮೀಮಾಂಸ ಸೂತ್ರದಲ್ಲಿ **ಅಚೇತನೇಽರ್ಥಬಂಧನಾತ್** (ಜೈ.ಸೂ. ೧-೨-೩೫) ಎಂದು ಪೂರ್ವಪಕ್ಷವನ್ನು ಮಾಡಿರುವುದಕ್ಕೆ ಭಾಷ್ಯಕಾರರು **ಅಭಿಮಾನಿವ್ಯಪದೇಶಃ** (ವೇ. ಸೂ. ೨-೧-೫) ಎಂಬ ವೇದಾಂತಸೂತ್ರವನ್ನು ಉದಹರಿಸಿ ಸಮಾಧಾನವನ್ನು ಹೇಳಿರುವರು. ಎಂದರೆ ವೇದಮಂತ್ರಗಳಲ್ಲಿ ಅನೇಕಕಡೆ ಅಚೇತನವಸ್ತುಗಳನ್ನು ಸಂಬೋಧನೆಮಾಡಿರುವ ಸಂದರ್ಭದಲ್ಲಿ, ಆ ಅಚೇತನವಸ್ತುಗಳ ಅಭಿಮಾನದೇವತೆಗಳನ್ನು ಕುರಿತು ಹೇಳಿರುವುದೆಂದು ತಿಳಿಯಬೇಕೆಂದು ಹೇಳಿರುವರು.

(ಭಾಗ ೧. 380–381 ಪೇಜುಗಳನ್ನು ನೋಡಿ). ಆದುದರಿಂದ ನದಿಯೆಂದು ಸ್ತೋತ್ರಮಾಡಿರುವ ಕಡೆಗಳಲ್ಲಿ ಆ ನದ್ಯಭಿಮಾನಿದೇವತೆಯನ್ನು ಸ್ತೋತ್ರಮಾಡಿರುವುದೆಂದು ತಿಳಿಯಬೇಕು. ಈ ಸರಸ್ವತೀದೇವತೆಯ ವಿಷಯದಲ್ಲಿ ಅನೇಕರು ಅನೇಕ ವಿಧವಾಗಿ ಅಭಿಪ್ರಾಯಪಡುವರು—

(1) ಪುರಾಣಾದಿಗಳಲ್ಲಿ ಸರಸ್ವತಿಯೆಂದರೆ **ವಾಗಧಿಷ್ಠಾತ್ರೀ, ಶಾರದಾ, ವಿದ್ಯಾಸ್ವರೂಪಿಣೀ, ಹಂಸವಾಹಿನೀ** | ವಾಗಭಿಮಾನಿದೇವತೆಯೂ, ಶಾರದಾ ಎಂಬ ಹೆಸರಿನಿಂದ ಪ್ರಸಿದ್ಧಳೂ, ವಿದ್ಯಾಸ್ವರೂಪಿಣಿಯೂ ಹಂಸದ ಮೇಲೆ ಕುಳಿತಿರುವವಳೂ ಆದ ದೇವತಾವಿಶೇಷವೆಂದು ಹೇಳಲ್ಪಟ್ಟಿರುವುದು.

(2) ಅಥವಾ ಈ ಸರಸ್ವತೀದೇವಿಯು ಉಪಾಧಿವಿಶೇಷವಿಶಿಷ್ಟಳಾದ ಆದಿತ್ಯರೂಪಳಾಗಿರುವಳೆಂದೂ ಹೇಳುವರು. ಉಪಾಧಿಯೆಂದರೆ ಸಂಧ್ಯಾಕಾಲವು. ಆದುದರಿಂದ ಸಂಧ್ಯಾಕಾಲಪ್ರಕಾಶಯುಕ್ತನಾದ ಆದಿತ್ಯನೇ ಸರಸ್ವತೀರೂಪದಿಂದ ಇಲ್ಲಿ ಸ್ತುತಿಸಲ್ಪಟ್ಟಿರುವನೆಂದು ಕೆಲವರ ಮತವು.

(3) ಸರಃಶಬ್ದವು ಸೃ—ಸರಿ, ಸಂಚರಿಸು ಎಂಬ ಧಾತುವಿನಿಂದ ಉತ್ಪನ್ನವಾಗಿದೆ. **ಸರಃ ಅಸ್ಯಾ ಅಸ್ತೀತಿ** ಅಥವಾ **ಸರಃ ತೇಜೋ ಯಸ್ಯಾ ವಿದ್ಯತೇ ಸಾ ಸರಸ್ವತೀತಿ ಭವತಿ** ಎಂದರೆ ತೇಜೋರೂಪಿನಿಂದ ಪ್ರಕಾಶಿಸುವಳಾದುದರಿಂದ ಸರಸ್ವತೀ ಎಂದು ಹೆಸರು.

(4) ಅಥವಾ—**ಪ್ರಾತರ್ವಾಚಾಂ ಪ್ರವರ್ತಿಕಾ, ಪ್ರಾಣಿನಾಂ ಸ್ವಾಪಪರಿತ್ಯಾಗೇನ ಸ್ವೋಚಿತ ವ್ಯವಹಾರೇಷು ಪ್ರವೃತ್ತೌ ಶಬ್ದಾಯಮಾನತಾಯಾಃ ಪ್ರವೃತ್ತೇಃ, ರಾತ್ರೌ ಚ ವಾಚಾಂ ನಿರೋಧಕಾ ರಾತ್ರೌ ಪ್ರಾಣಿನಾಂ ನಿಲಾಯನಿಲೀನತ್ವೇನ ಸುಪ್ತ್ಯಮಾ ನತಯಾ ಶಬ್ದ ವಿರಾಮಾತ್ | ಏವಂ ಚ ಶಬ್ದಸ್ಯ ಪ್ರವರ್ತಿಕಾ ನಿವರ್ತಿಕಾ ಏಷೈವ ಲೋಕೇ ಸರಸ್ವತೀತ್ವೇನ ವ್ಯಪದಿಶ್ಯತೇ ನಾನ್ಯಾ||** ಎಂದರೆ ಪ್ರಾತಃಕಾಲದಲ್ಲಿ ಪ್ರಾಣಿಗಳು ನಿದ್ರೆಯಿಂದ ಎಚ್ಚರಗೊಂಡು ಮಾತನಾಡುವುದು ಮೊದಲಾದ ತಮ್ಮ ತಮ್ಮ ವ್ಯಾಪಾರ ವ್ಯವಹಾರಾದಿಗಳಲ್ಲಿ ತೊಡಗಿರುವವು. ರಾತ್ರಿಕಾಲದಲ್ಲಿ ಪ್ರಾಣಿಗಳು ನಿದ್ರೆಯಲ್ಲಿ ಆಸಕ್ತವಾಗಿರುವಾಗ ಮಾತನಾಡುವುದು, ಶಬ್ದಮಾಡುವುದು ಮೊದಲಾದ ಕರ್ಮಗಳಿಲ್ಲದೆ ವ್ಯವಹಾರಾದಿಗಳಿಂದ ವಿರಾಮವನ್ನು ಹೊಂದಿರುವವು. ಆದುದರಿಂದ ಮಾತನಾಡುವ ಅಥವಾ ಶಬ್ದಮಾಡುವ ವಿಚಾರದಲ್ಲಿ ಪ್ರವರ್ತನೆನಿವರ್ತನೆಗಳಿಗೆ ಕಾರಣಭೂತಳಾಗಿರುವುದರಿಂದ ಈ ವಾಗ್ದೇವತೆಗೆ ಸರಸ್ವತೀ ಎಂದು ಹೆಸರು.

(5) ಹಿಂದೆ ಹೇಳಿದಂತೆ ವಾಗ್ರೂಪತ್ವಾದಿಗಳು ಈ ದೇವತೆಗೆ ಇರುವುದರಿಂದ ಈ ಸರಸ್ವತೀದೇವಿಯು ಉಷಾರೂಪಿಣಿಯಾಗಿರುವಳು . ಆದುದರಿಂದಲೇ ಉಷಾದೇವತೆಯ ಹೆಸರುಗಳಾದ **ಸೂನೃತಾ, ಸೂನೃತಾವತೀ, ಸೂನೃತಾವರೀ** ದೂದಲಾದ ಶಬ್ದಗಳ ಮಧ್ಯದಲ್ಲಿ ಈ ಸರಸ್ವತೀದೇವತೆಯ ಹೆಸರು ಇರುವುದು. ಇಲ್ಲಿ ಸೂನೃತ ಶಬ್ದಕ್ಕೆ ಪ್ರಿಯವೂ, ಸತ್ಯವೂ ಆದ ಮಾತುಗಳೆಂದರ್ಥವು.

ಇದರಂತೆ ಸರಸ್ವತೀದೇವತಾವಿಚಾರದಲ್ಲಿ ಬೃಹದ್ದೇವತಾಗ್ರಂಥಕರ್ತರಾದ ಶೌನಕರೂ ಇತರ ಗ್ರಂಥಕಾರರೂ ವಿಧವಿಧವಾಗಿ ಅರ್ಥಮಾಡಿರುವರು.

ಈಗ ಋಗ್ವೇದದಲ್ಲಿ ಈ ಸರಸ್ವತೀಶಬ್ದವು ಯಾವಯಾವ ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿರುವುದೆಂದು ಸ್ವಲ್ಪಮಟ್ಟಿಗೆ ವಿಚಾರಮಾಡೋಣ. ಈ ವಿಷಯದಲ್ಲಿ ಮುಖ್ಯವಾಗಿ ಮೂರು ಅಂಶಗಳನ್ನು ಗಮನಿಸಬೇಕಾಗಿರುವುದು (1) ಈಗ ನಾವು ವ್ಯಾಖ್ಯಾನಮಾಡುತ್ತಿರುವ ಪ್ರಸಕ್ತವಾದ **ಅಂಬಿತಮೇ** ಎಂಬ ಋಕ್ಕು. (2) ಸರಸ್ವತೀ ದೇವತಾಕವಾದ ಇತರ ಋಕ್ಕುಗಳು. (3) ಈ ಋಕ್ಕುಗಳನ್ನು ರಚಿಸಿದ ಋಷಿಗಳು ಮತ್ತು ಅವರ ವಂಶಸ್ಥರು. ಈ ಮೂರು ವಿಷಯಗಳನ್ನೂ ವಿಮರ್ಶೆಮಾಡುವೆವು—

ಋ. ಸಂ. ೧–೩ನೆಯ ಸೂಕ್ತದಲ್ಲಿ ೧೦, ೧೧, ೧೨ ನೆಯ ಋಕ್ಕುಗಳು ಸರಸ್ವತೀದೇವತಾಕಮಂತ್ರಗಳು. ೧೦, ೧೧ ನೆಯ ಋಕ್ಕುಗಳಲ್ಲಿ ಸರಸ್ವತೀ ನದಿಯನ್ನೇ ಒಂದು ದೇವತೆಯನ್ನಾಗಿ ಭಾವಿಸಿ ಸ್ತುತಿಸಲ್ಪಟ್ಟಿರುವುದು. ಭಾಷ್ಯಕಾರರಾದ ಸಾಯಣಾಚಾರ್ಯರು ೧೦–೧೧ ನೆಯ ಋಕ್ಕುಗಳಲ್ಲಿ ಸರಸ್ವತಿಯನ್ನು ವಾಗ್ದೇವತೆಯೆಂದೂ, ೧೨ ನೆಯ ಋಕ್ಕಿನಲ್ಲಿ ಸರಸ್ವತೀ ಎಂಬ ನದಿಯ ಅಭಿಮಾನಿದೇವತೆಯೆಂದೂ ವ್ಯಾಖ್ಯಾನಮಾಡಿರುವರು. Griffith ಎಂಬ ಪಂಡಿತರು ಸರಸ್ವತಿಯೆಂದರೆ ವಾಗ್ದೇವತೆಯೆಂದು ಅರ್ಥಮಾಡಿರುವರು. ಆದರೆ **ಪಾವಕಾ** ಎಂಬ ಶಬ್ದಕ್ಕೆ "ನೀರಿನಿಂದ ಶುದ್ಧಿಗೊಳಿಸುವ" ಎಂಬ ಅರ್ಥವನ್ನು ಮಾಡುವಾಗಲೂ **ಅರ್ಣ** ಎಂಬ ಶಬ್ದಕ್ಕೆ ನದಿಯೆಂದು ಅರ್ಥಮಾಡುವಾಗಲೂ, ಸರಸ್ವತಿಯೆಂದರೆ ಒಂದು ನದೀ ಅಥವಾ ನದಿಯ ಅಭಿಮಾನದೇವತೆ ಎಂದು ಹೇಳಬೇಕಾಗುವುದು. ಆಧುನಿಕ ಪಂಡಿತರಲ್ಲಿ ಕೆಲವರು ಸರಸ್ವತಿಯೆಂದರೆ ಸಿಂಧೂ ನದಿಯೆಂದೂ ಅಭಿಪ್ರಾಯಪಡುವರು. ಆದರೆ ಈ ಋಕ್ಕನ್ನು ರಚಿಸಿದ ವಿಶ್ವಾಮಿತ್ರಪುತ್ರನಾದ ಮಧುಚ್ಛಂದಋಷಿಯ ಆಶ್ರಮವು ಕುರುಕ್ಷೇತ್ರದಲ್ಲಿರುವ ಈಗಿನ ಸರಸುತಿ ಎಂಬ ನದಿಯ ಪಶ್ಚಿಮ ದಡದ ಮೇಲೆ ಇತ್ತೆಂದು ಹೇಳಿರುವುದರಿಂದ (ಮಹಾಭಾರತ, ಶಲ್ಯಪರ್ವ, ಅಧ್ಯಾಯ ೪೩) ಈ ಸರಸುತಿ ಎಂಬ ನದಿಯನ್ನೇ ಮಧುಚ್ಛಂದಋಷಿಯು ಸ್ತೋತ್ರಮಾಡಿರುವನೆಂದು ಊಹಿಸಲವಕಾಶವಿದೆ. ಏಕೆಂದರೆ, ಒಂದು ನದಿಯನ್ನು ಸ್ತೋತ್ರಮಾಡುವಾಗ ತಾನು ವಾಸಿಸುವ ಸ್ಥಳದ ಸಮೀಪದಲ್ಲಿರುವ ಪ್ರಸಿದ್ಧವಾದ ನದಿಯನ್ನು ಬಿಟ್ಟು ಎಲ್ಲಿಯೋ ದೂರದಲ್ಲಿರುವ (ಅದೇ ಹೆಸರಿನ) ಬೇರೊಂದು ನದಿಯನ್ನು ಸ್ತೋತ್ರಮಾಡಿರುವನೆಂದು ಹೇಳುವುದು ನ್ಯಾಯವೆಂದು ತೋರುವುದಿಲ್ಲ. ಎರಡನೆಯ ಮಂಡಲದಲ್ಲಿ ಸರಸ್ವತೀ ದೇವತಾಕವಾದ ಋ ಸಂ. ೨-೩೦-೮; ೨-೩೨-೮; ೨-೪೧-೧೬ ರಿಂದ ೧೮ ಋಕ್ಕುಗಳನ್ನೆಲ್ಲಾ ಶುನಹೋತ್ರನ ಪುತ್ರನಾದ ಗೃತ್ಸಮದ ಎಂಬ ಋಷಿಯೇ ರಚಿಸಿರುವನು. ಈ ಗೃತ್ಸಮದಋಷಿಯು ಅತ್ರಿಋಷಿಯ ವಂಶದಲ್ಲಿ ಅತ್ರಿಯಿಂದ ಆರನೆಯ ತಲೆಯವನೆಂದು ತಿಳಿದುಬರುವುದು. (ಮೈಸೂರು ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿಯಲ್ಲಿ ಪ್ರಿಂಟಾದ No. 25 ನೇ ಪ್ರವರ ಮತ್ತು ಗೋತ್ರ ಎಂಬ ಗ್ರಂಥದ ಪ್ರಕಾರ) ವಿಶ್ವಾಮಿತ್ರನು ಅತ್ರಿಯಿಂದ ಐದನೇ ತಲೆಯವನು. ಒಟ್ಟು ಎಂಟು ಋಕ್ಕುಗಳಲ್ಲಿ ಈ ಗೃತ್ಸಮದಋಷಿಯು ಸರಸ್ವತಿಯನ್ನು ಸ್ತೋತ್ರಮಾಡಿದಾನೆ. ಋ. ಸಂ. ೨-೧-೧೧ ಮತ್ತು ೨-೩-೮ ನೆಯ ಋಕ್ಕುಗಳಲ್ಲಿ ಸರಸ್ವತಿಯನ್ನು ಇಡಾ ಮತ್ತು ಭಾರತೀಯರೊಡನೆ ಸ್ತುತಿಸಿದಾನೆ. ಋ. ಸಂ. ೨-೩೫-೫ ರಲ್ಲಿ ಈ ಮೂವರನ್ನು ಎಂದರೆ, ಇಡಾ, ಸರಸ್ವತೀ, ಭಾರತೀ ಎಂಬುವರನ್ನು ಮೂರು ಮಂದಿ ದೇವತೆಯರೆಂದು ಹೇಳಿದಾನೆ. ಋ. ಸಂ. ೨-೩೦-೮ ರಲ್ಲಿ ಸರಸ್ವತಿಯನ್ನು ಇಂದ್ರ ಮತ್ತು ಮರುತ್ತಗಳೊಡನೆ ಸ್ತೋತ್ರಮಾಡಿದಾನೆ. ಋ. ಸಂ. ೨-೩೨-೮ ರಲ್ಲಿ ಸರಸ್ವತಿಯನ್ನು ಓರ್ವ ದೇವತೆಯನ್ನಾಗಿ ಹೇಳಿದಾನೆ. ಋ. ಸಂ. ೨-೯೧ನೆಯ

ಸೂಕ್ತದ ೧೬ ನೆಯ ಋಕ್ಕಿನಲ್ಲಿ ಸರಸ್ವತಿಯನ್ನು ಬಹುದೊಡ್ಡ ನದಿಯೆಂದೂ, ಬಹುದೊಡ್ಡ ದೇವತೆಯೆಂದೂ ೧೮ ನೆಯ ಋಕ್ಕಿನಲ್ಲಿ ಋತಾವರೀ ಎಂದರೆ (ಋತ-ನೀರು) ಹೆಚ್ಚಾದ ನೀರುಳ್ಳ ನದಿಯೆಂದೂ ವರ್ಣಿಸಿದಾನೆ. ಇದನ್ನು ನೋಡಿ ಪಾಶ್ಚಾತ್ಯಪಂಡಿತರಲ್ಲಿ ಕೆಲವರು ಬಹುದೊಡ್ಡ ನದಿಯೆಂದು ಹೇಳಿರುವುದರಿಂದ ಸಿಂಧುನದಿಯೇ ಇರಬೇಕೆಂದು ಹೇಳುತ್ತಾರೆ. ಅದರೆ ಅದು ಸರಿಯಲ್ಲ. ಏಕೆಂದರೆ ಕವಿಯು ಒಂದು ನದಿಯನ್ನಾಗಲಿ, ದೇವತೆಯನ್ನಾಗಲಿ ಸ್ತೋತ್ರಮಾಡುವಾಗ (ಅದು ಚಿಕ್ಕದು ಅಥವಾ ಸಾಧಾರಣವಾಗಿದ್ದರೂ) ಅದನ್ನು ಬಹುದೊಡ್ಡದೆಂದು ವರ್ಣಿಸುವುದು ಸಾಧಾರಣವಾಗಿದೆ. ಋ. ಸಂ. ೨-೩೦-೮ ನೆಯ ಋಕ್ಕಿನಲ್ಲಿ ಈ ಗೃತ್ಸಮದಋಷಿಯು ಸರಸ್ವತಿಯನ್ನು ಸಿಡಿಲು ಮತ್ತು ಮಿಂಚಿನ ಅಧಿದೇವತೆಯೆಂದು ಭಾವಿಸಿ ಸ್ತೋತ್ರಮಾಡಿರುವನೆಂದು ಕೆಲವರು ಅಭಿಪ್ರಾಯಪಡುವರು. ಆದರೆ ಒಬ್ಬ ಋಷಿಯು ಒಂದೇ ದೇವತೆಯನ್ನು ಬೇರೆ ಬೇರೆ ಅರ್ಥದಲ್ಲಿ ವರ್ಣಿಸಿರುವನೆಂದು ಹೇಳುವುದು ಸಕಾರಣವಾಗಿ ತೋರುವುದಿಲ್ಲ. ಋ. ಸಂ. ೩-೨೩ನೆಯ ಸೂಕ್ತಕ್ಕೆ ಭರತಪುತ್ರರಾದ ದೇವಶ್ರವಾ ಮತ್ತು ದೇವವಾತರೆಂಬುವರು ಋಷಿಗಳು. ಹಿಂದೆ ಹೇಳಿದ ಗೋತ್ರಪ್ರವರವೆಂಬ ಗ್ರಂಥದ ಪ್ರಕಾರ ಈ ಋಷಿಗಳ ವಿಶ್ವಾಮಿತ್ರರ ಪುತ್ರರೆಂದು ತಿಳಿದುಬರುವುದು. ಭರತನು ಅತ್ರಿಯಿಂದ ಆರನೆಯ ತಲೆಯವನೆಂದೂ, ವಿಶ್ವಾಮಿತ್ರನು ಏಳನೆಯ ತಲೆಯವನೆಂದೂ, ಇವರಿಬ್ಬರೂ ಅತ್ರಿಯ ಮರಿಮಗನಾದ ಪುರೂರವನ ವಂಶಸ್ಥರೆಂದೂ ಅದೇಗ್ರಂಥದಿಂದ ತಿಳಿದುಬರುವುದು. ಇವರು ಋ. ಸಂ. ೩-೨೩-೪ ನೆಯ ಋಕ್ಕಿನಲ್ಲಿ-

**ನಿ ತ್ವಾ ದಧೇ ವರ ಆ ಪೃಥಿವ್ಯಾ ಇಳಾಯಾಸ್ಪದೇ ಸುದಿನತ್ವೇ ಅಹ್ನಾಂ ।**
**ದೃಷದ್ವತ್ಯಾಂ ಮಾನುಷಾ ಆಪಯಾಯಾಂ ಸರಸ್ವತ್ಯಾಂ ರೇವದಗ್ನೇ ದಿದೀಹಿ ॥**

(ಋ. ಸಂ. ೩-೨೩-೪)

ಸರಸ್ವತೀನದಿಯ ಜತೆಯಲ್ಲಿ **ದೃಷದ್ವತೀ** ಮತ್ತು **ಅಪಯಾ** ಎಂಬ ಬೇರೆ ಎರಡು ನದಿಗಳ ಹೆಸರನ್ನು ಹೇಳಿದ್ದಾರೆ. ದೃಷದ್ವತಿಯು ಈಗಿನ ಚಿತ್ರಾಂಗವೆಂಬ ನದಿಯು (the modern Chitrang, Chautag, or Chitang) **ಅಪಯಾ** ಎಂಬುವುದು ಈಗಿನ **ಅಪಗಾ** ಎಂಬು ನದಿಯು (the modern Apaga) ಈ ಎರಡು ನದಿಗಳೂ ಸರಸ್ವತಿಯ ನದಿಯ ಸಮೀಪದಲ್ಲಿಯೇ ಇರುವುದರಿಂದ ಸರಸ್ವತಿಯು ಸಿಂಧುನದಿಯಲ್ಲವೆಂದು ಧಾರಾಳವಾಗಿ ಹೇಳಬಹುದು. ವಿಶ್ವಾಮಿತ್ರಋಷಿಯ ಆಶ್ರಮವೂ ಸಹ (ಕುರುಕ್ಷೇತ್ರದಲ್ಲಿರುವ) ಈ ಸರಸ್ವತೀನದಿಯ ಪಶ್ಚಿಮ ದಡದಲ್ಲಿಯೇ ಇತ್ತೆಂದು ಈಚಿನ ಪರಿಶೋಧನೆಗಳಿಂದ ವ್ಯಕ್ತವಾಗಿದೆ (see Dey's Geographical Dic) ಇದುವರಿಗೆ ಹೇಳಿದ ವಿಷಯಗಳೆಲ್ಲವೂ ಅತ್ರಿ ಮತ್ತು ವಿಶ್ವಾಮಿತ್ರಋಷಿಗಳ ವಂಶಸ್ಥರ ಸಂಬಂಧವಾದುವು.

ಈಗ ಭರದ್ವಾಜ ಮತ್ತು ಅವರ ವಂಶಸ್ಥರ ವಿಷಯವನ್ನು ವಿಮರ್ಶಿಮಾಡೋಣ. ಋ. ಸಂ. ೬-೪೯-೭; ೬-೫೦-೧೨; ೬-೫೨-೬ ಈ ಮೂ ಋಕ್ಕುಗಳಿಗೂ ಭರದ್ವಾಜಪುತ್ರನಾದ **ಋಜಿಶ್ವಾ** ಎಂಬುವನೇ ಋಷಿಯು. ಈ ಮೂರು ಋಕ್ಕುಗಳಲ್ಲಿ ಮೊದಲನೆಯ ಮತ್ತು ಮೂರನೆಯ ಋಕ್ಕುಗಳಲ್ಲಿ ಸರಸ್ವತಿಯು ಒಂದು ನದಿಯೆಂಬ ವಿಚಾರವು ಸ್ಪಷ್ಟವಾಗಿ ಉಕ್ತವಾಗಿದೆ. ಎರಡನೆಯ ಮಂತ್ರದಲ್ಲಿ ರುದ್ರ, ವಿಷ್ಣು, ವಾಯು, ಪರ್ಜನ್ಯ ಎಂಬ ದೇವತೆಗಳ ಜತೆಯಲ್ಲಿ ಸರಸ್ವತಿಯ ಹೆಸರು ಸೂಚಿಸಲ್ಪಟ್ಟಿದ್ದರೂ ಸರಸ್ವತಿಯು ನದಿಯ ಹೆಸರೆಂದು ಭಾವಿಸಬಹುದಾಗಿದೆ. ಏಕೆಂದರೆ ಆ ಋಷಿಯು, ಎರಡು ಋಕ್ಕುಗಳಲ್ಲಿ ಸರಸ್ವತಿಯು ನದಿಯೆಂದು ಹೇಳಿರುವುದರಿಂದ ಮತ್ತೊಂದು ಋಕ್ಕಿನಲ್ಲಿ ಅದೇ ಋಷಿಯು ಸರಸ್ವತಿಯನ್ನು ನದಿಯೆಂದೇ ಭಾವಿಸಿ ಸ್ತೋತ್ರಮಾಡಿರುವುದು ಸಹಜವಾಗಿದೆ. ಭರದ್ವಾಜರ ಆಶ್ರಮವು ಪ್ರಯಾಗದಲ್ಲಿ (Allahabad) ಇದ್ದಿತು. ಆದುದರಿಂದ ಭರದ್ವಾಜಪುತ್ರನಾದ **ಋಜಿಶ್ವಾ** ಎಂಬುವನು ತನ್ನ

ಆಶ್ರಮಕ್ಕೆ ಸಮೀಪದಲ್ಲಿರುವ ಒಂದು ನದಿಯನ್ನೇ ಸ್ತೋತ್ರಮಾಡಿರಬೇಕು. ಭರದ್ವಾಜಋಷಿಯ ಋ. ಸಂ. ೬-೬೧ ನೆಯ ಸೂಕ್ತವೆಲ್ಲಾ (ಒಟ್ಟು ೧೪ ಋಕ್ಕುಗಳು) ಸರಸ್ವತೀ ವಿಷಯವಾಗಿಯೇ ಇದೆ. ಈ ಸೂಕ್ತದಲ್ಲಿರುವ ಹಲವು ಶಬ್ದಗಳ ಅರ್ಥವು ಸಿಂಧೂನದಿಗೆ ಅನ್ವಯಿಸುವುದೆಂದು ಕೆಲವು ಪಾಶ್ಚಾತ್ಯ ಪಂಡಿತರ ಅಭಿಪ್ರಾಯವು. ಆದರೆ ಈ ಶಬ್ದಗಳು ಸರಸ್ವತೀನದಿಗೂ ಸಹ ಅನ್ವಯಿಸುವುದರಿಂದ ಸಂಶಯಕ್ಕೆ ಅವಕಾಶವಿಲ್ಲ.

ಏಳನೆಯ ಮಂಡಲದಲ್ಲಿರುವ ಋ. ಸಂ. ೭-೯-೫; ೭-೩೫-೧೧; ೭-೩೬-೬; ೭-೪೦-೩; ೭-೯೫; ೭-೯೬ ಈ ಋಕ್ಕುಗಳಿಗೆಲ್ಲಾ ವಸಿಷ್ಠನೇ ಋಷಿಯು. ವಸಿಷ್ಠಋಷಿಯ ಆಶ್ರಮವು ರಾಜಪುಟಾನದಲ್ಲಿರುವ ಆರಾವಳೀಪರ್ವತದ ಅಬು ಎಂಬ ಬೆಟ್ಟದ (Mount Abu) ಸಮೀಪದಲ್ಲಿತ್ತೆಂದು ತಿಳಿದುಬರುವುದು. ಮೊದಲನೆಯ ನಾಲ್ಕು ಮಂತ್ರಗಳೂ ಕಡೆಯ ಎರಡು ಸೂಕ್ತಗಳೂ ಸರಸ್ವತಿಯನ್ನು ನದಿಯೆಂದೇ ಹೇಳಿ ಸ್ತುತಿಸಿರುವವು. ಈ ಋಕ್ಕುಗಳಲ್ಲಿರುವ **ಸಿಂಧುಮಾತಾ** ಮತ್ತು **ಆಸಮುದ್ರಾತ್** ಎಂಬ ಶಬ್ದಗಳು ಸಿಂಧುನದಿಗೇ ವಿಶೇಷವಾಗಿ ಅನ್ವಯಿಸುವುದರಿಂದ ಸಿಂಧುನದಿಯೇ ಈ ಮಂತ್ರಗಳಲ್ಲಿ ಸ್ತುತಿಸಲ್ಪಟ್ಟಿರುವುದೆಂದು ಕೆಲವರು ಹೇಳುವರು. ಈ ವಿವಾದವನ್ನು ಸಂಪೂರ್ಣವಾಗಿ ತಳ್ಳಿಹಾಕುವುದಕ್ಕಾಗುವುದಿಲ್ಲ. ಆದರೂ ಒಂದು ನದಿಯ ವಿಷಯವನ್ನು ಹೇಳುವಾಗ ಮತ್ತೊಂದು ನದಿಯನ್ನು ಅದಕ್ಕೆ ಹೋಲಿಸುವುದೂ, ಉತ್ಪ್ರೇಕ್ಷೆಯಿಂದ ಕೂಡಿದ ಪ್ರಶಂಸೆಯನ್ನು ಮಾಡುವುದೂ ಅಸಂಭವವಲ್ಲ.

ಎಂಟನೆಯ ಮಂಡಲದಲ್ಲಿರುವ ಋ. ಸಂ ೮-೨೧-೧೭ ಮತ್ತು ೧೮ ನೆಯ ಋಕ್ಕುಗಳಿಗೆ ಕಣ್ವಋಷಿಯ ಪುತ್ರನಾದ **ಶೋಭರಿ** ಎಂಬುವನು ಋಷಿಯು. ಈ ಋಷಿಯು, ಮೇಲೆ ಹೇಳಿದ ಋಕ್ಕುಗಳಲ್ಲಿ ಚಿತ್ರನೆಂಬ ರಾಜನು ಸರಸ್ವತೀನದಿಯ ತೀರದಲ್ಲಿ ಮಾಡಿದ ಯಜ್ಞವನ್ನೂ ಆ ರಾಜನ ದಾನಪ್ರಶಂಸೆಯನ್ನೂ ವರ್ಣಿಸಿರುವನು. ಶೌನಕರ ಬೃಹದ್ದೇವತಾಗ್ರಂಥದಲ್ಲಿ (೬-೫೮ ರಿಂದ ೬೨) ಈ ಚಿತ್ರರಾಜನು ಕುರುಕ್ಷೇತ್ರದಲ್ಲಿ ಯಜ್ಞಮಾಡಿದನೆಂದು ಹೇಳಿರುವುದರಿಂದ ಸರಸ್ವತಿಯು ಸಮೀಪದಲ್ಲಿರುವ ನದಿಯೇ ಆಗಿರಬೇಕು ಮತ್ತು,

**ಪೂಷಾ ವಿಷ್ಣುರ್ಹವನಂ ಮೇ ಸರಸ್ವತ್ಯವಂತು ಸಪ್ತ ಸಿಂಧವಃ ।**
**ಅಪೋ ವಾತಃ ಪರ್ವತಾಸೋ ವನಸ್ಪತಿಃ ಶೃಣೋತು ಪೃಥಿವೀ ಹವಂ ॥**
(ಋ. ಸಂ. ೮-೫೪-೪)

ಈ ಋಕ್ಕಿನಲ್ಲಿ **ಪೂಷಾ, ವಿಷ್ಣು, ಸರಸ್ವತೀ, ಸಪ್ತಸಿಂಧವಃ** (ಏಳು ನದಿಗಳು) **ಆಪಃ, ವಾತಃ, ಪರ್ವತಾಸಃ, ವನಸ್ಪತಿಃ ಪೃಥಿವೀ** ಈ ದೇವತೆಗಳ ಮಧ್ಯದಲ್ಲಿ ಸರಸ್ವತಿಯೂ ಸೂಚಿಸಲ್ಪಟ್ಟಿರುವುದು. ಅದರಂತೆಯೇ ಋ. ಸಂ. ೯-೬೭-೩೨ ರಲ್ಲಿ ಆ ಮಂತ್ರದ ಋಷಿಯಾದ **ವಸಿಷ್ಠ** ಅಥವಾ **ಪವಿತ್ರ** ಎಂಬುವರು ಸರಸ್ವತೀಶಬ್ದವನ್ನು ಉಪಯೋಗಿಸಿರುವರು. ಇಲ್ಲಿ ಸರಸ್ವತಿಯು ಒಂದು ದೇವತೆ ಅಥವಾ ನದಿ ಎಂಬ ಎರಡು ಅರ್ಥಗಳಲ್ಲಿ ಯಾವುದಾದರೂ ಆಗಬಹುದು. ಋ. ಸಂ. ೧೦-೩೦-೧೨ ರಲ್ಲಿ ಸರಸ್ವತಿಯೆಂದರೆ ಯಾವ ನದಿಯೆಂದು ನಿರ್ದಿಷ್ಟವಾಗಿ ಹೇಳಿಲ್ಲ. ಋ. ಸಂ ೧೦-೬೪-೯ ರಲ್ಲಿ ಈ ಮಂತ್ರದ ಋಷಿಯಾದ ಗಯನೆಂಬುವನು (ಅತ್ರಿಮಹರ್ಷಿಯ ವಂಶಸ್ಥ) ಸಿಂಧೂ ಮತ್ತು ಸರಯೂ (Gogra) ನದಿಗಳ ಜೊತೆಯಲ್ಲಿಯೇ ಸರಸ್ವತಿಯನ್ನು ಹೇಳಿರುವನು. ಮತ್ತು

**ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಸ್ತೋಮಂ ಸಚತಾ ಪರುಷ್ಣ್ಯಾ ।**
**ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ।**
(ಋ. ಸಂ. ೧೦-೭೫-೫)

ಎಂಬ ಋಕ್ಕಿನಲ್ಲಿ ಸರಸ್ವತೀನದಿಯು, ಗಂಗಾ (the Ganges) ಯಮುನಾ (the Jamna) ಶುತುದ್ರಿ (the Sutlej) ಪರುಷ್ಣಿ (the Ravi) ಅಸಿಕ್ನಿ (the Chinab) ವಿತಸ್ತಾ (the Jhelam) ಮರುದ್ವೃಧಾ (the United Stream of the Jhelam and Chenab) ಆರ್ಜಿಕೀಯಾ (the Bias) ಮತ್ತು ಸುಷೋಮಾ (the Indus) ಎಂಬ ನದಿಗಳ ಜೊತೆಯಲ್ಲಿ ಹೇಳಲ್ಪಟ್ಟಿರುವುದರಿಂದ ಸರಸ್ವತೀನದಿಯೇ ಒಂದು ಪ್ರತ್ಯೇಕವಾದ ನದಿಯೆಂದೂ ಸಿಂಧುನದಿಯಲ್ಲವೆಂದೂ ಸ್ಪಷ್ಟವಾಗುವುದು. ಮೇಲಿನ ಋಕ್ಕಿರುವ ಸೂಕ್ತವೆಲ್ಲಾ ನದಿಗಳ ಪರವಾಗಿಯೇ ಇದೆ. ಎಂದರೆ ಈ ಸೂಕ್ತದಲ್ಲಿರುವ ೯ ಋಕ್ಕುಗಳಿಗೂ ನದಿಗಳೇ ದೇವತೆಗಳು. ಈ ಸೂಕ್ತಕ್ಕೆ ಪ್ರಿಯಮೇಧಋಷಿಯ ಪುತ್ರನಾದ ಸಿಂಧುಕ್ಷಿತ್ ಎಂಬವನು ಋಷಿಯು.

ಸರಸ್ವತಿಯು **ತಿಸ್ರೋ ದೇವ್ಯಃ** ಎಂದು ಹೇಳಲ್ಪಡುವ ಮೂರು ಮಂದಿ ದೇವತೆಯಲ್ಲಿ ಒಬ್ಬಳೆಂದು ಆಪ್ರೀ ಸೂಕ್ತಗಳಲ್ಲಿ ಹೇಳಲ್ಪಟ್ಟಿದೆ. ಋಗ್ವೇದಸಂಹಿತೆಯಲ್ಲಿ ಆಪ್ರೀಸೂಕ್ತಗಳೆಂದು ಹೇಳಲ್ಪಡುವ ೧೦ ಸೂಕ್ತಗಳಿವೆ. ಶೌನಕರ ಅನುವಾಕಾನುಕ್ರಮಣಿಯಲ್ಲಿ ಈ ಸೂಕ್ತಗಳ ವಿವರವು ಈ ರೀತಿ ಇದೆ—

**ಶ್ಲೋಕಸ್ಯಾಸ್ಯ ಯಥಾಸಂಖ್ಯಂ ಸೂಕ್ತಾನಿ ದಶ ವೈ ವಿದುಃ**
**ನ ಆ ವಹಾಗ್ನ ಆ ವಹಾದ್ಯ ರಾಜಸೀತ್ಯಗ್ನಿರ್ನಿ ಚ**
**ಸಮಿತ್ಸಮಿತ್ಸು ಶೋಚಿಷೇ ಜುಷಸ್ವ ವಿಶ್ವತಸ್ತಥಾ ।**
**ಇಮಾಂ ಮೇ ಅದ್ಯ ಮನ್ವಿಮಾ ಯಥರ್ಷಿಪಕ್ಷ ಆಪ್ರಿಯಃ ।**
**ವಸಿಷ್ಠಶುನಕೌ ವಿನಾ ಸಮಿದ್ಧಸರ್ವಪಕ್ಷ್ಯತಾ ।**
**ಜುಷಸ್ವಾದಿದ್ವಿತೀಯಯಾ ತನೂನಪಾದ್ವಿರೋಧಿತಾ ।**
**ಯಜುಃ ಶ್ರುತೌ ತಥಾಶ್ರುತೇಃ ಸಮಿದ್ಧಸೂಕ್ತಮಧ್ಯತಃ ।**
**ಪ್ರಜಾಪತೇಃ ಪಶೋಃ ಸದಾ ಭವೇಯುರದ್ಯ ಮನ್ವಿಮಾಃ ।**
**ಇತೀರಿತಂ ಹಿ ಬಹ್ವೃಚೈರ್ಯಥರ್ಷಿ ವೇತಿ ಸೂತ್ರತಃ ॥**

| ಸಂಖ್ಯೆ | ಸೂಕ್ತದ ಪ್ರಾರಂಭ | ಮಂಡಲ ಮತ್ತು ಸೂಕ್ತ | ಋಕ್ಸಂಖ್ಯೆ | ಸೂಕ್ತದ ಋಷಿ |
|---|---|---|---|---|
| 1 | **ಸುಸಮಿದ್ಧೋ ನ ಆವಹ** | ೧—೧೩ | ೧೨ | **ಮೇಧಾತಿಥಿಃ, ಕಾಣ್ವಃ** |
| 2 | **ಸಮಿದ್ಧೋ ಅಗ್ನ ಆವಹ** | ೧-೧೪೨ | ೧೩ | **ದೀರ್ಘತಮಾ ಔಚಥ್ಯಃ** |
| 3 | **ಸಮಿದ್ಧೋ ಅದ್ಯ ರಾಜಸಿ** | ೧-೧೮೮ | ೧೧ | **ಅಗಸ್ತ್ಯೋ ಮೈತ್ರಾವರುಣಿಃ** |
| 4 | **ಸಮಿದ್ಧೋ ಅಗ್ನಿರ್ನಿಹಿತಃ** | ೨-೩ | ೧೧ | **ಗೃತ್ಸಮದಃ** |
| 5 | **ಸಮಿತ್ಸಮಿತ್ಸುಮನಾ** | ೩-೪ | ೧೧ | **ಗಾಥಿನೋ ವಿಶ್ವಾಮಿತ್ರಃ** |
| 6 | **ಸುಸಮಿದ್ಧಾಯ ಶೋಚಿಷೇ** | ೫-೫ | ೧೧ | **ವಸುಶ್ರುತ ಆತ್ರೇಯಃ** |
| 7 | **ಜುಷಸ್ವ ನಃ ಸಮಿಧಮಗ್ನೇ** | ೭-೨ | ೧೧ | **ಮೈತ್ರಾವರುಣಿರ್ವಸಿಷ್ಠಃ** |
| 8 | **ಸಮಿದ್ಧೋ ವಿಶ್ವತಸ್ಪತಿಃ** | ೯-೫ | ೧೧ | **ಕಾಶ್ಯಪೋಽಸಿತೋ ದೇವಲೋ ವಾ** |
| 9 | **ಇಮಾಂ ಮೇ ಅಗ್ನೇ ಸಮಿಧಂ** | ೧೦-೭೦ | ೧೧ | **ಸುಮಿತ್ರೋ ವಾಧ್ರ್ಯಶ್ವಃ** |
| 10 | **ಸಮಿದ್ಧೋ ಅದ್ಯ ಮನುಷೋ** | ೧೦-೧೧೦ | ೧೧ | **ಜಮದಗ್ನಿರ್ಭಾರ್ಗವಃ** |

ಮೇಲೆ ಹೇಳಿದ ಸೂಕ್ತಗಳಲ್ಲಿ ೧—೨ ನೆಯ ಸೂಕ್ತಗಳಲ್ಲಿ ೧೨ ಮತ್ತು ೧೩ ಋಕ್ಕುಗಳಿವೆ. ಮಿಕ್ಕ ಸೂಕ್ತಗಳಲ್ಲೆಲ್ಲಾ ೧೧ ಋಕ್ಕುಗಳಿವೆ. ಈ ೧೧ ಋಕ್ಕುಗಳಿಗೆ ದೇವತೆಗಳು ಈ ರೀತಿ ಇರುವರು—

| | | |
|---|---|---|
| ೧ ನೆಯ ಋಕ್ಕು— | | ಇಧ್ಮಃ ಸಮಿದ್ಧೋಽಗ್ನಿರ್ವಾ |
| ೨ | ,, | ತನೂನಪಾತ್ |
| ೩ | ,, | ಇಳಃ |
| ೪ | ,, | ಬರ್ಹಿಃ |
| ೫ | ,, | ದೇವೀರ್ದ್ವಾರಃ |
| ೬ | ,, | ಉಷಾಸಾನಕ್ತಾ |
| ೭ | ,, | ದೇವ್ಯಾ ಹೋತಾರೌ ಪ್ರಚೇತಸೌ |
| ೮ | ,, | ತಿಸ್ರೋ ದೇವ್ಯಃ ಸರಸ್ವತೀಳಾಭಾರತ್ಯಃ |
| ೯ | ,, | ತ್ವಷ್ಟಾ |
| ೧೦ | ,, | ವನಸ್ಪತಿಃ |
| ೧೧ | ,, | ಸ್ವಾಹಾಕೃತಯಃ |

೧೨ ಋಕ್ಕುಗಳಿರುವ ಮೊದಲನೆಯ ಸೂಕ್ತದಲ್ಲಿ **ನರಾಶಂಸಃ** ಎಂಬ ದೇವತೆಯೂ ೧೩ ಋಕ್ಕುಗಳಿರುವ ಎರಡನೆಯ ಸೂಕ್ತದಲ್ಲಿ **ನರಾಶಂಸಃ** ಮತ್ತು **ಇಂದ್ರಃ** ಎಂಬ ದೇವತೆಗಳೂ ಇರುವುದರಿಂದ ಇತರ ಸೂಕ್ತಗಳಲ್ಲಿರುವಂತೆ ೧೧ ಋಕ್ಕುಗಳಿಗೆ ಬದಲಾಗಿ ೧೨ ಮತ್ತು ೧೩ ಋಕ್ಕುಗಳಿವೆ. ಮಿಕ್ಕ ವಿಷಯಗಳಲ್ಲಿ ಏನೂ ವ್ಯತ್ಯಾಸವಿಲ್ಲ. ಛಂದಸ್ಸು ಮತ್ತು ಋಷಿಗಳು ಬೇರೆ ಬೇರೆ. ಪಶುಯಾಗದಲ್ಲಿ ಅಗ್ನಿಯನ್ನು (ಸಮಿದ್ಧೋಽಗ್ನಿ) ಸ್ತುತಿಸುವಾದ ಪ್ರಯಾಜಹೋಮಗಳನ್ನು ಮಾಡುವಾಗ ಈ ಸೂಕ್ತಗಳನ್ನು ಪಠಿಸುವರು. ಈ ಸೂಕ್ತಗಳಲ್ಲಿ **ತ್ರಿಸ್ರೋ ದೇವ್ಯಃ** ಎಂದರೆ ಇಳಾ ಸರಸ್ವತೀ ಭಾರತೀ ದೇವತೆಗಳ ಸ್ತೋತ್ರವಿದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ—ಅಗ್ನಿಯು ಭೂಮಿ, ಅಂತರಿಕ್ಷ, ಸ್ವರ್ಗಗಳಲ್ಲಿ ಮೂರು ರೂಪಗಳಿಂದ ಆರಾಧಿಸಲ್ಪಡುವನು. ಭಾರತಿಯು ಸೂರ್ಯನ ಕಿರಣಗಳನ್ನು ಸೂಚಿಸುವುದರಿಂದ ಈ ದೇವತೆಯು (ಎಂದರೆ ಸೂರ್ಯನು) ಸ್ವರ್ಗ (ದಿವ) ದಲ್ಲಿರುವ ಅಗ್ನಿಯ ರೂಪವು. ಸರಸ್ವತಿಯು ಸಿಡಿಲುಮಿಂಚುಗಳಿಗೆ ಅಭಿಮಾನಿದೇವತೆಯೆಂದು ಅನೇಕ ಕಡೆ ವರ್ಣಿಸಿರುವುದರಿಂದ ಈ ಸರಸ್ವತಿಯು ಅಂತರಿಕ್ಷದಲ್ಲಿರುವ ಅಗ್ನಿಯ ರೂಪವು. ಇಳಾದೇವಿಯು ಭೂಮಿಯ ಮೇಲಿರುವ ಪ್ರಜೆಗಳಿಗೆ (ಜನಗಳಿಗೆ) ಧನಾದಿಗಳನ್ನೂ ದೀರ್ಘಾಯುವನ್ನೂ ಕೊಡುವವಳಾದುದರಿಂದ ಈ ದೇವತೆಯು ಭೂಮಿಯಲ್ಲಿರುವ ಅಗ್ನಿಯರೂಪವು ಎಂದು ಈ ಇಳಾ ಸರಸ್ವತೀ ಭಾರತೀಯರ ಸಂಕೇತವು. ಈ ಮೂವರು ದೇವತೆಗಳೂ ಯಜ್ಞವೇದಿಕೆಗೆ ಬಂದು ಬರ್ಹಿಸ್ತರಣದ (ಹರಡಿರುವ ದರ್ಭೆಗಳ) ಮೇಲೆ ಕುಳಿತುಕೊಳ್ಳಬೇಕೆಂದು ಋಷಿಗಳು ಸ್ತೋತ್ರಮಾಡಿದಾರೆ.

ಸರಸ್ವತಿಯು ನದಿಯಲ್ಲದೆ ಬೇರೆ ದೇವತೆಯೆಂದು ಭಾವಿಸಿ ಋಷಿಗಳು ಸ್ತೋತ್ರಮಾಡಿರುವ ಕೆಲವು ಉದಾಹರಣೆಗಳನ್ನು ಕೊಡುತ್ತೇವೆ.

(1) **ತಾನ್ಪೂರ್ವಯಾ ನಿವಿದಾ ಹೂಮಹೇ ವಯಂ ಭಗಂ ಮಿತ್ರಮದಿತಿಂ ದಕ್ಷಮಸ್ರಿಧಂ ।**
**ಅರ್ಯಮಣಂ ವರುಣಂ ಸೋಮಮಶ್ವಿನಾ ಸರಸ್ವತೀ ನಃ ಸುಭಗಾ ಮಯಸ್ಕರತ್ ।**

(ಋ. ಸಂ. ೧-೮೯-೩)

ಈ ಋಕ್ಕಿನಲ್ಲಿ ಸರಸ್ವತಿಯು ವಾಗ್ದೇವತೆ ಅಥವಾ ಶಿಡುಲುಮಿಂಚುಗಳ ಅಭಿಮಾನಿದೇವತೆಯೆಂದಾಗಲಿ ಭಾವಿಸಲ್ಪಟ್ಟಿರುವುದು.

(2) ಸರಸ್ವತಿ ತ್ವಮಸ್ಮಾँ ಅವಿಡ್ಢಿ ಮರುತ್ವತೀ ಧೃಷತೀ ಜೇಷಿ ಶತ್ರೂನ್ ।

(ಋ. ಸಂ. ೨-೩೦-೮)

(3) ಸರಸ್ವತೀ ಶೃಣವನ್ ಯಜ್ಞಿಯಾಸೋ ಧಾತಾ ರಯಿಂ ಸಹವೀರಂ ತುರಾಸಃ ।

(ಋ. ಸಂ. ೩-೫೪-೧೩)

ಈ ಋಕ್ಕುಗಳಲ್ಲಿ 'ಸರಸ್ವತಿಯು ನದೀ ಎಂದಾಗಲೀ ಶಿಡುಲುಮಿಂಚುಗಳ ಅಭಿಮಾನಿದೇವತೆಯೆಂದಾಗಲಿ ಭಾವಿಸಲ್ಪಟ್ಟಿರುವುದು.

(4) ದಮೂನಸೋ ಅಪಸೋ ಯೇ ಸುಹಸ್ತಾ ವೃಷ್ಣಃ ಪತ್ನೀರ್ನದ್ಯೋ ವಿಭ್ವತಷ್ಟಾಃ ।
ಸರಸ್ವತೀ ಬೃಹದ್ದಿವೋತ ರಾಕಾ ದಶಸ್ಯಂತೀರ್ವರಿವಸ್ಯಂತು ಶುಭ್ರಾಃ ।

(ಋ. ಸಂ. ೫-೪೨-೧೨)

(5) ಆ ನೋ ದಿವೋ ಬೃಹತಃ ಪರ್ವತಾದಾ ಸರಸ್ವತೀ ಯಜತಾ ಗಂತು ಯಜ್ಞಂ ।

(ಋ. ಸಂ. ೫-೪೩-೧೧)

(6) ಉಭಾ ನಾಸತ್ಯಾ ರುದ್ರೋ ಅಧ ಗ್ನಾಃ ಪೂಷಾ ಭಗಃ ಸರಸ್ವತೀ ಜುಷಂತ ।

(ಋ. ಸಂ. ೫-೪೬-೨)

ಈ ಮೂರು ಋಕ್ಕುಗಳಲ್ಲಿಯೂ ಸರಸ್ವತಿಯು ಶಿಡುಲುಮಿಂಚುಗಳ ಅಭಿಮಾನಿದೇವತೆಯು. Griffith ಎಂಬುವರು ಈ ಮೂರು ಋಕ್ಕುಗಳಲ್ಲಿ ಮೊದಲನೆಯದರಲ್ಲಿ ಸರಸ್ವತಿಯನ್ನು ಸಿಂಧು ಅಥವಾ ಸರಸ್ವತಿ ಎಂಬ ಯಾವುದಾದರೂ ಒಂದು ನದಿಯೆಂತಲೂ, ೨-೩ನೆಯ ಋಕ್ಕುಗಳಲ್ಲಿ ದೇವತೆಯೆಂತಲೂ ವ್ಯಕ್ತವಾಗುವುದೆಂದು ಅಭಿಪ್ರಾಯ ಪಡುವರು. K. C. ಚಟ್ಟಪಾಧ್ಯಾಯ ಎಂಬುವರು ೧-೨ನೆಯ ಋಕ್ಕುಗಳು ಸಿಂಧುನದಿಗೆ ಅನ್ವಯಿಸುವುದೆಂದು ಹೇಳುವರು. ಈ ಮೂರು ಋಕ್ಕುಗಳೂ ಅತ್ರಿ ಋಷಿಯ ವಂಶಸ್ಥರಿಂದಲೇ ಉಕ್ತವಾಗಿದೆ. ಮೊದಲನೆಯ ಋಕ್ಕಿಗೆ ಅತ್ರಿ ಅಥವಾ ಅತ್ರಿಯ ಪುತ್ರನಾದ ಭೌಮನೆಂಬವನೂ. ಎರಡನೆಯ ಋಕ್ಕಿಗೆ ಅತ್ರಿಯೂ, ಮೂರನೆಯ ಋಕ್ಕಿಗೆ ಅತ್ರಿಯ ವಂಶಸ್ಥನಾದ ಪ್ರತಿಕ್ಷತ್ರನೆಂಬುವನೂ ಋಷಿಗಳು. ಎರಡನೆಯ ಋಕ್ಕಿನಲ್ಲಿ ಸರಸ್ವತಿಯನ್ನು ಸ್ವರ್ಗದಿಂದಲೂ (ದಿವಃ) ಮೇಘಮಂಡಲದಿಂದಲೂ (ಪರ್ವತಾದಾ) ಆಹ್ವಾನ ಮಾಡಲಾಗಿದೆ. ಮೊದಲನೆಯ ಋಕ್ಕಿನಲ್ಲಿ ಪತ್ನೀಃ ಎಂಬ ಶಬ್ದವಿರುವುದರಿಂದ ಸರಸ್ವತಿಯನ್ನೂ, ಇತರ ನದಿಗಳನ್ನೂ ಇಂದ್ರನ ಪತ್ನಿಯರನ್ನಾಗಿ ಭಾಷ್ಯಕಾರರು ಭಾವಿಸಿರುವರು.

(7) ಅಗ್ನಿರಿಂದ್ರೋ ವರುಣೋ ಮಿತ್ರೋ ಅರ್ಯಮಾ ವಾಯುಃ ಪೂಷಾ ಸರಸ್ವತೀ ಸಜೋಷಸಃ ।

(ಋ. ಸಂ. ೧೦-೬೫-೧)

(8) ವಿಶ್ವೇ ದೇವಾಸಃ ಶೃಣವನ್ ವಚಾಂಸಿ ಮೇ ಸರಸ್ವತೀ ಸಹ ಧೀಭಿಃ ಪುರಂಧ್ಯಾ ।

(ಋ. ಸಂ. ೧೦-೬೫-೧೩)

ಈ ಎರಡು ಋಕ್ಕುಗಳಲ್ಲಿಯೂ ಸರಸ್ವತಿಯು ವಾಗ್ದೇವತೆಯು;

(9) ಯೆತ್ಸುರಾಮಂ ವ್ಯಪಿಬಃ ಶಚೀಭಿಃ ಸರಸ್ವತೀ ತ್ವಾ ಮಘವನ್ನಭಿಷ್ಣುಕ್ ।
(ಋ. ಸಂ. ೧೦-೧೩೧-೫)

ಈ ಋಕ್ಕಿನಲ್ಲಿ ಸರಸ್ವತಿಯು ಇಂದ್ರನೊಡನೆ ಇರುವಂತೆ ಹೇಳಿರುವುದರಿಂದ ಸರಸ್ವತಿಯು ಶಿಡಿಲುಮಿಂಚುಗಳ ಅಭಿಮಾನಿದೇವತೆಯೆಂದು ಭಾವಿಸಬಹುದು

(10) ಗರ್ಭಂ ದೇಹಿ ಸಿನೀವಾಲಿ ಗರ್ಭಂ ದೇಹಿ ಸರಸ್ವತಿ ।
(ಋ. ಸಂ. ೧೦-೧೮೪-೨)

ಇಲ್ಲಿ ಸರಸ್ವತಿಯನ್ನು ವಾಗ್ದೇವತೆಯೆಂದೇ ಹೇಳುವುದು ಸಮಂಜಸವಾಗಿರುವುದು

ಸರಸ್ವತೀನದಿಯು ಆ ಕಾಲದಲ್ಲಿ ಎಲ್ಲೆಲ್ಲಿ ಹರಿಯುತ್ತಿತ್ತೆಂಬ ವಿಚಾರದಲ್ಲಿ ತಿಳಿದ ಮಟ್ಟಿಗೆ ಸೂಕ್ಷ್ಮವಾಗಿ ವಿವರಿಸುವೆವು. ಈ ವಿವರಣೆಯು (1) R. D. Oldham in Journal of Asiatic Society Bengal 1886 page 322 (2) C. F. Oldham, Journal of Royal Asiatic Society 1893, page 51 (3) Maps of the Cambridge History of India Vol. I Ancient India (4) Maps of Punjab published by the Surveyor-General of India (5) Ancient India as described by Magastheneses and Arrian ಎಂಬ ಭಾಷಣ ಗಳನ್ನನುಸರಿಸಿ ಬರೆಯಲ್ಪಟ್ಟಿರುವುದು. ಸರಸ್ವತೀನದಿಯು ಆ ಕಾಲದಲ್ಲಿ ಒಂದು ದೊಡ್ಡನದಿಯಾಗಿದ್ದಿತು. ಹಿಮಾಲಯ ಪರ್ವತದಲ್ಲಿರುವ ಸಿರ್‌ಮೂರ್ (Sismur) ಪರ್ವತಶ್ರೇಣಿಯಲ್ಲಿ ಉದ್ಭವಿಸಿ ಅಲ್ಲಿಂದ ಪಶ್ಚಿಮಕ್ಕೂ ಸ್ವಲ್ಪ ದಕ್ಷಿಣಕ್ಕೂ ಹರಿಯುವುದು. ಇದರ ಉದ್ಭವಸ್ಥಾನದಲ್ಲಿ ಐದು ಸಣ್ಣ ಸಣ್ಣ ತೊರೆಗಳು (ನೀರು ಹರಿಯುವ ಸಣ್ಣ ಹಳ್ಳಗಳು) ಸೇರಿ ಈ ನದಿಯಾಗಿ ಮುಂದಕ್ಕೆ ಹರಿದಿರಬಹುದು. ಆದುದರಿಂದ ಇದಕ್ಕೆ ಪಂಚಜಾತಾ ಎಂಬ ಹೆಸರು ಬಂದಿರಬೇಕು. ಸ್ವಲ್ಪದೂರ ಹರಿದ ಮೇಲೆ ದೃಷದ್ವತೀ ಎಂಬ ನದಿಯು (the modren Chitrang) ಪೂರ್ವದಿಕ್ಕಿನಿಂದ ಹರಿದು ಬಂದು ಇದಕ್ಕೆ ಸೇರುವುದು. ಆಪಯಾ ಎಂಬುದು ದೃಷದ್ವತಿಗೆ ಉಪನದಿಯು. ಆ ಕಾಲದ ಸರಸ್ವತಿಯು ಈಗಿನ ಸರಸುತಿನದಿಯ ದಕ್ಷಿಣಕ್ಕಿತ್ತು. (ಮರಳುಭೂಮಿಗಳಲ್ಲಿ ಹರಿಯುವ ನದಿಗಳು ತಮ್ಮ ಪಾತ್ರಗಳನ್ನು ಅನೇಕವೇಳೆ ಬದಲಾಯಿಸುವುವು.) ಈಗಿನ ಸರಸುತಿನದಿಗೆ ಮಾರ್ಕಂಡಾ (Markand) ಮತ್ತು ಗಗ್ಗರ್ (Ghaggar) ಎಂಬ ಸಣ್ಣ ನದಿಗಳು ಸೇರುವುವು. ಬಳಿಕ ಸರಸ್ವತಿಯು ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಪ್ರವಹಿಸಿ ಕಡೆಗೆ ಸಮುದ್ರವನ್ನು ಸೇರುವುದು. ಈಗಿನ ಹಾಕ್ರ (Hakra) ಎಂಬ ಒಣಗಿಹೋಗಿರುವ ನದಿಯ ಪಾತ್ರವೇ ಆಗಿನ ಸರಸ್ವತೀ ನದಿಯ ಪಾತ್ರವಾಗಿರಬೇಕು. ಅದು ಈಗಿನ (Sutlej) ಎಂಬ ನದಿಯೊಡನೆ ಸಂಗಮವಾಗಿ ಸಿಂಧೂನದಿ ಯಲ್ಲಿ ಐಕ್ಯವಾಗಿರಬಹುದು. ಅಥವಾ ನೇರವಾಗಿ ಸಿಂಧೂನದಿಗೇ ಹೋಗಿ ಸೇರಬಹುದು ಅಕಾಲದಲ್ಲಿ ಸಿಂಧೂ ನದಿಯು ಈಗಿರುವುದಕ್ಕಿಂತ ಬಹುದೂರ ಪೂರ್ವದಿಕ್ಕಿನಲ್ಲಿತ್ತು ಮತ್ತು (Rann of Kach) ಎಂಬ ಕೊಲ್ಲಿಯ ಸಮೀಪದಲ್ಲಿ ಸಮುದ್ರವನ್ನು ಸೇರುತ್ತಿತ್ತು. ಮ್ಯಾಕ್ಸ್ ಮುಲ್ಲರ್ (Max Muller) ಪಂಡಿತನು ಋ. ಸಂ. ೭-೯೫-೨ ನೆಯ ಋಕ್ಕಿನಲ್ಲಿ ಹೇಳಿರುವ **ಆಸಮುದ್ರಾತ್** ಎಂಬ ಶಬ್ದದ ಆಧಾರದಮೇಲೆ ಈ ಸರಸ್ವತೀನದಿಯು ನೇರವಾಗಿ ಸಮುದ್ರಕ್ಕೆ ಹೋಗಿ ಸೇರುತ್ತಿತ್ತೆಂದು ಅಭಿಪ್ರಾಯಪಡುತ್ತಾನೆ. ಈ ನದಿಯು ಸಮುದ್ರಕ್ಕೆ ಸೇರಲು ಮೊದಲು ಮರಳುಕಾಡಿನ ಪ್ರದೇಶದಲ್ಲಿ ಹರಿಯುತ್ತಿದ್ದುದರಿಂದ ನದಿಯು ಸಮುದ್ರಕ್ಕೆ ಸೇರುವ ಮೊದಲೇ ಮರುಭೂಮಿಯಲ್ಲಿ

ಇಂಗಿಹೋಗಿರಬಹುದು (See Muir's Sanskrit Texts Vo. II page 393) ಈ ರೀತಿ ನದಿಯು ಮರುಭೂಮಿಯಲ್ಲಿ ಇಂಗಿಹೋದ ವಿಚಾರದ ವರ್ಣನೆಯು ಮಹಾಭಾರತದಲ್ಲಿಯೂ (ವನಪರ್ವ ತೀರ್ಥಯಾತ್ರಾ ವರ್ಣನೆ) ಮತ್ತು ಮನುಸಂಹಿತೆಯಲ್ಲಿಯೂ (೧-೨೧) ಹೇಳಲ್ಪಟ್ಟಿದೆ. ಎಲ್ಲಾ ಕಾರಣಗಳಿಂದ ಈಗಿನ ಸರಸುತಿ ನದಿಯೇ ಹಿಂದಿನ ಸರಸ್ವತೀನದಿಯಾಗಿರಬೇಕೆಂದು ಹೇಳಬಹುದು.

॥ ಸಂಹಿತಾಪಾಠಃ ॥

ತ್ವೇ ವಿಶ್ವಾ ಸರಸ್ವತಿ ಶ್ರಿತಾಯೂಂಷಿ ದೇವ್ಯಾಂ ।
ಶುನಹೋತ್ರೇಷು ಮತ್ಸ್ವ ಪ್ರಜಾಂ ದೇವಿ ದಿದಿಡ್ಢಿ ನಃ ॥ ೧೭ ॥

॥ ಪದಪಾಠಃ ॥

ತ್ವೇ ಇತಿ । ವಿಶ್ವಾ । ಸರಸ್ವತಿ । ಶ್ರಿತಾ । ಆಯೂಂಷಿ । ದೇವ್ಯಾಂ ।
ಶುನಽಹೋತ್ರೇಷು । ಮತ್ಸ್ವ । ಪ್ರಽಜಾಂ । ದೇವಿ । ದಿದಿಡ್ಢಿ । ನಃ ॥ ೧೭ ॥

॥ ಸಾಯಣಭಾಷ್ಯಂ ॥

ಹೇ ಸರಸ್ವತಿ ದೇವ್ಯಾಂ ದ್ಯೋತಮಾನಾಯಾಂ ತ್ವೇ ತ್ವಯಿ ವಿಶ್ವಾ ವಿಶ್ವಾನಿ ಸರ್ವಾಣ್ಯಾಯೂಂಷ್ಯನ್ನಾನಿ । ಆಯುಃ ಸೂನೃತೇತ್ಯನ್ನನಾಮಸು ಪಾಠಾತ್ । ಶ್ರಿತಾ । ಆಶ್ರಿತಾನಿ । ಸಾ ತ್ವಂ ಶುನಹೋತ್ರೇಷು ಗೃತ್ಸಮದೇಷ್ವಸ್ಮಾಸು ವಿಷಯೇಷು ಮತ್ಸ್ವ । ಸೋಮಪಾನೇನ ತೃಪ್ಯ । ಕಿಂಚ ಹೇ ದೇವಿ ಸರಸ್ವತಿ ನೋಽಸ್ಮಭ್ಯಂ ಪ್ರಜಾಂ ದಿದಿಡ್ಢಿ । ಪುತ್ರಾನ್ದೇಹಿ ॥

॥ ಪ್ರತಿಪದಾರ್ಥ ॥

**ಸರಸ್ವತಿ**—ಎಲೈ ಸರಸ್ವತಿಯೇ । **ದೇವ್ಯಾಂ**—ಪ್ರಕಾಶಮಾನಳಾದ । **ತ್ವೇ** — ನಿನ್ನಲ್ಲಿ । **ವಿಶ್ವಾ**—ಸಮಸ್ತವಾದ । **ಆಯೂಂಷಿ**— ಅನ್ನಗಳು । **ಶ್ರಿತಾ**—ಆಶ್ರಯಿಸಿವೆ । **ಶುನಹೋತ್ರೇಷು**—ಶುನಹೋತ್ರ ವಂಶಸ್ಥರಾದ ನಮ್ಮ ವಿಷಯದಲ್ಲಿ । **ಮತ್ಸ್ವ**—ಸೋಮಪಾನದಿಂದ ತೃಪ್ತಳಾಗು । **ದೇವಿ**—ಎಲೈ ಮಾತೆಯೇ । **ನಃ**—ನಮಗೆ । **ಪ್ರಜಾಂ**—ಪುತ್ರರನ್ನು । **ದಿದಿಡ್ಢಿ**—ಅನುಗ್ರಹಿಸಿ ಕೊಡು ।

॥ ಭಾವಾರ್ಥ ॥

ಎಲೈ ಸರಸ್ವತಿಯೇ, ಪ್ರಕಾಶಮಾನಳಾದ ನಿನ್ನನ್ನು ಸಮಸ್ತವಾದ ಅನ್ನಗಳೂ ಆಶ್ರಯಿಸಿವೆ. ಸೋಮಪಾನವನ್ನು ಮಾಡಿ ನೀನು ಶುನಹೋತ್ರವಂಶಸ್ಥರಾದ ನಮ್ಮ ವಿಷಯದಲ್ಲಿ ತೃಪ್ತಳಾಗು, ನಮಗೆ ಪುತ್ರಸಂಪತ್ತನ್ನು ಕೊಡು.

## English Translation.

In you, Saraswathi, who are divine, all existences are collected : rejoice, goddess, amongst the Shunahotras, grant us, goddess, progeny.

॥ ವಿಶೇಷವಿಷಯುಗಳು ॥

ಈ ಋಕ್ಕಿನಲ್ಲಿ ಸರಸ್ವತಿಯು ಬಹಳವಾದ ಅನ್ನವುಳ್ಳವಳೆಂದೂ, ಆದುದರಿಂದ ಗೃತ್ಸಮದಋಷಿಯೂ ಮತ್ತು ಅವನ ವಂಶಸ್ಥರೂ ಅರ್ಪಿಸುವ ಸೋಮಪಾನದಿಂದ ತೃಪ್ತಳಾಗಿ ಅವರಿಗೆ ಅನ್ನವನ್ನೂ ಪುತ್ರಪೌತ್ರಾದಿ ಸಂಪತ್ತಿಯನ್ನು ಅನುಗ್ರಹಿಸಬೇಕೆಂದೂ ಪ್ರಾರ್ಥಿಸಲಾಗಿದೆ-

**ಆಯೂಂಷಿ**—ಆಯುಃ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ (ನಿ. ೩-೯) ಅನ್ನವೆಂದೂ ಆಯುಸ್ಸೆಂದೂ ಎರಡುವಿಧವಾದ ಅರ್ಥಗಳನ್ನು ಹೇಳಬಹುದು.

**ಶುನಹೋತ್ರೇಷು**—ಗೃತ್ಸಮದಋಷಿ ಮತ್ತು ಇವನ ವಂಶಸ್ಥರು ಎಂದರೆ ಪುತ್ರಪೌತ್ರಾದಿಗಳು ಮತ್ತು ಇತರ ಸಂಬಂಧಿಗಳು, ಅನುಯಾಯಿಗಳು ಇತ್ಯಾದಿ. ಈ ಶಬ್ದದ ವಿವರಣೆಯನ್ನು ನಾವು ಈ ಸೂಕ್ತದ ೧೪ ನೆಯ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಿದೇವೆ.

॥ ಸಂಹಿತಾಪಾಠಃ ॥

ಇಮಾ ಬ್ರಹ್ಮ ಸರಸ್ವತಿ ಜುಷಸ್ವ ವಾಜಿನೀವತಿ ।
ಯಾ ತೇ ಮನ್ಮ ಗೃತ್ಸಮದಾ ಋತಾವರಿ ಪ್ರಿಯಾ ದೇವೇಷು ಜುಹ್ವತಿ ॥

॥ ಪದಪಾಠಃ ॥

ಇಮಾ । ಬ್ರಹ್ಮ । ಸರಸ್ವತಿ । ಜುಷಸ್ವ । ವಾಜಿನೀಽವತಿ ।
ಯಾ । ತೇ । ಮನ್ಮ । ಗೃತ್ಸಽಮದಾಃ । ಋತಽವರಿ । ಪ್ರಿಯಾ । ದೇವೇಷು । ಜುಹ್ವತಿ ॥ ೧೮ ॥

॥ ಸಾಯಣಭಾಷ್ಯಂ ॥

ವಾಜಿನೀವತ್ಯನ್ನವತಿ ಋತಾವರ್ಯುದಕವತಿ ಹೇ ಸರಸ್ವತಿ ಇಮೇಮಾನಿ ಬ್ರಹ್ಮ ಬ್ರಹ್ಮಾಣಿ ಹವೀಂಷಿ ಜುಷಸ್ವ । ಸ್ವೀಕುರು । ಯಾ ಯಾನಿ ಮನ್ಮ ಮನನೀಯಾನಿ ದೇವೇಷು ಪ್ರಿಯಾ ದೇವಾನಾಂ ಮಧ್ಯೇ ತುಭ್ಯಂ ಪ್ರಿಯಾಣಿ ದೇವೇಷು ಪ್ರಿಯಾಣಿ ವಾ ತೇ ತ್ವದರ್ಥಂ ಗೃತ್ಸಮದಾ ಜುಹ್ವತಿ ॥

॥ ಪ್ರತಿಪದಾರ್ಥ ॥

**ವಾಜಿನೀವತಿ**—ಅನ್ನಯುಕ್ತಳೂ । **ಋತಾವರಿ**—ಉದಕಯುಕ್ತಳೂ ಆದ । **ಸರಸ್ವತಿ**—ಎಲೈ ಸರಸ್ವತಿಯೇ । **ಯಾ**—ಯಾವ ಹವಿಸ್ಸುಗಳು । **ಮನ್ಮ**—ಚಿತ್ತಾಕರ್ಷಕವಾಗಿದ್ದು । **ದೇವೇಷು**—ದೇವತೆಗಳಿಗೆ । **ಪ್ರಿಯಾ**—ಪ್ರೀತಿಪಾತ್ರವಾಗಿದೆಯೋ (ಆದುದರಿಂದಲೇ) । **ತೇ**—ನಿನ್ನನ್ನು ಉದ್ದೇಶಿಸಿ । **ಗೃತ್ಸಮದಾಃ**—ಗೃತ್ಸಮದರಾದ ನಾವು । **ಜುಹ್ವತಿ**—ಅರ್ಪಿಸುತ್ತೇವೆಯೋ ಅಂತಹ । **ಇಮಾ ಬ್ರಹ್ಮ**—ಈ ಹವಿಸ್ಸುಗಳನ್ನು । **ಜುಷಸ್ವ**—ಸ್ವೀಕರಿಸಿ ಸೇವಿಸು.

॥ ಭಾವಾರ್ಥ ॥

ಅನ್ನಯುಕ್ತಳೂ, ಉದಕಯುಕ್ತಳೂ ಆದ ಎಲೈ ಸರಸ್ವತಿಯೇ, ಯಾವ ಹವಿಸ್ಸುಗಳು ಚಿತ್ತಾಕರ್ಷಕವಾಗಿದ್ದು ದೇವತೆಗಳಿಗಾಗಿ ಅವರ ನಡುವೆ ಅತಿಶಯಳಾದ ನಿನಗೂ ಪ್ರೀತಿಪಾತ್ರವಾಗಿವೆಯೋ ಅವನ್ನು ಗೃತ್ಸಮದರಾದ ನಾವು ನಿನ್ನನ್ನು ಉದ್ದೇಶಿಸಿ ಅರ್ಪಿಸುತ್ತೇವೆ. ಅವನ್ನು ಸ್ವೀಕರಿಸಿ ಸೇವಿಸಿ ತೃಪ್ತಳಾಗು.

## English Translation.

Saraswati, abounding in food, abounding in water, be propitiated by these oblations, which the Gritsamadas offer as acceptable to you, and precious to the gods.

॥ ವಿಶೇಷವಿಷಯಗಳು ॥

**ವಾಜಿನೀವತಿ**—**ವಾಜಃ** ಎಂಬ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿರುವುದು (ನಿ. ೩-೯) ಆದುದರಿಂದ ವಾಜನೀವತಿ ಎಂಬ ಶಬ್ದಕ್ಕೆ ಅನ್ನವುಳ್ಳವಳು ಎಂದರ್ಥವು.

**ಬ್ರಹ್ಮ**—ಬ್ರಹ್ಮ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿರುವುದು (ನಿ. ೩-೯) ಆದುದರಿಂದ ನಾವು ಅರ್ಪಿಸುವ ಹವಿಸ್ಸುಗಳನ್ನು ಎಂದರ್ಥವು. ಇಲ್ಲಿ ಬ್ರಹ್ಮಶಬ್ದವು ಏಕವಚನದಲ್ಲಿದ್ದರೂ ಇದಕ್ಕೆ ವಿಶೇಷಣವಾದ **ಇಮಾ** ಎಂಬ ಶಬ್ದವು ಬಹುವಚನದಲ್ಲಿರುವುದರಿಂದ ಬ್ರಹ್ಮಶಬ್ದಕ್ಕೆ ಬಹುವಚನಾರ್ಥವನ್ನೇ ಹೇಳಬೇಕು. ಈ ವಿಧವಾದ ಪ್ರಯೋಗವು ಎಂದರೆ ವಚನವಿಭಕ್ತಿಗಳಲ್ಲಿ ವ್ಯತ್ಯಾಸವು ಋಗ್ವೇದದಲ್ಲಿ ವಿಶೇಷವಾಗಿ ಕಂಡುಬರುವುದು.

**ಮನ್ಮ—ಮನನೀಯಾನಿ** । ಈ ಶಬ್ದಕ್ಕೆ ಸಹ ಬ್ರಹ್ಮ ಶಬ್ದಕ್ಕೆ ಹೇಳಿರುವ ವಿಧಿನಿಯಮಗಳೇ ಅನ್ವಯಿಸುವುವು

**ಗೃತ್ಸಮದಾಃ**—ಗೃತ್ಸಮದಋಷಿ ಮತ್ತು ಅವನ ಸಂಬಂಧಿಗಳು. ಈ ಸೂಕ್ತದ ೧೪ನೆಯ ಋಕ್ಕಿನ ವಿಶೇಷವಿಷಯಗಳಲ್ಲಿ **ಶುನಹೋತ್ರೇಷು** ಎಂಬ ಶಬ್ದಕ್ಕೆ ಬರೆದಿರುವ ವಿವರಣೆಯನ್ನು ನೋಡಿ.

**ಋತಾವರಿ**—ಋತಶಬ್ದವು ಉದಕನಾಮಗಳಲ್ಲಿಯೂ (ನಿ. ೨-೨೪) ಯಜ್ಞನಾಮಗಳಲ್ಲಿಯೂ ಪಠಿತ

ವಾಗಿದೆ. ಮತ್ತು **ಋತಮಿತ್ಯುದಕನಾಮ ಪ್ರತ್ಯೃತಂ ಭವತಿ** (ನಿ. ೨–೨೫) ಎಂದೂ **ಸತ್ಯಂ ವಾ ಯಜ್ಞಂ ವಾ** (ನಿ. ೪–೧೯) ಎಂದೂ ನಿರ್ವಚನವಿದೆ. ಪ್ರಕೃತಋಕ್ಕಿನಲ್ಲಿ ಋತಶಬ್ದಕ್ಕೆ ಉದಕವೆಂದು ಅರ್ಥಮಾಡಿ ಸರಸ್ವತೀ ನದಿಯು ಬಹೂದಕವುಳ್ಳವಳು ಎಂದು ಭಾಷ್ಯಕಾರರು ವಿವರಿಸಿದ್ದಾರೆ.



॥ ಸಂಹಿತಾಪಾಠಃ ॥

ಪ್ರೇತಾಂ ಯಜ್ಞಸ್ಯ ಶಂಭುವಾ ಯುವಾಮಿದಾ ವೃಣೀಮಹೇ ।
ಅಗ್ನಿಂ ಚ ಹವ್ಯವಾಹನಂ ॥ ೧೯ ॥

॥ ಪದಪಾಠಃ ॥

ಪ್ರ । ಇತಾಂ । ಯಜ್ಞಸ್ಯ । ಶಂऽಭುವಾ । ಯುವಾಂ । ಇತ್ । ಆ । ವೃಣೀಮಹೇ ।
ಅಗ್ನಿಂ । ಚ । ಹವ್ಯಽವಾಹನಂ ॥ ೧೯ ॥

॥ ಸಾಯಣಭಾಷ್ಯಂ ॥

**ಯಜ್ಞಸ್ಯ ಯಾಗಸ್ಯ ಶಂಭುವಾ ಸುಖಸಂಪಾದಕೇ ಹವಿರ್ಧಾನೇ ಅನಸೀ ತದ್ರೂಪೇ ದ್ಯಾವಾಪೃಥಿವ್ಯೌ ವಾ ಪ್ರೇತಾಂ । ಉತ್ತರವೇದೇಃ ಪಶ್ಚಿಮಭಾಗಂ ಪ್ರತಿ ಪ್ರಗಚ್ಛೇತಾಂ । ಅಥ ಪ್ರತ್ಯಕ್ಷಕೃತಃ । ಯುವಾಮಿತ್ ಯುವಾಮೇವಾವೃಣೀಮಹೇ । ಪ್ರಾರ್ಥಯಾಮಹೇ । ಹವ್ಯವಾಹನಮಗ್ನಿಂ ಚಾವೃಣೀಮಹೇ । ಅಗ್ನಿರತ್ರ ನಿಪಾತಭಾಗಿತಿ ॥**

॥ ಪ್ರತಿಪದಾರ್ಥ ॥

**ಯಜ್ಞಸ್ಯ**—ಯಜ್ಞಕ್ಕೆ । **ಶಂಭುವಾ**—ಕ್ಷೇಮವನ್ನುಂಟುಮಾಡುವ ದ್ಯಾವಾಪೃಥಿವಿಗಳು । **ಪ್ರೇತಾಂ**—(ಉತ್ತರವೇದಿಯ ಪಶ್ಚಿಮಭಾಗಕ್ಕೆ) ಹೋಗಿ ಸೇರಲಿ (ಎಲೈ ದ್ಯಾವಾಪೃಥಿವಿಗಳೇ) । **ಯುವಾಂ ಇತ್**—ನಿಮ್ಮನ್ನೇ । **ಆ ವೃಣೀಮಹೇ**—ಪ್ರಾರ್ಥಿಸುತ್ತೇವೆ. **ಹವ್ಯವಾಹನಂ**—(ದೇವತೆಗಳಿಗೆ) ಹವಿಸ್ಸನ್ನು ವಹಿಸುವ । **ಅಗ್ನಿಂ ಚ**—ಅಗ್ನಿಯನ್ನೂ ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಯಜ್ಞಕ್ಕೆ ಕ್ಷೇಮವನ್ನುಂಟುಮಾಡುವ ದ್ಯಾವಾಪೃಥಿವಿಗಳು ಉತ್ತರವೇದಿಯ ಪಶ್ಚಿಮಭಾಗಕ್ಕೆ ಹೋಗಿಸೇರಲಿ. ಎಲೈ ದ್ಯಾವಪೃಥಿವಿಗಳೇ, ನಾವು ನಿಮ್ಮನ್ನೂ, ದೇವತೆಗಳಿಗೆ ಹವ್ಯವಾಹಕನಾದ ಅಗ್ನಿಯನ್ನೂ ಪ್ರಾರ್ಥಿಸುತ್ತೇವೆ.

## English Translation.

May the two, (Heaven and Earth), who confer good fortune upon the sacrifice, proceed (to the altar); for, verily, we implore you both (to come), as well as Agni, the bearer of oblations.

॥ ವಿಶೇಷವಿಷಯಗಳು ॥

ಈ ಋಕ್ಕೂ ಮುಂದಿನ ಎರಡು ಋಕ್ಕುಗಳೂ ಹವಿರ್ಧಾನೇ ಎಂಬ ಸೋಮಲತೆಗಳನ್ನು ತರುವ ಎರಡು ಗಾಡಿಗಳನ್ನು ಅಥವಾ ಅವುಗಳ ಅಭಿಮಾನಿದೇವತೆಗಳಾದ ದ್ಯಾವಾಪೃಥಿವಿಗಳನ್ನು ಸ್ತುತಿಸುವುದಾಗಿವೆ. ೧೯ ಮತ್ತು ೨೧ ನೆಯ ಋಕ್ಕುಗಳಲ್ಲಿ ದ್ಯಾವಾಪೃಥಿವಿಶಬ್ದವು ಇಲ್ಲದಿದ್ದರೂ ೨೦ ನೆಯ ಋಕ್ಕಿನಲ್ಲಿ ದ್ಯಾವಾಪೃಥಿವಿಗಳನ್ನು ಸ್ಪಷ್ಟವಾಗಿ ಸಂಬೋಧಿಸಲಾಗಿದೆ.

**ಹವಿರ್ಧಾನೇ** ಎಂಬ ಶಬ್ದದ ವಿಷಯದಲ್ಲಿ ಯಾಸ್ಕರು—**ಹವಿರ್ಧಾನೇ । ಹವಿಷಾಂ ನಿಧಾನೇ** ಎಂದೂ, ದುರ್ಗಾಚಾರ್ಯರು— **ಹವಿಷಾಂ ನಿಧಾನೇ ಸೋಮಾಸ್ತಯೋರ್ನಿಧೀಯಂತೇ** ಎಂದೂ ವಿವರಿಸಿದ್ದಾರೆ. (ನಿ. ೯-೩೬) ಎಂದರೆ ಯಜ್ಞದಲ್ಲಿ ಸೋಮಕ್ರಯಣಾನಂತರ ಸೋಮಲತೆಗಳನ್ನು ಯಜ್ಞಭೂಮಿಗೆ ಎಂದರೆ ಪ್ರಾಚೀನ ವಂಶವೆಂದು ಹೇಳಲ್ಪಡುವ ಯಜ್ಞವೇದಿಕೆಗೆ ತರುವ ಎರಡು ಗಾಡಿಗಳು. ಇವುಗಳಲ್ಲಿ ಹವಿಸ್ಸನ್ನು ಅಥವಾ ಸೋಮಲತೆಗಳನ್ನು ಇಡುವುದರಿಂದ ಇವಕ್ಕೆ ಹವಿರ್ಧಾನವೆಂದು ಹೆಸರು ಎಂದರ್ಥವು.

ಈ ಗಾಡಿಗಳನ್ನು ಪ್ರಾಚೀನವಂಶದ ಯಜ್ಞವೇದಿಯ ಸಮೀಪಕ್ಕೆ ತಂದು ಪಶ್ಚಿಮದಿಕ್ಕಿನಲ್ಲಿ ಬಿಡುವರು. ಇವುಗಳನ್ನು ಯಜ್ಞಭೂಮಿಯ ಉತ್ತರವೇದಿಗೆ ತೆಗೆದುಕೊಂಡು ಹೋಗುವ ಕರ್ಮವು ಹವಿರ್ಧಾನಪ್ರವಾಹಣ ಅಥವಾ ಹವಿರ್ಧಾನಪ್ರವರ್ತನ ಎಂದು ಹೇಳಲ್ಪಡುವುದು. ಈ ಕರ್ಮಕಾಲದಲ್ಲಿ ಹವಿರ್ಧಾನವನ್ನು ಅಥವಾ ತದಭಿಮಾನಿ ದೇವತೆಗಳಾದ ದ್ಯಾವಾಪೃಥಿವಿಗಳನ್ನು ಈ ಮೂರು ಋಕ್ಕುಗಳಿಂದ (ಈ ಸೂಕ್ತದ ೧೯, ೨೦, ೨೧ ನೇ ಋಕ್ಕುಗಳು) ಸ್ತುತಿಸುವರು. ಅದನ್ನೇ ಇಲ್ಲಿ ಹೇಳಿದೆ. ಈ ಹವಿರ್ಧಾನಪ್ರವಾಹಣವೆಂಬ ಕರ್ಮವು ಐತರೇಯಬ್ರಾಹ್ಮಣದಲ್ಲಿ ಹೇಳಿರುವುದನ್ನು ಇಲ್ಲಿ ವಿವರಿಸಿದೇವೆ.

**॥ ಸೋಮಪ್ರವಾಹಕರ್ಮದ ಪೂರ್ವಪೀಠಿಕೆ ॥**

ಪೂರ್ವದಲ್ಲಿ ಸೋಮವು ಸ್ವರ್ಗದಲ್ಲಿದ್ದಿತು. ಅದನ್ನು ತರಲು ಯಾರಿಂದಲೂ ಸಾಧ್ಯವಾಗದೆ ಇರುವಾಗ ಗಾಯತ್ರಿಯು ಶ್ಯೇನಪಕ್ಷಿಯ ರೂಪದಿಂದ ಸ್ವರ್ಗಕ್ಕೆ ಹೋಗಿ ಅಲ್ಲಿದ್ದವರ ಪ್ರತಿಭಟನೆಯನ್ನು ತಿರಸ್ಕರಿಸಿ ಅದನ್ನು ಭೂಮಿಗೆ ತಂದಿತು. ಅದನ್ನು ತರುತ್ತಿರುವಾಗ ದಾರಿಯಲ್ಲಿ ವಿಶ್ವಾವಸುವೆಂಬ ಗಂಧರ್ವನು ಆ ಸೋಮವನ್ನು ಅಪಹರಿಸಿ ತನ್ನಲ್ಲಿಟ್ಟಿದ್ದನು. ಅದನ್ನು ಅವನಿಂದ ತರುವ ಬಗೆ ಹೇಗೆಂದು ದೇವತೆಗಳು ಯೋಚಿಸಿ, ಗಂಧರ್ವರು ಸ್ತ್ರೀಯರಲ್ಲಿ ಹೆಚ್ಚಾಗಿ ಆಸಕ್ತರಾಗಿ ಕಾಮಾಭಿಲಾಷೆಯುಳ್ಳವರಾದುದರಿಂದ ಅವರಿಗೆ ಸ್ತ್ರೀಯರ ಆಸೆಯನ್ನು ತೋರಿಸಿ ಸೋಮವನ್ನು ಹಿಂದಕ್ಕೆ ಪಡೆಯಬೇಕೆಂದು ನಿಶ್ಚಯಿಸಿದರು. ಅದಕ್ಕಾಗಿ ವಾಗ್ದೇವತೆಯ ಸಮೀಪಕ್ಕೆ ಹೋಗಿ ವಿಷಯವನ್ನೆಲ್ಲಾ ತಿಳಿಸಿ, ವಾಗ್ದೇವತೆಯು ಸುಂದರಸ್ತ್ರೀಯಾಗುವಂತೆಯೂ ಅವಳನ್ನು ಗಂಧರ್ವರಿಗೆ ಮಾರಿ ಅದಕ್ಕೆ ಬದಲಾಗಿ ಸೋಮವನ್ನು ತರುವಂತೆಯೂ ನಿಷ್ಕರ್ಷೆಮಾಡಿದರು. ಅದರಂತೆ ವಾಗ್ದೇವತೆಯು ಸುಂದರ ಸ್ತ್ರೀಯ ಆಕಾರವನ್ನು ಧರಿಸಲು ಅವಳನ್ನು ಗಂಧರ್ವರಿಗೆ ಕೊಟ್ಟು ಸೋಮವನ್ನು ಹಿಂದಕ್ಕೆ ತಂದರು. ಸೋಮವು ದೇವತೆಯ ವಶವಾದ ಮೇಲೆ ಸುಂದರ ಸ್ತ್ರೀಯ ಆಕಾರದಲ್ಲಿದ್ದ ವಾಗ್ದೇವತೆಯು ಜಿಂಕೆಯ ರೂಪವನ್ನು ಧರಿಸಿ ಗಂಧರ್ವರಿಂದ

ತಪ್ಪಿಸಿಕೊಂಡು ಓಡಿಬಂದು ದೇವತೆಗಳಲ್ಲಿಗೆ ಬಂದು ಸೇರಿತು. ಆದುದರಿಂದ ಆಲಾಗಾಯಿತು ಯಜ್ಞಗಳಲ್ಲಿ ಉಪಯೋಗಿಸುವುದಕ್ಕಾಗಿ ಸೋಮಲತೆಗಳನ್ನು ಕೊಂಡುತರುವುದು ರೂಢಿಗೆ ಬಂದಿತು. ಸೋಮಕ್ರಯಣವೆಂಬ ಕರ್ಮವು ಯಜ್ಞದಲ್ಲಿ ಈಗಲೂ ನಡೆಯುವುದು. ಇದಲ್ಲದೆ ಉತ್ತಮವಾದ ಸೋಮಲತೆಗಳು ಎತ್ತರವಾದ ಪರ್ವತ ಪ್ರದೇಶಗಳಲ್ಲಿ ಬೆಳೆಯುವುದರಿಂದ (ಮೂಜವತವೆಂಬ ಪರ್ವತವು ಸೋಮಲತೆಗೆ ಪ್ರಸಿದ್ಧವಾಗಿರುವುದು) ಅವನ್ನು ತರ ಬೇಕಾದರೆ ಬಹಳ ಶ್ರಮವಾಗಿರುವುದು. ಆದುದರಿಂದ ದ್ರವ್ಯದ ಆಶೆಗಾಗಿ ಶ್ರಮವನ್ನು ಸಹಿಸಿ ಪರ್ವತಗಳಿಗೆ ಹೋಗಿ ಸೋಮವನ್ನು ತಂದವರಿಂದ ಅದಕ್ಕೆ ತಕ್ಕ ಬೆಲೆಯನ್ನು ಕೊಟ್ಟು ಕೊಂಡುಕೊಳ್ಳುವುದು ರೂಢಿಗೆ ಬಂದಂತೆ ತೋರುತ್ತದೆ. ಹಿಂದೆ ಸೋಮವನ್ನು ಗಂಧರ್ವನು ಅಪಹರಿಸಿದಾಗ ಅದು ಅವನಲ್ಲಿ ಮೂರು ರಾತ್ರಿಗಳವರೆಗೆ ಇದ್ದುದರಿಂದ ಕ್ರಯಕ್ಕೆ ತೆಗೆದುಕೊಂಡ ಸೋಮವೂ ಮೂರು ರಾತ್ರಿಗಳ ವರೆಗೆ ಇರಬೇಕೆಂಬ ನಿಯಮವಿದೆ. (ಈ ವಿಷಯವೆಲ್ಲವೂ ಐತರೇಯ ಬ್ರಾಹ್ಮಣ ಮತ್ತು ತೈತ್ತರೀಯ ಸಂಹಿತೆಯಲ್ಲಿ ಉಕ್ತವಾಗಿದೆ) ಸೋಮಕ್ರಯಣಾನಂತರ ಅದನ್ನು ಹವಿರ್ಧಾನವೆಂಬ ಎರಡು ಗಾಡಿಗಳಲ್ಲಿ ತಂದು ಯಜ್ಞಶಾಲೆ ಅಥವಾ ಪ್ರಾಚೀನವಂಶದ ಸಮೀಪದಲ್ಲಿ ಬಿಟ್ಟಿರುವರು. ಆ ಸೋಮವನ್ನು ಮಂತ್ರಪೂರ್ವಕವಾಗಿ ಉತ್ತರವೇದಿಯ ಬಳಿಗೆ ತರುವ ಕರ್ಮಾಂಗವೇ ಸೋಮಪ್ರವಾಹಣವೆಂದು ಹೇಳಲ್ಪಟ್ಟಿರು ವುದರಿಂದ ಆಕ್ರಮವು ಐತರೇಯ ಬ್ರಾಹ್ಮಣದಲ್ಲಿರುವಂತೆ (ಐ. ಬ್ರಾ. ೩-೧೨) ಹೇಳಲ್ಪಡುವುದು.

**ಪ್ರಾಚ್ಯಾಂ ವೈ ದಿಶಿ ದೇವಾಃ ಸೋಮಂ ರಾಜಾನಮಕ್ರೀಣಂಸ್ತಸ್ಮಾತ್ಪ್ರಾಚ್ಯಾಂ ದಿಶಿ ಕ್ರೀಯತೇ ।**

ಪೂರ್ವದಲ್ಲಿ ದೇವತೆಗಳು ಯಜ್ಞಮಾಡಿದಾಗ ಸೋಮವನ್ನು ಪ್ರಾಚೀನವಂಶದ (ಯಜ್ಞವೇದಿಯ) ಪೂರ್ವ ದಿಕ್ಕಿನಲ್ಲಿರುವ ಪ್ರದೇಶದಿಂದ ಕೊಂಡುತಂದರು. ಆದುದರಿಂದ ಈಗಲೂ ಸೋಮವನ್ನು ಪೂರ್ವದಿಕ್ಕಿನಿಂದಲೇ ಕೊಂಡು ತರಬೇಕು.

**ತಂ ತ್ರಯೋದಶಾನ್ಮಾಸಾದಕ್ರೀಣಂಸ್ತಸ್ಮಾತ್ತ್ರಯೋದಶೋ ಮಾಸೋ ನಾನುವಿದ್ಯತೇ ನ ವೈ ಸೋಮವಿಕ್ರಯ್ಯನುವಿದ್ಯತೇ ಪಾಪೋ ಹಿ ಸೋಮವಿಕ್ರಯೀ ।**

ಪೂರ್ವದಲ್ಲಿ ಒಂದು ಸಂವತ್ಸರಕ್ಕೆ ಹದಿಮೂರು ತಿಂಗಳುಗಳಿದ್ದುವು. ದೇವತೆಗಳು ಸೋಮವನ್ನು ಹದಿಮೂರನೇ ಮಾಸಾಭಿಮಾನಿಯಿಂದ ಕೊಂಡುಕೊಂಡರು. ಈಗ ಸಂವತ್ಸರದಲ್ಲಿ ಹದಿಮೂರನೇ ಮಾಸವಿಲ್ಲ. ಹನ್ನೆರಡೇ ಮಾಸ ಗಳಿರುವುವು. ಕೆಲವು ಸಂದರ್ಭದಲ್ಲಿ ಅಧಿಕಮಾಸವೆಂಬ ಹದಿಮೂರನೇ ಮಾಸವಿದ್ದರೂ ಅದು ಯಾವ ಶುಭಕರ್ಮಾದಿ ಗಳಿಗೂ ಉಪಯೋಗವಿಲ್ಲದ್ದರಿಂದ ಅದರಲ್ಲಿ ಕೊಳ್ಳುವ ರೂಢಿ ಇಲ್ಲ. ಸೋಮವಿಕ್ರಯಮಾಡುವುದು ಬಹಳ ಪಾಪ ಕಾರ್ಯವೆಂದು ಪರಿಗಣಿಸಲ್ಪಟ್ಟಿರುವುದರಿಂದ ಸೋಮವಿಕ್ರಯ ಮಾಡುವ ಪುರುಷನೂ ಪಾಪಿಷ್ಠನು. ಅವನೊಡನೆ ಯಾವ ಶಿಷ್ಟಾಚಾರ ವ್ಯವಹಾರಗಳೂ ನಡೆಯಲವಕಾಶವಿಲ್ಲ. ಈ ವಿಷಯದಲ್ಲಿ ತೈತ್ತಿರೀಯ ಶ್ರುತಿಯು—**ಅಸ್ಮೇ ಜ್ಯೋತಿಃ ಸೋಮವಿಕ್ರಯಿಣಿ ತಮ ಇತ್ಯಾಹ । ಜ್ಯೋತಿರೇವ ಯಜಮಾನೇ ದಧಾತಿ । ತಮಃ ಸೋಮ-ವಿಕ್ರಯಿಣಮರ್ಪಯತಿ ।** ಇಲ್ಲಿ **ತಮಃ** ಎಂದರೆ ಪಾಪವು. ಸೋಮವಿಕ್ರಯಮಾಡುವವನ **ಜ್ಯೋತಿಃ** ಎಂದರೆ ಶಕ್ತಿಸಾಮರ್ಥ್ಯವು ಅವನನ್ನು ಬಿಟ್ಟುಹೋಗಿ ಸೋಮವನ್ನು ಕೊಂಡು ಯಜ್ಞಮಾಡುವ ಯಜಮಾನನಲ್ಲಿ ಸೇರುವುದು. ಸೋಮವಿಕ್ರಯಮಾಡುವವನಿಗೆ ಪಾಪವೇ ಸಂಭವಿಸುವುದು ಎಂದು ಶ್ರುತಿವಾಕ್ಯದ ಅರ್ಥವು ಸೋಮಕ್ರಯಾನಂತರ ಅದನ್ನು ಪ್ರಾಚೀನವಂಶದ ಸಮೀಪಕ್ಕೆ ತರುವಾಗ ಎಂಟು ಋಕ್ಕುಗಳನ್ನು ಪಠಿಸಬೇಕೆಂಬ ವಿಧಿ ಇರುವುದು. ಏಕೆಂದರೆ ಇದಕ್ಕೆ ಕಾರಣವೂ ಇರುವುದು. ಅದನ್ನು ಇಲ್ಲಿ ಹೇಳಲಾಗಿದೆ—

**ತಸ್ಯ ಕ್ರೀತಸ್ಯ ಮನುಷ್ಯಾನಭ್ಯುಪಾವರ್ತಮಾನಸ್ಯ ದಿಶೋ ವೀರ್ಯಾಣೀಂದ್ರಿಯಾಣಿ ವ್ಯುದಸೀದಂಸ್ತಾನ್ಯೇಕಯರ್ಚಾವಾರುರುತ್ಸಂತ ತಾನಿ ನಾಶಕ್ನುವಂಸ್ತಾನಿ ದ್ವಾಭ್ಯಾಂ ತಾನಿ ತಿಸೃಭಿಸ್ತಾನಿ ಚತಸೃಭಿಸ್ತಾನಿ ಪಂಚಭಿಸ್ತಾನಿ ಷಡ್ಭಿಸ್ತಾನಿ ಸಪ್ತಭಿರ್ನೈವಾವರುಂಧತ ತಾನ್ಯಷ್ಟಾಭಿರವಾರುಂಧತಾಷ್ಟಾಭಿರಾಶ್ನುವತ ಯದಷ್ಟಾಭಿರವಾರುಂಧತಾಷ್ಟಾಭಿರಾಶ್ನುವತ ತದಷ್ಟಾನಾಮಷ್ಟತ್ವಮಶ್ನುತೇ ಯದ್ಯತ್ಕಾಮಯತೇ ಯ ಏವಂ ವೇದ |**

ಸೋಮವನ್ನು ಕೊಂಡುತಂದ ಮೇಲೆ ಅದು ಮನುಷ್ಯರ (ಯಜಮಾನರ) ಸಮೀಪಕ್ಕೆ ಬಂದಾಗ ಅದರ ಶಕ್ತಿಸಾಮರ್ಥ್ಯಗಳು ಕುಗ್ಗಿಹೋದವು. ಎಂದರೆ ಸೋಮಕ್ಕೆ ಇರಬೇಕಾದ (ಸೋಮಪಾನಮಾಡಿದವರಿಗೆ ದೊರೆಯಬಹುದಾದ) ಬಲಪ್ರದಾನ ಚಕ್ಷುರಾದೀಂದ್ರಿಯಗಳಿಗೆ ಪಟುತ್ವವನ್ನುಂಟುಮಾಡುವ ಸಾಮರ್ಥ್ಯ ಇವೆಲ್ಲವೂ ನಷ್ಟವಾಯಿತು. ಆಗ ಆ ಯಜಮಾನರು ಆ ಶಕ್ತಿಸಾಮರ್ಥ್ಯಗಳು ಹೋಗದಂತೆ ತಡೆಗಟ್ಟಬೇಕೆಂದು ದಿಗ್ಬಂಧನಮಾಡುವುದಕ್ಕಾಗಿ ಒಂದು ಋಕ್ಕನ್ನು ಪಠಿಸಿ ಪ್ರಯತ್ನಮಾಡಿ ನೋಡಿದರು. ಸಾಧ್ಯವಾಗಲಿಲ್ಲ. ಅನಂತರ, ಎರಡು ಋಕ್ಕುಗಳನ್ನೂ, ಬಳಿಕ, ಮೂರು, ನಾಲ್ಕು, ಐದು, ಆರು, ಏಳರವರೆಗೆ ಋಕ್ಕುಗಳನ್ನು ಪಠಿಸಿನೋಡಿದರೂ ಸಾಧ್ಯವಾಗಲಿಲ್ಲ. ಅನಂತರ ಎಂಟು ಋಕ್ಕುಗಳನ್ನು ಪಠಿಸಲು, ಬಂಧಿಸಲು, ಸಾಧ್ಯವಾಯಿತು. ಆದುದರಿಂದ ಎಂಟು ಋಕ್ಕುಗಳನ್ನು ಪಠಿಸಿ ಕಾರ್ಯವನ್ನು ಸಾಧಿಸಿದುದರಿಂದ ಅಷ್ಟ ಎಂಬ ಶಬ್ದಪ್ರಯೋಗವು (ಅಶ್ ಪ್ರಾಪ್ತೌ) ಇಲ್ಲಿ ಸಮನ್ವಯವಾಗಿರುವುದು. ಈ ವಿಷಯವನ್ನು ತಿಳಿದ ಪುರುಷನು ತನ್ನ ಇಷ್ಟಾರ್ಥವನ್ನು ಪಡೆಯುವನು.

**ತಸ್ಮಾದೇತೇಷು ಕರ್ಮಸ್ವಷ್ಟಾವನೂಚ್ಯಂತ ಇಂದ್ರಿಯಾಣಾಂ ವೀರ್ಯಾಣಾಮವರುದ್ಧ್ಯೈ**

(ಐ. ಬ್ರಾ. ೩-೧೨)

ಆದುದರಿಂದ ಈ ಸೋಮಪ್ರವಾಹಣಕರ್ಮಗಳಲ್ಲಿ ಹೋತೃವು ಎಂಟು ಋಕ್ಕುಗಳನ್ನು ಪ್ರತ್ಯೇಕವಾಗಿ ಪಠಿಸಬೇಕು. ಹೀಗೆ ಪಠಿಸುವುದರಿಂದ ಇಂದ್ರಿಯ ಮತ್ತು ವೀರ್ಯಗಳು (ಶಕ್ತಿಸಾಮರ್ಥ್ಯಗಳು) ನಾಶವಾಗದಂತೆ ತಡೆಗಟ್ಟಲು ಸಾಧ್ಯವಾಗುವುದು.

ಇಲ್ಲಿಗೆ ಪೂರ್ವಪೀಠಿಕೆಯು ಸಮಾಪ್ತವು.

# ಸೋಮಪ್ರವಾಹಣವೆಂಬ ಕರ್ಮ

## (ಸೋಮವನ್ನು ಪ್ರಾಚೀನವಂಶ ಅಥವಾ ಯಜ್ಞವೇದಿಕೆಯ ಸಮೀಪದಿಂದ ಪಶ್ಚಿಮದಿಕ್ಕಿನಲ್ಲಿರುವ ಉತ್ತರವೇದಿಯ ಸಮೀಪಕ್ಕೆ ತರುವ ಕರ್ಮ)

ಇದುವರೆಗೂ ಈ ಸೋಮಪ್ರವಾಹಣ ಕರ್ಮದಲ್ಲಿ ಉಪಯೋಗಿಸಬೇಕಾದ ಋಕ್ಕುಗಳ ಸಂಖ್ಯೆಯನ್ನು ಸ್ಪಷ್ಟಪಡಿಸಲಾಯಿತು. ಈಗ ಅಧ್ವರ್ಯುವು ಹೋತೃವನ್ನುದ್ದೇಶಿಸಿ ಪ್ರೈಷಮಂತ್ರವನ್ನು ಪಠಿಸುವನು.

**ಸೋಮಾಯ ಕ್ರೀತಾಯ ಪ್ರೋಹ್ಯಮಾಣಾಯಾನುಬ್ರೂ ೩ ಹೀತ್ಯಾಹಾಧ್ವರ್ಯುಃ |**

ಈಗ ಅಧ್ವರ್ಯುವು ಹೋತೃವನ್ನುದ್ದೇಶಿಸಿ ಎಲೈ ಹೋತೃವೇ, ಸೋಮಾಯ ಕ್ರೀತಾಯ ಪ್ರೋಹ್ಯಮಾಣಾಯಾನು-ಬ್ರೂ ೩ ಹಿ—ಎಂದರೆ ಕ್ರಯಕ್ಕೆ ತೆಗೆದುಕೊಂಡು ಬಂದ ಸೋಮವನ್ನು ಉತ್ತರವೇದಿಯ ಬಳಿಗೆ ತೆಗೆದುಕೊಂಡು

ಹೋಗುವುದಕ್ಕಾಗಿ ನೆರವೇರಿಸುವ ಸೋಮಪ್ರವಾಹಣವೆಂಬ ಈ ಕರ್ಮದಲ್ಲಿ ಅವಶ್ಯಕವಾದ ಮಂತ್ರವನ್ನು ಪಠಿಸು ಎಂದು ನಿರ್ದೇಶಿಸಿ ಹೇಳುವನು.

**ಭದ್ರಾದಭಿ ಶ್ರೇಯಃ ಪ್ರೇಹೀತ್ಯನ್ವಾಹ ।**

ಇದನ್ನು ಕೇಳಿ ಹೋತೃವು **ಭದ್ರಾದಭಿ ಶ್ರೇಯಃ ಪ್ರೇಹಿ** ಎಂಬ ಮಂತ್ರವನ್ನು ಪಠಿಸುವನು. ಈ ಮಂತ್ರವು ಋಗ್ವೇದಸಂಹಿತೆಯಲ್ಲಿಲ್ಲ. ತೈತ್ತರೀಯಶಾಖೆಯಲ್ಲಿ ಎಂದರೆ ಯಜುರ್ವೇದದಲ್ಲಿ ಹೇಳಿರುವುದು. ಆ ಮಂತ್ರವು—

**ಭದ್ರಾದಭಿ ಶ್ರೇಯಃ ಪ್ರೇಹಿ ಬೃಹಸ್ಪತಿಃ ಪುರ ಏತಾ ತೇ ಅಸ್ತು ।**
**ಅಥೇಮವಸ್ಯ ವರ ಆ ಪೃಥಿವ್ಯಾ ಆರೇ ಶತ್ರೂನ್ ಕೃಣುಹಿ ಸರ್ವವೀರಃ ॥**

(ತೈ. ಸಂ. ೧-೨-೩-೩)

ಎಂದು ಇರುವುದು ಇದರ ಅರ್ಥವು ಈ ರೀತಿ ಇರುವುದು—ಎಲೈ ಸೋಮವೇ, ಮಂಗಳಕರವಾದುದೂ, ಕ್ರಯ ದೇಶವಾದುದೂ ಆದ ಈ ಭೂಲೋಕದಿಂದ ಸ್ವರ್ಗಸ್ಥಾನಕ್ಕೆ ಸಮವಾದ ಪ್ರಾಚೀನವಂಶದೇಶಾಭಿಮುಖನಾಗಿ ಹೊರಡು. ಆ ರೀತಿ ಹೋಗುವ ನಿನಗೆ ಬೃಹಸ್ಪತಿಯು ಮಾರ್ಗದರ್ಶಕನಾಗಿ ನಿನ್ನ ಮುಂದೆ ಹೋಗುವನು. ಅಲ್ಲಿಗೆ ಹೋದ ಬಳಿಕ ಪೃಥಿವೀ ಸಂಬಂಧವಾದ ದೇವಯಜನಪ್ರದೇಶದಲ್ಲಿ ನೀನು ಕುಳಿತುಕೊಳ್ಳುವುದಕ್ಕೆ ಯೋಗ್ಯವಾದ ಮತ್ತು ಶ್ರೇಷ್ಠವಾದ ಸ್ಥಾನವನ್ನು ನಿಷ್ಕರ್ಷಿಸು. ಅನಂತರ ಸರ್ವರಿಗಿಂತಲೂ ಶೂರನಾದ ನೀನು ಪಾಪಿಷ್ಠರಾದ ಮತ್ತು ಯಜ್ಞವಿದ್ವೇಷಿಗಳಾದ ಸಮಸ್ತ ಶತ್ರುಗಳನ್ನೂ ದೂರವಾಗಿಡುವಂತೆ ಮಾಡು. ಎಂದರೆ ಅವರನ್ನು ದೂರವಾಗಿ ಹೊರಟು ಹೋಗುವಂತೆ ಮಾಡು, ಎಂದು ಈ ಮಂತ್ರದ ಅರ್ಥವು. ಈ ಮಂತ್ರವನ್ನು ಪಠಿಸುವುದರಿಂದ ಉಂಟಾಗುವ ಪರಿಣಾಮವನ್ನು ವಿವರಿಸುತ್ತಾ ಪ್ರಥಮ ಪಾದದ ವಿವರಣೆಯನ್ನು ಮಾಡಲಾಗಿದೆ.

**ಅಯಂ ವಾವ ಲೋಕೋ ಭದ್ರಸ್ತಸ್ಮಾದಸಾವೇವ ಲೋಕಃ ಶ್ರೇಯಾನ್ ಸ್ವರ್ಗಮೇವ ತಲ್ಲೋಕಂ ಯಜಮಾನಂ ಗಮಯತಿ ।**

ಪ್ರಥಮ ಪಾದದಲ್ಲಿ ಹೇಳಿರುವಂತೆ ಈ ಭೂಲೋಕವು ಮಂಗಳಕರವಾದುದು. ಆದರೆ ಈ ಲೋಕಕ್ಕಿಂತಲೂ ಸ್ವರ್ಗಲೋಕವು ಅತ್ಯಂತ ಶ್ರೇಯಃಪ್ರದವಾದುದು. ಈ ಮಂತ್ರಪಠನವು ಯಜ್ಞಮಾಡುವ ಯಜಮಾನನಿಗೆ ಅಂತಹ ಸ್ವರ್ಗಲೋಕವನ್ನು ಒದಗಿಸಿಕೊಡುವುದು.

**ಬೃಹಸ್ಪತಿಃ ಪುರ ಏತಾ ತೇ ಅಸ್ತ್ವಿತಿ ಬ್ರಹ್ಮ ವೈ ಬೃಹಸ್ಪತಿರ್ಬ್ರಹ್ಮೈವಾಸ್ಮಾ ಏತತ್ಪುರೋಗವಮ-ಕರ್ನ ವೈ ಬ್ರಹ್ಮಣ್ವದ್ರಿಷ್ಯತಿ ॥**

ಅನಂತರ ಹೋತೃವು **ಬೃಹಸ್ಪತಿಃ ಪುರಾ ಏತಾ ತೇ ಅಸ್ತು** ಎಂಬ ಎರಡನೆಯ ಪಾದವನ್ನು ಪಠಿಸುವನು. ದೇವತೆಗಳಿಗೆ ಬೃಹಸ್ಪತಿಯೇ ಬ್ರಹ್ಮನೆಂಬ ಋತ್ವಿಜನು. ಬ್ರಾಹ್ಮಣ ಶ್ರೇಷ್ಠನಾದ ಬ್ರಹ್ಮನೆಂಬ ಋತ್ವಿಜನು ಮಾರ್ಗದರ್ಶಕನಾಗಿರುವನು. ಎಂದು ಹೇಳಿರುವುದರಿಂದ ಬ್ರಾಹ್ಮಣ ನೇತೃತ್ವದಲ್ಲಿ ನೆರವೇರುವ ಯಜ್ಞಕರ್ಮವು ಸರ್ವಥಾ ಕೆಡುವುದಿಲ್ಲ. ಕಲ್ಯಾಣ ಪ್ರದವಾಗಿ ಪರಿಸಮಾಪ್ತಿಯನ್ನೈದುವುದು.

**ಅಥೇಮವಸ್ಯ ವರ ಆ ಪೃಥಿವ್ಯಾ ಇತಿ ದೇವಯಜನಂ ವೈ ವರಂ ಪೃಥಿವ್ಯೈ ದೇವಯಜನ ಏವೈನಂ ತದವಸಾಯಯತ್ಯಾರೇ ಶತ್ರೂನ್ಕೃಣುಹಿ ಸರ್ವವೀರ ಇತಿ ದ್ವಿಷಂತಮೇವಾಸ್ಮೈ ತತ್ಪಾಪ್ಮಾನಂ ಭ್ರಾತೃವ್ಯಮಪಬಾಧತೇಽಧರಂ ಪಾದಯತಿ ।**

ಈಗ ಮೂರನೇ ಪಾದವನ್ನು ವಿವರಿಸುವರು—**ಅಥೇಮವಸ್ಯ ವರ ಆ ಪೃಥಿವ್ಯಾಃ** ಎಂಬುವುದು ಮೂರನೆಯ ಪಾದವು. ಪೃಥಿವಿಯಲ್ಲಿ ಶ್ರೇಷ್ಠವಾದ ಪ್ರದೇಶವೆಂದರೆ ದೇವಯಜನ ಪ್ರದೇಶವು. ಈ ಮೂರನೇ ಪಾದವನ್ನು ಪಠಿಸುವುದರಿಂದ ಸೋಮವು ಪೃಥಿವೀ ಸಂಬಂಧವಾದ ಶ್ರೇಷ್ಠಸ್ಥಾನದಲ್ಲಿ ಎಂದರೆ ದೇವಯಜನ ಪ್ರದೇಶದಲ್ಲಿ ನೆಲೆಸುವಂತೆ ಮಾಡುವನು. ಇನ್ನು ನಾಲ್ಕನೆಯ ಪಾದವಾದ **ಆರೇ ಶತ್ರೂನ್ಕೃಣುಹಿ ಸರ್ವವೀರಃ** ಎಂಬುದನ್ನು ಪಠಿಸುವುದರಿಂದ ಯಜಮಾನನನ್ನು ದ್ವೇಷಿಸುವ ಪಾಪರೂಪವಾದ ಶತ್ರುವನ್ನು ಓಡಿಸುವುದಕ್ಕೆ ಸಹಾಯವಾಗುವುದು. ಆದುದರಿಂದ ಹೋತೃವು ಈ ನಾಲ್ಕನೆಯ ಪಾದವನ್ನು ಪಠಿಸಿ ಯಜಮಾನನಿಗೆ ಕೇಡಕನ್ನುಂಟುಮಾಡುವ ಶತ್ರುವನ್ನು ಓಡಿಸಿ ಆ ಶತ್ರುವು ನಿಕೃಷ್ಟವಾದ (ಬಹಳ ಕೀಳಾದ) ಪ್ರದೇಶಕ್ಕೆ ಹೋಗುವಂತೆ ಮಾಡುವನು.

**ಸೋಮ ಯಾಸ್ತೇ ಮಯೋಭುವ ಇತಿ ತೃಚಂ ಸೌಮ್ಯಂ ಗಾಯತ್ರಮನ್ವಾಹ ಸೋಮೇ ರಾಜನಿ ಪ್ರೋಹ್ಯಮಾಣೇ ಸ್ವಯೈವೈನಂ ತದ್ದೇವತಯಾ ಸ್ವೇನ ಛಂದಸಾ ಸಮರ್ಧಯತಿ ।**

ಅನಂತರ ಹೋತೃವು—

**ಸೋಮ ಯಾಸ್ತೇ ಮಯೋಭುವ ಊತಯಃ ಸಂತಿ ದಾಶುಷೇ ।**
**ತಾಭಿರ್ನೋಽವಿತಾ ಭವ ॥**
**ಇಮಂ ಯಜ್ಞಮಿದಂ ವಚೋ ಜುಜುಷಾಣ ಉಪಾಗಹಿ ।**
**ಸೋಮ ತ್ವಂ ನೋ ವೃಧೇ ಭವ ॥**
**ಸೋಮ ಗೀರ್ಭಿಷ್ಟ್ವಾ ವಯಂ ವರ್ಧಯಾಮೋ ವಚೋವಿದಃ ।**
**ಸುಮೃಳೀಕೋ ನ ಆ ವಿ ಶ ॥**

(ಋ. ಸಂ. ೧-೯೧-೯, ೧೦, ೧೧)

ಎಂಬ ಮೂರು ಋಕ್ಕುಗಳನ್ನು ಪಠಿಸುವನು. ಈ ಮೂರು ಋಕ್ಕುಗಳೂ ಸೋಮದೇವತಾಕವು ಮತ್ತು ಗಾಯತ್ರೀ ಛಂದಸ್ಸಿನವು. ಇವುಗಳನ್ನು ಸೋಮಾನಯನಕಾಲದಲ್ಲಿ ಪಠಿಸಬೇಕು. ಸೋಮದೇವತೆಯನ್ನೇ ಸ್ತುತಿಸುವ ಮತ್ತು ಸೋಮದೇವತೆಗೆ ಪ್ರಿಯವಾಗಿರುವ ಗಾಯತ್ರೀಛಂದೋಬದ್ಧವಾದ ಋಕ್ಕುಗಳನ್ನು ಪಠಿಸುವುದರಿಂದ ಸೋಮದೇವತೆಯನ್ನು ತನ್ನ ಸ್ವಂತಮಂತ್ರಗಳಿಂದಲೂ ಸ್ವಕೀಯವಾದ ಗಾಯತ್ರೀಛಂದಸ್ಸಿನಿಂದಲೂ ಸ್ತುತಿಸಿದಂತೆ ಆಗಿ ಸೋಮದೇವತೆಯು ಸಮೃದ್ಧವಾಗುವನು ಎಂದರೆ ಸಂತೋಷಚಿತ್ತನಾಗುವನು. ಇಲ್ಲಿ ತರಲ್ಪಡುವ ದ್ರವ್ಯವೂ ಸೋಮವೂ, ಸ್ತುತಿಸುವ ಮಂತ್ರಗಳೂ ಸೋಮದೇವತಾಕವಾದವುಗಳು. ಆದುದರಿಂದ ಮಂತ್ರಗಳು ಸೋಮದೇವತೆಗೆ ಸ್ವಕೀಯವೆಂದು ಹೇಳಲ್ಪಡುವವು. ಸ್ವರ್ಗದಲ್ಲಿದ್ದ ಸೋಮವನ್ನು ಭೂಮಿಗೆ ತಂದುದು ಗಾಯತ್ರಿಯೇ ಆದುದರಿಂದ ಗಾಯತ್ರೀಛಂದಸ್ಸು ಸೋಮದೇವತೆಗೆ ಸ್ವಕೀಯವೆನಿಸಿರುವುದು. ಈ ವಿಷಯವು ತೈತ್ತಿರೀಯ ಸಂಹಿತೆಯಲ್ಲಿ ಕದ್ರೂಶ್ಚ ವೈ. ಎಂಬ ಅನುವಾಕದಲ್ಲಿ (ತೈ. ಸಂ. ೬-೧-೬) ಹೇಳಿರುವುದು. ಆದುದರಿಂದ ಇಲ್ಲಿ ಮೇಲೆ ಹೇಳಿದ ಮೂರು ಋಕ್ಕುಗಳೂ ಗಾಯತ್ರೀಛಂದಸ್ಸೂ ಸಹ ಸೋಮನಿಗೆ ಸ್ವಕೀಯವೆಂದು ವಿವರಿಸಲಾಗಿದೆ.

**ಸರ್ವೇ ನಂದಂತಿ ಯಶಸಾಗತೇನೇತ್ಯನ್ವಾಹ ।**

ಎಂದು ಹೋತೃವು ಐದನೆಯ ಋಕ್ಕಾದ—

**ಸರ್ವೇ ನಂದಂತಿ ಯಶಸಾಗತೇನ ಸಭಾಸಾಹೇನ ಸಖ್ಯಾ ಸಖಾಯಃ ।**
**ಕಿಲ್ಬಿಷಸ್ಪೃತ್ಪಿತುಷಣಿರ್ಹ್ಯೇಷಾಮರಂ ಹಿತೋ ಭವತಿ ವಾಜಿನಾಯ ॥**

(ಋ. ಸಂ. ೧೦-೭೨-೧೦)

ಎಂಬ ಋಕ್ಕನ್ನು ಪಠಿಸುವವನು. ಈ ಋಕ್ಕು ಋಗ್ವೇದಸಂಹಿತೆಯಲ್ಲಿಯೇ ಇದೆ. ಈ ಋಕ್ಕಿನ ಮುಖ್ಯಾಭಿಪ್ರಾಯವು ಈ ರೀತಿ ಇರುವುದು. ಯಜಮಾನ ಋತ್ವಿಕ್ಕುಗಳು ಮೊದಲಾದ ಯಜ್ಞದಲ್ಲಿ ಭಾಗವಹಿಸುವ ಜನರು, ಸ್ನೇಹಿತನಂತೆ ಸರ್ವರಿಗೂ ಆಪ್ತನಾದ ಈ ಸೋಮದೇವನು ಯಜ್ಞಭೂಮಿಗೆ ಬಂದುದನ್ನು ನೋಡಿ ಸಂತೋಷಪಡುತ್ತಿರುವರು. ಈ ಸೋಮನು ಕೀರ್ತಿಯನ್ನುಂಟುಮಾಡುವವನು; ವಿದ್ವತ್ಸಭೆಯಲ್ಲಿ ತನ್ನ ಅಸಾಧಾರಣವಾದ ವಿದ್ಯೆಯಿಂದ ಎಲ್ಲರನ್ನೂ ಪರಾಭವಗೊಳಿಸುವ ವಿದ್ವಾಂಸನು ಸಭೆಯನ್ನು ಪ್ರವೇಶಿಸಿ ಎಲ್ಲರಿಗೂ ಸಂತೋಷವನ್ನುಂಟುಮಾಡುವಂತೆ ಈ ಸೋಮದೇವನ ಆಗಮನದಿಂದ ಸರ್ವರೂ ಸಂತೋಷಪಡುವರು; ಮತ್ತು ಈ ಸೋಮನು ಋತ್ವಿಗ್ಯಜಮಾನರ ಕಿಲ್ಬಿಷಗಳನ್ನು ಎಂದರೆ ಪಾಪಗಳನ್ನೂ, ದೋಷಗಳನ್ನೂ ನಾಶಮಾಡಿ ಅವರನ್ನು ಸಂರಕ್ಷಿಸುವನು; ಅವರಿಗೆ ಅನ್ನದಾತೃವಾಗಿರುವನು ಎಂದರೆ ಸೋಮಪಾನದಿಂದ ಎಲ್ಲರಿಗೂ ತೃಪ್ತಿಯಾಗುವುದು. ಇಂತಹ ಮಹತ್ವಗುಣವಿಶಿಷ್ಟನಾದ ಸೋಮನು ಸಮಸ್ತರಿಗೂ ಅನ್ನ, ಇಂದ್ರಿಯ, ವೀರ್ಯ ಇವುಗಳನ್ನು ಕೊಟ್ಟು ಅನುಗ್ರಹಮಾಡುವುದಕ್ಕಾಗಿ ಈ ಯಜ್ಞವೇದಿಗೆ ಆನೀತನಾಗಿ ಇಲ್ಲಿ ಇಡಲ್ಪಟ್ಟಿರುವನು. ಈ ವಿಷಯವು ಪ್ರಸಿದ್ಧವಾಗಿರುವುದು. ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

**ಯಶೋ ವೈ ಸೋಮೋ ರಾಜಾ ಸರ್ವೋ ಹ ವಾ ಏತೇನ ಕ್ರಿಯಮಾಣೇನ ನಂದಂತಿ ಯಚ್ಛ ಯಜ್ಞೇ ಲಪ್ಸ್ಯಮಾನೋ ಭವತಿ ಯಚ್ಛ ನ ।**

ಈ ಋಕ್ಕಿನ ಪ್ರಥಮಪಾದವನ್ನು ವಿವರಿಸುವರು. ಸೋಮದೇವನು ಯಶಸ್ಸಿಗೆ ಕಾರಣನು. ಇಂದ್ರನೇ ಮೊದಲಾದವರು ಸೋಮಪಾನಮಾಡಿ ಅನೇಕ ಸಾಹಸಕಾರ್ಯಗಳನ್ನು ಮಾಡಿ ಯಶಸ್ವಿಯಾಗಿರುವರು. ಆದುದರಿಂದ ಸೋಮನು ಯಶಃಸ್ವರೂಪನಾಗಿರುವನು ಎಂದು ಹೇಳಲ್ಪಡುವುದು. ಯಜ್ಞದಲ್ಲಿ ಋತ್ವಿಕ್ಕುಗಳ ಕರ್ಮಗಳನ್ನು ನೆರವೇರಿಸಿ ಕೆಲವರು ಧನಸಂಪಾದನೆಮಾಡುವರು, ಕೆಲವರು ಯಜ್ಞವನ್ನು ನೋಡಿಯೇ ಸಂತೋಷಪಡುವರು. ಆದುದರಿಂದ ಎಲ್ಲರೂ ವಿಕ್ರೀತವಾಗಿ ಯಜ್ಞಭೂಮಿಗೆ ತರಲ್ಪಟ್ಟ ಈ ಸೋಮವನ್ನು ನೋಡಿ ಸಂತೋಷಪಡುವರು.

**ಸಭಾಸಾಹೇನ ಸಖ್ಯಾ ಸಖಾಯ ಇತ್ಯೇಷ ವೈ ಬ್ರಾಹ್ಮಣಾನಾಂ ಸಭಾಸಾಹಃ ಸಖಾ ಯತ್ಸೋಮೋ ರಾಜಾ ।**

ಎರಡನೆಯ ಪಾದವನ್ನು ವಿವರಿಸುವರು—ಪ್ರಕಾಶಮಾನನಾಗಿ ಬೆಳಗುತ್ತಿರುವ ಈ ಸೋಮನು ಬ್ರಾಹ್ಮಣರ ವಿದ್ವತ್ಸಭೆಗಳಲ್ಲಿ ಎಲ್ಲರನ್ನೂ ಗೆದ್ದು ತನ್ನ ವಿದ್ವತ್ತಿನಿಂದ ಬೆಳಗುತ್ತಿರುವನು. ಈ ದೇವನು ಬ್ರಾಹ್ಮಣರಿಗೂ ಋತ್ವಿಗ್ಯಜಮಾನರಿಗೂ ಹಿತವನ್ನುಂಟುಮಾಡುವುದರಿಂದ ಸ್ನೇಹಿತನಾಗಿರುವನು.

**ಕಿಲ್ಬಿಷಸ್ಪೃದಿತ್ಯೇಷ ಉ ಏವ ಕಿಲ್ಬಿಷಸ್ಪೃತ್ ಯೋ ವೈ ಭವತಿ ಯಃ ಶ್ರೇಷ್ಠತಾಮಶ್ನುತೇ ಸ ಕಿಲ್ಬಿಷಂ ಭವತಿ । ತಸ್ಮಾದಾಹುರ್ಮಾನುವ್ರೋಚೋ ಮಾ ಪ್ರಚಾರೀಃ ಕಿಲ್ಬಿಷಂ ನು ಮಾ ಯಾತಯನ್ನಿತಿ ।**

ಮೂರನೆಯ ಪಾದವನ್ನು ವಿವರಿಸುವರು—ಈ ಸೋಮದೇವನು ಕಿಲ್ಬಿಷ ಅಥವಾ ಪಾಪವನ್ನು ಪರಿಹರಿಸಿ ಕಾಪಾಡುವವನು. ತನ್ನ ಸಮಸ್ತ ಇಷ್ಟಾರ್ಥಗಳನ್ನು ಪಡೆಯುವುದಕ್ಕಾಗಿ ಮಾಡುವ ಸೋಮಯಾಗದಲ್ಲಿ ಕಿಲ್ಬಿಷ ಎಂದರೆ ಲೋಪದೋಷಗಳು, ನ್ಯೂನತೆಗಳು, ಪಾಪಗಳು ಮೊದಲಾದವು ಉಂಟಾಗುವ ಸಂಭವವುಂಟು. ಅಂತಹ ಸಂದರ್ಭಗಳಲ್ಲಿ ಆ ಲೋಪದೋಷಗಳನ್ನೂ ಪಾಪಗಳನ್ನೂ ಸೋಮದೇವತೆಯು ಪರಿಹಾರಮಾಡಿ ಯಜಮಾನನನ್ನು ರಕ್ಷಿಸುವನು. ಯಜ್ಞಮಾಡುತ್ತಿರುವಾಗ ಋತ್ವಿಗ್ಯಜಮಾನರಿಗೆ ಕಿಲ್ಬಿಷವು ಸಂಭವಿಸುವ ಪ್ರಮೇಯವೇನಿದೆ ಎಂದರೆ, ಯಜ್ಞಕರ್ಮದಲ್ಲಿ ಪ್ರವೃತ್ತನಾಗಿರುವ ಪುರುಷನು ಬಹಳ ಬುದ್ಧಿವಂತಿಕೆಯಿಂದ ನಡೆಸಬೇಕಾಗಿರುವ ಪ್ರೌಢವಾದ ಯಜ್ಞದಲ್ಲಿ ಮಂತ್ರಾದಿಗಳನ್ನು ಪಠಿಸುತ್ತಿರುವಾಗ ಅದನ್ನು ಬೇಗ ಮುಗಿಸಬೇಕೆಂಬ ಇಚ್ಛೆಯಿಂದಲೂ ತಾನೇ ಮಂತ್ರಪ್ರಯೋಗಾದಿಗಳಲ್ಲಿ ಅತ್ಯಂತ ಸಮರ್ಥನೆಂದೂ ತನಗೆ ಸಮಾನರು ಯಾರೂ ಇಲ್ಲವೆಂಬ ದುರಭಿಮಾನದಿಂದಲೂ ಕೂಡಿ ಮಂತ್ರಪಠನಮಾಡುವುದರಿಂದ ಮಂತ್ರೋಚ್ಚಾರಣೆಯಲ್ಲಿಯೂ ಕ್ರಮದಲ್ಲಿಯೂ ಅಕ್ಷರಲೋಪ, ಕರ್ಮಲೋಪ ಮೊದಲಾದ ದೋಷಗಳಿಂದ ಕರ್ಮನ್ಯೂನತೆಯುಂಟಾಗಿ ಪಾಪವು ಸಂಭವಿಸುವುದು. ಮತ್ತು ಯಜಮಾನನು ಋತ್ವಿಜರನ್ನು ಕುರಿತು ಈ ರೀತಿ ಹೇಳುವನು—ಎಲೈ ಹೋತೃವೇ, ಮಂತ್ರಪಠನಕಾಲದಲ್ಲಿ ನಿನ್ನ ಮನಸ್ಸು ಮಂತ್ರಪಠನ, ಮಂತ್ರಾರ್ಥಗಳಲ್ಲಿಯೇ ಆಸಕ್ತವಾಗಿರಲಿ, ಬೇರೆ ಕಡೆ ಮನಸ್ಸು ಹೋಗದಂತೆ ಸ್ಥಿರಚಿತ್ತನಾಗಿ ಪುರೋನುವಾಕ್ಯಾದಿ ಮಂತ್ರಾರ್ಥಗಳನ್ನು ಪಠಿಸು; ಎಲೈ ಅಧ್ವರ್ಯುವೇ, ಕೆಲಸದ ಗಡಬಿಡಿಯಲ್ಲಿ ಮಾಡಬೇಕಾದ ಕೆಲಸ ಕಾರ್ಯಗಳು ವ್ಯತ್ಯಾಸವಾಗದಂತೆಯೂ, ನಿನ್ನ ಗಮನವು ಬೇರೆ ಕಡೆ ಇದ್ದು ಕಾರ್ಯವು ಕೆಟ್ಟುಹೋಗದಂತೆಯೂ ಜಾಗ್ರತೆಯಾಗಿ ಕಾರ್ಯವು ಮುಗಿಯಬೇಕೆಂಬ ಆತುರವನ್ನು ಬಿಟ್ಟು ಸಾವಧಾನವಾಗಿ ಕಾರ್ಯಗಳನ್ನು ನೆರವೇರಿಸು. ನೀವು ಮಾಡುವ ಲೋಪದೋಷಗಳಿಂದ ಯಜಮಾನನಾದ ನನಗೆ ಕಿಲ್ಬಿಷವು ಎಂದರೆ ಪಾಪವು ಸಂಭವಿಸದಂತೆ ಎಚ್ಚರಿಕೆಯಿಂದ ಇರಿ ಎಂದು ಯಜಮಾನನು ಹೇಳಬೇಕಾಗುವುದು. ಇಂತಹ ಪಾಪಗಳಿಂದ ಸೋಮದೇವತೆಯು ಋತ್ವಿಗ್ಯಜಮಾನರನ್ನು ಕಾಪಾಡಲಿ ಎಂದು ಹೇಳಿರುವುದು.

**ಪಿತುಷಣಿರಿತ್ಯನ್ನಂ ವೈ ಪಿತು ದಕ್ಷಿಣಾ ವೈ ಪಿತು ತಾಮೇನೇನ ಸನೋತ್ಯನ್ನಸನಿಮೇವೈನಂ ತತ್ಕರೋತಿ ।**

ನಾಲ್ಕನೆಯ ಪಾದವನ್ನು ವಿವರಿಸುತ್ತಾ **ಪಿತುಷಣಿ** ಶಬ್ದಾರ್ಥವನ್ನು ವಿವರಿಸುವವರು—**ಪಿತು** ಶಬ್ದಕ್ಕೆ ಅನ್ನವೆಂಬ ಹೆಸರು ಇರುವುದಲ್ಲದೆ ಯಜ್ಞಾದಿಗಳಲ್ಲಿ ಋತ್ವಿಜರಿಗೆ ಕೊಡುವ ದಕ್ಷಿಣೆಯೆಂದೂ ಅರ್ಥವು. ಈ ಸೋಮಯಾಗದಲ್ಲಿ ಪಾತ್ರವಹಿಸುವ ಋತ್ವಿಜರಿಗೆ ಸೋಮನು ದಕ್ಷಿಣಾದಿಗಳನ್ನೂ ಅನ್ನವನ್ನೂ ಕೊಡುವನು.

**ಅರಂ ಹಿತೋ ಭವತಿ ವಾಜಿನಾಯೇತೀಂದ್ರಿಯಂ ವೈ ವೀರ್ಯಂ ವಾಜಿನಂ ಆಜರಸಂ ಹಾಸ್ಮೈ ವಾಜಿನಂ ನಾಪಚ್ಛಿದ್ಯತೇ ಯ ಏವಂ ವೇದ ।**

ಮತ್ತು ಸೋಮನು ಋತ್ವಿಗ್ಯಜಮಾನರಿಗೆ ಮುಪ್ಪಿನ ಪರ್ಯಂತರವೂ ಇಂದ್ರಿಯಗಳ ಪಟುತ್ವವನ್ನೂ, ವೀರ್ಯವನ್ನೂ, ಸಾಮರ್ಥ್ಯವನ್ನೂ ಕೊಡುವನು. ಈ ವಿಷಯವನ್ನು ಯಾವನು ತಿಳಿದಿರುವನೋ ಅವನಿಗೆ ಇಂದ್ರಿಯಪಟುತ್ವಾದಿಗಳು

ಮಧ್ಯೆ ನಾಶವಾಗುವಂತೆ ಸೋಮದೇವನು ಅನುಗ್ರಹಿಸುವನು. ಇಂತಹ ಸೋಮನು ಯಜ್ಞವೇದಿಗೆ ಆನೀತನಾಗಿ ಸ್ವಸ್ಥಾನದಲ್ಲಿ ಇಡಲ್ಪಟ್ಟಿರುವುದನ್ನು ನೋಡಿ ಸಮಸ್ತ ಜನರೂ ಸಂತೋಷದಿಂದಿರುವರು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವನ್ನು ವರ್ಣಿಸಿದೆ.

**ಆಗನ್ದೇವ ಇತ್ಯನ್ವಾಹ ।**

ಇನ್ನು ಆರನೆಯ ಋಕ್ಕಾದ—

**ಆಗನ್ದೇವ ಋತುಭಿರ್ವರ್ಧತು ಕ್ಷಯಂ ದಧಾತು ನಃ ಸವಿತಾ ಸುಪ್ರಜಾಮಿಷಂ ।**
**ಸ ನಃ ಕ್ಷಪಾಭಿರಹಭಿಶ್ಚ ಜಿನ್ವತು ಪ್ರಜಾವಂತಂ ರಯಿಮಸ್ಮೇ ಸಮಿನ್ವತು ॥**

(ಋ. ಸಂ. ೪-೫೩-೭)

ಎಂಬ ಋಕ್ಕನ್ನು ಪಠಿಸುವನು. ಈ ಮಂತ್ರವೂ ಋಗ್ವೇದಸಂಹಿತೆಯಲ್ಲಿಯೇ ಇದೆ. ಇದರ ಮುಖ್ಯಾಭಿಪ್ರಾಯವು— ಈ ಸೋಮದೇವನು ನಮ್ಮ ಯಜ್ಞಭೂಮಿಗೆ ದಯಮಾಡಿಸಲಿ; ಇಲ್ಲಿಗೆ ಬಂದು ಋತುಗಳಿಂದ ಕೂಡಿ ನಿವಾಸಸ್ಥಾನವನ್ನು ವೃದ್ಧಿಪಡಿಸಲಿ; ಮತ್ತು ಈ ಸೋಮದೇವನು ನಮಗೆ ಪ್ರೇರಕನಾಗಿ ಉತ್ತಮವಾದ ಪುತ್ರಪೌತ್ರಾದಿಸಂತತಿಯನ್ನೂ, ಅನ್ನವನ್ನೂ ನಮಗೆ ಒದಗಿಸಿಕೊಡಲಿ; ಮತ್ತು ಆ ದೇವನು ಅಹೋರಾತ್ರಿಗಳಲ್ಲಿಯೂ ನಮಗೆ ಸಂತೋಷವನ್ನುಂಟುಮಾಡಲಿ; ಪ್ರಜೆಗಳನ್ನೂ (ಪುತ್ರಾದಿಗಳನ್ನೂ) ಧನವನ್ನೂ ನಮಗೆ ಸಂಪಾದಿಸಿಕೊಡಲಿ.

**ಆಗತೋ ಹಿ ಸ ತರ್ಹಿ ಭವತಿ ಋತುಭಿರ್ವರ್ಧತು ಕ್ಷಯಮಿತ್ಯೃತವೋ ವೈ ಸೋಮಸ್ಯ ರಾಜ್ಞೋ ರಾಜಭ್ರಾತರೋ ಯಥಾ ಮನುಷ್ಯಸ್ಯ ೞರೇವ್ಯೈನಂ ತತ್ಸಹಾಗಮಯತಿ ।**

ಈ ಋಕ್ಕಿನ ಪ್ರಥಮ ಪಾದಾರ್ಥವನ್ನು ವಿವರಿಸುವರು—ಈ ಋಕ್ಕಿನ ಪ್ರಾರಂಭದಲ್ಲಿರುವ ಆಗನ್ ಎಂಬ ಶಬ್ದವು ಸೋಮಕ್ರಯಣಾನಂತರ ಸೋಮನು ಯಜ್ಞಭೂಮಿಗೆ ಬಂದಿರುವನು ಎಂಬುದನ್ನು ಸೂಚಿಸುವುದು. ಲೋಕವ್ಯವಹಾರದಲ್ಲಿ ಮನುಷ್ಯರಿಗೆ ಸಹೋದರರು ಜತೆಯಲ್ಲಿರುವಂತೆ ರಾಜರಿಗೂ ಸಹೋದರರಿರುವರು. ಇಲ್ಲಿ ಸೋಮನೇ ರಾಜನು. ಋತುಗಳೇ ಅವನ ಸಹೋದರರು. ಈ ಋತುಗಳೆಂಬ ಸಹೋದರರೊಡನೆ ಈ ಸೋಮರಾಜನು ಇಲ್ಲಿಗೆ ದಯಮಾಡಿಸಿರುವನು. ಈ ಅರ್ಥವುಳ್ಳ ಪ್ರಥಮಪಾದವನ್ನು ಹೋತೃವು ಪಠಿಸಿ ಸಹೋದರರಿಂದ ಸಹಿತನಾದ ಸೋಮರಾಜನಿಗೆ ಸ್ವಾಗತವನ್ನು ಬಯಸಿರುವನು.

**ದಧಾತು ನಃ ಸವಿತಾ ಸುಪ್ರಜಾಮಿಷಮಿತ್ಯಾಶಿಷಮಾಶಾಸ್ತೇ। ಸ ನಃ ಕ್ಷಪಾಭಿರಹಭಿಶ್ಚ ಜಿನ್ವತ್ವಿತ್ಯಹಾನಿ ವಾ ಅಹಾನಿ ರಾತ್ರಯಃ ಕ್ಷಪಾ ಅಹೋರಾತ್ರೈರೇವಾಸ್ಮಾ ಏತಾಮಾಶಿಷಮಾಶಾಸ್ತೇ ಪ್ರಜಾವಂತಂ ರಯಿಮಸ್ಮೇ ಸಮಿನ್ವತ್ವಿತ್ಯಾಶಿಷಮೇವಾಶಾಸ್ತೇ ।**

ಪ್ರಥಮಪಾದವನ್ನು ವಿವರಿಸಿ ಮುಂದಿನ ಪಾದಗಳ ಅರ್ಥವನ್ನು ವಿವರಿಸುವರು. ಸಮಸ್ತರನ್ನೂ ಪ್ರೇರಿಸುವ ಈ ಸೋಮದೇವನು ನಮಗೆ ಸುಪುತ್ರರನ್ನೂ ಅನ್ನವನ್ನೂ ಕೊಟ್ಟು ಕಾಪಾಡಲಿ. ಮತ್ತು ಆ ದೇವನು ಅಹೋರಾತ್ರಿಗಳಲ್ಲಿಯೂ ನಮ್ಮನ್ನು ಸಂತೋಷಗೊಳಿಸುತ್ತಾ ನಮಗೆ ಪುತ್ರಪೌತ್ರಾದಿಪ್ರಜಾಸಂತತಿಯನ್ನೂ ಧನವನ್ನೂ ಕೊಟ್ಟು ಸಂರಕ್ಷಿಸಲಿ ಎಂಬ ಆಶಂಸನೆಯು ಉಕ್ತವಾಗಿದೆ.

[ಮೇಲೆ ಉದಾಹೃತವಾಗಿರುವ ಆಗನ್ ಎಂಬ ಋಕ್ಕು ಸವಿತೃದೇವತಾಕವು. ವಾಮದೇವಋಷಿದೃಷ್ಟವಾದ ಏಳು ಋಕ್ಕಿನ ಈ ಸೂಕ್ತವೆಲ್ಲವೂ ಸವಿತಾದೇವತೆಯ ಪರವಾಗಿಯೇ ಇದೆ. ಆದರೂ ಇಲ್ಲಿ ಸೋಮದೇವತೆಯ ಪರವಾಗಿ ಅರ್ಥಮಾಡಿ ಉಪಯೋಗಿಸಲಾಗಿದೆ. ಈ ಋಕ್ಕಿನಲ್ಲಿ ಹೇಳಿರುವ ವಿಷಯಗಳು ಸೋಮಾನಯನಕಾಲದಲ್ಲಿ ಸಂದರ್ಭೋಚಿತವಾದ ವಿಷಯಗಳನ್ನೊಳಗೊಂಡಿರುವುದರಿಂದ ಈ ಋಕ್ಕನ್ನು ಸೋಮದೇವತೆಯ ಪರವಾಗಿ ಉಪಯೋಗಿಸಿರುವುದು ಸಹಜವಾಗಿದೆ. ಯಜ್ಞಾದಿ ಕರ್ಮಗಳಲ್ಲಿ—

**ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣಮೃಗಭಿವದತಿ ।**

(ಐ. ಬ್ರಾ. ೩-೧೩)

ಎಂಬ ಶ್ರುತಿವಚನದಪ್ರಕಾರ, ಆಯಾ ಕರ್ಮಗಳಲ್ಲಿ ಆಯಾ ಕರ್ಮಗಳ ವಿಷಯಗಳನ್ನು ಪ್ರತಿಪಾದಿಸುವ ಸಂದರ್ಭೋಚಿತವಾದ ಅರ್ಥವನ್ನು ವಿವರಿಸುವ ಋಕ್ಕುಗಳನ್ನು ಉಪಯೋಗಿಸಬೇಕೆಂದು ಹೇಳಿರುವುದರಿಂದಲೂ ಇಲ್ಲಿ ಸೋಮಾನಯನ ಕಾಲದಲ್ಲಿ ಋತ್ವಿಗ್ಯಜಮಾನರು ಸೋಮದೇವತೆಯನ್ನು ಪ್ರಾರ್ಥಿಸಿರುವ ವಿಷಯಗಳೆಲ್ಲವೂ ಈ ಋಕ್ಕಿನಲ್ಲಿರುವುದರಿಂದಲೂ ಈ ಋಕ್ಕನ್ನು—ಬೇರೆ ದೇವತೆಯ ಪರವಾಗಿದ್ದರೂ— ಇಲ್ಲಿ ಸೋಮದೇವತೆಯ ಪರವಾಗಿಯೇ ಇದೆಯೆಂದು ಭಾವಿಸಿ ಪಠಿಸಲಾಗಿದೆ. ಇದರಲ್ಲಿ ಯಾವ ದೋಷವೂ ಕಂಡುಬರುವುದಿಲ್ಲ.]

ಅನಂತರ ಹೋತೃವು ಈ ಕರ್ಮದಲ್ಲಿ ಏಳನೆಯ ಋಕ್ಕನ್ನು ಪಠಿಸುವನು.

**ಯಾ ತೇ ಧಾಮಾನಿ ಹವಿಷಾ ಯಜಂತೀತ್ಯನ್ವಾಹ ।**

ಹೋತೃವು ಪಠಿಸುವ ಏಳನೆಯ ಋಕ್ಕು ಋಗ್ವೇದಸಂಹಿತೆಯಲ್ಲಿಯೇ ಇದೆ—

**ಯಾ ತೇ ಧಾಮಾನಿ ಹವಿಷಾ ಯಜಂತಿ ತಾ ತೇ ವಿಶ್ವಾ ಪರಿಭೂರಸ್ತು ಯಜ್ಞಂ ।**
**ಗಯಸ್ಫಾನಃ ಪ್ರತರಣಃ ಸುವೀರೋಽವೀರಹಾ ಪ್ರಚರಾ ಸೋಮ ದುರ್ಯಾನ್ ॥**

(ಋ. ಸಂ. ೧-೯೧-೪)

ಈ ಋಕ್ಕಿನ ಮುಖ್ಯಾಭಿಪ್ರಾಯವು—ಎಲೈ ಸೋಮನೇ, ಉತ್ತರವೇದಿಗಳೇ ಮೊದಲಾದ ನಿನ್ನ ಸ್ಥಾನಗಳನ್ನು, ಯಜ್ಞ ಮಾಡುವ ಯಜಮಾನರು ಹವಿರಾದಿಗಳಿಂದ ಪೂಜಿಸುತ್ತಾರೆ. ಆ ನಿನ್ನ ಸ್ಥಾನಗಳು ಎಲ್ಲಾ ಸ್ಥಳಗಳಲ್ಲಿಯೂ ವ್ಯಾಪಿಸಿರುವುದರಿಂದ ನೀನು ಯಜ್ಞಪ್ರದೇಶವನ್ನು ಸುತ್ತುವರೆದು ನೆಲಸಿರುವೆ, ಮತ್ತು ನೀನು ನಮ್ಮ ಗೋವುಗಳನ್ನು ಪೋಷಿಸಿ ವೃದ್ಧಿಪಡಿಸುವವನು ; ನಮ್ಮನ್ನು ಸಮಸ್ತಸಂಕಟಗಳಿಂದ ಪಾರುಮಾಡುವವನು ; ನಮಗೆ ನೀನು ಒಳ್ಳೆಯ ಪುತ್ರಪೌತ್ರಾದಿಗಳನ್ನು ಕೊಡುವವನು ; ಇದಲ್ಲದೆ, ಎಲೈ ಸೋಮದೇವನೇ, ನೀನು ನಮ್ಮಲ್ಲಿರುವ ಉತ್ತಮವೀರರನ್ನು ಕೊಲ್ಲುವವನಲ್ಲ. ಇಂತಹ ನೀನು ಈಗ ನಮ್ಮ ಗೃಹಾಭಿಮುಖವಾಗಿ ದಯಮಾಡು.

**ತಾ ತೇ ವಿಶ್ವಾ ಪರಿಭೂರಸ್ತು ಯಜ್ಞಂ ಗಯಸ್ಫಾನಃ ಪ್ರತರಣಃ ಸುವೀರ ಇತಿ ಗವಾಂ ನಃ ಸ್ಫಾವಯಿತಾ ಪ್ರತಾರಯಿತೈಧೀತ್ಯೇವ ತದಾಹ ॥**

ಮೊದಲನೆಯ ಪಾದದ ಅರ್ಥವು ಸ್ಪಷ್ಟವಾಗಿರುವುದರಿಂದ ಎರಡನೆಯ ಮತ್ತು ಮೂರನೆಯ ಪಾದವನ್ನು ವಿವರಿಸಿರುವರು. ಇದರ ಅರ್ಥವನ್ನು ಸಹ ಮೇಲೆಯೇ ತಿಳಿಸಿರುವುದರಿಂದ ಪುನಃ ಹೇಳುವ ಅವಶ್ಯಕತೆ ಇಲ್ಲ.

**ಅವೀರಹಾ ಪ್ರಚರಾ ಸೋಮ ದುರ್ಯಾನಿತಿ ಗೃಹಾ ವೈ ದುರ್ಯಾ ಬಿಭ್ಯತಿ ವೈ ಸೋಮಾದ್ರಾಜ್ಞ ಆಯತೋ ಯಜಮಾನಸ್ಯ ಗೃಹಾಃ ಸ ಯದೇತಾಮನ್ವಾಹ ಶಾಂತ್ಯೈವೈನಂ ತಚ್ಛಮಯತಿ ಸೋಽಸ್ಯ ಶಾಂತೋ ನ ಪ್ರಜಾಂ ನ ಪಶೂನ್ ಹಿನಸ್ತಿ ।**

ಈಗ ನಾಲ್ಕನೆಯ ಪಾದದ ಅರ್ಥವನ್ನು ವಿವರಿಸುವರು— ಯಜಮಾನನ ಗೃಹಾಭಿಮುಖವಾಗಿ ಬರುತ್ತಿರುವ ಈ ಸೋಮರಾಜನನ್ನು ನೋಡಿ ಯಜಮಾನನ ಗೃಹದಲ್ಲಿರುವ ವೀರಪುರುಷರು, ನಾವು ಈ ಸೋಮರಾಜನಿಗೆ ಮಾಡುವ ಸೇವೆಯಲ್ಲಿ ಹೆಚ್ಚುಕಡಿಮೆಯಾಗಿ ಅದರಿಂದ ಈ ದೇವನು ಕೋಪಗೊಳ್ಳುವನೆಂದು, ಗೃಹದಲ್ಲಿ ವೀರಪುರುಷರು ಮೊದಲಾದವರು ಭಯಪಡುವರು. ಆಗ ಹೋತೃವು ಆ ಭಯವನ್ನು ಪರಿಹಾರಮಾಡುವುದಕ್ಕಾಗಿ ಅವೀರಹಾ—ಈ ಸೋಮದೇವನು ವೀರಪುರುಷರನ್ನು ಕೊಲ್ಲುವವನಲ್ಲ ಎಂಬ ಶಬ್ದವಿರುವ ನಾಲ್ಕನೆಯ ಪಾದವನ್ನು ಪಠಿಸಿ ಸೋಮ ರಾಜನಿಗೆ ಶಾಂತಿವಚನವನ್ನು ಹೇಳಿ ಸಮಾಧಾಪಡಿಸುವನು. ಸೋಮರಾಜನೂ ಸಹ ಆ ಶಾಂತಿವಚನಗಳಿಂದ ತೃಪ್ತ ನಾಗಿ ಯಜಮಾನನ ಪುತ್ರಾದಿಗಳನ್ನೂ ಗೋವುಗಳನ್ನೂ ಪರಿವಾರದವರನ್ನೂ ಹಿಂಸಿಸುವುದಿಲ್ಲ.

**ಇಮಾಂ ಧಿಯಂ ಶಿಕ್ಷಮಾಣಸ್ಯ ದೇವೇತಿ ವಾರುಣ್ಯಾ ಪರಿದಧಾತಿ ।**

ಈಗ ಹೋತೃವು **ಇಮಾಂ ಧಿಯಂ** ಎಂಬ ವರುಣದೇವತಾಕವಾದ ಎಂಟನೆಯ ಋಕ್ಕನ್ನು ಪಠಿಸಿ ಈ ಸೋಮ ಪ್ರವಾಹಣವೆಂಬ ಕರ್ಮವನ್ನು ಸಮಾಪ್ತಿಗೊಳಿಸುವನು.

**ಇಮಾಂ ಧಿಯಂ ಶಿಕ್ಷಮಾಣಸ್ಯ ದೇವ ಕ್ರತುಂ ದಕ್ಷಂ ವರುಣ ಸಂಶಿಶಾಧಿ ।**
**ಯಯಾತಿ ವಿಶ್ವಾ ದುರಿತಾ ತರೇಮ ಸುತರ್ಮಾಣಮಧಿ ನಾವಂ ರುಹೇಮ ॥**

(ಋ. ಸಂ. ೮-೪೨-೩)

ಈ ಋಕ್ಕು ಸಹ ಋಗ್ವೇದಸಂಹಿತೆಯಲ್ಲಿಯೇ ಇರುವುದು. ಈ ಋಕ್ಕಿನ ಮುಖ್ಯಾಭಿಪ್ರಾಯವು—ಎಲೈ ವರುಣ ದೇವನೇ, ಈ ಯಜ್ಞಾನುಷ್ಠಾನ ವಿಷಯದಲ್ಲಿ ಪ್ರವರ್ತಿತವಾದ ಬುದ್ಧಿಯಲ್ಲಿ ಆಸಕ್ತನಾಗಿರುವ (ಎಂದರೆ ಯಜ್ಞಾನುಷ್ಠಾನ ವನ್ನು ವಿಧ್ಯುಕ್ತರೀತಿಯಿಂದ ಮಾಡಬೇಕೆಂದು ಬಯಸುತ್ತಿರುವ) ಈ ಯಜಮಾನನಿಗೆ ನೀನು ಯಜ್ಞವಿಷಯವಾದ ಸಾಮರ್ಥ್ಯವನ್ನೂ, ಕುಶಲತೆಯನ್ನೂ, ಜ್ಞಾನವನ್ನೂ ಚೆನ್ನಾಗಿ ಉಪದೇಶಮಾಡು. ನಿನ್ನ ವಾಗ್ರೂಪವಾದ ಉಪದೇಶ ವೆಂಬ ನಾವೆಯನ್ನು ನಾವು ಹತ್ತಿಕುಳಿತು ಸಮಸ್ತವಾದ ದುರಿತಗಳನ್ನೂ ಪಾಪಗಳನ್ನೂ ದಾಟಿ ಪಾರಾಗೋಣ.

**ವರುಣದೇವತ್ಯೋ ವಾ ಏಷ ತಾವದ್ಯಾವದುಪನದ್ಧೋ ಯಾವತ್ಪರಿಶ್ರಿತಾನಿ ಪ್ರಪದ್ಯತೇ ಸ್ವಯೈವೈನಂ ತದ್ದೇವತಯಾ ಸ್ವೇನ ಛಂದಸಾ ಸಮರ್ಧಯತಿ ।**

ಈ ಸೋಮಪ್ರವಾಹಣಕರ್ಮವನ್ನು ಸಮಾಪ್ತಿಗೊಳಿಸಲು ವರುಣದೇವತಾಕವಾದ ಋಕ್ಕನ್ನು ಏತಕ್ಕೆ ಪಠಿಸ ಬೇಕೆಂದರೆ ಅದಕ್ಕೆ ಕಾರಣವನ್ನು ಹೇಳುವರು. ವಿಕ್ರಯಮಾಡಿ ತಂದ ಸೋಮವನ್ನು ಇದುವರೆಗೂ ಹಗ್ಗ ಮುಂತಾದ ಬಂಧನಗಳಿಂದ ಕಟ್ಟಿ ವಸ್ತ್ರಾದಿಗಳಿಂದ ಆಚ್ಛಾದಿಸಿ ಪ್ರಾಚೀನವಂಶಮೊದಲಾದ ಸ್ಥಾನಗಳಿಗೆ ತರಲಾಗಿದ್ದಿತು. ಯಾವ ವಸ್ತುವನ್ನೇ ಆಗಲಿ ಕಟ್ಟಿರುವ ಬಂಧನವು ಅಥವಾ ಅದರ ಮೇಲೆ ಹೊದ್ದಿಸಿರುವ ವಸ್ತ್ರಾದಿ ಆಚ್ಛಾದನವು ವರುಣ ದೇವನ ಪಾಶಾಧೀನವಾಗಿರುವುದು. ಅದನ್ನು ಬಿಚ್ಚಬೇಕಾದರೆ ವರುಣದೇವನನ್ನು ಪ್ರಾರ್ಥಿಸುವ ಋಕ್ಕನ್ನು ಪಠಿಸ ಬೇಕೆಂಬ ನಿಯಮಪ್ರಕಾರ ಹೋತೃವು ವರುಣದೇವತಾಕವಾದ ಮಂತ್ರವನ್ನು ಪಠಿಸುವನು. ಹಿಂದೆ ಸೋಮನನ್ನು

ಪ್ರಾರ್ಥಿಸುವಾಗ ಸೋಮದೇವನಿಗೆ ಪ್ರಿಯವಾದ ಅಥವಾ ಸ್ವಕೀಯವಾದ ಗಾಯತ್ರೀಛಂದಸ್ಸಿನ ಋಕ್ಕುಗಳಿಂದ ಸ್ತುತಿಸಲಾಗಿತ್ತಷ್ಟೆ. ಈಗ ಈ ಕರ್ಮಸಮಾಪ್ತಿಕಾಲದಲ್ಲಿ ಸ್ತುತಿಸುವ ವರುಣದೇವತಾಕವಾದ ಈ ಮಂತ್ರವು ತ್ರಿಷ್ಟುಪ್ ಛಂದಸ್ಸಿನದು. ಅದೂ ಸೋಮನಿಗೆ ಸ್ವಕೀಯ ಛಂದಸ್ಸೇ ಆಗಿರುವುದು. ಹೇಗೆಂದರೆ—

ಈ ವಿಷಯದಲ್ಲಿ ಒಂದು ಪೂರ್ವೇತಿಹಾಸವಿರುವುದು. ಪೂರ್ವದಲ್ಲಿ ಸೋಮವು ದೇವಲೋಕದಲ್ಲಿ ಇದ್ದಿತಷ್ಟೆ. ಅದನ್ನು ಭೂಮಿಗೆ ತರಬೇಕೆಂದು ದೇವತೆಗಳು ಯೋಚಿಸಿ ಇದನ್ನು ತರಲು ಶಕ್ತರಾರು ಎಂದು ಆಲೋಚಿಸಿದಾಗ ಗಾಯತ್ರ್ಯಾದಿಛಂದಸ್ಸುಗಳೇ ಸೋಮವನ್ನು ತರಲು ಸಮರ್ಥವಾಗಿರುವವು ಎಂದು ನಿಶ್ಚಯಿಸಲಾಯಿತು.

**ಜಗತ್ಯುದಪತಚ್ಚತುರ್ದಶಾಕ್ಷರಾ ಸತೀ ಸಾsಪ್ರಾಪ್ಯ ನ್ಯವರ್ತತ ತಸ್ಯೈ ದ್ವೇ ಅಕ್ಷರೇ ಅಮೀಯೇತಾಗ್ಂ ಸಾ ಪಶುಭಿಶ್ಚ ದೀಕ್ಷಯಾ ಚಾಗಚ್ಛತ್ತಸ್ಮಾಜ್ಜಗತೀ ಛಂದಸಾಂ ಪಶವ್ಯತಮಾ ತಸ್ಮಾತ್ಪಶುಮಂತಂ ದೀಕ್ಷೋಪನಮತಿ ತ್ರಿಷ್ಟುಗುದಪತತ್ತ್ರಯೋದಶಾಕ್ಷರಾ ಸತೀ ಸಾsಪ್ರಾಪ್ಯ ನ್ಯವರ್ತತ ತಸ್ಯೈ ದ್ವೇ ಅಕ್ಷರೇ ಅಮೀಯೇತಾಗ್ಂ ಸಾ ದಕ್ಷಿಣಾಭಿಶ್ಚ ತಪಸಾ ಚಾಗಚ್ಛತ್ತಸ್ಮಾತ್ತ್ರಿಷ್ಟುಭೋ ಲೋಕೇ ಮಾಧ್ಯಂದಿನೇ ಸವನೇ ದಕ್ಷಿಣಾ ನೀಯಂತ ಏತತ್ಖಲು ವಾವ ತಪ ಇತ್ಯಾಹುರ್ಯಃ ಸ್ವಂ ದದಾತೀತಿ ಗಾಯತ್ರ್ಯುದಪತಚ್ಚತುರಕ್ಷರಾ ಸತ್ಯಜಯಾ ಜ್ಯೋತಿಷಾ ತಮಸ್ಯಾ ಅಜಾಭ್ಯರುಂಧತ ತದಜಾಯಾ ಅಜತ್ವಗ್ಂ ಸಾ ಸೋಮಂ ಚಾಹರಚ್ಚತ್ವಾರಿ ಚಾಕ್ಷರಾಣಿ ಸಾಷ್ಟಾಕ್ಷರಾ ಸಮಪದ್ಯತ ಬ್ರಹ್ಮವಾದಿನೋ ವದಂತಿ ಕಸ್ಮಾತ್ಸತ್ಯಾದ್ಗಾಯತ್ರೀ ಕನಿಷ್ಠಾ ಛಂದಸಾಗ್ಂ ಸತೀ ಯಜ್ಞಮುಖಂ ಪರೀಯಾಯೇತಿ ಯದೇವಾದಃ ಸೋಮಮಾಹರತ್ತಸ್ಮಾದ್ಯಜ್ಞಮುಖಂ ಪರ್ಯೈತ್ತಸ್ಮಾತ್ತೇಜಸ್ವಿನೀತಮಾ ಪದ್ಭ್ಯಾಂ ದ್ವೇ ಸವನೇ ಸಮಗೃಹ್ಣಾನ್ಮುಖೇನೈಕಂ ಯನ್ಮುಖೇನ ಸಮಗೃಹ್ಣಾತ್ತದಧಯತ್ತಸ್ಮಾದ್ದ್ವೇ ಸವನೇ ಶುಕ್ರವತೀ ಪ್ರಾತಃಸವನಂ ಚ ಮಾಧ್ಯದಿನಂ ಚ ತಸ್ಮಾತ್ತೃತೀಯಸವನನ್ನೃಜೀಷಮಭಿಷುಣ್ವಂತಿ ಧೀತಮಿವ ಹಿ ಮನ್ಯಂತೇ ಆಶಿರಮವನಯತಿ ಸಶುಕ್ರತ್ವಾಯಾಥೋ ಸಂಭರತ್ಯೇವೈನತ್ ।**

(ತೈ. ಸಂ. ೬-೧-೬-೨, ೩, ೪, ೫)

ಆಗ ಮೊದಲು ಜಗತೀಛಂದಸ್ಸು ತಾನು ಸೋಮವನ್ನು ತರುತ್ತೇನೆಂದು ಹೊರಟು ಅಂತರಿಕ್ಷಕ್ಕೆ ನೆಗೆಯಿತು. ಆ ಕಾಲದಲ್ಲಿ ಜಗತೀಛಂದಸ್ಸಿನ ಒಂದೊಂದು ಪಾದಕ್ಕೂ ಹದಿನಾಲ್ಕು ಅಕ್ಷರಗಳಿದ್ದುವು. ಆದರೆ ಸೋಮವನ್ನು ತರಲು ಸಾಧ್ಯವಾಗದೆ ಬಳಲಿ ಆಯಾಸದಿಂದ ಹಿಂದಕ್ಕೆ ಬಂದಿತು. ಆಗ ಅದು ಹದಿನಾಲ್ಕು ಅಕ್ಷರಗಳಲ್ಲಿ ಎರಡು ಅಕ್ಷರಗಳನ್ನು ಕಳೆದುಕೊಂಡಿತು. ಆದರೆ ಬರುವಾಗ ಅಲ್ಲಿದ್ದ ಯಜ್ಞಪಶುಗಳನ್ನೂ ದೀಕ್ಷಾಕ್ರಮವನ್ನೂ (ಯಜ್ಞದಲ್ಲಿ ದೀಕ್ಷೆವಹಿಸುವ ವಿಧಿ) ತನ್ನ ಜೊತೆಯಲ್ಲಿ ತಂದಿತು. ಆದುದರಿಂದ ಲೋಕದಲ್ಲಿ ಜಗತೀಛಂದಸ್ಸು ಬಹುಪಶುಗಳುಳ್ಳದ್ದೆಂದು ಪ್ರಸಿದ್ಧಿಯಾಯಿತು. ಮತ್ತು ಪಶುಸಂಪತ್ತಿನಿಂದ ಕೂಡಿದ ಯಜಮಾನನನ್ನು ದೀಕ್ಷೆಯು ಅನುಸರಿಸಿಯೇ ಇರುವುದು. ಅನಂತರ ತ್ರಿಷ್ಟುಪ್‌ಛಂದಸ್ಸು ತಾನು ಸೋಮವನ್ನು ತರುತ್ತೇನೆಂದು ಅಂತರಿಕ್ಷಕ್ಕೆ ನೆಗೆಯಿತು. ಆಗ ತ್ರಿಷ್ಟುಪ್‌ಛಂದಸ್ಸಿನ ಒಂದೊಂದು ಪಾದಕ್ಕೂ ಹದಿಮೂರು ಅಕ್ಷರಗಳಿದ್ದುವು. ತ್ರಿಷ್ಟುಪ್ ಛಂದಸ್ಸೂ ಸಹ ಸೋಮವನ್ನು ತರಲಾರದೆ ಬಳಲಿ ಬೆಂಡಾಗಿ ತನ್ನಲ್ಲಿದ್ದ ಹದಿಮೂರು ಅಕ್ಷರಗಳಲ್ಲಿ ಎರಡಕ್ಷರಗಳನ್ನು ಕಳೆದುಕೊಂಡು

ಹಿಂತಿರುಗಿ ಬಂದಿತು. ಬರುವಾಗ ಯಜ್ಞದಕ್ಷಿಣೆಯನ್ನೂ ತಪಸ್ಸನ್ನೂ ತನ್ನ ಜೊತೆಯಲ್ಲಿ ತಂದಿತು. ಆದುದರಿಂದ ಯಜ್ಞಮಾಡುವಾಗ ಮಾಧ್ಯಂದಿನಸವನದಲ್ಲಿ (ಋತ್ವಿಗ್ಜನರಿಗೆ) ದಕ್ಷಿಣೆಗಳನ್ನು ತಂದುಕೊಡುವರು. ತನ್ನಲ್ಲಿರುವ ವಸ್ತುವನ್ನು ದಾನಮಾಡುವುದೇ ತಪಸ್ಸೆಂದು ಹೇಳಲ್ಪಡುವುದು. ಅನಂತರ ಗಾಯತ್ರೀಛಂದಸ್ಸು ತಾನು ಸೋಮವನ್ನು ತರುತ್ತೇನೆಂದು ಹೊರಟು ಅಂತರಿಕ್ಷಕ್ಕೆ ಶ್ಯೇನಪಕ್ಷಿರೂಪದಿಂದ ಹಾರಿತು. ಆಗ ಗಾಯಿತ್ರೀಛಂದಸ್ಸಿಗೆ ಒಂದೊಂದು ಪಾದಕ್ಕೆ ನಾಲ್ಕು ಅಕ್ಷರಗಳಿದ್ದುವು. ಹೊರಡುವಾಗ ಗಾಯತ್ರಿಯು ತನ್ನ ಜೊತೆಯಲ್ಲಿ ಸಹಾಯಕ್ಕಾಗಿ ಪ್ರಕಾಶ ಮಾನವಾದ ಒಂದು ಹೆಣ್ಣು ಆಡನ್ನು ತೆಗೆದುಕೊಂಡುಹೋಯಿತು. ಈ ಆಡು ಸೋಮವನ್ನು ತರುವಾಗ ಗಾಯತ್ರಿಗೆ ಸಹಾಯಮಾಡಿತು. ಆದುದರಿಂದ ಆಡಿಗೆ ಅಜಾ ಎಂಬ ಹೆಸರು ಪ್ರಸಿದ್ಧವಾಯಿತು. ಅನಂತರ ಗಾಯತ್ರಿಯು ಸ್ವರ್ಗದಲ್ಲಿದ್ದ ಸೋಮವನ್ನೂ ಜಗತೀ ಮತ್ತು ತ್ರಿಷ್ಟುಪ್‌ಛಂದಸ್ಸುಗಳು ಕಳೆದುಕೊಂಡಿದ್ದ ನಾಲ್ಕು ಅಕ್ಷರಗಳನ್ನೂ ಹಿಂದಕ್ಕೆ ತಂದಿತು. ತಾನು ಹಿಂದಕ್ಕೆ ತಂದ ನಾಲ್ಕು ಅಕ್ಷರಗಳೂ ತನಗೆ ಹಿಂದೆ ಇದ್ದ ನಾಲ್ಕು ಅಕ್ಷರಗಳೂ ಸೇರಿ ಗಾಯತ್ರಿಯ ಪ್ರತಿಯೊಂದು ಪಾದಕ್ಕೂ ಎಂಟು ಅಕ್ಷರಗಳಾದುವು (ಜಗತೀ ಛಂದಸ್ಸಿಗೆ ಹನ್ನೆರಡು ಅಕ್ಷರಗಳೂ ತ್ರಿಷ್ಟುಪ್‌ಛಂದಸ್ಸಿಗೆ ೧೧ ಅಕ್ಷರಗಳೂ ಆದವು) ಬ್ರಹ್ಮವಾದಿಗಳು ಹೇಳುವಂತೆ ಇಲ್ಲಿ ಒಂದು ಸಂಶಯವು ತಲೆದೋರು ವುದು. ಗಾಯತ್ರಿಛಂದಸ್ಸು ಎಲ್ಲಾ ಛಂದಸ್ಸುಗಳಿಗಿಂತಲೂ ಬಹಳ ಚಿಕ್ಕದಾಗಿದ್ದರೂ ಯಜ್ಞದಲ್ಲಿ ಹೇಗೆ ಪ್ರಾಮುಖ್ಯತೆ ಯನ್ನು ಪಡೆಯಿತು ? ಎಂದರೆ, ಈ ಗಾಯತ್ರಿಯು ಸೋಮವನ್ನು ತಂದಿತು. ಆದುದರಿಂದ ಯಜ್ಞಕರ್ಮಗಳಲ್ಲಿ ಗಾಯತ್ರಿಗೇ ಪ್ರಾಧಾನ್ಯತೆಯು ಉಂಟಾಗಿರುವುದು ಮತ್ತು ಇದು ಬಹಳ ತೇಜಸ್ಸಿನಿಂದಲೂ ಬೆಳಗುತ್ತಿರುವುದು. ಈ ಗಾಯತ್ರಿಯು ಸ್ವರ್ಗದಿಂದ ಸೋಮವನ್ನು ತರುವಾಗ ಶ್ಯೇನಪಕ್ಷಿಯ ರೂಪವನ್ನು ಧರಿಸಿ ತನ್ನ ಎರಡು ಪಾದಗಳಿಂದ (ಗಾಯತ್ರಿಯ ಎಂಟು ಅಕ್ಷರಗಳ ಮೂರು ಪಾದಗಳಲ್ಲಿ ಎರಡು ಕಾಲುಗಳೆಂದೂ ಮೂರನೆಯದು ಮುಖವೆಂದೂ ಹೇಳಲ್ಪಡುವುದು) ಪ್ರಾತಸ್ಸವನ ಮತ್ತು ಮಾಧ್ಯಂದಿನಸವನ ಎಂಬ ಎರಡು ವಿಧವಾದ ಸವನಗಳನ್ನು ಹಿಡಿದುಕೊಂಡೂ ಮುಖದಿಂದ (ಕೊಕ್ಕಿನಿಂದ) ಮೂರನೆಯದಾದ ತೃತೀಯಸವನವನ್ನು ಕಚ್ಚಿಕೊಂಡೂ ತಂದಿತು. ಕಾಲುಗಳಲ್ಲಿ ಹಿಡಿದಿದ್ದ ಪ್ರಾತಸ್ಸವನ ಮತ್ತು ಮಾಧ್ಯಂದಿನ ಸವನಗಳು ಏನೂ ವ್ಯತ್ಯಾಸವನ್ನು ಹೊಂದದೆ ಹಾಗೆಯೇ ಇದ್ದುದರಿಂದ ಆ ಎರಡು ಸವನಗಳಲ್ಲಿಯೂ ಸೋಮಲತೆಗಳನ್ನು ಜಜ್ಜಿ ಪ್ರಕಾಶಮಾನವಾದ ಮತ್ತು ಶುದ್ಧವಾದ ರಸವನ್ನು ಹಿಂಡಿ ತೆಗೆಯುವರು. ಆದರೆ ಕೊಕ್ಕಿನಿಂದ ತೃತೀಯಸವನವನ್ನು ತರುವಾಗ ಆ ಸೋಮಲತೆಯನ್ನು ಸ್ವಲ್ಪಮಟ್ಟಿಗೆ ಕಚ್ಚಿ ರಸವನ್ನು ಹಿಂಡಿ ಪಾನಮಾಡಿತೆಂದು ಭಾವಿಸುವುದರಿಂದ ತೃತೀಯಸವನ ಕಾಲದಲ್ಲಿ ಹೊಸ ಸೋಮಲತೆಗಳನ್ನು ಉಪಯೋಗಿಸದೆ ಪ್ರಾತಸ್ಸವನ ಮತ್ತು ಮಾಧ್ಯಂದಿನಸವನಗಳಲ್ಲಿ ರಸವನ್ನು ಒಂದಾವರ್ತಿ ಹಿಂಡಿ ತೆಗೆದು ಉಳಿದ ಸಿಪ್ಪೆಯಂತಿರುವ (ಋಜೀಷ) ಜಜ್ಜಿದ ಲತೆಗಳಿಂದಲೇ ಅಳಿದುಳಿದಿರುವ ರಸವನ್ನು ಮತ್ತೊಂದಾವರ್ತಿ ಚೆನ್ನಾಗಿ ಹಿಂಡಿ ತೆಗೆಯುವರು. ಹೀಗೆ ತೆಗೆಯುವ ರಸವು ಹೆಚ್ಚಾಗಿರುವುದಿಲ್ಲವಾದ್ದರಿಂದ ಇದರ ಜೊತೆಗೆ ಆಶಿರ ದ್ರವ್ಯಗಳನ್ನು (ಹಾಲು, ಮೊಸರು, ಹಿಟ್ಟು) ಸೇರಿಸಿ ಪಾನಯೋಗ್ಯವಾಗುವಂತೆ ಮಾಡುವರು.

ಈ ಇತಿಹಾಸದಲ್ಲಿ ಹೇಳಿರುವಂತೆ ತ್ರಿಷ್ಟುಪ್ ಛಂದಸ್ಸು ಸಹಾ ಸ್ವರ್ಗದಿಂದ ಸೋಮವನ್ನು ತರುವುದಕ್ಕಾಗಿ ಪ್ರಯತ್ನಪಟ್ಟಿತು. ಆದುದರಿಂದ ಇಲ್ಲಿ ತ್ರಿಷ್ಟುಪ್ ಛಂದಸ್ಸೂ ಸಹ ಸೋಮದೇವತೆಗೆ ಸ್ವಕೀಯವೆಂದೇ ಹೇಳಲ್ಪಟ್ಟಿದೆ.

**ಶಿಕ್ಷಮಾಣಸ್ಯ ದೇವೇತಿ ಶಿಕ್ಷತೇ ವಾ ಏಷ ಯೋ ಯಜತೇ ಕ್ರತುಂ ದಕ್ಷಂ ವರುಣ ಸಂಶಿಶಾಧೀತಿ ವೀರ್ಯಂ ಪ್ರಜ್ಞಾನಂ ವರುಣ ಸಂಶಿಶಾಧೀತ್ಯೇವ ತದಾಹ ।**

ಸೋಮಲತೆಗಳನ್ನು ಹಗ್ಗದಿಂದ ಕಟ್ಟಿ ವಸ್ತ್ರದಿಂದ ಆಚ್ಛಾದಿಸಿರುವ ಪರ್ಯಂತರ ಅದು ವರುಣನ ಸ್ವಾಧೀನದಲ್ಲಿದ್ದಂತೆ ಭಾವಿಸಲಾಗುವುದು. ಈಗ ಬಂಧನವನ್ನು ತೆಗೆದು ವಸ್ತ್ರವನ್ನು ತೆಗೆಯುವುದರಿಂದ ವರುಣನನ್ನು ಪ್ರಾರ್ಥಿಸಲಾಗಿದೆ. ಹೀಗೆ ಪ್ರಾರ್ಥಿಸುವಾಗ ಎಲೈ ವರುಣನೇ, ಈ ಯಜ್ಞವನ್ನು ಮಾಡುತ್ತಿರುವ ಯಜಮಾನನಿಗೆ ಸರಿಯಾದ ತಿಳುವಳಿಕೆಯನ್ನು ಕೊಡು, ಇಂದ್ರಿಯ ಪಟುತ್ವವನ್ನೂ, ಯಜ್ಞಮಾಡುವ ಸಾಮರ್ಥ್ಯವನ್ನೂ, ಜ್ಞಾನವನ್ನೂ ಕೊಡು ಎಂದು ಹೋತೃವು ಈ ಮಂತ್ರಪಠನದಿಂದ ವರುಣನನ್ನು ಪ್ರಾರ್ಥಿಸುವನು.

**ಯಯಾತಿ ವಿಶ್ವಾ ದುರಿತಾ ತರೇಮ ಸುತರ್ಮಾಣಮಧಿ ನಾವಂ ರುಹೇಮೇತಿ ಯಜ್ಞೋ ವೈ ಸುತರ್ಮಾ ನೌಃ ಕೃಷ್ಣಾಜಿನಂ ವೈ ಸುತರ್ಮಾ ನೌರ್ವಾಗ್ವೈ ಸುತರ್ಮಾ ನೌರ್ವಾಚಮೇವ ತದಾರುಹ್ಯ ತಯಾ ಸ್ವರ್ಗಂ ಲೋಕಮಭಿ ಸಂತರತಿ ।**

ಇಲ್ಲಿ ನಾವೆಯೆಂದರೆ ಯಜ್ಞವು; ಯಜ್ಞದಲ್ಲಿ ದೀಕ್ಷೆಗಾಗಿ ಉಪಯೋಗಿಸುವ ಕೃಷ್ಣಾಜಿನವೇ ನಾವೆಯು; ಮಂತ್ರರೂಪವಾದ ವಾಕ್ಯಗಳೇ ನಾವೆಯು; ಇಂತಹ ನಾವೆಯನ್ನೇರಿ ಎಂದರೆ ನಾವು ಯಜ್ಞವನ್ನು ಪ್ರಾರಂಭಿಸಿ ಅದರಲ್ಲಿ ದೀಕ್ಷೆಯನ್ನು ಹೊಂದಿ ಸಮಯಾನುಸಾರವಾದ ಮಂತ್ರಗಳನ್ನು ಪಠಿಸುತ್ತಾ ಯಜ್ಞಮಾಡುವುದರಿಂದ ಪಾಪಗಳನ್ನೆಲ್ಲಾ ಕಳೆದುಕೊಂಡು ಸ್ವರ್ಗಲೋಕವನ್ನು ಪಡೆಯುವಂತಾಗಲಿ ಎಂದಭಿಪ್ರಾಯವು. ಇಂತಹ ಅರ್ಥವುಳ್ಳ ಋಕ್ಕನ್ನು ಪಠಿಸುವುದರಿಂದ ಯಜ್ಞಮಾಡುವ ಯಜಮಾನನು ಸ್ವರ್ಗವನ್ನು ಪಡೆಯುವನು.

**ತಾ ಏತಾ ಅಷ್ಟಾವನ್ವಾಹ ರೂಪಸಮೃದ್ಧಾಃ ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣಮೃಗಭಿವದತಿ**

ಈ ಎಂಟು ಋಕ್ಕುಗಳೂ ಸೇರಿ ಸೋಮಪ್ರವಾಹಣವೆಂಬ ಕರ್ಮವು ಪೂರ್ತಿಯಾಗುವುದು. ಕರ್ಮಪೂರ್ತಿಯಾಗುವ ಋಕ್ಕುಗಳನ್ನು ಪಠಿಸುವುದರಿಂದ ಯಜ್ಞವು ಸಾಂಗವಾಗಿ ನೆರವೇರಿದಂತಾಗುವುದು ಮತ್ತು ಆಯಾ ಕರ್ಮಕ್ಕೆ ಸಂಬಂಧಪಟ್ಟ ಮತ್ತು ಅದೇ ಅರ್ಥವನ್ನೊಳಗೊಂಡ ಋಕ್ಕುಗಳನ್ನು ಪಠಿಸುವುದರಿಂದಲೇ ಆಯಾ ಕರ್ಮಗಳು ಪೂರ್ತಿಯಾಗಿ ಯಜ್ಞವು ಸಾಂಗವಾಗಿ ನೆರವೇರುವುದು.

**ತಾಸಾಂ ತ್ರಿಃ ಪ್ರಥಮಾಮನ್ವಾಹ ತ್ರಿರುತ್ತಮಾಂ ತಾ ದ್ವಾದಶ ಸಂಪದ್ಯಂತೇ ದ್ವಾದಶ ವೈ ಮಾಸಾಃ ಸಂವತ್ಸರಃ ಸಂವತ್ಸರಃ ಪ್ರಜಾಪತಿಃ । ಪ್ರಜಾಪತ್ಯಾಯತನಾಭಿರೇವಾಭೀ ರಾಧ್ನೋತಿ ಯ ಏವಂ ವೇದ । ತ್ರಿಃ ಪ್ರಥಮಾಂ ತ್ರಿರುತ್ತಮಾಮನ್ವಾಹ ಯಜ್ಞಸ್ಯೈವ ತದ್ಬರ್ಸೌ ನಹ್ಯತಿ ಸ್ಥೇಮ್ನೇ ಬಲಾಯಾವಿಸ್ರಂಸಾಯ ॥**

(ಐ ಬ್ರಾ. ೩-೧೩)

ಈ ಎಂಟು ಋಕ್ಕುಗಳನ್ನು ಪಠಿಸುವಾಗ ಮೊದಲನೆಯ ಋಕ್ಕನ್ನೂ ಕೊನೆಯ ಋಕ್ಕನ್ನೂ ಮೂರು ಮೂರಾವರ್ತಿ ಪಠಿಸುವನು. ಇದರಿಂದ ಒಟ್ಟು ಹನ್ನೆರಡು ಋಕ್ಕುಗಳನ್ನು ಪಠಿಸಿದಂತಾಗುವುದು. ಒಂದು ಸಂವತ್ಸರದಲ್ಲಿ ಹನ್ನೆರಡು ಮಾಸಗಳಿರುವುವು. ಸಂವತ್ಸರವು ಪ್ರಜಾಪತಿಸ್ವರೂಪವು. ಮೇಲೆ ಹೇಳಿದ ಈ ಋಕ್ಕುಗಳೂ ಪ್ರಜಾಪತಿಯಲ್ಲೇ ನೆಲಸಿರುವುವು. ಇದನ್ನು ತಿಳಿದವನು ಈ ಋಕ್ಕುಗಳನ್ನು ಪಠಿಸುವುದರಿಂದ ಆಯಾ ಕಾರ್ಯಗಳಲ್ಲಿ ಜಯಶೀಲನಾಗುವನು. ಕರ್ಮದ ಆದಿಯಲ್ಲಿಯೂ ಕೊನೆಯಲ್ಲಿಯೂ ಮೊದಲನೆಯ ಮತ್ತು ಕೊನೆಯ ಋಕ್ಕುಗಳನ್ನು ಮೂರು

ಮೂರಾವರ್ತಿ ಪಠಿಸುವುದರಿಂದ ಯಜ್ಞವೆಂಬ ಕರ್ಮವು ಮಂತ್ರಗಳೆಂಬ ಹಗ್ಗಗಳಿಂದ ಬಲವಾಗಿ ಕಟ್ಟಲ್ಪಟ್ಟು ಜಾರಿ ಹೋಗದಂತೆ ದೃಢವಾಗಿರುವಂತಾಗುವುದು.

ಇಲ್ಲಿಗೆ ಸೋಮಪ್ರವಾಹಣವೆಂಬ ಕರ್ಮವು ಸಮಾಪ್ತವು,

## ಉತ್ತರಪೀಠಿಕೆ

ಇದುವರೆಗೂ ಸೋಮಪ್ರವಹಣಸಂಬಂಧವಾದ ಋಕ್ಕುಗಳನ್ನು ವಿವರಿಸಿ ಈ ಸೋಮವನ್ನು ಗಾಡಿಯಿಂದ ಇಳಿಸುವ ಸಂದರ್ಭದಲ್ಲಿ ನಡೆಸಬೇಕಾದ ಕ್ರಮವನ್ನು ವಿವರಿಸಿರುವರು—

**ಅನ್ಯತರೋಽನಡ್ವಾನ್ಯುಕ್ತಃ ಸ್ಯಾದನ್ಯತರೋ ವಿಮುಕ್ತೋಽಥ ರಾಜಾನಮುಪಾವಹರೇಯುಃ ।**

ರಾಜನಾದ ಸೋಮದೇವನನ್ನು ಕ್ರಯಪ್ರದೇಶದಿಂದ ಪ್ರಾಚೀನವಂಶಪ್ರದೇಶಕ್ಕೆ ತಂದ ಗಾಡಿಗೆ ಕಟ್ಟಿರತಕ್ಕ ಎರಡು ಎತ್ತುಗಳಲ್ಲಿ ಒಂದನ್ನು ಮಾತ್ರ ಬಿಚ್ಚಿ ಇನ್ನೊಂದನ್ನು ಬಿಚ್ಚದೆ ಹಾಗೆಯೇ ಬಿಟ್ಟು ಸೋಮನನ್ನು ಋತ್ವಿಗ್ಜನರು ಗಾಡಿಯಿಂದ ಕೆಳಕ್ಕೆ ಇಳುಹಿಸಿ ಉತ್ತರವೇದಿಯ ಬಳಿಗೆ ತೆಗೆದುಕೊಂಡು ಹೋಗಬೇಕು. ಇದು ವಿಧಿಯು.

**ಯದುಭಯೋರ್ವಿಮುಕ್ತಯೋರುಪಾವಹರೇಯುಃ ಪಿತೃದೇವತ್ಯಂ ರಾಜಾನಂ ಕುರ್ಯುಃ ।**

ಮೇಲೆ ಹೇಳಿದ ವಿಧಿಯಂತೆ ನಡೆಸದೆ ಗಾಡಿಗೆ ಕಟ್ಟಿರುವ ಎರಡು ಎತ್ತುಗಳನ್ನೂ ಬಿಚ್ಚಿಬಿಟ್ಟು ಅನಂತರ ಸೋಮವನ್ನು ಉತ್ತರವೇದಿಗೆ ತೆಗೆದುಕೊಂಡು ಹೋದರೆ ಆಗ ಸೋಮವನ್ನು ಪಿತೃದೇವತೆಗಳು ಸ್ವೀಕರಿಸುವರು. ಸೋಮವು ದೇವಯೋಗ್ಯವಾಗಿ ಯಜ್ಞಾರ್ಹವಾಗುವುದಿಲ್ಲ.

**ಯದ್ಯುಕ್ತಯೋರಯೋಗಕ್ಷೇಮಃ ಪ್ರಜಾ ವಿಂದೇತ್ತಾಃ ಪ್ರಜಾಃ ಪರಿಪ್ಲವೇರನ್ । ಯೋಽನಡ್ವಾನ್ವಿಮುಕ್ತಸ್ತಚ್ಛಾಲಾಸದಾಂ ಪ್ರಜಾನಾಂ ರೂಪಂ ಯೋ ಯುಕ್ತಸ್ತಚ್ಚಕ್ರಿಯಾಣಾಂ ತೇ ಯೇ ಯುಕ್ತೋಽನ್ಯೇ ವಿಮುಕ್ತೋಽನ್ಯ ಉಪಾವಹರಂತ್ಯುಭಾವೇವ ತೇ ಕ್ಷೇಮಯೋಗೌ ಕಲ್ಪಯಂತಿ ।**

ಒಂದು ವೇಳೆ ಎರಡು ಎತ್ತುಗಳನ್ನೂ ಗಾಡಿಯಿಂದ ಬಿಚ್ಚದೆ ಹಾಗೆಯೇ ಕಟ್ಟಿರುವಾಗ ಸೋಮವನ್ನು ಇಳುಹಿಸಿ ತೆಗೆದುಕೊಂಡುಹೋದರೆ ಆಗ ಧನಾದಿಗಳನ್ನು ಸಂಪಾದಿಸುವ ಯೋಗವೂ (ಅದೃಷ್ಟವೂ) ಸಂಪಾದಿಸಿದ್ದನ್ನು ಕಳೆದುಕೊಳ್ಳದಂತೆ ಕಾಪಾಡಿ ಇಟ್ಟುಕೊಳ್ಳುವ ಯೋಗವೂ ನಾಶವಾಗುವುದಲ್ಲದೆ ಯಜಮಾನನ ಪುತ್ರಾದಿಗಳೂ ನಾನಾಕಡೆಗೆ ಹೊರಟು ಹೋಗುವ ಸಂಭವವೂ ಉಂಟಾಗುವುದು. ಗಾಡಿಗೆ ಕಟ್ಟಿರುವ ಎರಡು ಎತ್ತುಗಳಲ್ಲಿ ಗಾಡಿಯಿಂದ ಬಿಚ್ಚಿರುವ ಒಂದು ಎತ್ತು ಯಜ್ಞಶಾಲೆ ಮತ್ತು ಗೃಹದಲ್ಲಿ ಇರುವ ಪುತ್ರಾದಿಗಳ ರೂಪವಾಗಿರುವುದು. ಗಾಡಿಯಿಂದ ಬಿಚ್ಚದೇ ಇರುವ ಎತ್ತು ಯಜ್ಞಶಾಲೆಯಲ್ಲಿ ನಡೆಯುತ್ತಿರುವ ಲೌಕಿಕ ಮತ್ತು ವೈದಿಕ ಕರ್ಮಗಳ ರೂಪವಾಗಿರುವುದು. ಇಲ್ಲಿ ಚಕ್ರಿ ಎಂಬ ಶಬ್ದಕ್ಕೆ ಚಕ್ರಗಳುಳ್ಳ ಗಾಡಿಯು ಎಂದರ್ಥವು. ಆ ಗಾಡಿಯಲ್ಲಿ ಕುಳಿತು ಪ್ರಯಾಣಮಾಡುವ ಯಜಮಾನನ ಪ್ರಜಾರೂಪರಾದ ಪುತ್ರಪೌತ್ರಾದಿಗಳಿಗೆ ಚಕ್ರಿಯಾಃ ಎಂದು ಹೆಸರು ಯಜ್ಞಮಾಡುವ ಯಜಮಾನರಲ್ಲಿ

ಬುದ್ಧಿವಂತರಾದವರು ಸೋಮಾವರೋಹಣಕಾಲದಲ್ಲಿ ಒಂದು ಎತ್ತನ್ನು ಬಿಚ್ಚಿ, ಮತ್ತೊಂದನ್ನು ಹಾಗೆಯೇ ಬಿಟ್ಟು, ಸೋಮಾವರೋಹಣವನ್ನು ಮಾಡುವುದರಿಂದ ಹಿಂದೆ ಹೇಳಿದಂತೆ ಧನಸಂಪಾದನೆ ಮತ್ತು ಅದರ ಯೋಗಕ್ಷೇಮ ಇವೆರಡನ್ನೂ ಗಳಿಸುವರು. ಇದೇ ವಿಷಯದಲ್ಲಿ ತೈತ್ತಿರೀಯಸಂಹಿತೆಯಲ್ಲಿ ಹೇಳಿರುವುದು ಗಮನಾರ್ಹವಾಗಿದೆ.

**ಯದುಭೌ ವಿಮುಚ್ಯಾತಿಥ್ಯಂ ಗೃಹ್ಣೀಯಾದ್ಯಜ್ಞಂ ವಿಚ್ಛಿಂದ್ಯಾದ್ಯದುಭಾವವಿಮುಚ್ಯ ಯಥಾನಾಗತಾಯ ತಿಥ್ಯಂ ಕ್ರಿಯತೇ ತಾದೃಗೇವ ತದ್ವಿಮುಕ್ತೋಽನ್ಯೋಽನಡ್ವಾನ್ಭವತ್ಯವಿಮುಕ್ತೋಽನ್ಯೋಽಥಾತಿಥ್ಯಂ ಗೃಹ್ಣಾತಿ ಯಜ್ಞಸ್ಯ ಸಂತತ್ಯೈ ।**

(ತೈ. ಸಂ. ೬-೨-೧-೧)

ಸೋಮವನ್ನು ತುಂಬಿ ತಂದ ಗಾಡಿಗೆ ಕಟ್ಟಿರುವ ಎರಡು ಎತ್ತುಗಳನ್ನೂ ಬಿಚ್ಚಿ ಸೋಮವನ್ನು ಇಳುಹಿದರೆ ಸೋಮರಾಜನು ಆತಿಥ್ಯವನ್ನು ಸ್ವೀಕರಿಸುವುದಿಲ್ಲ ಮತ್ತು ಹಾಗೆಮಾಡುವುದರಿಂದ ಯಜ್ಞವಿಚ್ಛಿತ್ತಿಯಾಗಿ ಯಜ್ಞವು ನೆರವೇರದೆ ಮಧ್ಯದಲ್ಲಿಯೇ ನಿಂತುಹೋಗುವುದು. ಎರಡು ಎತ್ತುಗಳನ್ನೂ ಬಿಚ್ಚದೆ ಗಾಡಿಯಲ್ಲಿಯೇ ಕಟ್ಟಿ ಹಾಗೆಯೇ ನಿಲ್ಲಿಸಿದ್ದರೆ ಸೋಮರಾಜನು ಮನೆಗೆ ಅತಿಥಿಸತ್ಕಾರಕ್ಕಾಗಿ ಬಂದಂತೆಯೇ ಆಗುವುದಿಲ್ಲ. ಹಾಗೆಯೇ ಹೊರಟುಹೋದಂತೆ ಆಗುವುದು. ಆದ್ದರಿಂದ ಎರಡು ಎತ್ತುಗಳನ್ನೂ ಬಿಚ್ಚದೆ ಕಟ್ಟಿರುವುದೂ ಸರಿಯಲ್ಲ. ಹಾಗಾದರೆ ಯಜ್ಞವು ಸಾಂಗವಾಗಿ ನೆರವೇರುವುದಕ್ಕೆ ಏನು ಮಾಡಬೇಕು? ಎಂದರೆ, ಗಾಡಿಯಿಂದ ಒಂದು ಎತ್ತನ್ನು ಬಿಚ್ಚಬೇಕು. ಇನ್ನೊಂದು ಎತ್ತನ್ನು ಬಿಚ್ಚದೆ ಗಾಡಿಗೆ ಕಟ್ಟಿಯೇ ಇರಬೇಕು. ಹೀಗೆ ಮಾಡಿದರೆ ಸೋಮರಾಜನು ಯಜ್ಞಭೂಮಿಗೆ ಬಂದು ಯಜಮಾನನ ಆತಿಥ್ಯವನ್ನು ಸ್ವೀಕರಿಸುವನು. ಯಜ್ಞವೂ ಯಾವ ವಿಚ್ಛಿತ್ತಿಯೂ ಇಲ್ಲದೆ ಸಮಾಪ್ತಿಯನ್ನೈದುವುದು ಎಂದಭಿಪ್ರಾಯವು.

ಸೋಮಾಪರೋಹಣಕರ್ಮವನ್ನು (ಸೋಮವನ್ನು ಗಾಡಿಯಿಂದ ಕೆಳಕ್ಕೆ ಇಳಿಸುವುದು) ಈಶಾನ್ಯದಿಕ್ಕಿನಲ್ಲಿ ಮಾಡಬೇಕೆಂಬ ವಿಷಯದಲ್ಲಿ ಒಂದು ಪೂರ್ವೇತಿಹಾಸವನ್ನು ಉದಾಹರಿಸಿ ವಿವರಿಸುವರು—

**ದೇವಾಸುರಾ ವಾ ಏಷು ಲೋಕೇಷು ಸಮಯತಂತ ತ ಏತಸ್ಯಾಂ ಪ್ರಾಚ್ಯಾಂ ದಿಶ್ಯಯತಂತ ತಾಂಸ್ತತೋಽಸುರಾ ಅಜಯಂಸ್ತೇ ದಕ್ಷಿಣಸ್ಯಾಂ ದಿಶ್ಯಯತಂತೆ ತಾಂಸ್ತತೋಽಸುರಾ ಅಜಯಂಸ್ತೇ ಪ್ರತೀಚ್ಯಾಂ ದಿಶ್ಯಯತಂತ ತಾಂಸ್ತತೋಽಸುರಾ ಅಜಯಂಸ್ತ ಉದೀಚ್ಯಾಂ ದಿಶ್ಯಯತಂತ ತಾಂಸ್ತತೋಽಸುರಾ ಅಜಯಂಸ್ತ ಉದಿಚ್ಯಾಂ ಪ್ರಾಚ್ಯಾಂ ದಿಶ್ಯಯತಂತ ತೇ ತತೋ ನ ಪರಾಜಯಂತ ಸೈಷಾ ದಿಗಪರಾಜಿತಾ ತಸ್ಮಾದೇತಸ್ಯಾಂ ದಿಶಿ ಯತೇತ ವಾ ಯಾತಯೇದ್ವೇಶ್ವರೋ ಹಾನೃಣಾಕರ್ತೋಃ ।**

ಹಿಂದೆ ಈ ಲೋಕದಲ್ಲಿ ದೇವತೆಗಳೂ ಅಸುರರೂ ಯುದ್ಧಮಾಡುತ್ತಿದ್ದರು. ಅವರು ಪೂರ್ವದಿಕ್ಕಿನಲ್ಲಿ ಯುದ್ಧಮಾಡಿದರು. ಆ ಯುದ್ಧದಲ್ಲಿ ಅಸುರರು ದೇವತೆಗಳನ್ನು ಸೋಲಿಸಿದರು; ಅನಂತರ ದಕ್ಷಿಣದಿಕ್ಕಿನಲ್ಲಿ ಯುದ್ಧಮಾಡಿದರು. ಅಲ್ಲಿಯೂ ಅಸುರರೇ ಗೆದ್ದರು; ಅನಂತರ ಪಶ್ಚಿಮದಿಕ್ಕಿನಲ್ಲಿ ಯುದ್ಧಮಾಡಿದರು. ಅಲ್ಲಿಯೂ ಅಸುರರಿಗೇ ಜಯವಾಯಿತು; ಅನಂತರ ಉತ್ತರದಿಕ್ಕಿನಲ್ಲಿ ಯುದ್ಧಮಾಡಿದರು. ಅಲ್ಲಿಯೂ ಅಸುರರು ದೇವತೆಗಳನ್ನು ಸೋಲಿಸಿ ಜಯಶಾಲಿಗಳಾದರು; ಬಳಿಕ ಅವರು ಉತ್ತರದಿಕ್ಕಿಗೂ, ಪೂರ್ವದಿಕ್ಕಿಗೂ ಮಧ್ಯದಲ್ಲಿರುವ ಐಶಾನ್ಯದಿಕ್ಕಿನಲ್ಲಿ

ಯುದ್ಧಮಾಡಿದರು. ಅಲ್ಲಿ ದೇವತೆಗಳಿಗೆ ಸೋಲುಂಟಾಗಲಿಲ್ಲ, ಜಯವೇ ಆಯಿತು. ಆದುದರಿಂದ (ದೇವತೆಗಳಿಗೆ ಸೋಲಾಗದ್ದರಿಂದ) ಐಶಾನ್ಯದಿಕ್ಕಿಗೆ **ಅಪರಾಜಿತಾ** ಎಂದು ಹೆಸರಾಯಿತು. ಆದುದರಿಂದ ಯಾವ ಒಳ್ಳೆಯ ಕಾರ್ಯವನ್ನು ಮಾಡಬೇಕಾದರೂ ಅದನ್ನು ಆ ದಿಕ್ಕಿನಲ್ಲಿ ಎಂದರೆ ಐಶಾನ್ಯದಿಕ್ಕಿನಲ್ಲಿಯೇ ಮಾಡಬೇಕು. ಅಥವಾ ಮಾಡಲು ಪ್ರಯತ್ನಿಸಬೇಕು. ಹೀಗೆ ಮಾಡುವುದರಿಂದ ಯಜಮಾನನು ತನ್ನ ಋಣವನ್ನು ಪರಿಹಾರಮಾಡಿಕೊಂಡು ಅದರಿಂದ ವಿಮುಕ್ತನಾಗುವನು.

[ಇಲ್ಲಿ ಋಣವೆಂದರೇನು? ಅದರ ಪರಿಹಾರವು ಯಾವುದು ಎಂಬುದರ ವಿಷಯದಲ್ಲಿ ತೈತ್ತಿರೀಯ ಸಂಹಿತೆಯಲ್ಲಿ ಸ್ಪಷ್ಟವಾದ ವರ್ಣನೆ ಇದೆ—

**ಜಾಯಮಾನೋ ವೈ ಬ್ರಾಹ್ಮಣಸ್ತ್ರಿಭಿರ್ಋಣವಾ ಜಾಯತೇ ಬ್ರಹ್ಮಚರ್ಯೇಣ ಋಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯ ಏಷ ವಾ ಅನೃಣೋ ಯಃ ಪುತ್ರೀ ಯಜ್ವಾ ಬ್ರಹ್ಮಚಾರಿವಾಸೀ ।**

(ತೈ. ಸಂ. ೬-೩-೧೦-೫)

ಎಂದರೆ ದ್ವಿಜನಾದವನು (ಬ್ರಹ್ಮ ಕ್ಷತ್ರಿಯ ವೈಶ್ಯ) ಹುಟ್ಟುವಾಗಲೇ ಋಷಿಋಣ, ದೇವಋಣ, ಪಿತೃಋಣ ಎಂಬ ಮೂರು ವಿಧವಾದ ಋಣಗಳಿಂದ ಸಹಿತನಾಗಿಯೇ ಹುಟ್ಟುವನು. ಈ ಋಣಗಳು ತೀರಬೇಕಾದರೆ—ಉಪನಯನಾನಂತರ ಗುರುಕುಲದಲ್ಲಿ ಬ್ರಹ್ಮಚರ್ಯಾಶ್ರಮದಿಂದ ವೇದಾಧ್ಯಯನವನ್ನು ಮಾಡಿದರೆ ಋಷಿಋಣವು ತೀರುವುದು; ಅನಂತರ ವಿವಾಹವನ್ನು ಮಾಡಿಕೊಂಡು ಗಾರ್ಹಸ್ಥ ಆಶ್ರಮವನ್ನು ಕೈಗೊಂಡು ಯಜ್ಞಾದಿಗಳನ್ನು ಮಾಡಿ ದೇವತೆಗಳನ್ನು ಆರಾಧಿಸುವುದದರಿಂದ ದೇವಋಣವು ತೀರುವುದು; ವಿವಾಹಿತ ಸ್ತ್ರೀಯಲ್ಲಿ ಧರ್ಮಪ್ರಜೋತ್ಪಾದನೆಗಾಗಿ ಪುತ್ರಸಂತಾನವನ್ನು ಪಡೆಯುವುದರಿಂದ ಪಿತೃಋಣವು ತೀರುವುದು. ಈ ವಿಧವಾದ ಮೂರು ಋಣಗಳಿಂದ ಯಜಮಾನನು ಮುಕ್ತನಾಗುವನೆಂದು ಇಲ್ಲಿ ಹೇಳಿದೆ.]

ಈಗ ಸೋಮರಾಜನ ಜಯಕ್ಕೆ ಕಾರಣವನ್ನು ಹೇಳುವರು—

**ತೇ ದೇವಾ ಅಬ್ರುವನ್ನರಾಜತಯಾ ವೈ ನೋ ಜಯಂತಿ ರಾಜಾನಂ ಕರವಾಮಹಾ ಇತಿ ತಥೇತಿ ತೇ ಸೋಮಂ ರಾಜಾನಮಕುರ್ವಂಸ್ತೇ ಸೋಮೇನ ರಾಜ್ಞಾ ಸರ್ವಾ ದಿಶೋಽಜಯನ್ನೇಷ ವೈ ಸೋಮರಾಜಾ ಯೋ ಯಜತೇ ಪ್ರಾಚಿ ತಿಷ್ಠತ್ಯಾದದತಿ ತೇನ ಪ್ರಾಚೀಂ ದಿಶಂ ಜಯತಿ ತಂ ದಕ್ಷಿಣಾ ಪರಿವಹಂತಿ ತೇನ ದಕ್ಷಿಣಾಂ ದಿಶಂ ಜಯತಿ ತಂ ಪ್ರತ್ಯಂಚಮಾವರ್ತಯಂತಿ ತೇ ಪ್ರತೀಚೀಂ ದಿಶಂ ಜಯತಿ ತಮುದೀಚಸ್ತಿಷ್ಠತ ಉಪಾವಹರಂತಿ ತೇನೋದೀಚೀಂ ದಿಶಂ ಜಯತಿ ಸೋಮೇನ ರಾಜ್ಞಾ ಸರ್ವಾ ದಿಶೋ ಜಯತಿ ಯ ಏವಂ ವೇದ ॥**

(ಐ. ಬ್ರಾ. ೩-೧೪)

ದೇವತೆಗಳು ಪರಸ್ಪರವಾಗಿ ಹೀಗೆ ಮಾತನಾಡಿಕೊಂಡರು—ನಮಗೆ ಯುದ್ಧಾದಿಗಳಲ್ಲಿ ಮುಂದಾಳುತ್ವವನ್ನು ವಹಿಸಿ ಜಯವನ್ನು ದೊರಕಿಸಬಲ್ಲ ರಾಜನಿಲ್ಲ. ಆದುದರಿಂದಲೇ ಪೂರ್ವಾದಿದಿಕ್ಕುಗಳಲ್ಲಿ ನಮಗೆ ಪರಾಜಯವುಂಟಾಯಿತು. ಆದುದರಿಂದ ಒಬ್ಬ ರಾಜನನ್ನು ಗೊತ್ತುಮಾಡಿಕೊಳ್ಳೋಣ ಎಂದು ನಿಶ್ಚಯಿಸಿ ಸೋಮದೇವನನ್ನು ತಮಗೆ ರಾಜನಾಗಿರು.

ವಂತೆ ಆರಿಸಿಕೊಂಡರು. ಅದರಿಂದ ದೇವತೆಗಳಿಗೆ ಪೂರ್ವಾದಿದಿಕ್ಕುಗಳಲ್ಲಿ ಜಯವು ಲಭಿಸಿತು. ಹೀಗಿರುವುದರಿಂದ ಯಾವ ಯಜಮಾನನು ಸೋಮಯಾಗವನ್ನು ಮಾಡುವನೋ ಅವನಿಗೆ ಸೋಮನೇ ರಾಜನು. ಈ ಸೋಮರಾಜನ ಪ್ರಭಾವದಿಂದ ಯಜಮಾನನು ಎಲ್ಲಾ ಕಡೆಗಳಲ್ಲಿಯೂ ಜಯವನ್ನೇ ಪಡೆಯುವನು. ಅದು ಹೇಗೆಂದರೆ, ಸೋಮವನ್ನು ಗಾಡಿಯಲ್ಲಿ ತರುವಾಗ ಋತ್ವಿಜರು ಗಾಡಿಯನ್ನು ಪೂರ್ವದಿಕ್ಕಿಗೆ ಅಭಿಮುಖವಾಗಿ ನಿಲ್ಲಿಸಿ ಅದರಲ್ಲಿ ಸೋಮವನ್ನು ಇಡುವರು. ಪೂರ್ವಾಭಿಮುಖವಾಗಿರುವ ಗಾಡಿಯಲ್ಲಿ ಸೋಮನಿರುವುದರಿಂದ ಯಜಮಾನನು ಪೂರ್ವದಿಕ್ಕಿನಲ್ಲಿ ಜಯವನ್ನು ಹೊಂದುವನು ; ಅನಂತರ ಸೋಮವನ್ನು ತರುವಾಗ ಸೋಮವಿರುವ ಗಾಡಿಯನ್ನು ದಕ್ಷಿಣಾಭಿಮುಖವಾಗಿ ತಿರುಗಿಸುವರು. ಆಗ ಸೋಮನು ದಕ್ಷಿಣಾಭಿಮುಖನಾಗಿರುವುದರಿಂದ ಯಜಮಾನನಿಗೆ ದಕ್ಷಿಣದಿಕ್ಕಿನಲ್ಲಿಯೂ ಜಯವು ಲಭಿಸುವುದು ; ಅನಂತರ ಆ ಗಾಡಿಯನ್ನು ಪಶ್ಚಿಮದಿಕ್ಕಿಗೆ ತಿರುಗಿಸುವುದರಿಂದ ಪಶ್ಚಿಮದಿಕ್ಕಿನಲ್ಲಿಯೂ ಜಯವುಂಟಾಗುವುದು ; ಬಳಿಕ ಆ ಗಾಡಿಯನ್ನು ಉತ್ತರದಿಕ್ಕಿಗೆ ತಿರುಗಿಸುವುದರಿಂದ ಉತ್ತರದಿಕ್ಕಿನಲ್ಲಿಯೂ ಜಯವು ಲಭಿಸುವುದು. ಅನಂತರ ಆ ಗಾಡಿಯು ಉತ್ತರ ಮತ್ತು ಪೂರ್ವದಿಕ್ಕುಗಳ ಮಧ್ಯದಲ್ಲಿ ಬಂದು ನಿಂತಾಗ ಅಲ್ಲಿಂದ (ಈಶಾನ್ಯದಿಕ್ಕಿನಿಂದ) ಸೋಮವನ್ನು ಗಾಡಿಯಿಂದ ಇಳುಹಿಸಿ ಉತ್ತರವೇದಿಗೆ ಒಯ್ಯುವರು. ಎಂದರೆ ಪ್ರಾಚೀನವಂಶದ ಪಶ್ಚಿಮದಿಕ್ಕಿನಲ್ಲಿ ಬಿಟ್ಟಿದ್ದ ಗಾಡಿಯನ್ನು ಯಜ್ಞಶಾಲೆಗೆ ಪೂರ್ವದಿಕ್ಕಿನಲ್ಲಿರುವ ಉತ್ತರವೇದಿಗೆ ತರುವುದಕ್ಕಾಗಿ ಪೂರ್ವಾಭಿಮುಖನಾಗಿ ತಿರುಗಿಸಿ ಅನಂತರ ಯಜ್ಞಶಾಲೆಯನ್ನು ಬಳಸಿ ಬರುವಾಗ ದಕ್ಷಿಣದಿಕ್ಕಿಗೂ ಅನಂತರ ಪಶ್ಚಿಮದಿಕ್ಕಿಗೂ ಅನಂತರ ಉತ್ತರದಿಕ್ಕಿಗೂ ತಂದು ಐಶಾನ್ಯದಿಕ್ಕಿಗೆ ಬಂದಾಗ ಸೋಮವನ್ನು ಗಾಡಿಯಿಂದ ಇಳಿಸುವರು ಎಂದಭಿಪ್ರಾಯವು. ಈ ವಿಷಯವನ್ನು ಆಪಸ್ತಂಬಮಹರ್ಷಿಗಳು—**ಸಂಜಗ್ರಾಹ ಪ್ರತ್ಯವಸ್ತನುವಸ್ಯತ ಇತಿ ಪ್ರಾಂಚೋಽಭಿಪ್ರವಾಯ ದಕ್ಷಿಣಮಾವರ್ತತೆ ಇತ್ಯಗ್ರೇಣ ಪ್ರಾಗ್ವಂಶಂ ಪ್ರಾಗೀಷಮುದಗೀಷಂ ವಾ ಶಕಟಮವಸ್ಥಾಪ್ಯ**—ಎಂಬ ವಾಕ್ಯದಿಂದ ವಿವರಿಸಿರುವರು. ಈ ವಿಷಯವನ್ನು ತಿಳಿದವನು ಎಲ್ಲಾ ದಿಕ್ಕುಗಳನ್ನೂ ಜಯಿಸುವನು.

ಇಲ್ಲಿಗೆ ಉತ್ತರಪೀಠಿಕೆಯು ಸಮಾಪ್ತವು.

ಸೋಮಪ್ರವಾಹಣವೆಂಬ ಕರ್ಮದ ವಿವರಣೆಯು ಸಮಾಪ್ತವು.

॥ ಸಂಹಿತಾಪಾಠಃ ॥

ದ್ಯಾವಾ ನಃ ಪೃಥಿವೀ ಇಮಂ ಸಿಧ್ರಮದ್ಯ ದಿವಿಸ್ಪೃಶಂ ।
ಯಜ್ಞಂ ದೇವೇಷು ಯಚ್ಛತಾಂ ॥ ೨೦ ॥

॥ ಪದಪಾಠಃ ॥

ದ್ಯಾವಾ । ನಃ । ಪೃಥಿವೀ ಇತಿ । ಇಮಂ । ಸಿಧ್ರಂ । ಅದ್ಯ । ದಿವಿಽಸ್ಪೃಶಂ ।
ಯಜ್ಞಂ । ದೇವೇಷು । ಯಚ್ಛತಾಂ ॥ ೨೦ ॥

॥ ಸಾಯಣಭಾಷ್ಯಂ ॥

**ದ್ಯಾವಾ ದ್ಯೌಃ ಪೃಥಿವೀ ಚೋಭೇ ಸಿಧ್ರಂ ಸ್ವರ್ಗಾದೇಃ ಸಾಧಕಂ ದಿವಿಸ್ಪೃಶಂ ದೇವಾನ್ ಗಚ್ಛಂತಂ ನೋಽಸ್ಮಾಕಮಿಮಂ ಯಜ್ಞಂ ದೇವೇಷು ಯಚ್ಛತಾಂ । ನಿಯಚ್ಛತಾಂ ॥**

॥ ಪ್ರತಿಪದಾರ್ಥ ॥

**ದ್ಯಾವಾ ಪೃಥಿವೀ**—ದ್ಯಾವಾಪೃಥಿವಿಗಳು । **ಸಿಧ್ರಂ**—ಸ್ವರ್ಗಸಾಧಕವಾದುದೂ । **ದಿವಿಸ್ಪೃಶಂ**—ಸ್ವರ್ಗಾಭಿಮುಖವಾಗಿ ದೇವತೆಗಳನ್ನುದ್ದೇಶಿಸಿ ಹೋಗತಕ್ಕದ್ದೂ ಆದ । **ನಃ ಇಮಂ ಯಜ್ಞಂ**—ನಮ್ಮ ಈ ಯಜ್ಞವನ್ನು । **ದೇವೇಷು**—ದೇವತೆಗಳಲ್ಲಿ । **ಯಚ್ಛತಾಂ**—ಅರ್ಪಿಸಲಿ ।

॥ ಭಾವಾರ್ಥ ॥

ಸ್ವರ್ಗಸಾಧಕವಾದುದೂ, ಸ್ವರ್ಗಾಭಿಮುಖವಾದುದೂ ಆದ ನಮ್ಮ ಈ ಯಜ್ಞವನ್ನು ದ್ಯಾವಾಪೃಥಿವಿಗಳು ದೇವತೆಗಳಲ್ಲಿ ಅರ್ಪಿಸಲಿ.

## English Translation.

Heaven and Earth, bear to the gods to-day our heaven-aspiring sacrifice, the means of obtaining Swarga.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು-ದ್ಯಾವಾಪೃಥಿವ್ಯೌ ನ ಇಮಂ ಸಾಧನಮದ್ಯ ದಿವಿಸ್ಪೃಶಂ ಯಜ್ಞಂ ದೇವೇಷು ನಿಯಚ್ಛತಾಂ-ಎಂದು ನಿರ್ವಚನವನ್ನು ಹೇಳಿರುವರು. ಸಿಧ್ರಶಬ್ದಕ್ಕೆ—ಸ್ವರ್ಗಸಾಧನವಾದ ಎಂದೂ, ದಿವಿಸ್ಪೃಶಂ ಎಂಬ ಶಬ್ದಕ್ಕೆ ಸ್ವರ್ಗದಲ್ಲಿರುವ ದೇವತೆಗಳನ್ನು ಮುಟ್ಟುವುದೂ ಆದ ಎಂಬ ಅರ್ಥವನ್ನು ವಿವರಿಸಿರುವರು. (ನಿ. ೯-೩೭)

**ದ್ಯಾವಾ, ಪೃಥಿವೀ**—ಸ್ವರ್ಗ ಮತ್ತು ಭೂಮಿಯು ; ಸ್ವರ್ಗ ಮತ್ತು ಭೂಮಿಗೆ ಅಭಿಮಾನಿದೇವತೆಗಳಾದ ದ್ಯಾವಾಪೃಥಿವೀ ಎಂಬ ಇಬ್ಬರು ದೇವತೆಗಳನ್ನು ಸಂಸ್ತವಿಕವಾಗಿ (ಒಟ್ಟಿಗೆ) ಸ್ತುತಿಸುವ ಮಂತ್ರಗಳು ಅನೇಕವಿದ್ದರೂ ದ್ಯೌಃ ಪೃಥಿವೀ ಎಂಬ ಪ್ರತ್ಯೇಕ ಶಬ್ದಗಳನ್ನು ಉಪಯೋಗಿಸಿ ಸ್ತುತಿಸುವ ಮಂತ್ರಗಳೂ ಕೆಲವಿವೆ. ಪ್ರಕೃತ ಋಕ್ಕಿನಲ್ಲಿ ಈ ದೇವತೆಗಳನ್ನೂ ದ್ಯಾವಾ ಮತ್ತು ಪೃಥಿವೀ ಎಂಬ ಎರಡು ಪ್ರತ್ಯೇಕ ಶಬ್ದಗಳಿಂದ ನಿರ್ದೇಶಿಸಿದೆ. ಈ ಋಕ್ಕಿನಲ್ಲಿ ಈ ದೇವತೆಗಳು **ಹವಿರ್ಧಾನೇ** ಎಂದರೆ ಸೋಮಲತೆಗಳನ್ನು ತುಂಬಿ ಯಜ್ಞವೇದಿಯ ಬಳಿಗೆ ತರುವುದಕ್ಕಾಗಿ ಉಪಯೋಗಿಸುವ ಎರಡು ಗಾಡಿಗಳಿಗೆ ಅಭಿಮಾನಿದೇವತೆಗಳೆಂದು ಹೇಳಲ್ಪಟ್ಟಿದೆ.

**ದ್ಯಾವಾಪೃಥಿವೀ** ಎಂಬ ಶಬ್ದದ ಅರ್ಥವನ್ನು ಸೂಚಿಸುವ **ಸ್ವಧೇ ಪುರಂಧೀ** ಮೊದಲಾದ ಇಪ್ಪತ್ತುನಾಲ್ಕು ಶಬ್ದಗಳಿರುವುವು. (ನಿ. ೩-೨೨). ತೈತ್ತಿರೀಯ ಸಂಹಿತೆಯಲ್ಲಿ **ದ್ಯೌಃ ಪಿತಃ ಪೃಥಿವಿ ಮಾತಃ** ಎಂದರೆ ಸ್ವರ್ಗವನ್ನು ತಂದೆಯೆಂದೂ ಭೂಮಿಯನ್ನು ತಾಯಿಯೆಂದೂ ಸಂಬೋಧನೆ ಮಾಡಲಾಗಿದೆ. ಋಗ್ವೇದದಲ್ಲಿಯೂ ಅನೇಕಕಡೆ ಈ ಅರ್ಥವನ್ನು ವ್ಯಕ್ತಪಡಿಸುವ ಮಂತ್ರಗಳು ಇವೆ. ದೇವತೆಗಳಿಗೆ ಈ ದ್ಯಾವ್ಯಾಪೃಥಿವಿಗಳು ತಂದೆತಾಯಿಗಳೆಂದು ಅನೇಕಕಡೆ ಹೇಳಿದೆ. ಋಗ್ವೇದದಲ್ಲಿ ಸಾಧಾರಣವಾಗಿ ಸ್ವರ್ಗ, ಅಂತರಿಕ್ಷ, ಭೂಮಿ ಎಂದು ಪ್ರಪಂಚವನ್ನು

(ವಿಶ್ವವನ್ನು) ಮೂರು ಮುಖ್ಯ ವಿಭಾಗಗಳನ್ನಾಗಿ (ಲೋಕಗಳನ್ನಾಗಿ) ಪರಿಗಣಿಸಲಾಗಿದೆ. ಸ್ವರ್ಗದಲ್ಲಿಯೂ ಸಹ **ನಾಕ** (ಸ್ವರ್ಗದಲ್ಲಿ ಬಹು ಎತ್ತರದಲ್ಲಿರುವ ಉತ್ತಮವಾದ ಸ್ಥಾನ) **ವಿಷ್ಟಪ** (ಸ್ವರ್ಗದ ಮಧ್ಯಪ್ರದೇಶ) **ಪೃಷ್ಠ** (ಸ್ವರ್ಗದ ಕೆಳಭಾಗ) ಎಂದು ಮೂರು ವಿಭಾಗಗಳಿವೆ; ಅಂತರಿಕ್ಷದಲ್ಲಿ ವಿಶೇಷವಿಭಾಗಗಳಿಲ್ಲದಿದ್ದರೂ **ವ್ಯೋಮನ್, ರೋಚನ** (ಪ್ರಕಾಶಮಾನವಾದ ಪ್ರದೇಶ) **ಅಂತರಿಕ್ಷ** ಮೊದಲಾದ ಶಬ್ದಗಳು ಅರ್ಥದಲ್ಲಿ ವ್ಯತ್ಯಾಸವನ್ನು ಸೂಚಿಸುವವು; ಪೃಥಿವೀ ಶಬ್ದವೂ ಸಹ **ಪೃಥಿವೀ** (ವಿಸ್ತಾರವಾದ ಪ್ರದೇಶ) **ಮಹೀ** (ದೊಡ್ಡದಾದ ಪ್ರದೇಶ) **ಇಳಾ** (ಈ ಪ್ರಪಂಚ) **ವಸುಮತೀ** (ಐಶ್ವರ್ಯಯುಕ್ತವಾದ) ಮೊದಲಾದ ಹೆಸರುಗಳಿಂದ ಕರೆಯಲ್ಪಡುವುದು. ಋಗ್ವೇದದಲ್ಲಿ ಸಾಧಾರಣವಾಗಿ ದ್ಯಾವಾಪೃಥಿವೀ ಎಂಬ ಶಬ್ದವು ಸ್ವರ್ಗ ಮತ್ತು ಭೂಮಿಯ ಅಭಿಮಾನಿದೇವತೆಗಳೆಂದು ಭಾವಿಸಿ ಅದರಂತೆ ಪ್ರಯೋಗಿಸಲ್ಪಟ್ಟಿರುವುದು.

॥ ಸಂಹಿತಾಪಾಠಃ ॥

ಆ ವಾಮುಪಸ್ಥಮದ್ರುಹಾ ದೇವಾಃ ಸೀದಂತು ಯಜ್ಞಿಯಾಃ ।

ಇಹಾಽದ್ಯ ಸೋಮಪೀತಯೇ ॥ ೨೧ ॥

॥ ಪದಪಾಠಃ ॥

ಆ । ವಾಂ । ಉಪಽಸ್ಥಂ । ಅದ್ರುಹಾ । ದೇವಾಃ । ಸೀದಂತು । ಯಜ್ಞಿಯಾಃ ।

ಇಹ । ಅದ್ಯ । ಸೋಮಽಪೀತಯೇ ॥ ೨೧ ॥

॥ ಸಾಯಣಭಾಷ್ಯಂ ॥

ಅದ್ರುಹಾ ದ್ರೋಹವರ್ಜಿತೇ ಹೇ ಹವಿರ್ಧಾನೇ ತದ್ರೂಪೇ ದ್ಯಾವಾಪೃಥಿವ್ಯೌ ವಾ ವಾಂ ಯುವಯೋರುಪಸ್ಥಂ ಸಮೀಪಂ ಯಜ್ಞಿಯಾ ಯಜ್ಞಾರ್ಹಾ ದೇವಾ ಇಹ ಯಜ್ಞೇಽದ್ಯಾಸ್ಮಿನ್ನಹನಿ ಸೋಮಪೀತಯೇ ಸೋಮಪಾನಾಯಾಸೀದಂತು ॥

॥ ಪ್ರತಿಪದಾರ್ಥ ॥

**ಅದ್ರುಹಾ**—ಕೇಡನ್ನು ಬಯಸದಿರುವ ಎಲೈ ಹವಿರ್ಧಾನದೇವತೆಗಳೇ । **ವಾಂ**—ನಿಮ್ಮ । **ಉಪಸ್ಥಂ**—ಸಮೀಪದಲ್ಲಿ । **ಯಜ್ಞಿಯಾಃ**—ಯಜ್ಞಾರ್ಹರಾದ । **ದೇವಾಃ**—ದೇವತೆಗಳು । **ಇಹ**—ಈ ಯಜ್ಞದಲ್ಲಿ । **ಅದ್ಯ**—ಇಂದು । **ಸೋಮಪೀತಯೇ**—ಸೋಮಪಾನಾರ್ಥವಾಗಿ । **ಆ ಸೀದಂತು**—ಬಂದು ಕುಳಿತುಕೊಳ್ಳಲಿ.

॥ ಭಾವಾರ್ಥ ॥

ಕೇಡನ್ನು ಬಯಸದಿರುವ ಎಲೈ ಹವಿರ್ಧಾನದೇವತೆಗಳೇ, ನಿಮ್ಮ ಸಮೀಪದಲ್ಲಿ ಯಜ್ಞಾರ್ಹರಾದ ದೇವತೆಗಳು ಇಂದು ಈ ಯಜ್ಞದಲ್ಲಿ ಸೋಮಪಾನಾರ್ಥವಾಗಿ ಬಂದು ಕುಳಿತುಕೊಳ್ಳಲಿ.

English Translation·

May the adorable gods, devoid of malice, sit down to-day nigh to you both to drink the Soma juice.

॥ ವಿಶೇಷವಿಷಯಗಳು ॥

**ಅದ್ರುಹಾ**—ದ್ರೋಹವನ್ನು ಅಥವಾ ಕೇಡನ್ನು ಬಯಸದಿರುವ; ಇತರರಿಗೆ ಹಿಂಸೆಯುಂಟಾಗಲಿ ಎಂಬ ಅಭಿಲಾಷೆ ಇಲ್ಲದಿರುವ.

**ಯಜ್ಞಿಯಾಃ**—ಯಜ್ಞಾರ್ಹರಾದ ಎಂದರೆ ಈ ಯಜ್ಞದಲ್ಲಿ ಸೋಮಪಾನಾರ್ಥವಾಗಿ ನಮ್ಮಿಂದ ಕರೆಯಲ್ಪಡುವ ದೇವತೆಗಳು.

**ಅದ್ಯ**—ಅಸ್ಮಿನ್ನಹನಿ । ಈ ದಿವಸ ಅಥವಾ ಈಗ ನಾವು ಮಾಡುತ್ತಿರುವ ಯಜ್ಞಕರ್ಮದಲ್ಲಿ.

# ನಲವತ್ತೆರಡನೆಯ ಸೂಕ್ತವು.

**ಕನಿಕ್ರದದಿತಿ ತ್ರೃಚಂ ದಶಮಂ ಸೂಕ್ತಂ । ಅತ್ರಾನುಕ್ರಮಣಿಕಾ । ಕನಿಕ್ರದತ್ತ್ಯೃಚಮಿತಿ । ಮಂಡಲದ್ರಷ್ಟಾ ಗೃತ್ಸಮದೋಽಸ್ಯ ಋಷಿಃ । ತ್ರಿಷ್ಟುಪ್ ಛಂದಃ । ಕಪಿಂಜಲರೂಪೀಂದ್ರೋ ದೇವತಾ ॥ ವಯಸಾಮಮನೋಜ್ಞಾಂ ವಾಚಂ ಶ್ರುತ್ವೈತತ್ಸೂಕ್ತಂ ಜಪೇತ್ । ಸೂತ್ರಿತಂ ಚ । ವಯಸಾಮಮನೋಜ್ಞಾ ವಾಚಃ ಶ್ರುತ್ವಾ ಕನಿಕ್ರದಜ್ಜನುಷಂ ಪ್ರಬ್ರುವಾಣ ಇತಿ ಸೂಕ್ತೇ ಜಪೇತ್। ಆ. ಗೃ. ೩-೧೦-೯। ಇತಿ ॥**

ಅನುವಾದವು—**ಕನಿಕ್ರದತ್** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಕನಿಕ್ರದತ್ತ್ಯೃಚಂ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಈ ಮಂಡಲದ್ರಷ್ಟೃವಾದ ಗೃತ್ಸಮದನೇ ಋಷಿಯು; ಕಪಿಂಜಲರೂಪಿಯಾದ ಇಂದ್ರನೇ ದೇವತೆಯು; ತ್ರಿಷ್ಟುಪ್ ಛಂದಸ್ಸು. ಪಕ್ಷಿಗಳ ಅಸ್ಪಷ್ಟವಾದ ಅಥವಾ ಕರ್ಣಕಠೋರವಾದ ಧ್ವನಿಯನ್ನು ಕೇಳಿದರೆ ಈ ಸೂಕ್ತವನ್ನೂ ಮುಂದಿನ ಸೂಕ್ತವನ್ನೂ ಜಪಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ವಯಸಾಮಮನೋಜ್ಞಾಂ ವಾಚಃ ಶ್ರುತ್ವಾ ಕನಿಕ್ರದಜ್ಜನುಷಂ ಪ್ರಬ್ರುವಾಣ ಇತಿ ಸೂಕ್ತೇ ಜಪೇತ್** ಎಂಬ ಸೂತ್ರದಿಂದ ವಿವೃತವಾಗಿರುವುದು. ಆ. ಗೃ. ೩-೧೦-೯)

## ಸೂಕ್ತ—೪೨

ಮಂಡಲ—೨ ॥ ಅನುವಾಕ—೪ ॥ ಸೂಕ್ತ—೪೨ ॥
ಅಷ್ಟಕ—೨ ॥ ಅಧ್ಯಾಯ—೮ ॥ ವರ್ಗ—೧೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ॥
॥ ಋಷಿಃ—ಗೃತ್ಸಮದಃ ॥
॥ ದೇವತಾ—ಇಂದ್ರಃ ಕಪಿಂಜಲ ರೂಪೀ ।
॥ ಛಂದಃ—ತ್ರಿಷ್ಟುಪ್ ॥

‖ ಸಂಹಿತಾಪಾಠಃ ‖

ಕನಿಕ್ರದಜ್ಜನುಷಂ ಪ್ರಬ್ರುವಾಣ ಇಯರ್ತಿ ವಾಚಮರಿತೇವ ನಾವಂ |

ಸುಮಂಗಲಶ್ಚ ಶಕುನೇ ಭವಾಸಿ ಮಾ ತ್ವಾ ಕಾ ಚಿದಭಿಭಾ ವಿಶ್ವ್ಯಾ ವಿದತ್ ‖ ೧ ‖

‖ ಪದಪಾಠಃ ‖

ಕನಿಕ್ರದತ್ | ಜನುಷಂ | ಪ್ರಽಬ್ರುವಾಣಃ | ಇಯರ್ತಿ | ವಾಚಂ | ಅರಿತಾಽಇವ | ನಾವಂ |

ಸುಽಮಂಗಲಃ | ಚ | ಶಕುನೇ | ಭವಾಸಿ | ಮಾ | ತ್ವಾ | ಕಾ | ಚಿತ್ | ಅಭಿಽಭಾ | ವಿಶ್ವ್ಯಾ | ವಿದತ್ ‖

‖ ಸಾಯಣಭಾಷ್ಯಂ ‖

ಕನಿಕ್ರದತ್ ಪುನಃಪುನಃ ಶಬ್ದಾಯಮಾನೋ ಜನುಷಂ ಜನಿಷ್ಯಮಾಣಮರ್ಥಂ ಪ್ರಬ್ರುವಾಣಃ ಸೂಚಯನ್ ಕಪಿಂಜಲೋಽರಿತೇವ ಕರ್ಣಧಾರ ಇವ ನಾವಂ ವಾಚಮಿಯರ್ತಿ | ಪ್ರೇರಯತಿ | ಅಥ ಪ್ರತ್ಯಕ್ಷಕೃತಃ | ಹೇ ಶಕುನೇ ಕಪಿಂಜಲ ತ್ವಂ ಸುಮಂಗಲಃ ಪ್ರಕೃಷ್ಟಕಲ್ಯಾಣಶ್ಚ ಭವಾಸಿ | ಭವ | ಕಿಂಚ ಕಾಚಿದಭಿಭಾ ಕೋಽಪ್ಯಭಿಭವಸ್ತ್ವಾ ತ್ವಾಂ ವಿಶ್ವ್ಯಾ ವಿಶ್ವತಃ ಸರ್ವಾಸು ದಿಕ್ಷು ಮಾ ವಿದತ್ | ಮಾ ಪ್ರಾಪತ್ | ಶಕುನಿಃ ಶಕ್ನೋತ್ಯುನ್ನೇತುಮಾತ್ಮಾನಂ | ನ್ಯಕ್ರಂದೀಜ್ಜನ್ಮ ಪ್ರಬ್ರುವಾಣೋ ಯಥಾಸ್ಯ ಶಬ್ದಸ್ತಥಾ ನಾಮೇರಯತಿ ವಾಚಮೀರಯಿತೇವ ನಾವಂ | ಸುಮಂಗಲಶ್ಚ ಶಕುನೇ ಭವ ಕಲ್ಯಾಣಮಂಗಲೋ ಮಂಗಲಂ ಗಿರತೇರ್ಗೃಣಾತ್ಯರ್ಥೇ ಗಿರತ್ಯನರ್ಥಾನಿತಿ ವೇತಿ ಯಾಸ್ಕಃ | ನಿ. ೯-೪ ‖

‖ ಪ್ರತಿಪದಾರ್ಥ ‖

**ಕನಿಕ್ರದತ್**—(ಕಪಿಂಜಲ ಪಕ್ಷಿಯು) ಪುನಃ ಪುನಃ ಶಬ್ದಮಾಡುತ್ತಾ | **ಜನುಷಂ**—ಮುಂದೆ ಉತ್ಪನ್ನವಾಗತಕ್ಕ ಅಂಶವನ್ನು | **ಪ್ರಬ್ರುವಾಣಃ**—ಮೊದಲೇ ಸೂಚಿಸುತ್ತಾ | **ನಾವಂ**—ದೋಣಿಯನ್ನು ನಡೆಸಲು | **ಅರಿತೇವ**—ನಾವಿಕನು ಸೂಚನೆಯನ್ನು ಕೊಡುವಂತೆ | **ವಾಚಂ**—ಅದರ ಶಬ್ದವನ್ನು | **ಇಯರ್ತಿ**—ಪ್ರೇರಿಸುತ್ತದೆ | **ಶಕುನೇ**—ಎಲೈ ಕಪಿಂಜಲಪಕ್ಷಿಯೇ | (**ತ್ವಂ**—ನೀನು) | **ಸುಮಂಗಲಶ್ಚ**—ಉತ್ತಮವಾದ ಮಂಗಳಗಳಿಂದ ಕೂಡಿದವನಾಗಿ | **ಭವಾಸಿ**—ಆಗು | **ಕಾ ಚಿದಭಿಭಾ**—ಯಾವ ವಿಧವಾದ ವಿಪತ್ತಾಗಲಿ | **ತ್ವಾ**—ನಿನ್ನನ್ನು | **ವಿಶ್ವ್ಯಾ**—ಯಾವ ದಿಕ್ಕಿನಿಂದಲೂ | **ಮಾ ವಿದತ್**—ಸಮೀಪಿಸದಿರಲಿ.

‖ ಭಾವಾರ್ಥ ‖

ಕಪಿಂಜಲಪಕ್ಷಿಯು ಪುನಃ ಪುನಃ ಶಬ್ದಮಾಡುತ್ತಲೂ, ಮುಂದೆ ಉತ್ಪನ್ನವಾಗತಕ್ಕ ಅಂಶವನ್ನು ಮೊದಲೇ ಸೂಚಿಸುತ್ತಲೂ, ದೋಣಿಯನ್ನು ನಡೆಸಲು ನಾವಿಕನು ಸೂಚನೆಯನ್ನು ಕೊಡುವಂತೆ ಅದರ ಶಬ್ದವನ್ನು ಪ್ರೇರಿಸುತ್ತದೆ. ಎಲೈ ಕಪಿಂಜಲಪಕ್ಷಿಯೇ, ನಿನಗೆ ಮಂಗಳವುಂಟಾಗಲಿ. ಯಾವ ವಿಧವಾದ ವಿಪತ್ತೂ ನಿನ್ನನ್ನು ಯಾವ ದಿಕ್ಕಿನಿಂದಲೂ ಸಮೀಪಿಸದಿರಲಿ.

## English Translation.

Crying repeatedly, and foretelling what will come to pass, (the Kapinjala) gives (due) direction to its voice, as a helmsman (guides) a boat: be ominous, bird, of good fortune, and may no calamity whatever befall you from any quarter.

॥ ವಿಶೇಷವಿಷಯಗಳು ॥

ಈ ಸೂಕ್ತದಲ್ಲಿರುವ ಮೂರು ಋಕ್ಕುಗಳಿಗೂ ಮುಂದಿನ ಸೂಕ್ತದಲ್ಲಿರುವ ಮೂರು ಋಕ್ಕುಗಳಿಗೂ ಕಪಿಂಜಲ ರೂಪಿಯಾದ ಇಂದ್ರನು ದೇವತೆಯೆಂದು ಹೇಳಲ್ಪಟ್ಟಿದೆ. ಈ ಋಕ್ಕುಗಳಲ್ಲಿ ಕಪಿಂಜಲಶಬ್ದವು ಸೂಚಿತವಾಗಿಲ್ಲದಿದ್ದರೂ ಅನುಕ್ರಮಣಿಕೆಯಲ್ಲಿ ಕಪಿಂಜಲರೂಪಿಯಾದ ಇಂದ್ರನು ದೇವತೆಯೆಂದು ಹೇಳಲ್ಪಟ್ಟಿರುವುದು. ಕಪಿಂಜಲವೆಂಬುದು ಒಂದು ಪಕ್ಷಿಯು. ಇದಕ್ಕೆ ಆಂಗ್ಲಭಾಷೆಯಲ್ಲಿ Francoline partridge ಅಥವಾ hazel-cock ಎಂದು ಹೆಸರಿದೆ. ಋಗ್ವೇದದಲ್ಲಿ ಕಪಿಂಜಲವೆಂಬ ಶಬ್ದದ ಪ್ರಯೋಗವಿರುವುದಿಲ್ಲ. ಇತರ ವೇದಗಳಲ್ಲಿ ಎಂದರೆ ತೈತ್ತಿರೀಯ ಸಂಹಿತಾ. ೨-೫-೧-೧; ೫-೫-೧೬-೧; ಮೈತ್ರಾಯಣೀ ಸಂಹಿತಾ. ೩-೧೪-೧; ಕಾಠಕ ಸಂಹಿತಾ. ೧೨-೧೦; ವಾಜಸನೇಯ ಸಂಹಿತಾ. ೨೪-೨೦, ೩೮; ಶತಪಥಬ್ರಾಹ್ಮಣ. ೧-೬-೩-೩; ೫-೫-೪-೪; ೧೩-೫-೧-೧೩; ಜೈಮಿನೀಯ ಬ್ರಾಹ್ಮಣ. ೧-೧೫೪-೨ ಇತ್ಯಾದಿ ಸ್ಥಳಗಳಲ್ಲಿ ಕಪಿಂಜಲಪಕ್ಷಿಯ ವಿಷಯವು ಸೂಚಿತವಾಗಿರುವುದು.

ಯಾಸ್ಕರು **ಅರ್ಥೋಽಪಮಾ, ಲುಪ್ತೋಽಪಮಾ** ಎಂಬ ಉಪಮಾನಗಳನ್ನು ವಿವರಿಸುವಾಗ ಕಪಿಂಜಲ ಪಕ್ಷಿಯ ವಿಷಯವನ್ನು ಹೇಳಿದಾರೆ—

**ಕಪಿಂಜಲಃ ಕಪಿರಿವ ಜೀರ್ಣಃ ಕಪಿರಿವ ಜವತೆ ಈಷತ್ಪಿಂಗಲೋ ವಾ ಗಮನೀಯಂ ಶಬ್ದಂ ಪಿಂಜಯತೀತಿ ವಾ ॥**

(ನಿ. ೩-೧೮)

ಎಂದರೆ ಕಪಿಂಜಲವೆಂಬ ಪಕ್ಷಿಗೆ ಕಪಿಯಂತೆ ಜೀರ್ಣವಾಗಿರುವಂತೆ ಕಾಣುವ ಶರೀರವಿರುವುದರಿಂದಲಾಗಲೀ, ಕಪಿಯಂತೆ ಮಾಸಲು ಹಳದೀ ಬಣ್ಣವಿರುವುದರಿಂದಲಾಗಲೀ, ಉತ್ತಮವಾದ ಎಂದರೆ ಮಂಗಲಕರವಾದ ಮಧುರಧ್ವನಿಯನ್ನು ಮಾಡುವುದರಿಂದಲಾಗಲೀ ಕಪಿಂಜಲವೆಂಬ ಹೆಸರು ಉಂಟಾಗಿದೆಯೆಂದು ನಿರ್ವಚನವನ್ನು ಹೇಳಿದಾರೆ.

ಕಪಿಂಜಲಪಕ್ಷಿಯು ದಕ್ಷಿಣದಿಕ್ಕಿನಲ್ಲಿ ಧ್ವನಿಮಾಡಿದರೆ (ಕೂಗಿದರೆ) ಉತ್ತಮವಾದ ಶಕುನವೆಂದು ಪ್ರಸಿದ್ಧಿಯು. ಆದುದರಿಂದ ಗೃತ್ಸಮದಋಷಿಯು ತನಗೆ ಯಾವ ವಿಧವಾದ ವಿಪತ್ತೂ ಉಂಟಾಗದಿರುವಂತೆಯೂ ಎಲ್ಲಾ ದಿಕ್ಕುಗಳಲ್ಲಿಯೂ ಮಂಗಳವುಂಟಾಗುವಂತೆಯೂ ಕಪಿಂಜಲಪಕ್ಷಿಯನ್ನು (ಕಪಿಂಜಲರೂಪಿಯಾದ ಇಂದ್ರನನ್ನು) ಪ್ರಾರ್ಥಿಸಿದಾನೆ—

**ಭದ್ರಂ ವದ ದಕ್ಷಿಣತೋ ಭದ್ರಮುತ್ತರತೋ ವದ ।**
**ಭದ್ರಂ ಪುರಸ್ತಾನ್ನೋ ವದ ಭದ್ರಂ ಪಶ್ಚಾತ್ಕಪಿಂಜಲ ॥**

ಎಂಬ ಈ ಮಂತ್ರವು ಪರಿಶಿಷ್ಟದಲ್ಲಿ ಎಂದರೆ ಖಿಲಮಂತ್ರಗಳಲ್ಲಿ ಉಕ್ತವಾಗಿದೆ. ಎಲೈ ಕಪಿಂಜಲಪಕ್ಷಿಯೇ, ನೀನು ದಕ್ಷಿಣದಿಕ್ಕಿನಲ್ಲಿದ್ದು, ಮಂಗಳಕರವಾದ ಶಕುನವನ್ನು ನುಡಿ. ಅದರಂತೆ ಉತ್ತರದಿಕ್ಕಿನಲ್ಲಿಯೂ ನಮ್ಮ

ಮುಂದುಗಡೆಯೂ, ಹಿಂದುಗಡೆಯಲ್ಲಿಯೂ ಮಂಗಳಕರವಾದ ಶಕುನವನ್ನೇ ನುಡಿ ಎಂದು ಗೃತ್ಸಮದಋಷಿಯು ಕಪಿಂಜಲಪಕ್ಷಿಯನ್ನು ಪ್ರಾರ್ಥಿಸಿರುವನು. ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ನ್ಯಕ್ರಂದೀಜ್ಜನ್ಮ ಪ್ರಬ್ರುವಾಣೋ ಯಥಾಸ್ಯ ಶಬ್ದಸ್ತಥಾ ನಾಮೇರಯತಿ ವಾಚಮೀರಯತೀವ ನಾವಂ ಸುಮಂಗಲಶ್ಚ ಶಕುನೇ ಭವ ಕಲ್ಯಾಣಮಂಗಲಃ । ಮಂಗಲಂ ಗಿರತೇರ್ಗೃಣಾತ್ಯರ್ಥೇ, ಗಿರತ್ಯನರ್ಥಾನಿತಿ ವಾ । ಅಂಗಲಮಂಗವತ್ । ಮಜ್ಜಯತಿ ಪಾಪಕಮಿತಿ ನೈರುಕ್ತಾಃ । ಮಾಂ ಗಚ್ಛತ್ವಿತಿ ವಾ । ಮಾ ಚ ತ್ವಾ ಕಾಚಿದಭಿಭೂತಿಃ ಸರ್ವತೋ ವಿದತ್ ॥**

(ನಿ. ೯–೪)

ಎಲೈ ಶಕುನಪಕ್ಷಿಯೇ, ನೀನು ಪುನಃ ಪುನಃ ಶಬ್ದಮಾಡುತ್ತಾ, ಮುಂದೆ ಸಂಭವಿಸುವ ಭವಿಷ್ಯದ್ವೃತ್ತಾಂತವನ್ನು ನಾವಿಕನು ನಾವೆಯನ್ನು ಪ್ರೇರೇಪಿಸುವಂತೆ, ನಿನ್ನ ಧ್ವನಿಯಿಂದ ಸೂಚಿಸುತ್ತೀಯೆ. ನಿನಗೆ ಮಂಗಳವುಂಟಾಗಲಿ ಎಂದು ಮುಖ್ಯಾರ್ಥವನ್ನು ವಿವರಿಸಿ ಕೆಲವು ಶಬ್ದಗಳ ಅವಯವಾರ್ಥಗಳನ್ನು ವಿವರಿಸಿರುವರು.

**ಸುಮಂಗಲಃ—ಕಲ್ಯಾಣಮಂಗಲಃ ।** ಉತ್ತಮವಾದ ಮಂಗಲದಿಂದ ಕೂಡಿರುವ. **ಮಂಗಲಂ ಗಿರತೇರ್ಗೃಣಾತ್ಯರ್ಥೇ, ಗಿರತ್ಯರ್ಥಾನಿತಿ ವಾ ।** ವರ್ತಮಾನಕಾಲದಲ್ಲಿ ಸ್ತುತ್ಯ ವಿಷಯವನ್ನು ಸೂಚಿಸಿರುವುದರಿಂದ ಮಂಗಲವೆಂದು ಹೆಸರು. ಅಥವಾ ಅನರ್ಥಗಳನ್ನು ನಾಶಮಾಡುವುದರಿಂದ ಮಂಗಲವೆಂದು ಹೆಸರು. ಅಥವಾ **ಅಂಗಲಂ** ಎಂಬ ಶಬ್ದದ ಅಂತ್ಯದಲ್ಲಿರುವ ಮಕಾರವು ವ್ಯತ್ಯಸ್ತವಾಗಿ ಆದಿಯಲ್ಲಿ ಉಪಯೋಗಿಸಲ್ಪಟ್ಟರೆ ಆಗ ಮ್ + ಅಂಗಲ = ಮಂಗಲ ಎಂದು ರೂಪವಾಗುವುದು. ಅಂಗಲಂ ಎಂಬ ಶಬ್ದಕ್ಕೆ ದಧಿ, ಮಧು, ಅಕ್ಷತೆ ಮೊದಲಾದ ಮಂಗಳದ್ರವ್ಯಗಳಿಂದ ಮಂಗಳವುಂಟಾಗುವಂತೆ ಎಂದೂ ಅರ್ಥವನ್ನು ಹೇಳಬಹುದು. ಅಥವಾ **ಮಜ್ಜಯತಿ ಪಾಪಕಮಿತಿ ನೈರುಕ್ತಾಃ ।** ಪಾಪಗಳನ್ನು ಮುಳುಗಿಸಿ ನಾಶಮಾಡುವುದರಿಂದ ಮಂಗಲವೆಂದು ನಿರುಕ್ತಕಾರರು ಹೇಳುವರು. ಅಥವಾ **ಮಾಂ ಗಚ್ಛತ್ವಿತಿ ವಾ ।** ಒಂದು ಉತ್ತಮವಾದ ವಸ್ತುವು (ಐಶ್ವರ್ಯವು) ನನ್ನನ್ನು ಬಂದು ಸೇರಲಿ ಎಂಬರ್ಥವುಳ್ಳ **ಮಾಂ ಗಚ್ಛತ್ವಿತಿ** ಎಂಬ ವಾಕ್ಯದಿಂದಾಗಲಿ ಮಂಗಲಶಬ್ದವು ನಿಷ್ಪನ್ನವಾಗಬಹುದು ಎಂದು ವಿವರಿಸಿದಾರೆ.

**ಕನಿಕ್ರದತ್ ಜನುಷಂ ಪ್ರಬ್ರುವಾಣಃ ನಾವಂ ಅರಿತೇವ ವಾಚಂ ಇಯರ್ತಿ—**ಈ ಕಪಿಂಜಲಪಕ್ಷಿಯು (ಅಥವಾ ಶಕುನಪಕ್ಷಿಯು) ಪುನಃ ಪುನಃ ಶಬ್ದಮಾಡುತ್ತಿರುತ್ತವೆ. ನಾವಿಕನು ದೋಣಿಯನ್ನು ನಡೆಸುವಾಗ ಪುನಃ ಪುನಃ ನೂಕುವಂತೆ ಎಂದರೆ ಮುಂದಕ್ಕೆ ಹೋಗುವಂತೆ, ಪ್ರೇರಿಸುವಂತೆ ಈ ಕಪಿಂಜಲಪಕ್ಷಿಯು ಪುನಃ ಪುನಃ ಶಬ್ದ ಮಾಡುವುದರಿಂದ ಮುಂದೆ ಬರುವ ಆಗುಹೋಗುಗಳನ್ನು ಪ್ರೇರಿಸುತ್ತದೆ ಎಂದರೆ ತಿಳಿಸುತ್ತದೆ. ಈ ಋಕ್ಕಿನ ಪೂರ್ವಾರ್ಧವು ಪರೋಕ್ಷಕೃತವು, ಉತ್ತರಾರ್ಧವು ಪ್ರತ್ಯಕ್ಷಕೃತವು ಎಂದರೆ ಈ ಪಕ್ಷಿಯು ತನ್ನೆದುರಿಗಿಲ್ಲದೆ ಬೇರೆ ಕಡೆ ಇರುವುದೆಂದು ಭಾವಿಸಿ ಅದು ಮಾಡುತ್ತಿರುವ ಕಾರ್ಯವನ್ನು ವರ್ಣಿಸುವುದರಿಂದ ಈ ಋಕ್ಕಿನ ಪೂರ್ವಾರ್ಧವು ಪರೋಕ್ಷಕೃತವೆಂದೂ, ಉತ್ತರಾರ್ಧದಲ್ಲಿ ಆ ಪಕ್ಷಿಯು ತನ್ನ ಎದುರಿಗೇ ಇರುವುದೆಂದು ಭಾವಿಸಿ ಅದನ್ನು ಸಂಬೋಧಿಸಿ ಅದರೊಡನೆ ಸಂಭಾಷಣೆಮಾಡುತ್ತಿರುವುದನ್ನು ವರ್ಣಿಸುವುದರಿಂದ ಉತ್ತರಾರ್ಧವು ಪ್ರತ್ಯಕ್ಷಕೃತವೆಂದೂ ಹೇಳಿದೆ.

**ಶಕುನೇ (ತ್ವಂ) ಸುಮಂಗಲಶ್ಚ ಭವಾಸಿ । ಕಾ ಚಿದಭಿಭಾ ತ್ವಾ ವಿಶ್ವ್ಯಾ ಮಾ ವಿದತ್— ಹೇ ಶಕುನೇ ತ್ವಂ ಪ್ರಕೃಷ್ಟಕಲ್ಯಾಣಃ ಭವಾಸಿ । ಕಿಂಚ ಕೋಽಪ್ಯಭಿಭವಃ ತ್ವಾ ಸರ್ವಾಸು ದಿಕ್ಷು ಮಾ ಪ್ರಾಪತ್ ।**

ಎಲೈ ಶಕುನಪಕ್ಷಿಯೇ, ಉತ್ತಮವಾದ ಕಲ್ಯಾಣ (ಮಂಗಳ) ಗಳಿಂದ ಕೂಡಿದವನಾಗು, ಮತ್ತು ಯಾವವಿಧವಾದ ವಿಪತ್ತು ಯಾವ ದಿಕ್ಕಿನಲ್ಲಿಯೂ ನಿನ್ನನ್ನು ಸಮೀಪಿಸದಿರಲಿ ಎಂಬ ಋಷಿಯು ಆಶಂಸನೆಯು ಇಲ್ಲಿ ಉಕ್ತವಾಗಿದೆ.

ಈ ಸೂಕ್ತ ಮತ್ತು ಮುಂದಿನ ಸೂಕ್ತಗಳಿಗೆ ಸಂಬಂಧಪಟ್ಟಂತೆ ಇರುವ ಪರಿಶಿಷ್ಟಮಂತ್ರಗಳನ್ನು ಈ ಮಂಡಲದ ಅಂತ್ಯಭಾಗದಲ್ಲಿ ವಿವರಿಸಲಾಗಿದೆ.



॥ ಸಂಹಿತಾಪಾಠಃ ॥

ಮಾ ತ್ವಾ ಶ್ಯೇನ ಉದ್ವಧೀನ್ಮಾ ಸುಪರ್ಣೋ ಮಾ ತ್ವಾ ವಿದದಿಷುಮಾನ್ವೀರೋ ಅಸ್ತಾ ।

ಪಿತ್ರ್ಯಾಮನು ಪ್ರದಿಶಂ ಕನಿಕ್ರದತ್ಸುಮಂಗಲೋ ಭದ್ರವಾದೀ ವದೇಹ ॥ ೨ ॥

॥ ಪದಪಾಠಃ ॥

ಮಾ । ತ್ವಾ । ಶ್ಯೇನಃ । ಉತ್ । ವಧೀತ್ । ಮಾ । ಸುಽಪರ್ಣಃ । ಮಾ । ತ್ವಾ । ವಿದತ್ । ಇಷುಽಮಾನ್ । ವೀರಃ । ಅಸ್ತಾ ।

ಪಿತ್ರ್ಯಾಂ । ಅನು । ಪ್ರಽದಿಶಂ । ಕನಿಕ್ರದತ್ । ಸುಽಮಂಗಲಃ । ಭದ್ರಽವಾದೀ । ವದ । ಇಹ ॥ ೨ ॥

॥ ಸಾಯಣಭಾಷ್ಯಂ ॥

ಹೇ ಶಕುನೇ ತ್ವಾ ತ್ವಾಂ ಶ್ಯೇನಃ ಪ್ರಬಲಃ ಪಕ್ಷಿವಿಶೇಷೋ ಮಾ ವಧೀತ್ । ಮಾ ಹಿಂಸೀತ್ । ಉತ ಅಪಿ ಚ ಸುಪರ್ಣೋ ಗರುಡಃ ಪಕ್ಷೀ ಮಾ ವಧೀತ್ । ತಥೇಷುಮಾನ್ । ಬಾಣವಾನ್ವೀರೋಽಸ್ತಾ ಶರಾಣಾಂ ಕ್ಷೇಪ್ತಾ ಧನ್ವೀ ತ್ವಾ ತ್ವಾಂ ಮಾ ವಿದತ್ । ಮಾ ಪ್ರಾಪತ್ । ಕಿಂಚ ಪಿತ್ರ್ಯಾಂ ಪ್ರದಿಶಂ ದಕ್ಷಿಣಾಂ ದಿಶಮನು । ದಕ್ಷಿಣಸ್ಯಾಂ ದಿಶೀತ್ಯರ್ಥಃ । ಕನಿಕ್ರದತ್ ಪುನಃಪುನಃ ಶಬ್ದಂ ಕುರ್ವನ್ ಸುಮಂಗಲಃ ಕಲ್ಯಾಣಮಂಗಲೋ ಭದ್ರವಾದೋ ಶೋಭನವಾದೀ ಸನ್ ಇಹಾಸ್ಮದ್ವಿಷಯೇ ವದ । ಮಂಗಲಂ ಸೂಚಯ ॥

॥ ಪ್ರತಿಪದಾರ್ಥ ॥

ಎಲೈ ಕಪಿಂಜಲಪಕ್ಷಿಯೇ, **ತ್ವಾ**—ನಿನ್ನನ್ನು । **ಶ್ಯೇನಃ**—(ಪ್ರಬಲವಾದ ಶಕ್ತಿಯುಳ್ಳ) ಶ್ಯೇನ ಪಕ್ಷಿಯು । **ಮಾ ಉತ್ ವಧೀತ್**—ಮೇಲೆಬಿದ್ದು ಹಿಂಸಿಸದಿರಲಿ । **ಸುಪರ್ಣಃ**—ಗರುಡಪಕ್ಷಿಯು । **ಮಾ (ವಧೀತ್)**—ಹಿಂಸಿಸದಿರಲಿ । **ಇಷುಮಾನ್**—ಬಾಣವನ್ನು ಹೊಂದಿರುವವನೂ । **ವೀರಃ**—ಶಕ್ತಿವಂತನೂ । **ಅಸ್ತಾ**—ಬಾಣ ಪ್ರಯೋಗವನ್ನು ಮಾಡುವವನೂ ಆದ ಎಂದರೆ ಧನುಸ್ಸಿನಿಂದ ಯುದ್ಧಮಾಡುವ ವೀರನು ।

**ತ್ವಾ**—ನಿನ್ನನ್ನು | **ಮಾ ವಿದತ್**— ಸಮೀಪಿಸದಿರಲಿ | **ಪಿತ್ರ್ಯಾಂ ಪ್ರದಿಶಂ ಅನು** - ದಕ್ಷಿಣದಿಕ್ಕಿನಲ್ಲಿಯೇ | **ಕನಿಕ್ರದತ್**—ಪುನಃಪುನಃ ಶಬ್ದಮಾಡುತ್ತಲೂ | **ಸುಮಂಗಲಃ**—ಮಂಗಲಾತ್ಮಕವಾದ ರೂಪವುಳ್ಳವನಾಗಿಯೂ | **ಭದ್ರವಾದೀ**—ನಮ್ಮ ಮುಂದಿನ ಕಲ್ಯಾಣವನ್ನು ನುಡಿಯುವವನಾಗಿಯೂ| **ಇಹ** ಇಲ್ಲಿ | **ವದ**—ಶುಭವಾಕ್ಯವನ್ನು ನುಡಿ.

॥ ಭಾವಾರ್ಥ ॥

ಎಲೈ ಕಪಿಂಜಲಪಕ್ಷಿಯೇ, ಪ್ರಬಲವಾದ ಶಕ್ತಿಯುಳ್ಳ ಶ್ಯೇನಪಕ್ಷಿಯು ನಿನ್ನ ಮೇಲೆ ಬಿದ್ದು ನಿನ್ನನ್ನು ಹಿಂಸಿಸದಿರಲಿ. ಗರುಡಪಕ್ಷಿಯು ನಿನ್ನನ್ನು ಉಪದ್ರವಪಡಿಸದಿರಲಿ. ಬಾಣಪ್ರಯೋಗವನ್ನು ಮಾಡುವ ಧನ್ವಿಯೂ ಆದ ಬೇಡನು ನಿನ್ನನ್ನು ಸಮೀಪಿಸದಿರಲಿ. ನೀನು ದಕ್ಷಿಣದಿಕ್ಕಿನಲ್ಲಿಯೇ ಪುನಃ ಪುನಃ ಶಬ್ದವನ್ನು ಮಾಡುತ್ತಲೂ, ಮಂಗಳಾತ್ಮಕವಾದ ರೂಪವುಳ್ಳವನಾಗಿಯೂ, ನಮ್ಮ ಮುಂದಿನ ಕಲ್ಯಾಣವನ್ನು ನುಡಿಯುವವನಾಗಿಯೂ ಇಲ್ಲಿ ಶುಭವಾಕ್ಯವನ್ನು ನುಡಿ.

English Translation.

May no kite, no eagle, kill you; may no archer, armed with arrows, reach you: crying repeatedly, in the region of the Pitris, be ominous of good fortune; proclaimer of good luck, speak to us on this occasion.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ, ಕಪಿಂಜಲಪಕ್ಷಿಗೆ ಯಾರಿಂದಲೂ ಯಾವ ವಿಧವಾದ ಹಿಂಸೆಯೂ, ತೊಂದರೆಯೂ ಆಗದಿರಲೆಂದೂ, ಅದು ದಕ್ಷಿಣ ದಿಕ್ಕಿನಿಂದ ಧ್ವನಿಮಾಡುತ್ತಾ ತನಗೆ ಮಂಗಳವನ್ನುಂಟು ಮಾಡಬೇಕೆಂದೂ ಗೃತ್ಸಮದ ಋಷಿಯು ಆಶಂಸನೆಯನ್ನು ವ್ಯಕ್ತಪಡಿಸಿದಾನೆ.

**ತ್ವಾ ಶ್ಯೇನಃ ಮಾ ಉತ್ ವಧೀತ್ ಸುಪರ್ಣಃ ಮಾ**—ಎಲೈ ಕಪಿಂಜಲಪಕ್ಷಿಯೇ, ನಿನ್ನನ್ನು ಪ್ರಬಲವಾದ ಶ್ಯೇನಪಕ್ಷಿಯಾಗಲಿ, ಒಳ್ಳೆಯ ರೆಕ್ಕೆಗಳುಳ್ಳ ಗರುಡಪಕ್ಷಿಯಾಗಲಿ ಹಿಂಸಿಸದಿರಲಿ. ಶ್ಯೇನಪಕ್ಷಿ ಬಹಳ ಬಲವುಳ್ಳ ಪಕ್ಷಿಯೆಂದೂ ಅದು ತನ್ನಷ್ಟು ಬಲವಿಲ್ಲದಿರುವ ಇತರ ಜಾತಿಯ ಪಕ್ಷಿಗಳ ಮೇಲೆ ಬಿದ್ದು ಅವುಗಳನ್ನು ಕೊಲ್ಲುವುದೆಂದೂ ಪ್ರಸಿದ್ಧಿಯು. ಆದುದರಿಂದ ಅಂತಹ ಪ್ರಬಲವಾದ ಶ್ಯೇನಪಕ್ಷಿಯಿಂದ ನಿನಗೆ ಯಾವತೊಂದರೆಯೂ ಸಂಭವಿಸದಿರಲೆಂದೂ ಅದರಂತೆ ಒಳ್ಳೆಯ ರೆಕ್ಕೆಗಳುಳ್ಳ ಮತ್ತು ಬಹುದೂರ ಹಾರಬಲ್ಲ ಗರುಡಪಕ್ಷಿಯೂ ಸಹ ನಿನ್ನನ್ನು ಹಿಂಸಿಸದಿರಲೆಂದೂ ಋಷಿಯು ಆಶಂಸನೆಯನ್ನು ವ್ಯಕ್ತಪಡಿಸಿದಾನೆ.

**ಇಷುಮಾನ್ ವೀರಃ ಅಸ್ತಾ ತ್ವಾ ಮಾ ವಿದತ್**—ಧನುಸ್ಸನ್ನೂ ಬಾಣಗಳನ್ನೂ ಧರಿಸಿ ಶತ್ರುಗಳನ್ನು ಸಂಹರಿಸಲು ಹೊರಟಿರುವ ವೀರನು (ಅಥವಾ ಬೇಡನು) ಬಾಣಗಳನ್ನು ಬಿಡುತ್ತಾ ನಿನ್ನಲ್ಲಿ ಸಮೀಪಿಸದಿರಲಿ ಎಂದು ಅಭಿಪ್ರಾಯವು. ವೀರಃ ಎಂಬ ಶಬ್ದಕ್ಕೆ ಯಾಸ್ಕರು—

**ವೀರೋ ವೀರಯತ್ಯಮಿತ್ರಾನ್ । ವೇತೇರ್ವಾ ಸ್ಯಾದ್ಗತಿಕರ್ಮಣಃ ವೀರಯತೇರ್ವಾ ।**

(ನಿ. ೧-೭).

ಎಂದು ನಿರ್ವಚನವನ್ನು ಹೇಳಿರುವರು ಎಂದರೆ ಶತ್ರುಗಳನ್ನು ನಾನಾಪ್ರಕಾರವಾಗಿ ಸಂಹಾರಮಾಡುವವನಾದ್ದರಿಂದ (ಸಂಹಾರಮಾಡು ಎಂಬರ್ಥವುಳ್ಳ ವೀರಯತಿಧಾತುವಿನಿಂದ ನಿಷ್ಪನ್ನವಾಗಿ) ವೀರ ಎಂದೂ ಅಥವಾ ಗಮನಾರ್ಥವನ್ನು ಸೂಚಿಸುವ ವೇತಿಧಾತುವಿನಿಂದ ನಿಷ್ಪನ್ನವಾಗಿ ಶತ್ರುಗಳ ಮೇಲೆ ಮುನ್ನುಗ್ಗಿ ಹೋಗುವವನಾದ್ದರಿಂದ ವೀರ ಎಂದೂ ಅಥವಾ ಪರಾಕ್ರಮವನ್ನು ಸೂಚಿಸುವ ವೀರಯತಿ ಧಾತುವಿನಿಂದ ನಿಷ್ಪನ್ನವಾಗಿ ಪರಾಕ್ರಮಶಾಲಿಯು ಎಂಬರ್ಥವನ್ನು ಸೂಚಿಸುವುದರಿಂದ ವೀರ ಎಂದೂ ಈ ಶಬ್ದದ ನಿಷ್ಪತ್ತಿ ಇರುವುದೆಂದು ನಿರ್ವಚನವನ್ನು ಹೇಳಿದಾರೆ.

**ಪಿತ್ರ್ಯಾಂ ದಿಶಂ ಅನು ಕನಿಕ್ರದತ್ ಸುಮಂಗಲಃ ಭದ್ರವಾದೀ ಇಹ ವದ**—ಎಲೈ ಕಪಿಂಜಲ ಪಕ್ಷಿಯೇ, ನೀನು ಪಿತೃಸಂಬಂಧವಾದ ದಿಕ್ಕನ್ನು ಎಂದರೆ ದಕ್ಷಿಣದಿಕ್ಕನ್ನು ಆಶ್ರಯಿಸಿದ್ದು ಅಲ್ಲಿಂದ ಮಂಗಲಾತ್ಮಕವಾದ ರೂಪವುಳ್ಳವನಾಗಿ ಶೋಭನಾತ್ಮಕವಾದ ಹಿತವಾದ ಶಬ್ದವನ್ನು ನುಡಿ ಎಂದಭಿಪ್ರಾಯವು. ಪಿತೃಸಂಬಂಧವಾದ ದಿಕ್ಕೆಂದರೆ ದಕ್ಷಿಣದಿಕ್ಕು ಎಂದರ್ಥವು. ಈ ವಿಷಯದಲ್ಲಿ—**ದೇವಮನುಷ್ಯಾ ದಿಶೋ ವ್ಯಭಜಂತ ಪ್ರಾಚೀ ದೇವಾ ದಕ್ಷಿಣಾ ಪಿತರಃ ಪ್ರತೀಚೀಂ ಮನುಷ್ಯಾ ಉದೀಚೀಗ್ಂ ರುದ್ರಾಃ** (ತೈ. ಸಂ ೬-೧-೧-೧) ಎಂಬ ಶ್ರುತಿವಾಕ್ಯದಂತೆ ದಕ್ಷಿಣದಿಕ್ಕು ಪಿತೃಗಳಿಗೆ ಸೇರಿರುವುದು. ಆದುದರಿಂದ ಪ್ರಕೃತಋಕ್ಕಿನಲ್ಲಿ **ಪಿತ್ರ್ಯಾಂ ದಿಶಂ** ಎಂದರೆ ಪಿತೃದೇವತೆಗಳ ಸಂಬಂಧವಾದ ಎಂದರೆ ಪಿತೃಗಳಿಗೆ ಸೇರಿದ ದಕ್ಷಿಣದಿಕ್ಕು ಎಂದರ್ಥವು. ದಕ್ಷಿಣದಿಕ್ಕಿನಲ್ಲಿ ಕಪಿಂಜಲ ಪಕ್ಷಿಯು ಶಬ್ದಮಾಡುವುದು ಶುಭಶಕುನವು ಎಂದು ಪ್ರಸಿದ್ಧವಾಗಿರುವುದರಿಂದ ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಕಪಿಂಜಲವು ದಕ್ಷಿಣದಿಕ್ಕಿನಲ್ಲಿದ್ದು ನಮ್ಮ ವಿಷಯದಲ್ಲಿ ಹಿತವಚನವನ್ನು ನುಡಿಯಬೇಕೆಂದು ಋಷಿಯು ಪ್ರಾರ್ಥಿಸಿದಾನೆ.

ಸುಮಂಗಲಶಬ್ದದ ಅರ್ಥವಿವರಣೆಯನ್ನು ಹಿಂದಿನ ಋಕ್ಕಿನಲ್ಲಿಯೇ ಮಾಡಲಾಗಿದೆ. ಭದ್ರವಾದೀ ಎಂದರೆ **ಭದ್ರಂ ವದತೀತಿ ಭದ್ರವಾದೀ**—ಮಂಗಳಕರವಾದ ಶಬ್ದವನ್ನು ಉಚ್ಚರಿಸುವ ಎಂದರ್ಥವು.

॥ ಸಂಹಿತಾಪಾಠಃ ॥

## ಅವ ಕ್ರಂದ ದಕ್ಷಿಣತೋ ಗೃಹಾಣಾಂ ಸುಮಂಗಲೋ ಭದ್ರವಾದೀ ಶಕುಂತೇ ।
## ಮಾ ನಃ ಸ್ತೇನ ಈಶತ ಮಾಘಶಂಸೋ ಬೃಹದ್ವದೇಮ ವಿದಥೇ ಸುವೀರಾಃ ॥ ೩

॥ ಪದಪಾಠಃ ॥

**ಅವ । ಕ್ರಂದ । ದಕ್ಷಿಣತಃ । ಗೃಹಾಣಾಂ । ಸುಽಮಂಗಲಃ । ಭದ್ರಽವಾದೀ । ಶಕುಂತೇ ।**

**ಮಾ । ನಃ । ಸ್ತೇನಃ । ಈಶತ । ಮಾ । ಅಘಽಶಂಸಃ । ಬೃಹತ್ । ವದೇಮ । ವಿದಥೇ । ಸುಽವೀರಾಃ ॥**

॥ ಸಾಯಣಭಾಷ್ಯಂ ॥

**ಶಕುಂತೇ ಹೇ ಕಪಿಂಜಲ ತ್ವಂ ಸುಮಂಗಲೋ ಭದ್ರವಾದೀ ಚ ಸನ್ ಗೃಹಾಣಾಂ ದಕ್ಷಿಣತೋ ದಕ್ಷಿಣಸ್ಯಾಂ ದಿಶ್ಯವಕ್ರಂದ । ಶಬ್ದಂ ಕುರು । ದಕ್ಷಿಣತಃ ಶಬ್ದಾಯಮಾನಃ ಶಕುಂತೋ ಮಂಗಲಸೂ-**

**ಚಕೋ ಹಿ । ನೋಽಸ್ಮಾಕಂ ಸ್ತೇನಸ್ತಸ್ಕರೋ ಮೇಶತ । ಮೇಶಿಷ್ಟ । ಅಘಶಂಸೋಽನರ್ಥಕಾನಾಂ ಶಂಸಕೋಽಪಿ ಮೇಶಿಷ್ಟ । ಉತ್ತಮಃ ಪಾದೋ ವ್ಯಾಖ್ಯಾತಚರಃ ॥**

॥ ಪ್ರತಿಪದಾರ್ಥ ॥

**ಶಕುಂತೇ**—ಎಲೈ ಕಪಿಂಜಲಪಕ್ಷಿಯೇ । **ಸುಮಂಗಲಃ**—ನೀನು ಮಂಗಳಾತ್ಮಕನಾಗಿಯೂ । **ಭದ್ರ ವಾದೀ**—ಮಂಗಳವನ್ನು ನುಡಿಯುವವನಾಗಿಯೂ । **ಗೃಹಾಣಾಂ**—ನಮ್ಮ ಗೃಹಗಳ । **ದಕ್ಷಿಣತಃ**—ದಕ್ಷಿಣ ದಿಕ್ಕಿನಲ್ಲಿ । **ಅವ ಕ್ರಂದ**—ಶಬ್ದವನ್ನು ಮಾಡು । **ನಃ**—ನಮ್ಮ ಮೇಲೆ । **ಸ್ತೇನಃ**—ಕಳ್ಳನು । **ಮಾ ಈಶತ**—ತನ್ನ ಶಕ್ತಿಯನ್ನು ತೋರಿಸದಿರಲಿ । **ಅಘಶಂಸಃ**—ನಮಗೆ ಪಾಪವನ್ನಾಚರಿಸುವ ಶತ್ರುವೂ । **ಮಾ**—ಹಿಂಸಿಸದಿರಲಿ । **ಸುವೀರಾಃ**—ನಾವು ಶ್ರೇಷ್ಠರಾದ ಪುತ್ರರಿಂದ ಕೂಡಿ । **ವಿದಥೇ**—ಯಜ್ಞಗೃಹದಲ್ಲಿ । **ಬೃಹತ್**—(ನಿನ್ನ ಗುಣಗಳನ್ನು ವರ್ಣಿಸುವ) ಪ್ರೌಢವಾದ ಸ್ತುತಿಗಳನ್ನು । **ವದೇಮ**—ಪಠಿಸುತ್ತೇವೆ.

॥ ಭಾವಾರ್ಥ ॥

ಎಲೈ ಕಪಿಂಜಲಪಕ್ಷಿಯೇ, ನೀನು ಮಂಗಳಾತ್ಮಕನಾಗಿಯೂ, ಮಂಗಳವನ್ನು ನುಡಿಯುವವನಾಗಿಯೂ, ನಮ್ಮ ಗೃಹಗಳ ದಕ್ಷಿಣ ದಿಕ್ಕಿನಲ್ಲಿ ಶಬ್ದವನ್ನು ಮಾಡು. ಕಳ್ಳನು ನಮ್ಮ ಮೇಲೆ ತನ್ನ ಶಕ್ತಿಯನ್ನು ತೋರಿಸದಿರಲಿ. ನಮಗೆ ಪಾಪವನ್ನಾಚರಿಸುವ ಶತ್ರುವೂ ಸಹ ತನ್ನ ಪ್ರಭಾವವನ್ನು ಬೀರದಿರಲಿ. ನಾವು ಶ್ರೇಷ್ಠವಾದ ಪುತ್ರರಿಂದೊಡಗೂಡಿ ಯಜ್ಞಗೃಹದಲ್ಲಿ ನಿನ್ನ ಗುಣಗಳನ್ನು ವರ್ಣಿಸುವ ಪ್ರೌಢವಾದ ಸ್ತುತಿಗಳನ್ನು ಪಠಿಸುತ್ತೇವೆ.

## English Translation.

Bird, you are ominous of good fortune, the proclaimer of good luck ; cry from the south of dwellings : may no thief, no evil-doer, prevail against us ; that, blessed with excellent descendants, we may worthily praise you at this sacrifice.

॥ ವಿಶೇಷವಿಷಯಗಳು ॥

ಈ ಋಕ್ಕಿನ ಪೂರ್ವಾರ್ಧದಲ್ಲಿ ಹಿಂದಿನ ಋಕ್ಕಿನಲ್ಲಿ ಹೇಳಿರುವ ವಿಷಯವನ್ನೇ ಎಂದರೆ—ನಮ್ಮ ಮನೆಗಳ ದಕ್ಷಿಣದಿಕ್ಕಿನಲ್ಲಿದ್ದು ಮಂಗಳಾತ್ಮಕವಾದ ಶಬ್ದವನ್ನು ಮಾಡುವಂತೆ ಋಷಿಯು ಪ್ರಾರ್ಥಿಸಿದಾನೆ.

**ನಃ ಸ್ತೇನಃ ಮಾ ಈಶತ**—ಕಳ್ಳನು ನಮ್ಮ ಮೇಲೆ ತನ್ನ ಶಕ್ತಿಯನ್ನು ತೋರಿಸದಿರಲಿ ಎಂದರೆ—ನಾವು ಕಳ್ಳನ ಕೈಗೆ ಸಿಕ್ಕದಿರಲಿ. ನಮ್ಮ ಮೇಲೆ ಕಳ್ಳನು ತನ್ನ ಪ್ರಭಾವವನ್ನು ಬೀರದಿರಲಿ ಎಂದಭಿಪ್ರಾಯವು. ಸ್ತೇನ ಶಬ್ದಕ್ಕೆ ಯಾಸ್ಕರು—

**ಸ್ತೇನಃ ಕಸ್ಮಾತ್ ಸಂಸ್ತ್ಯಾನಮಸ್ಮಿನ್ ಪಾಪಕಮಿತಿ ನೈರುಕ್ತಾಃ ।** (ನಿ. ೩-೧೯)

ಸ್ತೇನ ಶಬ್ದಕ್ಕೆ ಅರ್ಥವೇನೆಂದರೆ—ಇವನಲ್ಲಿ ಪಾಪವು ಒಟ್ಟುಗೂಡಿ ತುಂಬಿರುವುದು. ಎಂದರೆ ಕಳ್ಳತನಮಾಡುವುದು, ನಿರಪರಾಧಿಜನರನ್ನು ಹಿಂಸಿಸುವುದು, ಅವರ ದ್ರವ್ಯವನ್ನು ಅಪಹರಿಸುವುದು ಮೊದಲಾದ ಅನೇಕ ವಿಧ ಪಾಪಗಳ

ಗುಂಪಿಗೆ ಸಂಸ್ತ್ಯಾನ (ಒಟ್ಟಿಗೆ ಒಂದುಕಡೆ ಸೇರಿರುವುದು) ಎಂದು ಹೆಸರು. ಈ ಪಾಪಗಳ ಸಮೂಹವು ಕಳ್ಳನಲ್ಲಿರುವುದರಿಂದ ಕಳ್ಳನಿಗೆ ಸ್ತೇನನೆಂದು ಹೆಸರು ಎಂಬರ್ಥವನ್ನು ನಿರುಕ್ತಕಾರರು ಹೇಳಿರುವರು ಎಂದು ಮೇಲೆ ಸೂಚಿಸಿರುವ ನಿರ್ವಚನದ ಅಭಿಪ್ರಾಯವು.

**ಅಘಶಂಸಃ ಮಾ (ಈಶತೆ)—ಅನರ್ಥಕಾನಾಂ ಶಂಸಕೋಽಪಿ ಮಾ ಈಶಿಷ್ಟ ।** ಅಘಶಂಸ ಶಬ್ದವು ಸ್ತೇನನಾಮಗಳಲ್ಲಿಯೂ ಪಠಿತವಾಗಿದೆ (ನಿ. ೩–೧೯) ಕಳ್ಳನೆಂದರ್ಥವು. ಇದಲ್ಲದೆ ಅಘಶಂಸ ಶಬ್ದಕ್ಕೆ ಯಾಸ್ಕರು—

**ಅಘಸ್ಯ ಶಂಸಿತಾರಂ । ಅಘಂ ಹಂತೇಃ ನಿರ್ಹ್ರಸಿತೋಪಸರ್ಗ ಆಹಂತೀತಿ ।** (ನಿ. ೬–೧೧)

ಎಂದೂ ನಿರ್ವಚನವನ್ನು ಹೇಳಿದಾರೆ. ಅಘ ಶಬ್ದವು ಹನ ಹಿಂಸಾಗತ್ಯೋಃ ಎಂಬ ಧಾತುವಿನಿಂದ ಎಂದರೆ ಹಿಂಸೆ ಮಾಡು ಕೊಲ್ಲು ಎಂಬರ್ಥವುಳ್ಳ ಹನಧಾತುವಿನಿಂದ ನಿಷ್ಪನ್ನವಾಗಿದೆ. ಆ ಎಂಬ ಉಪಸರ್ಗವು ವ್ಯತ್ಯಸ್ತವಾಗಿ ಅಘವೆಂಬ ಶಬ್ದವಾಗಿದೆ. ಆದುದರಿಂದ ಅಘಶಂಸ ಶಬ್ದಕ್ಕೆ ಕೊಲ್ಲು ಎಂದು ಹೇಳುವವನು ಅಥವಾ ಅನರ್ಥವನ್ನು ಉಂಟುಮಾಡುವವನು ಎಂದರ್ಥವು. ಇಂತಹ ಅನರ್ಥಕಾರಿಯಾದ ಪಾಪಿಷ್ಠನು ನಮ್ಮ ಮೇಲೆ ತನ್ನ ಪ್ರಭಾವವನ್ನು ಬೀರದಿರಲಿ ಎಂದರೆ, ಅಂತಹ ಕೆಟ್ಟಮನುಷ್ಯನ ಕೈಗೆ ನಾವು ಸಿಕ್ಕದಂತಾಗಲಿ ಎಂದಭಿಪ್ರಾಯವು.

# ನಲವತ್ತಮೂರನೆಯ ಸೂಕ್ತವು

**ಪ್ರದಕ್ಷಿಣಿದಿತಿ ತೃಚಮೇಕಾದಶಂ ಸೂಕ್ತಂ ಗಾರ್ತ್ಸಮದಂ ಜಾಗತಂ । ತಥಾ ಚಾನುಕ್ರಾಂತಂ । ಪ್ರದಕ್ಷಿಣಿಜ್ಜಾಗತಂ ಮಧ್ಯೇಽತಿಶಕ್ವರ್ಯಷ್ಟಿರ್ವೇತಿ । ದ್ವಿತೀಯಾತಿಶಕ್ವರೀ ಅಷ್ಟಿರ್ವಾ । ಇತರೇ ಜಗತ್ಯೌ । ಕಪಿಂಜಲರೂಪೀಂದ್ರೋ ದೇವತಾ । ವಯಸಾಮಮನೋಜ್ಞಾಂ ವಾಚಂ ಶ್ರುತ್ವಾ ಪ್ರದಕ್ಷಿಣಿದಿತಿ ಸೂಕ್ತಂ ಜಪೇತ್ । ಸೂತ್ರಂ ಪ್ರಾಗೇವೋದಾಹೃತಂ ॥**

ಅನುವಾದವು—**ಪ್ರದಕ್ಷಿಣಿತ್** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಗೃತ್ಸಮದನು ಋಷಿಯು ; ಜಗತೀಛಂದಸ್ಸು ; ಅನುಕ್ರಮಣಿಕೆಯಲ್ಲಿ **ಪ್ರದಕ್ಷಿಣಿಜ್ಜಾಗತಂ ಮಧ್ಯೇಽತಿಶಕ್ವರ್ಯಷ್ಟಿರ್ವಾ** ಎಂದು ಹೇಳಿರುವುದು. ಈ ಸೂಕ್ತದ ಎರಡನೆಯ ಋಕ್ಕು ಅತೀಶ್ವರೀ ಅಥವಾ ಅಷ್ಟಿ ಎಂಬ ಛಂದಸ್ಸಿನದು ; ಉಳಿದ ಎರಡು ಋಕ್ಕುಗಳು ಜಗತೀಛಂದಸ್ಕವು ; ಕಪಿಂಜಲರೂಪಿಯಾದ ಇಂದ್ರನು ದೇವತೆಯು, ಹಿಂದಿನ ಸೂಕ್ತಕ್ಕೆ ಹೇಳಿರುವಂತೆಯೇ, ಪಕ್ಷಿಗಳ ಕರ್ಕಶಧ್ವನಿಯನ್ನು ಕೇಳಿದರೆ **ಪ್ರದಕ್ಷಿಣಿತ್** ಎಂಬ ಈ ಸೂಕ್ತವನ್ನು ಜಪಮಾಡಬೇಕೆಂದು ಇದರ ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೪೩

ಮಂಡಲ—೨ ॥ ಅನುವಾಕ—೪ ॥ ಸೂಕ್ತ—೪೩ ॥
ಅಷ್ಟಕ—೨ ॥ ಅಧ್ಯಾಯ—೮ ॥ ವರ್ಗ—೧೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ॥
॥ ಋಷಿಃ—ಗೃತ್ಸಮದಃ ॥
॥ ದೇವತಾ—ಇಂದ್ರಃ ಕಪಿಂಜಲರೂಪೀ ॥
॥ ಛಂದಃ—೧, ೩. ಜಗತೀ । ೨. ಅತಿಶಕ್ವರ್ಯಷ್ಟಿರ್ವಾ ॥

॥ ಸಂಹಿತಾಪಾಠಃ ॥

ಪ್ರದಕ್ಷಿಣಿದಭಿ ಗೃಣಂತಿ ಕಾರವೋ ವಯೋ ವದಂತ ಋತುಥಾ ಶಕುಂತಯಃ ।
ಉಭೇ ವಾಚೌ ವದತಿ ಸಾಮುಗಾ ಇವ ಗಾಯತ್ರಂ ಚ ತ್ರೈಷ್ಟುಭಂ ಚಾನು
ರಾಜತಿ ॥ ೧ ॥

॥ ಪದಪಾಠಃ ॥

ಪ್ರಽದಕ್ಷಿಣಿತ್ । ಅಭಿ । ಗೃಣಂತಿ । ಕಾರವಃ । ವಯಃ । ವದಂತಃ । ಋತುಽಥಾ । ಶಕುಂತಯಃ ।
ಉಭೇ ಇತಿ । ವಾಚೌ । ವದತಿ । ಸಾಮುಗಾಃಽಇವ । ಗಾಯತ್ರಂ । ಚ । ತ್ರೈಸ್ತುಭಂ । ಚ । ಅನು ।
ರಾಜತಿ ॥ ೧ ॥

॥ ಸಾಯಣಭಾಷ್ಯಂ ॥

ಶಕುಂತಯಃ ಕಪಿಂಜಲಾ ಋತುಥಾ ಕಾಲೇ ಕಾಲೇ ವಯೋಽನ್ನಂ ವದಂತಃ ಸೂಚಯಂತಃ ಕಾರವಃ ಸ್ತೋತಾರ ಇವ ಪ್ರದಕ್ಷಿಣಿತ್ ಪ್ರದಕ್ಷಿಣಮಭಿಗೃಣಂತಿ । ಅಭಿವದಂತು ॥ ಬಹುವಚನಂ ಪೂಜಾರ್ಥಂ ॥ ಕಿಂ ಚ ಉಭೇ ವಾಚೌ ಗಾನಂ ಚ ಶ್ರೌತಂ ಚ ಸಾಮುಗಾ ಗಾಯತ್ರಂ ತ್ರೈಷ್ಟುಭಂ ಚ ಸಾಮನೀ ಇವ ಶಕುಂತಿರ್ವದತಿ । ಅನು ರಾಜತಿ ಚ । ಶೃಣ್ವತೋಽನುರಕ್ತಾನ್ಕರೋತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಶಕುಂತಯಃ**—ಕಪಿಂಜಲಪಕ್ಷಿಗಳು । **ಋತುಥಾ**—ಋತುಕಾಲಕ್ಕೆ ಸರಿಯಾಗಿ । **ವಯಃ**—ಅನ್ನವನ್ನು **ವದಂತಃ**—ಸೂಚಿಸುತ್ತಾ (ಹುಡುಕುತ್ತಾ) । **ಕಾರವಃ**—ಸ್ತೋತೃಗಳಂತೆ । **ಪ್ರದಕ್ಷಿಣಿತ್**—ಪ್ರದಕ್ಷಿಣರೂಪವಾದ ಸಂಚಾರವನ್ನು । **ಅಭಿಗೃಣಂತಿ**—ಪ್ರಕಟಿಸುತ್ತವೆ । **ಸಾಮುಗಾಃ**—ಸಾಮವನ್ನು ಪಠಿಸುವವರು । **ಗಾಯತ್ರಂ**—ಗಾಯತ್ರವನ್ನೂ । **ತ್ರೈಷ್ಟುಭಂ ಚ**—ತ್ರೈಷ್ಟುಭವನ್ನೂ ಪಠಿಸುವಂತೆ (ಈ ಪಕ್ಷಿಗಳೂ ಸಹ) । **ಉಭೇ ವಾಚಾ**—ಎರಡು ವಿಧವಾದ ವಾಕ್ಕುಗಳನ್ನು । **ವದತಿ**—ಉಚ್ಚರಿಸುತ್ತವೆ । **ಅನು ರಾಜತಿ ಚ**—ಅನಂತರ (ಕೇಳುವವರನ್ನೂ) ಸಂತೋಷಪಡಿಸುತ್ತವೆ.

॥ ಭಾವಾರ್ಥ ॥

ಕಪಿಂಜಲಪಕ್ಷಿಗಳು ಋತುಕಾಲಕ್ಕೆ ಸರಿಯಾಗಿ ಅನ್ನವನ್ನು ಹುಡುಕುತ್ತಾ ಸ್ತೋತೃಗಳಂತೆ ಪ್ರದಕ್ಷಿಣರೂಪವಾದ ಸಂಚಾರವನ್ನು ಪ್ರಕಟಿಸುತ್ತವೆ. ಸಾಮವನ್ನು ಪಠಿಸುವವರು ಗಾಯತ್ರವನ್ನೂ ತ್ರೈಷ್ಟುಭವನ್ನೂ ಪಠಿಸುವಂತೆ ಈ ಪಕ್ಷಿಗಳೂ ಸಹ ಎರಡುವಿಧವಾದ ವಾಕ್ಕುಗಳನ್ನೂ ಉಚ್ಚರಿಸುತ್ತವೆ. ಅನಂತರ ಅದನ್ನು ಕೇಳುವವರನ್ನೂ ಸಂತೋಷಪಡಿಸುತ್ತದೆ.

## English Translation·

Let the birds in quest of their food, according to the season, proclaim their circumambulations, like the celebrators (of sacred rites): he utters both notes, as the chanter of the Sama recites the Gayatri and Trishtubh, and delights (the hearers).

॥ ವಿಶೇಷವಿಷಯಗಳು ॥

**ಶಕುಂತಯಃ ಋತುಥಾ ವಯಃ ವದಂತಃ ಕಾರವಃ (ಇವ) ಪ್ರದಕ್ಷಿಣಿತ್ ಅಭಿಗೃಣಂತಿ— ಕಪಿಂಜಲಾಃ ಕಾಲೇಕಾಲೇ ಅನ್ನಂ ಸೂಚಯಂತಃ ಸ್ತೋತಾರ ಇವ ಪ್ರದಕ್ಷಿಣಂ ಅಭಿವದಂತು ।** ಇಲ್ಲಿ ಶಕುಂತಯಃ ಎಂಬ ಬಹುವಚನ ಪ್ರಯೋಗವು ಪೂಜ್ಯತೆ (ಗೌರವ) ವನ್ನು ಸೂಚಿಸುವುದಕ್ಕಾಗಿ ಉಪಯೋಗಿಸಲ್ಪಟ್ಟಿರುವುದೆಂದು ಭಾಷ್ಯಕಾರರು ಹೇಳಿರುವರು ; ಋತುಶಬ್ದವು ಕಾಲವಾಚಿಯು. **ಋತುಭಿಃ ಕಾಲೈಃ** ಎಂದು ಯಾಸ್ಕರಿಂದ ಉಕ್ತವಾಗಿದೆ. (ನಿ. ೮-೪). ಇಲ್ಲಿ ಋತುಥಾ ಎಂದರೆ ಬೇರೆಬೇರೆ ಕಾಲಗಳಲ್ಲಿ, ಆಯಾ ಋತುಗಳಲ್ಲಿ ಎಂದರ್ಥವು. **ಕಾರವಃ** ಎಂಬ ಶಬ್ದವು ಸ್ತೋತೃನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೯) ಕಪಿಂಜಲಪಕ್ಷಿಗಳು ಆಯಾ ಕಾಲಗಳಲ್ಲಿ ಎಂದರೆ ಬೇರೆಬೇರೆ ಋತುಕಾಲಗಳಲ್ಲಿ ತಮ್ಮ ಆಹಾರವನ್ನು ಹುಡುಕುತ್ತಾ (ಅಥವಾ ಮನುಷ್ಯರಾದ ನಮಗೆ ದೊರಕಬಹುದಾದ ಆಹಾರವನ್ನು ಸೂಚಿಸುತ್ತಾ) ಯಜ್ಞಗಳಲ್ಲಿ ಸ್ತೋತ್ರಮಾಡುವ ಋತ್ವಿಜರು ಘಟ್ಟಿಯಾಗಿ ಮಂತ್ರಗಳನ್ನು ಪಠಿಸುವಂತೆ ಉಚ್ಚಧ್ವನಿಮಾಡುತ್ತಾ ಸಂಚರಿಸುತ್ತವೆ ಎಂದು ಮುಖ್ಯಾಭಿಪ್ರಾಯವು.

**ಸಾಮಗಾಃ ಗಾಯತ್ರಂ ತ್ರೈಷ್ಟುಭಂ ಚ ಉಭೇ ವಾಚೌ ವದತಿ ಅನುರಾಜತಿ ಚ—ಉಭೇ ಗಾನಂ ಶ್ರೌತಂ ಚ ಸಾಮಗಾಃ ಗಾಯತ್ರಂ ತ್ರೈಷ್ಟುಭಂ ಯಥಾ ವದಂತಿ ತದ್ವತ್ ಶಕುಂತಿಃ ವದತಿ । ಶೃಣ್ವತೋಽನುರಕ್ತಾನ್ ಕರೋತಿ ಚ ॥** ಕಪಿಂಜಲಪಕ್ಷಿಯು ಉಚ್ಚಧ್ವನಿಮಾಡುತ್ತಾ ಸಂಚಾರಮಾಡುವುದೆಂದು ಹಿಂದಿನ ವಾಕ್ಯದಲ್ಲಿ ಹೇಳಿದೆಯಷ್ಟೆ. ಆ ಧ್ವನಿಯನ್ನು ದೃಷ್ಟಾಂತಪೂರ್ವಕವಾಗಿ ವರ್ಣಿಸಿದೆ. ಯಜ್ಞಗಳಲ್ಲಿ ಸಾಮಮಂತ್ರಗಳನ್ನು ಗಾನಮಾಡುವ ಉದ್ಗಾತೃ ಮೊದಲಾದ ಋತ್ವಿಜರೂ ಶಸ್ತ್ರಮಂತ್ರಗಳನ್ನು ಪಠಿಸುವ ಹೋತ್ರಾದಿಋತ್ವಿಜರೂ ಸಹ ಉಚ್ಚಧ್ವನಿಯಿಂದ ಎರಡು ವಿಧವಾದ ಮಂತ್ರಗಳನ್ನು ಎಂದರೆ ಗಾಯತ್ರೀ ಮತ್ತು ತ್ರಿಷ್ಟುಪ್ಛಂದಸ್ಸಿನ ಮಂತ್ರಗಳನ್ನು ಎಂದರೆ ಗಾನ ಮತ್ತು ಪಠನ ಎಂಬ ಎರಡುವಿಧಮಂತ್ರಗಳನ್ನು ಕೇಳುವವರಿಗೆ ಆಹ್ಲಾದಕರವಾಗಿರುವಂತೆ ಯಾವ ರೀತಿ ಪಠಿಸುವರೋ ಅದರಂತೆ ಕಪಂಜಲಪಕ್ಷಿಯೂ ಸಹ ಮಧುರವಾದ ಧ್ವನಿಯಿಂದ ಶಬ್ದಮಾಡುತ್ತಾ ಎಲ್ಲರನ್ನೂ ಅಹ್ಲಾದಗೊಳಿಸುವುದು ಎಂದು ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಉದ್ಗಾತೇವ ಶಕುನೇ ಸಾಮ ಗಾಯಸಿ ಬ್ರಹ್ಮಪುತ್ರ ಇವ ಸವನೇಷು ಶಂಸಸಿ ।
ವೃಷೇವ ವಾಜೀ ಶಿಶುಮತೀರಪೀತ್ಯಾ ಸರ್ವತೋ ನಃ ಶಕುನೇ ಭದ್ರಮಾ ವದ
ವಿಶ್ವತೋ ನಃ ಶಕುನೇ ಪುಣ್ಯಮಾ ವದ ॥ ೧ ॥

ಪದಪಾಠಃ

ಉದ್ಗಾತಾಽಇವ । ಶಕುನೇ । ಸಾಮ । ಗಾಯಸಿ । ಬ್ರಹ್ಮಪುತ್ರಃಽಇವ । ಸವನೇಷು । ಶಂಸಸಿ । ವೃಷಾಽಇವ । ವಾಜೀ । ಶಿಶುಽಮತೀಃ । ಅಪಿಽಇತ್ಯ । ಸರ್ವತಃ । ನಃ । ಶಕುನೇ । ಭದ್ರಂ । ಆ । ವದ ವಿಶ್ವತಃ । ನಃ । ಶಕುನೇ । ಪುಣ್ಯಂ । ಆ । ವದ ॥ ೨ ॥

॥ ಸಾಯಣಭಾಷ್ಯಂ ॥

ಶಕುನೇ ಹೇ ಕಪಿಂಜಲ ಉದ್ಗಾತೇವ ಸಾಮ ಯಥೋದ್ಗಾತಾ ಸಾಮ ಗಾಯತಿ ತಥಾ ತ್ವಂ ಗಾಯಸಿ । ಗಾನಸ್ಸನಂ ಕರೋಷಿ । ಬ್ರಹ್ಮಪುತ್ರ ಇವ ಯಥಾ ಬ್ರಾಹ್ಮಣಾಚ್ಛಂಸೀ ಸವನೇಷು ಶಸ್ತ್ರಾಣಿ ಶಂಸತಿ ತಥಾ ತ್ವಂ ಕಾಲೇಷು ಶಂಸಸಿ । ಶ್ರೌತಸ್ವರಂ ಕರೋಷಿ । ವೃಷೇವ ವಾಜೀ ಸೇಚನಸಮರ್ಥೋಽಶ್ವಃ ಶಿಶುಮತೀರ್ವಡವಾ ಅಪೀತ್ಯಾಭಿಗತ್ಯ ಯಥಾ ಶಬ್ದಂ ಕರೋತಿ ತಥಾ ತ್ವಮಪಿ ವದ । ಶಿಷ್ಟಂ ಸ್ಪಷ್ಟಂ॥

॥ ಪ್ರತಿಪದಾರ್ಥ ॥

**ಶಕುನೇ**—ಎಲೈ ಕಪಿಂಜಲ ಪಕ್ಷಿಯೇ । **ಸಾಮ**—ಸಾಮವನ್ನು । **ಉದ್ಗಾತೇವ**—ಉದ್ಗಾತೃವು ಗಾನ ಮಾಡುವಂತೆ । **ಗಾಯಸಿ**—(ನೀನು) ಗಾನಮಾಡುತ್ತೀಯೆ । **ಸವನೇಷು**—ಯಜ್ಞಕಾಲಗಳಲ್ಲಿ । **ಬ್ರಹ್ಮಪುತ್ರ ಇವ**—ಬ್ರಾಹ್ಮಣಾಚ್ಛಂಸಿಯು ಶಸ್ತ್ರಮಂತ್ರಗಳನ್ನು ಪಠಿಸುವಂತೆ । **ಶಂಸಸಿ**—ನೀನು (ಋತುಧರ್ಮವನ್ನು) ಪ್ರಕಟಿಸುತ್ತೀಯೇ । **ವೃಷೇವ ವಾಜೀ**—ಸೇಚನಸಾಮರ್ಥ್ಯವುಳ್ಳ ಅಶ್ವವು । **ಶಿಶುಮತೀಃ**—ಹೆಣ್ಣುಕುದುರೆಯನ್ನು । **ಅಪೀತ್ಯ**—ಸಮೀಪಿಸಿ (ಶಬ್ದಮಾಡುವಂತೆ) । **ವದ**—ನೀನೂ ಸಂತೋಷ ಸೂಚಕವಾದ ಶಬ್ದವನ್ನು ಮಾಡು । **ಶಕುನೇ**—ಎಲೈ ಪಕ್ಷಿಯೇ । **ನಃ**—ನಮಗೆ । **ಸರ್ವತಃ**—ಎಲ್ಲಾ ಕಡೆಗಳಿಂದಲೂ । **ಭದ್ರಂ**—ಮಂಗಳವನ್ನು । **ಆ ವದ**—ಹೇಳು । **ಶಕುನೇ**—ಎಲೈ ಪಕ್ಷಿಯೇ । **ನಃ**—ನಮಗೆ । **ಪುಣ್ಯಂ**— ಪಾಪರಹಿತವಾದ ಕಲ್ಯಾಣವನ್ನು । **ಆ ವದ**— ಪಠಿಸಿ ಹೇಳು.

॥ ಭಾವಾರ್ಥ ॥

ಎಲೈ ಕಪಿಂಜಲಪಕ್ಷಿಯೇ, ಸಾಮವನ್ನು ಉದ್ಗಾತೃವು ಗಾನಮಾಡುವಂತೆ ನೀನು ಗಾನಮಾಡುತ್ತೀಯೇ-ಯಜ್ಞಕಾಲಗಳಲ್ಲಿ ಬ್ರಾಹ್ಮಣಾಚ್ಛಂಸಿಯು ಶಸ್ತ್ರಮಂತ್ರಗಳನ್ನು ಪಠಿಸುವಂತೆ ನೀನು ಋತುಧರ್ಮವನ್ನು ಪ್ರಕಟಿಸುತ್ತೀಯೆ. ಸೇಚನಸಾಮರ್ಥ್ಯವುಳ್ಳ ಅಶ್ವವು ಹೆಣ್ಣುಕುದುರೆಯನ್ನು ಸಮೀಪಿಸಿ ಶಬ್ದಮಾಡುವಂತೆ ನೀನೂ ಸಂತೋಷ ಸೂಚಕವಾದ ಶಬ್ದವನ್ನು ಮಾಡು. ಎಲೈ ಪಕ್ಷಿಯೇ ನಮಗೆ ಎಲ್ಲಾ ಕಡೆಗಳಿಂದಲೂ ಮಂಗಳವನ್ನು ಹೇಳು. ಪಾಪರಹಿತವಾದ ಕಲ್ಯಾಣವನ್ನು ಪಠಿಸು.

## English Translation.

You sing, Bird, like the Udgatri chanting the Sama : you murmur like the Brahmaputra at sacrifices : like a horse (nighing) when

approaching a mare, you proclaim (aloud) to us good fortune from every quarter : proclaim aloud prosperity to us from every direction.

॥ ವಿಶೇಷವಿಷಯಗಳು ॥

ಹಿಂದಿನ ಋಕ್ಕಿನಲ್ಲಿ ಹೇಳಿರುವ ವಿಷಯವನ್ನೇ ಇಲ್ಲಿ ಪ್ರಕಾರಾಂತರವಾಗಿ ಮತ್ತೊಂದು ದೃಷ್ಟಾಂತದಿಂದ ಹೇಳಲಾಗಿದೆ.

**ಶಕುನೇ ಸಾಮ ಉದ್ಗಾತೇವ ಗಾಯಸಿ**—ಎಲೈ ಶಕುನಪಕ್ಷಿಯೇ, ನೀನು ಯಜ್ಞದಲ್ಲಿ ಉದ್ಗಾತೃವೆಂಬ ಋತ್ವಿಜನು ಸಾಮಗಾನವನ್ನು ಮೃದುಮಧುರವಾಗಿ ಯಾವರೀತಿ ಗಾನಮಾಡುವನೋ ಅದರಂತೆ ಮೃದುವಾದುದೂ, ಕೇಳುವುದಕ್ಕೆ ಶ್ರಾವ್ಯವಾದುದೂ ಆದ ಸೌಮ್ಯವಾದ ಧ್ವನಿಯಿಂದ ಗಾನಮಾಡು.

**ಬ್ರಹ್ಮಪುತ್ರ ಇವ ಶಂಸಸಿ**—ಬ್ರಾಹ್ಮಣಾಚ್ಛಂಸಿ ಎಂಬ ಋತ್ವಿಜನು ಶಸ್ತ್ರಮಂತ್ರಗಳನ್ನು ಯಾವ ರೀತಿ ಪಠಿಸುವನೋ, ನೀನೂ ಸಹ ಅದರಂತೆ ಋತುಧರ್ಮವನ್ನನುಸರಿಸಿ ಹಿತಕರವಾದ ಶಬ್ದವನ್ನು ಮಾಡು. ಇಲ್ಲಿ ಉದ್ಗಾತೃವೆಂಬ ಋತ್ವಿಜನ ಕರ್ತವ್ಯವು ಯಜ್ಞದಲ್ಲಿ ಸಾಮಗಾನಮಾಡುವುದೇ ಆಗಿರುವುದು. ಹೋತೃ ಮತ್ತು ಬ್ರಾಹ್ಮಣಾಚ್ಛಂಸಿಯ ಕರ್ತವ್ಯವು ಶಸ್ತ್ರಮಂತ್ರಗಳನ್ನು ಪಠಿಸುವುದು. ಆದುದರಿಂದ ಉದ್ಗಾತೃವು ಸಾಮವೇದವನ್ನು ಅಧ್ಯಯನಮಾಡಿದವನಾಗಿಯೂ, ಹೋತೃ ಮತ್ತು ಬ್ರಾಹ್ಮಣಾಚ್ಛಂಸಿಯು ಋಗ್ವೇದವನ್ನು ಅಧ್ಯಯನಮಾಡಿದವರಾಗಿಯೂ ಇರಬೇಕು. ಹೀಗಿರುವುದರಿಂದ ಉದ್ಗಾತೃವು ತನ್ನ ವೇದವಾದ ಸಾಮವೇದ ಮಂತ್ರಗಳನ್ನು ಸ್ಪಷ್ಟವಾಗಿಯೂ ಮಧುರವಾಗಿಯೂ ಗಾನಮಾಡುವನು. ಹೋತೃ ಮತ್ತು ಬ್ರಾಹ್ಮಣಾಚ್ಛಂಸಿಗಳು ತಮ್ಮ ವೇದವಾದ ಋಗ್ವೇದ ಮಂತ್ರಗಳನ್ನು ಉಪಯೋಗಿಸಿ ಶಸ್ತ್ರಮಂತ್ರಗಳನ್ನು ಶ್ರಾವ್ಯವಾಗಿ ಪಠಿಸುವರು. ಆದುದರಿಂದ ಉದ್ಗಾತೃ ಮತ್ತು ಬ್ರಾಹ್ಮಣಾಚ್ಛಂಸಿಯು ಶ್ರಾವ್ಯವಾಗಿ ಮಂತ್ರಗಳನ್ನು ಪಠಿಸುವಂತೆ (ಅಥವಾ ಗಾನಮಾಡುವಂತೆ) ಎಂಬ ಎರಡು ವಿಧವಾದ ದೃಷ್ಟಾಂತಗಳು ಇಲ್ಲಿ ಉಕ್ತವಾಗಿರುವುದು.

**ವೃಷೇವ ವಾಜೀ ಶಿಶುಮತೀಃ ಅಪೀತ್ಯ ವದ—ಸೇಚನಸಮರ್ಥೋಽಶ್ವಃ ಶಿಶುಮತೀಃ ವಡವಾಃ ಅಭಿಗತ್ಯ ಯಥಾ ಹರ್ಷಸೂಚಕಂ ಶಬ್ದಂ ಕರೋತಿ ತಥಾ ತ್ವಮಪಿ ವದ** । ಸೇಚನಸಮರ್ಥವಾದ ಎಂದರೆ ಯೌವನಾವಸ್ಥೆಯಲ್ಲಿರುವ ಗಂಡುಕುದುರೆಯು ಹೆಣ್ಣುಕುದುರೆಯ ಸಮೀಪಕ್ಕೆ ಹೋಗಿ ಯಾವ ರೀತಿ ಹರ್ಷಸೂಚಕವಾದ ಹೇಷಾರವನ್ನು ಮಾಡುವುದೋ ಅದರಂತೆ ನೀನು ಹರ್ಷಧ್ವನಿಯನ್ನು ಮಾಡು ಎಂದು ಮತ್ತೊಂದು ದೃಷ್ಟಾಂತವನ್ನು ಸೂಚಿಸಿ ಎಲ್ಲಾ ಕಡೆಯಲ್ಲಿಯೂ ನಮಗೆ ಮಂಗಳವುಂಟಾಗಬೇಕೆಂದೂ ಹರ್ಷಧ್ವನಿಮಾಡಬೇಕೆಂದೂ ಕಪಿಂಜಲ ಪಕ್ಷಿಯನ್ನು ಗೃತ್ಸಮದಋಷಿಯು ಪ್ರಾರ್ಥಿಸಿರುವನು.



॥ ಸಂಹಿತಾಪಾಠಃ ॥

ಆವದಂಸ್ತ್ವಂ ಶಕುನೇ ಭದ್ರಮಾ ವದ ತೂಷ್ಣೀಮಾಸೀನಃ ಸುಮತಿಂ ಚಿಕಿದ್ಧಿ ನಃ ।
ಯದುತ್ಪತನ್ವದಸಿ ಕರ್ಕರಿರ್ಯಥಾ ಬೃಹದ್ವದೇಮ ವಿದಥೇ ಸುವೀರಾಃ ॥ ೩ ॥

॥ ಪದಪಾಠಃ ॥

ಆ॒ಽವದ॑ನ್ । ತ್ವಂ । ಶ॒ಕು॒ನೇ॒ । ಭ॒ದ್ರಂ । ಆ । ವ॒ದ॒ । ತೂ॒ಷ್ಣೀಂ । ಆಸೀ॑ನಃ । ಸು॒ಽಮ॒ತಿಂ । ಚಿ॒ಕಿ॒ದ್ಧಿ॒ । ನಃ॒ ।
ಯತ್ । ಉ॒ತ್ಽಪತ॑ನ್ । ವದ॑ಸಿ । ಕ॒ರ್ಕ॒ರಿಃ । ಯ॒ಥಾ॒ । ಬೃ॒ಹತ್ । ವ॒ದೇ॒ಮ॒ । ವಿ॒ದಥೇ॑ । ಸು॒ಽವೀರಾಃ॑ ॥

॥ ಸಾಯಣಭಾಷ್ಯಂ ॥

**ಶಕುನೇ ಹೇ ಕಪಿಂಜಲ ಆವದನ್ ಶಬ್ದಂ ಕುರ್ವಂಸ್ತ್ವಂ ಭದ್ರಮಾವದ । ಮಂಗಲಂ ವದ । ತೂಷ್ಣೀಮಾಸೀನಸ್ತೂಷ್ಣೀಂ ತಿಷ್ಠನ್ನಪಿ ನೋಽಸ್ಮಾಕಂ ಸುಮತಿಂ ಚಿಕಿದ್ಧಿ । ಬುಧ್ಯಸ್ವ । ಯದ್ಯದೋತ್ಪತನ್ ವದಸಿ ತದಾ ಕರ್ಕರಿರ್ಯಥಾ ಕರ್ಕರಿರಿವ ವದಸಿ । ಕರ್ಕರಿರ್ವಾದ್ಯವಿಶೇಷಃ । ಅನ್ಯದ್ವ್ಯಾಖ್ಯಾತಚರಂ ॥**

॥ ಪ್ರತಿಪದಾರ್ಥ ॥

**ಶಕುನೇ**—ಎಲೈ ಕಪಿಂಜಲ ಪಕ್ಷಿಯೇ । **ಆವದನ್**—ಶಬ್ದವನ್ನು ಮಾಡುತ್ತಾ । **ತ್ವಂ**—ನೀನು । **ಭದ್ರಂ**—ಮಂಗಳವನ್ನು । **ಆ ವದ**—ಉಚ್ಚರಿಸು । **ತೂಷ್ಣೀಂ ಆಸೀನಃ**—ಶಬ್ದಮಾಡದೇ ಸುಮ್ಮನೆ ಕುಳಿತಾಗ । **ನಃ**—ನಮ್ಮ ವಿಷಯದಲ್ಲಿ । **ಸುಮತಿಂ**—ಒಳ್ಳೆಯದಾಗಬೇಕೆಂಬ ಹಾರೈಕೆಯನ್ನು । **ಚಿಕಿದ್ಧಿ**—ಆಲೋಚಿಸು । **ಯತ್**—ಯಾವಾಗ । **ಉತ್ಪತನ್**—ಹಾರುತ್ತಾ । **ವದಸಿ**—ಹಾಡುತ್ತೀಯೋ (ಆಗ) । **ಕರ್ಕರಿಃ ಯಥಾ**—ಕರ್ಕರಿವಾದ್ಯ (ವೀಣಾವಾದ್ಯ) ದಂತೆ ನಿನ್ನ ಹಾಡು ಇಂಪಾಗಿರಲಿ । **ಸುವೀರಾಃ**—ಶ್ರೇಷ್ಠರಾದ ಪುತ್ರರಿಂದೊಡಗೂಡಿದ ನಾವು । **ವಿದಥೇ**—ಯಜ್ಞಗೃಹದಲ್ಲಿ । **ಬೃಹತ್**—ಪ್ರಭೂತವಾದ ಸ್ತೋತ್ರವನ್ನು । **ವದೇಮ**—ಪಠಿಸುವೆವು.

॥ ಭಾವಾರ್ಥ ॥

ಎಲೈ ಕಪಿಂಜಲಪಕ್ಷಿಯೇ, ನೀನು ಶಬ್ದವನ್ನು ಮಾಡುತ್ತಾ ಮಂಗಳವನ್ನು ಉಚ್ಚರಿಸು. ಶಬ್ದವನ್ನು ಮಾಡದೇ ಸುಮ್ಮನೆ ಕುಳಿತಾಗ ನಮ್ಮ ವಿಷಯದಲ್ಲಿ ಒಳ್ಳೆಯದಾಗಬೇಕೆಂದು ಹಾರೈಸು. ಹಾರುತ್ತಾ ಹಾಡುವಾಗ ನಿನ್ನ ಕಂಠವು ಕರ್ಕರಿ ವಾದ್ಯದಂತೆ ಮಧುರವಾಗಿರಲಿ. ಯಜ್ಞಗೃಹದಲ್ಲಿ ನಿನ್ನ ಗುಣಗಳನ್ನು ವರ್ಣಿಸುತ್ತಾ ನಿನ್ನ ಸ್ತುತಿಯನ್ನು ನಮ್ಮ ಸತ್ಪುತ್ರರ ಜೊತೆಯಲ್ಲಿ ಪಠಿಸುವೆವು.

English Translation.

When uttering your cry, O, Bird, proclaim good fortune : when sitting silently, cherish kind thoughts towards us : when you cry as you are flying, let the sound be like that of a lute : so that, blessed with excellent descendants, we may worthily praise you at this sacrifice.

॥ ವಿಶೇಷವಿಷಯಗಳು ॥

**ಶಕುನೇ ಆವದನ್ ತ್ವಂ ಭದ್ರಂ ಆ ವದ**—ಎಲೈ ಕಪಿಂಜಲಪಕ್ಷಿಯೇ, ನೀನು ಶಬ್ದಮಾಡುವಾಗಲೆಲ್ಲಾ ನಮ್ಮ ವಿಷಯದಲ್ಲಿ ಮಂಗಳಕರವಾದ ಶಬ್ದವನ್ನೇ ಉಚ್ಚರಿಸು.

**ತೂಷ್ಣೀಂ ಆಸೀನಃ ನಃ ಸುಮತಿಂ ಚಿಕಿದ್ಧಿ**—ಶಬ್ದಮಾಡದೇ ಸುಮ್ಮನೆ ಕುಳಿತಿರುವಾಗ ನಮ್ಮ ವಿಷಯದಲ್ಲಿ ಒಳ್ಳೆಯದಾಗಬೇಕೆಂಬ ಬುದ್ಧಿಯನ್ನೇ ವ್ಯಕ್ತಪಡಿಸು ಎಂದರೆ ನಮಗೆ ಒಳ್ಳೆಯದಾಗಬೇಕೆಂದು ಹಾರೈಸು.

**ಯತ್ ಉತ್ಪತನ್ ವದಸಿ ಕರ್ಕರಿಃ ಯಥಾ (ವದಸಿ)**—ನೀನು ಹಾರಾಡುತ್ತಾ ಇರುವಾಗ ಶಬ್ದ ಮಾಡುವಿಯಾದರೆ ಕರ್ಕರಿ ಎಂಬ ವಾದ್ಯವಿಶೇಷವು ಯಾವ ರೀತಿ ಇಂಪಾದ ಧ್ವನಿಯನ್ನು ಪ್ರಕಟಿಸುವುದೋ ಅದರಂತೆ ಮಧುರವಾಗಿ ಹಾಡು.

**ಸುವೀರಾಃ ವಿದಥೇ ಬೃಹತ್ ವದೇಮ**—ಪುತ್ರಪೌತ್ರರಿಂದೊಡಗೂಡಿ ನಾವು ಈ ಯಜ್ಞದಲ್ಲಿ ಅತಿಶಯವಾಗಿ ನಿನ್ನ ಗುಣಗಾನರೂಪವಾದ ಮಂತ್ರಗಳನ್ನು ಬಹಳವಾಗಿ ಪಠಿಸುವೆವು.

ಈ ಸೂಕ್ತಕ್ಕೆ ಸೇರಿದಂತೆ ಕೆಲವು ಪರಿಶಿಷ್ಟಮಂತ್ರಗಳಿರುವುವು. ಈ ಪರಿಶಿಷ್ಟ ಮಂತ್ರಗಳು ಇತರ ಶಾಖೆಗಳಲ್ಲಿ ಕ್ರಮವಾದ ಮಂತ್ರಗಳಾಗಿ ಪಠಿತವಾಗಿರುವುವು. ಇಲ್ಲಿ ಮಾತ್ರ ಪರಿಶಿಷ್ಟಮಂತ್ರಗಳೆಂದು ಭಾವಿಸಲಾಗಿದೆ. ಇವು ಸಾಧಾರಣವಾಗಿ ಆಯಾ ಸೂಕ್ತಗಳ ದೇವತೆಗಳನ್ನು ಸ್ತುತಿಸಿ ಮಾಡಿರುವ ಪ್ರಾರ್ಥನೆಗಳನ್ನೊಳಗೊಂಡಿವೆ. ಅವುಗಳನ್ನು ಈ ಮಂಡಲಾಂತ್ಯದಲ್ಲಿ ಪಠಿಸುವ ರೂಢಿ ಇರುವುದು. ಮತ್ತು ಈ ಮಂಡಲದ ೩೨ ನೇ ಸೂಕ್ತದ ಅಂತ್ಯದಲ್ಲಿ ಕುಹೂ, ಸಿನೀವಾಲಿ ಎಂಬ ದೇವತೆಗಳ ಪರವಾದ ಪರಿಶಿಷ್ಟ ಮಂತ್ರಗಳೂ ಇರುವುವು. ಮಂಡಲವು ಸಮಾಪ್ತಿಯಾಗಿರುವುದರಿಂದ ಆ ಪರಿಶಿಷ್ಟ ಮಂತ್ರಗಳನ್ನು ಅವುಗಳ ಮುಖ್ಯಾಭಿಪ್ರಾಯವನ್ನು ಇಲ್ಲಿ ವಿವರಿಸುವೆವು.



## ಎರಡನೆಯ ಮಂಡಲದ ೩೨ ನೆಯ ಸೂಕ್ತಾಂತ್ಯದಲ್ಲಿ

### ಪಠಿಸಬೇಕಾದ ಖಿಲ (ಪರಿಶಿಷ್ಟ) ಮಂತ್ರಗಳು.

ಋಷಿಃ—ಹಿರಣ್ಯಗರ್ಭಃ ॥

ದೇವತಾ—೧-೨ ಕುಹೂಃ । ೩-೪ ಅನುಮತಿಃ । ೫-೮ ಧಾತಾ ॥

ಛಂದಃ—೧, ೨, ೬, ೮ ತ್ರಿಷ್ಟುಪ್ । ೫ ಗಾಯತ್ರೀ ೩, ೪, ೭ ಅನುಷ್ಟುಪ್ ।

**ಕುಹೂಮಹಂ ಸುವೃತಂ ವಿದ್ಮನಾಪಸಮಸ್ಮಿನ್ ಯಜ್ಞೇ ಸುಹವಾಂ ಜೋಹವೀಮಿ ।**
**ಸಾ ನೋ ದದಾತು ಶ್ರವಣಂ ಪಿತೃಣಾಂ ತಸ್ಯೈ ತೇ ದೇವಿ ಹವಿಷಾ ವಿಧೇಮ ॥ ೧ ॥**
**ಕುಹೂರ್ದೇವಾನಾಮಮೃತಸ್ಯ ಪತ್ನೀ ಹವ್ಯಾ ನೋ ಅಸ್ಯ ಹವಿಷಃ ಶೃಣೋತು ।**
**ಸಂ ದಾಶುಷೇ ಕಿರತು ಭೂರಿ ವಾಮಂ ರಾಯಸ್ಪೋಷಂ ಯಜಮಾನೇ ದಧಾತು ॥ ೨ ॥**
**ಅನು ನೋಽದ್ಯಾನುಮತಿರ್ಯಜ್ಞಂ ದೇವೇಷು ಮನ್ಯತಾಂ ।**
**ಅಗ್ನಿಶ್ಚ ಹವ್ಯವಾಹನೋ ಭವತಂ ದಾಶುಷೇ ಮಯಃ ॥ ೩ ॥**
**ಅನ್ವಿದನುಮತೇ ತ್ವಂ ಮನ್ಯಾಸೈ ಶಂ ಚ ನಸ್ಕೃಧಿ ।**
**ಕ್ರತ್ವೇ ದಕ್ಷಾಯ ನೋ ಹಿನು ಪ್ರ ಣ ಆಯೂಂಷಿ ತಾರಿಷತ್ ॥ ೪ ॥**

ಧಾತಾ ದದಾತು ನೋ ರಯಿಮೀಶಾನೋ ಜಗತಸ್ಪತಿಃ ।
ಸ ನಃ ಪೂರ್ಣೇನ ವಾವನತ್ || ೫ ||
ಧಾತಾ ದದಾತು ದಾಶುಷೇ ವಸೂನಿ ಪ್ರಜಾಕಾಮಾಯ ಮೀಳ್ಹುಷೇ ದುರೋಣೇ ।
ತಸ್ಮೈ ದೇವಾ ಅಮೃತಾಃ ಸಂ ವ್ಯಯಂತಾಂ ವಿಶ್ವೇ ದೇವಾಸೋ ಅದಿತಿಃ ಸಜೋಷಾಃ || ೬ ||
ಧಾತಾ ದದಾತು ದಾಶುಷೇ ಪ್ರಾಚೀಂ ಜೀವಾತುಮಕ್ಷಿತಾಂ ।
ವಯಂ ದೇವಸ್ಯ ಧೀಮಹಿ ಸುಮತಿಂ ವಾಜಿನೀವತಃ || ೭ ||
ಧಾತಾ ಪ್ರಜಾನಾಮುತ ರಾಯ ಈಶೇ ಧಾತೇದಂ ವಿಶ್ವಂ ಭುವನಂ ಜಜಾನ ।
ಧಾತಾ ಕೃಷ್ಟೀರನಿಮಿಷಾಭಿಚಷ್ಟೇ ಧಾತ್ರ ಇದ್ಧವ್ಯಂ ಘೃತವಜ್ಜುಹೋತ || ೮ ||

ಅರ್ಥಾನುವಾದವು

೧. ಈ ಮಂತ್ರವು ಕೂಹೂದೇವತೆಯ ಪುರೋಸುವಾಕ್ಯಾಮಂತ್ರವು. ಚಂದ್ರನು ಸ್ವಲ್ಪವೂ ಕಾಣಿಸದಿರುವ ಅಮಾವಾಸ್ಯೆಗೆ ಕುಹೂ ಎಂದು ಹೆಸರು. ಶೋಭನಧನವುಳ್ಳವಳೂ, ಯಜ್ಞಾದಿಕರ್ಮಗಳನ್ನು ತಿಳಿದವಳೂ ಆದ ಕುಹೂ ಎಂಬ ದೇವತೆಯನ್ನು ಈ ಯಜ್ಞದಲ್ಲಿ ಆಹ್ವಾನಮಾಡುತ್ತೇನೆ. ಆ ದೇವತೆಯು ನಮಗೆ ಶ್ರುತಿಸುಖವನ್ನೂ, ಪೂರ್ವಪಿತೃಸಂಬಂಧವಾದ ಧನ, ಯಶಸ್ಸು ಇವುಗಳನ್ನೂ ಕೊಡಲಿ. ಎಲೈ ದೇವಿ, ಇಂತಹ ನಿನಗೆ ಹವಿಸ್ಸನ್ನು ಅರ್ಪಿಸಿ ಉಪಚರಿಸುತ್ತೇವೆ.

೨. ಈ ಮಂತ್ರವು ಕುಹೂದೇವತೆಯ ಯಾಜ್ಯಾಮಂತ್ರವು. :ದೇವತೆಗಳ ಮಧ್ಯದಲ್ಲಿ ಈ ಕುಹೂದೇವಿಯು ಅಮೃತಕ್ಕೆ ಅಥವಾ ಉದಕ್ಕೆ ಪಾಲಕಳಾಗಿರುವಳು. ನಮ್ಮಿಂದ ಆಹೂತಳಾದ ಈ ದೇವಿಯು ನಾವು ಅರ್ಪಿಸುವ ಹವಿಸನ್ನೂ ಚರುವನ್ನೂ ತನಗಾಗಿ ಸಿದ್ಧಪಡಿಸಿದೆಯೆಂದು ತಿಳಿಯಲಿ. ಈ ರೀತಿ ತಿಳಿದನಂತರ ಯಜ್ಞಮಾಡುವ ಯಜಮಾನನಿಗೆ ಅಪೇಕ್ಷಿತವಾದ ಧನ, ಪುಷ್ಟಿ ಇವುಗಳನ್ನು ಬಹಳವಾಗಿ ಕೊಡಲಿ.

೩. ಊನಚಂದ್ರಾ ಪೌರ್ಣಮಾಸೀ ಎಂದರೆ ಚಂದ್ರನು ಸಂಪೂರ್ಣವಾಗಿಲ್ಲದಿರುವ ಪೌರ್ಣಮಾಸಿಗೆ ಅನುಮತಿಯೆಂದುಹೆಸರು. ಈ ಮಂತ್ರವು ಅನುಮತಿದೇವಿಯ ಪುರೋನುವಾಕ್ಯಾಮಂತ್ರವು. ಈಗ ನಾವು ಮಾಡುತ್ತಿರುವ ಯಜ್ಞವನ್ನು ಅನುಮತೀದೇವಿಯು ದೇವತೆಗಳಲ್ಲಿ ತಿಳಿಯಪಡಿಸಲಿ. ದೇವತೆಗಳಿಗೆ ಹವ್ಯವನ್ನು ವಹಿಸುವ ಅಗ್ನಿಯೂ ಅನುಮತಿಯೂ ಈ ಇಬ್ಬರೂ ಹವಿಸ್ಸನ್ನರ್ಪಿಸುವ ಯಜಮಾನನಿಗೆ ಸುಖವನ್ನುಂಟುಮಾಡಲಿ.

೪. ಈ ಮಂತ್ರವು ಅನುಮತಿದೇವಿಯ ಯಾಜ್ಯಾಮಂತ್ರವು. ಎಲೈ ಅನುಮತಿದೇವಿಯೇ, ನಾವು ಮಾಡುತ್ತಿರುವ ಯಜ್ಞವನ್ನು ತಿಳಿದು (ಅಥವಾ ಅನುಮೋದಿಸಿ) ನಮಗೆ ಸುಖವನ್ನುಂಟುಮಾಡು. ಅನ್ನಾರ್ಥವಾಗಿ ನಾವು ಮಾಡುತ್ತಿರುವ ಯಜ್ಞದಲ್ಲಿ ನಮ್ಮನ್ನು ಪ್ರೇರಿಸು ಮತ್ತು ನಮಗೆ ದೀರ್ಘಾಯುಸ್ಸು ಉಂಟಾಗುವಂತೆ ಪ್ರವರ್ತಿಸು.

೫. ದೇವಿಕಾಯಾಗದಲ್ಲಿ ಧಾತೃವನ್ನುದ್ದೇಶಿಸಿ ಮಾಡುವ ದ್ವಾದಶಕಪಾಲ ಹವಿಸ್ಸನ್ನು ಹೋಮಮಾಡುವಾಗ ಈ ಮಂತ್ರವು ಧಾತೃವಿನ ಪುರೋನುವಾಕ್ಯಾಮಂತ್ರವು. ಈ ಮಂತ್ರವು ಗಾಯತ್ರೀಛಂದಸ್ಸಿನಲ್ಲಿರುವುದು. ವಿಶ್ವವನ್ನು ಎಂದರೆ ಪ್ರಪಂಚವೆಲ್ಲವನ್ನೂ ಧರಿಸಿ ಪೋಷಿಸುವ ಧಾತೃವು (ಪರಮೇಶ್ವರನು) ನಮಗೆ ಧನವನ್ನು ಕೊಡಲಿ. ಆ ದೇವನು ಜಗತ್ತಿಗೆ ಪ್ರಭುವಾಗಿಯೂ ಪಾಲಕನಾಗಿಯೂ ಇರುವನು. ಅಂತಹ ಧಾತೃವು ನಮಗೆ ಪೂರ್ಣಸುಖವನ್ನುಂಟುಮಾಡಲಿ.

೬. ಈ ಮಂತ್ರವು ಧಾತೃದೇವತೆಯ ಯಾಜ್ಯಾಮಂತ್ರವು. ಆ ಧಾತೃವು ಹವಿಸ್ಸನ್ನು ಅರ್ಪಿಸಿದ, ಗೃಹಸ್ಥನಾಗಿಯೂ ಪುತ್ರಸಂತತಿಯನ್ನಪೇಕ್ಷಿಸುವವನೂ ಆದ ಯಜಮಾನನಿಗೆ ಧನಗಳನ್ನು ಕೊಡಲಿ. ಆ ಯಜಮಾನನಿಗಾಗಿ ಮರಣರಹಿತರಾದ ದೇವತೆಗಳೂ, ವಿಶ್ವೇದೇವತೆಗಳೂ, ದೇವಮಾತೆಯಾದ ಅದಿತಿಯೂ ಎಲ್ಲರೂ ಸೇರಿ ಸಮಾನಪ್ರೀತಿಯುಳ್ಳವರಾಗಿ ಧನಾದಿಗಳನ್ನು ಸೇರಿಸಿಕೊಡಲಿ.

೭. ಈ ಋಕ್ಕೂ ಮುಂದಿನ ಋಕ್ಕೂ ಸಹ ವಿಕಲ್ಪವಾಗಿ ಅನುವಾಕ್ಯಾ ಮತ್ತು ಯಾಜ್ಯಾಮಂತ್ರಗಳನ್ನಾಗಿ ಉಪಯೋಗಿಸಬಹುದು. ಈ ಧಾತೃವು ನಮಗೆ ಜೀವನಾರ್ಥವಾಗಿ ಬೇಕಾಗುವ ಮತ್ತು ಕಮ್ಮಿಯಾಗದಿರುವ ಧನವನ್ನು ಕೊಡಲಿ. ನಾವು ಅನ್ನಾರ್ಥಿಗಳಾಗಿ ಈ ದೇವನ ವಿಷಯದಲ್ಲಿ ಉತ್ತಮವಾದ ಬುದ್ಧಿಯನ್ನು ಧರಿಸೋಣ ಎಂದರೆ ಪ್ರದರ್ಶಿಸೋಣ.

೮. ಇದು ವಿಕಲ್ಪದಿಂದ ಮಾಡುವ ಯಾಜ್ಯಾ ಮಂತ್ರವು. ಈ ಧಾತೃವು ಯಜಮಾನನಿಗೆ ಪ್ರಜೆಗಳನ್ನು ಎಂದರೆ ಪುತ್ರಪೌತ್ರಾದಿಸಂತತಿಯನ್ನು ಕೊಡುವ ವಿಷಯದಲ್ಲಿಯೂ ಧನಕ್ಕೂ ಪ್ರಭುವಾಗಿದಾನೆ ಈ ಧಾತೃವೇ ಈ ಸಮಸ್ತ ಲೋಕಗಳನ್ನು ಉತ್ಪತ್ತಿಮಾಡಿರುವನು. ಈ ದೇವನು ಯಜಮಾನನಿಗೆ ಪುತ್ರನನ್ನು ಕೊಡುವನು. ಇಂತಹ ಈ ಧಾತೃದೇವನನ್ನುದ್ದೇಶಿಸಿ ಘೃತಯುಕ್ತವಾದ ಹವಿಸ್ಸನ್ನು ಅರ್ಪಿಸುವೆವು ಎಂದು ಮುಖ್ಯಾಭಿಪ್ರಾಯವು.

ಈ ಮಂತ್ರಗಳೆಲ್ಲವೂ ಅಲ್ಪಸ್ವಲ್ಪ ವ್ಯತ್ಯಾಸದೊಡನೆ ತೈತ್ತಿರೀಯ ಸಂಹಿತೆಯಲ್ಲಿ (ತೈ. ಸಂ. ೩-೩-೧೧-೨, ೩, ೪, ೫) ಪಠಿತವಾಗಿರುವುವು



## ಎರಡನೆಯ ಮಂಡಲದ ಅಂತ್ಯದಲ್ಲಿ ಪಠಿಸಬೇಕಾದ ಪರಿಶಿಷ್ಟಮಂತ್ರಗಳು.

ಭದ್ರಂ ವದ ದಕ್ಷಿಣತೋ ಭದ್ರಮುತ್ತರತೋ ವದ ।
ಭದ್ರಂ ಪುರಸ್ತಾನ್ನೋ ವದ ಭದ್ರಂ ಪಶ್ಚಾತ್ ಕಪಿಂಜಲ ॥ ೧ ॥
ಭದ್ರಂ ವದ ಪುತ್ರೈರ್ಭದ್ರಂ ವದ ಗೃಹೇಷು ಚ ।
ಭದ್ರಮಸ್ಮಾಕಂ ನೋ ವದ ಭದ್ರಂ ನೋ ಅಭಯಂ ವದ ॥ ೨ ॥
ಭದ್ರಮಧಸ್ತಾನ್ನೋ ವದ ಭದ್ರಮುಪರಿಷ್ಟಾನ್ನೋ ವದ ।
ಭದ್ರಂಭದ್ರಂ ನ ಆ ವದ ಭದ್ರಂ ನಃ ಸರ್ವತೋ ವದ ॥ ೩ ॥
ಅಸಪತ್ನಃ ಪುರಸ್ತಾನ್ನಃ ಶಿವಂ ದಕ್ಷಿಣತಸ್ಕೃಧಿ ।
ಅಭಯಂ ಸತತಂ ಪಶ್ಚಾದ್ಭದ್ರಮುತ್ತರತೋ ಗೃಹೇ ॥ ೪ ॥
ಯೌವನಾನಿ ಮಹಯಸಿ ಜಿಗ್ಯುಷಾಮಿವ ದುಂದುಭಿಃ ।
ಶಕುಂತಕ ಪ್ರದಕ್ಷಿಣಂ ಶತಪತ್ರಾಭಿ ನೋ ವದ ॥ ೫ ॥
ಆವದಂಸ್ತ್ವಂ ಶಕುನೇ ಭದ್ರಮಾ ವದ ತೂಷ್ಣೀಮಾಸೀನಃ ಸುಮತಿಂ ಚಿಕಿದ್ಧಿ ನಃ ।
ಯದುತ್ಪತನ್ ವದಸಿ ಕರ್ಕರಿರ್ಯಥಾ ಬೃಹದ್ವದೇಮ ವಿದಥೇ ಸುವೀರಾಃ ॥ ೬ ॥

ಅರ್ಥಾನುವಾದವು—ಎಲೈ ಕಪಿಂಜಲಪಕ್ಷಿಯೇ, ನಮ್ಮ ವಿಷಯದಲ್ಲಿ ಶ್ರೇಯಸ್ಸುಂಟಾಗುವುದಕ್ಕಾಗಿ ನೀನು ದಕ್ಷಿಣ ದಿಕ್ಕಿನಲ್ಲಿಯೂ, ಉತ್ತರದಿಕ್ಕಿನಲ್ಲಿಯೂ, ಮುಂದುಗಡೆಯೂ, ಹಿಂದುಗಡೆಯೂ ಮಂಗಳಕರವಾದ ಶಬ್ದವನ್ನೇ ಮಾಡು. ನಮ್ಮ ಪುತ್ರರ ವಿಷಯದಲ್ಲಿಯೂ ಮನೆಗಳ ವಿಷಯದಲ್ಲಿಯೂ ಮಂಗಳವಾಗುವಂತೆ ಶುಭವಾಕ್ಯವನ್ನು ನುಡಿ. ನಮಗೆ ಮಂಗಳವಾಗಲೆಂದೂ ಭಯವುಂಟಾಗದಿರಲೆಂದೂ ನುಡಿ. ನಮ್ಮ ಕೆಳಗಡೆ, ಮೇಲೆ ಮತ್ತು ಎಲ್ಲಾ ಕಡೆಗಳಲ್ಲಿಯೂ ಮಂಗಳವುಂಟಾಗುವಂತೆ ಶುಭವಾಕ್ಯಗಳನ್ನು ನುಡಿ. ನಮ್ಮ ಮುಂದೆ ಶತ್ರುವಿಲ್ಲದಂತೆಯೂ ದಕ್ಷಿಣದಲ್ಲಿ ಮಂಗಳವುಂಟಾಗುವಂತೆಯೂ, ನಮಗೆ ಯಾವಾಗಲೂ ಭಯವುಂಟಾಗದಂತೆಯೂ ಉತ್ತರದಿಕ್ಕಿನಲ್ಲಿಯೂ, ಮನೆಯಲ್ಲಿಯೂ ಮಂಗಳವುಂಟಾಗುವಂತೆಯೂ ಮಾಡು. ಎಲೈ ಶಕುಂತಪಕ್ಷಿಯೇ, ನೀನು ಸಂಚರಿಸುತ್ತಿರುವಾಗ ನಮಗೆ ಯೌವನದ ಶಕ್ತಿಸಾಮರ್ಥ್ಯಗಳನ್ನೂ ಯುದ್ಧಾದಿಗಳಲ್ಲಿ ಜಯಲಾಭವನ್ನೂ ಒದಗಿಸಿಕೊಡು. ಎಲೈ ಕಪಿಂಜಲಪಕ್ಷಿಯೇ, ನೀನು ಶಬ್ದವನ್ನು ಮಾಡುತ್ತಾ ಮಂಗಳವನ್ನು ಉಚ್ಚರಿಸು. ಶಬ್ದವನ್ನು ಮಾಡದೆ ಸುಮ್ಮನೆ ಕುಳಿತಾಗ ನಮ್ಮ ವಿಷಯದಲ್ಲಿ ಒಳ್ಳೆಯದಾಗಬೇಕೆಂದು ಹಾರೈಸು. ಹಾಡುತ್ತಾ ಇರುವಾಗ ನಿನ್ನ ಕಂಠವು ಕರ್ಕರಿ ಎಂಬ ವಾದ್ಯದಂತೆ ಮಧುರವಾಗಿರಲಿ. ಯಜ್ಞಗೃಹದಲ್ಲಿ ನಿನ್ನ ಗುಣಗಳನ್ನು ಬಹಳವಾಗಿ ವರ್ಣಿಸುತ್ತಾ ನಿನ್ನ ಸ್ತುತಿಯನ್ನು ನಮ್ಮ ಪುತ್ರಪೌತ್ರಾದಿಗಳೊಡನೆ ಕೂಡಿ ಪಠಿಸುವೆವು.



**ಇತಿ ಸಾಯಣಾಚಾರ್ಯವಿರಚಿತೇ ಮಾಧವೀಯೇ**
**ವೇದಾರ್ಥಪ್ರಕಾಶೇ ದ್ವಿತೀಯಾಷ್ಟಕೇ ದ್ವಿತೀಯೇ ಮಂಡಲೇ**
**ಚತುರ್ಥೋಽನುವಾಕಃ**
**ಸಮಾಪ್ತಂ ಚ ದ್ವಿತೀಯಂ ಮಂಡಲಂ ॥**

ಇಲ್ಲಿಗೆ ಎರಡನೆಯ ಮಂಡಲವು ಸಮಾಪ್ತವಾದುದು.

॥ ಶುಭಂ ಭೂಯಾತ್ ॥



|| ಶ್ರೀಃ ||

# ಅಥ ತೃತೀಯಂ ಮಂಡಲಂ

## ಮೂರನೆಯ ಮಂಡಲವು

## ಪೀಠಿಕೆ.

ಋಗ್ವೇದದ ಮೂರನೆಯ ಮಂಡಲಕ್ಕೆ ಸಪ್ತಋಷಿಗಳಲ್ಲಿ ಒಬ್ಬನಾದ ವಿಶ್ವಾಮಿತ್ರನು ಋಷಿಯು. ಈ ಮಂಡಲಕ್ಕೆ ವಿಶ್ವಾಮಿತ್ರನೇ ಋಷಿಯೆಂದು ಪ್ರಸಿದ್ಧವಾಗಿದ್ದರೂ ಈ ಮಂಡಲದಲ್ಲಿರುವ ೧-೧೨, ಸೂಕ್ತಗಳು (ಒಟ್ಟು ೧೪೦ ಋಕ್ಕುಗಳು); ೨೪-೩೨ ಸೂಕ್ತಗಳು (೧೧೭ ಋಕ್ಕುಗಳು); ೩೩ ನೇ ಸೂಕ್ತದಲ್ಲಿ ೧-೩, ೫, ೭, ೯, ೧೧-೧೩ ಋಕ್ಕುಗಳು (ಒಟ್ಟು ೯ ಋಕ್ಕುಗಳು); ೩೪-೩೫ ಸೂಕ್ತಗಳು (೨೨ ಋಕ್ಕುಗಳು); ೩೬ ನೆಯ ಸೂಕ್ತದಲ್ಲಿ ೧-೯, ೧೧ ಋಕ್ಕುಗಳು (ಒಟ್ಟು ೧೦ ಋಕ್ಕುಗಳು); ೩೭-೫೩ ಸೂಕ್ತಗಳು (೧೪೪ ಋಕ್ಕುಗಳು); ೫೭-೬೨ ಸೂಕ್ತಗಳು (೫೬ ಋಕ್ಕುಗಳು); ಒಂಭತ್ತನೆಯ ಮಂಡಲದ ೬೭ ನೆಯ ಸೂಕ್ತದಲ್ಲಿ ೧೩-೧೫ ಋಕ್ಕುಗಳು (೩ ಋಕ್ಕುಗಳು) ಇವೆಲ್ಲವೂ ಸೇರಿ ಆಗುವ ೫೦೧ ಋಕ್ಕುಗಳಿಗೆ ಮಾತ್ರ ವಿಶ್ವಾಮಿತ್ರನು ಋಷಿಯು ಈ ಮಂಡಲದಲ್ಲಿ ಉಳಿದಿರುವ ಇತರ ಋಕ್ಕುಗಳಿಗೆ ವಿಶ್ವಾಮಿತ್ರ ವಂಶಸ್ಥರಾದ ಇತರರು ಋಷಿಗಳು. ಪ್ರಸಕ್ತವಾದ ಈ ಭಾಗದಲ್ಲಿ ಈ ಮಂಡಲದ ೧-೬ ಸೂಕ್ತಗಳಿರುವುವು.

ವಿಶ್ವಾಮಿತ್ರಋಷಿಯ ವಿಷಯವಾಗಿ ಯಾಸ್ಕರು ತಮ್ಮ ನಿರುಕ್ತದಲ್ಲಿ—

**ವಿಶ್ವಾಮಿತ್ರ ಋಷಿಃ ಸುದಾಸಃ ಪೈಜವನಸ್ಯ ಪುರೋಹಿತೋ ಬಭೂವ। ವಿಶ್ವಾಮಿತ್ರಃ ಸರ್ವಮಿತ್ರಃ। ಸರ್ವಂ ಸಂಸೃತಂ। ಸುದಾಃ ಕಲ್ಯಾಣದಾನಃ। ಪೈಜವನಃ ಪಿಜವನಸ್ಯ ಪುತ್ರಃ। ಪಿಜವನಃ ಪುನಃ ಸ್ಪರ್ಧನೀಯಜವೋ ವಾಮಿಶ್ರೀ ಭಾವಗತಿರ್ವಾ॥ ಸ ವಿತ್ತಂ ಗೃಹೀತ್ವಾ ವಿಪಾಟ್‌ಛುತುದ್ರ್ಯೋಃ ಸಂಭೇದಮಾಯಯೌ। ಅನುಯಯುರಿತರೇ। ಸ ವಿಶ್ವಾಮಿತ್ರೋ ನದೀಸ್ತುಷ್ಟಾವ-ಗಾಧಾ ಭವತ-ಇತಿ। ಅಪಿ ದ್ವಿವದಪಿ ಬಹುವತ್ ತದ್ಯದ್ದ್ವಿ-ವದುಪರಿಷ್ಟಾತ್ತದ್ವ್ಯಾಖ್ಯಾಸ್ಯಾಮಃ॥**

(ನಿ. ೨-೨೪)

ಎಂದು ಒಂದು ಪೂರ್ವೇತಿಹಾಸವನ್ನು ಹೇಳಿರುವರು. ವಿಶ್ವಾಮಿತ್ರನೆಂದರೆ ಈ ಋಷಿಯು ಸಕಲರಿಗೂ ಸ್ನೇಹಿತನು ಅಥವಾ ಸಕಲರೂ ಇವನ ಸ್ನೇಹಿತರು ಎಂದು ವಿಶ್ವಾಮಿತ್ರಶಬ್ದದ ಅವಯವಾರ್ಥವು. ಈ ಋಷಿಯು ಪಿಜವನ ಪುತ್ರನಾದ ಸುದಾಸನೆಂಬ ರಾಜನಿಗೆ ಪುರೋಹಿತನಾಗಿದ್ದನು. ಒಂದು ಸಮಯದಲ್ಲಿ ಆ ರಾಜನು ಕೊಟ್ಟ ಧನವನ್ನು ತೆಗೆದುಕೊಂಡು ತನ್ನ ಆಶ್ರಮಕ್ಕೆ ಹೋಗಬೇಕೆಂದು ಹೊರಟು ವಿಪಾಟ್ ಮತ್ತು ಶುತುದ್ರಿ ಎಂಬ ನದಿಗಳ (ಪಂಜಾಬಿ

ನಲ್ಲಿರುವ ಈಗಿನ Beas and Sutlej ಎಂಬ ನದಿಗಳು) ಸಂಗಮಸ್ಥಾನಕ್ಕೆ ಬಂದನು. ಇವನಲ್ಲಿದ್ದ ದ್ರವ್ಯವನ್ನು ಅಪಹರಿಸಬೇಕೆಂದು ಕಳ್ಳರು ಇವನನ್ನನುಸರಿಸಿ ಬರುತ್ತಿದ್ದರು. ಇದನ್ನು ತಿಳಿದು ವಿಶ್ವಾಮಿತ್ರನು ಹೇಗಾದರೂ ಮಾಡಿ ದಾರಿಗೆ ಅಡ್ಡಲಾಗಿರುವ ಈ ನದಿಗಳನ್ನು ದಾಟಬೇಕೆಂದು ಪ್ರಯತ್ನಿಸಲು ಅವು ಪ್ರವಾಹದ ನೀರಿನಿಂದ ಬಹಳ ಆಳವಾಗಿದ್ದುದರಿಂದ ಸಾಧ್ಯವಾಗಲಿಲ್ಲ. ಆಗ ಋಷಿಯು ಈ ನದಿಗಳನ್ನು ಪ್ರಾರ್ಥಿಸುತ್ತಾ ತಮ್ಮ ನೀರನ್ನು ಕಡಿಮೆಮಾಡಿಕೊಂಡು ತಾನು ಹಾದುಹೋಗಲು ಅನುಕೂಲವಾಗುವಂತೆ ಮಾಡಬೇಕೆಂದು ಸ್ತೋತ್ರಮಾಡಿದನೆಂದು (ಋ. ಸಂ. ೩-೩೩) ನೆಯ ಸೂಕ್ತದಲ್ಲಿಯೂ ಋ ಸಂ. ೩-೫೩ ರಲ್ಲಿ ೯-೧೧ ಋಕ್ಕುಗಳಲ್ಲಿಯೂ ಹೇಳಿದೆ.

ಈ ವಿಶ್ವಾಮಿತ್ರಋಷಿಯು ಮೇಲಿನ ಸೂಕ್ತದಲ್ಲಿ ಎಂದರೆ ಋ. ಸಂ. ೩-೩೩-೮ರಲ್ಲಿ ತಾನು ಕುಶಿಕನ ಮಗನೆಂದು ಹೆಳಿಕೊಂಡಿದಾನೆ. ವಿಶ್ವಾಮಿತ್ರನಿಗೂ ವಸಿಷ್ಠಋಷಿಗಳಿಗೂ ದ್ವೇಷಾಸೂಯೆಗಳಿದ್ದುವೆಂದು ರಾಮಾಯಣ ಭಾರತ ಮತ್ತು ಇತರ ಪುರಾಣಗಳಲ್ಲಿ ಹೇಳಿದೆ. ಇದಕ್ಕೆ ಆಧಾರವೂ ಋಗ್ವೇದದಲ್ಲಿ ಕೆಲವು ಕಡೆ ಇದೆ. ಅದನ್ನು ಈ ಭಾಗದ ಪೀಠಿಕೆಯಲ್ಲಿ ಹೇಳಿದೆ.

ವಿಶ್ವಾಮಿತ್ರ ಮತ್ತು ಈ ಋಷಿಯ ವಂಶಸ್ಥರ ಹೆಸರು. ಋ. ಸಂ. ೩-೧-೨೧ ; ೩-೧೮-೪ ; ೩-೫೩-೨೩ ; ೧೦-೮೯-೧೭ ; ಅ. ವೇ. ೧೮-೩-೬ ; ೧೮-೪-೫೪ ; ಜೈಮಿನಿಯ ಉಪನಿಷದ್ರ್ಬಾಹಣ ೩-೧೫-೧ ಇತ್ಯಾದಿ ಮಂತ್ರಗಳಲ್ಲಿ ಪಠಿತವಾಗಿರುವುದು. ಶುನಶ್ಯೇಫನ ವಿಷಯವಾದ ಇತಿಹಾಸದಲ್ಲಿ ವಿಶ್ವಾಮಿತ್ರನ ಪಾತ್ರವು ಬಹು ಮುಖ್ಯವಾಗಿದೆ. ಅದನ್ನು ನಾವು ಋ. ಸಂ ೨ ನೆಯ ಭಾಗದಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ. ವಿಶ್ವಾಮಿತ್ರನು ಒಬ್ಬ ಮುಖ್ಯನಾದ ಋಷಿಯೆಂದು ಐತರೇಯ ಆರಣ್ಯಕ ೨-೨-೧ ; ಐ. ಬ್ರಾ. ೬-೧೮-೧ ; ೬-೨೦-೩ ; ತೈ. ಸಂ. ೨-೨-೧-೨ ; ೩-೧-೭-೩ ; ೫-೨-೩-೪ ; ಕಾಠಕಸಂಹಿತಾ ೧೬-೧೯ ; ೨೦-೯ ಮೈತ್ರಾಯಣೀಯ ಸಂಹಿತಾ ೨-೭-೧೯ ; ಕೌಶೀತಕೀ ಬ್ರಾಹ್ಮಣ ೧೫-೧ ; ೨೬-೧೪ ; ೨೭-೧, ೨ ; ೨೯-೩ ; ಪಂಚವಿಂಶಬ್ರಾಹ್ಮಣ ೧೪-೩-೧೨ ; ಬೃ. ಉ. ೨-೨-೪. ಜೈಮಿನೀಯ ಉಪನಿಷದ್ಬ್ರಾಹ್ಮಣ ೩-೩-೧೩ ; ೩-೧೫-೧ ಇತ್ಯಾದಿ ಸ್ಥಳಗಳಲ್ಲಿ ವರ್ಣನೆ ಇದೆ.

ಪುರಾಣಾದಿಗಳಲ್ಲಿ ವಿಶ್ವಾಮಿತ್ರನು ಒಬ್ಬ ರಾಜನೆಂದೂ ತಪಸ್ಸನ್ನು ಮಾಡಿ ಬ್ರಾಹ್ಮಣನಾದನೆಂದೂ ಹೇಳಿದೆ. ಋಗ್ವೇದದಲ್ಲಿ ಈ ವಿಷಯಕ್ಕೆ ಯಾವ ಆಧಾರವೂ ಇರುವುದಿಲ್ಲ. ಆದರೆ ನಿರುಕ್ತದಲ್ಲಿ (ನಿ. ೨-೨೪) ವಿಶ್ವಾಮಿತ್ರನು ಕೌಶಿಕನೆಂಬ ರಾಜನ ಮಗನೆಂದು ಹೇಳಿದೆ. ಪಂಚವಿಂಶಬ್ರಾಹ್ಮಣದಲ್ಲಿಯೂ (ಪಂ. ವಿ. ಬ್ರಾ. ೨೧-೧೨-೨) ವಿಶ್ವಾಮಿತ್ರನು ರಾಜನೆಂದೇ ಹೇಳಿದೆ. ಋಗ್ವೇದದಲ್ಲಿ ಮಾತ್ರ ಈ ವಿಷಯಸಮರ್ಥನೆಗೆ ಯಾವ ಆಧಾರವೂ ಇಲ್ಲ.

# ಮೊದಲನೆಯ ಸೂಕ್ತವು.

**ವೈಶ್ವಾಮಿತ್ರೇ ತೃತೀಯೇ ಪಂಚಾನುವಾಕಾಃ । ತತ್ರ ಪ್ರಥಮೇಽನುವಾಕೇ ದ್ವಾದಶ ಸೂಕ್ತಾನಿ । ತತ್ರ ಸೋಮಸ್ಯ ಮೇತಿ ತ್ರಯೋವಿಂಶತ್ಯೃಚಂ ಪ್ರಥಮಂ ಸೂಕ್ತಂ । ತಥಾ ಚಾನುಕ್ರಾಂತಂ। ಸೋಮಸ್ಯ**

**ತ್ರ್ಯಧಿಕೇತಿ । ಅಸ್ಯ ಮಂಡಲದ್ರಷ್ಟಾ ವಿಶ್ವಾಮಿತ್ರ ಋಷಿಃ । ಅನುಕ್ತತ್ವಾತ್ ತ್ರಿಷ್ಟುಪ್ ಛಂದಃ । ಮಂಡಲಾದಿಷ್ವಾಗ್ನೇಯಮಿತಿ ಪರಿಭಾಷಯಾಗ್ನಿರ್ದೇವತಾ ॥ ಪ್ರಾತರನುವಾಕಾಶ್ವಿನಶಸ್ತ್ರಯೋಸ್ತ್ರೈಷ್ಟುಭೇ ಛಂದಸಿ ವಿನಿಯೋಗಃ । ತಥಾ ಚ ಸೂತ್ರಂ । ಸೋಮಸ್ಯ ಮಾ ತವಸಂ ಪ್ರತ್ಯಗ್ನಿರಿತಿ ತ್ರೀಣಿ । ಆ. ೪-೧೩। ಇತಿ ॥**

ಅನುವಾದವು—ವಿಶ್ವಾಮಿತ್ರಋಷಿದೃಷ್ಟವಾದ ಈ ತೃತೀಯಮಂಡಲದಲ್ಲಿ ಐದು ಅನುವಾಕಗಳಿರುವುವು. ಮೊದಲನೇ ಅನುವಾಕದಲ್ಲಿ ಹನ್ನೆರಡು ಸೂಕ್ತಗಳಿರುವುವು. ಅವುಗಳಲ್ಲಿ **ಸೋಮಸ್ಯ ಮಾ** ಎಂದು ಪ್ರಾರಂಭವಾಗುವ ಮೊದಲನೆಯ ಸೂಕ್ತದಲ್ಲಿ ಇಪ್ಪತ್ತಮೂರು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ **ಸೋಮಸ್ಯ ತ್ರ್ಯಧಿಕೇತಿ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಮಂಡಲದ್ರಷ್ಟೃವಾದ ವಿಶ್ವಾಮಿತ್ರನು ಋಷಿಯು; ತ್ರಿಷ್ಟುಪ್‌ಛಂದಸ್ಸು; ಅಗ್ನಿಯು ದೇವತೆಯು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಅಶ್ವಲಾಯನಶ್ರೌತಸೂತ್ರದ — **ಸೋಮಸ್ಯ ಮಾ ತವಸಂ ಪ್ರತ್ಯಗ್ನಿರಿತಿ ತ್ರೀಣಿ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೪-೧೩)

## ಸೂಕ್ತ—೧

ಮಂಡಲ—೩ ॥ ಅನುವಾಕ—೧ ॥ ಸೂಕ್ತ—೧ ॥

ಅಷ್ಟಕ—೨ ॥ ಅಧ್ಯಾಯ—೮ ॥ ವರ್ಗ—೧೩, ೧೪, ೧೫, ೧೬ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೨೩ ॥

ಋಷಿಃ :— ವಿಶ್ವಾಮಿತ್ರೋ ಗಾಥಿನಃ ॥

ದೇವತಾಃ :— ಅಗ್ನಿಃ ॥

ಛಂದಃ :— ತ್ರಿಷ್ಟುಪ್ ॥

ಸಂಹಿತಾಪಾಠಃ ॥

ಸೋಮಸ್ಯ ಮಾ ತವಸಂ ವಕ್ಷ್ಯಗ್ನೇ ವಹ್ನಿಂ ಚಕರ್ಥ ವಿದಥೇ ಯಜಧ್ಯೈ ।
ದೇವಾँ ಅಚ್ಛಾ ದೀದ್ಯದ್ಯುಂಜೇ ಅದ್ರಿಂ ಶಮಾಯೇ ಅಗ್ನೇ ತನ್ವಂ ಜುಷಸ್ವ ॥ ೧

ಪದಪಾಠಃ ॥

ಸೋಮಸ್ಯ । ಮಾ । ತವಸಂ । ವಕ್ಷಿ । ಅಗ್ನೇ । ವಹ್ನಿಂ । ಚಕರ್ಥ । ವಿದಥೇ । ಯಜಧ್ಯೈ ।
ದೇವಾನ್ । ಅಚ್ಛ । ದೀದ್ಯತ್ । ಯುಂಜೇ । ಅದ್ರಿಂ । ಶಂऽಆಯೇ । ಅಗ್ನೇ । ತನ್ವಂ । ಜುಷಸ್ವ ॥ ೧ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ತ್ವಂ ವಿದಥೇ ಯಜ್ಞೇ ಯಜಧ್ಯೈ ಯಷ್ಟುಂ ಸೋಮಸ್ಯ ವಹ್ನಿಂ ವೋಢಾರಂ ಯಂ ಮಾಂ ಚಕರ್ಥ ಕೃತವಾನಸಿ । ತಂ ಮಾಂ ತವಸಂ ತವಸ್ವಿನಂ ಬಲಿನಂ ವಕ್ಷಿ । ಕಾಮಯಸ್ವ । ಕಿಂಚ ಹೇ ಅಗ್ನೇ ದೇವಾನಚ್ಛಾಭಿ ದೀದ್ಯತ್ ದೀಪ್ಯಮಾನೋಽಹಮದ್ರಿಂ ಗ್ರಾವಾಣಂ ಯುಂಜೇ । ಅಭಿಷವಣಾಯ ಯುನಜ್ಮಿ । ಶಮಾಯೇ । ಶಾಮ್ಯಾಮಿ ಚ । ತಥಾ ಚ ಮಂತ್ರಾಂತರಂ । ಋತೇನ ದೇವಃ ಸವಿತಾ ಶಮಾಯತೇ । ಋಗ್ವೇ. ೮-೮೬-೫ । ಇತಿ । ಯದ್ವಾ ಶಮಾಯೇ । ಸ್ತೌಮಿ । ಶಶಮಾನೋ ಜರತೀತಿ ಸ್ತುತಿಕರ್ಮಸು ಪಾಠಾತ್ । ತಥಾ ಚ ಮಂತ್ರಾಂತರಂ । ಸೋ ಅಗ್ನ ಈಜೇ ಶಶಮೇ ಚ ಮರ್ತಃ । ಋಗ್ವೇ ೬-೧-೯ । ಇತಿ । ಕಿಂಚ ಹೇ ಅಗ್ನೇ ತನ್ವಂ ಶರೀರಂ ಜುಷಸ್ವ । ರಕ್ಷಾಯೈ ಸೇವಸ್ವ । ಯದ್ವಾ ಕರ್ಮಾಣಿ ತನ್ವಂತಂ ಮಾಂ ಸೇವಸ್ವೇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ವಿದಥೇ**—ಯಜ್ಞದಲ್ಲಿ । **ಯಜಧ್ಯೈ**—ಯಜ್ಞಾರ್ಥವಾಗಿ ಅರ್ಪಿಸಲು । **ಸೋಮಸ್ಯ ವಹ್ನಿಂ**—ಸೋಮವಾಹಕನಾಗಿ । **ಮಾ**—ನನ್ನನ್ನು । **ಚಕರ್ಥ**—ನಿಯಮಿಸಿದ್ದೀಯೆ । **ತವಸಂ**—(ಅಂತಹ ನನ್ನನ್ನು) ಅದಕ್ಕೆ ಯೋಗ್ಯವಾದ ಬಲವನ್ನು ಹೊಂದುವಂತೆ । **ವಕ್ಷಿ**—ಇಚ್ಛಿಸು । **ದೇವಾನ್**—ದೇವತೆಗಳನ್ನು । **ಅಚ್ಛ**—ಎದುರುಗೊಂಡು । **ದೀದ್ಯತ್**—ಗೌರವಿಸುತ್ತಾ । **ಅದ್ರಿಂ**—ರಸವನ್ನು ಹಿಂಡುವ ಕಲ್ಲನ್ನು । **ಯುಂಜೇ**—ಕೈಯಲ್ಲಿ ಹಿಡಿದಿರುತ್ತೇನೆ । **ಶಮಾಯೇ**—(ಅವರನ್ನು) ಪೂಜಿಸಿ ಸ್ತುತಿಸುತ್ತೇನೆ । **ಅಗ್ನೇ**—ಎಲೈ ಅಗ್ನಿಯೇ । **ತನ್ವಂ**—ನನ್ನ ಶರೀರವನ್ನು । **ಜುಷಸ್ವ**—ರಕ್ಷಣಾರ್ಥವಾಗಿ ಸೇವಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಜ್ಞದಲ್ಲಿ ಅರ್ಪಿಸಲು ಸೋಮವಾಹಕನಾಗಿ ನನ್ನನ್ನು ನೀನು ನಿಯಮಿಸಿದ್ದೀಯೆ. ಅಂತಹ ನನ್ನನ್ನು ಅದಕ್ಕೆ ಯೋಗ್ಯವಾದ ಬಲವನ್ನು ಹೊಂದುವಂತೆ ಮಾಡು. ದೇವತೆಗಳನ್ನು ಎದುರುಗೊಂಡು ಗೌರವಿಸುತ್ತಾ ರಸವನ್ನು ಹಿಂಡುವಕಲ್ಲನ್ನು ಕೈಯಲ್ಲಿ ಹಿಡಿದಿರುತ್ತೇನೆ. ಅವರನ್ನು ಸ್ತುತಿಸಿ ಪೂಜಿಸುತ್ತೇನೆ. ಎಲೈ ಅಗ್ನಿಯೇ, ನನ್ನ ಶರೀರ ರಕ್ಷಣೆಗಾಗಿ ನನ್ನನ್ನು ಸೇವಿಸು.

English Translation.

Render me vigorous, Agni, since you have made me the bearer of the Soma to offer it in the sacrifice: honouring the gods who are present, I take hold of the stone (to express the juice); I propitiate them; Agni, protect my person.

॥ ವಿಶೇಷವಿಷಯಗಳು ॥

**ಅಗ್ನೇ ವಿದಥೇ ಯಜಧ್ಯೈ ಸೋಮಸ್ಯ ವಹ್ನಿಂ ಮಾ ಚಕರ್ಥ ತವಸಂ ವಕ್ಷಿ—ಹೇ ಅಗ್ನೇ ಯಜ್ಞೇ ಯಷ್ಟುಂ ಸೋಮಸ್ಯ ವೋಢಾರಂ ಮಾಂ ಚಕರ್ಥ ತಸ್ಮಾನ್ಮಾಂ ಬಲಿನಂ ಕಾಮಯಸ್ವ ।** ಎಲೈ ಅಗ್ನಿಯೇ, ಈಗ ನಾವು ಮಾಡುತ್ತಿರುವ ಯಜ್ಞದಲ್ಲಿ ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಸೋಮವನ್ನು ಧರಿಸುವಂತೆ

(ಹಿಡಿದು ನಿಂತಿರುವಂತೆ) ಶ್ರೀನು ಮಾಡಿರುವೆ. ಆದ್ದರಿಂದ ಆ ಕಾರ್ಯವಮಾಡುವುದಕ್ಕೆ ಅವಶ್ಯಕವಾದ ಬಲವನ್ನೂ ಇಚ್ಛಿಸಿ ಕೊಡು. ಎಂದರೆ ಯಜ್ಞದಲ್ಲಿ ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಸೋಮವನ್ನು ಧರಿಸಿ ಸಿದ್ಧನಾಗಿ ನಿಂತಿರುತ್ತೇನೆ. ಇದು ನಿನ್ನ ಪ್ರಭಾವವು. ಆ ಕಾರ್ಯವನ್ನು ಯಶಸ್ವಿಯಾಗಿ ನೆರವೇರಿಸಲು ತಕ್ಕ ಶಕ್ತಿ ಸಾಮರ್ಥ್ಯವನ್ನು ಸಹ ಕೊಡು ಎಂದು ಯಜಮಾನನು ಅಗ್ನಿಯನ್ನು ಪ್ರಾರ್ಥಿಸುವನು.

**ವಿದಥೇ**—ವಿದಥ ಶಬ್ದವು ಯಜ್ಞನಾಮಗಳಲ್ಲಿ ಪಠಿತವಾಗಿದೆ (ನಿ.೩–೧೭) ಈ ಶಬ್ದದ ವಿಸ್ತಾರವಾದ ವಿವರಣೆಯನ್ನು ಋ. ಸಂ ಭಾಗ 13 ಪೇಜು 9–13 ಗಳಲ್ಲಿ ವಿವರಿಸಿರುವುದನ್ನು ನೋಡಿ.

**ವಹ್ನಿಂ**—ವಹ್ನಿ ಶಬ್ದವು ಅಶ್ವನಾಮಗಳಲ್ಲಿ ಪಠಿತವಾಗಿದೆ (ನಿ. ೨–೨೭) ಮತ್ತು ವಹ್ನಯೋ ವೋಢಾರಃ (ನಿ. ೮–೩) ಎಂದು ಯಾಸ್ಕರು ನಿರ್ವಚನವನ್ನು ಹೇಳಿದಾರೆ. ವಹ್ನಿಶಬ್ದಕ್ಕೆ ಭಾರವನ್ನು ವಹಿಸುವುದು, ಹೊರುವುದು ಎಂದರ್ಥವು.

**ದೇವಾನ್ ಅಚ್ಛ ದೀದ್ಯತ್ ಅದ್ರಿಂ ಯುಂಜೇ ಶಮಾಯೇ—ಹೇ ಅಗ್ನೇ ದೇವಾನಭಿ ದೀಪ್ಯಮಾನೋಽಹಂ ಸೋಮಾಭಿಷವಣಾಯ ಗ್ರಾವಾಣಂ ಯುನಜ್ಮಿ ದೇವಾನ್ ಸ್ತೌಮಿ ಚ |** ಎಲೈ ಅಗ್ನಿಯೇ, ಸೋಮಾಭಿಷವಣಕ್ಕಾಗಿ ಎಂದರೆ ಸೋಮಲತೆಗಳನ್ನು ಜಜ್ಜಿ ರಸವನ್ನು ಹಿಂಡಿತೆಗೆಯುವುದಕ್ಕಾಗಿ ಅದಕ್ಕೆ ಸಾಧನವಾದ ಕಲ್ಲನ್ನು ಕೈಯಲ್ಲಿ ಹಿಡಿದು ದೇವತೆಗಳ ಅಭಿಮುಖವಾಗಿ (ಎದುರಿಗೆ) ನಿಂತು ಅವರನ್ನು ಗೌರವಿಸುತ್ತಾ ಸ್ತೋತ್ರಮಾಡುತ್ತೇನೆ.

**ಅಚ್ಛ**—ಈ ಶಬ್ದಕ್ಕೆ ಯಾಸ್ಕರು—**ಅಚ್ಛಾಭೇರಾಪ್ತುಮಿತಿ ಶಾಕಪೂಣಿಃ |** ಎಂದು ನಿರ್ವಚನವನ್ನು ಹೇಳಿದಾರೆ. ದುರ್ಗಾಚಾರ್ಯರು—**ಅಚ್ಛ ಇತ್ಯೇವ ಶಬ್ದೋ ಅಭೇಃ ಅರ್ಥೇ ಭವತಿ | ಆಪ್ತುಂ ಇತಿ | ಯೋಽರ್ಥಃ ಉಕ್ತಃ ಸ್ಯಾತ್ ಸ ಏವಾರ್ಥಃ ಅಚ್ಛೇತ್ಯನೇನೋಕ್ತೋ ಭವತಿ ಏವಂ ಶಾಕಪೂಣಿಃ ಆಚಾರ್ಯೋ ಮನ್ಯತೇ |** ಇಲ್ಲಿ ಯಾಸ್ಕರು ಅಚ್ಛ ಎಂಬ ಶಬ್ದ ವಿಚಾರದಲ್ಲಿ ಶಾಕಪೂಣಿ ಎಂಬ ಆಚಾರ್ಯರ ಅಭಿಪ್ರಾಯವನ್ನು ಮಾತ್ರ ಹೇಳಿರುವರು. ಅಭಿ ಎಂಬ ಶಬ್ದಕ್ಕೆ (ಮುಂದೆ) ಯಾವ ಅರ್ಥವಿರುವುದೋ ಆ ಅರ್ಥವೇ ಅಚ್ಛ ಎಂಬ ಶಬ್ದಕ್ಕೂ ಇರುವುದು. ಸಾಧಾರಣವಾಗಿ ಈ ಶಬ್ದವು ಯಾವ ಅರ್ಥದಲ್ಲಿ ಬೇಕಾದರೂ ಉಪಯೋಗಿಸಬಹುದು. ಆದುದರಿಂದ ಅಚ್ಛ ಶಬ್ದಕ್ಕೆ ಅಭಿಮುಖವಾಗಿ ಎಂದು ಅರ್ಥವಿವರಣೆ ಮಾಡಿದಾರೆ. ಈ ಶಬ್ದವು ಹ್ರಸ್ವಾಂತವಾಗಿದ್ದರೂ ಸಂಹಿತಾಪಾಠದಲ್ಲಿ ಛಂದಸ್ಸಿನ ಅನುಕೂಲಕ್ಕಾಗಿ ದೀರ್ಘಾಂತ್ಯವಾಗಿಯೇ ಉಪಯೋಗಿಸಲ್ಪಡುವುದು.

**ಅದ್ರಿಂ—ಅಭಿಷವಸಾಧನಂ |** ಸೋಮರಸವನ್ನು ಜಜ್ಜಿ ಹಿಂಡುವ ಕಲ್ಲನ್ನು ಎಂದರ್ಥವು. ಈ ಸಾಧನಕ್ಕೆ **ಅದ್ರಿ, ಗ್ರಾವ** ಎಂಬ ಎರಡು ಪ್ರಯೋಗಗಳೂ ಇವೆ. ಈ ಎರಡು ಪದಗಳಿಗೂ ಸಹ ಕಲ್ಲು ಎಂಬ ಸಾಮಾನ್ಯವಾದ ಅರ್ಥವಿದ್ದರೂ ಸಹ ಸೋಮರಸವನ್ನು ಹಿಂಡಲು ಸಾಧನವಾದ **ಅದ್ರಿಗೂ ಗ್ರಾವಕ್ಕೂ** ಸ್ವರೂಪದಲ್ಲೇ ವ್ಯತ್ಯಾಸವಿದ್ದಿರಬೇಕೆಂದು ಅವುಗಳ ವರ್ಣನೆಗಳಿಂದಲೂ, ವಿಶೇಷಣಗಳಿಂದಲೂ ಹೇಳಬಹುದು. ಸಾಧಾರಣವಾಗಿ **ಅದ್ರಿ**ಯೆಂಬ ಪದವು ಬಂದಾಗಲೆಲ್ಲಾ ಸಾಯಣರು ಆ ಪದಕ್ಕೆ **ಗ್ರಾವ** ಎಂದೂ **ಗ್ರಾವ** ಶಬ್ದವು ಬಂದಾಗಲೆಲ್ಲಾ ಪಾಷಾಣವೆಂದೂ

ಅರ್ಥಮಾಡಿದ್ದಾರೆ. ಆದರೆ ಅವುಗಳ ವ್ಯತ್ಯಾಸವನ್ನು ತೋರಿಸುವುದಕ್ಕೆ ಈ ಅರ್ಥವ್ಯತ್ಯಾಸವೇ ಆಧಾರವಲ್ಲ. ಅವುಗಳ ಸ್ವರೂಪವನ್ನು ಹೇಳುವ ವಿಶೇಷಣಗಳಿಂದಲೂ, ಉಪಮಾನಗಳಿಂದಲೂ, ಅವುಗಳು ಸೋಮರಸವನ್ನು ಹಿಂಡುವಾಗ ಮಾಡುವ ಶಬ್ದಸೂಚಕವಾದ ಪದಗಳಿಂದಲೂ ಈ ಎರಡು ಸಾಧನಗಳೂ ಬೇರೆ ಬೇರೆಯೆಂದು ತಿಳಿಯುತ್ತದೆ. ಬಬ್ರುಹಾಣ, (ಋ. ಸಂ. ೫–೪೧–೧೨); ಪರ್ವತ (೧೦–೯೪–೧); ಅಶ್ರಮಣ, ಅಶ್ರಥಿತ, ಅಮೃತ್ಯ, ಅನಾತುರ, ಅಜರ, ಅಮವಿಷ್ಣು (೧೦–೯೪–೧೧); ಧ್ರುವ, ಕ್ಷೇಮಕಾಮ (೧೦–೯೪–೧೨) ಇವೆಲ್ಲವೂ ಅದ್ರಿಯ ವೈಶಿಷ್ಟ್ಯವನ್ನು ತೋರಿಸುವ ವಿಶೇಷಣಗಳು. ಹೀಗೆಯೇ ಪೃಥು, ಪೃಥುಬುಧ್ನ ಇತ್ಯಾದಿ ವಿಶೇಷಣಗಳು **ಗ್ರಾವದ** ವೈಶಿಷ್ಟ್ಯವನ್ನು ಮಾತ್ರ ತೋರಿಸತಕ್ಕವು. **ಗ್ರಾವ**ವನ್ನು ಸಾಧಾರಣವಾಗಿ ವೃಷಭಕ್ಕೂ **ಅದ್ರಿ**ಯನ್ನು ಅಶ್ವಕ್ಕೂ ಹೋಲಿಸಿದೆ.

**ಅದ್ರಿರಾದೃಣಾತ್ಯೇತೇನ । ಅಪಿ ವಾ ಅತ್ತೇಃ ಸ್ಯಾತ್ ॥**

(ನಿ. ೪–೪)

**ಸೀಳು** ಎಂಬರ್ಥವನ್ನು ಕೊಡತಕ್ಕ ದೃ ಧಾತುವಿನಿಂದಾಗಲೀ, **ತಿನ್ನು** ಎಂಬರ್ಥವನ್ನು ಕೊಡುವ **ಅದ್** ಧಾತುವಿನಿಂದಾಗಲಿ **ಅದ್ರಿ** ಶಬ್ದವು ನಿಷ್ಪನ್ನವಾಗಿದೆ.

ಈ ಪದಕ್ಕೆ ರಸವನ್ನು ಹಿಂಡುವುದು ಅಥವಾ ಅದರ ಸಾಧನ ಎಂಬರ್ಥವು ಮಾತ್ರವಲ್ಲದೇ ಇನ್ನೂ ಇತರ ಅರ್ಥಗಳಲ್ಲೂ ಈ ಪದದ ಪ್ರಯೋಗವಿದೆ. ಉದಾಹರಣೆಗೆ—

**ಉತ ಸ್ಮ ತೇ ಪರುಷ್ಣ್ಯಾಮೂರ್ಣಾ ವಸತ ಶುಂಧ್ಯವಃ ।**
**ಉತ ಪವ್ಯಾ ರಥಾನಾಮದ್ರಿಂ ಭಿಂದಂತ್ಯೋಜಸಾ ॥**

(ಋ. ಸಂ. ೫–೫೨–೯)

ಎಂಬಲ್ಲಿ ಮರುತ್ತಗಳ ರಥದ ಬಲವನ್ನು ವರ್ಣಿಸಿದೆ. ಆ ರಥದ ಚಕ್ರಗಳ ಬಲದಿಂದ **ಅದ್ರಿ**ಗಳೂ ಸೀಳಲ್ಪಡುತ್ತವೆ ಎಂದಿರುವಾಗ **ಅದ್ರಿ** ಶಬ್ದಕ್ಕೆ **ಮೇಘಂ, ಗಿರಿಂ ವಾ,** ಮೇಘ ಅಥವಾ ಪರ್ವತ ಎಂದರ್ಥಮಾಡಿದೆ.

**ಬ್ರಹ್ಮಾಣಿ ಮೇ ಮತಯಃ ಶಂ ಸುತಾಸಃ ಶುಷ್ಮ ಇಯರ್ತಿ ಪ್ರಭೃತೋ ಮೇ ಅದ್ರಿಃ ।**
**ಆ ಶಾಸತೇ ಪ್ರತಿ ಹರ್ಯಂತ್ಯುಕ್ಥೇಮಾ ಹರೀ ವಹತಸ್ತಾ ನೋ ಅಚ್ಛ ॥**

(ಋ. ಸಂ. ೧–೧೬೫–೪)

ಎಂಬಲ್ಲಿ ಇಂದ್ರನಿಗೂ ಮರುತ್ತಗಳಿಗೂ ನಡೆಯತಕ್ಕ ಸಂಭಾಷಣೆಯಲ್ಲಿ ಇಂದ್ರನು ತನ್ನ ವಜ್ರಾಯುಧದ ಶಕ್ತಿಯನ್ನು ಸ್ತುತಿಸಿದ್ದಾನೆ. ಇಲ್ಲಿ **ಅದ್ರಿ** ಶಬ್ದಕ್ಕೆ **ಶತ್ರೂಣಾಂ ಭಕ್ಷಕೋ ವಜ್ರಃ ।** ಶತ್ರುನಾಶಕವಾದ ವಜ್ರಾಯುಧವೆಂದರ್ಥ.

**ಬೃಹಸ್ಪತಿರ್ಭಿನದದ್ರಿಂ ವಿದದ್ಗಾಃ ಸಮುಸ್ರಿಯಾಭಿರ್ವಾವಶಂತ ನರಃ ॥**

(ಋ. ಸಂ. ೧–೬೨–೩)

ಇತ್ಯಾದಿ ಋಕ್ಕುಗಳಲ್ಲಿ **ಅಸುರ**ನೆಂದೂ,

**ಮಹಃ ಸ ರಾಯ ಏಷತೇ ಪತಿರ್ದನ್ನಿನ ಇನಸ್ಯ ವಸುನಃ ಪದ ಆ ।**
**ಉಪ ಧ್ರಜಂತಮದ್ರಯೋ ವಿಧನ್ನಿತ್ ॥**

(ಋ. ಸಂ. ೧–೧೪೯–೧)

ಇತ್ಯಾದಿ ಕಡೆಗಳಲ್ಲಿ **ಅದ್ರಿ**ಗಳುಳ್ಳ ಎಂದರೆ ಹಿಂಡುವ ಕಲ್ಲುಗಳುಳ್ಳ ಯಜಮಾನರೆಂದೂ ಹೀಗೆ **ಅದ್ರಿ** ಶಬ್ದಕ್ಕೆ ಅನೇಕಾರ್ಥಗಳಿವೆ. ಇದಲ್ಲವೇ, **ಅತ್ತಾರಂ, ಅಸುರಂ, ಭಕ್ಷಕಂ ಪಣಿಂ** ಎಂದೂ ಸಹ ಅರ್ಥಮಾಡಿದೆ. ಬೇರೊಂದು ಸಂದರ್ಭದಲ್ಲಿ ಈ ಪದಕ್ಕೆ ವಿವರಣೆಯನ್ನು ಕೊಡುವಾಗ ನಿರುಕ್ತಕಾರರು—

**ಯದಿಂದ್ರ ಚಿತ್ರ ಮೇಹನಾಸ್ತಿ ತ್ವಾದಾತಿಮದ್ರಿವಃ ।**
**ರಾಧಸ್ತನ್ನೋ ವಿದದ್ವಸ ಉಭಯಾಹಸ್ತ್ಯಾ ಭರ ॥**

(ಋ. ಸಂ. ೫-೩೯-೧)

ಎಂಬ ಋಕ್ಕನ್ನುದಹರಿಸಿ **ಅದ್ರಿವಃ** ಎಂಬುದಕ್ಕೆ **ವಜ್ರವನ್ ಇಂದ್ರ** ಎಂಬ ಅರ್ಥವು ಹೇಗೆ ಸಾಧ್ಯವೆಂದು ತೋರಿಸಿದ್ದಾರೆ. ಹೀಗೆ **ಅದ್ರಿ** ಶಬ್ದದ ಮೂಲಧಾತುವು ಅಥವಾ ಧಾತುಗಳು ಸಂದರ್ಭಾನುಸಾರವಾದ ನಿಷ್ಪತ್ತಿಗಳಿಂದ ಬೇರೆ ಬೇರೆ ಅರ್ಥಗಳನ್ನು ಕೊಡುವುದರಿಂದ ಆಯಾ ಸನ್ನಿವೇಶಕ್ಕನುಗುಣವಾಗಿ ಅರ್ಥಮಾಡಬೇಕು. ಪ್ರಕೃತವಾದ ಋಕ್ಕಿನಲ್ಲಿ **ಅಭಿಷವಸಾಧನಂ ।** ಸೋಮರಸವನ್ನು ಹಿಂಡುವ ಕಲ್ಲನ್ನು ಎಂದರ್ಥ.

**ಶಮಾಯೇ—ಶಾಮ್ಯಾಮಿ ।** ಶಮನಮಾಡುತ್ತೇನೆ ಎಂದರೆ ಸಮಾಧಾನಪಡಿಸುತ್ತೇನೆ ಎಂದರ್ಥವು. ಈ ವಿಷಯದಲ್ಲಿ ಭಾಷ್ಯಕಾರರು—

**ಋತೇನ ದೇವಸ್ಸವಿತಾ ಶಮಾಯತ ಋತಸ್ಯ ಶೃಂಗಮುರ್ವಿಯಾ ವಿ ಪಪ್ರಥೇ ।**

(ಋ. ಸಂ. ೮-೮೬-೫)

ಎಂಬ ಋಕ್ಕನ್ನುದಾದಹರಿಸಿ ಅದರಲ್ಲಿರುವ **ಶಮಾಯತೇ** ಎಂಬ ಶಬ್ದಕ್ಕೆ **ಸಾಯಂಕಾಲೇ ಸ್ವಕಿರಣಸಮೂಹಂ ಶಮಯತಿ**—ಸೂರ್ಯನು ಸಾಯಂಕಾಲದಲ್ಲಿ ಕಿರಣಸಮೂಹವನ್ನು ಶಮನಮಾಡುತ್ತಾನೆ ಎಂದರೆ ಉಪಸಂಹಾರ ಮಾಡುತ್ತಾನೆ ಎಂಬರ್ಥವಿರುವುದನ್ನು ತೋರಿಸಿದ್ದಾರೆ, ಇದಲ್ಲದೆ **ಶಮಾಯೇ** ಎಂದರೆ **ಸ್ತೌಮಿ**—ಸ್ತುತಿಸುತ್ತೇನೆ ಎಂಬ ಇನ್ನೊಂದು ಅರ್ಥವನ್ನೂ ಹೇಳಿ ಅದರ ಸಮರ್ಥನೆಗಾಗಿ—

**ಸೋ ಅಗ್ನ ಈಜೇ ಶಶಮೇ ಚ ಮರ್ತೋ ಯಸ್ತ ಆನಟ್ ಸಮಿಧಾ ಹವ್ಯದಾತಿಂ ।**

(ಋ. ಸಂ. ೬-೧-೯)

ಎಂಬ ಋಕ್ಕನ್ನೂ ಉದಾಹರಣೆಗಾಗಿ ಕೊಟ್ಟು ಅದರಲ್ಲಿರುವ **ಶಶಮೇ** ಎಂಬ ಶಬ್ದಕ್ಕೆ **ಶಶಮೇ—ಸ್ತೌತಿ** ಎಂಬರ್ಥ ವಿರುವುದನ್ನು ತೋರಿಸಿದಾರೆ.

॥ ಸಂಹಿತಾಪಾಠಃ ॥

ಪ್ರಾಂಚಂ ಯಜ್ಞಂ ಚಕೃಮ ವರ್ಧತಾಂ ಗೀಃ ಸಮಿದ್ಭಿರಗ್ನಿಂ ನಮಸಾ ದುವಸ್ಯನ್।
ದಿವಃ ಶಶಾಸುರ್ವಿದಥಾ ಕವೀನಾಂ ಗೃತ್ಸಾಯ ಚಿತ್ತವಸೇ ಗಾತುಮೀಷುಃ ॥ ೨ ॥

॥ ಪದಪಾಠಃ ॥

ಪ್ರಾಂಚಂ । ಯಜ್ಞಂ । ಚಕೃಮ । ವರ್ಧತಾಂ । ಗೀಃ । ಸಮಿತ್ಽಭಿಃ । ಅಗ್ನಿಂ । ನಮಸಾ । ದುವಸ್ಯನ್ ।

ದಿವಃ । ಶಶಾಸುಃ । ವಿದಥಾ । ಕವೀನಾಂ । ಗೃತ್ಸಾಯ । ಚಿತ್ । ತವಸೇ । ಗಾತುಂ । ಈಷುಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ವಯಂ ಯಜ್ಞಂ ಪ್ರಾಂಚಂ ಪ್ರಕರ್ಷೇಣ ಗಚ್ಛಂತಂ ಚಕೃಮ । ಅಕಾರ್ಷ್ಮ । ಗೀರ್ಮದೀಯಾ ಸ್ತುತಿರ್ವರ್ಧತಾಂ । ಏಧತಾಂ । ಅಗ್ನಿಂ ಸಮಿದ್ಭಿರ್ನಮಸಾ ಹವಿಷಾ ಚ ದುವಸ್ಯನ್ । ಅಸ್ಮದೀಯಾಃ ಪರಿಚರೇಯುಃ । ಕಿಂಚ ದಿವೋ ದ್ಯುಲೋಕಾದಾಗತ್ಯ ದೇವಾಃ ಕವೀನಾಂ ಸ್ತೋತೄಣಾಂ ವಿದಥಾ ಜ್ಞಾನಾನಿ ಸ್ತೋತ್ರಾಣಿ ವಾ ಶಶಾಸುಃ । ಅನ್ವಶಿಷನ್ । ಅಪಿ ಚ ಗೃತ್ಸಾಯ । ಗೃಣಾತೇರಿದಂ ರೂಪಂ । ಸ್ತೋತವ್ಯಾಯಾಗ್ನಯೇ ತವಸೇ ವೃದ್ಧಾಯ ಗಾತುಂ ಸ್ತೋತುಮೀಷುಶ್ಚಿತ್ । ಸ್ತೋತಾರ ಇಚ್ಛಂತಿ ಚ । ಚಿದಿತಿ ಚಾರ್ಥೇ ॥

॥ ಪ್ರತಿಪದಾರ್ಥ ॥

(**ಅಗ್ನೇ**—ಎಲೈ ಅಗ್ನಿಯೇ) । **ಯಜ್ಞಂ**—ಯಜ್ಞವನ್ನು (ನಾವು) । **ಪ್ರಾಂಚಂ**—ಯಶಸ್ವಿಯಾಗುವಂತೆ । **ಚಕೃಮ**—ನೆರವೇರಿಸಿದ್ದೇವೆ । **ಅಗ್ನಿಂ**—ಅಗ್ನಿಯನ್ನು । **ಸಮಿದ್ಭಿಃ**—ಸಮಿತ್ತುಗಳಿಂದಲೂ । **ನಮಸಾ**—ಹವಿಸ್ಸುಗಳಿಂದಲೂ । **ದುವಸ್ಯನ್**—ಪರಿಚರಿಸುತ್ತಾ । **ಗೀಃ**—ನನ್ನ ಸ್ತುತಿವಾಕ್ಯವು । **ವರ್ಧತಾಂ**—ವೃದ್ಧಿಯಾಗಲಿ । **ದಿವಃ**—ದೇವಲೋಕದಿಂದ (ಬಂದ ದೇವತೆಗಳು) । **ಕವೀನಾಂ**—ಸ್ತೋತೃಗಳ । **ವಿದಥಾ**—ಜ್ಞಾನಗಳನ್ನು । **ಶಶಾಸುಃ**—ಅಪೇಕ್ಷಿಸಿ ಹುಡುಕಿದರು । **ಗೃತ್ಸಾಯ**—ಸ್ತುತ್ಯರ್ಹನೂ । **ತವಸೇ**—ಶಕ್ತಿವಂತನೂ ಆದ ಅಗ್ನಿಗೆ । **ಗಾತುಂ**—ಸ್ತುತಿಯನ್ನು ಅರ್ಪಿಸುವುದಕ್ಕೆ । **ಈಷುಶ್ಚಿತ್**—ಅಪೇಕ್ಷಿಸಿದರು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಾವು ಯಜ್ಞವನ್ನು ಯಶಸ್ವಿಯಾಗುವಂತೆ ನೆರವೇರಿಸಿದ್ದೇವೆ. ಅಗ್ನಿಯನ್ನು ಸಮಿತ್ತುಗಳಿಂದಲೂ ಹವಿಸ್ಸುಗಳಿಂದಲೂ ಪರಿಚರಿಸುವ ನನ್ನ ಸ್ತುತಿವಾಕ್ಯವು ನಿನ್ನನ್ನು ವೃದ್ಧಿಪಡಿಸಲಿ. ದೇವಲೋಕದಿಂದ ಬಂದ ದೇವತೆಗಳು ಸ್ತೋತೃಗಳ ಸ್ತುತಿಜ್ಞಾನವನ್ನು ಅಪೇಕ್ಷಿಸಿ ಹುಡುಕಿದರು. ಸ್ತುತ್ಯರ್ಹನೂ ಶಕ್ತಿವಂತನೂ ಆದ ಅಗ್ನಿಗೆ ಸ್ತುತಿಯನ್ನು ಅರ್ಪಿಸಲು ಅಪೇಕ್ಷಿಸಿದರು.

## English Translation.

We have performed, Agni, a successful sacrifice: may my praise magnify (you) as worshipping you with fuel and with reverence; (the goods) from heaven desire the adoration of the pious, who are anxious to praise the adorable and mighty (Agni).

॥ ವಿಶೇಷವಿಷಯಗಳು ॥

**ಯಜ್ಞಂ ಪ್ರಾಂಚಂ ಚಕೃಮ— ಹೇ ಅಗ್ನೇ ವಯಂ ಯಜ್ಞಂ ಪ್ರಕರ್ಷೇಣ ಗಚ್ಛಂತಂ ಅಕಾರ್ಷ್ಮ।** ಎಲೈ ಅಗ್ನಿಯೇ, ಈಗ ನಾವು ಯಜ್ಞವನ್ನು ಚೆನ್ನಾಗಿ ನೆರವೇರುವಂತೆ ಮಾಡಿದೆವು ಎಂದರೆ ಯಶಸ್ವಿಯಾಗಿ ನೆರವೇರಿಸಿದೆವು ಇಲ್ಲಿ ಪ್ರಾಂಚಂ ಎಂಬ ಶಬ್ದಕ್ಕೆ **ಪ್ರಕರ್ಷೇಣ ಗಚ್ಛಂತಂ**— ಉತ್ಕೃಷ್ಟವಾದ ಒಂದು ರೀತಿಯಲ್ಲಿ ನಡೆಯುತ್ತಿರುವ ಎಂದು ಭಾಷ್ಯಕಾರರು ಅರ್ಥಮಾಡಿರುವರು. ಯಾಸ್ಕರು **ಪ್ರಾಚೀಂ** ಎಂಬ ಶಬ್ದಕ್ಕೆ **ಪ್ರವೃದ್ಧಾಂ**— ಪ್ರವೃದ್ಧಮಾನವಾಗಿ ನಡೆಯುತ್ತಿರುವ ಎಂಬರ್ಥವನ್ನು ವಿವರಿಸಿರುವರು. (ನಿ. ೧೧-೧೭)

**ಗೀಃ ವರ್ಧತಾಂ— ಮದೀಯಾ ಸ್ತುತಿಃ ವಿಧತಾಂ** । ನಾನು ಮಾಡುತ್ತಿರುವ ಸ್ತೋತ್ರರೂಪವಾದ ವಾಕ್ಯವು ಅಗ್ನಿಯ ಗುಣಗಾನವನ್ನು ಮಾಡುತ್ತಾ ಅಭಿವೃದ್ಧಿಯನ್ನೈದಲಿ ಎಂದು ಋಷಿಯ ಆಶಂಸನೆಯು ವ್ಯಕ್ತವಾಗಿರುವುದು.

**ಅಗ್ನಿಂ ಸಮಿದ್ಭಿಃ ನಮಸಾ ದುವಸ್ಯನ್— ಅಗ್ನಿಂ ನಮಸಾ ಹವಿಷಾ ಚ ಅಸ್ಮದೀಯಾಃ ಪರಿಚರೇಯುಃ** । ನಮ್ಮವರಾದ ಋತ್ವಿಗ್ಜನರು ಅಗ್ನಿಯನ್ನು ನಮಸ್ಕಾರಾದಿಗಳಿಂದಲೂ ಅಥವಾ ಹವಿಸ್ಸುಗಳಿಂದಲೂ ಸಮಿತ್ತುಗಳಿಂದಲೂ ಉಪಚರಿಸಲಿ ಎಂದರೆ ಸೇವಿಸಲಿ, ಎಂದರೆ ಯಜ್ಞದಲ್ಲಿ ಅಗ್ನಿಯು ಪ್ರಜ್ವಲಿತನಾಗಿರುವಾಗ ಋತ್ವಿಕ್ಕುಗಳು ಮಂತ್ರಪೂರ್ವಕವಾಗಿ ಅಗ್ನಿಯಲ್ಲಿ ಸಮಿತ್ತುಗಳನ್ನೂ, ಹವಿಸ್ಸನ್ನೂ ಅರ್ಪಿಸಿ ಹೋಮಮಾಡುವರು. ಇವರಿಂದ ಅಗ್ನಿಯನ್ನು ಸೇವಿಸಿದಂತಾಗುವುದು ಎಂಬ ಅಭಿಪ್ರಾಯವು ಇಲ್ಲಿ ವ್ಯಕ್ತವಾಗಿದೆ.

**ಸಮಿದ್ಭಿಃ— ಞಿಇಂಧೀ ದೀಪ್ತೌ** ಎಂಬ ಧಾತುವಿನಿಂದ ನಿಷ್ಪನ್ನವಾದ ಸಮಿತ್ ಶಬ್ದಕ್ಕೆ ಚೆನ್ನಾಗಿ ಪ್ರಕಾಶಿಸುವಂತೆ ಉರಿಯುವುದು ಎಂಬರ್ಥವಿರುವುದು. ಅಗ್ನಿಯು ಚೆನ್ನಾಗಿ ಉರಿಯಬೇಕಾದರೆ ಕಾಷ್ಠಾದಿಗಳನ್ನು ಹಾಕಬೇಕು. ಆ ರೀತಿ ಹಾಕುವ ಕಾಷ್ಠಗಳಿಗೆ ಸಮಿತ್ ಎಂದು ಹೆಸರು ಯಜ್ಞಾದಿಗಳಲ್ಲಿ ಅಶ್ವತ್ಥ, ಪಲಾಶ, ಖಾದಿರ ಮೊದಲಾದ ಕೆಲವು ನಿರ್ದಿಷ್ಟ ವೃಕ್ಷಗಳ ಕೊಂಬೆಗಳಲ್ಲಿ ಇರುವ ಕೊನೆಯ ಭಾಗಗಳನ್ನು ಒಣಗಿರುವಾಗ ಅವುಗಳನ್ನು ಸುಮಾರು ನಾಲ್ಕು ಅಂಗುಲ ಪರಿಮಿತಿಯುಳ್ಳದ್ದನ್ನಾಗಿ ಕತ್ತರಿಸಿ ಅಗ್ರಭಾಗ (ಕೊನೆ, ತುದಿ) ಯುಳ್ಳವುಗಳನ್ನು ಮಾತ್ರ ಅಗ್ನಿಯಲ್ಲಿ ಹೋಮಮಾಡುವುದಕ್ಕಾಗಿ ಉಪಯೋಗಿಸುವರು. ಇಂತಹ ಕಾಷ್ಠಗಳಿಗೆ ಸಮಿತ್ ಎಂದು ಹೇಳುವ ರೂಢಿ ಇದೆ. ಪ್ರಕೃತ ಋಕ್ಕಿನಲ್ಲಿ ಇಂತಹ ಸಮಿತ್ತುಗಳಿಂದ ಅಗ್ನಿಯನ್ನು ಪರಿಚರಿಸುತ್ತೇವೆ ಎಂದು ಹೇಳಿದೆ.

**ನಮಸಾ— ನಮಃ** ಎಂಬ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ (ನಿ ೩-೯). **ಣಮು ಪ್ರಹ್ವತ್ವೇ** ಎಂಬ ಧಾತುವಿನಿಂದ ನಿಷ್ಪನ್ನವಾದ ನಮಃ ಎಂಬ ಶಬ್ದಕ್ಕೆ ನಮಸ್ಕಾರ, ಸ್ತೋತ್ರ ಎಂದೂ ಅರ್ಥವಿರುವುದು. ಇಲ್ಲಿ **ನಮಸಾ** ಎಂಬ ಶಬ್ದಕ್ಕೆ ಅನ್ನರೂಪವಾದ ಹವಿಸ್ಸಿನಿಂದ ಅಥವಾ ನಮಸ್ಕಾರ ಅಥವಾ ಸ್ತೋತ್ರದಿಂದ ಎಂಬ ಎರಡು ವಿಧವಾದ ಅರ್ಥಗಳನ್ನು ಹೇಳಬಹುದು.

**ದುವಸ್ಯನ್— ದುವಸ್ಯತಿ** ಎಂಬ ಶಬ್ದವು ಪರಿಚರಣಕರ್ಮವನ್ನು ಸೂಚಿಸುವ ಶಬ್ದಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) **ದುವಸ್ಯನ್** ಎಂದರೆ ಪರಿಚರಿಸುವರು ಎಂದರೆ ಸೇವಿಸುವರು ಎಂದರ್ಥವು.

**ದಿವಃ ಕವೀನಾಂ ವಿದಥಾ ಶಶಾಸುಃ— ದ್ಯುಲೋಕಾದಾಗತ್ಯ ದೇವಾಃ ಸ್ತೋತೃಣಾಂ ಜ್ಞಾನಾನಿ ಸ್ತೋತ್ರಾಣಿ ವಾ ಅನ್ವಶಿಷ್ಯನ್** । ಇಲ್ಲಿ **ದಿವಃ** ಎಂಬ ಶಬ್ದಮಾತ್ರವಿರುವುದರಿಂದ **ದೇವಾಃ** ಎಂಬ ಶಬ್ದವನ್ನು

ಅಧ್ಯಾಹಾರಮಾಡಿಕೊಳ್ಳಬೇಕು. ದೇವಲೋಕದಿಂದ ದೇವತೆಗಳು ಬಂದು ತಮ್ಮನ್ನು ಸ್ತೋತ್ರಮಾಡುವವರ ಜ್ಞಾನವನ್ನೂ ಅಥವಾ ಸ್ತೋತ್ರಗಳ ಸ್ವರೂಪವನ್ನು ಯಾವ ರೀತಿ ಇದೆ ಎಂಬ ವಿಷಯದಲ್ಲಿ ಹುಡುಕಿ ನೋಡಿದರು. ವಿದಥ ಶಬ್ದಕ್ಕೆ ಯಜ್ಞ ಮೊದಲಾದ ಅನೇಕಾರ್ಥಗಳಿದ್ದರೂ ಇಲ್ಲಿ ಜ್ಞಾನ, ಸ್ತೋತ್ರ ಎಂಬರ್ಥವನ್ನು ಭಾಷ್ಯಕಾರರು ಹೇಳಿದಾರೆ. ಯಾಸ್ಕರು **ವಿದಥಾನಿ ವೇದನಾನಿ** (ನಿ. ೬-೮) ಎಂದು ಹೇಳಿದಾರೆ. ದುರ್ಗಾಚಾರ್ಯರು ಈ ಶಬ್ದಕ್ಕೆ **ವಿಜ್ಞಾನಾನಿ** ಎಂದು ಅರ್ಥವಿವರಣೆಮಾಡಿರುವರು. ವಿದಥಶಬ್ದದ ರೂಪನಿಷ್ಪತ್ತಿ ಮತ್ತು ವಿಸ್ತಾರವಾದ ವಿವರಣೆಯನ್ನು ನಾವು ಋ. ಸಂ. ಭಾಗ 13 ಪೇಜು 13 ರಲ್ಲಿ ವಿವರಿಸಿದೇವೆ. ಕವಿಶಬ್ದವು ಮೇಧಾವಿನಾಮಗಳಲ್ಲಿ ಪಠಿತವಾಗಿದ್ದರೂ (ನಿ. ೩-೧೫) ಇಲ್ಲಿ ಸ್ತೋತೃವೆಂಬ ಅರ್ಥವನ್ನು ಭಾಷ್ಯಕಾರರು ಹೇಳಿದಾರೆ.

**ಗೃತ್ಸಾಯ ತವಸೇ ಗಾತುಂ ಈಷುಃ ಚಿತ್—ಸ್ತೋತವ್ಯಾಯಾಗ್ನಯೇ ವೃದ್ಧಾಯ ಸ್ತೋತುಂ ಸ್ತೋತಾರ ಇಚ್ಛಂತಿ ಚ ।** ಆ ದೇವತೆಗಳು ಸ್ತೋತ್ರಾರ್ಹನೂ, ಶಕ್ತಿವಂತನೂ ಆದ ಅಗ್ನಿಗೆ ಸ್ತುತಿಯನ್ನರ್ಪಿಸ ಬೇಕೆಂದು ಅಪೇಕ್ಷಿಸಿದರು. **ತವಃ** ಎಂಬ ಶಬ್ದವು ಬಲನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) **ತವಸೇ** ಎಂದರೆ ಬಲವುಳ್ಳ ಅಗ್ನಿಗೆ ಎಂದರ್ಥವು.

**ಚಿತ್**—ಯಾಸ್ಕರು **ಚಿತ್** ಎಂಬ ನಿಪಾತವು **ಚಿದಿತ್ಯೇಷೋಽನೇಕಕರ್ಮಾ** ಎಂದು ಹೇಳಿ **ಚಿತ್** ಶಬ್ದವು ಅನೇಕ ವಿಧವಾದ ಅರ್ಥಗಳಲ್ಲಿ ಪ್ರಯುಕ್ತವಾಗಿರುವುದು ಎಂದು ವಿವರಿಸಿ ಅದರ ಸಮರ್ಥನೆಗಾಗಿ—

**ಆಚಾರ್ಯಶ್ಚಿದಿದಂ ಬ್ರೂಯಾದಿತಿ ಪೂಜಾಯಾಂ। ದಧಿ ಚಿದಿತ್ಯುಪಮಾರ್ಥೇ। ಕುಲ್ಮಾಷಾಂಶ್ಚಿದಾಹರೇತ್ಯವಕುತ್ಸಿತೇ।** (ನಿ. ೧-೪)

ಎಂದರೆ **ಆಚಾರ್ಯಶ್ಚಿತ್** ಎಂಬ ವಾಕ್ಯದಲ್ಲಿ **ಚಿತ್** ಶಬ್ದವು ಪೂಜಾರ್ಥದಲ್ಲಿ ಪ್ರಯುಕ್ತವಾಗಿದೆಯೆಂದೂ, **ದಧಿಚಿತ್** ಎಂಬ ವಾಕ್ಯದಲ್ಲಿ ಉಪಮಾರ್ಥದಲ್ಲಿಯೂ, **ಕುಲ್ಮಾಷಾಂಶ್ಚಿತ್** ಎಂಬಲ್ಲಿ ನಿಂದಾರ್ಥಕವಾಗಿಯೂ ಪ್ರಯುಕ್ತವಾಗಿದೆ ಎಂದು ಉದಾಹರಣೆಗಳ ಮೂಲಕ ವಿವರಿಸಿದ್ದಾರೆ. ಪ್ರಕೃತ ಋಕ್ಕಿನಲ್ಲಿ ಸಾಯಣರು **ಚಿದಿತಿ ಚಾರ್ಥೇ** ಚಿತ್ ಎಂಬ ಶಬ್ದವು **ಚ**-ಮತ್ತು, ಎಂಬರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಹೇಳಿದಾರೆ.



॥ ಸಂಹಿತಾಪಾಠಃ ॥

ಮಯೋ ದಧೇ ಮೇಧಿರಃ ಪೂತದಕ್ಷೋ ದಿವಃ ಸುಬಂಧುರ್ಜನುಷಾ ಪೃಥಿವ್ಯಾಃ ।
ಅವಿಂದನ್ನು ದರ್ಶತಮಪ್ಸ್ವಂತರ್ದೇವಾಸೋ ಅಗ್ನಿಮಪಸಿ ಸ್ವಸೄಣಾಂ ॥ ೩ ॥

॥ ಪದಪಾಠಃ ॥

ಮಯಃ । ದಧೇ । ಮೇಧಿರಃ । ಪೂತಽದಕ್ಷಃ । ದಿವಃ । ಸುಽಬಂಧುಃ । ಜನುಷಾ । ಪೃಥಿವ್ಯಾಃ ।
ಅವಿಂದನ್ । ಊಂ ಇತಿ । ದರ್ಶತಂ । ಅಪ್ಽಸು । ಅಂತಃ । ದೇವಾಸಃ । ಅಗ್ನಿಂ । ಅಪಸಿ । ಸ್ವಸೄಣಾಂ ॥

॥ ಸಾಯಣಭಾಷ್ಯಂ ॥

**ಮೇಧಿರೋ ಮೇಧಾವಾನ್ ಪ್ರಾಜ್ಞಃ ಪೂತದಕ್ಷಃ ಶುದ್ಧಬಲೋ ಜನುಷಾ ಜನ್ಮಮಾತ್ರೇಣ ಸುಬಂಧುಃ ಶೋಭನಬಂಧುಃ । ಸ್ವತ ಏವ ಬಂಧುರಿತಿ ಯಾವತ್ । ಯೋಽಗ್ನಿರ್ದಿವೋ ದ್ಯುಲೋಕಸ್ಯ ಪೃಥಿವ್ಯಾ ಭೂಮೇಶ್ಚ ಮಯಃ ಸುಖಂ ದಧೇ ವಿದಧಾತಿ । ದೇವಾನಾಂ ಮನುಷ್ಯಾಣಾಂ ಚ ಸುಖಂ ಕರೋತೀತಿ ಯಾವತ್ । ತಂ ದರ್ಶತಂ ದರ್ಶನೀಯಮಗ್ನಿಂ ದೇವಾಸೋ ದೇವಾಃ ಸ್ವಸ್ಯಾಣಾಂ ಸರಣಶೀಲಾನಾಂ ನದೀನಾಮಪ್ಸ್ವಂತರ್ಗೂಢಂ ಸ್ಥಿತಮಪಸಿ ಯಜ್ಞವಹನರೂಪೇ ಕರ್ಮಣಿ ನಿಮಿತ್ತೇ ॥ ಉ ಇತಿ ಪೂರಣಃ ॥ ಅವಿಂದನ್ । ಲಬ್ಧವಂತಃ ॥**

॥ ಪ್ರತಿಪದಾರ್ಥ

**ಮೇಧಿರಃ**—ಪ್ರಜ್ಞಾವಂತನೂ । **ಪೂತದಕ್ಷಃ**—ಶುದ್ಧವಾದ ಬಲವುಳ್ಳವನೂ । **ಜನುಷಾ**—ಜನ್ಮಾರಭ್ಯ । **ಸುಬಂಧುಃ**—ಶ್ರೇಷ್ಠವಾದ ಬಂಧುವಾದವನೂ ಆದ (ಯಾವ ಅಗ್ನಿಯು) । **ದಿವಃ**—ದ್ಯುಲೋಕಕ್ಕೂ । **ಪೃಥಿವ್ಯಾಃ**—ಪೃಥಿವಿಗೂ । **ಮಯಃ**—ಸುಖವನ್ನು । **ದಧೇ**—ಉಂಟುಮಾಡುತ್ತಾನೆಯೋ ಅಂತಹವನೂ । **ದರ್ಶತಂ**—ದರ್ಶನೀಯನೂ ಆದ । **ಅಗ್ನಿಂ**—ಅಗ್ನಿಯನ್ನು । **ದೇವಾಸಃ**—ದೇವತೆಗಳು । **ಸ್ವಸ್ಯಾಣಾಂ**—ಪ್ರವಹಿಸುವ ನದಿಗಳ । **ಅಪ್ಸ್ವಂತಃ**—ಉದಕಗಳ ಮಧ್ಯಭಾಗದಲ್ಲಿ । **ಅಪಸಿ**—ಯಜ್ಞರೂಪವಾದ ಕರ್ಮನಿಮಿತ್ತವಾಗಿ । **ಅವಿಂದನ್ ಉ**—ಹುಡುಕಿ ಪಡೆದರು.

॥ ಭಾವಾರ್ಥ ॥

ಪ್ರಜ್ಞಾವಂತನೂ, ಶುದ್ಧವಾದ ಬಲವುಳ್ಳವನೂ, ಜನ್ಮಾರಭ್ಯ ಸಹಜವಾದ ಬಂಧುತ್ವವುಳ್ಳವನೂ, ದ್ಯುಲೋಕಕ್ಕೂ ಪೃಥಿವಿಗೂ ಸುಖವನ್ನು ಉಂಟುಮಾಡುವವನೂ, ದರ್ಶನೀಯನೂ ಆದ ಅಗ್ನಿಯನ್ನು ದೇವತೆಗಳು ನದಿಗಳ ಉದಕಮಧ್ಯದಲ್ಲಿ ಹುಡುಕಿ ಯಜ್ಞರೂಪವಾದ ಕರ್ಮದ ನಿಮಿತ್ತವಾಗಿ ಪಡೆದರು.

English Translation.

The gods discovered the graceful Agni (concealed) amidst the waters of the flowing (rivers), for the purpose of (sacred) acts: Agni, who is inteligent, of purfied vigour, and friendly; who from his birth bestowed happiness on earth and heaven.

॥ ವಿಶೇಷವಿಷಯಗಳು ॥

**ಮೇಧಿರಃ ಪೂತದಕ್ಷಃ ಜನುಷಾ ಸುಬಂಧುಃ ದಿವಃ ಪೃಥಿವ್ಯಾಃ ಮಯಃ ದಧೇ—ಮೇಧಾವಾನ್ ಪ್ರಾಜ್ಞಃ ಶುದ್ಧಬಲಃ ಜನ್ಮಮಾತ್ರೇಣ ಸುಬಂಧುಃ ಯೋಽಗ್ನಿಃ ದ್ಯುಲೋಕಸ್ಯ ಭೂಮೇಶ್ಚ ಸುಖಂ ವಿದಧಾತಿ** । ಪ್ರಾಜ್ಞನೂ ಅಧಿಕಬಲವುಳ್ಳವನೂ, ತನ್ನ ಜನ್ಮಕಾಲದಿಂದಲೂ (ಉತ್ಪತ್ತಿಕಾಲದಿಂದಲೂ) ಒಳ್ಳೆಯ ಬಂಧುವಿನಂತೆ ಹಿತಕಾರಿಯೂ, ಆದ ಅಗ್ನಿಯು ದೇವಲೋಕಕ್ಕೂ ಭೂಮಿಗೂ ಸಹ ಸುಖವನ್ನುಂಟುಮಾಡುತ್ತಾನೆ

ಎಂದರೆ ಸ್ವರ್ಗದಲ್ಲಿರುವ ದೇವತೆಗಳಿಗೂ ಭೂಮಿಯಲ್ಲಿರುವ ಮನುಷ್ಯರಿಗೂ ಸುಖವನ್ನುಂಟುಮಾಡುತ್ತಾನೆ. ಮನುಷ್ಯರು ಮಾಡುವ ಯಜ್ಞಾದಿಗಳಲ್ಲಿ ಯಜಮಾನರು ಅರ್ಪಿಸುವ ಹವಿರಾದಿಗಳನ್ನೂ ಸ್ವರ್ಗದಲ್ಲಿರುವ ದೇವತೆಗಳಿಗೆ ತಲುಪಿಸುವುದರಿಂದ ದೇವತೆಗಳಿಗೂ ಮನುಷ್ಯರಿಗೂ ಸುಖವನ್ನುಂಟುಮಾಡುತ್ತಾನೆ ಎಂದು ಹೇಳಿದೆ. ಮನುಷ್ಯರು ತಾವು ಮಾಡುವ ಯಜ್ಞಾದಿಗಳಲ್ಲಿ ಅರ್ಪಿಸುವ ಹವಿಸ್ಸುಗಳು ದೇವತೆಗಳಿಗೆ ಸೇರುವುದರಿಂದ ಯಜ್ಞವು ಸಾಂಗವಾಗಿ ನೆರವೇರಿದಂತಾಗಿ ಅದರ ಫಲವು ಮನುಷ್ಯರಿಗೆ ಲಭಿಸುವುದು. ಇದರಿಂದ ಮನುಷ್ಯರಿಗೆ ಸುಖವುಂಟಾಗುವುದು. ದೇವತೆಗಳೂ ಸಹ, ಯಜ್ಞಗಳಲ್ಲಿ ತಮ್ಮನ್ನುದ್ದೇಶಿಸಿ ಅರ್ಪಿಸಿದ ಹವಿರ್ಭಾಗಗಳನ್ನು ಅಗ್ನಿಯ ಮೂಲಕ ಸ್ವೀಕರಿಸಿ ದಂತಾಗುವುದರಿಂದ ಅಗ್ನಿಯು ದೇವತೆಗಳಿಗೂ ಸುಖವನ್ನುಂಟುಮಾಡಿದಂತಾಗುವುದು ಎಂದು ಮುಖ್ಯಾಭಿಪ್ರಾಯವು.

**ಪೂತದಕ್ಷಃ**—**ಪೂತ** = ಶುದ್ಧ, **ದಕ್ಷ** = ಬಲ (pure strength) ಎಂದು ಈ ಶಬ್ದದ ಅವಯವಾರ್ಥವು. ದಕ್ಷಶಬ್ದವು ಬಲನಾಮಗಳಲ್ಲಿ ಪಠಿತವಾಗಿದೆ. (ನಿ. ೨-೯). ಈ ಶಬ್ದವು—

**ಅಬುಧ್ನೇ ರಾಜಾ ವರುಣೋ ವನಸ್ಯೋರ್ಧ್ವಂ ಸ್ತೂಪಂ ದಧತೇ ಪೂತದಕ್ಷಃ ।**
(ಋ. ಸಂ. ೧-೨೪-೭)

**ಅರ್ಚಂತಿ ತ್ವಾ ಮರುತಃ ಪೂತದಕ್ಷಾಸ್ತ್ವಮೇಷಾಮೃಷಿರಿಂದ್ರಾಸಿ ಧೀರಃ ।**
(ಋ. ಸಂ ೫-೨೯-೧)

**ಪ್ರತಿ ವಾಂ ಸೂರ ಉದಿತೇ ಸೂಕ್ತೈರ್ಮಿತ್ರಂ ಹುವೇ ವರುಣಂ ಪೂತದಕ್ಷಂ ।**
(ಋ. ಸಂ. ೭-೬೫-೧)

ಎಂಬ ಋಕ್ಕುಗಳಲ್ಲಿಯೂ, ಋ. ಸಂ. ೧-೨೩-೪ ; ೫-೬೬-೪ ; ೬-೫೧-೯ ; ೮-೨೩-೩೦ ; ೮-೨೫-೧ ; ೮-೯೪-೭ ; ೮-೯೪-೧೦ ; ೧೦-೯೨-೪ ಇತ್ಯಾದಿ ಋಕ್ಕುಗಳಲ್ಲಿಯೂ ಪಠಿತವಾಗಿದೆ. ಭಾಷ್ಯಕಾರರು ಈ ಋಕ್ಕುಗಳನ್ನು ವಿವರಿಸುವಾಗ **ಪೂತದಕ್ಷಃ** ಎಂದರೆ ಶುದ್ಧವಾದ ಬಲ,ಶಕ್ತಿ, ಸಾಮರ್ಥ್ಯ ಎಂದು ಅರ್ಥಮಾಡಿದಾರೆ. ವೇದಾರ್ಥಯತ್ನಕಾರರು ಈ ಶಬ್ದಕ್ಕೆ ಮನಸ್ಸೆಂದೂ Geldner ಎಂಬ ಆಂಗ್ಲೇಯ ಪಂಡಿತನು ಉದ್ದೇಶವೆಂದೂ ಅರ್ಥಮಾಡಿರುವರು. ಆದರೆ ಭಾಷ್ಯಕಾರರು ನಿಘಂಟುವನ್ನನುಸರಿಸಿ (ನಿ. ೨-೯) ಹೇಳಿರುವ **ಬಲ** ಎಂಬ ಅರ್ಥವೇ ಯುಕ್ತವಾಗಿರುವುದು. ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ **ದಕ್ಷಶ್ಚ ಮೇ ಬಲಂ ಚ ಮೇ** (ತೈ. ಸಂ. ೪-೭-೧-೧) ಎಂಬ ವಾಕ್ಯಕ್ಕೆ ಮಹೀಧರರೆಂಬುವರು ವ್ಯಾಖ್ಯಾನಮಾಡುವಾಗ **ದಕ್ಷಃ** ಎಂದರೆ ಜ್ಞಾನೇಂದ್ರಿಯಕೌಶಲ್ಯವೆಂದೂ, **ಬಲಂ** ಎಂದರೆ ಕರ್ಮೇಂದ್ರಿಯಕೌಶಲ್ಯವೆಂದೂ ಅರ್ಥಮಾಡಿರುವರು. ದಕ್ಷಶಬ್ದವು ಬುದ್ಧಿಶಕ್ತಿಯನ್ನೂ, ಬಲಶಬ್ದವು ದೇಹಶಕ್ತಿಯನ್ನೂ ಸೂಚಿಸುವುದು. ಆದುದರಿಂದ ದಕ್ಷಶಬ್ದವು—

(೧) **ದಕ್ಷಂ ದಧಾತೇ ಅಪಸಂ ।**
(ಋ. ಸಂ. ೧-೨-೯)

ಎಂಬ ಋಕ್ಕಿನಲ್ಲಿರುವಂತೆ ಒಂದು ಕೆಲಸಮಾಡುವುದರಲ್ಲಿ ಸಾಮರ್ಥ್ಯ ಅಥವಾ ಪ್ರಾವೀಣತೆಯನ್ನೂ ಮತ್ತು,

(೨) **ದಕ್ಷಂ ದಧಾಸಿ ಜೀವಸೇ ।**
(ಋ. ಸಂ. ೧-೯೧-೭)

**ದ್ಯುಮತ್ತಮಂ ದಕ್ಷಂ ಧೇಹ್ಯಸ್ಮೇ ಸೇಧಾ ಜನಾನಾಂ ಪೂರ್ವೀರರಾತೀಃ ।**
(ಋ. ಸಂ. ೬-೪೪-೯)

**ಯ ಇಂದ್ರೋ ಹರಿವಾನ್ನ ದಭಂತಿ ತಂ ರಿಪೋ ದಕ್ಷಂ ದಧಾತಿ ಸೋಮಿನಿ ।**
(ಋ. ಸಂ. ೭-೩೨-೧೨)

**ಪ್ರ ದಕ್ಷಾಯ ಪ್ರಚೇತಸಾ ।** (ಋ. ಸಂ. ೮-೯-೨೦)

ಇವೇ ಮೊದಲಾದ ಋಕ್ಕುಗಳಲ್ಲಿ ದಕ್ಷಶಬ್ದಕ್ಕೆ ಬುದ್ಧಿಶಕ್ತಿ ಎಂಬ ಅರ್ಥವಿರುವುದು. ಇದಲ್ಲದೆ ದಕ್ಷಶಬ್ದವು ಮನಸ್ಸಿನ ಉದ್ದೇಶ ಅಥವಾ ಸಂಕಲ್ಪವನ್ನೂ ಕ್ರತುಶಬ್ದವು ಪ್ರಜ್ಞಾ ಎಂದರೆ ತಿಳಿದುಕೊಳ್ಳುವ ಶಕ್ತಿಯನ್ನೂ ಸೂಚಿಸುವುವು.

(೧) **ಭದ್ರಂ ನೋ ಅಪಿ ವಾತಯ ಮನೋ ದಕ್ಷಮುತ ಕ್ರತುಂ ।**
(ಋ. ಸಂ. ೧೦-೨೫-೧)

(೨) **ಆ ತ ಏತು ಮನಃ ಪುನಃ ಕ್ರತ್ವೇ ದಕ್ಷಾಯ ಜೀವಸೇ ।**
(ಋ. ಸಂ. ೧೦-೫೭-೪)

(೩) **ತ್ವಂ ಸೋಮ ಕ್ರತುಭಿಃ ಸುಕ್ರತುರ್ಭೂಸ್ತ್ವಂ ದಕ್ಷೈಃ ಸುದಕ್ಷೋ ವಿಶ್ವವೇದಾಃ ।**
(ಋ. ಸಂ. ೧-೯೧-೨)

(೪) **ಅಧಾ ಹ್ಯಗ್ನೇ ಕ್ರತೋರ್ಭದ್ರಸ್ಯ ದಕ್ಷಸ್ಯ ಸಾಧೋಃ ।**
(ಋ. ಸಂ. ೪-೧೦-೨)

ಇತ್ಯಾದಿ ಋಕ್ಕುಗಳಲ್ಲಿಯೂ, ಋ.ಸಂ. ೧೦-೩೧-೨ ; ೧-೧೧೧-೨ ; ೪-೩೭-೨ ; ೫-೧೦-೨ ; ೫-೪೩-೫ ; ೬-೧೬-೭ ; ೭-೮೬-೬ ; ೮-೪೨-೩ ; ೮-೪೮-೮ ; ೮-೬೮-೪ ; ೯-೪-೩ ; ೯-೧೬-೨ ; ೧೦-೯೨-೧೦ ಇತ್ಯಾದಿ ಋಕ್ಕುಗಳಲ್ಲಿಯೂ ಮೇಲೆ ಹೇಳಿದ ಅರ್ಥಗಳು ಸೂಚಿತವಾಗಿರುವವು.

**ದರ್ಶತಂ ಅಗ್ನಿಂ ದೇವಾಸಃ ಸ್ವಸೃಣಾಂ ಅಪ್ಸ್ವಂತಃ ಅಪಸಿ ಅವಿಂದನ್—ತಂ ದರ್ಶನೀಯಮಗ್ನಿಂ ದೇವಾಃ ಸರಣಶೀಲಾನಾಂ ನದೀನಾಂ ಅಪ್ಸು ಗೂಢಂ ಸ್ಥಿತಂ ಯಜ್ಞವಹನರೂಪೇ ಕರ್ಮಣಿ ನಿಮಿತ್ತೇ ಲಬ್ಧವಂತಃ ।** ದರ್ಶನಯೋಗ್ಯನಾದ ಎಂದರೆ ಸೌಮ್ಯರೂಪದಿಂದಿರುವ ಆ ಅಗ್ನಿಯು ಪ್ರವಹಿಸುತ್ತಿರುವ ನದಿಗಳ ನೀರಿನ ಮಧ್ಯದಲ್ಲಿ ಅವಿತುಕೊಂಡಿರುವುದನ್ನು ಕಂಡು ಹಿಡಿದು ತಮ್ಮ ಯಜ್ಞವಹನರೂಪವಾದ ಎಂದರೆ ಯಜ್ಞಗಳಲ್ಲಿ ದೇವತೆಗಳಿಗೆ ಹವಿರ್ಭಾಗವನ್ನು ವಹಿಸುವುದಕ್ಕಾಗಿ ಅಗ್ನಿಯನ್ನು ಪುನಃ ಪಡೆದರು. ಅಗ್ನಿಯು ನೀರಿನಲ್ಲಿ ಏತಕ್ಕಾಗಿ ಅವಿತುಕೊಂಡಿದ್ದನೆಂಬ ವಿಷಯದಲ್ಲಿಯೂ, ದೇವತೆಗಳು ಅವನನ್ನು ಹುಡುಕಿ ಪುನಃ ಕರೆತಂದ ವಿಷಯದಲ್ಲಿಯೂ ಒಂದು ಉಪಾಖ್ಯಾನವಿದೆ.

ಋಗ್ವೇದಸಂಹಿತೆಯ ಹತ್ತನೆಯ ಮಂಡಲದ ೫೧ ನೆಯ ಸೂಕ್ತದಲ್ಲಿ (ಋ. ೧೦-೫೧-೬ ರಿಂದ ೯) ಈ ವಿಷಯವು ವಿಶದವಾಗಿ ವರ್ಣಿಸಲ್ಪಟ್ಟಿದೆ:—

**ಅಗ್ನೇಃ ಪೂರ್ವೇ ಭ್ರಾತರೋ ಅರ್ಥಮೇತಂ ರಥೀವಾಧ್ವಾನಮನ್ವಾವರೀವುಃ ।**
**ತಸ್ಮಾದ್ಭಿಯಾ ವರುಣ ದೂರಮಾಯಂ ಗೌರೋ ನ ಕ್ಷೇಪ್ನೋರವಿಜೇ ಜ್ಯಾಯಾಃ ॥**
**ಕುರ್ಮಸ್ತ ಆಯುರಜರಂ ಯದಗ್ನೇ ಯಥಾ ಯುಕ್ತೋ ಜಾತವೇದೋ ನ ರಿಷ್ಯಾಃ ।**
**ಅಥಾ ವಹಾಸಿ ಸುಮನಸ್ಯಮಾನೋ ಭಾಗಂ ದೇವೇಭ್ಯೋ ಹವಿಷಃ ಸುಜಾತ ॥**
**ಪ್ರಯಾಜಾನ್ಮೇ ಅನುಯಾಜಾಂಶ್ಚ ಕೇವಲಾನೂರ್ಜಸ್ವಂತಂ ಹವಿಷೋ ದತ್ತ ಭಾಗಂ ।**
**ಘೃತಂ ಚಾಪಾಂ ಪುರುಷಂ ಚೌಷಧೀನಾಮಗ್ನೇಶ್ಚ ದೀರ್ಘಮಾಯುರಸ್ತು ದೇವಾಃ ॥**
**ತವ ಪ್ರಯಾಜಾ ಅನುಯಾಜಾಶ್ಚ ಕೇವಲ ಊರ್ಜಸ್ವಂತೋ ಹವಿಷಃ ಸಂತು ಭಾಗಾಃ ।**
**ತವಾಗ್ನೇ ಯಜ್ಞೋ ೩ ಯಮಸ್ತು ಸರ್ವಸ್ತುಭ್ಯಂ ನಮಂತಾಂ ಪ್ರದಿಶಶ್ಚತಸ್ರಃ ॥**

(ಋ. ಸಂ. ೧೦-೫೧-೬ ರಿಂದ ೯)

ಈ ಸೂಕ್ತವು ದೇವತೆಗಳಿಗೂ ಅಗ್ನಿಗೂ ನಡೆದ ಸಂಭಾಷಣೆಯು. ಮುಖ್ಯ ವಿಚಾರವೇನೆಂದರೆ—ಅಗ್ನಿಗೆ **ಭೂಪತಿ, ಭುವನಪತಿ, ಭೂತಾನಾಂಪತಿ** ಎಂಬ ಹೆಸರಿನ ಮೂವರು ಜ್ಯೇಷ್ಠಸಹೋದರರಿದ್ದರು. ಅವರೂ ಅಗ್ನಿಯಂತೆಯೇ ದೇವತೆಗಳಿಗೆ ಯಜ್ಞದಲ್ಲಿ ಹವಿಸ್ಸನ್ನು ವಹಿಸುತ್ತಿದ್ದರು. ಹೀಗಿರುವಲ್ಲಿ ಯಜ್ಞದಲ್ಲಿ ಹೋಮಮಾಡುವಾಗ ವಜ್ರ ಸದೃಶವಾದ ವಷಟ್ಕಾರ ಶಬ್ದಪೂರ್ವಕವಾದ ಹೋಮಗಳಿಂದ ಈ ಮೂವರು ಸಹೋದರರೂ ಮೃತರಾದರು. ಅದನ್ನು ಕಂಡು ಕಿರಿಯವನಾದ ಅಗ್ನಿಯು ಭೀತನಾಗಿ ನೀರಿನಲ್ಲಿ ಹೋಗಿ ಅವಿತುಕೊಂಡಿದ್ದನು. ದೇವತೆಗಳು ಅಗ್ನಿಯನ್ನು ಹುಡುಕುತ್ತಿರುವಾಗ ನೀರಿನಲ್ಲಿದ್ದ ಮೀನುಗಳು ಅಗ್ನಿಯು ನೀರಿನಲ್ಲಿ ಇರುವನೆಂದು ದೇವತೆಗಳಿಗೆ ತಿಳಿಸಿದವು. ಆಗ ದೇವತೆಗಳು ಬಂದು ಅಗ್ನಿಯನ್ನು ಕುರಿತು ಸಂಭಾಷಿಸಿದರು. ಆ ಸಂಭಾಷಣೆಯೇ ಈ ಸೂಕ್ತದಲ್ಲಿ ವಿವರಿಸಲ್ಪಟ್ಟಿದೆ. ದೇವತೆಗಳು ಅಗ್ನಿಯನ್ನು ನೀರಿನಲ್ಲಿ ಎದ್ದುಬರಬೇಕೆಂದೂ ಹಿಂದಿನಂತೆ ತಮಗೆ ಹವಿಸ್ಸನ್ನು ವಹಿಸಬೇಕೆಂದೂ ಪ್ರಾರ್ಥಿಸಲು, ಅಗ್ನಿಯು ತನ್ನ ಸಹೋದರರು ಮೃತರಾದುದರಿಂದ ತನಗೂ ಅದೇ ಗತಿ ಪ್ರಾಪ್ತವಾಗುವುದೆಂದೂ ಆದ್ದರಿಂದ ತಾನು ಬರುವುದಿಲ್ಲವೆಂದೂ ಹೇಳಿದನು. ಅದಕ್ಕೆ ದೇವತೆಗಳು, ಮರಣಕ್ಕಾಗಿ ಹೆದರಬೇಡವೆಂದೂ ನಿನಗೆ ಮರಣದ ಭಯವುಂಟಾಗದಂತೆ ಮಾಡುವುವೆಂದೂ ಹೇಳಲು, ಅಗ್ನಿಯು ಪುನಃ ಇಂತೆಂದನು—ಒಳ್ಳೇದು, ಮರಣ ಭಯವನ್ನು ನನಗೆ ತಪ್ಪಿಸುವುದಲ್ಲವೆ ಯಾಗಗಳಲ್ಲಿ ಪ್ರಯಾಜಾ, ಅನುಯಾಜಾ, ಊರ್ಜಸ್ವತ್, ಸ್ವಿಷ್ಟಕೃತ್, ಆಜ್ಯಭಾಗ ಮೊದಲಾದ ಕೆಲವು ವಿಶೇಷ ಆಹುತಿಗಳನ್ನು ನನಗೆ ಕೊಡಬೇಕು ಎಂದನು. ದೇವತೆಗಳು ಹಾಗೆಯೇ ಆಗಲೆಂದೊಪ್ಪಿ ಅವನು ಕೇಳಿದ ಹವಿರ್ಭಾಗಗಳನ್ನು ಕೊಟ್ಟು, ಯಜ್ಞದಲ್ಲಿ ಮುಖ್ಯಪಾತ್ರವನ್ನು ವಹಿಸುವಂತೆಯೂ ಸರ್ವರಿಂದಲೂ ನಮಸ್ಕೃತನಾಗುವಂತೆಯೂ, ದೀರ್ಘಾಯುವಾಗುವಂತೆಯೂ ವರವನ್ನಿತ್ತು ಪೂರ್ವದಂತೆ ಹವಿರ್ವಹನ ಕಾರ್ಯದಲ್ಲಿ ಅವನನ್ನು ನಿಯಮಿಸಿದರು ಎಂದು ಈ ಸೂಕ್ತದ ಮುಖ್ಯಾಭಿಪ್ರಾಯವು.

ಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿ ಈ ವಿಷಯವಾಗಿ ಈರೀತಿ ಇರುವುದು :—

**ಅಗ್ನೇಸ್ತ್ರಯೋ ಜ್ಯಾಯಾಗ್ಂಸೋ ಭ್ರಾತರ ಆಸನ್ತೇ ದೇವೇಭ್ಯೋ ಹವ್ಯಂ ವಹಂತಃ ಪ್ರಾಮೀಯಂತ ಸೋಽಗ್ನಿರಬಿಭೇದಿತ್ಥಂ ವಾವ ಸ್ಯ ಆರ್ತಿಮಾರಿಷ್ಯತೀತಿ ಸ ನಿಲಾಯತ ಸೋಽಪಃ ಪ್ರಾವಿಶತ್ತಂ ದೇವತಾಃ ಪ್ರೈಷಮೈಚ್ಛನ್ತಂ ಮತ್ಸ್ಯಃ ಪ್ರಾಬ್ರವೀತ್ತಮಶಪದ್ಧಿಯಾಧಿಯಾ**

**ತ್ವಾ ವಧ್ಯಾಸುರ್ಯೋ ಮಾ ಪ್ರಾವೋಚ ಇತಿ ತಸ್ಮಾನ್ಮತ್ಸ್ಯಂ ಧಿಯಾಧಿಯಾ ಘ್ನಂತಿ ಶಪ್ತೋ ಹಿ ತಮನ್ವವಿಂದನ್ತಮಬ್ರುವನ್ನುಪ ನ ಆ ವರ್ತಸ್ವ ಹವ್ಯಂ ನೋ ವಹೇತಿ ಸೋಽಬ್ರವೀದ್ವರಂ ವೃಣೈ ಯದೇವ ಗೃಹೀತಸ್ಯಾಹುತಸ್ಯ ಬಹಿಃ ಪರಿಧಿಸ್ಕಂದಾತ್ತನ್ಮೇ ಭ್ರಾತೃಣಾಂ ಭಾಗಧೇಯ ಮಸದಿತಿ ತಸ್ಮಾದ್ಯದ್ಗೃಹೀತಸ್ಯಾಹುತಸ್ಯ ಬಹಿಃ ಪರಿಧಿ ಸ್ಕಂದತಿ ತೇಷಾಂ ತದ್ಭಾಗಧೇಯಂ ತಾನೇವ ತೇನ ಪ್ರೀಣಾತಿ ಪರಿಧೀನ್ಪರಿ ದಧಾತಿ ರಕ್ಷಸಾಮಪಹತ್ಯೈ ॥**

(ತೈ. ಸಂ. ೨-೬-೬-೧)

ಪೂರ್ವದಲ್ಲಿ ಅಗ್ನಿಗೆ ಮೂರು ಮಂದಿ ಜ್ಯೇಷ್ಠಸಹೋದರರಿದ್ದರು. ಅವರು ದೇವತೆಗಳಿಗೆ ಯಜ್ಞಯಾಗಾದಿಗಳಲ್ಲಿ ಯಜಮಾನನು ಕೊಡುವ ಹವಿಸ್ಸನ್ನು ಒಯ್ಯುತ್ತಿದ್ದರು. ಅವರು ಮೃತರಾಗಲು ಅಗ್ನಿಯೂ ತನಗೂ ಆ ಗತಿ ಪ್ರಾಪ್ತ ವಾಗಬಹುದೆಂದು ಹೆದರಿ ಓಡಿಹೋಗಿ ನೀರಿನಲ್ಲಿ ಪ್ರವೇಶಿಸಿ ಯಾರಿಗೂ ಕಾಣದಂತೆ ಅವಿತುಕೊಂಡಿದ್ದನು. ದೇವತೆಗಳು ಅಗ್ನಿಯು ಎಲ್ಲಿಹೋದನೆಂದು ಹುಡುಕುತ್ತಿರುವಾಗ ನೀರಿನಲ್ಲಿದ್ದ ಒಂದು ಮೀನು, ಅಗ್ನಿಯು ನೀರಿನಲ್ಲಿ ಅವಿತು ಕೊಂಡಿರುವನೆಂದು ದೇವತೆಗಳಿಗೆ ಹೇಳಿತು. ಮೀನಿನ ಈ ಚಾಡಿಮಾತನ್ನು ಕೇಳಿ ಅಗ್ನಿಗೆ ಕೋಪಬಂದು ಇನ್ನುಮೇಲೆ ನೀರಿನಲ್ಲಿರುವ ಮೀನುಗಳನ್ನು ಜನರು ಬಲೆ ಮೊದಲಾದ ಸಾಧನಗಳಿಂದ ಹಿಡಿದು ಕೊಲ್ಲುವಂತೆ ಶಪಿಸಿದನು. ಅದರಂತೆ ಈಗಲೂ ಜನರು ಮೀನುಗಳನ್ನು ಹಿಡಿದು ಕೊಂದು ತಿನ್ನುತ್ತಿರುವರು. ಬಳಿಕ ದೇವತೆಗಳು ಅಗ್ನಿಯನ್ನು ಕುರಿತು ಎಲೈ ಅಗ್ನಿಯೇ, ನೀನು ಹಿಂತಿರುಗಿಬಂದು ನಮಗೆ ಹವಿರ್ವಹನಕಾರ್ಯದಲ್ಲಿ ಉದ್ಯುಕ್ತನಾಗಿರು ಎನ್ನಲು, ಅದಕ್ಕೆ ಅಗ್ನಿಯು ಯಜ್ಞದಲ್ಲಿ ಹೋಮಮಾಡುವಾಗ ಪರಿಧಿಯ (ರಾಕ್ಷಸರು ಬಂದು ಯಜ್ಞಕ್ಕೆ ವಿಘ್ನಮಾಡದಂತೆ ಅಗ್ನಿಯ ಸುತ್ತಲೂ ನಾಲ್ಕುದಿಕ್ಕುಗಳಲ್ಲಿ ಇಡುವ ದರ್ಭವಿಶೇಷಗಳು.) ಹೊರಗಡೆ ಎಂದರೆ ಈಚೆ ಬೀಳುವ ಆಜ್ಯವೇ ಮೊದಲಾದ ಆಹುತಿಗಳ ಭಾಗವು ನನ್ನ ಸಹೋದರರಿಗೆ ಹವಿರ್ಭಾಗವಾಗುವಂತೆ ವರವನ್ನು ಕೊಟ್ಟರೆ ತಾನು ನೀರಿನಿಂದ ಬಂದು ಪೂರ್ವದಂತೆ ದೇವತೆಗಳಿಗೆ ಹವಿಸ್ಸನ್ನು ಒಯ್ಯುವೆನೆಂದು ಹೇಳಿದನು. ಅದಕ್ಕೆ ದೇವತೆಗಳು ಸಮ್ಮತಿಸಿ ಅವನಿಗೆ ಆರೀತಿ ವರವನ್ನು ಕೊಟ್ಟರು. ಇತ್ಯಾದಿ ಉಪಾಖ್ಯಾನವಿದೆ.

**ಉ—ಉಕಾರಃ ಪಾದಪೂರಣಃ ।** ಈ ಋಕ್ಕಿನಲ್ಲಿರುವ ಉ ಎಂಬ ಶಬ್ದಕ್ಕೆ ಯಾವ ನಿರ್ದಿಷ್ಟಾರ್ಥವೂ ಇರುವುದಿಲ್ಲ. ಕೇವಲ ಪಾದಪೂರಣಾರ್ಥವಾಗಿ ಉಪಯೋಗಿಸಲ್ಪಟ್ಟಿದೆ. ಯಾಸ್ಕರು ಈ ವಿಷಯದಲ್ಲಿ—**ಅಥಾಪಿ ಪದಪೂರಣ ಇದಮು ತದು** ಎಂದು ನಿರ್ವಚನವನ್ನು ಹೇಳಿರುವರು (ನಿ. ೧-೩).

॥ ಸಂಹಿತಾಪಾಠಃ ॥

ಅವರ್ಧಯನ್ತ್ಸುಭಗಂ ಸಪ್ತ ಯಹ್ವೀಃ ಶ್ವೇತಂ ಜಜ್ಞಾನಮರುಷಂ ಮಹಿತ್ವಾ ।

ಶಿಶುಂ ನ ಜಾತಮಭ್ಯಾರುರಶ್ವಾ ದೇವಾಸೋ ಅಗ್ನಿಂ ಜನಿಮನ್ವಪುಷ್ಯನ್ ॥ ೪ ॥

‖ ಪದಪಾಠಃ

ಅವರ್ಧಯೋನ್ । ಸುಽಭಗಂ । ಸಪ್ತ । ಯಹ್ವೀಃ । ಶ್ವೇತಂ । ಜಜ್ಞಾನಂ । ಅರುಷಂ । ಮಹಿಽತ್ವಾ । ಶಿಶುಂ । ನ । ಜಾತಂ । ಅಭಿ । ಆರುಃ । ಅಶ್ವಾಃ । ದೇವಾಸಃ । ಅಗ್ನಿಂ । ಜನಿಮನ್ । ವಪುಷ್ಯನ್ ॥ ೪ ॥

‖ ಸಾಯಣಭಾಷ್ಯಂ ‖

**ಸಪ್ತ ಸರ್ಪಣಶೀಲಾ ಯಹ್ವೀರ್ಯಹ್ವ್ಯೋ ಮಹತ್ಯೋ ನದ್ಯಃ ಸುಭಗಂ ಶೋಭನಧನಂ ಶ್ವೇತಂ ಶುಭ್ರಂ ಜಜ್ಞಾನಂ ಜಾತಂ ಮಹಿತ್ವಾ ಮಹತ್ತ್ವೇನಾರುಷಮಾರೋಚಮಾನಮಪ್ಸು ಸ್ಥಿತಮಗ್ನಿಮವರ್ಧಯನ್ । ಸ್ವಕಾರ್ಯಭೂತಾಭಿರೋಷಧೀಭಿರ್ವೃದ್ಧಿಂ ಪ್ರಾಪಿತವತ್ಯಃ । ಯದ್ವಾ ದಿವ್ಯಮಗ್ನಿಮಾಪೋ ವರ್ಧಯಂತ್ಯಬಂಧನತ್ವಾತ್ತಸ್ಯ । ಕಿಂಚ ಶಿಶುಂ ನ ಜಾತಂ ಯಥಾ ಜಾತಂ ಶಿಶುಮಶ್ವಾ ವಡವಾ ಅಭ್ಯಾರುಃ। ಅಭಿಗಚ್ಛಂತಿ । ತಥಾ ನದ್ಯ ಉತ್ಪನ್ನಮಗ್ನಿಮಭ್ಯಾರುಃ । ಅಭಿಜಗ್ಮುಃ । ಅಪಿ ಚ ದೇವಾಸೋ ದೇವಾ ಅಗ್ನಿಂ ಜನಿಮನ್ ಜನ್ಮನ್ಯುದಕೇ ವಾ ವಪುಷ್ಯನ್ । ವಪುರ್ದೀಪ್ತಿಮಕುರ್ವನ್ ॥**

‖ ಪ್ರತಿಪದಾರ್ಥ ‖

**ಅಶ್ವಾಃ**—ಹೆಣ್ಣು ಕುದುರೆಗಳು । **ಜಾತಂ**—ತಮ್ಮ ಹೊಟ್ಟೆಯಲ್ಲಿ ಹುಟ್ಟಿದ । **ಶಿಶು ನ ಅಭ್ಯಾರುಃ**—ಮರಿಯನ್ನು ಸಮೀಪಿಸಿ ಲಾಲಿಸುವಂತೆ । **ಸಪ್ತ**—ಸಪ್ತ ಸಂಖ್ಯಾತವಾದವೂ (ಅಥವಾ ಸರ್ಪಣಸ್ವಭಾವವುಳ್ಳವೂ । **ಯಹ್ವೀಃ**—ಮಹತ್ವರೂಪವುಳ್ಳವೂ ಆದ ನದಿಗಳು । **ಸುಭಗಂ**—ಶ್ರೇಷ್ಠವಾದ ಧನವುಳ್ಳವನೂ । **ಶ್ವೇತಂ**—ಶುಭ್ರನಾದವನೂ । **ಜಜ್ಞಾನಂ**—ಉತ್ಪನ್ನನಾದವನೂ । **ಮಹಿತ್ವಾ**—ತನ್ನ ಮಹತ್ವದಿಂದ । **ಅರುಷಂ**—ಆಕರ್ಷಕವಾದ ರೂಪವುಳ್ಳವನೂ ಆದ ಅಗ್ನಿಯನ್ನು । **ಅವರ್ಧಯನ್**—ಲಾಲಿಸಿ ವೃದ್ಧನಾಗುವಂತೆ ಮಾಡಿದರು । **ದೇವಾಸಃ**—ದೇವತೆಗಳು । **ಅಗ್ನಿಂ**—ಅಗ್ನಿಯನ್ನು । **ಜನಿಮನ್**—ಉತ್ಪನ್ನನಾದೊಡನೆಯೇ । **ವಪುಷ್ಯನ್**—ಅವನ ಶರೀರವು ಬೆಳಗುವಂತೆ ಮಾಡಿದರು.

‖ ಭಾವಾರ್ಥ ‖

ಹೆಣ್ಣುಕುದುರೆಗಳು ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮರಿಯನ್ನು ಸಮೀಪಿಸಿ ಲಾಲಿಸುವಂತೆ, ಸಪ್ತಸಂಖ್ಯಾತವಾದವೂ, ಮಹತ್ವರೂಪವುಳ್ಳವೂ ಆದ ನದಿಗಳು ಶ್ರೇಷ್ಠವಾದ ಧನವುಳ್ಳವನೂ, ಶುಭ್ರನಾದವನೂ, ಉತ್ಪನ್ನನಾದವನೂ ತನ್ನ ಮಹತ್ವದಿಂದ ಆಕರ್ಷಕವಾದ ರೂಪವುಳ್ಳವನೂ ಆದ ಅಗ್ನಿಯನ್ನು ಲಾಲಿಸಿ ಪ್ರವೃದ್ಧನಾಗುವಂತೆ ಮಾಡಿದರು. ಈ ಅಗ್ನಿಯು ಉತ್ಪನ್ನನಾದೊಡನೆಯೇ ದೇವತೆಗಳು ಅವನ ಶರೀರವನ್ನು ಬೆಳಗುವಂತೆ ಮಾಡಿದರು.

## English Translation.

The seven great rivers augmented in might the auspicious, pure, and radiant Agni as soon as he was born, in like manner as mares (tend) the newborn foal : the gods cherished the body (of Agni) at this birth.

॥ ವಿಶೇಷವಿಷಯಗಳು ॥

**ಸಪ್ತ ಯಹ್ವೀಃ ಸುಭಗಂ ಶ್ವೇತಂ ಜಜ್ಞಾನಂ ಮಹಿತ್ವಾ ಅರುಷಂ ಅವರ್ಧಯನ್—ಸರ್ಪಣ-ಶೀಲಾ ಮಹತ್ಯೋ ನದ್ಯಃ ಶೋಭನಧನಂ ಶುಭ್ರಂ ಜಾತಂ ಮಹತ್ತ್ವೇನ ಆರೋಚಮಾನಮಪ್ಸು ಸ್ಥಿತಮಗ್ನಿಂ ಅವರ್ಧಯನ್ ।** ಯಾವಾಗಲೂ ಹರಿಯುವ ಸ್ವಭಾವವುಳ್ಳ ಮತ್ತು ದೊಡ್ಡದಾದ ನದಿಗಳು, ಶ್ರೇಷ್ಠವಾದ ಧನವುಳ್ಳವನೂ, ಶುಭ್ರನಾದವನೂ, ಆಗತಾನೆ ಉತ್ಪನ್ನನಾದವನೂ, ತನ್ನ ಮಹಿಮೆಯಿಂದ ಮಹಾಪ್ರಕಾಶದಿಂದ ಬೆಳಗುವವನೂ ನೀರಿನಲ್ಲಿ ಇರುವವನೂ ಆದ ಅಗ್ನಿಯನ್ನು ಲಾಲಿಸಿ ಪ್ರವೃದ್ಧನಾಗುವಂತೆ ಮಾಡಿದರು.

**ಸಪ್ತ—ಸೃಪ ಗತೌ** ಎಂಬ ಗತ್ಯರ್ಥಕಧಾತುವಿನಿಂದ ನಿಷ್ಪನ್ನವಾದ ಸಪ್ತಶಬ್ದಕ್ಕೆ ಗಮನವುಳ್ಳ ಎಂದರೆ ಹರಿಯುತ್ತಿರುವ ಎಂದರ್ಥವು.

**ಯಹ್ವೀಃ—ಯಾ ಪ್ರಾಪಣೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಹರಿಯುವ ಸ್ವಭಾವವುಳ್ಳ ನದಿಗಳು ಎಂದರ್ಥವು. **ಯಹ್ವ್ಯಃ** ಎಂಬ ಶಬ್ದವು ನದೀನಾಮಗಳಲ್ಲಿ ಪಠಿತವಾಗಿದೆ. (ನಿ. ೨–೨೪) ಮತ್ತು **ಯಹ್ವಃ** ಎಂಬ ಶಬ್ದವು ಮಹನ್ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩–೧೩) **ಯಹ್ವ್ಯಃ** ಎಂದರೆ ದೊಡ್ಡದಾದ ಅಥವಾ ಬಹಳವಾದ ನೀರುಳ್ಳ ನದಿಗಳೆಂದರ್ಥವನ್ನು ಹೇಳಬಹುದು.

**ಸುಭಗಂ—ಭಗಃ** ಎಂಬ ಶಬ್ದವು ಧನನಾಮಗಳಲ್ಲಿ ಪಠಿತವಾಗಿದೆ. (ನಿ. ೩–೯) **ಸುಭಗಂ** ಎಂದರೆ ಶ್ರೇಷ್ಠವಾದ ಧನವುಳ್ಳವನೆಂದರ್ಥವು.

**ಅರುಷಂ—**ಅರುಷಶಬ್ದವು ಅಶ್ವನಾಮಗಳಲ್ಲಿ ಪಠಿತವಾಗಿದೆ. (ನಿ. ೨–೭) ಮತ್ತು **ಅರುಷಮಿತಿ ರೂಪನಾಮ** (ನಿ. ೬–೭) ಎಂದು ನಿರ್ವಚನವಿರುವುದರಿಂದ ಪ್ರಕಾಶಮಾನವಾದ ರೂಪವುಳ್ಳವನು ಎಂದರ್ಥವು.

ನದಿಗಳು ಅಗ್ನಿಯನ್ನು ಲಾಲಿಸಿ ಪೋಷಿಸಿದ ವಿಷಯದಲ್ಲಿ ಇಲ್ಲಿ ಒಂದು ದೃಷ್ಟಾಂತವನ್ನು ಹೇಳಿದೆ— **ಅಶ್ವಾಃ ಜಾತಂ ಶಿಶುಂ ನ ಅಭಿ ಆರುಃ**—ಹೆಣ್ಣು ಕುದುರೆಗಳು ಹೊಸದಾಗಿ ಹುಟ್ಟಿದ ತಮ್ಮ ಮರಿಗಳನ್ನು ಸಮೀಪಿಸುವಂತೆ ಎಂದರೆ ಪ್ರೀತಿಯಿಂದ ಅವುಗಳನ್ನು ಆದರಿಸುವಂತೆ ನದಿಗಳೂ ಅಗ್ನಿಯನ್ನು ಪೋಷಿಸಿ ಪ್ರವೃದ್ಧನನ್ನಾಗಿ ಮಾಡಿದವು ಎಂದು ಹೇಳಿದೆ.

**ದೇವಾಸಃ ಅಗ್ನಿಂ ಜನಿಮನ್ ವಪುಷ್ಯನ್—ದೇವಾಃ ಅಗ್ನಿಂ ಜನ್ಮನ್ಯುದಕೇ ವಾ ವಪುರ್ದೀಪ್ತಿ-ಮಕುರ್ವನ್ ।** ನದಿಗಳು ಅಗ್ನಿಯನ್ನು ಪೋಷಿಸಿದವು ಎಂದು ಹಿಂದಿನ ವಾಕ್ಯದಲ್ಲಿ ಹೇಳಿದೆಯಷ್ಟೆ. ದೇವತೆಗಳೂ ಸಹ ಉದಕದಲ್ಲಿ ಉತ್ಪನ್ನನಾದ ಅಗ್ನಿಯ ಶರೀರವನ್ನು ಪ್ರಕಾಶವಾಗಿ ಬೆಳಗುವಂತೆ ಮಾಡಿದರು ಎಂದು ಹೇಳಿದೆ.

ಈ ಋಕ್ಕಿನಲ್ಲಿಯೂ ಮುಂದಿನ ಕೆಲವು ಋಕ್ಕುಗಳಲ್ಲಿಯೂ ಅಗ್ನಿಯ ಉತ್ಪತ್ತಿಯ ವಿಷಯವನ್ನು ವರ್ಣಿಸಲಾಗಿದೆ. ಅಗ್ನಿಗೆ ಮೂರು ವಿಧವಾದ ಜನ್ಮವಿರುವುದೆಂದು ಹೇಳಿರುವುದರಿಂದ ಅದನ್ನು ಇಲ್ಲಿ ವಿವರಿಸಲಾಗಿದೆ.

**ತ್ರೀಣಿ ಜಾನಾ ಪರಿ ಭೂಷಂತ್ಯಸ್ಯ ಸಮುದ್ರ ಏಕಂ ದಿವ್ಯೇಕಮಪ್ಸು ।**

(ಋ. ಸಂ. ೧–೯೫–೩)

**ದಿವಸ್ಪರಿ ಪ್ರಥಮಂ ಜಜ್ಞೇ ಅಗ್ನಿರಸ್ಮದ್ದ್ವಿತೀಯಂ ಪರಿ ಜಾತವೇದಾಃ |**
**ತೃತೀಯಮಪ್ಸು ನೃಮಣಾ ಅಜಸ್ರಮಿಂಧಾನ ಏನಂ ಜರತೇ ಸ್ವಾಧೀಃ ||**
(ಋ. ಸಂ. ೧೦-೪೫-೧)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯ ಮೂರು ವಿಧವಾದ ಜನ್ಮಗಳ ವರ್ಣನೆ ಇದೆ.

ಅಗ್ನಿಯ ಮೂರು ವಿಧವಾದ ಅಸ್ತಿತ್ವವೂ, ಅವಕ್ಕೆ ಅನುಗುಣವಾಗಿ ಮೂರು ವಿಧವಾದ ಆವಿರ್ಭಾವವೂ ಜಗತ್ತಿನ ಮೂಲತತ್ತ್ವವನ್ನೇ ಪ್ರತಿಬಿಂಬಿಸುತ್ತವೆ ಎಂಬುದು ಬೃಹದ್ದೇವತೆಯ ವಿವರಣೆಯಿಂದ ತಿಳಿಯುತ್ತದೆ.

**ಭವದ್ಭೂತಸ್ಯ ಭವ್ಯಸ್ಯ ಜಂಗಮಸ್ಥಾವರಸ್ಯ ಚ |**
**ಅಸ್ಯೈಕೇ ಸೂರ್ಯಮೇವೈಕಂ ಪ್ರಭವಂ ಪ್ರಲಯಂ ವಿದುಃ ||**
**ಏತದ್ಭೂತೇಷು ಲೋಕೇಷು ಅಗ್ನಿಭೂತಂ ಸ್ಥಿತಂ ತ್ರಿಧಾ |**
**ಋಷಯೋ ಗೀರ್ಭಿರರ್ಚಂತಿ ವ್ಯಂಜಿತಂ ನಾಮಭಿಸ್ತ್ರಿಭಿಃ ||**
(ಬೃ. ದೇ. ೧-೬೧; ೧-೬೪)

ಎಂಬ ಶ್ಲೋಕಗಳಲ್ಲಿ ಬೃಹದ್ದೇವತಾಕಾರರು ಅಗ್ನಿಯ ಮಹತ್ತ್ವವನ್ನು ವರ್ಣಿಸುವ ಸಂದರ್ಭದಲ್ಲಿ ಸಕಲ ಭೂತಗಳಿಗೂ ಯೋನಿಯಾದ ಪ್ರಜಾಪತಿಯು ಭೂತಭವಿಷ್ಯದ್ವರ್ತಮಾನಗಳಲ್ಲಿರುವ ಸಕಲ ಚರಾಚರವಾದ ಭೂತಗಳಿಗೂ ಸೃಷ್ಟಿ ಪ್ರಳಯಗಳ ಮೂಲವಾಗಿ ಅಗ್ನಿರೂಪದಿಂದ ಮೂರು ವಿಧವಾಗಿ ಮೂರು ಸ್ಥಾನಗಳಲ್ಲಿ ತನ್ನ ಅಸ್ತಿತ್ವವನ್ನು ಪಡೆದಿರುತ್ತಾನೆ. ಈ ಮೂರು ವಿಧವಾದ ಅಗ್ನಿಯ ಆವಿರ್ಭಾವವನ್ನೂ ಸಹ ಋಷಿಗಳು ಮೂರು ಹೆಸರುಗಳಿಂದ ಕೆಳಗೆ ಕಂಡಂತೆ ಹೇಳುತ್ತಾರೆ, ಎಂದು ಇದೇ ಅಗ್ನಿಯ ಪ್ರಶಂಸೆಯನ್ನು ಮುಂದುವರಿಸುತ್ತಾ—

**ತ್ರಿಸ್ಥಾನಂ ಚೈನಮರ್ಚಂತಿ ಹೋತ್ರಾಯಾಂ ವೃಕ್ತಬರ್ಹಿಷಃ |**
**ಇಹೈವ ಪವಮಾನೋಽಗ್ನಿರ್ಮಧ್ಯಮೋಽಗ್ನಿರ್ವನಸ್ಪತಿಃ |**
**ಅಮುಷ್ಮಿನ್ನೇವ ವಿಪ್ರೈಸ್ತು ಲೋಕೇಽಗ್ನಿಃ ಶುಚಿರುಚ್ಯತೇ ||**
**ಇಹಾಗ್ನಿಭೂತಸ್ತ್ವೃಷಿಭಿರ್ಲೋಕೇ ಸ್ತುತಿಭಿರೀಳಿತಃ |**
**ಜಾತವೇದಾಃ ಸ್ತುತೋ ಮಧ್ಯೇ ಸ್ತುತೋ ವೈಶ್ವಾನರೋ ದಿವಿ ||**
(ಬೃ. ದೇ. ೧-೬೫ ರಿಂದ ೬೭)

ಈ ಮೂರು ವಿಧಗಳಲ್ಲಿ ಪೃಥ್ವಿಯಲ್ಲಿ ಆವಿರ್ಭವಿಸುವ ಅಗ್ನಿಗೆ **ಪವಮಾನಾಗ್ನಿ**ಯೆಂತಲೂ, ಮಧ್ಯಮಲೋಕವರ್ತಿಯಾದ ಅಗ್ನಿಗೆ **ವನಸ್ಪತಿ**ಯೆಂದೂ, ದ್ಯುಲೋಕಸ್ಥನಾದ ಅಗ್ನಿಗೆ **ಶುಚಿ**ಯೆಂದೂ ಪ್ರಸಿದ್ಧಿಯಿದೆ. ಈ ಮೂರು ಪ್ರಭೇದಗಳೂ ತೈತ್ತಿರೀಯ ಸಂಹಿತೆಯಲ್ಲಿ (೨-೨-೪) ಪವಮಾನ, ಶುಚಿ, ಪಾವಕ ಎಂಬ ವಿಭಾಗದಿಂದ ಪಠಿತವಾಗಿದೆ. ಇದಲ್ಲದೇ ಅಗ್ನಿ, ಜಾತವೇದಸ್ ಮತ್ತು ವೈಶ್ವಾನರ ಎಂಬ ಹೆಸರೂ ಸಹ ಮೂರು ಸ್ಥಾನಗಳನ್ನೂ ಮೂರು ವಿಧವಾದ ಸ್ವರೂಪಗಳನ್ನೂ ತಿಳಿಸುತ್ತವೆ. ನಿರುಕ್ತಕಾರರೂ ಸಹ ಋಕ್ಸಂಹಿತೆಯ—

**ಸ್ತೋಮೇನ ಹಿ ದಿವಿ ದೇವಾಸೋ ಅಗ್ನಿಮಜೀಜನಞ್ಛಕ್ತಿಭೀ ರೋದಸಿಪ್ರಾಂ |**
**ತಮೂ ಅಕೃಣ್ವನ್ ತ್ರೇಧಾ ಭುವೇ ಕಂ ಸ ಓಷಧೀಃ ಪಚತಿ ವಿಶ್ವರೂಪಾಃ ||**
(ಋ. ಸಂ. ೧೦-೮೮-೧೦)

ಎಂಬ ಋಕ್ಕನ್ನು ಉದಹರಿಸಿ **ತೆಮುಕುರ್ವಂಸ್ತ್ರೇಧಾಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ ।** ಶಾಕಪೂಣಿಯ ವಿವರಣೆಯನ್ನನುಸರಿಸಿ ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕಗಳೆಂಬ ಪ್ರಭೇದಗಳುಳ್ಳ ಈ ಮೂರು ಸ್ಥಾನಗಳಲ್ಲೂ ಅಗ್ನಿಃ, ಜಾತವೇದಾಃ ಮತ್ತು ವೈಶ್ವಾನರ ಎಂಬ ಮೂರು ರೂಪಗಳಲ್ಲಿ ಅಗ್ನಿಯು ಆವಿರ್ಭವಿಸಿದ್ದಾನೆ ಎಂದು ಈ ಮೂರು ಸ್ವರೂಪಗಳನ್ನು ಸಂಹಿತಾವಾಕ್ಯಗಳ ಉದಾಹರಣೆಯಿಂದ ವಿಶದವಾಗಿ ವಿವರಿಸುತ್ತಾರೆ (ನಿ. ೭-೧೪ ರಿಂದ ೭-೨೫).

ಇದರಂತೆಯೇ ಈ ಋಕ್ಕಿನಲ್ಲಿಯೂ ಸಹ ಮೂರು ಸ್ಥಾನಗಳನ್ನೂ ಕ್ರಮವಾಗಿ **ಸಮುದ್ರೇ, ದಿವಿ, ಅಪ್ಸು** ಎಂಬ ಹೆಸರುಗಳಿಂದ ವಿವರಿಸಿ ಸಮುದ್ರದಲ್ಲಿ **ಬಡಬಾನಲ** ರೂಪದಲ್ಲಿಯೂ, ದ್ಯುಲೋಕದಲ್ಲಿ **ಆದಿತ್ಯ** ರೂಪದಲ್ಲಿಯೂ **ಅಪ್ಸು** ಎಂದರೆ ಅಂತರಿಕ್ಷದಲ್ಲಿ ಮಿಂಚಿನ ರೂಪದಲ್ಲಿಯೂ ಗೋಚರಿಸುತ್ತಾನೆ ಎಂದು ವಿಸ್ತರಿಸಿದೆ. ಒಂದೊಂದು ಸಲ ಈ ಸ್ಥಾನಗಳ ಹೆಸರುಗಳು ವ್ಯತ್ಯಾಸವಾದರೂ ಅಭಿಪ್ರಾಯಗಳೆಲ್ಲಾ ಒಂದೇ ಆಗಿರುವುದು. ಉದಾಹರಣೆಗೆ ಇಲ್ಲಿ ಪೃಥಿವಿಗೆ ಬದಲಾಗಿ **ಸಮುದ್ರ**ವೆಂದು ಈ ಸನ್ನಿವೇಶಕ್ಕೆ ತಕ್ಕಂತೆ ವಿಭಾಗಿಸಿದೆ. ಒಟ್ಟಿನಲ್ಲಿ ಈ ವಿಧವಾಗಿ ಮೂರು ಪ್ರಭೇದಗಳು ನಾಲ್ಕು ವೇದಗಳಲ್ಲಿಯೂ ನಾನಾ ಸನ್ನಿವೇಶಗಳಲ್ಲಿ ಹೇಳಲ್ಪಟ್ಟಿದೆ.

**ದಿವಸ್ಪರಿ ಪ್ರಥಮಂ ಜಜ್ಞೇ ಅಗ್ನಿರಸ್ಮದ್ ದ್ವಿತೀಯಂ ಪರಿ ಜಾತವೇದಾಃ ।**
**ತೃತೀಯಮಪ್ಸು ನೃಮಣಾ ಅಜಸ್ರಮಿಂಧಾನ ಏನಂ ಜರತೇ ಸ್ವಾಧೀಃ ॥**
(ಋ. ಸಂ. ೧೦-೪೫-೧ ; ವಾ. ಸಂ. ೧೨-೧೮ ; ತೈ. ಸಂ. ೧-೩-೧೪-೫)

**ಅಗ್ನಿರಸ್ಮಿ ಜನ್ಮನಾ ಜಾತವೇದಾ ಘೃತಂ ಮೇ ಚಕ್ಷುರಮೃತಂ ಮ ಆಸನ್ ।**
**ಅರ್ಕಸ್ತ್ರಿಧಾತೂ ರಜಸೋ ವಿಮಾನೋಽಜಸ್ರೋ ಘರ್ಮೋ ಹವಿರಸ್ಮಿ ನಾಮ ॥**
(ಋ. ಸಂ. ೩-೨೬-೭; ವಾ. ಸಂ. ೧೮-೬೬; ನಿ. ೧೪-೨)

ಇತ್ಯಾದಿ ವಿವರಣೆಗಳಿಂದ ಅಗ್ನಿಯ ಮೂರು ಜನ್ಮಗಳ ವರ್ಣನೆಯ ಸ್ವರೂಪವು ವಿಶದವಾಗಿ ತಿಳಿಯುತ್ತದೆ.



॥ ಸಂಹಿತಾಪಾಠಃ ॥

ಶುಕ್ರೇಭಿರಂಗೈ ರಜ ಆತತನ್ವಾನ್ ಕ್ರತುಂ ಪುನಾನಃ ಕವಿಭಿಃ ಪವಿತ್ರೈಃ ।
ಶೋಚಿರ್ವಸಾನಃ ಪರ್ಯಾಯುರಪಾಂ ಶ್ರಿಯೋ ಮಿಮೀತೇ ಬೃಹತೀರನೂನಾಃ ॥

ಪದಪಾಠಃ

ಶುಕ್ರೇಭಿಃ । ಅಂಗೈಃ । ರಜಃ । ಆಽತತನ್ವಾನ್ । ಕ್ರತುಂ । ಪುನಾನಃ । ಕವಿಽಭಿಃ । ಪವಿತ್ರೈಃ ।
ಶೋಚಿಃ । ವಸಾನಃ । ಪರಿ । ಆಯುಃ । ಅಪಾಂ । ಶ್ರಿಯಃ । ಮಿಮೀತೇ । ಬೃಹತೀಃ । ಅನೂನಾಃ ॥ ೫

‖ ಸಾಯಣಭಾಷ್ಯಂ ‖

**ಅಗ್ನಿಃ ಶುಕ್ರೇಭಿಃ ಶುಕ್ರೈರಂಗೈಸ್ತೇಜೋಭೀ ರಜೋಽಂತರಿಕ್ಷಮಾತತನ್ವಾನ್ ಆತನ್ವನ್ ವ್ಯಾಪ್ನುವನ್ ಕ್ರತುಂ ಕರ್ಮಣಾಂ ಕರ್ತಾರಂ ಯಜಮಾನಂ ಕವಿಭಿಃ ಕ್ರಾಂತಪ್ರಜ್ಞೈಃ ಸ್ತೋತವ್ಯೈರ್ವಾ ಪವಿತ್ರೈಃ ಶೋಧಕೈಸ್ತೇಜೋಭಿಃ ಪುನಾನಃ ಶೋಧಯನ್ ಶೋಚಿರ್ದೀಪ್ತಿಂ ವಸ್ತ್ರಸ್ಥಾನೀಯಂ ಪರಿ ಪರಿತೋ ವಸಾನ ಆಚ್ಛಾದಯನ್ ಅಸಾಮುಪಸ್ಯತಾಂ ಕರ್ಮವತಾಮಾಯುರನ್ನಂ ಬೃಹತೀಃ ಪ್ರಭೂತಾ ಅನೂನಾಃ ಸಂಪೂರ್ಣಾಃ ಶ್ರಿಯಃ ಸಂಪದಶ್ಚ ಮಿಮೀತೇ । ಕರೋತಿ ‖**

‖ ಪ್ರತಿಪದಾರ್ಥ ‖

(**ಅಗ್ನಿಃ**—ಅಗ್ನಿಯು) **ಶುಕ್ರೇಭಿಃ**—ಪ್ರಕಾಶಮಾನವಾದ । **ಅಂಗೈಃ**—ತೇಜಸ್ಸುಗಳಿಂದ । **ರಜಃ**—ಅಂತರಿಕ್ಷವನ್ನು । **ಆತತನ್ವಾನ್**—ವ್ಯಾಪಿಸುತ್ತಲೂ । **ಕ್ರತುಂ**—ಕರ್ಮಕರ್ತನಾದ ಯಜಮಾನನನ್ನು । **ಕವಿಭಿಃ**—ಪೂಜ್ಯವಾದುದೂ । **ಪವಿತ್ರೈಃ**—ಶುದ್ಧಿಮಾಡತಕ್ಕದ್ದೂ ಆದ ತೇಜಸ್ಸುಗಳಿಂದ । **ಪುನಾನಃ**—ಶುದ್ಧಿಮಾಡುತ್ತಲೂ । **ಶೋಚಿಃ**—ಪ್ರಕಾಶವನ್ನು । **ಪರಿ**—ಸುತ್ತಲೂ । **ವಸಾನಃ**—ವಸ್ತ್ರದಂತೆ ಹರಡುತ್ತಲೂ । **ಅಸಾಂ**—ಕರ್ಮಕರ್ತರಿಗೆ । **ಆಯುಃ**—ಅನ್ನವನ್ನೂ । **ಬೃಹತೀಃ**—ಪ್ರಭೂತವಾದುದೂ । **ಅನೂನಾಃ**—ಸಂಪೂರ್ಣವಾದುದೂ ಆದ । **ಶ್ರಿಯಃ**—ಸಂಪತ್ತುಗಳನ್ನೂ । **ಮಿಮೀತೇ**—ಉಂಟುಮಾಡಿಕೊಡುತ್ತಾನೆ.

‖ ಭಾವಾರ್ಥ ‖

ಅಗ್ನಿಯು ಪ್ರಕಾಶಮಾನವಾದ ತೇಜಸ್ಸುಗಳಿಂದ ಅಂತರಿಕ್ಷವನ್ನು ವ್ಯಾಪಿಸುತ್ತಲೂ, ಕರ್ಮಕರ್ತನಾದ ಯಜಮಾನನನ್ನು ಪೂಜ್ಯವಾದುದೂ ಶುದ್ಧಿಮಾಡತಕ್ಕದ್ದೂ ಆದ ತೇಜಸ್ಸುಗಳಿಂದ ಶುದ್ಧಿಮಾಡುತ್ತಲೂ, ತನ್ನ ಪ್ರಕಾಶವನ್ನು ಸುತ್ತಲೂ ವಸ್ತ್ರದಂತೆ ಹರಡುತ್ತಲೂ, ಕರ್ಮಕರ್ತರಿಗೆ ಅನ್ನವನ್ನೂ, ಪ್ರಭೂತವಾದುದೂ ಸಂಪೂರ್ಣವಾದುದೂ ಆದ ಸಂಪತ್ತುಗಳನ್ನೂ ಒದಗಿಸಿಕೊಡುತ್ತಾನೆ.

## English Translation.

Spreading through the firmament with shining limbs, sanctifying the rite with intelligent and purifying (energies), and clothed with radiance, he bestows upon the worshipper abundant food and great and undiminished prosperity.

‖ ವಿಶೇಷವಿಷಯಗಳು ‖

ಈ ಋಕ್ಕಿನಲ್ಲಿ **ಶೋಚಿಃ ವಸಾನಃ ಪರಿ** ಎಂಬ ದೃಷ್ಟಾಂತವು ಉಕ್ತವಾಗಿದೆ. ಒಂದು ವಸ್ತುವನ್ನು ಬಟ್ಟೆಯಿಂದ ಪೂರ್ತಿಯಾಗಿ ಮುಚ್ಚುವಂತೆ ಅಗ್ನಿಯು ತನ್ನ ಪ್ರಕಾಶದಿಂದ ಎಲ್ಲವನ್ನೂ ವ್ಯಾಪಿಸಿ ಶುದ್ಧಮಾಡುತ್ತಾನೆಂದು ಹೇಳಿದೆ. ರಜಶ್ಶಬ್ದವು ಅಂತರಿಕ್ಷಲೋಕವೆಂಬ ಅರ್ಥದಲ್ಲಿ ಯಾಸ್ಕರು—

**ಏತಾ ಉ ತ್ಯಾ ಉಷಸಃ ಕೇತುಮಕ್ರತ ಪೂರ್ವೇ ಅರ್ಧೇ ರಜಸೋ ಭಾನುಮಂಜತೇ ।**

(ಋ. ಸಂ. ೧-೯೨-೧)

ಎಂಬ ಋಕ್ಕನ್ನುದಾಹರಿಸಿ ಇದರಲ್ಲಿರುವ ರಜಸಃ ಎಂಬ ಶಬ್ದಕ್ಕೆ ಅಂತರಿಕ್ಷಲೋಕಸ್ಯ ಎಂದು ನಿರ್ವಚನವನ್ನು ಹೇಳಿದಾರೆ. (ನಿ. ೧೨-೭)

**ಕ್ರತುಂ**—ಕ್ರತುಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿದೆ ( ನಿ. ೩-೧ ). ಇಲ್ಲಿ ಕರ್ಮಕರ್ತನಾದ ಯಜಮಾನನನ್ನು ಎಂದು ಭಾಷ್ಯಕಾರರು ಅರ್ಥವಿವರಣೆ ಮಾಡಿದಾರೆ. **ಅಪಾಂ** ಎಂಬ ಶಬ್ದಕ್ಕೆ ಕರ್ಮಕರ್ತರಿಗೆ ಎಂದು ಅರ್ಥವಿವರಣೆ ಮಾಡಿದಾರೆ. **ಅಪಃ** ಎಂಬ ಶಬ್ದವೂ ಕರ್ಮನಾಮಗಳಲ್ಲಿಯೇ ಪಠಿತವಾಗಿದೆ (ನಿ. ೩-೧).

**ಆಯುಃ**—ಆಯುಃ ಎಂಬ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿರುವುದರಿಂದ ಅನ್ನವನ್ನು ಎಂದರ್ಥವು. (ನಿ. ೩-೬).

॥ ಸಂಹಿತಾಪಾಠಃ ॥

**ವವ್ರಾಜಾ ಸೀಮನದತೀರದಬ್ಧಾ ದಿವೋ ಯಹ್ವೀರವಸಾನಾ ಅನಗ್ನಾಃ ।**
**ಸನಾ ಅತ್ರ ಯುವತಯಃ ಸಯೋನೀರೇಕಂ ಗರ್ಭಂ ದಧಿರೇ ಸಪ್ತ ವಾಣೀಃ ॥ ೬**

ಪದಪಾಠಃ

ವವ್ರಾಜ । ಸೀಂ । ಅನದತೀಃ । ಅದಬ್ಧಾಃ । ದಿವಃ । ಯಹ್ವೀಃ । ಅವಸಾನಾಃ । ಅನಗ್ನಾಃ ।
ಸನಾಃ । ಅತ್ರ । ಯುವತಯಃ । ಸऽಯೋನೀಃ । ಏಕಂ । ಗರ್ಭಂ । ದಧಿರೇ । ಸಪ್ತ । ವಾಣೀಃ ॥ ೬ ॥

॥ ಸಾಯಣಭಾಷ್ಯಂ ॥

ಅನದತೀರಭಕ್ಷಯಂತೀರದಬ್ಧಾ ಅಹಿಂಸಿತಾ ಮಾತೃಭೂತಾ ಅಪೋಽಗ್ನಿಃ ಸೀಂ ಸರ್ವತೋ ವವ್ರಾಜ । ವ್ರಜತಿ । ಅಗ್ನಿರಪಾಂ ಶೋಷಕಃ ತಂ ಚಾಪಃ ಶಮಯಂತಿ ತದುಭಯಮಿಹ ನಾಸ್ತೀತ್ಯುಕ್ತಂ ಭವತಿ । ಕೀದೃಶ್ಯಸ್ತಾಃ । ದಿವೋ ಯಹ್ವೀಃ । ಅಂತರಿಕ್ಷಸ್ಯಾಪತ್ಯಭೂತಾಃ । ಅವಸಾನಾಃ । ವಸ್ತ್ರಮನಾಚ್ಛಾದಯಂತ್ಯಃ । ವಸ್ತ್ರಸ್ಥಾನೀಯಸ್ಯ ಜಲಸ್ಯ ವಿದ್ಯಮಾನತ್ವಾತ್ । ಅತ ಏವಾನಗ್ನಾಃ । ಕಿಂಚ ತಾ ಅಪಿ ಸನಾಃ ಸನಾತನ್ಯೋ ಯುವತಯೋ ನಿತ್ಯತರುಣ್ಯಃ । ನಿತ್ಯವೃದ್ಧಾ ಇತ್ಯರ್ಥಃ । ಸಯೋನೀಃ ಸಮಾನಮಂತರಿಕ್ಷಂ ಸ್ಥಾನಂ ಯಾಸಾಂ ತಾಃ ಸಪ್ತ ವಾಣೀರ್ನದ್ಯ ಏಕಮಗ್ನಿಂ ಗರ್ಭಂ ಗರ್ಭಸ್ಥಂ ದಧಿರೇ । ದಧತೇ ॥

॥ ಪ್ರತಿಪದಾರ್ಥ ॥

(**ಅಗ್ನಿಃ**—ಅಗ್ನಿಯು) । **ದಿವಃ**—ಅಂತರಿಕ್ಷಕ್ಕೆ । **ಯಹ್ವೀಃ**—ಅಪತ್ಯಭೂತರೂ । **ಅವಸಾನಾಃ**—ವಸ್ತ್ರವನ್ನು ಧರಿಸಿಲ್ಲದೇ ಇರುವವರೂ । **ಅನಗ್ನಾಃ**—(ಆದರೂ) ನಗ್ನರಲ್ಲದವರೂ । **ಅನದತೀಃ**—(ಅಗ್ನಿಯನ್ನು) ಭಕ್ಷಿಸದವರೂ । **ಅದಬ್ಧಾಃ**—(ಅಗ್ನಿಯಿಂದ) ಅಹಿಂಸಿತರಾದವರೂ ಆದ ಉದಕಗಳನ್ನು । **ಸೀಂ**—ಸುತ್ತಲೂ ।

**ವವ್ರಾಜ**—ಹೋಗಿ ಸೇರುತ್ತಾನೆ । **ಅತ್ರ**—ಇಲ್ಲಿ । **ಸನಾಃ**—ಪುರಾತನವಾದವೂ । **ಯುವತಯಃ**—ನಿತ್ಯವಾಗಿ ತಾರುಣ್ಯವನ್ನು ಹೊಂದಿರುವುವೂ । **ಸಯೋನೀಃ**—ಅಂತರಿಕ್ಷವೆಂಬ ಒಂದೇ ಮೂಲಸ್ಥಾನವನ್ನು ಹೊಂದಿರುವುವೂ । **ಸಪ್ತ**—ಸಪ್ತಸಂಖ್ಯಾತವಾದವೂ ಆದ । **ವಾಣೀಃ**—ನದಿಗಳು । **ಏಕಂ**—ಒಬ್ಬನೇ ಆದ ಅಗ್ನಿಯನ್ನು । **ಗರ್ಭಂ**—ತಮ್ಮ ಗರ್ಭವಾಗಿ (ಗರ್ಭದಲ್ಲಿ) । **ದಧಿರೇ**—ಧರಿಸಿದರು.

॥ ಭಾವಾರ್ಥ ॥

ಅಂತರಿಕ್ಷಕ್ಕೆ ಅಪತ್ಯಭೂತವಾದವೂ, ವಸ್ತ್ರವಿಲ್ಲದೇ ಇರುವುವೂ ಆದರೂ ಅನಗ್ನವಾದವೂ, ಅಗ್ನಿಯನ್ನು ಭಕ್ಷಿಸದವೂ ಅಗ್ನಿಯಿಂದ ಅಹಿಂಸಿತವಾದವೂ ಆದ ಉದಕಗಳನ್ನು ಸುತ್ತಲೂ ಹೋಗಿ ಸೇರುತ್ತಾನೆ. ಪುರಾತನವಾದವೂ, ನಿತ್ಯವಾಗಿ ತಾರುಣ್ಯವನ್ನು ಹೊಂದಿರುವುವೂ, ಅಂತರಿಕ್ಷರೂಪದ ಒಂದೇ ಮೂಲಸ್ಥಾನವನ್ನು ಹೊಂದಿರುವುವೂ, ಸಪ್ತಸಂಖ್ಯಾತವೂ ಆದ ನದಿಗಳು ಒಬ್ಬನೇ ಆದ ಅಗ್ನಿಯನ್ನು ತಮ್ಮ ಗರ್ಭವಾಗಿ (ಗರ್ಭದಲ್ಲಿ) ಧರಿಸಿದರು.

English Translation.

Agni everywhere repairs to the undevouring, undevoured (waters); the vast (offspring) of the firmament, not clothed, yet not naked, seven eternal, ever youthful rivers, sprung from the same source, received Agni as their common embryo.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸುಲಭವಾಗಿ ತಿಳಿಯುವ ಹಾಗಿಲ್ಲ. ಕ್ಲಿಷ್ಟಶಬ್ದಗಳಿಂದಲೂ ಅಸ್ಪಷ್ಟವಾದ ವಿವರಣೆಗಳಿಂದಲೂ ಕೂಡಿರುವುದರಿಂದ ಅಭಿಪ್ರಾಯವು ಹೊಂದುವಂತೆ ಅರ್ಥಮಾಡಬೇಕಾಗಿರುವುದು.

**ದಿವಃ ಯಹ್ವೀಃ ಅವಸಾನಾಃ ಅನಗ್ನಾಃ ಅನದತೀಃ ಅದಬ್ಧಾಃ ಸೀಂ ವವ್ರಾಜ—ಅಭಕ್ಷಯಂತೀಃ ಅಹಿಂಸಿತಾ ಮಾತೃಭೂತಾಃ ಅಪಃ ಅಗ್ನಿಃ ಸರ್ವತಃ ವ್ರಜತಿ ।** ಅಗ್ನಿಗೆ ಸುಡುವುದೇ ಸ್ವಭಾವವಾಗಿರುವುದರಿಂದ ಅಗ್ನಿಯ ಸುತ್ತಲೂ ಇರುವ ಯಾವ ವಸ್ತುವೇ ಆಗಲಿ ಅಗ್ನಿಯಿಂದ ತೊಂದರೆಗೆ ಒಳಗಾಗದೆ ಇರುವುದಿಲ್ಲ. ಆದರೆ ಇಲ್ಲಿ ಉದಕಗಳಿಗೆ ಅಗ್ನಿಯಿಂದ ಯಾವ ಹಿಂಸೆಯೂ ಆಗಿರುವುದಿಲ್ಲ ಎಂಬರ್ಥವನ್ನೂ **ಅದಬ್ಧಾಃ** ಎಂಬ ಶಬ್ದವು ಸೂಚಿಸುವುದು. ಅದರಂತೆ ಅಗ್ನಿಯು ಸರ್ವವನ್ನೂ ದಹಿಸುವುದರಿಂದ ಸರ್ವಭಕ್ಷಕನೆಂದು ಹೇಳಲ್ಪಡುವನು. ಆದರೆ ಇಲ್ಲಿ ಉದಕಗಳನ್ನು ಅಗ್ನಿಯು ಭಕ್ಷಿಸುವುದಿಲ್ಲ ಎಂದರೆ ಅಗ್ನಿಯ ಮಹತ್ತಾದ ತಾಪದಿಂದ ಉದಕಗಳು ಇಂಗಿಹೋಗುವುದಿಲ್ಲ ಎಂದಭಿಪ್ರಾಯವು. ಅದಲ್ಲದೆಉದಕಗಳು ಅಗ್ನಿಯನ್ನು ಆರಿಸಿ ಶಮನಗೊಳಿಸುವ ಸ್ವಭಾವವುಳ್ಳವು. ಆದರೂ ಉದಕಗಳಿಂದ ಅಗ್ನಿಗೆ ಯಾವ ವಿಧವಾದ ತೊಂದರೆಯೂ ಉಂಟಾಗುವುದಿಲ್ಲ. ಆದ್ದರಿಂದ ಅಗ್ನಿಯೂ, ಉದಕಗಳೂ ಒಬ್ಬರ ವಿಷಯದಲ್ಲಿ ಮತ್ತೊಬ್ಬರು ಸೌಮ್ಯಭಾವದಿಂದಿರುವರು. ಮತ್ತು ಈ ಉದಕಗಳ ಸ್ವಭಾವವನ್ನು ಇನ್ನೂ ವಿಶದವಾಗಿ ಹೇಳುವರು—**ದಿವಃ ಯಹ್ವೀಃ** ಎಂದರೆ **ಅಂತರಿಕ್ಷಸ್ಯಾಪತ್ಯಭೂತಾಃ**—ಅಂತರಿಕ್ಷಕ್ಕೆ ಮಕ್ಕಳಂತಿರುವವರು. ಅದು ಹೇಗೆಂದರೆ—ಉದಕಗಳಿಂದ ಪೂರ್ಣವಾದ ಮೇಘಗಳು ಅಂತರಿಕ್ಷದಲ್ಲಿ ಒಟ್ಟುಕೂಡಿ ಇರುವವು. ಈ ಮೇಘಗಳಿಂದ ವೃಷ್ಟಿರೂಪವಾಗಿ ಉದಕಗಳು ಭೂಮಿಯ ಮೇಲೆ ಬಿದ್ದು ನದಿಗಳಾಗಿ ಪ್ರವಹಿಸುವುವು. ಈ ರೀತಿ ಉದಕಗಳು ಅಂತರಿಕ್ಷದಿಂದ ಉತ್ಪತ್ತಿಯಾಗುವುದರಿಂದ (ಬೀಳುವುದರಿಂದ) ಉದಕಗಳು ಅಂತರಿಕ್ಷದ ಅಪತ್ಯ ಅಥವಾ ಮಕ್ಕಳುಗಳು

ಎಂದು ಹೇಳುವುದು ಸಹಜವಾಗಿದೆ. ಮತ್ತು **ಅವಸಾನಾಃ ಅನಗ್ನಾಃ**—ಇಲ್ಲಿ ವಸ್ತ್ರರಹಿತರಾದವರಾದರೂ ನಗ್ನರಲ್ಲ ಎಂಬ ಪರಸ್ಪರ ವಿರೋಧಾರ್ಥವು ಸೂಚಿತವಾಗಿದೆ **ಅವಸಾನಾಃ**—ವಸ್ತ್ರರಹಿತರಾದವರು ಎಂಬ ಅರ್ಥದಲ್ಲಿ ಮೇಘಗಳ ಸ್ವರೂಪವೇ ಜಲಮಯವಾಗಿರುವುದರಿಂದ ಇವುಗಳಿಗೆ ವಸ್ತ್ರವಾಗಲಿ ಬೇರೆ ವಿಧವಾದ ಆಚ್ಛಾದನೆಯಾಗಲಿ ಇರುವುದಿಲ್ಲ. ಎಂದರೆ ಮೇಘಗಳಲ್ಲಿ ಉದಕಗಳು ಮಾತ್ರವಿದ್ದು ಬೇರೆ ಯಾವ ವಿಧವಾದ ಆಚ್ಛಾದನೆಯೂ ಇಲ್ಲದಿರುವುದರಿಂದ ಈ ಉದಕಗಳು ವಸ್ತ್ರರಹಿತವಾದವು ಎಂದು ಇಲ್ಲಿ ವರ್ಣಿಸಿದೆ. ವಸ್ತ್ರರಹಿತವಾಗಿದ್ದಮೇಲೆ ನಗ್ನವಾಗಿಲ್ಲ ಎಂದು ಹೇಳುವುದು ಪರಸ್ಪರ ವಿರೋಧವು. ಆದರೆ ಮೇಘಗಳಲ್ಲಿರುವ ವಸ್ತುವು ಉದಕವೇ ಆಗಿದ್ದರೂ ಆ ಉದಕವು ನಮ್ಮ ಕಣ್ಣಿಗೆ ಉದಕದಂತೆ ಕಾಣಿಸುವುದಿಲ್ಲ. ಉದಕದಿಂದ ಪ್ರತ್ಯೇಕವಾದ ಮೇಘದಂತೆ ಕಾಣಿಸುವುದು ಎಂದರೆ ಉದಕವು ಕಾಣಿಸದಿರುವುದರಿಂದ ಅದನ್ನು ಯಾವುದೋ ಒಂದು ಆಚ್ಛಾದನವು ಆವರಿಸರಲೇಬೇಕು. ಆದರೆ ಮೇಘರೂಪದಲ್ಲಿರುವ ಉದಕಗಳಿಗೆ ಯಾವ ಆಚ್ಛಾದನೆಯೂ ಇಲ್ಲ. ಆದರೂ ಉದಕಗಳು ಅವುಗಳ ಸಹಜಸ್ಥಿತಿಯಲ್ಲಿ ಕಾಣಿಸುವುದಿಲ್ಲ. ಕಣ್ಣಿಗೆ ಕಾಣಿಸದಿರುವುದರಿಂದ ಅವುಗಳನ್ನು ಮರೆಮಾಡಿರುವ ಯಾವುದಾದರೊಂದ ವಸ್ತುವು ಇರಲೇಬೇಕು ಎಂದು ತೋರುವುದರಿಂದ ಆ ಉದಕಗಳು ನಗ್ನವಾಗಿಲ್ಲ ಎಂದು ಇಲ್ಲಿ ಹೇಳಿದೆ. ಇಂತಹ ಉದಕಗಳನ್ನು ಅಗ್ನಿಯು ಸರ್ವಪ್ರಕಾರದಿಂದಲೂ ವ್ಯಾಪಿಸಿರುವನು ಎಂದು ಮುಖ್ಯಾಭಿಪ್ರಾಯವು.

**ಸೀಂ**—ಈ ಶಬ್ದಕ್ಕೆ ಯಾಸ್ಕರು—**ಸೀಮಿತಿ ಪರಿಗ್ರಹಾರ್ಥೀಯೋ ವಾ ಪದಪೂರಣೋ ವಾ**। (ನಿ. ೧-೭) ಎಂದರೆ **ಸೀಂ** ಎಂಬ ಶಬ್ದವು ಪರಿಗ್ರಹಾರ್ಥದಲ್ಲಿಯೂ ಪಾದಪೂರಣಕ್ಕಾಗಿಯೂ ಉಪಯೋಗಿಸಲ್ಪಡುವುದು ಎಂದು ನಿರ್ವಚನವನ್ನು ಹೇಳಿದಾರೆ. **ಅಥ ಪರಿಗ್ರಹಾರ್ಥೀಯಂ ಸರ್ವಮೇವ ಪರಿಗೃಹ್ಣಾತಿ ಸರ್ವತ ಇತಿ ವಾ** ಎಂದು ಅರ್ಥವಿವರಣೆಯಿರುವುದರಿಂದ ಪರಿಗ್ರಹಾರ್ಥವೆಂದರೆ ಎಲ್ಲವನ್ನೂ ಅಥವಾ ಎಲ್ಲಾ ಕಡೆಯಲ್ಲಿಯೂ ಎಂದರ್ಥವು.

**ಸನಾಃ ಯುವತಯಃ ಸಯೋನೀಃ ಸಪ್ತ ವಾಣೀಃ ಏಕಂ ಗರ್ಭಂ ದಧಿರೇ**—**ಸನಾತನ್ಯಃ ನಿತ್ಯವೃದ್ಧಾ ಸಮಾನಯೋನೀಃ ಸಪ್ತ ನದ್ಯಃ ಅಗ್ನಿಂ ಗರ್ಭಸ್ಥಂ ದಧತೇ** ।ಈ ವಾಕ್ಯದಲ್ಲಿರುವ ಕೆಲವು ಪದಗಳಿಗೆ ವಿವರಣೆಯು ಅವಶ್ಯಕವಾಗಿದೆ. **ಸನಾತನ್ಯಃ** ಎಂದರೆ ಈ ನದಿಗಳು ಬಹುಪುರಾತನಕಾಲದಿಂದಲೂ ಇರುವುವು. ಈಚೆಗೆ ಉಂಟಾದವುಗಳಲ್ಲ; **ಯುವತಯಃ**—ಎಂದರೆ ಪ್ರವೃದ್ಧಸ್ಥಿತಿಯಲ್ಲಿರುವುವು. ಬಹಳವಾದ ಉದಕಗಳಿಂದ ಕೂಡಿರುವುದರಿಂದ ಪ್ರವೃದ್ಧಮಾನವಾದುವುಗಳೆಂದೂ ವಯೋವಿಕಾರವನ್ನು ಸೂಚಿಸುವ ಕ್ಷೀಣದೆಸೆಯಲ್ಲಿ ಇಲ್ಲದೆ ಯಾವಾಗಲೂ ಎಂದರೆ ಪ್ರತಿವರ್ಷವೂ ಪ್ರವೃದ್ಧಮಾನವಾಗುತ್ತಿರುವುದರಿಂದಲೂ ಈ ನದಿಗಳು ಯುವತಿಯರೆಂದು ಹೇಳಲ್ಪಡುವುವು. **ಸಯೋನೀಃ**—ಯೋನಿಯೆಂದರೆ ಉತ್ಪತ್ತಿಸ್ಥಾನವು. ಸಯೋನಿಯೆಂದರೆ ಸಮಾನವಾದ ಉತ್ಪತ್ತಿಸ್ಥಾನ. ನದಿಗಳು ಬೇರೆ ಬೇರೆ ಆದರೂ ಅವುಗಳಿಗೆಲ್ಲಾ ಒಂದೇ ಉತ್ಪತ್ತಿಸ್ಥಾನವು ಇರುವುದು. ಎಂದರೆ ಅಂತರಿಕ್ಷವು. ಅಂತರಿಕ್ಷದಿಂದ ವೃಷ್ಟಿರೂಪದಿಂದ ಬೀಳುವ ಉದಕಗಳು ಅನೇಕ ನದಿಗಳಾಗಿ ಹರಿಯುವುವು ಆದುದರಿಂದ ಅನೇಕನದಿಗಳ ಉದಕಗಳಿಗೆಲ್ಲಾ ಅಂತರಿಕ್ಷವೇ ಮೂಲಸ್ಥಾನವಾಗಿರುವುದರಿಂದ **ಸಯೋನೀಃ** ಎಂದು ಇಲ್ಲಿ ಹೇಳಿದೆ. **ವಾಣೀಃ**—**ಅಪೋ ವಾ ವಹನಾತ್** (ನಿ. ೬-೨) ಹರಿಯುವ ನೀರಿಗೆ ಎಂದರೆ ನದಿಗೆ ವಾಣೀ ಎಂದು ಹೆಸರು. **ಸಪ್ತ**—ಎಂದರೆ ಏಳು. ಇಲ್ಲಿ ಮುಖ್ಯವೂ ದೊಡ್ಡದೂ ಆದ ನದಿಗಳನ್ನು ಏಳು ಎಂಬ ಸಂಖ್ಯೆಯಿಂದ ನಿರ್ದೇಶಿಸಿದ್ದರೂ ಅನೇಕ ಅಥವಾ ಮುಖ್ಯ ನದಿಗಳೆಂದು ಸಪ್ತ ಶಬ್ದಕ್ಕೆ ಅರ್ಥಮಾಡಬೇಕು. ಇಂತಹ ಮುಖ್ಯ ನದಿಗಳು ಒಬ್ಬನೇ ಆದ ಅಗ್ನಿಯನ್ನು ತಮ್ಮ ಗರ್ಭದಲ್ಲಿ ಧರಿಸಿದವು ಎಂದು ಮುಖ್ಯಾಭಿಪ್ರಾಯವು. ಇಲ್ಲಿ **ಏಕಂ** ಎಂಬ ಶಬ್ದಪ್ರಯೋಗವಿರುವುದರಿಂದ ಒಬ್ಬನೇ ಆದ ಅಗ್ನಿಯನ್ನು ಏಳು ಪ್ರತ್ಯೇಕ ನದಿಗಳು ತಮ್ಮ ಗರ್ಭದಲ್ಲಿ ಹೇಗೆ ಧರಿಸಿದವು ಎಂದರೆ ಅಗ್ನಿಯು ಒಬ್ಬನೇ

ಆದರೂ ತನ್ನ ಮಹಿಮೆಯಿಂದ ಎಂದರೆ ಏಕಕಾಲದಲ್ಲಿ ಸರ್ವತ್ರ ವ್ಯಾಪಿಸುವ ಸ್ವಭಾವವುಳ್ಳವನಾದ್ದರಿಂದ ಅನೇಕ ನದಿಗಳ ಪ್ರಭೂತವಾದ ಉದಕಗಳಲ್ಲಿ ಅಂತರ್ಗತನಾಗಿ ಇರುವನು ಎಂದು ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಸ್ತ್ರೀರ್ಣಾ ಅಸ್ಯ ಸಂಹತೋ ವಿಶ್ವರೂಪಾ ಘೃತಸ್ಯ ಯೋನೌ ಸ್ರವಥೇ ಮಧೂನಾಂ

ಅಸ್ಥುರತ್ರ ಧೇನವಃ ಪಿನ್ವಮಾನಾ ಮಹೀ ದಸ್ಮಸ್ಯ ಮಾತರಾ ಸಮೀಚೀ ॥ ೭ ॥

॥ ಪದಪಾಠಃ ॥

ಸ್ತ್ರೀರ್ಣಾಃ । ಅಸ್ಯ । ಸಂऽಹತಃ । ವಿಶ್ವऽರೂಪಾಃ । ಘೃತಸ್ಯ । ಯೋನೌ । ಸ್ರವಥೇ । ಮಧೂನಾಂ ।

ಅಸ್ಥುಃ । ಅತ್ರ । ಧೇನವಃ । ಪಿನ್ವಮಾನಾಃ । ಮಹೀ ಇತಿ । ದಸ್ಮಸ್ಯ । ಮಾತರಾ । ಸಮೀಚೀ ಇತಿ ಸಂऽಈಚೀ ॥ ೭ ॥

॥ ಸಾಯಣಭಾಷ್ಯಂ ॥

**ಘೃತಸ್ಯೋದಕಸ್ಯ ಯೋನೌ ಗರ್ಭಸ್ಥಾನೇऽಂತರಿಕ್ಷೇ ಸಂಹತಃ ಪುಂಜೀಭೂತಾಃ ॥ ಹಂತೇಃ ಕ್ವಿಪ್ ॥ ವಿಶ್ವರೂಪಾ ನಾನಾರೂಪಾಃ ಸ್ತೀರ್ಣಾಃ ಸರ್ವತ್ರ ಪ್ರಸೃತಾ ಅಸ್ಯಾಗ್ನೇ ರಶ್ಮಯೋ ಮಧೂನಾಮುದಕಾನಾಂ ಸ್ರವಥೇ ಸ್ರವಣೇ ಸತ್ಯಸ್ಥುಃ । ತಿಷ್ಠಂತಿ । ಪಿನ್ವಮಾನಾಃ ಪೂರ್ಯಮಾಣಾ ಅತ್ರಾಗ್ನಾವಾಪೋ ಧೇನವಃ ಸರ್ವೇಷಾಂ ಪ್ರೀಣಯಿತ್ರ್ಯೋऽಭವನ್ । ಸಮೀಚೀ ಸಮಂಚಂತ್ಯೌ ಶೋಭಮಾನೇ ಮಹೀ ಮಹತ್ಯೌ ದ್ಯಾವಾಪೃಥಿವ್ಯೌ ದಸ್ಮಸ್ಯ ದರ್ಶನೀಯಸ್ಯಾಗ್ನೇರ್ಮಾತರಾ ಮಾತರೌ ಭವತಃ ॥**

॥ ಪ್ರತಿಪದಾರ್ಥ ॥

**ಘೃತಸ್ಯ**—ಉದಕದ । **ಯೋನೌ**—ಉತ್ಪತ್ತಿಸ್ಥಾನವಾದ ಅಂತರಿಕ್ಷದಲ್ಲಿ । **ಸಂಹತಃ**—ಪುಂಜೀಭೂತವಾದವೂ (ಒಟ್ಟಿಗೆ ಸೇರಿಕೊಂಡವೂ) । **ವಿಶ್ವರೂಪಾಃ**—ನಾನಾರೂಪವುಳ್ಳವೂ । **ಸ್ತೀರ್ಣಾಃ**—ಸರ್ವತ್ರಪ್ರಸರಿಸಿದವೂ ಆದ । **ಅಸ್ಯ**—ಈಅಗ್ನಿಯ(ರಶ್ಮಿಗಳು) । **ಮಧೂನಾಂ**—ಉದಕಗಳ । **ಸ್ರವಣೇ**—ಪ್ರವಾಹ ನಿಮಿತ್ತವಾಗಿ । **ಅಸ್ಥುಃ**—(ಸಹಾಯಕವಾಗಿ) ನಿಲ್ಲುತ್ತವೆ । **ಪಿನ್ವಮಾನಾಃ**—ತುಂಬಿತುಳುಕತಕ್ಕ ಉದಕಗಳು । **ಅತ್ರ**—ಈ ಅಗ್ನಿಯಲ್ಲಿ । **ಧೇನವಃ**—ಎಲ್ಲರಿಗೂ ತೃಪ್ತಿದಾಯಕವಾಗಿರುತ್ತವೆ । **ಸಮೀಚೀ**—ಒಟ್ಟಿಗೆ ಸೇರಿಕೊಂಡು ಪ್ರಕಾಶಿಸತಕ್ಕವೂ । **ಮಹೀ**—ಮಹತ್ತಾದವೂ ಆದ ದ್ಯಾವಾಪೃಥಿವಿಗಳು । **ದಸ್ಮಸ್ಯ**—ದರ್ಶನೀಯನಾದ ಅಗ್ನಿಗೆ । **ಮಾತರಾ**—ಜನನೀಜನಕರಾಗಿರುತ್ತವೆ.

॥ ಭಾವಾರ್ಥ ॥

ಉದಕದ ಉತ್ಪತ್ತಿಸ್ಥಾನವಾದ ಅಂತರಿಕ್ಷದಲ್ಲಿ ಪುಂಜೀಭೂತವಾದವೂ, ನಾನಾರೂಪವುಳ್ಳವೂ. ಸರ್ವತ್ರ ಪ್ರಸರಿಸಿದವೂ ಆದ ಅಗ್ನಿರಶ್ಮಿಗಳು ಉದಕಗಳ ಪ್ರವಾಹನಿಮಿತ್ತವಾಗಿ ಸಹಾಯಕವಾಗಿ ನಿಲ್ಲುತ್ತವೆ. ತುಂಬಿ ತುಳುಕ ತಕ್ಕ ಉದಕಗಳು ಈ ಅಗ್ನಿಯಲ್ಲಿ ಸೇರಿ ಎಲ್ಲರಿಗೂ ತೃಪ್ತಿದಾಯಕವಾಗಿರುತ್ತವೆ. ಒಟ್ಟಿಗೆ ಸೇರಿಕೊಂಡು ಪ್ರಕಾಶಿಸ ತಕ್ಕವೂ ಮಹತ್ತಾದವೂ ಆದ ದ್ಯಾವಾಪೃಥಿವಿಗಳು ದರ್ಶನೀಯವಾದ ಅಗ್ನಿಯ ಜನನೀಜನಕರಾಗಿರುತ್ತವೆ.

## English Translation.

Aggregated in the womb of the waters, (his rays) spread abroad; and omniform, are here effective for the diffusion of the sweet (juice), like milch cows full uddered: the mighty (Heaven and Earth) are the fitting parents of the graceful Agni.

॥ ವಿಶೇಷವಿಷಯಗಳು ॥

**ಘೃತಸ್ಯ—ಉದಕಸ್ಯ |** ಘೃತ ಶಬ್ದವು ಉದಕನಾಮಗಳಲ್ಲಿ ಪಠಿತವಾಗಿದೆ (ನಿ. ೨-೨೪).

**ಘೃತಸ್ಯ ಯೋನೌ ಸಂಹತಾಃ ವಿಶ್ವರೂಪಾಃ ಸ್ತ್ರೀರ್ಣಾಃ ಅಸ್ಯ (ರಶ್ಮಯಃ) ಮಧೂನಾಂ ಸ್ರವಣೇ ಅಸ್ಥುಃ—**ಉದಕಕ್ಕೆ ಉತ್ಪತ್ತಿಸ್ಥಾನವಾದ ಅಂತರಿಕ್ಷದಲ್ಲಿ ಎಂದರೆ ಅಂತರಿಕ್ಷದಲ್ಲಿ ಒಟ್ಟಾಗಿ ಸೇರಿರುವ ಅನೇಕ ಮೇಘ ಸಮೂಹಗಳಲ್ಲಿ ಅಗ್ನಿಯ ಕಿರಣಗಳು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿ ಇರುವುದರಿಂದ ವೃಷ್ಟಿವರ್ಷಣಕ್ಕೆ ಸಹಾಯಕ ವಾಗಿವೆ. ಎಂದರೆ ಆ ಮೇಘಗಳಲ್ಲೆಲ್ಲಾ ಅಗ್ನಿಯು ವಿದ್ಯುದ್ರೂಪದಿಂದ ಎಲ್ಲಾಕಡೆಯಲ್ಲಿಯೂ ವ್ಯಾಪಿಸಿ ಮಳೆ ಹುಯ್ಯುವುದಕ್ಕೆ ಸಹಾಯವಾಗಿರುತ್ತದೆ ಎಂದಭಿಪ್ರಾಯವು.

**ಪಿನ್ವಮಾನಾಃ ಅತ್ರ ಧೇನವಃ—ಅಗ್ನೌ ಪೂರ್ಯಮಾಣಾ ಆಪಃ ಸರ್ವೇಷಾಂ ಪ್ರೀಣಯಿತ್ರ್ಯೋಽ ಭವನ್ !** ಅಂತರಿಕ್ಷ ಪ್ರದೇಶದಲ್ಲಿ ವಿದ್ಯುದ್ರೂಪದಲ್ಲಿರುವ ಅಗ್ನಿಯನ್ನು ಸುತ್ತುವರೆದು ತುಂಬಿರುವ ಉದಕಗಳು (ಮೇಘಗಳು) ವೃಷ್ಟಿವರ್ಷಣಕ್ಕಾಗಿ ಸಿದ್ಧವಾಗಿರುವುದರಿಂದ ಸರ್ವರಿಗೂ ಹರ್ಷದಾಯಕವಾಗಿವೆ.

**ಸಮೀಚೀ ಮಹೀ ದಸ್ಮಸ್ಯ ಮಾತರಾ—ಸಮಂಚಂತ್ಯೌ ಶೋಭಮಾನೇ ಮಹತ್ಯೌ ದ್ಯಾವಾಪೃಥಿವ್ಯೌ ದರ್ಶನೀಯಸ್ಯಾಗ್ನೇಃ ಮಾತರೌ ಭವತಃ |** ಅಂತರಿಕ್ಷದಲ್ಲಿ ಮೇಘಮಧ್ಯದಲ್ಲಿ ವಿದ್ಯುದ್ರೂಪದಿಂದಿರುವ ಅಗ್ನಿಯೂ. ದ್ಯಾವಾಪೃಥಿವಿಗಳ ನಡುವೆ ಇರುವುದರಿಂದ ಅಗ್ನಿಗೆ ದ್ಯಾವಾಪೃಥಿವಿಗಳು ಮಾತಾಪಿತೃಗಳೆಂದೂ, ಅಗ್ನಿಯ ವಿದ್ಯದ್ರೂಪವು ಅತಿ ಪ್ರಕಾಶಮಾನವಾಗಿರುವುದರಿಂದ ನೋಡುವುದಕ್ಕೆ ಚಿತ್ತಾಕರ್ಷಕವಾಗಿರುವುದೆಂದೂ ಇಲ್ಲಿ ವರ್ಣಿಸಿದೆ.



॥ ಸಂಹಿತಾಪಾಠಃ ॥

ಬಭ್ರಾಣಃ ಸೂನೋ ಸಹಸೋ ವ್ಯದ್ಯೌದ್ದಧಾನಃ ಶುಕ್ರಾ ರಭಸಾ ವಪೂಂಷಿ ।

ಶ್ಚೋತಂತಿ ಧಾರಾ ಮಧುನೋ ಘೃತಸ್ಯ ವೃಷಾ ಯತ್ರ ವಾವೃಧೇ ಕಾವ್ಯೇನ ॥ ೮ ॥

॥ ಪದಪಾಠಃ ॥

ಬಭ್ರಾಣಃ । ಸೂನೋ ಇತಿ । ಸಹಸಃ । ವಿ । ಅದ್ಯೌತ್ । ದಧಾನಃ । ಶುಕ್ರಾ । ರಭಸಾ । ವಪೂಂಷಿ ।

ಶ್ಚೋತಂತಿ । ಧಾರಾಃ । ಮಧುನಃ । ಘೃತಸ್ಯ । ವೃಷಾ । ಯತ್ರ । ವವೃಧೇ । ಕಾವ್ಯೇನ ॥ ೮ ॥

॥ ಸಾಯಣಭಾಷ್ಯಂ ॥

ಹೇ ಸಹಸಃ ಸೂನೋ ಸಹಸಸ್ಪುತ್ರ ಬಭ್ರಾಣಃ ಸರ್ವೈರ್ಧಾರ್ಯಮಾಣಸ್ತ್ವಂ ಶುಕ್ರಾ ಶುಕ್ರಾಣಿ ಭಾಸ್ವರಾಣಿ ರಭಸಾ ವೇಗವಂತಿ ವಪೂಂಷ್ಯರ್ಚೀಂಷಿ ದಧಾನಃ ಧಾರಯಂಸ್ತ್ವಂ ವ್ಯದ್ಯೌತ್ । ವಿದ್ಯೋತಸೇ । ವೃಷಾಗ್ನಿರ್ಯತ್ರ ಯಸ್ಮಿನ್ಯಜಮಾನೇ ಕಾವ್ಯೇನ ಸ್ತೋತ್ರೇಣ ವವೃಧೇ ವೃದ್ಧಿಂ ಪ್ರಾಪ್ನೋತಿ ತದಾನೀಂ ಮಧುನೋಽತ್ಯಂತಂ ಮಧುರಸ್ಯ ಘೃತಸ್ಯೋದಕಸ್ಯ ಧಾರಾಃ ಶ್ಚೋತಂತಿ । ಸ್ರವಂತೇ। ಯದಾ ಯಜಮಾನಸ್ತೋತ್ರೇಣಾಗ್ನಿಸ್ತುಷ್ಟೋ ಭವತಿ ತದಾನೀಂ ವೃಷ್ಟಿರ್ಭವತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಸಹಸಃ ಸೂನೋ**—ಶಕ್ತಿಪುತ್ರನಾದ ಎಲೈ ಅಗ್ನಿಯೇ । **ಬಭ್ರಾಣಃ**—ಸಕಲರಿಂದಲೂ ಧರಿಸಲ್ಪಡುವ ನೀನು । **ಶುಕ್ರಾ**—ಪ್ರಕಾಶಮಾನವಾದುದೂ । **ರಭಸಾ**—ವೇಗಯುಕ್ತವಾದುದೂ ಆದ । **ವಪೂಂಷಿ**—ರಶ್ಮಿಗಳನ್ನು । **ದಧಾನಃ**—ಧರಿಸಿಕೊಂಡು । **ವ್ಯದ್ಯೌತ್**—ಪ್ರಕಾಶಿಸುತ್ತೀಯೆ । **ವೃಷಾ**—ಕಾಮವರ್ಷಕನಾದ ಅಗ್ನಿಯು । **ಯತ್ರ**—ಯಾವ ಯಜಮಾನನಲ್ಲಿ । **ಕಾವ್ಯೇನ**—ಸ್ತೋತ್ರದಿಂದ । **ವವೃಧೇ**—ವೃದ್ಧಿಯನ್ನು ಹೊಂದುತ್ತಾನೆಯೋ (ಆಗ) । **ಮಧುನಃ**—ಅತ್ಯಂತಮಧುರವಾದ । **ಘೃತಸ್ಯ**—ಉದಕದ । **ಧಾರಾಃ**—ಧಾರೆಗಳು । **ಶ್ಚೋತಂತಿ**—ಸ್ರವಿಸುತ್ತವೆ.

॥ ಭಾವಾರ್ಥ ॥

ಶಕ್ತಿಪುತ್ರನಾದ ಎಲೈ ಅಗ್ನಿಯೇ, ಸಕಲರಿಂದಲೂ ಧರಿಸಲ್ಪಡುವ ನೀನು ಪ್ರಕಾಶಮಾನವಾದುದೂ, ವೇಗಯುಕ್ತವಾದುದೂ ಆದ ರಶ್ಮಿಗಳನ್ನು ಧರಿಸಿಕೊಂಡು ಪ್ರಕಾಶಿಸುತ್ತೀಯೆ. ಕಾಮವರ್ಷಕನಾದ ಅಗ್ನಿಯು ಯಾವ ಯಜಮಾನನಲ್ಲಿ ಸ್ತೋತ್ರದಿಂದ ವೃದ್ಧಿಯನ್ನು ಹೊಂದುತ್ತಾನೆಯೋ, ಅಲ್ಲಿ ಅತ್ಯಂತ ಮಧುರವಾದ ಉದಕದ ಧಾರೆಗಳು ಸ್ರವಿಸುತ್ತವೆ.

English Translation.

Son of strength, sustained by all, you shine, possessing bright and rapid rays: when the vigorous Agni is magnified by praise, then the showers of sweet rain descend.

॥ ವಿಶೇಷವಿಷಯಗಳು ॥

**ಸಹಸಃ ಸೂನೋ—ಸಹಸಸ್ಪುತ್ರ** । ಅಗ್ನಿಯನ್ನು ಎರಡು ಅರಣಿಗಳ ಮಧ್ಯದಲ್ಲಿ ಉತ್ಪತ್ತಿಮಾಡುವಾಗ ಮೇಲಿನ ಅರಣಿಯನ್ನು ಕಡೆಯುವುದಕ್ಕೆ ಬಹಳ ಬಲವು ಅವಶ್ಯಕವಾಗಿರುವುದರಿಂದ, ಇಂತಹ ಬಲಪ್ರಯೋಗದಿಂದ ಉತ್ಪತ್ತಿಯಾದ ಅಗ್ನಿಗೆ ಬಲದಪುತ್ರ—**ಸಹಸಃ ಸೂನುಃ** ಎಂದು ಹೇಳುವುದು ಋಗ್ವೇದದಲ್ಲಿ ಬಹಳ ರೂಢಿಯಾಗಿದೆ.

ಸಕಲರಿಂದಲೂ ಧರಿಸಲ್ಪಡುವ ಅಗ್ನಿಯೆಂದರೆ, ಸಕಲರೂ ಈ ಅಗ್ನಿಯನ್ನು ತಮ್ಮ ಗೃಹಗಳಲ್ಲಿಯೂ ಯಜ್ಞಭೂಮಿಗಳಲ್ಲಿಯೂ ಪ್ರತಿಷ್ಠಿಸಿ ಸ್ತೋತ್ರಮಾಡುವರು. ಇಂತಹ ಅಗ್ನಿಯು ತನ್ನ ಪ್ರಕಾಶಮಾನವಾದ ಮತ್ತು ವೇಗಯುಕ್ತವಾದ ಕಿರಣಗಳಿಂದ ಬೆಳಗುತ್ತಿರುವನು. ಯಜ್ಞದಲ್ಲಿ ಯಜಮಾನನು ಸ್ತೋತ್ರಾದಿಗಳಿಂದ ಅಗ್ನಿಯ ಗುಣಗಳನ್ನು ವರ್ಣಿಸಿ ಅಗ್ನಿಯನ್ನು ಪ್ರವೃದ್ಧಮಾನನನ್ನಾಗಿ ಮಾಡಿದಕೂಡಲೇ ಅತ್ಯಂತ ಮಧುರವಾದ ಉದಕ ಧಾರೆಗಳು ವೃಷ್ಟಿರೂಪದಿಂದ ಭೂಮಿಯಮೇಲೆ ಬೀಳುತ್ತವೆ. ಎಂದರೆ ಸಕಲರಿಂದಲೂ ಪೂಜಿಸಲ್ಪಡುವ ಅಥವಾ ಸ್ತುತಿಸಲ್ಪಡುವ ಅಗ್ನಿಯು ಅಂತರಿಕ್ಷದಲ್ಲಿರುವ ಮೇಘಮಂಡಲದಲ್ಲಿ ವಿದ್ಯುದ್ರೂಪದಿಂದ ಇರುವುದರಿಂದ ಬಹಳ ಪ್ರಕಾಶಮಾನನಾಗಿ ಕಾಣಿಸುವನು. ಇವನ ಕಿರಣಗಳೂ ಬಹಳ ರಭಸವಾಗಿ ಸಂಚರಿಸುವುವು ಎಂದು ಹೇಳುವಾಗ ವಿದ್ಯುದ್ರೂಪವಾದ ಮಿಂಚು ಬಹು ಪ್ರಕಾಶಮಾನವಾಗಿ ಬೆಳಗುತ್ತಾ ಬಹು ರಭಸದಿಂದ ಅಂತರಿಕ್ಷದಲ್ಲಿ ಕಾಣಿಸಿಕೊಂಡು ಸಂಚರಿಸುವುದೆಂದಭಿಪ್ರಾಯವು. ಇಂತಹ ಅಗ್ನಿಯನ್ನು ಯಜ್ಞದಲ್ಲಿ ಯಜಮಾನರೇ ಮೊದಲಾದವರು ಸ್ತೋತ್ರಮಾಡಿದಕೂಡಲೇ ಅಂತರಿಕ್ಷದಲ್ಲಿ ಗುಡಗು, ಸಿಡಿಲು, ಮಿಂಚು ಇವುಗಳಿಂದ ಕೂಡಿದ ವೃಷ್ಟಿಯು ಭೂಮಿಯಮೇಲೆ ಧಾರಾಕಾರವಾಗಿ ಬೀಳುವುದೆಂದು ಮುಖ್ಯಾಭಿಪ್ರಾಯವು.



। ಸಂಹಿತಾಪಾಠಃ ॥

ಪಿತುಶ್ಚಿದೂಧರ್ಜನುಷಾ ವಿವೇದ ವ್ಯಸ್ಯ ಧಾರಾ ಅಸೃಜದ್ವಿ ಧೇನಾಃ ।
ಗುಹಾ ಚರಂತಂ ಸಖಿಭಿಃ ಶಿವೇಭಿರ್ದಿವೋ ಯಹ್ವೀಭಿರ್ನ ಗುಹಾ ಬಭೂವ ॥ ೯ ॥

ಪದಪಾಠಃ ॥

ಪಿತುಃ । ಚಿತ್ । ಊಧಃ । ಜನುಷಾ । ವಿವೇದ । ವಿ । ಅಸ್ಯ । ಧಾರಾಃ । ಅಸೃಜತ್ । ವಿ । ಧೇನಾಃ ।
ಗುಹಾ । ಚರಂತಂ । ಸಖಿ೽ಭಿಃ । ಶಿವೇಭಿಃ । ದಿವಃ । ಯಹ್ವೀಭಿಃ । ನ । ಗುಹಾ । ಬಭೂವ ॥ ೯ ॥

॥ ಸಾಯಣಭಾಷ್ಯಂ ॥

**ಪಿತುರಂತರಿಕ್ಷಸ್ಯೋಧರೂಧಃಸ್ಥಾನೀಯಂ ಜಲಪ್ರದೇಶಮಯಮಗ್ನಿರ್ಜನುಷಾ ಸ್ವಯಮೇವ ವಿವೇದ । ಜಾನಾತಿ । ಕಿಂಚಾಯಮಗ್ನಿರಸ್ಯೋಧಸಃ ಸಂಬಂಧಿನ್ಯೋ ಧಾರಾಃ ಪಯೋಧಾರಾ ವ್ಯಸೃಜತ್।**

**ಧೇನಾ ಮಾಧ್ಯಮಿಕಾ ವಾಚಶ್ಚ ವಿಸೃಜತಿ । ಶಿವೇಭಿಃ ಶಿವಂಕರೈಃ ಸಖಿಭಿರಾತ್ಮನಃ ಸಖಿಭೂತೈರ್ವಾಯುಭಿರ್ದಿವೋ ಯಹ್ವೀಭಿರಂತರಿಕ್ಷಸ್ಯಾಪತ್ಯಭೂತಾಭಿರದ್ಭಿಶ್ಚ ಸಹ ಗುಹಾ ಗುಹಾಯಾಂ ಚರಂತಂ ವರ್ತಮಾನಮೇನಮಗ್ನಿಂ ಗುಹಾ ಚಿತ್ ಗುಹಾಯಾಂ ಸ್ಥಿತಃ ಕೋಽಪಿ ನ ಬಭೂವ । ಪ್ರಾಪ್ತುಂ ಸಮರ್ಥೋ ನಾಭವತ್ ॥**

॥ ಪ್ರತಿಪದಾರ್ಥ ॥

(**ಅಗ್ನಿಃ**—ಅಗ್ನಿಯು) । **ಪಿತುಃ**—ತನ್ನ ಪಿತೃವಾದ ಅಂತರಿಕ್ಷದ । **ಊಧಃ**—ಕೆಚ್ಚಲಿನಂತಿರುವ ಜಲ ಪ್ರದೇಶವನ್ನು । **ಜನುಷಾ**—ತನ್ನ ಉತ್ಪತ್ತಿಯಿಂದಲೇ । **ವಿವೇದ**—ತಿಳಿಯುತ್ತಾನೆ । **ಅಸ್ಯ**—ಈ ಊಧಸ್ಸಿನಲ್ಲಿ ಅಂತರ್ಗತವಾದ । **ಧಾರಾಃ**—ಉದಕದ ಧಾರೆಗಳನ್ನು । **ವಿ ಅಸೃಜತ್**—ಬಿಡಿಸಿ ಹರಿಯುವಂತೆ ಮಾಡಿದನು । **ಧೇನಾಃ ವಿ**—ಮಾಧ್ಯಮಿಕಾ ವಾಕ್ಕನ್ನೂ ಸಹ ಪ್ರಕಟಿಸಿದನು । **ಶಿವೇಭಿಃ**—ಮಂಗಳಕರಗಳಾದವರೂ / **ಸಖಿಭಿಃ**—ತನ್ನ ಸ್ನೇಹಿತರೂ ಆದ ವಾಯುಗಳೊಂದಿಗೂ । **ದಿವಃ**—ಅಂತರಿಕ್ಷದ । **ಯಹ್ವೀಭಿಃ**—ಅಪತ್ಯಪ್ರಾಯಗಳಾದ ಉದಕಗಳೊಂದಿಗೂ । **ಗುಹಾ**—ಗುಹೆಯಲ್ಲಿ (ಮರೆಯಲ್ಲಿ) । **ಚರಂತಂ**—ಅಂತರ್ಗತನಾಗಿರತಕ್ಕ ಈ ಅಗ್ನಿಯನ್ನು । (ಪಡೆಯಲು) **ಗುಹಾ ಚಿತ್**—ಅದೇ ಗುಹೆಯಲ್ಲಿದ್ದರೂ ಸಹ । **ನ ಬಭೂವ**—ಯಾರೂ ಸಮರ್ಥರಾಗಲಿಲ್ಲ.

॥ ಭಾವಾರ್ಥ ॥

ಅಗ್ನಿಯು ಪಿತೃವಾದ ಅಂತರಿಕ್ಷದ ಕೆಚ್ಚಲಿನಂತಿರುವ ಜಲಪ್ರದೇಶವನ್ನು ತನ್ನ ಉತ್ಪತ್ತಿಯಿಂದಲೇ ತಿಳಿಯುತ್ತಾನೆ. ಈ ಊಧಸ್ಸಿನಲ್ಲಿ ಅಂತರ್ಗತವಾದ ಉದಕದ ಧಾರೆಗಳನ್ನು ಬಿಡಿಸಿ ಹರಿಯುವಂತೆ ಮಾಡಿದನು. ಮಾಧ್ಯಮಿಕಾ ವಾಕ್ಕನ್ನೂ ಸಹ ಪ್ರಕಟಿಸಿದನು. ಮಂಗಳಕರಗಳಾದವರೂ ತನ್ನ ಸಖಿಭೂತರೂ ಆದ ವಾಯುಗಳೊಂದಿಗೂ ಅಂತರಿಕ್ಷಕ್ಕೆ ಅಪತ್ಯಪ್ರಾಯಗಳಾದ ಉದಕಗಳೊಂದಿಗೂ ಸಹ ಗುಹೆಯಲ್ಲಿ ಅಂತರ್ಗತನಾಗಿರತಕ್ಕ ಈ ಅಗ್ನಿಯನ್ನು ಪಡೆಯಲು ಅದೇ ಗುಹೆಯಲ್ಲಿದ್ದರೂ ಸಹ ಯಾರೂ ಸಮರ್ಥರಾಗಲಿಲ್ಲ.

English Translation.

At his birth he knew the udder of his parent, and let forth its torreents, and its speech (of thunder); there was no one to detect him, lurking in the deep, with his auspicious associates, (the winds), and the many (waters) of the firemament.

॥ ವಿಶೇಷವಿಷಯಗಳು ॥

**ಪಿತುಃ ಚಿತ್ ಊಧಃ ಜನುಷಾ ವಿವೇದ—ಅಂತರಿಕ್ಷಸ್ಯ ಮಧ್ಯೇ ಊಧಸ್ಥಾನೀಯಂ ಜಲಪ್ರದೇಶಮಗ್ನಿಃ ಸ್ವಯಮೇವ ಜಾನಾತಿ ।** ಇಲ್ಲಿ ಪಿತುಃ ಎಂದರೆ ಅಗ್ನಿಯ ಜನನೀಜನಕರಾದ ದ್ಯಾವಾಪೃಥಿವಿಗಳು. **ಇವರ** ಮಧ್ಯದಲ್ಲಿರುವ ಅಂತರಿಕ್ಷವೆಂದರ್ಥವು. ಈ ಅಂತರಿಕ್ಷದಲ್ಲಿ ಗುಂಪಾಗಿ ಕೂಡಿರುವ ಮೇಘಗಳೇ ಮಾತೃವಿನ ಊಧಗಳು ಎಂದರೆ ಮೊಲೆ ಅಥವಾ ಕೆಚ್ಚಲು ಮೇಘದಲ್ಲಿರುವ ನೀರೇ ಮೊಲೆಯಲ್ಲಿರುವ ಹಾಲು. **ಹುಟ್ಟಿದ ಶಿಶುವು**

ತನ್ನ ತಾಯಿಯ ಮೊಲೆಯಲ್ಲಿರುವ ಹಾಲನ್ನು, ತಾನಾಗಿ ತಿಳಿಯುವಂತೆ ವಿದ್ಯುದ್ರೂಪದಿಂದ ಇರುವ ಅಗ್ನಿಯು ಅಂತರಿಕ್ಷದಲ್ಲಿ ಮೊಲೆಯಲ್ಲಿ ಹಾಲಿನಂತಿರುವ ಮೇಘೋದಕಗಳನ್ನು ಯಾರ ಸಹಾಯವೂ ಇಲ್ಲದೆ ತಾನಾಗಿ ತಿಳಿದಿರುವನು ಎಂದಭಿಪ್ರಾಯವು.

**ಅಸ್ಯ ಧಾರಾಃ ವಿ ಅಸೃಜತ್ ಧೇನಾಃ ವಿ**— ಇದಲ್ಲದೆ ವಿದ್ಯುದ್ರೂಪದಿಂದಿರುವ ಈ ಅಗ್ನಿಯು ಅಂತರಿಕ್ಷದಲ್ಲಿ ಪ್ರಕಟವಾಗಿ ಅಂತರಿಕ್ಷದ ಮೊಲೆಗಳಾದ ಮೇಘಗಳಲ್ಲಿ ಸಂಗ್ರಹವಾಗಿರುವ ಉದಕಗಳನ್ನು ವೃಷ್ಟಿರೂಪದಲ್ಲಿ ಸುರಿಸಿದನು. ಮತ್ತು ಮಾಧ್ಯಮಿಕಾವಾಗ್ರೂಪದಿಂದಲೂ ಪ್ರಕಟಿತವಾದನು. ಎಂದರೆ, ಮೇಘಗಳ ಮಧ್ಯದಲ್ಲಿ ಆಗಾಗ ಪ್ರಕಾಶಮಾನವಾದ ಮಿಂಚು (ಅಗ್ನಿ) ಕಾಣಿಸಿಕೊಂಡು ವೃಷ್ಟಿಯನ್ನು ಸುರಿಸುವಂತೆ ಮಾಡಿದನು. ಮತ್ತು ಅಂತರಿಕ್ಷದಲ್ಲಿ ಸಿಡಿಲೂ, ಗುಡುಗೂ ಸಹ ಕೇಳಿಸಿತು ಎಂದಭಿಪ್ರಾಯವು.

**ಶಿವೇಭಿಃ ಸಖಿಭಿಃ ದಿವಃ ಯಹ್ವೀಭಿಃ ಗುಹಾಃ ಚರಂತಂ ಗುಹಾ ಚಿತ್ ನ ಬಭೂವ**— ಇಲ್ಲಿ ಮಳೆ ಹುಯ್ಯುವಾಗ ಪ್ರಬಲವಾದ ಗಾಳಿಯುಂಟಾಗುವುದರಿಂದ ಗಾಳಿಯನ್ನು ಅಗ್ನಿಗೆ (ವಿದ್ಯುದಗ್ನಿಗೆ) ಸ್ನೇಹಿತರೆಂದು ವರ್ಣಿಸಿದೆ. ಉದಕಗಳು ಅಂತರಿಕ್ಷದಲ್ಲಿರುವ ಮೇಘಗಳಿಂದ ವೃಷ್ಟಿರೂಪದಲ್ಲಿ ಬೀಳುವುದರಿಂದ ಅಂತರಿಕ್ಷಕ್ಕೆ ಉದಕಗಳು ಅಪತ್ಯಪ್ರಾಯರೆಂದು (ಮಕ್ಕಳೆಂದು) ಸಹಾ ವರ್ಣಿಸಿದೆ. ಗುಹಾ ಚರಂತಂ ಎಂದರೆ ಗುಹೆಯಲ್ಲಿ ಇರುವ ವಸ್ತುವು ಜನರ ದೃಷ್ಟಿಗೆ ಬೀಳದೆ ಹೇಗೆ ಗೂಢವಾಗಿರುವುದೋ, ಹಾಗೆ ಅಲ್ಲಿಯೇ ಇದ್ದರೂ ಯಾರಿಗೂ ಕಾಣಿಸುವುದಿಲ್ಲ ಎಂದರ್ಥವು. ಗುಡುಗು, ಸಿಡಿಲು, ಮಿಂಚು ರಭಸವಾಗಿ ಬೀಸುತ್ತಿರುವ ಗಾಳಿ ಇವುಗಳೊಡನೆ ಧಾರಾಕಾರವಾಗಿ ಮಳೆಯು ಹುಯ್ಯುತ್ತಿರುವುದನ್ನು ಇಲ್ಲಿ ವರ್ಣಿಸಿ ಇದಕ್ಕೆಲ್ಲಾ ವಿದ್ಯುದ್ರೂಪದಲ್ಲಿರುವ ಅಗ್ನಿಯ ಪ್ರಭಾವವೇ ಕಾರಣವೆಂದೂ, ಇದನ್ನು ತಿಳಿಯಲು ಯಾರಿಗೂ ಶಕ್ತಿಸಾಮರ್ಥ್ಯಗಳಿಲ್ಲವೆಂದೂ ಅಗ್ನಿಯ ಮಹತ್ತ್ವವನ್ನು ವಿವರಿಸಲಾಗಿದೆ.

ಸಂಹಿತಾಪಾಠಃ ||

ಪಿತುಶ್ಚ ಗರ್ಭಂ ಜನಿತುಶ್ಚ ಬಭ್ರೇ ಪೂರ್ವೀರೇಕೋ ಅಧಯತ್ಪೀಪ್ಯಾನಾಃ |
ವೃಷ್ಣೇ ಸಪತ್ನೀ ಶುಚಯೇ ಸಬಂಧೂ ಉಭೇ ಅಸ್ಮೈ ಮನುಷ್ಯೇ೩ ನಿ ಪಾಹಿ || ೧೦

ಪದಪಾಠಃ ||

ಪಿತುಃ | ಚ | ಗರ್ಭಂ | ಜನಿತುಃ | ಚ | ಬಭ್ರೇ | ಪೂರ್ವೀಃ | ಏಕಃ | ಅಧಯತ್ | ಪೀಪ್ಯಾನಾಃ |
ವೃಷ್ಣೇ | ಸಪತ್ನೀ ಇತಿ ಸ್ವಪತ್ನೀ | ಶುಚಯೇ | ಸಬಂಧೂ ಇತಿ ಸ್ವಬಂಧೂ | ಉಭೇ ಇತಿ | ಅಸ್ಮೈ |
ಮನುಷ್ಯೇ೩ ಇತಿ | ನಿ | ಪಾಹಿ || ೧೦ ||

॥ ಸಾಯಣಭಾಷ್ಯಂ ॥

ಅಯಮಗ್ನಿಃ ಪಿತುಶ್ಚಾಂತರಿಕ್ಷಸ್ಯ ಗರ್ಭಂ ವೃಷ್ಟಿದ್ವಾರಾ ಗರ್ಭಭೂತಂ ಜನಿತುಃ ಸರ್ವಸ್ಯ ಲೋಕಸ್ಯ ಜನಯಿತುಶ್ಚ ಬ್ರಹ್ಮಣಶ್ಚ ಲೋಕವಮೋಷಧ್ಯಾದಿಕಂ ಬಭ್ರೇ । ಬಿಭರ್ತಿ । ಏಕ ಏವಾಗ್ನಿಃ ಪೂರ್ವೀರ್ಬಹ್ವೀಃ ಪೀಪ್ಯಾನಾಃ ಪ್ಯಾಯಮಾನಾ ವೃದ್ಧಿಂ ಪ್ರಾಪ್ತಾ ಓಷಧೀರಧಯತ್ । ಧಯತಿ । ಭಕ್ಷಯತಿ । ಸಪತ್ನೀ ಸಮಾನ ಏಕಃ ಸೂರ್ಯಃ ಪತಿರ್ಯಯೋಸ್ತೇ ಮನುಷ್ಯೇ ಮನುಷ್ಯೇಭ್ಯೋ ಹಿತೇ ಉಭೇ ದ್ಯಾವಾಪೃಥಿವ್ಯೌ ವೃಷ್ಣೇ ವರ್ಷಿತ್ರೇಽಸ್ಮೈ ಶುಚಯೇಽಗ್ನಯೇ ಸಬಂಧೂ ಭವತಃ । ಅನಯೋರಗ್ನಿರೇವ ಬಂಧುರಿತ್ಯರ್ಥಃ । ಹೇ ಅಗ್ನೇ ತ್ವಂ ತೇ ದ್ಯಾವಾಪೃಥಿವೀ ನಿ ಪಾಹಿ । ನಿತರಾಂ ರಕ್ಷ ॥

॥ ಪ್ರತಿಪದಾರ್ಥ ॥

(**ಅಗ್ನಿಃ**—ಅಗ್ನಿಯು) । **ಪಿತುಃ ಚ**—ಅಂತರಿಕ್ಷದ । **ಗರ್ಭಂ**—ವೃಷ್ಟ್ಯಾತ್ಮಕವಾದ ಗರ್ಭವನ್ನೂ । **ಜನಿತುಃ ಚ**—ಸೃಷ್ಟಿಕರ್ತನ (ಲೋಕವಾದ ಓಷಧ್ಯಾದಿಗಳನ್ನೂ) । **ಬಭ್ರೇ**—ಧರಿಸಿದ್ದಾನೆ । **ಏಕಃ**—ಒಬ್ಬನೇ ಆದ ಅಗ್ನಿಯು । **ಪೂರ್ವೀಃ**—ಬಹುಸಂಖ್ಯಾತವಾದವೂ । **ಪೀಪ್ಯಾನಾಃ**—ಪುಷ್ಟಿಯಿಂದ ಬೆಳೆದವೂ ಆದ ಓಷಧಿಗಳೆಲ್ಲವನ್ನೂ । **ಅಧಯತ್**—ಭಕ್ಷಿಸುತ್ತಾನೆ । **ಸಪತ್ನೀ**—ಸೂರ್ಯನನ್ನೇ ಸಮಾನವಾದ ಪತಿಯನ್ನಾಗಿ ಉಳ್ಳವರೂ । **ಮನುಷ್ಯೇ**—ಮಾನವನಿಗೆ ಹಿತಕರರೂ ಆದ । **ಉಭೇ**—ದ್ಯಾವಾಪೃಥಿವಿಗಳಿಬ್ಬರೂ । **ವೃಷ್ಣೇ**—ಕಾಮವರ್ಷಕನಾದ । **ಅಸ್ಮೈ ಶುಚಯೇ**—ಈ ಅಗ್ನಿಗೆ । **ಸಬಂಧೂ**—ಬಂಧುವಾಗಿರುತ್ತಾರೆ । (ಎಲೈ ಅಗ್ನಿಯೇ) । **ನಿ ಪಾಹಿ**—(ಆ ದ್ಯಾವಾಪೃಥಿವಿಗಳನ್ನು) ರಕ್ಷಿಸು.

॥ ಭಾವಾರ್ಥ ॥

ಅಗ್ನಿಯು ಅಂತರಿಕ್ಷದ ವೃಷ್ಟ್ಯಾತ್ಮಕವಾದ ಗರ್ಭವನ್ನೂ, ಸೃಷ್ಟಿಕರ್ತನ ಲೋಕವಾದ ಓಷಧ್ಯಾದಿಗಳನ್ನೂ ಧರಿಸಿದ್ದಾನೆ. ಒಬ್ಬನೇ ಆದ ಅಗ್ನಿಯು ಬಹುಸಂಖ್ಯಾತವಾದವೂ, ಪುಷ್ಟಿಯಿಂದ ಬೆಳೆದವೂ ಆದ ಓಷಧಿಗಳೆಲ್ಲವನ್ನೂ ಭಕ್ಷಿಸುತ್ತಾನೆ. ಸೂರ್ಯನನ್ನೇ ಸಮಾನವಾದ ಪತಿಯನ್ನಾಗಿ ಉಳ್ಳವರೂ, ಮಾನವರಿಗೆ ಹಿತಕರರೂ ಆದ ದ್ಯಾವಾಪೃಥಿವಿಗಳಿಬ್ಬರೂ ಕಾಮವರ್ಷಕನಾದ ಈ ಅಗ್ನಿಗೆ ಬಂಧುಗಳಾಗಿರುತ್ತಾರೆ ಎಲೈ ಅಗ್ನಿಯೇ, ಆ ದ್ಯಾವಾಪೃಥಿವಿಗಳನ್ನು ರಕ್ಷಿಸು.

English Translation·

He cherishes the embryo of the parent (firmament), and of the generetor (of the world): he alone consumes many flourishing (plants): the associated brides (of the sun, Heaven and Earth), who are kind to man, are both of kin to that pure showerer (of blessing): do you, Agni, ever preserve them.

॥ ವಿಶೇಷವಿಷಯಗಳು ॥

**ಪಿತುಃ ಚ ಗರ್ಭಂ ಜನಿತುಃ ಚ ಬಭ್ರೇ**—ಇಲ್ಲಿ ಜನಿತುಃ ಎಂದರೆ ಸೃಷ್ಟಿಕರ್ತನಾದ ಬ್ರಹ್ಮನ ಎಂದರ್ಥ ಮಾಡಿ ಲೋಕವಮೋಷಧ್ಯಾದಿಕಂ ಎಂಬ ಶಬ್ದವನ್ನು ಅರ್ಥಸಮನ್ವಯಕ್ಕಾಗಿ ಅಧ್ಯಾಹಾರ ಮಾಡಿರುವರು. ಈ ಅಗ್ನಿಯು ಅಂತರಿಕ್ಷದಲ್ಲಿ ಗರ್ಭರೂಪದಿಂದಿರುವ ಮೇಘಗಳ ಸಮೂಹವನ್ನೂ ಸೃಷ್ಟಿಕರ್ತನಿಂದ ಸೃಷ್ಟವಾದ ಓಷಧ್ಯಾದಿ

ಲೋಕವಸ್ತುಗಳನ್ನೂ ಧರಿಸಿದಾನೆ. ಎಂದರೆ, ಈ ಅಗ್ನಿಯ ಪ್ರಭಾವದಿಂದಲೇ ಅಂತರಿಕ್ಷದಲ್ಲಿರುವ ಮೇಘಗಳು ವೃಷ್ಟಿಯನ್ನು ಸುರಿಸುವವು. ಆ ವೃಷ್ಟಿಯಿಂದ ಭೂಮಿಯ ಮೇಲೆ ಉತ್ಪತ್ತಿಯಾಗುವ ಓಷಧಿ ವನಸ್ಪತಿಗಳನ್ನು ಅಗ್ನಿಯು ಅವುಗಳಲ್ಲಿ ಅಂತರ್ಗತನಾಗಿದ್ದು ಅವುಗಳ ಪಾಲಕನಾಗಿರುವನು ಎಂದಭಿಪ್ರಾಯವು.

**ಏಕಃ ಪೂರ್ವೀಃ ಪೀಪ್ಯಾನಾಃ ಅಧಯೆತ್**—ಅಗ್ನಿಯು ಒಬ್ಬನೇ ಆದರೂ ಬಹುಸಂಖ್ಯಾತವೂ, ಪುಷ್ಟಿಯಿಂದ ಬೆಳೆದಿರತಕ್ಕವೂ ಆದ ಅನೇಕ ಓಷಧಿವನಸ್ಪತಿಗಳನ್ನು (ಕಾಡಿನಲ್ಲಿರುವ ಬಹುಸಂಖ್ಯೆಯ ವೃಕ್ಷಾದಿಗಳನ್ನು ದಾವಾನಲರೂಪದಿಂದ) ಭಕ್ಷಿಸಲು ಸಮರ್ಥನಾಗಿರುವನು.

**ಸಪತ್ನೀ ಮನುಷ್ಯೇ ಉಭೇ ವೃಷ್ಣೇ ಅಸ್ಮೈ ಶುಚಯೇ ಸಬಂಧೂ ನಿ ಪಾಹಿ**—ಸೂರ್ಯನು ದ್ಯಾವಾಪೃಥಿವಿಗಳ ಮಧ್ಯದಲ್ಲಿದ್ದು ಅವುಗಳನ್ನು ತನ್ನ ಪ್ರಕಾಶದಿಂದ ಬೆಳಗುತ್ತಾ ಇರುವುದರಿಂದ ಇಲ್ಲಿ ಸೂರ್ಯನು ಪತಿಯೆಂದೂ, ದ್ಯಾವಾಪೃಥಿವಿಗಳಿಬ್ಬರೂ ಇಬ್ಬರು ಪತ್ನಿಯರೆಂದೂ ಉಪಮಾನವನ್ನು ಹೇಳಲಾಗಿದೆ. ಅಂತಹ ಸಮಾನಪತ್ನಿಸ್ಥಾನದಲ್ಲಿರುವ ಮತ್ತು ಮನುಷ್ಯರಿಗೆ ಹಿತವನ್ನುಂಟುಮಾಡುವ ದ್ಯಾವಾಪೃಥಿವಿಗಳು ವೃಷ್ಟಿಕಾರಣನಾಗಿ ವೃಷ್ಟಿಪ್ರದನಾದ ಅಗ್ನಿಗೆ ಬಂಧುಗಳಾಗಿರುವರು. ಎಂದರೆ ಅಗ್ನಿಯು ದ್ಯಾವಾಪೃಥಿವಿಗಳಿಗೆ ಬಂಧುವಾಗಿರುವನು. ಎಲೈ ಅಗ್ನಿಯೇ, ನಿನ್ನ ಬಂಧುಗಳಾದ ಈ ದ್ಯಾವಾಪೃಥಿವಿಗಳನ್ನು ಚೆನ್ನಾಗಿ ರಕ್ಷಿಸು ಎಂದು ಋಷಿಯು ಪ್ರಾರ್ಥಿಸಿರುವನು.



॥ ಸಂಹಿತಾಪಾಠಃ ॥

ಉರೌ ಮಹಾँ ಅನಿಬಾಧೇ ವವರ್ಧಾಪೋ ಅಗ್ನಿಂ ಯಶಸಃ ಸಂ ಹಿ ಪೂರ್ವೀಃ ।
ಋತಸ್ಯ ಯೋನಾವಶಯದ್ದಮೂನಾ ಜಾಮೀನಾಮಗ್ನಿರಪಸಿ ಸ್ವಸೄಣಾಂ ॥ ೧೧ ॥

॥ ಪದಪಾಠಃ ॥

ಉರೌ । ಮಹಾನ್ । ಅನಿऽಬಾಧೇ । ವವರ್ಧ । ಆಪಃ । ಅಗ್ನಿಂ । ಯಶಸಃ । ಸಂ । ಹಿ । ಪೂರ್ವೀಃ ।
ಋತಸ್ಯ । ಯೋನೌ । ಅಶಯತ್ । ದಮೂನಾಃ । ಜಾಮೀನಾಂ । ಅಗ್ನಿಃ । ಅಪಸಿ । ಸ್ವಸೄಣಾಂ ॥ ೧೧ ॥

॥ ಸಾಯಣಭಾಷ್ಯಂ ॥

ಮಹಾನಯಮಗ್ನಿರನಿಬಾಧೇऽಸಂಬಾಧ ಉರೌ ವಿಸ್ತೀರ್ಣೇऽಂತರಿಕ್ಷೇ ವವರ್ಧ । ವರ್ಧತೇ । ಅಸ್ಯ ವರ್ಧನೇ ಕಾರಣಮಾಹ। ಹಿ ಯಸ್ಮಾತ್ಕಾರಣಾತ್ಪೂರ್ವೀರ್ಬಹ್ವ್ಯೋ ಯಶಸೋ । ಯಶೋऽನ್ನಂ । ತದ್ವತ್ಯ ಆಪೋऽಗ್ನಿಂ ಸಂವರ್ಧಯಂತಿ । ಏವಮದ್ಭಿರ್ವೃದ್ಧಿಂ ಪ್ರಾಪ್ತೋऽಗ್ನಿರ್ಋತಸ್ಯೋದಕಸ್ಯ ಯೋನೌ ಸ್ಥಾನೇऽಂತರಿಕ್ಷೇ ಸ್ಥಿತಃ ಸ್ವಸೄಣಾಂ ಸ್ವತಃ ಸರಂತೀನಾಂ ಜಾಮೀನಾಂ ಭಗಿನೀಸ್ಥಾನೀಯಾನಾಂ ಹೇತುಭೂತೇऽಪಸಿ ಪಯಸಿ ದಮೂನಾ ದಾಂತಮನಾಃ ಸನ್ ಅಶಯತ್ । ಶೇತೇ ॥

‖ ಪ್ರತಿಪದಾರ್ಥ ‖

**ಮಹಾನ್**—ಮಹಾತ್ಮನಾದ ಅಗ್ನಿಯು | **ಅನಿಬಾಧೇ**—ನಿರ್ಬಂಧವಿಲ್ಲದ್ದೂ (ಎಲ್ಲೆಯಿಲ್ಲದ್ದೂ) **ಉರೌ**—ವಿಸ್ತೃತವಾದುದೂ ಆದ ಅಂತರಿಕ್ಷದಲ್ಲಿ | **ವವರ್ಧ**—ಬೆಳೆಯುತ್ತಾನೆ | **ಹಿ**—ಹೇಗೆಂದರೆ | **ಪೂರ್ವೀಃ**—ಪ್ರಭೂತವಾದ | **ಯಶಸಃ**—ಅನ್ನವುಳ್ಳ | **ಆಪಃ**—ಉದಕಗಳು | **ಅಗ್ನಿಂ**—ಅಗ್ನಿಯನ್ನು | **ಸಂ (ವರ್ಧಯಂತಿ)**—ಪ್ರವೃದ್ಧನಾಗುವಂತೆ ಮಾಡುತ್ತವೆ | **ಅಗ್ನಿಃ**—(ಈ ರೀತಿ ಪ್ರವೃದ್ಧನಾದ) ಅಗ್ನಿಯು | **ಋತಸ್ಯ**—ಉದಕದ | **ಯೋನೌ**—ಉತ್ಪತ್ತಿಸ್ಥಾನವಾದ ಅಂತರಿಕ್ಷದಲ್ಲಿದ್ದು | **ಸ್ವಸ್ರೂಣಾಂ**—ಪ್ರವಹಿಸುವ ಸ್ವಭಾವವುಳ್ಳವೂ | **ಜಾಮೀನಾಂ**—ಭಗಿನೀರೂಪದಲ್ಲಿರುವುವೂ ಆದ ನದಿಗಳಿಗೆ ಹೇತುಭೂತವಾದ | **ಅಪಸಿ**—ಉದಕದಲ್ಲಿ | **ದಮೂನಾಃ**—ಸುಪ್ತನಾಗಿ | **ಅಶಯತ್**—ಮಲಗಿರುತ್ತಾನೆ.

‖ ಭಾವಾರ್ಥ ‖

ಮಹಾತ್ಮನಾದ ಅಗ್ನಿಯು ನಿರ್ಬಂಧವಿಲ್ಲದ್ದೂ, ವಿಸ್ತೃತವಾದುದೂ ಆದ ಅಂತರಿಕ್ಷದಲ್ಲಿ ವೃದ್ಧಿಯನ್ನು ಹೊಂದುತ್ತಾನೆ. ಹೇಗೆಂದರೆ, ಪ್ರಭೂತವಾದ ಅನ್ನವುಳ್ಳ ಉದಕಗಳು ಅಗ್ನಿಯನ್ನು ಪ್ರವೃದ್ಧನಾಗುವಂತೆ ಮಾಡುತ್ತವೆ. ಈ ರೀತಿ ಪ್ರವೃದ್ಧನಾದ ಅಗ್ನಿಯು ಉದಕದ ಉತ್ಪತ್ತಿಸ್ಥಾನವಾದ ಅಂತರಿಕ್ಷದಲ್ಲಿದ್ದು, ಪ್ರವಹಿಸುವ ಸ್ವಭಾವವುಳ್ಳವೂ, ಭಗಿನೀರೂಪದಲ್ಲಿರುವುವೂ ಆದ ನದಿಗಳಿಗೆ ಹೇತುಭೂತವಾದ ಉದಕದಲ್ಲಿ ಸುಪ್ತನಾಗಿ ಮಲಗಿರುತ್ತಾನೆ.

## English Translation.

The great Agni increases on the broad unbounded (firmament), for the waters supply abundant nutriment; and placid, he sleeps in the birth-place of the waters for the service of the sister streams.

‖ ವಿಶೇಷವಿಷಯಗಳು ‖

**ಮಹಾನ್ ಅನಿಬಾಧೇ ಉರೌ ವವರ್ಧ**—ಮಹಾತ್ಮನಾದ ಈ ಅಗ್ನಿಯು ವಿಸ್ತಾರವಾದುದೂ, ಯಾವ ವಿಧವಾದ ಬಾಧೆಗಳೂ (ತಡೆಯೂ) ಇಲ್ಲದಿರುವುದೂ ಆದ ಅಂತರಿಕ್ಷದಲ್ಲಿ ಬೆಳೆಯುತ್ತಾನೆ ಅಥವಾ ವೃದ್ಧಿಯನ್ನು ಹೊಂದುತ್ತಾನೆ. ಎಂದರೆ ವಿಸ್ತಾರವಾದ ಅಂತರಿಕ್ಷದಲ್ಲಿ ವಿದ್ಯುತ್ಪ್ರಕಾಶವು ಬಹಳವಾದ ಕಾಂತಿಯಿಂದ ಬೆಳಗುತ್ತದೆ.

**ಹಿ ಪೂರ್ವೀಃ ಯಶಸಃ ಆಪಃ ಅಗ್ನಿಂ ಸಂ (ವರ್ಧಯಂತಿ)**—ಓಷಧಿವನಸ್ಪತಿಗಳಿಗೂ ಅವುಗಳ ಮೂಲಕ ಅನ್ನಾದ್ಯಾಹಾರಗಳಿಗೂ ಕಾರಣಗಳಾದ ಪ್ರಭೂತವಾದ ಉದಕಗಳು ಅಗ್ನಿಯನ್ನು ಪ್ರವೃದ್ಧಿಯಾಗುವಂತೆ ಮಾಡುವವು ಇಲ್ಲಿ ಓಷಧಿವನಸ್ಪತಿಗಳು ಉದಕದಿಂದಲೇ ಉತ್ಪನ್ನವಾಗಿ ವೃದ್ಧಿಯಾಗುವವು. ಓಷಧಿವನಸ್ಪತಿಗಳಿಂದ ಅನ್ನಾದ್ಯಾಹಾರಗಳು ಒದಗುವವು. ಆದುದರಿಂದ ಇಲ್ಲಿ **ಯಶಸಃ** ಅನ್ನವುಳ್ಳ ಎಂಬ ಶಬ್ದವನ್ನು **ಆಪಃ**—ಉದಕಗಳು ಎಂಬ ಶಬ್ದಕ್ಕೆ ವಿಶೇಷಣಪದವನ್ನಾಗಿ ಉಪಯೋಗಿಸಿದೆ. ಇಂತಹ ಉದಕಗಳು ಮೇಘಗಳಲ್ಲಿ ಅತಿ ಹೆಚ್ಚಾದ ಪ್ರಮಾಣದಲ್ಲಿರುವುದರಿಂದ ಅಗ್ನಿಯು ವೃದ್ಧಿಯಾಗುವನು ಎಂದು ಹೇಳಿದೆ. ಸಾಧಾರಣವಾಗಿ ಅಲ್ಪಸ್ವಲ್ಪ ತೆಳುವಾದ ಮೇಘಗಳಿದ್ದರೆ ಹೆಚ್ಚಾಗಿ ವೃಷ್ಟಿಯಾಗುವ ಸಂಭವವಿರುವುದಿಲ್ಲ. ಅಂತಹ ಮೋಡದಲ್ಲಿ ಮಿಂಚೂ ಇರುವುದಿಲ್ಲ. ಆದರೆ ಬಹಳ ಹೆಚ್ಚಾಗಿ ನೀರಿನಿಂದ ಕೂಡಿದ ನೀಲವರ್ಣವುಳ್ಳ ಮೇಘಗಳು ಒಂದುಕಡೆ ಗುಂಪಾಗಿ ಸೇರುವಾಗ

ಹೆಚ್ಚಾಗಿ ವೃಷ್ಟಿಯಾಗುವುದಲ್ಲದೆ ಮಿಂಚು, ಸಿಡಿಲು, ಗುಡುಗು ಎಲ್ಲವೂ ಇರುವುದು. ಕಪ್ಪಗಿರುವ ಮೇಘಗಳ ಮಧ್ಯದಲ್ಲಿ ಅತಿ ಪ್ರಕಾಶಮಾನವಾದ ಮಿಂಚು ಆಗಾಗ ಹೊಳೆದು ಕಣ್ಮರೆಯಾಗುತ್ತಿರುವುದರಿಂದ ಅಗ್ನಿಯು ಪ್ರಭೂತವಾದ ಉದಕಗಳಲ್ಲಿ ಪ್ರವೃದ್ಧಮಾನನಾಗುವನೆಂದು ಇಲ್ಲಿ ವರ್ಣಿಸಿದೆ.

**ಪೂರ್ವೀಃ**—ಪುರುಶಬ್ದವು ಬಹುನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) **ಪೂರ್ವೀಃ** ಎಂದರೆ ಬಹಳವಾದ ಎಂದರ್ಥವು.

**ಯಶಸಃ**—ಯಶಃ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ (ನಿ. ೩-೯) ಈ ಶಬ್ದವೂ **ಪೂರ್ವೀಃ** ಎಂಬ ಶಬ್ದವೂ ಅಪಃ ಎಂಬ ಶಬ್ದಕ್ಕೆ ವಿಶೇಷಣ ಪದಗಳಾಗಿವೆ

**ಅಗ್ನಿಃ ಋತಸ್ಯ ಯೋನೌ ಸ್ವಸ್ರ್ಯಣಾಂ ಜಾಮೀನಾಂ ಅಪಸಿ ದಮೂನಾಃ ಅಶಯತ್—ಅಯಮಗ್ನಿಃ ಉದಕಸ್ಯ ಸ್ಥಾನೇಽನ್ತರಿಕ್ಷೇ ಸ್ಥಿತಃ ಸ್ವತಃ ಸರಂತೀನಾಂ ಭಗಿನೀಸ್ಥಾನೀಯಾನಾಂ ಹೇತುಭೂತೇ ಅಪಸಿ ದಾಂತಮನಾಃ ಸನ್ ಶೇತೇ ।** ಈ ಅಗ್ನಿಯು ಉದಕಕ್ಕೆ ಸ್ಥಾನಭೂತವಾದ ಅಂತರಿಕ್ಷದಲ್ಲಿ (ಮೇಘರೂಪದಿಂದ) ಸಂಚರಿಸುತ್ತಿರುವ ತನಗೆ ಸಹೋದರಿಯರಾದ ಉದಕಗಳಲ್ಲಿ ಯಾವವಿಧವಾದ ಚಲನವಲನಗಳೂ ಇಲ್ಲದೆ ಶಾಂತನಾಗಿ ಮಲಗಿದಾನೆ. ಎಂದರೆ ಹಿಂದೆ ನೀಲವರ್ಣದಿಂದಿರುವ ಮೇಘಗಳ ನಡುವೆ ವೃಷ್ಟಿಕಾಲದಲ್ಲಿ ಮಿಂಚಿನ ರೂಪದಿಂದ ಗೋಚರನಾಗುತ್ತಿರುವ ಅಗ್ನಿಯು ಈಗ ಎಂದರೆ ಮಳೆಯಿಲ್ಲದೆ ಇರುವ ಕಾಲದಲ್ಲಿ ಮೇಘಗಳ ನಡುವೆ ಉದಕಗಳಲ್ಲಿ ಯಾವ ವಿಧವಾದ ಪ್ರಕಾಶವನ್ನೂ ವ್ಯಕ್ತಪಡಿಸದೆ ಅಂತರ್ಗತನಾಗಿ ಯಾರಿಗೂ ಗೋಚರನಾಗದೆ ಸುಮ್ಮನೆ ಇರುವನು. ಮಳೆ ಇಲ್ಲದೆ ಮೇಘಗಳು ಮಾತ್ರ ಇರುವಾಗ ಮಿಂಚುಗಳು ಇರುವುದಿಲ್ಲ. ಆದರೂ ಎಂದರೆ ನಮಗೆ ಮಿಂಚಿನ ರೂಪದಲ್ಲಿ ಕಾಣಿಸದಿದ್ದರೂ ಅಗ್ನಿಯು ಮೇಘಗಳ ಉದಕದಲ್ಲಿ ಕಣ್ಮರೆಯಾಗಿ ಇರುವನೆಂದು ಅಭಿಪ್ರಾಯವು.

**ಋತಸ್ಯ**—ಋತಶಬ್ದವು ನೂರೊಂದು ಉದಕನಾಮಗಳಲ್ಲಿ ಪಠಿತವಾಗಿದೆ. ಮತ್ತು **ಋತಸ್ಯ ಯೋನಿಃ** ಎಂಬ ಎರಡು ಶಬ್ದಗಳೂ ಸೇರಿ ಉದಕವೆಂಬ ಅರ್ಥದಲ್ಲಿ ಮೇಲೆ ಹೇಳಿದ ೧೦೧ ಉದಕನಾಮಗಳ ಮಧ್ಯದಲ್ಲಿಯೇ ಪಠಿತವಾಗಿದೆ. (ನಿ. ೨-೨೪) ಋತುಶಬ್ದಕ್ಕೆ ಯಜ್ಞ ಮೊದಲಾದ ಅನೇಕಾರ್ಥಗಳಿದ್ದರೂ ಇಲ್ಲಿ ಉದಕವೆಂದೇ ಅರ್ಥವು. ಈ ಋಕ್ಕಿನಲ್ಲಿ **ಋತಸ್ಯ ಯೋನೌ** ಎಂದರೆ ಉದಕಗಳಿಗೆ (ಮೇಘಗಳು ಗುಂಪಾಗಿ ಸೇರುವ ಸ್ಥಳ) ಮೂಲಸ್ಥಾನವಾದ ಅಂತರಿಕ್ಷವೆಂದು ಅರ್ಥವು.

**ಸ್ವಸ್ರ್ಯಣಾಂ—ಸರಣಶೀಲಾನಾಂ ।** ಸ್ವಸೃಶಬ್ದಕ್ಕೂ ಜಾಮಿ ಭಗಿನೀ ಎಂಬರ್ಥವಿರುವುದರಿಂದ ಜಾಮಿಶಬ್ದಕ್ಕೆ ಭಗಿನೀ ಎಂಬರ್ಥವನ್ನು ಹೇಳಿ ಸ್ವಸೃಶಬ್ದಕ್ಕೆ ಸರಣಶೀಲವಾದ ಎಂದರೆ ಅಂತರಿಕ್ಷದಲ್ಲಿ ಗಾಳಿಯ ಹೊಡೆತದಿಂದ (ಮೇಘಗಳು) ಇತ್ತಲಿಂದತ್ತ ಚಲಿಸುವ ಸ್ವಭಾವವುಳ್ಳ ಎಂದರ್ಥ ಮಾಡಿ ಜಾಮೀನಾಂ ಎಂಬ ಪದಕ್ಕೆ ವಿಶೇಷಣವನ್ನಾಗಿ ಉಪಯೋಗಿಸಿದೆ.

**ಜಾಮೀನಾಂ**—ಜಾಮಿಶಬ್ದವು ಉದಕನಾಮಗಳಲ್ಲಿಯೂ ಪಠಿತವಾಗಿದೆ (ನಿ-೨-೨೪). ಆದರೆ ಇಲ್ಲಿ ಜಾಮೀನಾಂ ಎಂಬ ಶಬ್ದಕ್ಕೆ ಭಗಿನೀಸ್ಥಾನೀಯಾನಾಂ—ಸಹೋದರಿಯರಂತಿರುವ ಎಂದು ಅರ್ಥಮಾಡಿದಾರೆ. ಯಾಸ್ಕರು ತಮ್ಮ ನಿರುಕ್ತದಲ್ಲಿ—.

ನ ಜಾಮಯೋ ಭಗಿನ್ಯಃ । ಜಾಮಿರನ್ಯೇಽಸ್ಯಾಂ ಜನಯಂತಿ ಜಾಮುಪತ್ಯಂ ಜಮತೇರ್ವಾ ಸ್ಯಾದ್ಗತಿಕರ್ಮಣೋ ನಿರ್ಗಮನಪ್ರಾಯಾ ಭವತಿ ॥

(ನಿ. ३-೬)

ಎಂದರೆ ಜಾಮಿಶಬ್ದಕ್ಕೆ ಭಗಿನೀ (ಸಹೋದರಿ) ಎಂದರ್ಥವು. ಏಕೆಂದರೆ, ಈ ಸ್ತ್ರೀಯಲ್ಲಿ ಇತರರು (ಭರ್ತೃವು) ಪುತ್ರರನ್ನು ಉತ್ಪಾದನೆ ಮಾಡುವುದರಿಂದ ಜಾಮಿ ಎಂದು ಹೆಸರು. ಅಥವಾ ಜಾಮಿಶಬ್ದವು ಗಮನಾರ್ಥವುಳ್ಳ ಜಮತಿ ಧಾತುವಿನಿಂದ ನಿಷ್ಪನ್ನವಾಗಿರುವ ಕಾರಣ ಈ ಸ್ತ್ರೀಯು ತಾನು ವಿವಾಹಾನಂತರ ತಾನು ಹುಟ್ಟಿದ ಮನೆಯನ್ನು ಬಿಟ್ಟು ಭರ್ತೃವಿನ ಮನೆಗೆ ಹೋಗುವವಳಾದ್ದರಿಂದ ಸಹೋದರಿಗೆ ಜಾಮಿಯೆಂದು ಹೆಸರು ಎಂದು ನಿರ್ವಚನವನ್ನು ಹೇಳಿರುವರು. ಈ ಋಕ್ಕಿನಲ್ಲಿ ಭಗಿನೀ ಅಥವಾ ಉದಕವೆಂಬ ಯಾವ ಅರ್ಥವನ್ನಾರೂ ಹೇಳಬಹುದು. ಅಗ್ನಿಗೆ ಉದಕಗಳು ಹೇಗೆ ಭಗಿನಿಯರಾದವು ಎಂದರೆ ಅಗ್ನಿಗೂ ಉದಕಗಳಿಗೂ ಉತ್ಪತ್ತಿಸ್ಥಾನವು ಅಂತರಿಕ್ಷವಾಗಿರುವುದರಿಂದ ಅಗ್ನಿಗೆ ಉದಕಗಳು ಅಥವಾ ನದಿಗಳು ಭಗಿನಿಯರೆಂದು ಇಲ್ಲಿ ವರ್ಣಿಸಿದೆ.

ಸಂಹಿತಾಪಾಠಃ

ಅಕ್ರೋ ನ ಬಭ್ರಿಃ ಸಮಿಥೇ ಮಹೀನಾಂ ದಿದೃಕ್ಷೇಯಃ ಸೂನವೇ ಭಾಋಜೀಕಃ ।
ಉದುಸ್ರಿಯಾ ಜನಿತಾ ಯೋ ಜಜಾನಾಪಾಂ ಗರ್ಭೋ ನೃತಮೋ ಯಹ್ವೋ ಅಗ್ನಿಃ ॥

ಪದಪಾಠಃ

ಅಕ್ರಃ । ನ । ಬಭ್ರಿಃ । ಸಂಽಇಥೇ । ಮಹೀನಾಂ । ದಿದೃಕ್ಷೇಯಃ । ಸೂನವೇ । ಭಾಃಽಋಜೀಕಃ ।
ಉತ್ । ಉಸ್ರಿಯಾಃ । ಜನಿತಾ । ಯಃ । ಜಜಾನ । ಅಪಾಂ । ಗರ್ಭಃ । ನೃಽತಮಃ । ಯಹ್ವಃ । ಅಗ್ನಿಃ ॥

॥ ಸಾಯಣಭಾಷ್ಯಂ ॥

ಜನಿತಾ ಸರ್ವಸ್ಯ ಲೋಕಸ್ಯ ಜನಯಿತಾ ಅಪಾಮುದಕಾನಾಂ ಗರ್ಭೋ ಗರ್ಭರೂಪೋ ನೃತಮೋ ನೇತೃತಮೋಽತಿಶಯೇನ ಮನುಷ್ಯಾಣಾಂ ರಕ್ಷಿತಾ ಯಹ್ವೋ ಮಹಾನ್ ಯೋಽಗ್ನಿರಕ್ರಃ ಪರೇಷಾಮಾಕ್ರಮಿತಾ ಪರೈರನಾಕ್ರಮಣೀಯೋ ವಾ ॥ ನೇತಿ ಪಾದಪೂರಣಃ ॥ ಸಮಿಥೇ ಸಂಗ್ರಾಮೇ ಮಹೀನಾಂ ಮಹತೀನಾಂ ಸ್ವಸೇನಾನಾಂ ಬಭ್ರಿರ್ಭರ್ತಾ ದಿದೃಕ್ಷೇಯಃ ಸರ್ವೈರ್ದರ್ಶನೀಯೋ ಭಾಋಜೀಕಃ ಸ್ವದೀಪ್ತ್ಯಾ ಪ್ರಕಾಶಮಾನಃ ಸೋಽಗ್ನಿಃ ಸೂನವೇ ಹವಿಷಾಂ ಪ್ರದಾತ್ರೇ ಯಜಮಾನಾಯ ತದರ್ಥಮುಸ್ರಿಯಾ ಅಪ ಉಜ್ಜಜಾನ । ಉದಜನಯತ್ ॥ ಸೂನವೇ । ಷೂ ಪ್ರೇರಣ ಇತ್ಯಸ್ಮಾದ್ಧಾತೋರೌಣಾದಿಕೋ ನುಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ಜನಿತಾ**—ಸಕಲ ಲೋಕಕ್ಕೂ ಜನಕನೂ | **ಅಪಾಂ**—ಉದಕಗಳಿಗೆ | **ಗರ್ಭಃ**—ಗರ್ಭರೂಪನೂ | **ನೃತಮಃ**—ನೇತೃಗಳಲ್ಲಿ ಶ್ರೇಷ್ಠನೂ | **ಯಹ್ವಃ**—ಮಹಾತ್ಮನೂ ಆದ | **ಯಃ ಅಗ್ನಿಃ**—ಯಾವ ಅಗ್ನಿಯು | **ಅಕ್ರಃ**—ಅಪ್ರತಿಹತನಾಗಿಯೂ | **ಸಮಿಥೇ**—ಸಂಗ್ರಾಮದಲ್ಲಿ | **ಮಹೀನಾಂ**—ಮಹತ್ತಾದ ತನ್ನ ಸೇನೆಗಳನ್ನು | **ಬಭ್ರಿಃ**—ಭರಿಸುವವನಾಗಿಯೂ | **ದಿದೃಕ್ಷೇಯಃ**—ಎಲ್ಲರಿಂದಲೂ ನೋಡಲ್ಪಡುವವನಾಗಿಯೂ | **ಭಾಋಜೀಕಃ**—ತನ್ನ ತೇಜಸ್ಸಿನಿಂದ ಪ್ರಕಾಶಮಾನನಾಗಿಯೂ ಇರುವನೋ | **ಸಃ**—(ಆ ಅಗ್ನಿಯು) | **ಸೂನವೇ**—ಹವಿಸ್ಸನ್ನರ್ಪಿಸುವ ಯಜಮಾನನಿಗಾಗಿ | **ಉಸ್ರಿಯಾಃ**—ಉದಕಗಳನ್ನು | **ಉಜ್ಜಜಾನ**—ಸೃಷ್ಟಿಸಿದನು.

॥ ಭಾವಾರ್ಥ ॥

ಸಕಲ ಲೋಕಕ್ಕೂ ಜನಕನೂ, ಉದಕಗಳಿಗೆ ಗರ್ಭರೂಪನೂ, ನೇತೃಗಳಲ್ಲಿ ಶ್ರೇಷ್ಠನೂ, ಮಹಾತ್ಮನೂ ಆದ ಯಾವ ಅಗ್ನಿಯು ಅಪ್ರತಿಹತನಾಗಿಯೂ, ಸಂಗ್ರಾಮದಲ್ಲಿ ಮಹತ್ತಾದ ತನ್ನ ಸೇನೆಗಳನ್ನು ಭರಿಸುವವನಾಗಿಯೂ, ಎಲ್ಲರಿಂದಲೂ ನೋಡಲ್ಪಡುವವನಾಗಿಯೂ, ತನ್ನ ತೇಜಸ್ಸಿನಿಂದಲೇ ಪ್ರಕಾಶಮಾನನಾಗಿಯೂ ಇರುವನೋ ಆ ಅಗ್ನಿಯು ಹವಿಸ್ಸನ್ನರ್ಪಿಸುವ ಯಜಮಾನನಿಗಾಗಿ ಉದಕಗಳನ್ನು ಸೃಷ್ಟಿಸಿದನು.

## English Translation.

The invincible Agni, the cherishcr of the valiant in battle, the seen of all, shining of his own lustre, the generator (of the world), the embryo of the waters, the chief of leaders, the mighty, is he who has begotten the waters for (the benefit of) the offerer of the libation.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಗ್ನಿಯನ್ನು ಕೆಲವು ವಿಶೇಷಣಶಬ್ದಗಳಿಂದ ವರ್ಣಿಸಿ ಇಂತಹ ಅಗ್ನಿಯು ಹವಿಸ್ಸನ್ನರ್ಪಿಸುವ ಯಜಮಾನನಿಗಾಗಿ ಉದಕಗಳನ್ನು ಸೃಷ್ಟಿಮಾಡಿದನೆಂದು ಹೇಳಿದೆ. ಅಗ್ನಿಯು ಉದಕಗಳನ್ನು ಸೃಷ್ಟಿಮಾಡಿದನು ಎಂದರೆ ವಿದ್ಯುದ್ರೂಪದಲ್ಲಿರುವ ಅಗ್ನಿಯು ಅಂತರಿಕ್ಷದಲ್ಲಿರುವ ಮೇಘಗಳ ಸಮೂಹದಲ್ಲಿದ್ದು ಆ ಮೇಘಗಳನ್ನು ಪ್ರೇರಿಸಿ ಯಜ್ಞಮಾಡುವ ಯಜಮಾನನಿಗಾಗಿ ವೃಷ್ಟಿಯು ಸುರಿಸುವಂತೆ ಮಾಡುತ್ತಾನೆಂದಭಿಪ್ರಾಯವು.

**ಅಕ್ರಃ—ಪರೇಷಾಮಾಕ್ರಮಿತಾ ಪರೈರನಾಕ್ರಮಣೀಯೋ ವಾ** | ಇತರರನ್ನು ಆಕ್ರಮಿಸುವವನು ಅಥವಾ ಯಾರಿಂದಲೂ ಆಕ್ರಮಿಸಲ್ಪಡದಿರುವವನು ಎಂದು ಎರಡುವಿಧವಾದ ಅರ್ಥವನ್ನು ಹೇಳಿರುವರು. ಅಗ್ನಿಯು ಎಲ್ಲವನ್ನೂ ಆಕ್ರಮಿಸಿ ದಹಿಸುವುದು. ಆದರೆ ಅಗ್ನಿಯನ್ನು ಇತರ ಯಾವ ವಸ್ತುವೂ ಹಿಂಸಿಸಲಾರದು ಎಂದಭಿಪ್ರಾಯವು ಇಲ್ಲಿ ಉಕ್ತವಾಗಿದೆ.

**ಸಮಿಥೇ ಮಹೀನಾಂ ಬಭ್ರಿಃ**—ಸಂಗ್ರಾಮೇ ಮಹತೀನಾಂ ಸ್ವಸೇನಾನಾಂ ಭರ್ತಾ । **ಸಮಿಥ್** ಶಬ್ದವು ಸಂಗ್ರಾಮನಾಮಗಳಲ್ಲಿ ಪಠಿತವಾಗಿದೆ. ಯುದ್ಧಗಳಲ್ಲಿ ಇಂದ್ರನಂತೆ ಅಗ್ನಿಯ ಪಾತ್ರವು ವಿಶೇಷವಾಗಿಲ್ಲದಿರುವುದರಿಂದ ತನ್ನ ಸೇನೆಗಳಿಗೆ ನಾಯಕನು, ಮುಖಂಡನು ಎಂದು ಹೇಳುವುದರ ಅರ್ಥವು ಸ್ಪಷ್ಟವಾಗಿಲ್ಲ. ಇದಲ್ಲದೆ ಅಗ್ನಿಗೆ ಅವನ ಜ್ವಾಲೆಗಳೇ ಸೇನೆಗಳೆಂದು ಹೇಳಲ್ಪಡುವವು.

**ಭಾಋಜೀಕಃ**—ಯಾಸ್ಕರು ಈ ಶಬ್ದಕ್ಕೆ **ಭಾಋಜೀಕಃ ಪ್ರಸಿದ್ಧಭಾಃ । ಧೂಮಕೇತುಃ ಸಮಿಧಾ ಭಾಋಜೀಕಃ ಇತ್ಯಪಿ ನಿಗಮೋ ಭವತಿ** (ನಿ. ೬-೪) ಎಂದು ನಿರ್ವಚನವನ್ನು ಹೇಳಿದಾರೆ. ಪ್ರಸಿದ್ಧವಾದ ಪ್ರಕಾಶವು ಎಂದು ಈ ಶಬ್ದದ ಅರ್ಥವು. ಎಂದರೆ ಇತರ ಪ್ರಕಾಶಗಳ ಸಹಾಯವಿಲ್ಲದೆ ತನ್ನ ಸ್ವಂತ ಪ್ರಕಾಶದಿಂದಲೇ ಎಂದರೆ ತೇಜಸ್ಸಿನಿಂದಲೇ ತಾನೂ ಬೆಳಗುತ್ತ ಇತರ ವಸ್ತುಗಳನ್ನು ಪ್ರಕಾಶಗೊಳಿಸುವನು ಎಂದಭಿಪ್ರಾಯವು.



॥ ಸಂಹಿತಾಪಾಠಃ ॥

ಅಪಾಂ ಗರ್ಭಂ ದರ್ಶತಮೋಷಧೀನಾಂ ವನಾ ಜಜಾನ ಸುಭಗಾ ವಿರೂಪಂ ।
ದೇವಾಸಶ್ಚಿನ್ಮನಸಾ ಸಂ ಹಿ ಜಗ್ಮುಃ ಪನಿಷ್ಠಂ ಜಾತಂ ತವಸಂ ದುವಸ್ಯನ್ ॥ ೧೩

॥ ಪದಪಾಠಃ ॥

ಅಪಾಂ । ಗರ್ಭಂ । ದರ್ಶತಂ । ಓಷಧೀನಾಂ । ವನಾ । ಜಜಾನ । ಸುऽಭಗಾ । ವಿऽರೂಪಂ ।
ದೇವಾಸಃ । ಚಿತ್ । ಮನಸಾ । ಸಂ । ಹಿ । ಜಗ್ಮುಃ । ಪನಿಷ್ಠಂ । ಜಾತಂ । ತವಸಂ । ದುವಸ್ಯನ್ ॥ ೧೩ ॥

॥ ಸಾಯಣಭಾಷ್ಯಂ ॥

**ಸುಭಗಾ ಸುಭಾಗ್ಯಾ ವನಾ ಸರ್ವೈರ್ವನನೀಯರಾರಣಿರ್ದರ್ಶತಂ ದರ್ಶನೀಯಂ ವಿರೂಪಂ ನಾನಾವಿಧರೂಪಮಪಾಮೋಷಧೀನಾಂ ಚ ಗರ್ಭಮಗ್ನಿಂ ಜಜಾನ । ಅಜನಯತ್ । ದೇವಾಸಶ್ಚಿತ್ ಸರ್ವೇ ದೇವಾ ಅಪಿ ಪನಿಷ್ಠಂ ಸ್ತುತ್ಯಂ ತವಸಂ ವೃದ್ಧಂ ಜಾತಂ ಜಾತಮಾತ್ರಂ ತಮಗ್ನಿಂ ಮನಸಾ ಸ್ತುತ್ಯಾ ಸಂಜಗ್ಮುಃ । ಉಪಾಗಚ್ಛನ್ । ಹೀತಿ ಪೂರಣಃ । ತ ಏವ ದುವಸ್ಯನ್ । ಪರ್ಯಚರನ್ ॥**

॥ ಪ್ರತಿಪದಾರ್ಥ ॥

**ಸುಭಗಾ**—ಸೌಭಾಗ್ಯದಿಂದ ಕೂಡಿದುದೂ । **ವನಾ**—ಎಲ್ಲರಿಂದಲೂ ಅಪೇಕ್ಷಿತವಾದುದೂ ಆದ ಕಾಷ್ಠವು (ಅರಣಿಯು) । **ದರ್ಶತಂ**—ದರ್ಶನೀಯನೂ । **ವಿರೂಪಂ**—ನಾನಾವಿಧವಾದ ರೂಪವುಳ್ಳವನೂ । **ಅಪಾಂ**—ಉದಕಗಳಿಗೂ । **ಓಷಧೀನಾಂ**—ಓಷಧಿಗಳಿಗೂ । ಗರ್ಭಂ—ಗರ್ಭರೂಪನೂ ಆದ ಅಗ್ನಿಯನ್ನು । **ಜಜಾನ**—

ಸೃಷ್ಟಿಸಿತು | **ದೇವಾಸಶ್ಚಿತ್**—ದೇವತೆಗಳೂ ಸಹ | **ಪನಿಷ್ಠಂ**—ಸ್ತುತ್ಯನೂ | **ತವಸಂ**—ಬಲದಿಂದ ವೃದ್ಧನಾದವನೂ ಆದ ಅಗ್ನಿಯನ್ನು | **ಜಾತಂ**—ಉತ್ಪನ್ನನಾದೊಡನೆಯೇ | **ಮನಸಾ**—ಸ್ತುತಿಪೂರ್ವಕವಾಗಿ | **ಸಂ ಜಗ್ಮುಃ**—ಸಮಿಾಪಿಸಿದರು | (ಮತ್ತು) **ದುವಸ್ಯನ್**—ಪೂಜಿಸಿದರು.

॥ ಭಾವಾರ್ಥ ॥

ಸೌಭಾಗ್ಯದಿಂದ ಕೂಡಿದುದೂ, ಎಲ್ಲರಿಂದಲೂ ಅಪೇಕ್ಷಿತವಾದುದೂ ಆದ ಕಾಷ್ಠವು (ಅರಣಿಯು) ದರ್ಶನೀಯನೂ, ನಾನಾವಿಧವಾದ ರೂಪವುಳ್ಳವನೂ, ಉದಕಗಳಿಗೂ, ಓಷಧಿಗಳಿಗೂ, ಗರ್ಭರೂಪನೂ ಆದ ಅಗ್ನಿಯನ್ನು ಸೃಷ್ಟಿಸಿತು. ದೇವತೆಗಳೂ ಸಹ ಸ್ತುತ್ಯನೂ, ಬಲದಿಂದ ಪ್ರವೃದ್ಧನಾದವನೂ ಆದ ಅಗ್ನಿಯನ್ನು ಉತ್ಪನ್ನನಾದೊಡನೆಯೇ ಸ್ತುತಿಪೂರ್ವಕವಾಗಿ ಸಮಿಾಪಿಸಿದರು. ಮತ್ತು ಪೂಜಿಸಿದರು.

## English Translation.

The auspicious timber has generated the graceful and multiform embryo of the waters and the plants: the gods approached him with reverence, and worshipped the adorable and mighty (Agni) as soon as born.

॥ ವಿಶೇಷವಿಷಯಗಳು ॥

**ಸುಭಗಾ ವನಾ ದರ್ಶತಂ ವಿರೂಪಂ ಅಪಾಂ ಓಷಧೀನಾಂ ಗರ್ಭಂ ಜಜಾನ—ಸುಭಾಗ್ಯಾ ಸರ್ವೈರ್ವನನೀಯಾರಣಿಃ ದರ್ಶನೀಯಂ ನಾನಾವಿಧರೂಪಂ ಅಪಾಂ ಓಷಧೀನಾಂ ಚ ಗರ್ಭಸ್ಥಿತಮಗ್ನಿಂ ಜಜಾನ** | ಈ ವಾಕ್ಯದಲ್ಲಿ ಅರಣಿಯು ಅಗ್ನಿಯನ್ನು ಉತ್ಪತ್ತಿಮಾಡಿತೆಂದು ಹೇಳಿದೆ. ಸರ್ವರಿಂದಲೂ ಪೂಜಾರ್ಹವೂ, ಅಪೇಕ್ಷಿತವಾದುದೂ ಆದ ವನಸ್ಪತಿಯು ಅಥವಾ ಕಾಷ್ಠವು (ಅರಣಿಯು) ನಾನಾವಿಧರೂಪವುಳ್ಳ ಎಂದರೆ ಯಜ್ಞದಲ್ಲಿ ಆಹವನೀಯಾದಿ ನಾನಾರೂಪಗಳುಳ್ಳ ಅಥವಾ ಅನೇಕ ಗೃಹಗಳಲ್ಲಿ ಅನೇಕ ರೂಪದಿಂದಿರುವ, ನೀರಿನಲ್ಲಿಯೂ ಮತ್ತು ಓಷಧಿವನಸ್ಪತಿಗಳ ಎಂದರೆ ಕಾಷ್ಠಗಳಲ್ಲಿಯೂ ಗರ್ಭರೂಪದಿಂದಿರುವ (ಅಂತರ್ಹಿತನಾಗಿರುವ) ಅಗ್ನಿಯನ್ನು ಉತ್ಪತ್ತಿ ಮಾಡಿತು ಎಂದಭಿಪ್ರಾಯವು. ಇಲ್ಲಿ ವನವೆಂಬ ಶಬ್ದಕ್ಕೆವನದಲ್ಲಿರುವ ವೃಕ್ಷವೆಂದು ಅರ್ಥಮಾಡಿದರೆ ಕಾಡಿನಲ್ಲಿ ವೃಕ್ಷಗಳು ಒಂದಕ್ಕೊಂದು ಘರ್ಷಣೆಯಾಗಿ ಅದರಿಂದ ಉತ್ಪತ್ತಿಯಾಗುವ ಅಗ್ನಿಯು ದಾವಾನಲ (ಕಾಡುಕಿಚ್ಚು) ಎಂದು ಹೇಳಲ್ಪಡುವುದು. ಅಥವಾ ವನಾ ಎಂಬ ಶಬ್ದಕ್ಕೆ ವನಸ್ಪತಿಯು ಎಂದರೆ ಮರದ ತುಂಡಿನ ರೂಪದಲ್ಲಿರುವ ಅರಣಿ ಎಂದರ್ಥ ಮಾಡಿದರೆ ಆಗ ಅರಣಿಯಲ್ಲಿ ಋತ್ವಿಗ್ಜನರು ಮಂತ್ರಪೂರ್ವಕವಾಗಿಯೂ ವಿಧಿಪೂರ್ವಕವಾಗಿಯೂ ಕಡೆದು ಉತ್ಪತ್ತಿ ಮಾಡುವ ಅಗ್ನಿಯು ಯಜ್ಞಾಗ್ನಿಯೆಂದು ಹೇಳಲ್ಪಡುವುದು ಈ ಋಕ್ಕಿನ ಉತ್ತರಾರ್ಧದಲ್ಲಿ ಜಾತಮಾತ್ರನಾದ ಎಂದರೆ ಉತ್ಪತ್ತಿಯಾದ ಕೂಡಲೆ ಅಗ್ನಿಯನ್ನು ಸ್ತೋತ್ರಾದಿಗಳಿಂದ ಸಮಿಾಪಿಸಿದರು ಎಂದು ಹೇಳಿರುವುದರಿಂದ ಇಲ್ಲಿ ಪ್ರಸಕ್ತವಾದ ಅಗ್ನಿಯು ಅರಣಿಗಳನ್ನು ಮಥನಮಾಡುವುದರಿಂದ ಉತ್ಪನ್ನವಾದ ಯಜ್ಞಾಗ್ನಿಯೇ ಆಗಿರುವುದೆಂದು ತಿಳಿಯಬೇಕು.

**ದೇವಾಸಃ ಚಿತ್ ಪನಿಷ್ಠಂ ತವಸಂ ಜಾತಂ ಮನಸಾ ಸಂಜಗ್ಮುಃ ದುವಸ್ಯನ್—ಸರ್ವೇ ದೇವಾ ಅಪಿ ಸ್ತುತ್ಯಂ ವೃದ್ಧಂ ಜಾತಮಾತ್ರಮಗ್ನಿಂ ಸ್ತುತ್ಯಾ ಉಪಾಗಚ್ಛನ್ ಪರ್ಯಚರನ್** | ಸರ್ವರಿಂದಲೂ

ಸ್ತುತ್ಯನೂ, ಬಲಪ್ರಯೋಗಮಾಡಿ ಮಥನಮಾಡುವುದರಿಂದ ಉತ್ಪನ್ನನಾದವನೂ ಆದ ಅಗ್ನಿಯನ್ನು ದೇವತೆಗಳು ಕೂಡ ಸಮೀಪಿಸಿ ಶುಶ್ರೂಷೆಮಾಡಿದರು ಎಂದು ಮುಖ್ಯಾಭಿಪ್ರಾಯವು.

**ಚಿತ್**—ಯಾಸ್ಕರು ಚಿತ್ ಎಂಬ ಶಬ್ದಕ್ಕೆ **ಚಿದಿತ್ಯೇಷೋಽನೇಕಕರ್ಮಾ** ಎಂದರೆ ಚಿತ್ ಶಬ್ದವು ಅನೇಕ ವಿಧವಾದ ಅರ್ಥಗಳಲ್ಲಿ ಉಪಯೋಗಿಸಲ್ಪಡುವುದೆಂದು ಹೇಳಿದಾರೆ. (ನಿ. ೧-೪) ಎಂದರೆ ಪೂಜಾರ್ಥದಲ್ಲಿಯೂ, ಉಪಮಾರ್ಥದಲ್ಲಿಯೂ, ನಿಂದಾರ್ಥದಲ್ಲಿಯೂ ಈ ಶಬ್ದದ ಪ್ರಯೋಗವಿರುವುದು ಎಂದು ಹೇಳಿ ಉದಾಹರಣೆಗಳನ್ನು ಕೊಟ್ಟಿದಾರೆ.

**ಪನಿಷ್ಠಂ—ಸ್ತುತ್ಯಂ । ಪನಸ್ಯತಿ ಪನಾಯತೇ** ಇತ್ಯಾದಿ ಶಬ್ದಗಳು ಅರ್ಚತಿ ಕರ್ಮಗಳಲ್ಲಿ (ನಿ. ೩-೧೯) ಪಠಿತವಾಗಿರುವುದರಿಂದ ಆ ಧಾತುವಿನಿಂದ ನಿಷ್ಪನ್ನವಾದ ಪನಿಷ್ಠಂ ಎಂಬ ಶಬ್ದಕ್ಕೆ ಪೂಜಾರ್ಹನಾದ, ಸ್ತುತ್ಯರ್ಹನಾದ ಎಂದರ್ಥವು.

**ತವಸಂ—ತವಃ** ಎಂಬ ಶಬ್ದವು ಬಲನಾಮಗಳಲ್ಲಿ ಪಠಿತವಾಗಿದೆ (ನಿ. ೩-೯). ಅಗ್ನಿಯನ್ನು ಅರಣಿಗಳಲ್ಲಿ ಮಥನಮಾಡುವಾಗ ಬಹಳ ಬಲವನ್ನು ಉಪಯೋಗಿಸಬೇಕಾಗುವುದು. ಆದುದರಿಂದ ಬಲಪ್ರಯೋಗದಿಂದ ಉತ್ಪನ್ನನಾಗುವ ಅಗ್ನಿಯನ್ನು ತವಸಂ ಎಂಬ ಶಬ್ದದಿಂದ ಸೂಚಿಸಲಾಗಿದೆ.

**ದುವಸ್ಯನ್**—ದುವಸ್ಯತಿ ಶಬ್ದವು ಪರಿಚರಣಕರ್ಮಗಳಲ್ಲಿ (ನಿ. ೩-೧೩) ಪಠಿತವಾಗಿರುವುದರಿಂದ ದುವಸ್ಯನ್ ಎಂದರೆ ಪರಿಚರಿಸಿದರು, ಶುಶ್ರೂಷೆಮಾಡಿದರು, ಸೇವಿಸಿದರು ಎಂದರ್ಥವು.

॥ ಸಂಹಿತಾಪಾಠಃ ॥

ಬೃಹಂತ ಇದ್ಭಾನವೋ ಭಾಋಜೀಕಮಗ್ನಿಂ ಸಚಂತ ವಿದ್ಯುತೋ ನ ಶುಕ್ರಾಃ

ಗುಹೇವ ವೃದ್ಧಂ ಸದಸಿ ಸ್ವೇ ಅಂತರಪಾರ ಊರ್ವೇ ಅಮೃತಂ ದುಹಾನಾಃ ॥

॥ ಪದಪಾಠಃ ॥

ಬೃಹಂತಃ । ಇತ್ । ಭಾನವಃ । ಭಾಽಋಜೀಕಂ । ಅಗ್ನಿಂ । ಸಚಂತ । ವಿಽದ್ಯುತಃ । ನ । ಶುಕ್ರಾಃ ।

ಗುಹಾಽಇವ । ವೃದ್ಧಂ । ಸದಸಿ । ಸ್ವೇ । ಅಂತಃ । ಅಪಾರೇ । ಊರ್ವೇ । ಅಮೃತಂ । ದುಹಾನಾಃ ೧೪

॥ ಸಾಯಣಭಾಷ್ಯಂ ॥

**ಅಪಾರೇಽಗಾಧ ಊರ್ವೇ ಸಮುದ್ರೇಽಂತರ್ಮಧ್ಯೇಽಮೃತಮುದಕಂ ದುಹಾನಾಃ ಕ್ಷರಂತೋ ಬೃಹಂತ ಇದ್ಭಾನವೋ ಮಹಾಂತಃ ಸೂರ್ಯಾ ಏವ ಶುಕ್ರಾ ದೀಪ್ಯಮಾನಾ ವಿದ್ಯುತೋ ನ ವಿದ್ಯುತ ಇವ**

**ಸ್ವೇ ಸ್ವಕೀಯೇ ಸದಸಿ ಸದನೇಽಂತರಿಕ್ಷೇ ಗುಹೇವ ಗುಹಾಯಾಮಿವ ವೃದ್ಧಂ ಪ್ರವೃದ್ಧಂ ಭಾಋಜೀಕಂ ಪ್ರಭಯಾ ದೀಪ್ಯಮಾನಮಗ್ನಿಂ ಸಚಂತೆ || ಆಶ್ರಯಂತಿ ||**

|| ಪ್ರತಿಪದಾರ್ಥ ||

**ಅಪಾರೇ**—ಅಗಾಧವಾದುದೂ | **ಊರ್ವೇ ಅಂತಃ**—ಅತಿ ವಿಸ್ತೃತವಾದುದೂ ಆದ ಸಮುದ್ರಮಧ್ಯದಲ್ಲಿ| **ಅಮೃತಂ**—ಉದಕವನ್ನು | **ದುಹಾನಾಃ**—ಕರೆಯತಕ್ಕವರೂ | **ಬೃಹಂತಃ**—ಮಹತ್ತಾದ ರೂಪವುಳ್ಳವರೂ ಆದ | **ಭಾನವ ಇತ್**—ಸೂರ್ಯರೇನೇ | **ಶುಕ್ರಾಃ**—ಪ್ರಭಾಯುತವಾದ | **ವಿದ್ಯುತೋ ನ**—ವಿದ್ಯುತ್ತುಗಳಂತೆ| **ಸ್ವೇ ಸ್ವದಸಿ**—ತನ್ನ ನಿವಾಸವಾದ ಅಂತರಿಕ್ಷದಲ್ಲಿ | **ಗುಹೇವ**—ಗುಹೆಯಲ್ಲಿ | **ವೃದ್ಧಂ**—ಪ್ರವೃದ್ಧನಾದವನೂ | **ಭಾಋಜೀಕಂ**—ಪ್ರಭೆಯಿಂದ ಪ್ರಕಾಶಮಾನನಾದವನೂ ಆದ | **ಅಗ್ನಿಂ**—ಅಗ್ನಿಯನ್ನು | **ಸಚಂತೆ**—ಆಶ್ರಯಿಸುತ್ತಾರೆ.

|| ಭಾವಾರ್ಥ ||

ಅಗಾಧವಾದುದೂ, ಅತಿ ವಿಸ್ತೃತವಾದುದೂ ಆದ ಅಂತರಿಕ್ಷದ ಮಧ್ಯದಲ್ಲಿ ಉದಕವನ್ನು ಕರೆಯತಕ್ಕವರೂ, ಮಹತ್ತಾದ ರೂಪವುಳ್ಳವರೂ ಆದ ಸೂರ್ಯರೇ, ಪ್ರಭಾವಯುತವಾದ ವಿದ್ಯುತ್ತುಗಳಂತೆ, ತನ್ನ ನಿವಾಸವಾದ ಅಂತರಿಕ್ಷದಲ್ಲಿ ಗುಹೆಯಲ್ಲಿ ಪ್ರವೃದ್ಧನಾದನೂ, ಪ್ರಭೆಯಿಂದ ಪ್ರಕಾಶಮಾನನಾದವನೂ ಆದ ಅಗ್ನಿಯನ್ನು ಆಶ್ರಯಿಸುತ್ತಾರೆ.

## English Translation.

Mighty suns like brilliant lightnings, associate with the self-shining Agni, great in his own abode, as if in a (deep cavern, as they milk forth ambrosia into the boundless and vast ocean.

|| ವಿಶೇಷ ವಿಷಯಗಳು ||

**ಅಪಾರೇ ಊರ್ವೇ ಅಂತಃ ಅಮೃತಂ ದುಹಾನಾಃ ಬೃಹಂತಃ ಭಾನವ ಇತ್**—ಅಗಾಧವಾದ ಸಮುದ್ರಮಧ್ಯದಲ್ಲಿ ಉದಕವನ್ನು ವೃಷ್ಟಿರೂಪದಲ್ಲಿ ಸುರಿಸುವ. ಮಹತ್ತಾದ ರೂಪವುಳ್ಳ ಸೂರ್ಯರು ಎಂದು ಇಲ್ಲಿ ವಿವರಿಸಿದೆ. ಇಲ್ಲಿ ಊರ್ವಶಬ್ದಕ್ಕೆ ಸಮುದ್ರ ಅಥವಾ ಸಮುದ್ರದಲ್ಲಿ ಇರುವ ಬಾಡಬಾನಲ ಎಂದರ್ಥವು. ಅಮೃತ ಶಬ್ದಕ್ಕೆ ಉದಕವೆಂದರ್ಥವು (ನಿ. ೨-೨೪). ಮತ್ತು ಈ ವಾಕ್ಯದಲ್ಲಿ ಭಾನವಃ ಎಂದು ಬಹುವಚನಪ್ರಯೋಗವನ್ನು ಋಷಿಯು ಏತಕ್ಕೆ ಮಾಡಿರುವನೆಂದು ಸ್ಪಷ್ಟವಾಗಿ ತಿಳಿಯುವಹಾಗಿಲ್ಲ. ದ್ವಾದಶಾದಿತ್ಯರು ಇಲ್ಲಿ ಭಾನವಃ ಎಂಬ ಶಬ್ದದಿಂದ ಬೋಧ್ಯರಾಗಿರುವರೇ ಅಥವಾ ಪ್ರತಿದಿನವೂ ಉದಯಿಸುವ ಸೂರ್ಯನು ಬೇರೆಬೇರೆ ಎಂಬ ಭಾವನೆಯಿಂದ ಅನೇಕ ದಿವಸಗಳಲ್ಲಿ ಉದಯಿಸುವ ಅನೇಕ ಸೂರ್ಯರು ಎಂದು ಹೇಳಿರುವುದೇ ಎಂಬ ವಿಷಯದಲ್ಲಿ ಋಷಿಯ ಆಶಯವು ಸ್ಪಷ್ಟವಾಗಿಲ್ಲ. ಬಹುಶಃ ಉಪಮಾನಾರ್ಥವಾಗಿ ಅಗ್ನಿಯ ಅಗಾಧವಾದ ಪ್ರಕಾಶವನ್ನು ವರ್ಣಿಸಿ ಹೇಳುವುದಕ್ಕಾಗಿ ಅನೇಕ ಸೂರ್ಯರೆಂದು ದೃಷ್ಟಾಂತವನ್ನು ಹೇಳಿರಬಹುದು. ಇದಲ್ಲದೆ ಈ ವಾಕ್ಯದಲ್ಲಿ **ಅಮೃತಂ ದುಹಾನಾಃ** ಉದಕವನ್ನು ಸುರಿಸುವವರು ಎಂದು ಸೂರ್ಯರಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. ಸೂರ್ಯನು ನೇರವಾಗಿ ವೃಷ್ಟಿಯನ್ನು ಸುರಿಸದಿದ್ದರೂ ತನ್ನ ಕಿರಣಗಳಿಂದ ಸಮುದ್ರ ಮೊದಲಾದ ಜಲಾಶಯಗಳ ಉದಕಗಳನ್ನು ಹೀರಿ ಅದು ಮೇಘ

ರೂಪದಲ್ಲಿ ಪರಿವರ್ತನೆಯಾಗುವಂತೆ ಮಾಡುವುದರಿಂದ ಸೂರ್ಯನು ಪರೋಕ್ಷವಾಗಿ ವೃಷ್ಟಿಗೆ ಕಾರಣನು ಎಂದು ಹೇಳಬಹುದು.

**ಶುಕ್ರಾಃ ವಿದ್ಯುತೋ ನ ಸ್ವೇ ಸದಸಿ ಗುಹೇವ ವೃದ್ಧಂ ಭಾಋಜೀಕಂ ಅಗ್ನಿಂ ಸಚಂತೆ**—ಇಲ್ಲಿ **ಸ್ವೇ ಸದಸಿ ಗುಹೇವ ವೃದ್ಧಂ ಭಾಋಜೀಕಂ** ಎಂಬ ವಾಕ್ಯಕ್ಕೆ ತನ್ನ ನಿವಾಸಸ್ಥಾನವಾದ ಅಂತರಿಕ್ಷದಲ್ಲಿದ್ದರೂ ಯಾರಿಗೂ ಗೋಚರವಾಗದಂತೆ ಮೇಘಗಳ ಮಧ್ಯದಲ್ಲಿ (ಗುಹೆಯಲ್ಲಿ ಅಡಗಿರುವಂತೆ) ಪ್ರವೃದ್ಧಮಾನನಾಗಿಯೂ ತನ್ನ ಸ್ವಪ್ರಕಾಶದಿಂದಲೇ ಬೆಳಗುತ್ತಿರುವನೂ ಆದ ಅಗ್ನಿಯನ್ನು ಎಂದರ್ಥವು. ಮೇಘಮಧ್ಯದಲ್ಲಿ ವಿದ್ಯುದ್ರೂಪದಿಂದ ಇರುವ ಅಗ್ನಿಯನ್ನು ಅತಿಪ್ರಕಾಶಮಾನವಾದ ಮಿಂಚುಗಳು ಸೇವಿಸುವಂತೆ ಎಂದು ಇಲ್ಲಿ ವರ್ಣಿಸಿದೆ. ಮೇಘಮಧ್ಯದಲ್ಲಿ ಮಿಂಚುಗಳು ಆಗಾಗ ಗೋಚರವಾಗುವುದರಿಂದ ಅವುಗಳು ವಿದ್ಯುದ್ರೂಪದಿಂದಿರುವ ಅಗ್ನಿಯ ಸುತ್ತಲೂ ಇದ್ದು ಅದನ್ನು ಸೇವಿಸುತ್ತವೆ ಎಂದು ಋಷಿಯ ಅಭಿಪ್ರಾಯವು. ಈರೀತಿ ಎಂದರೆ ಅತಿಪ್ರಕಾಶಮಾನವಾದ ವಿದ್ಯುದ್ರಶ್ಮಿಗಳು ಎಂದರೆ ಮಿಂಚುಗಳು ಮೇಘಮಂಡಲದಲ್ಲಿ ಯಾರಿಗೂ ಕಾಣಿಸದಂತೆ ಗೂಢವಾಗಿರುವ ಅಗ್ನಿಯನ್ನು ಸೇವಿಸುವಂತೆ ಅಂತರಿಕ್ಷದಲ್ಲಿರುವ ವೃಷ್ಟಿಗೆ ಕಾರಣರಾದ ಸೂರ್ಯರು ಅಗ್ನಿಯನ್ನು ಆಶ್ರಯಿಸುತ್ತಾರೆ ಎಂಬ ಅಭಿಪ್ರಾಯವು ಇಲ್ಲಿ ಉಕ್ತವಾಗಿದೆ.

॥ ಸಂಹಿತಾಪಾಠಃ ॥

ಈಳೇ ಚ ತ್ವಾ ಯಜಮಾನೋ ಹವಿರ್ಭಿರೀಳೇಸಖಿತ್ವಂ ಸುಮತಿಂ ನಿಕಾಮಃ ।
ದೇವೈರವೋ ಮಿಮೀಹಿ ಸಂ ಜರಿತ್ರೇ ರಕ್ಷಾ ಚ ನೋ ದಮ್ಯೇಭಿರನೀಕೈಃ ॥ ೧೫ ॥

॥ ಪದಪಾಠಃ ॥

ಈಳೇ । ಚ । ತ್ವಾ । ಯಜಮಾನಃ । ಹವಿಃಽಭಿಃ । ಈಳೇ । ಸಖಿಽತ್ವಂ । ಸುಽಮತಿಂ । ನಿಽಕಾಮಃ ।
ದೇವೈಃ । ಅವಃ । ಮಿಮೀಹಿ । ಸಂ । ಜರಿತ್ರೇ । ರಕ್ಷ । ಚ । ನಃ । ದಮ್ಯೇಭಿಃ । ಅನೀಕೈಃ ॥ ೧೫ ॥

॥ ಸಾಯಣಭಾಷ್ಯಂ ॥

ಯಜಮಾನೋಽಹಂ ಹವಿರ್ಭಿಃ ಸಾಧನೈಸ್ತ್ವಾ ತ್ವಾಮೀಳೇ ಚ । ಪಶ್ವಾದಿಲಕ್ಷಣಂ ಧನಂ ಚ ಯಾಚೇ । ಸುಮತಿಂ ಶೋಭನಾಂ ಮತಿಂ ಧರ್ಮವಿಷಯಾಂ ಬುದ್ಧಿಂ ನಿಕಾಮೋ ನಿತರಾಂ ಕಾಮಯಮಾನಸ್ತ್ವಯಾ ಸಹ ಸಖಿತ್ವಮೀಳೇ । ಯಾಚೇ । ತ್ವಂ ದೇವೈಃ ಸಹ ಜರಿತ್ರೇ ಸ್ತೋತ್ರೇ ಸ್ತೋತ್ರಂ ಕುರ್ವತೇ ಮಹ್ಯಮಸ್ಮದರ್ಥಮವಃ ಪಶ್ವಾದಿವಿಷಯಾಂ ರಕ್ಷಾಂ ಮಿಮೀಹಿ । ಕುರು । ದಮ್ಯೇಭಿರ್ದಮನೀಯೈರ್ನಿಯಂತವ್ಯೈಃ । ಪ್ರಯತ್ನನಿಯಂತವ್ಯತಯೋಚ್ಛೃಂಖಲತೋಕ್ತಾ । ಅನೀಕೈಸ್ತೇಜೋಭಿರ್ನೋಽಸ್ಮಾನ್ ರಕ್ಷ ಚ ॥

‖ ಪ್ರತಿಪದಾರ್ಥ ‖

**ಯಜಮಾನಃ**—ಯಜ್ಞಕರ್ತನಾದ ನಾನು । **ಹವಿರ್ಭಿಃ**—ಹವಿಸ್ಸುಗಳನ್ನು ಅರ್ಪಿಸುವುದರ ಮೂಲಕ । **ತ್ವಾ**—ನಿನ್ನನ್ನು । **ಈಳೇ**—(ಧನಕ್ಕಾಗಿ) ಯಾಚಿಸುತ್ತೇನೆ । **ಸುಮತಿಂ**—ಶ್ರೇಷ್ಠವಾದ ಬುದ್ಧಿಯನ್ನು । **ನಿಕಾಮಃ**—ಅಪೇಕ್ಷಿಸಿದವನಾಗಿ । **ಸಖಿತ್ವಂ ಚ**—(ನಿನ್ನೊಡನೆ) ಮಿತ್ರತ್ವವನ್ನೂ । **ಈಳೇ**—ಬೇಡುತ್ತೇನೆ । **ದೇವೈಃ**—ದೇವತೆಗಳೊಡನೆ ಕೂಡಿ । **ಜರಿತ್ರೇ**—ಸ್ತುತಿಕರ್ತನಾದ ನನಗೆ । **ಅವಃ**—(ಪಶ್ವಾದಿ ರೂಪವಾದ) ರಕ್ಷಣೆಯನ್ನು । **ಮಿಮೀಹಿ**—ಉಂಟುಮಾಡು । **ದಮ್ಯೇಭಿಃ**—ನಿಯಮಿತಗಳಾದ । **ಅನೀಕೈಃ**—ತೇಜಸ್ಸುಗಳಿಂದ । **ನಃ**—ನಮ್ಮನ್ನು । **ರಕ್ಷ ಚ**—ಕಾಪಾಡು.

‖ ಭಾವಾರ್ಥ ‖

ಎಲೈ ಅಗ್ನಿಯೇ, ಯಜ್ಞಕರ್ತನಾದ ನಾನು ಹವಿಸ್ಸುಗಳನ್ನು ಅರ್ಪಿಸುವುದರ ಮೂಲಕ ನಿನ್ನನ್ನು ಧನಕ್ಕಾಗಿ ಯಾಚಿಸುತ್ತೇನೆ. ಶ್ರೇಷ್ಠವಾದ ಬುದ್ಧಿಯನ್ನು ಅಪೇಕ್ಷಿಸಿದವನಾಗಿ ನಿನ್ನೊಡನೆ ಮಿತ್ರತ್ವವನ್ನೂ ಬೇಡುತ್ತೇನೆ. ದೇವತೆಗಳೊಡನೆ ಕೂಡಿ ಸ್ತುತಿಕರ್ತನಾದ ನನಗೆ ಪಶ್ವಾದಿರೂಪವಾದ ರಕ್ಷಣೆಯನ್ನೂ ಉಂಟುಮಾಡು. ನಿಯಮಿತಗಳಾದ ತೇಜಸ್ಸುಗಳಿಂದ ನಮ್ಮನ್ನು ಕಾಪಾಡು.

## English Translation.

I, the institutor of the rite, worship you; with oblations: desirous of your favour, I implore your friendship: grant, along with the gods, protection to him who praises you; preserve us with your well-regulated rays.

‖ ವಿಶೇಷವಿಷಯಗಳು ‖

ಇದುವರೆಗೂ ಅಗ್ನಿಯ ನಾನಾವಿಧ ಕೆಲಸಕಾರ್ಯಗಳನ್ನೂ, ಗುಣಗಳನ್ನೂ ವರ್ಣನೆಮಾಡಿ ಈಗ ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕುಗಳಲ್ಲಿಯೂ ಯಜಮಾನನಾದ ತನಗೆ ಅಗ್ನಿಯು ಧನ, ರಕ್ಷಣೆ ಮುಂತಾದವುಗಳನ್ನು ಕೊಡಬೇಕೆಂದು ಋಷಿಯು ಪ್ರಾರ್ಥಿಸಿದಾನೆ.

**ಸುಮತಿಂ**—ಸುಮತಿಶಬ್ದಕ್ಕೆ ಯಾಸ್ಕರು **ಕಲ್ಯಾಣೀಂ ಮತಿಂ** ಒಳ್ಳೆಯ ಬುದ್ಧಿಯನ್ನು ಎಂದು ನಿರ್ವಚನವನ್ನು ಹೇಳಿದ್ದಾರೆ. (ನಿ. ೨-೧೧; ೭-೨೨; ೧೧-೧೧; ೧೧-೧೯; ೧೨-೩೯). ಆದರೆ ಸುಮತಿಶಬ್ದವು ಕೇವಲ ದೈವಿಕವಾದ ಅನುಗ್ರಹಾತ್ಮಕಬುದ್ಧಿಯೆಂದು ಮಾತ್ರವಲ್ಲದೆ ಮಾನವಕೃತಪ್ರಾರ್ಥನಾ ಅಥವಾ ಮಾನವನ ಶ್ರೇಷ್ಠವಾದ ಅಭಿಲಾಷೆ ಎಂಬರ್ಥದಲ್ಲಿಯೂ ಪ್ರಯೋಗಿಸಲ್ಪಟ್ಟಿದೆ. ಉದಾ—

**ತುಭ್ಯಂ ಭರಂತಿ ಕ್ಷಿತಯೋ ಯವಿಷ್ಠ ಬಲಿಮಗ್ನೇ ಅಂತಿತ ಓತ ದೂರಾತ್ ।**
**ಆ ಭಂದಿಷ್ಠಸ್ಯ ಸುಮತಿಂ ಚಿಕಿದ್ಧಿ ಬೃಹತ್ತೇ ಅಗ್ನೇ ಮಹಿ ಶರ್ಮ ಭದ್ರಂ ‖**

(ಋ. ಸಂ. ೫-೧-೧೦)

**ಪ್ರ ವೋ ಮಹೇ ಮಹೀವೃಧೇ ಭರಧ್ವಂ ಪ್ರಚೇತಸೇ ಪ್ರ ಸುಮತಿಂ ಕೃಣುಧ್ವಂ ।**
**ವಿಶಃ ಪೂರ್ವೀಃ ಪ್ರ ಚರಾ ಚರ್ಷಣಿಪ್ರಾಃ**

(ಋ. ಸಂ. ೭-೩೧-೧೦)

ಇತ್ಯಾದಿ ಋಕ್ಕುಗಳಲ್ಲಿ **ಸ್ತೋತುಃ ಸ್ತುತಿಂ ಆ ಜಾನೀಹಿ**—ಸ್ತೋತೃವಿನ ಶ್ರೇಷ್ಠವಾದ ಸ್ತುತಿಯನ್ನು ಆಲಿಸು ಎಂದೂ, **ಇಂದ್ರಾಯ ಸುಷ್ಟುತಿಂ ಪ್ರ ಕುರುತ**—ಇಂದ್ರನನ್ನುದ್ದೇಶಿಸಿ ಶ್ರೇಷ್ಠವಾದ ಸ್ತುತಿಯನ್ನು ಪಠಿಸು ಎಂದೂ ಅರ್ಥಮಾಡಿದೆ.

**ದಮ್ಯೇಭಿಃ ಅನೀಕೈಃ—ದಮನೀಯೈರ್ನಿಯಂತವ್ಯೈಃ । ಪ್ರಯತ್ನನಿಯಂತವ್ಯತಯೋಚ್ಛ್ರಂ-ಖಲತೋಕ್ತಾ । ತೇಜೋಭಿಃ ।** ಅಗ್ನಿಯು ತನ್ನ ಅತಿಶಯವಾದ ತೇಜಸ್ಸಿನಿಂದ (ದಹಿಸುವ ಸಾಮರ್ಥ್ಯದಿಂದ) ಕೆಡಕನ್ನೂ ಮಾಡಬಹುದು, ಒಳ್ಳೆಯದನ್ನೂ ಮಾಡಬಹುದು. ಆದುದರಿಂದ ಅಗ್ನಿಯು ತನ್ನ ತೇಜಸ್ಸನ್ನು ನಿಯಮನ ಮಾಡಿ ನಮ್ಮ ವಿಷಯದಲ್ಲಿ ಗೃಹಾದಿಗಳೂ, ಪಶ್ವಾದಿಗಳೂ ಅಗ್ನಿಯ ದಹಿಸುವ ಶಕ್ತಿಗೆ ಈಡಾಗದಂತೆಯೂ ನಮ್ಮ ಶತ್ರುಗಳನ್ನು ನಾಶಮಾಡುವುದರಲ್ಲಿಯೂ, ನಮ್ಮನ್ನು ದುಷ್ಟಶಕ್ತಿಗಳಿಂದ ರಕ್ಷಿಸುವುದರಲ್ಲಿಯೂ ಅಗ್ನಿಯ ತೇಜಸ್ಸುಗಳು ಉಪಯುಕ್ತವಾಗಲಿ ಎಂದು **ದಮ್ಯೇಭಿಃ ಅನೀಕೈಃ** ಎಂಬ ಶಬ್ದಗಳಿಂದ ಅರ್ಥವನ್ನು ಸೂಚಿಸಲಾಗಿದೆ.

ಸಂಹಿತಾಪಾಠಃ ॥

ಉಪಕ್ಷೇತಾರಸ್ತವ ಸುಪ್ರಣೀತೇಽಗ್ನೇ ವಿಶ್ವಾನಿ ಧನ್ಯಾ ದಧಾನಾಃ ।
ಸುರೇತಸಾ ಶ್ರವಸಾ ತುಂಜಮಾನಾ ಅಭಿ ಷ್ಯಾಮ ಪೃತನಾಯೂँರದೇವಾನ್ ॥ ೧೬ ॥

॥ ಪದಪಾಠಃ ॥

ಉಪಽಕ್ಷೇತಾರಃ । ತವ । ಸುಽಪ್ರನೀತೇ । ಅಗ್ನೇ । ವಿಶ್ವಾನಿ । ಧನ್ಯಾ । ದಧಾನಾಃ ।
ಸುಽರೇತಸಾ । ಶ್ರವಸಾ । ತುಂಜಮಾನಾಃ । ಅಭಿ । ಸ್ಯಾಮ । ಪೃತನ್ಯಾಽಯೂನ್ । ಅದೇವಾನ್ ॥ ೧೬ ॥

॥ ಸಾಯಣಭಾಷ್ಯಂ ॥

**ಹೇ ಸುಪ್ರಣೀತೇ ಶೋಭನಪ್ರಣಯನ ಹೇ ಅಗ್ನೇ ತವೋಪಕ್ಷೇತಾರ ಉಪಗಂತಾರಃ ॥ ಅತ್ರ ಕ್ಷಿತಿರ್ಗತ್ಯರ್ಥೇ ವರ್ತತೇ ॥ ವಿಶ್ವಾನಿ ಸರ್ವಾಣಿ ಧನ್ಯಾ ಧನ್ಯಾನಿ ಪಶ್ವಾದಿಧನಪ್ರಾಪ್ತಿಹೇತುಭೂತಾನಿ ಕರ್ಮಾಣಿ ದಧಾನಾ ವಿದಧಾನಾಃ ಕುರ್ವಂತಸ್ತುಂಜಮಾನಾ ಹವೀಂಷಿ ಪ್ರಯಚ್ಛಂತೋ ವಯಂ ಸುರೇತಸಾ ಶೋಭನವೀರ್ಯೇಣ ಶ್ರವಸಾ ತ್ವತ್ಕೃತೇನಾನ್ನೇನಾದೇವಾನ್ ದೇವೇಭ್ಯೋಽನ್ಯಾನ್ । ನಞಾವಯುಕ್ತನ್ಯಾಯೇನ ರಾಕ್ಷಸಾ ಏವ ಗೃಹ್ಯಂತೇ । ಯಜ್ಞವಿಘ್ನಕಾರಿಣಸ್ತಾನ್ಪೃತನಾಯೂಂಶ್ಚ**

**ಶರೀರಾದ್ಯುಪದ್ರವಕಾರಿಣಃ ಶತ್ರೂಂಶ್ಚಾಭಿಷ್ಯಾಮ । ಅಭಿಭವೇಮ । ಯದ್ವಾ ದೇವಾನಪೂಜಯಂತಃ ಶತ್ರೂನಿತಿ ಯೋಜ್ಯಂ ॥**

॥ ಪ್ರತಿಪದಾರ್ಥ ॥

**ಸುಪ್ರಣೀತೇ**—ಅನುಗ್ರಹಾತ್ಮಕವಾದ ನೇತೃತ್ವವುಳ್ಳ । **ಅಗ್ನೇ**—ಎಲೈ ಅಗ್ನಿಯೇ । **ತವ**—ನಿನ್ನನ್ನು **ಉಪಕ್ಷೇತಾರಃ**—ಸಮೀಪಿಸುವವರಾಗಿಯೂ । **ವಿಶ್ವಾನಿ**—ಸಮಸ್ತವಾದ । **ಧನ್ಯಾ**—ಪಶ್ವಾದಿಧನಕ್ಕೆ ಹೇತುಭೂತವಾದ ಕರ್ಮಗಳನ್ನು । **ದಧಾನಾಃ**—ಮಾಡುವವರಾಗಿಯೂ । **ತುಂಜಮಾನಾಃ**—ಹವಿಸ್ಸನ್ನರ್ಪಿಸುವವರಾಗಿಯೂ ಇರುವ ನಾವು । **ಸುರೇತಸಾ**—ಉತ್ತಮವಾದ ವೀರ್ಯದಿಂದ ಕೂಡಿದ । **ಶ್ರವಸಾ**—ಅನ್ನದಿಂದ । **ಅದೇವಾನ್**—ದೈವಭಕ್ತಿಯಿಲ್ಲದ ಅಸುರರನ್ನೂ । **ಪೃತನಾಯೂನ್**—ಇತರ ಶುತ್ರುಗಳನ್ನೂ । **ಅಭಿಷ್ಯಾಮ**—ಜಯಿಸವಂತಾಗಲಿ ।

॥ ಭಾವಾರ್ಥ ॥

ಅನುಗ್ರಹಾತ್ಮಕವಾದ ನೇತೃತ್ವವುಳ್ಳ ಎಲೈ ಅಗ್ನಿಯೇ, ನಿನ್ನನ್ನು ಸಮೀಪಿಸುವವರಾಗಿಯೂ, ಸಮಸ್ತವಾದ ಪಶ್ವಾದಿಧನಕ್ಕೆ ಹೇತುಭೂತವಾದ ಕರ್ಮಗಳನ್ನು ಮಾಡುವವರಾಗಿಯೂ, ಹವಿಸ್ಸನ್ನರ್ಪಿಸುವವರಾಗಿಯೂ ಇರುವ ನಾವು ಉತ್ತಮವಾದ ವೀರ್ಯದಿಂದ ಕೂಡಿದ ಅನ್ನದಿಂದ ದೈವಭಕ್ತಿಯಿಲ್ಲದ ಅಸುರರನ್ನೂ, ಇತರ ಶತ್ರುಗಳನ್ನೂ ಜಯಿಸುವಂತಾಗಲಿ.

English Translation.

Approching you, benevolent Agni, and performing all holy acts that are the cause of opulence, offering oblations with earnestness and in abundance, may we overcome the hostile hosts that are without gods.

॥ ವಿಶೇಷವಿಷಯಗಳು ॥

**ಸುಪ್ರಣೀತೇ—ಶೋಭನಪ್ರಣಯನ** । ಯಜ್ಞಾದಿಕರ್ಮಗಳಲ್ಲಿಯೂ, ಇತರ ಕೆಲಸಕಾರ್ಯಗಳಲ್ಲಿಯೂ ಅಗ್ನಿಯು ನಮಗೆ ಮಾರ್ಗದರ್ಶಕನಾಗಿರಬೇಕೆಂದು ಪ್ರಾರ್ಥಿಸಿದೆ.

**ಉಪಕ್ಷೇತಾರಃ—ಉಪಗಂತಾರಃ । ಅತ್ರ ಕ್ಷಿತಿರ್ಗತ್ಯರ್ಥೇ ವರ್ತತೇ ।** ಕ್ಷಿತಿಶಬ್ದಕ್ಕೆ ಇಲ್ಲಿ ಗತ್ಯರ್ಥವನ್ನು ಹೇಳಿರುವುದರಿಂದ, ಎಲೈ ಅಗ್ನಿಯೇ, ನಿನ್ನ ಸಮೀಪಕ್ಕೆ ಬಂದಿರುವ ನಾವು ಎಂದರ್ಥವು.

**ಧನ್ಯಾ—ಧನ್ಯಾನಿ । ಪಶ್ವಾದಿಧನಪ್ರಾಪ್ತಿಹೇತುಭೂತಾನಿ ಕರ್ಮಾಣಿ ।** ಇಲ್ಲಿ ಧನ್ಯಾ ಎಂದರೆ ಧನವನ್ನು ಒದಗಿಸಿಕೊಡುವ, ಪಶುಗಳೇ ಮೊದಲಾದ ಧನಪ್ರಾಪ್ತಿಗಾಗಿ ಮಾಡುವ ಯಜ್ಞಯಾಗಾದಿಕರ್ಮಗಳನ್ನು ಎಂದಭಿಪ್ರಾಯವು.

**ತುಂಜಮಾನಾಃ** — ತುಂಜತಿಧಾತುವು ದಾನಕರ್ಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೯) ತುಂಜಮಾನಾಃ ಎಂದರೆ ಹವಿಸ್ಸನ್ನು ಅರ್ಪಿಸುವ ಎಂದರ್ಥವು.

**ಅದೇವಾನ್ ಪೃತನಾಯೂನ್—ದೇವೇಭ್ಯೋಽನ್ಯಾನ್ । ರಾಕ್ಷಸಾ ಏವ ಗೃಹ್ಯಂತೇ । ಯಜ್ಞವಿಘ್ನಕಾರಿಣಸ್ತಾನ್** । **ಅದೇವಾನ್** ಎಂದರೆ ದೇವತೆಗಳಲ್ಲದವರನ್ನು ಎಂದರೆ ಯಜ್ಞಕರ್ಮಗಳಿಗೆ ವಿಘ್ನವನ್ನುಂಟು

ಮಾಡುವ ಅಸುರರು, ರಾಕ್ಷಸರು ಮುಂತಾದವರನ್ನು ಎಂದರ್ಥವು, **ಪೃತನಾಯೂನ್**—ಎಂದರೆ **ಶರೀರಾದ್ಯುಪದ್ರವಕಾರಿಣಃ ಶತ್ರೂಂಶ್ಚ** । ಯುದ್ಧಾದಿಗಳಲ್ಲಿ ನಮ್ಮ ಶರೀರಗಳಿಗೆ ಹಿಂಸೆಯನ್ನುಂಟುಮಾಡುವ ಶತ್ರುಗಳನ್ನು ಎಂದರ್ಥವು. ಈ ಎರಡುವಿಧವಾದ ಶತ್ರುಗಳನ್ನು ನಾವು ಜಯಿಸುವಂತಾಗಲಿ ಎಂಬ ಆಶಂಸನೆಯು ಉಕ್ತವಾಗಿದೆ.

॥ ಸಂಹಿತಾಪಾಠಃ ॥

**ಆ ದೇವಾನಾಮಭವಃ ಕೇತುರಗ್ನೇ ಮಂದ್ರೋ ವಿಶ್ವಾನಿ ಕಾವ್ಯಾನಿ ವಿದ್ವಾನ್ ।**

**ಪ್ರತಿ ಮರ್ತಾಂ ಅವಾಸಯೋ ದಮೂನಾ ಅನು ದೇವಾನ್ರಥಿರೋ ಯಾಸಿ ಸಾಧನ್ ॥**

॥ ಪದಪಾಠಃ ॥

**ಆ । ದೇವಾನಾಂ । ಅಭವಃ । ಕೇತುಃ । ಅಗ್ನೇ । ಮಂದ್ರಃ । ವಿಶ್ವಾನಿ । ಕಾವ್ಯಾನಿ । ವಿದ್ವಾನ್ ।**

**ಪ್ರತಿ । ಮರ್ತಾನ್ । ಅವಾಸಯಃ । ದಮೂನಾಃ । ಅನು । ದೇವಾನ್ । ರಥಿರಃ । ಯಾಸಿ । ಸಾಧನ್ ॥**

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಮಂದ್ರಃ ಸ್ತುತ್ಯಃ ಕೇತುರ್ಯಜ್ಞೇಷು ದೇವಾನಾಂ ಪ್ರಜ್ಞಾಪಕಸ್ತ್ವಮಾಭವಃ । ಆ ಸಮಂತಾದ್ಭವಸಿ । ಸರ್ವವ್ಯಾಪಕೋ ಭವಸೀತ್ಯರ್ಥಃ । ಕಿಂಚ ವಿಶ್ವಾನಿ ಸರ್ವಾಣಿ ಕಾವ್ಯಾನಿ ಯಜಮಾನಾದಿಭಿಃ ಕೃತಾನಿ ಸ್ತೋತ್ರಾಣಿ ವಿದ್ವಾನ್ ಜಾನನ್ ತ್ವಂ ಮರ್ತಾನ್ ಮರ್ತ್ಯಾನ್ ಸ್ತೋತೄನ್ ಸ್ವಾಭಿಲಷಿತವಸ್ತುಸಂಪಾದನೇನ ಪ್ರೀತಾನ್ ವಿಧಾಯ ಗೃಹೇಷು ಪ್ರತ್ಯವಾಸಯಃ । ಪ್ರತಿವಾಸಯಸಿ । ರಥಿರೋ ರಥೀ ಸಾಧನ್ ದೇವಾನಾಂ ಹಿತಾನಿ ಕರ್ಮಾಣಿ ಸಾಧಯನ್ ದೇವಾನ್ ಅನು ಯಾಸಿ ಚ। ಅನುಗಚ್ಛಸಿ ಚ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಮಂದ್ರಃ**—ಸ್ತುತ್ಯನೂ । **ದೇವಾನಾಂ**—ದೇವತೆಗಳಿಗೆ । **ಕೇತುಃ**—ಯಜ್ಞದ ಜ್ಞಾಪಕವನ್ನು ಕೊಡುವವನೂ ಆದ ನೀನು । **ಆ ಅಭವಃ**—ಸುತ್ತಲೂ ವ್ಯಾಪಿಸಿ ಸ್ಥಿತನಾಗಿದ್ದೀಯೆ । **ವಿಶ್ವಾನಿ**—ಸಮಸ್ತವಾದ । **ಕಾವ್ಯಾನಿ**—(ಯಜಮಾನಕೃತವಾದ) ಸ್ತೋತ್ರಾದಿಗಳನ್ನೂ । **ವಿದ್ವಾನ್**—ತಿಳಿದಿರುವ ನೀನು । **ಮರ್ತಾನ್**—(ಭಕ್ತರಾದ) ಮಾನವರನ್ನು । **ಪ್ರತಿ ಅವಾಸಯಃ**—(ಅವರವರ ಗೃಹಗಳಲ್ಲಿ) ಸುಖವಾಗಿ ವಾಸಿಸುವಂತೆ ಮಾಡುತ್ತೀಯೆ । **ದಮೂನಾಃ**—ಪ್ರಶಾಂತಚಿತ್ತನಾಗಿಯೂ । **ರಥಿರಃ**—ರಥಿಕನಾಗಿಯೂ । **ಸಾಧನ್**—ದೇವತೆಗಳ ಹಿತವನ್ನು ಆಚರಿಸುತ್ತಾ । **ದೇವಾನ್**—ದೇವತೆಗಳನ್ನು । **ಅನು ಯಾಸಿ**—ಹಿಂಬಾಲಿಸಿ ಹೋಗುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಸ್ತುತ್ಯನೂ, ದೇವತೆಗಳಿಗೆ ಯಜ್ಞದ ಜ್ಞಾಪಕವನ್ನು ಕೊಡುವವನೂ ಆದ ನೀನು ಸರ್ವತ್ರ ವ್ಯಾಪಿಸಿ ಸ್ಥಿತನಾಗಿದ್ದೀಯೆ. ಯಜಮಾನನಿಂದ ಕೃತವಾದ ಸ್ತೋತ್ರಾದಿಗಳನ್ನು ತಿಳಿದಿರುವ ನೀನು ಭಕ್ತರಾದ ಮಾನವ

ರನ್ನು ಅವರವರ ಗೃಹಗಳಲ್ಲಿ ಸುಖವಾಗಿ ವಾಸಿಸುವಂತೆ ಮಾಡುತ್ತೀಯೆ. ರಥಿಕನಾಗಿಯೂ, ಪ್ರಶಾಂತಚಿತ್ತನಾಗಿಯೂ ದೇವತೆಗಳ ಹಿತವನ್ನು ಆಚರಿಸುತ್ತಾ ದೇವತೆಗಳನ್ನು ಹಿಂಬಾಲಿಸಿ ಹೋಗುತ್ತೀಯೆ.

## English Translation.

You, Agni, are the commendable announcer of the gods, cognizant of all secred rites; placid, you abide amongst mortals, and like a charioteer, you follow the gods, accomplishing (their wishes).

॥ ವಿಶೇಷವಿಷಯಗಳು ॥

**ಮಂದ್ರಃ**—**ಮಂದ್ರಾ** ಎಂಬ ಶಬ್ದವು ವಾಙ್ನಾಮಗಳಲ್ಲಿ ಪಠಿತವಾಗಿದೆ (ನಿ. ೨-೨೩) ಮತ್ತು **ಮಂದ್ರಾ ಮದನಾ ಹರ್ಷಕಾರೀ** ಎಂದು ನಿರ್ವಚನವೂ ಇದೆ. (ನಿ. ೧೧-೨೮) ಇಲ್ಲಿ ಸ್ತುತ್ಯನು ಎಂಬರ್ಥವನ್ನು ವಿವರಿಸಿದೆ.

**ದಮೂನಾಃ**—**ದಮೂನಾಃ** ಎಂಬ ಶಬ್ದಕ್ಕೆ ಯಾಸ್ಕರು ನಿರ್ವಚನವನ್ನು ಹೇಳುತ್ತಾ—

**ಜುಷ್ಟೋ ದಮೂನಾ ಅತಿಥಿರ್ದುರೋಣ ಇಮಂ ನೋ ಯಜ್ಞಮುಪ ಯಾಹಿ ವಿದ್ವಾನ್ ।**
**ವಿಶ್ವಾ ಅಗ್ನೇ ಅಭಿಯುಜೋ ವಿಹತ್ಯಾ ಶತ್ರೂಯತಾಮಾಭರಾ ಭೋಜನಾನಿ ॥**

ಎಂಬ ಋಕ್ಕನ್ನುದಾಹರಿಸಿ—

**ದಮೂನಾ ದಮಮನಾ ವಾ, ದಾನಮನಾ ವಾ, ದಾಂತಮನಾ ವಾ । ಅಪಿ ವಾ ದಮ ಇತಿ ಗೃಹ ನಾಮ ತನ್ಮನಾಃ ಸ್ಯಾತ್ । ಮನೋ ಮನೋತೇಃ ।**

**ದಮೂನಾಃ** ಎಂದರೆ ಕ್ರೂರವಲ್ಲದ ಮನಸ್ಸುಳ್ಳವನೆಂದೂ, ಅಥವಾ ಕೊಡಬೇಕೆಂಬ ಬುದ್ಧಿಯುಳ್ಳವನೆಂದೂ, ತನ್ನ ಮನಸ್ಸನ್ನು ನಿಯಮದಲ್ಲಿ (ಹತೋಟಿಯಲ್ಲಿ) ಇಟ್ಟಿರುವವನೆಂದೂ ಅಥವಾ ದಮಶಬ್ದಕ್ಕೆ ಗೃಹವೆಂದು ಅರ್ಥವಿರುವುದರಿಂದ ಗೃಹಗಳಲ್ಲಿ ಇರಬೇಕೆಂಬ ಮನಸ್ಸುಳ್ಳವನಾಗಿರುವವನೆಂದೂ ದಮೂನಾಃ ಎಂಬ ಶಬ್ದಕ್ಕೆ ಅನೇಕ ವಿಧವಾದ ಅರ್ಥಗಳನ್ನು ವಿವರಿಸಿದಾರೆ.



ಸಂಹಿತಾಪಾಠಃ ॥

ನಿ ದುರೋಣೇ ಅಮೃತೋ ಮರ್ತ್ಯಾನಾಂ ರಾಜಾ ಸಸಾದ ವಿದಥಾನಿ ಸಾಧನ್
ಘೃತಪ್ರತೀಕ ಉರ್ವಿಯಾ ವ್ಯದ್ಯೌದಗ್ನಿರ್ವಿಶ್ವಾನಿ ಕಾವ್ಯಾನಿ ವಿದ್ವಾನ್ ॥ ೧೮

॥ ಪದಪಾಠಃ ॥

ನಿ । ದುರೋಣೇ । ಅಮೃತಃ । ಮರ್ತ್ಯಾನಾಂ । ರಾಜಾ । ಸಸಾದ । ವಿದಥಾನಿ । ಸಾಧನ್ ।
ಘೃತಽಪ್ರತೀಕಃ । ಉರ್ವಿಯಾ । ವಿ । ಅದ್ಯೌತ್ । ಅಗ್ನಿಃ । ವಿಶ್ವಾನಿ । ಕಾವ್ಯಾನಿ । ವಿದ್ವಾನ್ ॥ ೧೮ ॥

॥ ಸಾಯಣಭಾಷ್ಯಂ ॥

**ಅಮೃತೋ ನಿತ್ಯೋ ರಾಜಾ ರಾಜಮಾನೋ ಯೋಽಗ್ನಿರ್ವಿದಥಾನಿ ಯಜ್ಞಾನ್ ಸಾಧನ್ ಸಾಧಯನ್ ಮರ್ತ್ಯಾನಾಮಗ್ನಿಹೋತ್ರಿಣಾಂ ದುರೋಣೇ ಗೃಹೇ ನಿಷಸಾದ । ನಿಷೀದತಿ । ವಿಶ್ವಾನಿ ಕಾವ್ಯಾನಿ ವಿದ್ವಾನ್ ಜಾನನ್ ಘೃತಪ್ರತೀಕೋ ಘೃತೇನ ಸಂಧುಕ್ಷಿತಾವಯವ ಉರ್ವಿಯಾ ವಿಸ್ತೀರ್ಣಃ ಸೋಽಗ್ನಿರ್ವ್ಯದ್ಯೌತ್ । ವಿದ್ಯೋತತೇ ॥**

॥ ಪ್ರತಿಪದಾರ್ಥ ॥

**ಅಮೃತಃ**—ನಿತ್ಯನೂ । **ರಾಜಾ**— ಪ್ರಕಾಶಮಾನನೂ ಆದ ಅಗ್ನಿಯು । **ವಿದಥಾನಿ**—ಯಜ್ಞಗಳನ್ನು । **ಸಾಧನ್**—ಸಾಧಿಸುತ್ತಾ । **ಮರ್ತ್ಯಾನಾಂ**— (ಅಗ್ನಿಹೋತ್ರಾದಿಗಳನ್ನು ಮಾಡುವ) ಮಾನವರ । **ದುರೋಣೇ**— ಗೃಹದಲ್ಲಿ । **ನಿ ಸಸಾದ**—ಉಪಸ್ಥಿತನಾಗುತ್ತಾನೆ । **ವಿಶ್ವಾನಿ**—ಸಮಸ್ತರಾದ । **ಕಾವ್ಯಾನಿ**—ಸ್ತುತಿಗಳನ್ನೂ । ಕರ್ಮಗಳನ್ನೂ । **ವಿದ್ವಾನ್**—ತಿಳಿದವನಾಗಿಯೂ । **ಘೃತಪ್ರತೀಕಃ**— ಆಜ್ಯದಿಂದ ಪ್ರೋಕ್ಷಿತವಾದ ಅವಯುವ ಗಳುಳ್ಳವನಾಗಿಯೂ । **ಉರ್ವಿಯಾ**—ವಿಸ್ತೃತವಾದ ದೇಹವನ್ನು ಹೊಂದಿ । **ಅಗ್ನಿಃ**—ಅಗ್ನಿಯು । **ವ್ಯದ್ಯೌತ್**— ಪ್ರಕಾಶಿಸುತ್ತಾನೆ.

॥ ಭಾವಾರ್ಥ ॥

ನಿತ್ಯನೂ, ಪ್ರಕಾಶಮಾನನೂ ಆದ ಅಗ್ನಿಯು ಯಜ್ಞಗಳನ್ನು ಸಾಧಿಸುತ್ತಾ, ಅಗ್ನಿಹೋತ್ರಾದಿಗಳನ್ನು ನೆರವೇರಿಸುವ ಮಾನವರ ಗೃಹದಲ್ಲಿ ಉಪಸ್ಥಿತನಾಗುತ್ತಾನೆ. ಸಮಸ್ತವಾದ ಸ್ತುತಿಗಳನ್ನೂ, ಕರ್ಮಗಳನ್ನೂ ತಿಳಿದವ ನಾಗಿಯೂ, ಆಜ್ಯದಿಂದ ಪ್ರೋಕ್ಷಿತವಾದ ಅವಯವಗಳುಳ್ಳವನಾಗಿಯೂ ವಿಸ್ತೃತವಾದ ದೇಹವನ್ನು ಹೊಂದಿದ ಅಗ್ನಿಯು ಪ್ರಕಾಶಿಸುತ್ತಾನೆ.

English Translation·

The immortal being has sat down in the dwelling of mortals, accomplishing (their) sacrifices : Agni, who is cognizant of all sacred rites, shines with expanded bulk when fed with clarified butter.

॥ ವಿಶೇಷವಿಷಯಗಳು ॥

**ದುರೋಣೇ**—**ದುರೋಣೇ** ಎಂಬ ಶಬ್ದವು ಗೃಹನಾಮಗಳಲ್ಲಿ (ನಿ. ೩-೧೩) ಪಠಿತವಾಗಿದೆ. **ದುರೋಣ ಇತಿ ಗೃಹ ನಾಮ** ಎಂಬ ನಿರ್ವಚನವೂ (ನಿ. ೪-೪) ಇರುವುದರಿಂದ ಈ ಶಬ್ದಕ್ಕೆ ಗೃಹದಲ್ಲಿ ಎಂದರ್ಥವು.

**ಘೃತಪ್ರತೀಕಃ**—**ಘೃತೇನ ಸಂಧುಕ್ಷಿತಾವಯವಃ** । ಆಜ್ಯದಿಂದ ಪ್ರೋಕ್ಷಿತವಾದ ಅವಯವಗಳುಳ್ಳವನು.

ಘೃತಪ್ರತೀಕೋ ಬೃಹತಾ ದಿವಿಸ್ಪೃಶಾ ದ್ಯುಮದ್ವಿ ಭಾತಿ ಭರತೇಭ್ಯಃ ಶುಚಿಃ ।
(ಋ. ಸಂ. ೫-೧೧-೧)

ಚತುಷ್ಕಪರ್ದಾ ಯುವತಿಃ ಸುಪೇಶಾ ಘೃತಪ್ರತೀಕಾ ವಯುನಾನಿ ವಸ್ತೇ ॥
(ಋ. ಸಂ. ೧೦-೧೧೪-೩)

ಇತ್ಯಾದಿ ಋಕ್ಕುಗಳಲ್ಲಿರುವ ಘೃತಪ್ರತೀಕಶಬ್ದಕ್ಕೆ **ಘೃತೇನ ಪ್ರಜ್ವಲಿತಾಂಗಃ** ಎಂದರೆ ಆಜ್ಯಹೋಮದಿಂದ ಪ್ರಕಾಶಮಾನವಾದ ಶರೀರಾವಯವವುಳ್ಳವನು ಎಂಬ ಅರ್ಥವು ಉಕ್ತವಾಗಿದೆ. ಅಗ್ನಿಯಲ್ಲಿ ಆಜ್ಯಾದಿಗಳನ್ನು ಅನೇಕಾವರ್ತಿ ಹೋಮಮಾಡುವುದರಿಂದ ಅಗ್ನಿಯು ವಿಶೇಷವಾಗಿ ಉದ್ದೀಪ್ತನಾಗುವನು ಎಂಬ ಅರ್ಥದಲ್ಲಿ ಈ ಪದದ ಪ್ರಯೋಗವಿರುವುದು ಸಹಜವಾಗಿದೆ.

ಸಂಹಿತಾಪಾಠಃ ॥

ಆ ನೋ ಗಹಿ ಸಖ್ಯೇಭಿಃ ಶಿವೇಭಿರ್ಮಹಾನ್ಮಹೀಭಿರೂತಿಭಿಃ ಸರಣ್ಯನ್ ।
ಅಸ್ಮೇ ರಯಿಂ ಬಹುಲಂ ಸಂತರುತ್ರಂ ಸುವಾಚಂ ಭಾಗಂ ಯಶಸಂ ಕೃಧೀ ನಃ ॥

॥ ಪದಪಾಠಃ

ಆ । ನಃ । ಗಹಿ । ಸಖ್ಯೇಭಿಃ । ಶಿವೇಭಿಃ । ಮಹಾನ್ । ಮಹೀಭಿಃ । ಊತಿऽಭಿಃ । ಸರಣ್ಯನ್ ।
ಅಸ್ಮೇ ಇತಿ । ರಯಿಂ । ಬಹುಲಂ । ಸಂऽತರುತ್ರಂ । ಸುऽವಾಚಂ । ಭಾಗಂ । ಯಶಸಂ । ಕೃಧಿ । ನಃ ॥

॥ ಸಾಯಣಭಾಷ್ಯಂ ॥

ಸರಣ್ಯನ್ ಸರ್ವತ್ರ ಸರಣಂ ಗಮನಮಿಚ್ಛನ್ ಮಹಾಂಸ್ತ್ವಂ ಶಿವೇಭಿಃ ಶಿವಂಕರೈಃ ಸಖ್ಯೇಭಿಃ ಸಖ್ಯೈಃ ಸಖಿಕರ್ಮಭಿರ್ಮಹೀಭಿರ್ಮಹತೀಭಿರೂತಿಭೀ ರಕ್ಷಾಭಿಶ್ಚ ನೋऽಸ್ಮಾನ್ಪ್ರತಿ ಆ ಗಹಿ । ಆಗಚ್ಛ। ಅಸ್ಮೇ ಅಸ್ಮಭ್ಯಂ ಬಹುಲಂ ವಿಸ್ತೀರ್ಣಂ ಸಂತರುತ್ರಂ ಸರ್ವೇಷಾಮುಪದ್ರವಾಣಾಂ ಸಂತಾರಕಂ ಸುವಾಚಂ ಶೋಭನವಾಚಂ ಭಾಗಂ ಸರ್ವೈರ್ಭಜನೀಯಂ ಯಶಸಂ ಯಶಸಾ ಕೀರ್ತ್ಯಾ ಸಂಯುಕ್ತಂ ರಯಿಂ ಧನಂ ನೋऽಸ್ಮಭ್ಯಂ ಕೃಧಿ । ದೇಹಿ । ಅಸ್ಮಭ್ಯಮಿತಿ ಪುನರ್ವಚನಮಾಪದರಾತಿಶಯಾರ್ಥಂ ॥

॥ ಪ್ರತಿಪದಾರ್ಥ ॥

**ಸರಣ್ಯನ್**—ಸರ್ವತ್ರ ಸಂಚರಿಸುತ್ತಲೂ । **ಮಹಾನ್**—ಮಹತ್ತ್ವದಿಂದ ಕೂಡಿಯೂ ಇರುವ ನೀನು । **ಶಿವೇಭಿಃ**—ಮಂಗಳಕರಗಳಾಗಿಯೂ । **ಸಖ್ಯೇಭಿಃ**—ಸಖಿತ್ವವನ್ನು ಸೂಚಿಸುವುವಾಗಿಯೂ । **ಮಹೀಭಿಃ**—ಮಹತ್ತ್ವದಿಂದ ಕೂಡಿದುವವಾಗಿಯೂ ಇರುವ । **ಊತಿಭಿಃ**—ರಕ್ಷಣೆಗಳೊಡನೆ । **ನಃ**—ನಮ್ಮಲ್ಲಿಗೆ । **ಆ ಗಹಿ**—

ಬಾ । **ಅಸ್ಮೇ**— ನಮಗೆ । **ಬಹುಲಂ**— ಪ್ರಭೂತವಾದುದೂ । **ಸಂತರುತ್ರಂ**-- ಎಲ್ಲಾ ತೊಂದರೆಗಳಿಂದಲೂ ದಾಟಿಸುವುದೂ । **ಸುವಾಚಂ**— ಪ್ರಶಸ್ತ್ಯವಾದುದೂ । **ಭಾಗಂ**— ಪೂಜ್ಯವಾದುದೂ । **ಯಶಸಂ**— ಕೀರ್ತಿಯುಕ್ತವಾದುದೂ ಆದ । **ರಯಿಂ**--- ಧನವನ್ನು । **ನಃ**— ನಮಗೆ । **ಕೃಧಿ**— ಉಂಟುಮಾಡು.

॥ ಭಾವಾರ್ಥ ॥

ಸರ್ವತ್ರ ಸಂಚರಿಸುತ್ತಲೂ, ಮಹತ್ತ್ವದಿಂದ ಕೂಡಿಯೂ ಇರುವ ನೀನು ಮಂಗಳಕರಗಳಾಗಿಯೂ, ಸಖಿತ್ವವನ್ನು ಸೂಚಿಸುವುವಾಗಿಯೂ, ಮಹತ್ತ್ವದಿಂದ ಕೂಡಿರುವುದಾಗಿಯೂ ಇರುವ ರಕ್ಷಣೆಗಳೊಡನೆ ನಮ್ಮಲ್ಲಿಗೆ ಬಾ. ನಮಗೆ ಪ್ರಭೂತವಾದುದೂ, ಎಲ್ಲಾ ತೊಂದರೆಗಳಿಂದಲೂ ದಾಟಿಸುವುದೂ ಪ್ರಶಸ್ಯವಾದುದೂ, ಪೂಜ್ಯವಾದುದೂ, ಕೀರ್ತಿಯುಕ್ತವಾದುದೂ ಆದ ಧನವನ್ನು ನಮಗೆ ಒದಗಿಸು.

## English Translation.

Come to us with friendly, auspicious, and mighty aids, you who are great and all-pervading: bestow upon us ample riches, safe from injury, well-spoken of, desirable, and renowned.

ವಿಶೇಷವಿಷಯಗಳು ॥

**ಸರಣ್ಯನ್— ಸರ್ವತ್ರ ಸರಣಂ ಗಮನಮಿಚ್ಛನ್ ।** ಎಲ್ಲಾ ಕಡೆಗಳಲ್ಲಿಯೂ ಗಮನವುಳ್ಳವನು ಎಂದರೆ ಅನೇಕ ಯಜಮಾನರು ಮಾಡುವ ಅನೇಕ ಯಜ್ಞಗಳಲ್ಲಿ ಅನೇಕ ರೂಪಗಳಿಂದ ಇರುವವನು; ಮತ್ತು ದೇವತೆಗಳಿಗೆ ದೂತನಾಗಿ ಯಜಮಾನರು ಅರ್ಪಿಸುವ ಹವಿರಾದಿಗಳನ್ನು ದೇವತೆಗಳಿಗೆ ಒಯ್ಯುವವನು ; ಅಥವಾ ವಿದ್ಯುದ್ರೂಪನಾದ ಅಗ್ನಿಯೆಂದು ಭಾವಿಸಿದರೆ ಅಂತರಿಕ್ಷದಲ್ಲಿ ನಾನಾಕಡೆಗಳಲ್ಲಿ ಸಂಚಾರವುಳ್ಳವನು ; ಸ್ವರ್ಗದಲ್ಲಿ ಆದಿತ್ಯರೂಪಿಯಾದ ಅಗ್ನಿಯೆಂದು ಭಾವಿಸಿದರೆ ಅಂತರಿಕ್ಷದಲ್ಲಿ ಪೂರ್ವದಿಕ್ಕಿನಿಂದ ಪಶ್ಚಿಮದಿಕ್ಕಿಗೆ ಸಂಚಾರಮಾಡುವವನು ಎಂದು ಸರಣ (ಗಮನ) ಶಬ್ದಕ್ಕೆ ಅನೇಕವಿಧವಾಗಿ ಅರ್ಥವನ್ನು ಹೇಳಬಹುದು

**ಅಸ್ಮೇ— ಅಸ್ಮೇ** ಎಂಬ ಶಬ್ದಕ್ಕೆ ಏಳು ವಿಭಕ್ತ್ಯರ್ಥಗಳನ್ನೂ ಹೇಳಬಹುದೆಂದು ಯಾಸ್ಕರು ಹೇಳಿ ಏಳು ವಿಭಕ್ತಿಗಳಿಗೂ ಉದಾಹರಣೆಗಳನ್ನು ಕೊಟ್ಟಿರುವರು (ನಿ. ೬-೭) ಈ ವಿಷಯವನ್ನು ನಾವು ಹಿಂದೆಯೇ ವಿವರಿಸಿದೇವೆ.



॥ ಸಂಹಿತಾಪಾಠಃ ॥

**ಏತಾ ತೇ ಅಗ್ನೇ ಜನಿಮಾ ಸನಾನಿ ಪ್ರ ಪೂರ್ವ್ಯಾಯ ನೂತನಾನಿ ವೋಚಂ ।**

**ಮಹಾಂತಿ ವೃಷ್ಣೇ ಸವನಾ ಕೃತೇಮಾ ಜನ್ಮಂಜನ್ಮನ್ ನಿಹಿತೋ ಜಾತವೇದಾಃ**

॥ ಪದಪಾಠಃ ॥

ಏತಾ । ತೇ । ಅಗ್ನೇ । ಜನಿಮ । ಸನಾನಿ । ಪ್ರ । ಪೂರ್ವ್ಯಾಯ । ನೂತನಾನಿ । ವೋಚಂ ।

ಮಹಾಂತಿ । ವೃಷ್ಣೇ । ಸವನಾ । ಕೃತಾ । ಇಮಾ । ಜನ್ಮನ್ಽಜನ್ಮನ್ । ನಿಽಹಿತಃ । ಜಾತಽವೇದಾಃ ॥೨೦॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಪೂರ್ವ್ಯಾಯ ಪುರಾತನಾಯ ತೇ ತುಭ್ಯಂ ಸನಾನಿ ಸನಾತನಾನಿ ಮಹದ್ಭಿಃ ಸಂಭಜನೀಯಾನಿ ವಾ ನೂತನಾನ್ಯನ್ಯೇಷ್ವವಿದ್ಯಮಾನಾನ್ಯದ್ಯತನಾನಿ ವೈತೈತಾನಿ ಜನಿಮ ಜನ್ಮಾನಿ ಕರ್ಮಾಣಿ ಸ್ತೋತ್ರಾಣಿ ವಾ ಪ್ರವೋಚಂ । ಜಾತವೇದಾ ಜಾತಪ್ರಜ್ಞೋ ಜಾತಧನೋ ವಾ ಜನ್ಮನ್ ಜನ್ಮನ್ । ಜಾಯಂತ ಇತಿ ಜನ್ಮಾನಃ । ತೇಷು ಸರ್ವೇಷು ಮನುಷ್ಯೇಷು ನಿಹಿತೋ ಯಾಗಾರ್ಥಂ । ತಸ್ಮೈ ವೃಷ್ಣೇ । ಸಂಪದಾಂ ವರ್ಷಿತ್ರೇಽಗ್ನಯ ಇಮೇಮಾನಿ ಸವನಾ ಸವನಾನಿ ಕೃತಾ । ಕೃತಾನಿ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಪೂರ್ವ್ಯಾಯ**—ಪುರಾತನನಾದ । **ತೇ**–ನಿನ್ನನ್ನುದ್ದೇಶಿಸಿ । **ಸನಾನಿ**—ಪೂಜ್ಯವಾದುವೂ (ಸನಾತನವಾದುವೂ) । **ನೂತನಾನಿ**—ನೂತನವಾಗಿ ನಿರ್ಮಿತವಾದುವೂ ಆದ । **ಏತಾ ಜನಿಮ**—ಈ ಸ್ತೋತ್ರಗಳನ್ನು । **ಪ್ರವೋಚಂ** — ಪಠಿಸುತ್ತೇನೆ । **ಜಾತವೇದಾಃ** — ಜಾತಪ್ರಜ್ಞನಾದ ಅಗ್ನಿಯು **ಜನ್ಮನ್ ಜನ್ಮನ್**—ಜನ್ಮವನ್ನು ಹೊಂದಿರುವ ಪ್ರತಿಮಾನವರಲ್ಲಿಯೂ (ಅಥವಾ ಪ್ರತಿಯೊಂದು ಜನ್ಮದಲ್ಲಿಯೂ ಮಾನವರಲ್ಲಿ) । **ನಿಹಿತಃ**—ಸ್ಥಾಪಿತನಾಗಿದ್ದಾನೆ । **ವೃಷ್ಣೇ**—ಕಾಮವರ್ಷಕನಾದ ಆ ಅಗ್ನಿಗೋಸ್ಕರ । **ಮಹಾಂತಿ**—ಮಹತ್ತ್ವವನ್ನು ಹೊಂದಿದ । **ಇಮಾ ಸವನಾ**—ಈ ಸ್ತುತಿಗಳು । **ಕೃತಾ**—ನಿರ್ಮಿತಗಳಾಗಿವೆ ।

॥ ಭಾವಾರ್ಥ ॥

ಎಲೈ ಅಗ್ನಿಯೇ, ಪುರಾತನನಾದ ನಿನ್ನನ್ನುದ್ದೇಶಿಸಿ ಸನಾತನವಾದವೂ, ನೂತನವಾಗಿ ನಿರ್ಮಿತವಾದವೂ ಆದ ಈ ಸ್ತೋತ್ರಗಳನ್ನು ಪಠಿಸುತ್ತೇನೆ. ಜಾತಪ್ರಜ್ಞನಾದ ಅಗ್ನಿಯು ಪ್ರತಿಮಾನವನಲ್ಲಿಯೂ ಸ್ಥಾಪಿತನಾಗಿದ್ದಾನೆ. ಕಾಮವರ್ಷಕನಾದ ಆ ಅಗ್ನಿಗೋಸ್ಕರ ಮಹತ್ವವನ್ನು ಹೊಂದಿದ ಈ ಸ್ತುತಿಗಳು ನಿರ್ಮಿತಗಳಾಗಿವೆ.

## English Translation.

I address to you, Agni, who are of old, these eternal as well as recent adorations: these solemn sacrifices are offerd to the showerer of benefits, who in every birth is established (amongst men), cognizant of all that exists.

॥ ವಿಶೇಷವಿಷಯಗಳು ॥

**ಜನಿಮ—ಕರ್ಮಾಣಿ ಸ್ತೋತ್ರಾಣಿ ವಾ** । **ಕರ್ಮ** ಅಥವಾ ಸ್ತೋತ್ರಗಳನ್ನು ಎಂದು ಭಾಷ್ಯಕಾರರು ಅರ್ಥವಿವರಣೆ ಮಾಡಿದಾರೆ. ಜನ್ಮ ಅಥವಾ ಜನಿಮ ಶಬ್ದಕ್ಕೆ ಯಾಸ್ಕರು **ಕರ್ಮಸೂದಯೇಷು** ಎಂದು ಹೇಳಿರುವುದ

ರಿಂದ (ನಿ. ೧೧–೨೩) ಉದಯವೆಂಬ ಅರ್ಥವನ್ನು ಹೇಳಬಹುದು. ಉದಯವೆಂದರೆ ಯಜ್ಞದಲ್ಲಿ ಅಗ್ನಿಯು ಅರಣಿಗಳಲ್ಲಿ ಉತ್ಪನ್ನನಾಗುವನು ಅಥವಾ ಉದಯವಾಗುವನು. ಇಂತಹ ಉದಯಗಳು ಅನೇಕ ಯಜ್ಞಗಳಲ್ಲಿ ನಡೆಯುವುದರಿಂದ ಅಗ್ನಿಯ ಉದಯ ಅಥವಾ ಉತ್ಪತ್ತಿಯು ಅನೇಕವಾಗಿರುವುದೆಂದು ಇಲ್ಲಿ ವರ್ಣಿಸಿದೆ. ಎಂದರೆ ಹಿಂದೆ ನಡೆದ ಅನೇಕ ಯಜ್ಞಗಳಲ್ಲಿಯೂ ಈಗ ನಡೆಯುತ್ತಿರುವ ಅನೇಕ ಯಜ್ಞಗಳಲ್ಲಿಯೂ ಅಗ್ನಿಯ ಉದಯವು ಅನೇಕ ವಾಗಿರುವವು ಎಂದಭಿಪ್ರಾಯವು.

**ಜನ್ಮನ್‌ಜನ್ಮನ್— ಜಾಯಂತೆ ಇತಿ ಜನ್ಮಾನಃ । ತೇಷು ಸರ್ವೇಷು ಮನುಷ್ಯೇಷು ।** ಮನುಷ್ಯರು ಮಾಡುವ ಸಮಸ್ತ ಯಜ್ಞಗಳಲ್ಲಿಯೂ ಅಗ್ನಿಯು ಅನೇಕಾವರ್ತಿ ಉತ್ಪನ್ನನಾಗುವನು ಎಂದರ್ಥವು.

**ಜಾತಾನಿ ವೇದ । ಜಾತಾನಿ ವೈನಂ ವಿದುಃ, ಜಾತೇ ಜಾತೇ ವಿದ್ಯತೆ ಇತಿ ವಾ ; ಜಾತವಿತ್ತೋ ವಾ ಜಾತಧನೋ ವಾ ಜಾತವಿದ್ಯೋ ವಾ ಜಾತಜ್ಞಾನಃ ।** ಉತ್ಪನ್ನವಾದ ಸಕಲವನ್ನೂ ತಿಳಿಯುವವನೆಂದಾಗಲಿ, ಅಥವಾ ಉತ್ಪನ್ನವಾದ ಸಕಲವೂ ಇವನನ್ನು ತಿಳಿಯುವುವು ಎಂದಾಗಲಿ, ಅಥವ ಉತ್ಪನ್ನವಾದ ಸಕಲವಸ್ತುಗಳಲ್ಲಿಯೂ ಆವರಿಸಿಕೊಂಡಿರುತ್ತಾನೆಂದಾಗಲಿ, ಅಥವಾ ಉತ್ಪನ್ನವಾದ ಸಕಲ ಧನವುಳ್ಳವನೆಂದಾಗಲಿ, ಅಥವಾ ಸಮಸ್ತವನ್ನೂ ತಿಳಿಯುವ ಪ್ರಜ್ಞೆಯುಳ್ಳವನೆಂದಾಗಲಿ ಅರ್ಥಮಾಡಬಹುದೆಂದು ನಿರುಕ್ತಕಾರರು ವಿವರಿಸಿದ್ದಾರೆ. (ನಿ. ೭–೧೯) **ಬೃಹದ್ದೇವತೆಯಲ್ಲಿಯೂ** ಸಹ **ಜಾತವೇದಸ್ಸಿನ** ಸ್ವರೂಪ ಮತ್ತು ಸ್ಥಾನಗಳನ್ನು ವಿಶದವಾಗಿ ತಿಳಿಸಿದ್ದಾರೆ—

**ಇಹಾಗ್ನಿಭೂತಸ್ತ್ವೃಷಿಭಿರ್ಲೋಕೇ ಸ್ತುತಿಭಿರೀಳಿತಃ ।**
**ಜಾತವೇದಾಃ ಸ್ತುತೋ ಮಧ್ಯೇ ಸ್ತುತೋ ವೈಶ್ವಾನರೋ ದಿವಿ ॥**
(ಬೃ. ದೇ. ೧–೬೭)

ಋಷಿಗಳು ಪೃಥ್ವಿಯ ಮೇಲಿರುವ ಅಗ್ನಿಯನ್ನು ಅಗ್ನಿಯೆಂದೂ, ಮಧ್ಯಲೋಕದಲ್ಲಿರುವ ಅಗ್ನಿಯನ್ನು **ಜಾತವೇದ** ಸ್ಸೆಂದೂ, ದ್ಯುಲೋಕದಲ್ಲಿರುವವನನ್ನು **ವೈಶ್ವಾನರ**ನೆಂದೂ ಕರೆಯುತ್ತಾರೆಂದು ಈ ಶ್ಲೋಕದಲ್ಲಿ ಹೇಳಿ ಇದೇ ಭಾವ ವನ್ನು ಮುಂದುವರಿಸುತ್ತಾ,

**ವೈಶ್ವಾನರಂ ಶ್ರಿತೋ ಹ್ಯಗ್ನಿರಗ್ನಿಂ ವೈಶ್ವಾನರಃ ಶ್ರಿತಃ ।**
**ಅನಯೋರ್ಜಾತವೇದಾಸ್ತು ತಥೈತೇ ಜಾತವೇದಸಿ ॥**
(ಬೃ. ದೇ. ೧–೯೭)

ಅಗ್ನಿಯು ವೈಶ್ವಾನರನಲ್ಲಿಯೂ, ವೈಶ್ವಾನರನು ಅಗ್ನಿಯಲ್ಲಿಯೂ ಅಡಕವಾಗಿ, **ಜಾತವೇದಸ್ಸು** ಇವೆರಡರಲ್ಲಿಯೂ ಅಡಕವಾಗಿದ್ದಾನೆಂದೂ, ಇವೆರಡೂ **ಜಾತವೇದಸ್ಸಿನ** ಎರಡು ಅಂಶಗಳೆಂದೂ ವಿವರಿಸಿದೆ. ಹೀಗೆ ಮೊದಲನೇ ಅಧ್ಯಾಯದಲ್ಲಿ **ಜಾತವೇದಸ್ಸಿನ** ಸ್ಥಾನಗಳನ್ನು ಹೇಳಿ ಎರಡನೇ ಅಧ್ಯಾಯದಲ್ಲಿ ಸ್ವರೂಪನಿರ್ವಚನವನ್ನು ಮಾಡಿದೆ.

**ಭೂತಾನಿ ವೇದ ಯಜ್ಜಾತೋ ಜಾತವೇದಾಥ ಕಥ್ಯತೇ ।**
**ಯಚ್ಚೈಷ ಜಾತವಿದ್ಯೋಽಭೂತ್ ವಿತ್ತಂ ಜಾತೋಽಧಿವೇತ್ತಿ ವಾ ॥**
(ಬೃ. ದೇ. ೨–೩೦)

**ವಿದ್ಯತೇ ಸರ್ವಭೂತೈರ್ಹಿ ಯದ್ವಾ ಜಾತಃ ಪುನಃ ಪುನಃ ।**
**ತೇನೈಷ ಮಧ್ಯಭಾಗೇಂದ್ರೋ ಜಾತವೇದಾ ಇತಿ ಸ್ತುತಃ ॥**
(ಬೃ. ದೇ. ೨-೩೧)

ಉತ್ಪನ್ನವಾಗುವಾಗಲೇ ಸಕಲವನ್ನೂ ತಿಳಿದಿರುವುದರಿಂದಲೂ ಅಥವಾ ಜ್ಞಾನವು ಅವನಲ್ಲೇ ಉತ್ಪನ್ನವಾದುದರಿಂದಲೂ ಅಥವಾ ಉತ್ಪನ್ನನಾದಾಗಲೇ ಸಕಲ ಧನವನ್ನೂ ತಿಳಿದು ಹೊಂದುವುದರಿಂದಲೂ, ಅಥವಾ ಪುನಃ ಪುನಃ ಉತ್ಪನ್ನನಾದಾಗಲೆಲ್ಲಾ ಸಕಲ ಭೂತಗಳಿಂದಲೂ ತಿಳಿಯಲ್ಪಡುವನಾದುದರಿಂದಲೂ, ಮಧ್ಯಲೋಕವಾಸಿಯಾದ **ಇಂದ್ರನಂತೆ ಜಾತವೇದಸ್ಸೆಂದು** ಅಗ್ನಿಯು ಸ್ತುತನಾಗಿದ್ದಾನೆಂದು **ಬೃಹದ್ದೇವತೆಯು** ನಿರ್ವಚನವಿದೆ. ಇದರಂತೆಯೇ **ಶತಪಥಬ್ರಾಹ್ಮಣ**ದಲ್ಲಿಯೂ ಸಹ,

**ಯಃ ಸಂವತ್ಸರಂ ಜಾತಃ ಸ್ಯಾತ್ಪ್ರಾಣೋ ವಾ ಅಗ್ನಿಸ್ತನೋತದ್ವಿಭರ್ತ್ಯಥ ಹ ವೈ ರೇತಃ ಸಿಕ್ತಂ ಪ್ರಾಣೋಽನ್ವವರೋಹತಿ ತದ್ವಿಂದತೇ ತದ್ಯಜ್ಜಾತಂ ಜಾತಂ ವಿಂದತೇ ತಸ್ಮಾಜ್ಜಾತವೇದಾಃ ॥**
(ಶ. ಬ್ರಾ. ೯-೫-೧೬-೮)

ಪ್ರಾಣರೂಪಿಯಾದ **ಅಗ್ನಿಯು** ಉತ್ಪನ್ನವಾದ ಸಕಲ ಭೂತಗಳನ್ನೂ ತನ್ನ ಶಕ್ತಿಯಿಂದ ವ್ಯಾಪಿಸಿಕೊಳ್ಳುವುದರಿಂದ **ಜಾತವೇದಸ್ಸೆಂದು** ಕರೆಯಲ್ಪಟ್ಟಿದೆ ಎಂದು ಹೇಳಿದೆ. ಯಜ್ಞಗೃಹದಲ್ಲಿ ಪೂಜಿಸಲ್ಪಡತಕ್ಕ ಈ ಜಾತವೇದಸ್ಸೇ ವಿಶ್ವಾತ್ಮನಾದ ಬ್ರಹ್ಮನೆಂದೂ ಉಪನಿಷತ್ತುಗಳಲ್ಲಿ ವರ್ಣಿಸಿದೆ.

**ವಿಶ್ವರೂಪಂ ಹರಿಣಂ ಜಾತವೇದಸಂ ಪರಾಯಣಂ ಜ್ಯೋತಿರೇಕಂ ತಪಂತಂ ।**
(ಪ್ರಶ್ನೋಪನಿಷತ್. ೧-೮)

ವಿಶ್ವರೂಪನೂ, ಸಹಸ್ರರಶ್ಮಿಗಳುಳ್ಳವನೂ, ಸರ್ವಜ್ಞನೂ, ಲೋಕಕ್ಕೆಲ್ಲಾ ಆಶ್ರಯನಾದವನೂ ಮತ್ತು ಜ್ಞಾನಿಗಳಿಂದ ಅರಿಯಲ್ಪಟ್ಟವನೂ ಸಕಲ ಭೂತಗಳಿಗೂ ಅಂತರಾತ್ಮನಾಗಿರುವವನೂ ಆದ ಸೂರ್ಯನು ಉದಯಿಸುತ್ತಾನೆಂದು ಪ್ರಶ್ನೋಪನಿಷತ್ತಿನಲ್ಲಿಯೂ,

**ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವ ಸುಭೃತೋ ಗರ್ಭಿಣೀಭಿಃ ।**
**ದಿವೇದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ॥**
(ಕಠೋಪನಿಷತ್. ೧-೪-೮)

ಯಾವ ಜಾತವೇದಸ್ಸು ಅರಣಿಗಳ ನಡುವೆ ಅಧಿಯಜ್ಞದಲ್ಲಿದ್ದುಕೊಂಡು ಎಲ್ಲಾ ಹವಿಸ್ಸುಗಳನ್ನೂ ಭೋಗಿಸುವನೋ, ಗರ್ಭಿಣೀಸ್ತ್ರೀಯರು ಮಮತೆಯಿಂದ ತಮ್ಮ ಗರ್ಭಗಳನ್ನು ಪೋಷಿಸಿ ಬೆಳೆಸುವಂತೆ ಯಾವ ಪರಮಪುರುಷನನ್ನು ಯೋಗಿಗಳು ತಮ್ಮ ಹೃದಯದಲ್ಲಿಟ್ಟುಕೊಂಡು ಧ್ಯಾನಮಾಡುವರೋ ಮತ್ತು ಯಾವ ಪೂಜ್ಯನಾದ ಅಗ್ನಿಯನ್ನುದ್ದೇಶಿಸಿ ಯಜ್ಞಕರ್ತರು ಹವಿಸ್ಸುಗಳನ್ನರ್ಪಿಸುವರೋ ಆ **ಜಾತವೇದಸ್ಸೇ** ವಿಶ್ವಾತ್ಮನಾದ **ಪರಬ್ರಹ್ಮ** ಎಂದು ಕಠೋಪನಿಷತ್ತಿನಲ್ಲಿಯೂ ವರ್ಣಿಸಿದೆ.

**ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವ ಸುಧಿತೋ ಗರ್ಭಿಣೀಷು ।**
**ದಿವೇದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ॥**
(ಋ. ಸಂ. ೩-೨೯-೨)

ಎಂದು ಋಕ್ಸಂಹಿತೆಯಲ್ಲಿ ವರ್ಣಿಸಿರುವಂತೆಯೇ ಕಠೋಪನಿಷತ್ತಿನಲ್ಲಿಯೂ ವರ್ಣಿಸಿದೆ. ಹೀಗೆ ಸರ್ವಜ್ಞನೂ, ಸರ್ವವ್ಯಾಪಿಯೂ, ಸರ್ವಧನವುಳ್ಳವನೂ, ಸರ್ವೋತ್ಕೃಷ್ಟನೂ ಆದುದರಿಂದ **ಜಾತವೇದಸ್ಸೆಂದು** ಕರೆಯಲ್ಪಡುತ್ತಾನೆಂದು ಎಲ್ಲಾ ಶ್ರುತಿಗಳೂ ಸ್ತುತಿಸಿವೆ.

॥ ಸಂಹಿತಾಪಾಠಃ

ಜನ್ಮಂಜನ್ಮನ್ ನಿಹಿತೋ ಜಾತವೇದಾ ವಿಶ್ವಾಮಿತ್ರೇಭಿರಿಧ್ಯತೇ ಅಜಸ್ರಃ ।
ತಸ್ಯ ವಯಂ ಸುಮತೌ ಯಜ್ಞಿಯಸ್ಯಾಪಿ ಭದ್ರೇ ಸೌಮನಸೇ ಸ್ಯಾಮ ॥ ೨೧ ॥

ಪದಪಾಠಃ ॥

ಜನ್ಮನ್ऽಜನ್ಮನ್ । ನಿऽಹಿತಃ । ಜಾತऽವೇದಾಃ । ವಿಶ್ವಾಮಿತ್ರೇಭಿಃ । ಇಧ್ಯತೇ । ಅಜಸ್ರಃ ।
ತಸ್ಯ । ವಯಂ । ಸುऽಮತೌ । ಯಜ್ಞಿಯಸ್ಯ । ಅಪಿ । ಭದ್ರೇ । ಸೌಮನಸೇ । ಸ್ಯಾಮ ॥ ೨೧ ॥

॥ ಸಾಯಣಭಾಷ್ಯಂ ॥

ಜನ್ಮನ್ ಜನ್ಮನ್ ಸರ್ವೇಷು ಮನುಷ್ಯೇಷು ನಿಹಿತೋ ಜಾತವೇದಾ ವಿಶ್ವಾಮಿತ್ರೇಭಿರ್ವಿಶ್ವಾಮಿತ್ರೈಃ। ಪೂಜಾಯಾಂ ಬಹುವಚನಂ। ಮಹರ್ಷಿಣಾ ವಿಶ್ವಾಮಿತ್ರೇಣ ಯೋ ಜಾತವೇದಾ ಅಜಸ್ರೋऽಜಸ್ರಮನವರತಮಿಧ್ಯತೇ । ದೀಪ್ಯತೇ । ಸುಮತೌ ವರ್ತಮಾನಾ ವಯಂ ತಸ್ಯ ಯಜ್ಞಿಯಸ್ಯ ಯಜ್ಞಾರ್ಹಸ್ಯಾಗ್ನೇರ್ಭದ್ರೇ ಭಜನೀಯೇ ಸೌಮನಸೇ ಸುಮನೋಭಾವೇऽನುಗ್ರಹಬುದ್ಧಾವಪಿ ಸ್ಯಾಮ । ಅಪಿ ಭವೇಮ । ಪ್ರಾರ್ಥನಾಯಾಂ ಲಿಙ್ ॥

॥ ಪ್ರತಿಪದಾರ್ಥ ॥

**ಜನ್ಮನ್ ಜನ್ಮನ್**—ಪ್ರತಿಮಾನವರಲ್ಲಿಯೂ (ಅಥವಾ ಪ್ರತಿಯೊಂದು ಉತ್ಪತ್ತಿಕಾಲದಲ್ಲಿಯೂ) । **ನಿಹಿತಃ**—ಸ್ಥಾಪಿತನಾದ । **ಜಾತವೇದಾಃ**—ಜಾತಪ್ರಜ್ಞನಾದ ಅಗ್ನಿಯು । **ವಿಶ್ವಾಮಿತ್ರೇಭಿಃ**—ವಿಶ್ವಾಮಿತ್ರ ಋಷಿಗಳಿಂದ ಅಥವಾ ಅವನ ವಂಶಸ್ಥರಿಂದ । **ಅಜಸ್ರಃ**—ಅನುಸ್ಯೂತವಾಗಿ । **ಇಧ್ಯತೇ**—ಪ್ರಜ್ವಲಿಸಲ್ಪಡುತ್ತಾನೆ । **ಸುಮತೌ**—ಉತ್ತಮವಾದ ಪ್ರಜ್ಞೆಯಿಂದ ಕೂಡಿದವರಾಗಿ । **ವಯಂ**—ನಾವು । **ಯಜ್ಞಿಯಸ್ಯ**—ಯಜ್ಞಾರ್ಹನಾದ । **ತಸ್ಯ**—ಆ ಅಗ್ನಿಯ । **ಭದ್ರೇ**—ಕಲ್ಯಾಣಾತ್ಮಕವಾದುದೂ । **ಸೌಮನಸೇ**—ಅನುಗ್ರಹಾತ್ಮಕವಾದುದೂ ಆದ ಬುದ್ಧಿಯ ಆಶ್ರಯದಲ್ಲಿ । **ಅಪಿ ಸ್ಯಾಮ**—ಇರುವಂತಾಗಲಿ.

॥ ಭಾವಾರ್ಥ ॥

ಪ್ರತಿಯೊಂದು ಉತ್ಪತ್ತಿಕಾಲದಲ್ಲಿಯೂ ಮಾನವರಲ್ಲಿ ಸ್ಥಾಪಿತನಾದವನೂ, ಜಾತಪ್ರಜ್ಞನೂ ಆದ ಅಗ್ನಿಯು ವಿಶ್ವಾಮಿತ್ರಋಷಿಗಳಿಂದ ಅಥವಾ ಅವನ ವಂಶಸ್ಥರಿಂದ ಅನುಸ್ಯೂತವಾಗಿ ಪ್ರಜ್ವಲಿಸಲ್ಪಡುತ್ತಾನೆ. ನಾವು ಉತ್ತಮವಾದ ಪ್ರಜ್ಞೆಯಿಂದ ಕೂಡಿದವರಾಗಿ ಯಜ್ಞಾರ್ಹನಾದ ಅಗ್ನಿಯ ಕಲ್ಯಾಣಾತ್ಮಕವಾದುದೂ, ಅನುಗ್ರಹಾತ್ಮಕವಾದುದೂ ಆದ ಬುದ್ಧಿಯ ಆಶ್ರಯದಲ್ಲಿರುವಂತಾಗಲಿ.

## English Translation.

The undecaying Jatavedas, who in every birth is established (amongst men), is kindled by the Vishwamitras: may we, (enjoying) his favour, ever be (held) in the auspicious good-will of that adorable (deity).

॥ ವಿಶೇಷವಿಷಯಗಳು ॥

**ವಿಶ್ವಾಮಿತ್ರೇಭಿಃ—ವಿಶ್ವಾಮಿತ್ರೈಃ । ಪೂಜಾಯಾಂ ಬಹುವಚನಂ ।** ಇಲ್ಲಿ ವಿಶ್ವಾಮಿತ್ರಶಬ್ದವು ವಿಶ್ವಾಮಿತ್ರಋಷಿಗೆ ಇರುವ ಪೂಜ್ಯಭಾವವನ್ನು ಸೂಚಿಸುವುದಕ್ಕಾಗಿ ಬಹುವಚನದಲ್ಲಿ ಪ್ರಯೋಗಿಸಿದೆಯೆಂದು ಭಾಷ್ಯಕಾರರ ವಿವರಣೆಯು—ಇದಲ್ಲದೆ ವಿಶ್ವಾಮಿತ್ರ ಮತ್ತು ಅವನ ಸಂತತಿಯವರು, ಸಂಬಂಧಿಗಳು, ಅನುಯಾಯಿಗಳು ಮೊದಲಾದವರಿಂದ ಎಂಬ ಅರ್ಥವೇ ಸಮಂಜಸವಾಗಿರುವುದು.

॥ ಸಂಹಿತಾಪಾಠಃ ॥

**ಇಮಂ ಯಜ್ಞಂ ಸಹಸಾವನ್ ತ್ವಂ ನೋ ದೇವತ್ರಾ ಧೇಹಿ ಸುಕ್ರತೋ ರರಾಣಃ ।**
**ಪ್ರ ಯಂಸಿ ಹೋತರ್ಬೃಹತೀರಿಷೋ ನೋಽಗ್ನೇ ಮಹಿ ದ್ರವಿಣಮಾ ಯಜಸ್ವ ॥ ೨೨ ॥**

ಪದಪಾಠಃ ॥

**ಇಮಂ । ಯಜ್ಞಂ । ಸಹಸಾಽವನ್ । ತ್ವಂ । ನಃ । ದೇವಽತ್ರಾ । ಧೇಹಿ । ಸುಕ್ರತೋ ಇತಿ ಸುಽಕ್ರತೋ । ರರಾಣಃ**

**ಪ್ರ । ಯಂಸಿ । ಹೋತಃ । ಬೃಹತೀಃ । ಇಷಃ । ನಃ । ಅಗ್ನೇ । ಮಹಿ । ದ್ರವಿಣಂ । ಆ । ಯಜಸ್ವ ॥ ೨೨ ॥**

॥ ಸಾಯಣಭಾಷ್ಯಂ ॥

**ಹೇ ಸಹಸಾವನ್ ಸಹಸ್ವನ್ ಬಲವನ್ ಸುಕ್ರತೋ ಶೋಭನಕರ್ಮನ್ ಹೇ ಅಗ್ನೇ ರರಾಣಃ ಸರ್ವದಾ ರಮಮಾಣಃ ಶಬ್ದಂ ಕುರ್ವಾಣೋ ವಾ ತ್ವಂ ನೋಽಸ್ಮದೀಯಮಿಮಂ ಯಜ್ಞಂ ದೇವತ್ರಾ ದೇವೇಷು ಧೇಹಿ। ನಿಧೇಹಿ। ಹೇ ಹೋತರ್ದೇವಾನಾಮಾಹ್ವಾತಃ ಬೃಹತೀರಿಷೋಽನ್ನಾನಿ ನೋಽಸ್ಮಭ್ಯಂ ಪ್ರಯಂಸಿ। ಪ್ರಯಚ್ಛ। ಹೇ ಅಗ್ನೇ ಮಹಿ ಮಹದ್ದ್ರವಿಣಂ ಪಶ್ವಾದಿಲಕ್ಷಣಂ ಧನಮಾಯಜಸ್ವ। ಪ್ರಯಚ್ಛ। ಅತ್ರ ಯಜಿರ್ದಾನಕರ್ಮಾ ॥**

॥ ಪ್ರತಿಪದಾರ್ಥ ॥

**ಸಹಸಾವನ್**—ಶಕ್ತಿವಂತನೂ। **ಸುಕ್ರತೋ**—ಶ್ರೇಷ್ಠವಾದ ಕರ್ಮವುಳ್ಳವನೂ ಆದ ಎಲೈ ಅಗ್ನಿಯೇ। **ರರಾಣಃ**—ಯಾವಾಗಲೂ ವಿಹರಿಸುತ್ತಾ। **ತ್ವಂ**—ನೀನು। **ನಃ**—ನಮ್ಮ। **ಯಜ್ಞಂ**—ಯಜ್ಞವನ್ನು। **ದೇವತ್ರಾ**—ದೇವತೆಗಳಲ್ಲಿ। **ಧೇಹಿ**—ಸ್ಥಾಪಿಸು। **ಹೋತಃ**—ದೇವತೆಗಳಿಗೆ ಆಹ್ವಾನವನ್ನು ಕೊಡುವ ಎಲೈ ಅಗ್ನಿಯೇ। **ಬೃಹತೀಃ**—ಪ್ರಭೂತವಾದ। **ಇಷಃ**—ಅನ್ನಗಳನ್ನು। **ನಃ**—ನಮಗೆ। **ಪ್ರ ಯಂಸಿ**—ಕೊಡು। **ಅಗ್ನೇ**—ಎಲೈ ಅಗ್ನಿಯೇ। **ಮಹಿ**—ಮಹತ್ತಾದ। **ದ್ರವಿಣಂ**—ಪಶ್ವಾದಿರೂಪವಾದ ಧನವನ್ನು। **ಆ ಯಜಸ್ವ**—ಅನುಗ್ರಹಿಸಿ ಕೊಡು.

॥ ಭಾವಾರ್ಥ ॥

ಶಕ್ತಿವಂತನೂ, ಶ್ರೇಷ್ಠವಾದ ಕರ್ಮವುಳ್ಳವನೂ ಆದ ಎಲೈ ಅಗ್ನಿಯೇ, ಯಾವಾಗಲೂ ನೀನು ವಿಹರಿಸುತ್ತಾ. ನಮ್ಮ ಯಜ್ಞವನ್ನು ದೇವತೆಗಳಲ್ಲಿ ಸ್ಥಾಪಿಸು. ದೇವತೆಗಳಿಗೆ ಆಹ್ವಾನವನ್ನು ಕೊಡುವ ಎಲೈ ಅಗ್ನಿಯೇ, ಪ್ರಭೂತವಾದ ಅನ್ನಗಳನ್ನು ನಮಗೆ ಒದಗಿಸು. ಎಲೈ ಅಗ್ನಿಯೇ, ಮಹತ್ತಾದುದೂ, ಪಶ್ವಾದಿರೂಪವುಳ್ಳದ್ದೂ ಆದ ಧನವನ್ನು ಅನುಗ್ರಹಿಸಿ ಕೊಡು.

## English Translation.

Powerful Agni, (fulfiller) of good works, eonvey, rejoicing, this our sacrifice towards the gods: Invoker of the gods, bestow upon as abundant food ; grant us, Agni, great wealth.

॥ ವಿಶೇಷವಿಷಯಗಳು ॥

**ಸಹಸಾವನ್**—ಸಹಃಶಬ್ದವು ಬಲನಾಮಗಳಲ್ಲಿ ಪಠಿತವಾಗಿದೆ. (ನಿ ೩-೯) **ಸಹಸಾವನ್** ಎಂದರೆ ಬಲವುಳ್ಳ ಎಲೈ ಅಗ್ನಿಯೇ ಎಂದು ಅಗ್ನಿಯನ್ನು ಸಂಬೋಧಿಸಲಾಗಿದೆ. ಅಗ್ನಿಮಥನಕಾಲದಲ್ಲಿ ಬಲಪ್ರಯೋಗಮಾಡಿ ಅಗ್ನಿಯನ್ನು ಉತ್ಪತ್ತಿಮಾಡುವುದರಿಂದ ಬಲವುಳ್ಳವನು ಎಂದೂ ಅರ್ಥವನ್ನು ಹೇಳಬಹುದು.

**ದ್ರವಿಣಂ**—ದ್ರವಿಣಶಬ್ದವು ಧನನಾಮಗಳಲ್ಲಿ ಪಠಿತವಾಗಿರುವುದರಿಂದ **ದ್ರವಿಣಂ** ಎಂದರೆ ಧನವನ್ನು ಎಂದರ್ಥವು (ನಿ. ೩-೯).

ಸಂಹಿತಾಪಾಠಃ

ಇಳಾಮಗ್ನೇ ಪುರುದಂಸಂ ಸನಿಂ ಗೋಃ ಶಶ್ವತ್ತಮಂ ಹವಮಾನಾಯ ಸಾಧ ।
ಸ್ಯಾನ್ನಃ ಸೂನುಸ್ತನಯೋ ವಿಜಾವಾಗ್ನೇ ಸಾ ತೇ ಸುಮತಿರ್ಭೂತ್ವಸ್ಮೇ ॥ ೨೩ ॥

॥ ಪದಪಾಠಃ ॥

ಇಳಾಂ । ಅಗ್ನೇ । ಪುರುऽದಂಸಂ । ಸನಿಂ । ಗೋಃ । ಶಶ್ವತ್ऽತಮಂ । ಹವಮಾನಾಯ । ಸಾಧ ।
ಸ್ಯಾತ್ । ನಃ । ಸೂನುಃ । ತನಯಃ । ವಿಜಾऽವಾ । ಅಗ್ನೇ । ಸಾ । ತೇ । ಸುऽಮತಿಃ । ಭೂತು । ಅಸ್ಮೇ ಇತಿ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಪುರುದಂಸಂ । ಅಪೋऽಪ್ನೋ ದಂಸೋ ವೇಷ ಇತಿ ಕರ್ಮನಾಮಸು ಪಠಿತತ್ವಾದ್ದಂಸಃಶಬ್ದಃ ಕರ್ಮವಾಚೀ । ಪುರೂಣಿ ಬಹೂನಿ ದಂಸಾಂಸಿ ಕರ್ಮಾಣಿ ಯಸ್ಯಾಃ ಸಾ । ತಾಂ ಬಹುಕರ್ಮಾಣಂ ಗೋಃ ಸನಿಂ ಗವಾದಿಪಶೂನ್ಸಂಪಾದಯಿತ್ರೀಮಿಳಾಮೇತನ್ನಾಮಿಕಾಂ ಗೋರೂಪಾಂ ದೇವತಾಂ ಶಶ್ವತ್ತಮಂ ನಿರಂತರಂ ಹವಮಾನಾಯ ಯಜಮಾನಾಯ ಮಹ್ಯಂ ಸಾಧ । ಸಾಧಯ। ಕಿಂಚ ನೋऽಸ್ಮಾಕಂ ಸೂನುಃ ಪುತ್ರಸ್ತನಯಃ ಪೌತ್ರಃ ಸ್ಯಾದ್ಭವತ್ವಿತಿ ತೇ ತವ ಯಾ ಸುಮತಿಃ ಶೋಭನಾ ಬುದ್ಧಿಃ ಸಾ ವಿಜಾವಾಬಂಧ್ಯಾ ಸತ್ಯಸ್ಮೇ ಅಸ್ಮಾಕಂ ಭೂತು । ಭವತು ॥ ಶಶ್ವತ್ತಮಂ ಉಚ್ಛಾದಿಷು ಪಾಠಾದಂತೋದಾತ್ತತ್ವಂ । ಸಾಧ । ರಾಧ ಸಾಧ ಸಂಸಿದ್ಧೌ । ಅಂತರ್ಭಾವಿತಣ್ಯರ್ಥೋऽಯಂ । ಲೋಟಿ ವ್ಯತ್ಯಯೇನ ಶಪ್ । ಸೇರ್ಹ್ಯಪಿಚ್ಚೇತಿ ಹಿರಾದೇಶಃ । ತಸ್ಯಾತೋ ಹೇರಿತಿ ಲುಕ್ । ನಿಘಾತಃ । ವಿಜಾವಾ । ಜನೀ ಪ್ರಾದುರ್ಭಾವೇ । ಅಸ್ಮಾದನ್ಯೇಭ್ಯೋऽಪಿ ದೃಶ್ಯಂತ ಇತಿ ವನಿಪ್ । ವಿಡ್ವನೋರನುನಾಸಿಕಸ್ಯಾದಿತ್ಯಾತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ । ಲಿಂಗವ್ಯತ್ಯಯಃ ಭೂತು । ಭೂ ಸತ್ತಾಯಾಂ । ಬಹುಲಂ ಛಂದಸೀತಿ ಶಪೋ ಲುಕ್ । ಭೂಸುವೋಸ್ತಿಙೀತಿ ಗುಣಪ್ರತಿಷೇಧಃ ॥

॥ ಪ್ರತಿಪದಾರ್ಥ ॥

(ಹೇ) **ಅಗ್ನೇ**—ಎಲೈ ಅಗ್ನಿಯೇ । **ಪುರುದಂಸಂ**—ಅನೇಕ ಕರ್ಮವಿಶಿಷ್ಟವೂ । **ಗೋಃ ಸನಿಂ**—ಗವಾದಿ ಪಶುಗಳನ್ನು ಒದಗಿಸುವವಳೂ (ಆದ) । **ಇಳಾಂ**—ಗೋರೂಪಳಾದ ಇಳಾನಾಮಕ ದೇವತೆಯನ್ನು । **ಶಶ್ವತ್ತಮಂ**—ನಿರಂತರವೂ । **ಹವಮಾನಾಯ**—ಯಾಗಾನುಷ್ಠಾನ ಮಾಡುತ್ತಿರುವ ನನಗೆ । **ಸಾಧ**—ಸಾಧಿಸು (ಅನುಗ್ರಹಿಸು) (ಮತ್ತು) । **ನಃ**—ನಮಗೆ । **ಸೂನುಃ**—ಪುತ್ರನೂ । **ತನಯಃ**—ಪೌತ್ರನೂ । **ಸ್ಯಾತ್**—ಆಗಲಿ (ಎಂಬುದಾಗಿ) । **(ಹೇ) ಅಗ್ನೇ**—ಎಲೈ ಅಗ್ನಿಯೇ । **ತೇ**—ನಿನ್ನ । **(ಯಾ) ಸುಮತಿಃ**—ಯಾವ ಶೋಭನವಾದ ಬುದ್ಧಿಯಿದೆಯೋ । **ಸಾ**—ಅದು । **ಅಸ್ಮೇ**—ನಮಗೋಸ್ಕರ । **ವಿಜಾವಾ**—ಅವಂಧ್ಯವು । **ಭೂತು**—ಆಗಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಅನೇಕ ಕರ್ಮಗಳಿಗೆ ಸಹಾಯಕವಾಗುವ ಗವಾದಿ ಪಶುಗಳನ್ನು ಕೊಡುವವಳೂ, ಇಳಾನಾಮಕಳೂ, ಗೋರೂಪಳೂ ಆದ ಭೂಮಿಯು, ನಿರಂತರ ಯಾಗಾಚರಣೆಯಲ್ಲಿ ನಿರತರಾದ ನಮಗೆ ಅನುಕೂಲಿಸುವಂತೆ ಮಾಡು; ಮತ್ತು ಎಲೈ ಅಗ್ನಿಯೇ, ಸ್ತೋತೃಗಳಿಗೆ ಪುತ್ರಪೌತ್ರಾದಿಗಳನ್ನನುಗ್ರಹಿಸಬೇಕೆಂಬ ನಿನ್ನ ಶುಭವಾದ ಮತಿಯು ನಮಗೆ ಯಾವಾಗಲೂ ಅವಂಧ್ಯವಾಗಲಿ (ಸಫಲವಾಗಲಿ).

## English Translation.

Grant, Agni, to the offerer of the oblation, the earth, the bestower of cattle, the means of many (pious rites), such that it may be perpetual : may there be to us sons and grandsons, born in our race, and may your good-will ever be productive of benefits to us.

॥ ವಿಶೇಷವಿಷಯಗಳು ॥

**ಪುರುದಂಸಂ—ಪುರೂಣಿ ಬಹೂನಿ ದಂಸಾನಿ ಕರ್ಮಾಣಿ ಯಸ್ಯಾಃ ಸಾ । ಅಪ್ನಃ ದಂಸಃ** ಎಂಬ ಇಪ್ಪತ್ತಾರು ಕರ್ಮನಾಮಗಳಲ್ಲಿ (ನಿ. ೩-೨) **ದಂಸ** ಶಬ್ದವು ಉಕ್ತವಾಗಿರುತ್ತದೆ. ಬಹಳ ·ಕರ್ಮಗಳುಳ್ಳದ್ದೆಂದು ಅರ್ಥ.

**ಗೋಃ ಸನಿಂ—ಗವಾದಿಪಶೂನಾಂ ಸಂಪಾದಯಿತ್ರೀಂ ।** ಗೋಶಬ್ದಕ್ಕೆ ಪೃಥಿವೀ, ವಾಕ್ಕು, ಪಶು, ರಶ್ಮಿ ಎಂದು ಅನೇಕಾರ್ಥಗಳು ಇರುವುವು. ಗೋಃ ಸನಿಂ ಎಂಬ ಪದಗಳು ಇಳಾ ಎಂಬ ಪದಕ್ಕೆ ವಿಶೇಣವಾಗಿರುವುದರಿಂದ ಇಳಾದೇವತೆಯು ಗೋವುಗಳೇ . ಮೊದಲಾದವುಗಳೆಲ್ಲವನ್ನೂ ಅನುಗ್ರಹಿಸುವಳೆಂದು ಅರ್ಥವನ್ನು ವರ್ಣಿಸಿದೆ.

**ಇಳಾಂ—ಏತನ್ನಾಮಿಕಾಂ ಗೋರೂಪಾಂ ದೇವತಾಂ ।** ಪೃಥಿವೀನಾಮಗಳಲ್ಲಿ ಇಳಾ ಪದವು (ನಿ. ೧-೫) ಉಕ್ತವಾಗಿದೆ. ವಾಙ್ನಾಮಗಳಲ್ಲಿಯೂ, (ನಿ. ೧-೨೩) ಅನ್ನನಾಮಗಳಲ್ಲಿಯೂ, (ನಿ. ೩-೯) ಗೋನಾಮಗಳಲ್ಲಿಯೂ (ನಿ. ೩-೬) ಉಕ್ತವಾಗಿದೆ. ಮತ್ತು ಇಳಾ ಎಂಬ ಪದವು ಈಶ ಧಾತುವಿನಿಂದ ನಿಷ್ಪನ್ನವಾಗಿದೆ.

**ಅಭಿನ ಇಳಾ ಯೂಥಸ್ಯ ಮಾತಾ ಸ್ಮನ್ನದೀಭಿರುರ್ವಶೀ ವಾ ಗೃಣಾತು ।**
**ಉರ್ವಶೀ ವಾ ಬೃಹದ್ದಿವಾ ಗೃಣಾನಾಭ್ಯೂರ್ಣ್ವಾನಾ ಪ್ರಭೃಥಸ್ಯಾಯೋಃ ।**
**ಸಿಷಕ್ತು ನ ಊರ್ಜವ್ಯಸ್ಯ ಪುಷ್ಟೇಃ ॥**

(ಋ. ಸಂ. ೫-೪೧-೧೯, ೨೦)

ಈ ಋಕ್ಕುಗಳಲ್ಲಿ ಇಳಾ ಅಥವಾ ಇಡಾ ಎಂಬ ದೇವಿಯು ಮಧ್ಯಮಸ್ಥಾನದೇವತೆಯೆಂದು ವಿವೃತವಾಗಿದೆ ಸಾಯಣರು ಗೋವಿನ ಆಕಾರವನ್ನು ಧರಿಸಿರುವ ಇಳಾ ಎಂದು ಹೆಸರುಳ್ಳ ದೇವತೆಯೆಂದು ಅರ್ಥವನ್ನು ವಿವರಿಸಿದಾರೆ.

**ಶಶ್ವತ್ತಮಂ ಹವಮಾನಾಯ ಸಾಧ—ನಿರಂತರಂ ಹವಮಾನಾಯ ಯಜಮಾನಾಯ ಮಹ್ಯಂ ಸಾಧಯ ।** ಅಗ್ನಿಯನ್ನು ಯಾವಾಗಲೂ ಹವಿಸ್ಸುಗಳಿಂದ ತೃಪ್ತಿಪಡಿಸುತ್ತಿರುವ ಯಜಮಾನನಿಗೆ ಬೇಕಾದ ಇಷ್ಟಾರ್ಥಗಳನ್ನು ನೆರವೇರಿಸುವ, ಪ್ರಭೂತವಾದ ಮಾಹಾತ್ಮ್ಯದಿಂದ ಪೂರಿತವಾಗಿರುವ, ಗೋರೂಪದಿಂದ ಇರುವ, ಇಳಾ ದೇವತೆಯ ಅನುಗ್ರಹವು ಉಂಟಾಗುವಂತೆ ಅಗ್ನಿಯನ್ನು ಪ್ರಾರ್ಥಿಸಿದೆ.

**ಸೂನುಃ—ಪುತ್ರಃ, ತನಯಃ ಪೌತ್ರಃ ।** ತುಕ್, ತೋಕಂ ಎಂಬ ಹದಿನೈದು ಅಪತ್ಯನಾಮಗಳಲ್ಲಿ (ನಿ. ೨-೨) ತನಯ ಶಬ್ದವೂ, ಸೂನು ಶಬ್ದವೂ ಪಠಿತವಾಗಿದೆ.

**ಏತಾ ವಿಶ್ವಾ ಸವನಾ ತೂತುಮಾ ಕೃಷೇ ಸ್ವಯಂ ಸೂನೋ ಸಹಸೋ ಯಾನಿ ದಧಿಷೇ ।**
**ವರಾಯ ತೇ ಪಾತ್ರಂ ಧರ್ಮಣೇ ತನಾ ಯಜ್ಞೋ ಮಂತ್ರೋ ಬ್ರಹ್ಮೋದ್ಯತಂ ವಚಃ ॥**
(ಋ. ಸಂ. ೧೦-೫೦-೬)

ಎಂದು ಈ ಋಕ್ಕಿನಲ್ಲಿ ಸೂನೋ ಎಂಬ ಶಬ್ದಕ್ಕೆ ಪುತ್ರನೆಂದು ಅರ್ಥವನ್ನು ಹೇಳಿ ಅಗ್ನಿಯನ್ನು (ಸಹಸಸ್ಪುತ್ರ) **ಸಹಸಸ್ಸೂನೋ, ಬಲಸ್ಯ ಪುತ್ರ** ಎಂದು ಹೇಳಿದೆ. ಸಾಯಣರು ಸೂನುಶಬ್ದಕ್ಕೆ ಪುತ್ರನೆಂದೂ, ತನಯ ಶಬ್ದಕ್ಕೆ ಪೌತ್ರ (ಪುತ್ರನ ಪುತ್ರ) ಎಂದೂ ಅರ್ಥವನ್ನು ವರ್ಣಿಸಿದ್ದಾರೆ.

**ಸುಮತಿಃ—ಶೋಭನಾ ಬುದ್ಧಿಃ ।** ನಿರುಕ್ತಕಾರರು **ದೇವಸುಮತಿಂ** ಎಂಬಲ್ಲಿ **ದೇವಾನಾಂ ಕಲ್ಯಾಣೀಂ ಮತಿಂ** ದೇವತೆಗಳ ಶುಭಕರವಾದ ಬುದ್ಧಿ ಎಂದೂ, **ವೈಶ್ವಾನರಸ್ಯ ಸುಮತೌ ಸ್ಯಾಮ** ಎಂಬಲ್ಲಿ **ಕಲ್ಯಾಣ್ಯಾಂ ಮತೌ** ಎಂದೂ **ವಯಂ ದೇವಸ್ಯ ಧೀಮಹಿ ಸುಮತಿಂ ಸತ್ಯಧರ್ಮಣಃ** ಎಂಬಲ್ಲಿಯೂ **ಕಲ್ಯಾಣೀಂ ಮತೀಂ** ಎಂಬ ಇದೇ ಅರ್ಥವನ್ನು ವರ್ಣಿಸಿದ್ದಾರೆ. ಸಾಯಣರು ಅಗ್ನಿಯನ್ನು ಹವಿಸ್ಸುಗಳಿಂದ ತೃಪ್ತಿಗೊಳಿಸಿದ ಯಜಮಾನರ ವಿಷಯದಲ್ಲಿ ಅಗ್ನಿಯು ಅನುಗ್ರಹಿಸಬಹುದಾದ ಪುತ್ರ ಪೌತ್ರಾದಿಗಳ ಉತ್ಪತ್ತಿ ಮತ್ತು ಅಭಿವೃದ್ಧಿಯೇ ಮೊದಲಾದ ಅಗ್ನಿಯ ಕಲ್ಯಾಣಕರವಾದ ಬುದ್ಧಿಯು ಉಂಟಾಗಲಿ ಎಂದು ಪ್ರಾರ್ಥಿಸಿದೆ.

# ಎರಡನೆಯ ಸೂಕ್ತವು.

## ಪೀಠಿಕೆ.

ಈ ಸೂಕ್ತದಲ್ಲಿಯೂ ಮುಂದಿನ ಸೂಕ್ತದಲ್ಲಿಯೂ ವಿಶ್ವಾಮಿತ್ರಋಷಿಯು ವೈಶ್ವಾನರಾಗ್ನಿಯನ್ನು ಸ್ತೋತ್ರ ಮಾಡಿದಾನೆ. ವೈಶ್ವಾನರಾಗ್ನಿ ಎಂದರೆ ಯಾರು, ಅವನ ಸ್ವರೂಪವೇನು ಎಂಬ ವಿಷಯಗಳನ್ನು ಇಲ್ಲಿ ಸೂಕ್ಷ್ಮವಾಗಿ ಪರಿಶೀಲಿಸುವುದು ಅವಶ್ಯಕವಾಗಿದೆ.

### ವೈಶ್ವಾನರಾಗ್ನಿಯ ಮಹಿಮೆ

**ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ ।**
**ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥**
(ಋ. ಸಂ. ೧-೧೬೪-೪೬)

**ಇಮಮೇವಾಗ್ನಿಂ ಮಹಾಂತಮಾತ್ಮಾನಮೇಕಮಾತ್ಮಾನಂ ಬಹುಧಾ ಮೇಧಾವಿನೋ ವದಂತಿ । ಅಗ್ನಿಃ ಸರ್ವಾ ದೇವತಾಃ ಇತಿ ಬ್ರಾಹ್ಮಣಮಪಿ ಭವತಿ** (ನಿ. ೭-೧೮) ಮಹಾತ್ಮನೂ, ವಿಶ್ವಾತ್ಮನೂ ಆದ ಈ ಅಗ್ನಿಯನ್ನೇ ಇಂದ್ರಾದಿ ಬೇರೆ ಬೇರೆ ಹೆಸರುಗಳಿಂದ ಉದ್ದೇಶಿಸಿ ಎಲ್ಲರೂ ಪೂಜಿಸುತ್ತಾರೆ. ಮತ್ತು ಬೇರೆ ಬೇರೆ ಸನ್ನಿವೇಶಗಳಲ್ಲಿ ರೂಪಾಂತರಗಳಿಂದ ಆವಿರ್ಭವಿಸುವ ಎಲ್ಲಾ ಅಗ್ನ್ಯಂಶಗಳಿಗೂ ಈ ವೈಶ್ವಾನರಾಗ್ನಿಯೇ ಮೂಲ, ಉಳಿದ ರೂಪಗಳೆಲ್ಲಾ ಈ ವೈಶ್ವಾನರಾಗ್ನಿಯ ಶಾಖೆಗಳು ಎಂದೂ ಸಹ ಶ್ರುತಿವಾಕ್ಯಗಳಿವೆ.

**ವಯಾ ಇದಗ್ನೇ ಅಗ್ನಯಸ್ತೇ ಅನ್ಯೇ ತ್ವೇ ವಿಶ್ವೇ ಅಮೃತಾ ಮಾದಯಂತೇ ।**
**ವೈಶ್ವಾನರ ನಾಭಿರಸಿ ಕ್ಷಿತೀನಾಂ ಸ್ಥೂಣೇವ ಜನಾँ ಉಪಮಿದ್ಯಯಂಥ ॥**
(ಋ. ಸಂ. ೧-೫೯-೧)

ವೈಶ್ವಾನರಾಗ್ನಿಯೇ ದೇವಮಾನವಾದಿ ಸಕಲ ಜಗತ್ತಿನ ಸ್ಥಿತಿಗತಿಗಳಿಗೂ ಹೇತುಭೂತನಾಗಿ ವಿಶ್ವದ ವ್ಯವಹಾರಗಳಿಗೆಲ್ಲಾ ನೇತೃವಾಗಿರುತ್ತಾನೆ. ಆದುದರಿಂದ ಆತ್ಮಕಲ್ಯಾಣವನ್ನೂ, ಜಗತ್ಕಲ್ಯಾಣವನ್ನೂ ಅಪೇಕ್ಷಿಸುವ ಸಕಲ ಭೂತಗಳೂ ವಿಶ್ವಾತ್ಮನಾದ ಈ ವೈಶ್ವಾನರಾಗ್ನಿಯ ಸ್ವರೂಪವನ್ನು ಅರಿತು ಉಪಾಸನೆಯನ್ನು ಮಾಡಬೇಕು ಎಂಬುದಾಗಿ ಕರ್ಮಾನುಷ್ಠಾನಗಳನ್ನು ಬೋಧಿಸತಕ್ಕ ಶ್ರುತಿಗಳೂ ಆಧ್ಯಾತ್ಮಿಕವಾದ ಜ್ಞಾನವನ್ನುಪದೇಶಿಸತಕ್ಕ ಶ್ರುತಿಗಳೂ ಒಂದೇ ವಿಧವಾಗಿ ವೈಶ್ವಾನರಾಗ್ನಿಯ ಉಪಾಸನೆಯ ಆವಶ್ಯಕತೆಯನ್ನು ತಿಳಿಸುತ್ತವೆ. **ವೈಶ್ವಾನರಸ್ಯ ಸುಮತೌ ಸ್ಯಾಮ** (ಋ. ಸಂ. ೧-೯೮-೧) ಎಂದು ಋಗಾದಿ ಸಂಹಿತೆಗಳೂ, **ಸ ಯೋ ಹ್ಯೇತಮೇವಮಗ್ನಿಂ ವೈಶ್ವಾನರಂ ಪುರುಷವಿಧಂ ಪುರುಷೇಽಂತಃ ಪ್ರತಿಷ್ಠಿತಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ।** ಪುರುಷಾಂತರ್ಹಿತನೂ, ಪುರುಷರೂಪನೂ ಆಗಿರುವ ಈ ವೈಶ್ವಾನರಾಗ್ನಿಯ ಸ್ವರೂಪವನ್ನು ತಿಳಿಯುವ ಸಕಲರೂ ಮೃತ್ಯುವನ್ನು ಜಯಿಸಿ ಪೂರ್ಣವಾದ ಆಯುಸ್ಸನ್ನು ಪಡೆಯುತ್ತಾರೆ (ಶ. ಬ್ರಾ. ೧೦-೬-೧-೧೧) ಎಂದು ಶತಪಥಾದಿ ಬ್ರಾಹ್ಮಣಗಳೂ, **ಅಥ ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ ತಸ್ಯ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸು ಹುತಂ ಭವತಿ ।** ಹೀಗೆ-ವೈಶ್ವಾನರಾಗ್ನಿಯ ಸ್ವರೂಪವನ್ನು ತಿಳಿದು ಯಾವ ಪುರುಷನು ಅಗ್ನಿಹೋತ್ರವನ್ನು ನೆರವೇರಿಸುತ್ತಾನೆಯೋ ಅವನು ಸಕಲ ಭೂತಗಳಲ್ಲಿಯೂ ಸಕಲ ಲೋಕಗಳಲ್ಲಿಯೂ ಸಕಲವಾದ ಆತ್ಮಗಳಲ್ಲಿಯೂ ಹುತಮಾಡಿದಂತೆಯೇ (ಛಾ. ಉ. ೫-೨೪-೨) ಎಂಬುದಾಗಿ ಛಾಂದೋಗ್ಯಾದಿ ಉಪನಿಷತ್ತುಗಳೂ ವೈಶ್ವಾನರಾಗ್ನಿಯ ಮಹತ್ತ್ವವನ್ನು ಹೇಳಿವೆ. ಆದುದರಿಂದ ಈ ದೇವತೆಯ ಸ್ವರೂಪವೇನು, ಕರ್ಮಾನುಷ್ಠಾನಕ್ಕೂ ಆಧ್ಯಾತ್ಮಿಕವಾದ ಜ್ಞಾನಸಂಪಾದನೆಗೂ ಈ ದೇವತೆಗೂ ಸಂಬಂಧವೇನು ಎಂಬುದನ್ನು ಈ ಸಂದರ್ಭದಲ್ಲಿ ತಿಳಿಯಬೇಕಾದುದು ಅತ್ಯವಶ್ಯಕವಾಗಿರುತ್ತದೆ. ಋ ಸಂ. ೧-೯೮-೧ ಈ ಋಕ್ಕಿನಲ್ಲಿ **ರಾಜಾ ಹಿ ಕಂ ಭುವನಾನಾಮಭಿಶ್ರೀಃ ।** ವೈಶ್ವಾನರನು ಸಕಲ ಭೂತಗಳಿಗೂ ಪೂಜ್ಯನಾದ ಪ್ರಭುವಾಗಿದ್ದಾನೆಂದು ವರ್ಣಿಸಿದೆ. ಆದರೆ ಆ ವೈಶ್ವಾನರನು ಯಾರು ಎಂಬ ಪ್ರಶ್ನೆಯೂ ಜೊತೆಯಲ್ಲಿಯೇಹುಟ್ಟಿ ನಿರುಕ್ತಕಾರರು ಈ ಋಕ್ಕನ್ನೇ ವಿವರಿಸುವಾಗ ಅನೇಕ ಉದಾಹರಣೆಗಳನ್ನು ತೆಗೆದುಕೊಂಡು ವೈಶ್ವಾನರನು ಪಾರ್ಥಿವಾಗ್ನಿಯೆಂದು ನಿಷ್ಕರ್ಷೆಮಾಡಿರುತ್ತಾರೆ. ಅವರ ವಿವರಣೆಯು ಈ ರೀತಿಯಿದೆ.

**ವೈಶ್ವಾನರಃ ಕಸ್ಮಾದ್ವಿಶ್ವಾನ್ನರಾನ್ನಯತಿ ।**
**ವಿಶ್ವ ಏನಂ ನರಾ ನಯಂತೀತಿ ವಾ ।**
**ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಃ ॥**
(ನಿ. ೭-೨೧)

ಇವನು ಎಲ್ಲರಿಗೂ ನೇತೃವಾಗಿ ಮಾರ್ಗದರ್ಶಕನಾದುದರಿಂದಲೂ, ಅಥವಾ ಇವನನ್ನು ಎಲ್ಲರೂ ಯಜ್ಞದಲ್ಲಿ ಪ್ರಧಾನ ದೇವತೆಯಾಗಿ ಕರೆದೊಯ್ಯುವುದರಿಂದಲೂ ಅಥವಾ ಸರ್ವತ್ರ ವ್ಯಾಪಿಸಿ ಸಕಲ ಭೂತಗಳಲ್ಲಿಯೂ ಪ್ರವೇಶಿಸಿರುವುದರಿಂದಲೂ **ವೈಶ್ವಾನರಸ್ಯ ಸುಮತೌ ಸ್ಯಾಮ** ಎಂಬ ಈ ಋಕ್ಕನ್ನು ವಿವರಿಸಿ ಈ ದೇವತೆಯ ಸ್ವರೂಪವನ್ನು ತಿಳಿಸಿದ್ದಾರೆ. **ಇತೋ ಜಾತಃ ಸರ್ವಮಿದಮಭಿಪಶ್ಯತಿ ವೈಶ್ವಾನರಃ ಸಂಯತತೇ ಸೂರ್ಯೇಣ ರಾಜಾ ಯಃ ಸರ್ವೇಷಾಂ ಭೂತಾನಾಮಭಿಶ್ರಯಣೀಯಸ್ತಸ್ಯ ವಯಂ ವೈಶ್ವಾನರಸ್ಯ ಕಲ್ಯಾಣ್ಯಾಂ ಮತೌ ಸ್ಯಾಮೇತಿ ।** ಸಕಲರಿಗೂ ಪ್ರಭುವಾಗಿರುವುದರಿಂದಲೂ, ಸರ್ವರಿಗೂ ಆಶ್ರಯನಾಗಿರುವುದರಿಂದಲೂ ನಾವೆಲ್ಲರೂ ಈ ವೈಶ್ವಾನರನ ಅನುಗ್ರಹಾತ್ಮಕವಾದ ದೃಷ್ಟಿಗೆ ಯೋಗ್ಯರಾಗಿರೋಣ. ಪಾರ್ಥಿವಾಗ್ನಿಯ ರೂಪದಲ್ಲಿ ಉತ್ಪನ್ನನಾಗಿ ಇವನು ವಿಶ್ವವನ್ನೆಲ್ಲಾ ವೀಕ್ಷಿಸುತ್ತಾನೆ ಮತ್ತು ಸೂರ್ಯನೊಡನೆ ಒಂದಾಗುತ್ತಾನೆ ಎಂದು ಋಕ್ಕಿನ ಅರ್ಥವನ್ನು ವಿವರಿಸಿ,

**ತತ್ಕೋ ವೈಶ್ವಾನರಃ ।** ಈ ವೈಶ್ವಾನರನು ಯಾರು (ನಿ. ೭-೨೨) ಎಂಬ ಪ್ರಶ್ನೆಯನ್ನು ಹಾಕಿ ಆಗಮಗಳ ವಿಪ್ರತಿಪತ್ತಿಯನ್ನು ಚರ್ಚಿಸಿ ತಾವು ಕೊನೆಯಲ್ಲಿ ನಿಷ್ಕರ್ಷವಾದ ಅಭಿಪ್ರಾಯವನ್ನು ತಿಳಿಸುತ್ತಾರೆ. ತಮ್ಮ ಚರ್ಚೆಯಲ್ಲಿ ಮೊದಲನೆಯದಾಗಿ ವೈಶ್ವಾನರನು ಅಂತರಿಕ್ಷವಾದ ದೇವತೆಯೆಂದು ನಿರ್ದೇಶಿಸುವ ಅಭಿಪ್ರಾಯಗಳಲ್ಲಿರುವ ದೋಷವನ್ನು ತಿಳಿಸುತ್ತಾರೆ.

**ಮಧ್ಯಮ ಇತ್ಯಾಚಾರ್ಯಾಃ । ವರ್ಷಕರ್ಮಣಾ ಹ್ಯೇನಂ ಸ್ತೌತಿ । ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ।** (ಋ. ಸಂ. ೧-೫೯-೬) ಎಂಬ ಋಕ್ಕಿನಲ್ಲಿ ವರ್ಣಿಸುವಂತೆ ವೃಷ್ಟಿಕರ್ಮಕ್ಕೆ ಹೇತುಭೂತನೆಂದು ಪ್ರಶಂಸಿಸಿರುವುದರಿಂದ ಅಂತರಿಕ್ಷಸ್ಥವಾದ ದೇವತೆಯೆಂದು ಆಚಾರ್ಯರು ಅಭಿಪ್ರಾಯಪಡುವರು. ಅಲ್ಲದೇ,

**ಏಷಾಂ ಲೋಕಾನಾಂ ರೋಹೇಣ ಸವನಾನಾಂ ರೋಹ ಆಮ್ನಾತೋ ರೋಹಾತ್ ಪ್ರತ್ಯಾ-ರೋಹಶ್ಚಿಕೀರ್ಷಿತಸ್ತಾಮನುಕೃತಿಂ ಹೋತಾಗ್ನಿಮಾರುತೇ ಶಸ್ತ್ರೇ ವೈಶ್ವಾನರೀಯೇಣ ಸೂಕ್ತೇನ ಪ್ರತಿಪದ್ಯೇತೇ ॥**

**ಸೂರ್ಯಪ್ರಸೂತಾವಗ್ನೀ ತು ದೃಷ್ಟ್ವಾ ಪಾರ್ಥಿವಮಧ್ಯಮೌ ।**
**ಏತೇಷಾಮೇವ ಲೋಕಾನಾಂ ತ್ರಯಾಣಾಮಧ್ವರೇಽಧ್ವರೇ ॥**
**ರೋಹಾತ್ಪ್ರತ್ಯವರೋಹೇಣ ಚಿಕೀರ್ಷನ್ನಗ್ನಿಮಾರುತಂ ।**
**ಶಸ್ತ್ರಂ ವೈಶ್ವಾನರೀಯೇಣ ಸೂಕ್ತೇನ ಪ್ರತಿಪದ್ಯತೇ ॥**

(ಬೃ. ದೇ. ೧-೧೦೧ ; ೧-೧೦೨)

ಆಹುತಿಗಳ ಆಧಿಕ್ಯವು ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಎಂಬ ಆರೋಹಣಕ್ರಮವನ್ನನುಸರಿಸಬೇಕೆಂಬ ವಿಧಿವಾಕ್ಯವಿದೆ. ಆರೋಹಣಕ್ರಮವಾದಮೇಲೆ ಅವರೋಹಣ ಕ್ರಮವನ್ನು ನಿರ್ವಹಿಸಬೇಕು. ಈ ಸರಣಿಯನ್ನನುಸರಿಸಿ ಯಜ್ಞಕರ್ತನು ಅಗ್ನಿಯನ್ನೂ, ಮರುತ್ತುಗಳನ್ನೂ ಉದ್ದೇಶಿಸಿ ಪಠಿಸುವ ಈ ವೈಶ್ವಾನರೀಯಸೂಕ್ತದಲ್ಲಿ ಅವರೋಹಣಕ್ರಮದಿಂದ ಮೊದಲು ವೈಶ್ವಾನರನನ್ನು ಸ್ತುತಿಸಿದ್ದಾನೆ. ಈ ಅಭಿಪ್ರಾಯದಿಂದಲೇ ಇಲ್ಲಿ ನಿರ್ದೇಶಿಸಿರುವ ವೈಶ್ವಾನರನನ್ನು **ಅಥಾಸಾವಾದಿತ್ಯ ಇತಿ ಪೂರ್ವೇ ಯಾಜ್ಞಿಕಾಃ ।** ಆದಿತ್ಯನೆಂದು ಪ್ರಾಚೀನರಾದ ಯಜ್ಞಕರ್ತರು ಅಭಿಪ್ರಾಯಪಡುತ್ತಾರೆ ಎಂದು ಪೂರ್ವಪಕ್ಷವನ್ನು ವಿವರಿಸಿ ನಂತರ,

**ಸೋಽಪಿ ನ ಸ್ತೋತ್ರಿಯಮಾದ್ರಿಯೇತಾಗ್ನೇಯೋ ಹಿ ಭವತಿ । ತತ ಆಗಚ್ಛತಿ ಮಧ್ಯಸ್ಥಾನಾ ದೇವತಾ ರುದ್ರಂ ಚ ಮರುತಶ್ಚ ತತೋಽಗ್ನಿಮಿಹಸ್ಥಾನಮತ್ರ ವೈ ಸ್ತೋತ್ರಿಯಂ ಶಂಸತಿ ।**

ಈ ಸೂಕ್ತವು ಮುಖ್ಯವಾಗಿ ಅಗ್ನಿಯನ್ನೇ ಉದ್ದೇಶಿಸಿರುವುದರಿಂದಲೂ, ಅನಂತರ ರುದ್ರನನ್ನೂ ಮರುತ್ತುಗಳನ್ನೂ ನಿರ್ದೇಶಿಸಿ ಪುನಃ ಯಜ್ಞಕರ್ತನು ಯಾವ ಪಾರ್ಥಿವವಾದ ಯಜ್ಞಶಾಲೆಯಲ್ಲಿ ಈ ಸೂಕ್ತವನ್ನು ಪಠಿಸುತ್ತಾನೆಯೋ ಆ ಪಾರ್ಥಿವಲೋಕಕ್ಕೇ ಸೇರಿದ ಅಗ್ನಿಯನ್ನೇ ಪುನಃ ಉದ್ದೇಶಿಸಿ ಸ್ತುತಿಸಿರುತ್ತಾನೆ. ಆದುದರಿಂದ ಇಲ್ಲಿ ನಿರ್ದೇಶಿಸಿರುವ ವೈಶ್ವಾನರಾಗ್ನಿಯು ಪಾರ್ಥಿವಸ್ಥವಾದ ದೇವತೆಯೇ ಹೊರತು ಅಂತರಿಕ್ಷಸ್ಥವಾದುದಲ್ಲ ಎಂದು ಮೇಲಿನ ಅಭಿಪ್ರಾಯವನ್ನು ನಿರಾಕರಿಸಿರುವರು. ಮತ್ತು ಈ ವೈಶ್ವಾನರಾಗ್ನಿಯು ಪಾರ್ಥಿವಸ್ಥವಾದ ದೇವತೆ ಎಂದು ತಮ್ಮ ವಾದವನ್ನು ಸಮರ್ಥಿಸುತ್ತಾ ಅದಕ್ಕೆ ತಕ್ಕ ಶ್ರುತಿವಾಕ್ಯಗಳನ್ನೂ ಉದಹರಿಸಿದ್ದಾರೆ.

**ಅಥಾಪ್ಯಾಹ—ಇತೋ ಜಾತೋ ವಿಶ್ವಮಿದಂ ವಿ ಚಷ್ಟೇ ವೈಶ್ವಾನರೋ ಯತತೇ ಸೂರ್ಯೇಣ ।** (ಋ. ಸಂ. ೧-೯೮-೧). **ಇತಿ**

**ನ ಚ ಪುನರಾತ್ಮನಾತ್ಮಾ ಸಂಯತತೇಽನ್ಯೇನೈವಾನ್ಯಃ ಸಂಯತತ ಇತ ಇಮಮಾದಧಾತ್ಯಮುತೋಽಮುಷ್ಯ ರಶ್ಮಯಃ ಪ್ರಾದುರ್ಭವಂತೀತೋಽಸ್ಯಾರ್ಚಿಷಸ್ತಯೋರ್ಭಾಸೋಃ ಸಂಸಂಗಂ ದೃಷ್ಟ್ವೈವಮವಕ್ಷ್ಯತ್ ।**

ವೈಶ್ವಾನರನು ತಾನು ವಿಸ್ತಾರವಾಗಿ ಪ್ರಸರಿಸಿ ಸೂರ್ಯನೊಡನೆ ಸೇರಿಕೊಳ್ಳುತ್ತಾನೆ ಎಂದು ಸಂಹಿತಾವಾಕ್ಯವಿರುವುದೂ ಈ ಸಮರ್ಥನೆಗೆ ಸಹಾಯಮಾಡುತ್ತದೆ. ವೈಶ್ವಾನರನೂ ಸೂರ್ಯನೇ ಆದರೆ, ತಾನೇ ಪ್ರಸರಿಸಿ ತನ್ನಲ್ಲೇ ಸೇರಿಕೊಳ್ಳುವನೆಂಬುದು ಅಸಂಭವ. ಒಂದು ವಸ್ತುವು ತಾನು ವಿಸ್ತರಿಸಿಕೊಂಡು ಇನ್ನೊಂದರೊಂದಿಗೆ ಸೇರಿಕೊಳ್ಳುತ್ತವೆ ಎಂದು ಹೇಳುವುದು ಸಹಜವಾಗಿದೆ. ಯಜ್ಞಕರ್ತನು ಪೃಥಿವಿಯಲ್ಲಿ ಅಗ್ನಿಯನ್ನು ಪ್ರಜ್ವಲಿತನನ್ನಾಗಿ ಮಾಡಿದಮೇಲೆ ಆದರ ಕಿರಣಗಳು ಮೇಲಿನ ಲೋಕಕ್ಕೆ ಹರಡಿ ಅಲ್ಲೂ ಆವಿರ್ಭವಿಸುತ್ತವೆ. ಅಂತರಿಕ್ಷಲೋಕದಲ್ಲಿ ವ್ಯಾಪಿಸಿರುವ ಆದಿತ್ಯನ ಕಿರಣಗಳೊಂದಿಗೆ ಸೇರಿಕೊಂಡು ಎರಡೂ ಒಂದಾಗುವುದನ್ನು ನೋಡಿ **ಯತತೇ ಸೂರ್ಯೇಣ** ಎಂದು ವರ್ಣಿಸಲ್ಪಟ್ಟಿದೆ ಅದೂ ಅಲ್ಲದೆ,

**ಅಥ ಯಾನ್ಯೇತಾನ್ಯೌತ್ತಮಿಕಾನಿ ಸೂಕ್ತಾನಿ ಭಾಗಾನಿ ವಾ ಸಾವಿತ್ರಾಣಿ ವಾ ಸೌರ್ಯಾಣಿ ವಾ ಪೌಷ್ಣಾನಿ ವಾ ವೈಷ್ಣವಾನಿ ವಾ ವೈಶ್ವದೇವ್ಯಾನಿ ವಾ ತೇಷು ವೈಶ್ವಾನರೀಯಾಃ ಪ್ರವಾದಾ ಅಭವಿಷ್ಯನ್ನಾದಿತ್ಯಕರ್ಮಣಾ ಚೈನಮಸ್ತೋಷ್ಯನ್ನಿತ್ಯುದೇಷೀತ್ಯಸ್ತಮೇಷೀತಿ ವಿಪರ್ಯೇಷೀತಿ ।**

ವೈಶ್ವಾನರನು ಸೂರ್ಯನೇ ಆಗಿದ್ದರೆ ಆಗ **ಸವಿತೃ, ಪೂಷ, ವಿಷ್ಣು, ವಿಶ್ವೇದೇವ** ಇತ್ಯಾದಿ ಅಂತರಿಕ್ಷಸ್ಥವಾದ ದೇವತೆಗಳ ಸ್ವರೂಪವೂ, ಕ್ರಿಯೆಯೂ ಇವನಲ್ಲಿ ಅಧ್ಯಾಹೃತವಾಗಿ ವರ್ಣಿಸಲ್ಪಡಬೇಕಾಗಿದ್ದಿತು. ಮತ್ತು ಉದಯಿಸುತ್ತಾನೆ, ಅಸ್ತಮಿಸುತ್ತಾನೆ, ಪರಿಭ್ರಮಣವನ್ನು ಹೊಂದುತ್ತಾನೆ ಇತ್ಯಾದಿ ವರ್ಣನೆಗಳೂ ಇರಬೇಕಾಗಿದ್ದಿತು. ಆದರೆ ಇಲ್ಲಿ ಅಗ್ನಿದೇವತಾಕವಾದ ವರ್ಣನೆಗಳು ಮಾತ್ರವಿರುವುದರಿಂದ ಪಾರ್ಥಿವವಾದ ಅಗ್ನಿಪರ್ಯಾಯವೆಂಬುದು ದೃಢವಾಗಿ ಗೊತ್ತಾಗುತ್ತದೆ. ಇವೇ ಮೊದಲಾದ ಆಧಾರಗಳಿಂದ,

**ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರೂಪ್ಯತೇಽಯಮೇವ ಸೋಽಗ್ನಿರ್ವೈಶ್ವಾನರಃ ।**

ಸೂಕ್ತದಲ್ಲಿ ಪಠಿತವಾದ ಸ್ತೋತ್ರವೂ, ಹವಿಸ್ಸಿನ ಅರ್ಪಣೆಯೂ ವೈಶ್ವಾನರರೂಪದ ಅಗ್ನಿಯನ್ನೇ ಉದ್ದೇಶಿಸಿ ಅರ್ಪಿಸಲ್ಪಟ್ಟಿವೆಯೆಂದು ಖಚಿತವಾಗಿ ಹೇಳಬಹುದು. (ನಿ. ೭-೨೨ ರಿಂದ ೭-೩೧) ಈ ವೈಶ್ವಾನರಾಗ್ನಿಯ ಆವಿರ್ಭಾವವು ಪೃಥ್ವಿಯಲ್ಲಾದರೂ ಸಹ ಇವನೇ, **ರಾಜಾ ಹಿ ಕಂ ಭುವನಾನಾಮಭಿಶ್ರೀಃ** । ಸಕಲಭೂತಜಾತಗಳಿಗೂ ಪ್ರಭುವಾಗಿಯೂ ಆಶ್ರಯನಾಗಿಯೂ ಇದ್ದಾನೆ. ಆದುದರಿಂದಲೇ ದೇವಮಾನವಾದಿಸಕಲರೂ ಇವನ ಉಪಾಸನೆಯಿಂದಲೇ ಶ್ರೇಯಸ್ಸನ್ನು ಹೊಂದಲು ಸಾಧ್ಯವೆಂದು ಸ್ಪಷ್ಟವಾಗಿ ಅನೇಕಕಡೆ ತಿಳಿಸಿದ್ದಾರೆ. ಕರ್ಮಾನುಷ್ಠಾನಗಳಿಂದ ಇವನ ಪಾರ್ಥಿವಸ್ವರೂಪವನ್ನರಿತು ಉಪಾಸನೆಯನ್ನು ಮಾಡುವುದು ಒಂದು ಕ್ರಮವಾದರೆ, ಇವನು ವಿಶ್ವವ್ಯಾಪಿಯಾದುದೂ, ಸರ್ವಜಗತ್ತಿನ ಚೇತನಾಚೇತನಗಳಲ್ಲಿಯೂ ಅಂತರ್ಗತವಾಗಿರುವುದೂ ಆದ ಮಾಹಾತ್ಮ್ಯವನ್ನರಿಯುವ ಅಧ್ಯಾತ್ಮರೂಪವಾದ ಜ್ಞಾನದಿಂದ ಮಾಡತಕ್ಕ ಉಪಾಸನೆಯು ಇನ್ನೊಂದು ವಿಧವಾಗಿರುವುದು. ಕರ್ಮಾನುಷ್ಠಾನಕ್ಕೂ ಜ್ಞಾನೋಪಾಸನೆಗೂ ಇರುವ ಸಂಬಂಧವನ್ನು ತಿಳಿಸಿ ವಿಶ್ವಾತ್ಮನಾದ ವೈಶ್ವಾನರಾಗ್ನಿಯ ಮಹಿಮೆಯನ್ನು ಶತಪಥಾದಿ ಬ್ರಾಹ್ಮಣಗಳಲ್ಲಿಯೂ ಛಾಂದೋಗ್ಯಾದಿ ಉಪನಿಷತ್ತುಗಳಲ್ಲಿಯೂ ವಿವರಿಸಿದೆ. ಇವನ ನಿಜವಾದ ಸ್ವರೂಪವನ್ನರಿಯಲು ಉತ್ತಮವಾದ ಗುರುವನ್ನು ಅರಿಸಿಕೊಂಡು ಹೋದ ಋಷಿಗಳ ಕಥೆಯನ್ನು **ಶತಪಥಬ್ರಾಹ್ಮಣದಲ್ಲಿ ವಿವರಿಸಿದೆ.** (೧೦-೬-೧-೧ ರಿಂದ ೧೧)

**ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಃ** । (ನಿ. ೮-೨೧) ಸರ್ವತ್ರ ವ್ಯಾಪಿಸಿ ಸಕಲ ಭೂತಗಳಲ್ಲಿಯೂ ಅಂತರ್ಗತನಾಗಿರುವವನು ಎಂಬ ನಿರುಕ್ತಕಾರರ ನಿರ್ವಚನದಂತೆ ಸರ್ವಾಂತರ್ಯಾಮಿಯಾದ ವಿಶ್ವಾನರನ ಸ್ವರೂಪವನ್ನು ಈ ಕಥೆಯು ತಿಳಿಸುತ್ತದೆ.—

**ಅಥ ಹೈತೇಽರುಣೇ ಔಪವೇಶೌ ಸಮಾಜಗ್ಮುಃ ಸತ್ಯಯಜ್ಞಃ ಪೌಲುಷಿರ್ಮಹಾಶಾಲೋ ಜಾಬಾಲೋ ಬುಡಿಲ ಅಶ್ವತರಾಶ್ವಿರಿಂದ್ರದ್ಯುಮ್ನೋ ಭಾಲ್ಲವೇಯೋ ಜನಃ ಶಾರ್ಕರಾಕ್ಷ್ಯಸ್ತೇ ಹ ಸಮಾಸತ ತೇಷಾಂ ಹ ವೈಶ್ವಾನರೇ ನ ಸಮಿಯಾಯ** ॥ ೧ ॥

ಸತ್ಯಯಜ್ಞಪೌಲೂಷಿಯೂ, ಮಹಾಶಾಲಜಾಬಾಲನೂ, ಬುಡಿಲ, ಅಶ್ವತರ ಅಶ್ವಿ, ಇಂದ್ರದ್ಯುಮ್ನ, ಭಾಲ್ಲವೇಯನೂ, ಜನಶಾರ್ಕರಾಕ್ಷ್ಯನೂ ಒಟ್ಟಿಗೆ ಅರುಣಔಪವೇಶಿಯ ಗೃಹದಲ್ಲಿ ಸೇರಿ ವೈಶ್ವಾನರಾಗ್ನಿಯ ಸ್ವರೂಪವನ್ನು ತಿಳಿಯಲು ಎಲ್ಲರೂ ಕಲೆತು ಚರ್ಚಿಸಿದರೂ ಸಹ ಅವರಿಗೆ ನಿಷ್ಕರ್ಷಕವಾದ ತಿಳುವಳಿಕೆಯುಂಟಾಗದೆ ಪರಸ್ಪರ ಅಭಿಪ್ರಾಯದಲ್ಲಿ ಭೇದವುಂಟಾಯಿತು. ಸಂಶಯವುಂಟಾಯಿತು.

**ತೇ ಹೋಚುಃ । ಅಶ್ವಪತಿರ್ವಾಯಂ ಕೈಕೇಯಃ ಸಂಪ್ರತಿ ವೈಶ್ವಾನರಂ ವೇದ ತಂ ಗಚ್ಛಾಮೇತಿ ತೇ ಹಾಶ್ವಪತಿಂ ಕೈಕೇಯಮಾಜಗ್ಮುಸ್ತೇಭ್ಯೋ ಹ ಪೃಥಗಾವಸಥಾನ್ಪೃಥಗಪಚಿತೀಃ ಪೃಥಕ್ ಸಾಹಸ್ರಾನ್ಸೋಮಾನ್ಪ್ರೋವಾಚ ತೇ ಹ ಪ್ರಾತರಸಂವಿದಾನಾ ಏವ ಸಮಿತ್ಪಾಣಯಃ ಪ್ರತಿಚಕ್ರಮಿರ ಉಪತ್ವಾಯಾಮೇತಿ** ॥ ೨ ॥

ಆಗ ಅವರೆಲ್ಲರೂ ಸೇರಿ ವೈಶ್ವಾನರಾಗ್ನಿಯ ಸ್ವರೂಪವನ್ನು ಸಂಪೂರ್ಣವಾಗಿ ತಿಳಿದುಕೊಂಡಿರುವ ಅಶ್ವಪತಿಕೈಕೇಯನಲ್ಲಿಗೆ ಹೋದರು. ಅವನು ತನ್ನಲ್ಲಿಗೆ ಬಂದ ಈ ಅತಿಥಿಗಳಿಗೆಲ್ಲಾ ಪ್ರತ್ಯೇಕವಾದ ವಾಸಸ್ಥಾನಗಳನ್ನೂ,

ವೈಯಕ್ತಿಕವಾದ ಗೌರವಗಳನ್ನೂ, ಸಹಸ್ರಾರು ದಾನಗಳನ್ನೂ ಅರ್ಪಿಸಿ ಅವರನ್ನು ಸತ್ಕರಿಸಿದನು. ಮರುದಿನ ಪ್ರಾತಃಕಾಲ ಅವರೆಲ್ಲರೂ ತಮ್ಮ ಅಭಿಪ್ರಾಯಭೇದಗಳನ್ನೇ ಇಟ್ಟುಕೊಂಡು ತಮ್ಮ ಕೈಯಲ್ಲಿ ಸಮಿತ್ತುಗಳನ್ನು ಹಿಡಿದು 'ನಾವು ನಿಮ್ಮ ಶಿಷ್ಯರಾಗಬೇಕೆಂದಿದ್ದೇವೆ' ಎಂದು ವಿಜ್ಞಾಪಿಸಿಕೊಂಡರು.

**ಸ ಹೋವಾಚ । ಯನ್ನು ಭಗವಂತೋಽನೂಚಾನಾ ಅನೂಚಾನಪುತ್ರಾಃ ಕಿಮಿದಮಿತಿ ತೇ ಹೋಚುರ್ವೈಶ್ವಾನರಂ ಹ ಭಗವಾನ್ತ್ಸಂಪ್ರತಿ ವೇದ ತಂ ನೋ ಬ್ರೂಹೀತಿ ಸ ಹೋವಾಚ ಸಂಪ್ರತಿ ಖಲು ನ್ವಾ ಅಹಂ ವೈಶ್ವಾನರಂ ವೇದಾಭ್ಯಾಧತ್ತ ಸಮಿಧ ಉಪೇತಾ ಸ್ಥೇತಿ ॥ ೩ ॥**

ಆಗ ಅವನು ನೀವೆಲ್ಲರೂ ಸಕಲಶಾಸ್ತ್ರಪಾರಂಗತರಾದವರ ಪುತ್ರರಾಗಿಯೂ ನೀವೂ ಅಧ್ಯಯನವನ್ನು ಮಾಡಿದವರಾಗಿಯೂ ಇದ್ದುಕೊಂಡು ನನ್ನಲ್ಲಿಗೆ ಶಿಷ್ಯವೃತ್ತಿಗೆ ಬಂದಿರುವುದೇನು ? ಎಂದು ಆಶ್ಚರ್ಯಪಟ್ಟು ಅವರನ್ನು ಪ್ರಶ್ನಿಸಿದನು. ಆಗ ಅವರು ನೀವು ವೈಶ್ವಾನರಾಗ್ನಿಯ ಸ್ವರೂಪವನ್ನು ಚೆನ್ನಾಗಿ ತಿಳಿದಿದ್ದೀರಿ. ನಮಗೂ ಅದರ ರಹಸ್ಯವನ್ನು ಉಪದೇಶಿಸಿ' ಎಂದು ವಿಜ್ಞಾಪಿಸಿಕೊಂಡಾಗ ಅವನು 'ನನಗೆ ಆ ರಹಸ್ಯವು ಗೊತ್ತಿದೆ. ನಿಮಗೂ ಅದನ್ನು ತಿಳಿಸುತ್ತೇನೆ. ಅಗ್ನಿಗೆ ಸಮಿತ್ತುಗಳನ್ನು ಅರ್ಪಿಸಿ ಇಂದಿನಿಂದ ನೀವು ನನ್ನ ಶಿಷ್ಯರಾಗಿದ್ದೀರಿ ಎಂದು ಹೇಳಿ,

**ಸ ಹೋವಾಚಾರುಣಮೌಪವೇಶಿಂ । ಗೌತಮ ಕಂ ತ್ವಂ ವೈಶ್ವಾನರಂ ವೇತ್ಥೇತಿ ಪೃಥಿವೀಮೇವ ರಾಜನ್ನಿತಿ ಹೋವಾಚೋಮಿತಿ ಹೋವಾಚೈಷ ವೈ ಪ್ರತಿಷ್ಠಾ ಏತಂ ರಯಿಂ ವೈಶ್ವಾನರ ಏತಂ ಹಿ ವೈ ತ್ವಂ ಪ್ರತಿಷ್ಠಾ ವೈಶ್ವಾನರಂ ವೇತ್ಥ ತಸ್ಮಾತ್ತ್ವಂ ಪ್ರತಿಷ್ಠಿತಃ ಪ್ರಜ್ಞಯಾ ಪಶುಭಿರಸಿ ಯೋ ವಾ ಏತಂ ಪ್ರತಿಷ್ಠಾಂ ವೈಶ್ವಾನರಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ಪಾದೌ ತ್ವಾ ಏತೌ ವೈಶ್ವಾನರಸ್ಯ ಪಾದೌ ತೇಽಮ್ಲಾಸ್ಯತಾಂ ಯದಿ ಹ ನಾಗಮಿಷ್ಯ ಇತಿ ಪಾದೌ ತೇಽವಿದಿತಾವಭವಿಷ್ಯತಾಂ ಯದಿ ಹ ನಾಗಮಿಷ್ಯ ಇತಿ ವಾ ॥ ೪ ॥**

ಅನಂತರ ಆರುಣಿ ಔಪವೇಶಿಯನ್ನು ಕುರಿತು 'ಗೌತಮನೇ, ನಿನಗೆ ಗೊತ್ತಿರುವಂತೆ ವೈಶ್ವಾನರನಾರು ?' ಎಂದು ಪ್ರಶ್ನಿಸಿದಾಗ 'ಪೃಥ್ವಿಯೇ ವೈಶ್ವಾನರನೆಂದು' ಅವನು ಹೇಳಿದನು. ಆಗ ದೊರೆಯು 'ಹೌದು, ಸರ್ವಾಧಾರನಾದ ವೈಶ್ವಾನರನೇ ಅದು. ನೀನು ಈ ರಹಸ್ಯವನ್ನು ತಿಳಿದಿರುವುದರಿಂದ ಪಶುಪುತ್ರಾದಿಗಳೊಂದಿಗೆ ಸ್ಥಿರನಾಗಿ ಪ್ರತಿಷ್ಠಿತನಾಗಿದ್ದೀಯೇ! ಇದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣಾಯುಸ್ಸನ್ನು ಪಡೆಯುತ್ತಾನೆ. ಆದರೆ ಸತ್ಯವಾಗಿಯೂ ಇವು ವೈಶ್ವಾನರನ **ಪಾದಗಳು** ಮಾತ್ರ. ನೀನು (ವೈಶ್ವಾನರನ ಪೂರ್ಣವಾದ ಸ್ವರೂಪವನ್ನು ತಿಳಿಯಲು) ಇಲ್ಲಿಗೆ ಬರದೇ ಇದ್ದಿದ್ದರೆ ನಿನ್ನ ಪಾದಗಳು ಸಡಿಲವಾಗಿ ಕ್ಷೀಣಿಸಿಬಿಡುತ್ತಿದ್ದವು. ಅಥವಾ ನಿನ್ನ ಗೋಚರಕ್ಕೇ ಬೀಳುತ್ತಿರಲಿಲ್ಲ' ಎಂದನು.

**ಅಥ ಹೋವಾಚ ಸತ್ಯಯಜ್ಞಂ ಪೌಲುಷಿಂ । ಪ್ರಾಚೀನಯೋಗ್ಯ, ಕಂ ತ್ವಂ ವೈಶ್ವಾನರಂ ವೇತ್ಥೇತ್ಯಪ ಏವ ರಾಜನ್ನಿತಿ ಹೋವಾಚೋಮಿತಿ ಹೋವಾಚೈಷ ವೈ ರಯಿರ್ವೈಶ್ವಾನರ ಏತಂ ಹಿ ವೈ ತ್ವಂ ರಯಿಂ ವೈಶ್ವಾನರಂ ವೇತ್ಥ ತಸ್ಮಾತ್ತ್ವಂ ರಯಿಮಾನ್ಪುಷ್ಟಿಮಾನಸಿ ಯೋ ವಾ ಏತಂ ರಯಿಂ ವೈಶ್ವಾನರಂ ವೇದಾಪಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ವಸ್ತಿಸ್ತ್ವಾ ಏಷ ವೈಶ್ವಾನರಸ್ಯ ವಸ್ತಿಸ್ತ್ವಹಾಸ್ಯದ್ಯದಿ ಹ ನಾಗಮಿಷ್ಯ ಇತಿ ವಸ್ತಿಸ್ತೇಽವಿದಿತೋಽಭವಿಷ್ಯದ್ಯದಿ ಹ ನಾಗಮಿಷ್ಯ ಇತಿ ವಾ ॥ ೫ ॥**

**ಆಮೇಲೆ** ಸತ್ಯಯಜ್ಞಪೌಲೂಷಿಯನ್ನು ಕುರಿತು ಎಲೈ ಪ್ರಾಚೀನಯೋಗ್ಯನೇ, ವೈಶ್ವಾನರನಾರೆಂಬುದಾಗಿ ನೀನು ತಿಳಿದಿದ್ದೀಯೇ ಎಂದು ಪ್ರಶ್ನಿಸಲು ಅವನು **ಅಪ್ಪೇ** (ಉದಕ) ವೈಶ್ವಾನರನೆಂದನು ಅದನ್ನೂ ಅನುಮೋದಿಸಿ ದೊರೆಯು ಅದು ವೈಶ್ವಾನರೀಯವಾದ ಧನವು. ನೀನು ಆ ಧನದ ಸ್ವರೂಪವನ್ನು ತಿಳಿದುದರಿಂದ ನೀನು ಧನಿಕನಾಗಿಯೂ ಉಚ್ಛ್ರಾಯಸ್ಥಿತಿಯನ್ನು ಹೊಂದಿದವನಾಗಿಯೂ ಇದ್ದೀಯೇ. ಅದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣವಾದ ಆಯುಸ್ಸನ್ನು ಖಂಡಿತವಾಗಿಯೂ ಪಡೆಯುತ್ತಾನೆ. ಆದರೆ ಇದು ವೈಶ್ವಾನರನ ಅಂತಃಕೋಶಮಾತ್ರವಾಗಿದೆ. ನೀನು ಇಲ್ಲಿಗೆ ಬರದೇ ಇದ್ದಿದ್ದರೆ ನಿನ್ನ ಕೋಶವೂ ಅಪ್ರಯೋಜಕವಾಗುತ್ತಿತ್ತು ಅಥವಾ ನಿನ್ನ ಗೋಚರಕ್ಕೆ ಅದು ಬೀಳುತ್ತಿರಲೇ ಇಲ್ಲ ಎಂದನು.

**ಅಥ ಹೋವಾಚ ಮಹಾಶಾಲಂ ಜಾಬಾಲಂ । ಔಪಮನ್ಯವ ಕಂ ತ್ವಂ ವೈಶ್ವಾನರಂ ವೇತ್ಥೇತ್ಯಾಕಾಶಮೇವ ರಾಜನ್ನಿತಿ ಹೋವಾಚೋಮಿತಿ ಹೋವಾಚೈಷ ವೈ ಬಹುಲೋ ವೈಶ್ವಾನರ ಏತಂ ಹಿ ವೈ ತ್ವಂ ಬಹುಲಂ ವೈಶ್ವಾನರಂ ವೇತ್ಥ ತಸ್ಮಾತ್ತ್ವಂ ಬಹು ಪ್ರಜಯಾ ಪಶುಭಿರಸಿ ಯೋ ವಾ ಏತಂ ಬಹುಲಂ ವೈಶ್ವಾನರಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತ್ಯಾತ್ಮಾ ತ್ವಾ ಏಷ ವೈಶ್ವಾನರಸ್ಯಾತ್ಮಾ ತ್ವಾಹಾಸ್ಯದ್ಯದಿ ಹ ನಾಗಮಿಷ್ಯ ಇತ್ಯಾತ್ಮಾ ತೇಽವಿದಿತೋಽಭವಿಷ್ಯದ್ಯದಿ ಹ ನಾಗಮಿಷ್ಯ ಇತಿ ವಾ ॥ ೬ ॥**

ಅನಂತರ ಮಹಾಶಾಲಜಾಬಾಲವನ್ನು ಕುರಿತು ಎಲೈ ಔಪಮನ್ಯವನೇ, ವೈಶ್ವನರನಾರೆಂಬುದಾಗಿ ನೀನು ತಿಳಿದಿದ್ದೀಯೆ ಎಂದನು. **ಆಕಾಶವೆಂದು** ಅವನು ಉತ್ತರವನ್ನು ಕೊಡಲು ಅದನ್ನೂ ಒಪ್ಪಿ ಅದು ವೈಶ್ವಾನರಬಹುಲ (ಸಮೃದ್ಧ) ವೆಂದೂ ಇದನ್ನು ತಿಳಿದುಕೊಂಡಿರುವುದರಿಂದಲೇ ನೀನು ಪಶುಪುತ್ರಾದಿಗಳ ಬಾಹುಳ್ಯವನ್ನು ಹೊಂದಿರುವೆ. ಇದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣವಾದ ಆಯುಸ್ಸನ್ನು ಪಡೆಯುತ್ತಾನೆ. ಆದರೆ ಇದು ವೈಶ್ವಾನರರ ಪ್ರಧಾನ ಕಾಂಡಮಾತ್ರವಾಗಿರುವುದು. ನೀನು ಇಲ್ಲಿಗೆ ಬರದಿದ್ದರೆ ನಿನ್ನ ದೇಹದ ಮುಖ್ಯ ತತ್ತ್ವವೇ ಅಪ್ರಯೋಜಕವಾಗಿತ್ತು. ಅಥವಾ ನಿನಗೆ ಅದು ತಿಳಿಯುತ್ತಲೇ ಇರಲಿಲ್ಲ ಎಂದನು.

**ಅಥ ಹೋವಾಚ ಬುಡಿಲಮಾಶ್ವತರಾಶ್ವಿಂ । ವೈಯಾಘ್ರಪದ್ಯ, ಕಂ ತ್ವಂ ವೈಶ್ವಾನರಂ ವೇತ್ಥೇತಿ ವಾಯುಮೇವ ರಾಜನ್ನಿತಿ ಹೋವಾಚೋಮಿತಿ ಹೋವಾಚೈಷ ವೈ ಪೃಥಗ್ವರ್ತ್ಮಾ ವೈಶ್ವಾನರ ಏತಂ ಹಿ ವೈ ತ್ವಂ ಪೃಥಗ್ವರ್ತ್ಮಾನಂ ವೈಶ್ವಾನರಂ ವೇತ್ಥ ತಸ್ಮಾತ್ತ್ವಾಂ ಪೃಥಗ್ರಥಶ್ರೇಣಯೋಽನುಯಾಂತಿ ಯೋ ವಾ ಏತಂ ಪೃಥಗ್ವರ್ತ್ಮಾನಂ ವೈಶ್ವಾನರಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ಪ್ರಾಣಸ್ತ್ವಾ ಏಷ ವೈಶ್ವಾನರಸ್ಯ ಪ್ರಾಣಸ್ತ್ವಾಹಾಸ್ಯದ್ಯದಿ ಹ ನಾಗಮಿಷ್ಯ ಇತಿ ಪ್ರಾಣಸ್ತೇಽವಿದಿತೋಽಭವಿಷ್ಯದ್ಯದಿ ಹ ನಾಗಮಿಷ್ಯ ಇತಿ ವಾ ॥ ೭ ॥**

ಪುನಃ ಬುಡಿಲ ಆಶ್ವತರಾಶ್ವಿಯನ್ನು ಕುರಿತು ಎಲೈ ವೈಯಾಘ್ರಪದ್ಯನೇ, ವೈಶ್ವಾನರನಾರೆಂಬುದಾಗಿ ನೀನು ತಿಳಿದಿದ್ದೀಯೆ ಎನ್ನಲು ಅವನು **ವಾಯುವೇ** ವೈಶ್ವಾನರನೆಂದನು. ಅದನ್ನೂ ಒಪ್ಪಿಕೊಂಡು ಆ ರಾಜರ್ಷಿಯು ವಾಯುವು ವೈಶ್ವಾನರನ ಮಾರ್ಗವೈವಿಧ್ಯವು ನೀನು ಇದನ್ನು ತಿಳಿದುದರಿಂದಲೇ ನಾನಾಮಾರ್ಗಗಳಲ್ಲಿ ಸಂಚರಿಸತಕ್ಕ ರಥಗಳು ನಿನ್ನನ್ನು ಹಿಂಬಾಲಿಸುತ್ತವೆ. ಇದನ್ನು ತಿಳಿದವನು ಖಂಡಿತವಾಗಿಯೂ ಮೃತ್ಯುವನ್ನು ಜಯಿಸಿ ಪೂರ್ಣಾಯಸ್ಸನ್ನು

ಪಡೆಯುತ್ತಾನೆ. ಆದರೆ ಇದು ವೈಶ್ವಾನರನ **ಉಸಿರು** ಮಾತ್ರವಾಗಿದೆ. ನೀನು ನನ್ನಲ್ಲಿಗೆ ಬರದಿದ್ದರೆ ನಿನಗೆ ನಿನ್ನ **ಉಸಿರೂ** ಅಪ್ರಯೋಜಕವಾಗುತ್ತಿತ್ತು ಅಥವಾ ನಿನಗೆ ಅದರ ಅರಿವೇ ಇರುತ್ತಿರಲಿಲ್ಲ ಎಂದನು.

**ಅಥ ಹೋವಾಚೇಂದ್ರದ್ಯುಮ್ನಂ ಭಾಲ್ಲವೇಯಂ । ವೈಯಾಘ್ರಪದ್ಯ ಕಂ ತ್ವಂ ವೈಶ್ವಾನರಂ ವೇತ್ಥೇತ್ಯಾದಿತ್ಯಮೇವ ರಾಜನ್ನಿತಿ ಹೋವಾಚೋಮಿತಿ ಹೋವಾಚೈಷ ವೈ ಸುತತೇಜಾ ವೈಶ್ವಾನರ ಏತಂ ಹಿ ವೈ ತ್ವಾಂ ಸುತತೇಜಸಂ ವೈಶ್ವಾನರಂ ವೇತ್ಥ ತಸ್ಮಾತ್ತ್ವೈಷ ಸುತೋಽ-ದ್ಯಮಾನಃ ಪಚ್ಯಮಾನೋಽಕ್ಷೀಯಮಾಣೋ ಗೃಹೇಷು ತಿಷ್ಠತಿ ಯೋ ವಾ ಏತಂ ಸುತತೇ-ಜಸಂ ವೈಶ್ವಾನರಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ಚಕ್ಷುಸ್ತ್ವೇ-ತದ್ವೈಶ್ವಾನರಸ್ಯ ಚಕ್ಷುಸ್ತ್ವಾಹಾಸ್ಯದ್ಯದಿ ಹ ನಾಗಮಿಷ್ಯ ಇತಿ ಚಕ್ಷುಸ್ತೇಽವಿದಿತಮಭವಿ-ಷ್ಯದ್ಯದಿ ಹ ನಾಗಮಿಷ್ಯ ಇತಿ ವಾ ॥ ೮ ॥**

ಅನಂತರ ಇಂದ್ರದ್ಯುಮ್ನ ಭಾಲ್ಲವೇಯನನ್ನು ಕುರಿತು ವೈಶ್ವಾನರನಾರೆಂದು ನೀನು ತಿಳಿದಿದ್ದೀಯೆ ಎಂದು ಪ್ರಶ್ನಿಸಲಾಗಿ ಅವನು **ಆದಿತ್ಯನೇ** ವೈಶ್ವಾನರನೆಂದನು. ಅದನ್ನೂ ಅನುಮೋದಿಸಿ ನಿಜವಾಗಿಯೂ, ಸೋಮನ ತೇಜಸ್ಸೇ ವೈಶ್ವಾನರನು. ನೀನು ಇದನ್ನು ತಿಳಿದಿರುವುದರಿಂದಲೇ ನಿನ್ನ ಗೃಹದಲ್ಲಿ ಯಾವಾಗಲೂ ಸೋಮರಸವೂ ಅದರ ಪಾಕವೂ ಇಲ್ಲದೆ ಇರುವುದೇ ಇಲ್ಲ. ಇದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣಾಯುಸ್ಸನ್ನು ಪಡೆಯುತ್ತಾನೆ. ಆದರೆ ಇದು ವೈಶ್ವಾನರನ **ನೇತ್ರ** ಮಾತ್ರವಾಗಿದೆ. ನೀನು ನನ್ನಲ್ಲಿಗೆ ಬರದಿದ್ದರೆ ನಿನ್ನ ನೇತ್ರವೂ ಅಪ್ರಯೋಜಕವಾಗುತ್ತಿತ್ತು. ಅಥವಾ ನಿನಗೆ ಅದರ ಅರಿವೇ ಇರುತ್ತಿರಲಿಲ್ಲ ಎಂದನು.

**ಅಥ ಹೋವಾಚ ಜನಂ ಶಾರ್ಕರಾಕ್ಷ್ಯಂ । ಸಾಯವಸ ಕಂ ತ್ವಂ ವೈಶ್ವಾನರಂ ವೇತ್ಥೇತಿ ದಿವ-ಮೇವ ರಾಜನ್ನಿತಿ ಹೋವಾಚ ಓಮಿತಿ ಹೋವಾಚೈಷ ವಾಽಅತಿಷ್ಠಾ ವೈಶ್ವಾನರ ಏತಂ ಹಿ ವೈ ತ್ವಮತಿಷ್ಠಾ ವೈಶ್ವಾನರಂ ವೇತ್ಥ ತಸ್ಮಾತ್ತ್ವಂ ಸಮಾನಾನತಿತಿಷ್ಠಸಿ ಯೋ ವಾ ಏತಮ-ತಿಷ್ಠಾಂ ವೈಶ್ವಾನರಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ಮೂರ್ಧಾ ತ್ವಾ ಏಷ ವೈಶ್ವಾನರಸ್ಯ ಮೂರ್ಧಾ ತ್ವಾಹಾಸ್ಯದ್ಯದಿ ಹ ನಾಗಮಿಷ್ಯ ಇತಿ ಮೂರ್ಧಾ ತೇಽವಿ-ದಿತೋಽಭವಿಷ್ಯದ್ಯದಿ ಹ ನಾಗಮಿಷ್ಯ ಇತಿ ವಾ ॥ ೯ ॥**

ಆಮೇಲೆ ಜನಶರ್ಕರಾಕ್ಷ್ಯನನ್ನು ಕುರಿತು ಎಲೈ ಸಾಯವಸನೇ, ವೈಶ್ವಾನರನಾರೆಂಬುದಾಗಿ ನೀನು ತಿಳಿದಿದ್ದೀಯೆ ಎಂದು ಪ್ರಶ್ನಿಸಲು ಅವನು **ಅಂತರಿಕ್ಷವೆಂದು** ಹೇಳಿದನು. ಅದನ್ನೂ ಅನುಮೋದಿಸುತ್ತ ಅಂತರಿಕ್ಷವೇ ವೈಶ್ವಾನರನ ಸರ್ವೋತ್ಕೃಷ್ಟವಾದ ಅಂಶ. ನೀನು ಇದನ್ನು ತಿಳಿದಿರುವುದರಿಂದಲೇ ನೀನು ನಿನ್ನ ಸಮಾನರಾದವರಲ್ಲೆಲ್ಲಾ ಅತ್ಯುತ್ಕೃಷ್ಟನಾಗಿದ್ದೀಯೆ. ಇದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣಾಯುಸ್ಸನ್ನು ಪಡೆಯುತ್ತಾನೆ. ಆದರೆ ಇದು ವೈಶ್ವಾನರ ಶಿರೋಭಾಗ ಮಾತ್ರವಾಗಿದೆ. ನೀನು ನನ್ನಲ್ಲಿಗೆ ಬರದಿದ್ದರೆ ನಿನ್ನ ಶಿರಸ್ಸೂ ಅಪ್ರಯೋಜಕವಾಗುತ್ತಿತ್ತು. ಅಥವಾ ನಿನಗೆ ಅದರ ತಿಳಿವಳಿಕೆಯೇ ಇರುತ್ತಿರಲಿಲ್ಲ ಎಂದನು.

**ತಾನ್ ಹೋವಾಚ ಏತೇ ವೈ ಯೂಯಂ ಪೃಥಗ್ವೈಶ್ವಾನರಾನ್ವಿದ್ವಾಂಸಃ ಪೃಥಗನ್ನಮಘಸ್ತ ಪ್ರಾದೇಶಮಾತ್ರಮಿವ ಹ ವೈ ದೇವಾಃ ಸುವಿದಿತಾ ಅಭಿಸಂಪನ್ನಾಸ್ತಥಾ ತು ವ ಏನಾನ್ವಕ್ಷ್ಯಾಮಿ ಯಥಾ ಪ್ರಾದೇಶಮಾತ್ರಮೇವಾಭಿಸಂಪಾದಯಿಷ್ಯಾಮೀತಿ ॥ ೧೦ ॥**

ಕೊನೆಯಲ್ಲಿ ಅವರೆಲ್ಲರನ್ನೂ ಒಟ್ಟಿಗೆ ಉದ್ದೇಶಿಸಿ ನಿಮ್ಮಲ್ಲಿ ಪ್ರತಿಯೊಬ್ಬರೂ ವೈಶ್ವಾನರನ ಬೇರೆ ಬೇರೆ ಅಂಶಗಳನ್ನು ಗ್ರಹಿಸಿದ್ದೀರಿ. ಆದುದರಿಂದಲೇ ಬೇರೆ ಬೇರೆ ಅನ್ನವನ್ನು ಭುಜಿಸುತ್ತಿದ್ದೀರಿ. ಸುವಿದಿತರಾದ ಈ ದೇವತೆಗಳು ಪ್ರಾದೇಶವರ್ತಿಗಳಾಗಿ (Measure of a span) ಮಾತ್ರವಿರುವುದರಿಂದ ನಿಮಗೆ ಆಯಾ ದೇವತೆಗಳು ಪ್ರಾದೇಶ ವರ್ತಿಗಳಾಗಿ ಮಾತ್ರವಿರುವಂತೆ ನಿಮಗೆ ವಿವರಿಸುತ್ತೇನೆ ಎಂದನು.

**ಸ ಹೋವಾಚ । ಮೂರ್ಧಾನಮುಪದಿಶನ್ನೇಷ ವಾ ಅತಿಷ್ಠಾ ವೈಶ್ವಾನರ ಇತಿ ಚಕ್ಷುಷೀ ಉಪದಿಶನ್ನುವಾಚೈಷ ವೈ ಸುತತೇಜಾ ವೈಶ್ವಾನರ ಇತಿ ನಾಸಿಕೇಽಉಪದಿಶನ್ನುವಾಚೈಷ ವೈ ಪೃಥಗ್ವರ್ತ್ಮಾ ವೈಶ್ವಾನರ ಇತಿ ಮುಖ್ಯಮಾಕಾಶಮುಪದಿಶನ್ನುವಾಚೈಷ ವೈ ಬಹುಲೋ ವೈಶ್ವಾನರ ಇತಿ ಮುಖ್ಯಾ ಅಪ ಉಪದಿಶನ್ನುವಾಚೈಷ ವೈ ರಯಿರ್ವೈಶ್ವಾನರ ಇತಿ ಚುಬುಕ-ಮುಪದಿಶನ್ನುವಾಚೈಷ ವೈ ಪ್ರತಿಷ್ಠಾ ವೈಶ್ವಾನರ ಇತಿ ಸ ಏಷೋಽಗ್ನಿರ್ವೈಶ್ವಾನರೋ ಯತ್ಪುರುಷಃ ಸ ಯೋ ಹೈತಮೇವಮಗ್ನಿಂ ವೈಶ್ವಾನರಂ ಪುರುಷವಿಧಂ ಪುರುಷೇಽಂತಃ ಪ್ರತಿಷ್ಠಿತಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ನ ಹಾಸ್ಯ ಬ್ರುವಾಣಂ ಚ ನ ವೈಶ್ವಾನರೋ ಹಿನಸ್ತಿ ॥ ೧೧ ॥**

ಕೊನೆಯಲ್ಲಿ ತಲೆಯನ್ನು ನಿರ್ದೇಶಿಸಿ ಇದು ವೈಶ್ವಾನರನ ಉತ್ಕೃಷ್ಟವಾದ ಅಂಶವೆಂದೂ ಕಣ್ಣುಗಳನ್ನು ತೋರಿಸಿ ಅದು ವೈಶ್ವಾನರನ ಅಂಶವಾದ **ಸೋಮತೇಜಸ್ಸೆಂದೂ, ನಾಸಿಕದ** ಕಡೆ ತೋರಿಸಿ ಅದು ವೈಶ್ವಾನರನ **ಮಾರ್ಗಗಳ ವೈವಿಧ್ಯ**ವೆಂದೂ, **ಆಕಾಶವನ್ನು** ನಿರ್ದೇಶಿಸಿ ಅದು **ಸಮೃದ್ಧವೈಶ್ವಾನರ**ನೆಂದೂ, **ಮುಖ್ಯೋದಕ**ದ ಕಡೆ ತೋರಿಸಿ ಅದು ವೈಶ್ವಾನರ ಧನವೆಂದೂ, **ಗಡ್ಡವನ್ನು** ತೋರಿಸಿ, ಅದು **ವೈಶ್ವಾನರ ಆಧಾರ**ವೆಂದೂ ಹೇಳಿದನು. ಈ ವೈಶ್ವಾನ ರಾಗ್ನಿಯು **ಪುರುಷಶ್ರೇಷ್ಠ**ನಲ್ಲದೆ ಬೇರೆ ಯಾರೂ ಅಲ್ಲವೆಂದೂ, ಮತ್ತು **ಪುರುಷರೂಪನೂ, ಪುರುಷ ಅಂತಸ್ಥನಾಗಿ ಪ್ರತಿಷ್ಠಿತನಾಗಿರುವವನೂ** ಆದ ಈ **ವೈಶ್ವಾನರಾಗ್ನಿ**ಯನ್ನು ತಿಳಿದವನು ಮರಣವನ್ನು ಜಯಿಸಿ ಪೂರ್ಣಾ ಯುಸ್ಸನ್ನು ಪಡೆಯುವನೆಂದೂ, ಇವನ ಪ್ರಶಂಸೆಯನ್ನು ಯಾವಾಗಲೂ ಮಾಡುವವನಿಗೆ ಯಾವ ತೊಂದರೆಯೂ ಆಗಲಾರದೆಂದೂ ವಿವರಿಸಿದನು.

ಹೀಗೆ ಕರ್ಮಾನುಷ್ಠಾನಕ್ಕೂ ಆಧ್ಯಾತ್ಮಿಕವಾದ ಜ್ಞಾನಸಂಪಾದನೆಗೂ ಇರತಕ್ಕ ಸಂಬಂಧವನ್ನು ತೋರಿಸಿ ವೈಶ್ವಾನರಾಗ್ನಿಯು ಸ್ವರೂಪವನ್ನು ವಿವರಿಸುವ ಕ್ರಮವನ್ನು ಛಾಂದೋಗ್ಯಾದಿ ಉಪನಿಷತ್ತುಗಳಲ್ಲಿಯೂ ವಿವರಿಸಿದೆ. ಛಾಂದೋಗ್ಯೋಪನಿಷತ್ತಿನಲ್ಲಿಯೂ (೫-೧೧ ರಿಂದ ೫-೧೮) ಶತಪಥಬ್ರಾಹ್ಮಣದಲ್ಲಿ ಹೇಳಿರುವಂತೆಯೇ ವೈಶ್ವಾನರಾಗ್ನಿಸಂಬಂಧವಾದ ಕಥೆಯನ್ನೂ ವಿವರಿಸಿದೆ. ಆದರೆ ಹೆಸರುಗಳಲ್ಲಿಯೂ, ವಿವರಣೆಯಲ್ಲಿಯೂ ಅಲ್ಲಲ್ಲಿ ಕೊಂಚ ವ್ಯತ್ಯಾಸಗಳಿರುತ್ತವೆ. ಆದರೂ ಸಹ ಅಶ್ವಪತಿಕೈಕೇಯನು ತನ್ನಲ್ಲಿ ಉಪದೇಶಕ್ಕಾಗಿ ಬಂದ ಎಲ್ಲಾ ಋಷಿಗಳ ಅಭಿಪ್ರಾಯವನ್ನೂ ತಿಳಿದು, ಅವುಗಳನ್ನೆಲ್ಲಾ ಅನುಮೋದಿಸಿ ಕೊನೆಯಲ್ಲಿ ಅವೆಲ್ಲವೂ ವೈಶ್ವಾನರಾಗ್ನಿಯ ಬೇರೆಬೇರೆ ಅಂಶಗಳೆಂದೂ ಪೂರ್ಣವಾದ ವೈಶ್ವಾನರನಲ್ಲಿ ಆ ಎಲ್ಲಾ ಅಂಶಗಳ ಸಾಮರಸ್ಯವೂ ಒಟ್ಟಾಗಿದೆಯೆಂದೂ ವೈಶ್ವಾನರನ ಸರ್ವತೋಮುಖವಾದ ಸ್ವರೂಪವನ್ನು ಶತಪಥ ಬ್ರಾಹ್ಮಣದಲ್ಲಿರುವಂತೆಯೇ ವಿವರಿಸಿದ್ದಾನೆ.

**ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾತ್ಮಾ ಸಂದೇಹೋ ಬಹುಲೋ ಬಸ್ತಿರೇವ ರಯಿಃ ಪೃಥಿವ್ಯೇವ**

**ಪಾದಾವುರ ಏವ ವೇದಿರ್ಲೋಮಾನಿ ಬರ್ಹಿರ್ಹೃದಯಂ ಗಾರ್ಹಪತ್ಯೋ ಮನೋಽನ್ವಾ-ಹಾರ್ಯಪಚನ ಆಸ್ಯಮಾಹವನೀಯಃ ॥**

(ಛಾಂದೋಗ್ಯೋಪನಿಷತ್ ೫-೧೮-೨)

ಅತ್ಯಧಿಕವಾಗಿ ಬೆಳಗುತ್ತಿರುವ ಈ ಅಂತರಿಕ್ಷವೇ ವಿಶ್ವಾತ್ಮನಾದ ಈ ವೈಶ್ವಾನರನ ಶಿರಸ್ಸು, ವಿಶ್ವರೂಪನಾದ ಈ ಆದಿತ್ಯನೇ ಅವನ ನೇತ್ರವು, ಮಾರ್ಗವೈವಿಧ್ಯವನ್ನು ಹೊಂದಿರುವ ವಾಯುವೇ ಉಸಿರು; ವಿಸ್ತೃತವಾಗಿರುವ ದಿಕ್ಕೇ ಅವನ ದೇಹ, ಅಭ್ರೂಪದ ಧನವೇ ಅವನ ಅಂತಃಕೋಶ; ಸರ್ವಾಧಾರವಾಗಿರುವ ಪೃಥಿವಿಯೇ ಅವನ ಪಾದ; ಯಜ್ಞವೇದಿಕೆಯೇ ಅವನ ಎದೆ. ದರ್ಭೆಗಳೇ ಅವನ ರೋಮಗಳು, ಗಾರ್ಹಪತ್ಯಾಗ್ನಿಯೇ ಅವನ ಹೃದಯ, ಅನ್ವಾಹಾರ್ಯಪಚನಾಗ್ನಿಯೇ ಅವನ ಮನಸ್ಸು, ಆಹವನೀಯಾಗ್ನಿಯೇ ಅವನ ಮುಖ.

**ಸ ಯ ಇದಮವಿದ್ವಾನಗ್ನಿಹೋತ್ರಂ ಜುಹೋತಿ ಯಥಾಂಗಾರಾನಪೋಹ್ಯ ಭಸ್ಮನಿ ಜುಹುಯಾ-ತ್ತಾದೃಕ್ತತ್ಸ್ಯಾತ್ ।**

(ಛಾ. ಉ. ೫-೨೪-೧)

ಈ ವೈಶ್ವಾನರಾಗ್ನಿಯ ಸ್ವರೂಪವನ್ನು ತಿಳಿಯದೇ ಅಗ್ನಿಹೋತ್ರವನ್ನು ನೆರವೇರಿಸುವವನು ಬೆಂಕಿಯಿಲ್ಲದ ಭಸ್ಮದಲ್ಲಿ ಹೋಮಮಾಡಿದಂತಾಗುತ್ತದೆಂದು ಜ್ಞಾನದ ಆವಶ್ಯಕತೆಯನ್ನು ತೋರಿಸಿದೆ.

**ಅಥ ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ ತಸ್ಯ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸು ಹುತಂ ಭವತಿ ।**

(ಛಾ. ಉ. ೫-೨೪-೨)

ವಿಶ್ವಾತ್ಮನಾದ ಈ ವೈಶ್ವಾನರಾಗ್ನಿಯ ಮಹಿಮೆಯನ್ನು ತಿಳಿದುಕೊಂಡು ಅಗ್ನಿಹೋತ್ರವನ್ನು ನೆರವೇರಿಸುವವನು ಸಕಲ ಲೋಕಗಳಲ್ಲಿಯೂ ಸಕಲ ಭೂತಗಳಲ್ಲಿಯೂ ಸಕಲವಾದ ಆತ್ಮಗಳಲ್ಲಿಯೂ ಹೋಮಮಾಡಿದಂತಾಗುತ್ತದೆ. ಎಂದು ವೈಶ್ವಾರಾಗ್ನಿಯ ವ್ಯಾಪಕತ್ವವನ್ನು ತೋರಿಸಿದೆ.

**ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಃ ।**

(ನಿ. ೭-೨೧)

ಎಂದು ಮೇಲೆ ಉದಹರಿಸಿರುವ ನಿರುಕ್ತಕಾರರ ನಿರ್ವಚನವೂ ಸಹ ಈ ಎಲ್ಲಾ ಶ್ರುತಿ ವಾಕ್ಯಗಳನ್ನೇ ಆಧಾರವಾಗಿಟ್ಟು ಕೊಂಡಿರುತ್ತದೆ. ಈ ನಿರ್ವಚನವನ್ನೇ ಅನುಸರಿಸಿ ಶಂಕರಾಚಾರ್ಯರೂ ಸಹ,

**ವಿಶ್ವಾನ್ನರಾನ್ನಯತಿ ಪುಣ್ಯಪಾಪಾನುರೂಪಾಂ ಗತಿಂ ಸರ್ವಾತ್ಮೈಷ ಈಶ್ವರೋ ವೈಶ್ವಾನರೋ ವಿಶ್ವೋ ನರ ಏವ ವಾ ಸರ್ವಾತ್ಮತ್ವಾತ್ । ವಿಶ್ವೈರ್ವಾ ನರೈಃ ಪ್ರತ್ಯಗಾತ್ಮತಯಾ ಪ್ರವಿಭಜ್ಯ ನೀಯತ ಇತಿ ವೈಶ್ವಾನರಸ್ತಮೇವಮುಪಾಸ್ತೇ । .... .... .... ... ವೈಶ್ವಾನರವಿತ್ಸ-ರ್ವಾತ್ಮಾ ಸನ್ನನ್ನಮತ್ತಿ ।**

(ಛಾಂದೋಗ್ಯೋಪನಿಷದ್ಭಾಷ್ಯ ೫-೧೮-೧)

ಎಂಬುದಾಗಿ ನಿರುಕ್ತಕಾರರ ನಿರ್ವಚನದಂತೆಯೇ ವಿಶ್ವಾತ್ಮನಾದ ವೈಶ್ವಾನರಾಗ್ನಿಯ ಸ್ವರೂಪವನ್ನು ವಿವರಿಸಿದ್ದಾರೆ.

॥ ಸಾಯಣಭಾಷ್ಯಂ ॥

**ವೈಶ್ವಾನರಾಯೇತಿ ಪಂಚದಶರ್ಚಂ ದ್ವಿತೀಯಂ ಸೂಕ್ತಂ । ತಥಾ ಚಾನುಕ್ರಮಣಿಕಾ । ವೈಶ್ವಾನರಾಯ ಪಂಚೋನಾ ವೈಶ್ವಾನರೀಯಂ ತು ಜಾಗತಂ ತ್ವಿತಿ । ವಿಶ್ವಾಮಿತ್ರ ಋಷಿಃ । ಜಗತೀ ಛಂದಃ । ವೈಶ್ವಾನರೋಽಗ್ನಿರ್ದೇವತಾ ॥ ಪೃಷ್ಠ್ಯಾಭಿಪ್ಲವಿಕಯೋಸ್ತೃತೀಯೇಽಹನ್ಯಾಗ್ನಿಮಾರುತೇ ವೈಶ್ವಾನರಾಯ ಧಿಷಣಾಮಿತಿ ವೈಶ್ವಾನರನಿವಿದ್ಧಾನೀಯಂ ಸೂಕ್ತಂ । ತೃತೀಯಸ್ಯೇತಿ ಖಂಡೇ ಸೂತ್ರಿತಂ । ವೈಶ್ವಾನರಾಯ ಧಿಷಣಾಂ ಧಾರಾವರಾ ಮರುತಃ । ಆ. ೭-೭ । ಇತಿ ॥**

ಅನುವಾದವು—**ವೈಶ್ವಾನರಾಯ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ವೈಶ್ವಾನರಾಯ ಪಂಚೋನಾ ವೈಶ್ವಾನರೀಯಂ ತು ಜಾಗತಂ ತು** ಎಂದು ಹೇಳಿರುವುದು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು; ವೈಶ್ವಾನರನಾಮಕನಾದ ಅಗ್ನಿಯು ದೇವತೆಯು; ಜಗತೀಛಂದಸ್ಸು. ಪೃಷ್ಠ್ಯ ಮತ್ತು ಅಭಿಪ್ಲವವೆಂಬ ಯಾಗಗಳ ಮೂರನೆಯ ದಿವಸದಲ್ಲಿ ಆಗ್ನಿಮಾರುತಶಸ್ತ್ರಮಂತ್ರಪಠನಮಾಡುವಾಗ **ವೈಶ್ವಾನರಾಯ ಧಿಷಣಾಂ** ಎಂಬ ಈ ಸೂಕ್ತವನ್ನು ನಿವಿದ್ಧಾನೀಯ ಸೂಕ್ತವನ್ನಾಗಿ (ನಿವಿನ್ಮಂತ್ರಗಳ ಪಠನಕ್ಕಾಗಿ) ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ತೃತೀಯಸ್ಯ** ಎಂಬ ಖಂಡದಲ್ಲಿ **ವೈಶ್ವಾನರಾ ಧಿಷಣಾಂ ಧಾರಾವರಾ ಮರುತಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೭)

## ಸೂಕ್ತ—೨

ಮಂಡಲ—೩ ॥ ಅನುವಾಕ—೧ ॥ ಸೂಕ್ತ—೨ ॥
ಅಷ್ಟಕ—೨ ॥ ಅಧ್ಯಾಯ—೮ ॥ ವರ್ಗ—೧೭, ೧೮, ೧೯
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥
॥ ಋಷಿಃ—ವಿಶ್ವಾಮಿತ್ರಃ ॥
॥ ದೇವತಾ—ಅಗ್ನಿರ್ವೈಶ್ವಾನರಃ ।
॥ ಛಂದಃ—ಜಗತೀ ॥

॥ ಸಂಹಿತಾಪಾಠಃ ॥

ವೈಶ್ವಾನರಾಯ ಧಿಷಣಾಮೃತಾವೃಧೇ ಘೃತಂ ನ ಪೂತಮಗ್ನಯೇ ಜನಾಮಸಿ ।
ದ್ವಿತಾ ಹೋತಾರಂ ಮನುಷಶ್ಚ ವಾಘತೋ ಧಿಯಾ ರಥಂ ನ ಕುಲಿಶಃ ಸಮೃಣ್ವತಿ ॥

॥ ಪದಪಾಠಃ ॥

ವೈಶ್ವಾನರಾಯ । ಧಿಷಣಾಂ । ಋತ್ಯವೃಧೇ । ಘೃತಂ । ನ । ಪೂತಂ । ಅಗ್ನಯೇ । ಜನಾಮಸಿ ।

ದ್ವಿತಾ । ಹೋತಾರಂ । ಮನುಷಃ । ಚ । ವಾಘತಃ । ಧಿಯಾ । ರಥಂ । ನ । ಕುಲಿಶಃ । ಸಂ । ಋಣ್ವತಿ ॥

॥ ಸಾಯಣಭಾಷ್ಯಂ ॥

ಋತಾವೃಧೇ ಋತಸ್ಯೋದಕಸ್ಯ ಯಜ್ಞಸ್ಯ ವಾ ವರ್ಧಯಿತ್ರೇ ವೈಶ್ವಾನರಾಯ । ವೈಶ್ವಾನರಶಬ್ದೋ ಯಾಸ್ಕೇನ ವ್ಯಾಖ್ಯಾತಃ । ವೈಶ್ವಾನರಃ ಕಸ್ಮಾದ್ವಿಶ್ವಾನ್ನರಾನ್ನಯತಿ ವಿಶ್ವ ಏನಂ ನರಾ ನಯಂತೀತಿ ವಾ । ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಸ್ತಸ್ಯೈಷಾ ಭವತಿ। ನಿ. ೭-೨೧ । ಇತಿ । ತಸ್ಮೈ ಪೂತಂ ಘೃತಂ ನ ಘೃತಮಿವ ಧಿಷಣಾಂ ಸ್ತುತಿಂ ಜನಾಮಸಿ । ಜನಯಾಮಃ । ಯಥಾ ಘೃತಂ ಪ್ರೀತಿಂ ಜನಯತಿ ತಥಾ ಪ್ರೀತಿಂ ಕರೋಮೀತ್ಯರ್ಥಃ । ದ್ವಿತಾ ದ್ವಿಧಾ ಗಾರ್ಹಪತ್ಯಾಹವನೀಯರೂಪಾಭ್ಯಾಂ ಯುಕ್ತಂ ಹೋತಾರಂ ದೇವಾನಾಮಾಹ್ವಾತಾರಮಗ್ನಿಂ ಮನುಷೋ ಮನುಷ್ಯಾ ವಾಘತಶ್ಚ ಋತ್ವಿಜಶ್ಚ ಧಿಯಾ ಕರ್ಮಣಾ ಕುಲಿಶೋ ವಾಸ್ಯಾದೀ ರಥಂ ನ ರಥಮಿವ ಸಮೃಣ್ವತಿ । ಸಂಸ್ಕುರ್ವಂತಿ ॥

॥ ಪ್ರತಿಪದಾರ್ಥ ॥

**ಋತಾವೃಧೇ**— ಯಜ್ಞವರ್ಧಕನೂ । **ವೈಶ್ವಾನರಾಯ**— ವೈಶ್ವಾನರರೂಪವುಳ್ಳವನೂ ಆದ । **ಅಗ್ನಯೇ**—ಅಗ್ನಿಯನ್ನುದ್ದೇಶಿಸಿ । **ಪೂತಂ**— ಪವಿತ್ರವಾದ । **ಘೃತಂ ನ**—ಘೃತದಂತೆ । **ಧಿಷಣಾಂ**—ಸ್ತುತಿಯನ್ನು । **ಜನಾಮಸಿ**—ನಿರ್ಮಿಸೋಣ । **ದ್ವಿತಾ**— ಗಾರ್ಹಪತ್ಯ ಮತ್ತು ಆಹವನಿಯರೂಪಗಳಿಂದ ಕೂಡಿದವನೂ । **ಹೋತಾರಂ**—ದೇವತೆಗಳ ಹೋತೃವೂ ಆದ ಅಗ್ನಿಯನ್ನು । **ಮನುಷಃ**— ಯಜ್ಞಕರ್ತರಾದ ಮಾನವರೂ । **ವಾಘತಃ ಚ**—ಋತ್ವಿಕ್ಕುಗಳೂ ! **ಧಿಯಾ**—ತಮ್ಮ ಕರ್ಮದಿಂದ । **ಕುಲಿಶಃ**—ಮರಗೆಲಸದವನು । **ರಥಂ ನ**—ರಥವನ್ನು ಸಂಸ್ಕರಿಸುವಂತೆ । **ಸಮೃಣ್ವತಿ**—ಸಂಸ್ಕರಿಸುತ್ತಾರೆ.

॥ ಭಾವಾರ್ಥ ॥

ಯಜ್ಞವರ್ಧಕನೂ, ವೈಶ್ವಾನರರೂಪವುಳ್ಳವನೂ ಆದ ಅಗ್ನಿಯನ್ನುದ್ದೇಶಿಸಿ ಪವಿತ್ರವಾದ ಘೃತದಂತೆ ಸ್ತುತಿಯನ್ನು ನಿರ್ಮಿಸೋಣ. ಗಾರ್ಹಪತ್ಯ ಮತ್ತು ಆಹವನೀಯರೂಪಗಳಿಂದ ಕೂಡಿದವನೂ, ದೇವತೆಗಳ ಹೋತೃವೂ ಆದ ಅಗ್ನಿಯನ್ನು ಯಜ್ಞಕರ್ತರಾದ ಮಾನವರೂ ಋತ್ವಿಕ್ಕುಗಳೂ ತಮ್ಮ ಕರ್ಮದಿಂದ ಮರಗೆಲಸದವನು ರಥವನ್ನು ಸಂಸ್ಕರಿಸುವಂತೆ ನಿರ್ಮಿಸಿ ಪರಿಷ್ಕರಿಸುತ್ತಾರೆ.

## English Translation.

We offer to Agni, who is Vaishwanara, the augmenter of water, praise (as bland) as pure clarified butter ; and the priests and the

worshipper incite by their (pious) rites the invoker of the gods to his two-fold function, as a wheelwright fabricates a car.

॥ ವಿಶೇಷವಿಷಯಗಳು ॥

ಈ ಸೂಕ್ತವು ನಿವಿನ್ಮಂತ್ರಪಠನಕ್ಕಾಗಿ ಉಪಯೋಗಿಸಲ್ಪಡುವುದು ಎಂದು ವಿನಿಯೋಗದಲ್ಲಿ ತಿಳಿಸಲಾಗಿದೆ. ನಿವಿನ್ಮಂತ್ರಗಳೇನು, ಅವುಗಳ ಸ್ವರೂಪವೇನು, ಎಂಬವಿಷಯದಲ್ಲಿ ಸೂಕ್ಷ್ಮವಾದ ವಿವರಣೆಯು ಅವಶ್ಯಕವಾಗಿರುವುದು.

ಒಂದು ದೇವತೆಯನ್ನಾಗಲಿ, ಅಥವಾ ದೇವತೆಗಳ ಒಂದು ಗುಂಪನ್ನಾಗಲಿ ಉದ್ದೇಶಿಸಿ ಅವರ ಅಸಾಧಾರಣವಾದ ಗುಣಗಳನ್ನು ವರ್ಣಿಸಿ ಅವರನ್ನು ಆಹ್ವಾನಮಾಡುವ ಮಂತ್ರಗಳಿಗೆ **ನಿವಿದ್** ಮಂತ್ರವೆಂಬ ಹೆಸರು ಪ್ರಸಿದ್ಧವಾಗಿದೆ. ಇದನ್ನೇ ಬೃಹದ್ದೇವತೆಯಲ್ಲಿ ತಿಳಿಸುತ್ತಾ,

**ಕರ್ಮೈವ ತಾವತ್ಸಾವಿತ್ರ್ಯಂ ನಿವಿದಿ ಸ್ತೌತಿ ಕರ್ಮಣಾ ।**
**ಯದ್ಧೇನುಃ ಸಪ್ತ್ಯನಡ್ವಾಹೌ ವೋಳ್ಹಾ ದೋಗ್ಧ್ರ್ಯಶುರೇವ ವಾ ॥**

(ಬೃಹದ್ದೇವತಾ ೩–೫೦)

**ದೋಗ್ಧ್ರೀ** ಎನ್ನುವುದರಿಂದ ಹಾಲು ಕರೆಯುವ ಹಸುವೆಂದೂ, **ಆಶು** (ವೇಗಗಾಮೀ) ಎನ್ನುವುದರಿಂದಲೂ, **ವೋಳ್ಹಾ**, (ಹೊರೆಯನ್ನು ವಹಿಸುವುದು) ಎನ್ನುವುದರಿಂದ ಎತ್ತೆಂದೂ ಅವುಗಳ ವೈಶಿಷ್ಟ್ಯವನ್ನು ಆಯಾ ವಿಶೇಷಣಗಳಿಂದ ತಿಳಿಯುವಂತೆ **ನಿವಿದ್** ಮಂತ್ರಗಳ ದ್ವಾರಾ ಆಯಾ ದೇವತೆಯ ವೈಯಕ್ತಿಕವಾದ ಗುಣಗಳನ್ನು ಆಯಾ ಕರ್ಮಗಳ ವಿವರಣೆಯಿಂದ ತಿಳಿಯಬಹುದು. ಉದಾಹರಣೆಗೆ,

**ಅಭಿ ತ್ವಾ ದೇವ ಸವಿತರೀಶಾನಂ ವಾರ್ಯಾಣಾಂ । ಸದಾವನ್ಭಾಗಮೀಮಹೇ ।**

(ಋ. ಸಂ. ೧-೨೪-೩)

ಎಂಬ ಋಕ್ಕಿನಲ್ಲಿ ಸವಿತೃದೇವತೆಯನ್ನುದ್ದೇಶಿಸಿ **ನಿವಿದ್** ಮಂತ್ರವು ಸವಿತೃವಿನ ವೈಶಿಷ್ಟ್ಯವನ್ನು ಅವನ ಅಸಾಧಾರಣವಾದ ಕರ್ಮದ ವಿವರಣೆಯಿಂದ ತಿಳಿಸುತ್ತದೆ. **ನಿವಿದ್** ಮಂತ್ರಗಳ ಮಹಿಮೆಯೂ, ಜಗತ್ಸೃಷ್ಟಿಗೂ ಆ ಮಹಾ ಮಂತ್ರಗಳಿಗೂ ಇರುವ ಕಾರ್ಯಕಾರಣಸಂಬಂಧವೂ ಐತರೇಯ ಬ್ರಾಹ್ಮಣದಲ್ಲಿ ಈ ರೀತಿ ಪಠಿತವಾಗಿದೆ––

**ಪ್ರಜಾಪತಿರ್ವಾ ಇದಮೇಕ ಏವಾಗ್ರ ಆಸ ಸೋಽಕಾಮಯತ ಪ್ರಜಾಯೇಯ ಭೂಯಾನ್ತ್ಸ್ಯಾಮಿತಿ ಸ ತಪೋಽತಪ್ಯತ ಸ ವಾಚಮಯಚ್ಛತ್ಸ ಸಂವತ್ಸರಸ್ಯ ಪರಸ್ತಾದ್ವ್ಯಾಹರದ್ದ್ವಾದಶಕೃತ್ವೋ ದ್ವಾದಶಪದಾ ವಾ ಏಷಾ ನಿವಿದೇತಾಂ ವಾವ ತಾಂ ನಿವಿದಂ ವ್ಯಾಹರತ್ತಾಂ ಸರ್ವಾಣಿ ಭೂತಾನ್ಯನ್ವಸೃಜ್ಯಂತ ।**

(ಐ. ಬ್ರಾ ೧೦–೧)

ಆದಿಯಲ್ಲಿ ಪ್ರಜಾಪತಿಯು ಒಬ್ಬಂಟಿಗನಾಗಿದ್ದುದರಿಂದ ಪ್ರಜಾಸೃಷ್ಟಿಯನ್ನು ಮಾಡಿ, ಬಹುಸಂಖ್ಯಾತನಾಗಬೇಕೆಂದು ಅಪೇಕ್ಷಿಸಿ, ಒಂದು ವರ್ಷಕಾಲ ಮೌನವನ್ನಾಶ್ರಯಿಸುತ್ತಾ ತಪಸ್ಸನ್ನಾಶ್ರಯಿಸಿದನು. ಅನಂತರ ಹನ್ನೆರಡು ಮಹಾ ವಾಕ್ಯಗಳನ್ನೊಳಗೊಂಡ **ನಿವಿದ್** ಮಂತ್ರಗಳನ್ನು ಹನ್ನೆರಡು ಸಲ ಪಠಿಸಿದನಂತರ ಜಗತ್ತಿನಲ್ಲಿ ಭೂತಜಾತಗಳೆಲ್ಲವೂ

ಸ್ಪಷ್ಟವಾದವು ಎಂದು ಈ ಮಂತ್ರಗಳ ಪ್ರಭಾವವನ್ನು ತಿಳಿಸಿ ಅನಂತರ ಕರ್ಮಕಾಲಗಳಲ್ಲಿ ಈ ಮಂತ್ರದ ವೈಶಿಷ್ಟ್ಯ ವನ್ನೂ, ಪ್ರಯೋಗದ ಕ್ರಮವನ್ನೂ ಈ ರೀತಿ ತಿಳಿಸಿದೆ—

**ಗರ್ಭಾ ವಾ ಏತ ಉಕ್ಥಾನಾಂ ಯನ್ನಿವಿದಸ್ತದ್ಯತ್ಪುರಸ್ತಾದುಕ್ಥಾನಾಂ ಪ್ರಾತಃಸವನೇ ಧೀಯಂತೇ ತಸ್ಮಾತ್ಪರಾಂಚೋ ಗರ್ಭಾ ಧೀಯಂತೇ ಪರಾಂಚಃ ಸಂಭವತಿ | ಯನ್ಮಧ್ಯತೋ ಮಧ್ಯಂದಿನೇ ಧೀಯಂತೇ ತಸ್ಮಾನ್ಮಧ್ಯೇ ಗರ್ಭಾ ಧೃತಾಃ | ಯದಂತತಸ್ತೃತೀಯಸವನೇ ಧೀಯಂತೇ ತಸ್ಮಾದಮುತೋಽರ್ವಾಂಚೋ ಗರ್ಭಾಃ ಪ್ರಜಾಯಂತೇ ಪ್ರಜಾತ್ಯೈ | ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ | ಪೇಶಾ ವಾ ಏತ ಉಕ್ಥಾನಾಂ ಯನ್ನಿವಿದಸ್ತದ್ಯತ್ಪುರಸ್ತಾದುಕ್ಥಾನಾಂ ಪ್ರಾತಃಸವನೇ ಧೀಯಂತೇ ಯಥೈವ ಪ್ರವಣಯತಃ ಪೇಶಃ ಕುರ್ಯಾತ್ತಾದೃಕ್ತದ್ಯನ್ಮಧ್ಯತೋ ಮಧ್ಯಂದಿನೇ ಧೀಯಂತೇ ಯಥೈವ ಮಧ್ಯತಃ ಪೇಶಃ ಕುರ್ಯಾತ್ತಾದೃಕ್ತದ್ಯದಂತತಸ್ತೃತೀಯಸವನೇ ಧೀಯಂತೇ ಯಥೈವಾವಪ್ರಜ್ಜನತಃ ಪೇಶಃ ಕುರ್ಯಾತ್ತಾದೃಕ್ತತ್ | ಸರ್ವತೋ ಯಜ್ಞಸ್ಯ ಪೇಶಸಾ ಶೋಭತೇ ಯ ಏವಂ ವೇದ ||**

(ಐ. ಬ್ರಾ. ೧೧-೧೦)

**ನಿವಿದ್** ಮಂತ್ರಗಳು **ಉಕ್ಥ**ಗಳಿಗೆ ಗರ್ಭರೂಪದಲ್ಲಿವೆ. ಎಂದರೆ ಪ್ರಾತಃಸವನದಲ್ಲಿ ಉಕ್ಥಗಳಿಗೆ ಪೂರ್ವಭಾವಿಯಾಗಿ ಪಠಿತವಾಗುವುವು. ಆದುದರಿಂದಲೇ ಗರ್ಭಗಳೂ ಸಹ ಪರಾಙ್ಮುಖವಾಗಿಯೇ ಪ್ರಾರಂಭವಾಗಿ ಇರುತ್ತವೆ. ಮಾಧ್ಯಂದಿನ ಸವನದಲ್ಲಿ ಈ ಮಂತ್ರಗಳು ಮಧ್ಯಕಾಲದಲ್ಲಿ ಪಠಿತವಾಗುತ್ತನೆ. ಆದುದರಿಂದಲೇ ಗರ್ಭಗಳೂ ಮಧ್ಯದಲ್ಲಿ ಧರಿಸಲ್ಪಡುತ್ತವೆ. ತೃತೀಯಸವನಕಾಲದಲ್ಲಿ **ನಿವಿದ್** ಮಂತ್ರಗಳು ಪಶ್ಚಾದ್ಭಾಗಗಳಲ್ಲಿ ಪಠಿತವಾಗುವುದರಿಂದ ಗರ್ಭಸ್ಥವಾದ ಶಿಶುವೂ ಅವಾಗ್ರೂಪವಾಗಿ ಜನಿಸುತ್ತದೆ. ಈ ತತ್ವಗಳನ್ನರಿತವನು ಪ್ರಜಾಸಂಪತ್ತಿನಿಂದಲೂ, ಪಶುಸಂಪತ್ತಿನಿಂದಲೂ ಯುಕ್ತನಾಗುತ್ತಾನೆ. **ನಿವಿದ್** ಮಂತ್ರಗಳು **ಉಕ್ಥ**ಗಳಿಗೆ ಆಭರಣದ ರೂಪದಲ್ಲಿದ್ದು ಅವುಗಳ ಸೌಂದರ್ಯವನ್ನೂ ಪ್ರಕಾಶವನ್ನೂ ವೃದ್ಧಿಪಡಿಸುತ್ತವೆ. ಪ್ರಾತಃಸವನದಲ್ಲಿ ಪಠಿಸತಕ್ಕ ಮಂತ್ರಗಳು ಪ್ರವಣೋರ್ಧ್ವದ ಆಭರಣಗಳಂತೆಯೂ, ಮಾಧ್ಯಂದಿನದ ಕಾಲದಲ್ಲಿ ಪಠಿಸತಕ್ಕ ಮಂತ್ರಗಳು ಮಧ್ಯಪ್ರದೇಶದ ಆಭರಣಗಳಂತೆಯೂ, ತೃತೀಯಸವನದ ಮಂತ್ರಗಳು ಅಧೋಭಾಗದ ಆಭರಣಗಳಂತೆಯೂ ಅಲಂಕಾರಜನಕಗಳಾಗಿವೆ. ಇದನ್ನರಿತವನು ಯಜ್ಞವನ್ನೂ ಅಲಂಕರಿಸುತ್ತಾ ತಾನೂ ಪ್ರಕಾಶಿಸುತ್ತಾನೆ. ಮತ್ತು,

**ಸೌರ್ಯಾ ವಾ ಏತಾ ದೇವತಾ ಯನ್ನಿವಿದಿಸ್ತದ್ಯತ್ಪುರಸ್ತಾದುಕ್ಥಾನಾಂ ಪ್ರಾತಃಸವನೇ ಧೀಯಂತೇ ಮಧ್ಯತೋ ಮಧ್ಯಂದಿನೇ ತತಸ್ತೃತೀಯಸವನ ಆದಿತ್ಯಸ್ಯೈವ ತದ್ವ್ರತಮನು ಪರ್ಯಾವರ್ತಂತೇ | ಪಚ್ಛೋ ವೈ ದೇವಾ ಯಜ್ಞಂ ಸಮಭರಂಸ್ತಸ್ಮಾತ್ಪಚ್ಛೋ ನಿವದಃ ಶಸ್ಯಂತೇ | ಯದ್ವೈ ತದ್ದೇವಾ ಯಜ್ಞಂ ಸಮಭರಂಸ್ತಸ್ಮಾದಶ್ವಃ ಸಮಭವತ್ತಸ್ಮಾದಾಹುರಶ್ವಂ ನಿವಿದಾಂ ಶಂಸ್ತ್ರೇ ದದ್ಯಾದಿತಿ ತದು ಖಲು ವರಮೇವ ದದತಿ | ನ ನಿವಿದಃ ಪದಮತೀಯಾದ್ಯನ್ನಿವಿದಃ ಪದಮತೀಯಾದ್ಯಜ್ಞಸ್ಯ ತಚ್ಛಿದ್ರಂ ಕುರ್ಯಾದ್ಯಜ್ಞಸ್ಯ ವೈ ಛಿದ್ರಂ ಸ್ರವದ್ಯಜಮಾನೋಽನು ಪಾಪೀಯಾನ್ ಭವತಿ ತಸ್ಮಾನ್ನ ನಿವಿದಃ ಪದಮತೀಯಾತ್ | ನ ನಿವಿದಃ ಪದೇ ವಿಪರಿಹರೇದ್ಯನ್ನಿವಿದಃ ಪದೇ ವಿಪಹರೇನ್ಮೋಹಯೇದ್ಯಜ್ಞಂ ಮುಗ್ಧೋ ಯಜಮಾನಃ**

**ಸ್ಯಾತ್ತಸ್ಮಾನ್ನ ನಿವಿದಃ ಪದೇ ವಿಪರಿಹರೇತ್ । ನ ನಿವಿದಃ ಪದೇ ಸಮಸ್ಯೇದ್ಯನ್ನಿವಿದಃ ಪದೇ ಸಮಸ್ಯೇದ್ಯಜ್ಞಸ್ಯ ತದಾಯುಃ ಸಂಹರೇತ್ಪ್ರಮಾಯುಕೋ ಯಜಮಾನಃ ಸ್ಯಾತ್ತಸ್ಮಾನ್ನ ನಿವಿದಃ ಪದೇ ಸಮಸ್ಯೇತ್ । ಪ್ರೇದಂ ಬ್ರಹ್ಮ ಪ್ರೇದಂ ಕ್ಷತ್ರಮಿತ್ಯೇತೇ ಏವ ಸಮಸ್ಯೇ- ದ್ಬ್ರಹ್ಮಕ್ಷತ್ರಯೋಃ ಸಂಶ್ರಿತ್ಯೈ ತಸ್ಮಾದ್ಬ್ರಹ್ಮ ಚ ಕ್ಷತ್ರಂ ಚ ಸಂಶ್ರಿತೇ । ನ ತೃಚಂ ನ ಚತುರ್ಋಚಮತಿಮನ್ಯೇತ ನಿವಿದ್ಧಾನಮೇಕೈಕಂ ವೈ ನಿವಿದಃ ಪದಮೃಚಂ ಸೂಕ್ತಂ ಪ್ರತಿ ತಸ್ಮಾನ್ನ ತೃಚಂ ನ ಚತುರ್ಋಚಮತಿಮನ್ಯೇತ ನಿವಿದ್ಧಾನಂ ನಿವಿದಾ ಹ್ಯೇವ ಸ್ತೋತ್ರಮತಿ- ಶಸ್ತಂ ಭವತಿ ।**

(ಐ. ಬ್ರಾ. ೧೧-೧೧)

ನಿವಿದ್ದೇವತೆಗಳೆಲ್ಲಾ ಸೂರ್ಯಸಂಬಂಧಿಯಾದ ದೇವತೆಗಳು. ಪ್ರಾತಃಸವನ, ಮಾಧ್ಯಂದಿನಸವನ ಮತ್ತು ತೃತೀಯ ಸವನದ ಮಂತ್ರಗಳು ಉದಯದಿಂದ ಅಸ್ತಮಯದವರೆಗೆ ಸೂರ್ಯನ ಗತಿಯನ್ನನುಸರಿಸುತ್ತವೆ. ಪಾದಾತ್ಮಕವಾದ ಮಿತಿಗಳಿಂದ ದೇವತೆಗಳು ಯಜ್ಞವನ್ನು ಸಂಭರಿಸಿದರು. ಆದುದರಿಂದಲೇ **ನಿವಿದ್** ಮಂತ್ರಗಳು ಪಾದಾತ್ಮಕವಾದ ವಾಕ್ಯಗಳ ರೂಪದಲ್ಲಿವೆ. ಯಜ್ಞಭಾಗಗಳನ್ನೆಲ್ಲಾ ದೇವತೆಗಳು ಒಟ್ಟಿಗೆ ಶೇಖರಮಾಡಿದುದರ ಪರಿಣಾಮವಾಗಿ ಅಶ್ವದ ಉತ್ಪತ್ತಿಯುಂಟಾಯಿತು. ಆದುದರಿಂದಲೇ ಈ ಮಂತ್ರಗಳನ್ನು ಪಠಿಸುವ ಋತ್ವಿಕ್ಕಿಗೆ ಅಶ್ವದಾನವನ್ನು ಮಾಡಬೇಕೆಂಬ ವಿಧಿಯಿದೆ ನಿವಿದ್ ಮಂತ್ರಗಳಲ್ಲಿ ಯಾವ ಪದವನ್ನೂ ದಾಟಿ ಮುಂದೆ ಹೋಗಬಾರದು. ಹಾಗೆ ಯಾವ ಪದವಾದರೂ ಪಠಿತನಾಗದಿದ್ದರೆ ಯಜ್ಞವನ್ನೇ ಛಿದ್ರಮಾಡಿದಂತಾಗುತ್ತದೆ. ಅದು ಯಜ್ಞಕರ್ತನಿಗೆ ಹಾನಿ ಯನ್ನುಂಟುಮಾಡುತ್ತದೆ. ಈ ಮಂತ್ರಗಳಲ್ಲಿ ಎರಡು ವಾಕ್ಯಗಳನ್ನು ಒಟ್ಟಿಗೆ ಸೇರಿಸಿಬಿಡಬಾರದು, ಅಥವಾ ಹಿಂದಿನ ದನ್ನು ಮುಂದಕ್ಕೂ, ಮುಂದಿನದನ್ನು ಹಿಂದಕ್ಕೂ ಸೇರಿಸಿ ಪಠಿಸಬಾರದು. ಹಾಗೆ ಮಾಡಿದಲ್ಲಿ ಯಜ್ಞಕ್ರಿಯೆಯಲ್ಲಿಯೇ ಸಂದಿಗ್ಧಾವಸ್ಥೆಯು ಒದಗುತ್ತದೆ. ಯಜ್ಞಕರ್ತನೂ ಸಹ ಭ್ರಾಂತನಾಗುತ್ತಾನೆ. ಎರಡು ವಾಕ್ಯಗಳನ್ನು ಒಟ್ಟಿಗೆ ಸೇರಿಸಿಬಿಟ್ಟರೆ ಯಜ್ಞಕರ್ಮದಲ್ಲಿಯೇ ಸಂಕೋಚವುಂಟಾಗುತ್ತದೆ. ಇದರಿಂದ ಯಜ್ಞಕರ್ತನ ಆಯುಸ್ಸೂ ಸಂಕುಚಿತ ವಾಗಿ ಅವನು ಮೃತಿಯನ್ನು ಹೊಂದಬಹುದು. ಆದುದರಿಂದ ವಾಕ್ಯಗಳ ಮಿಶ್ರಣವನ್ನು ಮಾಡಿ ಮಂತ್ರೋಚ್ಚಾರಣೆ ಯಲ್ಲಿ ಸಂಕೋಚವನ್ನುಂಟುಮಾಡಬಾರದು. ‘ **ಪ್ರೇದಂ ಬ್ರಹ್ಮ** ’ ‘ **ಪ್ರೇದಂ ಕ್ಷತ್ರಂ** ’ ಎಂದು ಪವಿತ್ರಾತ್ಮಕ ವಾದುದೂ, ದಿವ್ಯಸ್ವರೂಪವುಳ್ಳದ್ದೂ ಆದ ಮಂತ್ರದ್ವಯವನ್ನು ಮಾತ್ರ ಮಿಶ್ರಮಾಡಬಹುದು. ಆದುದರಿಂದಲೇ ಬ್ರಹ್ಮತೇಜಸ್ಸೂ, ಕ್ಷಾತ್ರತೇಜಸ್ಸೂ ಮಿಶ್ರಿತವಾಗತಕ್ಕವು. ನಿವಿದ್ ಮಂತ್ರಗಳು ಮೂರು ಅಥವಾ ನಾಲ್ಕು ಮಂತ್ರ ಗಳೊಳಗೆ ಅಂತರ್ಗತವಾಗಿರಬೇಕೇ ವಿನಃ ಅವುಗಳನ್ನು ಮೀರಬಾರದು. ನಿವಿತ್ತಿನಿಂದಲೇ ಸ್ತೋತ್ರದ ಪಠಣವು ವಿಸ್ತೃತವಾಗಿರುತ್ತವೆ.

**ಏಕಾಂ ಪರಿಶಿಷ್ಯ ತೃತೀಯಸವನೇ ನಿವಿದಂ ದಧ್ಯಾತ್ । ಯದ್ದ್ವೇ ಪರಿಶಿಷ್ಯ ದಧ್ಯಾತ್ಪ್ರಜನನಂ ತದುಪಹನ್ಯಾದ್ಗರ್ಭೈಸ್ತತ್ಪ್ರಜಾ ವ್ಯರ್ಧಯೇತ್ತಸ್ಮಾದೇಕಾಮೇವ ಪರಿಶಿಷ್ಯ ತೃತೀಯಸವನೇ ನಿವಿದಂ ದಧ್ಯಾತ್ । ನ ಸೂಕ್ತೇನ ನಿವಿದಮತಿಪದ್ಯೇತ । ಯೋ ನ ಸೂಕ್ತೇನ ನಿವಿದಮತಿ ಪದ್ಯೇತ ನ ತತ್ಪುನರುಪನಿವರ್ತೇತ ವಾಸ್ತುಹಮೇವ ತತ್ । ಅನ್ಯತ್ತದ್ದೈವತಂ ತಚ್ಛಂದಸಂ ಸೂಕ್ತಮಾಹೃತ್ಯ ತಸ್ಮಿನ್ನಿವಿದಂ ದಧ್ಯಾತ್ । ಮಾ ಪ್ರ ಗಾಮ ಪಥೋ ವಯಮಿತಿ ಪುರಸ್ತಾ-**

**ತ್ಸೂಕ್ತಸ್ಯ ಶಂಸತಿ । ಪಥೋ ವಾ ಏಷ ಪ್ರೈತಿ ಯೋ ಯಜ್ಞೇ ಮುಹ್ಯತಿ ಮಾ ಯಜ್ಞಾದಿಂದ್ರ ಸೋಮಿನ ಇತಿ ಯಜ್ಞಾದೇವ ತನ್ನ ಪ್ರಚ್ಯವತೇ । ಮಾಂತಸ್ಸ್ಥುರ್ನೋ ಅರಾತಯ ಇತ್ಯರಾತೀಯತ ಏವ ತದಪಹಂತಿ । ಯೋ ಯಜ್ಞಸ್ಯ ಪ್ರಸಾಧನಸ್ತಂತುರ್ದೇವೇಷ್ವಾತತಃ । ತಮಾಹುತಂ ನಶೀಮಹೀತಿ । ಪ್ರಜಾ ವೈ ತಂತುಃ ಪ್ರಜಾಮೇವಾಸ್ಮಾ ಏತತ್ಸಂತನೋತಿ । ಮನೋ ನ್ವಾಹುವಾಮಹೇ ನಾರಾಶಂಸೇನ ಸೋಮೇನೇತಿ । ಮನಸಾ ವೈ ಯಜ್ಞಸ್ತಾಯತೇ ಮನಸಾ ಕ್ರಿಯತೇ । ಸೈವ ತತ್ರ ಪ್ರಾಯಶ್ಚಿತ್ತಿಃ ಪ್ರಾಯಶ್ಚಿತ್ತಿಃ ॥**

(ಐ. ಬ್ರಾ. ೧೧–೧೧)

ತೃತೀಯಸವನದಲ್ಲಿ ಒಂದು ಋಕ್ಕನ್ನು ಬಿಟ್ಟು ನಿವಿತ್ತನ್ನು ಸೇರಿಸತಕ್ಕದ್ದು. ಆದರೆ ಎರಡು ಋಕ್ಕನ್ನು ಬಿಟ್ಟುಬಿಟ್ಟು ಸೇರಿಸಿದರೆ ಆಗ ಶಕ್ತಿಹೀನತೆಯುಂಟಾಗುತ್ತದೆ. ಆಗ ಗರ್ಭರಾಹಿತ್ಯವು ಸಂಭವಿಸುತ್ತದೆ. ಆದುದರಿಂದ ಒಂದನ್ನು ಮಾತ್ರ ಬಿಟ್ಟು ಸೇರಿಸತಕ್ಕದ್ದು. ಆಗ ಯಜ್ಞಕ್ರಿಯೆಯು ಪೂರ್ಣವಾಗುತ್ತದೆ. ಎರಡನ್ನು ಬಿಟ್ಟು ಸೇರಿಸಕೂಡದು ಹಾಗೆ ಮಾಡಿದರೆ ಉತ್ಪಾದನಶಕ್ತಿಯನ್ನು ನಾಶಮಾಡಿದಂತಾಗುತ್ತದೆ. ಆಗ ಗರ್ಭಧಾರಣಶಕ್ತಿಯು ಹೋಗಿ ಜನರು ಗರ್ಭರಹಿತರಾಗುತ್ತಾರೆ. ನಿವಿದ್ಧಾನಾರ್ಹವಾದ ಸೂಕ್ತದಲ್ಲಿ ನಿವಿದ್ಮಂತ್ರಗಳನ್ನು ಸೇರಿಸದೆ ಆ ಸೂಕ್ತವನ್ನು ಪಠಿಸಬಾರದು. ಒಂದು ಸಲ ಪಠಿಸಿದ ನಂತರ ಪುನಃ ಸೇರಿಸಲು ಅರ್ಹವಾಗುವುದಿಲ್ಲ. ಒಂದು ವೇಳೆ ಅಂತಹ ಲೋಪವು ಸಂಭವಿಸಿದಲ್ಲಿ ಅದೇ ದೇವತಾಕವಾದುದೂ, ಅದೇ ಛಂದಸ್ಸಿನಿಂದ ಕೂಡಿದುದೂ ಆದ ಬೇರೆ ಸೂಕ್ತವನ್ನು ಆರಿಸಿ ಅದರಲ್ಲಿ ನಿವಿನ್ಮಂತ್ರಗಳನ್ನು ಸೇರಿಸತಕ್ಕದ್ದು. ಅಂತಹಕಾಲದಲ್ಲಿ :

**ಮಾ ಪ್ರ ಗ್ರಾಮ ಪಥೋ ವಯಂ ಮಾ ಯಜ್ಞಾದಿಂದ್ರ ಸೋಮಿನಃ ।**
**ಮಾಂತಃ ಸ್ಥುರ್ನೋ ಅರಾತಯಃ ॥**

(ಋ. ಸಂ ೧೦–೫೭–೧)

ನಾವು ಮಾರ್ಗಭ್ರಷ್ಟರಾಗಿ ಹೋಗದಿರುವಂತಾಗಲಿ. ಯಜ್ಞಕ್ರಿಯೆಯಿಂದ ಬಾಹ್ಯರಾಗದಿರುವಂತಾಗಲಿ. ದುಷ್ಟ ಶಕ್ತಿಗಳು ನಮ್ಮನ್ನು ಆಕ್ರಮಿಸದಿರುವಂತಾಗಲಿ ಎಂದು ಮೊದಲು ಪ್ರಾರ್ಥಿಸಿ ಅನಂತರ ನಿವಿನ್ಮಂತ್ರಗಳಿಂದ ಕೂಡಿದ್ದ ಆ ಸೂಕ್ತವನ್ನು ಪಠಿಸಬೇಕು. ಆಗ ಯಾವ ವಿಧವಾದ ಭ್ರಾಂತಿಯೂ ಇಲ್ಲದೆ ಯಜ್ಞಕಾರ್ಯವು ನಿರ್ವಿಘ್ನವಾಗಿ ನಡೆದು ದುಷ್ಟಶಕ್ತಿಗಳ ನಾಶವೂ ಆಗುತ್ತದೆ. "ಯಜ್ಞಫಲವಾದ ಯಾವ ತಂತುವು ದೇವತೆಗಳಲ್ಲಿ ವಿಸ್ತೃತವಾಗಿ ಹರಡಿದೆಯೋ ಅದೇ ತಂತುವು ಯಜ್ಞಕರ್ತರಾದ ನಮ್ಮಲ್ಲೂ ಪ್ರಸರಿಸಲಿ". (ಋ. ಸಂ. ೧೦–೫೭–೨) ಎಂದು ಯಜಮಾನನು ಪಠಿಸುತ್ತಾನೆ. ಪ್ರಜಾಸಂತತಿಯೇ ಆ ತಂತುವು, ಯಜ್ಞಕರ್ತನಿಗೆ ಸಂತತಿರೂಪವಾದ ಈ ತಂತುವು ಅನುಸ್ಯೂತವಾಗಿ ಲಭಿಸುತ್ತದೆ.

**ತದ್ಯದೇತಾಂ ಪುರಸ್ತಾತ್ ಸೂಕ್ತಸ್ಯ ನಿವಿದಂ ದಧಾತಿ ಪ್ರಜಾತ್ಯೈ ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥**

(ಐ ಬ್ರಾ. ೧೦–೧)

ಈ ಕಾರಣದಿಂದಲೇ ಹೋತೃವು ಸೂಕ್ತದ ಪ್ರಾರಂಭದಲ್ಲಿ ನಿವಿನ್ಮಂತ್ರವನ್ನು ಪಠಿಸುವುದರ ಫಲವಾಗಿ ಸಂತಾನವನ್ನು ಪಡೆಯುತ್ತಾನೆ. ಈ ವಿಧವಾದ ತಿಳುವಳಿಕೆಯುಳ್ಳ ಯಜ್ಞಕರ್ತರಿಗೆ ಸತ್ಸಂತಾನವೇ ಮುಂತಾದ ಸಕಲ ಸಂಪತ್ತೂ

ಲಭಿಸುವುದು, ಎಂದು ಬೇರೆಕಡೆಯೂ ಹೇಳಿದೆ. ಮಂತ್ರಗಳ ಪಠನವು ಅತ್ಯಂತ ಶ್ರೇಷ್ಠವಾದ ಫಲವನು ಕೊಡುವುದೆಂಬ ಶ್ರದ್ಧೆಯಿಂದ ಆಯಾ ದೇವತೆಗಳನ್ನು ಆಹ್ವಾನಮಾಡುವಾಗ ಪ್ರತಿದೇವತೆಯ ಸ್ವರೂಪ, ಶಕ್ತಿ ಮಹತ್ಕಾರ್ಯಸಾಧನೆ ಇತ್ಯಾದಿಗಳನ್ನು ಸ್ತುತಿಸಿ ಅವುಗಳ ಪಠನವನ್ನು ಮಾಡುವುದು ಸಾಂಪ್ರದಾಯಕವೆಂದು ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ ತಿಳಿದುಬರುತ್ತದೆ. ಉದಾಹರಣೆಗೆ—

**ತಾನ್ಪೂರ್ವಯಾ ನಿವಿದಾ ಹೂಮಹೇ ವಯಂ ಭಗಂ ಮಿತ್ರಮದಿತಿಂ ದಕ್ಷಮಸ್ರಿಧಂ ।**

(ಋ ಸಂ. ೧-೮೯-೩)

**ಜುಷೇಥಾಂ ಯಜ್ಞಂ ಬೋಧತಂ ಹವಸ್ಯ ಮೇ ಸತ್ತೋ ಹೋತಾ ನಿವಿದಃ ಪೂರ್ವ್ಯಾ ಅನು ।**

(ಋ. ಸಂ. ೨-೩೬-೬)

**ಕಿಮು ಷ್ವಿದಸ್ಮೈ ನಿವಿದೋ ಭನಂತೇಂದ್ರಸ್ಯಾವದ್ಯಂ ದಿಧಿಷಂತ ಆಪಃ ।**

(ಋ. ಸಂ. ೪-೧೮-೭)

**ವಿ ಯದ್ವಾಚಂ ಕೀಸ್ತಾಸೋ ಭರಂತೇ ಶಂಸಂತಿ ಕೇ ಚಿನ್ನಿವಿದೋ ಮನಾನಾಃ ।**

(ಋ. ಸಂ. ೬-೬೭-೧೦)

ಇತ್ಯಾದಿ ಸನ್ನಿವೇಶಗಳಲ್ಲಿ ನಿವಿನ್ಮಂತ್ರಗಳ ಮಹಿಮೆಯು ಸ್ತುತವಾಗಿದೆ.

ಋ. ಸಂ. ೧-೧೭೬-೬ ನೆಯ ಋಕ್ಕಿನಲ್ಲಿ ಇಂದ್ರಪರವಾದ ನಿವಿನ್ಮಂತ್ರವು **ತಾಮನು ತ್ವಾ ನಿವಿದಂ ಜೋಹವೀಮಿ** ಎಂಬ ವಾಕ್ಯದಿಂದ ಸೂಚಿತವಾಗಿದೆ. ಇಂದ್ರದೇವತಾಪರವಾದ ನಿವಿತ್ತುಗಳಿಂದ ಯುಕ್ತವಾದ ಸೂಕ್ತವಾವುದೆಂದು ನಿಷ್ಕರ್ಷೆಮಾಡುವುದರಲ್ಲಿ ಸ್ವಲ್ಪ ಮತಭೇದವೂ ಇದೆ. ಉದಾಹರಣೆಗೆ—

**ಜನಿಷ್ಠಾ ಉಗ್ರಃ ಸಹಸೇ ತುರಾಯೇತಿ ನಿವಿದ್ಧಾನನ್ಯೈಕಾಹಿಕಂ ।**

(ಐ. ಆ. ೧-೨-೨)

**ಜನಿಷ್ಠಾ ಉಗ್ರಃ** ಎಂಬ ಋಕ್ಕಿನಿಂದ ಪ್ರಾರಂಭವಾಗುವ ಋ. ಸಂ ೧೦-೭೩ ನೇ ಸೂಕ್ತವು ನಿವಿನ್ಮಂತ್ರಗಳಿಂದ ಕೂಡಿದೆಯೆಂದು ಐತರೇಯಬ್ರಾಹ್ಮಣದಲ್ಲಿ ಹೇಳಿದೆ. ಆದರೆ ಶಾಂಖಾಯನ ಆರಣ್ಯಕದಲ್ಲಿ (೧-೩) **ಮಹಾँ ಇಂದ್ರೋ ನೃವಧಾ** ಎಂದ ಋಕ್ಕಿನಿಂದ ಪ್ರಾರಂಭವಾಗುವ ಋ. ಸಂ ೬-೧೯ ನೇ ಸೂಕ್ತವು ಈ ಮಂತ್ರಗಳಿಂದ ಕೂಡಿದೆಯೆಂದು ಹೇಳಿದೆ. ಇಂದ್ರನ ಸ್ವರೂಪವನ್ನೂ, ಪರಾಕ್ರಮವನ್ನೂ, ವೈಶಿಷ್ಟ್ಯವನ್ನೂ ಸ್ತುತಿಸುವ ನಿವಿನ್ಮಂತ್ರಗಳಿಂದ ಇಂದ್ರನನ್ನು ಪ್ರಶಂಸಿಸುತ್ತೇನೆ ಎಂದು ಮೇಲಿನ ಋಕ್ಕಿನಲ್ಲಿ ಸೂಕ್ತದ್ರಷ್ಟೃವಾದ ಋಷಿಯು ತನ್ನ ಸಂಕಲ್ಪವನ್ನು ತಿಳಿಸಿದ್ದಾನೆ.

**ಋತಾವೃಧೇ ವೈಶ್ವಾನರಾಯ ಅಗ್ನಯೇ ಪೂತಂ ಘೃತಂ ನ ಧಿಷಣಾಂ ಜನಾಮಸಿ— ಉದಕಸ್ಯ ಯಜ್ಞಸ್ಯ ವಾ ವರ್ಧಯಿತ್ರೇ ವೈಶ್ವಾನರಾಯ ಅಗ್ನಯೇ ಪೂತಂ ಘೃತಮಿವ ಸ್ತುತಿಂ ಜನಯಾಮಃ ।** ಉದಕದ ಅಥವಾ ಯಜ್ಞದ ಅಭಿವೃದ್ಧಿಕಾರಕನಾದ ವೈಶ್ವಾನರನಾಮಕನಾದ ಅಗ್ನಿಗೋಸ್ಕರವಾಗಿ ಶುದ್ಧವಾದ ಘೃತದಂತೆ ಎಂದರೆ ಶುದ್ಧವಾದ ಘೃತವು ಯಾವರೀತಿ ಪ್ರೀತಿಯನ್ನುಂಟುಮಾಡುವುದೋ ಅದರಂತೆ ಪ್ರೀತಿಯನ್ನುಂಟು ಮಾಡುವ ಸ್ತೋತ್ರವನ್ನು ನಿರ್ಮಿಸೋಣ.

**ಋತಾವೃಧೇ**— ಋತಶಬ್ದಕ್ಕೆ ಉದಕ ಅಥವಾ ಯಜ್ಞವೆಂಬ ಅರ್ಥಗಳಿರುವುದರಿಂದ ಇಲ್ಲಿ ಎರಡುವಿಧವಾದ ಅರ್ಥಗಳನ್ನು ಹೇಳಬಹುದು. ಮೇಘಗಳ ಮಧ್ಯದಲ್ಲಿ ವಿದ್ಯುದ್ರೂಪದಿಂದ ಇರುವ ಅಗ್ನಿಯು ಮೇಘಗಳನ್ನು ಪ್ರೇರಿಸಿ ವೃಷ್ಟಿಯನ್ನು ಸುರಿಸುವಂತೆ ಮಾಡುವವನಾದ್ದರಿಂದ ಅಗ್ನಿಯು ಉದಕದ ವರ್ಧಕನು; ಅಥವಾ ಋತಶಬ್ದಕ್ಕೆ ಯಜ್ಞವೆಂದು ಅರ್ಥಮಾಡುವುದಾದರೆ, ಆಗ ಯಜ್ಞದಲ್ಲಿ ಅಗ್ನಿಯೇ ಮುಖ್ಯಪಾತ್ರವನ್ನು ವಹಿಸಿ ದೇವತೆಗಳಿಗೆ ಹವಿರಾದಿಗಳನ್ನು ಒಯ್ಯುವುದರಿಂದ ಅಗ್ನಿಯು ಯಜ್ಞದ ವರ್ಧಕನೆಂದು ಹೇಳುವುದು ಸಹಜವಾಗಿದೆ. ಆದುದರಿಂದ ಇಲ್ಲಿ ಋತಾವೃಧೇ ಎಂಬ ಶಬ್ದಕ್ಕೆ ಭಾಷ್ಯಕಾರರು ವಿವರಿಸಿರುವ ಎರಡುವಿಧವಾದ ಅರ್ಥಗಳನ್ನೂ ಹೇಳಬಹುದು.

**ವೈಶ್ವಾನರಾಯ**— ಇದರ ಅರ್ಥಾನುವಾದ ವಿವರಣೆಗಳನ್ನು ನಾವು ಈ ಸೂಕ್ತದ ಪೀಠಿಕೆಯಲ್ಲಿ ವಿಸ್ತಾರವಾಗಿ ವಿಮರ್ಶೆಮಾಡಿರುವೆವು. ಆದರೂ ಯಾಸ್ಕರು ಈ ಶಬ್ದದ ರೂಪನಿಷ್ಪತ್ತಿವಿಚಾರದಲ್ಲಿ ಹೇಳಿರುವ ಮೂರು ವಿಧವಾದ ಅರ್ಥವನ್ನು ಸೂಕ್ಷ್ಮವಾಗಿ ಹೇಳುವುದು ಅವಶ್ಯಕವು.

**ವೈಶ್ವಾನರಃ ಕಸ್ಮಾದ್ವಿಶ್ವಾನ್ನರಾನ್ನಯತಿ ವಿಶ್ವ ಏನಂ ನರಾ ನಯಂತೀತಿ ವಾ । ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಃ ॥**

(ನಿ. ೭–೨೧)

ಎಂದರೆ ಈ ಅಗ್ನಿಯು ಸಮಸ್ತ ಜನರನ್ನೂ ಸನ್ಮಾರ್ಗಪ್ರವರ್ತಕರನ್ನಾಗಿ ಮಾಡುವುದರಿಂದ ಎಂದರೆ ಸಮಸ್ತ ಜನರಿಗೂ ಮಾರ್ಗದರ್ಶಕನಾಗಿರುವುದರಿಂದಲಾಗಲಿ ಅಥವಾ ಸಮಸ್ತ ಜನರೂ ಅಗ್ನಿಯನ್ನು ತಮ್ಮತಮ್ಮ ಮನೆಗಳಿಗೆ ಒಯ್ಯುವುದರಿಂದಲಾಗಲಿ ಅಥವಾ ಈ ಅಗ್ನಿಯು ಸಮಸ್ತ ಜನರ ಉದರಗಳಲ್ಲಿ ಜಾಠರಾಗ್ನಿಯ ರೂಪದಿಂದ ಅಂತರ್ಗತನಾಗಿರುವುದರಿಂದಲೂ ಈ ಅಗ್ನಿಗೆ ವೈಶ್ವಾನರನೆಂದು ಹೆಸರು ಎಂದು ಅರ್ಥವಿವರಣೆ ಮಾಡಿರುವರು.

ಈ ವಾಕ್ಯದಲ್ಲಿರುವ **ಪೂತಂ ಘೃತಮಿವ ಸ್ತುತಿಂ ಜನಯಾಮಃ** ಎಂದರೆ ಶುದ್ಧವಾದ ಘೃತವು (ತುಪ್ಪವು) ಅದನ್ನು ಭಕ್ಷಿಸುವವರಿಗೆ ಯಾವ ರೀತಿ ರುಚಿಕರವಾದ ಪ್ರೀತಿಯನ್ನುಂಟುಮಾಡುವುದೋ ಆರೀತಿ ಅಗ್ನಿಗೆ ಪ್ರೀತಿಯನ್ನುಂಟುಮಾಡುವ ಸ್ತೋತ್ರವನ್ನು ರಚಿಸೋಣ ಎಂಬ ಋಷಿಯು ಆಶಂಸನೆಯು ಇಲ್ಲಿ ಉಕ್ತವಾಗಿದೆ.

**ದ್ವಿತಾ ಹೋತಾರಂ ಮನುಷಃ ವಾಘತ ಚ ಧಿಯಾ ಕುಲಿಶಃ ರಥಂ ನ ಸಮೃಣ್ವತಿ— ದ್ವಿಧಾ ಗಾರ್ಹಪತ್ಯಾಹವನೀಯರೂಪಾಭ್ಯಾಂ ದೇವಾನಾಮಾಹ್ವಾತಾರಮಗ್ನಿಂ ಮನುಷ್ಯಾಃ ಋತ್ವಿಜಶ್ಚ ಕರ್ಮಣಾ ವಾಸ್ಯಾದಿಃ ರಥಮಿವ ಸಂಸ್ಕುರ್ವಂತಿ ।** ಗಾರ್ಹಪತ್ಯ ಮತ್ತು ಆಹವನೀಯ ಎಂಬ ಎರಡುವಿಧ ರೂಪಗಳಿಂದ ಇರುವ ಅಗ್ನಿಯನ್ನು ಮನುಷ್ಯರೂ, ಋತ್ವಿಕ್ಕುಗಳೂ ಸಹ ಮರಗೆಲಸದವನು ರಥವನ್ನು ಚೆನ್ನಾಗಿ ನಿರ್ಮಿಸುವಂತೆ ಸಂಸ್ಕರಿಸುವರು ಎಂದರ್ಥವು. ಇಲ್ಲಿ ಅಗ್ನಿಯ ಎರಡು ವಿಧವಾದ ರೂಪಗಳೆಂದರೆ ಗಾರ್ಹಪತ್ಯ ಮತ್ತು ಆಹವನೀಯ ಎಂಬ ಅಗ್ನಿಗಳು ಯಜ್ಞದಲ್ಲಿ ಎರಡು ಬೇರೆ ಬೇರೆ ಕುಂಡಗಳಲ್ಲಿ ಬೇರೆ ಬೇರೆ ಕಾರ್ಯಗಳಿಗಾಗಿ ಸ್ಥಾಪಿಸಲ್ಪಟ್ಟು ಬೇರೆ ಬೇರೆ ಕರ್ಮಕಲಾಪಗಳಿಂದ ಸಂಸ್ಕೃತವಾದ ಎರಡು ಬೇರೆ ಬೇರೆ ಅಗ್ನಿಕುಂಡಗಳಿಗೆ ಗಾರ್ಹಪತ್ಯ ಮತ್ತು ಆಹವನೀಯ ಎಂಬ ಹೆಸರುಗಳಿವೆ. ಅಥವಾ ಗಾರ್ಹಪತ್ಯ ಎಂಬ ಶಬ್ದಕ್ಕೆ ಗೃಹದಲ್ಲಿ ಪಾಚನಾದಿಕಾರ್ಯಗಳಿಗಾಗಿ ಪ್ರತಿಷ್ಠಿತವಾದ ಗಾಹ್ಯಾಗ್ನಿಯೂ, ಯಜ್ಞದಲ್ಲಿ ಮಂತ್ರಪೂತವಾಗಿ ಸಂಸ್ಕರಿಸಲ್ಪಟ್ಟ ಯಜ್ಞಾಗ್ನಿಯೂ ಎಂದು ಎರಡು ವಿಧವಾದ ಅಗ್ನಿಗಳು ಎಂದು ಉಭಯವಿಧ ಅರ್ಥಗಳನ್ನೂ ಹೇಳಬಹುದು. ಆದರೆ ಈ ವಾಕ್ಯದಲ್ಲಿ **ಧಿಯಾ ಸಮೃಣ್ವತಿ**

ಕರ್ಮದಿಂದ ಎಂದರೆ ಯಜ್ಞದಲ್ಲಿ ಮಂತ್ರಪೂರ್ವಕವಾಗಿ ಆಚರಿಸುವ ಅನೇಕ ವಿಧವಾದ ಕರ್ಮಗಳಿಂದ ಸಂಸ್ಕರಿಸುವರು ಎಂದು ಹೇಳಿರುವುದರಿಂದ ಇಲ್ಲಿ **ದ್ವಿತಾ** ಎಂದರೆ ಯಜ್ಞಾಗ್ನಿಗಳಾದ ಗಾರ್ಹಪತ್ಯ ಮತ್ತು ಆಹವನೀಯಾಗ್ನಿಗಳೇ ಉದ್ದೇಶಿಸಲ್ಪಟ್ಟಿರಬೇಕು. **ಮನುಷಃ** ಎಂಬ ಶಬ್ದಕ್ಕೆ ಸಾಮಾನ್ಯವಾಗಿ ಮನುಷ್ಯರೆಂದು ಅರ್ಥವಿರುವುದಾದರೂ ಇಲ್ಲಿ ಅಗ್ನಿಯನ್ನು ಸಂಸ್ಕರಿಸುವ ಕರ್ಮದಲ್ಲಿ ಭಾಗವಹಿಸುವ ಮನುಷ್ಯರೆಂದು ಹೇಳಿರುವುದರಿಂದ ಮನುಷ್ಯರಾದ ಯಜಮಾನರು (ಯಜ್ಞಮಾಡುವವರು) ಎಂದೇ ಅರ್ಥಮಾಡಬೇಕು. **ವಾಘತಃ** ಎಂಬ ಶಬ್ದವು ಋತ್ವಿಙ್ನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೮). ಈ ಶಬ್ದಕ್ಕೆ **ಯಜ್ಞಸ್ಯಾನುಷ್ಠಾತಾರಃ ಮೇಧಾವಿನೋ ವಾ** ಎಂದು ಅರ್ಥವಿವರಣೆ ಇರುವುದರಿಂದ ಯಜ್ಞದಲ್ಲಿ ಭಾಗವನ್ನು ವಹಿಸಿ ಅದನ್ನು ನೆರವೇರಿಸುವವರು ಅಥವಾ ಬುದ್ಧಿವಂತರು ಎಂದರ್ಥವು (ನಿ. ೧೧-೧೬); ಕುಲಿಶಶಬ್ದವು ವಜ್ರನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೧) ಮತ್ತು **ಕುಲಿಶ ಇತಿ ವಜ್ರನಾಮ ಕೂಲಶಾತನೋ ಭವತಿ** (ನಿ. ೬-೧೭) ಎಂಬ ನಿರ್ವಚನವೂ ಇದೆ. ಎಂದರೆ ವಜ್ರಾಯುಧ ಅಥವಾ ವೃಕ್ಷಾದಿಗಳನ್ನು ಕತ್ತರಿಸುವುದಕ್ಕೆ ಉಪಯೋಗಿಸುವ ಹರಿತವಾದ ಆಯುಧ ಎಂದರ್ಥವಿದ್ದರೂ ಭಾಷ್ಯಕಾರರು ಈ ವಾಕ್ಯದಲ್ಲಿ ಅರ್ಥ ಹೊಂದುವುದಕ್ಕಾಗಿ ಕುಲಿಶಶಬ್ದಕ್ಕೆ ಹರಿತವಾದ ಆಯುಧವನ್ನುಪಯೋಗಿಸುವ ಬಡಗಿಯು ಎಂದು ಹೇಳಿದಾರೆ. ಎಂದರೆ ಮರಕೆಲಸದವನು ತನ್ನ ಬುದ್ಧಿಕುಶಲತೆಯಿಂದ ಹರಿತವಾದ ಆಯುಧಗಳನ್ನುಪಯೋಗಿಸಿ ರಥವನ್ನು ಬಹಳ ಚೆನ್ನಾಗಿರುವಂತೆ ಯಾವ ರೀತಿ ನಿರ್ಮಿಸುವನೋ ಅದರಂತೆ ಯಜ್ಞಮಾಡುವ ಯಜಮಾನರೂ ಋತ್ವಿಗ್ಜನರೂ ಸೇರಿ ಯಜ್ಞದಲ್ಲಿ ಅವಶ್ಯಕವಾಗಿ ಮಾಡಬೇಕಾದ ನಾನಾವಿಧ ಕರ್ಮಗಳಿಂದಲೂ, ಮಂತ್ರಪಠನೆಯಿಂದಲೂ ಪ್ರತಿಷ್ಠಿತನಾದ ಅಗ್ನಿಯನ್ನು ಸಂಸ್ಕಾರಮಾಡಿ ಯಜ್ಞಾರ್ಹನಾಗುವಂತೆ ಎಂದರೆ ಯಜ್ಞದಲ್ಲಿ ದೇವತೆಗಳಿಗೆ ಹವಿಸ್ಸನ್ನು ಒಯ್ಯುವುದಕ್ಕೆ ಪಾತ್ರನಾಗುವಂತೆ ಮಾಡುತ್ತಾರೆ ಎಂದಭಿಪ್ರಾಯವು.

**ರಥಂ**—ರಥ ಶಬ್ದಕ್ಕೆ ಯಾಸ್ಕರು ತಮ್ಮ ನಿರುಕ್ತದಲ್ಲಿ-**ರಥೋ ರಹಂತೇರ್ಗತಿಕರ್ಮಣಃ । ಸ್ಥಿರತೇರ್ವಾ ಸ್ಯಾದ್ವಿಪರೀತಸ್ಯ । ರಮಮಾಣೋಽಸ್ಮಿಂಸ್ತಿಷ್ಠತೀತಿ ವಾ ರಪತೇರ್ವಾ ರಸತೇರ್ವಾ** (ನಿ. ೯-೧೧) ಎಂದು ಹೇಳಿರುವರು. ಎಂದರೆ, ಗಮನಕರ್ಮವನ್ನು ಸೂಚಿಸುವ ರಂಹ್ ಧಾತುವಿನಿಂದಾಗಲಿ, ಸ್ಥಿರವಾಗಿರು ಎಂಬರ್ಥವುಳ್ಳ ಸ್ಥಿರತಿ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಈ ರಥವು ಯಾವಾಗಲೂ ಹೋಗುತ್ತಿರು (ಸಂಚರಿಸುತ್ತಿರು)ವುದರಿಂದ ಇದಕ್ಕೆ ರಥವೆಂದು ಹಸರು. ಅಥವಾ ಇದರಲ್ಲಿ ಕುಳಿತುಕೊಳ್ಳುವ ಯೋಧನು ಸ್ಥಿರವಾಗಿರುವನು. ಅಶ್ವಾದಿ ವಾಹನಗಳ ಮೇಲೆ ಕುಳಿತುಕೊಂಡಾಗ ಶರೀರವು ಅಲುಗಾಡುವಂತೆ, ರಥದಲ್ಲಿ ಕುಳಿತಾಗ ಅಲುಗಾಡದೆ ಸ್ಥಿರವಾಗಿ ಕುಳಿತುಕೊಳ್ಳಲು ಸಾಧ್ಯವಾಗುವುದರಿಂದ ಇದಕ್ಕೆ ರಥವೆಂದು ಹೆಸರು. ಅಥವಾ ಈ ರಥದಲ್ಲಿ ಕುಳಿತು ವಿಹರಿಸುವುದರಿಂದ ಇದಕ್ಕೆ ರಥವೆಂದು ಹೆಸರು ಎಂದು ಅವಯವಾರ್ಥಗಳನ್ನು ವಿವರಿಸಿರುವರು.

॥ ಸಂಹಿತಾಪಾಠಃ ॥

**ಸ ರೋಚಯಜ್ಜನುಷಾ ರೋದಸೀ ಉಭೇ ಸ ಮಾತ್ರೋರಭವತ್ಪುತ್ರ ಈಡ್ಯಃ ।**

**ಹವ್ಯವಾಳಗ್ನಿರಜರಶ್ಚನೋಹಿತೋ ದೂಳಭೋ ವಿಶಾಮತಿಥಿರ್ವಿಭಾವಸುಃ ॥ ೨ ॥**

॥ ಪದಪಾಠಃ

ಸಃ । ರೋಚಯತ್ । ಜನುಷಾ । ರೋದಸೀ ಇತಿ । ಉಭೇ ಇತಿ । ಸಃ । ಮಾತ್ರೋಃ । ಅಭವತ್ । ಪುತ್ರಃ । ಈಡ್ಯಃ ।

ಹವ್ಯsವಾಟ್ । ಅಗ್ನಿಃ । ಅಜರಃ । ಚನಃsಹಿತಃ । ದುಃsದಭಃ । ವಿಶಾಂ । ಅತಿಥಿಃ । ವಿಭಾsವಸುಃ ॥ ೨ ॥

॥ ಸಾಯಣಭಾಷ್ಯಂ ॥

ಸೋಽಗ್ನಿರ್ಜನುಷಾ ಜನ್ಮನೋಭೇ ರೋದಸೀ ದ್ಯಾವಾಪೃಥಿವ್ಯೌ ರೋಚಯತ್ । ಅರೋಚಯತ್ । ಪ್ರಕಾಶಯತಿ । ಸ ಮಾತ್ರೋರ್ದ್ಯಾವಾಪೃಥಿವ್ಯೋರೀಡ್ಯಃ ಸ್ತುತ್ಯಃ ಪುತ್ರೋಽಭವತ್ । ಹವ್ಯವಾಡ್ ಹವ್ಯಾನಾಂ ವೋಢಾಗ್ನಿರಂಗನಾದಿಗುಣಯುಕ್ತೋಽಜರೋ ಜರಾರಹಿತಃ । ಚನೋಽನ್ನಂ ಹಿತಂ ಯಜಮಾನೇ ನಿಹಿತಂ ಯೇನಾಸೌ ಚನೋಹಿತಃ । ದೂಳಭೋ ಹಿಂಸಿತುಮಶಕ್ಯಃ ಸೋಽಯಂ ವಿಭಾವಸುಃ ಪ್ರಭಾಧನೋ ವಿಶಾಂ ಮನುಷ್ಯಾಣಾಮತಿಥಿರಿವ ಪೂಜ್ಯೋ ಭವತಿ ॥

॥ ಪ್ರತಿಪದಾರ್ಥ ॥

**ಸಃ**—ಅಗ್ನಿಯು । **ಜನುಷಾ**—ಉತ್ಪತ್ತಿಯಿಂದಲೇ । **ಉಭೇ ರೋದಸೀ**—ದ್ಯಾವಾಪೃಥಿವಿಗಳೆರಡನ್ನೂ **ರೋಚಯತ್**—ಬೆಳಗಿಸಿದನು । **ಸಃ**—ಅವನು । **ಮಾತ್ರೋಃ**—ತನ್ನ ಮಾತಾಪಿತೃಗಳಾದ ದ್ಯಾವಾಪೃಥಿವಿಗಳಿಗೆ । **ಈಡ್ಯಃ**—ಸ್ತುತ್ಯನಾದ । **ಪುತ್ರಃ**—ಪುತ್ರನಾಗಿ । **ಅಭವತ್**—ಆದನು । **ಹವ್ಯವಾಟ್**—(ದೇವತೆಗಳಿಗೆ) ಹವಿಸ್ಸನ್ನು ವಹಿಸತಕ್ಕ । **ಅಗ್ನಿಃ**—ಅಗ್ನಿಯು । **ಅಜರಃ**—ಜರಾರಹಿತನಾಗಿಯೂ । **ಚನೋಹಿತಃ**—(ಯಜಮಾನರಲ್ಲಿ) ಅನ್ನವನ್ನು ಸ್ಥಾಪಿಸುವವನಾಗಿಯೂ । **ದೂಳಭಃ**—ಅಪ್ರತಿಹತನಾಗಿಯೂ । **ವಿಭಾವಸುಃ**—ಪ್ರಭೆಯೇ ಧನವಾಗಿ ಉಳ್ಳವನೂ । **ವಿಶಾಂ**—ಪ್ರಜೆಗಳಿಗೆ । **ಅತಿಥಿಃ**—ಅತಿಥಿಯಂತೆ ಪೂಜ್ಯನಾಗಿಯೂ । (ಆಗಿದ್ದಾನೆ)

॥ ಭಾವಾರ್ಥ ॥

ಅಗ್ನಿಯು ಉತ್ಪತ್ತಿಯಿಂದಲೇ ದ್ಯಾವಾಪೃಥಿವಿಗಳೆರಡನ್ನೂ ಬೆಳಗಿಸಿದನು. ಅವನು ತನ್ನ ಮಾತಾಪಿತೃಗಳಾದ ದ್ಯಾವಾಪೃಥಿವಿಗಳಿಗೆ ಸ್ತುತ್ಯನಾದ ಪುತ್ರನಾಗಿ ಆದನು. ದೇವತೆಗಳಿಗೆ ಹವಿಸ್ಸನ್ನು ವಹಿಸತಕ್ಕ ಅಗ್ನಿಯು ಜರಾರಹಿತನಾಗಿಯೂ, ಯಜಮಾನರಲ್ಲಿ ಅನ್ನವನ್ನು ಸ್ಥಾಪಿಸುವವನಾಗಿಯೂ, ಅಪ್ರತಿಹತನಾಗಿಯೂ, ಪ್ರಭಾಧನನಾಗಿಯೂ, ಪ್ರಜೆಗಳಿಗೆ ಅತಿಥಿಯಂತೆ ಪೂಜ್ಯನಾಗಿಯೂ ಆಗಿದ್ದಾನೆ.

## English Translation.

By his birth he lighted up both heaven and earth; he was the praiseworthy son of his parents; the undecaying Agni, the bearer of oblations, the giver of food, the guest of men, the affluent in radiance.

॥ ವಿಶೇಷವಿಷಯಗಳು ॥

**ದೂಳಭಃ—ಹಿಂಸಿತುಮಶಕ್ಯಃ** । ಹಿಂಸಿಸಲ್ಪಡುವುದಕ್ಕೆ ಸಾಧ್ಯವಿಲ್ಲದವನು. ಅಗ್ನಿಯು ತನ್ನ ಸುಡುವ ಶಕ್ತಿಯಿಂದ ಎಲ್ಲವನ್ನೂ ದಹಿಸಲು ಸಮರ್ಥನು. ಆದರೆ ಇವನನ್ನು ಹಿಂಸಿಸಲು ಯಾರಿಗೂ ಸಾಧ್ಯವಿಲ್ಲ.

**ಅತಿಥಿಃ—**ಯಾಸ್ಕರು ಈ ಶಬ್ದಕ್ಕೆ ಎರಡು ಮೂರು ವಿಧವಾದ ಅರ್ಥಗಳನ್ನು ಹೇಳಿರುವರು.

**ಅತಿಥಿರಭ್ಯತಿತೋ ಗೃಹಾನ್ ಭವತಿ । ಅಭ್ಯೇತಿ ತಿಥಿಷು ಪರಕುಲಾನೀತಿ ವಾ ಪರಗೃಹಾಣೀತಿ ವಾ । ಅಯಮಪೀತರೋಽತಿಥಿರೇತಸ್ಮಾದೇವ ॥** (ನಿ· ೪–೫)

ಎಂದರೆ, ಮನೆಗಳನ್ನು ಹುಡುಕಿಕೊಂಡು ಇವನು ಬರುವವನಾದಕಾರಣ ಇವನಿಗೆ ಅತಿಥಿಯೆಂದು ಹೆಸರು. ಅಥವಾ ಪೂರ್ಣಿಮೆಯೇ ಮೊದಲಾದ ತಿಥಿಗಳಲ್ಲಿ ಯಜ್ಞಮಾಡುವವರ ಮನೆಗಳಿಗೆ ಬಂದು ಸೇರುವನು. ಅಗ್ನಿಯೂ ಕೂಡ ಅತಿಥಿಯಹಾಗೆ ವರ್ತಿಸುವುದರಿಂದ ಇವನೂ ಅತಿಥಿಯಾಗಿರುವನು ಎಂದು ಎರಡುವಿಧವಾದ ಅರ್ಥವನ್ನು ವಿವರಿಸಿರುವರು.

**ವಿಭಾವಸುಃ—ಪ್ರಭಾಧನಃ** । ಪ್ರಭೆ ಅಥವಾ ಕಾಂತಿಯೇ ಧನವಾಗಿವುಳ್ಳವನು ಎಂದರೆ ಇವನ ಸ್ವರೂಪವೇ ಕಾಂತಿವಿಶಿಷ್ಟವಾದುದು ಎಂದಭಿಪ್ರಾಯವು. ತಪೋಧನ ಎನ್ನುವಂತೆ.



॥ ಸಂಹಿತಾಪಾಠಃ ॥

## ಕ್ರತ್ವಾ ದಕ್ಷಸ್ಯ ತರುಷೋ ವಿಧರ್ಮಣಿ ದೇವಾಸೋ ಅಗ್ನಿಂ ಜನಯಂತ ಚಿತ್ತಿಭಿಃ । ರುರುಚಾನಂ ಭಾನುನಾ ಜ್ಯೋತಿಷಾ ಮಹಾಮತ್ಯಂ ನ ವಾಜಂ ಸನಿಷ್ಯನ್ನುಪ ಬ್ರುವೇ ॥ ೩ ॥

॥ ಪದಪಾಠಃ ॥

ಕ್ರತ್ವಾ । ದಕ್ಷಸ್ಯ । ತರುಷಃ । ವಿಽಧರ್ಮಣಿ । ದೇವಾಸಃ । ಅಗ್ನಿಂ । ಜನಯಂತ । ಚಿತ್ತಿಽಭಿಃ । ರುರುಚಾನಂ । ಭಾನುನಾ । ಜ್ಯೋತಿಷಾ । ಮಹಾಂ । ಅತ್ಯಂ । ನ । ವಾಜಂ । ಸನಿಷ್ಯನ್ । ಉಪ । ಬ್ರುವೇ ॥ ೩ ॥

॥ ಸಾಯಣಭಾಷ್ಯಂ ॥

ಚಿತ್ತಿಭಿರ್ಜ್ಞಾನೈರುಪಲಕ್ಷಿತಾ ದೇವಾಸೋ ದೇವಾಸ್ತರುಷೋ ವ್ಯಸನೇಭ್ಯಸ್ತಾರಕಸ್ಯ ದಕ್ಷಸ್ಯ ಬಲಸ್ಯ ಕ್ರತ್ವಾ ಕರ್ಮಣಾ ವಿಧರ್ಮಣಿ ವಿಧಾರಕೇ ಯಜ್ಞೇಽಗ್ನಿಂ ಜನಯಂತ । ಅಜನಯನ್। ಭಾನುನಾ ಭಾಸಮಾನೇನ ಜ್ಯೋತಿಷಾ ರುರುಚಾನಂ ರೋಚಮಾನಂ ಮಹಾಂ ಮಹಾಂತಮಗ್ನಿಮತ್ಯಂ ನ ಭಾರಸಹಮಶ್ವಮಿವ ವಾಜಮನ್ನಂ ಸನಿಷ್ಯನ್ ಲಿಪ್ಸಮಾನೋಽಹಮುಪ ಬ್ರುವೇ । ಸ್ತೌಮಿ ॥

॥ ಪ್ರತಿಪದಾರ್ಥ ॥

**ಚಿತ್ತಿಭಿಃ**—ಜ್ಞಾನವಿಶಿಷ್ಟರಾದ | **ದೇವಾಸಃ**—ದೇವತೆಗಳು | **ತರುಷಃ**—ದುಃಖದಿಂದ ದಾಟಿಸತಕ್ಕ | **ದಕ್ಷಸ್ಯ**—ಬಲದ | **ಕ್ರತ್ವಾ**—ಕರ್ಮದಿಂದ | **ವಿಧರ್ಮಣಿ**—ಧಾರಣಾತ್ಮಕವಾದ ಯಜ್ಞದಲ್ಲಿ | **ಅಗ್ನಿಂ**—ಅಗ್ನಿಯನ್ನು | **ಜನಯಂತ**—ಸೃಷ್ಟಿಸಿದರು | **ವಾಜಂ**—ಅನ್ನವನ್ನು | **ಸನಿಷ್ಯನ್**—ಇಚ್ಛಿಸತಕ್ಕ ನಾನು | **ಭಾನುನಾ**—ಪ್ರಕಾಶಮಾನವಾದ | **ಜ್ಯೋತಿಷಾ**—ಕಾಂತಿಯಿಂದ | **ರುರುಚಾನಂ**—ಬೆಳಗುವವನೂ | **ಮಹಾಂ**—ಮಹದ್ಗುಣಗಳಿಂದ ಕೂಡಿದವನೂ ಆದ ಅಗ್ನಿಯನ್ನು | **ಅತ್ಯಂ ನ**—ಭಾರವನ್ನು ವಹಿಸಲು ಶಕ್ತಿಯುಳ್ಳ ಅಶ್ವವನ್ನು ಸ್ತುತಿಸುವಂತೆ | **ಉಪ ಬ್ರುವೇ**—ಸ್ತುತಿಸುತ್ತೇನೆ.

॥ ಭಾವಾರ್ಥ ॥

ಜ್ಞಾನವಿಶಿಷ್ಟರಾದ ದೇವತೆಗಳು ದುಃಖದಿಂದ ದಾಟಿಸತಕ್ಕ ಶಕ್ತಿಯ ಕರ್ಮದಿಂದ ಧಾರಣಾತ್ಮಕವಾದ ಯಜ್ಞದಲ್ಲಿ ಅಗ್ನಿಯನ್ನು ಉತ್ಪನ್ನನಾಗುವಂತೆ ಮಾಡಿದರು. ಅನ್ನಾಪೇಕ್ಷಿಯಾದ ನಾನು ಪ್ರಕಾಶಮಾನವಾದ ಕಾಂತಿಯಿಂದ ಬೆಳಗುವವನೂ, ಮಹದ್ಗುಣಗಳಿಂದ ಕೂಡಿದವನೂ ಆದ ಅಗ್ನಿಯನ್ನು ಭಾರಸಹಿಷ್ಣುವಾದ ಅಶ್ವವನ್ನು ಸ್ತುತಿಸುವಂತೆ ಸ್ತೋತ್ರಮಾಡುತ್ತೇನೆ.

## English Translation.

The gods, (endowed) with intelligence, gave birth to Agni in the multiform rite by the exertion of preserving strength: desirous of food, I eulogise thc great Agni, bright with solar effulgence, and (vigorous) as a horse.

॥ ವಿಶೇಷವಿಷಯಗಳು ॥

**ಚಿತ್ತಿಭಿಃ ದೇವಾಸಃ ತರುಷಃ ದಕ್ಷಸ್ಯ ಕ್ರತ್ವಾ ವಿಧರ್ಮಣಿ ಅಗ್ನಿಂ ಜನಯಂತ—ಜ್ಞಾನೈರುಪಲಕ್ಷಿತಾಃ ದೇವಾಃ ವ್ಯಸನೇಭ್ಯಸ್ತಾರಕಸ್ಯ ಬಲಸ್ಯ ಕರ್ಮಣಾ ಯಜ್ಞೇ ಅಗ್ನಿಂ ಅಜನಯನ್** | ಜ್ಞಾನವಿಶಿಷ್ಟರಾದ ಎಂದರೆ ತಿಳಿವಳಿಕೆಯುಳ್ಳ ದೇವತೆಗಳು ದುಃಖವನ್ನು ನಾಶಮಾಡಲು ಸಮರ್ಥವಾದ ಉತ್ತಮಕರ್ಮಗಳಿಂದ ಯಜ್ಞದಲ್ಲಿ ಅಗ್ನಿಯನ್ನು ಉತ್ಪತ್ತಿಮಾಡಿದರು. ಎಂದರೆ ದೇವತೆಗಳು ತುಂಬಾ ತಿಳುವಳಿಕೆಯುಳ್ಳವರು. ನಾನಾವಿಧಕರ್ಮಗಳನ್ನೂ ಅವುಗಳನ್ನು ಮಾಡುವ ವಿಧಾನಗಳನ್ನೂ ಬಲ್ಲವರು. ಆದುದರಿಂದ ದುಃಖಪರಿಹಾರವನ್ನುಂಟುಮಾಡುವ ಉತ್ತಮಕರ್ಮಗಳಿಂದ ಯಜ್ಞದಲ್ಲಿ ಅಗ್ನಿಯನ್ನು ಉತ್ಪತ್ತಿಮಾಡಿದರು ಎಂದಭಿಪ್ರಾಯವು.

ದಕ್ಷಶಬ್ದವು ಬಲನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) **ಕ್ರತು** ಶಬ್ದವು ಕರ್ಮನಾಮಗಳಲ್ಲಿಯೂ (ನಿ. ೩-೧) ಪ್ರಜ್ಞಾನಾಮಗಳಲ್ಲಿಯೂ (ನಿ. ೩-೧೩) ಪಠಿತವಾಗಿದೆ. ಇಲ್ಲಿ ಕರ್ಮವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ವಾಜಂ ಸನಿಷ್ಯನ್ ಭಾನುನಾ ಜ್ಯೋತಿಷಾ ರುರುಚಾನಂ ಮಹಾಂ ಅತ್ಯಂ ನ ಉಪ ಬ್ರುವೇ—ಭಾಸಮಾನೇನ ಜ್ಯೋತಿಷಾ ರೋಚಮಾನಂ ಮಹಾಂತಮಗ್ನಿಂ ಭಾರಸಹಮಶ್ವಮಿವ ಅನ್ನಂ**

**ಲಿಪ್ಸಮಾನೋಽಹಂ ಸ್ತೌಮಿ ।** ಮಹಾಪ್ರಕಾಶದಿಂದ ಬೆಳಗುತ್ತಿರುವ ಅಗ್ನಿಯನ್ನು ಭಾರವನ್ನು ಹೊರುವ ಅಶ್ವವನ್ನು ಹೊಗಳುವಂತೆ ಅನ್ನವನ್ನು ಅಪೇಕ್ಷಿಸುವ ನಾನು ಸ್ತೋತ್ರಮಾಡುತ್ತೇನೆ. ಭಾರವನ್ನು ಹೊರುವ ಅಶ್ವವು ಎಲ್ಲರಿಗೂ ಉಪಯುಕ್ತವಾಗಿರುವುದರಿಂದ ಅದನ್ನು ಎಲ್ಲರೂ ಪ್ರಶಂಸಿಸುವರು. ಅದರಂತೆ ಅಗ್ನಿಯು ಎಲ್ಲರಿಗೂ ಬೇಕಾದವನಾಗಿರುವುದರಿಂದ ಅಂತಹ ಮಹಾಪ್ರಕಾಶದಿಂದ ಬೆಳಗುತ್ತಿರುವ ಅಗ್ನಿಯನ್ನು ಸಮೀಪದಲ್ಲಿ ನಿಂತು ಸ್ತುತಿಸುವೆನು ಎಂದಭಿಪ್ರಾಯವು.

**ವಾಜಃ** ಎಂಬ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ (ನಿ. ೩-೯); **ಭಾನು** ಶಬ್ದವು ಅಹರ್ನಾಮಗಳಲ್ಲಿ ಪಠಿತವಾಗಿದೆ (ನಿ. ೨-೨೦); **ಮಹಾನ್** ಎನ್ನುವುದಕ್ಕೆ ಬದಲಾಗಿ ಇಲ್ಲಿ **ಮಹಾಂ** ಎಂಬ ಪ್ರಯೋಗವಿದೆ. ಇದು ಛಾಂದಸಪ್ರಯೋಗವು. **ಅತ್ಯ** ಶಬ್ದವು ಅಶ್ವನಾಮಗಳಲ್ಲಿ ಪಠಿತವಾಗಿದೆ (ನಿ. ೨-೨೭) **ಅತ ಸಾತತ್ಯಗಮನೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಯಾವಾಗಲು ಸಂಚಾರಮಾಡಲು ಶಕ್ತಿಯುಳ್ಳ ಪ್ರಾಣಿಯಾದುದರಿಂದ ಅತ್ಯವೆಂದರೆ ಅಶ್ವವು ಎಂದರ್ಥವು. **ಅತ್ಯಾಃ ಅತನಾಃ** ಎಂದು ನಿರ್ವಚನವೂ ಇದೆ (ನಿ. ೪-೧೩).

ಸಂಹಿತಾಪಾಠಃ

ಆ ಮಂದ್ರಸ್ಯ ಸನಿಷ್ಯಂತೋ ವರೇಣ್ಯಂ ವೃಣೀಮಹೇ ಅಹ್ರಯಂ ವಾಜಮೃಗ್ಮಿಯಂ।
ರಾತಿಂ ಭೃಗೂಣಾಮುಶಿಜಂ ಕವಿಕ್ರತುಮಗ್ನಿಂ ರಾಜಂತಂ ದಿವ್ಯೇನ ಶೋಚಿಷಾ ॥

॥ ಪದಪಾಠಃ ॥

ಆ। ಮಂದ್ರಸ್ಯ । ಸನಿಷ್ಯಂತಃ । ವರೇಣ್ಯಂ । ವೃಣೀಮಹೇ । ಅಹ್ರಯಂ । ವಾಜಂ । ಋಗ್ಮಿಯಂ ।
ರಾತಿಂ । ಭೃಗೂಣಾಂ । ಉಶಿಜಂ । ಕವಿಕ್ರತುಂ । ಅಗ್ನಿಂ । ರಾಜಂತಂ । ದಿವ್ಯೇನ । ಶೋಚಿಷಾ ॥ ೪ ॥

॥ ಸಾಯಣಭಾಷ್ಯಂ ॥

**ಮಂದ್ರಸ್ಯ ಸ್ತುತ್ಯಸ್ಯ ವೈಶ್ವಾನರಸ್ಯ ಸಂಬಂಧಿನಂ ವರೇಣ್ಯಂ ವರಣೀಯಮಹ್ರಯಮಲಜ್ಜಾವಹಂ ಋಗ್ಮಿಯಂ ಪ್ರಶಸ್ಯಂ ವಾಜಮನ್ನಂ ಸನಿಷ್ಯಂತೋ ಲಿಪ್ಸಮಾನಾ ವಯಂ ಭೃಗೂಣಾಮೃಷೀಣಾಂ ರಾತಿಮಭಿಲಷಿತಾರ್ಥಪ್ರದಾತಾರಮುಶಿಜಮಭಿಲಷ್ಯಂತಂ ಕವಿಕ್ರತುಂ ಕ್ರಾಂತಪ್ರಜ್ಞಂ ದಿವ್ಯೇನ ದಿವಿಭವೇನ ಶೋಚಿಷಾ ರೋಚಿಷಾ ರಾಜಂತಂ ಭ್ರಾಜಮಾನಮಗ್ನಿಮಾವೃಣೀಮಹೇ । ಸಂಭಜಾಮಹೇ ॥**

॥ ಪ್ರತಿಪದಾರ್ಥ ॥

**ಮಂದ್ರಸ್ಯ**—ಸ್ತುತ್ಯನಾದ ವೈಶ್ವಾನರ ಸಂಬಂಧಿಯಾದುದೂ । **ವರೇಣ್ಯಂ**—ಅತ್ಯಂತ ಶ್ರೇಷ್ಠವಾದುದೂ । **ಅಹ್ರಯಂ**—ಲಜ್ಜಾರಹಿತವಾದುದೂ । **ಋಗ್ಮಿಯಂ**—ಪ್ರಶಸ್ಯವಾದುದೂ ಆದ । **ವಾಜಂ**—ಅನ್ನವನ್ನು ।

**ಸನಿಷ್ಯಂತಃ**—ಅಪೇಕ್ಷಿಸುವ ನಾವು | **ಭೃಗೂಣಾಂ**—ಭೃಗುಋಷಿಗಳಿಗೆ | **ರಾತಿಂ**—ಅಭಿಲಷಿತಾರ್ಥದ ದಾತೃವೂ | **ಉಶಿಜಂ**—ನಮ್ಮ ಆಕಾಂಕ್ಷೆಗೆ ಪಾತ್ರನೂ | **ಕವಿಕ್ರತುಂ**—ಕ್ರಾಂತಪ್ರಜ್ಞನೂ | **ದಿವ್ಯೇನ**—ದ್ಯುಲೋಕೋತ್ಪನ್ನವಾದ | **ಶೋಚಿಷಾ**—ಕಾಂತಿಯಿಂದ | **ರಾಜಂತಂ**—ಪ್ರಕಾಶಿಸುವವನೂ ಆದ | **ಅಗ್ನಿಂ**—ಅಗ್ನಿಯನ್ನು | **ಆ ವೃಣೀಮಹೇ**—ಪೂಜಿಸುತ್ತೇವೆ.

॥ ಭಾವಾರ್ಥ ॥

ಸ್ತುತ್ಯನಾದ ವೈಶ್ವಾನರಸಂಬಂಧಿಯಾದುದೂ, ಅತ್ಯಂತಶ್ರೇಷ್ಠವಾದುದೂ ಲಜ್ಜಾರಹಿತವಾದುದೂ ಪ್ರಶಸ್ತವಾದುದೂ, ಆದ ಅನ್ನವನ್ನು ಅಪೇಕ್ಷಿಸುವ ನಾವು ಭೃಗುಋಷಿಗಳಿಗೆ ಅಭಿಲಷಿತಾರ್ಥವನ್ನು ದಾನಮಾಡುವವನೂ ನಮ್ಮ ಆಕಾಂಕ್ಷೆಗೆ ಪಾತ್ರನೂ, ಕ್ರಾಂತಪ್ರಜ್ಞನೂ ದ್ಯುಲೋಕೋತ್ಪನ್ನವಾದ ಕಾಂತಿಯಿಂದ ಪ್ರಕಾಶಿಸುವವನೂ ಆದ ಅಗ್ನಿಯನ್ನು ಪೂಜಿಸುತ್ತೇವೆ.

## English Translation.

Desiring excellent food, inflicting no disgrace, we solicit the boon of the adorable (Vaishwanara) from Agni, the benefactor of the Bhrigus. the object our desires, who is acquainted with past acts, and shines with celestial splendour.

॥ ವಿಶೇಷವಿಷಯಗಳು ॥

**ಭೃಗೂಣಾಂ**—ಭೃಗುವು ಒಬ್ಬ ಪ್ರಖ್ಯಾತನಾದ ಋಷಿಯು. ಯಾಸ್ಕರು—**ಅರ್ಚಿಷಿ ಭೃಗುಃ ಸಂಬಭೂವ | ಭೃಗುರ್ಭೃಜ್ಯಮಾನೋ ನ ದೇಹೇ** (ನಿ. ೩–೧೭) ಎಂದು ನಿರ್ವಚನವನ್ನು ಹೇಳಿರುವರು. ದುರ್ಗಾಚಾರ್ಯರು ಇದನ್ನು ವಿವರಿಸುತ್ತಾ—**ಪ್ರಜಾಪತಿನಾ ಕಿಲ ಶಕ್ರಮಾತ್ಮೀಯಮಾದಾಯ ಅಗ್ನೌ ಹುತಂ | ತತೋ ಅರ್ಚಿಷಿ ಜ್ವಾಲಾಯಾಂ ಭೃಗುಃ ನಾಮ ಮಹರ್ಷಿಃ ಸಂಬಭೂವ** | ಎಂದು ಹೇಳಿರುವರು. ಎಂದರೆ ಪೂರ್ವದಲ್ಲಿ ಪ್ರಜಾಪತಿಯು ತನ್ನ ವೀರ್ಯವನ್ನು ತೆಗೆದು ಅಗ್ನಿಯಲ್ಲಿ ಹೋಮಮಾಡಿದನು. ಆ ಹೋಮದಿಂದ ಎದ್ದ ಅಗ್ನಿಯ ಜ್ವಾಲೆಗಳಲ್ಲಿ ಭೃಗುವೆಂಬ ಮಹರ್ಷಿಯು ಉತ್ಪನ್ನನಾದನು ಎಂದು ಹೇಳಿದಾರೆ

ಭೃಗುಋಷಿಯ ವಿಷಯದಲ್ಲಿ ಐತರೇಯಬ್ರಾಹ್ಮಣದಲ್ಲಿ ಒಂದು ಉಪಾಖ್ಯಾನವಿದೆ—

**ಆಪೋ ವಾ ಅಸ್ಪರ್ಧಂತ ವಯಂ ಪೂರ್ವಂ ಯಜ್ಞಂ ವಕ್ಷ್ಯಾಮೋ ವಯಮಿತಿ ಯಾಶ್ಚೇಮಾಃ ಪೂರ್ವೇದ್ಯುರ್ವಸತೀವರ್ಯೋ ಗೃಹ್ಯಂತೇ ಯಾಶ್ಚ ಪ್ರಾತರೇಕಧನಾಸ್ತಾ ಭೃಗುರಪಶ್ಯದಾಪೋ ವೈ ಸ್ಪರ್ಧಂತ ಇತಿ ತಾ ಏತಯರ್ಚಾ ಸಮಜ್ಞಪಯತ್ಸಮನ್ಯಾ ಯಂತ್ಯುಪ ಯಂತ್ಯನ್ಯಾ ಇತಿ ತಾಃ ಸಮಜಾನತ ಸಂಜಾನಾನಾ ಹಾಸ್ಯಾಪೋ ಯಜ್ಞಂ ವಹಂತಿ ಯ ಏವಂ ವೇದ** ||

(ಐ. ಬ್ರಾ. ೮–೨೦)

ಪೂರ್ವದಲ್ಲಿ ಸೋಮಯಾಗಕ್ಕಾಗಿ ಹಿಂದಿನ ದಿವಸ ತಂದ **ವಸತೀವರೀ** ಎಂಬ (ಪಾತ್ರೆಯಲ್ಲಿರುವ) ಉದಕಗಳಿಗೂ **ಏಕಧನಾ** ಎಂಬ ಉದಕಗಳಿಗೂ ಯಜ್ಞನಿರ್ವಹಣ ವಿಷಯದಲ್ಲಿ ನಾಮುಂದು ತಾಮುಂದು ಎಂದು ಸ್ಪರ್ಧೆಯುಂಟಾಯಿತು. ಆಗ ಅಲ್ಲಿದ್ದ ಭೃಗುಋಷಿಯು ಇದನ್ನು **ನೋಡಿ**—

**ಸಮನ್ಯಾ ಯಂತ್ಯುಪ ಯಂತ್ಯನ್ಯಾಃ ಸಮಾನಮೂರ್ವಂ ನದ್ಯಃ ಪೃಣಂತಿ ।**
**ತಮೂ ಶುಚಿಂ ಶುಚಯೋ ದೀದಿವಾಂಸಮಪಾಂ ನಪಾತಂ ಪರಿ ತಸ್ಥುರಾಪಃ ॥**
(ಋ. ಸಂ ೨-೩೫-೩)

ಎಂಬ ಋಕ್ಕನ್ನು ಪಠಿಸಿ ಅವುಗಳನ್ನು ಸಮಾಧಾನಪಡಿಸಿದನು. ಈ ವಿಷಯವನ್ನು ತಿಳಿದಿರುವ ಯಜಮಾನನ ಯಜ್ಞದಲ್ಲಿ ಆ ಉದಕಗಳು ಸ್ಪರ್ಧೆಯನ್ನು ಬಿಟ್ಟು ಸಮಾಧಾನದಿಂದಿದ್ದು ಯಜ್ಞನಿರ್ವಹಣಕಾರ್ಯದಲ್ಲಿ ಸಹಾಯಕವಾಗಿರುತ್ತವೆ. ಇತ್ಯಾದಿ

ಭೃಗುಮಹರ್ಷಿಯು ವರುಣನ ಪುತ್ರನೆಂದು (ಭೃಗುರ್ವೈ ವಾರುಣಿಃ । ವರುಣಂ ಪಿತರಮುಪಸಸಾರ ತೈ. ಆ. ೯-೧) ಶತಪಥಬ್ರಾಹ್ಮಣ ೧೧-೬-೧-೧ ; ಪಂಚವಿಂಶಬ್ರಾಹ್ಮಣ ೧೮-೯-೨ ; ನಿರುಕ್ತ ೩-೧೭ ಇತ್ಯಾದಿ ಸ್ಥಳಗಳಲ್ಲಿ ಹೇಳಿದೆ. ಭೃಗುಗಳು ಎಂದು ಬಹುವಚನಪ್ರಯೋಗವಿರುವ ಅನೇಕ ಸಂದರ್ಭಗಳಲ್ಲಿ ಇವರನ್ನು ಅಗ್ನಿಯ ವಿಷಯವಾಗಿ ಪ್ರಸ್ತಾಪಿಸಲಾಗಿದೆ. ಋ. ಸಂ. ೧-೫೮-೬ ; ೧-೧೨೭-೭ ; ೧-೧೪೩-೪ ; ೨-೪-೨ ; ೩-೨-೪ ; ೪-೭-೧ ಇತ್ಯಾದಿ ಸ್ಥಳಗಳಲ್ಲಿ ಭೃಗುಗಳೆಂದು ಬಹುವಚನ ಪ್ರಯೋಗವಿದೆ. ಭೃಗುವಂಶದವರು ಪ್ರಸಿದ್ಧರಾದ ಪುರೋಹಿತ ವರ್ಗಕ್ಕೆ ಸೇರಿದವರೆಂದು ಋ. ಸಂ. ೭-೧೮-೬ ; ೮-೩-೯ ; ೮-೬-೧೮ ; ೮-೩-೯ ; ೮-೧೦೨-೪ ಎಂಬ ಋಕ್ಕುಗಳಲ್ಲಿ ಹೇಳಿದೆ. ತೈತ್ತಿರೀಯ ಸಂಹಿತೆಯಲ್ಲಿ (ತೈ. ಸಂ. ೪-೬-೫-೨ ; ೫-೬-೮-೬ ; ೧-೮-೧೫ ; ತೈ. ಬ್ರಾ. ೧-೮-೨-೫ ; ಪಂ.ಬ್ರಾ. ೧೮-೯-೨ ; ) ಭೃಗುಗಳು ಅಗ್ನಿಸ್ಥಾಪನ ಮತ್ತು ದಶಪೇಯಕ್ರತು ಎಂಬ ಯಜ್ಞಕರ್ಮಗಳಲ್ಲಿ ಪುರೋಹಿತರ ಪಾತ್ರವನ್ನು ವಹಿಸಿರುವ ಪ್ರಸ್ತಾಪವಿದೆ. ತೈ. ಸಂ. ೧-೧-೭-೨ ; ಮೈ. ಸಂ. ೧-೧-೮ ; ವಾಜಸನೇಯಸಂಹಿತಾ ೧-೧೮ ; ತೈ. ಬ್ರಾ. ೧-೧-೪-೮ ; ೩-೨-೭-೬ ; ಶ ಬ್ರಾ. ೧-೨-೧-೧೩ ಇತ್ಯಾದಿ ಸ್ಥಳಗಳಲ್ಲಿ ಭೃಗುಗಳು ಅಂಗಿರಸರೊಡನೆ ಸಾಹಚರ್ಯವಿರುವ ವರ್ಣನೆಗಳಿವೆ.

ಭೃಗು ಎಂಬುದು ಋಗ್ವೇದದಲ್ಲಿ ಇಪ್ಪತ್ತೊಂದು ಸಲ ಬರುತ್ತದೆ. ಇದಲ್ಲದೆ ಭೃಗುವತ್ ಎಂಬುದಾಗಿಯೂ ಎರಡುಸಲ ಪ್ರಯೋಗಿಸಲ್ಪಟ್ಟಿದೆ. ಭೃಗು ಎಂಬುದಾಗಿ ಏಕವಚನದಲ್ಲಿ ಪ್ರಯೋಗಿಸಿಸುವುದು ಒಂದೇ ಒಂದು ಸಲ. ಆದುದರಿಂದ ಈ ಭೃಗುಗಳು ಪೌರಾಣಿಕ ವ್ಯಕ್ತಿಗಳ ಒಂದು ಗಣವನ್ನೇ ನಿರ್ದೇಶಿಸಬಹುದು. ಅಗ್ನಿದೇವತಾಕವಾದ ಸೂಕ್ತಗಳಲ್ಲೇ ಸುಮಾರು ಹನ್ನೆರಡು ಸಲ ಬರುತ್ತದೆ. ಅದೂ ಸಾಧಾರಣವಾಗಿ ಮನುಷ್ಯರು ಅಗ್ನಿಯನ್ನು ಪಡೆದುದನ್ನು ವರ್ಣಿಸುವ ಸಂದರ್ಭದಲ್ಲೇ. ಮಾತರಿಶ್ವನು ಅಗ್ನಿಯನ್ನು ಭೃಗುವಿಗೆ ಒಂದು ನಿಧಿರೂಪದಲ್ಲಿ ತಂದುಕೊಟ್ಟನು (೧-೬೦-೧), ಅಥವಾ ನಿಗೂಢನಾಗಿದ್ದ ಅಗ್ನಿಯನ್ನು ಭೃಗುಗಳಿಗೋಸ್ಕರ ಉದ್ದೀಪನಗೊಳಿಸಿದನು (೩-೫-೧೦). ಮಾತರಿಶ್ವಾ ಮತ್ತು ದೇವತೆಗಳು ಅಗ್ನಿಯನ್ನು ರಚಿಸಿದರು ; ಭೃಗುಗಳು ತಮ್ಮ ಶಕ್ತಿ ಬಲವನ್ನು ಪ್ರಯೋಗಿಸಿ, ಅಗ್ನಿಯನ್ನು ಉತ್ಪತ್ತಿಮಾಡಿದರು (೧೦-೪೬-೯). ನೀರಿನಲ್ಲಿ ಅಡಗಿಕೊಂಡಿದ್ದ ಅಗ್ನಿಯನ್ನು ಭೃಗುಗಳು ಕಂಡು (೧೦-೪೬-೨), ಅಲ್ಲೇ ಅವನನ್ನು ಆರಾಧಿಸಿ, (ಆಯು) ಮನುಷ್ಯರ ಗೃಹದಲ್ಲಿ ಸ್ಥಾಪಿಸಿದರು (೨-೪-೨ ; ೨-೪-೪ ನ್ನು ಹೋಲಿಸಿ). ಅವರು ಅಗ್ನಿಯನ್ನು ಕಾಡಿನಲ್ಲಿ ಚೆನ್ನಾಗಿ ನೆಲಸುವಂತೆ ಮಾಡಿದರು (೬-೧೫-೨) ಅಥವಾ ಮನುಷ್ಯರ ಮಧ್ಯದಲ್ಲಿ, ಒಂದು ನಿಧಿಯಂತೆ ಇಟ್ಟರು (೧-೫೮-೬). ಅಗ್ನಿಯು ಭೃಗುಗಳಿಂದ ದತ್ತವಾಗಿ ಬಂದ ವಸ್ತು (೩-೨-೪). ಚೆನ್ನಾಗಿ ಮಥನಮಾಡಿ, ಅವನನ್ನು ಸ್ತುತಿವಾಕ್ಯಗಳಿಂದ ಸ್ತುತಿಸಿದರು (೧-೧೨೭-೭) ಸ್ತುತಿರೂಪವಾದ ಗಾನಗಳಿಂದ ಅವನನ್ನು ತೃಪ್ತಿಪಡಿಸಿ ಚೆನ್ನಾಗಿ ಪ್ರಕಾಶಿಸುವಂತೆ ಮಾಡಿ (೧೦-೧೬೨-೫). ಅನಂತರ ವನಗಳಲ್ಲಿರುವಂತೆ ಮಾಡಿದರು

(೪-೭-೧). ಭೂಮಿಯ ನಾಭಿಪ್ರದೇಶಕ್ಕೆ ಕರತಂದರು (೧-೧೪೩-೪). ಹೋಮ ಮುಂತಾದವುಗಳಿಂದ ವಿಶಿಷ್ಟವಾದ ಕರ್ಮಗಳನ್ನು ಅಥರ್ವನು ವಿಧಿಸಿದನು ; ಭೃಗುಗಳು ತಮ್ಮ ಕೌಶಲ್ಯದಿಂದ ದೇವತಾ ಲಕ್ಷಣಗಳನ್ನು ವ್ಯಕ್ತಪಡಿಸಿದರು (೧೦-೯೨-೧೦) : ಅಗ್ನ್ಯುತ್ಪತ್ತಿಯಲ್ಲೇ ಅವರ ಚತುರತೆ ಕಂಡುಬಂದಿದ್ದರೂ, ಅದನ್ನು ಕಲೆಯೆಂದೇ ಭಾವಿಸಿದ್ದಾರೆ. ಭೃಗುಗಳು ರಥವನ್ನು ರಚಿಸಿದಂತೆ, ಇಂದ್ರ ಅಥವಾ ಅಶ್ವಿನೀದೇವತೆಗಳ ಸ್ತುತಿಯನ್ನು ಸ್ತೋತೃಗಳು ರಚಿಸುತ್ತಾರೆ (೪-೧೬-೨೦ ; ೧೦-೩೯-೧೪).

ಭೃಗುಗಳು ಬಹಳ ಪುರಾತನರಿರಬೇಕು. ಯಾಗಕರ್ತೃಗಳು, ಅಂಗಿರಸರು, ಅಥರ್ವರು ಇವರುಗಳ ಜೊತೆಯಲ್ಲಿ, ಭೃಗುಗಳನ್ನೂ ಸೇರಿಸಿ, ಎಲ್ಲರೂ ಸೋಮರಸಪ್ರಿಯರಾದ ತಮ್ಮ ಪಿತೃಗಳೆಂದು (೧೦-೧೪-೬) ಹೇಳಿಕೊಂಡಿದ್ದಾರೆ, ಮತ್ತು ಭೃಗುಗಳು ಅಂಗಿರಸರು ಮತ್ತು ಮನು, ಇವರುಗಳಂತೆ ಅಗ್ನಿಯನ್ನು ಸ್ತುತಿಸುತ್ತಾರೆ (೮-೪೩-೧೩). ಯತಿಗಳ ಮತ್ತು ಭೃಗುಗಳ ಪ್ರಾರ್ಥನೆಯನ್ನು ಲಾಲಿಸಿದಂತೆ, ತಮ್ಮ ಪ್ರಾರ್ಥನೆಯನ್ನೂ ಲಾಲಿಸಬೇಕೆಂದು (೮-೬-೧೮) ಅಥವಾ, ಯತಿಗಳು, ಭೃಗುಗಳು ಮತ್ತು ಪ್ರಸ್ಕಣ್ವರಗೆ ಸಹಾಯ ನೀಡದಂತೆ, ತಮಗೂ ಸಹಾಯ ನೀಡಬೇಕೆಂದು, ಇಂದ್ರನನ್ನು ಬೇಡಿಕೊಂಡಿದ್ದಾರೆ (೮-೩-೯). ದ್ರುಹ್ಯರುಮತ್ತು ತುರ್ವಶ, ಇವರುಗಳೊಡನೆ, ಭೃಗುಗಳೂ ಸುದಾಸನ ಶತ್ರುಗಳೆಂದು ಹೇಳಿದೆ (೭-೧೮-೬). ಈ ಮೇಲಿನ ಮೂರು ವಾಕ್ಯಗಳಲ್ಲಿ .(೭-೬-೧೮ ; ೮-೩-೯ ; ೭-೧೮-೬). ಭೃಗುಗಳು ಯಾವುದೋ ಒಂದು ಸಣ್ಣ ಜನಾಂಗವನ್ನು ನಿರ್ದೇಶಿಸುವಂತೆ ತೋರುತ್ತದೆ. ಮೂವತ್ತುಮೂರು ದೇವತೆಗಳು, .ಅಶ್ವಿನೀದೇವತೆಗಳು, ಮರುತರು ಜಲಾಭಿಮಾನಿದೇವತೆಗಳು, ಉಷಸ್ಸು ಮತ್ತು ಸೂರ್ಯ, ಇವರೊಡನೆ ಸೋಮಪಾನಕ್ಕೆ ಭೃಗುಗಳಿಗೂ ಆಹ್ವಾನವಿದೆ (೮-೩೫-೩). ಅವರನ್ನು ಸೂರ್ಯರಿಗೆ ಹೋಲಿಸಿದೆ ಮತ್ತು ಅವರನ್ನು ಸಂಪೂರ್ಣಕಾಮರೆಂದೂ ಹೇಳಿದೆ. (೮-೩-೧೬ ; ೯-೧೦೧-೧೩) ರಲ್ಲಿ ಭೃಗುಗಳು ರಾಕ್ಷಸನನ್ನು ಓಡಿಸಿದಂತೆ, ಕೃಪಣರನ್ನು ಓಡಿಸಬೇಕೆಂದು ಆರಾಧಕರು ಪ್ರಾರ್ಥಿಸಿದ್ದಾರೆ ಇಲ್ಲಿ ಈ ಕಥೆಯಲ್ಲಿ ಪ್ರಸಕ್ತವಾಗಿರುವ, ಭೃಗುಗಳು ಓಡಿಸಿದ ರಾಕ್ಷಸರು ಯಾರು, ಎಂಬುದು ತಿಳಿದಿಲ್ಲ.

ಋಗ್ವೇದಕ್ಕೆ ಸಂಬಂಧಿಸಿದ ವಸಿಷ್ಠಾದಿ ಋಷಿಗಳಂತೆ, ಭೃಗುಗಳು ಈಗ ಬಳಿಕೆಯಲ್ಲಿರುವ ಋಷಿಗಳ ಗುಂಪಿಗೆ ಸೇರಿದವರಲ್ಲವೆನ್ನಬಹುದು. ಅಂಗಿರಸರಿಗೆ ಅಂಗಿರಸನೂ, ವಸಿಷ್ಠರಿಗೆ ವಸಿಷ್ಠನೂ ನಾಯಕರಾಗಿರುವಂತೆ, ಭೃಗುವೂ ಭೃಗು ಎಂಬ ಒಂದು ಋಷಿಗಣಕ್ಕೆ ನಾಯಕನಿರಬೇಕು.

ಸ್ವರ್ಗದಿಂದ ಅಗ್ನಿಯು ಇಳಿದುಬರುವುದು ಮತ್ತು ಅದು ಮನುಷ್ಯನಿಗೆ ದತ್ತವಾಗುವುದು, ಇವುಗಳಿಗೆ ಮಾತರಿಶ್ವ ಮತ್ತು ಭೃಗುಗಳೇ ಸಂಬಂಧಿಸಿದವರು. ಅದರಲ್ಲಿ ಮಾತರಿಶ್ವನು ಸ್ವರ್ಗದಿಂದ ಅಗ್ನಿಯನ್ನು ತರುವವನಾದರೆ, ಭೂಮಿಯಲ್ಲಿ ಯಾಗಾದಿ ಕರ್ಮಗಳ ಪ್ರಾರಂಭ ಮತ್ತು ಆಚರಣೆಗೆ ತರುವ ಕೆಲಸ ಭೃಗುಗಳದು.

ಇತರ ವೇದಗಳಲ್ಲಿ ಭೃಗುವು ಒಂದು ಗೋತ್ರದ ಪ್ರತಿನಿಧಿ (ಆ. ವೇ. ೫-೧೯-೧; ಐ. ಬ್ರಾ. ೨-೨೦-೭) ಪ್ರಜಾಪ್ರತಿಯ ರೇತಸ್ಸಿನಿಂದ ಉತ್ಪನ್ನನಾಗಿ ವರುಣನಿಂದ ತನ್ನ ಪುತ್ರನಾಗಿ ಸ್ವೀಕೃತನಾಗುತ್ತಾನೆ; ಇದರಿಂದ ಅವನಿಗೆ ವಾರುಣಿ ಎಂಬ ಹೆಸರು ಬರುತ್ತದೆ. (ಐ. ಬ್ರಾ. ೩-೩೪-೧ ; ಪಂ. ಬ್ರಾ. ೧೮-೯-೧); ವರುಣನ ಮಗನೆಂದು ಸ್ಪಷ್ಟವಾಗಿಯೂ ಉಕ್ತವಾಗಿದೆ. (೧೧-೧-೧).

ಭೃಗು ಎಂಬ ಪದವು ಭ್ರಾಜ್ (ಬೆಳಗು ಪ್ರಕಾಶಿಸು) ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಭೃಗುವು ಅಗ್ನಿಯ ಒಂದು ಹೆಸರೆಂದು ಕೆಲವರೂ, ಅಗ್ನಿಯ ಸಿಡಿಲಿನ ರೂಪಕ್ಕೆ ಈ ಹೆಸರೆಂದು ಕೆಲವರೂ ಅಭಿಪ್ರಾಯಪಡುತ್ತಾರೆ.

ಸಂಹಿತಾಪಾಠಃ ॥

ಅಗ್ನಿಂ ಸುಮ್ನಾಯ ದಧಿರೇ ಪುರೋ ಜನಾ ವಾಜಶ್ರವಸಮಿಹ ವೃಕ್ತಬರ್ಹಿಷಃ ।
ಯತಸ್ರುಚಃ ಸುರುಚಂ ವಿಶ್ವದೇವ್ಯಂ ರುದ್ರಂ ಯಜ್ಞಾನಾಂ ಸಾಧದಿಷ್ಟಿಮಪಸಾಂ॥

॥ ಪದಪಾಠಃ

ಅಗ್ನಿಂ । ಸುಮ್ನಾಯ । ದಧಿರೇ । ಪುರಃ । ಜನಾಃ । ವಾಜಽಶ್ರವಸಂ । ಇಹ । ವೃಕ್ತಽಬರ್ಹಿಷಃ ।
ಯತಽಸ್ರುಚಃ । ಸುಽರುಚಂ । ವಿಶ್ವಽದೇವ್ಯಂ । ರುದ್ರಂ । ಯಜ್ಞಾನಾಂ । ಸಾಧತ್ಽಇಷ್ಟಿಂ । ಅಪಸಾಂ॥

॥ ಸಾಯಣಭಾಷ್ಯಂ ॥

ವೃಕ್ತಬರ್ಹಿಷಃ ಸ್ತೀರ್ಣಬರ್ಹಿಷೋ ಯತಸ್ರುಚಃ ಪ್ರಾಪ್ತಸ್ರುಚ ಋತ್ವಿಜಃ ಸುಮ್ನಾಯ ಸುಖಾರ್ಥಂ ವಾಜಶ್ರವಸಂ ಮನುಷ್ಯೇಭ್ಯಃ ಪ್ರೇರಿತಾನ್ನಂ ಸುರುಚಂ ಪ್ರಶಸ್ತದೀಪ್ತಿಮಂತಂ ವಿಶ್ವದೇವ್ಯಂ ವಿಶ್ವೇಭ್ಯೋ ದೇವೇಭ್ಯೋ ಹಿತಂ ರುದ್ರಂ ದುಃಖಾನಾಂ ದ್ರಾವಕಮಪಸಾಂ ಕರ್ಮವತಾಂ ಯಜ್ಞಾನಾಂ। ಯಜಂತೀತಿ ಯಜ್ಞಾ ಯಜಮಾನಾಃ । ತೇಷಾಂ ಸಾಧದಿಷ್ಟಿಂ ಸಾಧಿತಯಜ್ಞಮಗ್ನಿಮಿಹ ಯಜ್ಞೇ ಪುರೋ ದಧಿರೇ । ಸ್ತುವಂತಿ ॥

॥ ಪ್ರತಿಪದಾರ್ಥ ॥

**ವೃಕ್ತಬರ್ಹಿಷಃ**—ಬರ್ಹಿರೂಪವಾದ ಆಸನಗಳನ್ನು ಹರಡಿರುವವರೂ । **ಯತಸ್ರುಚಃ**—(ಹವಿಸ್ಸನ್ನು ಅರ್ಪಿಸಲು) ಸ್ರುಕ್ಪಾತ್ರೆಯನ್ನು ಎತ್ತಿ ಹಿಡಿದಿರುವವರೂ ಆದ । **ಜನಾಃ**—ಋತ್ವಿಕ್ಕುಗಳು । **ಸುಮ್ನಾಯ**—ಸುಖಾರ್ಥವಾಗಿ । **ವಾಜಶ್ರವಸಂ**—ಮಾನವರಿಗಾಗಿ ಅನ್ನವನ್ನು ಪ್ರೇರಿಸಿದವನೂ । **ಸುರುಚಂ**—ಪ್ರಶಸ್ತ್ಯವಾದ ಕಾಂತಿಯುಳ್ಳವನೂ । **ವಿಶ್ವದೇವ್ಯಂ**—ಸಕಲ ದೇವತೆಗಳ ಕ್ಷೇಮಕ್ಕಾಗಿರುವವನೂ । **ರುದ್ರಂ**—ದುಃಖನಾಶಕನೂ । **ಅಪಸಾಂ**—ಕರ್ಮಕರ್ತರಾದ । **ಯಜ್ಞಾನಾಂ**—ಯಜಮಾನರ । **ಸಾಧದಿಷ್ಟಿಂ**—ಯಜ್ಞಕರ್ಮವನ್ನು ನೆರವೇರಿಸುವಂತೆ ಮಾಡುವವನೂ, ಆದ । **ಅಗ್ನಿಂ**—ಅಗ್ನಿಯನ್ನು । **ಇಹ**—ಈ ಯಜ್ಞದಲ್ಲಿ । **ಪುರಃ**—ಅಭಿಮುಖವಾಗಿದ್ದು । **ದಧಿರೇ**—ಸ್ತುತಿಸುತ್ತಾರೆ.

॥ ಭಾವಾರ್ಥ ॥

ಬರ್ಹಿರೂಪವಾದ ಆಸನಗಳನ್ನು ಹರಡಿರುವವರೂ, ಹವಿಸ್ಸನ್ನು ಅರ್ಪಿಸಲು ಸ್ರುಕ್ಪಾತ್ರೆಯನ್ನು ಎತ್ತಿ ಹಿಡಿದಿರುವವರೂ ಆದ ಋತ್ವಿಕ್ಕುಗಳು ಸುಖಾರ್ಥವಾಗಿ ಮಾನವರಿಗೆ ಅನ್ನವನ್ನು ಪ್ರೇರಿಸಿದವನೂ, ಪ್ರಶಸ್ತ್ಯವಾದ ಕಾಂತಿಯುಳ್ಳವನೂ ಸಕಲದೇವತೆಗಳ ಕ್ಷೇಮಕ್ಕಾಗಿರುವವನೂ, ದುಃಖನಾಶಕನೂ, ಕರ್ಮಕರ್ತರಾದ ಯಜಮಾನರ ಯಜ್ಞಕರ್ಮವನ್ನು ನೆರವೇರಿಸುವಂತೆ ಮಾಡುವವನೂ ಆದ ಅಗ್ನಿಯನ್ನು ಈ ಯಜ್ಞದಲ್ಲಿ ಅಭಿಮುಖವಾಗಿದ್ದು ಸ್ತುತಿಸುತ್ತಾರೆ.

## English Translation.

Men with strewn holy grass, and uplifted ladles, place before them **this** solemnity for the sake of obtaining happiness, Agni, the bestower of **food**, the resplendent, the benefactor of all the gods, the remover of sorrow, **the** perfecter of the (holy) acts of the sacrificer.

॥ ವಿಶೇಷವಿಷಯಗಳು ॥

**ವೃಕ್ತಬರ್ಹಿಷಃ**— ಯಾಸ್ಕರು ಬರ್ಹಿಃಶಬ್ದಕ್ಕೆ ನಿರ್ವಚನವನ್ನು ಹೇಳುತ್ತಾ — **ಪರಿಬರ್ಹಣಾತ್ ಪರಿಚ್ಛೇದನಾತ್ ।** ಎಂದರೆ (ಅಗ್ರಭಾಗವನ್ನು) ತುದಿಯನ್ನು ಕತ್ತರಿಸಿರುವ ದರ್ಭೆಗಳು ಎಂದು ಅರ್ಥವನ್ನು ವಿವರಿಸಿ,

**ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸ್ತೋರಸ್ಯಾ ವೃಜ್ಯತೇ ಅಗ್ರೇ ಅಹ್ನಾಂ ।**
**ವ್ಯು ಪ್ರಥತೇ ವಿತರಂ ವರೀಯೋ ದೇವೇಭ್ಯೋ ಅದಿತಯೇ ಸ್ಯೋನಂ ॥**

(ಋ. ಸಂ. ೧೦-೧೧೦-೪)

ಎಂಬ ಋಕ್ಕನ್ನು ಉದಾಹರಿಸಿ ಅದಕ್ಕೆ—

**ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸನಾಯಾಸ್ಯಾಃ ಪ್ರವೃಜ್ಯತೇ ಅಗ್ರೇ ಅಹ್ನಾಂ ಬರ್ಹಿಃ ಪೂರ್ವಾಹ್ಣೇ.ತದ್ವಿಪ್ರಥತೇ ವಿತರಂ ವಿಕೀರ್ಣತರಮಿತಿ ವಾ ವಿಸ್ತೀರ್ಣತರಮಿತಿ ವಾ ವರೀಯೋ ವರತರಮುರುತರಂ ವಾ।ದೇವೇಭ್ಯಶ್ಚಾದಿತಯೇ ಚ ಸ್ಯೋನಂ। ಸ್ಯೋನಮಿತಿ ಸುಖನಾಮ। ಸ್ಯತೇರವಸ್ಯಂತ್ಯೇತತ್ ಸೇವಿತವ್ಯಂ ಭವತೀತಿ ವಾ ।**

(ನಿ. ೮-೯)

ಎಂದು ನಿರ್ವಚನವನ್ನು ಹೇಳಿದಾರೆ. ಯಜ್ಞಕಾಲದಲ್ಲಿ ಯಜ್ಞವೇದಿಯಲ್ಲಿ ಆಹ್ವಾನಮಾಡಲ್ಪಟ್ಟ ದೇವತೆಗಳು ಬಂದು ಕುಳಿತುಕೊಳ್ಳುವುದಕ್ಕಾಗಿ] ತುದಿಗಳನ್ನು ಕತ್ತರಿಸಿದ ದರ್ಭೆಗಳನ್ನು ಹಾಸಿ ಆಸನಕ್ಕಾಗಿ ಸಿದ್ಧಪಡಿಸುವರು. ದರ್ಭೆಗಳ ತುದಿಯು ಮೊನಚಾಗಿ ಮುಳ್ಳಿನಂತೆ ಹರಿತವಾಗಿರುವುದರಿಂದ ಶರೀರಕ್ಕೆ ಚುಚ್ಚಿ ಬಾಧೆಯಾಗಬಹುದೆಂದು ದರ್ಭೆಗಳ ತುದಿಭಾಗಗಳನ್ನು ಕತ್ತರಿಸಿ ದರ್ಭೆಗಳೆಲ್ಲಾ ಒಂದೇ ಸಮನಾಗಿರುವಂತೆ ಮಾಡಿ ಅವುಗಳನ್ನು ಆಸನವು ಮೆತ್ತಗಿರುವುದಕ್ಕಾಗಿ ಒಂದರಮೇಲೊಂದರಂತೆ ಮೂರು ಪದರಗಳಾಗಿ ಹಾಸುವರು. ಇದನ್ನು **ಬರ್ಹಿಃ** ಎಂದು ಕರೆಯುವರು. ದೇವತೆಗಳನ್ನು ಆಹ್ವಾನಮಾಡಿ ಅವರು ಬಂದು ಈ **ಬರ್ಹಿಃ** ಎಂಬ ಆಸನದಮೇಲೆ ಕುಳಿತುಕೊಳ್ಳಬೇಕೆಂದು ಋಷಿಗಳು ಪ್ರಾರ್ಥಿಸುವರು. ಇದಲ್ಲದೆ ಇಂತಹ ಆಸನದಮೇಲೆ ಯಜ್ಞದಲ್ಲಿ ಉಪಯೋಗಿಸುವ ಸೋಮ, ಆಜ್ಯ, ಹವಿಸ್ಸು ಮೊದಲಾದ ದ್ರವ್ಯಗಳನ್ನು ಇಡುವರು. ಪ್ರಕೃತ ಋಕ್ಕಿನಲ್ಲಿ ಋತ್ವಿಗ್ಜನರು ಯಜ್ಞವೇದಿಯಲ್ಲಿ ಇಂತಹ ಆಸನವನ್ನು ಸಿದ್ಧಪಡಿಸಿಕೊಂಡು ಅಗ್ನಿಯನ್ನು ಪ್ರಾರ್ಥಿಸುತ್ತಿರುವರು ಎಂದು ವರ್ಣಿಸಿದೆ.

**ಯತಸ್ರುಚಃ—ಸ್ರುಕ್** (ಸ್ರುಚಃ ಎಂಬುದು ಬಹುವಚನ) ಎಂದರೆ ಯಜ್ಞದಲ್ಲಿ ಆಜ್ಯಾದಿಗಳನ್ನು ಅಗ್ನಿಯಲ್ಲಿ ಹೋಮಮಾಡುವುದಕ್ಕಾಗಿ ಉಪಯೋಗಿಸುವ ಸೌಟಿನಂತಿರುವ ಮರದ ಪಾತ್ರೆಯು. **ಯತಸ್ರುಚಃ**

ಎಂದರೆ ಇಂತಹ ಮರದ ಸೌಟಿನಲ್ಲಿ ಹೋಮಾರ್ಥವಾಗಿ ಆಜ್ಯಾದಿಹೋಮದ್ರವ್ಯವನ್ನು ತುಂಬಿಕೊಂಡು ಅಗ್ನಿಯಲ್ಲಿ ಹೋಮಮಾಡುವುದಕ್ಕಾಗಿ ಆ ಸೌಟುಗಳನ್ನು ಎತ್ತಿ ಹಿಡಿದುಕೊಂಡು ಸಿದ್ಧರಾಗಿರುವರು ಎಂದರ್ಥವು. ಎಂದರೆ ಅಗ್ನಿಯನ್ನು ಆಹ್ವಾನಮಾಡಿದ ಕೂಡಲೆ ಅಗ್ನಿಯು ಬಂದು ಕುಳಿತುಕೊಳ್ಳುವುದಕ್ಕಾಗಿ ಬರ್ಹಿಸ್ಸೆಂಬ ದರ್ಭಾಸನವನ್ನು ಸಿದ್ಧಪಡಿಸಿರುವರು. ಹೋಮಾರ್ಥವಾಗಿ ಸೌಟಿನಲ್ಲಿ ಹೋಮದ್ರವ್ಯವನ್ನು ತುಂಬಿ ಅಗ್ನಿಯಲ್ಲಿ ಹಾಕುವುದಕ್ಕಾಗಿ ಕೈಗಳನ್ನು ಎತ್ತಿಹಿಡಿದಿರುವರು. ಈ ರೀತಿ ಎಲ್ಲವೂ ಸಿದ್ಧವಾಗಿರುವುದು ಎಂದು ಹೇಳಿದೆ.

**ಸುಮ್ನ**ಶಬ್ದವು ಸುಖನಾಮುಗಳಲ್ಲಿಯೂ (ನಿ. ೩-೧೩) **ವಾಜಃ**ಶಬ್ದವು ಅನ್ನನಾಮುಗಳಲ್ಲಿಯೂ ಪಠಿತವಾಗಿದೆ (ನಿ. ೩-೯) ಮತ್ತು **ಅಪಃ** ಎಂಬ ಶಬ್ದವು ಕರ್ಮನಾಮುಗಳಲ್ಲಿ ಪಠಿತವಾಗಿದೆ (ನಿ. ೩-೧).

**ವಿಶ್ವದೇವ್ಯಂ—ವಿಶ್ವೇಭ್ಯೋ ದೇವೇಭ್ಯೋ ಹಿತಂ ।** ಈ ಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ಮಾಡಬಹುದು ; ಈ ಅಗ್ನಿಯು ಸಮಸ್ತ ದೇವತೆಗಳಿಗೂ ಹಿತ ಅಥವಾ ಪ್ರಿಯನಾದವನು ಅಥವಾ ಸಮಸ್ತ ದೇವತೆಗಳಿಗೆ ಅರ್ಪಿಸುವ ಹವಿರಾದಿಗಳನ್ನು ಈ ಅಗ್ನಿಯಲ್ಲಿ ಹೋಮಮಾಡುವುದರಿಂದ ಈ ಸಮಸ್ತ ದೇವತೆಗಳ ಮುಖಸ್ವರೂಪನಾಗಿರುವನು ಎಂದೂ ಅರ್ಥಮಾಡಬಹುದು.

**ರುದ್ರಂ—ದುಃಖಾನಾಂ ದ್ರಾವಕಂ ।** ರುದ್ರಶಬ್ದಕ್ಕೆ ನಾನಾರ್ಥಗಳಿದ್ದರೂ ಇಲ್ಲಿ ಈ ಶಬ್ದವು ಅಗ್ನಿಗೆ ವಿಶೇಷಣವಾಗಿರುವುದರಿಂದ ಸ್ತೋತ್ರಮಾಡುವವರ ದುಃಖವನ್ನು ಓಡಿಸುವವನು ಎಂದರೆ ನಾಶಮಾಡುವವನು ಎಂಬರ್ಥವು ವಿವೃತವಾಗಿದೆ.

**ಯಜ್ಞಾನಾಂ—ಯಜಂತೀತಿ ಯಜ್ಞಾ ಯಜಮಾನಾಃ ।** ಇಲ್ಲಿ ಯಜ್ಞಶಬ್ದಕ್ಕೆ ಯಜ್ಞವನ್ನು ಮಾಡುವ ಯಜಮಾನರು ಎಂಬರ್ಥವನ್ನು ಭಾಷ್ಯಕಾರರು ವಿವರಿಸಿದಾರೆ.

**ಸಾಧದಿಷ್ಟಿಂ—ಸಾಧಿತಯಜ್ಞಂ ।** ಇಷ್ಟಿಯೆಂದರೆ ಯಜ್ಞ. ಅದನ್ನು ಸಾಧಿಸುವವನು ಎಂದರೆ ಯಜ್ಞದಲ್ಲಿ ಮುಖ್ಯಪಾತ್ರವನ್ನು ವಹಿಸಿ ನೆರವೇರಿಸುವವನು ಎಂದು ಅಗ್ನಿಗೆ ವಿಶೇಷಣಪದವಾಗಿದೆ.

**ಪುರಃ ದಧಿರೇ—ಸ್ತುವಂತಿ ।** ಅಗ್ನಿಯ ಅಭಿಮುಖವಾಗಿ ನಿಂತು ಸ್ತುತಿಸುತ್ತಾರೆ ಅಥವಾ ಯಜ್ಞದಲ್ಲಿ ಹೋಮಾದಿಗಳನ್ನು ಮಾಡುವುದಕ್ಕಾಗಿ ಋತ್ವಿಜರು ಅಗ್ನಿಯನ್ನು ಮುಂದುಗಡೆ ಸ್ಥಾಪಿಸುತ್ತಾರೆ.



॥ ಸಂಹಿತಾಪಾಠಃ ॥

**ಪಾವಕಶೋಚೇ ತವ ಹಿ ಕ್ಷಯಂ ಪರಿ ಹೋತರ್ಯಜ್ಞೇಷು ವೃಕ್ತಬರ್ಹಿಷೋ ನರಃ ।**

**ಅಗ್ನೇ ದುವ ಇಚ್ಛಮಾನಾಸ ಆಪ್ಯಮುಪಾಸತೇ ದ್ರವಿಣಂ ಧೇಹಿ ತೇಭ್ಯಃ ॥ ೬ ॥**

ಪದಪಾಠಃ

ಪಾವಕ್ಽಶೋಚೇ । ತವ । ಹಿ । ಕ್ಷಯಂ । ಪರಿ । ಹೋತಃ । ಯಜ್ಞೇಷು । ವೃಕ್ತಽಬರ್ಹಿಷಃ । ನರಃ

ಅಗ್ನೇ । ದುವಃ । ಇಚ್ಛಮಾನಾಸಃ । ಆಪ್ಯಂ । ಉಪ । ಆಸತೇ । ದ್ರವಿಣಂ । ಧೇಹಿ । ತೇಭ್ಯಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಪಾವಕಶೋಚೇ ಶೋಧಕದೀಪ್ತೇ ಹೇ ಹೋತರ್ದೇವಾನಾಮಾಹ್ವಾತಃ ಯಜ್ಞೇಷು ಪರಿ ಪರಿತೋ ವೃಕ್ತಬರ್ಹಿಷಃ ಸ್ತೀರ್ಣಬರ್ಹಿಷೋ ದುವಃ ಪರಿಚರಣಮಿಚ್ಛಮಾನಾಸ ಇಚ್ಛಂತೋ ನರೋ ನೇತಾರೋ ಯಜಮಾನಾ ಆಪ್ಯಮಾಪ್ತುಂ ಯೋಗ್ಯಂ ತವ ತ್ವತ್ಸಂಬಂಧಿನಂ ಕ್ಷಯಂ ನಿವಾಸಂ ಯಾಗ-ಗೃಹಮುಪಾಸತೇ । ಸೇವಂತೇ । ತೇಭ್ಯೋ ದ್ರವಿಣಂ ಧನಂ ಧೇಹಿ । ವಿಧೇಹಿ ॥

॥ ಪ್ರತಿಪದಾರ್ಥ ॥

**ಪಾವಕಶೋಚೇ**—ಶುದ್ಧಿಗೊಳಿಸತಕ್ಕ ಕಾಂತಿಯುಳ್ಳವನೂ । **ಹೋತಃ**—ದೇವತೆಗಳಿಗೆ ಆಹ್ವಾನವನ್ನು ಕೊಡುವವನೂ ಆದ । **ಅಗ್ನೇ**—ಎಲೈ ಅಗ್ನಿಯೇ । **ಯಜ್ಞೇಷು**—ಯಜ್ಞಗಳಲ್ಲಿ । **ಪರಿ**—ಸುತ್ತಲೂ । **ವೃಕ್ತಬರ್ಹಿಷಃ**—ದರ್ಭಾಸನಗಳನ್ನು ಹರಡಿದವರೂ । **ದುವಃ**—(ನಿನ್ನ) ಪರಿಚರಣವನ್ನು । **ಇಚ್ಛಮಾನಾಸಃ**—ಇಚ್ಛಿಸುವವರೂ । **ನರಃ**—ನೇತೃಗಳೂ ಆದ ಯಜಮಾನರು । **ಆಪ್ಯಂ**—ಸಮೀಪಿಸಲು ಯೋಗ್ಯವಾದುದೂ । **ತವ**—ನಿನ್ನ ಸಂಬಂಧವಾದುದೂ ಆದ । **ಕ್ಷಯಂ**—ಯಾಗಗೃಹವನ್ನು । **ಉಪಾಸತೇ**—ಸೇವಿಸುತ್ತಾರೆ । **ತೇಭ್ಯಃ**—ಅವರಿಗೆ । **ದ್ರವಿಣಂ**—ಧನವನ್ನು । **ಧೇಹಿ**—ಕೊಡು.

॥ ಭಾವಾರ್ಥ ॥

ಲೋಕವನ್ನು ಶುದ್ಧಿಗೊಳಿಸತಕ್ಕ ಕಾಂತಿಯುಳ್ಳವನೂ, ದೇವತೆಗಳಿಗೆ ಆಹ್ವಾನವನ್ನು ಕೊಡುವವನೂ ಆದ ಎಲೈ ಅಗ್ನಿಯೇ, ಯಜ್ಞಗಳಲ್ಲಿ ಸುತ್ತಲೂ ದರ್ಭಾಸನಗಳನ್ನು ಹರಡಿದವರೂ, ನಿನ್ನ ಪರಿಚರಣವನ್ನು ಇಚ್ಛಿಸುವವರೂ ನೇತೃಗಳೂ ಆದ : ಯಜಮಾನರು, ಸಮೀಪಿಸಲು ಯೋಗ್ಯವಾದುದೂ, ನಿನ್ನ ಸಂಬಂಧವಾದುದೂ ಆದ ಯಾಗಗೃಹವನ್ನು ಸೇವಿಸುತ್ತಾರೆ. ಅವರಿಗೆ ಧನವನ್ನು ಕೊಡು.

## English Translation.

Agni, of purifying lustre, invoker, of the gods, men desirous of worshipping (you), having strewn the sacred grass, repair to your appropriate abode at sacrifices: bestow upon them wealth.

ವಿಶೇಷವಿಷಯಗಳು ॥

**ಪಾವಕಶೋಚೇ—ಶೋಧಕದೀಪ್ತೇ** । ಅಗ್ನಿಯು ತನ್ನ ಪ್ರಕಾಶದಿಂದ ಸಮಸ್ತವನ್ನೂ ಶುದ್ಧಿಗೊಳಿಸುವವನಾದ್ದರಿಂದ ಪಾವಕಶೋಚಿಃ ಎಂಬ ವಿಶೇಷಣಪದದಿಂದ ಸ್ತುತಿಸಿದೆ.

**ಕ್ಷಯಂ—ಕ್ಷಿ ನಿವಾಸೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಕ್ಷಯ ಶಬ್ದಕ್ಕೆ ವಾಸಸ್ಥಾನವೆಂದರ್ಥ. ಇಲ್ಲಿ ಅಗ್ನಿಯ ವಾಸಸ್ಥಾನವೆಂದರೆ ಯಜ್ಞಗೃಹವು.

**ದ್ರವಿಣಂ—**ದ್ರವಿಣ ಶಬ್ದವು ಧನನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯). ದ್ರವಿಣವೆಂದರೆ ಧನವೆಂದರ್ಥವು.

ಎಲೈ ಅಗ್ನಿಯೇ, ಯಜ್ಞಮಾಡುವ ಯಜಮಾನರು ತಮ್ಮ ಯಜ್ಞವೇದಿಯಲ್ಲಿ ದೇವತೆಗಳು ಕುಳಿತುಕೊಳ್ಳುವುದಕ್ಕಾಗಿ ದರ್ಭಾಸನವನ್ನು ಸಿದ್ಧಪಡಿಸಿ ದೇವತೆಗಳನ್ನು ಕರೆದು ತರುವ ನಿನ್ನನ್ನು ಸೇವಿಸುತ್ತಾರೆ. ಮತ್ತು ನಿನ್ನನ್ನು ಯಜ್ಞಾದಿಗಳಿಂದ ಸೇವಿಸುವುದಕ್ಕಾಗಿ ಯಜ್ಞಗೃಹವನ್ನು ಪ್ರವೇಶಿಸುತ್ತಾರೆ. ಅಂತಹ ಯಜಮಾನರಿಗೆ ಧನಾದಿಗಳನ್ನು ಕೊಡು ಎಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ.



॥ ಸಂಹಿತಾಪಾಠಃ ॥

**ಆ ರೋದಸೀ ಅಪೃಣದಾ ಸ್ವರ್ಮಹಜ್ಜಾತಂ ಯದೇನಮಪಸೋ ಅಧಾರಯನ್ ।**
**ಸೋ ಅಧ್ವರಾಯ ಪರಿ ಣೀಯತೇ ಕವಿರತ್ಯೋ ನ ವಾಜಸಾತಯೇ ಚನೋಹಿತಃ ॥**

॥ ಪದಪಾಠಃ ॥

**ಆ । ರೋದಸೀ ಇತಿ । ಅಪೃಣತ್ । ಸ್ವಃ । ಮಹತ್ । ಜಾತಂ । ಯತ್ । ಏನಂ । ಅಪಸಃ । ಅಧಾರಯನ್ ।**
**ಸಃ । ಅಧ್ವರಾಯ । ಪರಿ । ನೀಯತೇ । ಕವಿಃ । ಅತ್ಯಃ । ನ । ವಾಜಽಸಾತಯೇ । ಚನಃಽಹಿತಃ ॥ ೭ ॥**

॥ ಸಾಯಣಭಾಷ್ಯಂ ॥

**ರೋದಸೀ ದ್ಯಾವಾಪೃಥಿವ್ಯಾವಾಪೃಣತ್ । ಆಪೂರಯತ್ । ತಥಾ ಮಹತ್ಪ್ರಭೂತಂ ಸ್ವರಂತರಿಕ್ಷಮಾಪೃಣಚ್ಚ । ಅಪಸಃ ಕರ್ಮವಂತೋ ಯಜಮಾನಾ ಜಾತಂ ಯದ್ಯಮೇನಮಗ್ನಿಮಧಾರಯನ್ ಅತ್ಯೋ ನ ಅಶ್ವ ಇವ ಕವಿಃ ಕ್ರಾಂತಃ ಸರ್ವತ್ರ ವ್ಯಾಪ್ತಶ್ಚನೋಹಿತೋ ನಿಹಿತಾನ್ನಃ ಸೋಽಯಮಗ್ನಿರ್ವಾಜಸಾತಯೇ ವಾಜಸ್ಯಾನ್ನಸ್ಯ ಕೀರ್ತೇರ್ವಾ ಸಾತಯೇ ಲಾಭಾಯ ಪರಿಣೀಯತೇ । ಯಜ್ಞಾರ್ಥಂ ನೀಯತೇ ॥**

॥ ಪ್ರತಿಪದಾರ್ಥ ॥

(**ಅಗ್ನಿಃ**—ಅಗ್ನಿಯು) । **ರೋದಸೀ**—ದ್ಯಾವಾಪೃಥಿವಿಗಳನ್ನು । **ಆ ಅಪೃಣತ್**—ವ್ಯಾಪಿಸಿದ್ದಾನೆ । **ಮಹತ್**—ಮಹತ್ತಾದ । **ಸ್ವಃ**—ಅಂತರಿಕ್ಷವನ್ನೂ । **ಆ (ಅಪೃಣತ್)**—ವ್ಯಾಪಿಸಿದ್ದಾನೆ । **ಅಪಸಃ**—ಕರ್ಮವಂತರಾದ ಯಜಮಾನರು । **ಜಾತಂ**—ಉತ್ಪನ್ನನಾದ । **ಯತ್ ಏನಂ**—ಯಾವ ಈ ಅಗ್ನಿಯನ್ನು । **ಅಧಾರ-**

**ಯನ್**—ಧರಿಸಿದರೋ (ಅಂತಹ) | **ಅತ್ಯೋ ನ**—ಅಶ್ವದಂತಿರುವವನೂ | **ಕವಿಃ**—ಸರ್ವತ್ರ ವ್ಯಾಪ್ತನಾದವನೂ | **ಚನೋಹಿತಃ**—ಅನ್ನವನ್ನು ಸ್ಥಾಪಿಸಿದವನೂ ಆದ | **ಸಃ**—ಆ ಅಗ್ನಿಯು | **ವಾಜಸಾತಯೇ**—ಅನ್ನಲಾಭಕ್ಕೋಸ್ಕರವಾದ | **ಅಧ್ವರಾಯ**—ಯಜ್ಞಾರ್ಥವಾಗಿ | **ಪರಿಣೀಯತೇ**—(ಯಜ್ಞಭೂಮಿಗೆ) ಕರೆತರಲ್ಪಡುತ್ತಾನೆ

॥ ಭಾವಾರ್ಥ ॥

ಅಗ್ನಿಯು ದ್ಯಾವಾಪೃಥಿವಿಗಳನ್ನೂ ಮಹತ್ತಾದ ಅಂತರಿಕ್ಷವನ್ನೂ ವ್ಯಾಪಿಸಿದ್ದಾನೆ. ಕರ್ಮವಂತರಾದ ಯಜಮಾನರು ಉತ್ಪನ್ನನಾದ ಯಾವ ಈ ಅಗ್ನಿಯನ್ನು ಧರಿಸಿದರೋ (ಅಂತಹ) ಅಶ್ವದಂತಿರುವವನೂ, ಸರ್ವತ್ರ ವ್ಯಾಪ್ತನಾದವನೂ, ಅನ್ನವನ್ನು ಸ್ಥಾಪಿಸಿದವನೂ ಆದ ಆ ಅಗ್ನಿಯು ಅನ್ನ ಲಾಭಾರ್ಥವಾದ ಯಜ್ಞಕ್ಕಾಗಿ ಯಜ್ಞಭೂಮಿಗೆ ಕರೆತರಲ್ಪಡುತ್ತಾನೆ.

## English Translation.

He has filled both heaven and earth and the spacious firmament, he whom the performers of (sacred) rites have laid hold of as soon as born. he, the sage, the giver of food, is brought like a horse to the sacrificer, for (the sake of) obtaining food.

॥ ವಿಶೇಷವಿಷಯಗಳು ॥

**(ಅಗ್ನಿಃ) ರೋದಸೀ ಆ ಅಪ್ರೃಣತ್ ಮಹತ್ ಸ್ವಃ ಆ**—ಈ ಅಗ್ನಿಯು ದ್ಯಾವಾಪೃಥಿವಿಗಳನ್ನೂ, ಅಂತರಿಕ್ಷವನ್ನೂ ವ್ಯಾಪಿಸಿದ್ದಾನೆ. ಎಂದರೆ ಅಗ್ನಿಯು ಪಾರ್ಥಿವಾಗ್ನಿರೂಪದಿಂದ ಪೃಥಿವಿಯನ್ನೂ, ವಿದ್ಯುದಗ್ನಿರೂಪದಿಂದ ಅಂತರಿಕ್ಷವನ್ನೂ, ಆದಿತ್ಯರೂಪದಿಂದ ಸ್ವರ್ಗವನ್ನೂ ವ್ಯಾಪಿಸಿದ್ದಾನೆ.

**ಜಾತಂ ಯತ್ ಏನಂ ಅಪಸಃ ಅಧಾರಯನ್— ಕರ್ಮವಂತೋ ಯಜಮಾನಾಃ ಜಾತಂ ಯಮಗ್ನಿಂ ಅಧಾರಯನ್** | ಅರಣಿಗಳನ್ನು ಕಡೆಯುವುದರಿಂದ ಆಗತಾನೇ ಉತ್ಪನ್ನನಾದ ಅಗ್ನಿಯನ್ನು ಯಜ್ಞಮಾಡುವ ಯಜಮಾನರು (ಉತ್ತರವೇದಿಗೆ ಒಯ್ಯುವುದಕ್ಕಾಗಿ) ಧರಿಸಿದರು.

**ಚನೋಹಿತಃ**–ಸ್ತೋತ್ರಮಾಡುವವರಿಗೆ ಕೊಡುವುದಕ್ಕಾಗಿ ಅನ್ನವನ್ನು ಧರಿಸಿರುವವನು ಎಂದಭಿಪ್ರಾಯವು.

**ಸಃ ವಾಜಸಾತಯೇ ಅಧ್ವರಾಯ ಪರಿಣೀಯತೇ**—ಆ ಅಗ್ನಿಯು ಅನ್ನಲಾಭಕ್ಕಾಗಿ ಮಾಡುವ ಯಜ್ಞಕರ್ಮಗಳಿಗಾಗಿ ಅಗ್ನಿಮಥನಸ್ಥಾನದಿಂದ ಉತ್ತರವೇದಿಯ ಬಳಿಗೆ ಒಯ್ಯಲ್ಪಡುತ್ತಾನೆ. ಅಗ್ನಿಮಂಥನವಾದಕೂಡಲೇ ಅಗ್ನಿಯನ್ನು ಮಂತ್ರಪೂರ್ವಕವಾಗಿ ಉತ್ತರವೇದಿಗೆ ಒಯ್ಯುವ ಕರ್ಮಕ್ಕೆ ಅಗ್ನಿಪ್ರಣಯನವೆಂದು ಹೆಸರು. ಇದು ಯಜ್ಞಕರ್ಮಗಳಲ್ಲಿ ಮುಖ್ಯವಾದುದು. ಇದು ಐತರೇಯ ಬ್ರಾಹ್ಮಣದಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ. ಅದರಂತೆ ನಾವು ಈ ಕರ್ಮವನ್ನು ಭಾಗ ೧೪ ಪುಟ 541-549 ಗಳಲ್ಲಿ ವಿಸ್ತಾರವಾಗಿ ವಿವರಿಸಿದೇವೆ.



॥ ಸಂಹಿತಾಪಾಠಃ ॥

ನಮಸ್ಯತ ಹವ್ಯದಾತಿಂ ಸ್ವಧ್ವರಂ ದುವಸ್ಯತ ದಮ್ಯಂ ಜಾತವೇದಸಂ ।
ರಥೀರ್ಋತಸ್ಯ ಬೃಹತೋ ವಿಚರ್ಷಣಿರಗ್ನಿರ್ದೇವಾನಾಮಭವತ್ಪುರೋಹಿತಃ ॥ ೮

॥ ಪದಪಾಠಃ ॥

ನಮಸ್ಯತ । ಹವ್ಯऽದಾತಿಂ । ಸುऽಅಧ್ವರಂ । ದುವಸ್ಯತ । ದಮ್ಯಂ । ಜಾತऽವೇದಸಂ ।
ರಥೀಃ । ಋತಸ್ಯ । ಬೃಹತಃ । ವಿऽಚರ್ಷಣಿಃ । ಅಗ್ನಿಃ । ದೇವಾನಾಂ । ಅಭವತ್ । ಪುರಃऽಹಿತಃ ॥ ೮

॥ ಸಾಯಣಭಾಷ್ಯಂ ॥

ರಥೀರ್ನೇತಾ ಬೃಹತೋ ಮಹತ ಋತಸ್ಯ ಯಜ್ಞಸ್ಯ ವಿಚರ್ಷಣಿರ್ದ್ರಷ್ಟಾ ಯೋಽಗ್ನಿರ್ದೇವಾನಾಂ ಪುರೋಹಿತಃ ಪುರಸ್ತಾದ್ದ್ರಷ್ಟವ್ಯತಯಾ ಸ್ಥಾಪಿತೋಽಭವತ್ ಹವ್ಯದಾತಿಂ ದೇವೇಭ್ಯೋ ಹವಿಷಾಂ ದಾತಾರಂ ಸ್ವಧ್ವರಂ ಶೋಭನಯಜ್ಞಂ ದಮ್ಯಂ ದಮೇಭ್ಯೋ ಗೃಹೇಭ್ಯೋ ಹಿತಂ ಜಾತವೇದಸಂ ಜಾತಪ್ರಜ್ಞಂ ತಮಗ್ನಿಂ ನಮಸ್ಯತ । ಪೂಜಯತ । ದುವಸ್ಯತ । ಪರಿಚರತ ॥

॥ ಪ್ರತಿಪದಾರ್ಥ ॥

**ರಥೀಃ**—ನೇತೃವೂ । **ಬೃಹತಃ**—ಮಹತ್ತಾದ । **ಋತಸ್ಯ**—ಯಜ್ಞದ । **ವಿಚರ್ಷಣಿಃ**—ವೀಕ್ಷಕನೂ ಆದ । **ಅಗ್ನಿಃ**—ಅಗ್ನಿಯು । **ದೇವಾನಾಂ**—ದೇವತೆಗಳಿಗೆ । **ಪುರೋಹಿತಃ**—ಅಗ್ರಣಿಯಾದ ನೇತೃವಾಗಿ । **ಅಭವತ್**—ಸ್ಥಾಪಿತನಾಗಿದ್ದಾನೆ । **ಹವ್ಯದಾತಿಂ**—(ದೇವತೆಗಳಿಗೆ) ಹವಿಸ್ಸನ್ನ ನೀಡುವವನೂ । **ಸ್ವಧ್ವರಂ**—ಶ್ರೇಷ್ಠವಾದ ಯಜ್ಞಕರ್ತನೂ । **ದಮ್ಯಂ**—ಗೃಹಕ್ಕೆ ಹಿತಕಾರಿಯೂ । **ಜಾತವೇದಸಂ**—ಜಾತಪ್ರಜ್ಞನೂ ಆದ ಅಗ್ನಿಯನ್ನು । **ನಮಸ್ಯತ**—ಪೂಜಿಸಿ । **ದುವಸ್ಯತ**—ಸೇವಿಸಿ.

॥ ಭಾವಾರ್ಥ ॥

ನೇತೃವೂ, ಮಹತ್ತಾದ ಯಜ್ಞದ ವೀಕ್ಷಕನೂ ಆದ ಅಗ್ನಿಯು ದೇವತೆಗಳ ಪುರೋಹಿತನಾಗಿ ಸ್ಥಾಪಿತನಾಗಿದ್ದಾನೆ. ದೇವತೆಗಳಿಗೆ ಹವಿಸ್ಸನ್ನ ನೀಡುವವನೂ, ಶ್ರೇಷ್ಠವಾದ ಯಜ್ಞಕರ್ತನೂ, ಗೃಹಕ್ಕೆ ಹಿತಕಾರಿಯೂ ಜಾತಪ್ರಜ್ಞನೂ ಆದ ಅಗ್ನಿಯನ್ನು ಪೂಜಿಸಿ. ಅವನನ್ನು ಸೇವಿಸಿ.

English Translation·

Reverence the bearer of oblations (to the gods), him whose sacrifice is acceptable; worship him by whom all that exists is known, who is friendly to our dwellings; for Agni is the conductor of the great sacrifice, the beholder of all, who has been placed in front of the gods.

॥ ವಿಶೇಷವಿಷಯಗಳು ॥

**ವಿಚರ್ಷಣಿಃ**—ವಿಚರ್ಷಣಿಶಬ್ದವು ಪಶ್ಯತಿಕರ್ಮಗಳಲ್ಲಿ ಪಠಿತವಾಗಿರುವುದರಿಂದ ಈ ಶಬ್ದಕ್ಕೆ ನೋಡುವವನು ಎಂದರ್ಥವು. (ನಿ. ೩-೧೩)

**ಸ್ವಧ್ವರಂ**—ಯಾಸ್ಕರು ಅಧ್ವರಶಬ್ದಕ್ಕೆ—**ಅಧ್ವರ ಇತಿ ಯಜ್ಞನಾಮ । ಧ್ವರತಿರ್ಹಿಂಸಾಕರ್ಮಾ ತತ್ಪ್ರತಿಷೇಧಃ ।** ಎಂದರೆ ಧ್ವರತಿಧಾತುವು ಹಿಂಸಾಕರ್ಮವನ್ನು ಸೂಚಿಸುವುದು. ಅಧ್ವರವೆಂದರೆ ಹಿಂಸಾಕರ್ಮವಿಲ್ಲದಿರುವ ಯಜ್ಞವೆಂದರ್ಥ ಎಂದು ನಿರ್ವಚನವನ್ನು ಹೇಳಿರುವರು. (ನಿ. ೧-೮) ಇಲ್ಲಿ **ಸು+ಅಧ್ವರಂ** ಎಂದಿರುವುದರಿಂದ ಶ್ರೇಷ್ಠವಾದ ಯಜ್ಞ ಅಥವಾ ಯಜ್ಞವನ್ನು ನೆರವೇರಿಸುವವನು ಎಂದಭಿಪ್ರಾಯವು.

**ದಮ್ಯಂ**—**ದಮೇ** ಎಂಬ ಶಬ್ದವು ಗೃಹನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩) ದಮ್ಯಂ ಎಂದರೆ ಗೃಹಕ್ಕೆ ಸಂಬಧಿಯಾದ, ಗೃಹದಲ್ಲಿ ವಾಸಿಸುವ, ಗೃಹಕ್ಕೆ ಹಿತಕಾರಿಯಾದ ಇತ್ಯಾದ್ಯರ್ಥಗಳನ್ನು ಹೇಳಬಹುದು.

**ಜಾತವೇದಸಂ**—**ಜಾತಾನಾಂ ವೇದಿತಾರಂ ಜಾತಪ್ರಜ್ಞಂ ಜಾತಬಲಂ ವಾ ।** ಉತ್ಪನ್ನವಾದವುಗಳೆಲ್ಲವನ್ನೂ ತಿಳಿದಿರುವವನು ಎಂದೂ, ಸ್ವಾಭಾವಿಕವಾದ ಎಲ್ಲವನ್ನೂ ತಿಳಿಯಬಹುದಾದ ಬುದ್ಧಿಶಕ್ತಿಯುಳ್ಳವನೆಂದೂ, ಬಹಳವಾಗಿ ಇರುವ ಶಕ್ತಿಯನ್ನು ಹೊಂದಿ ಇರುವನೆಂದೂ ಅಗ್ನಿಯ ಸ್ವರೂಪವನ್ನು ಬೋಧಿಸುವ ಜಾತವೇದಃ ಶಬ್ದಕ್ಕೆ ಮೂರು ವಿಧವಾದ ಅರ್ಥವನ್ನು ಸಾಯಣರು ವಿವರಿಸಿರುವರು. ಯಾಸ್ಕರು ನಿರುಕ್ತದಲ್ಲಿ—

**ಜಾತಾನಿ ವೇದ । ಜಾತಾನಿ ವೈನಂ ವಿದುಃ । ಜಾತೇ ಜಾತೇ ವಿದ್ಯತ ಇತಿ ವಾ । ಜಾತವಿತ್ತೋ ವಾ ಜಾತಧನಃ । ಜಾತವಿದ್ಯೋ ವಾ ಜಾತಪ್ರಜ್ಞಾನಃ ।**

(ನಿ. ೭-೨೦)

ಎಂದು ಹೇಳಿರುವರು. ಈ ಲೋಕದಲ್ಲಿ ಉತ್ಪನ್ನವಾಗಿ ಇವನಿಗೆ ತಿಳಿಯದಿರುವ ವಸ್ತುವು ಇಲ್ಲ. ಆದ್ದರಿಂದ ಅಗ್ನಿಯು ಸರ್ವಜ್ಞನಾಗಿರುವನು. ಉತ್ಪನ್ನವಾದ ಪ್ರಾಣಿಗಳು ಎಲ್ಲವೂ ಅಗ್ನಿಯನ್ನು ತಿಳಿದಿರುವವು. ಆದ್ದರಿಂದ ಎಲ್ಲರಿಂದಲೂ ತಿಳಿಯಲರ್ಹನಾಗಿರುವನು.

**ಯತ್ತಜ್ಜಾತಃ ಪಶೂನವಿಂದತೇತಿ ತಜ್ಜಾತವೇದಸೋ ಜಾತವೇದಸ್ತ್ವಮಿತಿ ಬ್ರಾಹ್ಮಣಂ ತಸ್ಮಾತ್ ಸರ್ವಾನೃತೂನ್ ಪಶವೋಽಗ್ನಿಮಭಿ ಸರ್ಪಂತೀತಿ ಚ ॥**

ಎಂಬ ಈ ಶ್ರುತಿವಾಕ್ಯವು ಅಗ್ನಿಯು ಉತ್ಪನ್ನವಾದವುಗಳೆಲ್ಲದರಲ್ಲಿಯೂ ವ್ಯಾಪಿಸಿರುವನು ಎಂಬ ಅರ್ಥವನ್ನು ವಿಶದವಾಗಿ ಹೇಳುತ್ತದೆ.

ಅಗ್ನಿಯು ಧನವುಳ್ಳವನು. ಮತ್ತು ಸ್ವಭಾವದಿಂದಲೂ ಅಗ್ನಿಯು ಪ್ರಜ್ಞಾನವಂತನಾಗಿರುವನು. ಎಂದು ಅಗ್ನಿಯ ಸ್ವರೂಪ ಮತ್ತು ಸ್ವಭಾವವನ್ನು ವಿವರಿಸಿ,

**ಜಾತವೇದಸೇ ಸುನವಾಮ ಸೋಮಮರಾತೀಯತೋ ನಿ ದಹಾತಿ ವೇದಃ ।**
**ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ ॥**

(ಋ. ಸಂ. ೧-೯೯-೧)

ಮತ್ತು—

**ಪ್ರ ನೂನಂ ಜಾತವೇದಸಮಶ್ವಂ ಹಿನೋತ ವಾಜಿನಂ । ಇದಂ ನೋ ಬರ್ಹಿರಾಸದೇ ॥**

(ಋ. ಸಂ. ೧೦-೧೮೮-೧)

ಎಂಬ ಋಕ್ಕುಗಳಿಂದ ಜಾದವೇದಸ್ಸೆಂಬ ಅಗ್ನಿಯನ್ನು ಸ್ತುತಿಸಿರುವುದನ್ನೂ ವಿವರಿಸಿರುವರು. ಮತ್ತು—

**ತದೇತದೇಕಮೇವ ಜಾತವೇದಸ್ಯಂ ಗಾಯತ್ರಂ ತೃಚಂ ದಶತತೀಷು ವಿದ್ಯತೇ । ಯತ್ತು ಕಿಂಚಿದಾಗ್ನೇಯಂ ತಜ್ಜಾತವೇದಸಾನಾಂ ಸ್ಥಾನೇ ಯುಜ್ಯತೇ ॥**

(ನಿ. ೭-೨೦)

ಪ್ರನೂನಂ ಎಂಬ ಜಾತವೇದಸ್ಸಂಬಂಧಿಯಾದ ಗಾಯತ್ರೀ ಛಂದಸ್ಸಿನ ಋಕ್ಕುಗಳು ಮೂರು ಮಾತ್ರವಿರುವವು. ಇದಕ್ಕಿಂತಲೂ ಬೇರೆಯಾದ ಜಾತವೇದಾಗ್ನಿಬೋಧಕವಾದ ಗಾಯತ್ರೀ ಛಂದಸ್ಸಿನ ಋಕ್ಕುಗಳಿರುವುದಿಲ್ಲ ಮತ್ತು ಕರ್ಮದಲ್ಲಿ ವಿನಿಯೋಗವಿರುವುದಿಲ್ಲ. ಆದ್ದರಿಂದ ಅಗ್ನಿಯೇ ಜಾತವೇದಾಃ ಎಂಬ ಪದದಿಂದ ನಿರ್ದಿಷ್ಟನಾಗಿರುವನು.

**ಸ ನ ಮನ್ಯೇತಾಯಮೇವಾಗ್ನಿರಿತ್ಯಪ್ಯೇತೇ ಉತ್ತರೇ ಜ್ಯೋತಿಷೀ ಜಾತವೇದಸೀ ಉಚ್ಯೇತೇ ತತೋ ನು ಮಧ್ಯಮಃ । ಅಭಿ ಪ್ರವಂತ ಸಮನೇವ ಯೋಷಾ ಇತಿ ತತ್ ಪುರುಸ್ತಾದ್ವ್ಯಾಖ್ಯಾತಮಥಾಸಾವಾದಿತ್ಯ ಉದುತ್ಯಂ ಜಾತವೇದಸಮಿತಿ ತದುಪರಿಷ್ಟಾದ್ವ್ಯಾಖ್ಯಾಸ್ಯಾಮಃ ॥**

**ಅಭಿ ಪ್ರವಂತ ಸಮನೇವ ಯೋಷಾ** ಎಂಬ ಮಂತ್ರದಿಂದಲೂ ಅಗ್ನಿಯ ಸ್ವರೂಪವನ್ನು ವರ್ಣಿಸಿರುವುದಾದರೂ, ಜಾತವೇದಶ್ಶಬ್ದದ ಅರ್ಥವನ್ನು ವಿಮರ್ಶೆಮಾಡುವಾಗ ಅಗ್ನಿ ಪದವೂ (ಅಭಿಪ್ರವಂತ ಎಂಬ ಮಂತ್ರದಲ್ಲಿ ಉಕ್ತವಾಗಿರುವ ಪದವು) ಜಾದವೇದಶ್ಶಬ್ದಾರ್ಥಕ್ಕೆ ವಿಶೇಷಣವಾಗಿರುವುದು, **ಉದುತ್ಯಂ ಜಾತವೇದಸಂ** ಎಂಬ ಮಂತ್ರದಿಂದ ಸೂರ್ಯನೂ ಜಾತವೇದಶ್ಶಬ್ದದಿಂದ ಬೋಧ್ಯನಾಗಿರುವನೆಂದು ಅರ್ಥವು. ದುರ್ಗಾಚಾರ್ಯರು.—

**ಜಾತವೇದಸಂ ಸೂರ್ಯಮುದ್ವಹಂತೀತಿ ತು ವಿಶೇಷಣವಿಶೇಷ್ಯಸಾಮಾನಾಧಿಕರಣ್ಯೈಕವಾಕ್ಯಪ್ರಸಿದ್ಧ್ಯಾ ಸ್ವನಿಗಮಸಿದ್ಧಮಸ್ಮಿನ್ ಮಂತ್ರೇ ಜಾತವೇದಾಃ ಸೂರ್ಯ ಇತಿ ॥**

**ಉದುತ್ಯಂ ಜಾತವೇದಸಂ** ಎಂಬ ಮಂತ್ರದಲ್ಲಿ ಸೂರ್ಯನಿಗೂ, ಜಾತವೇದಸನೆಂಬ ಅಗ್ನಿಗೂ ತಾದಾತ್ಮ್ಯವನ್ನು ಬೋಧಿಸುವುದಕ್ಕಾಗಿ ವಿಶೇಷಣ ವಿಶೇಷ್ಯಭಾವದಿಂದ ಏಕವಾಕ್ಯವನ್ನು ಅಂಗೀಕರಿಸಿ ಸೂರ್ಯನೂ ಜಾತವೇದಸನಾಗಿರುವನು ಎಂದು ಅರ್ಥವನ್ನು ವಿಮರ್ಶೆಮಾಡಿ ವರ್ಣಿಸಿರುತ್ತಾರೆ. ಮತ್ತು—

**ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರೂಪ್ಯತೇ ಅಯಮೇವ ಸೋಽಗ್ನಿರ್ಜಾತವೇದಾ ನಿಪಾತಮೇವೈತೇ ಉತ್ತರೇ ಜ್ಯೋತಿಷೀ ಏತೇನ ನಾಮಧೇಯೇನ ಭಜೇತೇ ॥**

(ನಿ. ೭-೨೦)

ಪಾರ್ಥಿವಾಗ್ನಿರೂಪದಿಂದ ಇರುವ ಜಾತವೇದಶ್ಶಬ್ದಬೋಧ್ಯನಾದ ಅಗ್ನಿಯೇ ಆಯಾಯ ಸೂಕ್ತಮಂತ್ರಗಳಿಂದ ಯಜ್ಞಗಳಲ್ಲಿ ಆಹೂತನಾಗಿ ಹವಿಸ್ಸುಗಳನ್ನು ಸ್ವೀಕರಿಸುವನು. ವೈದ್ಯುತಾಗ್ನಿ, ವೈಶ್ವಾನರಾಗ್ನಿ, ಸೂರ್ಯ, ಇವರುಗಳು ಅಗ್ನಿಯ ಪ್ರಭೇದವಾದರೂ, ಅಥವಾ ಜಾತವೇದಶ್ಶಬ್ದದಿಂದ ಬೋಧ್ಯವಾದರೂ ಜಾತವೇದಶ್ಶಬ್ದವು ಪ್ರಸಿದ್ಧಿಯಿಂದ ಪಾರ್ಥಿವಾಗ್ನಿಯನ್ನು ಬೋಧಿಸುವುದು ಎಂದು ವಿವರಿಸಿರುವರು.

**ಜಾತಾನಿ ವೇದ । ಜಾತಾನಿ ವೈನಂ ವಿದುಃ, ಜಾತೇ ಜಾತೇ ವಿದ್ಯತ ಇತಿ ವಾ; ಜಾತವಿತ್ತೋ ವಾ ಜಾತಧನೋ ವಾ ಜಾತವಿದ್ಯೋ ವಾ ಜಾತಪ್ರಜ್ಞಾನಃ ।** ಉತ್ಪನ್ನವಾದ ಸಕಲವನ್ನೂ ತಿಳಿಯುವವನೆಂದಾಗಲಿ, ಅಥವಾ ಉತ್ಪನ್ನವಾದ ಸಕಲವೂ ಇವನನ್ನು ತಿಳಿಯುವುವು ಎಂದಾಗಲಿ, ಅಥವ ಉತ್ಪನ್ನವಾದ ಸಕಲವಸ್ತುಗಳಲ್ಲಿಯೂ ಆವರಿಸಿಕೊಂಡಿರುತ್ತಾನೆಂದಾಗಲಿ, ಅಥವಾ ಉತ್ಪನ್ನವಾದ ಸಕಲ ಧನವುಳ್ಳವನೆಂದಾಗಲಿ, ಅಥವಾ ಸಮಸ್ತವನ್ನೂ ತಿಳಿಯುವ ಪ್ರಜ್ಞೆಯುಳ್ಳವನೆಂದಾಗಲಿ ಅರ್ಥಮಾಡಬಹುದೆಂದು ನಿರುಕ್ತಕಾರರು ವಿವರಿಸಿದ್ದಾರೆ. (ನಿ. ೭-೧೯) **ಬೃಹದ್ದೇವತೆಯಲ್ಲಿಯೂ** ಸಹ **ಜಾತವೇದಸ್ಸಿನ** ಸ್ವರೂಪ ಮತ್ತು ಸ್ಥಾನಗಳನ್ನು ವಿಶದವಾಗಿ ತಿಳಿಸಿದ್ದಾರೆ—

**ಇಹಾಗ್ನಿರ್ಭೂತಸ್ತ್ವೃಷಿಭಿರ್ಲೋಕೇ ಸ್ತುತಿಭಿರೀಳಿತಃ ।**
**ಜಾತವೇದಾಃ ಸ್ತುತೋ ಮಧ್ಯೇ ಸ್ತುತೋ ವೈಶ್ವಾನರೋ ದಿವಿ ॥**

(ಬೃ. ದೇ. ೧-೬೭)

ಋಷಿಗಳು ಪೃಥ್ವಿಯ ಮೇಲಿರುವ ಅಗ್ನಿಯನ್ನು ಅಗ್ನಿಯೆಂದೂ, ಮಧ್ಯಲೋಕದಲ್ಲಿರುವ ಅಗ್ನಿಯನ್ನು **ಜಾತವೇದ** ಸ್ಸೆಂದೂ, ದ್ಯುಲೋಕದಲ್ಲಿರುವವನನ್ನು **ವೈಶ್ವಾನರ**ನೆಂದೂ ಕರೆಯುತ್ತಾರೆಂದು ಈ ಶ್ಲೋಕದಲ್ಲಿ ಹೇಳಿ ಇದೇ ಭಾವವನ್ನು ಮುಂದುವರಿಸುತ್ತಾ,

**ವೈಶ್ವಾನರಂ ಶ್ರಿತೋ ಹ್ಯಗ್ನಿರಗ್ನಿಂ ವೈಶ್ವಾನರಃ ಶ್ರಿತಃ ।**
**ಅನಯೋರ್ಜಾತವೇದಾಸ್ತು ತಥೈತೇ ಜಾತವೇದಸಿ ॥**

(ಬೃ. ದೇ. ೧-೯೭)

ಅಗ್ನಿಯು ವೈಶ್ವಾನರನಲ್ಲಿಯೂ, ವೈಶ್ವಾನರನು ಅಗ್ನಿಯಲ್ಲಿಯೂ ಅಡಕವಾಗಿ, **ಜಾತವೇದಸ್ಸು** ಇವೆರಡರಲ್ಲಿಯೂ ಅಡಕವಾಗಿದ್ದಾನೆಂದೂ, ಇವೆರಡೂ **ಜಾತವೇದಸ್ಸಿನ** ಎರಡು ಅಂಶಗಳೆಂದೂ ವಿವರಿಸಿದೆ. ಹೀಗೆ ಮೊದಲನೇ ಅಧ್ಯಾಯದಲ್ಲಿ **ಜಾತವೇದಸ್ಸಿನ** ಸ್ಥಾನಗಳನ್ನು ಹೇಳಿ ಎರಡನೇ ಅಧ್ಯಾಯದಲ್ಲಿ ಸ್ವರೂಪನಿರ್ವಚನವನ್ನು ಮಾಡಿದೆ.

**ಭೂತಾನಿ ವೇದ ಯಜ್ಜಾತೋ ಜಾತವೇದಾಥ ಕಥ್ಯತೇ ।**
**ಯಚ್ಚೈಷ ಜಾತವಿದ್ಯೋಽಭೂತ್ ವಿತ್ತಂ ಜಾತೋಽಧಿವೇತ್ತಿ ವಾ ॥**

(ಬೃ. ದೇ. ೨-೩೦)

**ವಿದ್ಯತೇ ಸರ್ವಭೂತೈರ್ಹಿ ಯದ್ವಾ ಜಾತಃ ಪುನಃ ಪುನಃ ।**
**ತೇನೈಷ ಮಧ್ಯಭಾಗೇಂದ್ರೋ ಜಾತವೇದಾ ಇತಿ ಸ್ತುತಃ ॥**

(ಬೃ. ದೇ. ೨-೩೧)

ಉತ್ಪನ್ನವಾಗುವಾಗಲೇ ಸಕಲವನ್ನೂ ತಿಳಿದಿರುವುದರಿಂದಲೂ ಅಥವಾ ಜ್ಞಾನವು ಅವನಲ್ಲೇ ಉತ್ಪನ್ನನಾದುದರಿಂದಲೂ ಅಥವಾ ಉತ್ಪನ್ನವಾದಾಗಲೇ ಸಕಲ ಧನವನ್ನೂ ತಿಳಿದು ಹೊಂದುವುದರಿಂದಲೂ, ಅಥವಾ ಪುನಃ ಪುನಃ ಉತ್ಪನ್ನವಾದಾಗಲೆಲ್ಲಾ ಸಕಲ ಭೂತಗಳಿಂದಲೂ ತಿಳಿಯಲ್ಪಡುವನಾದುದರಿಂದಲೂ, ಮಧ್ಯಲೋಕವಾಸಿಯಾದ **ಇಂದ್ರನಂತೆ ಜಾತವೇದಸ್ಸೆಂದು ಅಗ್ನಿಯು** ಸ್ತುತನಾಗಿರುತ್ತಾನೆಂದು **ಬೃಹದ್ದೇವತೆಯು** ನಿರ್ವಚನವಿದೆ. ಇದರಂತೆಯೇ **ಶತಪಥಬ್ರಾಹ್ಮಣ**ದಲ್ಲಿಯೂ ಸಹ,

**ಯಃ ಸಂವತ್ಸರಂ ಜಾತಃ ಸ್ಯಾತ್ಪ್ರಾಣೋ ವಾ ಅಗ್ನಿಸ್ತನೋತದ್ವಿಭರ್ತ್ಯಥ ಹ ವೈ ರೇತಃ ಸಿಕ್ತಂ ಪ್ರಾಣೋಽನ್ವವರೋಹತಿ ತದ್ವಿಂದತೇ ತದ್ಯಜ್ಜಾತಂ ಜಾತಂ ವಿಂದತೇ ತಸ್ಮಾಜ್ಜಾತವೇದಾಃ ||**

(ಶ. ಬ್ರಾ. ೯-೫-೧೬-೮)

ಪ್ರಾಣರೂಪಿಯಾದ **ಅಗ್ನಿಯು** ಉತ್ಪನ್ನವಾದ ಸಕಲ ಭೂತಗಳನ್ನೂ ತನ್ನ ಶಕ್ತಿಯಿಂದ ವ್ಯಾಪಿಸಿಕೊಳ್ಳುವುದರಿಂದ **ಜಾತವೇದಸ್ಸೆಂದು** ಕರೆಯಲ್ಪಟ್ಟಿದೆ ಎಂದು ಹೇಳಿದೆ. ಯಜ್ಞಗೃಹದಲ್ಲಿ ಪೂಜಿಸಲ್ಪಡತಕ್ಕ ಈ ಜಾತವೇದಸ್ಸೇ ವಿಶ್ವಾತ್ಮನಾದ ಬ್ರಹ್ಮನೆಂದೂ ಉಪನಿಷತ್ತುಗಳಲ್ಲಿ ವರ್ಣಿಸಿದೆ

**ವಿಶ್ವರೂಪಂ ಹರಿಣಂ ಜಾತವೇದಸಂ ಪರಾಯಣಂ ಜ್ಯೋತಿರೇಕಂ ತಪಂತಂ |**

(ಪ್ರಶ್ನೋಪನಿಷತ್. ೧-೮)

ವಿಶ್ವರೂಪನೂ, ಸಹಸ್ರರಶ್ಮಿಗಳುಳ್ಳವನೂ, ಸರ್ವಜ್ಞನೂ, ಲೋಕಕ್ಕೆಲ್ಲಾ ಆಶ್ರಯನಾದವನೂ ಮತ್ತು ಜ್ಞಾನಿಗಳಿಂದ ಅರಿಯಲ್ಪಟ್ಟವನೂ ಸಕಲ ಭೂತಗಳಿಗೂ ಅಂತರಾತ್ಮನಾಗಿರುವವನೂ ಆದ ಸೂರ್ಯನು ಉದಯಿಸುತ್ತಾನೆಂದು ಪ್ರಶ್ನೋಪನಿಷತ್ತಿನಲ್ಲಿಯೂ,

**ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವ ಸುಭೃತೋ ಗರ್ಭಿಣೀಭಿಃ |**
**ದಿವೇದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ||**

(ಕಠೋಪನಿಷತ್ ೧-೪.೮)

ಯಾವ ಜಾತವೇದಸ್ಸು ಅರಣಿಗಳ ನಡುವೆ ಅಧಿಯಜ್ಞದಲ್ಲಿದ್ದುಕೊಂಡು ಎಲ್ಲಾ ಹವಿಸ್ಸುಗಳನ್ನೂ ಭೋಗಿಸುವನೋ, ಗರ್ಭಿಣಿಸ್ತ್ರೀಯರು ಮಮತೆಯಿಂದ ತಮ್ಮ ಗರ್ಭಗಳನ್ನು ಪೋಷಿಸಿ ಬೆಳೆಸುವಂತೆ ಯಾವ ಪರಮಪುರುಷನನ್ನು ಯೋಗಿಗಳು ತಮ್ಮ ಹೃದಯದಲ್ಲಿಟ್ಟುಕೊಂಡು ಧ್ಯಾನಮಾಡುವರೋ ಮತ್ತು ಯಾವ ಪೂಜ್ಯನಾದ ಅಗ್ನಿಯನ್ನುದ್ದೇಶಿಸಿ ಯಜ್ಞಕರ್ತರು ಹವಿಸ್ಸುಗಳನ್ನರ್ಪಿಸುವರೋ ಆ **ಜಾತವೇದಸ್ಸೇ** ವಿಶ್ವಾತ್ಮನಾದ **ಪರಬ್ರಹ್ಮ** ಎಂದು ಕಠೋಪನಿಷತ್ತಿನಲ್ಲಿಯೂ ವರ್ಣಿಸಿದೆ.

**ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವ ಸುಧಿತೋ ಗರ್ಭಿಣೀಷು |**
**ದಿವೇದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ||**

(ಋ. ಸಂ. ೩-೨೯-೨)

ಎಂದು ಋಕ್ಸಂಹಿತೆಯಲ್ಲಿ ವರ್ಣಿಸಿರುವಂತೆಯೇ ಕಠೋಪನಿಷತ್ತಿನಲ್ಲಿಯೂ ವರ್ಣಿಸಿದೆ. ಹೀಗೆ ಸರ್ವಜ್ಞನೂ, ಸರ್ವವ್ಯಾಪಿಯೂ, ಸರ್ವಧನವುಳ್ಳವನೂ, ಸರ್ವೋತ್ಕೃಷ್ಟನೂ ಆದುದರಿಂದ **ಜಾತವೇದಸ್ಸೆಂದು** ಕರೆಯಲ್ಪಡುತ್ತಾನೆಂದು ಎಲ್ಲಾ ಶ್ರುತಿಗಳೂ ಸ್ತುತಿಸಿವೆ.

**ಅಗ್ನಿ ದೇವಾನಾಂ ಪುರೋಹಿತಃ ಅಭವತ್**--**ಅಗ್ನಿಃ ದೇವಾನಾಂ ಪುರಸ್ತಾತ್ ಇಷ್ಟವ್ಯತಯಾ ಸ್ಥಾಪಿತಃ |** ಎಲ್ಲಾ ದೇವತೆಗಳನ್ನೂ ಪೂಜಿಸುವುದಕ್ಕಿಂತಲೂ ಮೊದಲೇ ಅಗ್ನಿಯನ್ನು ಪೂಜಿಸುವುದಕ್ಕಾಗಿ

ಮುಂಭಾಗದಲ್ಲಿ ಅಗ್ನಿಯು ಸ್ಥಾಪಿತನಾಗಿರುವನು ಎಂದು ಭಾಷ್ಯಕಾರರ ವಿವರಣೆಯು. ಇದಲ್ಲದೆ ದೇವತೆಗಳಿಗೆ ಮುಖ್ಯಸ್ಥನಾಗಿ (Leader) ಅಥವಾ ನಾಯಕನಾಗಿ (ಮುಂದಾಳುತ್ವವನ್ನು ವಹಿಸಿ) ಇರುವನು ಎಂದೂ ಅರ್ಥವನ್ನು ಹೇಳಬಹುದು. ಈ ವಿಷಯದಲ್ಲಿ—

(೧) **ಅಗ್ನಿರ್ವೈ ದೇವಾನಾಮವಮೋ ವಿಷ್ಣುಃ ಪರಮಃ ।**
(ಐ. ಬ್ರಾ. ೧-೧)

(೨) **ಅಗ್ನಿರಗ್ರೇ ಪ್ರಥಮೋ ದೇವತಾನಾಂ । ಸಂಯಾತಾನಾಮುತ್ತಮೋ ವಿಷ್ಣುರಾಸೀತ್ ।**
(ತೈ. ಬ್ರಾ. ೨-೪-೩-೩)

(೩) **ಸದ್ಯೋ ಜಾತೋ ವ್ಯಮಿಮೀತ ಯಜ್ಞಮಗ್ನಿರ್ದೇವಾನಾಮಭವತ್ಪುರೋಗಾಃ ।**
(ಋ. ಸಂ. ೧೦-೧೧೦-೧೧)

(೫) **ಅಗ್ನಿರ್ದೇವೋ ದೇವಾನಾಮಭವತ್ಪುರೋಹಿತೋಽಗ್ನಿಂ ಮನುಷ್ಯಾ ಋಷಯಃ ಸಮೀಧಿರೇ ।**
(ಋ. ಸಂ ೧೦-೧೫೦-೪)

(೫) **ಪುರೋಗಾ ಅಗ್ನಿರ್ದೇವಾನಾಂ ಗಾಯತ್ರೇಣ ಸಮಜ್ಯತೇ ।**
(ಋ. ಸಂ. ೧-೧೮೮-೧೧)

ಇತ್ಯಾದ್ಯನೇಕ ಮಂತ್ರಗಳಲ್ಲಿ ಅಗ್ನಿಯು ದೇವತೆಗಳಿಗೆ ಮುಂದಾಳುಗಳೆಂದು ಹೇಳಿದೆ.



॥ ಸಂಹಿತಾಪಾಠಃ ॥

ತಿಸ್ರೋ ಯಹ್ವಸ್ಯ ಸಮಿಧಃ ಪರಿಜ್ಮನೋಽಗ್ನೇರಪುನನ್ನುಶಿಜೋ ಅಮೃತ್ಯವಃ ।
ತಾಸಾಮೇಕಾಮದಧುರ್ಮರ್ತ್ಯೇ ಭುಜಮು ಲೋಕಮು ದ್ವೇ ಉಪ ಜಾಮಿ-
ಮೀಯತುಃ ॥ ೯ ॥

॥ ಪದಪಾಠಃ ॥

ತಿಸ್ರಃ । ಯಹ್ವಸ್ಯ । ಸಂಽಇಧಃ । ಪರಿಽಜ್ಮನಃ । ಅಗ್ನೇಃ । ಅಪುನನ್ । ಉಶಿಜಃ । ಅಮೃತ್ಯವಃ ।
ತಾಸಾಂ । ಏಕಾಂ । ಅದಧುಃ । ಮರ್ತ್ಯೇ । ಭುಜಂ । ಊಂ ಇತಿ । ಲೋಕಂ । ಊಂ ಇತಿ । ದ್ವೇ ಇತಿ ।
ಉಪ । ಜಾಮಿಂ । ಈಯತುಃ ॥ ೯ ॥

॥ ಸಾಯಣಭಾಷ್ಯಂ ॥

ಉಶಿಜಃ ಕಾಮಯಮಾನಾ ಅಮೃತ್ಯವೋ ಮೃತ್ಯುರಹಿತಾ ದೇವಾ ಯಹ್ವಸ್ಯ ಮಹತಃ ಪರಿಜ್ಮನಃ ಪರಿತೋ ಗಂತುಃ ಸಮಿಧಃ ಸಮಿಂಧಿಕಾಃ ಪ್ರಕಾಶಿಕಾಸ್ತಿಸ್ರಃ ಪಾರ್ಥಿವವೈದ್ಯುತಸೂರ್ಯರೂಪಾಸ್ತಿಸ್ರಸ್ತನೂರಪುನನ್ । ಅಶೋಧಯನ್ । ತೇ ದೇವಾ ಭುಜಂ ಸರ್ವೇಷಾಂ ಪಾಲಯಿತ್ರೀಂ ತಾಸಾಂ ತನೂನಾಂ ಮಧ್ಯ ಏಕಾಂ ಪಾರ್ಥಿವೀಂ ತನುಂ ಮರ್ತ್ಯೇ ಮರ್ತ್ಯಲೋಕೇಽದಧುಃ । ನ್ಯದಧುಃ । ಉ ಇತಿ ಪಾದಪೂರಣಃ । ಇತರೇ ದ್ವೇ ತನೂ ಜಾಮಿಂ ಲೋಕಮಾಸನ್ನಮಂತರಿಕ್ಷಮುಪೇಯತುಃ । ಗಚ್ಛತಃ । ಅಥವಾ ತಿಸ್ರಃ ಸಮಿಧ ಆಘಾರಸಮಿಧೌ ದ್ವೇ ಅನೂಯಾಜಸಮಿಚ್ಚೈಕೇತಿ । ತಾಸಾಂ ಸಮಿಧಾಮೇಕಾಮನೂಯಾಜಸಮಿಧಂ ಮರ್ತ್ಯೇ ಇಹ ಲೋಕೇ ಭೋಗಹೇತುಮನೂಯಾಜಪರ್ಯಂತಮದಧುಃ । ಧಾರಯಂತಿ। ಪ್ರಜಾ ವಾ ಅನೂಯಾಜಾ ಇತಿ ಪ್ರಜಾತ್ವೇನಾನೂಯಾಜಾನಾಂ ಸಂಸ್ತವಾತ್ ತದಾಶ್ರಯತ್ವಾಚ್ಚಾನೂಯಾಜಸಮಿಧಃ । ಇತರೇ ದ್ವೇ ಸಮಿಧಾವಂತರಿಕ್ಷೇ ದಿವ್ಯಭೋಗಹೇತೂ ಉಪೇಯತುಃ । ಉಪಗಚ್ಛತಃ । ತ್ರೀನ್ಪರಿಧೀಂಸ್ತಿಸ್ರಃ ಸಮಿಧ ಇತಿ ಹಿ ನಿಗಮಃ ॥

॥ ಪ್ರತಿಪದಾರ್ಥ ॥

**ಉಶಿಜಃ**—(ಅಗ್ನಿಯ ಸಾನ್ನಿಧ್ಯವನ್ನು) ಅಪೇಕ್ಷಿಸುವವರೂ । **ಅಮೃತ್ಯವಃ**—ಮರಣಧರ್ಮರಹಿತರೂ ಆದ ದೇವತೆಗಳು । **ಯಹ್ವಸ್ಯ**—ಮಹತ್ತಿನಿಂದ ಕೂಡಿದವನೂ । **ಪರಿಜ್ಮನಃ**—ಸುತ್ತಲೂ ಸಂಚರಿಸುವವನೂ ಆದ । **ಅಗ್ನೇಃ**—ಅಗ್ನಿಯ । **ಸಮಿಧಃ**—ಪ್ರಕಾಶಕಗಳಾದ । **ತಿಸ್ರಃ**—ಪಾರ್ಥಿವ, ವೈದ್ಯುತ ಮತ್ತು ಸೂರ್ಯರೂಪಗಳಾದ ಮೂರು ದೇಹಗಳನ್ನೂ । **ಅಪುನನ್**—ಶೋಧಿಸಿದರು । **ತಾಸಾಂ**—ಆ ದೇಹಗಳ ಮಧ್ಯೆ । **ಭುಜಂ**—ಎಲ್ಲರನ್ನೂ ಪಾಲಿಸತಕ್ಕ । **ಏಕಾಂ**—ಪಾರ್ಥಿವ ಸ್ವರೂಪವನ್ನು । **ಮರ್ತ್ಯೇ**—ಮರ್ತ್ಯಲೋಕದಲ್ಲಿ । **ಅದಧುಃ**—ಸ್ಥಾಪಿಸಿದರು । **ದ್ವೇ**—ಉಳಿದ ಎರಡು ದೇಹಗಳೂ ಸಹ । **ಜಾಮಿಂ**—ಸಮೀಪಕ್ಷದಲ್ಲಿರತಕ್ಕ । **ಲೋಕಂ**—ಅಂತರಿಕ್ಷಾಭಿಮುಖವಾಗಿ । **ಉಪ ಈಯತುಃ**—ಹೋಗಿ ಸೇರುತ್ತವೆ.

॥ ಭಾವಾರ್ಥ ॥

ಅಗ್ನಿಯ ಸಾನ್ನಿಧ್ಯವನ್ನಪೇಕ್ಷಿಸುವವರೂ, ಮರಣಧರ್ಮರಹಿತರೂ ಆದ ದೇವತೆಗಳು ಮಹತ್ತಿನಿಂದ ಕೂಡಿದವನೂ, ಸುತ್ತಲೂ ಸಂಚರಿಸುವವನೂ ಆದ ಅಗ್ನಿಯ ಪ್ರಕಾಶಕಗಳಾದ ಪಾರ್ಥಿವ, ವೈದ್ಯುತ ಮತ್ತು ಸೂರ್ಯರೂಪಗಳಾದ ಮೂರು ದೇಹಗಳನ್ನೂ ಶೋಧಿಸಿದರು. ಸಕಲರನ್ನೂ ಪಾಲಿಸತಕ್ಕ ಆ ದೇಹಗಳ ಮಧ್ಯೆ ಪಾರ್ಥಿವಾಗ್ನಿಯನ್ನು ಮರ್ತ್ಯಲೋಕದಲ್ಲಿ ಸ್ಥಾಪಿಸಿದರು. ಉಳಿದ ಎರಡು ದೇಹಗಳೂ ಸಹ ಸಮೀಪದಲ್ಲಿಯೇ ಇರತಕ್ಕ ಅಂತರಿಕ್ಷಾಭಿಮುಖವಾಗಿ ಹೋಗಿ ಸೇರುತ್ತವೆ.

## English Translation.

The immortals, desirous (of his presence), sanctified the three radiances of the great circumambient Agni; one of them they have placed in the world of mortals as the nourisher (of all); the other two have gone to the neighbouring sphere.

॥ ವಿಶೇಷವಿಷಯಗಳು ॥

**ಯಹ್ವಸ್ಯ**—ಯಹ್ವ ಶಬ್ದವು ಮಹನ್ನಾಮಗಳಲ್ಲಿ ಪಠಿತವಾಗಿರುವುದರಿಂದ **ಯಹ್ವಸ್ಯ** ಎಂದರೆ ಮಹತ್ತಾದ ದೊಡ್ಡದಾದ, ಮಹತ್ವವುಳ್ಳ ಎಂದರ್ಥವು (ನಿ. ೩–೧೩).

**ಉಶಿಜಃ**—**ಉಶಿಕ್** ಶಬ್ದವು ಕಾಂತಿಕರ್ಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) **ಉಶಿಜಃ**—**ಕಾಮಯಮಾನಾಃ** ಅಪೇಕ್ಷಿಸುವವರು ಎಂದರ್ಥವು.

**ಉಶಿಜಃ ಅಮೃತ್ಯವಃ ಯಹ್ವಸ್ಯ ಪರಿಜ್ಮನಃ ಅಗ್ನೇಃ ಸಮಿಧಃ ತಿಸ್ರ ಅಪುನನ್**—**(ಅಗ್ನಿಂ) ಕಾಮಯಮಾನಾಃ ಮೃತ್ಯುರಹಿತಾ ದೇವಾಃ ಮಹತಃ ಪರಿತೋ ಗಂತುಃ ಅಗ್ನೇಃ ಪ್ರಕಾಶಿಕಾಃ ಪಾರ್ಥಿವ-ವೈದ್ಯುತಸೂರ್ಯರೂಪಾಸ್ತಿಸ್ರಸ್ತನೂಃ ಅಶೋಧಯನ್ ।** ಅಗ್ನಿಯ ಸಾನ್ನಿಧ್ಯವನ್ನಪೇಕ್ಷಿಸುವವರೂ, ಮರಣವಿಲ್ಲದವರೂ ಆದ ದೇವತೆಗಳು ಮಹಾಮಹಿಮನೂ ಎಲ್ಲೆಲ್ಲಿಯೂ ಸಂಚರಿಸುವವನೂ ಎಂದರೆ ಸರ್ವವ್ಯಾಪಿಯೂ ಆದ ಅಗ್ನಿಯ ಪ್ರಕಾಶಮಾನವಾದ ಪಾರ್ಥಿವ, ವೈದ್ಯುತ, ಸೌರ್ಯ ಎಂಬ ಮೂರು ರೂಪಗಳನ್ನು ಚೆನ್ನಾಗಿ ಶೋಧಿಸಿ ನೋಡಿದರು ಅಗ್ನಿಗೆ ಮೂರು ರೂಪಗಳಿರುವುವೆಂದು ಹಿಂದೆಯೇ ಹೇಳಿದೆ. ಭೂಮಿಯಲ್ಲಿ ಇರುವ ಅಗ್ನಿಯು ಪಾರ್ಥಿವಾಗ್ನಿರೂಪದಿಂದ ಯಜ್ಞಾದಿಗಳಲ್ಲಿ ಮನುಷ್ಯ ಯಜಮಾನರಿಂದ ಪೂಜಿತನಾಗಿ, ಅವರು ಅರ್ಪಿಸಿರುವ ಹವಿರ್ಭಾಗಗಳನ್ನು ದೇವತೆಗಳಿಗೆ ಅರ್ಪಿಸುವುದೂ, ಉದ್ದಿಷ್ಟ ದೇವತೆಗಳನ್ನು ಯಜ್ಞಭೂಮಿಗೆ ಕರೆತರುವುದೂ ಮೊದಲಾದ ಯಜ್ಞಕರ್ಮಗಳನ್ನು ನಿರ್ವಹಿಸುವನು. ಅಗ್ನಿಯ ಎರಡನೇ ರೂಪವಾದ ವೈದ್ಯುತಾಗ್ನಿಯು ಅಂತರಿಕ್ಷದಲ್ಲಿ ಮೇಘಗಳ ಮಧ್ಯದಲ್ಲಿ ವಿದ್ಯುತ್‌ರೂಪದಿಂದ ಇದ್ದು ಮೇಘಗಳನ್ನು ಪ್ರೇರಿಸಿ ಭೂಮಿಯ ಮೇಲೆ ವೃಷ್ಟಿಯು ಸುರಿಯುವಂತೆ ಮಾಡುವನು. ಅಗ್ನಿಯ ಮೂರನೆಯ ರೂಪವಾದ ಅಗ್ನಿಯು ಸ್ವರ್ಗದಲ್ಲಿ ಎಂದರೆ ಅಂತರಿಕ್ಷದ ಮೇಲು ಭಾಗದಲ್ಲಿ ಸೂರ್ಯರೂಪದಿಂದಿದ್ದು ಭೂಮಿಯಲ್ಲಿರುವ ಮನುಷ್ಯರಿಗೂ, ದ್ಯುಲೋಕದಲ್ಲಿರುವ ದೇವತೆಗಳಿಗೂ ಪ್ರಕಾಶವನ್ನುಂಟುಮಾಡುತ್ತಾ, ಸಂವತ್ಸರ, ಋತು, ಮಾಸ, ದಿನ ಮೊದಲಾದ ಕಾಲಭೇದಗಳಿಗೆ ಕಾರಣವಾಗಿ ಬೆಳಗುತ್ತಿರುವನು.

**ಭುಜಂ ತಾಸಾಂ ಏಕಾಂ ಮರ್ತ್ಯೇ ಅದಧುಃ**—**ತೇ ದೇವಾಃ ಸರ್ವೇಷಾಂ ಪಾಲಯಿತ್ರೀಂ ತಾಸಾಂ ತನೂನಾಂ ಮಧ್ಯೇ ಏಕಾಂ ಪಾರ್ಥಿವೀಂ ತನುಂ ಮರ್ತ್ಯಲೋಕೇ ನ್ಯದಧುಃ ।** ಮೇಲೆ ವಿವರಿಸಿರುವ ಮೂರು ರೂಪಗಳಲ್ಲಿ ಒಂದಾದ, ಸರ್ವರನ್ನೂ ಕಾಪಾಡುವ ಪಾರ್ಥಿವಾಗ್ನಿಯ ರೂಪವನ್ನು ದೇವತೆಗಳು ಮನುಷ್ಯ ಲೋಕದಲ್ಲಿ ಜನಗಳ ಹಿತಾರ್ಥವಾಗಿ ಸ್ಥಾಪಿಸಿದರು.

**ದ್ವೇ ಜಾಮಿಂ ಲೋಕಂ ಉಪ ಈಯತುಃ**—**ಇತರೇ ದ್ವೇ ತನೂ ಆಸನ್ನಮಂತರಿಕ್ಷಂ ಗಚ್ಛತಃ ।** ಉಳಿದ ಎರಡು ರೂಪಗಳು ಅಂತರಿಕ್ಷ ಮತ್ತು ಸ್ವರ್ಗಲೋಕಗಳಿಗೆ ಹೊರಟುಹೋದವು ಎಂದು ಅಗ್ನಿಯ ಮೂರು ಪ್ರಕಾರವಾದ ಶರೀರ ಅಥವಾ ರೂಪಗಳನ್ನು ವಿವರಿಸಲಾಗಿದೆ.

ಇಲ್ಲಿ **ತಿಸ್ರಃ** ಎಂಬ ಶಬ್ದಕ್ಕೆ ಮೇಲೆ ಹೇಳಿದ ಮೂರುವಿಧ ಅಗ್ನಿಯ ರೂಪಾಂತರಗಳೆಂಬ ಅರ್ಥವಲ್ಲದೆ ಬೇರೆ ವಿಧವಾಗಿ ಅರ್ಥಮಾಡಬಹುದೆಂದು ಭಾಷ್ಯಕಾರರು ಹೇಳಿರುವರು.

ಅಥವಾ ತಿಸ್ರಃ ಸಮಿಧ ಆಘಾರಸಮಿಧೌ ದ್ವೇ ಅನೂಯಾಜಸಮಿಚ್ಚೈಕೇತಿ । ತಾಸಾಂ ಸಮಿಧಾಮೇಕಾಮನೂಯಾಜಸಮಿಧಂ ಮರ್ತ್ಯೇ ಇಹ ಲೋಕೇ ಭೋಗಹೇತುಮನೂಯಾಜಪರ್ಯಂತಮದಧುಃ ಧಾರಯಂತಿ । ಪ್ರಜಾ ವಾ ಅನೂಯಾಜಾಃ ಇತಿ ಪ್ರಜಾತ್ವೇನಾನೂಯಾಜಾನಾಂ ಸಂಸ್ತವಾತ್ ತದಾಶ್ರಯತ್ವಾಚ್ಚಾನೂಯಾಜಸಮಿಧಃ । ಇತರೇ ದ್ವೇ ಸಮಿಧಾವಂತರಿಕ್ಷೇ ದಿವ್ಯಭೋಗಹೇತೂ ಉಪಗಚ್ಛತಃ । ತ್ರೀನ್ಪರಿಧೀಂಸ್ತಿಸ್ರಃ ಸಮಿಧಃ ಇತಿ ಹಿ ನಿಗಮಃ ॥

ಅಥವಾ ತಿಸ್ರಃ ಎಂಬ ಶಬ್ದಕ್ಕೆ ಎರಡು ಆಘಾರಸಮಿತ್ತುಗಳು, ಒಂದು ಅನೂಯಾಜವೆಂದು ಒಟ್ಟು ಮೂರು ಸಮಿತ್ತುಗಳೆಂದು ಅರ್ಥ ಮಾಡಬಹುದು. ಈ ಮೂರು ಸಮಿತ್ತುಗಳಲ್ಲಿ ಅನೂಯಾಜವೆಂಬ ಒಂದು ಸಮಿತ್ತನ್ನು ಈ ಭೂಲೋಕದಲ್ಲಿ ಜನರ ಭೋಗಾರ್ಥವಾಗಿ ದೇವತೆಗಳು ಸ್ಥಾಪಿಸಿದರು. **ಪ್ರಜಾ ವಾ ಅನೂಯಾಜಾಃ** ಎಂಬ ಶ್ರುತಿವಾಕ್ಯದಂತೆ ಅನೂಯಾಜವು ಪ್ರಜೆಗಳಿಗೆ ಹಿತಕಾರಿಯಾಗಿರುವುದೆಂದು ಹೇಳಿದೆ. ಉಳಿದ ಎರಡು ಆಘಾರಸಮಿತ್ತುಗಳು ದೇವತೆಗಳಿಗೆ ಭೋಗಾರ್ಥವಾಗಿ ಅಂತರಿಕ್ಷಾದಿ ಲೋಕಗಳಿಗೆ ಹೊರಟುಹೋದವು ಎಂದು ಹೇಳಿದೆ **ತ್ರೀನ್ ಪರಿಧೀನ್ ತಿಸ್ರಃ ಸಮಿಧಃ** ಎಂಬ ಶ್ರುತಿವಾಕ್ಯವೂ ಇದನ್ನು ಸಮರ್ಥಿಸುವುದು.

॥ ಸಂಹಿತಾಪಾಠಃ ॥

ವಿಶಾಂ ಕವಿಂ ವಿಶ್ಪತಿಂ ಮಾನುಷೀರಿಷಃ ಸಂ ಸೀಮಕೃಣ್ವನ್ತ್ಸ್ವಧಿತಿಂ ನ ತೇಜಸೇ ।
ಸ ಉದ್ವತೋ ನಿವತೋ ಯಾತಿ ವೇವಿಷತ್ಸ ಗರ್ಭಮೇಷು ಭುವನೇಷು ದೀಧರತ್ ॥ ೧೦ ॥

॥ ಪದಪಾಠಃ ॥

ವಿಶಾಂ । ಕವಿಂ । ವಿಶ್ಪತಿಂ । ಮಾನುಷೀಃ । ಇಷಃ । ಸಂ । ಸೀಂ । ಅಕೃಣ್ವನ್ । ಸ್ವಽಧಿತಿಂ । ನ । ತೇಜಸೇ । ಸಃ । ಉತ್ಽವತಃ । ನಿಽವತಃ । ಯಾತಿ । ವೇವಿಷತ್ । ಸಃ । ಗರ್ಭಂ । ಏಷು । ಭುವನೇಷು । ದೀಧರತ್ ॥

॥ ಸಾಯಣಭಾಷ್ಯಂ ॥

ಇಷಃ ಪಶ್ವಾದಿಲಕ್ಷಣಂ ಧನಮಿಚ್ಛಂತ್ಯೋ ಮಾನುಷೀರ್ಮನುಷ್ಯಪ್ರಜಾ ವಿಶಾಂ ಪ್ರಜಾನಾಂ ವಿಶ್ಪತಿಂ ಪ್ರಭುಂ ಕವಿಂ ಮೇಧಾವಿನಂ ಸೀಮೇನಂ ಸ್ವಧಿತಿಂ ನ ಅಸಿಮಿವ ತೇಜಸೇ ತೈಕ್ಷ್ಣ್ಯಾರ್ಥಂ ಸಮಕೃಣ್ವನ್ । ಸಮಸ್ಕುರ್ವನ್ । ಸೋಽಗ್ನಿರುದ್ವತ ಉಚ್ಛ್ರಾವತೋ ನಿವತೋ ನೀಚೈರ್ಭಾವವತಶ್ಚ ಪ್ರದೇಶಾನ್ವೇವಿಷತ್ ವ್ಯಾಪ್ನುವನ್ ಯಾತಿ । ಗಚ್ಛತಿ । ಸ ಏಷು ಭುವನೇಷು ಗರ್ಭಮರಣ್ಯಾ ದೀಧರತ್ । ಆಧಾರಯತ್ ॥

॥ ಪ್ರತಿಪದಾರ್ಥ ॥

**ಇಷಃ**— ಪಶ್ವಾದಿರೂಪವಾದ ಧನವನ್ನು ಇಚ್ಛಿಸುವ । **ಮಾನುಷೀಃ**— ಮಾನವ ಪ್ರಜೆಗಳು । **ವಿಶಾಂ**— ಪ್ರಜೆಗಳಿಗೆಲ್ಲಾ । **ವಿಶ್ಪತಿಂ**— ಪ್ರಭುವಾದವನೂ । **ಕವಿಂ**— ಮೇಧಾವಿಯಾದವನೂ ಆದ । **ಸೀಂ**— ಈ ಅಗ್ನಿಯನ್ನು । **ಸ್ವಧಿತಿಂ ನ**— ಕತ್ತಿಯನ್ನು ಮಸೆದು ಹರಿತಮಾಡುವಂತೆ । **ತೇಜಸೇ**— ತೈಕ್ಷ್ಣ್ಯಾರ್ಥವಾಗಿ । **ಸಂ ಅಕೃಣ್ವನ್**— ಸಂಸ್ಕರಿಸಿದರು । **ಸಃ**— ಅದೇ ಅಗ್ನಿಯು । **ಉದ್ವತಃ**— ಉನ್ನತವಾಗಿರತಕ್ಕವೂ । **ನಿವತಃ**— ನಿಮ್ನವಾಗಿರತಕ್ಕವೂ ಆದ ಪ್ರದೇಶಗಳನ್ನೆಲ್ಲಾ । **ವೇವಿಷತ್**— ವ್ಯಾಪಿಸುತ್ತಾ । **ಯಾತಿ**— ಸಂಚರಿಸುತ್ತಾನೆ । **ಸಃ**— ಅವನು । **ಏಷು ಭುವನೇಷು**— ಈ ಪ್ರದೇಶಗಳಲ್ಲಿ । **ಗರ್ಭಂ**— ಅರಣಿಯಲ್ಲಿ ಗರ್ಭರೂಪವನ್ನು । **ದೀಧರತ್**— ಧರಿಸಿದ್ದಾನೆ.

॥ ಭಾವಾರ್ಥ ॥

ಪಶ್ವಾದಿರೂಪವಾದ ಧನವನ್ನು ಇಚ್ಛಿಸುವ ಮಾನವಪ್ರಜೆಗಳು, ಪ್ರಜೆಗಳಿಗೆಲ್ಲಾ ಪ್ರಭುವಾದವನೂ ಮೇಧಾವಿಯೂ ಆದ ಅಗ್ನಿಯನ್ನು, ಹರಿತಕ್ಕಾಗಿ ಕತ್ತಿಯನ್ನು ಮಸೆಯುವಂತೆ ತೈಕ್ಷ್ಣ್ಯಾರ್ಥವಾಗಿ ಸಂಸ್ಕರಿಸಿದರು. ಅದೇ ಅಗ್ನಿಯು ಉನ್ನತವಾಗಿರತಕ್ಕವೂ, ನಿಮ್ನವಾಗಿರತಕ್ಕವೂ ಆದ ಪ್ರದೇಶಗಳನ್ನೆಲ್ಲಾ ವ್ಯಾಪಿಸುತ್ತಾ ಸಂಚರಿಸುತ್ತಾನೆ. ಅವನು ಈ ಪ್ರದೇಶಗಳಲ್ಲಿ ಅರಣಿಯ ಗರ್ಭರೂಪವನ್ನು ಧರಿಸಿದ್ದಾನೆ.

## English Translation.

Human beings, wishing for wealth, give brightness, (by their praises), to the lord of men, the wise (Agni), as they add lustre, (by polishing), to on axe: spreading everywhere, he goes alike through high and low places, and has taken an embryo (condition) in these regions.

॥ ವಿಶೇಷವಿಷಯಗಳು ॥

**ಸ್ವಧಿತಿಂ**— ಸ್ವಧಿತಿ ಶಬ್ದವು ವಜ್ರನಾಮಗಳಲ್ಲಿ ಪಠಿತವಾಗಿದೆ. (ನಿ. ೩–೧೧) ಸ್ವಧಿತಿಯೆಂದರೆ ಕತ್ತರಿಸುವುದಕ್ಕೆ ಉಪಯುಕ್ತವಾದ ಕತ್ತಿಯೇ ಮೊದಲಾದ ಆಯುಧವು. **ಸ್ವಧಿತೇ ಮೈನಗ್ಂ ಹಿಗ್ಂಸೀಃ** (ನಿ. ೧–೧೫). ಎಲೈ ಕತ್ತಿಯೇ, ನೀನು ಇವನನ್ನು ಹಿಂಸಿಸಬೇಡ ಎಂದು ಕ್ಷೌರಮಾಡುವ ಕತ್ತಿಯ ಪ್ರಾರ್ಥನೆಯು ಉಕ್ತವಾಗಿದೆ. ಎಂದು ಯಾಸ್ಕರು ನಿರ್ವಚನವನ್ನು ಹೇಳಿದಾರೆ.

**ಉದ್ವತಃ ನಿವತಃ— ಉಚ್ಚ್ರಾಯವತಃ ನೀಚೈರ್ಭಾವವತಶ್ಚ ।** ಎತ್ತರದಲ್ಲಿರುವ ಮತ್ತು ತಗ್ಗುಪ್ರದೇಶದಲ್ಲಿರುವ ಎಂದರ್ಥವು. ಯಾಸ್ಕರು **ಪರೇಯಿವಾಂಸಂ** (ಋ. ಸಂ.) ಎಂಬ ಋಕ್ಕಿನ ನಿರ್ವಚನವನ್ನು ಹೇಳುತ್ತಾ—

**ಪ್ರವತ ಉದ್ವತೋ ನಿವತ ಇತಿ । ಅವತಿರ್ಗತಿಕರ್ಮಾ** (ನಿ. ೧೦–೨೦) ಎಂದು ಹೇಳಿದಾರೆ. ಇದಕ್ಕೆ ದುರ್ಗಾಚಾರ್ಯರು ವ್ಯಾಖ್ಯಾನಮಾಡುತ್ತಾ—

**ಪ್ರವೃತಃ ಉದ್ವತಃ ನಿವತಃ ಚ ಭೂತಸಂಘಾನ್ । ಪ್ರವತಃ ಮನುಷ್ಯಾಃ ಉದ್ವತಃ ದೇವಾಃ ನಿವತಃ ತಿರ್ಯಂಚಃ ತಥಾ ಗತ್ಯುಪಪತ್ತೇಃ ।**

ಎಂದು ವಿವರಿಸಿದಾರೆ. ಎಂದರೆ **ಪ್ರವತಃ** ಎಂದರೆ ರಕ್ಷಣೆಯನ್ನು ಅಪೇಕ್ಷಿಸುವ ಮನುಷ್ಯನೆಂದೂ, **ಉದ್ವತಃ** ಎಂದರೆ ಎತ್ತರವಾದ ಪ್ರದೇಶ ಎಂದರೆ ಅಂತರಿಕ್ಷ ಸ್ವರ್ಗಾದಿಗಳಲ್ಲಿರುವ ದೇವತೆಗಳೆಂದೂ, **ನಿವತಃ** ಎಂದರೆ ಅಧಃ ಪ್ರದೇಶದಲ್ಲಿ ರುವ ತಿರ್ಯಕ್ ಪ್ರಾಣಿಗಳೆಂದೂ ಅರ್ಥವಿವರಣೆಮಾಡಿದಾರೆ.

**ಇಷಃ ಮಾನುಷೀಃ ವಿಶಾಂ ವಿಶ್ಪತಿಂ ಸೀಂ ಸ್ವಧಿತಿಂ ನ ತೇಜಸೇ ಅಕ್ರಣ್ವನ್**—ಪಶ್ವಾದಿಧನವನ್ನೂ ಅನ್ನವನ್ನೂ ಇಚ್ಛಿಸುವ ಮಾನವಪ್ರಜೆಗಳು, ಪ್ರಜೆಗಳಿಗೆ ಅಧಿಪತಿಯಾದವನೂ ಕ್ರಾಂತದರ್ಶಿಯೂ ಆದ ಅಗ್ನಿಯನ್ನು ನಾನಾವಿಧಯಜ್ಞಕರ್ಮಗಳಿಂದ, ಕತ್ತಿಯನ್ನು ಮಸೆದು ಹರಿತಮಾಡುವಂತೆ, ಸಂಸ್ಕಾರಮಾಡಿ ಯಜ್ಞಾರ್ಹನನ್ನಾಗಿ ಮಾಡಿದರು. ಇಲ್ಲಿ ಕತ್ತಿಯನ್ನು ಹರಿತಮಾಡುವುದಕ್ಕಾಗಿ ಅದನ್ನು ಕಲ್ಲಿನ ಮೇಲೆ ಉಜ್ಜಿ ಹರಿತಮಾಡುವರು. ಅನಂತರ ಅದು ವೃಕ್ಷಾದಿಗಳನ್ನು ಸುಲಭವಾಗಿ ಕತ್ತರಿಸಬಲ್ಲದು. ಅದರಂತೆ ಅಗ್ನಿಯನ್ನು ಹೊತ್ತಿಸಿದ ಕೂಡಲೇ ಆ ಅಗ್ನಿಯು ಯಜಮಾನನಿಗೆ ಇಷ್ಟಾರ್ಥಗಳನ್ನು ಕೊಡಲು ಶಕ್ತಿಸಾಮರ್ಥ್ಯವಿಲ್ಲದಿರುವುದರಿಂದ ಅದನ್ನು ವಿಧ್ಯುಕ್ತ ವಾಗಿ ಮಂತ್ರಾದಿಗಳಿಂದ ಸಂಸ್ಕಾರಮಾಡಿ ಯಜ್ಞಾರ್ಹವನ್ನಾಗಿ ಚೆನ್ನಾಗಿ ಬೆಳಗುವಂತೆ ಮಾಡುವರು. ಅನಂತರ ಅಗ್ನಿಯು ಯಜಮಾನನಿಗೆ ಯಜ್ಞಾದಿಗಳಿಗೆ ಉಪಯುಕ್ತವಾಗಿ ಅವನ ಇಷ್ಟಾರ್ಥಗಳನ್ನು ಕೊಡಲು ಸಮರ್ಥವಾಗು ವುದು ಎಂದಭಿಪ್ರಾಯವು.

**ಸಃ ಉದ್ವತಃ ನಿವತಃ ವೇವಿಷತ್ ಯಾತಿ**—ಉತ್ಪತ್ತಿಮಾಡಿದ ಅಗ್ನಿಯು ಆ ಕಾಲದಲ್ಲಿ ಸಣ್ಣದಾಗಿದ್ದರೂ ಅನಂತರ ಸರ್ವವನ್ನೂ ವ್ಯಾಪಿಸಿ ಮೇಲುಭಾಗದಲ್ಲಿಯೂ, ಕೆಳಭಾಗದಲ್ಲಿಯೂ ಪ್ರಜ್ವಲಿಸುತ್ತಾ ಬೆಳಗುತ್ತಿರುವುದು. ಎಂದರೆ ಅಗ್ನಿಯು ಮಥನಕಾಲದಲ್ಲಿ ಸಣ್ಣರೂಪದಿಂದ ಇದ್ದರೂ ಬರಬರುತ್ತಾ ಯಜ್ಞದಲ್ಲಿ ಅರ್ಪಿಸುವ ಕಾಷ್ಠ, ಸಮಿತ್, ಆಜ್ಯ, ಹವಿಸ್ಸು ಮೊದಲಾದವುಗಳಿಂದ ಅಭಿವೃದ್ಧಿಯನ್ನು ಹೊಂದಿ ಎಲ್ಲವನ್ನೂ ವ್ಯಾಪಿಸಿ ಪ್ರಕಾಶದಿಂದ ಬೆಳಗುವುದು ಎಂದಭಿಪ್ರಾಯವು.

**ಏಷು ಭುವನೇಷು ಗರ್ಭಂ ದೀಧರತ್—ಸಃ ಗರ್ಭಂ ಅರಣ್ಯಾ ಅಧಾರಯತ್ ।** ಇಂತಹ ಅಗ್ನಿಯು ಅರಣಿಗಳಲ್ಲಿ (ಅಗ್ನಿಯನ್ನು ಕಡೆಯುವುದಕ್ಕಾಗಿ ಉಪಯೋಗಿಸುವ ಎರಡು ಮರದ ತುಂಡುಗಳಿಗೆ ಅರಣಿ ಗಳೆಂದು ಹೆಸರು) ಗರ್ಭವನ್ನು ಧರಿಸಿದ್ದನು. ಎಂದರೆ ಮಥನಮಾಡುವುದಕ್ಕೆ ಮೊದಲು ಅರಣಿಗಳಲ್ಲಿ ಗರ್ಭರೂಪ ದಿಂದ ಎಂದರೆ ಯಾರಿಗೂ ಕಾಣದಂತೆ ಗೂಢವಾಗಿ ಇದ್ದು ಮಥನಾನಂತರ ಎಲ್ಲರಿಗೂ ಕಾಣುವಂತೆ ಪ್ರಕಾಶಮಾನ ನಾಗಿ ಗೋಚರಿಸಿದನು ಎಂದಭಿಪ್ರಾಯವು.



॥ ಸಂಹಿತಾಪಾಠಃ ॥

**ಸ ಜಿನ್ವತೇ ಜಠರೇಷು ಪ್ರಜಜ್ಞಿವಾನ್ವೃಷಾ ಚಿತ್ರೇಷು ನಾನದನ್ನ ಸಿಂಹಃ ।**
**ವೈಶ್ವಾನರಃ ಪೃಥುಪಾಜಾ ಅಮರ್ತ್ಯೋ ವಸು ರತ್ನಾ ದಯಮಾನೋ ವಿ ದಾಶುಷೇ ॥ ೧೧ ॥**

॥ ಪದಪಾಠಃ ॥

ಸಃ । ಜಿನ್ವತೇ । ಜಠರೇಷು । ಪ್ರಜಜ್ಞಿಽವಾನ್ । ವೃಷಾ । ಚಿತ್ರೇಷು । ನಾನದತ್ । ನ । ಸಿಂಹಃ ।
ವೈಶ್ವಾನರಃ । ಪೃಥುಽಪಾಜಾಃ । ಅಮರ್ತ್ಯಃ । ವಸು । ರತ್ನಾ । ದಯಮಾನಃ । ವಿ । ದಾಶುಷೇ ॥ ೧೧ ॥

॥ ಸಾಯಣಭಾಷ್ಯಂ ॥

ಪ್ರಜಜ್ಞಿವಾನ್ ಜಾತೋ ವೃಷಾ ವರ್ಷಕಃ ಸ ವೈಶ್ವಾನರಶ್ಚಿತ್ರೇಷು ನಾನಾಪ್ರಕಾರೇಷು ಜಠರೇಷು। ಪ್ರಾಣಿನಾಂ ಭೇದಾಜ್ಜಠರಾಣಾಂ ಭೇದಃ। ತೇಷು ಜಿನ್ವತೇ। ವರ್ಧತೇ। ಚಿತ್ರೇಷು ನಾನಾವಿಧೇಷ್ವರಣ್ಯೇಷು ದತ್ ಅತ್ಯರ್ಥಂ ಶಬ್ದಂ ಕುರ್ವನ್ ಸಿಂಹೋ ನ । ಸಿಂಹ ಇವ । ಕಿಂವಿಧೋ ವೈಶ್ವಾನರಃ । ಪೃಥುಪಾಜಾಃ ನಾನಪೃಥುತೇಜಾಃ । ಅಥವಾ ಪೃಥುವೇಗಃ । ಅಮರ್ತ್ಯೋ ಮರಣಧರ್ಮರಹಿತೋ ದಾಶುಷೇ ಹವಿಷಾಂ ಪ್ರದಾತ್ರೇ ಯಜಮಾನಾಯ ರತ್ನಾ ರಮಣೀಯಾನಿ ವಸು ವಸೂನಿ ಧನಾನಿ ವಿ ವಿಶೇಷೇಣ ದಯಮಾನಃ ಪ್ರಯಚ್ಛನ್

॥ ಪ್ರತಿಪದಾರ್ಥ ॥

**ಪೃಥುಪಾಜಾಃ**— ವಿಸ್ತೃತವಾಗಿ ಹರಡಿದ ತೇಜಸ್ಸುಳ್ಳವನೂ । **ಅಮರ್ತ್ಯಃ**— ಮರಣಧರ್ಮರಹಿತನೂ । **ದಾಶುಷೇ**— ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ । **ರತ್ನಾ**— ರಮಣೀಯವಾದ । **ವಸು**— ಧನಗಳನ್ನು । **ವಿ**— ವಿಶೇಷವಾಗಿ । **ದಯಮಾನಃ**— ಕೊಡತಕ್ಕವನೂ । **ಪ್ರಜಜ್ಞಿವಾನ್**— ಎಲ್ಲವನ್ನೂ ತಿಳಿದು ಉತ್ಪನ್ನನಾದವನೂ। **ವೃಷಾ**— ಕಾಮವರ್ಷಕನೂ ಆದ । **ಸಃ ವೈಶ್ವಾನರಃ**— ವೈಶ್ವಾನರರೂಪಿಯಾದ ಆ ಅಗ್ನಿಯು । **ಚಿತ್ರೇಷು**— ನಾನಾಪ್ರಕಾರಗಳಾದ । **ಜಠರೇಷು**— ಪ್ರಾಣಿಗಳ ಜಠರಗಳಲ್ಲಿ । **ನಾನದತ್**— ಗರ್ಜಿಸತಕ್ಕ । **ಸಿಂಹಃ ನ**— ಸಿಂಹದಂತೆ । **ಜಿನ್ವತೇ**— ವೃದ್ಧಿಯನ್ನು ಪಡೆಯುತ್ತಾನೆ.

॥ ಭಾವಾರ್ಥ ॥

ವಿಸ್ತೃತವಾಗಿ ಹರಡಿದ ತೇಜಸ್ಸುಳ್ಳವನೂ, ಮರಣಧರ್ಮರಹಿತನೂ, ಹವಿರ್ದಾತನಾದ ಯಜಮಾನನಿಗೆ ರಮಣೀಯವಾದ ಧನಗಳನ್ನು ವಿಶೇಷವಾಗಿ ಕೊಡತಕ್ಕವನೂ, ಸರ್ವಜ್ಞನಾಗಿ ಉತ್ಪನ್ನನಾದವನೂ, ಕಾಮವರ್ಷಕನೂ, ವೈಶ್ವಾನರರೂಪಿಯೂ ಆದ ಅಗ್ನಿಯು ನಾನಾವಿಧವಾದ ಜಠರಗಳನ್ನು ಆಕ್ರಮಿಸಿ ಗರ್ಜಿಸುವ ಸಿಂಹವು ತನ್ನ ಪೌರುಷವನ್ನು ತೋರುವಂತೆ ವೃದ್ಧಿಯನ್ನು ಪಡೆದು ತನ್ನ ವೀರ್ಯವನ್ನು ಪ್ರಕಟಿಸುತ್ತಾನೆ.

## English Translation.

The showerer (of benefits), generated in (many) receptacles, flourishes, roaring in various (places) like a lion; Vaishwanara, the resplendent, the immortal, giving precious treasures to the donor (of the oblation).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ವೈಶ್ವಾನರಾಗ್ನಿಯು ಮನುಷ್ಯರ ಮತ್ತು ನಾನಾವಿಧಪ್ರಾಣಿಗಳ ಜಠರಗಳಲ್ಲಿ ಜಾಠರಾಗ್ನಿ ರೂಪದಿಂದ ಇದ್ದು ಅಭಿವೃದ್ಧಿಯನ್ನು ಹೊಂದುತ್ತಿರುವನು ಎಂಬ ವಿಷಯವು ಉಕ್ತವಾಗಿದೆ. ಮನುಷ್ಯರ ಅಥವಾ ಪ್ರಾಣಿಗಳ ಶರೀರದಲ್ಲಿ ಯಾವಾಗಲೂ ಇರುವ ತೇಜಸ್ಸು ಅಥವಾ ಉಷ್ಣಾಂಶವೇ ಜಾಠರಾಗ್ನಿ ಅಥವಾ ವೈಶ್ವಾನರಾಗ್ನಿಯು. ಶರೀರದಲ್ಲಿರುವ ಶಾಖವು ಕಾರಣಾಂತರದಿಂದ ನಿಂತರೆ ಮರಣವೇ ಸಂಭವಿಸುವುದು. ಆದುದರಿಂದ ಈ ಶಾಖವು (ಎಂದರೆ ವೈಶ್ವಾನರಾಗ್ನಿಯು) ಸಮಸ್ತ ಪ್ರಾಣಿಗಳಲ್ಲಿ ರಕ್ತಸಂಚಾರ, ಉಚ್ಛ್ವಾಸನಿಶ್ವಾಸ, ಆಹಾರಪಚನ ಚಲನವಲನ ಇವೆಲ್ಲಕ್ಕೂ ಕಾರಣವಾಗಿರುವುದು. ಈ ವೈಶ್ವಾನರಾಗ್ನಿಯ (ಜಠರಾಗ್ನಿಯ, ಶರೀರದಲ್ಲಿರುವ ಶಾಖದ) ಸಹಾಯವಿಲ್ಲದೆ ಯಾವ ಪ್ರಾಣಿಯೂ ಒಂದು ನಿಮಿಷವೂ ಸಹ ಬದುಕಿರಲು ಸಾಧ್ಯವಿಲ್ಲ

**ಚಿತ್ರೇಷು ಜಠರೇಷು**—ನಾನಾವಿಧವಾದ ಜಠರಗಳಲ್ಲಿ ಎಂದರೆ ಪ್ರಾಣಿಗಳ ರೂಪಗಳು ನಾನಾವಿಧವಾಗಿರುವುದರಿಂದ ಅವುಗಳ ಜಠರಗಳೂ ಅದಕ್ಕನುಸಾರವಾಗಿ ನಾನಾವಿಧವಾಗಿರುವವು. ಆ ವಿಷಯವನ್ನೇ ಇಲ್ಲಿ ಚಿತ್ರೇಷು ಎಂಬ ಶಬ್ದದಿಂದ ವಿವರಿಸಲಾಗಿದೆ.

**ನಾನದತ್ ಸಿಂಹಃ ನ—ಅತ್ಯರ್ಥಂ ಶಬ್ದನ್ ಕುರ್ವನ್ ಸಿಂಹಮಿವ ।** ವೈಶ್ವಾನರಾಗ್ನಿಯ ಶಕ್ತಿ ಸಾಮರ್ಥ್ಯದ ವಿಷಯದಲ್ಲಿ ಒಂದು ದೃಷ್ಟಾಂತವನ್ನು ಇಲ್ಲಿ ಹೇಳಿದೆ. ಅರಣ್ಯದಲ್ಲಿ ಮೃಗರಾಜನೆನಿಸಿ ಮಹಾಠೀವಿಯಿಂದ ಸಂಚರಿಸುತ್ತಾ ಭಯಂಕರವಾಗಿ ಗರ್ಜಿಸುತ್ತಿರುವ ಸಿಂಹದಂತೆ ಎಂದು ವೈಶ್ವಾನರಾಗ್ನಿಯ ಶಕ್ತಿಯ ವಿಷಯದಲ್ಲಿ ಸಿಂಹದ ಉಪಮಾನವನ್ನು ಹೇಳಿದೆ.

**ಪೃಥುಪಾಜಾಃ— ಪೃಥುತೇಜಾಃ ಅಥವಾ ಪೃಥುವೇಗಃ ।** ಈ ವೈಶ್ವಾನರಾಗ್ನಿಯು ಬಹಳವಾದ ತೇಜಸ್ಸುಳ್ಳವನು. (ಪ್ರಕಾಶ ಅಥವಾ ಸಾಮರ್ಥ್ಯವುಳ್ಳವನು) ಅಥವಾ ಮಹಾವೇಗಶಾಲಿಯು. ಒಂದು ಕ್ಷಣಮಾತ್ರದಲ್ಲಿ ಮಹಾರಣ್ಯವನ್ನೂ ಸಹ ದಹಿಸುವ ಸಾಮರ್ಥ್ಯವುಳ್ಳವನು.

**ದಾಶುಷೇ ರತ್ನಾ ವಸು ವಿ ದಯಮಾನಃ**— ಈ ವೈಶ್ವಾನರಾಗ್ನಿಯು ಹವಿಸ್ಸನ್ನರ್ಪಿಸುವ ಯಜಮಾನರಿಗೆ ರಮಣೀಯವಾದ ಧನಗಳನ್ನು ವಿಶೇಷವಾಗಿ ಕೊಡುವವನು ಎಂದಭಿಪ್ರಾಯವು.



॥ ಸಂಹಿತಾಪಾಠಃ ॥

ವೈಶ್ವಾನರಃ ಪ್ರತ್ನಥಾ ನಾಕಮಾರುಹದ್ದಿವಸ್ಪೃಷ್ಠಂ ಭಂದಮಾನಃ ಸುಮನ್ಮಭಿಃ ।
ಸ ಪೂರ್ವವಜ್ಜನಯಂಜ್ಜಂತವೇ ಧನಂ ಸಮಾನಮಜ್ಮಂ ಪರ್ಯೇತಿ ಜಾಗೃವಿಃ ॥೧೨॥

॥ ಪದಪಾಠಃ ॥

ವೈಶ್ವಾನರಃ । ಪ್ರತ್ನಽಥಾ । ನಾಕಂ । ಆ । ಅರುಹತ್ । ದಿವಃ । ಪೃಷ್ಠಂ । ಭಂದಮಾನಃ । ಸುಮನ್ಮಽಭಿಃ ।

ಸಃ । ಪೂರ್ವಽವತ್ । ಜನಯನ್ । ಜಂತವೇ । ಧನಂ । ಸಮಾನಂ । ಅಜ್ಮಂ । ಪರಿ । ಏತಿ । ಜಾಗೃವಿಃ ॥

॥ ಸಾಯಣಭಾಷ್ಯಂ ॥

ಸುಮನ್ಮಭಿಃ ಸ್ತೋತೃಭಿರ್ಭಂದಮಾನಃ ಸ್ತೂಯಮಾನೋ ವೈಶ್ವಾನರೋ ಜಾತಮಾತ್ರ ಏವ ಪ್ರತ್ನಥಾ ಪ್ರತ್ನ ಇವ ಚಿರಂತನ ಇವ ನಾಕಂ । ಕಂ ಸುಖಂ । ಅಕಂ ದುಃಖಂ। ನ ವಿದ್ಯತೇಽಕಂ ಯಸ್ಮಿನ್ ತನ್ನಾಕಂ । ದಿವೋಽಂತರಿಕ್ಷಸ್ಯ ಪೃಷ್ಠಮುಪರಿತನಪ್ರದೇಶಂ ಸ್ವರೋಹಿದ್ಭಿರಾರುಹತ್ । ಆರೋಹತಿ । ಸ ವೈಶ್ವಾನರಃ ಪೂರ್ವವತ್ ಪೂರ್ವೇಭ್ಯ ಋಷಿಭ್ಯ ಇವ ಜಂತವೇ ಸ್ತೋತ್ರೇ ಯಜಮಾನಾಯ ಧನಂ ಪಶ್ವಾದಿಲಕ್ಷಣಂ ಜನಯನ್ ಸಂಪಾದಯನ್ ಜಾಗೃವಿಃ ಸದಾ ಪ್ರಬುದ್ಧಃ ಸಮಾನಂ ಸರ್ವೇಷಾಂ ದೇವಾನಾಂ ಸಾಧಾರಣಮಜ್ಮಮಾಕಾಶಮಾರ್ಗಂ ಪರ್ಯೇತಿ । ಸೂರ್ಯರೂಪೇಣ ಗಚ್ಛತಿ ॥

॥ ಪ್ರತಿಪದಾರ್ಥ ॥

**ಸುಮನ್ಮಭಿಃ**—ಸ್ತೋತೃಗಳಿಂದ । **ಭಂದಮಾನಃ**—ಸ್ತುತಿಸಲ್ಪಟ್ಟ । **ವೈಶ್ವಾನರಃ**—ವೈಶ್ವಾನರನು । **ಪ್ರತ್ನಥಾ**—(ಉತ್ಪನ್ನನಾದ ಕೂಡಲೇ) ಪುರಾತನನಂತೆ । **ದಿವಃ**—ಅಂತರಿಕ್ಷದ । **ಪೃಷ್ಠಂ**—ಉಪರಿತನ ಪ್ರದೇಶವಾದ । **ನಾಕಂ**—ಸ್ವರ್ಗಕ್ಕೆ । **ಆರುಹತ್**—ಹತ್ತುತ್ತಾನೆ । **ಸಃ**—ಅದೇ ವೈಶ್ವಾನರನು । **ಪೂರ್ವವತ್**—ಹಿಂದಿನ ಋಷಿಗಳಿಗೆ ಒದಗಿಸಿದಂತೆ । **ಜಂತವೇ**—ಸ್ತುತಿಕರ್ತನಾದ ಈ ಯಜಮಾನನಿಗೂ । **ಧನಂ**—ಪಶ್ವಾದಿ ರೂಪವಾದ ಧನವನ್ನು । **ಜನಯನ್**—ಉಂಟುಮಾಡುತ್ತಾ । **ಜಾಗೃವಿಃ**—ಸರ್ವದಾ ಪ್ರಬುದ್ಧನಾಗಿ । **ಸಮಾನಂ**—ಸಕಲದೇವತೆಗಳಿಗೂ ಸಾಧಾರಣವಾದ । **ಅಜ್ಮಂ**—ಆಕಾಶಮಾರ್ಗವನ್ನು (ಮಾರ್ಗದಲ್ಲಿ) । **ಪರ್ಯೇತಿ**—ಸೂರ್ಯರೂಪದಿಂದ ಸಂಚರಿಸುತ್ತಾನೆ.

॥ ಭಾವಾರ್ಥ ॥

ಸ್ತೋತೃಗಳಿಂದ ಸ್ತುತಿಸಲ್ಪಟ್ಟ ವೈಶ್ವಾನರನು ಉತ್ಪನ್ನನಾದೊಡನೆಯೇ ಪುರಾತನನಂತೆ ಅಂತರಿಕ್ಷದ ಉಪರಿತನ ಪ್ರದೇಶವಾದ ಸ್ವರ್ಗಕ್ಕೆ ಹತ್ತುತ್ತಾನೆ. ಅದೇ ವೈಶ್ವಾನರನು ಹಿಂದಿನ ಋಷಿಗಳಿಗೆ ಒದಗಿಸಿದಂತೆ ಸ್ತುತಿ ಕರ್ತನಾದ ಈ ಯಜಮಾನನಿಗೂ ಪಶ್ವಾದಿರೂಪವಾದ ಧನವನ್ನು ಉಂಟುಮಾಡುತ್ತಾ ಸರ್ವದಾ ಪ್ರಬುದ್ಧನಾಗಿ ಸಕಲ ದೇವತೆಗಳಿಗೂ ಸಾಧಾರಣವಾದ ಅಂತರಿಕ್ಷಮಾರ್ಗದಲ್ಲಿ ಸೂರ್ಯರೂಪದಿಂದ ಸಂಚರಿಸುತ್ತಾನೆ.

## English Translation.

Glorified by his adorers, Vaishwanara of old ascended to the heaven that is above the firmament, bestowing wealth upon his (present) worshipper, as he did in former times; he travels, ever vigilant, the common path (of the gods).

॥ ವಿಶೇಷವಿಷಯಗಳು ॥

ಹಿಂದಿನ ಋಕ್ಕಿನಲ್ಲಿ ವೈಶ್ವಾನರಾಗ್ನಿಯು ಪ್ರಾಣಿಗಳ ಶರೀರಗಳನ್ನು ಜಾಠರಾಗ್ನಿರೂಪದಿಂದ ಇರುವುದನ್ನು ವರ್ಣಿಸಿ ಈ ಋಕ್ಕಿನಲ್ಲಿ ಅಂತರಿಕ್ಷದಲ್ಲಿ ಆದಿತ್ಯರೂಪದಲ್ಲಿರುವುದನ್ನು ವಿವರಿಸಲಾಗಿದೆ.

**ಪ್ರತ್ನಃ**—ಪ್ರತ್ನಶಬ್ದವು ಪುರಾಣನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೨೦) ಪುರಾತನನು ಎಂದರ್ಥವು. ಸೂರ್ಯನು ಬಹಳ ಪುರಾತನನು. ಹಿಂದೆ ಬಹುಕಾಲದಿಂದಲೂ ಇರುವವನು. ಮುಂದೆಯೂ ಇರುವನು ಎಂದಭಿಪ್ರಾಯವು.

**ದಿವಃ ಪೃಷ್ಠಂ**—ಸ್ವರ್ಗಲೋಕದಲ್ಲಿ ನಾಕವೆಂಬುವುದು ಅತ್ಯುನ್ನತ ಪ್ರದೇಶ. ಪೃಷ್ಠವೆಂಬುದು ಅತ್ಯಂತ ಕೆಳಗಿರುವ ಪ್ರದೇಶ. ಆದರೆ ಈ ಪೃಷ್ಠವೆಂಬುದು ಅಂತರಿಕ್ಷದ ಮೇಲುಭಾಗ ಸ್ವರ್ಗದ ತಳಭಾಗ ಇವುಗಳ ಮಧ್ಯದಲ್ಲಿರುವುದು ಎಂದು ಹೇಳಲಾಗಿದೆ.

**ನಾಕಂ**—ನಾಕಶಬ್ದಕ್ಕೆ ಯಾಸ್ಕರು—

**ನಾಕ ಆದಿತ್ಯೋ ಭವತಿ । ನೇತಾ ರಸಾನಾಂ ಭಾಸಾಂ ಜ್ಯೋತಿಷಾಂ ಪ್ರಣಯಃ । ಅಥ ದ್ಯೌಃ । ಕಮಿತಿ ಸುಖನಾಮ । ತತ್ ಪ್ರತಿಷಿದ್ಧಂ ಪ್ರತಿಷಿಧ್ಯೇತ । "ನ ವಾ ಅಮುಂ ಲೋಕಂ ಜಗ್ಮುಷೇ ಕಿಂಚ ನಾಕಂ" । ನ ವಾ ಅಮುಂ ಲೋಕಂ ಗತವತೇ ಕಿಂಚ ನಾಸುಖಂ ಪುಣ್ಯಕೃತೋ ಹ್ಯೇವ ತತ್ರ ಗಚ್ಛಂತಿ ।**

(ನಿ. ೨-೧೪)

ನಾಕ ಎಂದರೆ ಆದಿತ್ಯ ಎಂದೂ ಅರ್ಥವು. ಎಂದರೆ ಆದಿತ್ಯನು ರಸದ ವಾಹಕನು ಎಂದರೆ ರಶ್ಮಿಗಳಿಂದ ನೀರೇ ಮೊದಲಾದ ದ್ರವರೂಪದಲ್ಲಿರುವ ರಸಗಳನ್ನು ಹೀರುವವನು ಅಥವಾ ಪ್ರಕಾಶ ಅಥವಾ ತೇಜಸ್ಸನ್ನು ಎಲ್ಲೆಲ್ಲಿಯೂ ಹರಡುವವನು ಆದುದರಿಂದ ನಾಕಶಬ್ದಕ್ಕೆ ಆದಿತ್ಯನೆಂದೂ ಅರ್ಥವಾಗುವುದು. ಇದಲ್ಲದೆ **ಅಥ ದ್ಯೌಃ** ಎಂದರೆ ನಾಕಶಬ್ದಕ್ಕೆ ಸ್ವರ್ಗವೆಂದೂ ಅರ್ಥವು. **ಸಾಧಾರಣಾನ್ಯುತ್ತರಾಣಿ ಷಟ್ ದಿವಶ್ಚಾದಿತ್ಯಸ್ಯ ಚ** ಎಂದರೆ **ನಾಕ** ಮೊದಲಾದ ಆರು ಪದಗಳು ದ್ಯುಲೋಕಕ್ಕೂ ಆದಿತ್ಯನಿಗೂ ಸಾಧಾರಣವಾದ ಪರ್ಯಾಯಪದಗಳೆಂದು ತಿಳಿಸಿದ್ದಾರೆ. (೨-೧೩). ನಾಕಶಬ್ದದ ಅವಯವಾರ್ಥವನ್ನು ವಿವರಿಸುತ್ತಾ—**ಕಂ** ಎಂದರೆ ಸುಖ. **ಅಕಂ** ಎಂದರೆ ಅದಕ್ಕೆ (ಸುಖಕ್ಕೆ) ಪ್ರತಿಷಿದ್ಧವಾದುದು ದುಃಖ. **ನ + ಅಕಂ = ನಾಕಂ.** ದುಃಖವಿಲ್ಲದಿರುವ ಸ್ಥಳಕ್ಕೆ **ನಾಕಂ**—ಸ್ವರ್ಗವು ಎಂದು ಸುಖಾಭಾವವಿಲ್ಲದಿರುವ ಎಂದರೆ ದುಃಖರಹಿತವಾದ ಸ್ಥಳವು ಎಂದು ವಿವರಿಸಿ—

**ನ ವಾ ಅಮುಂ ಲೋಕಂ ಜಗ್ಮುಷೇ ಕಿಂ ಚ ನಾಕಂ ।**

(ಕಾಠಕಂ. ಸಂ. ೨೧-೨)

ಎಂಬ ಶ್ರುತಿವಾಕ್ಯವನ್ನು ಉದಾಹರಣೆಗಾಗಿ ಕೊಟ್ಟಿರುತ್ತಾರೆ. ಎಂದರೆ, ಈ ಲೋಕಕ್ಕೆ (ಸ್ವರ್ಗಕ್ಕೆ) ದುಃಖವೇ ಇಲ್ಲ. (ಪುಣ್ಯವನ್ನು ಮಾಡಿದವರಿಗೆ) ಮಾತ್ರ ಈ ಲೋಕಕ್ಕೆ ಪ್ರವೇಶವುಂಟು. ಎಂದು ನಾಕಶಬ್ದದ ಅರ್ಥವನ್ನು ವಿವಸಿದ್ದಾರೆ.

**ಸುಮನ್ಮಭಿಃ ಛಂದಮಾನಃ ವೈಶ್ವಾನರಃ ಪ್ರತ್ನಥಾ ದಿವಃ ಪೃಷ್ಠಂ ನಾಕಂ ಆರುಹತ್–ಸ್ತೋತೃಭಿಃ ಸ್ತೂಯಮಾನಃ ವೈಶ್ವಾನರಃ ಜಾತಮಾತ್ರ ಏವ ಚಿರಂತನ ಇವ ದಿವಃ ಪೃಷ್ಠಂ ನಾಕಂ ಅಂತರಿಕ್ಷಸ್ಯ ಉಪರಿತನಪ್ರದೇಶಂ ಆರೋಹತಿ** । ಸ್ತೋತ್ರಮಾಡುವ ಜನರಿಂದ ನಾನಾವಿಧವಾಗಿ ಸ್ತುತಿಸಲ್ಪಡುವ ಪುರಾತನ ನಾದ ಈ ವೈಶ್ವಾನರನು (ಸೂರ್ಯರೂಪದಿಂದ) ಸ್ವರ್ಗಲೋಕದ ತಳಭಾಗವೂ ಅಂತರಿಕ್ಷದ ಮೇಲುಭಾಗವೂ ಆದ ಸ್ವರ್ಗವನ್ನು ಹತ್ತುತ್ತಾನೆ.

**ಸಃ ಪೂರ್ವವತ್ ಜಂತವೇ ಧನಂ ಜನಯತ್ ಜಾಗೃವಿಃ ಸಮಾನಂ ಅಜ್ಮಂ ಪರ್ಯೇತಿ—ಸಃ ವೈಶ್ವಾನರಃ ಪೂರ್ವೇಭ್ಯ ಋಷಿಭ್ಯ ಇವ ಸ್ತೋತ್ರೇ ಯಜಮಾನಾಯ ಪಶ್ವಾದಿಲಕ್ಷಣಂ ಧನಂ ಸಂಪಾದಯನ್ ಸದಾ ಪ್ರಬುದ್ಧಃ ಸರ್ವೇಷಾಂ ದೇವಾನಾಂ ಸಾಧಾರಣಮಾಕಾಶಮಾರ್ಗಂ ಸೂರ್ಯರೂಪೇಣ ಗಚ್ಛತಿ** । ಈ ವೈಶ್ವಾನರನು ಹಿಂದೆ ಋಷಿಗಳಿಗೆ ಕೊಟ್ಟಂತೆ ಸ್ತೋತ್ರಮಾಡುತ್ತಿರುವ ಈ ಯಜಮಾನನಿಗೂ ಧನವನ್ನು ಅನುಗ್ರಹಿಸುತ್ತಾ ಸರ್ವಕಾಲದಲ್ಲಿಯೂ ಜಾಗರೂಕತೆಯಿಂದಿರುತ್ತಾ ದೇವತೆಗಳಿಗೆಲ್ಲಾ ಸಂಚಾರಮಾರ್ಗವಾದ ಆಕಾಶ ಮಾರ್ಗದಲ್ಲಿ ಸೂರ್ಯರೂಪದಿಂದ ಸಂಚರಿಸುತ್ತಾನೆ ಎಂದಭಿಪ್ರಾಯವು.

ಸಂಹಿತಾಪಾಠಃ ॥

ಋತಾವಾನಂ ಯಜ್ಞಿಯಂ ವಿಪ್ರಮುಕ್ಥ್ಯಮಾ ಯಂ ದಧೇ ಮಾತರಿಶ್ವಾ ದಿವಿ ಕ್ಷಯಂ ।

ತಂ ಚಿತ್ರಯಾಮಂ ಹರಿಕೇಶಮೀಮಹೇ ಸುದೀತಿಮಗ್ನಿಂ ಸುವಿತಾಯ ನವ್ಯಸೇ ॥

॥ ಪದಪಾಠಃ ॥

ಋತಽವಾನಂ । ಯಜ್ಞಿಯಂ । ವಿಪ್ರಂ । ಉಕ್ಥ್ಯಂ । ಆ । ಯಂ । ದಧೇ । ಮಾತರಿಶ್ವಾ । ದಿವಿ । ಕ್ಷಯಂ ।

ತಂ । ಚಿತ್ರಽಯಾಮಂ । ಹರಿಽಕೇಶಂ । ಈಮಹೇ । ಸುಽದೀತಿಂ । ಅಗ್ನಿಂ । ಸುವಿತಾಯ । ನವ್ಯಸೇ ॥೧೩॥

॥ ಸಾಯಣಭಾಷ್ಯಂ ॥

ಋತಾವಾನಂ ಬಲವಂತಂ ಯಜ್ಞಿಯಂ ಯಜ್ಞಾರ್ಹಂ ವಿಪ್ರಂ ಮೇಧಾವಿನಮುಕ್ಥ್ಯಂ ಸ್ತುತ್ಯಂ ದಿವಿ ದ್ಯುಲೋಕೇ ಕ್ಷಯಂ ನಿವಸಂತಂ ಯಮಗ್ನಿಂ ಮಾತರಿಶ್ವಾ ವಾಯುರ್ದ್ಯುಲೋಕಾದಾಹೃತ್ಯ ಪೃಥಿವ್ಯಾಮಾದಧೇ । ಆಹಿತವಾನ್ । ಚಿತ್ರಯಾಮಂ ನಾನಾವಿಧಗಮನಂ ಹರಿಕೇಶಂ ಪಿಂಗಲಾರ್ಚಿಷಂ ಸುದೀತಿಂ ಶೋಭನದೀಪ್ತಿಂ ತಮಗ್ನಿಂ ನವ್ಯಸೇ ನವತರಾಯ ಸುವಿತಾಯ ಸುಷ್ಠು ಪ್ರಾಪ್ತವ್ಯಾಯ ಧನಾಯ ತದರ್ಥಮೀಮಹೇ । ಯಾಚಾಮಹೇ ॥

॥ ಪ್ರತಿಪದಾರ್ಥ ॥

**ಋತಾವಾನಂ**—ಶಕ್ತಿವಂತನೂ | **ಯಜ್ಞಿಯಂ**—ಯಜ್ಞಾರ್ಹನೂ | **ವಿಪ್ರಂ**—ಮೇಧಾವಿಯೂ | **ಉಕ್ಥ್ಯಂ**—ಸ್ತುತ್ಯರ್ಹನೂ | **ದಿವಿ**—ದ್ಯುಲೋಕದಲ್ಲಿ | **ಕ್ಷಯಂ**—ವಾಸಿಸುವವನೂ ಆದ | **ಯಂ**—ಯಾವ ಅಗ್ನಿಯನ್ನು | **ಮಾತರಿಶ್ವಾ**—ವಾಯುವು | **ಆ ದಧೇ**— ಪೃಥಿವಿಗೆ ತಂದು ಸ್ಥಾಪಿಸಿದನೋ (ಅಂತಹ) | **ಚಿತ್ರಯಾಮಂ**—ನಾನಾವಿಧವಾದ ಗಮನವುಳ್ಳವನೂ | **ಹರಿಕೇಶಂ**—ಪಿಂಗಲವರ್ಣದ ಜ್ವಾಲೆಯುಳ್ಳವನೂ | **ಸುದೀತಿಂ**—ಅತಿಶಯವಾದ ಕಾಂತಿಯುಳ್ಳವನೂ ಆದ | **ತಂ ಅಗ್ನಿಂ**—ಅದೇ ಅಗ್ನಿಯನ್ನು | **ನವ್ಯಸೇ**—ನೂತನವಾದ | **ಸುವಿತಾಯ**—ಧನಕ್ಕಾಗಿ | **ಈಮಹೇ**—ಯಾಚಿಸುತ್ತೇನೆ.

॥ ಭಾವಾರ್ಥ ॥

ಶಕ್ತಿವಂತನೂ, ಯಜ್ಞಾರ್ಹನೂ, ಮೇಧಾವಿಯೂ, ಸ್ತುತ್ಯರ್ಹನೂ, ದ್ಯುಲೋಕದಲ್ಲಿ ವಾಸಿಸುವವನೂ ಆದ ಯಾವ ಅಗ್ನಿಯನ್ನು ಮಾತರಿಶ್ವನು ಪೃಥ್ವಿಗೆ ತಂದು ಸ್ಥಾಪಿಸಿದನೋ ಅಂತಹ ನಾನಾವಿಧವಾದ ಗಮನವುಳ್ಳವನೂ, ಪಿಂಗಲವರ್ಣದ ಜ್ವಾಲೆಯುಳ್ಳವನೂ, ಅತಿಶಯವಾದ ಕಾಂತಿಯುಳ್ಳವನೂ ಆದ ಅದೇ ಅಗ್ನಿಯನ್ನು ನೂತನವಾದುದೂ ಪ್ರಶಸ್ಯವಾದುದೂ ಆದ ಧನಕ್ಕಾಗಿ ಯಾಚಿಸುತ್ತೇನೆ.

English Translation.

We implore for present riches, the many-moving, tawny-rayed, resplendent Agni, whom mighty, venerable, wise, adorable, and dwelling in the sky, the wind (brought down) and deposited (upon the earth).

॥ ವಿಶೇಷವಿಷಯಗಳು ॥

**ಮಾತರಿಶ್ವಾ**—**ಮಾತರಿಶ್ವಾ ವಾಯುರ್ಮಾತರ್ಯಂತರಿಕ್ಷೇ ಶ್ವಸಿತಿ ಮಾತರ್ಯಾಶ್ವನಿತೀತಿ ವಾ** | ಅಂತರಿಕ್ಷದಲ್ಲಿ ಶ್ವಾಸಮಾಡುವುದರಿಂದ ಅಥವಾ ಸಂಚರಿಸುವುದರಿಂದ ವಾಯುವಿಗೆ **ಮಾತರಿಶ್ವನೆಂದು** ಹೆಸರು ಬಂದಿದೆ. ಋ. ಸಂ. ೧-೯೪-೪ ನೇ ಋಕ್ಕಿನಲ್ಲಿ ಈ ಪದಕ್ಕೆ ಅಗ್ನಿಯೆಂದೂ ೧-೧೪೧-೩ ನೆಯದರಲ್ಲಿ ಯಜಮಾನರೆಂದೂ ಅರ್ಥಮಾಡುತ್ತಾರೆ. ಆದರೆ ಅಂತಹ ಒಂದೆರಡು ಕಡೆಗಳಲ್ಲಿ ಬಿಟ್ಟು ಉಳಿದೆಡೆಗಳಲೆಲ್ಲಾ **ಮಾತರಿಶ್ವಾ** ಎಂದರೆ ವಾಯುವೆಂದೇ ಅರ್ಥವು.

**ಅನ್ಯಂ ಮಾತರಿಶ್ವಾ ದಿವ ಆ ಜಭಾರ**—ಯಜ್ಞಾತ್ಮಕನಾದ ಅಗ್ನಿಯ ಅಲೌಕಿಕವಾದ ಆವಿರ್ಭಾವವೂ ಲೌಕಿಕವಾದ ಉತ್ಪತ್ತಿಯೂ ಅನೇಕ ವಿಧಗಳಲ್ಲಿ ವರ್ಣಿತವಾಗಿದೆ. ಯಜ್ಞಗಳಿಗೆ ಕೇತುವೂ, ವಿದಥಕ್ಕೆ ಸಾಧನವೂ, ಯಾಗಾದಿಗಳ ಪಿತೃವೂ, ಅಧ್ವರಗಳ ರಾಜನೂ (ಋ. ಸಂ. ೩-೩-೩ ; ೩-೧೧-೨ ; ೪-೨-೩ ಇತ್ಯಾದಿ ಋಕ್ಕುಗಳಲ್ಲಿರುವ ವರ್ಣನೆಗಳನ್ನು ನೋಡಿ) ಆದ ಅಗ್ನಿಯ ಆವಿರ್ಭಾವವು ವಿದ್ಯುದ್ರೂಪದಲ್ಲಿ ಮೊದಲು ವಾಯುವಿಗಾಯಿತೆಂದು ಋಕ್ಸಂಹಿತೆಯ

**ತ್ವಮಗ್ನೇ ಪ್ರಥಮೋ ಮಾತರಿಶ್ವನ ಆವಿರ್ಭವ ಸುಕ್ರತೂಯಾ ವಿವಸ್ವತೇ |**

(ಋ. ಸಂ. ೧-೩೧-೩)

**ಸ ಜಾಯಮಾನಃ ಪರಮೇ ವ್ಯೋಮನ್ವಾವಿರಗ್ನಿರಭವನ್ಮಾತರಿಶ್ವನೇ ।**
(ಋ. ಸಂ. ೧-೪೩-೨)

ಮುಂತಾದ ಋಕ್ಕುಗಳಲ್ಲಿ ಹೊಗಳಿದೆ. ಈ ವಾಯುವು ಯಜ್ಞಕರ್ತರಾದ ಭೃಗುವಿಗಾಗಿಯೂ ಮನುವಿಗಾಗಿಯೂ ಅತ್ಯಂತ ದೂರಪ್ರದೇಶದಲ್ಲಿ ಗೂಢವಾಗಿದ್ದ ಅಗ್ನಿಯನ್ನು ಕರೆತಂದು ಇವರಿಗೆ ಸಹಾಯಮಾಡಿದನು ಎಂದು ಅನೇಕ ಶ್ರುತಿವಾಕ್ಯಗಳಿವೆ. ಉದಾಹರಣೆಗೆ—

**ದ್ವಿಜನ್ಮಾನಂ ರಯಿಮಿವ ಪ್ರಶಸ್ತಂ ರಾತಿಂ ಭರದ್ಭೃಗವೇ ಮಾತರಿಶ್ವಾ ।**
(ಋ. ಸಂ. ೧-೬೦-೧)

**ಯಂ ಮಾತರಿಶ್ವಾ ಮನವೇ ಪರಾವತೋ ದೇವಂ ಭಾಃ ಪರಾವತಃ ।**
(ಋ. ಸಂ. ೧-೧೨೮-೨)

**ಐನಂ ನಯನ್ಮಾತರಿಶ್ವಾ ಪರಾವತೋ ದೇವೇಭ್ಯೋ ಮಥಿತಂ ಪರಿ ।**
(ಋ. ಸಂ. ೩-೯-೫)

**ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ ।**
(ಋ. ಸಂ. ೬-೮-೪)

**ಈಳೇನ್ಯಂ ಪ್ರಥಮಂ ಮಾತರಿಶ್ವಾ ದೇವಾಸ್ತತಕ್ಷುರ್ಮನವೇ ಯಜತ್ರಂ ।**
(ಋ. ಸಂ. ೧೦-೪೬-೯)

ಇತ್ಯಾದಿ ನಾನಾ ಋಕ್ಕುಗಳಲ್ಲಿ ಮಾತರಿಶ್ವರನು ಯಜ್ಞಕರ್ತರಾದ ಭೃಗು ಮತ್ತು ಮನು ಇವರ ಪ್ರಯೋಜನಕ್ಕಾಗಿ ದೂರದೇಶದಲ್ಲಿ ಗುಪ್ತವಾಗಿದ್ದ ಅಗ್ನಿಯನ್ನು ಪೃಥ್ವಿಗೆ ಕರೆತಂದು ಪೃಥ್ವಿಯಲ್ಲಿ ಎಲ್ಲಾ ಪ್ರಜೆಗಳಿಗೂ ಉಪಕಾರ ಮಾಡಿದನೆಂದು ಶ್ರುತಿಪ್ರಸಿದ್ಧವಾಗಿದೆ.

**ಮಾತರಿಶ್ವಾ ಮಥಿತ್—ಮಾತರಿಶ್ವಾ** ಎಂಬ ಪದದ ವಿವರಣೆಗೆ ಋ. ಸಂ. ೧-೯೩-೬ ನೇ ಋಕ್ಕಿನ ವಿಶೇಷವಿಷಯಗಳನ್ನು ನೋಡಿ. **ಕೀದೃಶಃ ಮಾತರಿಶ್ವಾ । ವಿಭೃತಃ । ಪ್ರಾಣಿಷು ಪ್ರಾಣಾಪಾನಾದಿ ಪಂಚ ವೃತ್ತಿರೂಪೇಣ ವಿಹೃತೋ ವಿಭಜ್ಯ ಸ್ಥಿತಃ ।** ಪ್ರಾಣಿಗಳಲ್ಲಿ ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ ಎಂದು ಐದು ವಿಭಾಗವಾಗಿ ವ್ಯಾಪಿಸಿರುವವನು ಎಂದು **ವಿಭೃತಃ** ಎಂಬ ಪದಕ್ಕೆ ಅರ್ಥವನ್ನು ಹೇಳಿ ಅವುಗಳಲ್ಲಿ ಈ ಸಂದರ್ಭಕ್ಕೆ **ಮಾತರಿಶ್ವಾ** ಎಂದರೆ **ವ್ಯಾನವೃತ್ತಿರೂಪೇಣಾವಸ್ಥಿತೋ ಮುಖ್ಯಪ್ರಾಣಃ ।** ವ್ಯಾನವೃತ್ತಿರೂಪದಲ್ಲಿರುವ ಮುಖ್ಯಪ್ರಾಣನಾದ ವಾಯುವೆಂದು ಭಾಷ್ಯಕಾರರು ವಿವರಿಸಿದ್ದಾರೆ. ಈ ರೂಪದಲ್ಲಿರುವ ವಾಯುವೇ ಅಗ್ನಿಮಥನಕ್ಕೆ ಸಮರ್ಥನೆಂದು ಈ ಕಾರ್ಯವನ್ನು ನಿರ್ವಹಿಸಿದನೆಂದೂ ಸಮರ್ಥಿಸುವುದಕ್ಕೆ ಛಾಂದೋಗ್ಯೋಪನಿಷತ್ತಿನ **ಅಥ ಯಃ ಪ್ರಾಣಾಪಾನಯೋಃ ಸಂಧಿಃ ಸ ವ್ಯಾನಃ । ಅತೋ ಯಾನ್ಯನ್ಯಾನಿ ವೀರ್ಯವಂತಿ ಕರ್ಮಾಣಿ ಯಥಾಗ್ನೇರ್ಮಂಥನಮಾಜೇಃ ಸರಣಂ ದೃಢಸ್ಯ ಧನುಷಃ ಆಯಮನಮಪ್ರಾಣನ್ನನಪಾನಂಸ್ತಾನಿ ಕರೋತಿ ।** ಎಂಬ ವ್ಯಾನರೂಪದ ವಾಯುವಿನ ಪ್ರಶಂಸೆಯನ್ನು ಉದಹರಿಸುತ್ತಾರೆ. ಪ್ರಾಣಾಪಾನಗಳ ಶಕ್ತಿಗೆ ಮೀರಿದ ಅಗ್ನಿಮಂಥನಾದಿ ಪರಾಕ್ರಮಕಾರ್ಯಗಳನ್ನೆಲ್ಲಾ ವ್ಯಾನರೂಪದ ವಾಯುವು ಮಾತ್ರ ಮಾಡಬಲ್ಲದು ಎಂದು ಈ ಶ್ರುತಿವಾಕ್ಯದ ತಾತ್ಪರ್ಯ. (ಛಾ. ಉ. ೧-೩-೩-೫)

ಅಗ್ನಿಮಥನಕ್ಕೆ ಪೂರ್ವಪ್ರಸಿದ್ಧವಾದ ಒಂದು ಕಥೆಯಿದೆ. ಅದರಲ್ಲಿ ಹೇಳುವಂತೆ **ಸರ್ವಮಿದಮಂಧಂ ತಮ ಅಸೀತ್ । ಅಥ ಮಾತರಿಶ್ವಾಕಾಶೇ ಸೂಕ್ಷ್ಮಮಗ್ನಿಮಪಶ್ಯತ್ । ತಮಮಥ್ನಾತ್ । ಮಥಿತ್ವಾಚಾನಯದಿತಿ ।** ಹಿಂದೆ ಲೋಕವೆಲ್ಲವೂ ಕಗ್ಗತ್ತಲೆಯಿಂದ ಆವೃತವಾಗಿದ್ದಿತು. ಆಗ ಮಾತರಿಶ್ವನು ಸೂಕ್ಷ್ಮರೂಪದ ಅಗ್ನಿಯನ್ನು ಆಕಾಶದಲ್ಲಿ ಗುರ್ತಿಸಿ ಮಥನ ಮಾಡಿದನು. ಅನಂತರ ಯಜ್ಞಕ್ಕೆ ಅನುಕೂಲವಾಗುವಂತೆ ಪೃಥ್ವಿಗೆ ಕರೆತಂದನು ಎಂದು ಪ್ರಸಿದ್ಧವಾದ ಕಥೆಯು ಸೂಕ್ಷ್ಮವಾಗಿ ಋಕ್ಸಂಹಿತೆಯಲ್ಲಿಯೂ ಅನೇಕ ಕಡೆ ಹೇಳಲ್ಪಟ್ಟಿದೆ. ಉದಾಹರಣೆಗೆ—

**ಆನ್ಯಂ ದಿವೋ ಮಾತಾರಿಶ್ವಾ ಜಭಾರಾಮಥ್ನಾದನ್ಯಂ ಪರಿ ಶ್ಯೇನೋ ಅದ್ರೇಃ ।**

(ಋ ಸಂ. ೧-೯೩-೬)

**ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ ।**

(ಋ. ಸಂ. ೬-೮-೪)

ಎಂಬ ಋಕ್ಕುಗಳಲ್ಲಿಯೂ ಸಹ ಇಲ್ಲಿ ಪ್ರಶಂಸಿಸುವಂತೆಯೇ ಅಗ್ನಿಪ್ರಶಂಸೆಯನ್ನು ಪೂರ್ವಕಥಾಸಂದರ್ಭದೊಡನೆ ವಿವರಿಸಿರುತ್ತೆ. ಹೀಗೆ ಮಾತರಿಶ್ವನು ಕರೆತಂದನಂತರವೇ ಅಗ್ನಿಯು ಯಜ್ಞಗೃಹದಲ್ಲಿ ಬೆಳಗಿದನು ಎಂದರ್ಥ.



॥ ಸಂಹಿತಾಪಾಠಃ ॥

ಶುಚಿಂ ನ ಯಾಮನ್ನಿಷಿರಂ ಸ್ವರ್ದೃಶಂ ಕೇತುಂ ದಿವೋ ರೋಚನಸ್ಥಾಮುಷರ್ಬುಧಂ ।
ಅಗ್ನಿಂ ಮೂರ್ಧಾನಂ ದಿವೋ ಅಪ್ರತಿಷ್ಕುತಂ ತಮೀಮಹೇ ನಮಸಾ ವಾಜಿನಂ ಬೃಹತ್ ॥ ೧೪ ॥

॥ ಪದಪಾಠಃ ॥

ಶುಚಿಂ । ನ । ಯಾಮನ್ । ಇಷಿರಂ । ಸ್ವಃऽದೃಶಂ । ಕೇತುಂ । ದಿವಃ । ರೋಚನऽಸ್ಥಾಂ । ಉಷಃऽಬುಧಂ ।
ಅಗ್ನಿಂ । ಮೂರ್ಧಾನಂ । ದಿವಃ । ಅಪ್ರತಿऽಸ್ಕುತಂ । ತಂ । ಈಮಹೇ । ನಮಸಾ । ವಾಜಿನಂ । ಬೃಹತ್ ॥

॥ ಸಾಯಣಭಾಷ್ಯಂ ॥

**ನೇತಿ ಸಂಪ್ರತ್ಯರ್ಥೇ । ಶುಚಿಂ ದೀಪ್ತಂ ಯಾಮನ್ ಯಾಮನಿ ಯಜ್ಞೇ ಇಷಿರಮೇಷಣೀಯಂ ಸ್ವರ್ದೃಶಂ ಸರ್ವದೃಶಂ ಸರ್ವಪದಾರ್ಥವಿಜ್ಞಾನಯುಕ್ತಂ ದಿವೋ ದ್ಯುಲೋಕಸ್ಯ ಕೇತುಂ ಪ್ರಜ್ಞಾಪಕಂ ರೋಚನಸ್ಥಾಂ ರೋಚನಸ್ಥಂ । ರೋಚನಃ ಸೂರ್ಯಃ । ತಸ್ಮಿನ್ ತಿಷ್ಠಂತಂ । ಉಷರ್ಬುಧಮಗ್ನಿಹೋ-**

**ತ್ರಿಕರೂಪೇಣೋಷಿಸಿ ಪ್ರಬುಧ್ಯಮಾನಂ ದಿವಃ ಸ್ವರ್ಗಸ್ಯ ಮೂರ್ಧಾನಂ ಪ್ರಧಾನಮಪ್ರತಿಷ್ಕುತಮಪ್ರತಿಹತಶಬ್ದಂ ವಾಜಿನಮನ್ನವಂತಂ ಬೃಹತ್ ಮಹಾಂತಂ ತಮಗ್ನಿಂ ನಮಸಾ ಸ್ತೋತ್ರೇಣೇಮಹೇ । ಯಾಚಾಮಹೇ ॥**

॥ ಪ್ರತಿಪದಾರ್ಥ ॥

**ನ**—ಈಗ । **ಶುಚಿಂ**—ಪ್ರಕಾಶಮಾನನೂ । **ಯಾಮನ್**—ಯಜ್ಞದಲ್ಲಿ । **ಇಷಿರಂ**—ಅಪೇಕ್ಷಿಸಲ್ಪಡುವವನೂ । **ಸ್ವರ್ದೃಶಂ**—ಎಲ್ಲರಿಂದಲೂ ಕಾಣಲ್ಪಡುವವನೂ । **ದಿವಃ**—ದ್ಯುಲೋಕದ । **ಕೇತುಂ**—ಪ್ರಜ್ಞಾಪಕನೂ । **ರೋಚನಸ್ಥಾಂ**—ಸೂರ್ಯಾಂತರ್ಗತನೂ । **ಉಷರ್ಬುಧಂ**—ಉಷಃಕಾಲದಲ್ಲಿ (ಯಾಗಾರ್ಥವಾಗಿ) ಎಚ್ಚರಗೊಳ್ಳುವವನೂ । **ದಿವಃ**—ಸ್ವರ್ಗಕ್ಕೆ । **ಮೂರ್ಧಾನಂ**—ಪ್ರಧಾನನೂ । **ಅಪ್ರತಿಷ್ಕುತಂ**—ಅಪ್ರತಿಹತವಾದ ಶಬ್ದವುಳ್ಳವನೂ । **ವಾಜಿನಂ**—ಅನ್ನವಂತನೂ । **ಬೃಹತ್**—ಮಹದ್ರೂಪವುಳ್ಳವನೂ ಆದ । **ತಂ ಅಗ್ನಿಂ**—ಆ ಅಗ್ನಿಯನ್ನು । **ನಮಸಾ**—ಸ್ತೋತ್ರದಿಂದ । **ಈಮಹೇ**—ಯಾಚಿಸುತ್ತೇವೆ.

॥ ಭಾವಾರ್ಥ ॥

ಪ್ರಕಾಶಮಾನನೂ, ಯಜ್ಞದಲ್ಲಿ ಅಪೇಕ್ಷಿಸಲ್ಪಡುವವನೂ, ಎಲ್ಲರಿಂದಲೂ ಕಾಣಲ್ಪಡುವವನೂ, ದ್ಯುಲೋಕದ ಪ್ರಜ್ಞಾಪಕನೂ, ಸೂರ್ಯಾಂತರ್ಗತನೂ, ಉಷಃಕಾಲದಲ್ಲಿ ಯಾಗಾರ್ಥವಾಗಿ ಎಚ್ಚರಗೊಳ್ಳುವವನೂ, ಸ್ವರ್ಗಕ್ಕೆ ಪ್ರಧಾನನೂ, ಅಪ್ರತಿಹತವಾದ ಶಬ್ದವುಳ್ಳವನೂ, ಅನ್ನವಂತನೂ, ಮಹದ್ರೂಪವುಳ್ಳವನೂ ಆದ ಅಗ್ನಿಯನ್ನು ಸ್ತೋತ್ರಪೂರ್ವಕವಾಗಿ ಯಾಚಿಸುತ್ತೇವೆ.

## English Translation.

We implore with prayer the mighty Agni, the giver of food, the unrefusing, (seated on) the front of heaven; the radiant in the sacrifice, him who is to be sought (for by all), the beholder of all, the emblem of heaven, the dweller in light, who is to be awakened at dawn.

॥ ವಿಶೇಷವಿಷಯಗಳು ॥

**ಅಪ್ರತಿಷ್ಕುತಂ**—ಈ ಶಬ್ದಕ್ಕೆ ಯಾಸ್ಕರು—**ಅಪ್ರತಿಷ್ಕುತೋಽಪ್ರತಿಷ್ಕೃತೋಽಪ್ರತಿಸ್ಖಲಿತೋ ವಾ** (ನಿ. ೬-೧೬) ಎಂದು ನಿರ್ವಚನವನ್ನು ಹೇಳಿರುವರು. ಎಂದರೆ ನಮ್ಮ ಪ್ರಾರ್ಥನೆಯನ್ನು ತಿರಸ್ಕರಿಸುವವನಲ್ಲ. ಮಾತಿಗೆ ಎದುರಿಲ್ಲದ, ಪ್ರತಿ ಇಲ್ಲದ, ಅಪ್ರತಿಹತವಾದ ಎಂದೂ ಅರ್ಥವು. ಅಥವಾ ಸಂಗ್ರಾಮದಲ್ಲಿ (ಯುದ್ಧದಲ್ಲಿ) ಪರಾಙ್ಮುಖನಾಗದಿರುವ ಎಂದೂ ಅರ್ಥವು.

**ಸ್ವರ್ದೃಶಂ—ಸರ್ವದೃಶಂ ಸರ್ವಪದಾರ್ಥವಿಜ್ಞಾನಯುಕ್ತಂ ।** ಸರ್ವರಿಂದಲೂ ನೋಡಲ್ಪಡುವವನು ಎಂದರೆ ಸ್ವರ್ಗದಲ್ಲಿ (ಅಂತರಿಕ್ಷದಲ್ಲಿ) ಸೂರ್ಯರೂಪದಿಂದ ಪ್ರಕಾಶಿಸುತ್ತಿರುವ ಇವನನ್ನು ಎಲ್ಲರೂ ನೋಡುವರು ಎಂದಭಿಪ್ರಾಯವು. ಅಥವಾ ಸಮಸ್ತಪದಾರ್ಥಗಳ ವಿಷಯದಲ್ಲಿಯೂ ತಿಳುವಳಿಕೆಯುಳ್ಳವನು ಎಂದು ಇನ್ನೊಂದು ವಿಧವಾದ ಅರ್ಥವನ್ನು ವಿವರಿಸಿದ್ದಾರೆ.



॥ ಸಂಹಿತಾಪಾಠಃ ॥

ಮಂದ್ರಂ ಹೋತಾರಂ ಶುಚಿಮದ್ವಯಾವಿನಂ ದಮೂನಸಮುಕ್ಥ್ಯಂ ವಿಶ್ವಚರ್ಷಣಿಂ।
ರಥಂ ನ ಚಿತ್ರಂ ವಪುಷಾಯ ದರ್ಶತಂ ಮನುರ್ಹಿತಂ ಸದಮಿದ್ರಾಯ
ಈಮಹೇ ॥ ೧೫ ॥

ಪದಪಾಠಃ

ಮಂದ್ರಂ । ಹೋತಾರಂ । ಶುಚಿಂ । ಅದ್ವಯಾವಿನಂ । ದಮೂನಸಂ । ಉಕ್ಥ್ಯಂ । ವಿಶ್ವಽಚರ್ಷಣಿಂ ।
ರಥಂ । ನ । ಚಿತ್ರಂ । ವಪುಷಾಯ । ದರ್ಶತಂ । ಮನುಃಽಹಿತಂ । ಸದಂ । ಇತ್ । ರಾಯಃ ।
ಈಮಹೇ ॥ ೧೫ ॥

॥ ಸಾಯಣಭಾಷ್ಯಂ ॥

ಮಂದ್ರಂ ಸ್ತುತ್ಯಂ ಹೋತಾರಂ ದೇವಾನಾಮಾಹ್ವಾತಾರಂ ಶುಚಿಂ ಸರ್ವದಾ ಶುದ್ಧಮದ್ವಯಾವಿನಮಕುಟಿಲಂ ದಮೂನಸಂ ದಾನಮನಸಮುಕ್ಥ್ಯಂ ಶ್ರೇಷ್ಠಂ ವಿಶ್ವಚರ್ಷಣಿಂ ವಿಶ್ವಸ್ಯ ದ್ರಷ್ಟಾರಂ ಚಿತ್ರಂ ನಾನಾವಿಧವರ್ಣಂ ರಥಂ ನ ರಥಮಿವ ವಪುಷಾಯ ರೂಪಾರ್ಥಂ ದರ್ಶತಂ ದರ್ಶನೀಯಂ ಸದಮಿತ್ ಸದೈವ ಮನುರ್ಹಿತಂ ಸರ್ವೇಭ್ಯೋ ಮನುಷ್ಯೇಭ್ಯೋ ಹಿತಂ ತಮಗ್ನಿಂ ರಾಯೋ ಧನಾನೀಮಹೇ । ಯಾಚಾಮಹೇ । ಅತ್ರ ಯಾಚ್ಞಾರ್ಥತ್ವಾದಸ್ಯ ದ್ವಿಕರ್ಮಕತ್ವಂ ॥

॥ ಪ್ರತಿಪದಾರ್ಥ ॥

**ಮಂದ್ರಂ**—ಸ್ತುತ್ಯನೂ । **ಹೋತಾರಂ**—ದೇವತೆಗಳನ್ನು (ಯಜ್ಞಕ್ಕೆ) ಕರೆಯುವವನೂ । **ಶುಚಿಂ**—(ಸರ್ವದಾ) ಶುದ್ಧನೂ । **ಅದ್ವಯಾವಿನಂ**—ಕುಟಿಲತೆಯಿಲ್ಲದವನೂ । **ದಮೂನಸಂ**—ದಾನದ (ಉದಾರವಾದ) ಮನಸ್ಸುಳ್ಳವನೂ । **ಉಕ್ಥ್ಯಂ**—ಪ್ರಶಂಸಾರ್ಹನೂ । **ವಿಶ್ವಚರ್ಷಣಿಂ**—ಸಕಲವನ್ನೂ ನೋಡಬಲ್ಲವನೂ । **ರಥಂ ನ**—ರಥದಂತೆ । **ಚಿತ್ರಂ**—ನಾನಾವಿಧವಾದ್ವವರ್ಣವುಳ್ಳವನೂ । **ವಪುಷಾಯ**—ದೇಹ ಸೌಂದರ್ಯದಿಂದ **ದರ್ಶತಂ**—ದರ್ಶನೀಯನೂ । **ಸದಮಿತ್**—ಸರ್ವದಾ । **ಮನುರ್ಹಿತಂ**—ಮಾನವರಿಗೆ ಹಿತಕಾರಿಯೂ ಆದ ಅಗ್ನಿಯನ್ನು । **ರಾಯಃ**—ಧನವನ್ನು । **ಈಮಹೇ**—ಯಾಚಿಸುತ್ತೇವೆ.

॥ ಭಾವಾರ್ಥ ॥

ಸ್ತುತ್ಯನೂ, ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ, ಶುದ್ಧನೂ, ಕುಟಿಲತೆಯಿಲ್ಲದವನೂ, ಉದಾರವಾದ ಮನಸ್ಸುಳ್ಳವನೂ, ಪ್ರಶಂಸಾರ್ಹನೂ, ಸಕಲವನ್ನೂ ನೋಡಬಲ್ಲವನೂ, ರಥದಂತೆ ನಾನಾ ವಿಧವಾದ ವರ್ಣವುಳ್ಳವನೂ, ದರ್ಶನೀಯನೂ, ಸರ್ವದಾ ಮಾನವರಿಗೆ ಹಿತಕಾರಿಯೂ ಆದ ಅಗ್ನಿಯನ್ನು ಧನವನ್ನು ಯಾಚಿಸುತ್ತೇವೆ.

## English Translation.

We solicit wealth of the adorable (Agni), the invoker of the gods, the pure, the single-minded, the munificent, the commendable, the beholder of all, who is many-coloured like a chariot, elegant in form, and always friendly to mankind.

॥ ವಿಶೇಷವಿಷಯಗಳು ॥

**ಅದ್ವಯಾವಿನಂ—ದ್ವಯಹೀನಂ ಅಕುಟಿಲಂ** । ದ್ವಯಭಾವರಹಿತನಾದವನು ಎಂದರೆ ಮನಸ್ಸಿನಲ್ಲೊಂದು ವಿಧವಾಗಿ ಯೋಚಿಸುವುದು, ಕಾರ್ಯದಲ್ಲಿ ಮತ್ತೊಂದು ವಿಧವಾಗಿ ಮಾಡುವುದು, ಈ ವಿಧವಾದ ಸ್ವಭಾವವು ದುಷ್ಟಜನರಲ್ಲಿರುವುದು. ಅಂತಹ ಸ್ವಭಾವವಿಲ್ಲದವನು, ಅಕುಟಿಲನು ಎಂದಭಿಪ್ರಾಯವು.

**ದಮೂನಸಂ**— ಯಾಸ್ಕರು— **ದಮೂನಾಃ ಕ್ಷೇತ್ರಸಾಧಾಃ** (ನಿ. ೨–೨) ಎಂದು ನಿರ್ವಚನವನ್ನು ಹೇಳಿದ್ದಾರೆ. **ದಮೂನಾ ಅಗ್ನಿರುಚ್ಯತೇ ದಮುಮನಾಃ । ದಮೂನಾ** ಎಂಬ ಶಬ್ದಕ್ಕೆ ಅಗ್ನಿಯೆಂದು ಹೆಸರಿರುವುದು ಎಂದು ಹೇಳಿ—

> **ದಮೂನಾ ದಮುಮನಾ ವಾ, ದಾನಮನಾ ವಾ, ದಾಂತಮನಾ ವಾ । ಅಪಿ ವಾ ದಮ ಇತಿ ಗೃಹನಾಮ ತನ್ಮನಾಃ ಸ್ಯಾತ್ । ಮನೋ ಮನೋತೇಃ ।**
>
> (ನಿ. ೪–೪)

ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ ಇವನ ಮನಸ್ಸು ಸಂಯಮದಲ್ಲಿರುವುದು ಎಂದರೆ ಕ್ರೂರವಲ್ಲದಿರುವ ಮನಸ್ಸುಳ್ಳವನು ; ಅಥವಾ ತನ್ನನ್ನು ಸ್ತೋತ್ರಮಾಡುವವರಿಗೆ ಧನಾದಿಗಳನ್ನು ಕೊಡಬೇಕೆಂಬ ಮನಸುಳ್ಳವನು ; ಅಥವಾ ಯಮನಿಯಮಾದಿಗಳನ್ನು ಆಚರಿಸುವ ಪುರುಷಲ್ಲಿ ನೆಟ್ಟಮನಸ್ಸುಳ್ಳವನು ಎಂದರೆ ಅವರ ವಿಷಯದಲ್ಲಿ ಅನುಗ್ರಹಾತ್ಮಕವಾದ ಬುದ್ಧಿಯುಳ್ಳವನು ; ಅಥವಾ ದಮ ಎಂದರೆ ಮನೆಗೆ ಹೆಸರು, ಅದರಲ್ಲಿ ಮನಸ್ಸುಳ್ಳವನು ಎಂದರೆ ಯಜ್ಞಮಾಡುವ ಯಜಮಾನ ಮನೆಯಲ್ಲಿ ಗೃಹಪತಿರಗ್ನಿಃ ಎಂಬಭಿಧಾನದಿಂದ ಸದಾ ವಾಸಿಸುತ್ತಾ ಅವರಿಗೆ ಅನುಗ್ರಹಮಾಡುತ್ತಿರುವವನು ಎಂದು ಅರ್ಥವಿವರಣೆ ಮಾಡಿರುವರು.

# ಮೂರನೆಯ ಸೂಕ್ತವು.

## ಪೀ ಠಿ ಕೆ.

೧. **ಅಗ್ನಿಗೂ ಅಗ್ನಿಷ್ಟೋಮಕ್ಕೂ ಇರುವ ತಾದಾತ್ಮ್ಯ, ಅಗ್ನಿಯಪ್ರಭಾವ**—ಪ್ರಕೃತವಾದ ಸೂಕ್ತವೂ ಇದರ ಹಿಂದಿನ ಎಂದರೆ “ **ವೈಶ್ವಾನರಾಯ** ” ಎಂಬ ಮಂತ್ರದಿಂದ ಪ್ರಾರಂಭವಾಗುವ ಎರಡನೆಯ ಸೂಕ್ತವೂ ಸಹ ಆಗ್ನಿಮಾರುತ ಶಸ್ತ್ರದ ಪಠನದ ಕಾಲದಲ್ಲಿ ಪಠಿತವಾಗತಕ್ಕವು ಎಂದು ಆಶ್ವಲಾಯನ ಶ್ರೌತಸೂತ್ರದ

ವಿಧಿಯಿಂದ ನಿರ್ದೇಶಿಸಲ್ಪಟ್ಟಿದೆ. ಆದರೆ, ಹಿಂದಿನ ಸೂಕ್ತವು ಪೃಷ್ಠ್ಯಾಭಿಪ್ಲವಿಕಾಖ್ಯವಾದ ಕರ್ಮಗಳ ತೃತೀಯ ದಿನದಲ್ಲಿ ಪಠಿತವಾಗತಕ್ಕದ್ದೆಂದು ನಿಯಮ. **" ವೈಶ್ವಾನರಾಯ ಧಿಷಣಾಮೃತಾವೃಧ ಇತ್ಯಾಗ್ನಿಮಾರುತಸ್ಯ ಪ್ರತಿಪದಂತಃ "** ಎಂದು ಐತರೇಯಾರಣ್ಯಕದ ವಾಕ್ಯವು ತಿಳಿಸುತ್ತದೆ (೧-೫-೩) ಪ್ರಕೃತ ಸೂಕ್ತವು **" ಅಸ್ಯ ಸೂಕ್ತಸ್ಯಾಗ್ನಿಷ್ಟೋಮೇ ಆಗ್ನಿಮಾರುತೇ ಶಸ್ತ್ರೇ ವಿನಿಯೋಗಃ "** ಅಗ್ನಿಷ್ಟೋಮದ ಕಾಲದಲ್ಲಿ ಪಠಿತವಾಗಬೇಕಾದ ಆಗ್ನಿಮಾರುತಶಸ್ತ್ರಕ್ಕೆ ಸಂಬಂಧಿಸಿದ್ದು ಎಂದು ತಿಳಿಸಿದೆ (ಆ. ಶ್ರೌ. ಸೂ. ೫-೨೦).

ಈ ಸೂಕ್ತದ ಮಂತ್ರಗಳಿಂದ ಪ್ರಶಂಸಿತವಾಗಿರುವ ವೈಶ್ವಾನರತತ್ತ್ವದ ಮಹಿಮೆಯು ಅತ್ಯಂತ ಪೂಜ್ಯವಾದುದೂ, ಧ್ಯಾನಯೋಗ್ಯವಾದುದೂ ಆಗಿದೆ. ಈ ವೈಶ್ವಾನರತತ್ತ್ವವು ವಿಶ್ವಕ್ಕೆ ಮೂಲವಾಗಿರುವುದೂ, ವಿಶ್ವಾಧಾರವಾಗಿರುವುದೂ ಆದ ಯಜ್ಞಪ್ರತಿನಿಧಿಯಾಗಿದೆ. ಆದುದರಿಂದ **ಅಗ್ನಿಷ್ಟೋಮ, ಆಗ್ನಿಮಾರುತಶಸ್ತ್ರ** ಇವುಗಳ ಸ್ವರೂಪವೇನೆಂಬುದನ್ನು ತಿಳಿದು ನಂತರ ತದಂಗವಾದ ಈ ಸೂಕ್ತದಲ್ಲಿ ಸ್ತುತನಾಗಿರುವ ವೈಶ್ವಾನರ ಸ್ವರೂಪವನ್ನು ಅರಿಯಬೇಕು.

**" ಆಗ್ನೇಯಮಗ್ನಿಷ್ಟೋಮ ಆಲಭತೇ । ಅಗ್ನಿರ್ವಾ ಅಗ್ನಿಷ್ಟೋಮಃ " ॥**

(ಶ. ಬ್ರಾ. ೫-೧-೩-೧)

ಎಂಬ ವಾಕ್ಯಗಳಲ್ಲಿ ಅಗ್ನಿಗೂ ಅಗ್ನಿಷ್ಟೋಮಕ್ಕೂ ತಾದಾತ್ಮ್ಯವನ್ನೇ ಹೇಳಿದೆ. ಇಂತಹ ಸಂದರ್ಭಗಳಲ್ಲಿ ಸಾಯಣರು ಅಗ್ನಿಷ್ಟೋಮಶಬ್ದಾರ್ಥವನ್ನು ವಿಶದವಾಗಿ ವಿವರಿಸಿದ್ದಾರೆ. **" ಅಗ್ನಿಃ ಸೂಯತೇಽಸ್ಮಿನ್ ಇತ್ಯಗ್ನಿಷ್ಟೋಮೋ ನಾಮ ಸಾಮ ; ತಸ್ಮಿನ್ ವಿಷಯಭೂತಃ ಆಗ್ನೇಯಂ ಆಲಭತೇ " " ಅಗ್ನಿಷ್ಟೋಮಸಂಸ್ಥಃ ಕ್ರತುಃ "** ಇತ್ಯಾದಿ ವಿವರಣವಾಕ್ಯಗಳಿಂದ ಅಗ್ನಿಷ್ಟೋಮವೆಂದರೆ ಸೋಮಯಾಗದ ಕೊನೆಯಭಾಗದ ನಿರ್ದಿಷ್ಟಕಾಲದಲ್ಲಿ ಪಠಿಸತಕ್ಕ ಮಂತ್ರವೆಂದು ಕೆಲವು ಕಡೆಗಳಲ್ಲಿಯೂ ಮತ್ತು ಜ್ಯೋತಿಷ್ಟೋಮಯಾಗದ ಅಂಗವಾದ ಪ್ರತ್ಯೇಕವಾದ ಕ್ರತುವಿಶೇಷವೆಂದು ಇನ್ನೂ ಕೆಲವೆಡೆಗಳಲ್ಲಿಯೂ ಇದರ ಸ್ವರೂಪವನ್ನು ತಿಳಿಸಿದೆ. ಎರಡನೆಯ ವಿವರಣೆಯಂತೆ ಅಗ್ನಿಷ್ಟೋಮವು ಕತ್ರುವಿಶೇಷವಾದರೆ ವಿಶ್ವಜ್ಯೋತಿರೂಪವಾದ ವೈಶ್ವಾನರಾಗ್ನಿಗೂ ಜ್ಯೋತಿಷ್ಟೋಮಾಂಗವಾದ ಅಗ್ನಿಷ್ಟೋಮಕ್ಕೂ ಸಾಕ್ಷಾತ್ಸಂಬಂಧವಿರುತ್ತದೆ. ಅದರಲ್ಲಿಯೂ ಸಹ ಅಗ್ನಿಪ್ರಶಂಸಾತ್ಮಕವಾದ ಮಂತ್ರಗಳಿರುವುದರಿಂದ ಅದಕ್ಕೆ ಅಗ್ನಿಷ್ಟೋಮವೆಂಬ ಹೆಸರು ಪ್ರಸಿದ್ಧಿಯಾಯಿತೆಂದು ಐತರೇಯಬ್ರಾಹ್ಮಣದಲ್ಲಿ ಇತಿಹಾಸ ರೂಪದಲ್ಲಿ ಇದರ ಸ್ವರೂಪವು ವರ್ಣಿತವಾಗಿರುವುದಲ್ಲದೆ, ಇತರ ಕ್ರತುಗಳೂ ಸಹ ಇದರ ಮಾಹಾತ್ಮ್ಯವನ್ನು ಅಧಿಕಮಾಡತಕ್ಕ ಕ್ರಿಯಾವಿಶೇಷಗಳಾಗಿವೆಯೆಂಬ ವಿಷಯವನ್ನು ತಿಳಿಸಿದೆ (ಐ. ಬ್ರಾ. ೧೪. ೩೯-೪೪) ಅದನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸುವೆವು—

**ದೇವಾ ವಾ ಅಸುರೈರ್ಯುದ್ಧಮುಪಪ್ರಾಯನ್ ವಿಜಯಾಯ ತಾನಗ್ನಿರ್ನಾನ್ವಕಾಮಯತೈತುಂ ತಂ ದೇವಾ ಅಬ್ರುವನ್ನಪಿ ತ್ವಮೇಹ್ಯಸ್ಮಾಕಂ ವೈ ತ್ವಮೇಕೋಽಸೀತಿ ಸ ನಾಸ್ತುತೋಽನ್ವೇಷ್ಯಾಮೀತ್ಯಬ್ರವೀತ್ಸ್ತುತನುಮೇತಿ ತಥೇತಿ ತಂ ತೇ ಸಮುತ್ಕ್ರಮ್ಯೋಪನಿವೃತ್ಯಾಸ್ತುವಂಸ್ತಾನ್ ಸ್ತುತೋಽನುಪ್ರೈತ್ಸ ತ್ರಿಶ್ರೇಣಿರ್ಭೂತ್ವಾ ತ್ರ್ಯನೀಕೋಽಸುರಾನ್ಯುದ್ಧಮುಪಪ್ರಾಯದ್ವಿಜಯಾಯ ತ್ರಿಶ್ರೇಣಿರಿತಿ ಛಂದಾಂಸ್ಯೇವ ಶ್ರೇಣೀರಕುರುತ ತ್ರ್ಯನೀಕ ಇತಿ ಸವನಾನ್ಯೇವಾನೀಕಾನಿ ತಾನಸಂಭಾವ್ಯಂ ಪರಾಭಾವಯತ್ತತೋ ವೈ ದೇವಾ ಅಭವನ್ಪರಾಸುರಾ ಭವತ್ಯಾತ್ಮನಾ ಪರಾಸ್ಯ ದ್ವಿಷನ್ಪಾಪ್ಮಾ ಭ್ರಾತೃವ್ಯೋ ಭವತಿ ಯ ಏವಂ ವೇದ ॥**

ದೇವತೆಗಳು ಅಸುರರನ್ನು ಜಯಿಸಬೇಕೆಂಬುದ್ದೇಶದಿಂದ ಅವರೊಡನೆ ಯುದ್ಧವನ್ನಾರಂಭಿಸಿದರು. ಆದರೆ ಅಗ್ನಿಯು ಅವರೊಡನೆ ಸೇರಿ ಅವರಿಗೆ ಸಹಾಯಮಾಡಲಿಷ್ಟಪಡಲಿಲ್ಲ. ಆಗ ದೇವತೆಗಳು ಅಗ್ನಿಯನ್ನು ಕುರಿತು "ನೀನೂ ಸಹ ನಮ್ಮವನಾಗಿರುವೆ. ನಮಗೆ ಸಹಾಯಮಾಡಲು ನಮ್ಮೊಡನೆ ಸೇರಲೇ ಬೇಕು" ಎಂದು ಪ್ರಾರ್ಥಿಸಿದರು. ಆಗ ಅಗ್ನಿಯು "ನೀವು ನನ್ನ ಪ್ರಶಂಸಾತ್ಮಕವಾದ ಮಂತ್ರಗಳನ್ನು ಪಠಿಸಿ ನನ್ನನ್ನು ಸ್ತುತಿಸದಿದ್ದರೆ ನಾನು ನಿಮ್ಮೊಡನೆ ಬರಲಾರೆ" ಎಂದನು. ಅವರೆಲ್ಲರೂ ತದನುಸಾರವಾಗಿ ಅಗ್ನಿಯನ್ನು ಸ್ತುತಿಸಿದರು. ಒಡನೆಯೇ ಅಗ್ನಿಯು ಅವರೊಡನೆ ಹೊರಟನು. ಆಗ ಅಗ್ನಿಯು ತನ್ನನ್ನು ಮೂರು ಶ್ರೇಣಿಗಳಾಗಿ ವಿಭಾಗಿಸಿಕೊಂಡು ಮೂರು ಗುಂಪುಗಳಲ್ಲಿ ಅಸುರಜಯಾರ್ಥವಾಗಿ ಹೊರಟನು. ಛಂದಸ್ಸುಗಳೇ ಈ ಮೂರು ಶ್ರೇಣಿಗಳೂ, ಮೂರು ಸವನಗಳೇ ಮೂರು ಅನೀಕಗಳೂ ಆದವು. ಈ ಪರಿಕರಗಳೊಡನೆ ಯುದ್ಧಮಾಡಿ ಅಸುರರನ್ನು ಸೋಲಿಸಿ ಓಡಿಸಿದನು. ಈ ತತ್ತ್ವವನ್ನರಿತವನು ತನ್ನನ್ನು ದ್ವೇಷಿಸತಕ್ಕ ಶತ್ರುವನ್ನು ಸೋಲಿಸಿ ನಾಶಮಾಡುತ್ತಾನೆ.

**ಸಾ ವಾ ಏಷಾ ಗಾಯತ್ರ್ಯೇವ ಯದಗ್ನಿಷ್ಟೋಮಶ್ಚತುರ್ವಿಂಶತ್ಯಕ್ಷರಾ ವೈ ಗಾಯತ್ರೀ ಚತುರ್ವಿಂಶತಿರಗ್ನಿಷ್ಟೋಮಸ್ಯ ಸ್ತುತಶಸ್ತ್ರಾಣಿ ತದ್ವೈ ಯದಿದಮಾಹುಃ ಸುಧಾಯಾಂ ಹ ವೈ ವಾಜೀ ಸುಹಿತೋ ದಧಾತೀತಿ ಗಾಯತ್ರೀ ವೈ ತನ್ನ ಹ ವೈ ಗಾಯತ್ರೀ ಕ್ಷವಮಾರಮತ ಊರ್ಧ್ವಾಹ ವಾ ಏಷಾ ಯಜಮಾನಮಾದಾಯ ಸ್ವರೇತೀತ್ಯಗ್ನಿಷ್ಟೋಮೋ ವೈ ತನ್ನ ಹ ವಾ ಅಗ್ನಿಷ್ಟೋಮಃ ಕ್ಷವಮಾ ರಮತ ಊರ್ಧ್ವೋ ಹ ವಾ ಏಷ ಯಜಮಾನಮಾದಾಯ ಸ್ವರೇತಿ ಸ ವಾ ಏಷ ಸಂವತ್ಸರ ಏವ ಯದಗ್ನಿಷ್ಟೋಮಶ್ಚತುರ್ವಿಂಶತ್ಯರ್ಧಮಾಸೋ ವೈ ಸಂವತ್ಸರಶ್ಚತುರ್ವಿಂಶತಿರಗ್ನಿಷ್ಟೋಮಸ್ಯ ಸ್ತುತಶಸ್ತ್ರಾಣಿ ತಂ ಯಥಾ ಸಮುದ್ರಂ ಸ್ರೋತ್ಯಾ ಏವಂ ಸರ್ವೇ ಯಜ್ಞಕ್ರತವೋಽಪಯಂತಿ ॥**

(ಐ. ಬ್ರಾ. ೧೪–೩೯)

ಗಾಯತ್ರಿಯಲ್ಲಿಯೂ ಇಪ್ಪತ್ತುನಾಲ್ಕು ಅಕ್ಷರಗಳಿರುವಂತೆಯೇ ಅಗ್ನಿಷ್ಟೋಮದಲ್ಲೂ ಸಹ ಇಪ್ಪತ್ತುನಾಲ್ಕು ಸ್ತೋತ್ರಗಳೂ, ಶಸ್ತ್ರಗಳೂ ಇರುವುದರಿಂದ ಅಗ್ನಿಷ್ಟೋಮಕ್ಕೂ ಗಾಯತ್ರಿಗೂ ಅಭೇದವನ್ನು ಹೇಳಬೇಕು. ಆದುದರಿಂದಲೇ ಉತ್ತಮವಾದ ಭಾರವನ್ನು ವಹಿಸುವ ಅಶ್ವವು ಯಜಮಾನನಿಗೆ ಹಿತಕರವಾದ ವಾಹನವಾಗಿರುತ್ತದೆ ಎಂದು ಲೋಕವಾದವಿರುತ್ತದೆ. ಇದೇ ಮಹತ್ವವುಳ್ಳ ಗಾಯತ್ರಿಯು ಕೇವಲ ಪಾರ್ಥಿವವಾದ ಅಸ್ತಿತ್ವದಲ್ಲಿಯೇ ತೃಪ್ತವಾಗದೆ ತನ್ನೊಡನೆ ಯಜ್ಞಕರ್ತನನ್ನು ಕರೆದುಕೊಂಡು ಸ್ವರ್ಗಕ್ಕೆ ಹಾರಿಹೋಗುತ್ತದೆ. ಅದೇ ರೀತಿಯಲ್ಲಿ ಅಗ್ನಿಷ್ಟೋಮವೂ ಸಹ ಕೇವಲ ಪಾರ್ಥಿವವಾದ ಅಸ್ತಿತ್ವದಲ್ಲಿ ತೃಪ್ತವಾಗದೇ ಯಜ್ಞಕರ್ತನನ್ನೂ ಕರೆದುಕೊಂಡು ಸ್ವರ್ಗಕ್ಕೆ ಹಾರಿಹೋಗುತ್ತದೆ. ಸಂವತ್ಸರದಲ್ಲಿ ಇಪ್ಪತ್ತುನಾಲ್ಕು ಅರ್ಧಮಾಸಗಳಿರುವಂತೆ ಅಗ್ನಿಷ್ಟೋಮದಲ್ಲಿಯೂ ಇಪ್ಪತ್ತುನಾಲ್ಕು ಸ್ತೋತ್ರಗಳೂ ಶಸ್ತ್ರಮಂತ್ರಗಳೂ ಇರುವುದರಿಂದ ಅಗ್ನಿಷ್ಟೋಮವೇ ಸಂವತ್ಸರಾತ್ಮಕವಾಗಿದೆ ಸಮುದ್ರದಲ್ಲಿ ಸಕಲ ಪ್ರವಾಹಗಳೂ ಬಂದುಸೇರಿ ಐಕ್ಯವಾಗುವಂತೆ, ಈ ಅಗ್ನಿಷ್ಟೋಮದಲ್ಲಿ ಇತರ ಸಕಲ ಕ್ರಿಯಾಕಲಾಪಗಳೂ ಸಹ ಐಕ್ಯವಾಗುತ್ತವೆ.

**ದೀಕ್ಷಣೀಯೇಷ್ಟಿಸ್ತಾಯತೇ ತಾಮೇವಾನು ಯಾಃ ಕಾಶ್ಚೇಷ್ಟಯಸ್ತಾಃ ಸರ್ವಾ ಅಗ್ನಿಷ್ಟೋಮಮಪಿಯಂತೀಳಾಮುಪಹ್ವಯತ ಇಳಾವಿಧಾ ವೈ ಪಾಕಯಜ್ಞಾ ಇಳಾಮೇವಾನು ಯೇ ಕೇ ಚ ಪಾಕಯಜ್ಞಾಸ್ತೇ ಸರ್ವೇಽಗ್ನಿಷ್ಟೋಮಮಪಿಯಂತಿ ಸಾಯಂ ಪ್ರಾತರಗ್ನಿಹೋತ್ರಂ ಜುಹ್ವತಿ**

**ಸಾಯಂಪ್ರಾತರ್ವ್ರತಂ ಪ್ರಯಚ್ಛಂತಿ ಸ್ವಾಹಾಕಾರೇಣಾಗ್ನಿಹೋತ್ರಂ ಜುಹ್ವತಿ ಸ್ವಾಹಾಕಾರೇಣ ವ್ರತಂ ಸ್ವಾಹಾಕಾರಮೇವಾನ್ವಗ್ನಿಹೋತ್ರಮಗ್ನಿಷ್ಟೋಮಮಪ್ಯೇತಿ ಪಂಚದಶ ಪ್ರಾಯಣೀಯೇ ಸಾಮಧೇನೀರನ್ವಾಹ ಪಂಚದಶ ದರ್ಶಪೂರ್ಣಮಾಸಯೋಃ ಪ್ರಾಯಣೀಯಮೇವಾನು ದರ್ಶಪೂರ್ಣಮಾಸಾವಗ್ನಿಷ್ಟೋಮಮಪೀತಃ ॥**

(ಐ. ಬ್ರಾ. ೧೪–೪೦)

ದೀಕ್ಷಾಯಜ್ಞವು ನೆರವೇರಿಸಲ್ಪಡುವಾಗ ಸಕಲ ಹೋಮಗಳೂ ಸಹ ಅಗ್ನಿಷ್ಟೋಮದಲ್ಲಿಯೇ ಐಕ್ಯವನ್ನು ಹೊಂದುತ್ತವೆ. ಅನ್ನಾತ್ಮಕವಾದ ಇಳೆಯನ್ನು ಪ್ರಾರ್ಥಿಸಿ, ತದನುಗ್ರಹದಿಂದ ಪಾಕಯಜ್ಞವನ್ನು ನೆರವೇರಿಸುವಾಗ ಅಲ್ಲಿ ಅರ್ಪಿತವಾದ ಆಹುತಿಗಳೆಲ್ಲಾ ಅಗ್ನಿಷ್ಟೋಮವನ್ನೇ ಸೇರುವುವು. ಅಗ್ನಿಹೋತ್ರಕ್ರಿಯಾಕಾಲದಲ್ಲಿ ಸಾಯಂಕಾಲವೂ ಪ್ರಾತಃಕಾಲವೂ ಸ್ವಾಹಾಕಾರಪೂರ್ವಕವಾಗಿ ಅರ್ಪಿತವಾಗುವ ಪುರೋಡಾಶಾದಿಗಳನ್ನೊಳಗೊಂಡ ಅಗ್ನಿಹೋತ್ರವೂ ಸಹ ಅಗ್ನಿಷ್ಟೋಮದಲ್ಲಿಯೇ ಅಂತರ್ಗತವಾಗುತ್ತದೆ. ದರ್ಶಪೂರ್ಣಮಾಸಯಾಗಗಳಲ್ಲಿ ಪ್ರಾಯಣೀಯಾತ್ಮಕವಾದ ಹದಿನೈದು ಸಾಮಧೇನೀ ಮಂತ್ರಗಳನ್ನು ಪಠಿಸುತ್ತಾ, ಪ್ರಾಯಣೀಯಾಹುತಿಗಳನ್ನರ್ಪಿಸಲ್ಪಟ್ಟ ದರ್ಶಪೂರ್ಣಮಾಸಗಳೂ ಸಹ ಅಗ್ನಿಷ್ಟೋಮದಲ್ಲೇ ತಾದಾತ್ಮ್ಯವನ್ನು ಪಡೆಯುತ್ತವೆ.

**ಸೋಮಂ ರಾಜಾನಂ ಕ್ರೀಣಂತ್ಯೌಷಧೋ ವೈ ಸೋಮೋ ರಾಜೌಷಧಿಭಿಸ್ತಂ ಭಿಷಜ್ಯಂತಿ ಯಂ ಭಿಷಜ್ಯಂತಿ ಸೋಮಮೇವ ರಾಜಾನಂ ಕ್ರೀಯಮಾಣಮನು ಯಾನಿ ಕಾನಿ ಚ ಭೇಷಜಾನಿ ತಾನಿ ಸರ್ವಾಣ್ಯಗ್ನಿಷ್ಟೋಮಮಪಿಯಂತ್ಯಗ್ನಿಮಾತಿಥ್ಯೇ ಮಂಥಂತ್ಯಗ್ನಿಂ ಚಾತುರ್ಮಾಸ್ಯೇಷ್ವಾತಿಥ್ಯಮೇವಾನು ಚಾತುರ್ಮಾಸ್ಯಾನ್ಯಗ್ನಿಷ್ಟೋಮಮಪಿಯಂತಿ ಪಯಸಾ ಪ್ರವರ್ಗ್ಯೇ ಚರಂತಿ ಪಯಸಾ ದಾಕ್ಷಾಯಣಯಜ್ಞೇ ಪ್ರವರ್ಗ್ಯಮೇವಾನು ದಾಕ್ಷಾಯಣಯಜ್ಞೋಽಗ್ನಿಷ್ಟೋಮಮಪ್ಯೇತಿ ಪಶುರುಪವಸಥೇ ಭವತಿ ತಮೇವಾನು ಯೇ ಕೇ ಚ ಪಶುಬಂಧಾಸ್ತೇ ಸರ್ವೇಽಗ್ನಿಷ್ಟೋಮಮಪಿಯಂತೀಳಾದಧೋ ನಾಮ ಯಜ್ಞಕ್ರತುಸ್ತಂ ದಧ್ನಾ ಚರಂತಿ ದಧ್ನಾ ದಧಿಘರ್ಮೇ ದಧಿಘರ್ಮಮೇವಾನ್ವಿಳಾದಧೋಽಗ್ನಿಷ್ಟೋಮಮಪ್ಯೇತಿ ॥**

(ಐ. ಬ್ರಾ. ೧೪–೪೦)

ಓಷಧಿಗಳಿಗೆಲ್ಲಾ ರಾಜನಾದ ಸೋಮದ ವಿಕ್ರಯಣವು ಶಾಸ್ತ್ರೋಕ್ತವಾಗಿ ನಡೆಯುತ್ತದೆ. ಈ ಓಷಧಿಗಳ ಸಹಾಯದಿಂದಲೇ ರುಗಾರ್ತರಾದವರನ್ನೆಲ್ಲಾ ಗುಣಪಡಿಸುತ್ತಾರೆ. ಆದುದರಿಂದ ಸೋಮವಿಕ್ರಯಣದನಂತರ, ಔಷಧಿರೂಪವಾದ ಯಾವ ಯಾವ ಓಷಧಿಗಳಿರುತ್ತವೆಯೋ ಅವೆಲ್ಲದರ ಜೊತೆಯಲ್ಲಿಯೂ ಸಹ ಸೋಮರಾಜನು ಅಗ್ನಿಷ್ಟೋಮಾತ್ಮಕನಾಗುತ್ತಾನೆ. ಚಾತುರ್ಮಾಸ್ಯಗಳಲ್ಲಿ ಆತಿಥ್ಯಕ್ರಿಯಾಂಗವಾಗಿ ಅಗ್ನಿಮಥನವು ನೆರವೇರಿಸಲ್ಪಡುತ್ತದೆ. ಅಗ್ನಿಮಥನಪೂರ್ವಕವಾದ ಈ ಚಾತುರ್ಮಾಸ್ಯ ಕ್ರಿಯೆಗಳೆಲ್ಲವೂ ಸಹ ಅಗ್ನಿಷ್ಟೋಮದಲ್ಲೇ ಅಂತರ್ಗತವಾಗುತ್ತವೆ. ಪ್ರವರ್ಗ್ಯಯಾಗಕ್ಕೆ ಪಯಸ್ಸಿನೊಡನೆ ಸಿದ್ಧರಾಗುತ್ತಾರೆ. ಇದೇ ಪಯಃಸಾಧನವು ದಾಕ್ಷಾಯಣಯಜ್ಞಕ್ಕೂ ಪರಿಕರವಾಗಿರುತ್ತದೆ. ಆದುದರಿಂದ ಪ್ರವರ್ಗ್ಯಪೂರ್ವಕವಾಗಿ ದಾಕ್ಷಾಯಣವು ಅಗ್ನಿಷ್ಟೋಮವನ್ನು ಸೇರಿಕೊಳ್ಳುತ್ತದೆ. ಪಶುಯಾಗವೆಲ್ಲವೂ ಸಹ ಪ್ರಥಮದಿನದಲ್ಲಿ ಅರ್ಪಿತವಾಗುವ ಪಶುವಿನ ದ್ವಾರಾ ಅಗ್ನಿಷ್ಟೋಮಾಂತರ್ಗತವಾಗುತ್ತವೆ. ದಧಿಯಿಂದ ಇಳಾದಧಿಕ್ರಿಯೆಯು ನೆರವೇರಿಸಲ್ಪಡುತ್ತದೆ. ಅದರಂತೆಯೇ ದಧಿಘರ್ಮಕ್ರಿಯೆಯೂ ನೆರವೇರುತ್ತದೆ. ಆದುದರಿಂದ ದಧಿಘರ್ಮಕ್ರಿಯೆಯು ಈಡಾದಧದ ಸಹಾಯದಿಂದ ಅಗ್ನಿಷ್ಟೋಮದಲ್ಲಿ ಐಕ್ಯವನ್ನು ಹೊಂದುತ್ತದೆ.

ಇತಿ ನು ಪುರಸ್ತಾದಥೋಪರಿಷ್ಟಾತ್ಪಂಚದಶೋಕ್ಥ್ಯಸ್ಯ ಸ್ತೋತ್ರಾಣಿ ಪಂಚದಶ ಶಸ್ತ್ರಾಣಿ ಸ
ಮಾಸೋ ಮಾಸಥಾ ಸಂವತ್ಸರೋ ವಿಹಿತಃ ಸಂವತ್ಸರೋಽಗ್ನಿರ್ವೈಶ್ವಾನರೋಽಗ್ನಿರಗ್ನಿಷ್ಟೋ-
ಮಃ ಸಂವತ್ಸರಮೇವಾನೂಕ್ಥ್ಯೋಽಗ್ನಿಷ್ಟೋಮಮಪ್ಯೇತ್ಯುಕ್ಥ್ಯಮಪಿ ಯಂತಮನು ವಾಜ-
ಪೇಯೋಽಪ್ಯೇತ್ಯುಕ್ಥ್ಯೋ ಹಿ ಸ ಭವತಿ ದ್ವಾದಶರಾತ್ರೇಃ ಪರ್ಯಾಯಾಸ್ಸರ್ವೇ ಪಂಚದಶಾಸ್ತೇ
ದ್ವೌ ದ್ವೌ ಸಂಪದ್ಯ ತ್ರಿಂಶದೇಕವಿಂಶಂ ಷೋಳಶಿಸಾಮ ತ್ರಿವೃತ್ಸಂಧಿಃ ಸಾ ತ್ರಿಂಶತ್ಸ ಮಾಸ-
ಸ್ತ್ರಿಂಶನ್ಮಾಸಸ್ಯ ರಾತ್ರಯೋ ಮಾಸಥಾ ಸಂವತ್ಸರೋ ವಿಹಿತಃ ಸಂವತ್ಸರೋಽಗ್ನಿರ್ವೈಶ್ವಾನ-
ರೋಽಗ್ನಿರಗ್ನಿಷ್ಟೋಮಃ ಸಂವತ್ಸರಮೇವಾನ್ವತಿರಾತ್ರೋಽಗ್ನಿಷ್ಟೋಮಮಪ್ಯೇತ್ಯತಿರಾತ್ರಮಪಿ
ಯಂತಮನ್ವಪ್ತೋರ್ಯಾಮೋಽಪ್ಯೇತ್ಯತಿರಾತ್ರೋ ಹಿ ಸ ಭವತಿ ॥

(ಐ. ಬ್ರಾ. ೧೪-೪೧)

ಹಿಂದಿನ ಕರ್ಮಗಳಿಗೆ ವಿಧಿಸಿದ ಕಲಾಪಗಳೇ ಮುಂದಿನ ಕರ್ಮಗಳಿಗೂ ಅನ್ವಿತವಾಗುವುವು. ಉಕ್ಥ್ಯದಲ್ಲಿ ಹದಿನೈದು ಸ್ತೋತ್ರಗಳೂ ಹದಿನೈದು ಶಸ್ತ್ರಗಳೂ ಇರುತ್ತವೆ. ಈ ಮೂವತ್ತೂ ಮಾಸಾವಯವಗಳಾಗಿವೆ. ಈ ಮಾಸಗಳ ಕ್ರಮದಿಂದ ಸಂವತ್ಸರವು ಪೂರ್ಣವಾಗುತ್ತದೆ. ಅಗ್ನಿವೈಶ್ವಾನರನೇ ಸಂವತ್ಸರವು. ಅಗ್ನಿಯೇ ಅಗ್ನಿಷ್ಟೋಮವು. ವಾಜಪೇಯವೂ ಸಹ ಉಕ್ಥ್ಯದ ಪ್ರಕಾರಾಂತರವೇ ಆಗಿರುವುದರಿಂದ ಉಕ್ಥ್ಯದ ಸಂಕಲ್ಪವಾದೊಡನೆಯೇ ವಾಜಪೇಯದ ಸಂಕಲ್ಪವೂ ಆದಂತಾಯಿತು. ಪಂಚದಶಸ್ತೋಮದಲ್ಲಿ ರಾತ್ರಿಪರ್ಯಾಯಗಳು ಹನ್ನೆರಡಿವೆ. ಇದು ದ್ವಿಗುಣಿತವಾದರೆ ಮೂವತ್ತಾಗುತ್ತದೆ. ಷೋಡಶನಾಮವು ಏಕವಿಂಶಾತ್ಮಕವಾಗಿಯೂ ಸಂಧಿಯು ತ್ರಿವೃತವಾಗಿಯೂ ಇದೆ. ಇವು ಮೂವತ್ತು ಮಾಸದಲ್ಲಿರುವ ಮೂವತ್ತು ರಾತ್ರಿಗಳಿಗೆ ಸಮಾನವಾಗಿವೆ. ಇಂತಹ ಮಾಸಗಳ ರಚನೆಯಿಂದಲೇ ಸಂವತ್ಸರವು. ಈ ಸಂವತ್ಸರರೂಪವೇ ಅಗ್ನಿವೈಶ್ವಾನರನು. ಅಗ್ನಿಷ್ಟೋಮವೇ ಅಗ್ನಿಯು. ಆದುದರಿಂದ ಸಂವತ್ಸರದ ಮೂಲಕ ಅತಿರಾತ್ರವು ಅಗ್ನಿಷ್ಟೋಮದಲ್ಲಿ ಸಂಕಲ್ಪಿತವಾಗಿದೆ.

ಏತದ್ವೈ ಯೇ ಚ ಪುರಸ್ತಾದ್ಯೇ ಚೋಪರಿಷ್ಟಾದ್ಯಜ್ಞಕ್ರತವಸ್ತೇ ಸರ್ವೇಽಗ್ನಿಷ್ಟೋಮಮಪಿಯಂತಿ
ತಸ್ಯ ಸಂಸ್ತುತಸ್ಯ ನವತಿಶತಂ ಸ್ತೋತ್ರಿಯಾಃ ಸಾ ಯಾ ನವತಿಸ್ತೇ ದಶ ತ್ರಿವೃತೋಽಥ ಯಾ
ನವತಿಸ್ತೇ ದಶಾಥ ಯಾ ದಶ ತಾಸಾಮೇಕಾ ಸ್ತೋತ್ರಿಯೋದೇತಿ ತ್ರಿವೃತ್ಪರಿಶಿಷ್ಯತೇ
ಸೋಽಸಾವೇಕವಿಂಶೋಽಧ್ಯಾಹಿತಸ್ತಪತಿ ವಿಷುವಾನ್ವಾ ಏಷ ಸ್ತೋಮಾನಾಂ ದಶ ವಾ
ಏತಸ್ಮಾದರ್ವಾಂಚಸ್ತ್ರಿವೃತೋ ದಶ ಪರಾಂಚೋ ಮಧ್ಯ ಏಷ ಏಕವಿಂಶ ಉಭಯತೋಽ-
ಧ್ಯಾಹಿತಸ್ತಪತಿ ತದ್ಯಾಸೌ ಸ್ತೋತ್ರಿಯೋದೇತಿ ಸೈತಸ್ಮಿನ್ನಧ್ಯೂಳ್ಹಾ ಸ ಯಜಮಾನಸ್ತದ್ದೈವಂ
ಕ್ಷತ್ರಂ ಸಹೋಬಲಮಶ್ನುತೇ ಹ ವೈ ದೈವಂ ಕ್ಷತ್ರಂ ಸಹೋಬಲಮೇತಸ್ಯ ಹ ಸಾಯುಜ್ಯಂ
ಸರೂಪತಾಂ ಸಲೋಕತಾಮಶ್ನುತೇ ಯ ಏವಂ ವೇದ ॥

(ಐ. ಬ್ರಾ. ೧೪-೪೧)

ಆದುದರಿಂದ ಅಗ್ನಿಷ್ಟೋಮಕ್ಕೆ ಪೂರ್ವಭಾವಿಯಾದುದೂ, ಪಶ್ಚಾತ್ಕ್ರಿಯಮಾಣವಾದುದೂ ಆದ ಯಜ್ಞಕರ್ಮಗಳೆಲ್ಲವೂ ಸಹ ಅಗ್ನಿಷ್ಟೋಮದಲ್ಲಿಯೇ ಪರ್ಯವಸಾನವನ್ನು ಹೊಂದುತ್ತವೆ. ಈ ಕರ್ಮಗಳಲ್ಲಿ ಪಠಿತವಾಗುವ ಸ್ತೋತ್ರಗಳನ್ನೆಲ್ಲಾ ಒಟ್ಟಿಗೆ ತೆಗೆದುಕೊಂಡರೆ ಎಲ್ಲವೂ ಸೇರಿ ನೂರತೊಂಭತ್ತು ಆಗುತ್ತವೆ. ಅವುಗಳಲ್ಲಿ ತೊಂಭತ್ತು

ಮಾತ್ರ ದಶಸಂಖ್ಯಾತವಾದ ತ್ರಿವೃತ್‌ಸ್ತೋಮಕ್ಕೂ ಇನ್ನು ತೊಂಭತ್ತು ದಶಸಂಖ್ಯಾಕವಾದ ತ್ರಿವೃತ್ ಸ್ತೋಮದ ಬೇರೆ ಸಮೂಹಕ್ಕೂ ಅನುರೂಪವಾಗಿರುತ್ತದೆ. ಉಳಿದ ಹತ್ತರಲ್ಲಿ ಒಂದು ಸ್ತೋತ್ರೀಯವಾದ ಮಂತ್ರವೂ ಒಂದು ತ್ರಿವೃತವೂ ಉಳಿಯಿತು. ಅದು ಉಳಿದ ಎಲ್ಲಕ್ಕೂ ಪ್ರಕಾಶಕವಾಗಿ ಏಕವಿಂಶಾತ್ಮಕವಾದ ಹೆಸರಿನಿಂದ ಪ್ರಕಾಶಿಸುತ್ತದೆ. ಆಧಿಕ್ಯಸ್ಥಾನವನ್ನು ಹೊಂದಿರುವ ಸ್ತೋತ್ರೀಯ ಮಂತ್ರವು ಈ ಏಕವಿಂಶದೊಡನೆ ಮಿಳಿತವಾಗಿದೆ. ಅದೇ ಯಜ್ಞಕರ್ತನು. ಅದೇ ದಿವ್ಯಶಕ್ತಿಯುತವಾದ ಕ್ಷತ್ರವು ಅದೇ ಸರ್ವಬಲಯುತವಾದುದು. ಈ ತತ್ತ್ವವನ್ನರಿತವನು ಕ್ಷಾತ್ರಪ್ರಭಾವವನ್ನೂ ಸಕಲವಿಧವಾದ ತೇಜಸ್ಸನ್ನೂ ಬಲವನ್ನೂ ಈ ದಿವ್ಯಶಕ್ತಿಯ ಸಾಯುಜ್ಯವನ್ನೂ ಸಮಾನವಾದ ರೂಪವನ್ನೂ ಸರ್ವಲೋಕವ್ಯಾಪಕತ್ವವನ್ನೂ ಪಡೆಯುತ್ತಾನೆ.

**ದೇವಾ ವಾ ಅಸುರೈರ್ವಿಜಿಗ್ಯಾನಾ ಊರ್ಧ್ವಾಃ ಸ್ವರ್ಗಂ ಲೋಕಮಾಯಾನ್ತ್ಸೋಽಗ್ನಿರ್ದಿವಿಸ್ಪೃಗೂರ್ಧ್ವ ಉದಶ್ರಯತ ಸ ಸ್ವರ್ಗಸ್ಯ ಲೋಕಸ್ಯ ದ್ವಾರಮವೃಣೋದಗ್ನಿರ್ವೈ ಸ್ವರ್ಗಸ್ಯ ಲೋಕಸ್ಯಾಧಿಪತಿಸ್ತಂ ವಸವಃ ಪ್ರಥಮಾ ಆಗಚ್ಛಂಸ್ತ ಏನಮಬ್ರುವನ್ನತಿ ನೋಽರ್ಜಸ್ವಾಕಾಶಂ ನಃ ಕುರ್ವಿತಿ ಸ ನಾಸ್ತುತೋಽತಿಸ್ರಕ್ಷ್ಯ ಇತ್ಯಬ್ರವೀತ್‌ಸ್ತುತ ನು ಮೇತಿ ತಥೇತಿ ತಂ ತೇ ತ್ರಿವೃತಾ ಸ್ತೋಮೇನಾಸ್ತುವಂಸ್ತಾಂಸ್ತುತೋಽತ್ಯಾರ್ಜತ ತೇ ಯಥಾಲೋಕಮಗಚ್ಛಂಸ್ತಂ ರುದ್ರಾ ಆಗಚ್ಛಂಸ್ತ ಏನಮಬ್ರುವನ್ನತಿ ನೋಽರ್ಜಸ್ವಾಕಾಶಂ ನಃ ಕುರ್ವಿತಿ ಸ ನಾಸ್ತುತೋಽತಿಸ್ರಕ್ಷ್ಯ ಇತ್ಯಬ್ರವೀತ್‌ಸ್ತುತ ನು ಮೇತಿ ತಥೇತಿ ತಂ ತೇ-ಪಂಚದಶೇನ ಸ್ತೋಮೇನಾಸ್ತುವಂಸ್ತಾಂಸ್ತುತೋಽತ್ಯಾರ್ಜತ ತೇ ಯಥಾಲೋಕಮಗಚ್ಛಂಸ್ತಮಾದಿತ್ಯಾ ಆಗಚ್ಛಂಸ್ತ ಏನಮಬ್ರುವನ್ನತಿ ನೋಽರ್ಜಸ್ವಾಕಾಶಂ ನಃ ಕುರ್ವಿತಿ ಸ ನಾಸ್ತುತೋಽತಿಸ್ರಕ್ಷ್ಯ ಇತ್ಯಬ್ರವೀತ್‌ಸ್ತುತ ನು ಮೇತಿ ತಥೇತಿ ತಂ ತೇ ಸಪ್ತದಶೇನ ಸ್ತೋಮೇನಾಸ್ತುವನ್ ತಾನ್ ಸ್ತುತೋಽತ್ಯಾರ್ಜತ ತೇ ಯಥಾಲೋಕಮಗಚ್ಛನ್ ॥** (ಐ. ಬ್ರಾ. ೧೪-೪೨)

ದೇವತೆಗಳು ಅಗ್ನಿಯ ಸಹಾಯದಿಂದ ರಾಕ್ಷಸರನ್ನು ಜಯಿಸಿ ಸ್ವರ್ಗವನ್ನು ಸೇರಿದರು. ಮೇಲೆ ವರ್ಣಿತವಾದ ಪ್ರಭಾವವುಳ್ಳ ಅಗ್ನಿಯು ಅಂತರಿಕ್ಷಕ್ಕೆ ಹಾರಿ ಸ್ವರ್ಗದ ಬಾಗಿಲನ್ನು ತೆರೆದನು ಮತ್ತು ಅವನೇ ಸ್ವರ್ಗಕ್ಕೆಲ್ಲಾ ಪ್ರಭುವಾದನು. ಉಳಿದ ದೇವತೆಗಳೆಲ್ಲಾ ಅವನ ಅನುಮತಿಯಿಂದಲೇ ಸ್ವರ್ಗವನ್ನು ಪ್ರವೇಶಿಸಬೇಕಾಯಿತು. ಆಗ ವಸುಗಳು ಅವನಲ್ಲಿ ಬಂದು ತಮಗೂ ಪ್ರವೇಶ ಬೇಕೆಂದರು. "ನನ್ನನ್ನು ಸ್ತುತಿಸಿ ಪ್ರಶಂಸಿಸದಿದ್ದರೆ ನಿಮಗೆ ಪ್ರವೇಶವಿಲ್ಲ" ಎಂದೊಡನೆಯೇ ವಸುಗಳು ಅಗ್ನಿಯನ್ನು ತ್ರಿವೃತ್‌ಸ್ತೋಮದಿಂದ ಸ್ತುತಿಸಿದರು. ನಂತರ ಅಗ್ನಿಯು ಅವರಿಗೆ ಪ್ರವೇಶಾವಕಾಶವನ್ನು ಕೊಟ್ಟನು. ವಸುಗಳು ಸ್ವರ್ಗವನ್ನು ಪ್ರವೇಶಿಸಿ ತಮ್ಮ ಸ್ಥಾನವನ್ನು ಸೇರಿಕೊಂಡರು. ಆಗ ರುದ್ರರು ಬಂದು ತಮಗೂ ಪ್ರವೇಶವನ್ನು ಕೊಡಬೇಕೆಂದು ಪ್ರಾರ್ಥಿಸಿದರು. ಆಗ ಅಗ್ನಿಯು ತನ್ನನ್ನು ಅವರು ಸ್ತುತಿಸಿದ ಹೊರತು ಅವರಿಗೆ ಪ್ರವೇಶವಿಲ್ಲವೆಂದನು. ಆಗ ಅವರು ಅಗ್ನಿಯನ್ನು ಸ್ತುತಿಸಲು ಒಪ್ಪಿ ಪಂಚದಶಸ್ತೋಮದಿಂದ ಅವನನ್ನು ಸ್ತುತಿಸಿದರು. ಆಗ ಅಗ್ನಿಯು ಅವರಿಗೆ ಪ್ರವೇಶಾವಕಾಶವನ್ನು ಕೊಟ್ಟನು. ಒಡನೆಯೇ ಅವರು ಸ್ವರ್ಗಕ್ಕೆ ಪ್ರವೇಶಿಸಿ ತಮ್ಮ ಸ್ಥಾನವನ್ನು ಸೇರಿಕೊಂಡರು. ನಂತರ ಆದಿತ್ಯರು ಬಂದು "ನಮಗೂ ಸ್ವರ್ಗಪ್ರವೇಶಾವಕಾಶವನ್ನು ಕೊಡು" ಎಂದು ಅಗ್ನಿಯನ್ನು ಪ್ರಾರ್ಥಿಸಿದರು. ಪುನಃ ಅಗ್ನಿಯು "ನನ್ನನ್ನು ಪ್ರಶಂಸಿಸದ ಹೊರತು ನಿಮಗೆ ಪ್ರವೇಶಾಧಿಕಾರವಿಲ್ಲ" ಎಂದು ಅವರಿಗೂ ಹೇಳಿದನು. ಅವರು ಅವನನ್ನು ಸ್ತುತಿಸಲು ಒಪ್ಪಿ ಸಪ್ತದಶಸ್ತೋಮದಿಂದ ಅವನ ಪ್ರಭಾವವನ್ನು ಸ್ತುತಿಸಿದರು. ನಂತರ ಅವರು ಸ್ವರ್ಗವನ್ನು ಪ್ರವೇಶಿಸಿ ತಮ್ಮ ಸ್ಥಾನವನ್ನು ಸೇರಿಕೊಂಡರು.

**ತಂ ವಿಶ್ವೇ ದೇವಾ ಆಗಚ್ಛಂಸ್ತ ಏನಮಬ್ರುವನ್ನತಿ ನೋಽರ್ಜಸ್ಯಾವಕಾಶಂ ನಃ ಕುರ್ವಿತಿ ಸ ನಾಸ್ತುತೋಽತಿಸ್ರಕ್ಷ್ಯ ಇತ್ಯಬ್ರವೀತ್‌ಸ್ತುತ ನು ಮೇತಿ ತಥೇತಿ ತಂ ತಂ ಏಕವಿಂಶೇನ ಸ್ತೋಮೇನಾಸ್ತುವಂಸ್ತಾಂಸ್ತುತೋಽತ್ಯಾರ್ಜತ ತೇ ಯಥಾಲೋಕಮಗಚ್ಛನ್ನೇಕೈಕೇನ ವೈ ತಂ ದೇವಾಃ ಸ್ತೋಮೇನಾಸ್ತುವಂಸ್ತಾಂಸ್ತುತೋಽತ್ಯಾರ್ಜತ ತೇ ಯಥಾಲೋಕ-ಮಗಚ್ಛನ್ನಥ ಹೈನಮೇಷ ಏತ್ಯೈಃ ಸರ್ವೈಃ ಸ್ತೋಮೈಃ ಸ್ತೌತಿ ಯೋ ಯಜತೇ ಯಶ್ಚೈನ ಮೇವಂ ವೇದಾತೀ ತು ತಮರ್ಜಾತಾ ಅತಿ ಹ ವಾ ಏನಮರ್ಜುತೇ ಸ್ವರ್ಗಂ ಲೋಕಮಭಿ ಯ ಏವಂ ವೇದ ||** (೩-೪೨)

ಆಗ ವಿಶ್ವೇದೇವತೆಗಳು ಅಗ್ನಿಯನ್ನು ಸಮೀಪಿಸಿ "ನಮಗೂ ಸ್ವರ್ಗಕ್ಕೆ ಪ್ರವೇಶಾವಕಾಶವನ್ನು ಕೊಡು" ಎಂದರು. "ನನ್ನನ್ನು ಸ್ತುತಿಸದ ಹೊರತು ನಿಮಗೆ ಪ್ರವೇಶಾವಕಾಶವನ್ನು ಕೊಡಲಾಗುವುದಿಲ್ಲ" ಎಂದನು. ಒಡನೆಯೇ ಅವರು ಅವನನ್ನು ಸ್ತುತಿಸಲು ಒಪ್ಪಿ ಏಕವಿಂಶ ಸ್ತೋಮದಿಂದ ಸ್ತುತಿಸಿದರು. ನಂತರ ಅವರಿಗೆ ಪ್ರವೇಶಾವಕಾಶವು ಸಿಕ್ಕಿ ತಮ್ಮ ಸ್ವಸ್ಥಾನಕ್ಕೆ ಹೋಗಿ ಸೇರಿಕೊಂಡರು. ಈ ವಿಧವಾಗಿ ಅಗ್ನಿಯು ಸ್ತೋಮಗಳಿಂದ ಸ್ತುತನಾಗಿದ್ದಾನೆ. ಅವನನ್ನು ಪ್ರಶಂಸಿಸಿ ಅವನ ಅನುಗ್ರಹವನ್ನು ಸಂಪಾದಿಸಿ ಉಳಿದ ದೇವತೆಗಳು ಸ್ವರ್ಗದಲ್ಲಿ ಸುಸ್ಥಿತರಾಗಿದ್ದಾರೆ. ಈ ತತ್ತ್ವವನ್ನರಿತು ಯಜ್ಞವನ್ನಾಚರಿಸಿ ಸ್ತೋಮಗಳಿಂದ ಅಗ್ನಿಯನ್ನು ಸ್ತುತಿಸುವ ಯಜಮಾನನೂ ಸಹ ಅಗ್ನಿಯ ಅನುಗ್ರಹಕ್ಕೆ ಪಾತ್ರನಾಗುತ್ತಾನೆ. ಸ್ವರ್ಗಪ್ರವೇಶಕ್ಕೆ ಅವಕಾಶವು ಸಿಕ್ಕಿ ಇವನೂ ಸಹ ಸ್ವರ್ಗದಲ್ಲಿ ಸುಸ್ಥಿತನಾಗುತ್ತಾನೆ.

**೨. ಅಗ್ನಿಷ್ಟೋಮ, ಚತುಷ್ಟೋಮ, ಜ್ಯೋತಿಷ್ಟೋಮ ಇವೆಲ್ಲವೂ ಜ್ಯೋತೀರೂಪವಾದ ಅಗ್ನಿಯ ನಾಮಾಂತರಗಳೇ.**

**ಸ ವಾ ಏಷೋಽಗ್ನಿರೇವ ಯದಗ್ನಿಷ್ಟೋಮಸ್ತಂ ಯದಸ್ತುವಂಸ್ತಸ್ಮಾದಗ್ನಿಸ್ತೋಮಸ್ತಮಗ್ನಿ-ಸ್ತೋಮಂ ಸಂತಮಗ್ನಿಷ್ಟೋಮ ಇತ್ಯಾಚಕ್ಷತೇ ಪರೋಕ್ಷೇಣ ಪರೋಕ್ಷಪ್ರಿಯಾ ಇವ ಹಿ ದೇವಾಸ್ತಂ ಯಚ್ಚತುಷ್ಟಯಾ ದೇವಾಶ್ಚತುರ್ಭಿಃ ಸ್ತೋಮೈರಸ್ತುವಂಸ್ತಸ್ಮಾಚ್ಚತುಸ್ತೋ-ಮಸ್ತಂ ಚತುಸ್ತೋಮಂ ಸಂತಂ ಚತುಷ್ಟೋಮ ಇತ್ಯಾಚಕ್ಷತೇ ಪರೋಕ್ಷೇಣ ಪರೋಕ್ಷ-ಪ್ರಿಯಾ ಇವ ಹಿ ದೇವಾ ಅಥ ಯದೇನಮೂರ್ಧ್ವಂ ಸಂತಂ ಜ್ಯೋತಿರ್ಭೂತಮಸ್ತುವಂ-ಸ್ತಸ್ಮಾಜ್ಜ್ಯೋತಿಸ್ತೋಮಸ್ತಂ ಜ್ಯೋತಿಸ್ತೋಮಂ ಸಂತಂ ಜ್ಯೋತಿಷ್ಟೋಮ ಇತ್ಯಾಚಕ್ಷತೇ ಪರೋಕ್ಷೇಣ ಪರೋಕ್ಷಪ್ರಿಯಾ ಇವ ಹಿ ದೇವಾಃ ಸ ವಾ ಏಷೋಽಪೂರ್ವೋಽನಪರೋ ಯಜ್ಞಕ್ರತುರ್ಯಥಾ ರಥಚಕ್ರಮನಂತಮೇವಂ ಯದಗ್ನಿಷ್ಟೋಮಸ್ತಸ್ಯ ಯಥೈವ ಪ್ರಾಯಣಂ ತಥೋದಯನಂ ತದೇಷಾ ಯಜ್ಞಗಾಥಾ ಗೀಯತೇ |**

ಪರೋಕ್ಷಪ್ರಿಯರಾದ ದೇವತೆಗಳು ಅಗ್ನಿಸ್ತುತಿಯನ್ನೇ ಅಗ್ನಿಷ್ಟೋಮವೆಂದು ಕರೆದರು. ಈ ಅಗ್ನಿಷ್ಟೋಮದಲ್ಲಿ ಅಗ್ನಿಯ ಮಹತ್ತ್ವವನ್ನು ಪ್ರಶಂಸಿಸುವ ಸ್ತುತಿವಾಕ್ಯಗಳಿವೆ. ಇವೆಲ್ಲವೂ ಅಗ್ನಿರೂಪಗಳೇ ಆಗಿವೆ. ಆದರೂ ಸಹ ಇವನ್ನು ದೇವತೆಗಳು ಅಗ್ನಿಯೆಂದೇ ಕರೆಯದೆ ಅಗ್ನಿಷ್ಟೋಮವೆಂದು ಕರೆದರು. ದೇವತೆಗಳು ಯಾವುದನ್ನೂ ಸಾಕ್ಷಾತ್ತಾಗಿ ವರ್ಣಿಸುವುದಿಲ್ಲ. ಅವರು ರಹಸ್ಯಾರ್ಥಪ್ರಿಯರು. ಆದುದರಿಂದ ಅವರ ವರ್ಣನೆಯಲ್ಲಿ ಯಾವಾಗಲೂ

ಗೂಢವಾದ ಅರ್ಥವಿದ್ದೇ ಇರುತ್ತದೆ. ಇದೇ ಅಗ್ನಿಯನ್ನೇ ನಾಲ್ಕು ಗುಂಪಿನ ದೇವತೆಗಳು ಸ್ತುತಿಸಿದುದರಿಂದಲೂ, ಇದರಲ್ಲಿ ನಾಲ್ಕು ಸ್ತೋಮಗಳಿರುವುದರಿಂದಲೂ ಇದಕ್ಕೆ ಚತುಷ್ಟೋಮವೆಂಬ ಹೆಸರು. ಪರೋಕ್ಷಪ್ರಿಯರಾದ ದೇವತೆಗಳು ಇದರಲ್ಲಿಯೂ ಒಂದು ಗೂಢಾರ್ಥವನ್ನು ತೋರಿಸಿದ್ದಾರೆ. ಅಗ್ನಿಯು ಅಂತರಿಕ್ಷಕ್ಕೆ ಹಾರಿ ಜ್ಯೋತೀರೂಪದಿಂದ ಬೆಳಗುತ್ತಿದ್ದಾಗ ದೇವತೆಗಳು ಈ ಜ್ಯೋತಿಯನ್ನು ಸ್ತುತಿಸಿದರು. ಆದುದರಿಂದ ಇದಕ್ಕೆ ಜ್ಯೋತಿಷ್ಟೋಮವೆಂದು ಹೆಸರು. ಪರೋಕ್ಷಪ್ರಿಯರಾದ ದೇವತೆಗಳು ಇಲ್ಲಿಯೂ ತತ್ತ್ವರಹಸ್ಯವನ್ನು ತೋರಿಸಿದ್ದಾರೆ. ಈ ವಿಧವಾಗಿ ಅಗ್ನಿಷ್ಟೋಮ, ಚತುಷ್ಟೋಮ ಮತ್ತು ಜ್ಯೋತಿಷ್ಟೋಮ ಎಂಬ ನಾಮಗಳಿಂದ ಕರೆಯಲ್ಪಡುವ ಈ ಯಜ್ಞಕ್ರಿಯೆಯು ಅನಾದಿಯೂ ಅನಂತವೂ ಆದುದಾಗಿದೆ. ಈ ಅಗ್ನಿಷ್ಟೋಮವು ರಥಚಕ್ರದಂತೆ ಅನಂತವಾದುದು. ಆದುದರಿಂದಲೇ ಇದರ ಮಹತ್ತ್ವವನ್ನು ಪ್ರಶಂಸಿಸುವ ಸ್ತುತಿವಾಕ್ಯವು ಈ ರೀತಿಯಿದೆ.

**ಯದಸ್ಯ ಪೂರ್ವಮಪರಂ ತದಸ್ಯ ಯದ್ವಸ್ಯಾಪರಂ ತದ್ವಸ್ಯ ಪೂರ್ವಂ । ಅಹೇರಿವ ಸರ್ಪಣಂ ಶಾಕಲಸ್ಯ ನ ವಿಜಾನಂತಿ ಯತರತ್ಪರಸ್ತಾದಿತಿ ಯಥಾ ಹ್ಯೇವಾಸ್ಯ ಪ್ರಾಯಣಮೇವಮುದಯನಮಸದಿತಿ ತದಾಹುರ್ಯತ್ತ್ರಿವೃತ್ಪ್ರಾಯಣಮೇಕವಿಂಶಮುದಯನಂ ಕೇನ ತೇ ಸಮೇ ಇತಿ ಯೋ ವಾ ಏಕವಿಂಶಸ್ತ್ರಿವೃದ್ವೈ ಸೋಽಥೋ ಯದುಭೌ ತೃಚೌ ತೃಚಿನಾವಿತಿ ಬ್ರೂಯಾತ್ತೇನೇತಿ ।** (೧೪–೪೩)

ಈ ಅಗ್ನಿಷ್ಟೋಮದ ಅಂತವಾವುದೋ ಅದೇ ಅದರ ಆದಿಯು. ಆದಿಯಾವುದೋ ಅದೇ ಅದರ ಅಂತವು. ಈ ಶಾಕಲದ ಪರಿಭ್ರಮಣವು ಸರ್ಪದ ಪರಿಭ್ರಮಣದಂತಿದೆ. ಇದರ ಆದಿ ಮತ್ತು ಅಂತಗಳ ವಿಷಯದಲ್ಲಿ ಯಾವುದು ಮೊದಲು ಕೊನೆಯು ಯಾವುದು ಎಂಬುದನ್ನಾಗಲಿ, ಯಾವುದು ಕಾರಣ, ಯಾವುದು ಕಾರ್ಯ ಎಂಬುದನ್ನಾಗಲಿ ಯಾರೂ ಹೇಳಲಾರರು. ಅನಾದಿಯೂ ಅನಂತವೂ ಆಗಿರುತ್ತದೆ. ಆದುದರಿಂದಲೇ "ಆದಿ ಯಾವುದೋ ಅಂತವೂ ಅದೇ ಆಗಿರಬೇಕು'' ಎಂದು ತಿಳಿದವರು ಹೇಳುತ್ತಾರೆ. ಆದರೆ ಇಲ್ಲಿ ಇನ್ನೊಂದು ಆಶಂಕೆಗೆ ಅವಕಾಶವಿದೆ. "ಈ ಅಗ್ನಿಷ್ಟೋಮದ ಆದಿಯು ತ್ರಿವೃತ್ತಿನಿಂದ ಕೂಡಿದೆ. ಅಂತವು ಏಕವಿಂಶಾತ್ಮಕವಾಗಿದೆ. ಆದುದರಿಂದ ಆದಿಯು ಬೇರೆ, ಅಂತವು ಬೇರೆಯಾಯಿತು. ಎರಡನ್ನೂ ಒಂದೇ ಎಂದು ಹೇಳುವುದು ಹೇಗೆ?'' ಎಂಬ ಪ್ರಶ್ನೆಯು ಸಹಜವಾದುದು. ಆದರೆ ಅಲ್ಲಿ ಆಶಂಕೆಗೆ ಕಾರಣವಿಲ್ಲ. ಏಕವಿಂಶವೂ ತ್ರಿವೃತ್ತಾಗಿದೆ ಮತ್ತು ತೃಚಾತ್ಮಕವಾಗಿದೆ. ಆದುದರಿಂದ ಆದಿಗೂ ಅಂತಕ್ಕೂ ವ್ಯತ್ಯಾಸವೇ ಇಲ್ಲ.

**ಯೋ ವಾ ಏಷ ತಪತ್ಯೇಷೋಽಗ್ನಿಷ್ಟೋಮ ಏಷ ಸಾಹ್ನಸ್ತಂ ಸಹೈವಾಹ್ನಾ ಸಂಸ್ಥಾಪಯೇಯುಃ ಸಾಹ್ನೋ ವೈ ನಾಮ ತೇನಾಸಂತ್ವರಮಾಣಾಶ್ಚರೇಯುರ್ಯಥೈವ ಪ್ರಾತಃಸವನ ಏವಂ ತೃತೀಯಸವನ ಏವಮು ಹ ಯಜಮಾನೋಽಪ್ರಮಾಯುಕೋ ಭವತಿ ಯದ್ಧ ವಾ ಇದಂ ಪೂರ್ವಯೋಃ ಸವನಯೋರಸನ್ತ್ವರಮಾಣಾಶ್ಚರಂತಿ ತಸ್ಮಾದ್ಧೇದಂ ಪ್ರಾಚ್ಯೋಗ್ರಾಮತಾ ಬಹುಲಾವಿಷ್ಟಾ ಅಥ ಯದ್ಧೇವಂ ತೃತೀಯಸವನೇ ಸಂತ್ವರಮಾಣಾಶ್ಚರಂತಿ ತಸ್ಮಾದ್ಧೇದಂ ಪ್ರತ್ಯಂಚಿ ದೀರ್ಘಾರಣ್ಯಾನಿ ಭವಂತಿ ತಥಾ ಹ ಯಜಮಾನಃ ಪ್ರಮಾಯುಕೋ ಭವತಿ ತೇನಾಸಂತ್ವರಮಾಣಾಶ್ಚರೇಯುರ್ಯಥೈವ ಪ್ರಾತಃಸವನ ಏವಂ ಮಾಧ್ಯಂದಿನ ಏವಂ ತೃತೀಯಸವನ ಏವಮು ಹ ಯಜಮಾನೋಽಪ್ರಮಾಯುಕೋ ಭವತಿ ।**

ಆದಿತ್ಯರೂಪದಲ್ಲಿ ಬೆಳಗುತ್ತಿರುವ ವೈಶಾನರಾಗ್ನಿಯೇ ಅಗ್ನಿಷ್ಟೋಮವು. ಕ್ರಿಯಾತ್ಮಕವಾದ ಈ ಅಗ್ನಿಷ್ಟೋಮವು ಒಂದು ಹವಿಸ್ಸಿನೊಳಗೆ ಮುಗಿಯತಕ್ಕದ್ದು. ದಿನದ ಅಂತದೊಡನೆ ಈ ಕ್ರಿಯೆಯ ಅಂತವೂ ಸೇರಬೇಕು. ಆದುದರಿಂದಲೇ ಇದಕ್ಕೆ **ಸಾಹ್ನ**ವೆಂದೂ ಹೆಸರು. ಪ್ರಾತಃಸವನವಲ್ಲಿ ಹೇಗೋ ಹಾಗೆಯೇ ಮಾಧ್ಯಂದಿನ ಸವನಕಾಲದಲ್ಲೂ ಮತ್ತು ತೃತೀಯಸವನದ ಕಾಲದಲ್ಲೂ ಈ ಕ್ರಿಯಾಕಲಾಪಗಳು ಸ್ವಲ್ಪವೂ ಅವಸರವಿಲ್ಲದೇ ಸಾವಧಾನದಿಂದ ನೆರವೇರಿಸಲ್ಪಡಬೇಕು. ಮೊದಲನೆಯ ಎರಡು ಸವನಗಳಲ್ಲೂ ಬಹಳ ಸಾವಧಾನಚಿತ್ತರಾಗಿ ಈ ಕ್ರಿಯೆಯನ್ನು ನೆರವೇರಿಸುವುದರಿಂದ ಪೂರ್ವಭಾಗದ ಗ್ರಾಮಗಳೆಲ್ಲವೂ ಪೈರುಪಚ್ಚೆಗಳಿಂದ ಕೂಡಿದ ಪ್ರಜಾಸಂಪದ್ಯುಕ್ತವಾಗಿವೆ. ತೃತೀಯಸವನ ಕಾಲದಲ್ಲಿ ಕ್ರಿಯಾಕಲಾಪಗಳು ಕೊಂಚ ಅವಸರದಿಂದ ನಡೆಯುವುದರಿಂದ ಪಶ್ಚಾದ್ಭಾಗದಲ್ಲಿರುವ ಪ್ರದೇಶಗಳೆಲ್ಲಾ ವನಾತ್ಮಕವಾಗಿ ನಿರ್ಜನಪ್ರದೇಶವಾಗಿದೆ. ಈ ರೀತಿ ಅವಸರದಿಂದ ಕಾರ್ಯವನ್ನು ನೆರವೇರಿಸಿದರೆ ಯಜಮಾನನಿಗೆ ಹಾನಿಯುಂಟಾಗುತ್ತದೆ. ಪ್ರಾತಃಸವನ ಮತ್ತು ಮಾಧ್ಯಂದಿನಸವನಕಾಲಗಳಲ್ಲಿ ಯಾವ ರೀತಿ ಶ್ರದ್ಧೆಯಿಂದಲೂ ಸಾವಧಾನದಿಂದಲೂ ಕಾರ್ಯಗಳನ್ನು ನೆರವೇರಿಸುವನೋ ಅದೇ ರೀತಿ ತೃತೀಯಸವನಕಾಲದಲ್ಲೂ ಅವಸರವಿಲ್ಲದೇ ಅದೇ ರೀತಿ ಸಾವಧಾನಚಿತ್ತನಾಗಿ ಕಾರ್ಯಗಳನ್ನು ನೆರವೇರಿಸಿದರೆ ಯಜಮಾನನಿಗೆ ಯಾವ ವಿಧವಾದ ಹಾನಿಯೂ ಇರುವುದಿಲ್ಲ. ಅವನು ಪುಷ್ಕಳನಾಗುತ್ತಾನೆ.

> **ಸ ಏತಮೇವ ಶಸ್ತ್ರೇಣಾನುಪರ್ಯಾವರ್ತೇತ ಯದಾ ವಾ ಏಷ ಪ್ರಾತರುದೇತ್ಯಥ ಮಂದ್ರಂ ತಪತಿ ತಸ್ಮಾನ್ಮಂದ್ರಯಾ ವಾಚಾ ಪ್ರಾತಃಸವನೇ ಶಂಸೇದಥ ಯದಾಭ್ಯೇತ್ಯಥ ಬಲೀಯಸ್ತಪತಿ ತಸ್ಮಾದ್ಬಲೀಯಸ್ಯಾ ವಾಚಾ ಮಧ್ಯಂದಿನೇ ಶಂಸೇದಥ ಯದಾ ಭಿತರಾಮೇತ್ಯಥ ಬಲಿಷ್ಠತಮಂ ತಪತಿ ತಸ್ಮಾದ್ಬಲಿಷ್ಠತಮಯಾ ವಾಚಾ ತೃತೀಯಸವನೇ ಶಂಸೇದೇವಂ ಶಂಸೇದ್ಯದಿ ವಾಚ ಈಶೀತ ವಾಗ್ಘಿ ಶಸ್ತ್ರಂ ಯಯಾ ತು ವಾಚೋತ್ತರೋತ್ತರಿಣ್ಯೋತ್ಸಹೇತ ಸಮಾಪನಾಯ ತಯಾ ಪ್ರತಿಪದ್ಯೇತೈತತ್ಸುಶಸ್ತತಮಮಿವ ಭವತಿ ಸ ವಾ ಏಷ ನ ಕದಾಚನಾಸ್ತಮೇತಿ ನೋದೇತಿ ತಂ ಯದಸ್ತಮೇತೀತಿ ಮನ್ಯಂತೇಽಹ್ನ ಏವ ತದಂತಮಿತ್ವಾಥಾತ್ಮಾನಂ ವಿಪರ್ಯಸ್ಯತೇ ರಾತ್ರೀಮೇವಾವಸ್ತಾತ್ಕುರುತೇಽಹಃ ಪರಸ್ತಾದಥ ಯದೇನಂ ಪ್ರಾತರುದೇತೀತಿ ಮನ್ಯಂತೇ ರಾತ್ರೇರೇವ ತದಂತಮಿತ್ವಾಥಾತ್ಮಾನಂ ವಿಪರ್ಯಸ್ಯತೇಽಹರೇವಾವಸ್ತಾತ್ಕುರುತೇ ರಾತ್ರಿಂ ಪರಸ್ತಾತ್ಸ ವಾ ಏಷ ನ ಕದಾಚನ ನಿಮ್ರೋಚತಿ ನ ಹ ವೈ ಕದಾಚನ ನಿಮ್ರೋಚತ್ಯೇತಸ್ಯ ಹ ಸಾಯುಜ್ಯಂ ಸರೂಪತಾಂ ಸಲೋಕತಾಮಶ್ನುತೇ ಯ ಏವಂ ವೇದ ಯ ಏವಂ ವೇದ ॥**
>
> (ಐ ಬ್ರಾ. ೧೪–೪೪)

ಜ್ಯೋತಿಷ್ಟೋಮದ ಈ ಕ್ರಿಯಾಕಲಾಪಗಳನ್ನು ಆದಿತ್ಯನ ಚಲನಕ್ಕೆ ಅನುಗುಣವಾಗಿ ಎಲ್ಲಾ ವಿಧದಲ್ಲಿಯೂ ಅನುಸರಿಸಬೇಕು. ಮಂತ್ರೋಚ್ಚಾರಣೆಯಲ್ಲಿಯೂ ಸಹ ಆದಿತ್ಯನ ಭ್ರಮಣದಲ್ಲಿರುವ ಗುಣಗಳನ್ನನುಸರಿಸತಕ್ಕದ್ದು. ಆದಿತ್ಯನು ಉದಯಕಾಲದಲ್ಲಿ ಮಂದ್ರವಾಗಿ ತಪಿಸುವುದರಿಂದ ಯಜಮಾನನು (ಅಥವಾ ಹೋತೃವು) ಪ್ರಾತಃಸವನದ ಕಾಲದಲ್ಲಿ ಮಂದ್ರವಾಗಿ (ಮೆಲ್ಲಗೆ) ಮಂತ್ರವನ್ನು ಪಠಿಸಬೇಕು. ಮಧ್ಯಾಹ್ನಕಾಲದಲ್ಲಿ ಆದಿತ್ಯನ ಪ್ರಭೆಯೂ ಅದರ ಔಷ್ಣ್ಯವೂ ಅಧಿಕವಾಗುವುದರಿಂದ ಮಾಧ್ಯಂದಿನಸವನದ ಕಾಲದಲ್ಲಿ ಮಂತ್ರೋಚ್ಚಾರಣೆಯು ಉನ್ನತವಾದ ಶಾರೀರದಿಂದಲೂ, (ಉಚ್ಚಧ್ವನಿ) ಸ್ವರದಿಂದಲೂ ಕೂಡಿರಬೇಕು. ಇನ್ನೂ ಮುಂದಕ್ಕೆ ಚಲಿಸುವಾಗ ಆದಿತ್ಯನ ಪ್ರಭೆಯ ಔಷ್ಣ್ಯವು ಇನ್ನೂ

ತೀವ್ರವಾಗಿರುತ್ತದೆ. ಆದುದರಿಂದ ತೃತೀಯಸವನದ ಕಾಲದಲ್ಲಿ ಅತ್ಯುನ್ನತವಾದ ಶಾರೀರದಿಂದ ಮಂತ್ರಪಠನವಾಗತಕ್ಕದ್ದು. ವಾಕ್ಕೇ ಶಸ್ತ್ರವಾದುದರಿಂದ ಯಜಮಾನನು ಈ ರೀತಿ ಶಸ್ತ್ರಪಠನ ಕ್ರಮವನ್ನನುಸರಿಸಿದರೆ ತಾನು ವಾಕ್ಕಿನ ಪ್ರಭುತ್ವವನ್ನು ಪಡೆಯುತ್ತಾನೆ. ತನ್ನ ಶಕ್ತಿಗನುಗುಣವಾಗಿ ಎಷ್ಟು ಉಚ್ಚಸ್ವರದಿಂದ ಪಠಿಸಬಹುದೋ ಅಷ್ಟು ಉಚ್ಚವಾಗಿ ಶಸ್ತ್ರಮಂತ್ರವನ್ನು ಪಠಿಸಬೇಕು.

"ಸೂರ್ಯನು ಅಸ್ತಮಿತನಾಗುತ್ತಾನೆ" ಎನ್ನುವುದರಿಂದ ಸೂರ್ಯನು ನಿಜವಾಗಿಯೂ ಅಸ್ತಂಗತನಾಗುವನೆಂದು ತಿಳಿಯಬಾರದು. ಅವನಿಗೆ ಉದಯವೂ ಇಲ್ಲ, ಅಸ್ತವೂ ಇಲ್ಲ, ಅಸ್ತನಾಗುತ್ತಾನೆ ಎನ್ನುವುದರಿಂದ ಅಹಸ್ಸು ಕೆಳಭಾಗದಲ್ಲಿದ್ದು ರಾತ್ರಿಯು ಮೇಲುಭಾಗಕ್ಕೆ ಬರುತ್ತದೆ ಎಂಬುದು ತಾತ್ಪರ್ಯ. ಹೀಗೆಯೇ ಉದಯಿಸುತ್ತಾನೆ ಎಂಬುದಕ್ಕೂ ಸಹ ಇದಕ್ಕೆ ವಿಪರ್ಯಸ್ತವಾದ ಅರ್ಥವನ್ನು ಹೇಳಬೇಕು. ನಿಜವಾದ ಅಸ್ತವಿಲ್ಲ. ಅವನು ಶಾಶ್ವತನಾಗಿ ಸರ್ವದಾ ಪ್ರಕಾಶಯುಕ್ತನಾಗಿಯೇ ಇರುತ್ತಾನೆ. ಈ ಜ್ಯೋತೀರೂಪವಾದ ಅಗ್ನಿತತ್ತ್ವವನ್ನು ಆದಿತ್ಯಚಲನದ ರೂಪದಲ್ಲಿ ತಿಳಿದು ಯಾವನು ಅಗ್ನಿಯ ಉಪಾಸನೆಯನ್ನು ಮಾಡುವನೋ ಅವನು ಈ ಅಗ್ನಿಯ ಸಾಯುಜ್ಯವನ್ನೂ ಸರೂಪತೆಯನ್ನೂ ಪಡೆದು ಸರ್ವಲೋಕವ್ಯಾಪಕತೆಯನ್ನೂ ಪಡೆಯುತ್ತಾನೆ ಎಂಬುದು ಅಗ್ನಿಷ್ಟೋಮದ ಮಹತ್ತ್ವದ ವರ್ಣನೆಯಾಗಿರುತ್ತದೆ.

ಇಂತಹ ಮಹತ್ವವುಳ್ಳ ಅಗ್ನಿಷ್ಟೋಮದ ಅಂಗವಾದ **ಆಗ್ನಿಮಾರುತ** ಶಸ್ತ್ರಪಠನದ ಕಾಲದಲ್ಲಿ ವೈಶ್ವಾನರಾಗ್ನಿಯನ್ನು ಪ್ರಶಂಸಿಸುವ ಪ್ರಕೃತವಾದ ಸೂಕ್ತವನ್ನು ಪಠಿಸಬೇಕೆಂಬ ವಿಧಿಯಿದೆ. **ಆಗ್ನಿಮಾರುತ** ಶಸ್ತ್ರದಲ್ಲಿ ವರ್ಣಿತವಾಗಿರುವ ವೈಶ್ವಾನರಾಗ್ನಿಯ ಮಹತ್ತ್ವವೇನೆಂಬುದನ್ನು ಪ್ರಕೃತದಲ್ಲಿ ಪರಿಶೀಲಿಸಬೇಕು.

**೩. ಆಗ್ನಿಮಾರುತಶಸ್ತ್ರದಲ್ಲಿ ವರ್ಣಿತವಾಗಿರುವ ವೈಶ್ವಾನರಾಗ್ನಿಯ ಮಹದ್ಗುಣಗಳು.**

**"ವೈಶ್ವಾನರೀಯೇಣಾಗ್ನಿಮಾರುತಂ ಪ್ರತಿಪದ್ಯತೇ ವೈಶ್ವಾನರೋ ವಾ ಏತದ್ರೇತಃ........॥"**

(ಐ. ಬ್ರಾ. ೧೩-೩೫)

ವೈಶ್ವಾನರನಿಗೂ, ಆಗ್ನಿಮಾರುತಶಸ್ತ್ರಕ್ಕೂ ಇರುವ ಸಂಬಂಧವನ್ನು ತಿಳಿಸುತ್ತಾ, "ವೈಶ್ವಾನರನು ಭೂಮಿಯ ಮೇಲೆ ಸಿಕ್ತವಾದ ರೇತಸ್ಸನ್ನು ಚಲಿಸುವಂತೆ ಮಾಡಿದನು. ಆದುದರಿಂದ ಇಲ್ಲಿ ಅವನನ್ನು ಪ್ರಶಂಸಿಸಿದೆ" ಎಂಬುದಾಗಿ ಈ ಶಸ್ತ್ರಮಂತ್ರಕ್ಕೂ, ವೈಶ್ವಾನರಾಗ್ನಿಗೂ ಸಂಬಂಧವನ್ನು ತೋರಿಸುವ ಐತಿಹಾಸಿಕ ಸನ್ನಿವೇಶವು ಮೇಲಿನ ವಾಕ್ಯಗಳಿಂದ ಸೂಚಿತವಾಗಿದೆ. ಆ ಕಥಾಸಂದರ್ಭವೇನೆಂದರೆ,

**ಪ್ರಜಾಪತಿರ್ವೈ ಸ್ವಾಂ ದುಹಿತರಮಭ್ಯಧ್ಯಾಯದ್ದಿವಮಿತ್ಯನ್ಯ ಆಹುರುಷಸಮಿತ್ಯನ್ಯೇ ತಾಮೃಶ್ಯೋ ಭೂತ್ವಾ ರೋಹಿತಂ ಭೂತಾಮಭ್ಯೈತ್ತಂ ದೇವಾ ಅಪಶ್ಯನ್ನಕೃತಂ ವೈ ಪ್ರಜಾಪತಿಃ ಕರೋತೀತಿ ತೇ ತಮೈಚ್ಛನ್ಯ ಏನಮಾರಿಷ್ಯತ್ಯೇತಮನ್ಯೋನ್ಯಸ್ಮಿನ್ನಾವಿಂದಂಸ್ತೇಷಾಂ ಯಾ ಏವ ಘೋರತಮಾಸ್ತನ್ವ ಆಸಂಸ್ತಾ ಏಕಧಾ ಸಮಭರಂಸ್ತಾಃ ಸಂಭೃತಾ ಏಷ ದೇವೋಽಭವತ್ತದಸ್ಯೈತದ್ಭೂತವನ್ನಾಮ ಭವತಿ ವೈ ಸ ಯೋಽಸ್ಯೈತದೇವಂ ನಾಮ ವೇದ ತಂ ದೇವಾ ಅಬ್ರುವನ್ನಯಂ ವೈ ಪ್ರಜಾಪತಿರಕೃತಮಕರಿಮಂ ವಿಧ್ಯೇತಿ ಸ ತಥೇತ್ಯಬ್ರವೀತ್ಸ ವೈ ವೋ ವರಂ ವೃಣಾ ಇತಿ ವೃಣೀಷ್ವೇತಿ ಸ ಏತಮೇವ ಪರಮವೃಣೀತ ಪಶೂನಾಮಾಧಿಪತ್ಯಂ ತದಸ್ಯೈತತ್ಪಶುಮನ್ನಾಮ ಪಶುಮಾನ್ಭವತಿ ಯೋಽಸ್ಯೈತದೇವಂ ನಾಮ ವೇದ ॥**

ಪ್ರಜಾಪತಿಯು ತನ್ನ ಪುತ್ರಿಯಲ್ಲಿಯೇ ಮೋಹಿತನಾದನು ಈ ಪುತ್ರಿಯು ದ್ಯುವೆಂದು ಕೆಲವರೂ, ಉಷಸ್ಸೆಂದು ಇನ್ನು ಕೆಲವರೂ ಹೇಳುತ್ತಾರೆ. ತಾನು ಗಂಡುಜಿಂಕೆಯಾಗಿ ಹೆಣ್ಣುಜಿಂಕೆಯ ರೂಪವನ್ನು ಧರಿಸಿದ್ದ ಆ ಪುತ್ರಿಯನ್ನು ಹಿಂಬಾಲಿಸಿದನು. ಈ ದೃಶ್ಯವನ್ನು ದೇವತೆಗಳು ನೋಡಿ, "ಇಲ್ಲಿಯವರೆಗೂ ನಡೆಯದಿದ್ದ ಅಕೃತ್ಯವು ಈಗ ಪ್ರಜಾಪತಿಯಿಂದ ಮಾಡಲ್ಪಡುತ್ತದೆ" ಎಂದು ತಿಳಿದರು. ಅವನನ್ನು ಶಿಕ್ಷಿಸಬೇಕೆಂದು ಪ್ರಯತ್ನಿಸಿದಾಗ ಪ್ರಜಾಪತಿಯನ್ನು ಶಿಕ್ಷಿಸುವ ಸಾಮರ್ಥ್ಯವುಳ್ಳ ಯಾರೂ ಸಹ ಅವರಲ್ಲಿರಲಿಲ್ಲ. ಆಗ ಭಯಂಕರವಾದ ರೂಪಗಳನ್ನು ಒಟ್ಟಿಗೆ ಸೇರಿಸಿ ಒಂದು ವ್ಯಕ್ತಿರೂಪಕ್ಕೆ ತಂದಾಗ ಅದು ದೇವತ್ವವನ್ನೂ ಸೂಚಿಸುವ ಮಹಿಮೆಯುಳ್ಳದ್ದಾಯಿತು. ಅದಕ್ಕೆ **ಭೂತವತ್** (ಪತಿ) ಎಂಬ ಹೆಸರು ಪ್ರಸಿದ್ಧವಾಯಿತು. ಈ ರೀತಿ ಪ್ರಸಿದ್ಧವಾದ ಈ ಹೆಸರನ್ನೂ ಇದರ ಮಹತ್ತ್ವವನ್ನೂ ತಿಳಿದವನು ಶ್ರೀಮಂತನಾಗುತ್ತಾನೆ. ಆಗ ದೇವತೆಗಳು ಅವನನ್ನು ಕುರಿತು, "ಪ್ರಜಾಪತಿಯು ಇಲ್ಲಿಯವರೆಗೂ ಮಾಡದ ಅಕೃತ್ಯವನ್ನು ಮಾಡಿದ್ದಾನೆ. ಆದುದರಿಂದ ಅವನನ್ನು ಶಿಕ್ಷಿಸಬೇಕು" ಎಂದು ಪ್ರಾರ್ಥಿಸಲು, "ಈ ಕಾರ್ಯವನ್ನು ಮಾಡುವ ಮೊದಲು ನಿಮ್ಮಿಂದ ನನಗೆ ಒಂದು ವರವು ಅಪೇಕ್ಷಿತವಾಗಿದೆ. ಅದನ್ನು ನೀವು ನಡೆಸಿಕೊಡಬೇಕು" ಎಂದನು. ಆಗ ದೇವತೆಗಳು ಅದಕ್ಕೆ ಒಪ್ಪಲು ತನ್ನನ್ನು ಪಶುಪತಿಯೆಂದು ಕರೆಯಬೇಕೆಂದು ಕೇಳಿಕೊಂಡನು. ದೇವತೆಗಳು ಅವನನ್ನು ಹಾಗೇ ಕರೆದರು. ಅವನು ಅದೇ ಹೆಸರಿನಿಂದ ಪ್ರಸಿದ್ಧನಾದನು. ಹಾಗೆಯೇ ಭೂತಪತಿಯೆಂದೂ ಅವನ ಹೆಸರು ಪ್ರಸಿದ್ಧವಾಯಿತು. ಈ ಪವಿತ್ರವಾದ ಹೆಸರಿನ ಉತ್ಪತ್ತಿ, ಹೆಸರಿನ ಮಾಹಾತ್ಮ್ಯ ಇವುಗಳನ್ನು ತಿಳಿದವನು ಪಶುಸಂಪದ್ಯುಕ್ತನಾಗುತ್ತಾನೆ

**ತಮಭ್ಯಾಯತ್ಯಾವಿಧ್ಯತ್ಸ ವಿದ್ಧ ಊರ್ಧ್ವ ಉದಪ್ರಪತತ್ತಮೇತಂ ಮೃಗ ಇತ್ಯಾಚಕ್ಷತೇ ಯ ಉ ಏವ ಮೃಗವ್ಯಾಧಃ ಸ ಉ ಏವ ಸ ಯಾ ರೋಹಿತ್ಸಾ ರೋಹಿಣೀ ಯೋ ಏವೇಷುಸ್ತ್ರಿಕಾಂಡಾ ಸೋ ಏವೇಷುಸ್ತ್ರಿಕಾಂಡಾ ತದ್ವಾ ಇದಂ ಪ್ರಜಾಪತೇ ರೇತಃ ಸಿಕ್ತಮಧಾವತ್ತತ್ಸರೋಽಭವತ್ತೇ ದೇವಾ ಅಬ್ರುವನ್ಮೇದಂ ಪ್ರಜಾಪತೇ ರೇತೋ ದುಷದಿತಿ ಯದಬ್ರುವನ್ಮೇದಂ ಪ್ರಜಾಪತೇ ರೇತೋ ದುಷದಿತಿ ತನ್ಮಾದುಷಮಭವತ್ತನ್ಮಾದುಷಸ್ಯ ಮಾದುಷತ್ವಂ ಮಾದುಷಂ ಹ ವೈ ನಾಮೈತದ್ಯನ್ಮಾನುಷಂ ಸನ್ಮಾನುಷಮಿತ್ಯಾಚಕ್ಷತೇ ಪರೋಕ್ಷೇಣ ಪರೋಕ್ಷಪ್ರಿಯಾ ಇವ ಹಿ ದೇವಾಃ ||** (ಐ. ಬ್ರಾ. ೧೩-೩೩)

ಪಶುಪತಿಯು ಪ್ರಜಾಪತಿಯನ್ನು ಲಕ್ಷ್ಯವಾಗಿಟ್ಟುಕೊಂಡು ತನ್ನ ತ್ರಿಶೂಲವನ್ನು ಎಸೆದಾಗ ಅದು ಪ್ರಜಾಪತಿಯನ್ನು ಚುಚ್ಚಿಕೊಂಡಿತು. ಆಗ ಪ್ರಜಾಪತಿಯು ಮೇಲಕ್ಕೆ ಹಾರಿದನು. ಆಗ ಅವನು **ಮೃಗ**ವೆಂದು ಕರೆಯಲ್ಪಟ್ಟನು. ಪಶುಪತಿಯು ಮೃಗವ್ಯಾಧನೆಂದು ಪ್ರಖ್ಯಾತನಾದನು. ಹೆಣ್ಣುಜಿಂಕೆಯು ರೋಹಿಣಿಯೆಂದು ಕರೆಯಲ್ಪಟ್ಟಿತು. ತ್ರಿಕಾಂಡವೇ ತ್ರಿಶೂಲವಾಯಿತು. ಅದರಿಂದ ವಿದ್ಧನಾದ ಪ್ರಜಾಪತಿಯ ರೇತಸ್ಸು ಹೊರಕ್ಕೆ ಹೊರಟು ಪ್ರವಹಿಸಿತು. ಆಗ ಅದು ಒಂದು ದೊಡ್ಡ ಸರೋವರವೇ ಆಯಿತು. ದೇವತೆಗಳು ಅದನ್ನು ಕಲುಷಿತವನ್ನಾಗಿ ಮಾಡಲಿಷ್ಟಪಡಲಿಲ್ಲ. ಅದನ್ನು ಕಲುಷಿತವನ್ನಾಗಿ ಮಾಡದೇ ಶುದ್ಧವಾಗಿರುವಂತೆಯೇ ಇಟ್ಟರು. ಆದುದರಿಂದಲೇ ಅದಕ್ಕೆ "ಮಾದುಷ"ವೆಂದು ಹೆಸರು. ಮಾನವನಿಗೆ ಸಂಬಂಧಪಟ್ಟುದೇ ಮಾದುಷವಾದುದರಿಂದ ಪರೋಕ್ಷಪ್ರಿಯರಾದ ದೇವತೆಗಳು ಈ ಮಾದುಷವನ್ನು ಮಾನುಷವನ್ನಾಗಿ ಕರೆದರು ಎಂದು ಪ್ರಜಾಪತಿಯ ಕಥೆಯನ್ನು ವಿವರಿಸಿ ತನ್ಮೂಲಕವಾಗಿ ವೈಶ್ವಾನರಾಗ್ನಿಯ ಮಹಿಮೆಯನ್ನು ಸ್ತುತಿಸಿದೆ.

ತದಗ್ನಿನಾ ಪರ್ಯಾದಧುಸ್ತನ್ಮರುತೋ ಧೂನ್ವಂಸ್ತದಗ್ನಿರ್ನ ಪ್ರಾಚ್ಯಾವಯತ್ತದಗ್ನಿನಾ ವೈಶ್ವಾನರೇಣ ಪರ್ಯಾದಧುಸ್ತನ್ಮರುತೋ ಧೂನ್ವಂಸ್ತದಗ್ನಿರ್ವೈಶ್ವಾನರಃ ಪ್ರಾಚ್ಯಾವಯತ್ತಸ್ಯ ಯದ್ರೇತಸಃ ಪ್ರಥಮಮುದದೀಪ್ಯತ ತದಸಾವಾದಿತ್ಯೋಽಭವದ್ಯದ್ದ್ವಿತೀಯಮಾಸೀತ್ತದ್ಭೃಗುರಭವತ್ತಂ ವರುಣೋ ನ್ಯಗೃಹ್ಣೀತ ತಸ್ಮಾತ್ಸ ಭೃಗುರ್ವಾರುಣಿರಥ ಯತ್ತೃತೀಯಮದೀದೇದಿವ ತ ಆದಿತ್ಯಾ ಅಭವನ್ಯೇಽಂಗಾರಾ ಆಸಂಸ್ತೇಽಂಗಿರಸೋಽಭವನ್ಯದಂಗಾರಾಃ ಪುನರವಶಾಂತಾ ಉದದೀಪ್ಯಂತ ತದ್‌ಬೃಹಸ್ಪತಿರಭವದ್ಯಾನಿ ಪರಿಕ್ಷಾಣಾನ್ಯಾಸಂಸ್ತೇ ಕೃಷ್ಣಾಃ ಪಶವೋಽಭವನ್ಯಾ ಲೋಹಿನೀ ಮೃತ್ತಿಕಾ ತೇ ರೋಹಿತಾ ಅಥ ಯದ್ಭಸ್ಮಾಸೀತ್ತತ್ಪರುಷ್ಯಂ ವ್ಯಸರ್ಪದ್ಗೌರೋ ಗವಯ ಋಶ್ಯ ಉಷ್ಟ್ರೋ ಗರ್ದಭ ಇತಿ ಯೇ ಚೈತೇಽರುಣಾಃ ಪಶವಸ್ತೇ ಚ ತಾನ್ವಾ ಏಷ ದೇವೋಽಭ್ಯವದತ ಮಮ ವಾ ಇದಂ ಮಮ ವೈ ವಾ ಸ್ತುಹಮಿತಿ ತಮೇತಯರ್ಚಾ ನಿರವಾದಯಂತ ಯೈಷಾ ರೌದ್ರೀ ಶಸ್ಯತ ಆತೇ ಪಿತರ್ಮರುತಾಂ ಸುಮ್ನಮೇತು ಮಾ ನಃ ಸೂರ್ಯಸ್ಯ ಸಂದೃಶೋ ಯುಯೋಥಾಃ ॥ ತ್ವಂ ನೋ ವೀರೋ ಅರ್ವತಿ ಕ್ಷಮೇಥಾ ಇತಿ ॥

ದೇವತೆಗಳು ಆ ತೇಜಸನ್ನು ಅಗ್ನಿಯಿಂದ ಸುತ್ತುವರೆಯಲ್ಪಡುವಂತೆ ಮಾಡಿದರು. ಆಗ ಮರುತ್ತುಗಳು ಅದನ್ನು ಚಲಿಸುವಂತೆ ಮಾಡಲು ಪ್ರಯತ್ನಿಸಿದವು. ಆಗ ಸಾಧ್ಯವಾಗಲಿಲ್ಲ. ಒಡನೆಯೇ ವೈಶ್ವಾನರಾಗ್ನಿಯಿಂದ ಸುತ್ತುವರೆಯಲ್ಪಡುವಂತೆ ಮಾಡಿದರು. ಆಗ ಮರುತ್ತುಗಳು ಅದನ್ನು ಊದಿದಾಗ ಅದು ಚಲಿಸಲಾರಂಭಿಸಿತು. ಆಗ ಪ್ರದೀಪ್ತವಾದ ತೇಜಸ್ಸಿನ ಪ್ರಥಮಭಾಗವು ಅಂತರಿಕ್ಷದಲ್ಲಿ ಆದಿತ್ಯರೂಪದಿಂದ ಪ್ರಕಾಶಿಸಿತು. ಎರಡನೆಯ ಭಾಗವು ಭೃಗುರೂಪವಾಗಿ ಪರಿಣಮಿಸಿತು. ಅದನ್ನು ವರುಣನು ಸ್ವೀಕರಿಸಿದನು. ಆದುದರಿಂದಲೇ ಭೃಗುವನ್ನು **ವಾರುಣಿ** ಅಥವಾ ವರುಣಪುತ್ರನೆಂದು ಕರೆದಿದೆ. ಆ ರೇತಸ್ಸಿನ ಮೂರನೇ ಭಾಗವು ದ್ಯುಲೋಕದ ಆದಿತ್ಯರ ರೂಪದಲ್ಲಿ ಪರಿವರ್ತಿತವಾಯಿತು. ಮತ್ತು ಪ್ರಭಾರೂಪದಲ್ಲಿ ಪ್ರಕಾಶಿಸಿತು. ಅಂಗಾರವೇ ಅಂಗಿರಸ್ಸುಗಳಾಯಿತು, ಈ ಅಂಗಾರಗಳು ಉಪಶಮಿತವಾದಾಗ ಪುನಃ ತೇಜೋಯುತವಾದುವು, ಆಗ ಬೃಹಸ್ಪತಿಯ ಉತ್ಪತ್ತಿಯಾಯಿತು. ಉಪಶಮಿತವಾದ ಅಂಗಾರಗಳು ಕಪ್ಪುಬಣ್ಣದ ಪಶುಗಳಾದವು, ವಿಧವಿಧವಾಗಿ ಹರಡಿದ ಭಸ್ಮಗಳು ಎಮ್ಮೆ, ಗವಯ, ಒಂಟೆ, ಕತ್ತೆ ಇತ್ಯಾದಿ ರೂಪಗಳಲ್ಲಿ ಪರಿವರ್ತಿತವಾದವು. "ಇವೆಲ್ಲವೂ ನನಗೇ ಸೇರಿದವಾಗಿವೆ" ಯೆಂದು ಈ ದಿವ್ಯಪುರುಷ ರೂಪನಾದ ಪಶುಪತಿಯು ಹೇಳಿದನು. ಆದರೆ, ದೇವತೆಗಳು "**ಆ ತೇ ಪಿತರ್ಮರುತಾಂಸುಮ್ನಮೇತು**" (ಋ. ಸಂ. ೨-೩೩-೧) ಎಂಬ ಮಂತ್ರದಿಂದ ಅವನನ್ನು ಸ್ತುತಿಸಿ "ಎಲೈ ಮರುತ್ತುಗಳ ಪಿತೃವಾದ ಪಶುಪತಿಯೇ (ರುದ್ರನೇ), ನಿನ್ನ ಅನುಗ್ರಹವು ನಮ್ಮ ಮೇಲಿರಲಿ. ನಮ್ಮನ್ನು ಈ ಸೂರ್ಯದರ್ಶನದಿಂದ ತಪ್ಪಿಸಿ ಬೇರೆಯಾಗಿ ಮಾಡಬೇಡ. ನಮ್ಮ ಈ ಪಶುಗಳಮೇಲೆ ದಯೆಯಿಡು ನಮ್ಮನ್ನು ರಕ್ಷಿಸು ಎಂದು ಪ್ರಾರ್ಥಿಸಿದರು. ಆದುದರಿಂದಲೇ,

'ಬ್ರೂಯಾನ್ನಾಭಿ ನ ಇತ್ಯನಭಿಮಾನುಕೋ ಹ್ಯೆಷ ದೇವಃ ಪ್ರಜಾ ಭವತಿ ಪ್ರಜಾಯೇಮಹಿ ರುದ್ರಿಯ ಪ್ರಜಾಭಿರಿತಿ ಬ್ರೂಯಾನ್ನ ರುದ್ರೇತ್ಯೇತಸ್ಯೈವ ನಾಮ್ನಃ ಪರಿಹೃತ್ಯೈ ತದು ಖಲು ಶಂ ನಃ ಕರತೀತ್ಯೇವ ಶಂಸೇಚ್ಛಮಿತಿ ಪ್ರತಿಪದ್ಯತೇ ಸರ್ವಸ್ಮಾ ಏವ ಶಾಂತ್ಯೈ ನೃಭ್ಯೋ ನಾರಿಭ್ಯೋ ಗವ ಇತಿ ಪುಮಾಂಸೋ ವೈ ನರಸ್ತ್ರಿಯೋ ನಾರ್ಯಃ ಸರ್ವಸ್ಮಾ ಏವ ಶಾಂತ್ಯೈ ಸೋಽನಿರುಕ್ತಾ ರೌದ್ರೀ ಶಾಂತಾ ಸರ್ವಾಯುಃ ಸರ್ವಾಯುತ್ವಾಯ ಸರ್ವಮಾಯುರೇತಿ ಯ ಏವಂ ವೇದ ಸೋ ಗಾಯತ್ರೀ ಬ್ರಹ್ಮ ವೈ ಗಾಯತ್ರೀ ಬ್ರಹ್ಮಣೈವೈನಂ ತಂ ನಮಸ್ಯತಿ ॥

(ಐ. ಬ್ರಾ. ೧೩-೩೪)

ಆದುದರಿಂದ ಮಂತ್ರದ ಅಂತ್ಯದಲ್ಲಿ '**ನಾಭಿ ನಃ**' ನಮ್ಮೆದುರಾಗಿ (ಕ್ರುದ್ಧನಾಗಿ) ಬರಬೇಡ ಎಂದು ಪ್ರಾರ್ಥಿಸಬೇಕು. ಆ ಸಂದರ್ಭದಲ್ಲಿ ರುದ್ರನು ಸ್ತೋತೃವಿನ ಸಂತತಿಯನ್ನು ಹಿಂಸಿಸುವುದಿಲ್ಲ. ನಂತರ, ಎಲೈ ರುದ್ರನೇ, ನಾವು ನಿನ್ನ ಅನುಗ್ರಹದಿಂದ ಪ್ರಜಾಸಂಪತ್ತಿನಿಂದ ಕೂಡಿದವರಾಗಿರುವಂತೆ ಮಾಡು ಎಂದು ಪ್ರಾರ್ಥಿಸಬೇಕು. ಆದರೆ, ರುದ್ರನೇ ಎಂದು ನಾಮನಿರ್ದೇಶದಿಂದ ಸಂಬೋಧಿಸಬಾರದು. **ರುದ್ರಿಯೆ** ಎಂದು ಮಾತ್ರ ಮಂತ್ರದಲ್ಲಿ ಪಠಿಸಬೇಕು. ಮತ್ತು,

**" ಶಂ ನಃ ಕರತ್ಯರ್ವತೇ ಸುಗಂ ಮೇಷಾಯ ಮೇಷ್ಯೇ । ನೃಭ್ಯೋ ನಾರಿಭ್ಯೋ ಗವೇ " ।**

(ಋ. ಸಂ. ೧-೪೩-೬)

ಎಲೈ ದೇವನೇ, ನಮ್ಮ ಮೇಷಾದಿ ಪಶುಪ್ರಾಣಿಗಳಿಗೂ, ಸಂತತಿಗಳಿಗೂ ಕ್ಷೇಮವನ್ನುಂಟುಮಾಡು ಎಂದು ಪ್ರಾರ್ಥಿಸಬೇಕು. ಪ್ರಾರ್ಥನಾಮಂತ್ರವಾದ ಇದರಲ್ಲಿ ರುದ್ರನ ನಾಮನಿರ್ದೇಶನವಿದೆ. ಆದರೂ ರುದ್ರನನ್ನೇ ಸಂಬೋಧಿಸಿದೆ. ಈ ತತ್ವವನ್ನರಿತು ರುದ್ರನನ್ನು ಪ್ರಾರ್ಥಿಸಿದರೆ ಯಜಮಾನನು ಪೂರ್ಣವಾದ ಆಯುಸ್ಸನ್ನೂ, ಪುತ್ರಪೌತ್ರಾದಿ ಸಂಪತ್ತನ್ನೂ ಪಡೆಯುತ್ತಾನೆ. ಗಾಯತ್ರ್ಯಾತ್ಮಕವಾದ ದಿವ್ಯಶಕ್ತಿಯಿಂದ ಕೂಡಿದುದೂ ಆದ ಈ ಮಂತ್ರಪಠನವು ಸರ್ವಶ್ರೇಯಸ್ಸಿಗೂ ಕಾರಣವಾಗುತ್ತದೆ.

**೪. ಅಗ್ನಿಮಾರುತ ಶಾಸ್ತ್ರದಲ್ಲಿ ವೈಶ್ವಾನರಾಗ್ನಿಪ್ರಶಂಸಾತ್ಮಕವಾದ ಪ್ರಕೃತವಾದ ಸೂಕ್ತಕ್ಕಿರುವ ಸ್ಥಾನ.**

**ವೈಶ್ವಾನರೀಯೇಣಾಗ್ನಿಮಾರುತಂ ಪ್ರತಿಪದ್ಯತೇ ವೈಶ್ವಾನರೋ ವಾ ಏತದ್ರೇತಃ ಸಿಕ್ತಂ ಪ್ರಾಚ್ಯಾ-ವಯತ್ತಸ್ಮಾದ್ವೈಶ್ವಾನರೀಯೇಣಾಗ್ನಿಮಾರುತಂ ಪ್ರತಿಪದ್ಯತೇ ಅನವಾನಂ ಪ್ರಥಮ ಋಚ ಶಂಸ್ತವ್ಯಾಗ್ನೀನ್ವಾ ಏಷೋಽರ್ಚಿಭಿಃ ಶಾಂತಾನ್ಪ್ರಸೀದನ್ನೇತಿ ಯ ಆಗ್ನಿಮಾರುತಂ ಶಂಸತಿ ಪ್ರಾಣೇನೈವ ತದಗ್ನೀಂಸ್ತರತ್ಯಧೀಯೆನ್ನುಪಹನ್ಯಾದನ್ಯಂ ವಿವಕ್ತಾರಮಿಚ್ಛೇತ್ತ್ರಮೇವ ತತ್ಸೇತುಂ ಕೃತ್ವಾ ತರತಿ ॥**

ವೈಶ್ವಾನರಾಗ್ನಿಯ ಜೊತೆಯಲ್ಲಿ ಕೂಡಿ ತಮ್ಮ ಸಾಮರ್ಥ್ಯವನ್ನು ಮರುತ್ತುಗಳು ಪ್ರಕಟಿಸಿದವು ಎಂದು ವೈಶ್ವಾನರಾಗ್ನಿಯ ಮಹತ್ವನ್ನು ಪ್ರಶಂಸಿಸುವ ಈ ಆಗ್ನಿಮಾರುತ ಶಸ್ತ್ರದಲ್ಲಿ '**ವೈಶ್ವಾನರಾಯ ಪೃಥುಪಾಜಸೇ**' ಎಂಬ ಮಂತ್ರದಿಂದ ಪ್ರಾರಂಭವಾಗುವ ಪ್ರಕೃತವಾದ ಸೂಕ್ತವು ಪ್ರಥಮತಃ ಪಠಿಸಲ್ಪಡುತ್ತದೆ. ಭೂಮಿಯಲ್ಲಿ ಸಿಕ್ತವಾದ ಪ್ರಜಾಪತಿಯ ವೀರ್ಯವು ವೈಶ್ವಾನರಾಗ್ನಿಯ ಶಕ್ತಿಯಿಂದ ಮಾತ್ರವೇ ಚಲಿಸಿತಾದುದರಿಂದ ಆಗ್ನಿಮಾರುತಶಸ್ತ್ರದ ಪ್ರಾರಂಭದಲ್ಲಿ ವೈಶ್ವಾನರೀಯವಾದ ಸೂಕ್ತವನ್ನೇ ಪಠಿಸಬೇಕು. ಈ ಪ್ರಥಮ ಮಂತ್ರವನ್ನು ಪಠಿಸುವಾಗ ಉಸಿರನ್ನು ಒಳಕ್ಕೆ ಎಳೆಯಕೂಡದು. ಈ ರೀತಿ ಪಠಿಸುವುದರಿಂದ ಉರಿಯುತ್ತಿರುವ ಜ್ವಾಲೆಯನ್ನು ಸಹ ಪ್ರಶಮನ ಮಾಡಲು ಸಾಧ್ಯವಾಗುತ್ತದೆ. ಆದರೆ ಈ ಮಂತ್ರವನ್ನು ಪಠಿಸುವಾಗ ಸ್ವರವ್ಯತ್ಯಸ್ತವಾಗಿ ತಪ್ಪುಮಾಡಲು ಅವಕಾಶವಿರುವುದರಿಂದ ಇಂತಹ ತಪ್ಪುಗಳನ್ನು ತೋರಿಸಿಕೊಡಲು ಸಹಾಯಕ್ಕೆ ಇನ್ನೊಬ್ಬ ಸ್ತೋತೃವನ್ನಿಟ್ಟಿರಬೇಕು. ಸೇತುವೆಯಂತಿರುವ ಅವನ ಸಹಾಯದಿಂದ ತಪ್ಪೆಂಬ ಸಾಗರವನ್ನು ದಾಟಬಹುದು.

**ತಸ್ಮಾದಾಗ್ನಿಮಾರುತೇನ ವ್ಯುಚ್ಯಮೇಷ್ವವ್ಯೋ ವಿವಕ್ತಾ ಮಾರುತಂ ಶಂಸತಿ ಮರುತೋ ಹ ವಾ ಏತದ್ರೇತಃ ಸಿಕ್ತಂ ಧೂನ್ವಂತಃ ಪ್ರಾಚ್ಯಾವಯಂಸ್ತಸ್ಮಾನ್ಮಾರುತಂ ಶಂಸತಿ**

**ಯಜ್ಞಾ ಯಜ್ಞಾವೋ ಅಗ್ನಯೇ ದೇವೋ ವೋ ದ್ರವಿಣೋದಾ ಇತಿ ಮಧ್ಯೇ ಯೋನಿಂ ಚಾನುರೂಪಂ ಚ ಶಂಸತಿ ತದ್ಯನ್ಮಧ್ಯೇ ಯೋನಿಂ ಚಾನುರೂಪಂ ಚ ಶಂಸತಿ ತಸ್ಮಾನ್ಮಧ್ಯೇ ಯೋನಿರ್ಧೃತಾ ಯದು ದ್ವೇ ಸೂಕ್ತೇ ಶಸ್ತ್ವಾ ಶಂಸತಿ ಪ್ರತಿಷ್ಠಯೋರೇವ ತದುಪರಿಷ್ಟಾತ್ಪ್ರಜನನಂ ದಧಾತಿ ಪ್ರಜಾತ್ಯೈ ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥**

(ಐ. ಬ್ರಾ. ೧೨–೩೪)

ಆದುದರಿಂದ ಆಗ್ನಿಮಾರುತಶಸ್ತ್ರವನ್ನು ಪಠಿಸುವಾಗ ಅಶುದ್ಧವಾದ ಪಠನವು ಸಂಭವಿಸಬಹುದಾದುದರಿಂದ ಅದನ್ನು ತಿದ್ದಲು ಸ್ವತಃ ಪ್ರಯತ್ನಿಸದೇ ಸಹಾಯಕ್ಕೆ ಇನ್ನೊಬ್ಬ[ಸ್ತೋ]ತೃವನ್ನು ಇಟ್ಟೇ ತೀರಬೇಕು. ಪ್ರಜಾಪತಿಯ ರೇತಸ್ಸನ್ನು ಚಲಿಸುವಂತೆ ಮಾಡಲು ಅಗ್ನಿವೈಶ್ವಾನರನೊಂದಿಗೆ ಮರುತ್ತುಗಳೂ ಸೇರಿ ಅದನ್ನು ಊದಿ ಚಲಿಸುವಂತೆ ಮಾಡಿದುದರಿಂದ ಮರುತ್ಪ್ರಶಂಸಾತ್ಮಕವಾದ ಸೂಕ್ತವನ್ನೂ ಪಠಿಸಬೇಕು. "**ಯಜ್ಞಾಯಜ್ಞಾ ವಃ ಸಮನಾ**" (ಋ. ಸಂ. ೧–೧೬೮–೧) ಮತ್ತು "**ದೇವೋ ವೋ ದ್ರವಿಣೋದಾಃ**" (೭–೧೬–೧೧) ಇತ್ಯಾದಿ ಮಂತ್ರಗಳ ನಡುವೆ ಪಠಿತವಾಗುವ ಮರುದ್ದೇವತಾಕವಾದ ಮಂತ್ರವು ಮಂತ್ರಾಂತರಗಳ ಮಧ್ಯಭಾಗದಲ್ಲಿರುವುದರಿಂದ ಗರ್ಭದಂತಿರುತ್ತದೆ. ಆದುದರಿಂದಲೇ ಪುರುಷಗರ್ಭವೂ ಸಹ ಶರೀರದ ಮಧ್ಯಭಾಗದಲ್ಲಿರುತ್ತದೆ. ಈ ತತ್ತ್ವವನ್ನರಿತವನಿಗೆ ಪಶುಪುತ್ರಾದಿ ಸಂಪತ್ಸಮೃದ್ಧಿಯುಂಟಾಗುತ್ತದೆ. ಇದು ಆಗ್ನಿಮಾರುತ ಶಸ್ತ್ರದಿಂದ ಪ್ರಶಂಸಿತವಾಗಿರುವ ವೈಶ್ವಾನರಾಗ್ನಿಯ ಮಹಿಮೆ. ಪ್ರಕೃತವಾದ ಸೂಕ್ತದಲ್ಲಿ ಇಂತಹ ಮಾಹಾತ್ಮ್ಯವುಳ್ಳ ವೈಶ್ವಾನರನಿಗೂ ಯಜ್ಞತತ್ತ್ವಕ್ಕೂ ಇರುವ ಸಂಬಂಧವನ್ನು ತಿಳಿಸುತ್ತಾ, ಸೃಷ್ಟ್ಯಾದಿ ಕಾರ್ಯಗಳೆಲ್ಲವೂ ತತ್ಸಂಬಂಧವಾದುದೇ ಎಂದು ತೋರಿಸಿದೆ.



॥ ಸಾಯಣಭಾಷ್ಯಂ ॥

**ವೈಶ್ವಾನರಾಯೇತ್ಯೇಕಾದಶರ್ಚಂ ತೃತೀಯಂ ಸೂಕ್ತಂ ವೈಶ್ವಾಮಿತ್ರಂ । ಅತ್ರೇಯಮನುಕ್ರಮಣಿಕಾ । ವೈಶ್ವಾನರಾಯೈಕಾದಶೇತಿ । ಪೂರ್ವಸೂಕ್ತೇ ವೈಶ್ವಾನರೀಯಂ ತು ಜಾಗತಂ ತ್ವಿತ್ಯುಕ್ತತ್ವಾದಸ್ಯಾಪಿ ಸೂಕ್ತಸ್ಯ ಜಗತೀ ಛಂದೋ ವೈಶ್ವಾನರೋಽಗ್ನಿರ್ದೇವತಾ ॥ ಅಸ್ಯ ಸೂಕ್ತಸ್ಯಾಗ್ನಿಷ್ಟೋಮ ಆಗ್ನಿಮಾರುತೇ ಶಸ್ತ್ರೇ ವಿನಿಯೋಗಃ । ಸೂತ್ರ್ಯತೇ ಹಿ । ವೈಶ್ವಾನರಾಯ ಪೃಥುಪಾಜಸೇ ಶಂ ನಃ ಕರತ್ಯರ್ವತೇ । ಆ. ೫–೨೦ । ಇತಿ ॥**

ಅನುವಾದವು—**ವೈಶ್ವಾನರಾಯ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು ; ಅನುಕ್ರಮಣಿಕೆಯಲ್ಲಿ **ವೈಶ್ವಾನರಾಯೈಕಾದಶ** ಎಂದು ಹೇಳಿರುವುದು. ಹಿಂದಿನ ಸೂಕ್ತದ ವಿಷಯವಾದ ಅನುಕ್ರಮಣಿಕೆಯಲ್ಲಿ **ವೈಶ್ವಾನರೀಯಂ ತು ಜಾಗತಂ ತು** ಎಂದು ಹೇಳಿರುವುದರಿಂದ ಆ ಸೂಕ್ತದಂತೆ ಈ ಸೂಕ್ತಕ್ಕೂ ವೈಶ್ವಾನರಾಗ್ನಿಯು ದೇವತೆಯು ; ಜಗತೀ ಛಂದಸ್ಸು. ಅಗ್ನಿಷ್ಟೋಮಯಾಗದಲ್ಲಿ ಆಗ್ನಿಮಾರುತಶಸ್ತ್ರಮಂತ್ರಗಳ ಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ವೈಶ್ವಾನರಾಯ ಪೃಥುಪಾಜಸೇ ಶಂ ನಃ ಕರತ್ಯರ್ವತೇ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೫–೨೦).



## ಸೂಕ್ತ—೩

ಮಂಡಲ—೩ ॥ ಅನುವಾಕ—೧ ॥ ಸೂಕ್ತ—೩ ॥
ಅಷ್ಟಕ—೨ ॥ ಅಧ್ಯಾಯ—೮ ॥ ವರ್ಗ—೨೦, ೨೧ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
ಋಷಿಃ :— ವಿಶ್ವಾಮಿತ್ರಃ ॥
ದೇವತಾಃ :—ಅಗ್ನಿರ್ವೈಶ್ವಾನರಃ ॥
ಛಂದಃ :—ಜಗತೀ ॥

॥ ಸಂಹಿತಾಪಾಠಃ ॥

ವೈಶ್ವಾನರಾಯ ಪೃಥುಪಾಜಸೇ ವಿಪೋ ರತ್ನಾ ವಿಧಂತ ಧರುಣೇಷು ಗಾತವೇ ।
ಅಗ್ನಿರ್ಹಿ ದೇವಾँ ಅಮೃತೋ ದುವಸ್ಯತ್ಯಥಾ ಧರ್ಮಾಣಿ ಸನತಾ ನ ದೂದುಷತ್ ॥

॥ ಪದಪಾಠಃ ॥

ವೈಶ್ವಾನರಾಯ । ಪೃಥುऽಪಾಜಸೇ । ವಿಪಃ । ರತ್ನಾ । ವಿಧಂತ । ಧರುಣೇಷು । ಗಾತವೇ ।
ಅಗ್ನಿಃ । ಹಿ । ದೇವಾನ್ । ಅಮೃತಃ । ದುವಸ್ಯತಿ । ಅಥ । ಧರ್ಮಾಣಿ । ಸನತಾ । ನ । ದೂದುಷತ್ ॥ ೧ ॥

॥ ಸಾಯಣಭಾಷ್ಯಂ ॥

ವಿಪೋ ಮೇಧಾವಿನಃ ಸ್ತೋತಾರಃ ಪೃಥುಪಾಜಸೇ ಬಹುಬಲಾಯ ಬಹ್ವನ್ನಾಯ ವಾ । ಪಾಜಃ ಶಬ್ದಸ್ಯ ಬಲಾನ್ನನಾಮ್ನೋಃ ಪಾಠಾತ್ । ವೈಶ್ವಾನರಾಯಾಗ್ನಯೇ ಧರುಣೇಷು ಧರ್ಮೇಷು ಯಜ್ಞೇಷು ರತ್ನಾ ರಮಣೀಯಾನಿ ಸ್ತೋತ್ರಾಣಿ ಗಾತವೇ ಸನ್ಮಾರ್ಗಲಾಭಾಯ ವಿಧಂತ । ಪರಿಚರಂತಿ । ಕುರ್ವಂತಿ । ಅಮೃತೋ ಮರಣರಹಿತೋऽಗ್ನಿರ್ದೇವಾನ್ ದುವಸ್ಯತಿ । ಹವಿಷಾಂ ಪ್ರದಾನೇನ ಪರಿಚರತಿ । ಹಿಃ ಪ್ರಸಿದ್ಧೌ । ಅಥ ಅತಃ ಕಾರಣಾತ್ಕೋऽಪಿ ಸನತಾ ಸನಾತನಾನಿ ಧರ್ಮಾಣಿ ಯಜ್ಞಾನ್ ನ ದೂದುಷತ್ । ನ ದೂಷಯತಿ ॥

॥ ಪ್ರತಿಪದಾರ್ಥ ॥

**ವಿಪಃ**— ಮೇಧಾವಿಗಳಾದ ಸ್ತೋತೃಗಳು । **ಪೃಥುಪಾಜಸೇ**— ಪ್ರಭೂತವಾದ ಬಲವುಳ್ಳವನೂ । **ವೈಶ್ವಾನರಾಯ**—ವೈಶ್ವಾನರ ರೂಪದಲ್ಲಿರುವವನೂ ಆದ ಅಗ್ನಿಯ ಆರಾಧನೆಗಾಗಿ । **ಧರುಣೇಷು**—ಯಜ್ಞಗಳಲ್ಲಿ । **ರತ್ನಾ**—ರಮಣೀಯವಾದ ಸ್ತೋತ್ರಗಳನ್ನು । **ಗಾತವೇ**—ಸನ್ಮಾರ್ಗ ಲಾಭಕ್ಕಾಗಿ । **ವಿಧಂತ**—ನಿರ್ಮಿಸುತ್ತಾರೆ । **ಅಮೃತಃ**—ಮರಣರಹಿತನಾದ । **ಅಗ್ನಿಃ**—ಅಗ್ನಿಯು । **ದೇವಾನ್**—ದೇವತೆಗಳನ್ನು । **ದುವಸ್ಯತಿ ಹಿ**—

ಪರಿಚರಿಸುತ್ತಾನೆಯಲ್ಲವೇ । **ಅತಃ**—ಆದ್ದರಿಂದ । **ಸನತಾ**—ಸನಾತಗನಳಾದ । **ಧರ್ಮಾಣಿ**—ಯಜ್ಞಗಳನ್ನು । **ನ ದೂದುಷತ್**—ಯಾರೂ ಅವಹೇಳನ ಮಾಡುವುದಿಲ್ಲ.

॥ ಭಾವಾರ್ಥ ॥

ಮೇಧಾವಿಗಳಾದ ಸ್ತೋತೃಗಳು ಪ್ರಭೂತವಾದ ಬಲವುಳ್ಳವನೂ, ವೈಶ್ವಾನರ ರೂಪದಲ್ಲಿರುವವನೂ ಆದ ಅಗ್ನಿಯ ಆರಾಧನೆಗಾಗಿ ಯಜ್ಞಗಳಲ್ಲಿ ರಮಣೀಯವಾದ ಸ್ತುತಿಗಳನ್ನು ಸನ್ಮಾರ್ಗಗಾಮಿಯಾಗಬೇಕೆಂಬ ಉದ್ದಿಶ್ಯದಿಂದ ನಿರ್ಮಿಸುತ್ತಾರೆ (ಅರ್ಪಿಸುತ್ತಾರೆ). ಮರಣರಹಿತನಾದ ಅಗ್ನಿಯು ದೇವತೆಗಳನ್ನು ಉಪಚರಿಸುತ್ತಾನೆ. ಆದುದರಿಂದ ಸನಾತಗಳಾದ ಯಜ್ಞಗಳನ್ನು ಯಾರೂ ಅವಹೇಳನ ಮಾಡುವುದಿಲ್ಲ.

## English Translation.

Intelligent (worshippers), offer to powerful Vaishwanara precious things at holy rites, that they may go (the way of the good), for the immortal Agni worships the gods ; therefore, let no one violate eternal duties.

॥ ವಿಶೇಷವಿಷಯಗಳು ॥

ಪ್ರಕೃತವಾದ ಋಕ್ಕಿನಲ್ಲಿ ವೈಶ್ವಾನರಾಗ್ನಿಯ ಸ್ತುತಿಯಿದೆ. ಆ ಸ್ತುತಿಯು ವೈಶ್ವಾನರನಿಗೂ ಯಜ್ಞಕ್ಕೂ ಇರುವ ಸಾಕ್ಷಾತ್ಸಂಬಂಧವನ್ನು ಸೂಚಿಸುವುದಾಗಿದೆ. **ಧರುಣೇಷು, ಧರ್ಮಾಣಿ** ಎಂಬ ಯಜ್ಞಪರ್ಯಾಯ ಪದಗಳು ಯಜ್ಞತತ್ವದ ವಿಶೇಷಾರ್ಥವನ್ನು ತಿಳಿಸುತ್ತವೆ. ಇಂತಹ **ಧರುಣ**ರೂಪವಾದುದೂ **ಧರ್ಮಾತ್ಮ**ಕವಾದುದೂ ಆದ ಯಜ್ಞದ ಮೂಲಕ ವೈಶ್ವಾನರಾಗ್ನಿಯು ದೇವತೆಗಳನ್ನು ಸೇವಿಸುತ್ತಾನೆ. ಆದುದರಿಂದ ಈ ಯಜ್ಞವನ್ನು ಯಾರೂ ಅವಹೇಳನ ಮಾಡುವುದಿಲ್ಲ ಎಂದರೆ ಇದು ವಿಶ್ವಪೂಜ್ಯವೆಂದು ತಾತ್ಪರ್ಯ.

ಪ್ರಕೃತದಲ್ಲಿ ದೇವಪೂಜಾ ಸಾಧನ ರೂಪವಾದ ಈ ಯಜ್ಞದ ಸ್ವರೂಪವೇನೆಂಬುದನ್ನು ಪರಿಶೀಲಿಸಬೇಕು. ಇದು ಯಾವರೀತಿ ಧರುಣರೂಪವಾಗಿದೆ; ಧರ್ಮಾತ್ಮಕವಾಗಿದೆಯೆಂದರೇನು ಎಂಬುದನ್ನೂ ವಿಮರ್ಶಿಸಬೇಕು.

### ೧. ಧರುಣವೂ ಧರ್ಮವೂ ಆದ ಯಜ್ಞತತ್ತ್ವದ ಸ್ವರೂಪ.

**ಧರಣೇಷು—ಧರ್ಮೇಷು ಯಜ್ಞೇಷು ।** ಧರ್ಮಾತ್ಮಕವಾದ ಯಜ್ಞಗಳಲ್ಲಿ ಎಂದು **ಧರುಣ** ಶಬ್ದಕೂ **ಧರ್ಮ** ವೆಂದೇ ಅರ್ಥಮಾಡಿದೆ. ಈ ಎರಡು ಪದಗಳೂ ಸಹ ಧರಿಸು ಎಂಬರ್ಥವನ್ನು ಕೊಡುವ **ಧೃ** ಧಾತುವಿನಿಂದಲೇ ನಿಷ್ಪನ್ನವಾಗಿವೆ. ಋಕ್ಸಂಹಿತೆಯಲ್ಲಿಯೂ ಸಹ **ಧರುಣ** ಶಬ್ದವು ಸರ್ವತ್ರ ಧಾರಕಾರ್ಥದಲ್ಲಿಯೇ ಪ್ರಯೋಗಿಸಲ್ಪಟ್ಟಿದೆ ಈ ಪದಗಳು ಪ್ರಕೃತದಲ್ಲಿ ಯಜ್ಞಪರ್ಯಾಯ ಪದಗಳಾಗಿರುವುದರಿಂದ ಯಜ್ಞವು ಧಾರಕವಾದುದು ಎಂದು ತಾತ್ಪರ್ಯ, ಎಂದರೆ ಯಜ್ಞವು ಯಾವುದನ್ನು ಧರಿಸುತ್ತದೆ- ಎಂಬುದೇ ಪ್ರಶ್ನೆ.

**“ ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ”**

(ಋ. ಸಂ. ೧೦-೯೦-೧೬)

ದೇವತೆಗಳು ಯಜ್ಞದಿಂದ ಯಜ್ಞವನ್ನು ಆರಾಧಿಸಿದರು ಈ ಆರಾಧನಾರೂಪವಾದ ಕ್ರಿಯೆಯೇ ಜಗತ್ತಿನ ರೂಪ ವಿಕಾರಗಳ ಮುಖ್ಯವಾದ ಧಾರಕಗಳಾದವು ಎಂದು ಋಕ್ಸಂಹಿತೆಯಲ್ಲಿ ಮಂತ್ರವನ್ನು ವಿವರಿಸುತ್ತಾ । **ದೇವಾಃ**

**ಪ್ರಜಾಪತಿಪ್ರಾಣರೂಪಾಃ । ಯಜ್ಞೇನ ಯಥೋಕ್ತಮಾನಸೇನ ಸಂಕಲ್ಪೇನ ಯಜ್ಞಂ ಯಥೋಕ್ತಯಜ್ಞಸ್ವರೂಪಂ ಪ್ರಜಾಪತಿಂ ಅಯಜಂತ ಪೂಜಿತವಂತಃ । ತಸ್ಮಾತ್ ಪೂಜನಾತ್ ತಾನಿ ಪ್ರಸಿದ್ಧಾನಿ ಧರ್ಮಾಣಿ ಜಗದ್ರೂಪವಿಕಾರಾಣಾಂ ಧಾರಕಾಣಿ ಮುಖ್ಯಾನ್ಯಾಸನ್ ॥** ಪ್ರಜಾಪತಿಪ್ರಾಣಗಳೇ ದೇವಶಬ್ದವಾಚ್ಯವು. **ಯಜ್ಞೇನ** ಎಂದರೆ ಮಾನಸಿಕ ಸಂಕಲ್ಪರೂಪದಿಂದ | **ಯಜ್ಞಂ** ಅದೇ ಯಜ್ಞಸ್ವರೂಪನಾದ ಪ್ರಜಾಪತಿಯನ್ನು **ಅಯಜಂತ**—ಪೂಜಿಸಿದರು. ಈ ಪೂಜೆಯೇ ಪ್ರಸಿದ್ಧವಾದ ಜಗದ್ಧಾರಕಗಳಾದ ಕ್ರಿಯೆಗಳಾದವು ಎಂದು ಪ್ರಜಾಪತಿಗೂ ಯಜ್ಞಕ್ಕೂ ಒಂದು ದೃಷ್ಟಿಯಿಂದ ತಾದಾತ್ಮ್ಯವನ್ನೂ, ಇನ್ನೊಂದು ದೃಷ್ಟಿಯಿಂದ ಕಾರ್ಯಕಾರಣಸಂಬಂಧವನ್ನೂ ತಿಳಿಸಿದೆ. ಆದರೆ, ಇಂತಹ ಯಜ್ಞದಲ್ಲಿ, ಯಜ್ಞಕ್ಕೆ ಕೇತುವೂ, ವಿದಥಗಳಿಗೆ ಸಾಧನವೂ ಆದ ಅಗ್ನಿಯ ಸ್ವರೂಪ ಸ್ಥಾನಮಾನಗಳೇನು? ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವ ವೈಶ್ವಾನರಾಗ್ನಿಗೂ, ಧರ್ಮರೂಪವಾದ ಯಜ್ಞಕ್ಕೂ ಯಾವ ಸಂಬಂಧ? ಎಂದರೆ,

> **ಉಭಯಗ್‌ಂ ಹೈತದ್ಭವತಿ ಪಿತಾ ಚ ಪುತ್ರಶ್ಚ ಪ್ರಜಾಪತಿಶ್ಚಾಗ್ನಿಶ್ಚಾಗ್ನಿಶ್ಚ ಪ್ರಜಾಪತಿಶ್ಚ ಪ್ರಜಾಪತಿಶ್ಚ ದೇವಾಶ್ಚ ದೇವಾಶ್ಚ ಪ್ರಜಾಪತಿಶ್ಚ ಯ ಏವಂ ವೇದ ।**
>
> (ಶ. ಬ್ರಾ. ೬-೧-೨-೨೭)

ಈ ಯಜ್ಞತತ್ತ್ವವು (ಅಥವಾ ವಿಶ್ವತತ್ತ್ವವು) ದ್ವಿವಿಧಾತ್ಮಕವಾಗಿದೆ. ಪಿತೃಪುತ್ರರೂಪಾತ್ಮಕವಾಗಿದೆ. ಪ್ರಜಾಪತಿಯೇ ಅಗ್ನಿಯ ಪಿತೃವು, ಅಗ್ನಿಯೇ ಪ್ರಜಾಪತಿಗೆ ಪಿತೃವು. (ಶ. ಬ್ರಾ. ೬-೧-೨-೨೬) ಪ್ರಜಾಪತಿಯು ದೇವತೆಗಳಿಗೆ ಪಿತೃವು. ದೇವತೆಗಳು ಪ್ರಜಾಪತಿಗೆ ಪಿತೃಗಳು, ಹೀಗೆ ಪಿತೃಪುತ್ರರೂಪಗಳ ಸಮಾವೇಶವಾಗಿದೆ. **"ಸ ದಾಧಾರ ಪೃಥಿವೀಮುತ ದ್ಯಾಂ" "ಯ ಆತ್ಮದಾ ಬಲದಾಃ"** (ಋ. ಸಂ. ೧೦-೧೨೧-೧, ೨) ಅದೇ ಪ್ರಜಾಪತಿಯು (ಹಿರಣ್ಯಗರ್ಭರೂಪನು) ಸಕಲವಾದ ವಿಶ್ವವನ್ನೂ ತನ್ನಲ್ಲಿಯೇ ಧರಿಸಿದನು. ಅವನ ತ್ಯಾಗದಿಂದಲೇ ಸಕಲಸೃಷ್ಟಿಯೂ ಸಾಧ್ಯವಾಯಿತು. ಸಕಲ ದೇವಮಾನವಾದಿಗಳೂ ಸಹ ಇವನ ಪ್ರಶಾಸನದಲ್ಲೇ ಇದ್ದಾರೆ ಇತ್ಯಾದಿಯಾಗಿ ಯಾವ ಪ್ರಜಾಪತಿಯ ವರ್ಣನವಿದೆಯೋ ಅದರಂತೆಯೇ,

> **ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾ ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾತ್ಮಾ ಸಂದೇಹೋ ಬಹುಲೋ ಬಸ್ತಿರೇವ ರಯಿಃ ಪೃಥಿವ್ಯೇವ ಪಾದಾವುರ ಏವ ವೇದಿರ್ಲೋಮಾನಿ ಬರ್ಹಿರ್ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯಪಚನ ಆಸ್ಯಮಾಹವನೀಯಃ ।**
>
> (ಛಾ. ಉ. ೫-೧೮-೨)

ಪ್ರಭಾಯುತವಾದ ಅಂತರಿಕ್ಷವೇ ಸರ್ವಾತ್ಮನಾದ ವೈಶ್ವಾನರನ ಶಿರಸ್ಸು, ವಿಶ್ವರೂಪನಾದ ಆದಿತ್ಯನೇ ನೇತ್ರವು, ಮಾರ್ಗವೈವಿಧ್ಯವನ್ನು ಹೊಂದಿರುವ ವಾಯುವೇ ಉಸಿರು, ವಿಸ್ತೃತವಾದ ದಿಕ್ಕೇ ದೇಹ, ಅಬ್ರೂಪದ ಧನವೇ ಅವನ ಅಂತಃಕೋಶ, ಸರ್ವಾಧಾರಳಾದ ಪೃಥಿವಿಯೇ ಪಾದ, ಯಜ್ಞವೇದಿಕೆಯೇ ಎದೆ, ದರ್ಭೆಗಳೇ ರೋಮಗಳು, ಗಾರ್ಹಪತ್ಯಾಗ್ನಿಯೇ ಹೃದಯ, ಅನ್ವಾಹಾರ್ಯಪಚನಾಗ್ನಿಯೇ ಮನಸ್ಸು, ಆಹವನೀಯಾಗ್ನಿಯೇ ಅವನ ಮುಖ.

> **ಅಥ ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ ತಸ್ಯ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸು ಹುತಂ ಭವತಿ ॥**
>
> (ಛಾ. ಉ. ೫-೨೪-೨)

ಹೀಗೆ ವೈಶ್ವಾನರಾಗ್ನಿಯ ವಿಶ್ವಾಸಾತ್ಮಕವಾದ ದಿವ್ಯಸ್ವರೂಪವನ್ನು ತಿಳಿದು ಯಾವ ಪುರುಷನು ಅಗ್ನಿಹೋತ್ರವನ್ನು ನೆರವೇರಿಸುತ್ತಾನೆಯೋ ಅವನು ಸಕಲ ಭೂತಗಳಲ್ಲಿಯೂ, ಸಕಲಲೋಕಗಳಲ್ಲಿಯೂ, ಸಕಲವಾದ ಆತ್ಮಗಳಲ್ಲಿಯೂ ಹುತಮಾಡಿದಂತೆಯೇ ಎಂಬುದಾಗಿ ವೈಶ್ವಾರಾಗ್ನಿಯು ವರ್ಣಿತವಾಗಿದೆ. ಯಾವ ರೀತಿ ಪ್ರಜಾಪತಿಯು **ಆತ್ಮದಾಃ ಬಲದಾಃ** ಎಂದು ವರ್ಣಿತನಾಗಿದ್ದಾನೆಯೋ ಅದರಂತೆಯೇ ದೇವಮಾನವಾದಿಗಳೂ ಸಹ ಆತ್ಮದರೂಪವಾದ ಯಜ್ಞ ಕ್ರಿಯೆಯಿಂದಲೇ ವಿಶ್ವಧರ್ಮವನ್ನು ಪಾಲಿಸಲು ಶಕ್ತರಾಗಿರುತ್ತಾರೆ; ಈ ಅಂಶದಲ್ಲಿ ಸಕಲ ಭೂತಗಳೂ ಪ್ರಜಾಪತಿಯ ಧರ್ಮವನ್ನೇ ಅನುಸರಿಸಬೇಕು. ಎಂಬ ವಿಧಿಸೂಚಕವೂ, ಐತಿಹಾಸಿಕರೂಪದಲ್ಲಿ ಉಕ್ತವಾಗಿರುವುವೂ ಆದ ಶ್ರುತಿವಾಕ್ಯಗಳು ಧರ್ಮರೂಪವಾದ ಯಜ್ಞದ ಪ್ರಾಮುಖ್ಯತೆಯನ್ನು ತಿಳಿಸುತ್ತವೆ.

**ಅಥ ದೇವಾಃ । ಅನ್ಯೋಽನ್ಯಸ್ಮಿನ್ನೇವ ಜುಹ್ವತಶ್ಚೇರುಸ್ತೇಭ್ಯಃ ಪ್ರಜಾಪತಿರಾತ್ಮಾನಂ ಪ್ರದದೌ ಯಜ್ಞೋ ಹೈಷಾಮಾಸ ಯಜ್ಞೋ ಹಿ ದೇವಾನಾಮನ್ನಂ ॥ ಸ ದೇವೇಭ್ಯ ಆತ್ಮಾನಂ ಪ್ರದಾಯ । ಅಥೈತಮಾತ್ಮನಃ ಪ್ರತಿಮಾಮಸೃಜತ ಯದ್ಯಜ್ಞಂ ತಸ್ಮಾದಾಹುಃ ಪ್ರಜಾಪತಿ-ರ್ಯಜ್ಞ ಇತ್ಯಾತ್ಮನೋ ಹ್ಯೇತಂ ಪ್ರತಿಮಾಮಸೃಜತ ।**

(ಶ. ಬ್ರಾ. ೧೧. ೧. ೮. ೨-೩)

ದೇವತೆಗಳು ಪರಸ್ಪರವಾಗಿ ಆತ್ಮತ್ಯಾಗವನ್ನು ಪ್ರಕಟಿಸುತ್ತಾ ಒಬ್ಬರನ್ನೊಬ್ಬರು ಸೇವಿಸುತ್ತಿದ್ದರು. ಪ್ರಜಾಪತಿಯು ಅವರಿಗೆ ತನ್ನನ್ನೇ ಅರ್ಪಿಸಿದನು. ಆಗ ಯಜ್ಞವು ದೇವತೆಗಳ ಭಾಗಕ್ಕೆ ಸೇರಿತು. ತನ್ನನ್ನು ದೇವತೆಗಳಿಗೆ ಅರ್ಪಿಸಿ ತನ್ನ ಪ್ರತಿನಿಧಿಯಾದ ಯಜ್ಞವನ್ನು ಸೃಷ್ಟಿಸಿದನು. ಆದುದರಿಂದ ವಿಶ್ವಾತ್ಮನಾದ ಪ್ರಜಾಪತಿಯೇ ಯಜ್ಞವೆಂದೂ, ಯಜ್ಞವೇ ಪ್ರಜಾಪತಿಯೆಂದೂ ಪ್ರಸಿದ್ಧವಾಗಿದೆ. ಪ್ರಜಾಪತಿನಿಯಮನರೂಪವಾದ ಈ ಯಜ್ಞಕ್ರಿಯೆಯು ದೇವತೆಗಳಿಂದ ಯಾವ ರೀತಿ ಆದೃತವಾಗಿದೆಯೋ ಅದೇ ರೀತಿ ಯಜ್ಞಕ್ರಿಯೆಯು ಮಾನವನ ಕರ್ತವ್ಯವೂ ಆಗಿದೆ. ಇಲ್ಲದಿದ್ದರೆ ಮಾನವನು ವಿಶ್ವಧರ್ಮವನ್ನು ಪಾಲಿಸಿದಂತಾಗುವುದಿಲ್ಲ.

**ಸ ಯದೇವ ಯಜೇತ। ತೇನ ದೇವೇಭ್ಯ ಋಣಂ ಜಾಯತೇ ತದ್ಧ್ಯೇಭ್ಯ ಏತತ್ಕರೋತಿ ಯದೇ-ನಾನ್ಯಜತೇ ಯದೇಭ್ಯೋ ಜುಹೋತಿ ॥**

(ಶ. ಬ್ರಾ ೧-೭-೨-೨)

ಯಜ್ಞಾಚರಣೆಯು ಮಾನವನಿಗೆ ವಿಹಿತವಾದ ಧರ್ಮ. ಅವನು ಸೃಷ್ಟಿಯಲ್ಲಿಯೇ ದೇವತೆಗಳಿಗೆ ಋಣಿಯಾಗಿದ್ದಾನೆ. ಆದುದರಿಂದ ಯಜ್ಞದಿಂದ ಅವರನ್ನು ತೃಪ್ತಿಪಡಿಸಿದರೆ ಅವನು ತನ್ನ ಧರ್ಮವನ್ನು ಪಾಲಿಸಿದಂತಾಯಿತು. ಇತ್ಯಾದಿಯಾಗಿ ಸೃಷ್ಟಿಕರ್ತನಾದಪ್ರಜಾಪತಿಯಿಂದ ದೇವಮಾನವಾದಿ ಸಕಲ ಪ್ರಾಣಿಗಳಿಗೂ ಯಜ್ಞಕ್ಕೂ ಇರುವ ಸಂಬಂಧವೂ, ಈ ಯಜ್ಞದಿಂದಲೇ ಈ ಸಕಲ ವಿಶ್ವದ ಸಂಬಂಧವೂ ನಿಯತವಾದ ಸ್ಥಿತಿಯಲ್ಲಿರುವುದೆಂದೂ, ಈ ವಿಶ್ವನಿಯಮವನ್ನು ಪಾಲಿಸುವುದೇ **ಧರ್ಮ**ವೆಂದೂ, ಈ ಧರ್ಮವೇ ಯಜ್ಞರೂಪವೆಂದೂ ತಿಳಿಸಿದೆ. ಈ ಧರ್ಮವು ಪ್ರಜಾಪತಿಯಂತೆಯೇ ಅನಾದಿಯೆಂದು ತೋರಿಸಲು ಪ್ರಕೃತವಾದ ಋಕ್ಕಿನಲ್ಲಿ **ಸನತಾ** ಎಂಬ ವಿಶೇಷಣವಿದೆ.

**"ಸರ್ವೇಷಾಂ ವಾ ಏಷ ಭೂತಾನಾಗ್‍ಂ ಸರ್ವೇಷಾಂ ದೇವಾನಾಮಾತ್ಮಾ ॥"**

(ಶ. ಬ್ರಾ. ೧೪-೩-೨-೧)

ವಿಶ್ವಧರ್ಮಾತ್ಮಕವಾದ ಈ ಯಜ್ಞವು ಸಕಲ ಭೂತಗಳಿಗೂ ಆತ್ಮರೂಪವಾಗಿದೆ. ದೇವತೆಗಳ ಆತ್ಮರೂಪವಾಗಿದೆ. ವಿಶ್ವಾತ್ಮವು ಇದೇ. ಇದೇ ವಿಶ್ವಾಧಾರವೂ ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ ಇದನ್ನು **ಧರುಣ** ವೆಂದು ಕರೆದಿದೆ. ವಿಶ್ವಧಾರಕವೆಂದರ್ಥ.

**ಧರುಣೇಷು, ಸನತಾ ಧರ್ಮಾಣಿ** ಎಂಬ ವಿಶೇಷಣಗಳ ವಿಶೇಷಾರ್ಥಗಳನ್ನು ತಿಳಿಯಬೇಕಾದರೆ ಯಜ್ಞದ ಸೂಕ್ಷ್ಮಸ್ವರೂಪವನ್ನು ಇನ್ನೂ ವಿಶದವಾಗಿ ತಿಳಿಯಬೇಕು. **ಆತ್ಮದಾಃ, ಬಲದಾಃ** ಎಂಬ ವಿಶೇಷಣಗಳಿಂದ ಯಾವ ರೀತಿ ಪ್ರಜಾಪತಿಯು ತನ್ನನ್ನೇ ಯಜ್ಞರೂಪದಲ್ಲಿ ಅರ್ಪಿಸಿ ವಿಶ್ವದ ಸೃಷ್ಟಿಸ್ಥಿತಿಗಳಿಗೆ ಕಾರಣನಾದನೆಂದು ತಿಳಿಸಿದೆಯೋ ಅದೇ ರೀತಿಯಲ್ಲಿ ಯಜ್ಞವೂ ಸಹ ತನ್ನ ಅರ್ಪಣೆಯಿಂದಲೇ ವಿಶ್ವಧರ್ಮದ ಪಾಲಕವಾಗಿದೆಯೆಂದು ಶ್ರುತಿಗಳು ಯಜ್ಞವನ್ನು ಪ್ರಶಂಸಿಸುತ್ತವೆ.

> **"ಅಥ ಯಸ್ಮಾದ್ಯಜ್ಞೋ ನಾಮ । ಘ್ನಂತಿ ವಾ ಏನಮೇತದ್ಯದಭಿಷುಣ್ವಂತಿ ತದ್ಯದೇನಂ ತನ್ವತೇ ತದೇನಂ ಜನಯಂತಿ ಸ ತಾಯಮಾನೋ ಜಾಯತೇ ಸ ಯನ್ ಜಾಯತೇ ತಸ್ಮಾದ್ಯಞ್ಜೋ ಯಞ್ಜೋ ಹ ವೈ ನಾಮೈತದ್ಯದ್ಯಜ್ಞ ಇತಿ ॥"**
>
> (ಶ. ಬ್ರಾ. ೩-೯-೪-೨೩)

ಅಭಿಷವಕಾಲದಲ್ಲಿ ಯಜ್ಞದ ಹನನವಾದಂತೆ, ಆಗ ಯಜ್ಞದ ಅರ್ಪಣೆಯಾಗುತ್ತದೆ. ಸೋಮಾರ್ಪಣೆಯಾಗಿ ಯಜ್ಞದ ನಿರ್ವಹಣದ ಕಾಲದಲ್ಲಿ ಪುನಃ ವಿಸ್ತೃತವಾಗುತ್ತದೆ. ಹತವಾದ ಯಜ್ಞವು ಪುನಃ ಜನ್ಮವನ್ನು ಪಡೆದು ಪ್ರಸರಿಸುತ್ತದೆ. ಹೀಗೆ ಚಲನಾತ್ಮಕವಾದ ಜನ್ಮವಿರುವುದರಿಂದ ಯಜ್ಞವೆಂಬ ಹೆಸರು ಪ್ರಸಿದ್ಧವಾಗಿದೆಯೆಂದು ಯಜ್ಞದ ಆತ್ಮತ್ಯಾಗದ ಸ್ವರೂಪವೂ ವರ್ಣಿತವಾಗಿದೆ. ಈ ಯಜ್ಞವೇ ವಿಶ್ವಪಾಲಕವೂ ವಿಶ್ವಧಾರಕವೂ ಆಗಿದೆ. ಹೇಗೆಂದರೆ,

> **ಸ ಯದಗ್ನೌ ಜುಹೋತಿ । ತದ್ದೇವೇಷು ಜುಹೋತಿ ತಸ್ಮಾದ್ದೇವಾಃ ಸಂತ್ಯಥ ಯತ್ಸದಸಿ ಭಕ್ಷಯಂತಿ ತನ್ಮನುಷ್ಯೇಷು ಜುಹೋತಿ ತಸ್ಮಾನ್ಮನುಷ್ಯಾಃ ಸನ್ತ್ಯಥ ಯದ್ಧವಿರ್ಧಾನಯೋ-ರ್ನಾರಾಶಗ್ಂಸಾಃ ಸೀದಂತಿ ತತ್ಪಿತೃಷು ಜುಹೋತಿ ತಸ್ಮಾತ್ಪಿತರಃ ಸನ್ತಿ ॥**
>
> (ಶ. ಬ್ರಾ. ೩-೬-೨-೨೫).

ಅಗ್ನಿಯಲ್ಲಿ ಅರ್ಪಿತವಾಗುವ ಯಜ್ಞಾಹುತಿಯು ದೇವತೆಗಳನ್ನು ಸೇರುತ್ತದೆ. ಅದರಿಂದಲೇ ದೇವತೆಗಳ ಜೀವ ಧಾರಣವು. ಸದಸ್ಸಿನಲ್ಲಿ ಪಾನಮಾಡತಕ್ಕ ಯಜ್ಞರಸದಿಂದಲೇ ಮಾನವರ ಜೀವಧಾರಣವು. ನರಾಶಂಸಾತ್ಮಕವಾದ ಸೋಮಪಾನದಿಂದಲೇ ಪಿತೃಗಳ ಸ್ಥಿತಿಯು. ಈ ರೀತಿ ದೇವಮಾನವಾದಿ ಸಕಲರ ಜೀವಧಾರಣವೂ ಯಜ್ಞದಿಂದಲೇ ಸಾಧ್ಯ. ಆದುದರಿಂದಲೇ ಇದು **ಧರುಣ** ಶಬ್ದವಾಚ್ಯವಾಗಿದೆ.

**ಯನ್ ಜ** (ಯಜ್ಞ) ಚಲಿಸುತ್ತಲೇ ಉತ್ಪನ್ನವಾಗುತ್ತದೆ ಎಂಬ ಯಾವ ವ್ಯುತ್ಪತ್ತಿಯು ಯಜ್ಞಧರ್ಮವನ್ನು ಸೂಚಿಸುತ್ತದೆಯೋ ಅದೇ ಧರ್ಮವು ವಿಶ್ವಸೃಷ್ಟಿಯನ್ನೂ ವಿಶ್ವಸ್ಥಿತಿಯನ್ನೂ ತಿಳಿಸುತ್ತದೆ. ಸಕಲ ದೇವಮಾನವಾದಿ ಗಳಿಗೂ ಯಾವ ರೀತಿ ಯಜ್ಞವೇ ಧಾರಕವೋ ಅದರಂತೆಯೇ ಅವರ ಸೃಷ್ಟಿಯೂ ಸಹ ಯಜ್ಞಮೂಲಕವೇ ಆಗಿದೆ.

**ಯ ಇಮಾ ವಿಶ್ವಾ ಭುವನಾನಿ ಜುಹ್ವದೃಷಿರ್ಹೋತಾ ನ್ಯಸೀದತ್ಪಿತಾ ನಃ ।**
**ಸ ಆಶಿಷಾ ದ್ರವಿಣಮಿಚ್ಛಮಾನಃ ಪ್ರಥಮಚ್ಛದವರಾ ಆ ವಿವೇಶ ॥**

(ಋ. ಸಂ ೧೦-೮೧-೧)

ಋಷಿಯೂ ಹೋತೃವೂ ಆದ ವಿಶ್ವಕರ್ಮನು ಸಕಲ ಲೋಕಗಳನ್ನೂ ಯಜ್ಞಾಹುತಿಯನ್ನಾಗಿ ಅರ್ಪಿಸಿದನು. ಅನಂತರ ತಪಸ್ಸಿನಿಂದ ಸಕಲವನ್ನೂ ಪುನಃ ಸೃಷ್ಟಿಸಿದನು. **(ಸ ತಪೋಽತಪ್ಯತ । ಸ ತಪಸ್ತಪ್ತ್ವಾ ಇದಗ್ಂಸರ್ವಮಸೃಜತ)** ಎಂಬಲ್ಲಿ ಯಜ್ಞವೇ ವಿಶ್ವಸೃಷ್ಟಿಗೆ ಮೂಲವಾಯಿತು ಎಂಬ ಈ ವಿವರಣೆ ಯಲ್ಲಿ ಇನ್ನೊಂದಂಶವನ್ನು ಗಮನಿಸಬೇಕು. **"ಸ್ವಯಂ ಯಜಸ್ವ ತನ್ವಂ ವೃಧಾನಃ॥"** (೧೦-೮೧-೫) ಇತ್ಯಾದಿ ವಾಕ್ಯಗಳಿಂದ ಪ್ರಜಾಪತಿಯು (ಅಥವಾ ವಿಶ್ವಕರ್ಮನು) ಸೃಷ್ಟಿಗೆ ಪೂರ್ವಭಾವಿಯಾಗಿ ತನ್ನ ಶರೀರವನ್ನೇ ಯಜ್ಞಾಹುತಿಯ ರೂಪದಲ್ಲಿ ಅರ್ಪಿಸಿದರೂ ಸಹ ಅದು ಇನ್ನೂ ವಿಸ್ತೃತವಾಗಿ ವೃದ್ಧಿಯಾಗಲು ಸಾಧ್ಯವಾಯಿತು ಎಂಬ ವಿವರಣವು ಯಾಗರೂಪದಲ್ಲಿ ಮಾಡತಕ್ಕ ಯಾವ ತ್ಯಾಗವೂ ಸಹ ನಾಶಹೇತುವಾಗದೇ ಇನ್ನೂ ಅಭಿವೃದ್ಧಿಗೆ ಕಾರಣವಾಗುವುದೆಂದೂ ಸ್ಪಷ್ಟವಾಗಿ ತಿಳಿಸಿದೆ. ಈ ರೀತಿ ಧರುಣತ್ವವೂ ಧರ್ಮಾತ್ಮಕತ್ವವೂ ಇರತಕ್ಕ ಯಜ್ಞತತ್ತ್ವದ ರಹಸ್ಯವನ್ನು ಮುಂದೆ **ಅಗ್ನಿಚಯನದ** ಸ್ವರೂಪವನ್ನು ತಿಳಿಸುವಾಗ ವಿಸ್ತೃತವಾಗಿ ವಿವರಿಸಲಾಗುತ್ತದೆ.

**ವಿಪಃ**—ಈ ಪದವು ಅಂಗುಲಿನಾಮಗಳಲ್ಲಿಯೂ (ನಿ. ೨-೫) ಮತ್ತು ಮೇಧಾವಿನಾಮಗಳಲ್ಲಿಯೂ (ನಿ. ೩-೧೫) ಪಠಿತವಾಗಿದೆ. ಪ್ರಕೃತದಲ್ಲಿ ಮೇಧಾವಿಗಳಾದ ಸ್ತೋತೃಗಳೆಂದರ್ಥ.

**ಗಾತವೇ—ಸನ್ಮಾರ್ಗಲಾಭಾಯ** । ಸನ್ಮಾರ್ಗದಲ್ಲಿ ವ್ಯವಹರಿಸುವುದಕ್ಕಾಗಿ ಎಂದು ನೈತಿಕವಾದ ಅರ್ಥ ವನ್ನು ಹೇಳಿದೆ. **ಗಾತುಂ । ಗಾತವೇ** ಎಂಬ ಈ ಪದಗಳು ಅನುಷ್ಠಾನಮಾರ್ಗವೆಂದು ಕೆಲವೆಡೆಗಳಲ್ಲಿಯೂ, ದೇವಲೋಕದ ಗಮನಮಾರ್ಗವೆಂದು ಇನ್ನು ಕೆಲವು ಕಡೆಗಳಲ್ಲಿಯೂ ಪ್ರಯೋಗಿಸಲ್ಪಟ್ಟಿದೆ. **"ಉರುಂ ನೋ ಗಾತುಂ ಕೃಣು ಸೋಮ ಮೀಢ್ವಃ ।"** (೯-೮೫-೪) ಇತ್ಯಾದ್ಯನೇಕ ಸ್ಥಳಗಳಲ್ಲಿ ಕೇವಲ ಮಾರ್ಗವೆಂದರ್ಥ.

**ಯೋಯೋತ ನೋ ಅನಪತ್ಯಾನಿ ಗಂತೋಃ ಪ್ರಜಾವಾನ್ನಃ ಪಶುಮಾ ಅಸ್ತು ಗಾತುಃ ॥**

(ಋ. ಸಂ. ೩-೫೪-೧೮)

ಎಲೈ ಅದಿತಿಯೇ, ನಮ್ಮ ಕರ್ಮಗಳು ಸನ್ಮಾರ್ಗದಿಂದ ಬೇರೆಯಾಗದೆ ಇರಲಿ. ನಮ್ಮ ಗೃಹವು ಪಶುಸಂಪತ್ತಿನಿಂದ ಕೂಡಿರಲಿ ಎಂದು ಪ್ರಾರ್ಥಿಸುವಾಗ **ಗಾತುಃ** ಎಂಬ ಪದಕ್ಕೆ **ಗಾಯಂತಿ ಸ್ತುವಂತಿ ಇಂದ್ರಾದೀನತ್ರ ಇತಿ ಗಾತುರ್ಗೃಹಂ ।** ಇಂದ್ರಾದಿಗಳನ್ನು ಸ್ತುತಿಸುವ ಪ್ರದೇಶವಾದುದರಿಂದ **ಗಾತುಃ** ಎಂದರೆ ಗೃಹವೆಂದರ್ಥವೆಂದು ವಿವರಿಸಿದೆ.

**ಸ ತೇ ಜಾನಾತಿ ಸುಮತಿಂ ಯವಿಷ್ಠ ಯ ಈ ಈವತೇ ಬ್ರಹ್ಮಣೇ ಗಾತುಮೈರತ್ ॥**

(ಋ. ಸಂ ೪-೪-೬)

ಯುವತಮನಾದ ಎಲೈ ಅಗ್ನಿಯೇ, ಯಾವನು ಕಲ್ಯಾಣಾತ್ಮಕನಾದ ನಿನ್ನನ್ನು ಸ್ತುತಿಸುವ ಸ್ತೋತ್ರವನ್ನು ಪಠಿಸಿ ಅರ್ಪಿಸುವನೋ ಅವನು ನಿನ್ನ ಕಲ್ಯಾಣಾತ್ಮಕವಾದ ಅನುಗ್ರಹ ಬುದ್ಧಿಯನ್ನು ತಿಳಿಯುವನು ಎಂದು ಸ್ತುತಿಸಿರುವಾಗ

**ಗಾತುಂ** ಎಂಬುದಕ್ಕೆ **ಗೀಯತೇ ಉಚ್ಚಾರ್ಯತೇ ಇತಿ ಗಾತುಃ ಸ್ತೋತ್ರಂ ।** ಗಾನರೂಪದಲ್ಲಿ ಪಠಿಸಲ್ಪಡುವುದರಿಂದ ಸ್ತೋತ್ರಕ್ಕೆ **ಗಾತು**ವೆಂದು ಹೆಸರು ಎಂದೂ, ಮತ್ತು,

**ನ್ಯಸ್ಮೈ ದೇವೀ ಸ್ವಧಿತಿರ್ಜಿಹೀತ ಇಂದ್ರಾಯ ಗಾತುರುಶತೀವ ಯೇಮೇ ।**

(ಋ. ಸಂ. ೫-೩೨-೧೦)

ಸ್ವಾಧಾರದ ಮೇಲೆಯೇ ನಿಂತಿರುವ ದ್ಯುಲೋಕಾದಿ ದೇವತೆಯೂ ಸಹ ಈ ಇಂದ್ರನ ನಿಯಮದಲ್ಲಿಯೇ ಇದ್ದಾಳೆ. ಪೃಥ್ವಿಯೂ ಸಹ ಇಂದ್ರನಿಗೆ ತನ್ನ ಸೇವೆಯನ್ನರ್ಪಿಸುತ್ತಾಳೆ ಎಂಬ ತಾತ್ಪರ್ಯವುಳ್ಳ ಈ ಋಕ್ಕಿನಲ್ಲಿ **ಗಾತು**ಶಬ್ದಕ್ಕೆ ಭೂಮಿಯೆಂದರ್ಥಮಾಡಿದೆ. ಹೀಗೆ ಈ ಪದಕ್ಕೆ ಆಯಾ ಸಂದರ್ಭಗಳಿಗನುಗುಣವಾಗಿ ಅರ್ಥವನ್ನು ಹೇಳಬೇಕು. ಪ್ರಕೃತವಾದ ಋಕ್ಕಿನಲ್ಲಿ ಸನ್ಮಾರ್ಗಗಮನವೆಂಬ ನೈತಿಕವಾದ ಅರ್ಥವನ್ನು ಹೇಳಬೇಕು.

**ಅಗ್ನಿಃ ದೇವಾನ್ ದುವಸ್ಯತಿ**—ದುವಸ್ಯತಿ ಶಬ್ದವು ನಿರುಕ್ತದಲ್ಲಿ **ಪರಿಚರಣ**ಕರ್ಮನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೩). ನಿರುಕ್ತಕಾರರು,

**ಪರೇಯಿವಾಂಸಂ ಪ್ರವತೋ ಮಹೀರನು ಬಹುಭ್ಯಃ ಪಂಥಾಮನುಪಸ್ಪಶಾನಂ ।**
**ವೈವಸ್ವತಂ ಸಂಗಮನಂ ಜನಾನಾಂ ಯಮಂ ರಾಜಾನಂ ಹವಿಷಾ ದುವಸ್ಯ ॥**

(ಋ. ಸಂ. ೧೦-೧೪-೧)

ಎಂಬ ಋಕ್ಕನ್ನುದಾಹರಿಸಿದ್ದಾರೆ. ಇಲ್ಲಿ ಯಮನ ಸ್ತುತಿಯಿದೆ. ನಿರುಕ್ತಕಾರರು **ದುವಸ್ಯ**ಶಬ್ದಕ್ಕೆ **ದುವಸ್ಯತಿಃ ರಾಧ್ನೋತಿಕರ್ಮ ।** ಪೂಜಾಕರ್ಮವೆಂದರ್ಥಮಾಡಿದ್ದಾರೆ (ನಿ. ೧೦-೨೦). ಅಲ್ಲದೇ,

**ಯಾಭಿರ್ವವ್ರಂ ವಿಪಿಪಾನಮುಪಸ್ತುತಂ ಕಲಿಂ ಯಾಭಿರ್ವಿತ್ತಜಾನಿಂ ದುವಸ್ಯಥಃ ॥**

(ಋ. ಸಂ. ೧-೧೧೨-೧೫)

ಎಲೈ ಅಶ್ವಿನೀದೇವತೆಗಳೇ **ವವ್ರ**ನೆಂಬ ಋಷಿಯನ್ನು ನೀವು ರಕ್ಷಿಸಿದಿರಿ ಎಂಬ ತಾತ್ಪರ್ಯವುಳ್ಳ ಈ ಋಕ್ಕಿನಲ್ಲಿ **ದುವಸ್ಯಥಃ** ಎಂಬ ಪದವು ರಕ್ಷಣಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ.

ಪ್ರಕೃತವಾದ ಋಕ್ಕಿನಲ್ಲಿ ಅಗ್ನಿ ಪರವಾಗಿ ಈ ಪದದ ಪ್ರಯೋಗವಿರುವುದರಿಂದ ಈ ಎರಡು ಅರ್ಥಗಳೂ ಹೊಂದಿಕೊಳ್ಳುತ್ತವೆ. ಹೇಗೆಂದರೆ, ದೇವತೆಗಳಿಗೆ ಆಪತ್ತು ಒದಗಿದಾಗ ಅಗ್ನಿಯು ಅವರನ್ನು ರಕ್ಷಿಸಿದನು ಮತ್ತು ಆ ರಕ್ಷಣೆಯ ನಂತರ ಅವರನ್ನು ಸೇವಿಸಿದನು ಎಂಬ ಸನ್ನಿವೇಶಗಳನೇಕವಿರುವುದರಿಂದ ಈ ಪದಕ್ಕೆ ಎರಡು ವಿಧವಾದ ಅರ್ಥವನ್ನೂ ಹೇಳಬಹುದು ಅಗ್ನಿಯು ದೇವತೆಗಳನ್ನು ರಕ್ಷಿಸಿದುದು ಹೇಗೆಂದರೆ—

**ಪ್ರಜಾಪತಿಃ ಪ್ರಜಾ ಅಸೃಜತ । ಸ ಪ್ರಜಾಃ ಸೃಷ್ಟ್ವಾ ಸರ್ವಮಾಜಿಮಿತ್ವಾ ವ್ಯಸ್ರಗ್ಂಸತ ತಸ್ಮಾದ್ವಿಸ್ರಸ್ತಾತ್ಪ್ರಾಣೋ ಮಧ್ಯತ ಉದಕ್ರಾಮದಥಾಸ್ಮಾದ್ವೀರ್ಯಮುದಕ್ರಾಮತ್ತಸ್ಮಿನ್ನುತ್ಕ್ರಾಂತೇಽಪದ್ಯತ ತಸ್ಮಾದನ್ನಾದನ್ನಮಸ್ರವದ್ಯಚ್ಚಕ್ಷುರಧ್ಯಶೇತ ತಸ್ಮಾದಸ್ಯಾನ್ನಮಸ್ರವನ್ನೋ ಹೇಹ ತರ್ಹಿ ಕಾಚನ ಪ್ರತಿಷ್ಠಾಸ ॥**

(ಶ. ಬ್ರಾ. ೭. ೧. ೨. ೧)

ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿದನು. ಸೃಷ್ಟ್ಯನಂತರ ಶ್ರಾಂತನಾದುದರಿಂದ ಜೀರ್ಣವಾದ ಅವಯವಗಳುಳ್ಳವನಾದನು. ಆಗ ಅಂತಃಪ್ರಾಣವು ಅವನಿಂದ ಹೊರಕ್ಕೆ ಹೊರಟುಹೋಯಿತು. ನಿರ್ವೀರ್ಯನಾಗಿ ಕೆಳಗೆ ಬಿದ್ದನು. ಅವನ ಅಂತರ್ಗತವಾದ ಅನ್ನವೂ ಸಹ ಚಕ್ಷುಸ್ಸಿನ ದ್ವಾರಾ ಹೊರಕ್ಕೆ ಪ್ರವಹಿಸಿತು. ಆಗ ಪ್ರಜೆಗಳಿಗೆ ಆಧಾರವೇ ಇಲ್ಲವಾಯಿತು.

**ತೇ ದೇವಾ ಅಬ್ರುವನ್ । ನ ವಾ ಇತೋಽನ್ಯಾಪ್ರತಿಷ್ಠಾಸ್ತೀಮಮೇವ ಪಿತರಂ ಪ್ರಜಾಪತಿಗ್‍ಂ ಸಂಸ್ಕರವಾಮ ಸೈವ ನಃ ಪ್ರತಿಷ್ಠಾ ಭವಿಷ್ಯತೀತಿ ॥**

(ಶ. ಬ್ರಾ. ೭. ೧. ೨. ೨.)

ಆಗ ದೇವತೆಗಳೆಲ್ಲರೂ ಕಲೆತು ನಮಗೆ ಇದನ್ನು ಬಿಟ್ಟರೆ ಬೇರೆ ಆಧಾರವೇ ಇಲ್ಲ. ನಮಗೆಲ್ಲಾ ಪಿತೃವಾದ ಈ ಪ್ರಜಾಪತಿಯನ್ನೇ ಉಪಚರಿಸಿ ಸಂಸ್ಕರಿಸೋಣ. ನಮ್ಮ ಅಸ್ತಿತ್ವಕ್ಕೆ ಇವನೇ ಆಧಾರಭೂತನಾಗಿರುವನು. ಇವನಿಗೆ ನವಚೈತನ್ಯವನ್ನುಂಟುಮಾಡಲು ಪೂರ್ಣವಾಗಿ ಪ್ರಯತ್ನಿಸೋಣ ಎಂದು ಸಂಕಲ್ಪಿಸಿದರು.

**ತೇಽಗ್ನಿಮಬ್ರುವನ್ । ನ ವಾ ಇತೋಽನ್ಯಾ ಪ್ರತಿಷ್ಠಾಸ್ತಿ ತ್ವಯೀಮಂ ಪಿತರಂ ಪ್ರಜಾಪತಿಗ್‍ಂ ಸಂಸ್ಕರವಾಮ ಸೈವ ನಃ ಪ್ರತಿಷ್ಠಾ ಭವಿಷ್ಯತೀತಿ ಕಿಂ ಮೇ ತತೋ ಭವಿಷ್ಯತೀತಿ ॥**

(ಶ. ಬ್ರಾ. ೭. ೧. ೨. ೩)

ಆಗ ಅವರೆಲ್ಲರೂ ಸೇರಿ ಅಗ್ನಿಯನ್ನು ಕುರಿತು "ಎಲೈ ಅಗ್ನಿಯೇ, ನಮಗೆ ಈ ಪ್ರಜಾಪತಿಯನ್ನು ಬಿಟ್ಟರೆ ಬೇರೆ ಆಶ್ರಯವೂ ಆಧಾರವೂ ರಕ್ಷಣೆಯೂ ಖಂಡಿತವಾಗಿಯೂ ಇಲ್ಲ. ನಾವು ಈ ಪ್ರಜಾಪತಿಯನ್ನು ನಿನ್ನಲ್ಲಿ ನಿನ್ನ ಸಹಾಯದಿಂದ ಸಂಸ್ಕರಿಸುತ್ತೇವೆ". ಎಂದು ಪ್ರಾರ್ಥಿಸಲಾಗಿ, ಆ ಸಹಾಯವನ್ನು ಮಾಡುವುದರಿಂದ ನನಗೇನು ಪ್ರತಿಫಲವೆಂದನು. ಆಗ ಅದಕ್ಕೆ ಆಶ್ವಾಸನ ರೂಪದಲ್ಲಿ ದೇವತೆಗಳು ಅಗ್ನಿಯನ್ನು ಕುರಿತು ಈ ರೀತಿ ಹೇಳಿದರು.

**ತೇಽಬ್ರುವನ್ । ಅನ್ನಂ ವಾ ಅಯಂ ಪ್ರಜಾಪತಿಸ್ತ್ವನ್ಮುಖಾ ಏತದನ್ನಮದಾಮ ತ್ವನ್ಮುಖಾನಾಂ ನ ಏಷೋಽನ್ನಮಸದಿತಿ ತಥೇತಿ ತಸ್ಮಾದ್ದೇವಾ ಅಗ್ನಿಮುಖಾ ಅನ್ನಮದಂತಿ ಯಸ್ಯೈ ಹಿ ಕಸ್ಯೈ ಚ ದೇವತಾಯೈ ಜುಹ್ವತ್ಯಗ್ನಾವೇವ ಜುಹ್ವತ್ಯಗ್ನಿಮುಖಾ ಹಿ ತದ್ದೇವಾ ಅನ್ನಮ-ಕುರ್ವತ ॥**

(ಶ. ಬ್ರಾ. ೭. ೧. ೨. ೪.)

ಈ ಪ್ರಜಾಪತಿಯೇ ಅನ್ನವು. ಪ್ರಜಾಪತಿರೂಪವಾದ ಈ ಅನ್ನವನ್ನು ನಾವು ನಿನ್ನ ಮುಖದ ದ್ವಾರಾ ಭುಜಿಸುವೆವು. ಈ ಅನ್ನದ ಭೋಜನಕ್ಕೆ ನೀನೇ ನಮಗೆಲ್ಲಾ ಮುಖನಾಗಿರುವೆ ಎಂದು ಕೇಳಿಕೊಂಡರು. ಅಗ್ನಿಯು ಹಾಗೆಯೇ ಆಗಲೆಂದು ಅವರಿಗೆ ತನ್ನ ರಕ್ಷಣೆಯಿನ್ನಿತ್ತು ಪ್ರಜಾಪತಿಯನ್ನು ಪುನಃ ಸ್ಥಾಪಿತನಾಗುವಂತೆ ಮಾಡಿದನು. ಇದರಿಂದ ದೇವತೆಗಳಿಗೆ ಆಶ್ರಯವೂ ಆಧಾರವೂ ಪುನಃ ಲಭಿಸಿದುದರಿಂದ ಅಗ್ನಿಯು ಅವರ ಅಸ್ತಿತ್ವವನ್ನು ರಕ್ಷಿಸುವಂತಾಯಿತು. ಸಕಲದೇವತೆಗಳ ಅನ್ನವನ್ನು ತಾನೇ ಹೊಂದಿ ಅವರಿಗೆಲ್ಲಾ ಹಂಚುವುದರಿಂದ ಅವರನ್ನೆಲ್ಲಾ ಸೇವಿಸಿದಂತಾಯಿತು. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ ದುವಸ್ಯತಿ ಎಂಬ ಪದಕ್ಕೆ ಎರಡು ಅರ್ಥಗಳನ್ನೂ ಹೇಳಬಹುದು.



॥ ಸಂಹಿತಾಪಾಠಃ ॥

ಅಂತರ್ದೂತೋ ರೋದಸೀ ದಸ್ಮ ಈಯತೇ ಹೋತಾ ನಿಷತ್ತೋ ಮನುಷಃ ಪುರೋಹಿತಃ ।

ಕ್ಷಯಂ ಬೃಹಂತಂ ಪರಿ ಭೂಷತಿ ದ್ಯುಭಿರ್ದೇವೇಭಿರಗ್ನಿರಿಷಿತೋ ಧಿಯಾವಸುಃ ॥೨॥

॥ ಪದಪಾಠಃ ॥

ಅಂತಃ । ದೂತಃ । ರೋದಸೀ ಇತಿ । ದಸ್ಮಃ । ಈಯತೇ । ಹೋತಾ । ನಿಽಸತ್ತಃ । ಮನುಷಃ । ಪುರಃಽಹಿತಃ ।

ಕ್ಷಯಂ । ಬೃಹಂತಂ । ಪರಿ । ಭೂಷತಿ । ದ್ಯುಽಭಿಃ । ದೇವೇಭಿಃ । ಅಗ್ನಿಃ । ಇಷಿತಃ । ಧಿಯಾಽವಸುಃ ॥

॥ ಸಾಯಣಭಾಷ್ಯಂ ॥

ದಸ್ಮೋ ದರ್ಶನೀಯೋ ಹೋತಾಗ್ನಿರ್ದೂತೋ ದೇವಾನಾಂ ದೂತಃ ಸನ್ ರೋದಸ್ಯೋರ್ದ್ಯಾವಾಪೃಥಿವ್ಯೋರಂತರ್ಮಧ್ಯ ಈಯತೇ । ಗಚ್ಛತಿ । ಮನುಷೋ ಮನೋರ್ಜಾತಸ್ಯ ಮನುಷ್ಯಸ್ಯ ಪುರೋಹಿತ ಆಹವನೀಯಾದಿರೂಪೇಣ ಪುರತಃ ಸ್ಥಾಪಿತೋಽನಿಷತ್ತೋ ನಿಷಣ್ಣಃ ಸನ್ ಅಗ್ನಿರ್ದ್ಯುಭಿರ್ದೀಪ್ತಿಭಿರ್ಬೃಹಂತಂ ಮಹಾಂತಂ ಕ್ಷಯಂ ಯಜ್ಞಗೃಹಂ ಪರಿಭೂಷತಿ । ಅಲಂಕುರತೇ । ದೇವೇಭಿರ್ದೇವೈರಿಷಿತಃ ಪ್ರೇಷಿತೋ ಧಿಯಾವಸುಃ ಪ್ರಜ್ಞಯಾ ವ್ಯಾಪ್ತಃ । ಏತೇ ದ್ವೇ ಅಗ್ನಿವಿಶೇಷೇಣೇ ॥

॥ ಪ್ರತಿಪದಾರ್ಥ ॥

**ದಸ್ಮಃ**—ಸುಂದರವಾದ ರೂಪವುಳ್ಳವನೂ । **ಹೋತಾ**—(ದೇವತೆಗಳನ್ನು ಯಜ್ಞಕ್ಕೆ) ಕರೆಯುವವನೂ ಆದ ಅಗ್ನಿಯು । **ದೂತಃ**—ದೇವದೂತನಾಗಿದ್ದು । **ರೋದಸೀ**—ದ್ಯಾವಾಪೃಥಿವಿಗಳ । **ಅಂತಃ**—ಮಧ್ಯಭಾಗದಲ್ಲಿ । **ಈಯತೇ**—ಸಂಚರಿಸುತ್ತಾನೆ । **ದೇವೇಭಿಃ**—ದೇವತೆಗಳಿಂದ । **ಈಷಿತಃ**—ಕಳುಹಲ್ಪಟ್ಟವನೂ । **ಧಿಯಾವಸುಃ**—ಪ್ರಜ್ಞೆಯಿಂದ ಪೂರಿತನಾದವನೂ ಆದ । **ಅಗ್ನಿಃ**—ಅಗ್ನಿಯು । **ಮನುಷಃ**—ಮಾನವನ । **ಪುರೋಹಿತಃ**—ಮುಂಭಾಗದಲ್ಲಿ (ಆಹವನೀಯಾದಿ ರೂಪದಲ್ಲಿ) ಸ್ಥಾಪಿತನಾಗಿ । **ನಿಷತ್ತಃ**—ಕುಳಿತುಕೊಂಡು । **ದ್ಯುಭಿಃ**—ತನ್ನ ಕಾಂತಿಗಳಿಂದ । **ಬೃಹಂತಂ**—ಮಹತ್ತಾದ । **ಕ್ಷಯಂ**—ಯಜ್ಞಗೃಹವನ್ನು । **ಪರಿಭೂಷತಿ**—ಅಲಂಕರಿಸುತ್ತಾನೆ.

॥ ಭಾವಾರ್ಥ ॥

ಸುಂದರವಾದ ರೂಪವುಳ್ಳವನೂ, ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ ಆದ ಅಗ್ನಿಯು ದೇವದೂತನಾಗಿದ್ದು, ದ್ಯಾವಾಪೃಥಿವಿಗಳ ಮಧ್ಯಭಾಗದಲ್ಲಿ ಸಂಚರಿಸುತ್ತಾನೆ. ದೇವತೆಗಳಿಂದ ಕಳುಹಲ್ಪಟ್ಟವನೂ, ಪ್ರಜ್ಞೆಯಿಂದ

ಪೂರಿತನಾದವನೂ ಆದ ಅಗ್ನಿಯು ಮಾನವನ ಮುಂಭಾಗದಲ್ಲಿ ಆಹವನೀಯಾದಿರೂಪದಲ್ಲಿ ಸ್ಥಾಪಿತನಾಗಿ ತನ್ನ ಕಾಂತಿಗಳಿಂದ ಮಹತ್ತಾದ ಯಜ್ಞಗೃಹವನ್ನು ಅಲಂಕರಿಸುತ್ತಾನೆ.

## English Translation.

The graceful messenger (of the gods) goes between heaven and earth : sitting (on the altar), and placed before men, he ornaments the spacious chambers (of sacrifice) with his rays, animated by the gods, and affluent in wisdom.

॥ ವಿಶೇಷವಿಷಯಗಳು ॥

**ದಸ್ಮ**—ಈ ಶಬ್ದಕ್ಕೆ ಎರಡು ವಿಧವಾದ ಅರ್ಥವಾಗುತ್ತದೆ. ಶತ್ರುನಾಶಕನೆಂದು ಒಂದರ್ಥವೂ ಸುಂದರ ರೂಪವುಳ್ಳವನೆಂದು ಇನ್ನೊಂದರ್ಥವು. **ದಸಿ ದರ್ಶನದಂಶನಯೋಃ** ಎಂಬ ಧಾತುವಿನಿಂದ ನಿಷ್ಪನ್ನವಾದರೆ **ದರ್ಶನೀಯಃ** ರಮ್ಯನಾದ ಆಕರ್ಷಕವಾದ ರೂಪವುಳ್ಳ ಎಂಬರ್ಥವೂ ; **ದಸು ಉಪಕ್ಷಯೇ** ಎಂಬ ಧಾತುವಿನಿಂದ ನಿಷ್ಪನ್ನವಾದರೆ (ಶತ್ರು) ನಾಶಕನೆಂದೂ ಅರ್ಥವಾಗುತ್ತದೆ. ಅಗ್ನಿಯಲ್ಲಿ ಈ ಎರಡು ಶಕ್ತಿಗಳೂ ಇರುವುದರಿಂದ ಈ ಎರಡು ಅರ್ಥಗಳಲ್ಲಿ ಯಾವುದನ್ನು ಬೇಕಾದರೂ ಹೇಳಬಹುದು.

**ಹೋತಾ**—ಅಗ್ನಿಯನ್ನು ಹೋತೃವೆಂವೇ ನಿರ್ದೇಶಿಸಿದೆ. ಅಗ್ನಿಗೂ ಯಜ್ಞಕ್ಕೂ ಅಭೇದವಿರುವುದರಿಂದಲೂ, ಯಜ್ಞಕ್ಕೂ ಹೋತೃವಿಗೂ ತಾದಾತ್ಮ್ಯಸಂಬಂಧವಿರುವುದರಿಂದಲೂ ಅಗ್ನಿಯು ಹೋತೃಶಬ್ದವಾಚ್ಯನಾಗಿರುವುದು ಸಹಜವಾಗಿದೆ.

**' ಯಜ್ಞೋ ವೈ ಹೋತಾ ಸ ಏವಾಸ್ಯಾಮೇತದ್ಯಜ್ಞಂ ಪ್ರತಿದಧಾತಿ ।**

(ಶ. ಬ್ರಾ. ೧೪–೧–೩–೭)

ಹೋತೃವೇ ಯಜ್ಞವನ್ನು ಪುನಃ ಪ್ರತಿಷ್ಠಾಪಿಸಲು ಸಾಕ್ಷಾತ್ಕಾರಣನಾದುದರಿಂದ ಹೋತೃವಿಗೂ, ಯಜ್ಞಕ್ಕೂ ಅಭೇದವನ್ನೇ ಹೇಳಬಹುದು ಎಂದು ಯಜ್ಞದಲ್ಲಿ ಹೋತೃವಿನ ಪ್ರಾಮುಖ್ಯತೆಯನ್ನು ತಿಳಿಸುತ್ತದೆ. ಅಗ್ನಿಗೂ, ಯಜ್ಞಕ್ಕೂ ತಾದಾತ್ಮ್ಯವನ್ನು ಹೇಳುವ ಅನೇಕ ಶ್ರುತಿವಾಕ್ಯಗಳನ್ನು ಹಿಂದೆಲ್ಲಾ ಉದಾಹರಿಸಿ, ಅಗ್ನಿಯೇ ಯಜ್ಞಶಬ್ದವಾಚ್ಯನೆಂದೂ ತಿಳಿಸಿದೆ. ಆದರೆ ಅಗ್ನಿಯನ್ನು ಹೋತೃಸ್ಥಾನಕ್ಕೆ ನಿಯಮಿಸಿದುದು ಯಾವಾಗ, ಹೇಗೆ ಎಂಬುದರ ವಿಷಯದಲ್ಲಿ ಒಂದು ಐತಿಹಾಸಿಕವಾದ ಸನ್ನಿವೇಶವಿದೆ.

**ಚತುರ್ಧಾ ವಿಹಿತೋ ಹ ವಾ ಅಗ್ರೇಽಗ್ನಿರಾಸ । ಸ ಯಮಗ್ರೇಽಗ್ನಿಗ್ಂ ಹೋತ್ರಾಯ ಪ್ರಾವೃಣತ ಸ ಪ್ರಾಧನ್ವದ್ಯಂ ದ್ವಿತೀಯಂ ಪ್ರಾವೃಣತ ಸ ಪ್ರೈವಾಧನ್ವದ್ಯಂ ತೃತೀಯಂ ಪ್ರಾವೃಣತ ಸ ಪ್ರೈವಾಧನ್ವದಥ ಯೋಽಯಮೇತರ್ಹ್ಯಗ್ನಿಃ ಸ ಭೀಷಾ ನಿಲಿಲ್ಯೇ ಸೋಽಪಃ ಪ್ರವಿವೇಶ ತಂ ದೇವಾ ಅನುವಿದ್ಯ ಸಹಸೈವಾದ್ಭ್ಯ ಆನಿನ್ಯುಃ........ ॥**

**(ಶ. ಬ್ರಾ. ೧–೨–೩–೧)**

ಪ್ರಥಮದಲ್ಲಿ ಅಗ್ನಿಯು ನಾಲ್ಕು ವಿಭಾಗದಲ್ಲಿ ನಾಲ್ಕು ರೂಪನಾಗಿದ್ದನು. ಮೊದಲನೆಯ ಅಗ್ನ್ಯಂಶವನ್ನು ದೇವತೆಗಳು ತಮ್ಮ ಯಜ್ಞಕ್ರಿಯೆಯಲ್ಲಿ ಹೋತೃವಾಗಬೇಕೆಂದು ಪ್ರಾರ್ಥಿಸಿದರು. ಆದರೆ ಒಡನೆಯೇ ಅದು ಮೃತಿಯನ್ನು ಹೊಂದಿತು. ಹೀಗೆಯೇ ಎರಡನೆಯ ಮತ್ತು ಮೂರನೆಯ ಸ್ವರೂಪಗಳೂ ಸಹ ಮೃತಿಯನ್ನು ಹೊಂದಿದವು. ಆಗ ನಾಲ್ಕನೆಯ ಈಗ ಅಗ್ನಿಯೆಂದು ಪ್ರಸಿದ್ಧನಾಗಿರುವುದೂ ಆದ ಅಗ್ನ್ಯಂಶವು ಭಯದಿಂದ ಅಪ್ಪಿನಲ್ಲಿ ಹೋಗಿ ಅವಿತು ಕೊಂಡಿತು. ಆದರೆ ದೇವತೆಗಳು ಹೋಗಿ ಆ ಅಗ್ನಿರೂಪವನ್ನು ಹೊರಕ್ಕೆ ಕರೆತಂದರು.

**"ಯತ್ರ ವೈ ದೇವಾ ಅಗ್ರೇಽಗ್ನಿಗ್ಂ ಹೋತ್ರಾಯ ಪ್ರಾವೃಣತ ತದ್ಧೋವಾಚ ನ ವಾ ಅಹಮಿದ-ಮುತ್ಸಹೇ ಯದ್ವೋ ಹೋತಾ ಸ್ಯಾಂ ಯದ್ವೋ ಹವ್ಯಂ ವಹೇಯಂ ತ್ರೀನ್ಪೂರ್ವಾನ್ಪ್ರಾವೃಢ್ವಂ ತೇ ಪ್ರಾಧನ್ವಿಷುಸ್ತಾನ್ನು ಮೇಽವಕಲ್ಪಯಥಾತ ವಾ ಅಹಮೇತದುತ್ಸಾಕ್ಷ್ಯೇ ಯದ್ವೋ ಹೋತಾಸ್ಯಾಂ ಯದ್ವೋ ಹವ್ಯಂ ವಹೇಯಂ................"**

(ಶ. ಬ್ರಾ. ೧–೩–೩–೧೩).

ಅನಂತರ ದೇವತೆಗಳು ಅಗ್ನಿಯ ಈ ನಾಲ್ಕನೆಯ ಅಂಶವನ್ನು ಸಮೀಪಿಸಿ ತಮಗೆ ಹೋತೃವಾಗಿರಬೇಕೆಂದು ಪ್ರಾರ್ಥಿಸಿದಾಗ "ನಾನು ಇದಕ್ಕೆ ಶಕ್ತನಲ್ಲ. ನಿಮಗೆ ಹೋತೃವಾಗಿದ್ದು ನಿಮ್ಮ ಹವಿಸ್ಸನ್ನು ನಾನು ವಹಿಸಲಾರೆ. ಒಂದುವೇಳೆ ನಾನು ಆ ಕಾರ್ಯವನ್ನು ಮಾಡಬೇಕಾದರೆ, ನನ್ನ ಭ್ರಾತೃರೂಪರಾದ ಮೂವರನ್ನೂ ಪುನಃ ಬದುಕಿಸಿ ಕೊಟ್ಟರೆ ಆಗಬಹುದೆಂದನು. ಆಗ ದೇವತೆಗಳು ಆ ಕಾರ್ಯವನ್ನು ನೆರವೇರಿಸಿಕೊಟ್ಟು ಅಗ್ನಿಯನ್ನು ತಮ್ಮ ಹೋತೃವನ್ನಾಗಿ ಮಾಡಿಕೊಂಡರು. ಇದೇ ವಿಷಯವನ್ನು ಋಕ್ಸಂಹಿತೆಯಲ್ಲಿಯೂ ಸಹ,

**ವಿಶ್ವೇ ಹಿ ತ್ವಾ ಸಜೋಷಸೋ ದೇವಾಸೋ ದೂತಮಕ್ರತ ।**
**ಶ್ರುಷ್ಟೀ ದೇವ ಪ್ರಥಮೋ ಯಜ್ಞಿಯೋ ಭುವಃ ।**

(ಋ. ಸಂ. ೮–೨೩–೧೮)

ಸಕಲ ದೇವತೆಗಳೂ ಕೂಡಿಕೊಂಡು–ಎಲೈ ಅಗ್ನಿಯೇ, ನೀನು ದಯಮಾಡಿ ನಮ್ಮ ಹವಿಸ್ಸನ್ನು ವಹಿಸು ಎಂದು ಪ್ರಾರ್ಥಿಸಿದರು. ಆದುದರಿಂದಲೇ ಅಗ್ನಿಯು ದೇವತೆಗಳ ದೂತನೂ ಆದನು ಎಂದು ವರ್ಣಿಸಿದೆ. ಆದುದರಿಂದ ಪ್ರಕೃತವಾದ ಮಂತ್ರದಲ್ಲಿಯೂ **ದೂತಃ** ಎಂಬ ವಿಶೇಷಣವಿದೆ. ಅಗ್ನಿಯು ದೇವದೂತನಾಗಿರುವುದರಲ್ಲಿಯೂ ಒಂದು ಐತಿಹ್ಯವಿದೆ.

**"ಅಗ್ನಿಂ ದೂತಂ ವೃಣೀಮಹ ಇತಿ ದೇವಾಶ್ಚ ವಾ ಅಸುರಾಶ್ಚೋಭಯೇ ಪ್ರಾಜಾಪತ್ಯಾಃ ಪಸ್ಪೃಧಿರೇ ತಾನ್ಸ್ಪರ್ಧಮಾನಾನ್ಗಾಯತ್ರ್ಯಂತರಾ ತಸ್ಥೌ ಯಾ ವೈ ಸಾ ಗಾಯತ್ರ್ಯಾಸೀ-ದಿಯಂ ವೈ ಸಾ ಪೃಥಿವೀಯಗ್ಂ ಹೈವ ತದಂತರಾ ತಸ್ಥೌ ತ ಉಭಯ ಏವ ವಿದಾಂ ಚಕ್ರುರ್ಯತರಾನ್ವೈ ನ ಇಯಮುಪಾವರ್ತ್ಸ್ಯತಿ ತೇ ಭವಿಷ್ಯಂತಿ ಪರೇತರೇ ಭವಿಷ್ಯಂತೀತಿ ತಾಮುಭಯ ಏವೋಪಮಂತ್ರಯಾಂ ಚಕ್ರಿರೇಽಗ್ನಿರೇವ ದೇವಾನಾಂ ದೂತ ಆಸ ಸಹರಕ್ಷಾ ಇತ್ಯಸುರರಕ್ಷಸಮಸುರಾಣಾಗ್ಂಸಾಗ್ನಿಮೇವಾನುಪ್ರೇಯಾಯ ತಸ್ಮಾದನ್ವಾಹಾಗ್ನಿಂ ದೂತಂ ವೃಣೀಮಹ ಇತಿ ಸ ಹಿ ದೇವಾನಾಂ ದೂತ ಆಸೀದ್ಧೋತಾರಂ ವಿಶ್ವವೇದಸಮಿತಿ ॥**

(ಶ. ಬ್ರಾ. ೧–೪–೧–೩೪)

ಪ್ರಜಾಪತಿಪುತ್ರರಾದ ದೇವತೆಗಳೂ ಅಸುರರೂ ಸಹ ಉತ್ಕೃಷ್ಟಪದವಿಗಾಗಿ ಸ್ಪರ್ಧಿಸಿದರು. ಆ ಕಾಲದಲ್ಲಿ ಗಾಯತ್ರಿಯು ಅವರ ನಡುವೆ ನಿಂತಿತು. ಎಂದರೆ ಪೃಥ್ವಿಯೇ ಗಾಯತ್ರ್ಯಾಖ್ಯವಾದುದರಿಂದ ಅವರ ನಡುವೆ ಪೃಥ್ವಿಯು ನಿಂತಳೆಂದರ್ಥ.

ಮೇರುಪರ್ವತದ ಮೇಲ್ಭಾಗದಲ್ಲಿರುವ ಅಮರಾವತಿಯಲ್ಲಿ ದೇವತೆಗಳಿರುವರೆಂದೂ, ಅದರಡಿಯಲ್ಲಿರುವ ಇರಾವತಿಯಲ್ಲಿ ಅಸುರರಿರುವರೆಂದೂ, ಇವುಗಳ ಮಧ್ಯೆ ಪೃಥ್ವಿಯಿರುವುದೆಂದೂ ತಾತ್ಪರ್ಯವೆಂದು ಸಾಯಣರು ವಿವರಿಸಿದ್ದಾರೆ. **ಮೇರೋರಗ್ರಭಾಗೇ ಹಿ ಅಮರಾವತೀ ನಾಮ ನಗರೀ ತಸ್ಯಾಂ ಹಿ ದೇವಾಃ। ತಥಾ ಮೇರೋರಧಸ್ತಾದ್ಭಾಗೇ ಚ ಯತ್ ಇರಾಮುಖಂ ನಾಮ ನಗರಂ ತಸ್ಮಿನ್ಹ್ಯಸುರಾ ನಿವಸಂತಿ ತಯೋರ್ಮಧ್ಯೇ ಪೃಥಿವೀ ವರ್ತತೇ ॥**

(ಶ. ಬ್ರಾ. ಭಾಷ್ಯಂ ೯-೪-೧-೩೪)

ಈ ಪೃಥ್ವಿಯು ಅಥವಾ ಗಾಯತ್ರಿಯು ಯಾರ ಕಡೆ ಸೇರುವಳೋ ಅವರಿಗೆ ಜಯವು ಸಿದ್ಧವೆಂದು ಅವರು ತಿಳಿದರು. ಎರಡು ಗುಂಪಿನವರೂ ಸಹ ರಹಸ್ಯವಾಗಿ ಹೋಗಿ ಗಾಯತ್ರಿಯನ್ನು ತಮ್ಮ ಕಡೆಗೆ ಸೇರಬೇಕೆಂದು ಪ್ರಾರ್ಥಿಸಿದರು. ಈ ಕಾಲದಲ್ಲಿ ಅಗ್ನಿಯು ದೇವದೂತನಾಗಿಯೂ, ಸಹರಕ್ಷಸ್ಸೆಂದು ಪ್ರಸಿದ್ಧನಾದ ಅಸುರರಕ್ಷಸ್ಸು ರಾಕ್ಷಸದೂತನಾಗಿಯೂ ಗಾಯತ್ರಿಯನ್ನು ಸಮೀಪಿಸಿ ಮೇಲ್ಕಂಡಂತೆ ಪ್ರಾರ್ಥಿಸಿದರು. ಆಗ ಗಾಯತ್ರಿಯು ಅಗ್ನಿಯನ್ನೇ ಹಿಂಬಾಲಿಸಿದಳು. ಆದುದರಿಂದ ಯಜ್ಞಕಾಲಗಳಲ್ಲೆಲ್ಲಾ ಮಾನವನಾದ ಹೋತೃವೂ ಸಹ "ಎಲೈ ಅಗ್ನಿಯೇ, ನೀನು ದೇವದೂತನಾಗಿ ದೇವತೆಗಳಿಗೆ ಸಹಾಯಮಾಡಿದುದರಿಂದ ನಾವೂ ಸಹ ನಿನ್ನನ್ನು ದೂತನನ್ನಾಗಿ ಪರಿಗ್ರಹಿಸುತ್ತೇವೆ'' ಎಂದು ಪ್ರಾರ್ಥಿಸುತ್ತಾನೆ. **ವಿಶ್ವವೇದಾಃ**-ಸರ್ವಜ್ಞನೆಂದು ಅಗ್ನಿಯನ್ನು ಸಂಬೋಧಿಸಿದೆ. ಇದೇ ಅಂಶವು ತೈತ್ತಿರೀಯಸಂಹಿತೆಯಲ್ಲಿ ಸ್ವಲ್ಪ ವ್ಯತ್ಯಸ್ತವಾಗಿ ಹೇಳಿದೆ.

**ಅಗ್ನಿರ್ದೇವಾನಾಂ ದೂತ ಆಸೀದ್ದೈವ್ಯೋಽಸುರಾಣಾಂ ತೌ ಪ್ರಜಾಪತಿಂ ಪ್ರಶ್ನಮೈತಾಗ್‌ಂಸ ಪ್ರಜಾಪತಿರ್ಬ್ರಾಹ್ಮಣಮಬ್ರವೀದೇತದ್ವಿ ಬ್ರೂಹೀತ್ಯಾಶ್ರಾವಯೇತೀದಂ ದೇವಾಶ್ಶೃಣುತೇತಿ ವಾವ ತದಬ್ರವೀದಗ್ನಿರ್ದೇವೋ ಹೋತೇತಿ ಯ ಏವ ದೇವಾನಾಂ ತಮವೃಣೀತ ತತೋ ದೇವಾ ಅಭವನ್ಪರಾಸುರಾ ಯಸ್ಯೈವಂ ವಿದುಷಃ ಪ್ರವರಂ ಪ್ರವೃಣತೇ ಭವತ್ಯಾತ್ಮನಾ ಪರಾಸ್ಯ ಭ್ರಾತೃವ್ಯೋ ಭವತಿ ॥**

(ತೈ. ಸಂ. ೨-೫-೧೧ ೮)

ಶತಪಥಬ್ರಾಹ್ಮಣದಲ್ಲಿ ಅಸುರದೂತನನ್ನು **ಅಸುರರಕ್ಷಸ್** ಎಂದು ಕರೆದಿದೆ. ಅವನನ್ನೇ ದೈವ್ಯನೆಂದು ತೈತ್ತಿರೀಯ ಸಂಹಿತೆಯಲ್ಲಿ ಕರೆದಿದೆ (ಕಥಾಭಾಗದಲ್ಲೂ ವ್ಯತ್ಯಾಸವಿದೆ.) ದೇವದೂತನಾದ ಅಗ್ನಿಯೂ, ಅಸುರದೂತನಾದ ದೈವ್ಯನೂ ಪ್ರಜಾಪತಿಯಲ್ಲಿಗೆ ಹೋಗಿ ತಮ್ಮ ಸ್ಥಿತಿಯ ವಿಷಯದಲ್ಲಿ ಪ್ರಶ್ನಿಸಿದರು. ಪ್ರಜಾಪತಿಯು ಬ್ರಹ್ಮನನ್ನು ನೋಡಿ "ಇವರಿಗೆ ಇದನ್ನು ವಿಶದಪಡಿಸು" ಎಂದಾಗ, ಅವನು ದೇವತೆಗಳನ್ನು ಸಂಬೋಧಿಸಿ "ದೇವನಾದ ಅಗ್ನಿಯೇ ಹೋತೃವೆಂದೂ ಅವನು ದೇವತೆಗಳ ಪರವೆಂದೂ'' ಹೇಳಿದನು. ಆಗ ದೇವತೆಗಳಿಗೆ ಜಯವೂ ಅಸುರರಿಗೆ ಪರಾಜಯವೂ ಲಭಿಸಿತು. ಈ ತತ್ತ್ವವನ್ನರಿತವನು ಜಯವನ್ನೂ ಇಂತಹವನ ಶತ್ರುವು ಅಪಜಯವನ್ನೂ ಪಡೆಯುತ್ತಾರೆ.

**ಪುರೋಹಿತಃ—ಪುರಃ ಏನಂ ದಧತೀತಿ ಪುರೋಹಿತಃ** (ನಿ. ೨-೧೨) ಇವನನ್ನು ಮುಂಭಾಗದಲ್ಲಿರಿಸುತ್ತಾರಾದ್ದರಿಂದ ಇವನಿಗೆ ಪುರೋಹಿತನೆಂದು ಹೆಸರು ಎಂದು ಸಾಮಾನ್ಯವಾದ ನಿರ್ವಚನವನ್ನು ನಿರುಕ್ತಕಾರರು ಹೇಳಿದ್ದಾರೆ. **ಹಿತ** ಶಬ್ದವು **ಧಾ** (ಇಡು) ಧಾತುವಿನಿಂದ ನಿಷ್ಪನ್ನವಾಗಿದೆ.

**ತತಸ್ತಂ ತು ಪುರೋಧತ್ತ ಆರ್ತ್ವಿಜ್ಯಾಯ ಸ ಶಂತನುಃ ।**
**ಸ ಚಾಸ್ಯ ಚಕ್ರೇ ಕರ್ಮಾಣಿ ವಾರ್ಷಿಕಾಣಿ ಯಥಾವಿಧಿ ॥**
(ಬೃ. ದೇ. ೮-೬)

ಎಂಬ ಬೃಹದ್ದೇವತಾವಾಕ್ಯವು ಋಕ್ಸಂಹಿತೆಯ "**ಯದ್ದೇವಾಪಿಃ ಶಂತನವೇ ಪುರೋಹಿತೋ ಹೋತ್ರಾಯ ವೃತಃ**" (ಋ. ಸಂ. ೧೦-೯೮-೭) ಎಂಬ ವಾಕ್ಯದ ಅರ್ಥವನ್ನು ತಿಳಿಸುತ್ತದೆ. ಇದನ್ನೇ ನಿರುಕ್ತಕಾರರೂ ಉದಾಹರಿಸಿದ್ದಾರೆ. ರಾಜರು ಯಜ್ಞಕಾಲದಲ್ಲಿ ತಮ್ಮ ಮುಂಭಾಗದಲ್ಲಿಟ್ಟುಕೊಳ್ಳುವ ಪುರುಷನು ಪುರೋಹಿತನೆನ್ನಿಸಿಕೊಳ್ಳುವನು. ಆದರೆ ರಾಜನ ಮುಂಭಾಗದಲ್ಲಿದ್ದು ರಾಜನಿಗೆ ಸಹಾಯಮಾಡುವ ಶಕ್ತಿಯುಳ್ಳ ಪುರುಷನು ಅವನಿಗೆ ಯಜ್ಞದಲ್ಲಿ ಮಾತ್ರ ಸಾಹಾಯ್ಯಕನಾಗಿರಬೇಕಾಗಿಲ್ಲ. ರಾಜ್ಯಭಾರ ನಿರ್ವಹಣಕಾಲದಲ್ಲಾಗಲಿ ಅಥವಾ ಯುದ್ಧಾದಿಗಳ ಕಾಲದಲ್ಲಾಗಲಿ ಇವನ ಮುಂದೆ ಇದ್ದು ರಾಜನಿಗೆ ಸದುಪದೇಶಗಳನ್ನು ಕೊಡುತ್ತಿರಬಹುದು. ಅಂತಹ ಸಂದರ್ಭಗಳಲ್ಲಿ ಸಹಾಯಮಾಡುವ ಪುರುಷನು ಪುರೋಹಿತನೆನ್ನಿಸಿಕೊಳ್ಳುವನೇ ಎಂಬ ಒಂದು ಪ್ರಶ್ನೆಯು ಸಹಜವಾಗಿದೆ. ಈ ವಿಷಯವನ್ನು "**ಇಂದ್ರಂ ವೃತ್ರಾಯ ಹಂತವೇ ದೇವಾಸೋ ದಧಿರೇ ಪುರಃ**" (ಋ. ಸಂ. ೮-೧೨-೨೨) ಇತ್ಯಾದ್ಯುದಾಹರಣೆಗಳೊಡನೆ ಚರ್ಚಿಸಿ ಮುಂದೆ ವಿವರಿಸಲಾಗುತ್ತದೆ. ಪ್ರಕೃತದಲ್ಲಿ, ಯಾಜ್ಞಿಕಪ್ರಕ್ರಿಯೆಯಾದ ಈ ಪದದಿಂದ ಸೂಚಿತವಾಗುವ ತತ್ತ್ವವೇನು? ಪುರೋಹಿತನ ಲಕ್ಷಣಗಳೇನು? ಅದರಲ್ಲೂ ಅಗ್ನಿಯು ಪುರೋಹಿತನಾಗಿರುವುದರಲ್ಲಿರುವ ವೈಶಿಷ್ಟ್ಯವೇನು ಎಂಬುದನ್ನು ತಿಳಿಯಬೇಕು.

**ಪುರೋ ವೋ ಮಂದ್ರಂ ದಿವ್ಯಂ ಸುವೃಕ್ತಿಂ ಪ್ರಯತಿ ಯಜ್ಞೇ ಅಗ್ನಿಮಧ್ವರೇ ದಧಿಧ್ವಂ ।**
**ಪುರ ಉಕ್ಥೇಭಿಃ ಸ ಹಿ ನೋ ವಿಭಾವಾ ಸ್ವಧ್ವರಾ ಕರತಿ ಜಾತವೇದಾಃ ॥**
(ಋ. ಸಂ. ೬-೧೦-೧)

ಎಲೈ ಋತ್ವಿಗ್ಯಜಮಾನರೇ, ಸ್ತುತ್ಯನೂ, ದಿವ್ಯಸ್ವರೂಪನೂ, ಸುಖಕಾರಕನೂ ಆದ ಅಗ್ನಿಯನ್ನು ಯಜ್ಞಕಾಲದಲ್ಲಿ ಪುರೋಧಸನನ್ನಾಗಿ ಮಾಡಿರಿ. ಶಸ್ತ್ರಮಂತ್ರಗಳಿಂದ ಪೂಜಿಸಿ ನಿಮ್ಮ ಪುರೋಧಸನನ್ನಾಗಿ ಮಾಡಿರಿ. ಅವನು ನಿಮ್ಮ ಯಜ್ಞವನ್ನು ಸಾರ್ಥಕವಾಗುವಂತೆ ಮಾಡುತ್ತಾನೆ ಎಂದಿರುವ ಈ ಪ್ರಾರ್ಥನೆಯಲ್ಲಿ ಯಜ್ಞಕಾಲದಲ್ಲಿ ಅತಿಮುಖ್ಯವಾಗಿರಬೇಕಾದ ಅಗ್ನಿಯ ಪುರೋಧಸಸ್ವರೂಪವು ತಿಳಿಯುತ್ತದೆ. ಈ ಪುರೋಧಸಸತ್ವವು ಯಜ್ಞಫಲವನ್ನು ಶೀಘ್ರವಾಗಿ ಒದಗಿಸಲು ಸಹಾಯಮಾಡುತ್ತದೆ. ಹೇಗೆಂದರೆ—

**ಇಂದ್ರಾವರುಣಾ ವಧನಾಭಿರಪ್ರತಿ ಭೇದಂ ವನ್ವಂತಾ ಪ್ರ ಸುದಾಸಮಾವತಂ ।**
**ಬ್ರಹ್ಮಾಣ್ಯೇಷಾಂ ಶೃಣುತಂ ಹವೀಮನಿ ಸತ್ಯಾ ತೃತ್ಸೂನಾಮಭವತ್ಪುರೋಹಿತಿಃ ॥**
(ಋ. ಸಂ. ೭-೮೩-೪)

ಎಂಬ ಮಂತ್ರದಲ್ಲಿ ಸುದಾಸನು ಇಂದ್ರಾವರುಣರನ್ನು ಸ್ತುತಿಸಿ ಅವರಿಗೆ ತನ್ನ ಕೃತಜ್ಞತೆಯನ್ನರ್ಪಿಸುವಾಗ "ಎಲೈ ಇಂದ್ರಾವರುಣರೇ, ಯುದ್ಧಕಾಲದಲ್ಲಿ ನನ್ನ ಸಹಾಯಾರ್ಥವಾಗಿ ಮಾಡಿದ ನಿಮ್ಮ ಪೌರೋಹಿತ್ಯವು ಸಫಲವಾಯಿತು

ಎಂದು ಪೌರೋಹಿತ್ಯದ ಫಲವನ್ನು ತಿಳಿಸಿದೆ. ಆದುದರಿಂದ **ಪುರೋಹಿತ** ಎಂಬ ಪದಪ್ರಯೋಗವಿರುವಾಗೆಲ್ಲಾ ಯಜ್ಞಸಂಬಂಧವಾದ ಪುರೋಹಿತತ್ತ್ವವೇ ಅಥವಾ ಕೇವಲ ಸಹಾಯಾರ್ಥವಾಗಿರತಕ್ಕ ಪುರೋಹಿತತ್ತ್ವವೇ ಎಂಬ ಪ್ರಶ್ನೆಗೂ ಅವಕಾಶವುಂಟು. ಆದರೆ ವೈದಿಕಸಂಸ್ಕೃತಿಯಲ್ಲಿ ಈ ಪದಕ್ಕೆ ಪಾರಿಭಾಷಿಕವಾದ ಅರ್ಥವೇ ಇರುತ್ತದೆಂಬು ದನ್ನು ನಿಷ್ಕೃಷ್ಟವಾಗಿ ಹೇಳಬಹುದು.

ರಾಜನಿಗೆ ಬಲಭುಜದತಿಂದ್ದು ಅವನ ಸಮಸ್ತವ್ಯವಹಾರಗಳಲ್ಲಿಯೂ ಅವನಿಗೆ ನಾನಾವಿಧವಾದ ಸಹಾಯ ಗಳನ್ನು ಮಾಡುತ್ತಾ ಅವನಿಗೂ ಅವನ ರಾಜ್ಯಕ್ಕೂ ಕ್ಷೇಮಸಾಧಕವಾಗಿರುವ ಹಿತೋಪದೇಶಕನಿಗೆ ಪುರೋಹಿತನೆಂದು ಸ್ಥೂಲವಾಗಿ ಹೇಳಬಹುದು. ಈ ರೀತಿ ಪುರೋಹಿತನ ಸ್ಥಾನವನ್ನು ವರ್ಣಿಸಿದರೆ ಹೋತ್ರಾದಿ ಋತ್ವಿಕ್ಕುಗಳ ಸ್ಥಾನ ಕ್ಕಿಂತಲೂ ಪುರೋಹಿತನ ಸ್ಥಾನವು ರಾಜನಿಗೆ ಅಧಿಕವಾದ ಬೆಲೆಯುಳ್ಳದ್ದು ಎಂದೂ ತಿಳಿಯುತ್ತದೆ. ರಾಜನಿಗೂ ಪುರೋಹಿತನಿಗೂ ಕೇವಲ ವೈಯಕ್ತಿಕವಾದ ಸಂಬಂಧವಿದ್ದರೂ ಸಹ ರಾಜ್ಯದಲ್ಲಿ ಸುಖಶಾಂತಿಗಳು ದೊರೆಯಬೇಕಾದರೂ ಪುರೋಹಿತನ ಸಹಾಯದಿಂದಲೇ ಸಾಧ್ಯವೆಂಬ ಅಂಶವು ಸಂಹಿತಾ ಮತ್ತು ಬ್ರಾಹ್ಮಣಾದಿಗಳಲ್ಲಿ ವಿಶದವಾಗಿ ತಿಳಿಸಿದೆ. ರಾಜನಿಗೆ ಪುರೋಹಿತನಿಂದ ಲಬ್ಧವಾಗತಕ್ಕ ಕೆಲವು ವೈಯಕ್ತಿಕ ಸಹಾಯಗಳನ್ನು ಪ್ರಥಮತಃ ಪರಿಶೀಲಿಸಿ ನಂತರ ಸಾಮಾಜಿಕ ಮತ್ತು ರಾಜಕೀಯ ಜೀವನದಲ್ಲೂ ಸಹ ಪುರೋಹಿತನ ಪ್ರಭಾವವು ಎಷ್ಟು ಪರಿಣಾಮಕಾರಿಯಾಗುತ್ತ ದೆಂಬ ಅಂಶವನ್ನು ಅನಂತರ ವೈದಿಕವಾಕ್ಯಗಳ ಆಧಾರದಿಂದ ಪರಿಶೀಲಿಸಬಹುದು. ಪುರೋಹಿತನು ರಾಜನಿಗೆ ವೈಯುಕ್ತಿಕವಾದ ಸಖನೂ, ಸಚಿವನೂ, ಯುದ್ಧಕಾಲದಲ್ಲೂ ಮತ್ತು ಶಾಂತಿಕಾಲದಲ್ಲೂ ಸದುಪದೇಶಕನೂ ಆಗಿರ ತಕ್ಕವನು. ಸುದಾಸನಿಗೆ ಪುರೋಹಿತನಾಗಿದ್ದ ವಸಿಷ್ಠನು ರಾಜನ ಯಜ್ಞಕಾಲದಲ್ಲಿ ಹೋತೃವಿನ ಸ್ಥಾನದಲ್ಲಿದ್ದು ಕೇವಲ ಮಂತ್ರಪಠನವನ್ನು ಮಾಡುತ್ತಿದುದು ಮಾತ್ರವಲ್ಲದೇ ಅವನ ರಾಜಕೀಯ ವ್ಯವಹಾರಗಳನ್ನೂ ಅವನಿಗೆ ಅನೇಕ ವಿಧವಾದ ಸಹಾಯಗಳನ್ನು ಮಾಡುತ್ತಿದ್ದನು. ಪುರೋಹಿತನ ಸ್ಥಾನವು ಅತ್ಯುತ್ತಮವಾದ ಸ್ಥಾನವು. ಲೋಕಹಿತವನ್ನು ಸಾಧಿಸುವ ಸ್ಥಾನ. ಇದರ ಪ್ರಾಮುಖ್ಯತೆಯು ಹೇಗೆ ಉಂಟಾಯಿತು ಎಂಬ ವಿಷಯದಲ್ಲಿ ಕೆಲವು ಪ್ರಸಿದ್ಧರಾದ ಆಂಗ್ಲ ಪಂಡಿತರು ತಪ್ಪು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಉದಾಹರಣೆಗೆ Max-Muller ಎಂಬ ಪಂಡಿತನು,

> " The original occupation of the Purohita may simply have been to perform the usual sacrifices ; but with the ambitious policy of the Brahmins, it soon became a stepping stone to Political power. "
>
> [History of Ancient Sanskrit Literature. p. 257.]

ಪ್ರಥಮಥಃ ಪುರೋಹಿತನು ಯಜ್ಞಕಾರ್ಯಗಳಲ್ಲಿ ಮಾತ್ರ ಭಾಗವಹಿಸಿ ರಾಜನಿಗೆ ವೈದಿಕಕಾರ್ಯಗಳಲ್ಲಿ ಸಹಾಯಮಾಡುವ ಸ್ಥಾನವನ್ನಾಕ್ರಮಿಸಿದನು. ಅನಂತರ ವಿಸ್ತೃತವಾದ ಆಸೆಯುಳ್ಳ ಬ್ರಾಹ್ಮಣರು ಇದೇ ಸ್ಥಾನಕ್ಕೆ ರಾಜಕೀಯವಾದ ಪ್ರಾಮುಖ್ಯತೆಯನ್ನೂ ತೋರಿಸಿ ರಾಜನ ಪ್ರಭುತ್ವದಲ್ಲಿ ತಾವೂ ಭಾಗವಹಿಸುವ ಅವಕಾಶವನ್ನು ಕಲ್ಪಿಸಿಕೊಂಡರು ಎಂದು ಈ ಪಂಡಿತನು ತಿಳಿಸಿದ್ದಾನೆ. ಆದರೆ ಸೂಕ್ಷ್ಮವಾಗಿ ಪರಿಶೀಲಿಸಿದರೆ ಈ ಪಂಡಿತನ ಅಭಿಪ್ರಾಯವು ಸರಿಯಲ್ಲವೆಂದು ಹೇಳಬಹುದು. ಪುರೋಹಿತನ ಸ್ಥಾನದಲ್ಲಿ ಯಾವ ವಿಧವಾದ ಸ್ವಾರ್ಥವೂ ಕಾಣುವುದಿಲ್ಲ. ಆದರಲ್ಲಿ ಮುಖ್ಯವಾದ ಆಧ್ಯಾತ್ಮಿಕತತ್ತ್ವವೂ ಅಡಗಿದೆಯೆಂಬುದನ್ನು ವೈದಿಕವಾಕ್ಯಗಳೇ ತಿಳಿಸುತ್ತವೆ. ವೈದಿಕವಾಕ್ಯಗಳಲ್ಲಿ ವರ್ಣಿತವಾಗುವ ಪುರೋಹಿತನ ಸ್ಥಾನಕ್ಕೂ ಪ್ರಕೃತಜೀವನದಲ್ಲಿ ವೈದಿಕಕಾರ್ಯಗಳಿಗೆ ಸಹಾಯಕನಾಗುವ ಪುರೋಹಿತನಿಗೂ ಯಾವ

ಸಂಬಂಧವೂ ಇಲ್ಲ. ಆಧುನಿಕ ವ್ಯವಹಾರಗಳಲ್ಲೂ ಸಹ ಪುರೋಹಿತನ ಅವಶ್ಯಕತೆಯು ಬಹಳವಾಗಿದ್ದರೂ ಸಹ ಹಿಂದಿನ ವೈಶಿಷ್ಟ್ಯವು ನಷ್ಟವಾಗಿದೆ. ವೈದಿಕವಾಕ್ಯಗಳ ಆಧಾರದಿಂದ ಪ್ರಾಚೀನವಾದ ಪುರೋಹಿತನ ಸ್ಥಾನದ ವೈಶಿಷ್ಟ್ಯವೇನೆಂಬುದನ್ನು ವಿಮರ್ಶಿಸಿದರೆ ಈ ವ್ಯತ್ಯಾಸವು ತಿಳಿಯುತ್ತದೆ. ಐತರೇಯ ಬ್ರಾಹ್ಮಣದಲ್ಲಿ ಪ್ರಥಮತಃ ರಾಜನ ಯಜ್ಞಕಾರ್ಯದಲ್ಲಿ ಪುರೋಹಿತನ ಸಹಾಯವು ವರ್ಣಿತವಾಗಿ ನಂತರ ಯಜ್ಞದ ಅರ್ಥವನ್ನು ವಿಸ್ತರಿಸಿ ವಿಶ್ವದ ಸಮಸ್ತ ವ್ಯವಹಾರವೂ ಯಜ್ಞರೂಪವೇ ಆಗಿರುವುದರಿಂದ ವಿಶ್ವವ್ಯವಹಾರಗಳೆಲ್ಲದರಲ್ಲೂ ಪುರೋಹಿತನ ಆವಶ್ಯಕತೆಯನ್ನು ತೋರಿಸಿದೆ. ಈ ಪುರೋಹಿನಾರು ? ಎಂದರೆ, ಪೃಥಿವೀಸ್ಥವಾದ ಮಾನವಾದಿಗಳ ವ್ಯವಹಾರಕ್ಕೆ ಮಾರ್ಗ ದರ್ಶಕನಾದ ಪುರೋಹಿತನು ಅಗ್ನಿಯು ; ದ್ಯುಲೋಕದ ಮಾರ್ಗದರ್ಶಕನಾದ ಪುರೋಹಿತನು ಆದಿತ್ಯನು. ಅಂತರಿಕ್ಷಸ್ಥವಾದ ಭೂತಗಳ ವ್ಯವಹಾರಕ್ಕೆ ಮಾರ್ಗದರ್ಶಕನಾದ ಪುರೋಹಿತನು ವಾಯುವು. ಈ ರೀತಿ ಆಧ್ಯಾತ್ಮಿಕ ತತ್ತ್ವವನ್ನು ಪ್ರತಿಪಾದಿಸುವ ತಾತ್ಪರ್ಯವನ್ನು ಪುರೋಹಿತನ ಸ್ಥಾನಕ್ಕೆ ಹೇಳಿದೆ. ಅದು ಹೇಗೆಂದರೆ,

**ಅಥಾತಃ ಪುರೋಧಾಯಾ ಏವ, ನ ಹವಾ ಅಪುರೋಹಿತಸ್ಯ ರಾಜ್ಞೋ ದೇವಾ ಅನ್ನಮದಂತಿ ತಸ್ಮಾದ್ರಾಜಾ ಯಕ್ಷ್ಯಮಾಣೋ ಬ್ರಾಹ್ಮಣಂ ಪುರೋ ದಧೀತ ದೇವಾ ಮೇಽನ್ನಮದನ್ನಿತಿ; ಅಗ್ನೀನ್ವಾ ಏಷ ಸ್ವರ್ಗ್ಯಾನ್ರಾಜೋದ್ಧರತೇ ಯತ್ಪುರೋಹಿತಂ ।**

(ಐ. ಬ್ರಾ. ೪೦–೨೪)

ಪ್ರಕೃತ ಪುರೋಹಿತನ ಸ್ಥಾನವನ್ನೂ ಅದರ ಆವಶ್ಯಕತೆಯನ್ನೂ ವಿಮರ್ಶಿಸುವುದಾದರೆ ಈ ಸ್ಥಾನವು ಅತಿ ಮುಖ್ಯ ವಾದುದು ಪುರೋಹಿತನಿಲ್ಲದೇ ರಾಜನು ಯಜ್ಞದಲ್ಲಿ ಆಹುತಿಯನ್ನರ್ಪಿಸಿದರೆ ಅದನ್ನು ದೇವತೆಗಳು ಸ್ವೀಕರಿಸುವುದಿಲ್ಲ. ಆದುದರಿಂದ ರಾಜನು ಯಜ್ಞಕ್ಕೆ ಪೂರ್ವಭಾವಿಯಾಗಿ ಸರಿಯಾದ ಅರ್ಹತೆಯುಳ್ಳ ಪುರೋಹಿತನನ್ನು ಸಹಾಯಕ್ಕೆ ಸ್ವೀಕರಿಸಬೇಕು "ದೇವತೆಗಳು ನನ್ನ ಹವಿಸ್ಸನ್ನು ಸ್ವೀಕರಿಸಲಿ'' ಎಂಬ ಇಚ್ಛೆಯಿಂದ ಪುರೋಹಿತನನ್ನು ವರಿಸಿದರೆ ಆಗ ಸ್ವರ್ಗಪ್ರಾಪ್ತಿಗೆ ಸಾಧನವಾದ ಅಗ್ನಿಯನ್ನು ಸ್ಥಾಪಿಸುತ್ತಾನೆ.

**ತಸ್ಯ ಪುರೋಹಿತ ಏವಾಹವನೀಯೋ ಭವತಿ ಜಾಯಾ ಗಾರ್ಹಪತ್ಯಃ ಪುತ್ರೋಽನ್ವಾಹಾರ್ಯ-ಪಚನಃ ಸ ಯತ್ಪುರೋಹಿತಾಯ ಕರೋತ್ಯಾಹವನೀಯ ಏವ ತಜ್ಜುಹೋತ್ಯಥ ಯಜ್ಜಾ-ಯಾಯೈ ಕರೋತಿ ಗಾರ್ಹಪತ್ಯ ಏವ ತಜ್ಜುಹೋತ್ಯಥ ಯತ್ಪುತ್ರಾಯ ಕರೋತ್ಯನ್ವಾಹಾ-ರ್ಯಪಚನ ಏವ ತಜ್ಜುಹೋತಿ ತ ಏನಂ ಶಾಂತತನವೋಽಭಿಹುತಾ ಅಭಿಪ್ರೀತಾಃ ಸ್ವರ್ಗಂ ಲೋಕಮಭಿವಹಂತಿ ಕ್ಷತ್ರಂ ಚ ಬಲಂ ಚ ರಾಷ್ಟ್ರಂ ಚ ವಿಶಂ ಚ । ತ ಏವೈನಮ-ಶಾಂತತನವೋಽನಭಿಹುತಾ ಅನಭಿಪ್ರೀತಾಃ ಸ್ವರ್ಗಾನ್ ಲೋಕಾನ್ನುದಂತೇ ಕ್ಷತ್ರಾಚ್ಚ ಬಲಾಚ್ಚ ರಾಷ್ಟ್ರಾಚ್ಚ ವಿಶಶ್ಚ ॥**　　(ಐ. ಬ್ರಾ. ೪೦–೨೪)

ಯಜ್ಞಕ್ರಿಯೆಗೆ ಸಂಬಂಧಿಸಿದಂತೆ, ಪುರೋಹಿತನೇ ಆಹವನೀಯವು, ಅವನ ಪತ್ನಿಯೇ ಗಾರ್ಹಪತ್ಯವು, ಆತನ ಪುತ್ರನೇ ಅನ್ವಾಹಾರ್ಯಪಚನವು, ಎಂದರೆ ದಕ್ಷಿಣಾಗ್ನಿಯು. ಪುರೋಹಿತನ ಇಚ್ಛಾನುಸಾರವಾಗಿ ರಾಜನು ಯಾವು ದನ್ನು ಅರ್ಪಿಸುವನೋ ಅದನ್ನು ಆಹವನೀಯಾಗ್ನಿಗೆ ಅರ್ಪಿಸಿದಂತೆ. ಅವನ ಪತ್ನಿಗೆ ಅರ್ಪಿಸುವುದು ಗಾರ್ಹಪತ್ಯಾಗ್ನಿಗೆ ಅರ್ಪಿಸಿದಂತೆ. ಆತನ ಪುತ್ರನಿಗೆ ಅರ್ಪಿಸುವುದು ದಕ್ಷಿಣಾಗ್ನಿಗೆ ಅರ್ಪಿಸಿದಂತೆ. ಈ ಉಪಚಾರಗಳಿಂದ ಅವರು ತೃಪ್ತರಾದರೆ ಆಗ ರಾಜನ ಸ್ವರ್ಗಪ್ರಾಪ್ತಿಗೂ, ಕ್ಷಾತ್ರಶಕ್ತಿಸಂಪಾದನೆಗೂ, ರಾಜ್ಯಲಾಭಕ್ಕೂ, ಬಲಸಾಧನೆಗೂ,

ಪ್ರಜಾನುರಾಗಸಂಪಾದನೆಗೂ ಸಹಾಯಕರಾಗುತ್ತಾರೆ. ಇದಿಲ್ಲದೆ ಅವರು ಅತೃಪ್ತರಾದರೆ ರಾಜನು ಸ್ವರ್ಗದಿಂದೆ ಚ್ಯುತನಾಗುತ್ತಾನೆ. ಕ್ಷಾತ್ರಶಕ್ತಿಯು ನಾಶವಾಗುತ್ತದೆ. ಬಲಹೀನನಾಗುತ್ತಾನೆ. ರಾಜ್ಯಭ್ರಷ್ಟನಾಗುವನು. ಪ್ರಜೆಗಳ ಅನುರಾಗವನ್ನು ಕಳೆದುಕೊಳ್ಳುವನು. ಆದರೆ, ಈ ಪುರೋಹಿತನಾರು, ಇವನ ಪತ್ನೀಪುತ್ರರನ್ನು ತೃಪ್ತಿಪಡಿಸುವುದು ಎಂದರೇನು ಎಂದರೆ,

**ಅಗ್ನಿರ್ವಾ ಏಷ ವೈಶ್ವಾನರಃ ಪಂಚಮೇನಿರ್ಯತ್ಪುರೋಹಿತಸ್ತಸ್ಯ ವಾಚ್ಯೇವೈಕಾ ಮೇನಿರ್ಭವತಿ ಪಾದಯೋರೇಕಾ ತ್ವಚ್ಯೇಕಾ ಹೃದಯ ಏಕೋಪಸ್ಥ ಏಕಾ ತಾಭಿರ್ಜ್ವಲಂತೀಭಿರ್ದೀಪ್ಯಮಾನಾಭಿರುಪೋದೇತಿ ರಾಜಾನಂ ಸ ಯದಾಹ ಕ್ವ ಭಗವೋಽವಾತ್ಸೀಸ್ತೃಣಾನ್ಯಸ್ಮಾ ಆಹರತೇತಿ ತೇನಾಸ್ಯ ತಾಂ ಶಮಯತಿ ಯಾಸ್ಯ ವಾಚಿ ಮೇನಿರ್ಭವತ್ಯಥ ಯದಸ್ಮಾ ಉದಕಮಾನಯಂತಿ ಪಾದ್ಯಂ ತೇನಾಸ್ಯ ತಾಂ ಶಮಯತಿ ಯಾಸ್ಯ ಪಾದಯೋರ್ಮೇನಿರ್ಭವತ್ಯಥ ಯದೇನಮಲಂ ಕುರ್ವಂತಿ ತೇನಾಸ್ಯ ತಾಂ ಶಮಯತಿ ಯಾಸ್ಯ ತ್ವಚಿ ಮೇನಿರ್ಭವತ್ಯಥ ಯದೇನಂ ತರ್ಪಯಂತಿ ತೇನಾಸ್ಯ ತಾಂ ಶಮಯತಿ ಯಾಸ್ಯ ಹೃದಯೇ ಮೇನಿರ್ಭವತ್ಯಥ ಯದಸ್ಯಾನಾರುದ್ಧೋ ವೇಶ್ಮಸು ವಸತಿ ತೇನಾಸ್ಯ ತಾಂ ಶಮಯತಿ ಯಾಸ್ಯೋಪಸ್ಥೇ ಮೇನಿರ್ಭವತಿ ॥**

(ಐ. ಬ್ರಾ. ೪೦-೨೪)

ಈ ಪುರೋಹಿತನು ಮರ್ತ್ಯನಲ್ಲ. ಅಮರ್ತ್ಯನಾದ ವೈಶ್ವಾನರಾಗ್ನಿಯೇ ಈ ಪುರೋಹಿತನು. ಇವನಿಗೆ ಐದು ಆಯುಧಗಳು ; ಅವನ ವಾಕ್ಕಿನಲ್ಲಿ ಒಂದೂ, ಪಾದಗಳಲ್ಲಿ ಒಂದೂ, ತ್ವಕ್ಕು (ಚರ್ಮ) ಗಳಲ್ಲಿ ಒಂದೂ, ಹೃದಯದಲ್ಲಿ ಒಂದೂ, ಮುಖ್ಯಾಂಗದಲ್ಲಿ ಒಂದೂ ಹೀಗೆ ಐದು ಆಯುಧಗಳಿವೆ. ಪ್ರದೀಪ್ತವಾದವೂ, ಜ್ವಾಲಾರೂಪವಾದವೂ ಆದ ಈ ಆಯುಧಗಳೊಡನೆ ವೈಶ್ವಾನರಾಗ್ನಿರೂಪಿಯಾದ ಪುರೋಹಿತನು ರಾಜನನ್ನು ಸಮೀಪಿಸುತ್ತಾನೆ. ಒಡನೆಯೇ ರಾಜನು " ಎಲೈ ಪೂಜ್ಯನೇ, ನೀನು ಇಲ್ಲಿಯವರೆಗೆ ಎಲ್ಲಿ ವಾಸವಾಗಿದ್ದೆ " ಎಂದು ಪ್ರಶ್ನಿಸಿ " ಈ ಪುರೋಹಿತನ ಪೂಜೆಗೆ ತೃಣವನ್ನು ಸಿದ್ಧಪಡಿಸಿ " ಎಂದು ತನ್ನ ಪರಿವಾರಕ್ಕೆ ಆದೇಶಕೊಟ್ಟಾಗ, ಅಗ್ನಿಯ ವಾಕ್ಕಿನಲ್ಲಿರುವ ಆಯುಧದ ತೀಕ್ಷ್ಣತೆಯನ್ನು ಅಳಿಸುತ್ತಾನೆ. ಆ ಅಗ್ನಿಯ ಪಾದಪೂಜೆಗೆ ಉದಕವನ್ನು ತಂದಾಗ ಪಾದಸ್ಥವಾದ ಆಯುಧದ ತೀವ್ರತೆಯು ಕಡಿಮೆಯಾಗುತ್ತದೆ. ಅವನಿಗೆ ಅಲಂಕಾರವನ್ನು ಮಾಡಿದಾಗ ತ್ವಕ್ಕಿನ ಆಯುಧದ ತೀವ್ರತೆಯೂ, ಅವನಿಗೆ ಸಂತೃಪ್ತಿಯಾದಾಗ ಹೃದಯಸ್ಥವಾದ ಆಯುಧದ ತೀಕ್ಷ್ಣತೆಯೂ, ಅವನು ಪ್ರತಿಬಂಧಕವೇನೂ ಇಲ್ಲದೆ ಯಜ್ಞಗೃಹದಲ್ಲಿ ಸ್ಥಿತನಾಗಲು ಸಿದ್ಧಮಾಡಿದಾಗ ಅವನ ಮುಖ್ಯವಾದ ಅಂಗದ ಆಯುಧದ ತೀವ್ರತೆಯೂ ಶಾಂತವಾಗುವುವು.

**ಸ ಏನಂ ಶಾಂತತನುರಭಿಹುತೋಽಭಿಪ್ರೀತಃ ಸ್ವರ್ಗಂ ಲೋಕಮಭಿವಹತಿ ಕ್ಷತ್ರಂ ಚ ಬಲಂ ಚ ರಾಷ್ಟ್ರಂ ಚ ವಿಶಂ ಚ ಸ ಏವೈನಮಶಾಂತತನುರನಭಿಹುತೋಽನಭಿಪ್ರೀತಃ ಸ್ವರ್ಗಾಂಲ್ಲೋಕಾನ್ನುದತೇ ಕ್ಷತ್ರಾಚ್ಚ ಬಲಾಚ್ಚ ರಾಷ್ಟ್ರಾಚ್ಚ ವಿಶಶ್ಚ ॥**

(ಐ. ಬ್ರಾ. ೪೦-೨೪)

ಈ ವಿಧವಾಗಿ ಪುರೋಹಿತಸ್ವರೂಪನಾದ ಅಗ್ನಿಯು ದಾಹಾತ್ಮಕವಾದ ಶರೀರಕ್ಕೆ ಆಪ್ಯಾಯಮಾನವಾದ ಹವಿರಾದಿಗಳನ್ನು ಪಡೆದು ತೃಪ್ತನಾದಾಗ ಯಜಮಾನನನ್ನು ಸ್ವರ್ಗಕ್ಕೆ ಒಯ್ಯುತ್ತಾನೆ. ಮತ್ತು ಅವನಿಗೆ ಕ್ಷಾತ್ರಶಕ್ತಿಯನ್ನೂ

ವೀರ್ಯವನ್ನೂ, ರಾಷ್ಟ್ರವನ್ನೂ, ಪ್ರಜಾಬೆಂಬಲವನ್ನೂ ಒದಗಿಸುತ್ತಾನೆ. ಈ ರೀತಿಯಾದ ತೃಪ್ತಿಯಿಲ್ಲದಿದ್ದರೆ, ರಾಜನಾದವನಿಗೆ ಸ್ವರ್ಗಪ್ರಾಪ್ತಿಯಿಲ್ಲ. ಅವನು ಕ್ಷಾತ್ರವೀರ್ಯವನ್ನಾಗಲಿ, ರಾಷ್ಟ್ರವನ್ನಾಗಲಿ, ಪ್ರಜಾಬೆಂಬಲವನ್ನಾಗಲಿ ಪಡೆಯಲಾರನು. ಅವೆಲ್ಲವೂ ಇವನಿಂದ ವಿಮುಖವಾಗುತ್ತವೆ.

**ಅಗ್ನಿರ್ವಾ ಏಷ ವೈಶ್ವಾನರಃ ಪಂಚ ಮೇನಿರ್ಯತ್ಪುರೋಹಿತಸ್ತಾಭೀ ರಾಜಾನಂ ಪರಿಗೃಹ್ಯ ತಿಷ್ಠತಿ ಸಮುದ್ರ ಇವ ಭೂಮಿಂ । ಅಯುವಮಾರ್ಯಸ್ಯ ರಾಷ್ಟ್ರಂ ಭವತಿ ನೈನಂ ಪುರಾಯುಷಃ ಪ್ರಾಣೋ ಜಹಾತ್ಯಾಜರಸಂ ಜೀವತಿ ಸರ್ವಮಾಯುರೇತಿ ನ ಪುನರ್ಮ್ರಿಯತೇ ಯಸ್ಯೈವಂ ವಿದ್ವಾನ್ಬ್ರಾಹ್ಮಣೋ ರಾಷ್ಟ್ರಗೋಪಃ ಪುರೋಹಿತಃ ॥** (ಐ. ಬ್ರಾ. ೪೦-೨೫)

ಮೇಲೆ ಹೇಳಿದ ಐದು ವಿಧವಾದ ಆಯುಧಗಳಿಂದ ಕೂಡಿದವನೂ, ಅಗ್ನಿವೈಶ್ವಾನರರೂಪಿಯೂ ಆದ ಪುರೋಹಿತನು, ಸಮುದ್ರವು ಪೃಥ್ವಿಯನ್ನು ಆಚ್ಛಾದಿಸಿ ರಕ್ಷಿಸುವಂತೆ—ರಾಜನನ್ನು ರಕ್ಷಿಸುತ್ತಾನೆ. ಬ್ರಹ್ಮತೇಜಸ್ಸುಳ್ಳವನೂ, ತತ್ವಾರ್ಥವನ್ನು ತಿಳಿದವನೂ, ರಾಷ್ಟ್ರರಕ್ಷಕನೂ ಆದ ಪುರೋಹಿತನು ಯಾವ ರಾಜನಿಗೆ ಬೆಂಬಲವನ್ನು ಕೊಡುವನೋ ಅಂತಹ ರಾಜನ ಪ್ರಭುತ್ವವು ಅವನ ಯೌವನದಲ್ಲಿಯೇ ನಾಶವನ್ನು ಹೊಂದುವುದಿಲ್ಲ. ಪೂರ್ಣವಾದ ಕಾಲವು ತುಂಬುವವರೆಗೆ ಅವನ ಪ್ರಾಣವು ಅವನನ್ನು ತ್ಯಜಿಸುವುದಿಲ್ಲ. ವೃದ್ಧನಾಗುವವರೆಗೂ ಅವನು ಜೀವಂತನಾಗಿರುತ್ತಾನೆ. ಮತ್ತು ಪೂರ್ಣಾಯುಸ್ಸನ್ನೂ ಖಂಡಿತವಾಗಿಯೂ ಪಡೆಯುತ್ತಾನೆ.

**ಕ್ಷತ್ರೇಣ ಕ್ಷತ್ರಂ ಜಯತಿ ಬಲೇನ ಬಲಮಶ್ನುತೇ ಯಸ್ಯೈವಂ ವಿದ್ವಾನ್ ಬ್ರಾಹ್ಮಣೋ ರಾಷ್ಟ್ರಗೋಪಃ ಪುರೋಹಿತಃ । ತಸ್ಮೈ ವಿಶಃ ಸಂಜಾನತೇ ಸಂಮುಖಾ ಏಕಮನಸೋ ಯಸ್ಯೈವಂ ವಿದ್ವಾನ್ಬ್ರಾಹ್ಮಣೋ ರಾಷ್ಟ್ರಗೋಪಃ ಪುರೋಹಿತಃ ॥** (ಐ. ಬ್ರಾ. ೪೦-೨೫)

ಯಾವ ರಾಜನಿಗೆ ಬ್ರಹ್ಮತೇಜಸ್ಸುಳ್ಳವನೂ, ರಾಷ್ಟ್ರರಕ್ಷಕನೂ ಆದ ಪುರೋಹಿತನ ಬೆಂಬಲವಿರುವುದೋ ಅಂತಹ ರಾಜನು ಕ್ಷತ್ರಬಲದಿಂದ ಕ್ಷಾತ್ರತೇಜಸ್ಸನ್ನೂ, ವೀರ್ಯದಿಂದಲೇ ವೀರ್ಯವನ್ನೂ ಪಡೆದುಕೊಳ್ಳುತ್ತಾನೆ. ಆ ರಾಜ್ಯದಲ್ಲಿರುವ ಪ್ರಜೆಗಳೆಲ್ಲರೂ ಸಹ ಒಂದೇ ಮನಸ್ಸುಳ್ಳವರಾಗಿಯೂ, ಸಕಲವಾದ ವ್ಯವಹಾರಗಳಲ್ಲಿಯೂ ಸಾಮರಸ್ಯವನು ತೋರಿಸುವವರಾಗಿಯೂ ಇದ್ದು ರಾಷ್ಟ್ರದ ಐಕ್ಯತೆಯನ್ನು ಸಂಪಾದಿಸಿ ರಾಜನಿಗೆ ಶಾಂತಿಸಾಧನರಾಗುತ್ತಾರೆ.

**ತದಪ್ಯೇತದೃಷಿಣೋಕ್ತಂ । ಸ ಇದ್ರಾಜಾ ಪ್ರತಿಜನ್ಯಾನಿ ವಿಶ್ವಾ ಶುಷ್ಮೇಣ ತಸ್ಥಾವಭಿ ವೀರ್ಯೇಣೇತಿ ಸಪತ್ನಾ ವೈ ದ್ವಿಷಂತೋ ಭ್ರಾತೃವ್ಯಾ ಜನ್ಯಾನಿ ತಾನೇವ ತಚ್ಛುಷ್ಮೇಣ ವೀರ್ಯೇಣಾಧಿತಿಷ್ಠತಿ । ಬೃಹಸ್ಪತಿಂ ಯಃ ಸುಭೃತಂ ಬಿಭರ್ತೀತಿ ಬೃಹಸ್ಪತಿರ್ಹ ವೈ ದೇವಾನಾಂ ಪುರೋಹಿತಸ್ತಮನ್ವನ್ಯೇ ಮನುಷ್ಯರಾಜ್ಞಾಂ ಪುರೋಹಿತಾ ಬೃಹಸ್ಪತಿಂ ಯಃ ಸುಭೃತಂ ಬಿಭರ್ತೀತಿ ಯದಾಹ ಪುರೋಹಿತಂ ಯಃ ಸುಭೃತಂ ಬಿಭರ್ತೀತ್ಯೇವ ತದಾಹ ವಲ್ಗೂಯತಿ ವಂದತೇ ಪೂರ್ವಭಾಜಮಿತ್ಯಪಚಿತಿಮೇವಾಸ್ಮಾ ಏತದಾಹ ॥**

(ಐ. ಬ್ರಾ. ೪೦-೨೬)

ಹೇಗೆಂದರೆ ವಾಮದೇವಮಹರ್ಷಿಯು ಋಕ್ಸಂಹಿತೆಯಲ್ಲಿ ಇದೇ ಅಭಿಪ್ರಾಯವನ್ನು ವಿಶದವಾಗಿ ವ್ಯಕ್ತಪಡಿಸಿದ್ದಾರೆ. "**ಸ ಇದ್ರಾಜಾ**" ಇತ್ಯಾದಿ ಮೂರು ಮಂತ್ರಗಳಲ್ಲಿ ರಾಜನಿಗೂ, ಪುರೋಹಿತನಿಗೂ ಇರುವ ನಿಕಟಸಂಬಂಧವೂ,

ಪುರೋಹಿತನ ಸಾನ್ನಿಧ್ಯದಿಂದಲೂ, ಸಹಾಯದಿಂದಲೂ ರಾಜನಿಗೆ ಲಭಿಸಬಹುದಾದ ಸಮಸ್ತ ಕಲ್ಯಾಣಗಳೂ ವರ್ಣಿತವಾಗಿವೆ (ಋ. ಸಂ. ೪-೫೦-೭-೯). "ಯಾವ ರಾಜನು ಪುರೋಹಿತಯುಕ್ತನಾಗಿರುವನೋ ಆ ರಾಜನು ಮಾತ್ರ ತನ್ನ ಸಾಮರ್ಥ್ಯದಿಂದ ಪ್ರತಿಪಕ್ಷದ ಸಮಸ್ತಬಲವನ್ನೂ ಸಹ ಎದುರಿಸಿ ಸೋಲಿಸಬಲ್ಲನು" ಎಂಬುದೇ "**ಸ ಇದ್ರಾಜಾ**" ಎಂಬ ಮೊದಲನೆಯ ಮಂತ್ರದ (೪-೫೦-೭) ಪೂರ್ವಾರ್ಧದ ತಾತ್ಪರ್ಯ. **ಪ್ರತಿಜನ್ಯಾನಿ** ಎಂದರೆ ಶತ್ರುಗಳ ಬಲವೆಂದರ್ಥ. **ಜನ್ಯ**ಶಬ್ದವು **ಸಪತ್ನ**ರನ್ನೇ ನಿರ್ದೇಶಿಸುತ್ತದೆ. ಯಾರು ಈ ರಾಜನೊಡನೆ ಸ್ಪರ್ಧಿಸಿ ಇವನನ್ನು ದ್ವೇಷಿಸುತ್ತಾರೋ ಅವರೆಲ್ಲರೂ **ಸಪತ್ನ**ರು. ಅಂತಹ ಸಪತ್ನರನ್ನೆಲ್ಲಾ ತನ್ನ ಅಧಿಕವಾದ ಬಲದಿಂದ ಪ್ರತಿಭಟಿಸಿ ಸೋಲಿಸುತ್ತಾನೆಂದರ್ಥ. ಇದು ಪುರೋಹಿತನ ಸಹಾಯದ ಫಲವು.

"**ಬೃಹಸ್ಪತಿಂ ಯಃ ಸುಭೃತಂ ಬಿಭರ್ತಿ**" ಎಂಬುದು ಮೊದಲನೆಯ ಮಂತ್ರದ (೪-೫೦-೭) ಮೂರನೆಯ ಪಾದವು. ಬೃಹಸ್ಪತಿಯು ದೇವತೆಗಳಿಗೆ ಪುರೋಹಿತನು. ಮಾನವರು ಯಾವ ಯಾವ ಪುರೋಹಿತರನ್ನು ಆರಿಸುತ್ತಾರೆಯೋ ಅವರೆಲ್ಲರೂ ಆ ಬೃಹಸ್ಪತಿಗೆ ಸಮಾನರಾಗಿರುತ್ತಾರೆ. ಯಾವ ರಾಜನು ಬೃಹಸ್ಪತಿಗೆ ಸಮಾನರಾದ ಈ ಪುರೋಹಿತನನ್ನು ಆರಾಧಿಸಿ ಸುಖದಿಂದ ರಕ್ಷಿಸುತ್ತಿರುತ್ತಾನೋ ಆ ರಾಜನೇ ಶತ್ರುಗಳನ್ನು ಸೋಲಿಸಬಲ್ಲನು.

'**ವಲ್ಗೂಯತಿ ವಂದತೇ ಪೂರ್ವಭಾಜಂ**' ಎಂಬುದು ಮಂತ್ರದ ನಾಲ್ಕನೆಯ ಪಾದವು. ಯಾವ ರಾಜನು ಬೃಹಸ್ಪತಿಯನ್ನು ಪೂಜಿಸಿ ತನ್ನ ಸಕಲಸನ್ಮಾನಗಳಿಗೂ ಪ್ರಥಮಭಾಗಕ್ಕಾಗಿ ಮಾಡುವನೋ ಆ ರಾಜನೇ ಜಯಶಾಲಿಯಾಗಬಲ್ಲನು ಎಂಬುದೇ ಈ ಪಾದದ ತಾತ್ಪರ್ಯವು. ಬೃಹಸ್ಪತಿಗೆ ತೋರಿಸುವ ಗೌರವವು ತನ್ನ ಮೇಲ್ಮೆಗೆ ಸಾಧನವಾಗುವುದೆಂಬುದೇ ಭಾವವು.

**ಸ ಇತ್ ಕ್ಷೇತಿ ಸುಧಿತ ಓಕಸಿ ಸ್ವ ಇತಿ ಗೃಹಾ ವಾ ಓಕಃ ಸ್ವೇಷ್ವೇವ ತದ್ಗೃಹೇಷು ಸುಹಿತೋ ವಸತಿ, ತಸ್ಮಾ ಇಳಾ ಪಿನ್ವತೇ ವಿಶ್ವದಾನೀಮಿತ್ಯನ್ನಂ ವಾ ಇಳಾನ್ನಮೇವಾಸ್ಮಾ ಏತದೂರ್ಜಸ್ವಚ್ಛಶ್ವದ್ಭವತಿ, ತಸ್ಮೈ ವಿಶಃ ಸ್ವಯಮೇವಾನಮಂತ ಇತಿ ರಾಷ್ಟ್ರಾಣಿ ವೈ ವಿಶೋ ರಾಷ್ಟ್ರಾಣ್ಯೇವೈನಂ ತತ್ಸ್ವಯಮುಪನಮಂತಿ, ಯಸ್ಮಿನ್ಬ್ರಹ್ಮಾ ರಾಜನಿ ಪೂರ್ವ ಏತೀತಿ ಪುರೋಹಿತಮೇವೈತದಾಹ ।** (ಐ. ಬ್ರಾ. ೪೦-೨೬)

"**ಸ ಇತ್ ಕ್ಷೇತಿ ಸುಧಿತ ಓಕಸಿ ಸ್ವೇ**" ಎಂಬುದು ಎರಡನೆ ಮಂತ್ರದ (೪-೫೦-೮) ಮೊದಲನೆಯ ಪಾದವು. ಯಾವ ರಾಜನ ಗೃಹದಲ್ಲಿ ಪುರೋಹಿತನು ಸುರಕ್ಷಿತವಾಗಿಯೂ, ನಿರಾತಂಕವಾಗಿಯೂ ವಾಸಮಾಡುತ್ತಾನೆಯೋ ಆ ರಾಜನ ಗೃಹವೂ ಸಹ ಸುರಕ್ಷಿತವಾಗಿಯೂ, ಸುಖಪ್ರದವಾಗಿಯೂ ಇರುತ್ತದೆಂಬುದೇ ಇದರ ತಾತ್ಪರ್ಯ.

ಇಳೆ ಎಂದರೆ ಅನ್ನವೆಂದರ್ಥ. ಯಾವನ ಗೃಹದಲ್ಲಿ ಪುರೋಹಿತನು ಸುರಕ್ಷಿತನಾಗಿರುವನೋ ಅಂತಹ ರಾಜನು ಅನ್ನಯುಕ್ತನಾಗಿರುತ್ತಾನೆ. ಇವನ ಅನ್ನವು ವೀರ್ಯಯುತವಾಗಿಯೂ, ಪ್ರಭೂತವಾಗಿಯೂ ಇರುತ್ತದೆ. ಎಂಬುದೇ '**ತಸ್ಮಾ ಇಳಾ ಪಿನ್ವತೇ**' ಎಂಬ ಎರಡನೆಯ ಪಾದದ ತಾತ್ಪರ್ಯ.

ರಾಷ್ಟ್ರವು ಪ್ರಜಾಯುಕ್ತವಾಗಿರುವುದರಿಂದ ರಾಷ್ಟ್ರಕ್ಕೂ ಪ್ರಜೆಗಳಿಗೂ ಅಭೇದವು. ರಾಷ್ಟ್ರವೇ ಪ್ರಜೆಗಳೆಂದೂ, ಪ್ರಜೆಗಳೇ ರಾಷ್ಟ್ರವೆಂದೂ ವ್ಯವಹಾರದಲ್ಲಿರುತ್ತದೆ. ಪುರೋಹಿತನನ್ನು ಸ್ವಗೃಹದಲ್ಲಿ ಸುರಕ್ಷಿತವಾಗಿ ಕಾಪಾಡಬಲ್ಲ ರಾಜನಿಗೆ ರಾಷ್ಟ್ರವೇ ನಮಿಸಿ ಗೌರವವನ್ನು ಸಲ್ಲಿಸುತ್ತದೆಂಬ ಅಭಿಪ್ರಾಯವನ್ನು ಮೂರನೆಯ ಪಾದವು ತಿಳಿಸುತ್ತದೆ.

" ಯಾವ ರಾಜನಿಗೆ ಸದುಪದೇಶವನ್ನು ಮಾಡುತ್ತಾ ಬ್ರಹ್ಮನು ಪೂರ್ವಭಾವಿಯಾಗಿ ವ್ಯವಹರಿಸುವನೋ " ಎಂಬ ತಾತ್ಪರ್ಯವುಳ್ಳ ನಾಲ್ಕನೆಯ ಪಾದದಲ್ಲಿ ಬ್ರಹ್ಮ ಶಬ್ದಕ್ಕೆ ಪುರೋಹಿತನೆಂದೇ ಅರ್ಥ. ಇಂತಹ ಪುರೋಹಿತ ಯುಕ್ತನಾದ ರಾಜನು ಮೇಲೆ ವಿವರಿಸಿದ ಪದವಿಯನ್ನೂ, ಸೌಖ್ಯವನ್ನೂ ಅನುಭವಿಸುವನೆಂದರ್ಥ.

**ಅಪ್ರತೀತೋ ಜಯತಿ ಸಂ ಧನಾನೀತಿ ರಾಷ್ಟ್ರಾಣಿ ವೈ ಧನಾನಿ ತಾನ್ಯಪ್ರತೀತೋ ಜಯತಿ ।**

(ಇದು ಋ. ಸಂ. ೪-೫೦-೯ನೇ ಮಂತ್ರದ ಮೊದಲನೆಯ ಪಾದದ ವಿವರಣೆಯು)

ರಾಷ್ಟ್ರಕ್ಕೂ ಧನಸಂಪತ್ತಿಗೂ ಅಭೇದವು. ಪುರೋಹಿತನನ್ನು ಸತ್ಕರಿಸುವ ರಾಜನು ಧನಯುಕ್ತವಾದ ರಾಷ್ಟ್ರವನ್ನು ಯಾವ ಪ್ರತಿಬಂಧಕವೂ ಇಲ್ಲದೆ ಪಡೆಯುತ್ತಾನೆ. ಅಥವಾ ಪ್ರತಿಬಂಧಕವಿದ್ದರೂ ಸಹ ಸ್ವಸಾಮರ್ಥ್ಯದಿಂದ ಜಯಿಸುತ್ತಾನೆ.

**ಪ್ರತಿ ಜನ್ಯಾನ್ಯುತ ಯಾ ಸಜನ್ಯೇತಿ ಸಪತ್ನಾ ವೈ ದ್ವಿಷಂತೋ ಭ್ರಾತೃವ್ಯಾ ಜನ್ಯಾನಿ ತಾನ-ಪ್ರತೀತೋ ಜಯತಿ ॥**

(ಎರಡನೇ ಪಾದದ ವಿವರಣೆ)

ಇಂತಹ ರಾಜನು ಪ್ರತಿಪಕ್ಷದ ರಾಜನನ್ನೂ, ಅಂತಹ ಶತ್ರುರಾಜರ ಸೈನ್ಯಗಳನ್ನೂ ಪೂರ್ಣವಾಗಿ ಜಯಿಸಿ ತಾನು ಅಪ್ರತಿಹತನಾಗುತ್ತಾನೆ.

**ಅವಸ್ಯವೇ ಯೋ ವರಿವಃ ಕೃಣೋತೀತಿ ಯದಾಹಾವಸೀಯಸೇ ಯೋಽವಸೀಯಸಃ ಕರೋತೀತ್ಯೇವ ತದಾಹ** (ಮೂರನೇ ವಿವರಣೆ).

ಧನರಹಿತರಾದವರಿಗೆ (ಅಥವಾ ಧನರಹಿತರಾದ ಪುರೋಹಿತರಿಗೆ) ಯಾರು ಧನದ ದಾನವನ್ನು ಮಾಡುವರೋ ಅಂತಹ ರಾಜರು ಪುರೋಹಿತರ ಪ್ರಭಾವದಿಂದ ಶತ್ರುಗಳ ಧನವನ್ನೂ ಪಡೆಯುತ್ತಾರೆ.

**ಬ್ರಹ್ಮಣೇ ರಾಜಾ ತಮವಂತಿ ದೇವಾ ಇತಿ ಪುರೋಹಿತಮೇವೈತದಭಿವದತಿ ॥**

(ನಾಲ್ಕನೆಯ ಪಾದವು) (ಐ. ಬ್ರಾ. ೪೦-೨೬)

ಇಲ್ಲಿ ಬ್ರಹ್ಮಶಬ್ದಕ್ಕೆ ಪುರೋಹಿತನೆಂದರ್ಥ. ಯಾವ ರಾಜನು ಪುರೋಹಿತನನ್ನು ಈ ವಿಧವಾದ ಪೂಜಾದಿಗಳಿಂದ ರಕ್ಷಿಸುವನೋ ಅಂತಹ ರಾಜನನ್ನು ದೇವತೆಗಳೂ ಸಹ ಸಂಪತ್ಪ್ರದಾನಾದಿಗಳಿಂದ ರಕ್ಷಿಸುತ್ತಾರೆ ಎಂಬುದು ಮುಖ್ಯಾರ್ಥವು. ಪುರೋಹಿತನ ಪ್ರಭಾವದ ಪ್ರಶಂಸೆಯು ಈ ವಿಧವಾಗಿ ವಾಮದೇವಮಹರ್ಷಿಯಿಂದ ಋಕ್ಸಂಹಿತೆಯಲ್ಲಿ ಮಾಡಲ್ಪಟ್ಟಿದೆಯೆಂದು ಐತರೇಯ ಬ್ರಾಹ್ಮಣದಲ್ಲಿ ಆ ಮಂತ್ರಗಳ ತಾತ್ಪರ್ಯವನ್ನು ವಿಶದಪಡಿಸಿದೆ.

**ಯೋ ಹ ವೈ ತ್ರೀನ್ ಪುರೋಹಿತಾಂಸ್ತ್ರೀನ್ ಪುರೋಧಾತೄನ್ವೇದ ಸ ಬ್ರಾಹ್ಮಣಃ ಪುರೋಹಿತಃ ಸ ವದೇತ ಪುರೋಧಾಯಾ ಅಗ್ನಿರ್ವಾವ ಪುರೋಹಿತಃ ಪೃಥಿವೀ ಪುರೋಧಾತಾ ವಾಯುರ್ವಾವ ಪುರೋಹಿತೋಽಂತರಿಕ್ಷಂ ಪುರೋಧಾತಾದಿತ್ಯೋ ವಾವ ಪುರೋಹಿತೋ ದ್ಯೌಃ ಪುರೋಧಾತೈಷ ಹ ವೈ ಪುರೋಹಿತೋ ಯ ಏವಂ ವೇದಾಥ ಸ ತಿರೋಹಿತೋ ಯ ಏವಂ ನ ವೇದ ॥** (ಐ. ಬ್ರಾ. ೪೦-೨೭)

ಯಾವ ಬ್ರಾಹ್ಮಣನು ಮೂರು ವಿಧವಾದ ಪುರೋಧಾತೃಗಳನ್ನೂ ತತ್ಸಂಬಂಧವಾದ ಮೂರು ಪುರೋಹಿತರುಗಳನ್ನೂ ತಿಳಿದಿರುವನೋ ಅಂತಹವನೇ ಪುರೋಹಿತನಾಗಿರಲು ಅರ್ಹನು. "ಪೃಥ್ವಿಯೇ ಮೊದಲನೆಯ ಪುರೋಧಾತೃವು" ಎಂದರೆ ಪುರೋಹಿತನನ್ನು ನಿಯೋಜಿಸತಕ್ಕ ಸ್ವಾಮಿನಿಯು, ಅಗ್ನಿಯೇ ಪುರೋಹಿತನು; ಅದರಂತೆ ಅಂತರಿಕ್ಷ ಮತ್ತು ದ್ಯುಲೋಕಗಳು ಪುರೋಧಾತೃಗಳು. ವಾಯು ಮತ್ತು ಆದಿತ್ಯರು ಪುರೋಹಿತರು. ಈ ತತ್ತ್ವವನ್ನರಿತು ಈ ತತ್ತ್ವಾರ್ಥವನ್ನು ಬೋಧಿಸತಕ್ಕ ಮಂತ್ರವನ್ನು ಯಾವನು ಅನುಸಂಧಾನಮಾಡುತ್ತಾನೆಯೋ ಅವನೇ ಪುರೋಹಿತನಾಗಿರಲು ಅರ್ಹನು. ಈ ಅನುಸಂಧಾನವೂ ಜ್ಞಾನವೂ ಇಲ್ಲದವನು ಈ ಪದವಿಗೆ ಅನರ್ಹನು.

ಈ ವಿಧವಾಗಿ ತತ್ತ್ವಾರ್ಥಜ್ಞಾನವುಳ್ಳವನೂ ಬ್ರಹ್ಮತೇಜಸ್ಸಿನಿಂದ ಕೂಡಿದವನೂ ಆದ ಪುರೋಹಿತನು ಬ್ರಹ್ಮತತ್ವವನ್ನೂ. ವೀರ್ಯವಂತನಾದ ರಾಜನು ಕ್ಷತ್ತ್ರಶಕ್ತಿಯನ್ನೂ ಪ್ರತಿಬಿಂಬಿಸುತ್ತಾ ವಿಶ್ವತತ್ವದ ಎರಡು ಅಂಶಗಳಂತಿದ್ದಾರೆ.

**ಪ್ರೇದಂ ಬ್ರಹ್ಮ ಪ್ರೇದಂ ಕ್ಷತ್ತ್ರಮಿತ್ಯೇತೇ ಏವ ಸಮಸ್ಯೇದ್ಬ್ರಹ್ಮಕ್ಷತ್ತ್ರಯೋಃ ಸಂಶ್ರಿತ್ಯೈ ತಸ್ಮಾದ್ಬ್ರಹ್ಮ ಚ ಕ್ಷತ್ತ್ರಂ ಚ ಸಂಶ್ರಿತೇ ।**

(ಐ. ಬ್ರಾ. ೧೧–೧೧)

**ಯಸ್ಯ ಚ ಬ್ರಹ್ಮ ಚ ಕ್ಷತ್ತ್ರಂ ಚ ಉಭೇ ಭವತ ಓದನಃ**

(ಕಠ. ೨–೨೫).

ಇತ್ಯಾದಿ ವಾಕ್ಯಗಳಲ್ಲಿ ಬ್ರಹ್ಮ ಮತ್ತು ಕ್ಷತ್ರ ಇವೆರಡೂ ಆದಿತತ್ತ್ವದ ಎರಡಂಶಗಳೆಂದು ನಿಸ್ಸಂದಿಗ್ಧವಾಗಿ ತಿಳಿಸಿದೆ. ಮಾನವನ ವ್ಯವಹಾರಗಳಲ್ಲೂ ಸಹ ಈ ಎರಡು ಶಕ್ತಿಗಳ ಸಂಯೋಗ ಮತ್ತು ಸಾಮರಸ್ಯಗಳನ್ನು ಶ್ರುತಿವಾಕ್ಯಗಳಲ್ಲಿ ಅನೇಕ ಪ್ರಕಾರವಾಗಿ ವರ್ಣಿಸಿದೆ. ಕೆಲವೆಡೆಗಳಲ್ಲಿ ಇವನ್ನು ದ್ಯಾವಾಪೃಥಿವಿಗಳೆಂದೂ, ಇನ್ನು ಕೆಲವೆಡೆಗಳಲ್ಲಿ ಋಕ್ಸಾಮಗಳೆಂದೂ, ಕೆಲವೆಡೆಗಳಲ್ಲಿ ಮಿತ್ರಾವರುಣರೆಂದೂ ಹೀಗೆ ಅನೇಕಪ್ರಕಾರವಾಗಿ ಪುರೋಹಿತ ಮತ್ತು ರಾಜನ (ಬ್ರಹ್ಮ ಮತ್ತು ಕ್ಷತ್ರ) ಸಂಬಂಧವು ವರ್ಣಿತವಾಗಿದೆ. (ಮುಂದೆ ಪುರಾಣಾದಿಗಳಲ್ಲಿ **ನಾऽವಿಷ್ಣುಃ ಪೃಥಿವೀಪತಿಃ** ಎಂಬ ಅಭಿಪ್ರಾಯಕ್ಕೂ ಸಹ ಈ ಶ್ರುತಿವಾಕ್ಯಗಳೇ ಆಧಾರವೆಂದು ಧಾರಾಳವಾಗಿ ಹೇಳಬಹುದು). ಈ ವಿಧವಾಗಿ ಪುರೋಹಿತನೂ ರಾಜನೂ ಆದಿತತ್ತ್ವದ ಪ್ರತಿನಿಧಿಗಳೆಂದೂ, ಇವರ ಸಾಮರಸ್ಯವೇ ಲೋಕವ್ಯವಹಾರಗಳಲ್ಲಿ ಕ್ಷೇಮಸಾಧಕವೆಂದೂ ತಿಳಿಸುತ್ತಾ ಪುರೋಹಿತನು ರಾಜನನ್ನು ಕುರಿತು ಈ ರೀತಿ ತಿಳಿಸುತ್ತಾನೆ.

**ಅಮೋऽಹಮಸ್ಮಿ ಸ ತ್ವಂ ಸ ತ್ವಮಸ್ಯಮೋऽಹಂ ದ್ಯೌರಹಂ ಪೃಥಿವೀ ತ್ವಂ ಸಾಮಾಹಮೃಕ್ತ್ವಂ ತಾವೇಹ ಸಂವಹಾವಹೈ ॥**

(ಐ. ಬ್ರಾ. ೪೦–೨೭)

ನಾನು ಪರ, ನೀನು ಇಹ; ನೀನು ಐಹಿಕದ ಪ್ರತಿನಿಧಿ, ನಾನು ಪಾರಲೌಕಿಕ ಪ್ರತಿನಿಧಿ; ನಾನು ದ್ಯುಲೋಕ, ನೀನೇ ಪೃಥ್ವೀ; ನಾನು ಸಾಮ, ನೀನು ಋಕ್ಕು; ನಾವಿಬ್ಬರೂ ಒಟ್ಟು ಕಲೆಯೋಣ, ಆಗ ತಾನೇ ಲೋಕಕ್ಷೇಮವು ಸಾಧ್ಯವಾಗುತ್ತದೆ ಎಂಬುದಾಗಿ ತಮ್ಮಿಬ್ಬರಿಗೂ ಇರುವ ಸಂಬಂಧವನ್ನು ದಾಂಪತ್ಯಸಂಬಂಧವೆಂದೂ ಭಾವಿಸಿರುತ್ತಾನೆ. ಪುರೋಹಿತನೇ ಬ್ರಹ್ಮ, ರಾಜನೇ ಕ್ಷತ್ರ, ಎಂದು ದೇವತಾತತ್ತ್ವಗಳಲ್ಲೂ ಸಹ ಈ ರೀತಿ ವಿಭಾಗಮಾಡಬಹುದು. ಮಿತ್ರ, ಅಗ್ನಿ ಮತ್ತು ಬೃಹಸ್ಪತಿ ಇವರು ಪುರೋಹಿತ (ಬ್ರಹ್ಮ)ರು, ವರುಣ ಮತ್ತು ಇಂದ್ರ ಇವರು ರಾಜರು (ಕ್ಷತ್ತ್ರ),

ಇದನ್ನೇ **ಕ್ರತು** ಮತ್ತು **ದಕ್ಷ** ಎಂಬ ಹೆಸರಿನಿಂದಲೂ ಕರೆದಿದೆ. ಇಂದ್ರಾಗ್ನಿಗಳ ಸಂಯೋಗವೇ ರಾಜ ಮತ್ತು ಪುರೋಹಿತರ ಸಂಬಂಧವು.

**ಆ ಬಾಹ್ವೋರ್ವಜ್ರಮಿಂದ್ರಸ್ಯ ಧೇಯಾಮಥೇಮಾ ವಿಶ್ವಾಃ ಪೃತನಾ ಜಯಾತಿ ॥**

(ಋ. ಸಂ. ೧೦-೫೨-೫)

ಎಂಬಲ್ಲಿ ಇಂದ್ರನು ವಜ್ರವನ್ನು ಧರಿಸಿರುವುದರ ಆವಶ್ಯಕತೆಯನ್ನು ಸಾಯಣರು ಭಾಷ್ಯದಲ್ಲಿ ಈ ರೀತಿ ವರ್ಣಿಸಿದ್ದಾರೆ. **"ಅಗ್ನೇರ್ಹೋತೃತ್ವಾಭಾವೇ ಇಂದ್ರಸ್ಯ ಸೋಮಾದ್ಯಭಾವಾದ್ದುರ್ಬಲತ್ವೇನ ವಜ್ರಧಾರಣಂ ನೋಪಪದ್ಯತೇ"** ಹೋತೃವಾದ (ಪುರೋಹಿತನಾದ) ಅಗ್ನಿಯ ಸಾಹಚರ್ಯವಿಲ್ಲದಿದ್ದರೆ ಕ್ಷಾತ್ರಪ್ರಭಾವವು ಇಂದ್ರನಿಗೆ ಕುಂಠಿತವಾಗುತ್ತದೆ ಎಂಬುದೇ ಇದರ ಅಭಿಪ್ರಾಯವು. ಆ ಸಹಾಯದಿಂದ ವಜ್ರವನ್ನು ಧರಿಸಿ ಸಮಸ್ತ ಶತ್ರುಗಳನ್ನೂ ಜಯಿಸುತ್ತಾನೆಂದರ್ಥ ಇದೇ ಪುರೋಹಿತನಾದ ಅಗ್ನಿಯು ರಾಜನಾದ ಇಂದ್ರನಿಗೆ ಹೇಳುವ ಮಾತುಗಳಿಂದ ಈ ಸಂಬಂಧವು ವ್ಯಕ್ತವಾಗಿದೆ.

**ಅಯಂ ತ ಏಮಿ ತನ್ವಾ ಪುರಸ್ತಾದ್ವಿಶ್ವೇ ದೇವಾ ಅಭಿ ಮಾ ಯಂತಿ ಪಶ್ಚಾತ್ ।**
**ಯದಾ ಮಹ್ಯಂ ದೀಧರೋ ಭಾಗಮಿಂದ್ರಾದಿನ್ಮಯಾ ಕೃಣವೋ ವೀರ್ಯಾಣಿ ॥**

(ಋ. ಸಂ. ೮-೧೦೦-೧)

ಎಲೈ ಇಂದ್ರನೇ, ನಿನ್ನ ಪುರತಃ (ಪುರೋಹಿತನಾಗಿ) ನಾನು ಶತ್ರುಗಳನ್ನೆದುರಿಸಿ ಮುಂದೆ ಹೋಗುತ್ತೇನೆ. ನನ್ನ ಭಾಗವನ್ನು ನನಗೆ ಅರ್ಪಿಸಿ ನನ್ನನ್ನು ಗೌರವಿಸಿದರೆ ಆಗ ನೀನು ಶತ್ರುಜಯಕ್ಕೆ ಬೇಕಾದ ಶಕ್ತಿಯನ್ನು ಪಡೆಯುತ್ತೀಯೆ ಎಂದು ಇಂದ್ರನಿಗೆ ಅಗ್ನಿಯು ಹೇಳಿರುವುದರ ಅರ್ಥವೂ ಸಹ ಈ ಸಂಬಂಧವನ್ನೇ ಸೂಚಿಸುತ್ತದೆ.

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾನೀತಿರ್ಮತಿರ್ಮಮ ॥**

(ಭ. ಗೀ. ೧೮-೭೮)

ಎಲ್ಲಿ ಯೋಗೇಶ್ವರನಾದ ಶ್ರೀಕೃಷ್ಣನೂ, ಧನುರ್ಧರನಾದ ಅರ್ಜುನನೂ ಸೇರಿರುವರೋ ಅಲ್ಲಿ ಇವರಿಬ್ಬರ ಸಂಯೋಗದಿಂದ ಶ್ರೀ, ವಿಜಯ, ಅಭ್ಯುದಯ ಮತ್ತು ರಾಜನೀತಿ ಇವೆಲ್ಲವೂ ಅತ್ಯುತ್ತಮವಾಗಿ ಕೈಗೂಡುವುವು ಎಂಬ ಈ ಗೀತಾವಾಕ್ಯಕ್ಕೆ ವೈದಿಕಕಾರ್ಯಗಳೇ ಆಧಾರ. ಕೃಷ್ಣನು ಅಗ್ನ್ಯಂಶವಾದ ಪುರೋಹಿತನು, ಅರ್ಜುನನು ಇಂದ್ರಾಂಶನಾದ ರಾಜನು. ಇದಕ್ಕೆ ಆಧಾರವೇನು ಎಂದರೆ, **ಅರ್ಜುನೋ ಹ ವೈ ನಾಮೇಂದ್ರಃ** (ಶ. ಬ್ರಾ. ೨-೧-೨-೧೧). ಎಂಬ ಶತಪಥಬ್ರಾಹ್ಮಣದ ವಾಕ್ಯವನ್ನು ಆಧಾರವಾಗಿಟ್ಟುಕೊಂಡು,

**ಇಂದ್ರಾಗ್ನೀ ಕೋ ಅಸ್ಯ ವಾಂ ದೇವೌ ಮರ್ತಶ್ಚಿಕೇತತಿ ।**
**ವಿಷೂಚೋ ಅಶ್ವಾನ್ಯುಯುಜಾನ ಈಯತ ಏಕಃ ಸಮಾನ ಆ ರಥೇ ॥**

(ಋ. ಸಂ. ೬-೫೯-೫)

ಎಂಬ ಮಂತ್ರದ ವರ್ಣನೆಯನ್ನು ಪರಿಶೀಲಿಸಿದರೆ ಕೃಷ್ಣಾರ್ಜುನರು ಸಮಾನವಾದ ರಥದಲ್ಲಿ ಕುಳಿತು ವಿಜಯಯಾತ್ರೆಗೆ ಹೋಗುವಂತೆಯೇ ಇಂದ್ರಾಗ್ನಿಗಳು ಸಮಾನವಾದ ರಥದಲ್ಲಿ ಕುಳಿತು ವಿಜಯಯಾತ್ರೆಗೆ ಹೊರಟರು ಎಂಬ ವಿಷಯವು

ವರ್ಣಿತವಾಗಿರುವುದು ತಿಳಿಯುತ್ತದೆ. ಆದರೆ ಕೃಷ್ಣನಿಗೆ ಕೃಷ್ಣವರ್ಣವೂ ಅರ್ಜುನನಿಗೆ ಶುಕ್ಲವರ್ಣವೂ ಹೇಗೆಂದರೆ,

**ಯತ್ಕೃಷ್ಣಂ ತೇನಾಗ್ನಿಃ। ಯಚ್ಛುಕ್ಲಂ ತೇನೇಂದ್ರಃ।**

(ಬೃ. ಉ. ೨-೨-೨)

ಯಾವುದು ಕೃಷ್ಣವೋ ಅದು ಅಗ್ನಿರೂಪವು; ಯಾವುದು ಶುಕ್ಲವೋ ಅದು ಇಂದ್ರರೂಪವು ಎಂಬ ಆಧ್ಯಾತ್ಮಿಕವಾದ ತಾತ್ಪರ್ಯವು ವರ್ಣಿತವಾಗಿದೆ. ಈ ವಿಧವಾಗಿ ಆದಿತ್ಯಾಂತರ್ಗತವಾದುದೂ, ಆಧ್ಯಾತ್ಮಿಕವಾಗಿ ಚಕ್ಷುರಂತರ್ಗತವಾದುದೂ ಆದ ಈ ಕೃಷ್ಣವು (**ನೀಲಂ ಪರಃ ಕೃಷ್ಣಂ**) ಪುಂಶಕ್ತಿಯನ್ನು ಪ್ರತಿಬಿಂಬಿಸುತ್ತದೆ. ಸಂಹಿತೆಗಳಲ್ಲಿಯೂ, ಬ್ರಾಹ್ಮಣಾದಿಗಳಲ್ಲಿಯೂ ಸ್ತುತವಾಗಿರತಕ್ಕ **ಅಮ, ಅಗ್ನಿ, ವಾಯು, ಆದಿತ್ಯ, ಆತ್ಮ, ಸಾಮ** ಇವೆಲ್ಲವೂ ಪುಂಶಕ್ತಿಪ್ರತಿಪಾದಕವಾದ ತತ್ತ್ವಗಳು, ಇದೇ ಬ್ರಾಹ್ಮತೇಜಸ್ಸು, ಪುರೋಹಿತನೆಂದು ವರ್ಣಿತವಾದ ಬ್ರಹ್ಮಶಕ್ತಿ. **ಸಾ, ಪೃಥ್ವೀ, ಅಂತರಿಕ್ಷ, ಋಕ್** ಇವೆಲ್ಲವೂ ಸ್ತ್ರೀಶಕ್ತಿಗಳು, ಪಾರ್ಥಿವವಾದ ಕ್ಷಾತ್ರಶಕ್ತಿ. **ತಾ ಮಹಾಂತಾ ಸದಸ್ಪತೀ ಇಂದ್ರಾಗ್ನೀ** (ಋ. ಸಂ. ೧-೨೧-೫) ಇತ್ಯಾದಿ ಸನ್ನಿವೇಶಗಳಲ್ಲಿ ವರ್ಣಿತವಾಗಿರುವ ಇಂದ್ರಾಗ್ನಿಗಳ ಸಾಹಚರ್ಯವೂ ಸಹ ಇದೇ ಪುರೋಹಿತ ಮತ್ತು ರಾಜನ ಸಂಬಂಧವಾಗಿರುತ್ತದೆ. ರಾಜನ ವೃದ್ಧಿಯು ಬ್ರಹ್ಮನನ್ನು ಪುರೋಹಿತನನ್ನಾಗಿ ಮಾಡಿ ತಾನು ಅವನನ್ನು ಅನುಸರಿಸಿದ ವಿನಹ ಸಾಧ್ಯವಾಗಲಾರದೆಂಬುದಕ್ಕೆ ಐತರೇಯ ಬ್ರಾಹ್ಮಣದಲ್ಲಿ ಇನ್ನೊಂದು ಉದಾಹರಣೆಯಿರುತ್ತದೆ.

**ನ ವಾ ಏತಾವಿಂದ್ರಾಗ್ನೀ ಸಂತೌ ವ್ಯಜಯೇತಾಮಾಗ್ನೇಂದ್ರೌ ವಾ ಏತೌ ಸಂತೌ ವ್ಯಜಯೇತಾಂ ತದ್ಯದಾಗ್ನೇಂದ್ರ್ಯಂ ಯಜತಿ ವಿಜಿತ್ಯಾ ಏವ।**

(ಐ. ಬ್ರಾ. ೧೦-೩೭)

ಇಂದ್ರಾಗ್ನಿಗಳು ಅಸುರರೊಡರೆ ಯುದ್ಧಮಾಡುವಾಗ ಇಂದ್ರನು ಪುರತಃ ಇದ್ದು ಅಗ್ನಿಯು ಹಿಂದಿದ್ದರೆ ಜಯವು ಖಂಡಿತ ಸಿಕ್ಕಲಾರದು. ಅಗ್ನಿಯು ಪುರೋಹಿತನಾಗಿ ಇಂದ್ರನು ಇವನನ್ನು ಅನುಸರಿಸಿದರೆ ಮಾತ್ರ ಜಯವು ಸಾಧ್ಯ. ಆದುದರಿಂದ **ಆಗ್ನೇಂದ್ರ್ಯಂ ಯಜತಿ** ಎಂಬ ವಿಧಿಯನ್ನು ಹೇಳಿದೆ.

**ಪುರೋಹಿತಾಯತನಂ ವಾ ಏತತ್ ಕ್ಷತ್ರಿಯಸ್ಯ ಯದ್ಬ್ರಹ್ಮಾರ್ಧಾತ್ಮೋ ಹ ವಾ ಏಷ ಕ್ಷತ್ರಿಯಸ್ಯ ಯತ್ಪುರೋಹಿತ ಉಪಾಹ।**

(ಐ. ಬ್ರಾ ೩೪-೨೬)

ಪುರೋಹಿತನು ಕ್ಷತ್ರಿಯನ ಅರ್ಧಾತ್ಮನೆಂದು ಸ್ಪಷ್ಟವಾಗಿಯೇ ಉಕ್ತವಾಗಿದೆ. ಪೂರ್ಣವಾಗಬೇಕಾದರೆ ಇಬ್ಬರ ಸಾಹಚರ್ಯವೂ ಅತ್ಯವಶ್ಯವಾಗಿರುತ್ತದೆ. ಪುರೋಹಿತನಿಲ್ಲದ ರಾಜನೂ, ರಾಜನಿಲ್ಲದ ಪುರೋಹಿತನೂ ಅಪೂರ್ಣರು. ಐತರೇಯಾರಣ್ಯಕದಲ್ಲಿ (೩-೧-೨) ವರ್ಣಿತವಾಗಿರುವ ದ್ಯಾವಾಪೃಥಿವಿಗಳ ಸಂಬಂಧದಂತೆಯೂ, ಶತಪಥಬ್ರಾಹ್ಮಣದಲ್ಲಿಯೂ (೧೦-೫-೨-೮), ಮತ್ತು ಬೃಹದಾರಣ್ಯಕೋಪನಿಷತ್ತಿನಲ್ಲಿಯೂ (೧-೪-೪) ವರ್ಣಿತವಾಗಿರುವ ಪುರುಷ ಸ್ತ್ರೀಸಂಬಂಧದಂತೆಯೂ ಈ ಪುರೋಹಿತ ಮತ್ತು ರಾಜನ ಸಂಬಂಧವಿರುತ್ತದೆ. ಒಂದಿಲ್ಲದಿದ್ದರೆ ಇನ್ನೊಂದು ಅಸಂಪೂರ್ಣ.

ಆದರೆ ಈ ಪುರೋಹಿತತತ್ತ್ವವೂ ಕ್ಷಾತ್ರತತ್ತ್ವವೂ ಪೃಥಕ್ಕಾಗಿದ್ದು ಅನಂತರ ಒಟ್ಟಿಗೆ ಸೇರತಕ್ಕವೇ ಎಂದರೆ, ಆ ರೀತಿ ಭಿನ್ನಾತ್ಮಕವಾದವು ಎಂದೂ ಹೇಳುವಂತಿಲ್ಲ.

**ಭೂತಂ ಭವಿಷ್ಯತ್ಪ್ರಸ್ತೌಮಿ ಮಹದ್ಬ್ರಹ್ಮೈಕಮಕ್ಷರಂ ಬಹು ಬ್ರಹ್ಮೈಕಮಕ್ಷರಮಿತ್ಯೇತದ್ಧ್ಯೇವಾ-ಕ್ಷರಗ್ಂ ಸರ್ವೇ ದೇವಾಃ ಸರ್ವಾಣಿ ಭೂತಾನ್ಯಭಿಸಂಪದ್ಯಂತೇ ತದೇತತ್ಬ್ರಹ್ಮ ಚ ಕ್ಷತ್ರಂ ಚಾಗ್ನಿರೇವ ಬ್ರಹ್ಮೇಂದ್ರಃ ಕ್ಷತ್ತ್ರಮಿಂದ್ರಾಗ್ನೀ ವೈ ವಿಶ್ವೇ ದೇವಾಃ ॥**

(ಶ. ಬ್ರಾ. ೧೦-೪-೧-೯)

ಪರತತ್ತ್ವವು ಒಂದೇ. ಅದೇ ಅಕ್ಷರಾತ್ಮಕವಾದ ಮಹದ್ಬ್ರಹ್ಮ. ಸಕಲ ಭೂತಗಳೂ ಇದರಲ್ಲೇ ಅಂತರ್ಗತವಾಗಿವೆ. ಯಾವುದನ್ನು ವ್ಯಾವಹಾರಿಕ ಭಾಷೆಯಲ್ಲಿ ಬ್ರಹ್ಮತತ್ತ್ವವೆಂದೂ (ಪುರೋಹಿತ) ಮತ್ತು ಕ್ಷತ್ರತತ್ತ್ವವೆಂದೂ ಕರೆಯುವೆವೋ ಅವೆರಡೂ ಸಹ ಇದರ ವಿಭೂತಿವಿಶೇಷಗಳು. ಅಗ್ನಿಯೇ ಬ್ರಹ್ಮ (ಪುರೋಹಿತ), ಇಂದ್ರನೇ ಕ್ಷತ್ರ. ಇವೆರಡು ಅಂಶಗಳೂ ಸಹ ಸಕಲ ದೇವತೆಗಳನ್ನೂ ಒಳಗೊಂಡಿರುವುವು ಎಂದು ಶತಪಥದಲ್ಲಿ ಎರಡು ತತ್ತ್ವಗಳಿಗೂ ಸಮಾನವಾದ ಒಂದೇ ಮೂಲವೆಂದು ತೋರಿಸಿದೆ. ಅಲ್ಲದೇ,

**ತ್ವಂ ವರುಣ ಉತ ಮಿತ್ರೋ ಅಗ್ನೇ ತ್ವಾಂ ವರ್ಧಂತಿ ಮತಿಭಿರ್ವಸಿಷ್ಠಾಃ ।**
**ತ್ವೇ ವಸು ಸುಷಣನಾನಿ ಸಂತು ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥**

(ಋ. ಸಂ. ೭-೧೨-೩)

ಎಲೈ ಅಗ್ನಿಯೇ, ನೀನೇ ವರುಣನೂ, ನೀನೇ ಮಿತ್ರನಾಗಿಯೂ ಇದ್ದೀಯೆ ಎಂಬ ಸ್ತುತಿಯೂ ಭಾವಾರ್ಥವೂ ಸಹ ಇದೇ ಆಗಿದೆ.

ಇದ್ದೇ ಮಿತ್ರಾವರುಣರೂಪದಲ್ಲಿರುವವನೂ, ಪ್ರಕೃತವಾದ ಋಕ್ಕಿನಲ್ಲಿ ವೈಶ್ವಾನರನೆಂದು ವರ್ಣಿತನಾಗಿರುವವನೂ ಆದ ಅಗ್ನಿಯ ಮಿತ್ರಸ್ವರೂಪವೇನು, ವರುಣಸ್ವರೂಪವೇನು ? ಅವಕ್ಕೂ ಪ್ರಕೃತವಾದ ಋಕ್ಕಿನಲ್ಲಿರುವ **ಪುರೋಹಿತ** ಎಂಬ ವಿಶೇಷಣಕ್ಕೂ ಏನು ಸಂಬಂಧ ಎಂಬುದನ್ನು ಶತಪಥಬ್ರಾಹ್ಮಣದ ವಾಕ್ಯಗಳಲ್ಲಿ ಈ ರೀತಿ ವರ್ಣಿಸಿದೆ.

**ಕ್ರತೂದಕ್ಷೌ ಹ ವಾ ಅಸ್ಯ ಮಿತ್ರಾವರುಣೌ । ಏತನ್ನ್ವಧ್ಯಾತ್ಮಗ್ಂ ಸ ಯದೇವ ಮನಸಾ ಕಾಮಯತ ಇದಂ ಮೇ ಸ್ಯಾದಿದಂ ಕುರ್ವೀಯೇತಿ ಸ ಏವ ಕ್ರತುರಥ ಯದಸ್ಮೈ ತತ್ಸಮೃಧ್ಯತೇ ಸ ದಕ್ಷೋ ಮಿತ್ರ ಏವ ಕ್ರತುರ್ವರುಣೋ ದಕ್ಷೋ ಬ್ರಹ್ಮೈವ ಮಿತ್ರಃ ಕ್ಷತ್ರಂ ವರುಣೋಽಭಿಗಂತೈವ ಬ್ರಹ್ಮ ಕರ್ತಾ ಕ್ಷತ್ರಿಯಃ ॥**

(ಶ. ಬ್ರಾ. ೪-೧-೪-೧)

ಪುರೋಹಿತನೆಂದು ಋಕ್ಸಂಹಿತೆಯಲ್ಲಿ ವರ್ಣಿತನಾದ ಮಿತ್ರನೂ, ಅವನ ಸಹಚಾರಿಯಾದ ವರುಣನೂ ಸಹ ಅಗ್ನ್ಯಂಶಗಳೇ ಅಲ್ಲದೇ ಬೇರೆಯಲ್ಲ ಎಂಬುದನ್ನೂ ಸಹ ಋಕ್ಸಂಹಿತೆಯ ವಾಕ್ಯದ ಆಧಾರದ ಮೇಲೆಯೇ ತಿಳಿಸಿದೆ. ಮಿತ್ರನು (ಪುರೋಹಿತನು) ಸಂಕಲ್ಪರೂಪನಾದ ಕ್ರತುವು; ವರುಣನು ಈ ಸಂಕಲ್ಪವನ್ನು ನೆರವೇರಿಸುವ ಕ್ರಿಯಾರೂಪನಾದ ದಕ್ಷನು. "ನಾನು ಈ ಕಾರ್ಯವನ್ನು ನಡೆಸುವಂತೆ ಇಚ್ಛಿಸುತ್ತೇನೆ. ಇದು ನೆರವೇರಬೇಕು" ಇತ್ಯಾದಿ

ಸಂಕಲ್ಪವು ಕ್ರತುರೂಪವಾದ ಮಿತ್ರನಿಗೆ ಸೇರಿದುದು. ಅದು ಕ್ರಿಯಾರೂಪದಲ್ಲಿ ಸಿದ್ಧಿಸುವಂತೆ ಮಾಡುವುದು ವರುಣನಿಗೆ ಸೇರಿದುದು. ಪುರೋಹಿತರೂಪನಾದ ಮಿತ್ರನೇ ಬ್ರಹ್ಮರೂಪನು. ರಾಜನಾದ ವರುಣನೇ ಕ್ಷಾತ್ರತೇಜಸ್ಸುಳ್ಳವನು. ಬ್ರಹ್ಮನು ಅಭಿಗಂತೃವು. ಕ್ಷತ್ರಿಯನು ಕರ್ತೃವು (ಇದೇ ಪುರೋಹಿತನಿಗೂ, ರಾಜನಿಗೂ ಇರುವ ಸಂಬಂಧ.)

"**ನೋ ಏವ ಪುರೋಧಾ**" (ಶ. ಬ್ರಾ. ೪-೧-೪-೫) ಇತ್ಯಾದಿ ವಾಕ್ಯಗಳಿಂದ ಪುರೋಹಿತನ ಮಹತ್ತ್ವವನ್ನೂ ಯಾವ ರೀತಿಯಲ್ಲಿ ಈ ಪುರೋಹಿತನು ಕ್ಷತ್ರಿಯನಿಗೂ ತದ್ದ್ವಾರಾ ಸಕಲ ಲೋಕಕ್ಕೂ ಕ್ಷೇಮಸಾಧಕನಾಗಿರುವನು ಎಂಬುದನ್ನೂ ಸಹ ತಿಳಿಸಿದೆ. ಆದುದರಿಂದಲೇ **ವಿದ್ವಾನ್ ಬ್ರಾಹ್ಮಣೋ ರಾಷ್ಟ್ರಗೋಪಃ ಪುರೋಹಿತಃ** ಎಂದು ಪುರೋಹಿತನಿಗೆ ರಾಷ್ಟ್ರರಕ್ಷಕನೆಂಬ ವಿಶೇಷಣವು ಪ್ರಸಿದ್ಧವಾಗಿದೆ. ಆದುದರಿಂದ ಪುರೋಹಿತನಾದವನು ರಾಜನ ಕೇವಲ ವೈಯಕ್ತಿಕವ್ಯವಹಾರಗಳಲ್ಲಿ ಮಾತ್ರ ಸಹಾಯಕನಾಗಿರದೇ, ಅವನು ಮಾಡತಕ್ಕ ಲೋಕರಕ್ಷಣೆಗೂ ಸ್ಫೂರ್ತಿದಾಯಕನಾಗಿರುತ್ತಾನೆ. ಈ ಅರ್ಥದಲ್ಲಿಯೇ ಅಗ್ನಿಯು ಅನೇಕ ಕಡೆಗಳಲ್ಲಿ ಪುರೋಹಿತಶಬ್ದವಾಚ್ಯನಾಗಿರುತ್ತಾನೆ.

**ಧಿಯಾವಸುಃ—ವಸು** ಶಬ್ದಕ್ಕೆ ವ್ಯಾಪಕಧರ್ಮವೆಂದೂ, **ಧೀ** ಶಬ್ದಕ್ಕೆ ಪ್ರಜ್ಞೆಯೆಂದೂ ಅರ್ಥಮಾಡಿದೆ. ಪ್ರಜ್ಞೆಯಿಂದ ಸರ್ವತ್ರ ವ್ಯಾಪಿಸಿರುವನೆಂದು ತಾತ್ಪರ್ಯ. ನಿರುಕ್ತಕಾರರು **ಧಿಯಾವಸು** ಶಬ್ದಕ್ಕೆ **ಕರ್ಮವಸು**ವೆಂದರ್ಥಮಾಡಿದ್ದಾರೆ. ಆದರೆ,

**ಪಾವಕಾ ನಃ ಸರಸ್ವತೀ ವಾಜೇಭಿರ್ವಾಜಿನೀವತೀ । ಯಜ್ಞಂ ವಷ್ಟು ಧಿಯಾವಸುಃ ॥**
(ಋ. ಸಂ. ೧-೩-೧೦)

ಎಂಬ ಋಕ್ಕನ್ನುದಾಹರಿಸಿ ಸರಸ್ವತಿಗೆ ವಿಶೇಷಣವಾಗಿರುವ ಈ ಪದಕ್ಕೆ ಮೇಲ್ಕಂಡಂತೆ ಅರ್ಥಮಾಡಿದ್ದಾರೆ. ಸಾಧಾರಣವಾಗಿ ಈ ಪದವು ಇಂದ್ರನಿಗೆ ವಿಶೇಷಣವಾದರೆ ಆಗ ಕರ್ಮವಸು ಮತ್ತು ಕರ್ಮಧನ ಎಂಬರ್ಥವು ಸರಿಹೋಗುತ್ತದೆ.

**ಸುನೀಥಾಯ ನಃ ಶವಸಾನ ನೋಧಾಃ ಪ್ರಾತರ್ಮಕ್ಷೂ ಧಿಯಾವಸುರ್ಜಗಮ್ಯಾತ್ ॥**
(ಋ ಸಂ. ೧-೬೨-೧೩)

ಎಂಬಲ್ಲಿ ಇಂದ್ರನಿಗೆ ವಿಶೇಷಣವಾಗಿರುವಾಗ **ಧಿಯಾ ಬುದ್ಧ್ಯಾ ಕರ್ಮಣಾ ವಾ ಪ್ರಾಪ್ತವಸುರಿಂದ್ರ** ಎಂಬ ವೈಕಲ್ಪಿಕವಾದ ಅರ್ಥವನ್ನು ಹೇಳಿದ್ದಾರೆ. ಇದೇ ಋ. ಸಂ. ೧-೩-೧೦ನೇ ಋಕ್ಕಾದ **ಪಾವಕಾ ನಃ ಸರಸ್ವತೀ** ಎಂಬ ಮಂತ್ರವನ್ನು ಐತರೇಯ ಆರಣ್ಯಕದಲ್ಲಿ ಪಠಿಸಿ ಅಲ್ಲಿ, **ಯಜ್ಞಂ ವಷ್ಟು ಧಿಯಾವಸುರಿತಿ ವಾಗ್ವೈ ಧಿಯಾವಸುಃ ।** (ಐ. ಆ. ೧-೧-೪) ಎಂದು ವಾಕ್ಕಿಗೂ ಧಿಯಾವಸುವಿಗೂ ತಾದಾತ್ಮ್ಯವನ್ನು ಹೇಳಿದೆ. ಇಲ್ಲಿ **ಧೀ**ಶಬ್ದಕ್ಕೆ ಪ್ರಜ್ಞೆಯೆಂದಾಗಲಿ, ಸ್ತುತಿಯೆಂದಾಗಲಿ ಅಥವಾ ಕರ್ಮವೆಂದಾಗಲಿ ಅರ್ಥವಾಗಬಹುದು. ವಸು ಶಬ್ದಕ್ಕೆ ಕರ್ಮವೆಂದಾಗಲಿ ಅಥವಾ ವ್ಯಾಪಕತ್ವಧರ್ಮವುಳ್ಳವನು ಎಂದಾಗಲಿ ಅರ್ಥವಾಗಬಹುದು. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅಗ್ನಿಗೆ ವಿಶೇಷಣವಾಗಿರಕ್ಕ ಈ ಪದಕ್ಕೆ ಯಾವ ಅರ್ಥವನ್ನು ಹೇಳಿದರೂ ಹೊಂದಿಕೊಳ್ಳುತ್ತದೆ.

ಸಂಹಿತಾಪಾಠಃ ||

ಕೇತುಂ ಯಜ್ಞಾನಾಂ ವಿದಥಸ್ಯ ಸಾಧನಂ ವಿಪ್ರಾಸೋ ಅಗ್ನಿಂ ಮಹಯಂತ ಚಿತ್ತಿಭಿಃ |
ಅಪಾಂಸಿ ಯಸ್ಮಿನ್ನಧಿ ಸಂದಧುರ್ಗಿರಸ್ತಸ್ಮಿನ್ತ್ಸುಮ್ನಾನಿ ಯಜಮಾನ ಆ ಚಕೇ ||

ಪದಪಾಠಃ ||

ಕೇತುಂ | ಯಜ್ಞಾನಾಂ | ವಿದಥಸ್ಯ | ಸಾಧನಂ | ವಿಪ್ರಾಸಃ | ಅಗ್ನಿಂ | ಮಹಯಂತ | ಚಿತ್ತಿಽಭಿಃ |
ಅಪಾಂಸಿ | ಯಸ್ಮಿನ್ | ಅಧಿ | ಸಂಽದಧುಃ | ಗಿರಃ | ತಸ್ಮಿನ್ | ಸುಮ್ನಾನಿ | ಯಜಮಾನಃ | ಆ | ಚಕೇ ||

|| ಸಾಯಣಭಾಷ್ಯಂ ||

ಯಜ್ಞಾನಾಂ ಕೇತುಂ ಪ್ರಜ್ಞಾಪಕಂ ವಿದಥಸ್ಯ|ಯಜ್ಞಸ್ಯ ಗೃಹಸ್ಯ ವಾ ಸಾಧನಂ ಪ್ರಾಪ್ತಿಸಾಧನ-ಮಸಾಧಾರಣಕಾರಣಂ ಸಂತಮಗ್ನಿಂ ವಿಪ್ರಾಸೋ ವಿಪ್ರಾಶ್ಚಿತ್ತಿಭಿಃ ಸ್ವಕರ್ಮಭಿರ್ಮಹಯಂತ | ಪೂಜ-ಯಂತಿ | ಕಿಂಚ ಗಿರಃ ಸ್ತೋತಾರೋ ಯಸ್ಮಿನ್ನಗ್ನಾವಪಾಂಸಿ ಸ್ವಾನುಷ್ಠೇಯಾನಿ ಕರ್ಮಾಣ್ಯಧಿ ಸಂದಧುಃ ಸಂದಧತೇ ಯಜಮಾನಸ್ತಸ್ಮಿನ್ನಗ್ನೌ ಸುಮ್ನಾನಿ ಸುಖಾನಿ ಪ್ರಾಪ್ಯಾಚಕೇ | ಕಾಮಯತೇ ||

|| ಪ್ರತಿಪದಾರ್ಥ ||

**ಯಜ್ಞಾನಾಂ**—ಯಜ್ಞಗಳಿಗೆ | **ಕೇತುಂ**—ಪ್ರಜ್ಞಾಪಕನೂ | **ವಿದಥಸ್ಯ**—ಯಜ್ಞಕ್ಕೆ | **ಸಾಧನಂ**—ಅಸಾಧಾರಣವಾದ ಕಾರಣನೂ ಆದ | **ಅಗ್ನಿಂ**—ಅಗ್ನಿಯನ್ನು | **ವಿಪ್ರಾಸಃ**—ಮೇಧಾವಿಗಳಾದ ಋತ್ವಿಕ್ಕುಗಳು | **ಚಿತ್ತಿಭಿಃ**—ಸ್ವಕರ್ಮಗಳಿಂದ | **ಮಹಯಂತ**—ಪೂಜಿಸುತ್ತಾರೆ | **ಗಿರಃ**—ಸ್ತೋತೃಗಳು | **ಯಸ್ಮಿನ್**—ಯಾವ ಅಗ್ನಿಯಲ್ಲಿ | **ಅಪಾಂಸಿ**—ತಮ್ಮ ಕರ್ಮಗಳನ್ನು | **ಅದಿ ಸಂದಧುಃ**—ನೆರವೇರಿಸುತ್ತಾರೆಯೋ | **ತಸ್ಮಿನ್**—ಅದೇ ಅಗ್ನಿಯಲ್ಲಿ (ಅಗ್ನಿಯಿಂದ) | **ಯಜಮಾನಃ**—ಯಜ್ಞಕರ್ತನಾದ ಯಜಮಾನನು | **ಸುಮ್ನಾನಿ**—ಸುಖಗಳನ್ನು | **ಆ ಚಕೇ**—ಅಪೇಕ್ಷಿಸುತ್ತಾನೆ.

|| ಭಾವಾರ್ಥ ||

ಯಜ್ಞಗಳಿಗೆ ಪ್ರಜಾಪಕನೂ, ಯಜ್ಞಕ್ಕೆ ಅಸಾಧಾರಣವಾದ ಕಾರಣನೂ ಆದ ಅಗ್ನಿಯನ್ನು ಮೇಧಾವಿಗಳಾದ ಋತ್ವಿಕ್ಕುಗಳು ಸ್ವಕರ್ಮಗಳಿಂದ ಪೂಜಿಸುತ್ತಾರೆ. ಸ್ತೋತೃಗಳು ಯಾವ ಅಗ್ನಿಯಲ್ಲಿ ತಮ್ಮ ಕರ್ಮಗಳನ್ನು ನೆರವೇರಿಸುತ್ತಾರೆಯೋ, ಅದೇ ಅಗ್ನಿಯಿಂದ ಯಜ್ಞಕರ್ತನಾದ ಯಜಮಾನನು ಸುಖಗಳನ್ನು ಅಪೇಕ್ಷಿಸುತ್ತಾನೆ.

## English Translation.

The wise worship, with (pious) rites, Agni, the sign of sacrifices, the accomplishment of the solemnity, in whom the reciters of (his) praises have accumulated (their) acts (of devotion), and from whom the worshipper hopes for happiness.

॥ ವಿಶೇಷವಿಷಯಗಳು ॥

**ಚಿತ್ತಿಭಿಃ—ಸ್ವಕರ್ಮಭಿಃ ।** ತಮ್ಮ ಕರ್ಮಗಳಿಂದ ಎಂದರ್ಥಮಾಡಿದೆ. ನಿರುಕ್ತಕಾರರೂ ಸಹ **"ಆಯೆಂ ಸ ಶಿಂಕ್ತೇ"** ಎಂಬ ಋಕ್ಕನ್ನು ವಿವರಿಸಿರುವಾಗ **ಚಿತ್ತಿ** ಶಬ್ದಕ್ಕೆ **ಕರ್ಮ**ವೆಂಬರ್ಥವನ್ನೇ ಹೇಳಿರುವುದನ್ನು ಹಿಂದೆ ತಿಳಿಸಿದೆ. (ನಿ. ೨–೯) ಆದರೆ ಈ ಪದವು, ಚೇತಸ್, ಎಂದರೆ ಮನಸ್ಸು, ಅಥವಾ ತಜ್ಜನ್ಯವಾದ ಜ್ಞಾನ ಇತ್ಯಾದರ್ಥಗಳಲ್ಲೇ ಅಧಿಕವಾಗಿ ಪ್ರಯೋಗಿಸಲ್ಪಟ್ಟಿರುವುದು. ಉದಾಹರಣೆಗೆ,

**ಚಿತ್ತಿಮಚಿತ್ತಿಂ ಚಿನವದ್ವಿ ವಿದ್ವಾನ್ ಪೃಷ್ಠೇವ ವೀತಾ ವೃಜಿನಾ ಚ ಮರ್ತಾನ್ ॥**

(ಋ. ಸಂ. ೪–೨–೧೧)

ಜ್ಞಾನಿಯಾದ ಅಗ್ನಿಯು ಜ್ಞಾನವನ್ನೂ ಅಜ್ಞಾನವನ್ನೂ ಬೇರೆ ಮಾಡಲಿ. ಅಥವಾ ಜ್ಞಾತವ್ಯವಾದ ಪುಣ್ಯವನ್ನೂ, ಜ್ಞಾತವ್ಯವಲ್ಲದ ಪಾಪವನ್ನೂ ಸಹ ಬೇರೆ ಮಾಡಲಿ ಎಂದು ಪ್ರಾರ್ಥಿಸಿರುವ ಈ ಮಂತ್ರದಲ್ಲಿ ಜ್ಞಾನಾರ್ಥದಲ್ಲಿಯೇ ಈ ಪದದ ಪ್ರಯೋಗವಿದೆ. ಅಲ್ಲದೇ,

**ಇಂದ್ರ ಶ್ರೇಷ್ಠಾನಿ ದ್ರವಿಣಾನಿ ಧೇಹಿ ಚಿತ್ತಿಂ ದಕ್ಷಸ್ಯ ಸುಭಗತ್ವಮಸ್ಮೇ ।**

(ಋ. ಸಂ. ೨–೨೧–೬)

ಎಲೈ ಇಂದ್ರನೇ, ಶ್ರೇಷ್ಠವಾದ ಧನವನ್ನು ಕೊಡು. ಉತ್ತಮವಾದ ಕರ್ಮಕಾರಕವಾದ ಜ್ಞಾನವನ್ನು ಕೊಡು ಎಂದು ಪ್ರಾರ್ಥಿಸಿರುವ ಈ ಮಂತ್ರದಲ್ಲಿ **ದಕ್ಷ** ಶಬ್ದವು ಕರ್ಮವಾಚಕವಾಗಿರುವುದರಿಂದ **ಚಿತ್ತಿ** ಶಬ್ದವು ಈ ಕರ್ಮವಿಷಯಕವಾದ ಜ್ಞಾನವೆಂಬರ್ಥದಲ್ಲಿಯೇ ಇರಬೇಕು.

**ಚಿತ್ತಿರಾ ಉಪಬರ್ಹಣಂ ಚಕ್ಷುರಾ ಅಭ್ಯಂಜನಂ ।** (ಋ. ಸಂ. ೧೦–೮೫–೭)

ಎಂಬಲ್ಲಿ **ಚಿತ್ತಿ** ಶಬ್ದಕ್ಕೆ ದೇವತಾವಿಶೇಷವೆಂದು ತಿಳಿಸಿದೆ. **ಧ್ಯಾನಾಸಕ್ತ**ವಾದ ಮನಸ್ಸು ಎಂಬ ತಾತ್ಪರ್ಯವನ್ನು ಸೂಚಿಸಲು ಈ ಪದದ ಪ್ರಯೋಗವಿರುವಾಗ ಸತ್ಕರ್ಮವಿಷಯಕವಾದ ಜ್ಞಾನ, ಆ ಜ್ಞಾನಾನುರೋಧವಾದ ಕರ್ಮ, ಈ ಕರ್ಮದಲ್ಲಿನ ಶ್ರದ್ಧೆ ಇವೆಲ್ಲವೂ ಒಟ್ಟಿಗೆ ತೋರಿಬರುವಂತೆಯೂ ಈ ಪದದ ಪ್ರಯೋಗವಿರುವುದು. ಉದಾಹರಣೆಗೆ—

**ಚಿತ್ತಿಃ ಸ್ರುಕ್; ಚಿತ್ತಮಾಜ್ಯಂ; ಆಧೀತಂ ಬರ್ಹಿಃ ।**

(ತೈ. ಆ. ೩–೧–೧)

ಎಂಬ ಈ ವಾಕ್ಯವನ್ನು ತೈತ್ತಿರೀಯ ಆರಣ್ಯಕದಲ್ಲಿಯೂ ಉದಾಹರಿಸಿದೆ. ಇದರ ತಾತ್ಪರ್ಯವನ್ನು ಸಾಯಣರು ವಿವರಿಸುತ್ತಾ, **ಚಿತ್ತೀ ಸಂಜ್ಞಾನ ಇತಿ ಧಾತೋಶ್ಚಿತ್ತಿ ಶಬ್ದನಿಷ್ಪತ್ತಿಃ । ಇದಂ ವಸ್ತ್ವೀದೃಶಮೇವ ನ ತ್ವನ್ಯಥೇತಿ**

**ಯಾ ಸಮ್ಯಗ್ಜ್ಞಾನರೂಪಾ ಮನೋವೃತ್ತಿಃ ಸಾ ಚಿತ್ತಿಃ** ॥ ಸಂಜ್ಞಾನಾರ್ಥಕವಾದ **ಚಿತ್** ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆ. ಈ ವಸ್ತುತತ್ತ್ವವು ಹೀಗೆಯೇ, ಅನ್ಯಥಾ ಇಲ್ಲ ಎಂಬ ನಿಷ್ಕೃಷ್ಟಜ್ಞಾನವೂ, ಪೂರ್ಣ ಜ್ಞಾನವೂ ಇರುವ ಮನೋವೃತ್ತಿಗೆ **ಚಿತ್ತಿ**ಯೆಂದು ಹೆಸರು ಎಂದು ತಿಳಿಸಿದ್ದಾರೆ. ಇಂತಹ ಜ್ಞಾನಪೂರ್ವಕವಾದ ಕರ್ಮಗಳೆಂದು ಪ್ರಕೃತವಾದ ಮಂತ್ರದಲ್ಲಿ ಅರ್ಥಮಾಡಬಹುದು.



॥ ಸಂಹಿತಾಪಾಠಃ ॥

ಪಿತಾ ಯಜ್ಞಾನಾಮಸುರೋ ವಿಪಶ್ಚಿತಾಂ ವಿಮಾನಮಗ್ನಿರ್ವಯುನಂ ಚ ವಾಘತಾಂ ।
ಆ ವಿವೇಶ ರೋದಸೀ ಭೂರಿವರ್ಪಸಾ ಪುರುಪ್ರಿಯೋ ಭಂದತೇ ಧಾಮಭಿಃ ಕವಿಃ ॥

॥ ಪದಪಾಠಃ ॥

ಪಿತಾ । ಯಜ್ಞಾನಾಂ । ಅಸುರಃ । ವಿಪಃऽಚಿತಾಂ । ವಿऽಮಾನಂ । ಅಗ್ನಿಃ । ವಯುನಂ । ಚ । ವಾಘತಾಂ ।
ಆ । ವಿವೇಶ । ರೋದಸೀ ಇತಿ । ಭೂರಿऽವರ್ಪಸಾ । ಪುರುऽಪ್ರಿಯಃ । ಭಂದತೇ । ಧಾಮಂऽಭಿಃ । ಕವಿಃ ॥

॥ ಸಾಯಣಭಾಷ್ಯಂ ॥

**ಯಜ್ಞಾನಾಂ ಪಿತಾ ಪಾಲಯಿತಾ ವಿಪಶ್ಚಿತಾಂ ವಿದುಷಾಂ ಸ್ತೋತೄಣಾಮಸುರೋ ಬಲಪ್ರದಃ । ವಾಘತಾಮೃತ್ವಿಜಾಂ ವಯುನಂ ಜ್ಞಾನಸಾಧನಂ । ವಿಮಾನಂ ಚ । ವಿಮೀಯತೇ ಫಲಮಿತಿ ವಿಮಾನಂ ಯಜ್ಞಾದಿಕರ್ಮಸಾಧನಂ । ಸೋಽಗ್ನಿರ್ಭೂರಿವರ್ಪಸಾ ಪಾರ್ಥಿವವೈದ್ಯುತಾದಿಬಹುವಿಧರೂಪೇಣ ರೋದಸೀ ದ್ಯಾವಾಪೃಥಿವ್ಯಾವಾವಿವೇಶ । ಪ್ರವಿಶತಿ । ಪುರುಪ್ರಿಯೋ ಮನುಷ್ಯೇಷ್ವಧಿಕಂ ಪ್ರಿಯಃ । ಅಥವಾ ಪುರೂಣಾಂ ಶ್ರೇಷ್ಠಾನಾಂ ಪ್ರಿಯಃ ಪುರುಪ್ರಿಯಃ । ಧಾಮಭಿಸ್ತೇಜೋಭಿರ್ಯುಕ್ತಃ ಕವಿರಗ್ನಿರ್ಭಂದತೇ । ಯಜಮಾನೇನ ಸ್ತೂಯತೇ ॥**

॥ ಪ್ರತಿಪದಾರ್ಥ ॥

**ಯಜ್ಞಾನಾಂ**—ಯಜ್ಞಗಳಿಗೆ । **ಪಿತಾ**—ಪಾಲಕನೂ । **ವಿಪಶ್ಚಿತಾಂ**—ವಿದ್ವಾಂಸರಾದ ಸ್ತೋತೃಗಳಿಗೆ । **ಅಸುರಃ**—ಬಲಪ್ರದನೂ । **ವಾಘತಾಂ**—ಋತ್ವಿಕ್ಕುಗಳಿಗೆ ! **ವಯುನಂ**—ಜ್ಞಾನಸಾಧನನೂ । **ವಿಮಾನಂ**—ಕರ್ಮಗಳಿಗೆ ಸಹಾಯಕನೂ ಆದ । **ಅಗ್ನಿಃ**—ಅಗ್ನಿಯು । **ಭೂರಿವರ್ಪಸಾ**—ಪಾರ್ಥಿವ, ವೈದ್ಯುತ ಇತ್ಯಾದಿ

ನಾನಾವಿಧವಾದ ರೂಪಗಳಿಂದ | **ರೋದಸೀ**—ದ್ಯಾವಾಪೃಥಿವಿಗಳೆರಡನ್ನೂ | **ಆ ವಿವೇಶ**—ಪ್ರವೇಶಿಸಿ ವ್ಯಾಪಿಸಿದ್ದಾನೆ | **ಪುರುಪ್ರಿಯಃ**—ಅನೇಕರಿಗೆ ಪ್ರಿಯನೂ | **ಧಾಮಭಿಃ**—ತೇಜಸ್ಸುಗಳಿಂದ (ಯುಕ್ತನಾದವನೂ) **ಕವಿಃ**—ಮೇಧಾವಿಯೂ ಆದ ಅಗ್ನಿಯು | **ಭಂದತೇ**—(ಯಜ್ಞಕರ್ತರಿಂದ) ಸ್ತುತಿಸಲ್ಪಡುತ್ತಾನೆ.

॥ ಭಾವಾರ್ಥ ॥

ಯಜ್ಞಗಳಿಗೆ ಪಾಲಕನೂ, ವಿದ್ವಾಂಸರಾದ ಸ್ತೋತೃಗಳಿಗೆ ಬಲಪ್ರದನೂ, ಋತ್ವಿಕ್ಕುಗಳಿಗೆ ಜ್ಞಾನಸಾಧನನೂ, ಕರ್ಮಗಳಿಗೆ ಸಹಾಯಕನೂ ಆದ ಅಗ್ನಿಯು ಪಾರ್ಥಿವ, ವೈದ್ಯುತ ಇತ್ಯಾದಿ ನಾನಾವಿಧವಾದ ರೂಪಗಳಿಂದ ದ್ಯಾವಾಪೃಥಿವಿಗಳೆರಡನ್ನೂ ಪ್ರವೇಶಿಸಿ ವ್ಯಾಪಿಸಿದ್ದಾನೆ. ಅನೇಕರಿಗೆ ಪ್ರಿಯನೂ, ತೇಜಸ್ಸುಗಳಿಂದ ಯುಕ್ತನಾದವನೂ, ಮೇಧಾವಿಯೂ ಆದ ಅಗ್ನಿಯು ಯಜ್ಞಕರ್ತರಿಂದ ಸ್ತುತಿಸಲ್ಪಡುತ್ತಾನೆ.

## English Translation.

The parent of sacrifices, the invigorator of the wise, the end (of the rite), the instruction of the priests, Agni, who has pervaded heaven and earth in many forms, the friend of man, wise, (and endowed) with splendours, is glorified (by the worshipper).

॥ ವಿಶೇಷವಿಷಯಗಳು ॥

**ಅಸುರಃ**— ಪ್ರಕೃತದಲ್ಲಿ **ಅಸುರ**ಶಬ್ದಕ್ಕೆ ಶಕ್ತಿಯುತನೆಂದರ್ಥ. **ಅಸುರಃ ಶತ್ರೂಣಾಂ ನಿರಸಿತಾ | ಯೋದ್ಧಾ | ಅಸುಃ ಪ್ರಾಣೋ ಬಲಂ ವಾ ತದ್ವಾನ್ |** ಶತ್ರುಗಳನ್ನು ದೂಡುವವನು ಅಥವಾ **ಅಸು**ಶಬ್ದಕ್ಕೆ ಪ್ರಾಣ, ಬಲ ಎಂಬರ್ಥಗಳಿರುವುದರಿಂದ ಪ್ರಾಣವುಳ್ಳವನು ಅಥವಾ ಬಲವುಳ್ಳವನು ಎಂದರ್ಥ. ಅಥವಾ ಅಸವಃ ಎಂದರೆ ಉದಕಗಳು. ಅವುಗಳನ್ನು ಕೊಡುವವನಾದುದರಿಂದ **ಅಸುರ**ಶಬ್ದವು ಇಂದ್ರಪರ್ಯಾಯವಾಗಿಯೂ ಇರುತ್ತದೆ. ಅಗ್ನಿಗೆ ಈ ಪದವು ವಿಶೇಷಣವಾಗಿರುವಾಗ ಈ ಎಲ್ಲಾ ಅರ್ಥಗಳೂ ಸಾಧ್ಯವಾಗುತ್ತವೆ. ಹಾಗೆಯೇ **ಪ್ರಜ್ಞಾವಾನ್, ದಾನೀ, ಕಾಲಾತ್ಮಾ ಸಂವತ್ಸರಃ, ಮೇಘಃ** ಇತ್ಯಾದ್ಯರ್ಥಗಳೂ ಉಂಟು. ಈ ಅರ್ಥ ವೈವಿಧ್ಯಗಳನ್ನೂ, ಅವುಗಳ ಪ್ರಯೋಗಗಳನ್ನೂ ಹಿಂದೆ ವಿಶದವಾಗಿ ತಿಳಿಸಿದೆ. ಪ್ರಕೃತದಲ್ಲಿ **ಬಲವಾನ್** ಎಂದಾಗಲಿ ಅಥವಾ **ಪ್ರಾಣದಃ** ಪ್ರಾಣದಾತನು ಎಂದಾಗಲಿ ಅರ್ಥವಾಗುತ್ತದೆ.

**ವಾಘತಾಂ**—**ವಹ್** ಧಾತುವಿನಿಂದ ನಿಷ್ಪನ್ನವಾಗಿದೆ. ನಿರುಕ್ತಕಾರರು ಈ ಪದವನ್ನು ಋತ್ವಿಙ್ನಾಮಗಳಲ್ಲಿ ಪಠಿಸಿದ್ದಾರೆ. (ನಿ. ೩-೧೮) ಯಜ್ಞಕಾರ್ಯಗಳನ್ನು ನಿರ್ವಹಿಸುವುದರಿಂದ ಋತ್ವಿಕ್ಕುಗಳು ಈ ಪದದಿಂದ ವ್ಯವಹರಿಸಲ್ಪಟ್ಟಿರಬಹುದು. **ವೋಢಾರೋ ಮೇಧಾವಿನೋ ವಾ** ಎಂದು ಎರಡು ವಿಧವಾಗಿಯೂ ಅರ್ಥಮಾಡಲ್ಪಟ್ಟಿದೆ. ಎರಡು ಅರ್ಥಗಳೂ ಋತ್ವಿಕ್ಕುಗಳ ಪರವಾಗಿಯೇ ಇರಬಹುದು.

**ವಯುನಂ**—ಈ ಪದವು **ಕೇತಃ ಕೇತುಃ** ಇತ್ಯಾದಿ ಪ್ರಜ್ಞಾನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩) ಪ್ರಕಾಶವನ್ನುಂಟುಮಾಡುವುದರಿಂದ ಈ ಅರ್ಥವೆಂದು ತಿಳಿಸಿದೆ. **ವಯುನಂ ವೇತೇಃ ಕಾಂತಿರ್ವಾ ಪ್ರಜ್ಞಾ ವಾ |**

(ನಿ. ೫–೧೫) ಹೆಣೆದು ಹಾಕು ಎಂಬರ್ಥವನ್ನು ಕೊಡತಕ್ಕ ವೀ ಧಾತುವಿನಿಂದ ನಿಷ್ಪನ್ನವಾಗಿ **ಅಪೇಕ್ಷೆ** ಅಥವಾ **ಪ್ರೆಜ್ಞೆ** ಎಂಬ ಅರ್ಥವನ್ನು ಕೊಡುತ್ತದೆ ಎಂಬುದಾಗಿ ನಿರುಕ್ತಕಾರರು ತೋರಿಸಿ,

**ಸ ಇತ್ತಮೋಽವಯುನಂ ತತನ್ವತ್ಸೂರ್ಯೇಣ ವಯುನವಚ್ಚಕಾರ |**
**ಕದಾ ತೇ ಮರ್ತಾ ಅಮೃತಸ್ಯ ಧಾಮೇ ಯಿಯಕ್ಷಂತೋ ನ ಮಿನಂತಿ ಸ್ವಧಾವಃ ||**
(ಋ. ಸಂ ೬–೨೧–೩)

ಎಂಬ ಋಕ್ಕನ್ನುದಾಹರಿಸಿ **ಸ ತಮೋಽಪ್ರಜ್ಞಾನಂ ತತನ್ವತ್ಸೂತಂ ಸೂರ್ಯೇಣ ಪ್ರಜ್ಞಾನವಚ್ಚಕಾರ |** (ನಿ. ೫–೫) ಕತ್ತಲಿನ ರೂಪದಲ್ಲಿದ್ದು ಗೋಚರಾತೀತವಾದುದನ್ನು ಪ್ರಜ್ಞಾವಿಷಯವನ್ನಾಗಿ ಮಾಡಿದನು ಎಂಬರ್ಥವನ್ನು ಕೊಡುವುದೆಂದು ವಿವರಿಸಿದೆ. ಪ್ರಕೃತವಾದಋಕ್ಕಿನಲ್ಲಿ ಜ್ಞಾನವೆಂದರ್ಥ.

**ಭೂರಿವರ್ಪಸಾ**—ಪಾರ್ಥಿವ ವೈದ್ಯುತ ಇತ್ಯಾದಿ ನಾನಾವಿಧವಾದ ರೂಪಗಳಿಂದ ಎಂದು ಅಗ್ನಿಯ ಅನೇಕ ಸ್ವರೂಪಶಕ್ತಿಗಳನ್ನು ವರ್ಣಿಸಿದೆ. **ತ್ರೀಣಿ ಜಾನಾ** ಎಂಬ ಋಕ್ಕಿನ ವಿಶೇಷವಿಷಯಗಳಲ್ಲಿ (ಋಗ್ವೇದ ಸಂಹಿತಾ ಭಾಗ ೮ ಪುಟ ೧೮–೧೯) ಪಾರ್ಥಿವಾದಿಗಳಲ್ಲಿ ಬೇರೆಬೇರೆ ರೂಪದಲ್ಲಿರುವ ಅಗ್ನಿಯ ಬೇರೆಬೇರೆ ಸ್ವರೂಪಗಳನ್ನು ವಿವರಿಸಿ ತಿಳಿಸಿದೆ. ಸಮುದ್ರದಲ್ಲಿ ಬಡಬಾನಲರೂಪದಲ್ಲಿಯೂ ದ್ಯುಲೋಕದಲ್ಲಿ ಆದಿತ್ಯರೂಪದಲ್ಲಿಯೂ ಅಂತರಿಕ್ಷದಲ್ಲಿ ಮಿಂಚಿನರೂಪದಲ್ಲಿಯೂ ಗೋಚರಿಸುವವನು ಎಂದು ಒಂದು ವಿಧವಾದ ವರ್ಣನೆಯಿದೆ. ಇದಲ್ಲದೇ, ಪಾರ್ಥಿವಾಗ್ನಿಗೆ **ಪವಮಾನಾ**ಗ್ನಿಯೆಂದೂ, ಮಧ್ಯಮಲೋಕವರ್ತಿಯಾದ ಅಗ್ನಿಗೆ **ವನಸ್ಪತಿ**ಯೆಂದೂ ದ್ಯುಲೋಕಸ್ಥವಾದ ಅಗ್ನಿಗೆ **ಶುಚಿ**ಯೆಂದು ಹೆಸರೂ ಸಹ ಪ್ರಸಿದ್ಧವಾಗಿದೆ. ಈ ಪ್ರಭೇದಗಳನ್ನು ಹಿಂದೆ ತಿಳಿಸಿದೆ.



॥ ಸಂಹಿತಾಪಾಠಃ ॥

ಚಂದ್ರಮಗ್ನಿಂ ಚಂದ್ರರಥಂ ಹರಿವ್ರತಂ ವೈಶ್ವಾನರಮಪ್ಸುಷದಂ ಸ್ವರ್ವಿದಂ ।
ವಿಗಾಹಂ ತೂರ್ಣಿಂ ತವಿಷೀಭಿರಾವೃತಂ ಭೂರ್ಣಿಂ ದೇವಾಸ ಇಹ ಸುಶ್ರಿಯಂ ದಧುಃ ॥ ೫ ॥

॥ ಪದಪಾಠಃ ॥

ಚಂದ್ರಂ । ಅಗ್ನಿಂ । ಚಂದ್ರಽರಥಂ । ಹರಿಽವ್ರತಂ । ವೈಶ್ವಾನರಂ । ಅಪ್ಸುಽಸದಂ । ಸ್ವಃಽವಿದಂ ।
ವಿಽಗಾಹಂ । ತೂರ್ಣಿಂ । ತವಿಷೀಭಿಃ । ಆಽವೃತಂ । ಭೂರ್ಣಿಂ । ದೇವಾಸಃ । ಇಹ । ಸುಽಶ್ರಿಯಂ । ದಧುಃ ॥ ೫ ॥

॥ ಸಾಯಣಭಾಷ್ಯಂ ॥

**ದೇವಾಸೋ ದೇವಾಶ್ಚಂದ್ರಮಾಹ್ಲಾದಕರಂ ಚಂದ್ರರಥಂ । ಚಂದ್ರ ಆಹ್ಲಾದಕೋ ರಥೋ ಯಸ್ಯೇತಿ ತಂ ಹರಿವ್ರತಂ ಪಿಂಗಲವರ್ಣಂ ಹರಿತ್ವಚಂ ವಾ । ಹರಿತ್ವಚಮಿತಿ ಶಾಖಾಂತರಂ । ಅಪ್ಸುಷದಮಪ್ಸು ಸೀದಂತಂ ಸ್ವರ್ವಿದಂ ಸರ್ವಜ್ಞಂ ವಿಗಾಹಂ ವಿಗಾಹಮಾನಂ ಸರ್ವತ್ರ ವ್ಯಾಪ್ತಂ ತೂರ್ಣಿಂ ಕ್ಷಿಪ್ರಗಾಮಿನಂ ಶತ್ರೂಣಾಂ ಹಿಂಸಿತಾರಂ ವಾ ತವಿಷೀಭಿರ್ಬಲೈರಾವೃತಂ ಭೂರ್ಣಿಂ ಭರ್ತಾರಂ ಸುಶ್ರಿಯಂ ಶೋಭನದೀಪ್ತಿಂ ವೈಶ್ವಾನರಮಿಹೇಹಲೋಕೇ ದಧುಃ । ಆದಧುಃ ॥**

॥ ಪ್ರತಿಪದಾರ್ಥ ॥

**ದೇವಾಸಃ**—ದೇವತೆಗಳು । **ಚಂದ್ರಂ**—ಆಹ್ಲಾದಕರನೂ । **ಚಂದ್ರರಥಂ**—ಆಹ್ಲಾದಕವಾದ ರಥವುಳ್ಳವನೂ । **ಹರಿವ್ರತಂ**—ಹೊಂಬಣ್ಣವುಳ್ಳವನೂ । **ಅಪ್ಸುಷದಂ**—ಉದಕದಲ್ಲಿ ಸ್ಥಿತನಾಗಿರುವವನೂ । **ಸ್ವರ್ವಿದಂ**—ಸರ್ವಜ್ಞನೂ । **ವಿಗಾಹಂ**—ಸರ್ವತ್ರ ವ್ಯಾಪಿಸುವವನೂ । **ತೂರ್ಣಿಂ**—ಕ್ಷಿಪ್ರಗಾಮಿಯೂ । **ತವಿಷೀಭಿಃ** — ಸಕಲವಿಧವಾದ ಶಕ್ತಿಗಳೊಡನೆಯೂ । **ಆವೃತಂ**—ಪೂರ್ಣನಾದವನೂ । **ಭೂರ್ಣಿಂ**—(ಜಗತ್ತನ್ನು) ಧರಿಸುವವನೂ । **ಸುಶ್ರಿಯಂ**—ಶ್ರೇಷ್ಠವಾದಕಾಂತಿಯುಳ್ಳವನೂ ಆದ । **ವೈಶ್ವಾನರಂ ಅಗ್ನಿಂ**—ವೈಶ್ವಾನರರೂಪಿಯಾದ ಅಗ್ನಿಯನ್ನು । **ಇಹ**—ಈ ಲೋಕದಲ್ಲಿ । **ದಧುಃ**—ಸ್ಥಾಪಿಸಿದ್ದಾರೆ.

॥ ಭಾವಾರ್ಥ ॥

ಆಹ್ಲಾದಕರನೂ, ಆಹ್ಲಾದಕರವಾದ ರಥವುಳ್ಳವನೂ, ಹೊಂಬಣ್ಣವುಳ್ಳವನೂ, ಉದಕದಲ್ಲಿ ಸ್ಥಿತನಾಗಿರುವವನೂ, ಸರ್ವಜ್ಞನೂ, ಸರ್ವತ್ರ ವ್ಯಾಪಿಸುವವನೂ, ಕ್ಷಿಪ್ರಗಾಮಿಯೂ, ಸಕಲ ವಿಧವಾದ ಶಕ್ತಿಗಳೊಡನೆಯೂ ಪೂರ್ಣನಾದವನೂ, ಜಗತ್ತನ್ನು ಭರಿಸುವವನೂ, ಶ್ರೇಷ್ಠವಾದ ಕಾಂತಿಯುಳ್ಳವನೂ, ವೈಶ್ವಾನರರೂಪಿಯೂ ಆದ ಅಗ್ನಿಯನ್ನು ದೇವತೆಗಳು ಈ ಲೋಕದಲ್ಲಿ ಸ್ಥಾಪಿಸಿದ್ದಾರೆ.

## English Translation.

The gods have placed in this world the delightful Agni in a delightful chariot, the tawny-hued Vaishwanara, the sitter in the waters, the omniscient, the all-pervading, the endowed with energies, the cherisher, the illustrious.

॥ ವಿಶೇಷವಿಷಯಗಳು ॥

ಹಿಂದಿನ ಋಕ್ಕಿನಲ್ಲಿ ಭೂರಿವರ್ಪಸಾ ಇತ್ಯಾದಿ ವಿಶೇಷಣಗಳಿಂದಲೂ ಪ್ರಕೃತವಾದ ಋಕ್ಕಿನಲ್ಲಿ **ವಿಗಾಹಂ, ತವಿಷೀಭಿಃ, ಆವೃತಂ** ಎಂಬ ವಿಶೇಷಣಗಳಿಂದಲೂ ಅಗ್ನಿಯನ್ನು ವರ್ಣಿಸಿ ಸ್ತುತಿಸಿದೆ. ಸರ್ವತ್ರ ವ್ಯಾಪಿಸಿರುವವನೂ, ಸಕಲವಿಧವಾದ ಶಕ್ತಿಗಳೊಡನೆಯೂ ಕೂಡಿದವನೂ ಆದ ಅಗ್ನಿಯು ಜಗತ್ತನ್ನು ಭರಿಸುವವನು ಎಂದು ಈ ಋಕ್ಕಿನಲ್ಲಿ ಪ್ರಶಂಸಿಸಿದೆ. ಅಗ್ನಿಯ ಮಹಚ್ಛಕ್ತಿಯನ್ನೂ ನಾನಾವಿಧವಾದ ಶಕ್ತಿಯಿರೋಣದರಿಂದ ನಾನಾ ನಾಮಗಳಿಂದ ಪ್ರಸಿದ್ಧನಾದುದನ್ನೂ ಶತಪಥದಲ್ಲಿ ಈ ರೀತಿ ವರ್ಣಿಸಿದೆ.

**ತದ್ಯಾನಿ ತಾನಿ ಭೂತಾನಿ। ಋತವಸ್ತೇಽತ ಯಃ ಸ ಭೂತಾನಾಂ ಪತಿಃ ಸಂವತ್ಸರಃ ಸೋಽಥ ಯಾ ಸೋಷಾಃ ಪತ್ನ್ಯೌಷಸೀ ಸಾ ತಾನೀಮಾನಿ ಭೂತಾನಿ ಚ ಭೂತಾನಾಂ ಚ ಪತಿಃ ಸಂವತ್ಸರ ಉಷಸಿ ರೇತೋಽಸಿಂಚನ್ತ್ಸ ಸಂವತ್ಸರೇ ಕುಮಾರೋಽಜಾಯತ ಸೋ ರೋದೀತ್ ॥**

(ಶ. ಬ್ರಾ. ೬-೧-೩-೮)

ಪ್ರಜಾಪತಿಸೃಷ್ಟವಾದ ಸಕಲಭೂತಗಳೂ ಋತ್ವಾತ್ಮಕಗಳು. ಪ್ರಜಾಪತಿಯೇ ಸಂವತ್ಸರವು. ಅವನ ಪತ್ನಿಯೇ ಉಷಸ್ಸು. ಪ್ರಜಾಪತಿಯೂ ಈ ಭೂತಗಳೂ ಸಹ ಉಷಸ್ಸಿನಲ್ಲಿ ಬೀಜಾವಾಪವನ್ನು ಮಾಡಿದವು. ವರ್ಷದೊಳಗೆ ಕುಮಾರನು ಹುಟ್ಟಿದನು. ಅವನು ರೋದಿಸತೊಡಗಿದನು.

**ತಂ ಪ್ರಜಾಪತಿರಬ್ರವೀತ್। ಕುಮಾರ ಕಿಗ್ಂರೋದಿಷಿ ಯಚ್ಛ್ರಮಾತ್ತಪಸೋಽಧಿಜಾತೋಽಸೀತಿ ಸೋಽಬ್ರವೀದನಪಹತಪಾಪ್ಮಾ ವಾಅಸ್ಮ್ಯಹಿತನಾಮಾ ನಾಮ ಮೇ ಧೇಹೀತಿ ತಸ್ಮಾತ್ಪುತ್ರಸ ಜಾತಸ್ಯ ನಾಮ ಕುರ್ಯಾತ್ ॥**  (ಶ. ಬ್ರ. ೬-೧-೩-೯)

ಅವನನ್ನು ಕುರಿತು ಕುಮಾರನೇ, ಏಕೆ ಅಳುತ್ತೀಯೆ? ನೀನು ಶ್ರಮದಿಂದಲೂ ತಪಸ್ಸಿನ ಫಲದಿಂದಲೂ ಉತ್ಪನ್ನನಾಗಿರುವುದರಿಂದ ಅಳಬಾರದು ಎಂದು ಹೇಳಲು ಅದಕ್ಕೆ ಅಗ್ನಿಯು "ನಾನು ಹುಟ್ಟಿದಮೇಲೆ ನನಗೆ ಹೆಸರನ್ನೇ ಇಡಲಿಲ್ಲ. ಆದುದರಿಂದ ನಾನು ದೋಷರಹಿತನಲ್ಲ. ನನಗೆ ನಾಮಕರಣವನ್ನು ಮಾಡು" ಎಂದನು. ಪುತ್ರೋತ್ಪತ್ತಿಯಾದೊಡನೆಯೇ ನಾಮಕರಣವನ್ನು ಮಾಡಬೇಕು.

**ತಮಬ್ರವೀದ್ರುದ್ರೋಽಸೀತಿ। ತದ್ಯದಸ್ಯ ತನ್ನಾಮಾಕರೋದಗ್ನಿಸ್ತದ್ರೂಪಮಭವದಗ್ನಿರ್ವಗ್ಂ ರುದ್ರೋ ಯದರೋದೀತ್ತಸ್ಮಾದ್ರುದ್ರಃ ಸೋಽಬ್ರವೀಜ್ಜ್ಯಾಯಾನ್ವಾ ಅತೋಽಸ್ಮಿ ಧೇಹ್ಯೇವ ಮೇ ನಾಮೇತಿ।**

(ಶ. ಬ್ರಾ. ೬-೧-೩-೧೦)

ಆಗ ಪ್ರಜಾಪತಿಯು "ನೀನು ರೋದಿಸುತ್ತಿದ್ದುದರಿಂದ ನಿನಗೆ ರುದ್ರನೆಂದು ನಾಮವನ್ನು ಇಟ್ಟು ಕರೆದಿದ್ದೇನೆ." ಎಂದನು. ಅಗ್ನಿಯು ನಿಜವಾಗಿಯೂ ರುದ್ರರೂಪನೇ ಆದನು. ಆದರೂ ಸಹ "ನಾನು ಈ ರುದ್ರಮೂರ್ತಿಗಿಂತಲೂ ಅಧಿಕವಾದ ಶಕ್ತಿಯುಳ್ಳವನಾಗಿದ್ದೇನೆ. ನನಗೆ ಮತ್ತೊಂದು ಹೆಸರನ್ನಿಡು" ಎಂದನು.

**ತಮಬ್ರವೀತ್ಸರ್ವೋಽಸೀತಿ। ತದ್ಯದಸ್ಯ ತನ್ನಾಮಾಕರೋದಾಪಸ್ತದ್ರೂಪಮಭವನ್ನಾಪೋ ವೈ ಸರ್ವೋಽದ್ಭ್ಯೋ ಹೀದಗ್ಂ ಸರ್ವಂ ಜಾಯತೇ ಸೋಽಬ್ರವೀಜ್ಜ್ಯಾಯಾನ್ವಾ ಅತೋಽಸ್ಮಿ ಧೇಹ್ಯೇವ ಮೇ ನಾಮೇತಿ ॥**

(ಶ. ಬ್ರಾ ೬-೧-೩-೧೧)

"ಹಾಗಾದರೆ ನೀನು **ಸರ್ವ** ನಾಮಾಂಕಿತನು" ಎಂದು ಪ್ರಜಾಪತಿಯು ಹೇಳಿದನು. ಲೋಕದಲ್ಲಿ ಸಕಲಭೂತಗಳೂ ಉದಕನಿಂದಲೇ ಉತ್ಪನ್ನವಾಗುವುದರಿಂದ ಉದಕವೇ ಸರ್ವನಾಮಾಂಕಿತವಾಗಿರುತ್ತದೆ. ಪ್ರಜಾಪತಿಯು ಅಗ್ನಿಗೆ ಈ ಹೆಸರನ್ನು ಕೊಟ್ಟುದುದರಿಂದ ಅಗ್ನಿಯು ಈ ರೂಪದಲ್ಲಿ ಪರಿವರ್ತಿತನಾದನು ಮತ್ತು "ನಾನು ಇನ್ನೂ ಅಧಿಕವಾದ ಶಕ್ತಿಯುಳ್ಳವನಾಗಿದ್ದೇನೆ. ಬೇರೊಂದು ಹೆಸರನ್ನು ಕೊಡು" ಎಂದನು.

ತಮಬ್ರವೀತ್ಪಶುಪತಿರಸೀತಿ । ತದ್ಯದಸ್ಯ ತನ್ನಾಮಾಕರೋದೋಷಧಯಸ್ತದ್ರೂಪಮಭವನ್ನೋಷಧಯೋ ವೈ ಪಶುಪತಿಸ್ತಸ್ಮಾದ್ಯದಾ ಪಶವ ಓಷಧೀರ್ಲಭಂತೇಽಥ ಪತೀಯಂತಿ ಸೋಽಬ್ರವೀಜ್ಜ್ಯಾಯಾನ್ವಾ ಅತೋಽಸ್ಮಿ ಧೇಹ್ಯೇವ ಮೇ ನಾಮೇತಿ ॥

(ಶ. ಬ್ರಾ. ೬-೧-೩-೧೩)

" ಆದರೆ ನೀನು **ಪಶುಪತಿ**ಯೆಂದು ಪ್ರಸಿದ್ಧನಾಗು " ಎಂದನು. ಪಶುಪತಿಯೇ ಓಷಧಿಗಳ ಸ್ವರೂಪವಾದುದರಿಂದಲೂ ಪಶುಗಳು ಓಷಧಿಗಳನ್ನು ಪಡೆದನಂತರ ಪತಿ (ಶಕ್ತ) ಗಳಾಗುವುದರಿಂದಲೂ ಸಹ ಈ ಹೆಸರು ಮತ್ತು ಅಗ್ನಿಯು ಈ ಪಶುಪತಿಯ ಎಂದರೆ ಓಷಧಿಗಳ ರೂಪವನ್ನು ತಾಳಿ ಅವುಗಳೊಳಗೆ ಅಂತರ್ಗತನಾದನು. " ನಾನು ಇನ್ನೂ ಅಧಿಕವಾದ ಶಕ್ತಿಯುಳ್ಳವನು. ಅದಕ್ಕೆ ತಕ್ಕ ಹೆಸರನ್ನು ಕೊಡು " ಎಂದನು.

ತಮಬ್ರವೀದುಗ್ರೋಽಸೀತಿ । ತದ್ಯದಸ್ಯ ತನ್ನಾಮಾಕರೋದ್ವಾಯುಸ್ತದ್ರೂಪಮಭವದ್ವಾಯುರ್ವಾ ಉಗ್ರಸ್ತಸ್ಮಾದ್ಯದಾ ಬಲವದ್ವಾತ್ಯುಗ್ರೋ ವಾತೀತ್ಯಾಹುಃ ಸೋಽಬ್ರವೀಜ್ಜ್ಯಾಯಾನ್ವಾ ಅತೋಽಸ್ಮಿ ಧೇಹ್ಯೇವ ಮೇ ನಾಮೇತಿ ॥

(ಶ. ಬ್ರಾ. ೬-೧-೩-೧೩)

ಹಾಗಾದರೆ ನಿನ್ನನ್ನು **ಉಗ್ರ**ನೆಂದು ಕರೆಯುತ್ತೇನೆಂದನು. ವಾಯುವೇ ಉಗ್ರನಾದುದರಿಂದಲೂ, ವಾಯುವು ಬಲವಾಗಿ ಬೀಸುವಾಗ ಉಗ್ರನು ಬೀಸುತ್ತಾನೆಂದು ಹೇಳುವ ವಾಡಿಕೆಯಿರುವುದರಿಂದಲೂ ಸಹ ಈ ಹೆಸರು. ಮತ್ತು ಅಗ್ನಿಯು ಈ ರೂಪದಲ್ಲಿ ಪರಿವರ್ತಿತನಾದನು " ನನಗೆ ಇದಕ್ಕಿಂತಲೂ ಅಧಿಕವಾದ ಶಕ್ತಿಯಿದೆ. ಅದಕ್ಕನುಗುಣವಾದ ಹೆಸರನ್ನಿಡು " ಎಂದನು.

ತಮಬ್ರವೀದಶನಿರಸೀತಿ । ತದ್ಯದಸ್ಯ ತನ್ನಾಮಾಕರೋದ್ವಿದ್ಯುತ್ತದ್ರೂಪಮಭವದ್ವಿದ್ಯುದ್ವಾ ಅಶನಿಸ್ತಸ್ಮಾದ್ಯಂ ವಿದ್ಯುದ್ಧಂತ್ಯಶನಿರಬಧೀದಿತ್ಯಾಹುಃ ಸೋಽಬ್ರವೀಜ್ಜ್ಯಾಯಾನ್ವಾ ಅತೋಽಸ್ಮಿ ಧೇಹ್ಯೇವ ಮೇ ನಾಮೇತಿ ॥ (ಶ. ಬ್ರಾ. ೬-೧-೩-೧೪)

" ಹಾಗಾದರೆ ನೀನು ಅಶನಿಯೆಂದು ಪ್ರಸಿದ್ಧನಾಗು " ಎಂದು ಪ್ರಜಾಪತಿಯು ಹೇಳಿದನು. ವಿದ್ಯುದ್ಘಾತವಾದಾಗ ಅಶಿನಿಘಾತವೆಂದು ಹೇಳುವ ವಾಡಿಕೆಯಿರುವುದರಿಂದ ವಿದ್ಯುತ್ತೇ ಅಶನಿರೂಪವು. ಅಗ್ನಿಗೆ ಈ ನಾಮಾಂಕಿತವಾದ ಮೇಲೆ ಅಗ್ನಿಯು ಈ ರೂಪದಲ್ಲಿ ಪರಿವರ್ತಿತನಾದನು. " ನಾನು ಇನ್ನೂ ಅಧಿಕವಾದ ಬಲವುಳ್ಳವನು. ತತ್ಸದೃಶವಾದ ಹೆಸರನ್ನಿಡು " ಎಂದನು.

ತಮಬ್ರವೀದ್ಭವೋಽಸೀತಿ ॥ ತದ್ಯದಸ್ಯ ತನ್ನಾಮಾಕರೋತ್ಪರ್ಜನ್ಯಸ್ತದ್ರೂಪಮಭವತ್ಪರ್ಜನ್ಯೋ ವೈ ಭವಃ ಪರ್ಜನ್ಯಾದ್ಧೀದಗ್ಂ ಸರ್ವಂ ಭವತಿ ಸೋಽಬ್ರವೀಜ್ಜ್ಯಾಯಾನ್ವಾ ಅತೋಽಸ್ಮಿ ಧೇಹ್ಯೇವ ಮೇ ನಾಮೇತಿ ॥ (ಶ. ಬ್ರಾ. ೬--೧-೩-೧೫)

"ಇನ್ನೂ ಅಧಿಕವಾದ ಶಕ್ತಿಯಿರುವುದರಿಂದ ನೀನು **ಭವ**ನೆಂದು ಪ್ರಸಿದ್ಧನಾಗು" ಎಂದನು. ಆ ಒಡನೆಯೇ ಪರ್ಜನ್ಯನು ಈ ರೂಪನಾದನು. (ಅಥವಾ ಅಗ್ನಿಯೇ ಪರ್ಜನ್ಯರೂಪನಾದನು). ಲೋಕದಲ್ಲಿ ಸಮಸ್ತವೂ ಪರ್ಜನ್ಯದಿಂದಲೇ ಉತ್ಪನ್ನವಾಗುವುದರಿಂದ (ಭವತಿ) ಪರ್ಜನ್ಯಕ್ಕೆ ಭವನೆಂದು ಹೆಸರು. ಈ ಶಕ್ತಿಯು ಅಗ್ನಿಗೆ ಮುಖ್ಯವಾಗಿ

ದ್ದುದರಿಂದ ಅಗ್ನಿಗೆ ಈ ಹೆಸರನ್ನಿಟ್ಟನು. "ನಾನು ಇನ್ನೂ ಅಧಿಕವಾದ ಬಲವುಳ್ಳವನು. ನನಗೆ ಅದಕ್ಕೆ ತಕ್ಕ ಹೆಸರನ್ನಿಡು" ಎಂದು ಅಗ್ನಿಯು ಕೇಳಿದನು.

**ತಮಬ್ರವೀನ್ಮಹಾದೇವೋಽಸೀತಿ । ತದ್ಯದಸ್ಯ ತನ್ನಾಮಾಕರೋಚ್ಚಂದ್ರಮಾಸ್ತದ್ರೂಪಮಭವತ್ಪ್ರಜಾಪತಿರ್ವೈ ಚಂದ್ರಮಾಃ ಪ್ರಜಾಪತಿರ್ವೈ ಮಹಾನ್‌ದೇವಃ ಸೋಽಬ್ರವೀಜ್ಜ್ಯಾಯಾನ್ವಾ ಅತೋಽಸ್ಮಿ ಧೇಹ್ಯೇವ ಮೇ ನಾಮೇತಿ ।** (ಶ. ಬ್ರಾ. ೬-೧-೩-೧೬)

"ಆದುದರಿಂದ ನೀನು **ಮಹಾದೇವ**" ನೆಂದು ಪ್ರಜಾಪತಿಯು ಹೇಳಿದನು. ಚಂದ್ರನೇ ಮಹಾದೇವನು. ಮಹಾದೇವನೇ ಪ್ರಜಾಪತಿಯು. ಅಗ್ನಿಗೆ ಈ ಹೆಸರನ್ನಿಟ್ಟಮೇಲೆ ಚಂದ್ರನೇ ಈ ರೂಪನಾದನು. "ಆದರೂ ಇದಕ್ಕಿಂತಲೂ ನಾನು ಅಧಿಕವಾದ ಪ್ರಭಾವವುಳ್ಳವನು. ಅದಕ್ಕೆ ತಕ್ಕ ಹೆಸರನ್ನಿಡು" ಎಂದು ಕೇಳಿದನು.

**ತಮಬ್ರವೀದೀಶಾನೋಽಸೀತಿ । ತದ್ಯದಸ್ಯ ತನ್ನಾಮಾಕರೋದಾದಿತ್ಯಸ್ತದ್ರೂಪಮಭವದಾದಿತ್ಯೋ ವಾ ಈಶಾನ ಆದಿತ್ಯೋ ಹ್ಯಸ್ಯ ಸರ್ವಸ್ಯೇಷ್ಟೇ ಸೋಽಬ್ರವೀದೇತಾವಾನ್ವಾ ಅಸ್ಮಿ ಮಾ ಮೇತಃ ಪರೋ ನಾಮ ಧಾ ಇತಿ ॥** (ಶ. ಬ್ರಾ. ೬-೧-೩-೧೭)

" ಈ ಕಾರಣದಿಂದ ನೀನು **ಈಶಾನ** (ಸರ್ವಪ್ರಭು) ನೆಂದು ಪ್ರಸಿದ್ಧನಾಗು " ಎಂದು ಪ್ರಜಾಪತಿಯು ಹೇಳಿದನು. ಆದಿತ್ಯನೇ ಜಗತ್ಪ್ರಭುವಾದುದರಿಂದಲೂ ಆದುದರಿಂದಲೇ ಅವನು **ಈಶಾನ**ನೆಂದು ಪ್ರಸಿದ್ಧನಾದುದರಿಂದಲೂ ಆದಿತ್ಯನು ಅಗ್ನಿರೂಪನಾದನು ; ಇವೆಲ್ಲಾ ನನ್ನ ಶಕ್ತಿಗಳು. ಇನ್ನು ಮುಂದೆ ಹೆಸರನ್ನಿಡಬೇಕಾಗಿಲ್ಲ ಎಂದನು.

**ತಾನ್ಯೇತಾನ್ಯಷ್ಟಾವಗ್ನಿರೂಪಾಣಿ । ಕುಮಾರೋ ನವಮಃ ಸೈವಾಗ್ನೇಸ್ತ್ರಿವೃತ್ತಾ ॥**
(ಶ. ಬ್ರಾ. ೬-೧-೩-೧೮)

ಈ ರೀತಿ **ರುದ್ರ, ಸರ್ವ, ಪಶುಪತಿ, ಉಗ್ರ, ಅಶನಿ, ಭವ, ಮಹಾದೇವ, ಈಶಾನ** ಎಂಬ ಈ ಎಂಟೂ ಅಗ್ನಿಯ ಬಲಸೂಚಕವಾದ ನಾಮಧೇಯಗಳು. ಒಂದೊಂದು ಹೆಸರೂ ಒಂದೊಂದು ವಿಧವಾದ ಶಕ್ತಿಯನ್ನು ಸೂಚಿಸುತ್ತದೆ. ತ್ರಿವೃದಾತ್ಮಕವಾದ ಕುಮಾರನೆಂಬುವುದೇ ಅಗ್ನಿಯ ಒಂಭತ್ತನೆಯ ಹೆಸರು. ಈ ಮಹಾಶಕ್ತಿಗಳನ್ನೇ ಪ್ರಕೃತವಾದ ಋಕ್ಕಿನಲ್ಲಿ **ವಿಗಾಹಂ, ತವಿಷೀಭಿಃ, ಆವೃತಂ** ಎಂದು ವರ್ಣಿಸಿದೆ.

**ಭೂರ್ಣಿಂ—ಭರ್ತಾರಂ ।** ಜಗತ್ತನ್ನು ಧರಿಸಿ ಪೋಷಿಸತಕ್ಕ ಒಡೆಯನೆಂದರ್ಥ. ಈ ಪದವು ಧಾರಣಾರ್ಥಕವೂ, ಪೋಷಣಾರ್ಥಕವೂ ಆದ **ಭುರಣ (ಧಾರಣಪೋಷಣಯೋಃ)** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ.

**ಯುನ್ನಾಸತ್ಯಾ ಭುರಣ್ಯಥೋ ಯದ್ವಾ ದೇವ ಭಿಷಜ್ಯಥಃ ।**
**ಅಯಂ ವಾಂ ವತ್ಸೋ ಮತಿಭಿರ್ನ ವಿಂಧತೇ ಹವಿಷ್ಮಂತಂ ಹಿ ಗಚ್ಛಥಃ ॥**
(ಋ. ಸಂ. ೮-೯-೬)

ಎಂಬಲ್ಲಿ **ಭುರಣ್ಯಥಃ ಸರ್ವಂ ಜಗತ್ಪೋಷಯಥಃ ।** ನೀವು ಸಕಲ ಜಗತ್ತನ್ನೂ ಪೋಷಿಸುವಿರಿ ಎಂದು ಸ್ತುತಿಸಿದೆ. ಅದೇ ಧಾತುನಿಷ್ಪನ್ನವಾದುದರಿಂದ ಪ್ರಕೃತದಲ್ಲಿಯೂ ಪೋಷಕನೆಂದರ್ಥ. ಈ ಪದದ ಗತ್ಯರ್ಥಕವಾದ ಪ್ರಯೋಗವನ್ನು ಹಿಂದೆ ತಿಳಿಸಿ ಉದಾಹರಣೆಗಳೊಡನೆ ವಿವರಿಸಿದೆ.

**ಚಂದ್ರಃ — ಚಂದ್ರಶ್ಚಂದತೇಃ ಕಾಂತಿಕರ್ಮಣಃ** । ಕಾಂತಿಯನ್ನು ಬೀರಿ ಆಹ್ಲಾದವನ್ನುಂಟು ಮಾಡುವುದು ಎಂಬರ್ಥವನ್ನು ಕೊಡತಕ್ಕ **ಚಂದ್** ಧಾತುವಿನಿಂದ **ಚಂದ್ರ** ಶಬ್ದವು ನಿಷ್ಪನ್ನವಾಗಿದೆ. ಪ್ರಕೃತದಲ್ಲಿ ಲೋಕಕ್ಕೆಲ್ಲಾ ಆಹ್ಲಾದಕಾರಿಯಾದ ಅಗ್ನಿಗೆ ವಿಶೇಷಣವಾಗಿದೆ.

॥ ಸಂಹಿತಾಪಾಠಃ ॥

# ಅಗ್ನಿರ್ದೇವೇಭಿರ್ಮನುಷಶ್ಚ ಜಂತುಭಿಸ್ತನ್ವಾನೋ ಯಜ್ಞಂ ಪುರುಪೇಶಸಂ ಧಿಯಾ ।
# ರಥೀರಂತರೀಯತೇ ಸಾಧದಿಷ್ಟಿಭಿರ್ಜೀರೋ ದಮೂನಾ ಅಭಿಶಸ್ತಿಚಾತನಃ ॥ ೬ ॥

॥ ಪದಪಾಠಃ ॥

**ಅಗ್ನಿಃ । ದೇವೇಭಿಃ । ಮನುಷಃ । ಚ । ಜಂತುऽಭಿಃ । ತನ್ವಾನಃ । ಯಜ್ಞಂ । ಪುರುऽಪೇಶಸಂ । ಧಿಯಾ ।**
**ರಥೀಃ । ಅಂತಃ । ಈಯತೇ । ಸಾಧದಿಷ್ಟಿऽಭಿಃ । ಜೀರಃ । ದಮೂನಾಃ । ಅಭಿಶಸ್ತಿऽಚಾತನಃ ॥ ೬ ॥**

॥ ಸಾಯಣಭಾಷ್ಯಂ ॥

**ದೇವೈಃ ಸಾಧದಿಷ್ಟಿಭಿಃ ಸಾಧಿತಯಜ್ಞೈರ್ಜಂತುಭಿರ್ಋತ್ವಿಗ್ಭಿಶ್ಚ ಧಿಯಾ ಕರ್ಮಣಾ ಮನುಷೋ ಯಜಮಾನಸ್ಯ ಪುರುಪೇಶಸಂ ಬಹುರೂಪಂ । ಪೇಶ ಇತಿ ರೂಪನಾಮ । ಪುರೋಡಾಶಪಶುಸೋಮಹವಿರ್ಭೇದೈರೇಕಾಹಾಹೀನಸತ್ರಾತ್ಮಕಭೇದೈಶ್ಚ ನಾನಾವಿಧರೂಪಂ ಯಜ್ಞಂ ತನ್ವಾನಃ ಕುರ್ವನ್ ರಥೀಃ ಸರ್ವಸ್ಯ ಲೋಕಸ್ಯ ನೇತಾ ಜೀರಃ ಕ್ಷಿಪ್ರಕಾರೀ ದಮೂನಾ ದಾಂತಮನಾ ದಾನಮನಾ ವಾಭಿಶಸ್ತಿಚಾತನೋऽಭಿಶಸ್ತೀನಾಮರಾತೀನಾಂ ಯಜ್ಞವಿಘ್ನಕಾರಿಣಾಂ ರಕ್ಷಸಾಂ ಚಾತಯಿತಾ ನಾಶಯಿತಾಗ್ನಿರಂತರ್ದ್ಯಾವಾಪೃಥಿವ್ಯೋರ್ಮಧ್ಯ ಈಯತೇ । ಗಚ್ಛತಿ ॥**

॥ ಪ್ರತಿಪದಾರ್ಥ ॥

**ಸಾಧದಿಷ್ಟಿಭಿಃ**–ನೆರವೇರಿಸಲ್ಪಟ್ಟ ಯಜ್ಞಗಳುಳ್ಳ । **ದೇವೇಭಿಃ**—ದೇವತೆಗಳೊಡನೆಯೂ ! **ಜಂತುಭಿಃ**–ಋತ್ವಿಕ್ಕುಗಳೊಡನೆಯೂ । **ಧಿಯಾ ಚ**—ಕರ್ಮಗಳೊಡನೆಯೂ ಕೂಡಿಕೊಂಡು । **ಮನುಷಃ**—ಯಜಮಾನನ । **ಪುರುಪೇಶಸಂ**—ನಾನಾವಿಧವಾದ । **ಯಜ್ಞಂ**—ಯಜ್ಞವನ್ನು । **ತನ್ವಾನಃ**—ನೆರವೇರಿಸುತ್ತಾ । **ರಥೀಃ**—ಲೋಕಕ್ಕೆಲ್ಲಾ ನೇತೃವೂ । **ಜೀರಃ**—ಕ್ಷಿಪ್ರಕಾರಿಯೂ । **ದಮೂನಾಃ**—ಪ್ರಶಾಂತಚಿತ್ತವುಳ್ಳವನೂ । **ಅಭಿಶಸ್ತಿಚಾತನಃ**—ಶತ್ರುನಾಶಕನೂ ಆದ । **ಅಗ್ನಿಃ**—ಅಗ್ನಿಯು । **ಅಂತಃ**—ದ್ಯಾವಾಪೃಥಿವಿಗಳ ನಡುವೆ । **ಈಯತೇ**—ಸಂಚರಿಸುತ್ತಾನೆ.

॥ ಭಾವಾರ್ಥ ॥

ಯಜ್ಞಗಳಿಂದ ಪೂಜಿಸಲ್ಪಟ್ಟ ದೇವತೆಗಳೊಡನೆಯೂ, ಋತ್ವಿಕ್ಕುಗಳೊಡನೆಯೂ, ಕರ್ಮಗಳೊಡನೆಯೂ ಕೂಡಿಕೊಂಡು ಯಜಮಾನನ ನಾನಾವಿಧವಾದ ಯಜ್ಞವನ್ನು ನೆರವೇರಿಸುತ್ತಾ ಲೋಕಕ್ಕೆಲ್ಲಾ ನೇತೃವೂ, ಕ್ಷಿಪ್ರಕಾರಿಯೂ, ಪ್ರಶಾಂತಚಿತ್ತವುಳ್ಳವನೂ, ಶತ್ರುನಾಶಕನೂ ಆದ ಅಗ್ನಿಯು ದ್ಯಾವಾಪೃಥಿವಿಗಳ ನಡುವೆ ವ್ಯಾಪಿಸಿ ಸಂಚರಿಸುತ್ತಾನೆ.

English Translation.

Perfecting in performance the multiform sacrifice of the worshipper, along with the gods to whom solemnities have been addressed, and together with the priests, Agni, the charioteer, the swift-moving, the humble-minded. the destroyer of foes, passes along between (heaven and earth).

॥ ವಿಶೇಷವಿಷಯಗಳು ॥

**ಜಂತುಭಿಃ**—ಉತ್ಪನ್ನವಾದ ವಸ್ತುಗಳಲ್ಲಿ ಯಾವುದಕ್ಕೆ ಬೇಕಾದರೂ ಸಂದರ್ಭಾನುಸಾರವಾಗಿ ಅರ್ಥ ಕೊಡುವಂತೆ ಈ ಪದವು ಋಕ್ಸಂಹಿತೆಯಲ್ಲಿ ಪ್ರಯೋಗಿಸಲ್ಪಟ್ಟಿದೆ. **ಜಂತುಃ, ಜಂತವಃ, ಜಂತುಭಿಃ** ಎಂಬ ಪದಗಳಿಗೆ ಋತ್ವಿಕ್ಕುಗಳು, ಯಜಮಾನರು, ಶತ್ರುಗಳು, ಸಕಲಪ್ರಾಣಿಗಳು ಇತ್ಯಾದಿ ಜನ್ಮವುಳ್ಳ ವಸ್ತುಗಳಿಗೆಲ್ಲಾ ಅನ್ವಯವಾಗುವಂತೆ ಬೇರೆ ಬೇರೆ ಸಂದರ್ಭಗಳಲ್ಲಿ ಆಯಾ ಪ್ರಕರಣಗಳಿಗೆ ತಕ್ಕಂತೆ ಅರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಋತ್ವಿಕ್ಕಿಗೆ ಪರ್ಯಾಯಪದವಾಗಿದೆ.

**ಪುರುಪೇಶಸಂ—ಬಹುರೂಪಂ** । ಪೇಶಶಬ್ದಕ್ಕೆ ರೂಪವೆಂದರ್ಥ. ಯಜ್ಞವು ನಾನಾರೂಪಗಳುಳ್ಳದರಿಂದ ಈ ವಿಶೇಷಣವಿದೆ. ಅವು ಯಾವವೆಂದರೆ, ಪುರೋಡಾಶ, ಪಶು, ಸೋಮ, ಹವಿಸ್ ಇತ್ಯಾದಿ ಹೋಮದ್ರವ್ಯಗಳೂ, ಏಕಾಹ, ಅಹೀನ, ಸತ್ತ್ರ, ಇತ್ಯಾದಿ ಯಜ್ಞಪ್ರಭೇದಗಳೂ ಇರುವುದರಿಂದ ಈ ವಿಶೇಷಣವಿದೆಯೆಂದು ಸಾಯಣರು ವಿವರಿಸಿದ್ದಾರೆ.

**ಸ ಏಷ ಯಜ್ಞಃ ಪಂಚವಿಧೋಽಗ್ನಿಹೋತ್ರಂ ದರ್ಶಪೂರ್ಣಮಾಸೌ ಚಾತುರ್ಮಾಸ್ಯಾನಿ ಪಶುಃ ಸೋಮಃ ॥** (ಐ. ಆ. ೨-೩)

ಯಜ್ಞವು ಪಂಚವಿಧಾತ್ಮಕವಾದುದು—ಅವು ಯಾವುವೆಂದರೆ, ಅಗ್ನಿಹೋತ್ರ, ದರ್ಶಪೂರ್ಣಮಾಸಗಳು, ಚಾತುರ್ಮಾಸ್ಯ, ಪಶುಯಜ್ಞ ಮತ್ತು ಸೋಮಯಜ್ಞ ಈ ರೀತಿ ಐದು ವಿಭಾಗಗಳು ಎಂದು ಐತರೇಯ ಬ್ರಾಹ್ಮಣವು ವಿಂಗಡಿಸಿದೆ. ಈ ಭೇದಗಳಲ್ಲಿಯೂ ಅವಾಂತರಪ್ರಭೇದಗಳಿರುವುದರಿಂದ **ಪುರುಪೇಶಸಂ** ಎಂಬ ವಿಶೇಷಣದಿಂದ ಇವೆಲ್ಲವನ್ನೂ ಸೇರಿಸಿ ವರ್ಣಿಸಿದೆ.

**ಅಭಿಶಸ್ತಿಚಾತನಃ**—ಅಭಿಶಸ್ತಿ ಶಬ್ದಕ್ಕೆ ಶಾಪ, ಆಪತ್ತು, ನಿಂದೆ ಮುಂತಾದ ಅನೇಕ ಅರ್ಥಗಳಿರುತ್ತವೆ. ಪ್ರಕೃತದಲ್ಲಿ **ಅರಾತಿ** ಎಂದರೆ ಶತ್ರುಗಳೆಂದರ್ಥಮಾಡಿದೆ. ಇಂತಹ ಶತ್ರುಗಳನ್ನು ನಾಶಮಾಡತಕ್ಕವನೆಂದರ್ಥ.

**ದಮೂನಾಃ**— **ದಮೂನಾ ದಮುಮನಾ ವಾ ದಾನಮನಾ ವಾ ದಾಂತಮನಾ ವಾ । ಅಪಿ ವಾ ದಮ ಇತಿ ಗೃಹನಾಮ ತನ್ಮನಾಃ ಸ್ಯಾತ್** ॥ ದಯಾಪೂರಿತವಾದ ಮನಸ್ಸುಳ್ಳವನಾದ್ದರಿಂದಾಗಲಿ, ಅಥವಾ ದಾನ ಮಾಡತಕ್ಕ ಮನಸ್ಸುಳ್ಳವನಾದ್ದರಿಂದಾಗಲಿ, ಅಥವಾ ಆತ್ಮಸಂಯಮದಲ್ಲಿ ನಿರತನಾಗಿರುವುದರಿಂದಾಗಲಿ ದಮೂನಾಃ ಎಂಬ ವಿಶೇಷಣವಿರುತ್ತದೆ ಅಥವಾ **ದಮ** ಶಬ್ದವು ಗೃಹದ ಪರ್ಯಾಯವಾಗಿರುವುದರಿಂದ ಗೃಹದಲ್ಲಿ ಆಸಕ್ತಿಯುಳ್ಳವನೆಂದೂ ಅರ್ಥವಾಗಬಹುದು (ನಿ. ೪-೩). ಆದುದರಿಂದಲೇ ಸಾಯಣರೂ ಸಹ **ದಾನಮನಾಃ, ದಮುಮನಾಃ, ದಾಂತಮನಾ ವಾ** ಎಂದು ವೈಕಲ್ಪಿಕವಾದ ಅರ್ಥವನ್ನು ಹೇಳಿದ್ದಾರೆ. ಅಗ್ನಿಪರವಾಗಿ ಯಾವ ಅರ್ಥವನ್ನು ಹೇಳಿದರೂ ಉಚಿತವಾಗಿರುತ್ತದೆ.



॥ ಸಂಹಿತಾಪಾಠಃ ॥

ಅಗ್ನೇ ಜರಸ್ವ ಸ್ವಪತ್ಯ ಆಯುನ್ಯೂರ್ಜಾ ಪಿನ್ವಸ್ವ ಸಮಿಷೋ ದಿದೀಹಿ ನಃ ।
ವಯಾಂಸಿ ಜಿನ್ವ ಬೃಹತಶ್ಚ ಜಾಗೃವ ಉಶಿಗ್ದೇವಾನಾಮಸಿ ಸುಕ್ರತುರ್ವಿಪಾಂ ॥ ೭ ॥

॥ ಪದಪಾಠಃ ॥

ಅಗ್ನೇ । ಜರಸ್ವ । ಸುऽಅಪತ್ಯೇ । ಆಯುನಿ । ಊರ್ಜಾ । ಪಿನ್ವಸ್ವ । ಸಂ । ಇಷಃ । ದಿದೀಹಿ । ನಃ ।
ವಯಾಂಸಿ । ಜಿನ್ವ । ಬೃಹತಃ । ಚ । ಜಾಗೃವೇ । ಉಶಿಕ್ । ದೇವಾನಾಂ । ಅಸಿ । ಸುऽಕ್ರತುಃ । ವಿಪಾಂ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಸ್ವಪತ್ಯೇ ಸುಪುತ್ರ ಆಯುನ್ಯಾಯುಷಿ ॥ ನಿಮಿತ್ತಸಪ್ತಮ್ಯೇಷಾ ॥ ಆಯುಷಿ ನಿಮಿತ್ತೇ ಜರಸ್ವ । ದೇವಾನ್ ಸ್ತುಹಿ । ಹೋತಾರಮಧಿಷ್ಠಾಯೋರ್ಜಾ ರಸೇನಾನ್ನೇನ ವಾ ಪಿನ್ವಸ್ವ । ದೇವಾನ್ಪ್ರೀಣಯ । ಸೋऽಸ್ಮಾಕಮಿಷಃ ಸಸ್ಯಾರ್ಥಂ ವೃಷ್ಟೀಃ ಸಂದಿದೀಹಿ । ಸಂದೀಪಯ । ವಯಾಂಸ್ಯನ್ನಾನಿ ಚ ॥ ವಯಃ ಕ್ಷುದ್ಮೇತ್ಯನ್ನನಾಮಸು ಪಾಠಾತ್ ॥ ಜಿನ್ವ । ದೇಹಿ । ಹೇ ಜಾಗೃವೇ ಸರ್ವದಾ ಜಾಗರಣಶೀಲ । ಬೃಹತೋ ಮಹತೋ ಯಜಮಾನಸ್ಯ ಜಿನ್ವೇತಿ ಸಂಬಂಧಃ । ಸುಕ್ರತುಃ ಶೋಭನಕರ್ಮಾ ಶೋಭನಯಜ್ಞೋ ವಾ ತ್ವಂ ವಿಪಾಂ ಮೇಧಾವಿನಾಂ ದೇವಾನಾಮುಶಿಕ್ ಕಾಂತೋऽಸಿ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಸ್ವಪತ್ಯೇ**—ಸತ್ಪುತ್ರಾರ್ಥವಾಗಿಯೂ । **ಆಯುನಿ**—ದೀರ್ಘವಾದ ಆಯುಸ್ಸಿನ ನಿಮಿತ್ತವಾಗಿಯೂ । **ಜರಸ್ವ**—ದೇವತೆಗಳನ್ನು ಸ್ತುತಿಸು । **ಊರ್ಜಾ**--ಹವಿಸ್ಸಿನರೂಪವಾದ ಅನ್ನದಿಂದ । **ಪಿನ್ವಸ್ವ**—ಅವರನ್ನು ತೃಪ್ತಿಗೊಳಿಸು । **ನಃ**—ನಮಗೆ । **ಇಷಃ**—ಅನ್ನಸಾಧನವಾದ ಸಸ್ಯಾದಿಗಳನ್ನು

(ವೃಷ್ಟಿಯನ್ನು) । **ಸಂ ದಿದೀಹಿ** – ಒದಗಿಸಿಕೊಡು । **ಜಾಗೃವೇ**—(ಸರ್ವದಾ) ಪ್ರಬುದ್ಧನಾದ ಎಲೈ ಅಗ್ನಿಯೇ । **ಬೃಹತೇ**—ಮಹತ್ತ್ವದಿಂದ ಕೂಡಿದ ಯಜಮಾನನಿಗೆ । **ವಯಾಂಸಿ ಚ**—ಅನ್ನಗಳನ್ನೂ । **ಜಿನ್ವ**—ಒದಗಿಸಿಕೊಡು । **ಸುಕ್ರತುಃ**—ಶ್ರೇಷ್ಠವಾದ ಕರ್ಮಯುಕ್ತನಾದ ನೀನು । **ವಿಪ್ರಾಂ**—ಮೇಧಾವಿಗಳಾದ । **ದೇವಾನಾಂ**—ದೇವತೆಗಳಿಗೆ । **ಉಶಿಕ್**—ಪ್ರಿಯನಾಗಿ । **ಅಸಿ**—ಆಗಿದ್ದೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಸತ್ಪುತ್ರಾರ್ಥವಾಗಿಯೂ, ದೀರ್ಘವಾದ ಆಯುಸ್ಸಿನ ನಿಮಿತ್ತವಾಗಿಯೂ ದೇವತೆಗಳನ್ನು ಸ್ತುತಿಸು. ಹವಿಸ್ಸಿನರೂಪವಾದ ಅನ್ನದಿಂದ ಅವರನ್ನು ತೃಪ್ತಿಗೊಳಿಸು. ನಮಗೆ ಅನ್ನಸಾಧನವಾದ ವೃಷ್ಟಿಯನ್ನೂ, ಸಸ್ಯಾದಿಗಳನ್ನೂ ಒದಗಿಸು. ಸರ್ವದಾ ಪ್ರಬುದ್ಧನಾದ ಎಲೈ ಅಗ್ನಿಯೇ, ಮಹದ್ಗುಣಗಳಿಂದ ಕೂಡಿದ ಯಜಮಾನನಿಗೆ ಅನ್ನಗಳನ್ನು ಒದಗಿಸು. ಶ್ರೇಷ್ಠವಾದ ಕರ್ಮಗಳಿಂದ ಯುಕ್ತನಾದ ನೀನು ಮೇಧಾವಿಗಳಾದ ದೇವತೆಗಳಿಗೆ ಪ್ರಿಯನಾಗಿ ಆಗಿದ್ದೀಯೆ.

English Translation.

Agni, praise (the gods that we may enjoy) good offspring and long life: propitiate them by libations; bestow upon us plentiful crops: ever vigilant, grant food to the respectable (institutor of this ceremony), for you are the desired of the gods, the object of the pious acts of the devout.

॥ ವಿಶೇಷವಿಷಯಗಳು ॥

**ಊರ್ಜಾ—ರಸೇನ ಅನ್ನೇ ವಾ** । ಶಕ್ತ್ಯಾತ್ಮಕವಾದ ರಸದಿಂದಾಗಲಿ ಅಥವಾ ಅನ್ನದಿಂದಾಗಲಿ ಎಂದರ್ಥ. **ಊರ್ಜ**ಪದವು ನಿರುಕ್ತದಲ್ಲಿ **ಅನ್ನ**ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) **ಊರ್ಜಂ ಬಲಂ, ಬಲಪ್ರಾಣನಸಮರ್ಥಮನ್ನಂ** । ಶಕ್ತಿಯನ್ನು ವೃದ್ಧಿಗೊಳಿಸತಕ್ಕ ಅನ್ನವೆಂದರ್ಥ. ಕೆಲವು ಕಡೆಗಳಲ್ಲಿ ಶಕ್ತಿದಾಯಕವಾದ ಅನ್ನವೆಂದು ಶಕ್ತಿಯಲ್ಲಿಯೇ ತಾತ್ಪರ್ಯ. ನಿರುಕ್ತಕಾರರು,

> **ದೇವೀ ಊರ್ಜಾಹುತೀ ಇಷಮೂರ್ಜಮನ್ಯಾವಕ್ಷತ್ ಸಗ್ಧಿಂ ಸಪೀತಿಮನ್ಯಾ ನವೇನ ಪೂರ್ವಂ ದಯಮಾನಾಃ ಸ್ಯಾಮ ಪುರಾಣೇನ ನವಂ ತಾಮೂರ್ಜಮೂರ್ಜಾಹುತೀ ಊರ್ಜಯಮಾನೇ** ॥
>
> (ವಾ. ಸಂ. ೨೮-೧೬)

ಎಂಬ ವಾಕ್ಯವನ್ನುದಾಹರಿಸಿ **ಊರ್ಜ** ಶಬ್ದಕ್ಕೆ ಒಂದುಸಲ ಅನ್ನವೆಂದೂ, ಇನ್ನೊಂದುಸಲ ಶಕ್ತಿಯೆಂದೂ ಒಂದೇ ವಾಕ್ಯದಲ್ಲಿ ಎರಡು ಅರ್ಥಗಳಿರುವಂತೆ ಪ್ರಯೋಗದಲ್ಲಿರುವುದನ್ನು ತೋರಿಸಿದ್ದಾರೆ.

> **ಯೋ ವೈತಾಮುಕ್ಷಿತಿಂ ವೇದ ಸೋಽನ್ನಮತ್ತಿ ಪ್ರತೀಕೇನ । ಸ ದೇವಾನಪಿ ಗಚ್ಛತಿ ಸ ಊರ್ಜಮುಪಜೀವತಿ** ॥
>
> (ಬೃ. ಉ. ೧-೫-೧)

ಎಂಬಲ್ಲಿ **ಅನ್ನ, ಊರ್ಜ** ಎಂಬ ಎರಡು ಪದಗಳನ್ನೂ ಉಪಯೋಗಿಸಿರುವುದರಿಂದ ಅಲ್ಲಿ ಊರ್ಜ ಶಬ್ದಕ್ಕೆ ಕೇವಲ ಶಕ್ತಿಯೆಂದೇ ಅರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಶಕ್ತಿಪೋಷಕವಾದ ಅನ್ನವೆಂದರ್ಥ.

ಪ್ರಕೃತವಾದ ಋಕ್ಕಿನಲ್ಲಿ ಅಗ್ನಿಯನ್ನು ಅನ್ನದಾತನೆಂದೂ, ಜಾಗೃವಿಯೆಂದೂ ಸ್ತುತಿಸಿದೆ. ಅಗ್ನಿಯು ಸಹಸ್ರಚಕ್ಷುಸ್ಸುಳ್ಳವನೆಂದೂ, ದೇವಮಾನವಾದಿ ಸಕಲ ಸ್ವರೂಪಗಳನ್ನೂ ಯಾವಾಗಲೂ ತಿಳಿಯುವುದರಿಂದಲೂ **ಜಾಗೃವಿಃ** ಎಂಬ ವಿಶೇಷಣವಿರುತ್ತದೆ.

**ಅಗ್ನೇ ಸಹಸ್ರಾಕ್ಷೇತಿ । ಹಿರಣ್ಯಶಕಲೈರ್ವಾ ಏಷ ಸಹಸ್ರಾಕ್ಷಃ....................ತ್ವಗ್ಂ ಸಾಹಸ್ರಸ್ಯ ರಾಯ ಈಶಿಷ್ಯಇತಿ ತ್ವಗ್ಂ ಸರ್ವಸ್ಯೈ ರಯ್ಯಾ ಈಶಿಷೇ ॥**

(ಶ. ಬ್ರಾ. ೯-೨-೩-೩೨)

ಎಲೈ ಅಗ್ನಿಯೇ, ನೀನು ಸಹಸ್ರಾಕ್ಷನು. ದೇವಮಾನವಾದಿಗಳ ಸಕಲ ವ್ಯವಹಾರಗಳನ್ನೂ ಸರ್ವದಾ ನೋಡುತ್ತಿರುವವನು. ಸಕಲ ಅನ್ನಕ್ಕೂ ಸ್ವಾಮಿಯು. ಅನ್ನದಾತನು. ಶಕ್ತಿಸ್ವರೂಪನು ಇತ್ಯಾದಿಯಾಗಿ ಅಗ್ನಿಯ ಗುಣಗಳನ್ನು ವರ್ಣಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಸ್ತುತಿಸಿರುವ ಅಂಶವನ್ನೇ ವರ್ಣಿಸುತ್ತಾ, ಶತಪಥದಲ್ಲಿಯೂ ತೈತ್ತಿರೀಯ ಸಂಹಿತಾದಿಗಳಲ್ಲಿಯೂ ಅಗ್ನಿಯ ಸಂಪತ್ಪ್ರದತ್ವಶಕ್ತಿಯನ್ನು ಈ ರೀತಿ ಸ್ತುತಿಸಿದೆ.

**ಅಥ ಯದ್ವಸುವನೇ ವಸುಧೇಯಸ್ಯೇತಿ ಯಜತಿ। ಅಗ್ನಿರ್ವೈ ವಸುವನಿರಿಂದ್ರೋ ವಸುಧೇಯಃ।**

(ಶ. ಬ್ರಾ. ೧-೮-೨-೧೬).

ಅಗ್ನಿಯೇ ವಸುವಂತನಾದುದರಿಂದ **"ವಸುವನೇ ವಸುಧೇಯಸ್ಯ"** ಎಂಬ ಮಂತ್ರವನ್ನು ಪಠಿಸಿ ಆಹುತಿಯನ್ನರ್ಪಿಸಬೇಕು. ಅಗ್ನಿಯು ವಸುವಿನ ಅಧಿಪತಿಯು. ಆದುದರಿಂದ ಅಗ್ನಿಯು ವಸುವಿನ ದಾತೃವು. ಇಂದ್ರನು ಪ್ರತಿಗೃಹೀತೃವು ಎಂದು ಅಗ್ನಿಯನ್ನು ಸ್ತುತಿಸಿದೆ. ಮತ್ತು ಇದೇ ಅಂಶವು ತೈತ್ತಿರೀಯಸಂಹಿತೆಯಲ್ಲಿಯೂ ಪ್ರಶಂಸಿತವಾಗಿದೆ (ತೈ. ಸಂ. ೨-೬-೯).

**ಸುಕ್ರತುಃ— ಸುಕ್ರತು**ಶಬ್ದವು ಶ್ರೇಷ್ಠವಾದ ಶಕ್ತಿಯುಳ್ಳವನೆಂದೂ, ಶ್ರೇಷ್ಠವಾದ ಧನವುಳ್ಳವನೆಂದೂ ಅಥವಾ ಶ್ರೇಷ್ಠವಾದ ಕರ್ಮವುಳ್ಳವನೆಂದೂ ಅರ್ಥವಾಗುತ್ತದೆ ಆದರೆ, ಕ್ರತು ಶಬ್ದವು ಕ್ರಿಯಾಪರ್ಯಾಯವಾದ ಪದವೇ ಆದುದರಿಂದ ಶ್ರೇಷ್ಠವಾದ ಕರ್ಮವೆಂಬರ್ಥವೇ ಅಧಿಕವಾಗಿರುತ್ತದೆ. ಪ್ರಕೃತದಲ್ಲಿ ಉತ್ತಮವಾದ ಕರ್ಮಕರ್ತನೆಂದು ಅಗ್ನಿವಿಶೇಷಣವಾಗಿದೆ.



॥ ಸಂಹಿತಾಪಾಠಃ ॥

ವಿಶ್ಪತಿಂ ಯುಹ್ವಮತಿಥಿಂ ನರಃ ಸದಾ ಯಂತಾರಂ ಧೀನಾಮುಶಿಜಂ ಚ ವಾಘತಾಂ।
ಅಧ್ವರಾಣಾಂ ಚೇತನಂ ಜಾತವೇದಸಂ ಪ್ರ ಶಂಸಂತಿ ನಮಸಾ ಜೂತಿಭಿರ್ವೃಧೇ ॥

॥ ಪದಪಾಠಃ ॥

ವಿಶ್ಪತಿಂ । ಯಹ್ವಂ । ಅತಿಥಿಂ । ನರಃ । ಸದಾ । ಯಂತಾರಂ । ಧೀನಾಂ । ಉಶಿಜಂ । ಚ । ವಾಘತಾಂ ।

ಅಧ್ವರಾಣಾಂ । ಚೇತನಂ । ಜಾತ಼ವೇದಸಂ । ಪ್ರ । ಶಂಸಂತಿ । ನಮಸಾ । ಜೂತಿಽಭಿಃ । ವೃಧೇ ॥ ೮ ॥

॥ ಸಾಯಣಭಾಷ್ಯಂ ॥

ನರೋ ನೇತಾರಃ ಸ್ತೋತಾರೋ ವಾ ವಿಶ್ಪತಿಂ ವಿಶಾಂ ಮನುಷ್ಯಾಣಾಂ ಪತಿಂ ವಿಶ್ವಸ್ಯ ಪತಿಮಿತಿ ವಾ ಯಹ್ವಂ ಮಹಾಂತಮತಿಥಿಂ ಸರ್ವಸ್ಯಾತಿಥಿಭೂತಂ ಧೀನಾಂ ಬುದ್ಧೀನಾಂ ಕರ್ಮಣಾಂ ವಾ ಯಂತಾರಂ ನಿಯಂತಾರಂ ವಾಘತಾಮೃತ್ವಿಜಾಂ ಚೋಶಿಜಂ ಕಾಂತಂ ಮನೋಜ್ಞಮಧ್ವರಾಣಾಂ ಯಾಗಾನಾಂ ಚೇತನಂ ಪ್ರಜ್ಞಾಪಕಂ ಜೂತಿಭಿರ್ವೇಗೈರ್ಯುಕ್ತಂ ಜಾತವೇದಸಮಗ್ನಿಂ ವೃಧೇ ವೃದ್ಧಯೇ ಸಮೃದ್ಧಯೇ ನಮಸಾ ನಮಸ್ಕಾರೇಣ ಸ್ತುತಿಭಿಶ್ಚ ಪ್ರಶಂಸತಿ । ಪ್ರಶಂಸಾಂ ಕುರ್ವಂತಿ ॥

॥ ಪ್ರತಿಪದಾರ್ಥ ॥

**ನರಃ**—ಯಜ್ಞಕ್ಕೆ ನೇತೃಗಳಾದ ಋತ್ವಿಗಾದಿಗಳು । **ವಿಶ್ಪತಿಂ**—ಪ್ರಜೆಗಳಿಗೆಲ್ಲಾ ಪ್ರಭುವಾದವನೂ । **ಯಹ್ವಂ**—ಪೂಜ್ಯನೂ । **ಅತಿಥಿಂ**—ಎಲ್ಲರಿಗೂ ಅತಿಥಿಭೂತನೂ । **ಧೀನಾಂ**—ಕರ್ಮಗಳಿಗೆಲ್ಲಾ । **ಯಂತಾರಂ**—ನಿಯಂತೃವೂ । **ವಾಘತಾಂ ಚ**—ಋತ್ವಿಕ್ಕುಗಳಿಗೆಲ್ಲಾ । **ಉಶಿಜಂ**—ಪ್ರೀತಿಪಾತ್ರನೂ । **ಅಧ್ವರಾಣಾಂ**—ಯಾಗಗಳಿಗೆ । **ಚೇತನಂ**—ಪ್ರಜ್ಞಾಪಕನೂ । **ಸದಾ**—ಯಾವಾಗಲೂ । **ಜೂತಿಭಿಃ**—ವೇಗಗಳಿಂದ. (ಶಕ್ತಿಯಿಂದ) ಕೂಡಿದವನೂ । **ಜಾತವೇದಸಂ**—ಜಾತಪ್ರಜ್ಞನೂ ಆದ ಅಗ್ನಿಯನ್ನು । **ವೃಧೇ**—ಸಂಪತ್ಸಮೃದ್ಧ್ಯರ್ಥವಾಗಿ । **ನಮಸಾ**—ನಮಸ್ಕಾರಪೂರ್ವಕವಾಗಿ । **ಪ್ರಶಂಸಂತಿ**—ಪ್ರಶಂಸಿಸುತ್ತಾರೆ.

॥ ಭಾವಾರ್ಥ ॥

ಯಜ್ಞಕ್ಕೆ ನೇತೃಗಳಾದ ಋತ್ವಿಗಾದಿಗಳು, ಪ್ರಜೆಗಳಿಗೆಲ್ಲಾ ಪ್ರಭುವಾದವನೂ, ಪೂಜ್ಯನೂ, ಎಲ್ಲರಿಗೂ ಅತಿಥಿಭೂತನೂ, ಕರ್ಮಗಳಿಗೆಲ್ಲಾ ನಿಯಂತೃವೂ, ಋತ್ವಿಕ್ಕುಗಳಿಗೆಲ್ಲಾ ಪ್ರೀತಿಪಾತ್ರನೂ, ಸರ್ವದಾ ಶಕ್ತಿಯಿಂದ ಕೂಡಿದವನೂ, ಜಾತಪ್ರಜ್ಞನೂ ಆದ ಅಗ್ನಿಯನ್ನು ಸಂಪತ್ಸಮೃದ್ಧ್ಯರ್ಥವಾಗಿ ನಮಸ್ಕಾರವನ್ನರ್ಪಿಸಿ ಸ್ತುತಿಸುತ್ತಾರೆ.

## English Translation.

The leaders (of holy rites) praise with prostration, for (the sake of) increase, the mighty lord of people, the guest (of men), regulator eternally of acts, the desired of the priests, the exposition of sacrifices, Jatavedas, endowed with (divine) energies.

॥ ವಿಶೇಷವಿಷಯಗಳು ॥

**ಜಾತವೇದಸಂ**—ಉತ್ಪನ್ನವಾದುದೆಲ್ಲವನ್ನೂ ತಿಳಿಯುವುದರಿಂದ ಅಗ್ನಿಯು ಜಾತವೇದಸ್ಸೆಂದು ಪ್ರಸಿದ್ಧನಾಗಿದ್ದಾನೆ. ಇದಕ್ಕೆ ಐತಿಹಾಸಿಕವಾದ ಕಥೆಯೊಂದಿದೆ—

**ಪ್ರಜಾಪತಿಃ ಪ್ರಜಾ ಅಸೃಜತ ತಾಃ ಸೃಷ್ಟಾಃ ಪರಾಚ್ಯ ಏವಾಯನ್ನ ವ್ಯಾವರ್ತಂತ ತಾ ಅಗ್ನಿನಾ ಪರ್ಯಗಚ್ಛತ್ತಾ ಅಗ್ನಿಮುಪಾವರ್ತಂತ ತಮೇವಾದ್ಯಾಪ್ಯುಪಾವೃತ್ತಾಃ ಸೋಽಬ್ರವೀಜ್ಜಾತಾ ವೈ ಪ್ರಜಾ ಅನೇನಾವಿದಮಿತಿ ಯದಬ್ರವೀಜ್ಜಾತಾ ವೈ ಪ್ರಜಾ ಅನೇನಾವಿದಮಿತಿ ತಜ್ಜಾತವೇದಸ್ಯಮಭವತ್ತಜ್ಜಾತವೇದಸೋ ಜಾತವೇದಸ್ತ್ವಂ ।**

(ಐ ಬ್ರಾ. ೧೩–೩೬)

ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿದನು. ಸೃಷ್ಟವಾದ ಆ ಪ್ರಜೆಗಳೆಲ್ಲವೂ ತಪ್ಪಿಸಿಕೊಂಡವು. ಆಗ ಅವನ್ನು ಅಗ್ನಿಯಿಂದ ಸುತ್ತುವರಿಯುವಂತೆ ಮಾಡಿದನು. ಅವೆಲ್ಲವೂ ಅಗ್ನಿಯನ್ನು ಸಮೀಪಿಸಿದವು. ಆಗ ಅವನು "ನಾನು ಪ್ರಜಾಪತಿಯಿಂದ ಜಾತವಾದ (ಸೃಷ್ಟವಾದ) ಪ್ರಜೆಗಳನ್ನು ತಿಳಿದಿದ್ದೇನೆ" ಎಂದನು. ಜಾತವಾದವುಗಳನ್ನು ತಿಳಿದಿದ್ದುದರಿಂದಲೇ ಅಗ್ನಿಗೆ ಜಾತವೇದಸ್ ಎಂಬ ಹೆಸರು ಪ್ರಸಿದ್ಧವಾಯಿತು.

**ತದ್ವಿಂದತೇ ತದ್ಯಜ್ಜಾತಂ ಜಾತಂ ವಿಂದತೇ ತಸ್ಮಾಜ್ಜಾತವೇದಾಃ ।**

(ಶ. ಬ್ರಾ. ೯–೫–೧–೬೮)

ಉತ್ಪನ್ನವಾದ ಸಕಲವನ್ನೂ ಹುಟ್ಟುವಾಗಲೇ ಅಗ್ನಿಯು ತಿಳಿಯುವುದರಿಂದ ಜಾತವೇದಸ್ಸೆಂಬ ಹೆಸರು ಪ್ರಸಿದ್ಧವಾಯಿತೆಂದು ಶತಪಥಬ್ರಾಹ್ಮಣದಲ್ಲೂ ಉಕ್ತವಾಗಿದೆ. **ವಿಂದತೇ** ಎಂಬ ಪದಕ್ಕೆ ಮೇಲಿನ ವಾಕ್ಯದಲ್ಲಿ ವ್ಯಾಪಿಸುತ್ತಾನೆ ಎಂಬ ಅರ್ಥವನ್ನೂ ಹೇಳಿರುವುದರಿಂದ ಉತ್ಪನ್ನವಾಗುವಾಗಲೇ ಸಕಲವನ್ನೂ ವ್ಯಾಪಿಸುವವನಾದುದರಿಂದ **ಜಾತವೇದಸ್** ಎಂಬ ಹೆಸರು ಎಂದು ಹೇಳಬಹುದು. ನಿರುಕ್ತಕಾರರು ಇದರ ಜೊತೆಗೆ ಇನ್ನೂ ಕೆಲವು ನಿರ್ವಚನಗಳನ್ನೂ ತಿಳಿಸಿದ್ದಾರೆ.

**ಜಾತಾನಿ ವೇದ । ಜಾತಾನಿ ವೈನಂ ವಿದುಃ । ಜಾತೇ ಜಾತೇ ವಿದ್ಯತ ಇತಿ ವಾ । ಜಾತವಿತ್ತೋ ವಾ ಜಾತಧನೋ ವಾ ಜಾತವಿದ್ಯೋ ವಾ ಜಾತಜ್ಞಾನಃ ।** (ನಿ. ೭–೧೯)

ಹುಟ್ಟಿದಕೂಡಲೇ ಸಕಲ ವಸ್ತುಗಳ ಜ್ಞಾನವುಳ್ಳವನು, ಎಲ್ಲಾ ಭೂತಗಳಲ್ಲಿಯೂ ವ್ಯಾಪಿಸಿರುವವನು ಅಥವಾ ಸಕಲ ಸಂಪತ್ತುಳ್ಳವನು ಅಥವಾ ಎಲ್ಲವನ್ನೂ ತಿಳಿಯುವ ಪ್ರಜ್ಞೆಯುಳ್ಳವನು ಎಂದು ಈ ಪದಕ್ಕೆ ಅರ್ಥವನ್ನು ವಿವರಿಸಿದ್ದಾರೆ.

(ನಿ. ೭–೧೯)

**ಭೂತಾನಿ ವೇದ ಯಜ್ಜಾತೋ ಜಾತವೇದಾಥ ಕಥ್ಯತೇ ।**
**ಯಚ್ಚೈಷ ಜಾತವಿದ್ಯೋಽಭೂತ್ ವಿತ್ತಂ ಜಾತೋಽಧಿವೇತ್ತಿ ವಾ ॥**
**ವಿದ್ಯತೇ ಸರ್ವಭೂತೈರ್ಹಿ ಯದ್ವಾ ಜಾತಃ ಪುನಃಪುನಃ ।**
**ತೇನೈಷ ಮಧ್ಯಭಾಗೇಂದ್ರೋ ಜಾತವೇದಾ ಇತಿ ಸ್ತುತಃ ॥** (ಬೃ. ದೇ. ೨–೩೦, ೩೧)

ಹುಟ್ಟಿದೊಡನೆಯೇ ಸಮಸ್ತವನ್ನೂ ಅರಿಯುವುದರಿಂದಾಗಲಿ, ಅವನೇ ಜ್ಞಾನದ ಉತ್ಪತ್ತಿಗೆ ಆಧಾರನಾಗಿರುವುದರಿಂದಾಗಲಿ, ಮೇಲೆ ಹೇಳಿದಂತೆ ಉತ್ಪನ್ನವಾದಾಗಲೇ ಸಕಲ ಧನವನ್ನೂ ತಿಳಿದು ಹೊಂದುವುದರಿಂದಲಾಗಲಿ, ತನ್ನ

ಉತ್ಪತ್ತಿಕಾಲದಲ್ಲೇ ಸಕಲ ಪ್ರಜೆಗಳಿಂದ ತಿಳಿಯಲ್ಪಡುವವನಾದುದರಿಂದಲಾಗಲಿ, ಮಧ್ಯಲೋಕದ ದೇವತೆಯಾದ ಇಂದ್ರನಂತೆ ಅಗ್ನಿಯೂ ಸಹ ಜಾತವೇದಸ್ಸು ಎಂದು ಪ್ರಶಂಸಿತನಾಗಿದ್ದಾನೆ ಎಂದು ಬೃಹದ್ದೇವತೆಯ ವಿವರಣೆಯಿದೆ.

**ಜೂತಿಭಿಃ—ವೇಗೈರ್ಯುಕ್ತಂ ।** ವೇಗಗಳಿಂದ ಅಥವಾ ಶಕ್ತಿಗಳಿಂದ ಕೂಡಿದ ಎಂದು ತಾತ್ಪರ್ಯವನ್ನು ಹೇಳಿದೆ. ಜೂತಿಶಬ್ದಕ್ಕೆ ಕೆಲವೆಡೆಗಳಲ್ಲಿ ಪ್ರಜ್ಞೆಯೆಂದೂ ಅರ್ಥಮಾಡಿದೆ. ಅಲ್ಲದೇ,

**“ ಸಂಜ್ಞಾನಮಾಜ್ಞಾನಂ...........ಮನೀಷಾ ಜೂತಿಃ ಸ್ಮೃತಃ ”**
(ಐ. ಉ. ೩-೨).

ಎಂದು ಬ್ರಹ್ಮಜ್ಞಾನವನ್ನು ಪಡೆಯತಕ್ಕ ಆತ್ಮನ ಗುಣಗಳನ್ನು ವರ್ಣಿಸುವಾಗ **ಜೂತಿ** ಎಂಬ ಒಂದು ಗುಣವೆಂದು ಹೇಳಿದೆ. ಅದನ್ನು ಶಂಕರಾಚಾರ್ಯರು ವಿವರಿಸುತ್ತಾ **ರುಜಾದಿದುಃಖತ್ವಾಭಾವಃ ।** ಮಾನಸಿಕವಾದ ಯಾವ ಕಲ್ಮಷವೂ ಇಲ್ಲದಿರುವ ಗುಣವೆಂದು ತಿಳಿಸಿದ್ದಾರೆ. ಪ್ರಾಯಃ ಕಲ್ಮಷರಹಿತವಾದ ಮನಸ್ಸು ವೇಗದಿಂದ ಜ್ಞಾನಸಾಧನೆಗೆ ಪ್ರಯತ್ನಿಸುತ್ತದೆ ಎಂದು ತಾತ್ಪರ್ಯವಿರಬಹುದು.

**ಮಖಸ್ಯ ತೇ ತವಿಷಸ್ಯ ಪ್ರ ಜೂತಿಮಿಯರ್ಮಿ ವಾಚಮಮೃತಾಯ ಭೂಷನ್ ।**
**ಇಂದ್ರ ಕ್ಷಿತೀನಾಮಸಿ ಮಾನುಷೀಣಾಂ ವಿಶಾಂ ದೈವೀನಾಮುತ ಪೂರ್ವಯಾವಾ ॥**
(ಋ. ಸಂ. ೩-೩೪-೨)

ಎಲೈ ಇಂದ್ರನೇ, ಪ್ರಭಾವಪೂರಿತನೂ, ಪೂಜ್ಯನೂ ಆದ ನಿನ್ನನ್ನುದ್ದೇಶಿಸಿ ಮನಸ್ಸಿನಿಂದ ಪ್ರೇರಿತವಾದ ಈ ಸ್ತುತಿಯನ್ನರ್ಪಿಸುತ್ತೇನೆ ಎಂಬ ಪ್ರಾರ್ಥನೆಯುಳ್ಳ ಈ ಋಕ್ಕಿನಲ್ಲಿಯೂ ಸಹ ಮೇಲೆ ಉದಾಹೃತವಾದ ಐತರೇಯ ಉಪನಿಷತ್ತಿನ ವಾಕ್ಯದಲ್ಲಿ ಹೇಳಿರುವ ಅರ್ಥವೇ ಇರುತ್ತದೆ. **ಜೂತಿಂ** ಎಂಬುದಕ್ಕೆ ಸಾಯಣರು **ಮನಸಾ ಪ್ರೇರಿತಾಂ** ಎಂದರ್ಥ ಮಾಡಿದ್ದಾರೆ. ಮಾನಸಿಕವಾದುದಾಗಲಿ ಅಥವಾ ಭೌತಿಕವಾದುದಾಗಲಿ, ಈ ಪದದ ಪ್ರಯೋಗವಿರುವಾಗ ಕ್ರಿಯೆಯ ವೇಗವು ತಿಳಿಯುತ್ತದೆ.

॥ ಸಂಹಿತಾಪಾಠಃ ॥

ವಿಭಾವಾ ದೇವಃ ಸುರಣಃ ಪರಿ ಕ್ಷಿತೀರಗ್ನಿರ್ಬಭೂವ ಶವಸಾ ಸುಮದ್ರಥಃ ।
ತಸ್ಯ ವ್ರತಾನಿ ಭೂರಿಪೋಷಿಣೋ ವಯಮುಪ ಭೂಷೇಮ ದಮ ಆ ಸುವೃಕ್ತಿಭಿಃ ॥

॥ ಪದಪಾಠಃ ॥

ವಿಭಾಽವಾ । ದೇವಃ । ಸುಽರಣಃ । ಪರಿ । ಕ್ಷಿತೀಃ । ಅಗ್ನಿಃ । ಬಭೂವ । ಶವಸಾ । ಸುಮತ್ಽರಥಃ ।
ತಸ್ಯ । ವ್ರತಾನಿ । ಭೂರಿಽಪೋಷಿಣಃ । ವಯಂ । ಉಪ । ಭೂಷೇಮ । ದಮೇ । ಆ । ಸುವೃಕ್ತಿಽಭಿಃ ॥ ೯ ॥

॥ ಸಾಯಣಭಾಷ್ಯಂ ॥

ವಿಭಾವಾ ದೀಪ್ತಿಮಾನ್ :ದೇವಃ ಸ್ತೂಯಮಾನಃ ಸುರಣಃ । ಅತ್ರ ವರ್ಣಲೋಪಶ್ಛಾಂದಸಃ । ಶೋಭನಂ ರಮಯತೀತಿ ಸುರಮಣಃ । ಸುಮದ್ರಥಃ ಶೋಭನರಥೋಽಗ್ನಿಃ ಶವಸಾ ಬಲೇನ ಕ್ಷಿತೀಃ ಸರ್ವಾಃ ಪ್ರಜಾಃ ಪರಿಬಭೂವ । ಪರಿತೋ ಗೃಹ್ಣಾತಿ । ಅತ್ರ ಭವತೇರುಪಸರ್ಗವಶಾತ್ ಪರಿಗ್ರಹಾರ್ಥತ್ವಂ । ಭೂರಿಪೋಷಿಣೋ ಬಹೂನಾಂ ಪೋಷಯಿತುಃ ಪಾಲಯಿತುರ್ದಮೇ ಯಜ್ಞಗೃಹೇ । ದಮ ಇತಿ ಗೃಹನಾಮಸು ಪಾಠಾತ್ । ನಿವಸತಸ್ತಸ್ಯಾಗ್ನೇರ್ವ್ರತಾನಿ ಕರ್ಮಾಣಿ ವಯಂ ಸುವೃಕ್ತಿಭಿಃ ಸ್ತೋತ್ರೈರುಪ. ಭೂಷೇಮ । ಉಪಭೂಷಯಾಮಃ । ಪ್ರಕಾಶಯಾಮಃ ॥

॥ ಪ್ರತಿಪದಾರ್ಥ ॥

**ವಿಭಾವಾ**—ಪ್ರಕಾಶಮಾನನೂ । **ದೇವಃ**—ದೇವತಾತ್ಮನೂ । **ಸುರಣಃ**—ಅತಿಶಯವಾಗಿ ರಮಿಸುವವನೂ । **ಸುಮದ್ರಥಃ**—ಶ್ರೇಷ್ಠವಾದ ರಥದಿಂದ ಕೂಡಿದವನೂ ಆದ । **ಅಗ್ನಿಃ**—ಅಗ್ನಿಯು । **ಶವಸಾ**—ಸ್ವಶಕ್ತಿಯಿಂದ । **ಕ್ಷಿತೀಃ**—ಸಕಲವಾದ ಪ್ರಜೆಗಳನ್ನೂ । **ಪರಿ ಬಭೂವ**—ಸರ್ವತ್ರ ಪರಿಗ್ರಹಿಸುತ್ತಾನೆ । **ಭೂರಿಪೋಷಿಣಃ**—ಅನೇಕರನ್ನು ಪಾಲಿಸುವವನೂ । **ದಮೇ**—ಯಜ್ಞಗೃಹದಲ್ಲಿ ವಾಸಿಸುವವನೂ ಆದ । **ತಸ್ಯ**—ಆ ಅಗ್ನಿಯ । **ವ್ರತಾನಿ**—ಕರ್ಮಗಳನ್ನು । **ವಯಂ**—ನಾವು । **ಸುವೃಕ್ತಿಭಿಃ**—ಸ್ತೋತ್ರಗಳಿಂದ । **ಉಪ ಭೂಷೇಮ**—ಅಲಂಕರಿಸಿ ಪ್ರಕಾಶಿಸುವಂತೆ ಮಾಡೋಣ.

॥ ಭಾವಾರ್ಥ ॥

ಪ್ರಕಾಶಮಾನನೂ, ದೇವತಾತ್ಮನೂ, ಅತಿಶಯವಾಗಿ ರಮಿಸುವವನೂ, ಶ್ರೇಷ್ಠವಾದ ರಥದಿಂದ ಕೂಡಿದವನೂ ಆದ ಅಗ್ನಿಯು ಸ್ವಶಕ್ತಿಯಿಂದ ಸಕಲವಾದ ಪ್ರಜೆಗಳನ್ನೂ ಸರ್ವತ್ರ ಪರಿಗ್ರಹಿಸುತ್ತಾನೆ. ಅನೇಕರನ್ನು ಪಾಲಿಸುವವನೂ, ಯಜ್ಞಗೃಹದಲ್ಲಿ ವ್ಯಾಪಿಸುವವನೂ ಆದ ಆ ಅಗ್ನಿಯ ಕರ್ಮಗಳನ್ನು ನಾವು ಸ್ತೋತ್ರಗಳಿಂದ ಅಲಂಕರಿಸಿ ಪ್ರಕಾಶಿಸುವಂತೆ ಮಾಡೋಣ.

## English Translation.

The resplendent and adorable Agni, riding in an auspicious chariot, has comprehended the whole earth by his vigour: let us glorify with fit praises, the acts of that cherisher of multitudes in his own abode.

॥ ವಿಶೇಷವಿಷಯಗಳು ॥

**ಸುಮದ್ರಥಃ—ಸುಮತ್ಸ್ವಯಮಿತ್ಯರ್ಥಃ** (ನಿ. ೬–೨೨) ನಿರುಕ್ತಕಾರರು ಈ ಪದಕ್ಕೆ ಸ್ವಯಂ ಎಂದರೆ ಇತರ ಪ್ರೇರಣೆಯಿಲ್ಲದೇ ತಾನಾಗಿಯೇ ಪ್ರವರ್ತಿಸುವುದು ಎಂದರ್ಥಮಾಡಿದ್ದಾರೆ. ಈ ಪದಕ್ಕೆ ಕಲ್ಯಾಣಾತ್ಮಕವಾದುದು, ಶೋಭನಾತ್ಮಕವಾದುದು ಎಂಬರ್ಥದಲ್ಲಿಯೂ ಪ್ರಯೋಗವಿದೆ. **ಸುಮದ್ಗಣಃ, ಸುಮದಂಶುಃ** ಇತ್ಯಾದಿ

ಪ್ರಯೋಗಗಳಿರುವಾಗೆಲ್ಲಾ ಇದೇ ಅರ್ಥವುಂಟು. ಪ್ರಕೃತವಾದ ಋಕ್ಕಿನಲ್ಲಿಯೂ **ಸುಮದ್ರಥಃ** ಎಂಬುದಕ್ಕೆ **ಶೋಭನರಥಃ** ಕಲ್ಯಾಣಕಾರಕವಾದ ರಥವೆಂದು ಅರ್ಥವೆಂದು ಹೇಳಿದೆ.

**ಸುವೃಕ್ತಿಭಿಃ**— ಸುವೃಕ್ತಿಪದವು ಸ್ತೋತ್ರಪರ್ಯಾಯವಾಗಿದೆ. ಅತ್ಯುತ್ತಮವಾದ ಸ್ತೋತ್ರಗಳಿಂದ ಎಂದು ತಾತ್ಪರ್ಯ.



॥ ಸಂಹಿತಾಪಾಠಃ ॥

**ವೈಶ್ವಾನರ ತವ ಧಾಮಾನ್ಯಾ ಚಕ್ರೇ ಯೇಭಿಃ ಸ್ವರ್ವಿದಭವೋ ವಿಚಕ್ಷಣ ।**

**ಜಾತ ಆಪೃಣೋ ಭುವನಾನಿ ರೋದಸೀ ಅಗ್ನೇ ತಾ ವಿಶ್ವಾ ಪರಿಭೂರಸಿ ತ್ಮನಾ ॥೧೦॥**

॥ ಪದಪಾಠಃ ॥

**ವೈಶ್ವಾನರ । ತವ । ಧಾಮಾನಿ । ಚಕ್ರೇ । ಯೇಭಿಃ । ಸ್ವಃಽವಿತ್ । ಅಭವಃ । ವಿಽಚಕ್ಷಣ ।**

**ಜಾತಃ । ಆ । ಅಪೃಣಃ । ಭುವನಾನಿ । ರೋದಸೀ ಇತಿ । ಅಗ್ನೇ । ತಾ । ವಿಶ್ವಾ । ಪರಿಽಭೂಃ । ಅಸಿ ತ್ಮನಾ ॥ ೧೦**

ಸಾಯಣಭಾಷ್ಯಂ ॥

**ಹೇ ವೈಶ್ವಾನರ ತವ ಧಾಮಾನಿ ತ್ವತ್ಸಂಬಂಧೀನಿ ತೇಜಾಂಸ್ಯಾ ಚಕ್ರೇ । ಅಭಿಷ್ಟೌಮಿ । ಹೇ ವಿಚಕ್ಷಣ ಪ್ರಾಜ್ಞ ತ್ವಂ ಯೇಭಿರ್ಯೈಸ್ತೇಜೋಭಿಃ ಸ್ವರ್ವಿತ್ ಸರ್ವವಿತ್ ಸರ್ವಜ್ಞೋಽಭವಃ । ಭವಸಿ । ಜಾತಮಾತಸ್ತ್ವಂ ಭುವನಾನಿ ಭೂತಜಾತಾನಿ ರೋದಸೀ ದ್ಯಾವಾಪೃಥಿವ್ಯಾವಾಪೃಣಃ । ಆಪೂರಯಃ । ಹೇ ಅಗ್ನೇ ವಿಶ್ವಾ ವಿಶ್ವಾನಿ ಸರ್ವಾಣಿ ತಾ ತಾನಿ ಭೂತಜಾತಾನಿ ತ್ಮನಾ ಆತ್ಮನಾ ಪರಿಭೂರಸಿ । ಪರಿಗೃಹೀತಾಸಿ ॥**

॥ ಪ್ರತಿಪದಾರ್ಥ ॥

**ವಿಚಕ್ಷಣ**—ಪ್ರಾಜ್ಞನಾದವನೂ । **ವೈಶ್ವಾನರ**—ವೈಶ್ವಾನರರೂಪಿಯಾದವನೂ ಆದ ಎಲೈ ಅಗ್ನಿಯೇ । **ಯೇಭಿಃ**— ಯಾವ ನಿನ್ನ ತೇಜಸ್ಸುಗಳಿಂದ । **ಸ್ವರ್ವಿತ್**—ಸರ್ವಜ್ಞನಾಗಿ । **ಅಭವಃ**—ಆಗಿದ್ದೀಯೋ । **ತವ ಧಾಮಾನಿ**—ನಿನ್ನ ಆ ಸಕಲತೇಜಸ್ಸುಗಳನ್ನೂ । **ಆ ಚಕ್ರೇ**—ಸ್ತುತಿಸುತ್ತೇನೆ । **ಅಗ್ನೇ**—ಎಲೈ ಅಗ್ನಿಯೇ (ನೀನು) । **ಜಾತಃ**—ಉತ್ಪನ್ನನಾದೊಡನೆಯೇ । **ಭುವನಾನಿ**—ಸಕಲ ಭೂತಜಾತಗಳನ್ನೂ । **ರೋದಸೀ**—ದ್ಯಾವಾಪೃಥಿವಿಗಳನ್ನೂ । **ಅಪೃಣಃ**—ವ್ಯಾಪಿಸಿಕೊಂಡಿದ್ದೀಯೆ । **ವಿಶ್ವಾ**—ಸಮಸ್ತವಾದ । **ತಾ**—ಆ ಭೂತ ಜಾತಗಳನ್ನೂ । **ತ್ಮನಾ**—ಸ್ವಪ್ರೇರಣೆಯಿಂದಲೇ । **ಪರಿಭೂರಸಿ**—ಪರಿಗ್ರಹಿಸಿದ್ದೀಯೆ.

॥ ಭಾವಾರ್ಥ ॥

ಪ್ರಾಜ್ಞನಾದವನೂ, ವೈಶ್ವಾನರರೂಪಿಯಾದವನೂ ಆದ ಎಲೈ ಅಗ್ನಿಯೇ, ಯಾವ ನಿನ್ನ ತೇಜಸ್ಸುಗಳಿಂದ ನೀನು ಸರ್ವಜ್ಞನಾಗಿದ್ದೀಯೋ, ನಿನ್ನ ಆ ಸಕಲ ತೇಜಸ್ಸುಗಳನ್ನೂ ನಾನು ಸ್ತುತಿಸುತ್ತೇನೆ. ಎಲೈ ಅಗ್ನಿಯೇ, ನೀನು ಉತ್ಪನ್ನನಾದೊಡನೆಯೇ, ಸಕಲ ಭೂತಜಾತಗಳನ್ನೂ, ದ್ಯಾವಾಪೃಥಿವಿಗಳನ್ನೂ ವ್ಯಾಪಿಸಿಕೊಂಡಿದ್ದೀಯೆ. ಸಮಸ್ತವಾದ ಆ ಭೂತಜಾತಗಳನ್ನೂ ಸ್ವಪ್ರೇರಣೆಯಿಂದಲೇ ಪರಿಗ್ರಹಿಸಿದ್ದೀಯೆ.

English Translation.

Vaishwanara, I celebrate your energies, whereby, O sage, you have become omniscient : as soon as born, Agni, you have occupied the realms (of space), and heaven and earth, and have comprehended all these with yourself.

॥ ವಿಶೇಷವಿಷಯಗಳು ॥

ಪ್ರಕೃತವಾದ ಋಕ್ಕಿನಲ್ಲಿ ಅಗ್ನಿಯ ಸರ್ವವ್ಯಾಪಕವಾದ ತೇಜಸ್ಸನ್ನೂ ಮತ್ತು ಲೋಕಪಾಲಕವಾದ ಶಕ್ತಿಯನ್ನೂ ವರ್ಣಿಸಿದೆ. ಹಿಂದೆ ಇದೇ ಸೂಕ್ತದ ಐದನೆಯ ಋಕ್ಕಿನಲ್ಲಿ ಅಗ್ನಿಯ ಶಕ್ತಿ ಮತ್ತು ವೈಭವಗಳನ್ನು ಸೂಚಿಸುವ ಅಷ್ಟನಾಮಗಳ ವಿವರಣೆಯನ್ನು ಕೊಡಲಾಗಿದೆ. ಪ್ರಕೃತ ಅಗ್ನಿಯ ಈ ವ್ಯಾಪಕಶಕ್ತಿಗಳ ಸ್ವರೂಪ ಮತ್ತು ಅವುಗಳ ಲೋಕಪಾಲನಾಕ್ರಮ ಇವು ಹೇಗೆ ಎಂಬುದನ್ನು ಪರಿಶೀಲಿಸಲಾಗುತ್ತದೆ. ಅವನ್ನೆಲ್ಲಾ ಶತಪಥ ಬ್ರಾಹ್ಮಣದಲ್ಲಿ ಈ ರೀತಿ ವರ್ಣಿಸಿದೆ. ಪ್ರಕೃತವಾದ ಋಕ್ಕಿನಲ್ಲಿ **ಭುವನಾನಿ ರೋದಸೀ ಅಪ್ರಣಾಃ** ಎಂದು ಯಾವ ವ್ಯಾಪಕಧರ್ಮವು ವರ್ಣಿತವಾಗಿದೆಯೋ ಆ ಅಂಶವು ವಿಶದಪಡಿಸಲ್ಪಟ್ಟಿದೆ.

> **ವಿದ್ಮಾ ತೇ ಅಗ್ನೇ ತ್ರೇಧಾ ತ್ರಯಾಣೀತಿ । ಅಗ್ನಿರ್ವಾಯುರಾದಿತ್ಯ ಏತಾನಿ ಹಾಸ್ಯ ತಾನಿ ತ್ರೇಧಾ ತ್ರಯಾಣಿ ವಿದ್ಮಾ ತೇ ಧಾಮ ವಿಭೃತಾ ಪುರುತ್ರೇತಿ ಯದಿದಂ ಬಹುಧಾ ವಿಹ್ರಿಯತೇ ವಿದ್ಮಾ ತೇ ನಾಮ ಪರಮಂ ಗುಹಾ ಯದಿತಿ ಯವಿಷ್ಠ ಇತಿ ವಾ ಅಸ್ಯ ತನ್ನಾಮ ಪರಮಂ ಗುಹಾ ವಿದ್ಮಾ ತಮುತ್ಸಂ ಯತ ಆಜಗಂಥೇತ್ಯಾಪೋ ವಾ ಉತ್ಸೋಽದ್ಭ್ಯೋ ವಾ ಏಷ ಪ್ರಥಮ-ಮಾಜಗಾಮ ॥**
>
> (ಶ. ಬ್ರಾ. ೬-೭-೪-೪)

ಎಲೈ ಅಗ್ನಿಯೇ, ನಿನ್ನ ತ್ರಿವೃದಾತ್ಮಕವಾದ ಮೂರು ಸ್ವರೂಪಗಳನ್ನು ನಾವು ತಿಳಿಸಿದ್ದೇವೆ. ಅಗ್ನಿ, ವಾಯು ಮತ್ತು ಆದಿತ್ಯ ಎಂಬ ಈ ಮೂರು ಪ್ರಕಾರಗಳೂ ನಿನ್ನ ರೂಪಾಂತರಗಳು. ಅಲ್ಲದೆ ಈ ರೂಪಗಳೂ ತಮ್ಮ ಅವಾಂತರ ಪ್ರಭೇದಗಳಿಂದ ಸಕಲ ವಿಶ್ವಕ್ಕೂ ಹರಡಿರುವುದೂ ನಮಗೆ ಗೊತ್ತು. ನಿನ್ನ ಅತಿಜ್ಯೇಷ್ಠವಾದ ನಾಮವೂ ಮತ್ತು ಕನಿಷ್ಠವಾದ ನಾಮವೂ ಬಹುಗೂಢವಾದವು ಎಂಬುದೂ ತಿಳಿದಿದೆ. ಅಂತರಿಕ್ಷದ ಉದಕದಿಂದ ನೀನು ಉತ್ಪನ್ನನಾಗಿ ಸರ್ವತ್ರ ವ್ಯಾಪಿಸಿದುದೂ ನಮಗೆ ತಿಳಿದಿದೆ.

**ಸಮುದ್ರೇ ತ್ವಾ ನೃಮಣಾ ಅಪ್ಸ್ವಂತರಿತಿ ಪ್ರಜಾಪತಿರ್ವೈ ನೃಮಣಾ ಅಪ್ಸು ತ್ವಾ ಪ್ರಜಾಪತಿರಿತ್ಯೇ-ತನ್ನೃಚಕ್ಷಾ ಈಧೇಽ ದಿವೋಽಗ್ನ ಊಧನ್ನಿತಿ ಪ್ರಜಾಪತಿರ್ವೈ ನೃಚಕ್ಷಾ ಆಪೋ ದಿವ ಊಧ-ಸ್ತೃತೀಯೇ ತ್ವಾ ರಜಸಿ ತಸ್ಥಿವಾಗ್ಂಸಮಿತಿ ದ್ಯೌರ್ವೈ ತೃತೀಯಗ್ಂ ರಜೋಽಪಾಮು-ಪಸ್ಥೇ ಮಹಿಷಾ ಅವರ್ಧನ್ನಿತಿ ಪ್ರಾಣಾ ವೈ ಮಹಿಷಾ ದಿವಿ ತ್ವಾ ಪ್ರಾಣಾ ಅವರ್ಧನ್ನಿತ್ಯೇತತ್ ॥**

(ಶ. ಬ್ರಾ. ೬-೭-೪-೫)

ಪುರುಷಪ್ರಭಾವವುಳ್ಳ ದೇವನು ನಿನ್ನನ್ನು ಅಂತರಿಕ್ಷದ ಉದಕದಲ್ಲಿ ಪ್ರಜ್ವಲಿಸುವಂತೆ ಮಾಡಿದನು. ಪ್ರಜಾಪತಿಯೇ ಆ (ನೃಮಣನು) ದೇವನು. ಅವನೇ ನಿನ್ನನ್ನು ಪ್ರಜ್ವಲಿತನನ್ನಾಗಿ ಮಾಡಿದವನು. ದ್ಯುಲೋಕದ ಊಧಸ್ಸಿನಲ್ಲಿ (ಕೆಚ್ಚಲಿನಲ್ಲಿ) ನೃಚಕ್ಷನಾದ ದೇವನು ನಿನ್ನನ್ನು ಪ್ರಜ್ವಲಿಸುವಂತೆ ಮಾಡಿದನು. ಪ್ರಜಾಪತಿಯೇ ಆ ನೃಚಕ್ಷನಾದ ದೇವನು. ತೃತೀಯ ಲೋಕದಲ್ಲಿ ಮಹಿಷಗಳು ನಿನ್ನನ್ನು ಬೆಳೆದು ಪ್ರಬಲನಾಗುವಂತೆ ಮಾಡಿದವು. ಮುಖ್ಯಪ್ರಾಣಗಳೇ ಈ ಮಹಿಷಗಳು. ಅವೇ ನಿನ್ನ ಪ್ರಾಬಲ್ಯಕ್ಕೆ ಕಾರಣವಾದವು.

**"...........ಸರ್ವದೇವತ್ಯೋಽಗ್ನಿರ್ಯೋರ್ವಾನಗ್ನಿರ್ಯೋರ್ವತ್ಯೈಸ್ಯ ಮಾತ್ರಾ..........."**

(ಶ. ಬ್ರಾ. ೬-೭-೪-೬)

ಸರ್ವಲೋಕವ್ಯಾಪಿಯಾದುದರಿಂದ ಅಗ್ನಿಯೇ ದೇವತಾಮಯನು. ಸಕಲ ದೇವತೆಗಳೂ ಇವನಲ್ಲಿಯೇ ಅಂತರ್ಗತರಾಗಿದ್ದಾರೆ. ಇತ್ಯಾದಿಯಾಗಿ ಅಗ್ನಿಯ ಪ್ರಭಾವವು ವರ್ಣಿತವಾಗಿದೆ.

ಇದೇ ಅಗ್ನಿವೈಶ್ವಾನರನ ವಿಶ್ವವ್ಯಾಪಕಸ್ವರೂಪವು ನಾನಾ ಶ್ರುತಿವಾಕ್ಯಗಳಲ್ಲಿ ವರ್ಣಿತವಾಗಿರುವುದನ್ನು ಹಿಂದೆ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಇದೇ ಅಂಶವು ಸ್ತುತವಾಗಿದೆ.

**ಸ್ವರ್ವಿತ್—ಸರ್ವವಿತ್** ಎಂಬ ಶಬ್ದಕ್ಕೆ ಸರ್ವಜ್ಞ ಎಂಬರ್ಥವನ್ನು ಹೇಳಿದೆ.

॥ ಸಂಹಿತಾಪಾಠಃ ॥

ವೈಶ್ವಾನರಸ್ಯ ದಂಸನಾಭ್ಯೋ ಬೃಹದರಿಣಾದೇಕಃ ಸ್ವಪಸ್ಯಯಾ ಕವಿಃ ।
ಉಭಾ ಪಿತರಾ ಮಹಯನ್ನಜಾಯತಾಗ್ನಿರ್ದ್ಯಾವಾಪೃಥಿವೀ ಭೂರಿರೇತಸಾ ॥೧೧

॥ ಪದಪಾಠಃ ॥

ವೈಶ್ವಾನರಸ್ಯ । ದಂಸನಾಭ್ಯಃ । ಬೃಹತ್ । ಅರಿಣಾತ್ । ಏಕಃ । ಸುಽಅಪಸ್ಯಯಾ । ಕವಿಃ ।
ಉಭಾ । ಪಿತರಾ । ಮಹಯನ್ । ಅಜಾಯತ । ಅಗ್ನಿಃ । ದ್ಯಾವಾಪೃಥಿವೀ ಇತಿ । ಭೂರಿಽರೇತಸಾ ॥ ೧೧

॥ ಸಾಯಣಭಾಷ್ಯಂ ॥

**ವೈಶ್ವಾನರಸ್ಯಾಗ್ನೇರ್ದಂಸನಾಭ್ಯಸ್ತೋಷಕಾರೀಭ್ಯಃ ಕ್ರಿಯಾಭ್ಯೋ ಬೃಹನ್ಮಹದ್ಧನಂ ಭವತೀತಿ ಯತ್ ತದವಿತಥಂ । ಯತಃ ಕಾರಣಾದೇಕೋ ಮುಖ್ಯಃ ಕವಿರಗ್ನಿಃ ಸ್ವಪಸ್ಯಯಾ ಶೋಭನಯಜ್ಞಾದಿ-ಕರ್ಮೇಚ್ಛಯಾ ಯಜಮಾನಾದಿಭ್ಯೋ ಧನಮರಿಣಾತ್ । ದದಾತಿ । ಸೋಽಯಮಗ್ನಿರ್ಭೂರಿರೇತಸಾ ಬಹುರೇತಸ್ಕಾವುಭೋಭಾ ಪಿತರಾ ಪಿತರೌ ಮಾತಾಪಿತರೌ ದ್ಯಾವಾಪೃಥಿವ್ಯೌ ಮಹಯನ್ಪೂಜಯನ್ ಅಜಾಯತ ॥**

॥ ಪ್ರತಿಪದಾರ್ಥ ॥

**ವೈಶ್ವಾನರಸ್ಯ**—ವೈಶ್ವಾನರರೂಪಿಯಾದ ಅಗ್ನಿಗೆ ಅರ್ಪಿಸುವ । **ದಂಸನಾಭ್ಯಃ**—ಸಂತೋಷಕಾರಕಗಳಾದ ಕರ್ಮಗಳಿಂದ । **ಬೃಹತ್**—ಪ್ರಭೂತವಾದ ಧನವು (ಲಭಿಸುತ್ತದೆ) । **ಏಕಃ**—ಪ್ರಧಾನನೂ । **ಕವಿಃ**—ಮೇಧಾವಿಯೂ ಆದ ಅಗ್ನಿಯು । **ಸ್ವಪಸ್ಯಯಾ**—ಉತ್ತಮವಾದ ಕರ್ಮಾಪೇಕ್ಷೆಯಿಂದ । **ಅರಿಣಾತ್**—(ಯಜಮಾನನಿಗೆ ಧನವನ್ನು) ಕೊಡುತ್ತಾನೆ । **ಅಗ್ನಿಃ**—ಅದೇ ಅಗ್ನಿಯು । **ಭೂರಿರೇತಸಾ**—ಸಮೃದ್ಧವಾದ ಉತ್ಪಾದನಶಕ್ತಿಯಿಂದ ಕೂಡಿದವರೂ । **ಪಿತರಾ**—ಜಗತ್ತಿಗೆ ಮಾತಾಪಿತೃರೂಪರೂ ಆದ । **ಉಭಾ ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳಿಬ್ಬರನ್ನೂ । **ಮಹಯನ್**—ಪೂಜಿಸುತ್ತಾ । **ಅಜಾಯತ**—ಉತ್ಪನ್ನನಾದನು.

॥ ಭಾವಾರ್ಥ ॥

ವೈಶ್ವಾನರರೂಪಿಯಾದ ಅಗ್ನಿಗೆ ಸಂತೋಷಕಾರಕಗಳಾದ ಕರ್ಮಮಾಡುವುದರಿಂದ ಪ್ರಭೂತವಾದ ಧನವು ಲಭಿಸುತ್ತದೆ. ಪ್ರಧಾನನೂ, ಮೇಧಾವಿಯೂ ಆದ ಅಗ್ನಿಯು ಉತ್ತಮವಾದ ಕರ್ಮಾಪೇಕ್ಷೆಯಿಂದ ಯಜಮಾನನಿಗೆ ಧನವನ್ನು ಕೊಡುತ್ತಾನೆ. ಅದೇ ಅಗ್ನಿಯು ಸಮೃದ್ಧವಾದ ಉತ್ಪಾದನಶಕ್ತಿಯಿಂದ ಕೂಡಿದವರೂ, ಜಗತ್ತಿಗೆ ಮಾತಾಪಿತೃ ರೂಪರೂ ಆದ ದ್ಯಾವಾಪೃಥಿವಿಗಳಿಬ್ಬರನ್ನೂ ಪೂಜಿಸುತ್ತಾ ಉತ್ಪನ್ನನಾದನು.

English Translation.

From acts that are acceptable to Vaishwanara comes great (wealth); for he, the sage (Agni) alone, bestows (the reward) of zeal in (the performance of) his worship: adoring both his prolific friends, heaven and earth, Agni was born.

॥ ವಿಶೇಷವಿಷಯಗಳು ॥

**ವೈಶ್ವಾನರಸ್ಯ ದಂಸನಾಭ್ಯಃ ಬೃಹತ್—ಅಗ್ನೇಃ ತೋಷಕಾರೀಭ್ಯಃ ಕ್ರಿಯಾಭ್ಯಃ ಮಹದ್ಧನಂ ಭವತೀತಿ ಯತ್ ತದವಿತಥಂ ।** ವೈಶ್ವಾನರಾಗ್ನಿಯ ಪ್ರೀತ್ಯರ್ಥವಾಗಿ ಮಾಡುವ ಯಜ್ಞಾದಿಕರ್ಮಗಳಿಗಾಗಿ ಆ ದೇವನು ಯಜಮಾನರಿಗೆ ಬಹಳವಾದ ಧನವನ್ನು ಕೊಡುವನು ಎಂಬುದು ಅಸತ್ಯವೇನೂ ಅಲ್ಲ, ಎಂದರೆ ನಿಶ್ಚಯವಾಗಿಯೂ ಕೊಟ್ಟೇಕೊಡುವನು ಎಂದಭಿಪ್ರಾಯವು. ಈ ವಾಕ್ಯದಲ್ಲಿ ಧನಶಬ್ದವಾಗಲಿ, ವಾಕ್ಯಪೂರಣಮಾಡುವ

ಕ್ರಿಯಾಪದವಾಗಲಿ ಇರುವುದಿಲ್ಲ. ಆದುದರಿಂದ ಭಾಷ್ಯಕಾರರು **ಧನಂ ಭವತಿ** ಎಂಬ ಶಬ್ದಗಳನ್ನು ಅಧ್ಯಾಹಾರಮಾಡಿ ವಾಕ್ಯಾರ್ಥವನ್ನು ವಿವರಿಸಿರುವರು.

**ದಂಸನಾಭ್ಯಃ—ದಂಸಃ** ಎಂಬ ಶಬ್ದವು ಇಪ್ಪತ್ತಾರು ಕರ್ಮನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧). ಇಲ್ಲಿ ಕರ್ಮವೆಂದರೆ ವೈಶ್ವಾನರಾಗ್ನಿಯನ್ನು ಸಂತೋಷಪಡಿಸುವ ಯಜ್ಞಾದಿಕರ್ಮಗಳು. ಇಂತಹ ಯಜ್ಞಾದಿ ಕರ್ಮಗಳನ್ನು ಮಾಡುವ ಋತ್ವಿಗ್ಯಜಮಾನರಿಗೂ, ಸ್ತೋತ್ರಾದಿಗಳನ್ನು ಮಾಡುವ ಇತರ ಜನರಿಗೂ ಅಗ್ನಿಯು ಬಹಳವಾದ ಧನವನ್ನು ಅಥವಾ ಅವರವರ ಇಷ್ಟಾರ್ಥಗಳನ್ನು ಕೊಡುವನು ಎಂದಭಿಪ್ರಾಯವು.

**ಏಕಃ ಕವಿಃ ಸ್ವಪಸ್ಯಯಾ ಅರಿಣಾತ್—ದೇವೇಷು ಮುಖ್ಯಃ ಕ್ರಾಂತದರ್ಶೀ ಅಗ್ನಿಃ ಶೋಭನ-ಯಜ್ಞಾದಿಕರ್ಮೇಚ್ಛಯಾ ಯಜಮಾನಾದಿಭ್ಯೋ ಧನಂ ದದಾತಿ** I ಹಿಂದಿನ ವಾಕ್ಯದಲ್ಲಿ ಹೇಳಿರುವ ವಿಷಯವನ್ನೇ ಈ ವಾಕ್ಯದಲ್ಲಿಯೂ ಹೇಳಿದೆ. ಈ ವಾಕ್ಯದಲ್ಲಿಯೂ ಸಹ ಧನಂ ಎಂಬ ಶಬ್ದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. ದೇವತೆಗಳಲ್ಲಿ ಮುಖ್ಯನಾದವನೂ, ಕ್ರಾಂತದರ್ಶಿಯೂ ಆದ ಅಗ್ನಿಯು ಯಜ್ಞಮಾಡುವ ಯಜಮಾನರಾದಿ ಜನರಿಗೆ ಅವರುಗಳು ಯಜ್ಞಕರ್ಮಗಳನ್ನು ಮಾಡಲಿ ಎಂಬ ಇಚ್ಛೆಯಿಂದ ಎಂದರೆ ಯಜ್ಞಕರ್ಮಗಳನ್ನು ಮಾಡಲು ಸಹಾಯಾರ್ಥವಾಗಿ ಧನವನ್ನು ಕೊಡುವನು ಎಂದು ವಾಕ್ಯದ ಮುಖ್ಯಾಭಿಪ್ರಾಯವು.

**ಏಕಃ** ಎಂಬ ಶಬ್ದವು ಇಲ್ಲಿ ಸಂಖ್ಯಾವಾಚಕವಾಗಿಲ್ಲ. ಮುಖ್ಯವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. **ಸ್ವಪಸ್ಯಯಾ**—ಅಪಃಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿದೆ (ನಿ. ೩-೧) **ಸು + ಅಪಃ= ಸ್ವಪಃ** ಎಂದರೆ ಶೋಭನವಾದ ಕರ್ಮ. **ಸ್ವಪಸ್ಯಾ** ಎಂದರೆ ಶೋಭನಕರ್ಮವನ್ನು ಮಾಡುವ ಇಚ್ಛೆಯೆಂದರ್ಥವು. ಇಲ್ಲಿ ಶೋಭನ ಕರ್ಮವೆಂದರೆ ಯಜ್ಞಾದಿಕರ್ಮವೆಂದಭಿಪ್ರಾಯವು.

**ಅಗ್ನಿಃ ಭೂರಿರೇತಸಾ ಪಿತರಾ ಉಭಾ ದ್ಯಾವಾಪೃಥಿವೀ ಮಹಯನ್ ಅಜಾಯತ—ಸೋಽಯ-ಮಗ್ನಿಃ ಬಹುರೇತಸ್ಕೌ ಉಭೌ ಪಿತರೌ ಮಾತಾಪಿತರೌ ದ್ಯಾವಾಪೃಥಿವ್ಯೌ ಪೂಜಯನ್ನಜಾಯತ** I ಈ ಅಗ್ನಿಯು-ತಮ್ಮ ವೀರ್ಯದಿಂದ ಅನೇಕ ಪ್ರಾಣಿಗಳನ್ನು ಉತ್ಪತ್ತಿಮಾಡಲು ಸಮರ್ಥರಾದವರೂ, ಎಲ್ಲರಿಗೂ ಪಾಲಕರಾದವರೂ, ತನಗೆ ಮಾತಾಪಿತೃಗಳಾದವರೂ ಆದ ದ್ಯಾವಾಪೃಥಿವಿಗಳನ್ನು ಪೂಜಿಸುತ್ತಾ (ಗೌರವಿಸುತ್ತಾ) ಉತ್ಪನ್ನನಾದನು. ಎಂದರೆ, ಈ ಅಗ್ನಿಯು ಉತ್ಪನ್ನನಾದಕೂಡಲೇ ತನ್ನ ಮಾತಾಪಿತೃಗಳಾದ ದ್ಯಾವಾಪೃಥಿವಿಗಳನ್ನು ಆದರ ಗೌರವಗಳಿಂದ ಪೂಜಿಸಿದನು ಎಂದರ್ಥವು.

**ಭೂರಿರೇತಸಾ**—ಭೂರಿಶಬ್ದವು ಬಹುನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ ೩-೧೩) ಭೂರಿ ಎಂದರೆ ಬಹಳವಾದ ಎಂದರ್ಥವು. ರೇತಃಶಬ್ದವು ಉದಕನಾಮಗಳಲ್ಲಿ ಪಠಿತವಾಗಿದೆ (ನಿ. ೨-೨೪). ರೇತಸ್ಸೆಂದರೆ ವೀರ್ಯವು, ಪುತ್ರಾದಿಗಳನ್ನು ಉತ್ಪತ್ತಿಮಾಡುವ ಸಾಮರ್ಥ್ಯವು. ಆದುದರಿಂದ ಭೂರಿರೇತಸಾ ಎಂದರೆ ಈ ದ್ಯಾವಾಪೃಥಿವಿಗಳು ತಮ್ಮ ವೀರ್ಯದಿಂದ ಅನೇಕ ಪ್ರಾಣಿಗಳನ್ನು ಉತ್ಪತ್ತಿಮಾಡಲು ಸಮರ್ಥವಾಗಿರುವವು. ಪೃಥಿವಿಯಲ್ಲಿ ಅನೇಕ ಪ್ರಾಣಿಗಳು ಉತ್ಪನ್ನವಾಗುತ್ತಿರುವುದು ಲೋಕಪ್ರಸಿದ್ಧವಾಗಿದೆ. ಅಥವಾ ರೇತಃಶಬ್ದಕ್ಕೆ ಉದಕವೆಂದು ಅರ್ಥ ಮಾಡಿದರೆ ಆಗ ಭೂರಿರೇತಸಾ ಎಂಬ ಶಬ್ದಕ್ಕೆ ಬಹಳವಾದ ಉದಕವುಳ್ಳವರು ಎಂದರೆ ಉದಕದಿಂದ ಕೂಡಿರುವವರು

ಎಂಬರ್ಥವನ್ನು ಹೇಳಬಹುದು. ಪೃಥಿವಿಯಲ್ಲಿ ನದಿಗಳು ಸಮುದ್ರಗಳು ಮೊದಲಾದ ಅನೇಕ ಜಲಾಶಯಗಳಿರುವುವು. ಅಂತರಿಕ್ಷದಲ್ಲಿ (ದ್ಯು) ವೃಷ್ಟಿಗೆ ಕಾರಣಭೂತವಾದ ಎಂದರೆ ಉದಕದಿಂದ ಪೂರ್ಣವಾದ ಮೇಘಗಳಿರುವವು. ಆದುದರಿಂದ ಈ ದ್ಯಾವಾಪೃಥಿವಿಗಳು ಬಹಳವಾದ ಉದಕಗಳಿಂದ ಕೂಡಿರುವವರು ಎಂದು ಅರ್ಥಮಾಡುವುದು ಯುಕ್ತವಾಗಿದೆ.

**ಪಿತರಾ—ಮಾತಾಪಿತರೌ** | ಮಾತಾಪಿತೃಗಳಾದ ದ್ಯಾವಾಪೃಥಿವಿಗಳು ಎಂದು ಭಾಷ್ಯಕಾರರ ವಿವರಣೆಯು ಪಿತೃಶಬ್ದಕ್ಕೆ ಯಾಸ್ಕರು **ಪಿತಾ ಪಾತಾ ವಾ ಪಾಲಯಿತಾ ವಾ** (ನಿ. ೪-೨೧)—ಎಂದರೆ **ಪಿತಾ** ಎಂಬ ಶಬ್ದವು **ಪಾ**—ರಕ್ಷಿಸು ಎಂಬ ಧಾತುವಿನಿಂದ ನಿಷ್ಪನ್ನವಾಗಿ ಪಾಲಿಸುವವನು, ಪೋಷಿಸುವವನು ಎಂಬರ್ಥವನ್ನು ಸೂಚಿಸುವುದು ಎಂದು ಅರ್ಥವಿವರಣೆಮಾಡಿದಾರೆ. ಆದುದರಿಂದ **ಪಿತರಾ** ಎಂಬ ಶಬ್ದಕ್ಕೆ ಮಾತಾಪಿತೃಗಳಾದ ಅಥವಾ ಸಮಸ್ತ ಪ್ರಾಣಿಗಳನ್ನೂ ಪಾಲಿಸಿ ಪೋಷಿಸುವ ಎಂಬರ್ಥವನ್ನೂ ಹೇಳಬಹುದು. ಈ ಶಬ್ದವು **ದ್ಯಾವಾಪೃಥಿವೀ** ಎಂಬ ಪದಕ್ಕೆ ವಿಶೇಷಣವಾಗಿದೆ. ದ್ವಿತೀಯಾ ದ್ವಿವಚನಾಂತರೂಪ. ಈ ಋಕ್ಕಿನಲ್ಲಿ ಇರುವ **ಪಿತರಾ** ಎಂಬ ಶಬ್ದವು ಪಿತೃ (ತಂದೆ) ಯನ್ನು ಮಾತ್ರ ಸೂಚಿಸುವುದಿಲ್ಲ. ತಂದೆತಾಯಿ ಇಬ್ಬರನ್ನೂ ಸೂಚಿಸುವುದು. ಋಗ್ವೇದದಲ್ಲಿ ದ್ವಿವಚನಾಂತವಾದ ಪಿತರಾ ಎಂಬ ಶಬ್ದವು ತಂದೆತಾಯಿಗಳಿಬ್ಬರನ್ನೂ ಸೂಚಿಸುವುದು.

**ಯುವಾನಾ ಪಿತರಾ ಪುನಃ ಸತ್ಯಮಂತ್ರಾ ಋಜೂಯವಃ |**
(ಋ. ಸಂ. ೧–೨೦–೪)

**ಸೌಧನ್ವನಾಸಃ ಸ್ವಪಸ್ಯಯಾ ನರೋ ಜಿವ್ರೀ ಯುವಾನಾ ಪಿತರಾಕೃಣೋತನ |**
(ಋ ಸಂ. ೧–೧೧೦–೮)

**ಸುರೇತಸಾ ಪಿತರಾ ಭೂಮ ಚಕ್ರತುರುರು ಪ್ರಜಯಾ ಅಮೃತಂ ವರೀಮಭಿಃ |**
(ಋ. ಸಂ. ೧–೧೫೯–೨)

**ಸಂಮಿಮಾಲ್ಯ ಯದ್ಭುವನಾ ಪರ್ಯಸರ್ಪತ ಕ್ವ ಸ್ವಿತ್ತಾತ್ಯಾ ಪಿತರಾ ವಾ ಆಸತುಃ |**
(ಋ. ಸಂ. ೧–೧೬೧–೧೨)

ಎಂಬ ಋಕ್ಕುಗಳಲ್ಲಿಯೂ, ಋ. ಸಂ. ೩–೭–೧; ೩–೫೪–೧೬; ೪–೩೩–೩; ೪–೩೪–೯; ೪–೩೫–೫; ೪–೩೬–೩; ೭-೫೩-೨; ೭-೬೭-೧; ೧೦-೧೧-೬; ೧೦-೧೨-೪; ೧೦-೩೯-೬; ೧೦-೬೧-೧; ೧೦-೬೫-೮ ಎಂಬ ಋಕ್ಕುಗಳಲ್ಲಿಯೂ ಇರುವ **ಪಿತರಾ** ಎಂಬ ಶಬ್ದಕ್ಕೆ ತಂದೆತಾಯಿಗಳು ಎಂದೇ ಅರ್ಥವು. ಇದಲ್ಲದೆ **ಮಾತರಾ** ಎಂಬ ಶಬ್ದಕ್ಕೆ ಸಹ ತಾಯಿಯೆಂಬ ಅರ್ಥವಲ್ಲದೆ ತಾಯಿತಂದೆಗಳೆಂದೂ ಅರ್ಥವು.

**ಪ್ರ ವೋ ನಪಾತಮಪಾಂ ಕೃಣುಧ್ವಂ ಪ್ರ ಮಾತರಾ ರಾಸ್ಪಿನಸ್ಯಾಯೋಃ |**
(ಋ. ಸಂ ೧–೧೨೨–೪)

**ಕೃಷ್ಣಪ್ರುತೌ ವೇವಿಜೇ ಅಸ್ಯ ಸಕ್ಷಿತಾ ಉಭಾ ತರೇತೇ ಅಭಿ ಮಾತರಾ ಶಿಶುಂ |**
(ಋ. ಸಂ. ೧–೧೪೦–೩)

**ತಾ ಈಂ ವರ್ಧಂತಿ ಮಹ್ಯಸ್ಯ ಪೌಂಸ್ಯಂ ನಿ ಮಾತರಾ ನಯತಿ ರೇತಸೇ ಭುಜೇ |**
(ಋ. ಸಂ. ೧–೧೫೫–೩)

**ತೇ ಸೂನವಃ ಸ್ವಪಸಃ ಸುದಂಸಸೋ ಮಹೀ ಜಜ್ಞುರ್ಮಾತರಾ ಪೂರ್ವಚಿತ್ತಯೇ |**
(ಋ. ಸಂ. ೧–೧೫೯–೩)

ಎಂಬ ಋಕ್ಕುಗಳಲ್ಲಿಯೂ ಋ. ಸಂ. ೧-೧೪೨-೭; ೩-೧-೭; ೩-೫-೭; ೩-೭-೧; :-೩೩-೧; ೩-೩೩-೩; ೪-೨೨-೪; ೫-೫-೬; ೬-೧೭-೭; ೬-೩೨-೧; ೭-೨-೫; ೭-೭-೩; ೮-೯೯-೬; ೯-೯-೩; ೯-೬೮-೪; ೯-೭೦-೬; ೯-೭೫-೪; ೯-೮೫-೧೨; ೯-೧೦೨-೭; ೧೦-೧-೭; ೧೦-೩೫-೩; ೧೦-೫೯-೮; ೧೦-೬೪-೧೪; ೧೦-೭೯-೪; ೧೦-೧೨೦-೭; ೧೦-೧೪೦-೨ ಎಂಬ ಋಕ್ಕುಗಳಲ್ಲಿಯೂ ಮಾತರಾ ಎಂಬ ಶಬ್ದವು ಮಾತಾಪಿತೃಗಳೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಇದಲ್ಲದೆ **ಮಾತರಾಪಿತರಾ** ಎಂಬ ಶಬ್ದವು,

**ನ ಯಸ್ಯ ಸಾತುರ್ಜನಿತೋಃರವಾರಿ ನ ಮಾತರಾಪಿತರಾ ನೂ ಚಿದಿಷ್ಟೌ |**

(ಋ. ಸಂ. ೪-೬-೭)

ಎಂಬ ಒಂದು ಋಕ್ಕಿನಲ್ಲಿ ಮಾತ್ರ ಪಠಿತವಾಗಿದೆ. ಈ ಶಬ್ದಕ್ಕೂ ಅದೇ ಅರ್ಥವು. ಸಾಧಾರಣವಾಗಿ ಈ ಶಬ್ದಗಳು ತಂದೆತಾಯಿಗಳೆಂಬ ಅರ್ಥವನ್ನು ಸೂಚಿಸುವುದಲ್ಲದೆ ಅನೇಕ ಸಂದರ್ಭಗಳಲ್ಲಿ ದ್ಯಾವಾಪೃಥಿವಿಗಳೆಂಬ ಅರ್ಥವನ್ನೂ ಸೂಚಿಸುವುದು.

**ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳು ದೇವತೆಗಳಿಗೆ ತಂದೆತಾಯಿಗಳೆಂದು ಅನೇಕಕಡೆ ಹೇಳಲ್ಪಟ್ಟಿದೆ. ಅದರಂತೆ ಅಗ್ನಿಗೂ ಇವರು ತಂದೆತಾಯಿಗಳೆಂದು ಹೇಳಲಾಗಿದೆ.

**ದ್ಯೌರ್ಮೇ ಪಿತಾ ಜನಿತಾ ನಾಭಿರತ್ರ ಬಂಧುರ್ಮೇ ಮಾತಾ ಪೃಥಿವೀ ಮಹೀಯಂ |**

(ಋ. ಸಂ. ೧-೧೬೪-೩೩)

ಎಂಬ ಋಕ್ಕನಲ್ಲಿ ದ್ಯುಲೋಕವು ಅಗ್ನಿಗೆ ತಂದೆಯೆಂದೂ (ಜನಕ), ಪೃಥಿವಿಯೇ ತಾಯಿಯೆಂದೂ ಹೇಳಿದೆ.



# ನಾಲ್ಕನೆಯ ಸೂಕ್ತವು.

## ಪೀಠಿಕೆ.

ಆಪ್ರೀಸೂಕ್ತಗಳ ವಿವರಣೆಯನ್ನು ನಾವು ಋಗ್ವೇದಸಂಹಿತಾ ಭಾಗ ೨ ಪೇಜುಗಳು 73-74 ಮತ್ತು 528 ರಲ್ಲಿ ಕೊಟ್ಟಿದೇವೆ. ಋಗ್ವೇದದಲ್ಲಿ ಒಟ್ಟು ೧೦ ಆಪ್ರೀಸೂಕ್ತಗಳಿವೆ. ಇವುಗಳಲ್ಲಿ ಇಧ್ಮಃ (ಸಮಿದ್ಧೋಗ್ನಿರ್ವಾ) ನರಾಶಂಸಃ, ತನೂನಪಾತ್, ಇಳಃ, ಬರ್ಹಿಃ, ದೇವೀರ್ದ್ವಾರಃ, ಉಷಾಸಾನಕ್ತಾ, ದೈವ್ಯಾ ಹೋತಾರೌ ಪ್ರಚೇತಸೌ, ತಿಸ್ರೋ ದೇವ್ಯಃ ಸರಸ್ವತೀಳಾಭಾರತ್ಯಃ, ತ್ವಷ್ಟಾ, ವನಸ್ಪತಿಃ, ಸ್ವಾಹಾಕೃತಯಃ ಎಂಬ ದೇವತಾಕವಾದ ಮಂತ್ರಗಳಿವೆ. ಆದರೆ ನರಾಶಂಸಃ ಮತ್ತು ತನೂನಪಾತ್ ಎಂಬ ದೇವತೆಗಳ ವಿಷಯವಾಗಿ ಕೆಲವು ಸೂಕ್ತಗಳಲ್ಲಿ ನರಾಶಂಸಃ ಎಂಬ ಒಂದೇ ದೇವತೆಯನ್ನೂ ಮತ್ತೆ ಕೆಲವು ಸೂಕ್ತಗಳಲ್ಲಿ ತನೂನಪಾತ್ ಎಂಬ ಒಂದೇ ದೇವತೆಯನ್ನೂ ಮತ್ತೆ ಕೆಲವು ಸೂಕ್ತಗಳಲ್ಲಿ ನರಾಶಂಸಃ ಮತ್ತು ತನೂನಪಾತ್ ಎಂಬ ಉಭಯದೇವತೆಯನ್ನೂ ಸ್ತುತಿಸಲಾಗಿದೆ. ಈ ಅರ್ಥಕ್ಕನುಸಾರವಾಗಿ ಈ ಆಪ್ರೀಸೂಕ್ತಗಳನ್ನು ಮೂರು ವಿಧವಾಗಿ ವಿಂಗಡಿಸಿದ್ದಾರೆ. ಹೇಗೆಂದರೆ—ವಸಿಷ್ಠ, ಅತ್ರಿ, ವಾಧ್ರ್ಯಶ್ವ ಗೃತ್ಸಮದ ಎಂಬ ಋಷಿಪ್ರಣೀತಗಳಾದ ಆಪ್ರೀಸೂಕ್ತಗಳು ಎಂದರೆ—

॥ ಸಾಯಣಭಾಷ್ಯಂ ॥

**ಉಷಸಶ್ಚೇಕಿತಾನೋ ಜಾನನ್ ವಿಪ್ರೋ ಮೇಧಾವೀ ಕವೀನಾಂ ಕ್ರಾಂತದೃಶಾಂ ಪದವೀರ್ಮಾರ್ಗಾನ್ ಗಚ್ಛನ್ ಯೋಽಗ್ನಿಃ ಪ್ರತ್ಯಬೋಧಿ ಪ್ರತಿಬುಧ್ಯತೇ ಪೃಥುಪಾಜಾಃ ಪೃಥುತೇಜಾ ದೇವಯದ್ಭಿರ್ದೇವಕಾಮೈಃ ಸಮಿದ್ಧಃ ಸಮ್ಯಕ್ ದೀಪ್ತಃ ಸ ವಹ್ನಿಸ್ತಮಸೋಽಜ್ಞಾನಸ್ಯ ದ್ವಾರಾಗಮನದ್ವಾರಾಣ್ಯಪಾವಃ । ಅಪಾವೃಣೋತಿ ॥**

॥ ಪ್ರತಿಪದಾರ್ಥ ॥

**ಉಷಸಃ**— ಉಷಸ್ಸಿನ ಪ್ರಭಾವವನ್ನು । **ಚೇಕಿತಾನಃ**— ತಿಳಿದವನೂ । **ವಿಪ್ರಃ**— ಮೇಧಾವಿಯೂ । **ಕವೀನಾಂ**— ಕ್ರಾಂತದರ್ಶಿಗಳ । **ಪದವೀಃ**— ಮಾರ್ಗಗಳನ್ನು ಅನುಸರಿಸುವವನೂ ಆದ । **ಅಗ್ನಿಃ**— ಅಗ್ನಿಯು । **ಪ್ರತಿ ಅಬೋಧಿ**— ಎಚ್ಚರಗೊಳ್ಳುತ್ತಾನೆ । **ಪೃಥುಪಾಜಾಃ**— ಪ್ರಭೂತವಾದ ತೇಜಸ್ಸುಳ್ಳವನೂ । **ದೇವಯದ್ಭಿಃ**— ದೇವತಾಭಕ್ತಿಯುಳ್ಳವರಿಂದ । **ಸಮಿದ್ಧಃ**— ಪ್ರಜ್ವಲಿತನಾದವನೂ ಆದ । **ವಹ್ನಿಃ**— ವಹ್ನಿಯು । **ತಮಸಃ**— ಕಗ್ಗತ್ತಲೆಯ । **ದ್ವಾರಾ**— ದ್ವಾರಗಳನ್ನು । **ಅಪ ಆವಃ**— ತೆರೆಯುತ್ತಾನೆ.

॥ ಭಾವಾರ್ಥ

ಉಷಸ್ಸಿನ ಪ್ರಭಾವವನ್ನು ತಿಳಿದವನೂ, ಮೇಧಾವಿಯೂ, ಕ್ರಾಂತದರ್ಶಿಗಳ ಮಾರ್ಗಗಳನ್ನು ಅನುಸರಿಸುವವನೂ ಆದ ಅಗ್ನಿಯು ಎಚ್ಚರಗೊಳ್ಳುತ್ತಾನೆ. ಪ್ರಭೂತವಾದ ತೇಜಸ್ಸುಳ್ಳವನೂ, ದೇವತಾಭಕ್ತಿಯುಳ್ಳವರಿಂದ ಪ್ರಜ್ವಲಿತನಾಗುವವನೂ ಆದ ವಹ್ನಿಯು ಕಗ್ಗತ್ತಲೆಯ ದ್ವಾರಗಳನ್ನು ತೆರೆದು ಅದು ಚದುರಿಹೋಗುವಂತೆ ಮಾಡುತ್ತಾನೆ.

## English Translation.

The sagacious Agni, cognizant of the dawn, is awakened to (follow) the paths of the sages : the luminous Vahni, kindled by the devout, has thrown open the gates of darkness.

॥ ವಿಶೇಷವಿಷಯಗಳು

**ಉಷಸಃ ಚೇಕಿತಾನಃ ವಿಪ್ರಃ ಕವೀನಾಂ ಪದವೀಃ ಅಗ್ನಿಃ ಪ್ರತಿ ಅಬೋಧಿ**— ಅಗ್ನಿಯು ಬಹಳ ಮೇಧಾವಿಯು ಎಂದರೆ ಬಹಳ ಬುದ್ಧಿವಂತನು. ಭೂತಭವಿಷ್ಯದ್ವರ್ತಮಾನಗಳನ್ನು ತಿಳಿದುಕೊಳ್ಳುವ ಕವಿಗಳ ಮಾರ್ಗವನ್ನನುಸರಿಸುವವನು ಎಂದರೆ ಕವಿಗಳಂತೆ ಅಗ್ನಿಗೂ ಭೂತಭವಿಷ್ಯದ್ವರ್ತಮಾನ ಕಾಲಗಳ ಜ್ಞಾನವಿರುವುದು. ಇಂತಹ ಮಹಿಮೆಯುಳ್ಳ ಅಗ್ನಿಯು ಉಷಃಕಾಲವು ಪ್ರಾದುರ್ಭೂತವಾದುದನ್ನು ಎಂದರೆ ರಾತ್ರಿಯು ಕಳೆದು ಉಷಃ ಕಾಲವು ಪ್ರಾಪ್ತವಾಗಿರುವುದನ್ನು ತಿಳಿದು ಎಚ್ಚರಗೊಳ್ಳುತ್ತಾನೆ. ಎಂದರೆ ಪ್ರಾತಃಕಾಲದಲ್ಲಿ ಸೂರ್ಯೋದಯವಾಗುವುದಕ್ಕೆ ಮುಂಚಿತವಾಗಿ ಯಜ್ಞಮಾಡುವ ಯಜಮಾನರು ಯಜ್ಞಕ್ಕಾಗಿ ಸಕಲ ಸಾಮಗ್ರಿಗಳನ್ನೂ ಸಿದ್ಧಪಡಿಸಿಕೊಂಡು ಹೋತೃ ಮೊದಲಾದ ಋತ್ವಿಕ್ಕುಗಳೊಡನೆ ಯಜ್ಞವೇದಿಯಲ್ಲಿ ಬಂದು ಕುಳಿತು ಯಜ್ಞಮಾಡುವುದಕ್ಕಾಗಿ ಸಿದ್ಧನಾಗಿರುವನು. ಯಜ್ಞದಲ್ಲಿ ಅಗ್ನಿಯೇ ಪ್ರಧಾನಭೂತವಾದುದರಿಂದ ಅಗ್ನಿಪ್ರತಿಷ್ಠಾಪನಕಾರ್ಯವು ಮೊದಲು ನೆರವೇರಬೇಕು.

ಆದ್ದರಿಂದ ಉಷಃಕಾಲದಲ್ಲಿಯೇ ಯಜಮಾನರಾದಿ ಋತ್ವಿಕ್ಕುಗಳು ತನ್ನನ್ನು ಪ್ರಾರ್ಥಿಸಿದ ಕೂಡಲೇ ಯಜ್ಞಭೂಮಿಗೆ ಬರುವುದಕ್ಕಾಗಿ ಅಗ್ನಿಯು ಎಚ್ಚರಗೊಂಡು ಸಿದ್ಧನಾಗಿರುವನು ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು.

ವಿಪ್ರಃ ಎಂಬ ಶಬ್ದವು ಮೇಧಾವಿನಾಮುಗಳಲ್ಲಿ ಪಠಿತವಾಗಿದೆ. (ನಿ. ೩-೧೯) ಕವಿಶಬ್ದವೂ ಸಹ ಮೇಧಾವಿ ನಾಮುಗಳಲ್ಲಿ ಪಠಿತವಾಗಿ—**ಮೇಧಾವೀ ಕವಿಃ ಕ್ರಾಂತದರ್ಶನೋ ಭವತಿ ಕವತೇರ್ವಾ** (ನಿ. ೧೨-೧೩) ಎಂದು ಯಾಸ್ಕರಿಂದ ವಿವೃತವಾಗಿದೆ. ಮೇಧಾವಿ ಮತ್ತು ಕವಿಶಬ್ದಗಳಿಗೆ ಕ್ರಾಂತದರ್ಶೀ ಎಂದೂ ಅಥವಾ **ಕವತಿ ಗಚ್ಛತ್ಯಸೌ ನಿತ್ಯಂ ಕಿಂಚ ಕವಿತ್ವಾದೇವ ಜನಯತಿ** ಎಂದು ಕವಿಶಬ್ದಕ್ಕೆ ವಿವರಣೆ ಇರುವ ಪ್ರಕಾರ ಕವಿಯಾದವನು ಯಾವಾಗಲೂ ಎಲ್ಲವನ್ನೂ ತಿಳಿಯುವವನು ಮತ್ತು ತನ್ನ ಕವಿತ್ವದಿಂದ ಜನರಿಗೆ ಸಂತೋಷವನ್ನು ಅಥವಾ ಶುಭ ವನ್ನುಂಟುಮಾಡುವನು ಎಂದು ವ್ಯಾಖ್ಯಾಕಾರರು ಕವಿಶಬ್ದಾರ್ಥವನ್ನು ವಿವರಿಸಿರುವರು.

**ಪದವೀಃ—ಪದಂ ಮಾರ್ಗಂ ವೀತಿ ಗಚ್ಛತೀತಿ ಪದವೀಃ ।** ಕವಿಗಳ ಮಾರ್ಗವನ್ನನುಸರಿಸುವವನು ಎಂದರೆ ಅವರಂತೆಯೇ ಇವನೂ ಪ್ರಾಜ್ಞನು ಎಂದಭಿಪ್ರಾಯವು.

**ಪೃಥುಪಾಜಾಃ ದೇವಯದ್ಭಿಃ ಸಮಿದ್ಧಃ ವಹ್ನಿಃ ತಮಸಃ ದ್ವಾರಾ ಅಪ ಅವಃ**—ದೇವತೆಗಳನ್ನು ಯಜ್ಞದಲ್ಲಿ ಆಹ್ವಾನಿಸಿ ಅವರನ್ನು ಆರಾಧಿಸಲು ಇಚ್ಛಿಸುವ ಋತ್ವಿಗ್ಯಜಮಾನರಿಂದ ಯಜ್ಞವೇದಿಯಲ್ಲಿ ಸ್ಥಾಪಿಸಲ್ಪಡುವ ಈ ಅಗ್ನಿಯು ಬಹಳ ಪ್ರಕಾಶದಿಂದ ಬೆಳಗುತ್ತಾ ಕತ್ತಲೆಯನ್ನು ಅಥವಾ ಅಜ್ಞಾನವನ್ನು ನಾಶಮಾಡುವನು. ಇಲ್ಲಿ **ತಮಸಃ ದ್ವಾರಾ ಅಪ ಅವಃ** ಎಂಬ ವಾಕ್ಯಕ್ಕೆ ಕತ್ತಲೆಯ ದ್ವಾರಗಳನ್ನು ಅನಾವರಣಮಾಡುವನು ಎಂದರೆ ಮುಚ್ಚಿರುವ ಬಾಗಿಲುಗಳನ್ನು ತೆಗೆಯುವನು. ಕತ್ತಲೆಯ ದ್ವಾರಗಳನ್ನು ತೆಗೆಯುವುದು ಎಂದರೆ ರಾತ್ರಿಕಾಲದಲ್ಲಿ ಎಲ್ಲ ಪ್ರದೇಶವೂ ಕತ್ತಲೆಯಿಂದ ಮುಚ್ಚಿ ಯಾವುದೂ ಕಣ್ಣಿಗೆ ಕಾಣಿಸದಂತಾಗಿರುವುದು. ಉಷಃಕಾಲದಲ್ಲಿ ಸೂರ್ಯೋ ದಯವಾಗುವುದಕ್ಕೆ ಮುಂಚೆ ಕತ್ತಲೆಯು ಇನ್ನೂ ಪೂರ್ತಿಯಾಗಿ ಹೋಗಿಲ್ಲದಿರುವಾಗ ಯಜ್ಞಕುಂಡದಲ್ಲಿ ಪ್ರತಿಷ್ಠಾ ಪಿತವಾದ ಅಗ್ನಿಯು ತನ್ನ ಅಪಾರವಾದ ಪ್ರಕಾಶದಿಂದ ಯಜ್ಞಶಾಲೆಯಲ್ಲಿ ಆವರಿಸಿದ್ದ ಕತ್ತಲೆಯೆಲ್ಲವನ್ನೂ ನಿವಾರಣೆ ಮಾಡಿ ಎಲ್ಲಾ ಕಡೆಗೂ ಬೆಳಕನ್ನುಂಟುಮಾಡುವನು ಎಂದಭಿಪ್ರಾಯವು. ಅಥವಾ ತಮಃಶಬ್ದಕ್ಕೆ ಅಜ್ಞಾನವೆಂದು ಅರ್ಥವನ್ನು ಮಾಡುವುದಾದರೆ, ಅಗ್ನಿಯು ಪ್ರಾಜ್ಞನಾದುದರಿಂದ ಋತ್ವಿಗ್ಯಜಮಾನರ ಅಜ್ಞಾನಗಳನ್ನು ಪರಿಹರಿಸಿ ಯಜ್ಞಕರ್ಮನಿರ್ವಹಣದಲ್ಲಿ ಅವರಿಗೆ ಆವಶ್ಯಕವಾದ ಜ್ಞಾನವನ್ನೂ ಸಾಮರ್ಥ್ಯವನ್ನೂ ಅನುಗ್ರಹಿಸುವನೆಂದು ತಾತ್ಪರ್ಯವು.

**ಪೃಥುಪಾಜಾಃ—ಪೃಥುತೇಜಾಃ ।** ಬಹಳವಾದ ಪ್ರಕಾಶದಿಂದ ಬೆಳಗುವವನು. ಪೃಥುಶಬ್ದಕ್ಕೆ ಬಹು ವೆಂದೂ **ಪಾಜಃ**ಶಬ್ದಕ್ಕೆ ತೇಜಸ್ಸೆಂದೂ ಅರ್ಥವಿರುವುದು. **ಪಾಜಃ**ಶಬ್ದವು ಬಲನಾಮುಗಳಲ್ಲಿ ಪಠಿತವಾಗಿರುದದರಿಂದ (ನಿ. ೩-೯) ಬಹಳ ಬಲವಾಗಿ ಎಂದರೆ ಅತ್ಯಂತ ಪ್ರಕಾಶದಿಂದ ಬೆಳಗುತ್ತಿರುವನು ಎಂದಭಿಪ್ರಾಯವು.

**ಸಮಿದ್ಧಃ—ಞಿಇಂಧೀ ದೀಪ್ತೌ** ಎಂಬ ಧಾತುವಿನಿಂದ **ಸಂ** ಎಂಬ ಉಪಸರ್ಗಪೂರ್ವಕವಾಗಿ ನಿಷ್ಪನ್ನ ವಾಗಿರುವ ಈ ಶಬ್ದಕ್ಕೆ ಚೆನ್ನಾಗಿ ಬೆಳಗುತ್ತಿರುವ, ಹೊತ್ತಿಸಲ್ಪಟ್ಟ ಬಹಳವಾದ ಕಾಂತಿಯಿಂದ ಪ್ರಜ್ವಲಿಸುತ್ತಿರುವ ಅಥವಾ ಉರಿಯುತ್ತಿರುವ ಅಗ್ನಿಯೆಂದಭಿಪ್ರಾಯವು.

॥ ಸಂಹಿತಾಪಾಠಃ ॥

ಪ್ರೇದ್ವಗ್ನಿರ್ವಾವೃಧೇ ಸ್ತೋಮೇಭಿರ್ಗೀರ್ಭಿಃ ಸ್ತೋತೄಣಾಂ ನಮಸ್ಯ ಉಕ್ಥೈಃ ।
ಪೂರ್ವೀರೃತಸ್ಯ ಸಂದೃಶಶ್ಚಕಾನಃ ಸಂ ದೂತೋ ಅದ್ಯೌದುಷಸೋ ವಿರೋಕೇ॥

ಪದಪಾಠಃ ॥

ಪ್ರ । ಇತ್ । ಊಂ ಇತಿ । ಅಗ್ನಿಃ । ವವೃಧೇ । ಸ್ತೋಮೇಭಿಃ । ಗೀಃಽಭಿಃ । ಸ್ತೋತೄಣಾಂ । ನಮಸ್ಯಃ । ಉಕ್ಥೈಃ ।
ಪೂರ್ವೀಃ । ಋತಸ್ಯ । ಸಂಽದೃಶಃ । ಚಕಾನಃ । ಸಂ । ದೂತಃ । ಅದ್ಯೌತ್ । ಉಷಸಃ । ವಿಽರೋಕೇ॥೨॥

ಸಾಯಣಭಾಷ್ಯಂ

ನಮಸ್ಯಃ ಪೂಜ್ಯೋ ಯೋಽಗ್ನಿಃ ಸ್ತೋತೄಣಾಂ ಸ್ತೋತ್ರೈರ್ಗೀರ್ಭಿರ್ವಾಗ್ಭಿರುಕ್ಥೈಃ ಶಸ್ತ್ರೈಶ್ಚ ಪ್ರವವೃಧೇ ವೃದ್ಧಿಂ ಪ್ರಾಪ್ನೋತಿ ದೂತೋ ದೇವಾನಾಂ ದೂತಃ ಸಃ ಪೂರ್ವೀರ್ಬಹ್ವೀಋತಸ್ಯಾದಿತ್ಯಸ್ಯ ಸಂದೃಶೋ ದೀಪ್ತೀಶ್ಚಕಾನಃ ಕಾಮಯಮಾನಃ ಸನ್ ಉಷಸೋ ವಿರೋಕೇ ವಿರೋಚನೇ ಪ್ರಾತಃಕಾಲೇ ಸಮದ್ಯೌತ್ । ದ್ಯೋತತೇ । ಇತ್ ಉ ಪೂರಣೌ ॥

॥ ಪ್ರತಿಪದಾರ್ಥ ॥

**ನಮಸ್ಯಃ**—ಪೂಜ್ಯನಾದ । **ಅಗ್ನಿಃ**—ಅಗ್ನಿಯು । **ಸ್ತೋತೄಣಾಂ**—ಸ್ತುತಿಕರ್ತರ । **ಸ್ತೋಮೇಭಿಃ**—ಸ್ತೋತ್ರಗಳಿಂದಲೂ । **ಗೀರ್ಭಿಃ**—ಸ್ತುತಿವಾಕ್ಯಗಳಿಂದಲೂ । **ಉಕ್ಥೈಃ**—ಶಸ್ತ್ರಮಂತ್ರಗಳಿಂದಲೂ । **ಪ್ರ ವವೃಧೇ**—ವೃದ್ಧಿಯನ್ನು ಹೊಂದುತ್ತಾನೆ । **ದೂತಃ**—ದೇವದೂತನಾದ ಅಗ್ನಿಯು । **ಪೂರ್ವೀಃ**—ಬಹುಸಂಖ್ಯಾಕವಾದ । **ಋತಸ್ಯ**—ಆದಿತ್ಯನ । **ಸಂದೃಶಃ**—ಕಾಂತಿಯುತವಾದ ರಶ್ಮಿಗಳನ್ನು । **ಚಕಾನಃ**—ಅನುಕರಿಸುತ್ತಾ । **ಉಷಸಃ**—ಉಷಸ್ಸಿನ । **ವಿರೋಕೇ**—ಆವಿರ್ಭಾವವನ್ನು ಸೂಚಿಸುವ ಪ್ರಾತಃಕಾಲದಲ್ಲಿ । **ಸಂ ಅದ್ಯೌತ್**—ಪ್ರಕಾಶಿಸುತ್ತಾನೆ.

ಭಾವಾರ್ಥ ॥

ಪೂಜ್ಯನಾದ ಅಗ್ನಿಯು ಸ್ತುತಿಕರ್ತರ ಸ್ತೋತ್ರಗಳಿಂದಲೂ, ಸ್ತುತಿವಾಕ್ಯಗಳಿಂದಲೂ, ಶಸ್ತ್ರಗಳಿಂದಲೂ ವೃದ್ಧಿಯನ್ನು ಹೊಂದುತ್ತಾನೆ. ದೇವದೂತನಾದ ಅಗ್ನಿಯು ಬಹುಸಂಖ್ಯಾಕವಾದ ಆದಿತ್ಯನ ಪ್ರಭಾವಯುತವಾದ ರಶ್ಮಿಗಳನ್ನು ಅನುಕರಿಸುತ್ತಾ ಉಷಸ್ಸಿನ ಆವಿರ್ಭಾವವನ್ನು ಸೂಚಿಸುವ ಪ್ರಾತಃಕಾಲದಲ್ಲಿ ಪ್ರಕಾಶಿಸುತ್ತಾನೆ.

English Translation·

The adorable Agni is magnified by the hymns, the prayers, the praises, of (his) worshippers: emulating the many glories of the sun, the messenger (of the gods) shines forth at the glimmering of the dawn.

॥ ವಿಶೇಷವಿಷಯಗಳು ॥

**ನಮಸ್ಯಃ ಅಗ್ನಿಃ ಸ್ತೋತ್ಯಾಣಾಂ ಸ್ತೋಮೇಭಿಃ ಉಕ್ಥೈಃ ಗೀರ್ಭಿಃ ಪ್ರ ವವೃಧೇ ಇತ್ ।** ನಮಃ ಶಬ್ದಕ್ಕೆ ನಮಸ್ಕಾರ, ಸ್ತೋತ್ರ, ಅನ್ನ ಎಂಬ ಅರ್ಥಗಳಿರುವುದರಿಂದ **ನಮಸ್ಯಃ** ಎಂದರೆ ಪೂಜ್ಯನಾದ, ನಮಸ್ಕರಿಸಲ್ಪಡಲು ಅರ್ಹನಾದ, ಹವಿರಾದಿಗಳನ್ನು ಅರ್ಪಿಸಲು ಯೋಗ್ಯನಾದ ಎಂಬ ಅರ್ಥಗಳನ್ನು ಹೇಳಬಹುದು. ಸರ್ವರಿಂದಲೂ ಪೂಜ್ಯನಾದ ಅಗ್ನಿಯು ಈ ಯಜ್ಞವೇದಿಯಲ್ಲಿ ಸ್ತೋತ್ರಮಾಡುವ ಜನರು ಎಂದರೆ ಹೋತೃಗಳು, ಉದ್ಗಾತೃ ಮೊದಲಾದ ಸಾಮಗಾನಮಾಡುವ ಋತ್ವಿಕ್ಕುಗಳು ಮೊದಲಾದವರು ಪಠಿಸುವ ಶಸ್ತ್ರಮಂತ್ರಗಳಿಂದಲೂ, ಸ್ತುತಿರೂಪವಾದ ವಾಕ್ಯಗಳಿಂದಲೂ, ತ್ರಿವೃದಾದಿಸ್ತೋಮಗಳ ಪಠನದಿಂದಲೂ, ಸಾಮಗಾನದಿಂದಲೂ, ಸ್ತುತಿಸಲ್ಪಟ್ಟು ಪ್ರವೃದ್ಧಮಾನನಾಗುತ್ತಾನೆ ಎಂದರೆ ಚೆನ್ನಾಗಿ ಪ್ರಜ್ವಲಿಸುತ್ತಾ ಪ್ರಕಾಶಮಾನನಾಗಿ ಬೆಳಗುತ್ತಾನೆ ಎಂದಭಿಪ್ರಾಯವು. ಇಲ್ಲಿ ಸ್ತೋಮಕ್ಕೂ. ಸ್ತೋತ್ರಕ್ಕೂ ಇರುವ ವ್ಯತ್ಯಾಸವನ್ನೂ, ಸ್ತೋಮಗಳ ವಿಸ್ತಾರವಾದ ವರ್ಣನೆಯನ್ನು ನಾವು ಹಿಂದೆಯೇ ವಿವರಿಸಿದೇವೆ. ಸ್ತೋಮಗಳು ಸಾಮಮಂತ್ರಗಳಿಂದ ಕೂಡಿ ಉದ್ಗಾತೃ ಮೊದಲಾದ ಋತ್ವಿಜರಿಂದ ಗಾನಮಾಡಲ್ಪಡುವವು. ಉಕ್ಥ ಅಥವಾ ಶಸ್ತ್ರಮಂತ್ರಗಳು ಋಗ್ವೇದದ ಮಂತ್ರಗಳಿಂದ ಕೂಡಿ ಹೋತೃವರ್ಗದ ಋತ್ವಿಜರಿಂದ ಪಠಿಸಲ್ಪಡುವವು. ಯಜ್ಞದಲ್ಲಿ ಈ ಎರಡು ವಿಧವಾದ ಮಂತ್ರಪಠನೆಯೂ ಇರುವುದು. ಇಂತಹ ಸ್ತುತಿವಾಕ್ಯಗಳಿಂದ ಅಗ್ನಿಯು ಪ್ರವೃದ್ಧಮಾನನಾಗುವನು ಎಂದು ಇಲ್ಲಿ ಹೇಳಿದೆ. ದೇವತೆಗಳನ್ನು ಸ್ತುತಿಸುವುದರಿಂದ ಎಂದರೆ ವೇದ ಮಂತ್ರಗಳಿಂದ ಅವರ ಗುಣಗಾನಮಾಡುವುದರಿಂದ ದೇವತೆಗಳ ಸಾಮರ್ಥ್ಯವು ವೃದ್ಧಿಯಾಗುವುದು ಎಂದು ಋಗ್ವೇದದಲ್ಲಿ ಅನೇಕಕಡೆ ಹೇಳಿದೆ. **ತ್ವಾಂ ವರ್ಧಂತು ನೋ ಗಿರಃ । ವರ್ಧಂತು ತ್ವಾ ಸುಷ್ಟುತಯೋ ಗಿರೋ ಮೇ** ಇತ್ಯಾದಿ ಶ್ರುತಿವಾಕ್ಯಗಳು ಈ ವಿಷಯವನ್ನು ಸಮರ್ಥಿಸುವವು.

**ದೂತಃ ಪೂರ್ವೀಃ ಋತಸ್ಯ ಸಂದೃಶಃ ಚಕಾನಃ ಉಷಸಃ ವಿರೋಕೇ ಸಂ ಅದ್ಯೌತ್**—ದೇವತೆಗಳಿಗೆ ದೂತನಾದ ಅಗ್ನಿಯು ಉಷಃಕಾಲದಲ್ಲಿ ಅನೇಕ ಕಿರಣಗಳಿಂದ ಸೂರ್ಯನು ಪ್ರಕಾಶಿಸುವಂತೆ ಪ್ರಕಾಶಿಸಿದನು ಎಂದು ಹೇಳಿದೆ. **ಅಗ್ನಿರ್ದೇವಾನಾಂ ದೂತ ಆಸೀತ್ಕಾವ್ಯೋಽಸುರಾಣಾಂ** ಎಂದು ವೇದದಲ್ಲಿ ಹೇಳಿದೆ ಎಂದರೆ— ಅಗ್ನಿಯು ದೇವತೆಗಳಿಗೆ ದೂತನು, ಕಾವ್ಯನೆಂಬುವನು ಅಸುರರಿಗೆ ದೂತನು. ಇಲ್ಲಿ ದೂತನು ಎಂದರೆ— **ಪರೋಕ್ಷಂ ವಾ ಅನ್ಯೇ ದೇವಾ ಇಜ್ಯಂತೇ ।** (ತೈ.. ಸಂ. ೧-೭-೩-೧) ಎಂಬ ಶ್ರುತಿವಾಕ್ಯದಂತೆ ದೇವತೆಗಳಿಗೆ ಹವಿಸ್ಸನ್ನು ಅರ್ಪಿಸಬೇಕಾದರೆ ಅದನ್ನು ಅಗ್ನಿಯಲ್ಲಿ ಹೋಮಮಾಡುವುದರಿಂದಲೇ ಅರ್ಪಿಸಬೇಕು. ಏಕೆಂದರೆ, ದೇವತೆಗಳು ಪ್ರತ್ಯಕ್ಷವಾಗಿ ಹವಿರಾದಿಗಳನ್ನು ಸ್ವೀಕರಿಸುವುದಿಲ್ಲ. ಪರೋಕ್ಷವಾಗಿಯೇ ಎಂದರೆ ಅಗ್ನಿಯ ಮೂಲಕವೇ ಸ್ವೀಕರಿಸುವರು ಆದುದರಿಂದ ಯಜ್ಞದಲ್ಲಿ ಯಜಮಾನರಾದಿ ಋತ್ವಿಕ್ಕುಗಳು ಪಠಿಸುವ ಸ್ತೋತ್ರಾದಿಗಳನ್ನು ದೇವತೆಗಳನ್ನು ಉದ್ದೇಶಿಸಿ ಅರ್ಪಿಸುವ ಹವಿರಾದಿಗಳನ್ನು ಅಗ್ನಿಯು ಸ್ವೀಕರಿಸಿ, ಅವುಗಳನ್ನು ಸ್ವರ್ಗದಲ್ಲಿರುವ ದೇವತೆಗಳಿಗೆ ಒಯ್ದು ತಲುಪಿಸುವನು. ಆದ್ದರಿಂದ ಅಗ್ನಿಯು ಮನುಷ್ಯರಿಗೂ ದೇವತೆಗಳಿಗೂ ಮಧ್ಯಸ್ಥನಾಗಿರುವ ದೂತನೆಂದು ವೇದಗಳಲ್ಲಿ ಅಗ್ನಿಯನ್ನು ಸ್ತುತಿಸಲಾಗಿದೆ.

**ಪೂರ್ವೀಃ** ಎಂಬ ಶಬ್ದವು **ಪುರು—ಬಹು** ಎಂಬ ಶಬ್ದದಿಂದ ನಿಷ್ಪನ್ನವಾಗಿ ಅನೇಕವಾದ ಎಂಬರ್ಥದಲ್ಲಿ ಪ್ರಯುಕ್ತವಾಗಿರುವುದು ಉಷಃಕಾಲಾನಂತರ ಉದಯಿಸುವ ಸೂರ್ಯನು ಮೊದಲು ಸೌಮ್ಯರೂಪದಿಂದಿದ್ದು ಕ್ರಮವಾಗಿ ತನ್ನ ಅನೇಕವಾದ ಕಿರಣಗಳಿಂದ ಮಧ್ಯಾಹ್ನಕಾಲದಲ್ಲಿ ಅತಿಪ್ರಕಾಶದಿಂದ ಬೆಳಗುವನು. ಈ ಕ್ರಮವನ್ನೇ

ಅಗ್ನಿಯು ಅನುಸರಿಸುವನೆಂದು ಇಲ್ಲಿ ಹೇಳಿದೆ. ಎಂದರೆ ಯಜ್ಞದಲ್ಲಿ ಸ್ಥಾಪಿತನಾದ ಅಗ್ನಿಯು ಯಜ್ಞದ ಪ್ರಾರಂಭ ಕಾಲದಲ್ಲಿ ಸೌಮ್ಯರೂಪದಿಂದಿದ್ದರೂ, ಕ್ರಮೇಣ ಋತ್ವಿಜರು ಹೋಮಮಾಡುವ ಕಾಷ್ಠ, ಸಮಿತ್ತು, ಆಜ್ಯ, ಹವಿಸ್ಸು ಮೊದಲಾದ ದ್ರವ್ಯಗಳಿಂದ ಉದ್ದೀಪ್ತನಾಗಿ ವೃದ್ಧಿಯನ್ನು ಹೊಂದಿ ಬಹಳ ಕಾಂತಿಯಿಂದ ಪ್ರಕಾಶಿಸುವನು ಎಂದು ಸೂರ್ಯನ ರಶ್ಮಿಗಳ ಸಾಮ್ಯದಿಂದ ವರ್ಣಿಸಲಾಗಿದೆ.

ಸಂಹಿತಾಪಾಠಃ ॥

**ಅಧಾಯ್ಯಗ್ನಿರ್ಮಾನುಷೀಷು ವಿಕ್ಷ್ವ೧ಪಾಂ ಗರ್ಭೋ ಮಿತ್ರ ಋತೇನ ಸಾಧನ್ ।**

**ಆ ಹರ್ಯತೋ ಯಜತಃ ಸಾನ್ವಸ್ಥಾದಭೂದು ವಿಪ್ರೋ ಹವ್ಯೋ ಮತೀನಾಂ ॥೩॥**

॥ ಪದಪಾಠಃ ॥

**ಅಧಾಯಿ । ಅಗ್ನಿಃ । ಮಾನುಷೀಷು । ವಿಕ್ಷು । ಅಪಾಂ । ಗರ್ಭಃ । ಮಿತ್ರಃ । ಋತೇನ । ಸಾಧನ್ ।**

**ಆ । ಹರ್ಯತಃ । ಯಜತಃ । ಸಾನು । ಅಸ್ಥಾತ್ । ಅಭೂತ್ । ಊಂ ಇತಿ । ವಿಪ್ರಃ । ಹವ್ಯಃ । ಮತೀನಾಂ ॥ ೩ ॥**

॥ ಸಾಯಣಭಾಷ್ಯಂ ॥

**ಮಿತ್ರೋ ಯಜಮಾನಾನಾಂ ಮಿತ್ರಭೂತ ಋತೇನ ಸತ್ಯೇನ ಸಾಧನ್ ಕಾಮಾನ್ ಸಾಧಯನ್ ಅಪಾಂ ಗರ್ಭೋಽಗ್ನಿರ್ಮಾನುಷೀಷು ಮನೋಃ ಸಂಬಂಧಿನೀಷು ವಿಕ್ಷು ಪ್ರಜಾಸ್ವಧಾಯಿ । ದೇವೈರಾಹಿತಃ। ಕಿಂಚ ಹರ್ಯತಃ ಸ್ಪೃಹಣೀಯೋ ಯಜತೋ ಯಷ್ಟವ್ಯಃ ಸ ಸಾನೂಚ್ಛ್ರಿತಂ ಧಿಷ್ಣ್ಯಮುತ್ತರ-ವೇದ್ಯಾಖ್ಯಮಾಸ್ಥಾತ್ । ಅಧ್ಯತಿಷ್ಠತ್ । ವಿಪ್ರಃ ಪ್ರಾಜ್ಞೋಽಗ್ನಿರ್ಮತೀನಾಂ ಮಾತ್ಯಾಣಾಂ ಸ್ತೋತ್ರ್ಯಾಣಾಂ ಹವ್ಯಃ ಸ್ತುತ್ಯೋಽಭೂತ್ ॥**

ಪ್ರತಿಪದಾರ್ಥ ॥

ಮಿತ್ರಃ—ಯಜ್ಞಕರ್ತರಿಗೆ ಮಿತ್ರಭೂತನೂ । **ಋತೇನ**—ಸತ್ಯದಿಂದ । **ಸಾಧನ್**—ಅಪೇಕ್ಷಿತಾರ್ಥಗಳನ್ನು ಸಾಧಿಸುವವನೂ । **ಅಪಾಂ ಗರ್ಭಃ**— ಉದಕಗಳಿಗೆ ಗರ್ಭರೂಪನೂ ಆದ । **ಅಗ್ನಿಃ**—ಅಗ್ನಿಯು । **ಮಾನುಷೀಷು**—ಮನುವಿನ ಸಂತತಿಯವರಾದ । **ವಿಕ್ಷು**—ಪ್ರಜೆಗಳಲ್ಲಿ । **ಅಧಾಯಿ**—(ದೇವತೆಗಳಿಂದ) ಸ್ಥಾಪಿತನಾಗಿದ್ದಾನೆ । **ಹರ್ಯತಃ**—ಸ್ಪೃಹಣೀಯನೂ । **ಯಜತಃ**—ಪೂಜ್ಯನೂ ಆದ ಅಗ್ನಿಯು । **ಸಾನು**—ಉತ್ತರವೇದಿರೂಪವಾದ ಉನ್ನತಪ್ರದೇಶವನ್ನು । **ಆ ಅಸ್ಥಾತ್**—ಆಶ್ರಯಿಸಿ ಸ್ಥಿತನಾಗಿದ್ದಾನೆ । **ವಿಪ್ರಃ**—ಪ್ರಾಜ್ಞನಾದ ಅಗ್ನಿಯು । **ಮತೀನಾಂ**—ಸ್ತೋತೃಗಳಿಗೆ । **ಹವ್ಯಃ**—ಪೂಜ್ಯನಾಗಿ । **ಅಭೂತ್**—ಆದನು.

॥ ಭಾವಾರ್ಥ ॥

ಯಜ್ಞಕರ್ತರಿಗೆ ಮಿತ್ರಭೂತನೂ, ಸತ್ಯದಿಂದ ಅಪೇಕ್ಷಿತಾರ್ಥಗಳನ್ನು ಸಾಧಿಸುವವನೂ, ಉದಕಗಳಿಗೆ ಗರ್ಭರೂಪನೂ ಆದ ಅಗ್ನಿಯು ಮನುವಿನ ಸಂತತಿಯವರಾದ ಪ್ರಜೆಗಳಲ್ಲಿ ದೇವತೆಗಳಿಂದ ಸ್ಥಾಪಿತನಾಗಿದ್ದಾನೆ. ಸ್ಪೃಹಣೀಯನೂ ಪೂಜ್ಯನೂ ಆದ ಅಗ್ನಿಯು ಉನ್ನತಪ್ರದೇಶವನ್ನು ಆಶ್ರಯಿಸಿದ್ದಾನೆ. ಪ್ರಾಜ್ಞನಾದ ಅಗ್ನಿಯು ಸ್ತೋತೃಗಳಿಗೆ ಪೂಜ್ಯನಾದನು.

English Translation.

Agni the embryo of the waters, the friend (of the pious), accomplishing (all desires) with truth, has been placed (by the gods) amongest men, the descendants of Manu : desirable, and adorable, he has taken his station on high, where the wise Agni is to receive the oblations of the devout.

॥ ವಿಶೇಷವಿಷಯಗಳು ॥

**ಮಿತ್ರಃ ಋತೇನ ಸಾಧನ್ ಅಪಾಂ ಗರ್ಭಃ ಅಗ್ನಿಃ ಮಾನುಷೀಷು ವಿಕ್ಷು ಅಧಾಯಿ**—ಈ ಅಗ್ನಿಯು ಯಜ್ಞಮಾಡುವ ಋತ್ವಿಗ್ಯಜಮಾನರಿಗೆ ಸ್ನೇಹಿತನಾದವನು ಎಂದರೆ ಸ್ನೇಹಿತನಂತೆ ಹಿತವನ್ನುಂಟುಮಾಡುವವನು; ಸತ್ಯದಿಂದಲೂ ಯಜ್ಞಕರ್ಮಗಳಿಂದಲೂ ಯಜಮಾನರ ಇಷ್ಟಾರ್ಥಗಳನ್ನು ಸಾಧಿಸಿಕೊಡುವವನು; ಉದಕಗಳಲ್ಲಿ ಗರ್ಭರೂಪದಿಂದ ಎಂದರೆ ಮಧ್ಯಭಾಗದಲ್ಲಿ ಇರುವವನು; ಎಂದರೆ ಭೂಮಿಯ ಮೇಲಿರುವ ಸಮುದ್ರಾದಿ ಜಲಾಶಯಗಳಲ್ಲಿ ಬಡಬಾನಲರೂಪದಿಂದಲೂ, ಅಂತರಿಕ್ಷದಲ್ಲಿರುವ ಮೇಘಗಳಲ್ಲಿ ವಿದ್ಯುದ್ರೂಪದಿಂದಲೂ ಇರುವವನು. ಇಂತಹ ಅಗ್ನಿಯನ್ನು ಯಜ್ಞಾದಿ ಕರ್ಮಗಳ ನಿರ್ವಹಣೆಗಾಗಿ, ಅಥವಾ ಯಜ್ಞದಲ್ಲಿ ಮನುಷ್ಯ ಯಜಮಾನರು ಅರ್ಪಿಸುವ ಹವಿರಾದಿಗಳನ್ನು ದೇವತೆಗಳಿಗೆ ಒಯ್ಯುವುದಕ್ಕಾಗಿ, ಮನುಷ್ಯರ ಮಧ್ಯದಲ್ಲಿ ಎಂದರೆ ಭೂಮಿಯಲ್ಲಿರುವ ಯಜ್ಞವೇದಿಯಲ್ಲಿ ದೇವತೆಗಳು ಸ್ಥಾಪಿಸಿದರು ಎಂದಭಿಪ್ರಾಯವು.

**ಹರ್ಯತಃ ಯಜತಃ ಸಾನು ಆ ಅಸ್ಥಾತ್**—ಸರ್ವರಿಂದಲೂ ಅಪೇಕ್ಷಿಸಲ್ಪಡುವವನೂ, ಯಜ್ಞಯಾಗಾದಿಗಳಲ್ಲಿ ಪೂಜಾರ್ಹನೂ ಅಥವಾ ಯಜ್ಞಕರ್ಮಗಳನ್ನು ನೆರವೇರಿಸಲು ಮುಖ್ಯಸಾಧನಭೂತನೂ ಆದ ಅಗ್ನಿಯು ಉತ್ತರವೇದಿಯಲ್ಲಿರುವ ಆಹವನೀಯಾಗ್ನಿಯೆಂಬ ಅಗ್ನಿಕುಂಡದಲ್ಲಿ ಸ್ಥಾಪಿತನಾಗಿರುವನು. ಎಂದರೆ ಯಜ್ಞದಲ್ಲಿ ಅಗ್ನಿಮಥನಾನಂತರ ಋತ್ವಿಕ್ಕುಗಳು ವಿಧ್ಯುಕ್ತವಾಗಿ ಅಗ್ನ್ಯಾನಯನವೆಂಬ ಕರ್ಮದ ಮೂಲಕ ಅಗ್ನಿಯನ್ನು ಉತ್ತರವೇದಿಗೆ ತಂದು ಅಲ್ಲಿ ಸ್ಥಾಪಿಸಿರುವರು ಎಂದಭಿಪ್ರಾಯವು.

**ವಿಪ್ರಃ ಮತೀನಾಂ ಹವ್ಯಃ ಅಭೂತ್**—ಇಂತಹ ಪ್ರಾಜ್ಞನಾದ ಅಗ್ನಿಯು ಸ್ತೋತ್ರಮಾಡುವವರಿಗೆ ಪೂಜ್ಯನಾಗಿರುವನು ಎಂದರೆ ಪ್ರಾಜ್ಞನಾದ ಈ ಅಗ್ನಿಯನ್ನು ಋತ್ವಿಗ್ಯಜಮಾನರಾದಿಜನರು ಸ್ತೋತ್ರಗಳಿಂದ ಸ್ತುತಿಸುವರು.

॥ ಸಂಹಿತಾಪಾಠಃ ॥

ಮಿತ್ರೋ ಅಗ್ನಿರ್ಭವತಿ ಯತ್ಸಮಿದ್ಧೋ ಮಿತ್ರೋ ಹೋತಾ ವರುಣೋ ಜಾತವೇದಾಃ ।
ಮಿತ್ರೋ ಅಧ್ವರ್ಯುರಿಷಿರೋ ದಮೂನಾ ಮಿತ್ರಃ ಸಿಂಧೂನಾಮುತ ಪರ್ವತಾನಾಂ ॥ ೪ ॥

॥ ಪದಪಾಠಃ ॥

ಮಿತ್ರಃ । ಅಗ್ನಿಃ । ಭವತಿ । ಯತ್ । ಸಂಽಇದ್ಧಃ । ಮಿತ್ರಃ । ಹೋತಾ । ವರುಣಃ । ಜಾತಽವೇದಾಃ ।
ಮಿತ್ರಃ । ಅಧ್ವರ್ಯುಃ । ಇಷಿರಃ । ದಮೂನಾಃ । ಮಿತ್ರಃ । ಸಿಂಧೂನಾಂ । ಉತ । ಪರ್ವತಾನಾಂ ॥ ೪ ॥

॥ ಸಾಯಣಭಾಷ್ಯಂ ॥

ಇಯಮೃಕ್ ಅಗ್ನಿಂ ಸರ್ವಾತ್ಮಕತ್ವೇನ ಸ್ತೌತಿ । ಯದ್ಯದಾ ಸಮಿದ್ಧೋಽಗ್ನಿಃ ತದಾ ಮಿತ್ರೋ ಭವತಿ । ಸೂರ್ಯೋ ಭವತಿ । ಮಿತ್ರ ಏವ ಸನ್ ಹೋತಾ ಭವತಿ । ವರುಣೋ ಭವತಿ ಜಾತವೇದಾ ಜಾತಪ್ರಜ್ಞಃ । ಸ ಮಿತ್ರೋಽಧ್ವರ್ಯುರ್ಭವತಿ ದಮೂನಾ ದಾನಮನಾ ದಾಂತಮನಾ ವಾ । ಸ ಏವೇಷಿರಃ ಪ್ರೇರಕೋ ವಾಯುರ್ಭವತಿ । ಉತ ಅಪಿ ಚ ಸಿಂಧೂನಾಂ ನದೀನಾಂ ಪರ್ವತಾನಾಂ ಚ ಮಿತ್ರಃ ಸಹಾಯೋ ಭವತಿ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ । **ಅಗ್ನಿಃ**—ಅಗ್ನಿಯು । **ಸಮಿದ್ಧಃ**—ಪ್ರಜ್ವಲಿತನಾಗುತ್ತಾನೆಯೋ (ಆಗ) । **ಮಿತ್ರಃ**—ಸೂರ್ಯನಂತೆ । **ಭವತಿ**—ಅತಿಪ್ರಕಾಶಮಾನವಾಗಿ ಬೆಳಗುತ್ತಾನೆ । **ಮಿತ್ರಃ**—ಆ ಮಿತ್ರರೂಪದಲ್ಲಿ **ಹೋತಾ**—ಹೋತೃವಾಗಿ ಆಗುತ್ತಾನೆ । **ವರುಣಃ**—ವರುಣನಾಗಿಯೂ ಆಗುತ್ತಾನೆ । **ಜಾತವೇದಾಃ**—ಜಾತಪ್ರಜ್ಞನಾದ । **ಮಿತ್ರಃ**—ಅದೇ ಮಿತ್ರನು । **ಅಧ್ವರ್ಯುಃ**—ಅಧ್ವರ್ಯುವೂ ಆಗುತ್ತಾನೆ । **ದಮೂನಾಃ**—ದಾಂತಮನಸ್ಕನಾದ ಅವನೇ । **ಇಷಿರಃ**—(ಸಕಲವನ್ನೂ) ಪ್ರೇರಿಸತಕ್ಕ ವಾಯುವಾಗಿ ಆಗಿರುತ್ತಾನೆ । **ಉತ**—ಮತ್ತು । **ಸಿಂಧೂನಾಂ**—ನದಿಗಳಿಗೂ । **ಪರ್ವತಾನಾಂ**—ಪರ್ವತಗಳಿಗೂ । **ಮಿತ್ರಃ**—ಪ್ರೇರಕನಾಗಿ ಆಗುತ್ತಾನೆ.

॥ ಭಾವಾರ್ಥ ॥

ಅಗ್ನಿಯು ಪ್ರಜ್ವಲಿತನಾದೊಡನೆಯೇ ಮಿತ್ರ (ಸೂರ್ಯ) ನಾಗಿ ಪರಿವರ್ತಿತನಾಗುತ್ತಾನೆ, ಆ ಮಿತ್ರರೂಪದಲ್ಲಿ ಹೋತೃವಾಗುತ್ತಾನೆ. ಅವನೇ ವರುಣನೂ ಆಗಿದ್ದಾನೆ. ಜಾತಪ್ರಜ್ಞನಾದ ಅದೇ ಮಿತ್ರನು ಅಧ್ವರ್ಯುವಾಗಿದ್ದಾನೆ. ದಾಂತಮನಸ್ಕನಾದ ಅವನೇ ಸಕಲರನ್ನೂ ಪ್ರೇರಿಸುವ ವಾಯುವು. ಅವನೇ ನದಿಗಳಿಗೂ ಪರ್ವತಗಳಿಗೂ ಪ್ರೇರಕನು.

## English Translation.

Agni, when kindled, is Mitra ; and, as Mitra, is the invoker (of the gods) : Varuna is Jatavedas : Mitra is the ministering priest : Damunas is the agitator (Vayu) : Mitra (is the associate) of rivers and mountains.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಗ್ನಿಯು ಸರ್ವಾತ್ಮಕನಾಗಿರುವನೆಂದೂ, ಸಕಲ ದೇವತೆಗಳ ಸ್ವರೂಪನಾಗಿರುವನೆಂದೂ ವರ್ಣಿಸಿದೆ. ಈ ಋಕ್ಕಿನ ಪ್ರತಿಪಾದವೂ ಮಿತ್ರಶಬ್ದದಿಂದ ಪ್ರಾರಂಭವಾಗಿ ಪ್ರಾಸಬದ್ಧವಾಗಿರುವುದು.

**ಯಾತ್ ಅಗ್ನಿಃ ಸಮಿದ್ಧಃ ಮಿತ್ರಃ ಭವತಿ**—ಅಗ್ನಿಯು ಉದ್ದೀಪ್ತನಾಗಿ ಪ್ರಜ್ವಲಿತನಾದಾಗ ಎಂದರೆ ಚೆನ್ನಾಗಿ ಉರಿಯುತ್ತಿರುವಾಗ ಸೂರ್ಯನಂತೆ ಅತಿಪ್ರಕಾಶಮಾನನಾಗಿ ಬೆಳಗುತ್ತಿರುವನು. ಇಲ್ಲಿ ಮಿತ್ರಶಬ್ದಕ್ಕೆ ಸೂರ್ಯ ಅಥವಾ ಸೂರ್ಯನಂತೆ ಪ್ರಕಾಶಮಾನನಾದ ಅಗ್ನಿಯೆಂದರ್ಥವು.

**ಮಿತ್ರಃ ಹೋತಾ ವರುಣಃ ಜಾತವೇದಾಃ ಮಿತ್ರಃ ಅಧ್ವರ್ಯುಃ ದಮೂನಾಃ**—ಸೂರ್ಯನಂತೆ ಪ್ರಕಾಶಿಸುತ್ತಿರುವ ಈ ಅಗ್ನಿಯೇ ಯಜ್ಞದಲ್ಲಿ ಮುಖ್ಯಋತ್ವಿಜನ ಪಾತ್ರವನ್ನು ವಹಿಸುವ ಹೋತೃವು ಅಥವಾ ಯಜ್ಞಭೂಮಿಗೆ ದೇವತೆಗಳನ್ನು ಆಹ್ವಾನಮಾಡುವವನು; ಸಕಲ ಜಗತ್ತನ್ನೂ ತನ್ನ ಅಧೀನದಲ್ಲಿಟ್ಟುಕೊಂಡು ನಿಯಮನ ಮಾಡುವ ವರುಣನೂ ಇವನೇ; ಇವನೇ ಸಮಸ್ತವನ್ನೂ ತಿಳಿದಿರುವ ಸರ್ವಜ್ಞನು; ಇವನೇ ಯಜ್ಞವನ್ನು ನೆರವೇರಿಸುವ ಅಧ್ವರ್ಯು ಎಂಬ ಋತ್ವಿಜನು; ಯಜಮಾನರಿಗೆ ಯಜ್ಞಫಲವನ್ನೂ ಮತ್ತು ಅವನ ಇಷ್ಟಾರ್ಥಗಳನ್ನೂ ಕೊಡುವವನು. ಅಥವಾ (**ದಮೂನಾಃ** ಎಂಬ ಶಬ್ದಕ್ಕೆ ಅರ್ಥವಿರುವಂತೆ) **ಗಾರ್ಹಪತ್ಯ** ಎಂಬ ಹೆಸರಿನಿಂದ ಗೃಹಗಳಲ್ಲಿ ಸ್ಥಾಪಿತನಾಗಿ ಗೃಹಪತಿಯೆನಿಸಿ ಯಜಮಾನರಿಂದ ಪೂಜಿಸಲ್ಪಡುವವನು **ದಮೂನಾಃ ಕ್ಷೇತ್ರಸಾಧಾಃ** ಎಂದು (ನಿ. ೨-೨) ಯಾಸ್ಕರ ನಿರ್ವಚನವಿರುವುದು.

**ಇಷಿರಃ ಉತ ಸಿಂಧೂನಾಂ ಪರ್ವತಾನಾಂ ಮಿತ್ರಃ**—ಸಕಲವನ್ನೂ ಪ್ರೇರಿಸತಕ್ಕ ವಾಯುವೂ ಇವನೇ; ಇದಲ್ಲದೆ ನದಿಗಳಿಗೂ, ಪರ್ವತಗಳಿಗೂ ಹಿತಕಾರಿಯಾದ ಮಿತ್ರನೂ ಇವನೇ.

ಇಲ್ಲಿ ಅಗ್ನಿಯು ದೇವತೆಗಳಿಗೂ, ಮನುಷ್ಯರಿಗೂ, ಚರಾಚರ ವಸ್ತುಗಳಿಗೂ ಮಿತ್ರನಾಗಿರುವನು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು. **ಮಿತ್ರ, ವರುಣ, ಜಾತವೇದಾಃ** ಎಂಬ ಶಬ್ದಗಳು ದೇವತೆಗಳನ್ನೂ **ಹೋತಾ, ಅಧ್ವರ್ಯು** ಎಂಬ ಶಬ್ದಗಳು ಮನುಷ್ಯರನ್ನೂ, **ಇಷಿರಃ** ಎಂಬ ಶಬ್ದವು ಚಲಿಸುವ ಪ್ರಾಣಿಗಳನ್ನೂ, **ಸಿಂಧೂನಾಂ, ಪರ್ವತಾನಾಂ** ಎಂಬ ಶಬ್ದಗಳು ಅಚಲವಾದ ಸ್ಥಿರರೂಪಗಳನ್ನೂ ಸೂಚಿಸುವುದು. ಆದುದರಿಂದ ಅಗ್ನಿಯು ದೇವತೆಗಳಿಗೂ, ಮನುಷ್ಯರಿಗೂ, ಚರಾಚರಾತ್ಮಕವಾದ ಸಕಲ ಜಗತ್ತಿಗೂ ಹಿತಕಾರಿಯಾದ ಮಿತ್ರನಾಗಿರುವನೆಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಪಾತಿ ಪ್ರಿಯಂ ರಿಪೋ ಅಗ್ರಂ ಪದಂ ವೇಃ ಪಾತಿ ಯಹ್ವಶ್ಚರಣಂ ಸೂರ್ಯಸ್ಯ ।
ಪಾತಿ ನಾಭಾ ಸಪ್ತಶೀರ್ಷಾಣಮಗ್ನಿಃ ಪಾತಿ ದೇವಾನಾಮುಪಮಾದಮೃಷ್ವಃ ॥೩॥

॥ ಪದಪಾಠಃ ॥

ಪಾತಿ । ಪ್ರಿಯಂ । ರಿಪಃ । ಅಗ್ರಂ । ಪದಂ । ವೇಃ । ಪಾತಿ । ಯಹ್ವಃ । ಚರಣಂ । ಸೂರ್ಯಸ್ಯ ।
ಪಾತಿ । ನಾಭಾ । ಸಪ್ತऽಶೀರ್ಷಾಣಂ । ಅಗ್ನಿಃ । ಪಾತಿ । ದೇವಾನಾಂ । ಉಪऽಮಾದಂ । ಋಷ್ವಃ ॥ ೩ ॥

॥ ಸಾಯಣಭಾಷ್ಯಂ ॥

ಋಷ್ವೋ ದರ್ಶನೀಯೋऽಗ್ನಿರ್ವೇರ್ಗಂತ್ರ್ಯಾಃ ಸರ್ವವ್ಯಾಪ್ತಾಯಾ ರಿಪೋ ಭೂಮ್ಯಾಃ ಪ್ರಿಯಮಗ್ರಂ ಪ್ರಥಮಂ ಪದಂ ಸ್ಥಾನಂ ಪಾತಿ । ರಕ್ಷತಿ । ಯಹ್ವೋ ಮಹಾನ್ ಸೂರ್ಯಸ್ಯ ಚರಣಂ । ಚರತ್ಯತ್ರೇತಿ ಚರಣಮಂತರಿಕ್ಷಂ । ಪಾತಿ । ನಾಭಾ ನಾಭಾವಂತರಿಕ್ಷಸ್ಯ ಮಧ್ಯೇ ಸಪ್ತಶೀರ್ಷಾಣಂ ಮರುದ್ಗಣಂ ಪಾತಿ । ದೇವಾನಾಮುಪಮಾದಮುಪಮಾದಕಂ ಯಜ್ಞಂ ಪಾತಿ । ರಕ್ಷತಿ ॥

॥ ಪ್ರತಿಪದಾರ್ಥ ॥

**ಋಷ್ವಃ**—ಸುಂದರರೂಪನಾದ । **ಅಗ್ನಿಃ**—ಅಗ್ನಿಯು । **ವೇಃ**—ಪರಿಭ್ರಮಣವನ್ನು ಹೊಂದುತ್ತಿರುವ । **ರಿಪಃ**—ಭೂಮಿಯ । **ಪ್ರಿಯಂ**—ಪ್ರಿಯವಾದುದೂ । **ಅಗ್ರಂ**—ಮುಖ್ಯವಾದುದೂ ಆದ । **ಪದಂ**—ಸ್ಥಾನವನ್ನು । **ಪಾತಿ**—ರಕ್ಷಿಸುತ್ತಾನೆ । **ಯಹ್ವಃ**—ಮಹಾತ್ಮನಾದ ಅಗ್ನಿಯು । **ಸೂರ್ಯಸ್ಯ**—ಸೂರ್ಯನ । **ಚರಣಂ**—ಸಂಚಾರಸ್ಥಾನವಾದ ಅಂತರಿಕ್ಷವನ್ನು । **ಪಾತಿ**—ರಕ್ಷಿಸುತ್ತಾನೆ । **ನಾಭಾ**—ಅಂತರಿಕ್ಷದ ಮಧ್ಯಸ್ಥಾನದಲ್ಲಿ । **ಸಪ್ತಶೀರ್ಷಾಣಂ**—ಸಪ್ತಸಂಖ್ಯಾತವಾದ ಮರುದ್ಗಣವನ್ನು । **ಪಾತಿ**—ರಕ್ಷಿಸುತ್ತಾನೆ । **ದೇವಾನಾಂ**—ದೇವತೆಗಳಿಗೆ । **ಉಪಮಾದಂ**—ತೃಪ್ತಿಕಾರಕವಾದ ಯಜ್ಞವನ್ನು । **ಪಾತಿ**—ರಕ್ಷಿಸುತ್ತಾನೆ.

॥ ಭಾವಾರ್ಥ ॥

ಸುಂದರರೂಪನಾದ ಅಗ್ನಿಯು ಪರಿಭ್ರಮಾತ್ಮಕವಾದ ಪೃಥ್ವಿಗೆ ಪ್ರಿಯವಾದುದೂ, ಮುಖ್ಯವಾದುದೂ ಆದ ಸ್ಥಾನವನ್ನು ರಕ್ಷಿಸುತ್ತಾನೆ. ಮಹಾತ್ಮನಾದ ಅಗ್ನಿಯು ಸೂರ್ಯನ ಸಂಚಾರಸ್ಥಾನವಾದ ಅಂತರಿಕ್ಷವನ್ನು ರಕ್ಷಿಸುತ್ತಾನೆ. ಅಂತರಿಕ್ಷದ ಮಧ್ಯಸ್ಥಾನದಲ್ಲಿ ಸಪ್ತಸಂಖ್ಯಾತವಾದ ಮರುದ್ಗಣವನ್ನು ರಕ್ಷಿಸುತ್ತಾನೆ. ಹಾಗೆಯೇ ದೇವತೆಗಳಿಗೆ ತೃಪ್ತಿಕಾರಕವಾದ ಯಜ್ಞವನ್ನು ರಕ್ಷಿಸುತ್ತಾನೆ.

## English Translation.

The graceful (Agni) protects the primary station of the moving earth : mighty, he protects the path of the sun : he protects the seven-headed (troop of the Maruts) in the centre (between heaven and earth) : he protects the exhilarating (oblations) of the gods.

॥ ವಿಶೇಷವಿಷಯಗಳು ॥

ಈ ಋಕ್ಕಿನ ಪ್ರತಿಯೊಂದು ಪಾದವೂ **ಪಾತಿ** ಎಂಬ ಶಬ್ದದಿಂದ ಪ್ರಾರಂಭವಾಗಿ ಪ್ರಾಸಬದ್ಧವಾಗಿರುವುದು. ಇಲ್ಲಿ ಅಗ್ನಿಯು ಪೃಥ್ವಿಯನ್ನೂ ಅಂತರಿಕ್ಷವನ್ನೂ, ಮರುದ್ಗಣವನ್ನೂ, ಯಜ್ಞವನ್ನೂ ಸಂರಕ್ಷಿಸುವನೆಂಬ ವಿಷಯವು ಉಕ್ತವಾಗಿದೆ.

**ಋಷ್ವಃ ಅಗ್ನಿಃ ವೇಃ ರಿಪಃ ಪ್ರಿಯಂ ಅಗ್ರಂ ಪದಂ ಪಾತಿ**—ದರ್ಶನೀಯನಾದ ಎಂದರೆ ಸೌಮ್ಯರೂಪದಿಂದ ಬೆಳಗುತ್ತಿರುವ ಈ ಅಗ್ನಿಯು ಪರಿಭ್ರಮಣರೂಪಸಂಚಾರವುಳ್ಳ ಈ ಭೂಮಿಯ ಪ್ರಿಯವೂ ಮುಖ್ಯವೂ ಆದ ಸ್ಥಾನವನ್ನು ಎಂದರೆ ಯಜ್ಞವೇದಿಯನ್ನು ರಕ್ಷಿಸುತ್ತಾನೆ. **ಅಯಂ ಯಜ್ಞೋ ಭುವನಸ್ಯ ನಾಭಿಃ** (ಋ. ಸಂ. ೧–೧೬೪–೩೫) ಎಂಬ ಶ್ರುತಿವಾಕ್ಯದಂತೆ ಭೂಮಿಯ ಮುಖ್ಯವಾದ ಸ್ಥಾನವೆಂದರೆ ಯಜ್ಞವೇದಿಯು. ಯಜ್ಞಕ್ಕೂ ಅಗ್ನಿಗೂ ನಿಕಟಸಂಬಂಧವಿರುವುದರಿಂದ ಅಗ್ನಿಯು ಯಜ್ಞವನ್ನು ರಕ್ಷಿಸುವುದು ಸಹಜವಾಗಿದೆ **ರಿಪಃ** ಎಂಬ ಶಬ್ದವು ಪೃಥಿವೀನಾಮಗಳಲ್ಲಿ ಪಠಿತವಾಗಿರುವುದು (ನಿ. ೨–೫).

**ಯಹ್ವಃ ಸೂರ್ಯಸ್ಯ ಚರಣಂ ಪಾತಿ ನಾಭಾ ಸಪ್ತಶೀರ್ಷಾಣಂ ಪಾತಿ**—ಯಹ್ವಶಬ್ದವು ಮಹನ್ನಾಮಗಳಲ್ಲಿ ಪಠಿತವಾಗಿದೆ (ನಿ. ೩–೧೩). ಮಹಾಮಹಿಮನಾದ ಈ ಅಗ್ನಿಯು ಸೂರ್ಯನು ಸಂಚರಿಸುವ ಮಾರ್ಗವಾದ ಅಂತರಿಕ್ಷವನ್ನೂ ಮತ್ತು ದ್ಯಾವಾಪೃಥಿವಿಗಳ ಮಧ್ಯದಲ್ಲಿ (ಅಂತರಿಕ್ಷದಲ್ಲಿ) ಸಂಚರಿಸುವ ಮರುದ್ಗಣಗಳನ್ನೂ ಸಹ ರಕ್ಷಿಸುತ್ತಾನೆ. ಇಲ್ಲಿ **ಸಪ್ತಶೀರ್ಷಾಣಂ** ಎಂದರೆ ಏಳು ಗುಂಪುಗಳಿರುವ ಮರುತ್ತುಗಳು ಎಂದು ಭಾಷ್ಯಕಾರರು ವಿವರಿಸಿದ್ದಾರೆ. **ಸಪ್ತಗಣಾ ವೈ ಮರುತಃ** ಎಂಬ ಶ್ರುತಿವಾಕ್ಯವು ಇದನ್ನು ಸಮರ್ಥಿಸಿರುವರು.

**ದೇವಾನಾಂ ಉಪಮಾದಂ ಪಾತಿ**—ದೇವತೆಗಳಿಗೆ ತೃಪ್ತಿದಾಯಕವಾದ ಯಜ್ಞವನ್ನು ಸಹ ಅಗ್ನಿಯು ರಕ್ಷಿಸುತ್ತಾನೆ ಎಂದರೆ ರಾಕ್ಷಸಾದಿಗಳ ಬಾಧೆಯಿಲ್ಲದಂತೆ ಯಜ್ಞವನ್ನು ಸಾಂಗವಾಗಿ ನೆರವೇರುವಂತೆ ಮಾಡುತ್ತಾನೆ.



॥ ಸಂಹಿತಾಪಾಠಃ ॥

ಋಭುಶ್ಚಕ್ರ ಈಡ್ಯಂ ಚಾರು ನಾಮ ವಿಶ್ವಾನಿ ದೇವೋ ವಯುನಾನಿ ವಿದ್ವಾನ್ ।
ಸಸಸ್ಯ ಚರ್ಮ ಘೃತವತ್ಪದಂ ವೇಸ್ತದಿದಗ್ನೀ ರಕ್ಷತ್ಯಪ್ರಯುಚ್ಛನ್ ॥ ೬ ॥

॥ ಪದಪಾಠಃ ॥

ಋಭುಃ । ಚಕ್ರೇ । ಈಡ್ಯಂ । ಚಾರು । ನಾಮ । ವಿಶ್ವಾನಿ । ದೇವಃ । ವಯುನಾನಿ । ವಿದ್ವಾನ್ ।

ಸಸಸ್ಯ । ಚರ್ಮ । ಘೃತವತ್ । ಪದಂ । ವೇಃ । ತತ್ । ಇತ್ । ಅಗ್ನಿಃ । ರಕ್ಷತಿ । ಅಪ್ರಯುಚ್ಛನ್ ॥೬॥

॥ ಸಾಯಣಭಾಷ್ಯಂ ॥

ಋಭುರ್ಮಹಾನ್ ವಿಶ್ವಾನಿ ಸರ್ವಾಣಿ ವಯುನಾನಿ ಜ್ಞಾತವ್ಯಾನಿ ಪದಾರ್ಥಾನಿ ವಿದ್ವಾನ್ ಜಾನನ್ ದೇವೋಽಗ್ನಿರೀಡ್ಯಂ ಸ್ತುತ್ಯಂ ಚಾರು ಮನೋಜ್ಞಂ ನಾಮ ಜಲಂ ಚಕ್ರೇ । ಕರೋತಿ । ನಾಮೇತ್ಯುದಕನಾಮಸು ಪಾಠಾತ್ । ವೇರ್ವ್ಯಾಪ್ತಸ್ಯ ಸಸಸ್ಯ ಸ್ವಪತಃ ಶಾಂತಜ್ವಾಲಸ್ಯಾಪ್ಯಗ್ನೇಶ್ಚರ್ಮ ರೂಪಂ ಘೃತವದ್ದೀಪ್ತಿಮದ್ಭವತಿ । ಸೋಽಗ್ನಿಸ್ತಜ್ಜಲಮಪ್ರಯುಚ್ಛನ್ ಅಪ್ರಮಾದ್ಯನ್ ರಕ್ಷತಿ । ಪಾಲಯತಿ ॥

॥ ಪ್ರತಿಪದಾರ್ಥ ॥

**ಋಭುಃ**—ಮಹಾತ್ಮನೂ । **ವಿಶ್ವಾನಿ**—ಸಮಸ್ತವಾದ । **ವಯುನಾನಿ**—ಜ್ಞಾತವ್ಯಪದಾರ್ಥಗಳನ್ನು । **ವಿದ್ವಾನ್**—ತಿಳಿದವನೂ । **ದೇವಃ**—ದೇವತಾತ್ಮನೂ ಆದ ಅಗ್ನಿಯು । **ಈಡ್ಯಂ**—ಸ್ತುತ್ಯವಾದುದೂ । **ಚಾರು**—ಮನೋಹರವಾದುದೂ ಆದ । **ನಾಮ**—ಜಲವನ್ನು । **ಚಕ್ರೇ**—ಸೃಷ್ಟಿಸಿದ್ದಾನೆ । **ವೇಃ**—ವ್ಯಾಪಿಸಿರುವ ಅಗ್ನಿಯು । **ಸಸಸ್ಯ**—ಶಾಂತಾತ್ಮಕವಾದ ಜ್ವಾಲೆಗಳಿಂದ ಕೂಡಿದ್ದರೂ ಸಹ । **ಚರ್ಮ**—(ಅಗ್ನಿಯ) ರೂಪವು । **ಘೃತವತ್**—ಕಾಂತಿಯುಕ್ತವಾಗಿರುತ್ತದೆ । **ಅಗ್ನಿಃ**—ಅದೇ ಅಗ್ನಿಯು । **ತತ್ ಪದಂ**—ಆ ಜಲವನ್ನು । **ಅಪ್ರಯುಚ್ಛನ್**—ಅಜಾಗರೂಕತೆಯಿಲ್ಲದೆ । **ರಕ್ಷತಿ**—ರಕ್ಷಿಸುತ್ತಾನೆ.

॥ ಭಾವಾರ್ಥ ॥

ಮಹಾತ್ಮನೂ, ಸಮಸ್ತವಾದ ಜ್ಞಾತವ್ಯಪದಾರ್ಥಗಳನ್ನು ತಿಳಿದವನೂ, ದೇವತಾತ್ಮನೂ ಆದ ಅಗ್ನಿಯು ಸ್ತುತ್ಯವಾದುದೂ, ಮನೋಹರವಾದುದೂ ಆದ ಜಲವನ್ನು ಸೃಷ್ಟಿಸಿದ್ದಾನೆ. ಸರ್ವವ್ಯಾಪಕನಾದ ಅಗ್ನಿಯು ಶಾಂತಾತ್ಮಕವಾದ ಜ್ವಾಲೆಗಳಿಂದ ಕೂಡಿದ್ದರೂ ಸಹ ಅಗ್ನಿಯ ರೂಪವು ಕಾಂತಿಯುಕ್ತವಾಗಿರುತ್ತದೆ. ಅದೇ ಅಗ್ನಿಯು ಆ ಜಲವನ್ನು ಅಜಾಗರೂಕತೆಯಿಲ್ಲದೆ ರಕ್ಷಿಸುತ್ತಾನೆ.

English Translation.

The mighty; divine Agni, knowing all (things) that are to be known, made the commendable and beatiful water, the glossy skin, the station of the diffused slumbering (Agni), and, ever vigilant, preserves it.

॥ ವಿಶೇಷವಿಷಯಗಳು ॥

**ಋಭುಃ ವಿಶ್ವಾನಿ ವಯುನಾನಿ ವಿದ್ವಾನ್ ದೇವಃ ಈಡ್ಯಂ ಚಾರು ನಾಮ ಚಕ್ರೇ**—ಈ ಅಗ್ನಿಯು ಮಹಾತ್ಮನು ಎಂದರೆ ಇವನ ಮಹಿಮೆಯು ಅಗಾಧವಾದುದು; ಇವನು ಸಮಸ್ತವನ್ನೂ ತಿಳಿದಿರುವವನು ಎಂದರೆ

ಸರ್ವಜ್ಞನು; ಪ್ರಕಾಶಮಾನನಾದವನು. ಇಂತಹ ಈ ಅಗ್ನಿಯು ಮನೋಹರವಾದ ಜಲವನ್ನು ಸೃಷ್ಟಿಸಿದ್ದಾನೆ, ಎಂದು ವಾಕ್ಯಾಭಿಪ್ರಾಯವು. ಋಭು ಶಬ್ದವು ಮಹನ್ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩) ವಯುನ ಶಬ್ದವು ಪ್ರಜ್ಞಾನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩)

**ವೇಃ ಸಸಸ್ಯ ಚರ್ಮ ಘೃತವತ್ ಅಗ್ನಿಃ ತತ್ ಪದಂ ಅಪ್ರಯುಚ್ಛನ್ ರಕ್ಷತಿ**—ಸರ್ವತ್ರ ವ್ಯಾಪಿಸಿರುವ ಅಗ್ನಿಯು ಶಾಂತಾತ್ಮಕವಾದ ಎಂದರೆ ಜನರಿಗೆ ಅಗೋಚರವಾದ ಜ್ವಾಲೆಗಳಿಂದ ಕೂಡಿದ್ದರೂ ಸಹ ಅಗ್ನಿಯ ರೂಪವು ಕಾಂತಿಯುಕ್ತವಾಗಿರುವುದು. ಮೇಘಮಂಡಲದಲ್ಲಿ ವಿದ್ಯುದ್ರೂಪದಿಂದ (ಮಿಂಚಿನ ರೂಪದಿಂದ) ಇರುವ ಅಗ್ನಿಯು ಯಾವಾಗಲೂ ಜನರಿಗೆ ಗೋಚರವಾಗುವುದಿಲ್ಲ; ಮೇಘಗಳಲ್ಲಿ ಮರೆಯಾಗಿರುವುದು. ಹೀಗಿದ್ದರೂ ಅದು ಗೋಚರವಾಗುವಾಗ ಅತಿ ಪ್ರಕಾಶಮಾನವಾಗಿರುವುದು. ಇಂತಹ ಅಗ್ನಿಯು ತನ್ನ ಸುತ್ತಲೂ ಇರುವ ಮೇಘಗಳಲ್ಲಿರುವ ಜಲವನ್ನು ಬಹಳ ಎಚ್ಚರಿಕೆಯಿಂದ ರಕ್ಷಿಸುತ್ತಾನೆ ಎಂದಭಿಪ್ರಾಯವು.

**ಸಸಸ್ಯ—ಸಸಂ** ಎಂಬ ಶಬ್ದಕ್ಕೆ ನಿರ್ವಚನವನ್ನು ಹೇಳುತ್ತಾ ಯಾಸ್ಕರು—

**ಪ್ರ ಮಾತುಃ ಪ್ರತರಂ ಗುಹ್ಯಮಿಚ್ಛನ್ ಕುಮಾರೋ ನ ವೀರುಧಃ ಸರ್ಪದುರ್ವೀಃ ।**
**ಸಸಂ ನ ಪಕ್ವಮವಿದಚ್ಛುಚಂತಂ ರಿರಿಹ್ವಾಂಸಂ ರಿಪ ಉಪಸ್ಥೇ ಅಂತಃ ॥**

(ಋ. ಸಂ. ೧೦-೭೯-೩)

ಎಂಬ ಋಕ್ಕನ್ನುದಾಹರಿಸಿ—**ಸ್ವಪನಮೇತನ್ಮಾಧ್ಯಮಿಕಂ ಜ್ಯೋತಿರನಿತ್ಯದರ್ಶನಂ ತದಿವಾವಿದಜ್ಜಾಜ್ವಲ್ಯಮಾನಂ** (ನಿ. ೫-೩) ಎಂದು ಅರ್ಥವಿವರಣೆ ಮಾಡಿದಾರೆ. **ಸಸಂ** ಎಂದರೆ ಚಲನವಲನಗಳಿಲ್ಲದೆ, ಯಾರಿಗೂ ಗೋಚರವಾಗದಂತೆ ಮರೆಯಲ್ಲಿ ನಿಗೂಢವಾಗಿರುವ ಎಂದರ್ಥವು. ಮೇಘಮಂಡಲದಲ್ಲಿ ಚಲನರಹಿತವಾಗಿ ಮರೆಯಲ್ಲಿ ಅಡಗಿರುವ ವಿದ್ಯುದ್ರೂಪದಿಂದ ಇರುವ ಮಧ್ಯಮಸ್ಥಾನಾಗ್ನಿಯು ಯಾರಿಗೂ ಯಾವಾಗಲೂ ಕಾಣಿಸದಂತಿದ್ದರೂ, ಕಾಣಿಸುವ ಸಂದರ್ಭದಲ್ಲಿ ಅತಿಜಾಜ್ವಲ್ಯಮಾನವಾದ ಕಾಂತಿಯಿಂದ ಬೆಳಗುವುದು ಎಂದು ನಿರ್ವಚನಾಭಿಪ್ರಾಯವು. ನಿರುಕ್ತ ವ್ಯಾಖ್ಯಾಕಾರರಾದ ದುರ್ಗಾಚಾರ್ಯರು—**ಸಸಂ ಇತ್ಯನೇನ ಶಬ್ದೇನ ಸ್ವಪನಮುಚ್ಯತ ಇತ್ಯುಪಪದ್ಯತೇ** ಎಂದು ವಿವರಿಸಿದಾರೆ. ವಿದ್ಯುದ್ರೂಪದಿಂದ ಇರುವ ಮಧ್ಯಮಸ್ಥಾನಾಗ್ನಿಯೆಂದರೆ, ಅಂತರಿಕ್ಷದಲ್ಲಿ ಮೇಘಗಳ ನಡುವೆ ಅಡಗಿರುವ ಮಿಂಚು ಅಥವಾ ವಿದ್ಯುದಗ್ನಿಯು. ಅಗ್ನಿಯ ಮೂರು ರೂಪಗಳಲ್ಲಿ ಒಂದು ಆದಿತ್ಯರೂಪದಿಂದ ಸ್ವರ್ಗದಲ್ಲಿ ಬೆಳಗುತ್ತಿರುವುದು. ಇದು ದ್ಯುಸ್ಥಾನವಾದ ಅಗ್ನಿಯ ರೂಪಾಂತರವು; ಅಂತರಿಕ್ಷದಲ್ಲಿ ಮೇಘಗಳ ಮಧ್ಯದಲ್ಲಿರುವ ವಿದ್ಯುದ್ರೂಪದಿಂದ (ಮಿಂಚು) ಇರುವ ಅಗ್ನಿಯು ಮಧ್ಯಮಸ್ಥಾನದಲ್ಲಿರುವ ಅಗ್ನಿಯ ರೂಪಾಂತರವು. ಪೃಥಿವಿಯಲ್ಲಿ ಗೃಹಗಳಲ್ಲಿಯೂ ಯಜ್ಞವೇದಿಯಲ್ಲಿಯೂ ಪ್ರತಿಷ್ಠಿಸಲ್ಪಟ್ಟು ಸರ್ವರಿಂದಲೂ ಸ್ತುತ್ಯವಾದ ಅಗ್ನಿಯು ಪಾರ್ಥಿವಾಗ್ನಿಯೆಂದು ಹೇಳಲ್ಪಡುವ ಮೂರನೆಯ ರೂಪಾಂತರವು ಈ ಮೂರುವಿಧ ರೂಪಗಳಲ್ಲಿ ಮಧ್ಯಮಸ್ಥಾನದಲ್ಲಿರುವ ವಿದ್ಯುದ್ರೂಪದಿಂದಿರುವ ಅಗ್ನಿಯ ರೂಪಾಂತರವನ್ನು ಇಲ್ಲಿ ವರ್ಣಿಸಿದೆ.

**ಚರ್ಮ**—ಚರ್ಮ ಶಬ್ದಕ್ಕೆ ಯಾಸ್ಕರು—**ಚರ್ಮ ಚರತೇರ್ವೋಚ್ಚೃತಂ ಭವತೀತಿ ವಾ । ಅಥಾಪಿ ಚರ್ಮ ಚ ಶ್ಲೇಷ್ಮಾ ಚ ।** (ನಿ. ೨-೫) ಎಂದು ನಿರ್ವಚನವನ್ನು ಹೇಳಿದಾರೆ. ಚರ್ಮಶಬ್ದವು ಚರತಿ ಧಾತುವಿನಿಂದ ನಿಷ್ಪನ್ನವಾಗಿ ಶರೀರದಿಂದ ಪ್ರತ್ಯೇಕಿಸಲ್ಪಡುವಂತಿದ್ದು ಶರೀರವನ್ನು ಆಚ್ಛಾದನೆಮಾಡಿ ಅದಕ್ಕೆ ಪ್ರತ್ಯೇಕವಾದ ಆಕಾರ

ವನ್ನುಂಟುಮಾಡುವುದರಿಂದ ಅಥವಾ ಶರೀರಕ್ಕೆ ಅಂಟಿಕೊಂಡಿರುವುದರಿಂದ ಚರ್ಮಕ್ಕೆ ರೂಪ ಎಂದೂ ಅರ್ಥವು. ಇಲ್ಲಿ ಸಾಮಾನ್ಯರೂಪವೆಂಬರ್ಥದಲ್ಲಿ ಪ್ರಯುಕ್ತವಾಗಿದೆ.

**ಘೃತವತ್—ದೀಪ್ತಿಮದ್ಭವತಿ ।** ಘೃತಶಬ್ದವು ನೂರೊಂದು ಉದಕನಾಮಗಳಲ್ಲಿ ಪಠಿತವಾಗಿದ್ದರೂ (ನಿ. ೨-೨೪) ಇಲ್ಲಿ ಘೃತಶಬ್ದಕ್ಕೆ ದೀಪ್ತಿ (ಪ್ರಕಾಶ)ವೆಂಬ ಅರ್ಥವನ್ನು ಹೇಳಿದೆ. ಯಾಸ್ಕರು—**ಅಥಾಪಿ ನೈಗಮೇಭ್ಯೋ ಭಾಷಿಕಾ ಉಷ್ಣಂ ಘೃತಮಿತಿ** (ನಿ. ೨-೨) ವೇದಾರ್ಥವನ್ನು ಬಲ್ಲವರು ಘೃತಶಬ್ದಕ್ಕೆ ಉಷ್ಣ ಎಂಬರ್ಥವನ್ನು ಹೇಳುವರು ಎಂದು ವಿವರಿಸಿದಾರೆ. ಉಷ್ಣವೆಂದರೆ ಕಾಂತಿ, ಪ್ರಕಾಶ ಎಂದು ಅರ್ಥವು ಭಾಸವಾಗುವುದು. **ತೇಜೋ ವೈ ಘೃತಂ** ಇತ್ಯಾದಿ ಶ್ರುತಿವಾಕ್ಯಗಳಲ್ಲಿ ಘೃತವೆಂದರೆ ತೇಜಸ್ಸು, ಕಾಂತಿ ಎಂಬ ಅರ್ಥವನ್ನು ಸ್ಪಷ್ಟವಾಗಿ ಹೇಳಿರುವುದು.

॥ ಸಂಹಿತಾಪಾಠಃ ॥

ಆ ಯೋನಿಮಗ್ನಿರ್ಘೃತವಂತಮಸ್ಥಾತ್ಪೃಥುಪ್ರಗಾಣಮುಶಂತಮುಶಾನಃ ।
ದೀದ್ಯಾನಃ ಶುಚಿರ್ಋಷ್ವಃ ಪಾವಕಃ ಪುನಃಪುನರ್ಮಾತರಾ ನವ್ಯಸೀ ಕಃ ॥ ೭ ॥

॥ ಪದಪಾಠಃ ॥

ಆ । ಯೋನಿಂ । ಅಗ್ನಿಃ । ಘೃತऽವಂತಂ । ಅಸ್ಥಾತ್ । ಪೃಥುऽಪ್ರಗಾನಂ । ಉಶಂತಂ । ಉಶಾನಃ ।
ದೀದ್ಯಾನಃ । ಶುಚಿಃ । ಋಷ್ವಃ । ಪಾವಕಃ । ಪುನಃऽಪುನಃ । ಮಾತರಾ । ನವ್ಯಸೀ ಇತಿ । ಕರಿತಿ ಕಃ ॥೭॥

॥ ಸಾಯಣಭಾಷ್ಯಂ

**ಉಶಾನಃ ಕಾಮಯಮಾನೋಽಗ್ನಿರ್ಘೃತವಂತಂ ದೀಪ್ತಿಮಂತಂ ಪೃಥುಪ್ರಗಾಣಂ ಪೃಥುಗೀತಿಮುಶಂತಂ ಕಾಮಯಮಾನಂ ಯೋನಿಂ ಸ್ಥಾನಮಾಯತನಂ ಆ ಅಸ್ಥಾತ್ । ಆತಿಷ್ಠತಿ । ದೀದ್ಯಾನೋ ದ್ಯೋತಮಾನಃ ಶುಚಿರ್ದರ್ಶನೀಯಃ ಶುದ್ಧೋ ವಾ ಋಷ್ವೋ ಮಹಾನ್ ಪಾವಕೋಽನ್ಯೇಷಾಂ ಶೋಧಯಿತಾಗ್ನಿರ್ಮಾತರಾ ಮಾತರೌ ದ್ಯಾವಾಪೃಥಿವ್ಯೌ ಪುನಃಪುನರ್ನವ್ಯಸೀ ನವತರೇ ಕಃ । ಕರೋತಿ ॥**

॥ ಪ್ರತಿಪದಾರ್ಥ ॥

**ಉಶಾನಃ**—ಎಲ್ಲರಿಂದಲೂ ಅಪೇಕ್ಷಿಸಲ್ಪಡುವ । **ಅಗ್ನಿಃ**—ಅಗ್ನಿಯು । **ಘೃತವಂತಂ**—ಕಾಂತಿಯುತವಾದುದೂ । **ಪೃಥುಪ್ರಗಾಣಂ**—ಅತ್ಯಂತವಾಗಿ ಸ್ತುತಿಸಲ್ಪಡತಕ್ಕದ್ದೂ । **ಉಶಂತಂ**—ಅಗ್ನಿಯ ಆಗಮನವನ್ನು ಆದರಿಸತಕ್ಕದ್ದೂ ಆದ । **ಯೋನಿಂ**—ಸ್ಥಾನವನ್ನು । **ಆ ಅಸ್ಥಾತ್**—ಆಕ್ರಮಿಸಿದ್ದಾನೆ । **ದೀದ್ಯಾನಃ**—

ಪ್ರಕಾಶಮಾನನೂ | **ಶುಚಿಃ**—ಸುಂದರರೂಪನೂ | **ಋಷ್ವಃ**—ಮಹಾತ್ಮನೂ | **ಪಾವಕಃ**—ಎಲ್ಲರನ್ನೂ ಶುದ್ಧಿಗೊಳಿಸುವವನೂ ಆದ ಅಗ್ನಿಯು | **ಮಾತರಾ**—ಜಗಜ್ಜನನೀಜನಕರಾದ ದ್ಯಾವಾಪೃಥಿವಿಗಳನ್ನು | **ಪುನಃ ಪುನಃ**—ಪದೇಪದೇ | **ನವ್ಯಸೀ**—ನೂತನವಾದುದನ್ನಾಗಿ | **ಕಃ**—ಮಾಡುತ್ತಾನೆ.

|| ಭಾವಾರ್ಥ ||

ಎಲ್ಲರಿಂದಲೂ ಅಪೇಕ್ಷಿತನಾದ ಅಗ್ನಿಯು ಕಾಂತಿಯುತವಾದುದೂ, ಅತ್ಯಂತವಾಗಿ ಸ್ತುತಿಸಲ್ಪಡತಕ್ಕದ್ದೂ, ಅಗ್ನಿಯ ಆಗಮನವನ್ನು ಆದರಿಸತಕ್ಕದ್ದೂ ಆದ ಸ್ಥಾನವನ್ನು ಆಕ್ರಮಿಸಿದ್ದಾನೆ. ಪ್ರಕಾಶಮಾನನೂ, ಸಂದರರೂಪನೂ, ಮಹಾತ್ಮನೂ, ಎಲ್ಲರನ್ನೂ ಶುದ್ಧಿಗೊಳಿಸುವವನೂ ಆದ ಅಗ್ನಿಯು ಜಗಜ್ಜನನೀಜನಕರಾದ ದ್ಯಾವಾಪೃಥಿವಿಗಳನ್ನು ಪದೇಪದೇ ನೂತವಾದುದನ್ನಾಗಿ ಮಾಡುತ್ತಾನೆ.

## English Translation.

Agni has taken his station in an asylum, brilliant, much-lauded, and as desirous (of receiving him) as he is (to repair to it); radiant, pure, vast, aud purifying, he repeatedly renovates his parents, (Heaven and Earth).

|| ವಿಶೇಷವಿಷಯಗಳು ||

**ಉಶಾನಃ ಅಗ್ನಿಃ ಘೃತವಂತಂ ಪೃಥುಪ್ರಗಾನಂ ಉಶಂತಂ ಯೋನಿಂ ಆ ಅಸ್ಥಾತ್**—ಈ ಅಗ್ನಿಯು ಸಕಲರಿಗೂ ಬೇಕಾದವನು; ಬಹಳ ಪ್ರಕಾಶದಿಂದ ಬೆಳಗುವವನು. ಇವನನ್ನು ಎಲ್ಲರೂ ಬಹಳವಾಗಿ ಸ್ತುತಿಸುವರು. (ಗುಣಗಾನಮಾಡುವರು) ಇಂತಹ ಅಗ್ನಿಯು ತನ್ನ ಆಗಮನವನ್ನೇ ನಿರೀಕ್ಷಿಸುತ್ತಿರುವ ಯಜ್ಞವೇದಿಯಲ್ಲಿರುವ ತನ್ನ ಸ್ವಸ್ಥಾನ (ಆಹವನೀಯ) ವಾದ ಅಗ್ನಿಕುಂಡದಲ್ಲಿ ದೃಢವಾಗಿ ನೆಲಸಿರುವನು. ಇಲ್ಲಿ **ಉಶಂತಂ—ಕಾಮಯಮಾನಂ** ಎಂಬ ಶಬ್ದವು ಆಲಂಕಾರಿಕವಾಗಿ ಉಪಯೋಗಿಸಲ್ಪಟ್ಟಿರುವುದು. ಯಜ್ಞವೇದಿಯು ಅಗ್ನಿಯ ಆಗಮನವನ್ನು ಅಪೇಕ್ಷಿಸುತ್ತಿರುವುದು ಎಂದರೆ—ಅಗ್ನಿಯು ಯಜ್ಞವೇದಿಯಲ್ಲಿ ಪ್ರತಿಷ್ಠಿತನಾಗುವುದು ಎಲ್ಲರಿಗೂ ಸಂತೋಷವನ್ನುಂಟು ಮಾಡುವುದು ಎಂದಭಿಪ್ರಾಯವು.

**ದೀದ್ಯಾನಃ ಶುಚಿಃ ಋಷ್ವಃ ಪಾವಕಃ ಮಾತರಾ ಪುನಃಪುನಃ ನವ್ಯಸೀ ಕಃ**—ಈ ಅಗ್ನಿಯು ಸ್ವಯಂ ಪ್ರಕಾಶಮಾನನೂ, ಶುದ್ಧನೂ ಆದವನು; ನೋಡುವುದಕ್ಕೆ ಸೌಮ್ಯನಾಗಿಯೂ, ಎಲ್ಲರನ್ನೂ ಶುದ್ಧಿಗೊಳಿಸುವವನೂ ಆಗಿರುವನು. ಇಂತಹ ಅಗ್ನಿಯು ತನ್ನ ಮಾತಾಪಿತೃಗಳಾದ ದ್ಯಾವಾಪೃಥಿವಿಗಳನ್ನು ಮತ್ತೆ ಮತ್ತೆ ಯುವಕರನ್ನಾಗಿ ಮಾಡುವನು. ದ್ಯಾವಾಪೃಥಿವಿಗಳು ದೇವತೆಗಳಿಗೆ ಜನನೀಜನಕರೆಂದು ಹೇಳಲ್ಪಟ್ಟಿರುವುದರಿಂದ ಇವರು ಅಗ್ನಿಗೂ ತಂದೆತಾಯಿಗಳಾದಂತಾಯಿತು. ಇವರನ್ನು ಹೊಸಬರನ್ನಾಗಿ ಅಥವಾ ಯುವಕರನ್ನಾಗಿ ಮಾಡಿದನು ಎಂದರೆ ತನ್ನ ಮೂರು ರೂಪಗಳಾದ ಸ್ವರ್ಗ, ಅಂತರಿಕ್ಷ, ಭೂಮಿ ಎಂಬ ತ್ರಿಸ್ಥಾನಗಳಲ್ಲಿರುವ ಆದಿತ್ಯರೂಪ, ವಿದ್ಯುದ್ರೂಪ, ಪಾರ್ಥಿವಾಗ್ನಿರೂಪಗಳಿಂದ ದ್ಯಾವಾಪೃಥಿವಿಗಳಿಗೆ ಪ್ರಕಾಶವನ್ನುಂಟುಮಾಡಿ ಅವುಗಳಿಗೆ ಅಭೂತಪೂರ್ವವಾದ ನವಚೈತನ್ಯವನ್ನುಂಟುಮಾಡಿದನು ಎಂದು ಮುಖ್ಯಾಭಿಪ್ರಾಯವು.

**ಶುಚಿಃ ಪಾವಕಃ** ಎಂಬ ಶಬ್ದಗಳು ಅಗ್ನಿಗೆ ವಿಶೇಷಣಗಳಾಗಿ ಉಪಯೋಗಿಸಲ್ಪಡುವುದಾದರೂ ಕೆಲವು ಸಂದರ್ಭಗಳಲ್ಲಿ **ಅಗ್ನಿಃಶುಚಿಃ, ಅಗ್ನಿಃಪಾವಕಃ** ಎಂದು ಅಗ್ನಿಯ ಪ್ರತ್ಯೇಕವಾದ ರೂಪವಿಶೇಷಣಗಳನ್ನೂ ಸೂಚಿಸುವವು.

॥ ಸಂಹಿತಾಪಾಠಃ ॥

**ಸದ್ಯೋ ಜಾತ ಓಷಧೀಭಿರ್ವವಕ್ಷೇ ಯದೀ ವರ್ಧಂತಿ ಪ್ರಸ್ವೋ ಘೃತೇನ ।**

**ಆಪಇವ ಪ್ರವತಾ ಶುಂಭಮಾನಾ ಉರುಷ್ಯದಗ್ನಿಃ ಪಿತ್ರೋರುಪಸ್ಥೇ ॥ ೮ ॥**

॥ ಪದಪಾಠಃ ॥

**ಸದ್ಯಃ । ಜಾತಃ । ಓಷಧೀಭಿಃ । ವವಕ್ಷೇ । ಯದಿ । ವರ್ಧಂತಿ । ಪ್ರಽಸ್ವಃ । ಘೃತೇನ ।**

**ಆಪಃಽಇವ । ಪ್ರಽವತಾ । ಶುಂಭಮಾನಾಃ । ಉರುಷ್ಯತ್ । ಅಗ್ನಿಃ । ಪಿತ್ರೋಃ । ಉಪಽಸ್ಥೇ ॥ ೮ ॥**

॥ ಸಾಯಣಭಾಷ್ಯಂ ॥

**ಸದ್ಯೋ ಜಾತೋಽಗ್ನಿರ್ಯದಿ ಯದೌಷಧೀಭಿರ್ವವಕ್ಷೇ ಉಹ್ಯತೇ ತದಾ ಪ್ರವತಾ ಪ್ರವಣೇನ ಮಾರ್ಗೇಣ ಗಚ್ಛಂತ್ಯ ಆಪ ಇವ ಶುಂಭಮಾನಾಃ ಶೋಭಮಾನಾಸ್ತಾ ಓಷಧ್ಯಃ ಪ್ರಸ್ವಃ ಫಲಾನಿ ಪ್ರಸುವಾನಾ ಘೃತೇನೋದಕೇನ ವರ್ಧಂತಿ । ವರ್ಧಯಂತಿ । ಪಿತ್ರೋರ್ದ್ಯಾವಾಪೃಥಿವ್ಯೋರುಪಸ್ಥೇ ಮಧ್ಯಪ್ರದೇಶೇ ವರ್ಧಮಾನೋಽಗ್ನಿರುರುಷ್ಯತ್ । ಅಸ್ಮಾನ್ರಕ್ಷತು ॥**

॥ ಪ್ರತಿಪದಾರ್ಥ ॥

**ಸದ್ಯೋ ಜಾತಃ**—ಅಗ್ನಿಯು ಉತ್ಪನ್ನನಾದೊಡನೆಯೇ । **ಯದಿ**—ಯಾವಾಗ । **ಓಷಧೀಭಿಃ**—ಓಷಧಿಗಳಿಂದ । **ವವಕ್ಷೇ**—ವಹಿಸಲ್ಪಡುತ್ತಾನೆಯೋ (ಆಗ) । **ಪ್ರವತಾ**—ನಿಮ್ನ ಮಾರ್ಗದಲ್ಲಿ ಪ್ರವಹಿಸುವ । **ಆಪ ಇವ**—ಉದಕಗಳಂತೆ । **ಶುಂಭಮಾನಾಃ**—ಪ್ರಕಾಶಿಸುವ ಓಷಧಿಗಳು । **ಪ್ರಸ್ವಃ**—ಫಲಗಳನ್ನು ಪ್ರಸುವಿಸುತ್ತಾ । **ಘೃತೇನ**—ಉದಕದಿಂದ । **ವರ್ಧಂತಿ**—ಬೆಳೆಯುತ್ತವೆ । **ಪಿತ್ರೋಃ**—ದ್ಯಾವಾಪೃಥಿವಿಗಳ । **ಉಪಸ್ಥೇ**—ಮಧ್ಯಪ್ರದೇಶದಲ್ಲಿ (ವೃದ್ಧಿಯನ್ನು ಹೊಂದುವ) । **ಅಗ್ನಿಃ**—ಅಗ್ನಿಯು । **ಉರುಷ್ಯತ್**—(ನಮ್ಮನ್ನು) ರಕ್ಷಿಸಲಿ.

॥ ಭಾವಾರ್ಥ ॥

ಅಗ್ನಿಯು ಉತ್ಪನ್ನನಾದೊಡನೆಯೇ ಯಾವಾಗ ಓಷಧಿಗಳಿಂದ ವಹಿಸಲ್ಪಡುತ್ತಾನೆಯೋ ಆಗ ನಿಮ್ನ ಮಾರ್ಗದಲ್ಲಿ ಪ್ರವಹಿಸುವ ಉದಕಗಳಂತೆ ಪ್ರಕಾಶಿಸುವ ಓಷಧಿಗಳು ಫಲಗಳನ್ನು ಪ್ರಸವಿಸುತ್ತಾ ಉದಕದಿಂದ ಬೆಳೆಯುತ್ತವೆ. ದ್ಯಾವಾಪೃಥಿವಿಗಳ ಮಧ್ಯಪ್ರದೇಶದಲ್ಲಿ ವೃದ್ಧಿಯನ್ನು ಹೊಂದುವ ಅಗ್ನಿಯು ನಮ್ಮನ್ನು ರಕ್ಷಿಸಲಿ.

## English Translation.

As soon as generated he is borne aloft by the plants, which grow flourishing by moisture, as the beautifying waters descend : may he, in the bosom of his parents, protect us.

॥ ವಿಶೇಷವಿಷಯಗಳು ॥

**ಸದ್ಯೋ ಜಾತಃ ಯದಿ ಓಷಧೀಭಿಃ ವವಕ್ಷೇ ಪ್ರವತಾ ಆಪ ಇವ ಶುಂಭಮಾನಾಃ ಪ್ರಸ್ವಃ ಘೃತೇನ ವರ್ಧಂತಿ**—ಆಗತಾನೆ ಉತ್ಪನ್ನನಾದ ಅಗ್ನಿಯು ಓಷಧಿವನಸ್ಪತಿಗಳಿಂದ ವಹಿಸಲ್ಪಡುವನು ಎಂದರೆ ಅಗ್ನಿಯು—ವೃಕ್ಷಗಳು, ವನಸ್ಪತಿ, ಕಾಷ್ಠ, ಓಷಧಿಗಳು (ಲತೆ ಮುಂತಾದವು) ಇವುಗಳಲ್ಲಿ ಅಂತರ್ಗತನಾಗಿ ಇರುವನೆಂದಭಿಪ್ರಾಯವು. ಈ ವಿಷಯವನ್ನು ನಾವು ವೈಶ್ವಾನರದೇವತಾಕವಾದ ಸೂಕ್ತಗಳಲ್ಲಿ ವಿವರಿಸಿರುವೆವು. ಅಗ್ನಿಯು ಈ ಓಷಧಿಗಳಲ್ಲಿಯೂ, ವನಸ್ಪತಿಗಳಲ್ಲಿಯೂ ಇದ್ದುಕೊಂಡು ಅವುಗಳು ಅಭಿವೃದ್ಧಿಯಾಗಿ ಚೆನ್ನಾಗಿ ಬೆಳೆಯುವಂತೆ ಮಾಡುವನು. ಅಗ್ನ್ಯಂಶ (ಉಷ್ಣ, ಶಾಖ) ವಿಲ್ಲದಿದ್ದರೆ ವೃಕ್ಷಾದಿಗಳು ಬೆಳೆಯುವುದಿಲ್ಲವೆಂಬುದು ಎಲ್ಲರಿಗೂ ತಿಳಿದ ವಿಷಯ. ಅಗ್ನಿಯ ರೂಪಾಂತರವೇ ಆದಿತ್ಯನಾಗಿರುವುದರಿಂದ ಆದಿತ್ಯನ ರಶ್ಮಿಗಳು ವೃಕ್ಷಾದಿಗಳ ಬೆಳವಣಿಗೆಗೆ ಸಹಾಯಭೂತವಾಗಿರುವುವು. ಸೂರ್ಯರಶ್ಮಿಗಳ ಅಥವಾ ಯಾವುದಾದರೂ ಒಂದು ವಿಧವಾದ ಔಷ್ಣ್ಯದ (ಶಾಖದ) ಸಹಾಯವಿಲ್ಲದೆ ವೃಕ್ಷಾದಿಗಳಾಗಲಿ, ಪ್ರಾಣಿಗಳಾಗಲಿ ಜೀವಿಸಲಾರವು. ಆದುದರಿಂದ ಓಷಧಿವನಸ್ಪತಿಗಳು ಅಗ್ನಿಯನ್ನು ವಹಿಸುವುದರಿಂದ ಎಂದರೆ ಅವುಗಳಲ್ಲಿ ಅಗ್ನಿಯ ವ್ಯಾಪನೆಯಿಂದ ಅವು ಪುಷ್ಟವಾಗಿ ಬೆಳೆದು ಫಲಪ್ರದವಾಗುವುವು. ಇದಕ್ಕೆ ಉದಕದ ಸಹಾಯವೂ ಅವಶ್ಯಕವೆಂದು ಇಲ್ಲಿ ಹೇಳಿದೆ. ಇದಲ್ಲದೆ ಇಲ್ಲಿ **ಪ್ರವತಾ ಆಪ ಇವ ಶುಂಭಮಾನಾಃ** ಎಂದು ದೃಷ್ಟಾಂತವನ್ನು ಹೇಳಿದೆ. ವೇಗವಾಗಿ ಪ್ರವಾಹರೂಪದಿಂದ ಹರಿಯುತ್ತಿರುವ ನೀರು ಯಾವರೀತಿ ಶಕ್ತಿಯುತವಾಗಿರುವುದೋ ಎಂದರೆ ಮುನ್ನುಗ್ಗಿ ಹರಿಯುವಾಗ ಯಾವ ತಡೆ ಅಥವಾ ಅಡಚಣೆಯನ್ನು ಲೆಕ್ಕಿಸದೆ ಮುಂದುವರೆಯುವುದೋ, ಅದರಂತೆ ಅಗ್ನಿಯನ್ನು ವಹಿಸಿರುವ ಈ ಓಷಧಿಗಳು ಯಾವ ಅಡಚಣೆಯೂ ಇಲ್ಲದೆ ಸೊಂಪಾಗಿ ಬೆಳೆದು ಫಲವನ್ನೀಯುವುವು ಎಂದು ಓಷಧಿಗಳ ಬೆಳವಣಿಗೆಗೆ ಅಗ್ನಿಯ ಮತ್ತು ಉದಕದ ಅವಶ್ಯಕತೆಯನ್ನು ಇಲ್ಲಿ ವಿವರಿಸಿದೆ.

**ಪಿತ್ರೋಃ ಉಪಸ್ಥೇ ಅಗ್ನಿಃ ಉರುಷ್ಯತ್**—ಇಲ್ಲಿ ಪಿತ್ರೋಃ ಎಂದು ದ್ವಿವಚನಾಂತ ಶಬ್ದವಿರುವುದರಿಂದ ಈ ಶಬ್ದವು ಪಿತೃವನ್ನು ಮಾತ್ರವಲ್ಲದೆ ಮಾತಾಪಿತೃಗಳೆಂಬ ಅರ್ಥವನ್ನು ಸೂಚಿಸುವುದು. ಇದರಂತೆ ಮಾತೃ ಶಬ್ದವು ದ್ವಿವಚನದಲ್ಲಿ ಉಪಯೋಗಿಸಲ್ಪಟ್ಟಾಗಲೂ ಇದೇ ಅರ್ಥವಿರುವುದು. ಅಗ್ನಿಗೆ ಮಾತಾಪಿತೃಗಳಾದ ದ್ಯಾವಾಪೃಥಿವಿಗಳ ಮಧ್ಯೆ ವೃದ್ಧಿಯನ್ನು ಹೊಂದುವ ಇಂತಹ ಅಗ್ನಿಯು ನಮ್ಮನ್ನು ರಕ್ಷಿಸಲಿ ಎಂದು ಪ್ರಾರ್ಥಿಸಲಾಗಿದೆ.

॥ ಸಂಹಿತಾಪಾಠಃ ॥

ಉದು ಷ್ಟುತಃ ಸಮಿಧಾ ಯಹ್ವೋ ಅದ್ಯೌದ್ವರ್ಷ್ಮನ್ದಿವೋ ಅಧಿ ನಾಭಾ ಪೃಥಿವ್ಯಾಃ।
ಮಿತ್ರೋ ಅಗ್ನಿರೀಡ್ಯೋ ಮಾತರಿಶ್ವಾ ದೂತೋ ವಕ್ಷದ್ಯಜಥಾಯ ದೇವಾನ್ ॥೯॥

॥ ಪದಪಾಠಃ ॥

ಉತ್ । ಊಂ ಇತಿ । ಸ್ತುತಃ । ಸಂऽಇಧಾ । ಯಹ್ವಃ । ಅದ್ಯೌತ್ । ವರ್ಷ್ಮನ್ । ದಿವಃ । ಅಧಿ । ನಾಭಾ । ಪೃಥಿವ್ಯಾಃ ।
ಮಿತ್ರಃ । ಅಗ್ನಿಃ । ಈಡ್ಯಃ । ಮಾತರಿಶ್ವಾ । ಆ । ದೂತಃ । ವಕ್ಷತ್ । ಯಜಥಾಯ । ದೇವಾನ್ ॥ ೯ ॥

॥ ಸಾಯಣಭಾಷ್ಯಂ ॥

ಉ ಇತಿ ಪಾದಪೂರಣಃ । ಸ್ತುತೋಽಸ್ಮಾಭಿಃ ಸ್ತುತಃ ಸಮಿಧಾ ಸಮಿಂಧನೇನ ಯಹ್ವೋ ಮಹಾನ್ ಅಗ್ನಿಃ ಪೃಥಿವ್ಯಾ ಉತ್ತರವೇದ್ಯಾ ನಾಭಾ ನಾಭೌ ಮಧ್ಯಪ್ರದೇಶೇ ಸ್ಥಿತಃ ಸನ್ ದಿವೋಽಂತರಿಕ್ಷಸ್ಯ ವರ್ಷ್ಮನ್ ವರ್ಷ್ಮಣಿ ರೂಪೇ ಉದದ್ಯೌತ್ । ದ್ಯೋತತೇ । ಮಿತ್ರಃ ಸರ್ವೇಷಾಂ ಮಿತ್ರಭೂತ ಈಡ್ಯಃ ಸ್ತುತ್ಯೋ ಮಾತರಿಶ್ವಾ । ಮಾತರ್ಯಂತರಿಕ್ಷೇ ಶ್ವಸಿತಿ ಪ್ರಾಣಿತಿ ಸೂರ್ಯರೂಪೇಣ ಚೇಷ್ಟತ ಇತಿ ಮಾತರಿಶ್ವಾ । ಅಥವಾ ಮಾತರ್ಯರಣ್ಯಾಂ ಶ್ವಸಿತಿ ನಿವಸತೀತಿ ಮಾತರಿಶ್ವಾ । ತಥಾಹ ಯಾಸ್ಕಃ । ಮಾತರ್ಯಂತರಿಕ್ಷೇ ಶ್ವಸಿತಿ ಮಾತರ್ಯಾಶ್ವನಿತೀತಿ ವಾ । ನಿ. ೭-೨೬ । ದೂತೋ ದೇವಾನಾಂ ದೂತಃ ಸನ್ ಯಜಥಾಯ ಯಜ್ಞಾಯ ದೇವಾನಾವಕ್ಷತ್ । ಆವಹತು ॥

॥ ಪ್ರತಿಪದಾರ್ಥ ॥

**ಸ್ತುತಃ**—ನಮ್ಮಿಂದ ಸ್ತುತನಾದವನೂ । **ಸಮಿಧಾ**—ಪ್ರಜ್ವಲಿತನಾದ್ದರಿಂದ । **ಯಹ್ವಃ**—ಮಹಾತ್ಮನೂ ಆದ । **ಅಗ್ನಿಃ**—ಅಗ್ನಿಯು । **ಪೃಥಿವ್ಯಾಃ**— ಉತ್ತರವೇದಿಯ । **ನಾಭಾ**—ಮಧ್ಯಪ್ರದೇಶದಲ್ಲಿದ್ದುಕೊಂಡು । **ದಿವಃ**—ಅಂತರಿಕ್ಷದ । **ವರ್ಷ್ಮನ್**—ರೂಪದಲ್ಲಿ । **ಉತ್ ಅದ್ಯೌತ್**—ಪ್ರಕಾಶಿಸುತ್ತಾನೆ । **ಮಿತ್ರಃ**—ಸಕಲರಿಗೂ ಮಿತ್ರಭೂತನೂ । **ಈಡ್ಯಃ**—ಸ್ತುತ್ಯನೂ । **ಮಾತರಿಶ್ವಾ**— ಅಂತರಿಕ್ಷದಲ್ಲಿ ಸೂರ್ಯರೂಪದಲ್ಲಿ ಸಂಚರಿಸುವವನೂ । **ದೂತಃ**—ದೇವದೂತನೂ ಆದ ಅಗ್ನಿಯು । **ಯಜಥಾಯ**— ಯಜ್ಞಕ್ಕಾಗಿ । **ದೇವಾನ್**—ದೇವತೆಗಳನ್ನು । **ಆ ವಕ್ಷತ್**—ಕರೆತರಲಿ.

॥ ಭಾವಾರ್ಥ ॥

ನಮ್ಮಿಂದ ಸ್ತುತನಾದವನೂ, ಪ್ರಜ್ವಲಿತನಾದುದರಿಂದ ಮಹಾತ್ಮನೂ ಆದ ಅಗ್ನಿಯು ಉತ್ತರವೇದಿಯ ಮಧ್ಯಪ್ರದೇಶದಲ್ಲಿದ್ದುಕೊಂಡು ಅಂತರಿಕ್ಷಸ್ಥನಾದ ಆದಿತ್ಯನಂತೆ ಪ್ರಕಾಶಿಸುತ್ತಾನೆ. ಸಕಲರಿಗೂ ಮಿತ್ರಭೂತನೂ

ಸ್ತುತ್ಯನೂ, ಅಂತರಿಕ್ಷದಲ್ಲಿ ಸೂರ್ಯರೂಪದಲ್ಲಿ ಸಂಚರಿಸುವವನೂ, ದೇವದೂತನೂ ಆದ ಅಗ್ನಿಯು ಯಜ್ಞಕ್ಕಾಗಿ ದೇವತೆಗಳನ್ನು ಕರೆತರಲಿ.

## English Translation.

Praised and (nourished) by fuel, the mighty Agni, stationed on the (altar, the) navel of the earth, in the form of the firmament, has shone (brightly) : may the friendly and adorable Agni who respires in the mid-heaven, the messenger (of the gods), bring them to the sacrifice.

॥ ವಿಶೇಷವಿಷಯಗಳು ॥

**ಸ್ತುತಃ ಸಮಿಧಾ ಯಹ್ವಃ ಅಗ್ನಿಃ ಪೃಥಿವ್ಯಾಃ ನಾಭಾ ದಿವಃ ವರ್ಷ್ಮನ್ ಉತ್ ಅದ್ಯೌತ್—** ಈ ಅಗ್ನಿಯು ಸಮಿಧಾದಿಗಳಿಂದ (ಕಾಷ್ಠಗಳಿಂದ) ಚೆನ್ನಾಗಿ ಹೊತ್ತಿಸಲ್ಪಟ್ಟು ಮಹದ್ರೂಪದಿಂದ ಜಾಜ್ವಲ್ಯಮಾನವಾಗಿ ಉರಿಯುತ್ತಾ ನಮ್ಮಿಂದ ಸ್ತುತಿಸಲ್ಪಡುತ್ತಿರುವನು ಎಂದರೆ ಯಜ್ಞವೇದಿಯಲ್ಲಿ ಪ್ರಜ್ವಲಿಸುತ್ತಿರುವ ಮಹಾಮಹಿಮನಾದ ಅಗ್ನಿಯನ್ನು ನಾವು ಸ್ತೋತ್ರಮಾಡುವೆವು. ಇಂತಹ ಅಗ್ನಿಯು ಪೃಥಿವಿಗೆ ನಾಭಿರೂಪವಾದ (ಮಧ್ಯಪ್ರದೇಶ) ಯಜ್ಞವೇದಿಯಲ್ಲಿ ಸ್ವರ್ಗದಲ್ಲಿರುವ ರೂಪಾಂತರದಂತೆ (ಸೂರ್ಯನಂತೆ) ಬಹಳ ಪ್ರಕಾಶಮಾನವಾಗಿ ಬೆಳಗುತ್ತಿರುವನು.

**ದಿವಃ** ಎಂಬ ಶಬ್ದಕ್ಕೆ ಅಂತರಿಕ್ಷವೆಂದು ಭಾಷ್ಯಕಾರರ ಅರ್ಥವಿವರಣೆ ಇರುವುದು. ಸ್ವರ್ಗವೆಂದು ಬೇಕಾದರೂ ಹೇಳಬಹುದು. ಸ್ವರ್ಗವೆಂಬ ಅರ್ಥವನ್ನು ಹೇಳುವುದಾದರೆ **ದಿವಃ ವರ್ಷ್ಮನ್** ಎಂಬ ಶಬ್ದಗಳಿಗೆ ಸ್ವರ್ಗದಲ್ಲಿ ಅಗ್ನಿರೂಪಾಂತರವಾದ ಆದಿತ್ಯನ ರೂಪದಲ್ಲಿ ಪ್ರಕಾಶಿಸುವನು ಎಂದೂ ದಿವಶ್ಶಬ್ದಕ್ಕೆ ಅಂತರಿಕ್ಷವೆಂದು ಅರ್ಥಮಾಡುವುದಾದರೆ **ದಿವಃ ವರ್ಷ್ಮನ್** ಎಂಬುದಕ್ಕೆ ಅಂತರಿಕ್ಷದಲ್ಲಿರುವ ಅಗ್ನಿಯ ರೂಪಾಂತರವಾದ **ವಿದ್ಯುತ್** ಅಥವಾ ಮಿಂಚಿನಂತೆ ಪ್ರಕಾಶಿಸುವನು ಎಂದೂ ಎರಡುವಿಧವಾದ ಅರ್ಥಗಳನ್ನು ಹೇಳಬಹುದು. ಎಂದರೆ ಯಜ್ಞವೇದಿಯಲ್ಲಿ ಪ್ರತಿಷ್ಠಾಪಿತನಾದ ಅಗ್ನಿಯು ದ್ಯುಸ್ಥಾನದಲ್ಲಿ (ಅಂತರಿಕ್ಷದ ಮೇಲುಭಾಗವಾದ ಸ್ವರ್ಗದಲ್ಲಿ) ಆದಿತ್ಯನ ರೂಪದಂತೆ ಬಹುಪ್ರಕಾಶಮಾನನಾಗಿ ಅಥವಾ ಅಂತರಿಕ್ಷದಲ್ಲಿ ಮೇಘಗಳ ಮಧ್ಯದಲ್ಲಿ ಗೋಚರಿಸುವ ವಿದ್ಯುತ್ಪ್ರಭೆಯಂತೆ (ಮಿಂಚಿನಂತೆ) ಅತಿಪ್ರಕಾಶಮಾನವಾಗಿ ಬೆಳಗುತ್ತಿರುವನು ಎಂದಭಿಪ್ರಾಯವು.

**ನಾಭಾ ಪೃಥಿವ್ಯಾಃ**—ಋಗ್ವೇದದಲ್ಲಿಯೂ ಇತರ ವೇದಗಳಲ್ಲಿಯೂ ಯಜ್ಞವೇದಿಯನ್ನು ಪೃಥಿವಿಯ ನಾಭಿಯೆಂದು (ಮಧ್ಯಪ್ರದೇಶವೆಂದು) ವರ್ಣಿಸುವುದು ರೂಢಿಯು. ಋ. ಸಂ. ೧-೧೬೪-೩೫ ನೇ ಋಕ್ಕಿನ **ಅಯಂ ಯಜ್ಞೋ ಭುವನಸ್ಯ ನಾಭಿಃ** ಎಂಬ ವಾಕ್ಯದಲ್ಲಿಯೂ ತೈ. ಬ್ರಾ. ೨-೬-೭-೧ ರಲ್ಲಿ **ನಾಭಾ ಪೃಥಿವ್ಯಾ ಅಧಿ । ದಿವೋ ವರ್ಷ್ಮನ್ ಸಮಿಧ್ಯತೇ ।** ಎಂಬ ಯಜುರ್ವೇದಮಂತ್ರದಲ್ಲಿಯೂ ಪೃಥಿವಿಯ ನಾಭಿಯೆಂದರೆ ಯಜ್ಞವೇದಿಯೆಂದು ಹೇಳಿದೆ.

**ಮಿತ್ರಃ ಈಡ್ಯಃ ಮಾತರಿಶ್ವಾ ದೂತಃ ಯಜಥಾಯ ದೇವಾನ್ ಆ ವಕ್ಷತ್**—ಈ ಅಗ್ನಿಯು ಸರ್ವರಿಗೂ ಮಿತ್ರಭೂತನು ಎಂದರೆ ಸ್ನೇಹಿತನಂತೆ ಹಿತವನ್ನು ಬಯಸುವವನು. ಆದುದರಿಂದ ಸರ್ವರೂ ಈ ಅಗ್ನಿಯನ್ನು ಸ್ತುತಿಸುವರು ಇಲ್ಲಿ ಅಗ್ನಿಯನ್ನು ಮಾತರಿಶ್ವಾ ಎಂಬ ಶಬ್ದರಿಂದ ಸ್ತುತಿಸಿದೆ. ಮಾತರಿಶ್ವಾ ಎಂಬ ಶಬ್ದಕ್ಕೆ ಸಾಧಾರಣ

ವಾಗಿ ಅಂತರಿಕ್ಷದಲ್ಲಿ ಬೀಸುವ ವಾಯುವೆಂದರ್ಥವಿದ್ದರೂ, **ಮಾತರ್ಯಂತರಿಕ್ಷೇ ಶ್ವಸಿತಿ ಪ್ರಾಣಿತಿ ಸೂರ್ಯರೂಪೇಣ ಚೇಷ್ಟತ ಇತಿ ಮಾತರಿಶ್ವಾ । ಅಥವಾ ಮಾತರ್ಯರಣ್ಯಾಂ ಶ್ವಸಿತಿ ನಿವಸತೀತಿ ಮಾತರಿಶ್ವಾ ।** ಎಂದು ಮಾತರಿಶ್ವಾ ಎಂಬ ಶಬ್ದಕ್ಕೆ ಅಗ್ನಿಯ ಪರವಾಗಿ ಅವಯವಾರ್ಥವನ್ನು ಹೇಳಿರುವರು. ಎಂದರೆ ಅಂತರಿಕ್ಷದಲ್ಲಿ ಸಂಚರಿಸುವ ಸೂರ್ಯನು ಸಕಲಜೀವರಾಶಿಗಳಿಗೂ ಚೈತನ್ಯದಾಯಕನಾಗಿ ಪ್ರಕಾಶಿಸುತ್ತಿರುವನು. ಈ ಸೂರ್ಯನು ದ್ಯುಲೋಕದಲ್ಲಿರುವ ಅಗ್ನಿಯ ರೂಪಾಂತರವೇ ಆಗಿರುವುದರಿಂದ, ಮಾತರಿಶ್ವಾ ಎಂಬ ಶಬ್ದಕ್ಕೆ ಆದಿತ್ಯರೂಪಿಯಾದ ಅಗ್ನಿಯೆಂದು ಹೇಳಬಹುದು. ಅಥವಾ ಅಗ್ನಿಯನ್ನು ಅರಣಿಗಳಲ್ಲಿ (ಮರದ ತುಂಡುಗಳಲ್ಲಿ) ಕಡೆದು ಉತ್ಪತ್ತಿ ಮಾಡುವುದರಿಂದ ಅರಣಿಗಳು ಅಗ್ನಿಗೆ ಮಾತೃಸ್ಥಾನೀಯವು (ತಾಯಿಯರು). ಇಂತಹ ಅರಣಿಗಳಲ್ಲಿ ಅಗ್ನಿಯು ಇರುವವನಾದ್ದರಿಂದ **ಮಾತರಿಶ್ವಾ** ಎಂದರೆ ಅಗ್ನಿಯು ಎಂದು ಇನ್ನೊಂದು ವಿಧವಾದ ರೂಪನಿಷ್ಪತ್ತಿಗೂ ಅರ್ಥವು. ಯಾಸ್ಕರು ಮಾತರಿಶ್ವಾ ಶಬ್ದಕ್ಕೆ **ಮಾತರಿಶ್ವಾ ವಾಯುರ್ಮಾತರ್ಯಂತರಿಕ್ಷೇ ಶ್ವಸಿತಿ ಮಾತರ್ಯಾಶ್ವನಿತೀತಿ ವಾ** (ನಿ. ೭-೨೬) ಎಂದು ನಿರ್ವಚನವನ್ನು ಹೇಳಿರುವರು. **ಮಾತರಿ** ಎಂದರೆ ಅಂತರಿಕ್ಷದಲ್ಲಿ **ಶ್ವಸಿತಿ** ಚಲಿಸುತ್ತಾನೆ. ಆದ್ದರಿಂದ ಅಂತರಿಕ್ಷದಲ್ಲಿ ಚಲಿಸುವ ವಾಯುವು ಎಂದು ಒಂದು ವಿಧವಾದ ಅರ್ಥವು. ಅಥವಾ **ಮಾತರಿ** ಅಂತರಿಕ್ಷದಲ್ಲಿ **ಆಶು** ವೇಗವಾಗಿ **ಅನಿತಿ** (ಗಚ್ಛತಿ) ಸಂಚರಿಸುವನಾದ್ದರಿಂದ ವಾಯುವಿಗೆ ಮಾತರಿಶ್ವನೆಂದು ಹೆಸರು ಎಂದು ಇನ್ನೊಂದು ವಿಧವಾದ ಅರ್ಥ. ಎಂದರೆ–ಅಂತರಿಕ್ಷದಲ್ಲಿ ಸಂಚರಿಸುವ ದೇವತೆಯೆಂದು ಮಾತರಿಶ್ವಾ ಎಂಬ ಶಬ್ದಕ್ಕೆ ಅರ್ಥವನ್ನು ಹೇಳಿದಂತಾಯಿತು. ಅಂತರಿಕ್ಷದಲ್ಲಿ ಸಂಚರಿಸುವವನು ವಾಯುಮಾತ್ರವಲ್ಲ. ಸೂರ್ಯನೂ ಅಂತರಿಕ್ಷದಲ್ಲಿ ಸಂಚರಿಸುವುದರಿಂದ ಸೂರ್ಯನಿಗೂ ಮಾತರಿಶ್ವನೆಂದು ಹೆಸರು. ಸೂರ್ಯನು ದ್ಯುಲೋಕದಲ್ಲಿರುವ ಅಗ್ನಿಯ ರೂಪಾಂತರವಾಗಿರುವುದರಿಂದ ಅಗ್ನಿಯನ್ನು ಇಲ್ಲಿ ಮಾತರಿಶ್ವಾ ಎಂಬ ಶಬ್ದದಿಂದ ವರ್ಣಿಸಿದೆ. ಅಗ್ನಿಯು ದೇವತೆಗಳಿಗೆ ದೂತನೆಂಬ ವಿಷಯವನ್ನು ನಾವು ಹಿಂದೆಯೇ ಹೇಳಿದೇವೆ. ಇಂತಹ ಗುಣಯುಕ್ತನಾದ ಮತ್ತು ದೇವತೆಗಳಿಗೆ ದೂತನಾದ ಅಗ್ನಿಯು ಯಜ್ಞಾರ್ಥವಾಗಿ ಎಂದರೆ ನಾವು ಮಾಡುತ್ತಿರುವ ಈ ಯಜ್ಞದಲ್ಲಿ ಹವಿರಾದಿಗಳದ್ನು ಸ್ವೀಕರಿಸಿ ನಮ್ಮನ್ನು ಅನುಗ್ರಹಿಸುವುದಕ್ಕಾಗಿ ದೇವತೆಗಳನ್ನು ಯಜ್ಞಭೂಮಿಗೆ ಕರೆತರಲಿ ಎಂದು ಇಲ್ಲಿ ಪ್ರಾರ್ಥಿಸಲಾಗಿದೆ.

ಸಂಹಿತಾಪಾಠಃ

ಉದಸ್ತಂಭೀತ್ಸಮಿಧಾ ನಾಕಮೃಷ್ವೋ೩ಗ್ನಿರ್ಭವನ್ನುತ್ತಮೋ ರೋಚನಾನಾಂ ।
ಯದೀ ಭೃಗುಭ್ಯಃ ಪರಿ ಮಾತರಿಶ್ವಾ ಗುಹಾ ಸಂತಂ ಹವ್ಯವಾಹಂ ಸಮೀಧೇ ॥೧೦॥

॥ ಪದಪಾಠಃ ॥

ಉತ್ । ಅಸ್ತಂಭೀತ್ । ಸಂಽಇಧಾ । ನಾಕಂ । ಋಷ್ವಃ । ಅಗ್ನಿಃ । ಭವನ್ । ಉತ್ಽತಮಃ । ರೋಚನಾನಾಂ ।
ಯದಿ । ಭೃಗುಽಭ್ಯಃ । ಪರಿ । ಮಾತರಿಶ್ವಾ । ಗುಹಾ । ಸಂತಂ । ಹವ್ಯಽವಾಹಂ । ಸಂಽಈಧೇ ॥ ೧೦ ॥

॥ ಸಾಯಣಭಾಷ್ಯಂ ॥

**ಋಷ್ವೋ ಮಹಾನಗ್ನಿಃ ಸಮಿಧಾ ತೇಜಸಾ ನಾಕಂ ಸ್ವರ್ಗಮುದಸ್ತಂಭೀತ್ । ಉದಸ್ತಭ್ನಾತ್ । ರೋಚನಾನಾಂ ಶೋಭನಾನಾಂ ತೇಜಸಾಂ ಮಧ್ಯ ಉತ್ತಮೋ ಭವನ್ ಉತ್ಕೃಷ್ಟತಮೋ ಭವನ್ ಮಾತರಿಶ್ವಾ ವಾಯುರ್ಭೃಗುಭ್ಯ ಆದಿತ್ಯಸ್ಯ ರಶ್ಮಿಭ್ಯೋ ಗುಹಾ ಗುಹಾಯಾಂ ಸಂತಂ ಹವ್ಯವಾಹಂ ಹವ್ಯಾನಾಂ ವೋಢಾರಮಗ್ನಿಂ ಯದಿ ಯದಾ ಸಮೀಧೇ ಸಮೈಂದ್ಧ ತದಾ ನಾಕಮುಸ್ತಭ್ನಾದಿತಿ ಸಂಬಂಧಃ ॥**

॥ ಪ್ರತಿಪದಾರ್ಥ ॥

**ಯದಿ**—ಯಾವಾಗ । **ಮಾತರಿಶ್ವಾ**—ವಾಯುವು । **ಭೃಗುಭ್ಯಃ**—ಆದಿತ್ಯರಶ್ಮಿಗಳಿಂದ । **ಗುಹಾ ಸಂತಂ**—ಗುಹೆಯಲ್ಲಿ ಅಡಗಿದ್ದವನೂ । **ಹವ್ಯವಾಹಂ**—ದೇವತೆಗಳಿಗೆ ಹವಿಸ್ಸನ್ನು ವಹಿಸುವವನೂ ಆದ ಅಗ್ನಿಯನ್ನು । **ಸಮೀಧೇ**—ಪ್ರಜ್ವಲಿತನನ್ನಾಗಿ ಮಾಡಿದರೋ (ಆಗ) । **ಋಷ್ವಃ**—ಮಹಾತ್ಮನಾದ । **ಅಗ್ನಿಃ**—ಅಗ್ನಿಯು । **ರೋಚನಾನಾಂ**—ಪ್ರಭಾಯುತವಾದ ತೇಜೋಮಂಡಲಗಳ ಮಧ್ಯದಲ್ಲಿ । **ಉತ್ತಮಃ ಭವನ್**—ಉತ್ಕೃಷ್ಟನಾಗಿದ್ದುಕೊಂಡು । **ಸಮಿಧಾ**—ತನ್ನ ತೇಜಸ್ಸಿನಿಂದ । **ನಾಕಂ**—ಸ್ವರ್ಗವನ್ನು । **ಉದಸ್ತಂಭೀತ್**—ಎತ್ತಿಹಿಡಿದನು.

॥ ಭಾವಾರ್ಥ ॥

ವಾಯುವು, ಗುಹೆಯಲ್ಲಿ ಅಡಗಿದ್ದವನೂ, ದೇವತೆಗಳಿಗೆ ಹವಿಸ್ಸನ್ನು ವಹಿಸುವವನೂ ಆದ ಅಗ್ನಿಯನ್ನು ಆದಿತ್ಯರಶ್ಮಿಗಳಿಂದ ಯಾವಾಗ ಪ್ರಜ್ವಲಿತನಾಗುವಂತೆ ಮಾಡಿದನೋ ಆಗ, ಮಹಾತ್ಮನಾದ ಅಗ್ನಿಯು ಸಕಲ ತೇಜೋಮಂಡಲಗಳ ಮಧ್ಯದಲ್ಲಿ ಅತ್ಯುತ್ಕೃಷ್ಟನಾಗಿದ್ದುಕೊಂಡು ತನ್ನ ತೇಜಸ್ಸಿನಿಂದ ಸ್ವರ್ಗವನ್ನು ಎತ್ತಿಹಿಡಿದನು.

## English Translation.

The mighty Agni, being the best of the heavenly luminaries, sustained the heaven with radiance, when the wind made the bearer of oblations, visible (till then cocecaled) in a cave, fron the Bhrigus.

॥ ವಿಶೇಷವಿಷಯಗಳು ॥

**ಯದಿ ಮಾತರಿಶ್ವಾ ಭೃಗುಭ್ಯಃ ಗುಹಾ ಸಂತಂ ಹವ್ಯವಾಹಂ ಸಮೀಧೇ (ತದಾ) ಋಷ್ವಃ ಅಗ್ನಿಃ ರೋಚನಾನಾಂ ಉತ್ತಮಃ ಭವನ್ ಸಮಿಧಾ ನಾಕಂ ಉದಸ್ತಂಭೀತ್**—ಗುಹೆಯಲ್ಲಿ ಅಡಗಿದ್ದ ಅಂದರೆ ಯಾರ ಕಣ್ಣಿಗೂ ಕಾಣಿಸದಂತೆ ಮರೆಯಾಗಿದ್ದ ಅಗ್ನಿಯನ್ನು ವಾಯುವು ಆದಿತ್ಯರಶ್ಮಿಗಳಿಂದ ಪ್ರಜ್ವಲಿತನಾಗುವಂತೆ ಮಾಡಿದನು ಆಗ ದೇವತೆಗಳಿಗೆ ಹವಿಸ್ಸನ್ನು ಕೊಂಡೊಯ್ಯುವ ಅಗ್ನಿಯು ಸಕಲತೇಜೋಮಂಡಲಗಳ ಮಧ್ಯದಲ್ಲಿರುವ ಸ್ವರ್ಗಲೋಕವನ್ನು ತನ್ನ ಅಸಾಧಾರಣವಾದ ತೇಜಸ್ಸಿನಿಂದ ಬೆಳಗುವಂತೆ ಮಾಡಿದನು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು. ಈ ವಿಷಯವು ಹಿಂದೆ ಋ. ಸಂ. ೧-೭೧-೩ ; ೧-೯೩-೬ ಇತ್ಯಾದಿ ಋಕ್ಕುಗಳಲ್ಲಿ ಹೇಳಲ್ಪಟ್ಟಿದೆ. ಈ ಋಕ್ಕಿನಲ್ಲಿ ಸಾಯಣರು **ಭೃಗುಭ್ಯಃ** ಎಂಬ ಶಬ್ದಕ್ಕೆ **ಆದಿತ್ಯಸ್ಯ ರಶ್ಮಿಭ್ಯಃ**—ಸೂರ್ಯಕಿರಣಗಳ

ಮೂಲಕ ಎಂದು ಅರ್ಥವಿವರಣೆಮಾಡಿದ್ದಾರೆ. ಆದರೆ ಮೇಲೆ ಉದಾಹೃತವಾದ ಋಕ್ಕುಗಳಲ್ಲಿ ಭೃಗು ಶಬ್ದಕ್ಕೆ ಆ ಹೆಸರಿನ ಋಷಿಯೆಂದು ಅರ್ಥ ಮಾಡಲಾಗಿದೆ.

ಅಗ್ನಿಮಥನಕ್ಕೆ ಪೂರ್ವಪ್ರಸಿದ್ಧವಾದ ಒಂದು ಕಥೆ ಇದೆ, ಅದರಲ್ಲಿ ಹೇಳುವಂತೆ—**ಸರ್ವಮಿದಮಂಧಂತಮ ಆಸೀತ್ । ಅಥ ಮಾತರಿಶ್ವಾಕಾಶೇ ಸೂಕ್ಷ್ಮಮಗ್ನಿಮಪಶ್ಯತ್ । ತಮಮುಥ್ನಾತ್ । ಮಥಿತ್ವಾ ಚಾನಯದಿತಿ ।** ಹಿಂದೆ ಲೋಕವೆಲ್ಲವೂ ಕಗ್ಗತ್ತಲೆಯಿಂದ ಆವೃತವಾಗಿದ್ದಿತು. ಆಗ ಮಾತರಿಶ್ವನು ಸೂಕ್ಷ್ಮರೂಪದಿಂದಿರುವ ಅಗ್ನಿಯನ್ನು ಆಕಾಶದಲ್ಲಿ ಗುರ್ತಿಸಿ ಮಥನಮಾಡಿದನು. ಅನಂತರ ಯಜ್ಞಕ್ಕೆ ಅನುಕೂಲವಾಗುವಂತೆ ಆ ಅಗ್ನಿಯನ್ನು ಪೃಥ್ವಿಗೆ ಕರೆತಂದನು. ಎಂದು ಪ್ರಸಿದ್ಧವಾದ ಕಥೆಯು ಋಗ್ವೇದದಲ್ಲಿ—

**ಆನ್ಯಂ ದಿವೋ ಮಾತರಿಶ್ವಾ ಜಭಾರಾಮಥ್ನಾದನ್ಯಂ ಪರಿ ಶ್ಯೇನೋ ಅದ್ರೇಃ ।**

(ಋ. ಸಂ. ೧-೯೩-೬)

**ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ ।**

(ಋ. ಸಂ. ೬-೮-೪)

ಎಂಬ ಋಕ್ಕುಗಳಲ್ಲಿಯೂ ಇತರ ಋಕ್ಕುಗಳಲ್ಲಿಯೂ ಮಾತರಿಶ್ವನು ಕರೆತಂದನಂತರವೇ ಅಗ್ನಿಯು ಯಜ್ಞಗೃಹದಲ್ಲಿ ಬೆಳಗಿದನು ಎಂಬ ಅಗ್ನಿಪ್ರಶಂಸೆಯ ವರ್ಣನವಿದೆ.

**ಮಾತರಿಶ್ವಾ—ಮಾತರಿಶ್ವಾ ವಾಯುರ್ಮಾತರ್ಯಂತರಿಕ್ಷೇ ಶ್ವಸಿತಿ ಮಾತರ್ಯಾಶ್ವನಿತೀತಿ ವಾ।** ಅಂತರಿಕ್ಷದಲ್ಲಿ ಶ್ವಾಸಮಾಡುವುದರಿಂದ ಅಥವಾ ಸಂಚರಿಸುವುದರಿಂದ ವಾಯುವಿಗೆ **ಮಾತರಿಶ್ವ**ನೆಂದು ಹೆಸರು ಬಂದಿದೆ. ಋ. ಸಂ. ೧-೯೬-೪ ನೇ ಋಕ್ಕಿನಲ್ಲಿ ಈ ಪದಕ್ಕೆ ಅಗ್ನಿಯೆಂದೂ ೧-೧೪೧-೩ ನೆಯದರಲ್ಲಿ ಯಜಮಾನನೆಂದೂ ಅರ್ಥಮಾಡುತ್ತಾರೆ. ಆದರೆ ಇಂತಹ ಒಂದೆರಡು ಕಡೆಗಳಲ್ಲಿ ಬಿಟ್ಟು ಉಳಿದೆಡೆಗಳಲ್ಲೆಲ್ಲಾ **ಮಾತರಿಶ್ವಾ** ಎಂದರೆ ವಾಯುವೆಂದೇ ಅರ್ಥವು.

**ಆನ್ಯಂ ಮಾತರಿಶ್ವಾ ದಿವ ಆ ಜಭಾರ**—ಎಂದು ಯಜ್ಞಾತ್ಮನಾದ ಅಗ್ನಿಯ ಅಲೌಕಿವಾದ ಆವಿರ್ಭಾವವೂ ಲೌಕಿಕವಾದ ಉತ್ಪತ್ತಿಯೂ ಅನೇಕ ವಿಧಗಳಲ್ಲಿ ವರ್ಣಿತವಾಗಿದೆ. ಯಜ್ಞಗಳಿಗೆ ಕೇತುವೂ, ವಿದಥಕ್ಕೆ ಸಾಧನವೂ, ಯಾಗಾದಿಗಳ ಪಿತೃವೂ, ಅಧ್ವರಗಳ ರಾಜನೂ (ಋ. ಸಂ. ೩-೩-೩ ; ೩-೧೧-೨ ; ೪-೨-೩ ಇತ್ಯಾದಿ ಋಕ್ಕುಗಳಲ್ಲಿರುವ ವರ್ಣನೆಗಳನ್ನು ನೋಡಿ) ಆದ ಅಗ್ನಿಯ ಆವಿರ್ಭಾವವು ವಿದ್ಯುದ್ರೂಪದಲ್ಲಿ ಮೊದಲು ವಾಯುವಿಗಾಯಿತೆಂದು ಋಕ್ಸಂಹಿತೆಯ—

**ತ್ವಮಗ್ನೇ ಪ್ರಥಮೋ ಮಾತರಿಶ್ವನ ಆವಿರ್ಭವ ಸುಕ್ರತೂ ಯಾ ವಿವಸ್ವತೇ ।**

(ಋ. ಸಂ. ೧-೩೧-೩)

**ಸ ಜಾಯಮಾನಃ ಪರಮೇ ವ್ಯೋಮನ್ವಾವಿರಗ್ನಿರಭವನ್ಮಾತರಿಶ್ವನೇ ।**

(ಋ. ಸಂ. ೧-೧೪೩-೨)

ಮುಂತಾದ ಋಕ್ಕುಗಳಲ್ಲಿ ಹೊಗಳಿದೆ. ಈ ವಾಯುವು ಯಜ್ಞಕರ್ತರಾದ ಭೃಗುವಿಗಾಗಿಯೂ. ಮನುವಿಗಾಗಿಯೂ ಅತ್ಯಂತ ದೂರಪ್ರದೇಶದಲ್ಲಿ ಗೂಢವಾಗಿದ್ದ ಅಗ್ನಿಯನ್ನು ಕರೆತಂದು ಇವರಿಗೆ ಸಹಾಯಮಾಡಿದನು ಎಂದು ಅನೇಕ ಶ್ರುತಿವಾಕ್ಯಗಳಿವೆ. ಉದಾಹರಣೆಗೆ—

ದ್ವಿಜನ್ಮಾನಂ ರಯಿಮಿವ ಪ್ರಶಸ್ತಂ ರಾತಿಂ ಭರದ್ಭೃಗವೇ ಮಾತರಿಶ್ವಾ ।
(ಋ. ಸಂ. ೧-೬೦-೧)

ಯಂ ಮಾತರಿಶ್ವಾ ಮನವೇ ಪರಾವತೋ ದೇವಂ ಭಾಃ ಪರಾವತಃ ।
(ಋ. ಸಂ. ೧-೧೨೮-೨)

ಐನಂ ನಯನ್ಮಾತರಿಶ್ವಾ ಪರಾವತೋ ದೇವೇಭ್ಯೋ ಮಥಿತಂ ಪರಿ ।
(ಋ. ಸಂ. ೩-೯-೫)

ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ ।
(ಋ. ಸಂ ೬-೮-೪)

ಈಳೇನ್ಯಂ ಪ್ರಥಮಂ ಮಾತರಿಶ್ವಾ ದೇವಾಸ್ತತಕ್ಷುರ್ಮನವೇ ಯಜತ್ರಂ ।
(ಋ. ಸಂ. ೧೦-೪೬-೯)

ಇತ್ಯಾದಿ ನಾನಾ ಋಕ್ಕುಗಳಲ್ಲಿ ಮಾತರಿಶ್ವನು ಯಜ್ಞಕರ್ತರಾದ ಭೃಗು ಮತ್ತು ಮನು ಇವರ ಪ್ರಯೋಜನಕ್ಕಾಗಿ ದೂರದೇಶದಲ್ಲಿ ಗುಪ್ತವಾಗಿದ್ದ ಅಗ್ನಿಯನ್ನು ಪೃಥ್ವಿಗೆ ಕರೆತಂದು ಪೃಥ್ವಿಯಲ್ಲಿ ಎಲ್ಲಾ ಪ್ರಜೆಗಳಿಗೂ ಉಪಕಾರ ಮಾಡಿದನೆಂದು ಶ್ರುತಿಪ್ರಸಿದ್ಧವಾಗಿದೆ.

॥ ಸಂಹಿತಾಪಾಠಃ ॥

ಇಳಾಮಗ್ನೇ ಪುರುದಂಸಂ ಸನಿಂ ಗೋಃ ಶಶ್ವತ್ತಮಂ ಹವಮಾನಾಯ ಸಾಧ ।
ಸ್ಯಾನ್ನಃ ಸೂನುಸ್ತನಯೋ ವಿಜಾವಾಗ್ನೇ ಸಾ ತೇ ಸುಮತಿರ್ಭೂತ್ವಸ್ಮೇ ॥ ೧೧ ॥

॥ ಪದಪಾಠಃ ॥

ಇಳಾಂ । ಅಗ್ನೇ । ಪುರುऽದಂಸಂ । ಸನಿಂ । ಗೋಃ । ಶಶ್ವತ್ऽತಮಂ । ಹವಮಾನಾಯ । ಸಾಧ ।
ಸ್ಯಾತ್ । ನಃ । ಸೂನುಃ । ತನಯಃ । ವಿಜಾऽವಾ । ಅಗ್ನೇ । ಸಾ । ತೇ । ಸುऽಮತಿಃ । ಭೂತು । ಅಸ್ಮೇ ಇತಿ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಪುರುದಂಸಂ । ಅಪೋಽಪ್ನೋ ದಂಸೋ ವೇಷ ಇತಿ ಕರ್ಮನಾಮಸು ಪಠಿತತ್ವಾ-ದ್ದಂಸಃಶಬ್ದಃ ಕರ್ಮವಾಚೀ । ಪುರೂಣಿ ಬಹೂನಿ ದಂಸಾಂಸಿ ಕರ್ಮಾಣಿ ಯಸ್ಯಾಃ ಸಾ । ತಾಂ ಬಹುಕ-ರ್ಮಾಣಂ ಗೋಃ ಸನಿಂ ಗವಾದಿಪಶೂನ್ಸಂಪಾದಯಿತ್ರೀಮಿಳಾಮೇತನ್ನಾಮಿಕಾಂ ಗೋರೂಪಾಂ ದೇವತಾಂ ಶಶ್ವತ್ತಮಂ ನಿರಂತರಂ ಹವಮಾನಾಯ ಯಜಮಾನಾಯ ಮಹ್ಯಂ ಸಾಧ । ಸಾಧಯ। ಕಿಂಚ ನೋಽಸ್ಮಾಕಂ ಸೂನುಃ ಪುತ್ರಸ್ತನಯಃ ಪೌತ್ರಃ ಸ್ಯಾದ್ಭವತ್ವಿತಿ ತೇ ತವ ಯಾ ಸುಮತಿಃ ಶೋಭನಾ ಬುದ್ಧಿಃ ಸಾ ವಿಜಾ-ವಾಬಂಧ್ಯಾ ಸತ್ಯಸ್ಮೇ ಅಸ್ಮಾಕಂ ಭೂತು । ಭವತು ॥ ಶಶ್ವತ್ತಮಂ ಉಚ್ಚಾದಿಷು ಪಾಠಾದಂತೋದಾ-ತ್ತತ್ವಂ । ಸಾಧ । ರಾಧ ಸಾಧ ಸಂಸಿದ್ಧೌ । ಅಂತರ್ಭಾವಿತಣ್ಯರ್ಥೋಽಯಂ । ಲೋಟಿ ವ್ಯತ್ಯಯೇನ ಶಪ್ । ಸೇರ್ಹ್ಯಪಿಚ್ಚೇತಿ ಹಿರಾದೇಶಃ । ತಸ್ಯಾತೋ ಹೇರಿತಿ ಲುಕ್ । ನಿಘಾತಃ । ವಿಜಾವಾ । ಜನೀ ಪ್ರಾದುರ್ಭಾವೇ । ಅಸ್ಮಾದನ್ಯೇಭ್ಯೋಽಪಿ ದೃಶ್ಯಂತ ಇತಿ ವನಿಪ್ । ವಿಡ್ವನೋರನುನಾಸಿಕಸ್ಯಾದಿತ್ಯಾತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ । ಲಿಂಗವ್ಯತ್ಯಯಃ ಭೂತು । ಭೂ ಸತ್ತಾಯಾಂ । ಬಹುಲಂ ಛಂದಸೀತಿ ಶಪೋ ಲುಕ್ । ಭೂಸುವೋಸ್ತಿಙೀತಿ ಗುಣಪ್ರತಿಷೇಧಃ ॥**

॥ ಪ್ರತಿಪದಾರ್ಥ ॥

**(ಹೇ) ಅಗ್ನೇ**—ಎಲೈ ಅಗ್ನಿಯೇ । **ಪುರುದಂಸಂ**—ಅನೇಕ ಕರ್ಮವಿಶಿಷ್ಟವೂ । **ಗೋಃ ಸನಿಂ**—ಗವಾದಿ ಪಶುಗಳನ್ನು ಒದಗಿಸುವವಳೂ (ಆದ) । **ಇಳಾಂ**—ಗೋರೂಪಳಾದ ಇಳಾನಾಮಕ ದೇವತೆಯನ್ನು । **ಶಶ್ವತ್ತಮಂ**—ನಿರಂತರವೂ । **ಹವಮಾನಾಯ**—ಯಾಗಾನುಷ್ಠಾನ ಮಾಡುತ್ತಿರುವ ನನಗೆ । **ಸಾಧ**—ಸಾಧಿಸು (ಅನುಗ್ರಹಿಸು) (ಮತ್ತು) । **ನಃ**—ನಮಗೆ । **ಸೂನುಃ**—ಪುತ್ರನೂ । **ತನಯಃ**—ಪೌತ್ರನೂ । **ಸ್ಯಾತ್**—ಆಗಲಿ (ಎಂಬುದಾಗಿ) । **(ಹೇ) ಅಗ್ನೇ**—ಎಲೈ ಅಗ್ನಿಯೇ । **ತೇ**—ನಿನ್ನ । **(ಯಾ) ಸುಮತಿಃ**—ಯಾವ ಶೋಭನವಾದ ಬುದ್ಧಿಯಿದೆಯೋ । **ಸಾ**—ಅದು । **ಅಸ್ಮೇ**—ನಮಗೋಸ್ಕರ । **ವಿಜಾವಾ**—ಅವಂಧ್ಯವು । **ಭೂತು**—ಆಗಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಅನೇಕ ಕರ್ಮಗಳಿಗೆ ಸಹಾಯಕವಾಗುವ ಗವಾದಿ ಪಶುಗಳನ್ನು ಕೊಡುವವಳೂ, ಇಳಾನಾಮಕಳೂ, ಗೋರೂಪಳೂ ಆದ ಭೂಮಿಯು, ನಿರಂತರ ಯಾಗಾಚರಣೆಯಲ್ಲಿ ನಿರತರಾದ ನಮಗೆ ಅನುಕೂಲಿಸುವಂತೆ ಮಾಡು; ಮತ್ತು ಎಲೈ ಅಗ್ನಿಯೇ, ಸ್ತೋತೃಗಳಿಗೆ ಪುತ್ರಪೌತ್ರಾದಿಗಳನ್ನನುಗ್ರಹಿಸಬೇಕೆಂಬ ನಿನ್ನ ಶುಭವಾದ ಬುದ್ಧಿಯು ನಮಗೆ ಯಾವಾಗಲೂ ಅವಂಧ್ಯವಾಗಲಿ (ಸಫಲವಾಗಲಿ).

## English Translation.

Grant, Agni, to the offerer of the oblation, the earth, the bestower of cattle, the means of many (pious rites), such that it may be perpetual: may there be to us sons and grandsons, born in our race, and may your good-will ever be productive of benefits to us.

॥ ವಿಶೇಷವಿಷಯಗಳು ॥

**ಪುರುದಂಸಂ—ಪುರೂಣಿ ಬಹೂನಿ ದಂಸಾನಿ ಕರ್ಮಾಣಿ ಯಸ್ಯಾಃ ಸಾ । ಅಪ್ನಃ ದಂಸಃ** ಎಂಬ ಇಪ್ಪತ್ತಾರು ಕರ್ಮನಾಮಗಳಲ್ಲಿ (ನಿ. ೩-೨) **ದಂಸಶಬ್ದವು** ಉಕ್ತವಾಗಿರುತ್ತದೆ. ಬಹಳ ಕರ್ಮಗಳುಳ್ಳದ್ದೆಂದು ಅರ್ಥ.

**ಗೋಃ ಸನಿಂ—ಗವಾದಿಪಶೂನ್ ಸಂಪಾದಯಿತ್ರೀಂ ।** ಗೋಶಬ್ದಕ್ಕೆ ಪೃಥಿವೀ, ವಾಕ್ಕು, ಪಶು, ರಶ್ಮಿ ಎಂದು ಅನೇಕಾರ್ಥಗಳು ಇರುವುವು. ಗೋಃ ಸನಿಂ ಎಂಬ ಪದಗಳು ಇಳಾ ಎಂಬ ಪದಕ್ಕೆ ವಿಶೇಷಣವಾಗಿರುವುದರಿಂದ ಇಳಾದೇವತೆಯು ಗೋವುಗಳೇ ಮೊದಲಾದವುಗಳೆಲ್ಲವನ್ನೂ ಅನುಗ್ರಹಿಸುವಳೆಂದು ಅರ್ಥವನ್ನು ವರ್ಣಿಸಿದೆ.

**ಇಳಾಂ—ಏತನ್ನಾಮಿಕಾಂ ಗೋರೂಪಾಂ ದೇವತಾಂ ।** ಪೃಥಿವೀನಾಮಗಳಲ್ಲಿ ಇಳಾ ಪದವು (ನಿ. ೨-೫) ಉಕ್ತವಾಗಿದೆ. ವಾಙ್ನಾಮಗಳಲ್ಲಿಯೂ, (ನಿ. ೨-೨೩) ಅನ್ನನಾಮಗಳಲ್ಲಿಯೂ, (ನಿ. ೩-೯) ಗೋನಾಮಗಳಲ್ಲಿಯೂ (ನಿ. ೩-೬) ಉಕ್ತವಾಗಿದೆ. ಮತ್ತು ಇಳಾ ಎಂಬ ಪದವು ಈಶ ಧಾತುವಿನಿಂದ ನಿಷ್ಪನ್ನವಾಗಿದೆ.

**ಅಭಿ ನ ಇಳಾ ಯೂಥಸ್ಯ ಮಾತಾ ಸ್ಮನ್ನದೀಭಿರುರ್ವಶೀ ವಾ ಗೃಣಾತು ।**
**ಉರ್ವಶೀ ವಾ ಬೃಹದ್ದಿವಾ ಗೃಣಾನಾಭ್ಯೂರ್ಣ್ವಾನಾ ಪ್ರಭೃಥಸ್ಯಾಯೋಃ ।**
**ಸಿಷಕ್ತು ನ ಊರ್ಜವ್ಯಸ್ಯ ಪುಷ್ಟೇಃ ॥**

(ಋ. ಸಂ. ೫-೪೧-೧೯, ೨೦)

ಈ ಋಕ್ಕುಗಳಲ್ಲಿ ಇಳಾ ಅಥವಾ ಇಡಾ ಎಂಬ ದೇವಿಯು ಮಧ್ಯಮಸ್ಥಾನದೇವತೆಯೆಂದು ವಿವೃತವಾಗಿದೆ. ಸಾಯಣರು ಗೋವಿನ ಆಕಾರವನ್ನು ಧರಿಸಿರುವ **ಇಳಾ** ಎಂದು ಹೆಸರುಳ್ಳ ದೇವತೆಯೆಂದು ಅರ್ಥವನ್ನು ವಿವರಿಸಿದಾರೆ.

**ಶಶ್ವತ್ತಮಂ ಹವಮಾನಾಯ ಸಾಧ—ನಿರಂತರಂ ಹವಮಾನಾಯ ಯಜಮಾನಾಯ ಮಹ್ಯಂ ಸಾಧಯ ।** ಅಗ್ನಿಯನ್ನು ಯಾವಾಗಲೂ ಹವಿಸ್ಸುಗಳಿಂದ ತೃಪ್ತಿಪಡಿಸುತ್ತಿರುವ ಯಜಮಾನನಿಗೆ ಬೇಕಾದ ಇಷ್ಟಾರ್ಥಗಳನ್ನು ನೆರವೇರಿಸುವ, ಪ್ರಭೂತವಾದ ಮಾಹಾತ್ಮ್ಯದಿಂದ ಪೂರಿತವಾಗಿರುವ, ಗೋರೂಪದಿಂದ ಇರುವ, ಇಳಾ ದೇವತೆಯ ಅನುಗ್ರಹವು ಉಂಟಾಗುವಂತೆ ಅಗ್ನಿಯನ್ನು ಪ್ರಾರ್ಥಿಸಿದೆ.

**ಸೂನುಃ—ಪುತ್ರಃ, ತನಯಃ ಪೌತ್ರಃ ।** ತುಕ್, ತೋಕಂ ಎಂಬ ಹದಿನೈದು ಅಪತ್ಯನಾಮಗಳಲ್ಲಿ (ನಿ. ೩-೨) ತನಯ ಶಬ್ದವೂ, ಸೂನು ಶಬ್ದವೂ ಪಠಿತವಾಗಿದೆ.

**ಏತಾ ವಿಶ್ವಾ ಸವನಾ ತೂತುಮಾ ಕೃಷೇ ಸ್ವಯಂ ಸೂನೋ ಸಹಸೋ ಯಾನಿ ದಧಿಷೇ ।**
**ವರಾಯ ತೇ ಪಾತ್ರಂ ಧರ್ಮಣೇ ತನಾ ಯಜ್ಞೋ ಮಂತ್ರೋ ಬ್ರಹ್ಮೋದ್ಯತಂ ವಚಃ ॥**

(ಋ. ಸಂ. ೧೦ ೫೦-೬)

ಎಂಬ ಈ ಋಕ್ಕಿನಲ್ಲಿ ಸೂನೋ ಎಂಬ ಶಬ್ದಕ್ಕೆ ಪುತ್ರನೆಂದು ಅರ್ಥವನ್ನು ಹೇಳಿ ಅಗ್ನಿಯನ್ನು(ಸಹಸಸ್ಪುತ್ರ) **ಸಹಸಸ್ಸೂನೋ, ಬಲಸ್ಯ ಪುತ್ರ** ಎಂದು ಹೇಳಿದೆ. ಸಾಯಣರು ಸೂನುಶಬ್ದಕ್ಕೆ ಪುತ್ರನೆಂದೂ, ತನಯ ಶಬ್ದಕ್ಕೆ ಪೌತ್ರ (ಪುತ್ರನ ಪುತ್ರ) ಎಂದೂ ಅರ್ಥವನ್ನು ವರ್ಣಿಸಿದ್ದಾರೆ.

**ಸುಮತಿಃ—ಶೋಭನಾ ಬುದ್ಧಿಃ ।** ನಿರುಕ್ತಕಾರರು **ದೇವಸುಮತಿಂ** ಎಂಬಲ್ಲಿ **ದೇವಾನಾಂ ಕಲ್ಯಾಣೀಂ ಮತಿಂ** ದೇವತೆಗಳ ಶುಭಕರವಾದ ಬುದ್ಧಿ ಎಂದೂ, **ವೈಶ್ವಾನರಸ್ಯ ಸುಮತೌ ಸ್ಯಾಮ** ಎಂಬಲ್ಲಿ **ಕಲ್ಯಾಣ್ಯಾಂ ಮತೌ** ಎಂದೂ, **ವಯಂ ದೇವಸ್ಯ ಧೀಮಹಿ ಸುಮತಿಂ ಸತ್ಯಧರ್ಮಣಃ** ಎಂಬಲ್ಲಿಯೂ **ಕಲ್ಯಾಣೀಂ ಮತೀಂ** ಎಂಬ ಇದೇ ಅರ್ಥವನ್ನು ವರ್ಣಿಸಿದ್ದಾರೆ. ಸಾಯಣರು ಅಗ್ನಿಯನ್ನು ಹವಿಸ್ಸುಗಳಿಂದ ತೃಪ್ತಿಗೊಳಿಸಿದ ಯಜಮಾನರ ವಿಷಯದಲ್ಲಿ ಅಗ್ನಿಯು ಅನುಗ್ರಹಿಸಬಹುದಾದ ಪುತ್ರ ಪೌತ್ರಾದಿಗಳ ಉತ್ಪತ್ತಿ ಮತ್ತು ಅಭಿವೃದ್ಧಿಯೇ ಮೊದಲಾದ ಅಗ್ನಿಯ ಕಲ್ಯಾಣಕರವಾದ ಬುದ್ಧಿಯು ಉಂಟಾಗಲಿ ಎಂದು ಪ್ರಾರ್ಥಿಸಿದೆ.



# ಆರನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಪ್ರ ಕಾರವ ಇತ್ಯೇಕಾದಶರ್ಚಂ ಷಷ್ಠಂ ಸೂಕ್ತಂ ವೈಶ್ವಾಮಿತ್ರಮಾಗ್ನೇಯಂ ಪ್ರ ಕಾರವ ಇತ್ಯನುಕ್ರಾಂತತ್ವಾತ್ ॥ ಪ್ರಾತರನುವಾಕಾಶ್ವಿನಶಸ್ತ್ರಯೋಃ ಸೂಕ್ತವಿನಿಯೋಗಃ ಪೂರ್ವಸೂಕ್ತ ಏವ ಪ್ರತ್ಯಗ್ನಿರುಷಸಸ್ತ್ರೀಣೀತ್ಯನೇನೋಕ್ತಃ ॥ ಆದ್ಯಾಗ್ನೇಯೇ ಪಶೌ ಹವಿಷೋ ಯಾಜ್ಯಾ । ಸೂತ್ರಿತಂ ಚ । ಪ್ರ ಕಾರವೋ ಮನನಾ ವಚ್ಯಮಾನಾ ಏಕಾಚೇತತ್ಸರಸ್ವತೀ ನದೀನಾಂ । ಆ. ೩-೭। ಇತಿ ॥ ಐಭಿರಗ್ನ ಇತಿ ಪಾತ್ನೀವತಗ್ರಹಸ್ಯ ಯಾಜ್ಯಾ । ಸೂತ್ರಿತಂ ಚ । ಆಗ್ನೀಧ್ರಃ ಪಾತ್ನೀವತಸ್ಯ ಯಜತ್ಯೈಭಿರಗ್ನೇ ಸರಥಂ ಯಾಹ್ಯರ್ವಾಙಿತಿ । ಆ. ೫-೧೯ । ಇತಿ ॥**

ಅನುವಾದವು—**ಪ್ರ ಕಾರವೋ ಮನನಾ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು; ಅಗ್ನಿಯು ದೇವತೆಯು; ಅನುಕ್ರಮಣಿಕೆಯಲ್ಲಿ **ಪ್ರಕಾರವಃ** ಎಂದು ಮೊದಲಾಗಿ ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನ ಶಸ್ತ್ರಮಂತ್ರಪಠನಕಾಲದಲ್ಲಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದಿನ ಸೂಕ್ತದ ವಿನಿಯೋಗದಲ್ಲಿಯೇ **ಪ್ರತ್ಯಗ್ನಿರುಷಸಸ್ತ್ರೀಣಿ** ಎಂಬ ಸೂತ್ರದಿಂದ ಹೇಳಲಾಗಿದೆ. ಈ ಸೂಕ್ತದ ಮೊದಲನೆಯ ಋಕ್ಕನ್ನು ಅಗ್ನಿಯನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿ ಹವಿಸ್ಸನ್ನು ಹೋಮಮಾಡುವಾಗ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಪ್ರ ಕಾರವೋ ಮನನಾ ವಚ್ಯಮಾನಾ ಏಕಾ ಚೇತತ್ಸರಸ್ವತೀ ನದೀನಾಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೩-೭). ಮತ್ತು ಈ ಸೂಕ್ತದ **ಐಭಿರಗ್ನೇ** (ಈ ಸೂಕ್ತದ ೯ನೆಯ ಋಕ್ಕು) ಎಂಬ ಋಕ್ಕನ್ನು ಪಾತ್ನೀವತಗ್ರಹದ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಆಗ್ನೀಧ್ರಃ ಪಾತ್ನೀವತಸ್ಯ ಯಜತ್ಯೈಭಿರಗ್ನೇ ಸರಥಂ ಯಾಹ್ಯರ್ವಾಙಿತಿ** ಎಂಬ ಸೂತ್ರದಿಂದ ವಿವೃತ ವಾಗಿರುವುದು (ಆ. ೫-೧೯).

## ಸೂಕ್ತ—೬

ಮಂಡಲ—೩ ॥ ಅನುವಾಕ—೧ ॥ ಸೂಕ್ತ—೬ ॥
ಅಷ್ಟಕ—೨ ॥ ಅಧ್ಯಾಯ—೮ ॥ ವರ್ಗ—೨೬, ೨೭ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
ಋಷಿಃ—ವಿಶ್ವಾಮಿತ್ರಃ ॥
ದೇವತಾ—ಅಗ್ನಿಃ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪ್ರ ಕಾರವೋ ಮನನಾ ವಚ್ಯಮಾನಾ ದೇವದ್ರೀಚೀಂ ನಯತ ದೇವಯಂತಃ ।
ದಕ್ಷಿಣಾವಾಡ್ವಾಜಿನೀ ಪ್ರಾಚ್ಯೇತಿ ಹವಿರ್ಭರಂತ್ಯಗ್ನಯೇ ಘೃತಾಚೀ ॥ ೧ ॥

॥ ಪದಪಾಠಃ ॥

ಪ್ರ । ಕಾರವಃ । ಮನನಾ । ವಚ್ಯಮಾನಾಃ । ದೇವದ್ರೀಚೀಂ । ನಯತ । ದೇವಯಂತಃ ।
ದಕ್ಷಿಣಾವಾಟ್ । ವಾಜಿನೀ । ಪ್ರಾಚೀ । ಏತಿ । ಹವಿಃ । ಭರಂತೀ । ಅಗ್ನಯೇ । ಘೃತಾಚೀ ॥ ೧ ॥

॥ ಸಾಯಣಭಾಷ್ಯಂ ॥

ಹೇ ಕಾರವಃ ಕರ್ತಾರೋ ದೇವಯಂತೋ ದೇವಕಾಮಾ ಯೂಯಂ ಮನನಾ ಮನನೇನ ಮಂತ್ರೇಣ ವಚ್ಯಮಾನಾಃ ಪ್ರೇರ್ಯಮಾಣಾಃ ಸಂತೋ ದೇವದ್ರೀಚೀಂ ದೇವಾನಂಚಂತೀಂ ಸ್ರುಚಂ ಪ್ರಣಯತ । ಪ್ರಕರ್ಷೇಣ ನಯತ । ಪ್ರಾಪಯತ । ದಕ್ಷಿಣಾವಾಟ್ ಆಹವನೀಯಸ್ಯ ದಕ್ಷಿಣತ ಉಹ್ಯಮಾನಾ ವಾಜಿನ್ಯನ್ನವತೀ ಪ್ರಾಚೀ ಪ್ರಾಗಗ್ರಾಗ್ನಯೇಽಗ್ನ್ಯರ್ಥಂ ಹವಿರ್ಭರಂತೀ ಹವಿರ್ಧಾರಯಂತೀ ಘೃತಾಚೀ ಘೃತೇನಾಕ್ತಾ ಸ್ರುಕ್ ಏತಿ । ಗಚ್ಛತಿ ॥

॥ ಪ್ರತಿಪದಾರ್ಥ ॥

**ಕಾರವಃ**—ಎಲೈ ಯಜ್ಞಕರ್ತರೇ । **ದೇವಯಂತಃ**—ದೈವಭಕ್ತರಾದ ನೀವು । **ಮನನಾ**—ಧ್ಯಾನಾತ್ಮಕವಾದ ಸ್ತೋತ್ರದಿಂದ । **ವಚ್ಯಮಾನಾಃ**—ಪ್ರೇರಿತರಾಗಿ । **ದೇವದ್ರೀಚೀಂ**—ದೇವತೆಗಳನ್ನು ಸಮೀಪಿಸಿ ಪೂಜಿಸತಕ್ಕ ಸ್ರುಕ್ಪಾತ್ರೆಯನ್ನು । **ಪ್ರ ನಯತ**—ತೆಗೆದುಕೊಂಡು ಬನ್ನಿ । **ದಕ್ಷಿಣಾವಾಟ್**—ಆಹವನೀಯದ ದಕ್ಷಿಣಭಾಗಕ್ಕೆ ಒಯ್ಯಲ್ಪಡತಕ್ಕದ್ದೂ । **ವಾಜಿನೀ**—ಅನ್ನದಿಂದ ಪೂರ್ಣವಾದುದೂ । **ಪ್ರಾಚೀ**—ಪೂರ್ವಾಭಿಮುಖವಾಗಿ ಹಿಡಿಯಲ್ಪಟ್ಟುದೂ । **ಅಗ್ನಯೇ**—ಅಗ್ನ್ಯರ್ಥವಾಗಿ । **ಹವಿಃ**—ಹವಿಸ್ಸನ್ನು । **ಭರಂತೀ**—ವಹಿಸಿರುವುದೂ । **ಘೃತಾಚೀ**—ಘೃತದಿಂದ ಪೂರ್ಣವಾದುದೂ ಆದ ಸ್ರುಕ್ಪಾತ್ರೆಯು । **ಏತಿ**—ಅಗ್ನಿಯನ್ನು ಸಮೀಪಿಸುತ್ತದೆ.

‖ ಭಾವಾರ್ಥ ‖

ಎಲೈ ಯಜ್ಞಕರ್ತರೇ, ದೈವಭಕ್ತರಾದ ನೀವು ಧ್ಯಾನಾತ್ಮಕವಾದ ಸ್ತುತಿಯಿಂದ ಪ್ರೇರಿತರಾಗಿ ದೇವತೆಗಳನ್ನು ಪೂಜಿಸುವ ಸಾಧನವಾದ ಸ್ರುಕ್ಪಾತ್ರೆಯನ್ನು ತೆಗೆದುಕೊಂಡು ಬನ್ನಿ. ಆಹವನೀಯದ ದಕ್ಷಿಣಭಾಗಕ್ಕೆ ಒಯ್ಯಲ್ಪಡ ತಕ್ಕದ್ದೂ, ಅನ್ನದಿಂದ ಪೂರ್ಣವಾದುದೂ, ಪೂರ್ವಾಭಿಮುಖವಾಗಿ ಹಿಡಿಯಲ್ಪಟ್ಟಿದ್ದೂ, ಅಗ್ನ್ಯರ್ಥವಾಗಿ ಹವಿಸ್ಸನ್ನು ವಹಿಸಿರುವುದೂ, ಘೃತದಿಂದ ಪೂರ್ಣವಾದುದೂ ಆದ ಸ್ರುಕ್ಪಾತ್ರೆಯು ಅಗ್ನಿಯನ್ನು ಸಮೀಪಿಸುತ್ತದೆ

## English Translation·

Devout ministrants, who are to be inspired by prayer, bring forth (the ladle) destined for the worship of the gods, which is to be conveyed to the south (of the fire-altar), and which charged with (sacrificial) food, pointed to the east, containing the oblation, and filled with liquefied butter, proceeds to Agni.

‖ ವಿಶೇಷವಿಷಯಗಳು ‖

**ಕಾರವಃ ದೇವಯಂತಃ ಮನಸಾ ವಚ್ಯಮಾನಾಃ ದೇವದ್ರೀಚೀಂ ಪ್ರ ನಯತ—ಕಾರವಃ** ಎಂಬ ಶಬ್ದವು ಸ್ತೋತೃನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೯). **ಡುಕೃಞ್ ಕರಣೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಮಾಡುವವರು ಎಂದು ಸಾಧಾರಣಾರ್ಥವು. ಆದರೆ ಋಗ್ವೇದದಲ್ಲಿ ಸ್ತೋತ್ರಮಾಡುವವರು ಅಥವಾ ಯಜ್ಞಕರ್ತರು ಎಂಬರ್ಥದಲ್ಲಿಯೇ ಸಾಧಾರಣವಾಗಿ ಈ ಶಬ್ದದ ಪ್ರಯೋಗವಿರುವುದು. ಈ ವಾಕ್ಯದಲ್ಲಿ ಯಜ್ಞಮಾಡುವ ಯಜಮಾನನು ಋತ್ವಿಕ್ಕುಗಳನ್ನು ಸಂಬೋಧಿಸಿ ಹೇಳುವನು—ಎಲೈ ಸ್ತೋತೃಗಳೇ, ದೇವತೆಗಳು ಈ ಯಜ್ಞಭೂಮಿಗೆ ಬರಬೇಕೆಂದು ಅಪೇಕ್ಷಿಸುತ್ತಿರುವ ನೀವು ಮನಸ್ಸಿನಲ್ಲಿ ದೇವತೆಗಳನ್ನೇ ಧ್ಯಾನಮಾಡುತ್ತಾ ಪಠಿಸುವ ಮಂತ್ರಗಳಿಂದ ಪ್ರೇರಿತರಾಗಿ ಅಗ್ನಿಯಲ್ಲಿ ಆಜ್ಯಾದಿಗಳನ್ನು ಹೋಮಮಾಡುವುದಕ್ಕೆ ಉಪಯೋಗಿಸುವ **ಸ್ರುಕ್** ಎಂಬ ಮರದ ಸೌಟನ್ನು ಹೋಮಾರ್ಥವಾಗಿ ತೆಗೆದುಕೊಂಡು ಬನ್ನಿ ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು.

**ದಕ್ಷಿಣಾವಾಟ್ ವಾಜಿನೀ ಪ್ರಾಚೀ ಅಗ್ನಯೇ ಹವಿಃ ಭರಂತೀ ಘೃತಾಚೀ ಏತಿ—**ಮೇಲೆ ಹೇಳಿದ ಸ್ರುಕ್‌ನ ಗುಣಗಳನ್ನು ಈ ವಾಕ್ಯದಲ್ಲಿ ವಿವರಿಸಲಾಗಿದೆ. ಹೋಮಾರ್ಥವಾಗಿ ಈ ಸ್ರುಕ್ಕನ್ನು ಯಜ್ಞವೇದಿಯಲ್ಲಿರುವ ಆಹವನೀಯಾಗ್ನಿಯ ದಕ್ಷಿಣಭಾಗದಲ್ಲಿ ಋತ್ವಿಕ್ಕುಗಳು ಕುಳಿತಿರುವ ಸ್ಥಳಕ್ಕೆ ಇದನ್ನು ತೆಗೆದುಕೊಂಡು ಹೋಗುವುದ ರಿಂದ ಈ ವಿಷಯವನ್ನು ಇಲ್ಲಿ **ದಕ್ಷಿಣಾವಾಟ್** ಎಂಬ ಶಬ್ದದಿಂದ ವಿವರಿಸಿದೆ. ಮತ್ತು ಈ ಸ್ರುಕ್ಕಿನಲ್ಲಿ ಹವೀರೂಪವಾದ ಅನ್ನವನ್ನು ಹೋಮಾರ್ಥವಾಗಿ ತುಂಬಿ ಇರಿಸಲಾಗಿದೆ. ಇದರಲ್ಲಿ ಆಜ್ಯವನ್ನೂ ತುಂಬಿದೆ. ಇಂತಹ ಹವಿಸ್ಸು (ಅನ್ನ) ಮತ್ತು ತುಪ್ಪದಿಂದ ತುಂಬಿ ಸಿದ್ಧವಾಗಿರುವ **ಸ್ರುಕ್** ಎಂಬ ಹೋಮದ ಸೌಟನ್ನು ಪೂರ್ವಾಭಿಮುಖವಾಗಿ ಅಗ್ನಿಯಲ್ಲಿ ಹೋಮಮಾಡುವುದಕ್ಕಾಗಿ ಅಗ್ನಿಯ ಸಮೀಪದಲ್ಲಿ ಇಟ್ಟಿರುವರು. **ವಾಜಃ** ಎಂಬ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ (ನಿ. ೩-೯) **ಘೃತಾಚೀ** ಎಂಬ ಶಬ್ದವು ರಾತ್ರಿನಾಮಗಳಲ್ಲಿ ಪಠಿತವಾಗಿದ್ದರೂ (ನಿ. ೨-೧೮) ಇಲ್ಲಿ ಘೃತ (ತುಪ್ಪ) ದಿಂದ ಪೂರ್ಣವಾದ **ಸ್ರುಕ್** ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.



॥ ಸಂಹಿತಾಪಾಠಃ ॥

ಆ ರೋದಸೀ ಅಪೃಣಾ ಜಾಯಮಾನ ಉತ ಪ್ರ ರಿಕ್ಥಾ ಅಧ ನು ಪ್ರಯಜ್ಯೋ ।
ದಿವಶ್ಚಿದಗ್ನೇ ಮಹಿನಾ ಪೃಥಿವ್ಯಾ ವಚ್ಯಂತಾಂ ತೇ ವಹ್ನಯಃ ಸಪ್ತಜಿಹ್ವಾಃ ॥ ೨ ॥

॥ ಪದಪಾಠಃ ॥

ಆ । ರೋದಸೀ ಇತಿ । ಅಪೃಣಾಃ । ಜಾಯಮಾನಃ । ಉತ । ಪ್ರ । ರಿಕ್ಥಾಃ । ಅಧ । ನು । ಪ್ರಯಜ್ಯೋ ಇತಿ ಪ್ರಽಯಜ್ಯೋ ।
ದಿವಃ । ಚಿತ್ । ಅಗ್ನೇ । ಮಹಿನಾ । ಪೃಥಿವ್ಯಾಃ । ವಚ್ಯಂತಾಂ । ತೇ । ವಹ್ನಯಃ । ಸಪ್ತಽಜಿಹ್ವಾಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಜಾಯಮಾನಸ್ತ್ವಂ ರೋದಸೀ ದ್ಯಾವಾಪೃಥಿವ್ಯೌ ಆ ಅಪೃಣಾಃ । ಆಪೂರಯಃ । ಕಿಂಚ ಹೇ ಪ್ರಯಜ್ಯೋ ಯಷ್ಟವ್ಯ ದಿವಶ್ಚಿತ್ ದಿವಶ್ಚಾಂತರಿಕ್ಷಾತ್ಪೃಥಿವ್ಯಾಶ್ಚ ಮಹಿನಾ ಮಹಿಮ್ನಾ ಪ್ರರಿಕ್ಥಾಃ । ಅತಿರಿಕ್ತಶ್ಚಾಸಿ । ಅನೇನ ವಹ್ನೇರತಿಶಯ ಉಕ್ತಃ । ಏವಂವಿಧಸ್ಯ ತೇ ತವ ವಹ್ನಯೋಽಗ್ನಯೋಽಂಶಭೂತಾ ವಹ್ನಯ ಆಹವನೀಯಾದಯೋ ವಚ್ಯಂತಾಂ । ಕಿಂವಿಧಾಸ್ತೇ । ಸಪ್ತಜಿಹ್ವಾಃ । ಸಪ್ತಜಿಹ್ವಾತ್ಮಕಾಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಜಾಯಮಾನಃ**—(ನೀನು, ಉತ್ಪನ್ನನಾದೊಡನೆಯೇ । **ರೋದಸೀ**—ದ್ಯಾವಾಪೃಥಿವಿಗಳೆರಡನ್ನೂ । **ಆ ಅಪೃಣಾಃ**—ವ್ಯಾಪಿಸಿದ್ದೀಯೆ । **ಉತ**—ಮತ್ತು । **ಪ್ರಯಜ್ಯೋ**—ಯಜ್ಞಾರ್ಹನಾದ ಎಲೈ ಅಗ್ನಿಯೇ । **ಮಹಿನಾ**—ನಿನ್ನ ಮಹಿಮೆಯಿಂದ । **ದಿವಶ್ಚಿತ್**—ಅಂತರಿಕ್ಷಕ್ಕಿಂತಲೂ । **ಪೃಥಿವ್ಯಾಃ**—ಪೃಥಿವಿಗಿಂತಲೂ । **ಪ್ರ ರಿಕ್ಥಾಃ**—ಮೀರಿ ವ್ಯಾಪಿಸಿದ್ದೀಯೆ । **ಸಪ್ತಜಿಹ್ವಾಃ**—ಸಪ್ತಸಂಖ್ಯಾಕವಾದ ಜಿಹ್ವಾತ್ಮಕವಾದ । **ತೇ**—ನಿನ್ನ । **ವಹ್ನಯಃ**—ಆಹವನೀಯಾದಿ ಪ್ರಭೇದಗಳು । **ವಚ್ಯಂತಾಂ**—ಸ್ತುತಿಸಲ್ಪಡಲಿ.

॥ ಭಾವಾರ್ಥ ॥

ಯಜ್ಞಾರ್ಹನಾದ ಎಲೈ ಅಗ್ನಿಯೇ, ನೀನು ಉತ್ಪನ್ನನಾದೊಡನೆಯೇ ದ್ಯಾವಾಪೃಥಿವಿಗಳೆರಡನ್ನೂ ವ್ಯಾಪಿಸಿದ್ದೀಯೆ. ಮತ್ತು ನಿನ್ನ ಮಹಿಮೆಯಿಂದ ಪೃಥಿವ್ಯಂತರಿಕ್ಷಗಳನ್ನೂ ಮೀರಿ ವ್ಯಾಪಿಸಿದ್ದೀಯೆ. ಸಪ್ತಜಿಹ್ವಾತ್ಮಕಗಳಾದ ನಿನ್ನ ಆಹವನೀಯಾದಿ ಪ್ರಭೇದಗಳು ಸ್ತುತಿಸಲ್ಪಡಲಿ.

English Translation.

Agni, as soon as born, occupy both heaven and earth ; for you, to whom sacrifice is to be offered, exceed in magnitude the firmament and the earth : may your seven-tongued fires be glorified.

॥ ವಿಶೇಷವಿಷಯಗಳು ॥

**ಅಗ್ನೇ ಜಾಯಮಾನಃ ರೋದಸೀ ಆ ಅಪೃಣಾಃ**—ಎಲೈ ಅಗ್ನಿಯೇ, ನೀನು ಉತ್ಪನ್ನನಾದ ಒಡನೆಯೇ ನಿನ್ನ ಪ್ರಕಾಶದಿಂದ ದ್ಯಾವಾಪೃಥಿವಿಗಳನ್ನೆಲ್ಲಾ ವ್ಯಾಪಿಸಿರುವೆ. ಇಲ್ಲಿ ಅಗ್ನಿಯೆಂದರೆ ಅಗ್ನಿಯ ದ್ಯುಸ್ಥಾನದ ರೂಪಾಂತರವಾದ ಆದಿತ್ಯನೆಂಬ ಅರ್ಥವನ್ನು ಹೇಳಬಹುದು. ಅಗ್ನಿಯು ಉತ್ಪನ್ನನಾದ ಒಡನೆಯೇ ಎಂದರೆ ಅಗ್ನಿಯ ರೂಪಾಂತರವಾದ ಆದಿತ್ಯನು (ಸೂರ್ಯನು) ಉದಯಿಸಿದ ಒಡನೆಯೇ ಭೂಮ್ಯಂತರಿಕ್ಷಗಳೆಲ್ಲಾ ಅವನ ಪ್ರಕಾಶದಿಂದ ತುಂಬಿಹೋಗುವವು ಎಂದು ಮುಖ್ಯಾಭಿಪ್ರಾಯವು. ರೋದಸೀ ಎಂಬ ಶಬ್ದವು ದ್ಯಾವಾಪೃಥಿವಿನಾಮಗಳಲ್ಲಿ ಪಠಿತವಾಗಿದೆ. (ನಿ. ೩–೩೦).

**ಉತ ಪ್ರಯಜ್ಯೋ ಮಹಿನಾ ದಿವಶ್ಚಿತ್ ಪೃಥಿವ್ಯಾಃ ಪ್ರ ರಿಕ್ಥಾಃ**—ಇದಲ್ಲದೆ ಎಲೈ ಅಗ್ನಿಯೇ, ಯಜ್ಞಾದಿಗಳಲ್ಲಿ ಪೂಜಿಸಲ್ಪಡುವ ನೀನು ನಿನ್ನ ಅಪಾರವಾದ ಮಹಿಮೆಯಿಂದ ಭೂಮಿ ಮತ್ತು ಅಂತರಿಕ್ಷಕ್ಕಿಂತಲೂ ಅತಿಕ್ರಮಿಸಿ ವ್ಯಾಪಿಸಿರುತ್ತೀಯೆ. ಇಲ್ಲಿ ಪೃಥಿವ್ಯಾಃ ಎಂಬ ಶಬ್ದವು (**ಪ್ರಥು ವಿಸ್ತಾರೇ**) ಅತ್ಯಂತ ವಿಸ್ತಾರವಾದ ಭೂಮಿ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಅಂತರಿಕ್ಷ(ಅಥವಾ ಸ್ವರ್ಗ)ವೂ ಸಹ ನಮಗೆ ಕಣ್ಣಿಗೆ ಕಾಣಿಸುವುದಕ್ಕಿಂತಲೂ ಬಹಳ ದೂರದವರೆಗೆ ವ್ಯಾಪಿಸಿರುವುದೆಂಬುದು ಅನುಭವವೇದ್ಯವಾಗಿದೆ. ಇಂತಹ ಅತಿವಿಸ್ತಾರವಾದ ಭೂಮ್ಯಂತರಿಕ್ಷಗಳಿಗಿಂತಲೂ ಆಚೆಗೆ ಅಗ್ನಿಯು ವ್ಯಾಪಿಸಿರುವನೆಂದು ಅಭಿಪ್ರಾಯವು.

**ತೇ ಸಪ್ತಜಿಹ್ವಾ ವಹ್ನಯಃ ವಚ್ಯಂತಾಂ**—ಇಂತಹ ನಿನ್ನ ಏಳುವಿಧ ಜಿಹ್ವೆ ಅಥವಾ ಜ್ವಾಲೆಗಳಿಂದ ಕೂಡಿದ ಆಹವನೀಯಾದಿ ಅಗ್ನಿಪ್ರಭೇದಗಳು ಸ್ತುತಿಸಲ್ಪಡಲಿ. ಅಗ್ನಿಗೆ ಜ್ವಾಲೆಗಳೇ ಜಿಹ್ವೆಯು (ನಾಲಗೆಯು). ಈ ಜಿಹ್ವೆಗಳು ಏಳು ಇರುವುದೆಂದು ಇಲ್ಲಿ ಹೇಳಿದೆ. ಪುರಾಣಾದಿಗಳಲ್ಲಿ ಈ ಸಪ್ತಜಿಹ್ವೆಗಳಿಗೂ ಕಾಲೀ, ಕರಾಳೀ ಇತ್ಯಾದಿ ಬೇರೆಬೇರೆ ಹೆಸರುಗಳಿವೆ. ಇಲ್ಲಿ ವಹ್ನಯಃ ಎಂಬ ಬಹುವಚನಾಂತಶಬ್ದವು–ಯಜ್ಞವೇದಿಯಲ್ಲಿ ಸ್ಥಾಪಿಸಲ್ಪಟ್ಟು, ಹೋಮಮಾಡಲ್ಪಡುವ ಹವಿರಾದಿಗಳನ್ನು ದೇವತೆಗಳಿಗೆ ಒಯ್ಯುವ ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿ ಎಂಬ ಅಗ್ನಿಯ ಪ್ರಭೇದಗಳೆಂದು ತಿಳಿಯಬೇಕು. ಇಂತಹ ಅಗ್ನಿಗಳನ್ನು ನಾವು ಸ್ತುತಿಸುತ್ತೇವೆ ಎಂದು ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ದ್ಯೌಶ್ಚ ತ್ವಾ ಪೃಥಿವೀ ಯಜ್ಞಿಯಾಸೋ ನಿ ಹೋತಾರಂ ಸಾದಯಂತೇ ದಮಾಯ ।
ಯದೀ ವಿಶೋ ಮಾನುಷೀರ್ದೇವಯಂತೀಃ ಪ್ರಯಸ್ವತೀರೀಳತೇ ಶುಕ್ರಮರ್ಚಿಃ ॥೩॥

॥ ಪದಪಾಠಃ ॥

ದ್ಯೌಃ । ಚ । ತ್ವಾ । ಪೃಥಿವೀ । ಯಜ್ಞಿಯಾಸಃ । ನಿ । ಹೋತಾರಂ । ಸಾದಯಂತೇ । ದಮಾಯ ।
ಯದಿ । ವಿಶಃ । ಮಾನುಷೀಃ । ದೇವಯಂತೀಃ । ಪ್ರಯಸ್ವತೀಃ । ಈಳತೇ । ಶುಕ್ರಂ । ಅರ್ಚಿಃ ॥ ೩ ॥

॥ ಸಾಯಣಭಾಷ್ಯಂ ॥

ದ್ಯೌಶ್ಚಾಂತರಿಕ್ಷಂ ಪೃಥಿವೀ ಚ ಯಜ್ಞಿಯಾಸೋ ಯಜ್ಞಾರ್ಹಾ ದೇವಾಶ್ಚ ಹೋತಾರಂ ತ್ವಾ ತ್ವಾಂ ದಮಾಯ । ದಮೋ ಯಜ್ಞಃ । ತಸ್ಮಾ ಅರ್ಥಂ ನಿಷಾದಯಂತೇ । ಉಪಶಮಯಂತಿ । ಯದಿ ಯದಾ ಮಾನುಷೀರ್ಮನೋಃ ಸಂಬಂಧಿನ್ಯೋ ದೇವಯಂತೀರ್ದೇವಕಾಮಾಃ ಪ್ರಯಸ್ವತೀರ್ಹವಿಷ್ಮತ್ಯೋ ವಿಶಃ ಪ್ರಜಾ ಹೋತಾರಃ ಶುಕ್ರಂ ದೀಪ್ತಮರ್ಚಿರೀಳತೇ । ಸ್ತುವಂತಿ ॥

॥ ಪ್ರತಿಪದಾರ್ಥ ॥

**ಯದಿ**—ಯಾವಾಗ । **ಮಾನುಷೀಃ**—ಮನುವಿನ ಸಂತತಿಯವರೂ । **ದೇವಯಂತೀಃ**—ದೈವ ಭಕ್ತರೂ । **ಪಯಸ್ವತೀಃ**—ಹವಿಸ್ಸನ್ನು ಹೊಂದಿರುವವರೂ ಆದ । **ವಿಶಃ**—ಪ್ರಜೆಗಳು । **ಶುಕ್ರಂ**—ಪ್ರಭಾ ಯುತವಾದ । **ಅರ್ಚಿಃ**—ಜ್ವಾಲೆಯನ್ನು । **ಈಳತೇ**—ಸ್ತುತಿಸುತ್ತಾರೆಯೋ (ಆಗ) । **ದ್ಯೌಶ್ಚ**—ಅಂತರಿಕ್ಷವೂ । **ಪೃಥಿವೀ**—ಪೃಥಿವಿಯೂ । **ಯಜ್ಞಿಯಾಸಃ**—ಯಜ್ಞಾರ್ಹರಾದ ದೇವತೆಗಳಿಗೂ । **ಹೋತಾರಃ**—ಹೋತೃ ರೂಪನಾದ । **ತ್ವಾ**—ನಿನ್ನನ್ನು । **ದಮಾಯ**—ಯಜ್ಞಾರ್ಥವಾಗಿ । **ನಿ ಸಾದಯಂತೇ**—ಸಮಾಧಾನಪಡಿಸು ತ್ತಾರೆ (ಪೂಜಿಸುತ್ತಾರೆ).

॥ ಭಾವಾರ್ಥ ॥

ಎಲೈ ಅಗ್ನಿಯೇ, ಮನುವಿನಿಂದ ಉತ್ಪನ್ನರಾದವರೂ, ದೈವಭಕ್ತರೂ, ಹವಿಸ್ಸನ್ನು ಹೊಂದಿರುವವರೂ ಆದ ಪ್ರಜೆಗಳು ಪ್ರಭಾಯುತವಾದ ನಿನ್ನ ಜ್ವಾಲೆಯನ್ನು ಯಾವಾಗ ಸ್ತುತಿಸುತ್ತಾರೆಯೋ, ಆಗ ಅಂತರಿಕ್ಷವೂ, ಪೃಥಿವಿಯೂ, ಯಜ್ಞಾರ್ಹರಾದ ದೇವತೆಗಳೂ, ಹೋತೃರೂಪನಾದ ನಿನ್ನನ್ನು ಯಜ್ಞಾರ್ಥವಾಗಿ ಪೂಜಿಸಿ ತೃಪ್ತಿ ಪಡಿಸುತ್ತಾರೆ.

English Translation.

The firmament and the earth and the adorable (gods) propitiate you their invoker, for the (completion of the) sacrifice, whenever the descendants of Manu, pious, and bearing oblations, glorify your radiant flame.

॥ ವಿಶೇಷವಿಷಯಗಳು ॥

**ಯದಿ ಮಾನುಷೀಃ ದೇವಯಂತೀಃ ಪಯಸ್ವತೀಃ ವಿಶಃ ಶುಕ್ರಂ ಅರ್ಚಿಃ ಈಳತೇ ದ್ಯೌಶ್ಚ ಪೃಥಿವೀ ಯಜ್ಞಿಯಾಸಃ ಹೋತಾರಂ ತ್ವಾ ದಮಾಯ ನಿ ಸಾದಯಂತೇ**—ಎಲೈ ಅಗ್ನಿಯೇ, ದೇವತೆಗಳನ್ನು ಪೂಜಿಸಿ ಅವರ ಅನುಗ್ರಹವನ್ನು ಪಡೆಯಬೇಕೆಂಬ ಇಚ್ಛೆಯುಳ್ಳ ಮಾನವರು (ಮಾನವ ಪ್ರಜೆಗಳು) ದೇವತೆಗಳಿಗೆ ಅರ್ಪಿಸುವುದಕ್ಕೆ ಹವಿಸ್ಸನ್ನು ಸಿದ್ಧಪಡಿಸಿಕೊಂಡು ನಿನ್ನ (ಅಗ್ನಿಯಲ್ಲಿ ಹೋಮ ಮಾಡುವುದರಿಂದ) ಮೂಲಕ ಅರ್ಪಿಸು ವುದಕ್ಕಾಗಿ ನಿನ್ನನ್ನು ಪ್ರಾರ್ಥಿಸುವಾಗ ದ್ಯಾವಾಪೃಥಿವಿಗಳೂ, ಯಜ್ಞಾರ್ಹರಾದ ಇತರ ದೇವತೆಗಳೂ ಸಹ ಯಜ್ಞಾರ್ಥವಾಗಿ ಎಂದರೆ ಯಜ್ಞವನ್ನು ಸಾಂಗವಾಗಿ ನೆರವೇರಿಸುವುದಕ್ಕಾಗಿ ನಿನ್ನನ್ನು ಸಮಾಧಾನಪಡಿಸಿ ಪೂಜಿಸು ತ್ತಾರೆ ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

ಎಂದರೆ—ಮನುಷ್ಯರು ದೇವತೆಗಳನ್ನುದ್ದೇಶಿಸಿ ಯಜ್ಞಮಾಡುವಾಗ ಅವರು ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಹವಿಸ್ಸುಗಳನ್ನು ಸಿದ್ಧಪಡಿಸಿಕೊಂಡಿರುವರು. ಆದರೆ ದೇವತೆಗಳು ಪ್ರತ್ಯಕ್ಷವಾಗಿ ಮನುಷ್ಯರಿಂದ ಯಜ್ಞಭಾಗವನ್ನು ಸ್ವೀಕರಿಸುವುದಿಲ್ಲ. ಅಗ್ನಿಯಲ್ಲಿ ಅರ್ಪಿಸುವ ಹವಿರಾದಿಗಳನ್ನೇ ಅವರು ಸ್ವೀಕರಿಸುತ್ತಾರೆ. ಆದ್ದರಿಂದ ತಾವು ಅರ್ಪಿಸುವ ಹವಿರಾದಿಗಳನ್ನು ದೇವತೆಗಳ ಬಳಿಗೆ ಒಯ್ಯುವಂತೆ ಮನುಷ್ಯರು (ಯಜಮಾನರು) ಯಜ್ಞಕುಂಡದಲ್ಲಿ ಪ್ರಕಾಶಮಾನನಾಗಿ ಬೆಳಗುತ್ತಿರುವ ಅಗ್ನಿಯನ್ನು ವೇದಮಂತ್ರಗಳಿಂದ ನಾನಾವಿಧವಾಗಿ ಸ್ತುತಿಸುತ್ತಾರೆ. ಹೀಗೆ ಸ್ತುತಿಸಿದನಂತರ ವಿಧ್ಯುಕ್ತವಾಗಿ ಯಜ್ಞಕರ್ಮವನ್ನು ನೆರವೇರಿಸಲು ಉದ್ಯುಕ್ತರಾಗುತ್ತಾರೆ. ಇದನ್ನು ಕಂಡು ದ್ಯಾವಾಪೃಥಿವಿಗಳೇ ಮೊದಲಾದ ಯಜ್ಞದಲ್ಲಿ ಉದ್ದಿಷ್ಟರಾದ ದೇವತೆಗಳು ತಮಗೂ ಈ ಯಜ್ಞದಲ್ಲಿ ಭಾಗವು ಸಲ್ಲುವುದೆಂಬ ಸಂತೋಷದಿಂದ ಯಜ್ಞದಲ್ಲಿ ಹೋಮಮಾಡುವ ಹವಿರಾದಿಗಳನ್ನು ತಮಗೆ ತಲಪಿಸುವ ಹೋತೃವಾದ (ಅಥವಾ ದೂತನಾದ) ಅಗ್ನಿಯನ್ನು ಯಜ್ಞಾರ್ಥವಾಗಿ ಪ್ರೋತ್ಸಾಹಿಸಿ ಸಂತೈಸುವರು ಎಂದಭಿಪ್ರಾಯವು.

ಸಂಹಿತಾಪಾಠಃ

ಮಹಾನ್ತ್ಸಧಸ್ಥೇ ಧ್ರುವ ಆ ನಿಷತ್ತೋಽನ್ತರ್ದ್ಯಾವಾ ಮಾಹಿನೇ ಹರ್ಯಮಾಣಃ ।
ಆಸ್ಕ್ರೇ ಸಪತ್ನೀ ಅಜರೇ ಅಮೃಕ್ತೇ ಸಬರ್ದುಘೇ ಉರುಗಾಯಸ್ಯ ಧೇನೂ ॥೪॥

॥ ಪದಪಾಠಃ

ಮಹಾನ್ । ಸಧಽಸ್ಥೇ । ಧ್ರುವಃ । ಆ । ನಿಽಸತ್ತಃ । ಅಂತಃ । ದ್ಯಾವಾ । ಮಾಹಿನೇ ಇತಿ । ಹರ್ಯಮಾಣಃ ।
ಆಸ್ಕ್ರೇ ಇತಿ । ಸಪತ್ನೀ ಇತಿ ಸ್ವಽಪತ್ನೀ । ಅಜರೇ ಇತಿ । ಅಮೃಕ್ತೇ ಇತಿ । ಸಬರ್ದುಘೇ ಇತಿ ಸಬಃಽದುಘೇ । ಉರುಽಗಾಯಸ್ಯ । ಧೇನೂ ಇತಿ ॥ ೪ ॥

॥ ಸಾಯಣಭಾಷ್ಯಂ ॥

ಮಹಾನ್ ಅಧಿಕೋ ಹರ್ಯಮಾಣೋ ಯಜಮಾನಾದಿಭಿಃ ಕಾಮ್ಯಮಾನಃ । ಯದ್ವಾ ಯಜಮಾನಾಯ ಧನಂ ಕಾಮಯಮಾನೋಽಗ್ನಿರ್ದ್ಯಾವಾಂತರ್ದ್ಯಾಭೂಮ್ಯೋರ್ಮಧ್ಯೇ ಮಾಹಿನೇ ಮಹಿಮ್ನಾ ಯುಕ್ತೇ ಸಧಸ್ಥೇ ಸ್ವಕೀಯೇ ಸ್ಥಾನೇ ಧ್ರುವೋಽಚಲಃ ಸನ್ ಆ ನಿಷತ್ತೋ ನಿಷಣ್ಣೋ ಭವತಿ । ಆಸ್ಕ್ರೇ ಆಕ್ರಮಣಶೀಲೇ ಸಪತ್ನೀ ಸಮಾನ ಏಕಃ ಸೂರ್ಯಃ ಪತಿರ್ಯಯೋಸ್ತೇ ಸಪತ್ನ್ಯೌ ಅಜರೇ ಜರಾರಹಿತೇ ಅಮೃಕ್ತೇ ಅನ್ಯೇನಾಹಿಂಸಿತೇ ಸಬರ್ದುಘೇ । ಸಬರಿತ್ಯಮೃತಮುದಕಂ । ತಸ್ಯ ದೋಗ್ಧ್ರ್ಯೌ ದ್ಯಾವಾಪೃಥಿವ್ಯಾವುರುಗಾಯಸ್ಯ ಪೃಥುಗಮನಸ್ಯಾಧಿಕಸ್ತುತೇರ್ವಾಗ್ನೇರ್ಧೇನೂ ಪ್ರೀಣಯಿತ್ರ್ಯೌ ಭವತಃ ॥

॥ ಪ್ರತಿಪದಾರ್ಥ ॥

**ಮಹಾನ್**—ಮಹಾತ್ಮನೂ । **ಹರ್ಯಮಾಣಃ**—(ಯಜ್ಞಕರ್ತರಿಂದ) ಇಚ್ಛಿಸಲ್ಪಡುವವನೂ ಆದ ಅಗ್ನಿಯು । **ದ್ಯಾವಾ ಅಂತಃ**—ದ್ಯಾವಾಪೃಥಿವಿಗಳ ಮಧ್ಯಭಾಗದಲ್ಲಿರುವುದೂ । **ಮಾಹಿನೇ**—ಅತಿಶಯವಾದ ಮಹಿಮೆಯಿಂದ ಕೂಡಿದುದೂ ಆದ । **ಸಧಸ್ಥೇ**—ತನ್ನ ಸ್ವಸ್ಥಾನದಲ್ಲಿ । **ಧ್ರುವಃ**—ಅಚಲನಾಗಿ । **ಆ ನಿಷತ್ತಃ**—ಕುಳಿತಿದ್ದಾನೆ । **ಅಸ್ಕ್ರೇ**—ಸರ್ವತ್ರ ವ್ಯಾಪಿಸುವುವೂ । **ಸಪತ್ನೀ**—ಸೂರ್ಯನನ್ನೇ ಸಮಾನವಾದ ಪತಿಯನ್ನಾಗಿ ಹೊಂದಿರುವುವೂ । **ಅಜರೇ**—ಜರಾರಹಿತವಾದವೂ । **ಅವ್ಯಕ್ತೇ**—(ಇತರರಿಂದ) ಅಹಿಂಸಿತವಾದವೂ । **ಸಬರ್ದುಘೇ**—ವೃಷ್ಟಿರೂಪವಾದ ಉದಕವನ್ನು ಸುರಿಸುವುವೂ ಆದ ದ್ಯಾವಾಪೃಥಿವಿಗಳು । **ಉರುಗಾಯಸ್ಯ**—ಅತ್ಯಧಿಕವಾದ ವ್ಯಾಪ್ತಿಯುಳ್ಳ ಅಗ್ನಿಗೆ । **ಧೇನೂ**—ಪ್ರೀತಿಕಾರಕಗಳಾಗಿ ಆಗುತ್ತವೆ.

॥ ಭಾವಾರ್ಥ ॥

ಮಹಾತ್ಮನೂ, ಯಜ್ಞಕರ್ತರಿಂದ ಇಚ್ಛಿಸಲ್ಪಡುವವನೂ ಆದ ಅಗ್ನಿಯು ದ್ಯಾವಾಪೃಥಿವಿಗಳ ಮಧ್ಯಭಾಗದಲ್ಲಿರುವುದೂ, ಅತಿಶಯವಾದ ಮಹಿಮೆಯಿಂದ ಕೂಡಿದುದೂ ಆದ ತನ್ನ ಸ್ವಸ್ಥಾನದಲ್ಲಿ ಅಚಲನಾಗಿ ಕುಳಿತಿದ್ದಾನೆ, ಸರ್ವತ್ರ ವ್ಯಾಪಿಸಿರುವುವೂ, ಸೂರ್ಯನನ್ನೇ ಸಮಾನವಾದ ಪತಿಯನ್ನಾಗಿ ಹೊಂದಿರುವವೂ, ಜರಾರಹಿತವಾದುವೂ, ಇತರರಿಂದ ಅಹಿಂಸಿತವಾದವೂ, ವೃಷ್ಟಿರೂಪವಾದ ಉದಕವನ್ನು ಸುರಿಸುವುವೂ ಆದ ದ್ಯಾವಾಪೃಥಿವಿಗಳು ಅತ್ಯಧಿಕವಾದ ವ್ಯಾಪ್ತಿಯುಳ್ಳ ಅಗ್ನಿಗೆ ಪ್ರೀತಿಕಾರಕಗಳಾಗಿ ಆಗುತ್ತವೆ.

## English Translation.

The great and adorable Agni is firm, seated on his spacious throne between heaven and earth ; and the poweful fellow-brides (of the sun), the imperishable, uninjurable(heaven and earth) are the two milk-yieiding cows of the wide-extending (Agni).

॥ ವಿಶೇಷವಿಷಯಗಳು ॥

**ಮಹಾನ್ ಹರ್ಯಮಾಣಃ ದ್ಯಾವಾ ಅಂತಃ ಮಾಹಿನೇ ಸಧಸ್ಥೇ ಧ್ರುವ ಆ ನಿಷತ್ತಃ**-ಯಜ್ಞಮಾಡುವ ಯಜಮಾನರಿಂದ ಯಜ್ಞನಿರ್ವಹಣೆಗಾಗಿ ಅಪೇಕ್ಷಿಸಲ್ಪಡುವ ಮಹಾಮಹಿಮನಾದ ಅಗ್ನಿಯು ಭೂಮ್ಯಂತರಿಕ್ಷಗಳ ಮಧ್ಯದಲ್ಲಿರುವ ಯಜ್ಞವೇದಿಯಲ್ಲಿ ತನ್ನ ಮಹಿಮಾಯುಕ್ತವೂ, ಸ್ವಸ್ಥಾನವೂ ಆದ ಯಜ್ಞಕುಂಡಲದಲ್ಲಿ ಅಚಲನಾಗಿ ಕುಳಿತಿದ್ದಾನೆ. ಎಂದರೆ ಯಜ್ಞವನ್ನು ಮಾಡಬೇಕೆಂದು ಬಯಸುವ ಯಜಮಾನರು ಭೂಮ್ಯಂತರಿಕ್ಷಗಳ ಮಧ್ಯದಲ್ಲಿರುವ ತಮ್ಮ ಯಜ್ಞಶಾಲೆಯಲ್ಲಿ ಯಜ್ಞಾರ್ಥವಾಗಿ ಅಗ್ನಿಕುಂಡದಲ್ಲಿ ಶ್ರೇಷ್ಠವಾದ ಅಗ್ನಿಯನ್ನು ಸ್ಥಾಪಿಸಿದ್ದಾರೆ ಅಗ್ನಿಗೆ ಸ್ವಸ್ಥಾನವೆಂದು ಹೇಳಲ್ಪಡುವ ಈ ಯಜ್ಞಕುಂಡದಲ್ಲಿ ಅಗ್ನಿಯು ಪ್ರತಿಷ್ಠಾಪಿತನಾಗಿ ಯಾವ ಬಾಧೆಯೂ ಇಲ್ಲದೆ ಚೆನ್ನಾಗಿ ಪ್ರಕಾಶಿಸುತ್ತಿರುವನು ಎಂದಭಿಪ್ರಾಯವು. ಇಲ್ಲಿ **ದ್ಯಾವಾ** ಎಂಬ ದ್ವಿವಚನವು ದ್ಯಾವಾಪೃಥಿವಿಗಳೆರಡನ್ನೂ ಸೂಚಿಸುವುದು.

**ಆಸ್ಮೈ್ರೀ ಸಪತ್ನೀ ಅಜರೇ ಅಮೃಕ್ತೇ ಸಬರ್ದುಘೇ ಉರುಗಾಯಸ್ಯ ಧೇನೂ (ಭವತಃ)**— ಇಂತಹ ಅಗ್ನಿಯ ವಿಷಯದಲ್ಲಿ ದ್ಯಾವಾಪೃಥಿವಿಗಳು ಬಹಳ ಸಂತೋಷದಿಂದ ವರ್ತಿಸುತ್ತಾ ಅಗ್ನಿಗೆ ಪ್ರೀತಿಯನ್ನುಂಟು ಮಾಡುವವು. ಈ ದ್ಯಾವಾಪೃಥಿವಿಗಳು ಸರ್ವಪ್ರದೇಶವನ್ನು ಆಕ್ರಮಿಸಿ ವಿಸ್ತಾರವಾದ ಸ್ಥಳದಲ್ಲಿ ವ್ಯಾಪಿಸಿರುವವು, ಎಂದರೆ ಅತಿವಿಸ್ತಾರವಾಗಿರುವವು ಎಂದರ್ಥವು. ದ್ಯಾವಾಪೃಥಿವಿಗಳ ಮಧ್ಯದಲ್ಲಿ ಸೂರ್ಯನಿರುವುದರಿಂದ ಸೂರ್ಯನು ಇವೆರಡನ್ನೂ ತನ್ನ ಪ್ರಕಾಶದಿಂದ ಬೆಳಗುತ್ತಾ ಇವುಗಳನ್ನು ಪಾಲಿಸುತ್ತಿರುವನು. ಸೂರ್ಯನು ಇವೆರಡಕ್ಕೂ ಸಮಾನನಾದ ಪಾಲಕನಾದ್ದರಿಂದ ಈ ವಿಷಯವನ್ನು **ಸಪತ್ನೀ** ಎಂಬ ಶಬ್ದದಿಂದ ಸೂಚಿಸಲಾಗಿವೆ ಈ ದ್ಯಾವಾಪೃಥಿವಿಗಳು ಬಹು ಪುರಾತನವಾಗಿದ್ದರೂ ಯಾವ ವ್ಯತ್ಯಾಸವನ್ನೂ ಎಂದರೆ ವಿಕಾರವನ್ನೂ ಹೊಂದದೆ ಒಂದೇ ವಿಧವಾಗಿ ಇರುವುದರಿಂದ ಇವುಗಳಿಗೆ ವಯೋವಿಕಾರವಿಲ್ಲ ಎಂಬ ವಿಷಯವನ್ನು **ಅಜರೇ** ಎಂಬ ಶಬ್ದವು ಸೂಚಿಸುವುದು. ಈ ದ್ಯಾವಾಪೃಥಿವಿಗಳನ್ನು ಹಿಂಸಿಸಲು ಎಂದರೆ ವಿರೂಪವನ್ನಾಗಿ ಮಾಡಲು ಯಾರಿಂದಲೂ ಸಾಧ್ಯವಿಲ್ಲ. ಅವುಗಳ ಆಕಾರ, ರೂಪ ಮೊದಲಾದವುಗಳನ್ನು ಯಾರೂ ವ್ಯತ್ಯಾಸಮಾಡಲಾರರು. ಇದಲ್ಲದೆ ಈ ದ್ಯಾವಾಪೃಥಿವಿಗಳು ಸಕಲ ಪ್ರಾಣಿಗಳ ಪೋಷಣಾರ್ಥವಾಗಿ ಗೋವುಗಳು ಹಾಲುಕರೆಯುವಂತೆ ವೃಷ್ಟಿರೂಪವಾದ ಉದಕವನ್ನು ಸುರಿಸುವವು. ಇಂತಹ ದ್ಯಾವಾಪೃಥಿವಿಗಳು ಅಗ್ನಿಗೆ ಪ್ರೀತಿದಾಯಕಗಳಾಗಿರುತ್ತವೆ ಎಂದಭಿಪ್ರಾಯವು.

ಈ ಋಕ್ಕಿನಲ್ಲಿರುವ ಕೆಲವು ಶಬ್ದಗಳಿಗೆ ವಿವರಣೆಯು ಅವಶ್ಯಕವು. ಸಧಸ್ಥಶಬ್ದಕ್ಕೆ ಯಾಸ್ಕರು **ಸಹಸ್ಥಾನೇ–ಸಮಾನಸ್ಥಾನೇ ಆಭಿಮುಖ್ಯೇನ ಆತ್ಮನಃ ಪರಿಚರಣಾಯ** (ನಿ. ೩-೧೫) ಎಂದು ನಿರ್ವಚನವನ್ನು ಹೇಳಿದ್ದಾರೆ. ಎಂದರೆ ಸಮಾನಸ್ಥಾನ, ಮುಖ್ಯವಾಗಿ ತನಗೆ ಯೋಗ್ಯವಾದ ಮತ್ತು ಸೇವಿಸಲ್ಪಡುವುದಕ್ಕೆ ಅರ್ಹವಾದ ಸ್ಥಾನ. ಇಲ್ಲಿ ಅಗ್ನಿಯ ಸ್ವಸ್ಥಾನವೆಂದರೆ ಯಜ್ಞಕುಂಡವು.

**ಸಪತ್ನೀ**—ಸಮಾನವಾದ ಪತಿ ಅಥವಾ ಪಾಲಕನನ್ನು ಹೊಂದಿರುವವರು ಎಂದರೆ ಇಬ್ಬರಿಗೂ ಒಬ್ಬನೇ ಪಾಲಕನಾಗಿರುವವನು. **ಸಪತ್ನ** ಅಥವಾ **ಸಪತ್ನಿ** ಎಂಬ ಶಬ್ದವು ಶತ್ರುವೆಂಬರ್ಥದಲ್ಲಿಯೂ ಅಲ್ಲಲ್ಲಿ ಪ್ರಯುಕ್ತವಾಗಿರುವುದು.

**ಸಬರ್ದುಘೇ—ಸಬಃ** ಎಂದರೆ ಹಾಲು, ಅಮೃತ, ಉದಕ. ಅದನ್ನು ಕರೆಯುವುದು ಎಂದರೆ ಹಾಲನ್ನು ಕೊಡುವ ಗೋವು ಎಂದರ್ಥವು. ಇಲ್ಲಿ ಉದಕವನ್ನು ಸುರಿಸುವ ಮೇಘಗಳಿಂದ ಸಹಿತವಾದ ದ್ಯಾವಾಪೃಥಿವಿಗಳೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಉರುಗಾಯಸ್ಯ—ಪೃಥುಗಮನಸ್ಯಾಧಿಕಸ್ತುತೇರ್ವಾಗ್ನೇಃ** । ಬಹಳ ವೇಗವಾದ ಗಮನವುಳ್ಳವನು ಎಂದರೆ ಬಹುಬೇಗನೆ ವ್ಯಾಪಿಸುವವನು, ಅಥವಾ ಅಧಿಕವಾಗಿ ಸ್ತುತಿಸಲ್ಪಡುವವನು ಎಂದು ಎರಡು ವಿಧವಾದ ಅರ್ಥಗಳನ್ನು ವಿವರಿಸಿದ್ದಾರೆ.

**ಧೇನೂ**—ಧೇನುಶಬ್ದವು ವಾಙ್ನಾಮಗಳಲ್ಲಿ ಪಠಿತವಾಗಿದೆ (ನಿ. ೨-೨೩) ಧೇನುಶಬ್ದಕ್ಕೆ **ಧೇನುವದ್ದೋಗ್ಧ್ರೀ ಸರ್ವಕಾಮಾನ್** ಹಾಲನ್ನು ಕೊಟ್ಟು ಎಲ್ಲರನ್ನು ತೃಪ್ತಿಪಡಿಸುವ ಗೋವು ಅಥವಾ ಗೋವಿನಂತೆ ಎಲ್ಲಾ ಇಷ್ಟಾರ್ಥಗಳನ್ನು ಪೂರಯಿಸುವ ಎಂದು ಅನೇಕ ಅರ್ಥಗಳಿರುತ್ತವೆ. ಇಲ್ಲಿ ಧೇನುವಿನಂತೆ ಪ್ರೀತಿಯನ್ನುಂಟುಮಾಡುವ ದ್ಯಾವಾಪೃಥಿವಿಗಳೆಂಬ ಅರ್ಥದಲ್ಲಿ ಈ ಶಬ್ದವು ಪ್ರಯುಕ್ತವಾಗಿದೆ.



॥ ಸಂಹಿತಾಪಾಠಃ ॥

ವ್ರತಾ ತೇ ಅಗ್ನೇ ಮಹತೋ ಮಹಾನಿ ತವ ಕ್ರತ್ವಾ ರೋದಸೀ ಆ ತತಂಥ ।
ತ್ವಂ ದೂತೋ ಅಭವೋ ಜಾಯಮಾನಸ್ತ್ವಂ ನೇತಾ ವೃಷಭ ಚರ್ಷಣೀನಾಂ ॥ ೫

॥ ಪದಪಾಠಃ ॥

ವ್ರತಾ । ತೇ । ಅಗ್ನೇ । ಮಹತಃ । ಮಹಾನಿ । ತವ । ಕ್ರತ್ವಾ । ರೋದಸೀ ಇತಿ । ಆ । ತತಂಥ ।
ತ್ವಂ । ದೂತಃ । ಅಭವಃ । ಜಾಯಮಾನಃ । ತ್ವಂ । ನೇತಾ । ವೃಷಭ । ಚರ್ಷಣೀನಾಂ ॥ ೫ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಮಹತಃ ಸರ್ವೋತ್ಕೃಷ್ಟಸ್ಯ ತೇ ತವ ವ್ರತಾ ವ್ರತಾನಿ ತ್ವತ್ಸಂಬಂಧೀನಿ ಕರ್ಮಾಣಿ ಮಹಾನಿ ಮಹಾಂತಿ ಭವಂತಿ । ತವ ಕ್ರತ್ವಾ ಕ್ರತುನಾ ಪ್ರಕಾಶೇನ ರೋದಸೀ ದ್ಯಾವಾಪೃಥಿವ್ಯಾವಾತತಂಥ। ವಿಸ್ತೃತವಾನಸಿ । ತ್ವಂ ದೂತೋಽಭವಃ । ಭವ । ಹೇ ವೃಷಭ ವರ್ಷಣಶೀಲ ತ್ವಂ ಜಾಯಮಾನಃ ಸನ್ ಚರ್ಷಣೀನಾಂ ಯಜಮಾನಾನಾಂ ನೇತಾಸಿ । ಫಲಪ್ರಾಪಕೋಽಸಿ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಮಹತಃ**—ಸರ್ವೋತ್ಕೃಷ್ಟನಾದ । **ತೇ**—ನಿನ್ನ । **ವ್ರತಾ**—ವ್ರತರೂಪವಾದ ಕರ್ಮಗಳು । **ಮಹಾನಿ**—ಮಹತ್ಸ್ವರೂಪವುಳ್ಳವಾಗಿವೆ । **ತವ**—ನಿನ್ನ । **ಕ್ರತ್ವಾ**—ಕ್ರತುರೂಪವಾದ ಪ್ರಕಾಶದಿಂದ। **ರೋದಸೀ**—ದ್ಯಾವಾಪೃಥಿವಿಗಳನ್ನು । **ಆ ತತಂಥ**—ವಿಸ್ತೃತವಾಗಿ ಬೆಳೆಯುವಂತೆ ಮಾಡಿದ್ದೀಯೆ । **ತ್ವಂ**—ನೀನು । **ದೂತಃ**—ದೇವದೂತನಾಗಿ । **ಅಭವಃ**—ಆಗಿರು । **ವೃಷಭ**—ಇಷ್ಟಾರ್ಥಪ್ರದನಾದ ಎಲೈ ಅಗ್ನಿಯೇ । **ತ್ವಂ**—ನೀನು । **ಜಾಯಮಾನಃ (ಸನ್)**—ಉತ್ಪನ್ನನಾದೊಡನೆಯೇ । **ಚರ್ಷಣೀನಾಂ**—ಮಾನವರಾದ ಯಜಮಾನರಿಗೆ । **ನೇತಾ**—ಫಲಪ್ರಾಪಕನಾದ ನೇತೃವಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಸರ್ವೋತ್ಕೃಷ್ಟನಾದ ನಿನ್ನ ವ್ರತರೂಪವಾದ ಕರ್ಮಗಳು ಮಹತ್ಸ್ವರೂಪವುಳ್ಳವಾಗಿವೆ. ನಿನ್ನ ಕ್ರತುರೂಪವಾದ ಪ್ರಕಾಶದಿಂದ ದ್ಯಾವಾಪೃಥಿವಿಗಳನ್ನು ವಿಸ್ತೃತವಾಗಿ ಬೆಳೆಯುವಂತೆ ಮಾಡಿದ್ದೀಯೆ. ನೀನು ದೇವದೂತನಾಗಿ ಆಗಿರು. ಇಷ್ಟಾರ್ಥಪ್ರದನಾದ ಎಲೈ ಅಗ್ನಿಯೇ, ನೀನು ಉತ್ಪನ್ನನಾದೊಡನೆಯೇ, ಮಾನವರಿಂದ ಯಜಮಾನರಿಗೆ ಫಲಪ್ರಾಪಕವಾದ ನೇತೃವಾಗಿದ್ದೀಯೆ.

English Translation.

Great, Agni, are the deeds of you the mighty one : you have spread abroad by your power, the heaven and earth; you have been the messenger of the gods) ; as soon as begotten, you have become the leader of men.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸುಲಭವಾಗಿದ್ದು ಕ್ಲಿಷ್ಟಪದಗಳಾಗಲಿ, ಸಂದಿಗ್ಧ ವಿಷಯಗಳ ವರ್ಣನೆಯಾಗಲಿ ಇರುವುದಿಲ್ಲ. ಸಾಧಾರಣವಾದ ಅಗ್ನಿಯ ಗುಣಗಳನ್ನು ಮಾತ್ರ ವರ್ಣಿಸಲಾಗಿದೆ. ಎಲೈ ಅಗ್ನಿಯೇ, ನಿನ್ನ ಕರ್ಮಗಳು ಎಂದರೆ ನೀನು ದೇವದೂತನಾಗಿ ಮಾನವರು ಯಜ್ಞಾದಿಗಳಲ್ಲಿ ನಿನ್ನ ಮೂಲಕ ಅರ್ಪಿಸುವ ಹವಿರಾದಿಗಳನ್ನು ದೇವತೆಗಳ ಬಳಿಗೆ ಒಯ್ಯುವುದೇ ಮೊದಲಾದ ಅನೇಕ ಕರ್ಮಗಳು ಮಹತ್ತ್ವಪೂರಿತವಾಗಿವೆ. ಎಂದರೆ ಇತರರಿಂದ ಈ ಕೆಲಸಗಳು ಮಾಡಲ್ಪಡಲು ಸಾಧ್ಯವಿಲ್ಲ. ನಿನ್ನ ಅಸಾಧಾರಣವಾದ ಕರ್ಮಗಳಿಂದಲೂ, ಪ್ರಕಾಶದಿಂದಲೂ ದ್ಯಾವಾಪೃಥಿವಿಗಳು ಅಭಿವೃದ್ಧಿಯನ್ನೈದುವವು. ನೀನು ದೇವದೂತನಾಗಿ ದೇವತೆಗಳಿಗೆ ಹವಿಸ್ಸನ್ನರ್ಪಿಸುವುದಲ್ಲದೆ, ನೀನು ಯಜ್ಞವೇದಿಯಲ್ಲಿ ಪ್ರತಿಷ್ಠಾಪಿತನಾಗಿ ಯಜ್ಞಮಾಡುವ ಯಜಮಾನರಿಗೆ ಮಾರ್ಗದರ್ಶಕನಾಗಿ ಇಷ್ಟಾರ್ಥಗಳನ್ನು ದೊರಕಿಸಿಕೊಡುವೆ ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಋತಸ್ಯ ವಾ ಕೇಶಿನಾ ಯೋಗ್ಯಾಭಿರ್ಘೃತಸ್ನುವಾ ರೋಹಿತಾ ಧುರಿ ಧಿಷ್ವ ।
ಅಥಾ ವಹ ದೇವಾನ್ದೇವ ವಿಶ್ವಾನ್ತ್ಸ್ವಧ್ವರಾ ಕೃಣುಹಿ ಜಾತವೇದಃ ॥ ೬ ॥

॥ ಪದಪಾಠಃ ॥

ಋತಸ್ಯ । ವಾ । ಕೇಶಿನಾ । ಯೋಗ್ಯಾಭಿಃ । ಘೃತऽಸ್ನುವಾ । ರೋಹಿತಾ । ಧುರಿ । ಧಿಷ್ವ ।
ಅಥ । ಆ । ವಹ । ದೇವಾನ್ । ದೇವ । ವಿಶ್ವಾನ್ । ಸುऽಅಧ್ವರಾ । ಕೃಣುಹಿ । ಜಾತऽವೇದಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ದೇವ ಕೇಶಿನಾ ಪ್ರಶಸ್ತಕೇಶವಂತೌ ಯೋಗ್ಯಾಭಿರ್ಯೋಜನಸಾಧನಭೂತಾಭೀ ರಜ್ಜುಭಿರ್ಯುಕ್ತೌ ಘೃತಸ್ನುವಾ ಘೃತಂ ಕ್ಷರಂತೌ ರೋಹಿತಾ ರೋಹಿತಾವಶ್ವೌ ಋತಸ್ಯ ಯಜ್ಞಸ್ಯ ॥ ವಾಶಬ್ದಶ್ಚಾರ್ಥೇ ॥ ಧುರಿ ಚ ಧಿಷ್ವ । ಧೇಹಿ । ಯೋಜಯೇತ್ಯರ್ಥಃ । ಅಥಾನಂತರಂ ವಿಶ್ವಾನ್ ಸರ್ವಾನ್ದೇವಾನ್

**ರಥೇ ಸಮಾರೋಪ್ಯ ಆ ವಹ । ಹೇ ಜಾತವೇದಃ ತಾನ್ ಸ್ವಧ್ವರಾ ಸ್ವಧ್ವರಾನ್ ಶೋಭನಾಧ್ವರಾನ್ ಕೃಣುಹಿ ಕುರು ॥**

॥ ಪ್ರತಿಪದಾರ್ಥ ॥

**ದೇವ**— ಪ್ರಕಾಶಮಾನನಾದ ಎಲೈ ಅಗ್ನಿಯೇ । **ಕೇಶಿನಾ**—ಪ್ರಶಸ್ಯಮಾನವಾದ ಕೂದಲುಗಳುಳ್ಳವೂ । **ಯೋಗ್ಯಾಭಿಃ**—ಅನುರೂಪಗಳಿಂದ ಕೂಡಿದವೂ । **ಘೃತಸ್ನುವಾ**—ಘೃತದಂತೆ ನುಣುಪಾದ ಶರೀರವುಳ್ಳವೂ । **ರೋಹಿತಾ**—ರೋಹಿತವರ್ಣವುಳ್ಳವೂ ಆದ ಅಶ್ವಗಳನ್ನು । **ಋತಸ್ಯ**— ಯಜ್ಞದ । **ಧುರಿ**—ಮುಂಭಾಗದಲ್ಲಿ । **ಧಿಷ್ವ**—ಯೋಜಿಸು। **ಅಥ**—ಅನಂತರ । **ವಿಶ್ವಾನ್**—ಸಮಸ್ತರಾದ । **ದೇವಾನ್**—ದೇವತೆಗಳನ್ನೂ। **ಆ ವಹ**—ರಥದಲ್ಲಿ ಕುಳ್ಳಿರಿಸಿ ಕರೆದುಕೊಂಡು ಬಾ । **ಜಾತವೇದಃ**—ಜಾತಪ್ರಜ್ಞನಾದ ಎಲೈ ಅಗ್ನಿಯೇ । **ಸ್ವಧ್ವರಾ**—ಶೋಭನಾತ್ಮಕಗಳಾದ ಯಜ್ಞಗಳನ್ನು । **ಕೃಣುಹಿ**—ಮಾಡು (ಯಜ್ಞಗಳನ್ನು ಶೋಭನಾತ್ಮಕಗಳಾಗುವಂತೆ ಮಾಡು).

॥ ಭಾವಾರ್ಥ ॥

ಪ್ರಕಾಶಮಾನನಾದ ಎಲೈ ಅಗ್ನಿಯೇ, ಪ್ರಶಸ್ಯಮಾನವಾದ ಕೂದಲುಗಳುಳ್ಳವೂ, ಅನುರೂಪಗಳಾದ ರಜ್ಜುಗಳಿಂದ ಕೂಡಿದವೂ, ಘೃತದಂತೆ ನುಣುಪಾದ ಶರೀರವುಳ್ಳವೂ ಆದ ಅಶ್ವಗಳನ್ನು ಯಜ್ಞದ ಮುಂಭಾಗದಲ್ಲಿ ಯೋಜಿಸು ಅನಂತರ ಸಮಸ್ತರಾದ ದೇವತೆಗಳನ್ನೂ ರಥದಲ್ಲಿ ಕುಳ್ಳಿರಿಸಿ ಕರೆದುಕೊಂಡು ಬಾ. ಜಾತಪ್ರಜ್ಞನಾದ ಎಲೈ ಅಗ್ನಿಯೇ, ಶೋಭನಾತ್ಮಕಗಳಾದ ಯಜ್ಞಗಳನ್ನು (ಯಜ್ಞಗಳನ್ನು ಶೋಭನಾತ್ಮಕಗುವಂತೆ) ಮಾಡು.

## English Translation.

Harness with traces, to your car, your long-maned, ruddy (steeds, to come) to the sacrifice : bring hither, divine Jatavedas, all gods, and make them propitious to the oblation.

॥ ವಿಶೇಷವಿಷಯಗಳು ॥

**ದೇವ ಕೇಶಿನಾ ಯೋಗ್ಯಾಭಿಃ ಘೃತಸ್ನುವಾ ರೋಹಿತಾ ಋತಸ್ಯ ಧುರಿ ಧಿಷ್ವ**—ಕತ್ತಿನ ಮೇಲೆ ಕೇಶಗಳು ಕುದುರೆಗಳಿಗೆ ಅಲಂಕಾರಪ್ರಾಯವಾಗಿರುವುದರಿಂದ ಇಲ್ಲಿ ಅಗ್ನಿಯ ರಥದ ಕುದುರೆಗಳನ್ನು **ಕೇಶಿನಾ** ಎಂಬ ಶಬ್ದದಿಂದ ವರ್ಣಿಸಲಾಗಿದೆ. **ರೋಹಿತಾ** ಎಂಬುವುದು ಅಗ್ನಿಯ ವಾಹನವಾದ ಕುದುರೆಗೆ ಹೆಸರೆಂದು ಯಾಸ್ಕರು **ರೋಹಿತೋಽಗ್ನೇಃ**—ಕೆಂಪುಬಣ್ಣದ ಕುದುರೆಯು ಅಗ್ನಿಯ ವಾಹನವು (ನಿ. ೨-೨೮) ಎಂದು ದೇವತೆಗಳ ವಿವಿಧ ವಾಹನಗಳನ್ನು ವಿವರಿಸುವಾಗ ನಿರ್ವಚನವನ್ನು ಹೇಳಿದಾರೆ. ಋತಶಬ್ದಕ್ಕೆ ಸತ್ಯವೆಂದೂ, ಯಜ್ಞವೆಂದೂ ಅರ್ಥವಿರುವುದು. ಇಲ್ಲಿ ಯಜ್ಞವೆಂಬ ಅರ್ಥದಲ್ಲಿಯೇ ಉಪಯೋಗಿಸಲ್ಪಟ್ಟಿದೆ. ಆದುದರಿಂದ ಎಲೈ ಪ್ರಕಾಶಮಾನನಾದ ಅಗ್ನಿಯೇ, ನಿನ್ನ ರಥವನ್ನು ನಮ್ಮ ಯಜ್ಞಾಭಿಮುಖವಾಗಿ ಬರುವಂತೆ ಸಜ್ಜುಗೊಳಿಸುವುದಕ್ಕಾಗಿ ಕತ್ತಿನ ಮೇಲೆ ನಿಬಿಡವಾದ ಕೇಶಗಳಿಂದ ಕೂಡಿ ಮನೋಹರವಾದವೂ, ಹಗ್ಗ ಅಥವಾ ಕಡಿವಾಣಗಳಿಂದ ಯುಕ್ತವಾದವೂ, ಘೃತದಂತೆ ನುಣುಪಾದ ಶರೀರಕಾಂತಿಯಿಂದ ನೋಡುವುದಕ್ಕೆ ಮನೋಹರವಾಗಿರುವವೂ ಆದ ಮಾಸಲು ಕೆಂಪು ಬಣ್ಣದ ಕುದುರೆಗಳನ್ನು ನಿನ್ನ ರಥದ ನೊಗಕ್ಕೆ ಕಟ್ಟಿ ಸಿದ್ಧಪಡಿಸು ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು.

**ಅಥ ವಿಶ್ವಾನ್ ದೇವಾನ್ ಆ ವಹ**—ಅನಂತರ ಯಜ್ಞದಲ್ಲಿ ನಾವು ಯಾವ ಯಾವ ದೇವತೆಗಳನ್ನು ಆಹ್ವಾನಮಾಡುವೆವೋ ಆ ಎಲ್ಲಾ ದೇವತೆಗಳನ್ನೂ ನಮ್ಮ ಯಜ್ಞಭೂಮಿಗೆ ಕರೆದುಕೊಂಡು ಬಾ

**ಜಾತವೇದಃ ಸ್ವಧ್ವರಾ ಕೃಣುಹಿ**—ಸಮಸ್ತವನ್ನೂ ತಿಳಿದಿರುವ ಎಲೈ ಅಗ್ನಿಯೇ ನಾವು ಮಾಡುತ್ತಿರುವ ಯಜ್ಞಕರ್ಮಗಳನ್ನು ಉತ್ತಮವಾದ ಕರ್ಮಗಳಿಂದ ಕೂಡಿ ದೇವತೆಗಳಿಗೆ ಪ್ರಿಯವಾಗುವಂತೆ ಮಾಡು.



॥ ಸಂಹಿತಾಪಾಠಃ ॥

ದಿವಶ್ಚಿದಾ ತೇ ರುಚಯಂತ ರೋಕಾ ಉಷೋ ವಿಭಾತೀರನು ಭಾಸಿ ಪೂರ್ವೀಃ ।
ಅಪೋ ಯದಗ್ನ ಉಶಧಗ್ವನೇಷು ಹೋತುರ್ಮಂದ್ರಸ್ಯ ಪನಯಂತ ದೇವಾಃ॥೭॥

॥ ಪದಪಾಠಃ ॥

ದಿವಃ । ಚಿತ್ । ಆ । ತೇ । ರುಚಯಂತ । ರೋಕಾಃ । ಉಷಃ । ವಿऽಭಾತೀಃ । ಅನು । ಭಾಸಿ । ಪೂರ್ವೀಃ।
ಅಪಃ । ಯತ್ । ಅಗ್ನೇ । ಉಶಧಕ್ । ವನೇಷು । ಹೋತುಃ । ಮಂದ್ರಸ್ಯ । ಪನಯಂತ । ದೇವಾಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಯತ್ ಯದಾ ವನೇಷ್ವರಣ್ಯೇಷ್ವಪ ಉಶಧಕ್ ಕಾಮಯಮಾನೋ ದಹಂಶ್ಚ ವರ್ತಸೇ ತದಾ ತೇ ರೋಕಾಶ್ಚ ತ್ವದೀಯಾ ದೀಪ್ತಯೋ ದಿವಶ್ಚಿತ್ ಸೂರ್ಯಾದಪ್ಯಾರುಚಯಂತ । ಆರೋಚಂತೇ । ವಿಭಾತೀರ್ವಿಶೇಷೇಣ ಭಾಂತೀಃ ಪ್ರಕಾಶಮಾನಾಃ ಪೂರ್ವೀಃ ಪುರಾಣೀರುಷ ಉಷಸೋಽನು ಭಾಸಿ । ಮಂದ್ರಸ್ಯ ಸ್ತುತ್ಯಸ್ಯ ಹೋತುಸ್ತವ ರೋಕಾನ್ ದೇವಾಃ ಸ್ತೋತಾರಃ ಪನಯಂತ । ಸ್ತುವಂತಿ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಯತ್**—ಯಾವಾಗ । **ವನೇಷು**—ಅರಣ್ಯಗಳಲ್ಲಿ । **ಅಪಃ**—ಉದಕಗಳನ್ನು (ಓಷಧ್ಯಾದಿಗಳನ್ನು) । **ಉಶಧಕ್**—ದಹಿಸುವೆಯೋ (ಆಗ) । **ತೇ**—ನಿನ್ನ । **ರೋಕಾಃ**—ಪ್ರಭೆಗಳು । **ದಿವಶ್ಚಿತ್**—ಸೂರ್ಯನಿಗಿಂತಲೂ ಅಧಿಕವಾಗಿ । **ಆ ರುಚಯಂತ**—ಪ್ರಕಾಶಿಸುತ್ತವೆ । **ವಿಭಾತೀಃ**—ಅತಿಶಯವಾಗಿ ಬೆಳಗುವುವೂ । **ಪೂರ್ವೀಃ**—ಪುರಾತನವಾದವೂ ಆದ । **ಉಷಃ**—ಉಷಸ್ಸುಗಳನ್ನು । **ಅನು ಭಾಸಿ**—ಅನುಕರಿಸಿ ಪ್ರಕಾಶಿಸುತ್ತೀಯೆ । **ಮಂದ್ರಸ್ಯ**—ಸ್ತುತ್ಯನಾದವನೂ । **ಹೋತುಃ**—ಹೋತೃವಾದವನೂ ಆದ ನಿನ್ನ ತೇಜಸ್ಸುಗಳನ್ನು ! **ದೇವಾಃ**—ಸ್ತೋತೃಗಳು । **ಪನಯಂತ**—ಸ್ತುತಿಸುತ್ತಾರೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವಾಗ ನೀನು ಅರಣ್ಯಗಳಲ್ಲಿ ಓಷಧ್ಯಾದಿಗಳನ್ನು ದಹಿಸುವೆಯೋ ಆಗ ನಿನ್ನ ಪ್ರಭೆಗಳ ಸೂರ್ಯನಿಗಿಂತಲೂ ಅಧಿಕವಾಗಿ ಪ್ರಕಾಶಿಸುತ್ತವೆ. ಅತಿಶಯವಾಗಿ ಬೆಳಗುವುವೂ, ಪುರಾತನವಾದವೂ ಆದ ಉಷಸ್ಸು ಗಳನ್ನು ಅನುಕರಿಸಿ ನೀನು ಪ್ರಕಾಶಿಸುತ್ತೀಯೆ ಸ್ತುತ್ಯನಾದವನೂ, ಹೋತೃವಾದವನೂ ಆದ ನಿನ್ನ ತೇಜಸ್ಸುಗಳನ್ನು ಸ್ತೋತೃಗಳು ಸ್ತುತಿಸುತ್ತಾರೆ.

English Translation.

When, Agni, you abide in the woods, consuming the waters at your pleasure, then your rays, illuminate the heavens, and you shine like many former radiant dawns : the gods themselves commend (the brilliancy) of their praise-meriting invoker.

॥ ವಿಶೇಷವಿಷಯಗಳು ॥

**ಅಗ್ನೇ ಯತ್ ವನೇಷು ಅಪಃ ಅಶಧಕ್ ತೇ ರೋಕಾಃ ದಿವಶ್ಚಿತ್ ಆ ರುಚಯಂತೆ**—ಎಲೈ, ಅಗ್ನಿಯೇ, ನೀನು ಅರಣ್ಯಗಳಲ್ಲಿ ಉದಕಗಳ ಸಹಾಯದಿಂದ ಚೆನ್ನಾಗಿ ಬೆಳೆದಿರುವ ವೃಕ್ಷಾದಿಗಳನ್ನು ದಹಿಸುವಾಗ ನಿನ್ನ ಜಾಜ್ವಲ್ಯಮಾನವಾದ ಪ್ರಭೆಗಳು ಸೂರ್ಯನ ಕಿರಣ ಅಥವಾ ಪ್ರಭೆಗಿಂತಲೂ ಅತ್ಯಧಿಕವಾಗಿ ಪ್ರಕಾಶಿಸುತ್ತವೆ. ಈ ವಾಕ್ಯದಲ್ಲಿ ದಾವಾನಲಾಗ್ನಿಯನ್ನು (ಕಾಡುಕಿಚ್ಚನ್ನು) ವರ್ಣಿಸಿದೆ. ಅಗ್ನಿಯು ಕಾಡಿನಲ್ಲಿ ಮಹಾಮಹಾವೃಕ್ಷ ಗಳನ್ನು ದಹಿಸುವಾಗ ಅಗ್ನಿಯಿಂದುಂಟಾಗುವ ಪ್ರಕಾಶ ಮತ್ತು ತಾಪವು ಸೂರ್ಯನ ತೇಜಸ್ಸಿಗಿಂತ ಅತಿಶಯವಾಗಿರು ವುದು ಎಂಬ ಲೋಕಪ್ರಸಿದ್ಧವಾಗಿರುವ ವಿಷಯವು ಇಲ್ಲಿ ವರ್ಣಿತವಾಗಿದೆ. ಈ ವಾಕ್ಯದಲ್ಲಿ **ಅಪಃ**—ಉದಕಗಳನ್ನು ಎಂಬ ಶಬ್ದವು ಉದಕಗಳಿಂದ ಪುಷ್ಟವಾಗಿ ಬೆಳೆದಿರುವ ವೃಕ್ಷಾದಿಗಳನ್ನು ಸೂಚಿಸುವುದು. ಕಾರ್ಯಕ್ಕೆ ಬದಲಾಗಿ ಕಾರಣವು ಉಕ್ತವಾಗಿರುವುದೆಂದು ತಿಳಿಯಬೇಕು. **ಚಿತ್** ಎಂಬ ಶಬ್ದಕ್ಕೆ ಯಾಸ್ಕರು—

**ಚಿದಿತ್ಯೇಷೋಽನೇಕಕರ್ಮಾ । ಆಚಾರ್ಯಶ್ಚಿದಿದಂ ಬ್ರೂಯಾದಿತಿ ಪೂಜಾಯಾಂ । ದಧಿಚಿದಿತ್ಯು-ಪಮಾರ್ಥೇ । ಕುಲ್ಮಾಷಾಂಶ್ಚಿದಾಹರೇತ್ಯವಕುತ್ಸಿತೇ ।**

(ನಿ. ೧-೪)

ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ, ಚಿತ್ ಎಂಬ ಶಬ್ದಕ್ಕೆ ಅನೇಕಾರ್ಥಗಳಿದ್ದು ಸಂದರ್ಭಾನುಸಾರ ಇದರ ಪ್ರಯೋಗವಿರುವುದು. ಈ ಶಬ್ದವು ಪೂಜ್ಯತೆಯನ್ನು ಸೂಚಿಸುವುದಕ್ಕಾಗಿಯೂ, ಉಪಮಾರ್ಥದಲ್ಲಿಯೂ, ನಿಂದೆ ಯಲ್ಲಿಯೂ ಇದರ ಪ್ರಯೋಗವಿರುವುದೆಂದು ಹೇಳಿ—**ಆಚಾರ್ಯಶ್ಚಿದಿದಂ ಬ್ರೂಯಾತ್** ಎಂಬ ವಾಕ್ಯದಲ್ಲಿರುವ **ಚಿತ್** ಎಂಬ ಶಬ್ದವು ಪೂಜ್ಯತೆಯನ್ನು ಸೂಚಿಸುವುದೆಂದೂ, **ದಧಿಚಿದಿತ್ಯುಪಮಾರ್ಥೇ**— ಎಂಬ ವಾಕ್ಯದಲ್ಲಿರುವ **ಚಿತ್** ಎಂಬ ಶಬ್ದವು ಉಪಮಾರ್ಥದಲ್ಲಿ ಪ್ರಯುಕ್ತವಾಗಿದೆಯೆಂದೂ, **ಕುಲ್ಮಾಷಾಂಶ್ಚಿದಾಹರೇತ್** ಎಂಬ ವಾಕ್ಯದಲ್ಲಿ ನಿಂದೆಯನ್ನು ಸೂಚಿಸುವುದಾಗಿದೆಯೆಂದೂ ನಿರ್ವಚನವನ್ನು ಉದಾಹರಣೆಗಳ ಮೂಲಕ ವಿವರಿಸಿದ್ದಾರೆ. ಪ್ರಸಕ್ತವಾದ ಈ ಋಕ್ಕಿನಲ್ಲಿ ದಿವಶ್ಚಿತ್ ಎಂಬ ಶಬ್ದಗಳು ಉಪಮಾರ್ಥವನ್ನು ಸೂಚಿಸುವುದಾಗಿವೆ:

**ವಿಭಾತೀಃ ಪೂರ್ವೀಃ ಉಷಃ ಅನು ಭಾಸಿ**— ಯಜ್ಞಾರ್ಥವಾಗಿ ಅಗ್ನಿಯನ್ನು ಉಷಃಕಾಲಾನಂತರ ಹೊತ್ತಿಸಿ ಪ್ರತಿಷ್ಠಿಸುವುದರಿಂದ, ಪ್ರಕಾಶಮಾನವಾದವೂ, ಪುರಾತನವಾದವೂ ಆದ ಉಷಃಕಾಲಗಳನ್ನು ಅನುಸರಿಸಿ ಪ್ರಕಾಶಿಸುತ್ತೀಯೆ ಎಂದು ಇಲ್ಲಿ ವರ್ಣಿಸಿದೆ. ಇಲ್ಲಿ ಉಷಃಕಾಲಗಳು ಎಂದು ಅನೇಕ ದಿನಗಳಲ್ಲಿ ಪ್ರಾದುರ್ಭೂತವಾಗುವ ಉಷಃಕಾಲಗಳನ್ನು ಸೂಚಿಸುವುದಕ್ಕಾಗಿ ಬಹುವಚನಪ್ರಯೋಗವಿದೆ.

**ಮಂದ್ರಸ್ಯ ಹೋತುಃ ದೇವಾಃ ಪನಯಂತ**— ಈ ವಾಕ್ಯದಲ್ಲಿ ತೇಜಸ್ಸು ಅಥವಾ ಗುಣಗಳು ಎಂಬ ಅರ್ಥವನ್ನು ಸೂಚಿಸುವ ಶಬ್ದವನ್ನು ಅಧ್ಯಾಹಾರ ಮಾಡಿಕೊಂಡರೆ ಅರ್ಥವು ಸರಿಯಾಗಿ ಹೊಂದುವುದು. ಎಲೈ ಅಗ್ನಿಯೇ, ಸ್ತುತ್ಯನೂ, ದೇವತೆಗಳನ್ನು ಆಹ್ವಾನಮಾಡುವ ಹೋತೃವೂ ಆದ ನಿನ್ನ ತೇಜಸ್ಸುಗಳನ್ನು ಅಥವಾ ಗುಣಗಳನ್ನು ದೇವತೆಗಳು ಸ್ತುತಿಸುತ್ತಾರೆ ಎಂದು ವಾಕ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಉರೌ ವಾ ಯೇ ಅಂತರಿಕ್ಷೇ ಮದಂತಿ ದಿವೋ ವಾ ಯೇ ರೋಚನೇ ಸಂತಿ ದೇವಾಃ ।
ಊಮಾ ವಾ ಯೇ ಸುಹವಾಸೋ ಯಜತ್ರಾ ಆಯೇಮಿರೇ ರಥ್ಯೋ ಅಗ್ನೇ ಅಶ್ವಾಃ ॥ ೮ ॥

॥ ಪದಪಾಠಃ ॥

ಉರೌ । ವಾ । ಯೇ । ಅಂತರಿಕ್ಷೇ । ಮದಂತಿ । ದಿವಃ । ವಾ । ಯೇ । ರೋಚನೇ । ಸಂತಿ । ದೇವಾಃ ।
ಊಮಾಃ । ವಾ । ಯೇ । ಸುಽಹವಾಸಃ । ಯಜತ್ರಾಃ । ಆಽಯೇಮಿರೇ । ರಥ್ಯಃ । ಅಗ್ನೇ । ಅಶ್ವಾಃ ॥೮॥

॥ ಸಾಯಣಭಾಷ್ಯಂ ॥

ಉರೌ ವಿಸ್ತೀರ್ಣೇಽಂತರಿಕ್ಷೇ ಯೇ ದೇವಾ ಮದಂತಿ । ಹೃಷ್ಯಂತಿ । ದಿವಃ ಸೂರ್ಯಸ್ಯ ರೋಚನೇ ಪ್ರಕಾಶನ ಆಲೋಕೇ ಯೇ ದೇವಾಃ ಸಂತಿ । ಊಮಾಃ । ಊಮಸಂಜ್ಞಕಾಃ ಪಿತರಃ ಸಂತಿ । ಯಜತ್ರಾ ಯಷ್ಟವ್ಯಾ ಯೇ ದೇವಾಃ ಸುಹವಾಸಃ ಶೋಭನಾಹ್ವಾನಾ ಆಯೇಮಿರೇ । ಆಯಚ್ಛಂತಿ । ರಥ್ಯೋ ರಥಿನಸ್ತವ ಯೇಽಶ್ವಾಃ ಸಂತಿ ಹೇ ಅಗ್ನೇ ತೈಃ ಸರ್ವೈಃ ಸಾರ್ಧಮಾಯಾಹೀತ್ಯುತ್ತರಯಾ ಸಂಬಂಧಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಉರೌ**—ವಿಸ್ತೃತವಾದ । **ಅಂತರಿಕ್ಷೇ**—ಅಂತರಿಕ್ಷದಲ್ಲಿ । **ಯೇ ದೇವಾಃ**—ಯಾವ ದೇವತೆಗಳು । **ಮದಂತಿ**—ಹರ್ಷಯುಕ್ತರಾಗಿದ್ದಾರೆಯೋ । **ದಿವಃ**—ಸೂರ್ಯನ । **ರೋಚನೇ**—ಪ್ರಕಾಶವನ್ನೊಳಗೊಂಡ ಅಂತರಿಕ್ಷದಲ್ಲಿ । **ಯೇ ವಾ**—ಯಾವ ದೇವತೆಗಳು । **ಸಂತಿ**—ಇರುತ್ತಾರೆಯೋ । **ಉಮಾಃ ವಾ**—'ಊಮ' ಸಂಜ್ಞಕರಾದ ಯಾವ ಪಿತೃಗಳಿದ್ದಾರೆಯೋ । **ಯಜತ್ರಾಃ**—ಯಜ್ಞಾರ್ಹರಾದ । **ಯೇ**—ಯಾವ ದೇವತೆಗಳು । **ಸುಹವಾಸಃ**—ಶ್ರೇಷ್ಠವಾದ ಆಹ್ವಾನವುಳ್ಳವರಾಗಿ । **ಆಯೇಮಿರೇ**—ಬರುತ್ತಾರೆಯೋ । **ರಥ್ಯಃ**—ರಥಕ್ಕೆ ಯುಕ್ತವಾಗಿರುವ । **ಅಶ್ವಾಃ**—ಯಾವ ನಿನ್ನ ಅಶ್ವಗಳಿವೆಯೋ (ಅವರುಗಳೆಲ್ಲರೊಂದಿಗೂ ನಮ್ಮ ಯಜ್ಞಕ್ಕೆ ಬಾ).

॥ ಭಾವಾರ್ಥ ॥

ಎಲೈ ಅಗ್ನಿಯೇ, ವಿಸ್ತೃತವಾದ ಅಂತರಿಕ್ಷದಲ್ಲಿ ಯಾವ ದೇವತೆಗಳು ಕ್ರೀಡಿಸುತ್ತಾರೆಯೋ, ಆದಿತ್ಯನ ಪ್ರಕಾಶವನ್ನೊಳಗೊಂಡ ಯಾವ ಲೋಕದಲ್ಲಿ ಯಾವ ದೇವತೆಗಳಿರುತ್ತಾರೆಯೋ, "ಊಮ" ಸಂಜ್ಞಕರಾದ ಯಾವ ಪಿತೃಗಳಿರುತ್ತಾರೆಯೋ, ಯಾವ ಯಾವ ದೇವತೆಗಳು ಉತ್ತಮವಾದ ಆಹ್ವಾನವುಳ್ಳವರಾಗಿ ಬರುವರೋ, ಯಾವ ನಿನ್ನ ಉತ್ತಮವಾದ ರಥಕ್ಕೆ ಯುಕ್ತವಾದ ಅಶ್ವಗಳಿವೆಯೋ ಅವರೆಲ್ಲರೊಡನೆಯೂ ನಮ್ಮ ಯಜ್ಞಾಭಿಮುಖವಾಗಿ ಬಾ.

## English Translation.

The deities who sport in the spacious (firmament); those who are in the luminous sphere of heaven; the adorable Umas, who come when worthily invoked; the horses, Agni, that are fit for your car.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಂತರಿಕ್ಷದಲ್ಲಿ ಇರತಕ್ಕ ದೇವತೆಗಳನ್ನೂ, ಸ್ವರ್ಗದಲ್ಲಿರುವ ದೇವತೆಗಳನ್ನೂ, ಊಮಾಸಂಜ್ಞಕರಾದ ಪಿತೃದೇವತೆಗಳನ್ನೂ ಯಜ್ಞಾರ್ಹರಾದ ಇನ್ನೂ ಯಾವ ಯಾವ ದೇವತೆಗಳಿದ್ದಾರೆಯೋ ಅವರೆಲ್ಲರನ್ನೂ ಕರೆದುಕೊಂಡು ನಿನ್ನ ರಥಕ್ಕೆ ನಿಯೋಜಿತವಾಗಿರುವ ರೋಹಿತಗಳೆಂಬ ಅಶ್ವಗಳೊಡನೆ ನಾವು ಮಾಡುತ್ತಿರುವ ಯಜ್ಞಕ್ಕೆ ಬಾ ಎಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ. ಈ ಋಕ್ಕಿನಲ್ಲಿ ಕ್ರಿಯಾಪದವಿಲ್ಲದೆ ವಾಕ್ಯವು ಅಸಂಪೂರ್ಣವಾಗಿರುವುದು. ಆದುದರಿಂದ ಈ ಋಕ್ಕಿನಲ್ಲಿ ಹೇಳಿರುವ ವಿಷಯಗಳೆಲ್ಲವನ್ನೂ ಮುಂದಿನ ಋಕ್ಕಿನಲ್ಲಿ ಹೇಳಿರುವ ವಿಷಯಗಳೊಡನೆ ಸಮನ್ವಯಮಾಡಿಕೊಳ್ಳಬೇಕಾಗಿರುವುದು.

ಇಲ್ಲಿ ಊಮಾಸಂಜ್ಞಕರಾದ ಪಿತೃದೇವತೆಗಳು ಎಂದು ಭಾಷ್ಯಕಾರರು **ಊಮಾಃ** ಎಂಬ ಶಬ್ದಕ್ಕೆ ಅರ್ಥವಿವರಣೆಮಾಡಿದಾರೆ. ಈ ವಿಧವಾದ ಪಿತೃಗಳು ಯಾರು? ಅವರ ಸ್ವರೂಪವೇನು? ಮುಂತಾದ ವಿವರಗಳು ಋಗ್ವೇದದಲ್ಲಿ ಹೇಳಿರುವುದಿಲ್ಲವಾದ್ದರಿಂದ ಇವರ ವಿಷಯವಾಗಿ ನಮಗೆ ಹೆಚ್ಚಿನ ಸಂಗತಿಗಳೇನೂ ತಿಳಿದುಬಂದಿಲ್ಲ.

ಈ ಋಕ್ಕಿನಲ್ಲಿ ಅಗ್ನಿಯನ್ನು ಸ್ತುತಿಸಿ, ಮೂರು ಲೋಕಗಳಲ್ಲಿಯೂ ಇರುವ ನಾನಾ ದೇವತೆಗಳನ್ನೂ, ಪಿತೃ ದೇವತೆಗಳನ್ನೂ ಕರೆದುಕೊಂಡು ಯಜ್ಞಭೂಮಿಗೆ ಬರುವಂತೆ ಪ್ರಾರ್ಥಿಸಲಾಗಿದೆ. ಈ ಮೂರು ಲೋಕಗಳು ಯಾವವು? ಇವುಗಳಲ್ಲಿರುವ ದೇವತೆಗಳಾರು ? ಅವರ ಸಂಖ್ಯೆಯೆಷ್ಟು ? ಅವರ ಸ್ವರೂಪವೇನು ? ಇವೇ ಮುಂತಾದ ವಿಷಯಗಳನ್ನು ನಾವು ಪೀಠಿಕಾಪ್ರಕರಣವಾದ ಮೊದಲನೆಯ ಭಾಗದಲ್ಲಿ ಸೂಕ್ಷ್ಮವಾಗಿ ವಿವರಿಸಿದ್ದರೂ ಇಲ್ಲಿ ಸಂದರ್ಭಾನುಸಾರವಾಗಿ ಸಂಹಿತಾವಾಕ್ಯಗಳನ್ನೂ, ನಿರುಕ್ತವಚನಗಳನ್ನೂ ಉದಹರಿಸಿ ಆ ಸಕಲ ದೇವತೆಗಳ ಸಂಖ್ಯೆ ಮತ್ತು ಸ್ವರೂಪಗಳನ್ನು ಮುಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತೆ.

॥ ಸಂಹಿತಾಪಾಠಃ ॥

ಏಭಿರಗ್ನೇ ಸರಥಂ ಯಾಹ್ಯರ್ವಾಙ್ ನಾನಾರಥಂ ವಾ ವಿಭವೋ ಹ್ಯಶ್ವಾಃ ।
ಪತ್ನೀವತಸ್ತ್ರಿಂಶತಂ ತ್ರೀಂಶ್ಚ ದೇವಾನನುಷ್ವಧಮಾ ವಹ ಮಾದಯಸ್ವ ॥ ೯ ॥

ಪದಪಾಠಃ ॥

ಆ । ಏಭಿಃ । ಅಗ್ನೇ । ಸ್ಽರಥಂ । ಯಾಹಿ । ಅರ್ವಾಙ್ । ನಾನಾಽರಥಂ । ವಾ । ವಿಽಭವಃ । ಹಿ । ಅಶ್ವಾಃ ।
ಪತ್ನೀಽವತಃ । ತ್ರಿಂಶತಂ । ತ್ರೀನ್ । ಚ । ದೇವಾನ್ । ಅನುಽಸ್ವಧಂ । ಆ । ವಹ । ಮಾದಯಸ್ವ ॥ ೯ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಏಭಿಃ ಪೂರ್ವೋಕ್ತೈರ್ದೇವಗಣೈಃ ಸಾರ್ಧಂ ಸರಥಂ ಸಮಾನರಥಂ ನಾನಾರಥಂ ವಾ ತ್ವದ್ರಥಂ ಸಮಾರೋಪ್ಯಾಯಾಹ್ಯರ್ವಾಙ್ ಅಸ್ಮದಭಿಮುಖಮಾಯಾಹಿ । ಯತಃ ಕಾರಣಾತ್ತ್ವೇಽಶ್ವಾ ವಿಭವಃ ಪ್ರಭವಃ ಸಮರ್ಥಾಃ ॥ ಹಿಃ ಪ್ರಸಿದ್ಧೌ ॥ ಪತ್ನೀವತಃ ಪತ್ನೀಭಿಃ ಸಹಿತಾನ್ ತ್ರಿಂಶತಂ ತ್ರೀಂಶ್ಚ ತ್ರಯಸ್ತ್ರಿಂಶತಂ ದೇವಾಂಶ್ಚಾನುಷ್ವಧಂ ಬಲಾರ್ಥಮನ್ನಾರ್ಥಂ ವಾವಹ । ಮಾದಯಸ್ವ ಸೋಮೇನೇತಿ ವಿಶೇಷಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಏಭಿಃ**—ಹಿಂದೆ ವರ್ಣಿತರಾದ ದೇವತೆಗಳೊಡನೆ । **ಸರಥಂ**—ಒಂದೇ ರಥದಲ್ಲಿ ಕುಳಿತುಕೊಂಡಾಗಲಿ । **ನಾನಾರಥಂ ವಾ**— ಅಥವಾ ಬೇರೆಬೇರೆ ರಥದಲ್ಲಿ ಕುಳಿತುಕೊಂಡಾಗಲಿ । **ಅರ್ವಾಙ್**—ನಮ್ಮ ಯಜ್ಞಾಭಿಮುಖವಾಗಿ । **ಆ ಯಾಹಿ**—ಬಾ । **ಅಶ್ವಾಃ**—ನಿನ್ನ ಅಶ್ವಗಳು । **ವಿಭವಃ ಹಿ**—(ಎಲ್ಲರನ್ನೂ ಕರೆತರಲು) ಸಮರ್ಥವಾಗಿವೆಯಲ್ಲವೇ । **ಪತ್ನೀವತಃ**—ಪತ್ನಿಯರೊಡಗೂಡಿದ । **ತ್ರಿಂಶತಂ ತ್ರೀಂಶ್ಚ ದೇವಾನ್**—ಮುನ್ನೂರಮೂರು ದೇವತೆಗಳನ್ನೂ । **ಅನುಷ್ವಧಂ**—ಸೋಮದ ಪಾನಾರ್ಥವಾಗಿ । **ಆ ವಹ**—ಕರೆದುಕೊಂಡು ಬಾ । **ಮಾದಯಸ್ವ**—(ಸೋಮರಸದಿಂದ) ಅವರನ್ನು ತೃಪ್ತಿಪಡಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಹಿಂದೆ ವರ್ಣಿತರಾದ ದೇವತೆಗಳೊಡನೆ ಒಂದೇ ರಥದಲ್ಲಿ ಕುಳಿತುಕೊಂಡಾಗಲಿ, ಅಥವಾ ಬೇರೆ ಬೇರೆ ರಥಗಳಲ್ಲಿ ಕುಳಿತುಕೊಂಡಾಗಲಿ ನಮ್ಮ ಯಜ್ಞಾಭಿಮುಖವಾಗಿ ಬಾ. ಪತ್ನಿಯರೊಡಗೂಡಿದ ಮುನ್ನೂರ ಮೂರು ದೇವತೆಗಳನ್ನೂ ಸೋಮಪಾನಾರ್ಥವಾಗಿ ಕರೆದುಕೊಂಡು ಬಾ. ಸೋಮರಸದಿಂದ ಅವರನ್ನು ತೃಪ್ತಿಪಡಿಸು.

## English Translation.

With all these in one chariot, Agni, or in many (chariots), come to our presence, for your horses are able : bring the three and thirty divinities with their wives, for the sake of (the sacrificial food, and exhilarate them (all with the Soma libation).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಸಹ ಹಿಂದಿನ ಋಕ್ಕಿನಲ್ಲಿ ಹೇಳಿರುವಂತೆ ದೇವತೆಗಳನ್ನು ಯಜ್ಞಭೂಮಿಗೆ ಕರೆತರುವಂತೆ ಅಗ್ನಿಯನ್ನು ಪ್ರಾರ್ಥಿಸಿದೆ. ಆದರೆ ದೇವತೆಗಳ ಪತ್ನಿಯರನ್ನೂ ಕರೆದುಕೊಂಡು ಬರಬೇಕೆಂದು ಹೇಳಿರುವುದಲ್ಲದೆ **ತ್ರಿಂಶತಂ ತ್ರಿಂಶಚ್ಚ ದೇವಾನ್**—ಮುನ್ನೂರುಮೂರು ದೇವತೆಗಳನ್ನು ಎಂದು ದೇವತೆಗಳ ಸಂಖ್ಯೆಯನ್ನು ನಿರ್ದೇಶಿಸಿ ಹೇಳಲಾಗಿದೆ. ದೇವತೆಗಳ ಸಂಖ್ಯೆಯ ವಿಷಯದಲ್ಲಿ ಋಗ್ವೇದದಲ್ಲಿ ನಾನಾರೀತಿ ವರ್ಣನೆಗಳಿರುವವು. ಈ ಸೂಕ್ತ ದ್ರಷ್ಟೃವಾದ ವಿಶ್ವಾಮಿತ್ರಋಷಿಯೇ ಈ ಮಂಡಲದ ಒಂಭತ್ತನೆಯ ಸೂಕ್ತದಲ್ಲಿ—

**ತ್ರೀಣಿ ಶತಾ ತ್ರೀ ಸಹಸ್ರಾಣ್ಯಗ್ನಿಂ ತ್ರಿಂಶಚ್ಚ ದೇವಾ ನವ ಚಾಸಪರ್ಯನ್ ।**

(ಋ. ಸಂ. ೩-೯-೯)

ಎಂದರೆ ದೇವತೆಗಳ ಸಂಖ್ಯೆಯು ಮೂರುಸಾವಿರದ ಮುನ್ನೂರ ಮೂವತ್ತಮೂರು ಎಂದು ಹೇಳಿದಾನೆ. ಇನ್ನೂ ಇತರ ಋಷಿಗಳು ದೇವತೆಗಳ ಸಂಖ್ಯೆ ಮೂವತ್ತಮೂರೆಂದು ಹೇಳಿದಾರೆ. ಇವರುಗಳಾರು, ಇವರ ವಿವರಗಳೇನು ಎಂಬ ವಿಷಯವನ್ನು ನಿರುಕ್ತಕಾರರ ವಚನದಂತೆ ವಿಮರ್ಶೆಮಾಡಿ ಅನಂತರ ಇತರ ಋಕ್ಕುಗಳಲ್ಲಿರುವ ಈ ಸಂಬಂಧವಾದ ವಿಷಯಗಳನ್ನು ಉದಾಹರಣೆಗಳ ಸಹಿತವಾಗಿ ತಿಳಿಸಲಾಗುವುದು.

ದೇವತೆಗಳು ಮೂರುಸಾವಿರದ ಮುನ್ನೂರ ಮೂವತ್ತುಮೂರು ಜನಗಳಿರುವರು ಎಂದು ವ್ಯಷ್ಟಿಯಿಂದ (ವಿವರಣೆಯಿಂದ) ಹೇಳಿದೆ. ಈ ದೇವತೆಗಳೆಲ್ಲರೂ ಅಗ್ನಿಯನ್ನು ಪೂಜಿಸುವರು ಎಂದೂ ವಿವರಿಸಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಸಮಷ್ಟಿರೂಪದಿಂದ ದೇವತೆಗಳ ವಿವರಣೆಯು ಉಕ್ತವಾಗಿದೆ ಎಂದು ಸಾಯಣರು ವಿವರಿಸಿದ್ದಾರೆ

**ದೇವಸಂಖ್ಯಾ ಚ ಬೃಹದಾರಣ್ಯಕೇ ಅಭಿಹಿತಾ—ಮಹಿಮಾನ ಏವೈಷಾಮೇತೇ ತ್ರಯಸ್ತ್ರಿಂಶತ್ತ್ವೇವ ದೇವಾ ಇತಿ । ಕತಮೇ ತೇ ತ್ರಯಸ್ತ್ರಿಂಶದಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಸ್ತ ಏಕತ್ರಿಂಶದಿಂದ್ರಶ್ಚೈವ ಪ್ರಜಾಪತಿಶ್ಚ ತ್ರಯಸ್ತ್ರಿಂಶೌ ॥**

(ಬೃ ಆ. ೩-೯)

ದೇವತೆಗಳ ಸಂಖ್ಯೆಯು ಮೂವತ್ತುಮೂರೇ ಆಗಿರುವುದು. ಎಂಟು ವಸುಗಳು, ಹನ್ನೊಂದು ಜನ ರುದ್ರರು, ಹನ್ನೆರಡು ಜನ ಆದಿತ್ಯರು, ಇಂದ್ರನು ಮತ್ತು ಪ್ರಜಾಪತಿಯು ಎಂದು. ಇವರು ಒಟ್ಟಿನಲ್ಲಿ ಮೂವತ್ತುಮೂರು ದೇವತೆಗಳಾಗಿರುವರು. ಇವರ ಮಹಿಮೆಯಿಂದ ಮೂರುಸಾವಿರದ ಮೂರುನೂರ ಮೂವತ್ತಮೂರು ಆಗಿರುವರು ಎಂದು ವಿವರಿಸಿದೆ. ಈ ವಿಷಯದಲ್ಲಿ—**ಯೇ ದೇವಾಸೋ ದಿವ್ಯೇಕಾದಶಸ್ಥ** (ಋ. ಸಂ. ೧೩೯–೧೧–೧) ಎಂಬ ಋಕ್ಕಿನಲ್ಲಿ—

**ತೇ ದೇವಾಸೋ ಯಜ್ಞಮಿಮಂ ಜುಷಧ್ವಂ**—ಸಕಲ ದೇವತೆಗಳೂ ಆದ ನೀವು ನಮ್ಮ ಈ ಯಜ್ಞವನ್ನು ಸೇವಿಸಿ ಎಂದು ಮೂರು ಲೋಕಗಳ ದೇವತೆಗಳನ್ನೂ ಉದ್ದೇಶಿಸಿದೆ. **ದಿವಿ ಏಕಾದಶ, ಪೃಥಿವ್ಯಾಂ ಏಕಾದಶ, ಅಪ್ಸುಕ್ಷಿತೋ ಏಕಾದಶ** ಎಂದು ಮೂರು ಲೋಕಗಳಿಂದಲೂ ಒಟ್ಟು ದೇವತೆಗಳ ಸಂಖ್ಯೆಯು ಮೂವತ್ತುಮೂರೆಂದು ಹೇಳಿದೆ. ಸಾಯಣರು—**ಯದ್ಯಪಿ ತಿಸ್ರ ಏವ ದೇವತಾಃ** (ನಿ. ೭–೫) ಎಂಬ ನಿರುಕ್ತ ವಚನವನ್ನುದಹರಿಸಿ **ಕ್ಷಿತ್ಯಾದ್ಯಭಿಮಾನಿನ್ಯೋ ದೇವತಾಸ್ತಿಸ್ರ ಏವ ತಥಾಪಿ ಮಹಿತಾ ಮಹತ್ತ್ವೇನ ಸ್ವಸ್ವವಿಭೂತ್ಯಾ ತ್ರಯಸ್ತ್ರಿಂಶತ್ಸಂಖ್ಯಾತಾ ಭವಂತಿ । ತತ್ತತ್ಸ್ಥಾನಾ ಅನ್ಯಾಸ್ತದ್ವಿಭೂತಯ ಇತ್ಯುಕ್ತತ್ವಾತ್** । ಪೃಥಿವೀ ಅಂತರಿಕ್ಷ ಮತ್ತು ದ್ಯುಲೋಕಾಭಿಮಾನಿದೇವತೆಗಳ ಸಂಖ್ಯೆಯು ಮೂರೇ ಆದರೂ ಸಹ ಅವರು ಅವರವರ ಮಹಿಮೆಯಿಂದ ೩೩ ಸಂಖ್ಯೆಯುಳ್ಳವರಾಗಿ ಕಾಣುತ್ತಾರೆ. ಆಯಾ ಲೋಕಗಳಲ್ಲಿರುವ ಉಳಿದ ದೇವತೆಗಳೆಲ್ಲಾ ಇವರ ವಿಭೂತಿಗಳು ಎಂದು ವಿವರಿಸಿದ್ದಾರೆ. ನಿರುಕ್ತಕಾರರೂ ಸಹ—

> **ತಿಸ್ರ ಏವ ದೇವತಾ ಇತಿ ನೈರುಕ್ತಾಃ । ಅಗ್ನಿಃ ಪೃಥಿವೀಸ್ಥಾನಃ । ವಾಯುರ್ವಾ ಇಂದ್ರೋ ವಾ ಅಂತರಿಕ್ಷಸ್ಥಾನಃ । ಸೂರ್ಯೋ ದ್ಯುಸ್ಥಾನಃ । ತಾಸಾಂ ಮಹಾಭಾಗ್ಯಾತ್ ಏಕೈಕಸ್ಯಾ ಅಪಿ ಬಹೂನಿ ನಾಮಧೇಯಾನಿ ಭವಂತಿ । ಅಪಿ ವಾ ಕರ್ಮಪೃಥಕ್ತ್ವಾತ್** ।
>
> (ನಿ. ೭–೫)

ನೈರುಕ್ತಕಾರರ ಮತದಂತೆ, **ಅಗ್ನಿ, ವಾಯು** ಅಥವಾ **ಇಂದ್ರ** ಮತ್ತು **ಸೂರ್ಯ** ಈ ಮೂರು ದೇವತೆಗಳೂ ಸಹ ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಈ ಮೂರು ಲೋಕಗಳ ಅಧಿದೇವತೆಗಳು. ಈ ದೇವತೆಗಳಿಗೇ ಅವರವರ ಮಹತ್ವಕ್ಕನುಗುಣವಾಗಿಯಾಗಲಿ, ಕ್ರಿಯಾವೈವಿಧ್ಯಗಳ ದೆಸೆಯಿಂದಾಗಲಿ ಅನೇಕ ವಿಧವಾದ ನಾಮಧೇಯಗಳಿರುತ್ತವೆ ಯೆಂದು ಹೇಳಿ, **ಅಥಾತೋಽನುಕ್ರಮಿಷ್ಯಾಮ ಅಗ್ನಿಃ ಪೃಥಿವೀಸ್ಥಾನಃ ತಂ ಪ್ರಥಮಂ ವ್ಯಾಖ್ಯಾಸ್ಯಾಮಃ** । ಎಂದು ನಿ. ೭–೧೪ ರಿಂದ ೯–೪೩ ನೇ ಖಂಡದವರೆಗೆ ಪೃಥಿವೀಸ್ಥರಾದ ದೇವತೆಗಳ ಸ್ವರೂಪವನ್ನೂ, **ಅಥಾತೋ ಮಧ್ಯಸ್ಥಾನಾ ದೇವತಾಃ । ತಾಸಾಂ ವಾಯುಃ ಪ್ರಥಮಾಗಾಮೀ ಭವತಿ** । ಎಂದು ೧೦–೧ ರಿಂದ ೧೧–೫೦ ನೇ ಖಂಡದವರೆಗೆ ಮಧ್ಯಮಸ್ಥಾನವಾದ ಅಂತರಿಕ್ಷದೇವತೆಗಳ ಸ್ವರೂಪವನ್ನೂ ಹೇಳಿದೆ. ಹೀಗೆ ವಿಭಾಗಿಸಿರುವ ಈ ದೇವತೆಗಳ ಸಂಖ್ಯೆಯೆಷ್ಟು ಎಂಬ ವಿಷಯದಲ್ಲಿ ಮತಭೇದಗಳಿವೆಯಾದರೂ ಋಕ್ಸಂಹಿತೆಯ ಅನೇಕ ಕಡೆಗಳಲ್ಲಿ ಒಂದೇ ವಿಧವಾದ ಅಭಿಪ್ರಾಯವು ಕಾಣುತ್ತದೆ.

> **ಆ ನಾಸತ್ಯಾ ತ್ರಿಭಿರೇಕಾದಶೈರಿಹ ದೇವೇಭಿರ್ಯಾತಂ ಮಧುಪೇಯಮಶ್ವಿನಾ ।**
> **ಪ್ರಾಯುಸ್ತಾರಿಷ್ಟಂ ನೀ ರಪಾಂಸಿ ಮೃಕ್ಷತಂ ಸೇಧತಂ ದ್ವೇಷೋ ಭವತಂ ಸಚಾಭುವಾ ॥**
>
> (ಋ. ಸಂ. ೧–೩೪–೧೧)

(೧೧×೩) ಮೂವತ್ತುಮೂರು ದೇವತೆಗಳೊಂದಿಗೂ ಮಧುಪಾನವನ್ನಪೇಕ್ಷಿಸಿ ಇಲ್ಲಿಗೆ ಬನ್ನಿರಿ ಎಂದು ಅಶ್ವಿನೀ ದೇವತೆಗಳನ್ನೂ,

> ಶ್ರುಷ್ಟೀವಾನೋ ಹಿ ದಾಶುಷೇ ದೇವಾ ಅಗ್ನೇ ವಿಚೇತಸಃ ।
> ತಾನ್ರೋಹಿದಶ್ವ ಗಿರ್ವಣಸ್ತ್ರಯಸ್ತ್ರಿಂಶತಮಾ ವಹ ॥
>
> (ಋ. ಸಂ. ೧-೪೫-೨)

ಮೂವತ್ತುಮೂರು ದೇವತೆಗಳನ್ನು ಕರೆದುಕೊಂಡು ಬಾ ಎಂದು ಅಗ್ನಿಯನ್ನೂ ಪ್ರಕೃತವಾದ ಋಕ್ಕಿನಲ್ಲಿ ಪ್ರಾರ್ಥಿಸಿರುವಂತೆಯೇ ಪ್ರಾರ್ಥಿಸಿದೆ. ಇದರಂತೆಯೇ,

> ಐಭಿರಗ್ನೇ ಸರಥಂ ಯಾಹ್ಯರ್ವಾಙ್ ನಾನಾರಥಂ ವಾ ವಿಭವೋ ಹ್ಯಶ್ವಾಃ ।
> ಪತ್ನೀವತಸ್ತ್ರಿಂಶತಂ ತ್ರೀಂಶ್ಚ ದೇವಾನನುಷ್ವಧಮಾ ವಹ ಮಾದಯಸ್ವ ॥
>
> (ಋ. ಸಂ. ೩-೬-೯)
>
> ಇತಿ ಸ್ತುತಾಸೋ ಅಸಥಾ ರಿಶಾದಸೋ ಯೇ ಸ್ಥ ತ್ರಯಶ್ಚ ತ್ರಿಂಶಚ್ಚ ।
> ಮನೋರ್ದೇವಾ ಯಜ್ಞಿಯಾಸಃ ॥
>
> (ಋ. ಸಂ. ೮-೩೦-೨)
>
> ವಿಶ್ವೈರ್ದೇವೈಸ್ತ್ರಿಭಿರೇಕಾದಶೈರಿಹಾದ್ಭಿರ್ಮರುದ್ಭಿರ್ಭೃಗುಭಿಃ ಸಚಾಭುವಾ ।
>
> (ಋ. ಸಂ. ೮-೩೫-೩)
>
> ತವ ತ್ಯೇ ಸೋಮ ಪವಮಾನ ನಿಣ್ಯೇ ವಿಶ್ವೇ ದೇವಾಸ್ತ್ರಯ ಏಕಾದಶಾಸಃ ।
> ದಶ ಸ್ವಧಾಭಿರಧಿ ಸಾನೋ ಅವ್ಯೇ ಮೃಜಂತಿ ತ್ವಾ ನದ್ಯಃ ಸಪ್ತ ಯಹ್ವೀಃ ॥
>
> (ಋ. ಸಂ. ೯-೯೨-೪)

ಇತ್ಯಾದಿ ಋಕ್ಕುಗಳಲ್ಲಿಯೂ ಸಹ ದೇವತೆಗಳ ಸಂಖ್ಯೆಯು ಮೂವತ್ತುಮೂರೆಂಬುದು ಸ್ಪಷ್ಟವಾಗಿದೆ. ಶತಪಥ ಬ್ರಾಹ್ಮಣದಲ್ಲಿಯೂ ಸಹ,

> ಅಷ್ಟೌ ವಸವಃ । ಏಕಾದಶ ರುದ್ರಾಃ । ದ್ವಾದಶಾದಿತ್ಯಾ ಇಮೇ ಏವ ದ್ಯಾವಾಪೃಥಿವೀ ತ್ರಯಸ್ತ್ರಿಂಶದ್ವೈ ದೇವಾಃ ಪ್ರಜಾಪತಿಶ್ಚತುಸ್ತ್ರಿಂಶಃ ॥
>
> (ಶ. ಬ್ರಾ. ೪-೫-೭-೨)

ಎಂಟು ವಸುಗಳೂ, ಹನ್ನೊಂದು ರುದ್ರರೂ, ಹನ್ನೆರಡು ಆದಿತ್ಯರೂ ಮತ್ತು ದ್ಯಾವಾಪೃಥಿವಿಗಳೂ ಸೇರಿ ಮೂವತ್ತು ಮೂರು ದೇವತಗಳು. ಪ್ರಜಾಪತಿಯು ಇವರಲ್ಲದೇ ಮೂವತ್ತನಾಲ್ಕನೆಯವನು ಎಂದು ಒಂದು ಕಡೆ ಹೇಳಿದೆ. ಆದರೆ ಇನ್ನೊಂದು ಸ್ಥಳದಲ್ಲಿ ಅದೇ ಮೂವತ್ತುಮೂರು ಸಂಖ್ಯೆಯಿದ್ದರೂ ಸಹ ದ್ಯಾವಾಪೃಥಿವಿಗಳಿಗೆ ಬದಲಾಗಿ ಇಂದ್ರನನ್ನೂ ಪ್ರಜಾಪತಿಯನ್ನೂ ಸೇರಿಸಿದೆ.

ತೇ ತ್ರಯಸ್ತ್ರಿಂಶದಿತ್ಯಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಸ್ತ ಏಕತ್ರಿಂಶದಿಂದ್ರಶ್ಚೈವ ಪ್ರಜಾಪ್ರತಿಶ್ಚ ತ್ರಯಸ್ತ್ರಿಂಶಾವಿತಿ ।

(ಶ. ಬ್ರಾ. ೧೧-೬-೩-೫)

ಐತರೇಯ ಬ್ರಾಹ್ಮಣದಲ್ಲೂ ಸಹ,

ತ್ರಯಸ್ತ್ರಿಂಶದ್ವೈ ದೇವಾಃ ಸೋಮಪಾಸ್ತ್ರಯಸ್ತ್ರಿಂಶದಸೋಮಪಾ ಅಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಃ ಪ್ರಜಾಪತಿಶ್ಚ ವಷಟ್ಕಾರಶ್ಚೈತೇ ದೇವಾಃ ಸೋಮಪಾಃ ।

(ಐ. ಬ್ರಾ. ೨-೧೮)

ಸೋಮಪಾನವನ್ನು ಮಾಡತಕ್ಕವರು ಮೂವತ್ತುಮೂರು ದೇವತೆಗಳು. ಅವರು ಅಷ್ಟವಸುಗಳು, ಏಕಾದಶ ರುದ್ರರು, ಮತ್ತು ದ್ವಾದಶಾದಿತ್ಯರು, ಇವರೊಂದಿಗೆ ಪ್ರಜಾಪತಿ ಮತ್ತು ವಷಟ್ಕಾರ. ಹೀಗೆ ಸಂಹಿತೆಯಲ್ಲಿಯೂ, ಬ್ರಾಹ್ಮಣಗಳಲ್ಲಿಯೂ ಈ ಸಂಖ್ಯೆಯ ವಿಷಯದಲ್ಲಿ ಒಂದೇ ಅಭಿಪ್ರಾಯವಿದೆ. ಆದರೆ,

ತ್ರೀಣಿ ಶತಾ ತ್ರೀ ಸಹಸ್ರಾಣ್ಯಗ್ನಿಂ ತ್ರಿಂಶಚ್ಚ ದೇವಾ ನವ ಚಾಸಪರ್ಯನ್ ।
ಔಕ್ಷನ್ ಘೃತೈರಸ್ತೃಣನ್ಬರ್ಹಿರಸ್ಮಾ ಆದಿದ್ಧೋತಾರಂ ನ್ಯಸಾದಯಂತ ॥

(ಋ. ಸಂ. ೩-೯-೯)

ಎಂಬ ಋಕ್ಕಿನಲ್ಲಿಯೂ ಇದರಂತೆಯೇ ಋ. ಸಂ. ೧೦-೫೨-೬ ನೇ ಋಕ್ಕಿನಲ್ಲಿಯೂ ಸಹ ಮೂರುಸಾವಿರದ ಮುನ್ನೂರ ಮೂವತ್ತಮೂರು ದೇವತೆಗಳು ಅಗ್ನಿಯನ್ನು ಪೂಜಿಸಿದರೆಂದು ಹೇಳಿದೆ. ವಾಜಸನೇಯಸಂಹಿತೆಯಲ್ಲಿಯೂ (೩೩-೭) ಇದೇ ಆನುಪೂರ್ವಿಯಿದೆ. ಇದೂ ಅಲ್ಲದೇ,

ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ ಯುವಭ್ಯೋ ನಮ ಆಶಿನೇಭ್ಯಃ ।
ಯಜಾಮ ದೇವಾನ್ಯದಿ ಶಕ್ನವಾಮ ಮಾ ಜ್ಯಾಯಸಃ ಶಂಸಮಾ ವೃಕ್ಷಿ ದೇವಾಃ ॥

(ಋ. ಸಂ. ೧-೨೭-೧೩)

ಅತ್ಯಧಿಕವಾದ ಗುಣವುಳ್ಳವರೂ, ನ್ಯೂನವಾದ ಗುಣವುಳ್ಳವರೂ, ತರುಣರೂ, ವೃದ್ಧರೂ ಆದ ಸಕಲ ವಿಧವಾದ ದೇವತೆಗಳಿಗೂ ನಮಸ್ಕಾರವೆಂದು ಹೇಳುವಾಗ ದೇವತೆಗಳಲ್ಲಿ ಸ್ವರೂಪವೈವಿಧ್ಯವಿದೆಯೆಂದು ತಿಳಿಯುತ್ತದೆ. ಈ ಋಕ್ಕನ್ನೇ ಐತರೇಯ ಬ್ರಾಹ್ಮಣದಲ್ಲೂ ಸಹ (೭-೧೬) ಶುನಶ್ಶೇಪೋಪಾಖ್ಯಾನದಲ್ಲಿ ವಿಶ್ವೇದೇವ ಪ್ರಾರ್ಥನಾ ಸಂದರ್ಭದಲ್ಲಿ ಪಠಿಸಿದೆ ಆದರೆ,

ನಹಿ ವೋ ಅಸ್ತ್ಯರ್ಭಕೋ ದೇವಾಸೋ ನ ಕುಮಾರಕಃ । ವಿಶ್ವೇ ಸತೋಮಹಾಂತ ಇತ್ ।

(ಋ. ಸಂ. ೮-೩೦-೧)

ಎಂಬಲ್ಲಿ ದೇವತೆಗಳ ಮಧ್ಯೆ ದೊಡ್ಡವರು ಚಿಕ್ಕವರು ಎಂಬ ಭೇದವೇ ಇಲ್ಲ. ಸಕಲ ದೇವತೆಗಳೂ ಮಹಾತ್ಮರೇ ಆಗಿದ್ದಾರೆ ಎಂಬ ಪ್ರಶಂಸೆಯಿದೆ. ಇಂತಹ ಮಾಹಾತ್ಮ್ಯವುಳ್ಳ ಸಕಲ ದೇವತೆಗಳನ್ನೂ ಉದ್ದೇಶಿಸಿ ಪ್ರಕೃತವಾದ ಋಕ್ಕಿನಲ್ಲಿ ಋಷಿಯು ಪ್ರಾರ್ಥಿಸಿದ್ದಾನೆ.

**ದೇವಪತ್ನ್ಯಃ**—ಋಗ್ವೇದದಲ್ಲಿ ದೇವಪತ್ನಿಯರ ಹೆಸರನ್ನು ಹೇಳುವಾಗ ಮುಖ್ಯವಾದ ಕೆಲವು ದೇವತೆಗಳ ಪತ್ನಿಯರ ಹೆಸರನ್ನು ಮಾತ್ರ ಹೇಳಿರುವರು. ಹೇಗೆಂದರೆ—

**ಇಂದ್ರಾಣೀ, ವರುಣಾನೀ, ಅಗ್ನಾಯೀ**—ಇಂದ್ರನ ಪತ್ನಿಗೆ **ಇಂದ್ರಾಣಿ**ಯೆಂದೂ, ವರುಣನ ಪತ್ನಿಗೆ **ವರುಣಾನಿ**ಯೆಂದೂ, ಅಗ್ನಿಯ ಪತ್ನಿಗೆ **ಅಗ್ನಾಯೀ** ಎಂದೂ ಹೇಳುವರು. ಈ ವಿಷಯದಲ್ಲಿ ಯಾಸ್ಕರು—

**ಇಂದ್ರಾಣೀಂದ್ರಸ್ಯ ಪತ್ನ್ಯಗ್ನಾಯ್ಯಗ್ನೇಃ ಪತ್ನ್ಯಶ್ವಿನ್ಯಶ್ವಿನೋಃ ಪತ್ನೀರಾಟ್ ರಾಜತೇ ।**
**ರೋದಸೀ ರುದ್ರಸ್ಯ ಪತ್ನೀ । ವರುಣಾನೀ ಚ ವರುಣಸ್ಯ ಪತ್ನೀ ।**

(ನಿ. ೧೨-೪೬)

ಎಂದು ಹೇಳಿರುವರು. ಇವರಿಗೆ ದೇವಪತ್ನಿಯರೆಂದು ಹೆಸರು. ಕೆಲವು ಋಕ್ಕುಗಳಲ್ಲಿ ಇವರ ಹೆಸರನ್ನು ಪ್ರತ್ಯೇಕವಾಗಿ ಹೇಳದೆ ದೇವಪತ್ನಿಯೆಂದು ಸಮಷ್ಟಿಯಾಗಿಯೂ ಹೇಳಿರುವುದು. ಉದಾಹರಣೆಗಾಗಿ ಕೆಲವು ಋಕ್ಕುಗಳನ್ನು ಇಲ್ಲಿ ಕೊಟ್ಟಿದೇವೆ—

**ಇಂದ್ರಾಣೀಮಾಸು ನಾರಿಷು ಸುಭಗಾಮಹಮಶ್ರವಂ ।**
**ನಹ್ಯಸ್ಯಾ ಅಪರಂ ಚನ ಜರಸಾ ಮರತೇ ಪತಿರ್ವಿಶ್ವಸ್ಮಾದಿಂದ್ರ ಉತ್ತರಃ ॥**

(ಋ. ಸಂ. ೧೦-೮೬-೧೧)

**ನಾಹಮಿಂದ್ರಾಣಿ ರಾರಣ ಸಖ್ಯುರ್ವೃಷಾಕಪೇರ್ಋತೇ ।**

(ಋ. ಸಂ ೧೦-೮೬-೧೨)

**ಉತಾಹಮಸ್ಮಿ ವೀರಿಣೀಂದ್ರಪತ್ನೀ ಮರುತ್ಸಖಾ ವಿಶ್ವಸ್ಮಾದಿಂದ್ರ ಉತ್ತರಃ ॥**

(ಋ. ಸಂ. ೧೦-೮೬-೯)

**ಇಂದ್ರಾಣೀಮುಹ್ವ ಊತಯೇ ವರುಣಾನೀಂ ಸ್ವಸ್ತಯೇ ।**

(ಋ. ಸಂ. ೨-೩೨-೮)

**ಉತ ಗ್ನಾ ವ್ಯಂತು ದೇವಪತ್ನೀರಿಂದ್ರಾಣ್ಯ೧ಗ್ನಾಯ್ಯಶ್ವಿನೀ ರಾಟ್ ।**
**ಆ ರೋದಸೀ ವರುಣಾನೀ ಶೃಣೋತು ವ್ಯಂತು ದೇವೀರ್ಯ ಋತುರ್ಜನೀನಾಂ ॥**

(ಋ. ಸಂ. ೫-೪೬-೮)

**ದೇವಾನಾಂ ಪತ್ನೀರುಶತೀರವಂತು ನಃ ಪ್ರಾವಂತು ನಸ್ತುಜಯೇ ವಾಜಸಾತಯೇ ।**
**ಯಾಃ ಪಾರ್ಥಿವಾಸೋ ಯಾ ಅಪಾಮಪಿ ವ್ರತೇ ತಾ ನೋ ದೇವೀಸ್ಸುಹವಾಃ ಶರ್ಮ ಯಚ್ಛತ ॥**

(ಋ. ಸಂ. ೫-೪೬-೭)

ಇತ್ಯಾದಿ ಅನೇಕ ಋಕ್ಕುಗಳಲ್ಲಿ ದೇವಪತ್ನಿಯರ ಹೆಸರುಗಳು ಪಠಿತವಾಗಿವೆ.



॥ ಸಂಹಿತಾಪಾಠಃ ॥

ಸ ಹೋತಾ ಯಸ್ಯ ರೋದಸೀ ಚಿದುರ್ವೀ ಯಜ್ಞಂಯಜ್ಞಮಭಿ ವೃಧೇ ಗೃಣೀತಃ ।
ಪ್ರಾಚೀ ಅಧ್ವರೇವ ತಸ್ಥತುಃ ಸುಮೇಕೇ ಋತಾವರೀ ಋತಜಾತಸ್ಯ ಸತ್ಯೇ ॥೧೦॥

ಪದಪಾಠಃ

ಸಃ । ಹೋತಾ । ಯಸ್ಯ । ರೋದಸೀ ಇತಿ । ಚಿತ್ । ಉರ್ವೀ ಇತಿ । ಯಜ್ಞಂऽಯಜ್ಞಂ । ಅಭಿ । ವೃಧೇ । ಗೃಣೀತಃ ।
ಪ್ರಾಚೀ ಇತಿ । ಅಧ್ವರಾऽಇವ । ತಸ್ಥತುಃ । ಸುಮೇಕೇ ಇತಿ ಸುऽಮೇಕೇ । ಋತವರೀ ಇತ್ಯೃತऽವರೀ । ಋತऽಜಾತಸ್ಯ । ಸತ್ಯೇ ಇತಿ ॥ ೧೦ ॥

॥ ಸಾಯಣಭಾಷ್ಯಂ ॥

ಸ ಏವ ಹೋತಾ ಭವತಿ ಉರ್ವೀ ವಿಸ್ತೀರ್ಣೇ ರೋದಸೀ ಚಿತ್ ದ್ಯಾವಾಪೃಥಿವ್ಯಾವಪಿ ಯಸ್ಯಾಗ್ನೇರ್ಯಜ್ಞಂಯಜ್ಞಂ ಸರ್ವಂ ಯಜ್ಞಂ ವೃಧೇ ಸಮೃದ್ಧ್ಯೇऽಭಿಗೃಣೀತಃ । ಪ್ರಶಂಸತಃ । ಋತಜಾತಸ್ಯ । ಜಾತಸತ್ಯಸ್ಯ ಹೋತುಃ ಸುಮೇಕೇ ಸುರೂಪೇ ಋತಾವರೀ ಉದಕವತ್ಯೌ ಸತ್ಯೇ ಸತ್ಯಸ್ವರೂಪೇ ಪ್ರಾಚೀ ಅನುಕೂಲೇ ತಸ್ಥತುಃ । ತಿಷ್ಠತಃ । ಕಥಮಿವ । ಅಧ್ವರೇವ । ಅಧ್ವರಾವಿವ । ಯಜ್ಞಾವಿವ ॥

॥ ಪ್ರತಿಪದಾರ್ಥ ॥

**ಉರ್ವೀ**—ಅತ್ಯಂತ ವಿಸ್ತೃತವಾದ । **ರೋದಸೀ ಚಿತ್**—ದ್ಯಾವಾಪೃಥಿವಿಗಳೂ ಸಹ । **ಯಸ್ಯ**—ಯಾವ ಅಗ್ನಿಯ ಮಹತ್ತ್ವವನ್ನು । **ಯಜ್ಞಂಯಜ್ಞಂ**—ಪ್ರತಿಯೊಂದು ಯಜ್ಞದಲ್ಲಿಯೂ । **ವೃಧೇ**—ಸಮೃದ್ಧ್ಯರ್ಥವಾಗಿ । **ಅಭಿ ಗೃಣೀತಃ**—ಸ್ತುತಿಸುತ್ತವೆಯೋ । **ಸಃ**—ಅವನೇ । **ಹೋತಾ**—ಹೋತೃವಾಗಿರುತ್ತಾನೆ । **ಸುಮೇಕೇ**—ಒಂದೇ ರೂಪವುಳ್ಳವೂ । **ಋತಾವರೀ**—ಉದಕಯುಕ್ತವಾದವೂ । **ಸತ್ಯೇ**—ಸತ್ಯಸ್ವರೂಪವಾದವೂ । **ಪ್ರಾಚೀ**—ಅನುಕೂಲಾತ್ಮಕವಾದವೂ ಆದ ದ್ಯಾವಾಪೃಥಿವಿಗಳು । **ಋತಜಾತಸ್ಯ**—ಸತ್ಯೋತ್ಪನ್ನನಾದ ಈ ಅಗ್ನಿಯ ಸನ್ನಿಧಿಯಲ್ಲಿ । **ಅಧ್ವರೇವ**—ಉತ್ತಮವಾದ ಯಜ್ಞಗಳಂತೆ । **ತಸ್ಥತುಃ**—ಕಾದು ನಿಂತಿರುತ್ತವೆ.

॥ ಭಾವಾರ್ಥ ॥

ಅತ್ಯಂತ ವಿಸ್ತೃತವಾದ ದ್ಯಾವಾಪೃಥಿವಿಗಳೂ ಸಹ ಯಾವ ಅಗ್ನಿಯ ಮಹತ್ತ್ವವನ್ನು ಪ್ರತಿಯೊಂದ ಯಜ್ಞದಲ್ಲಿಯೂ ಸಮೃದ್ಧ್ಯರ್ಥವಾಗಿ ಸ್ತುತಿಸುತ್ತವೆಯೋ, ಆ ಅಗ್ನಿಯೇ ಯಜ್ಞಗಳಿಗೆ ಹೋತೃವಾಗಿರುತ್ತಾನೆ

ಒಂದೇ ರೂಪವುಳ್ಳವೂ, ಉದಕಯುಕ್ತವಾದವೂ, ಸತ್ಯಸ್ವರೂಪವುಳ್ಳವೂ, ಅನುಕೂಲಾತ್ಮಕವಾದವೂ ಆದ ದ್ಯಾವಾಪೃಥಿವಿಗಳು ಸತ್ಯೋತ್ಪನ್ನನಾದ ಈ ಅಗ್ನಿಯ ಸನ್ನಿಧಿಯಲ್ಲಿ ಉತ್ತಮವಾದ ಯಜ್ಞಗಳಂತೆ ಕಾದು ನಿಂತಿರುತ್ತವೆ.

## English Translation.

He is the invoker (of the gods), whom the spacious heaven and earth glorify, for the sake of increase, at repeated sacrifices : charged with water, they await like holy rites, propitious to the real presence of him who is born of truth.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವಿವರಣೆಯು ಸುಲಭವಾಗಿದೆ. ಇದರಲ್ಲಿ ದ್ಯಾವಾಪೃಥಿವಿಗಳು ಅಗ್ನಿಯನ್ನು ಸ್ತುತಿಸಿ ಯಜ್ಞಾದಿಕರ್ಮಗಳಲ್ಲಿ ಅವನಿಗೆ ಸಹಾಯಭೂತವಾಗಿರುತ್ತವೆ ಎಂಬ ವಿಷಯವು ಪ್ರಶಂಸಿತವಾಗಿದೆ. ದೇವತೆಗಳನ್ನು ಯಜ್ಞಗಳಿಗೆ ಬರಬೇಕೆಂದು ಆಹ್ವಾನಮಾಡುವ ಈ ಅಗ್ನಿಯನ್ನು ದ್ಯಾವಾಪೃಥಿವಿಗಳು ಸ್ತುತಿಸುತ್ತವೆ. ಈ ಅಗ್ನಿಯು ಪ್ರತಿಯಜ್ಞದಲ್ಲಿಯೂ ಎಂದರೆ ಮಾನವರು ದೇವತೆಗಳನ್ನುದ್ದೇಶಿಸಿ ಮಾಡುವ ಸಕಲ ಯಜ್ಞಗಳಲ್ಲಿಯೂ ಹೋಮನಿಷ್ಪಾದಕನಾಗಿ ಯಜಮಾನರಿಗೆ ಯಜ್ಞಫಲವನ್ನು ಕೊಡುವನು. ಅಗ್ನಿಯಿಂದಲೇ ಯಜ್ಞವು ಯಶಸ್ವಿಯಾಗಿ ನೆರವೇರುವುದು. ಸತ್ಯಸ್ವರೂಪನಾದ ಈ ಅಗ್ನಿಯ ಸಮೀಪದಲ್ಲಿ ಅವನಿಗೆ ನೆರವಾಗುವಂತೆ ಒಳ್ಳೆಯ ರೂಪವುಳ್ಳವೂ, ಸತ್ಯಸ್ವರೂಪವುಳ್ಳವೂ, ವೃಷ್ಟ್ಯುದಕಗಳಿಂದ ಕೂಡಿದವೂ ಆದ ಈ ದ್ಯಾವಾಪೃಥಿವಿಗಳು ರೂಪವನ್ನು ಧರಿಸಿ ಶುಶ್ರೂಷೆಮಾಡುತ್ತಿರುವ ಎರಡು ಯಜ್ಞಗಳಂತೆ ಅಗ್ನಿಗೆ ಸಹಾಯಭೂತವಾಗಿ ನಿಂತಿರುವವು ಎಂದು ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಇಳಾಮಗ್ನೇ ಪುರುದಂಸಂ ಸನಿಂ ಗೋಃ ಶಶ್ವತ್ತಮಂ ಹವಮಾನಾಯ ಸಾಧ ।
ಸ್ಯಾನ್ನಃ ಸೂನುಸ್ತನಯೋ ವಿಜಾವಾಗ್ನೇ ಸಾ ತೇ ಸುಮತಿರ್ಭೂತ್ವಸ್ಮೇ ॥ ೧೧ ॥

॥ ಪದಪಾಠಃ ॥

ಇಳಾಂ । ಅಗ್ನೇ । ಪುರುಽದಂಸಂ । ಸನಿಂ । ಗೋಃ । ಶಶ್ವತ್ಽತಮಂ । ಹವಮಾನಾಯ । ಸಾಧ ।
ಸ್ಯಾತ್ । ನಃ । ಸೂನುಃ । ತನಯಃ । ವಿಜಾಽವಾ । ಅಗ್ನೇ । ಸಾ । ತೇ । ಸುಽಮತಿಃ । ಭೂತು । ಅಸ್ಮೇ ಇತಿ ॥

॥ ಸಾಯಣಭಾಷ್ಯಂ ॥

ಇಯಂ ಸರ್ವೇಷಾಂ ಪಶೂನಾಂ ಪಶುಪುರೋಡಾಶಸ್ಯ ಸ್ವಿಷ್ಟಕೃತಃ ಪುರೋನುವಾಕ್ಯಾ । ಸೂತ್ರ್ಯತೇ ಹಿ । ಇಳಾಮಗ್ನೇ ಪುರುದಂಸಂ ಸನಿಂ ಗೋರ್ಹೋತಾ ಯಕ್ಷದಗ್ನಿಂ ಪುರೋಳಾಶಸ್ಯ ಸ್ವದಸ್ವ ಹವಾ ಸಮಿಷೋ ದಿದೀಹೀತಿ ಪುರೋಳಾಶಸ್ವಿಷ್ಟಕೃತ ಇತಿ । ಆ. ೩-೫ ॥

ಹೇ ಅಗ್ನೇ ಪುರುದಂಸಂ ಬಹುಕರ್ಮಾಣಂ ಗೋರ್ಗವಾಂ ಸನಿಂ ಪ್ರದಾತ್ರೀಮಿಳಾಂ ಭೂಮಿಂ ಹವಮಾನಾಯ ಸ್ತುವತೇ ಮಹ್ಯಂ ಶಶ್ವತ್ತಮಂ ಚಿರಕಾಲಂ ಯಥಾ ಭವತಿ ತಥಾ ಸಾಧ । ಸಾಧಯ । ನೋಽಸ್ಮಾಕಂ ಸೂನುಃ ಪುತ್ರಸ್ತನಯಃ ಸಂತಾನಸ್ಯ ವಿಸ್ತಾರಯಿತಾ ವಿಜಾವಾ ಪುತ್ರಪೌತ್ರಾದಿರೂಪೇಣ ಸ್ವಯಂ ವಿಜಾಯತ ಇತಿ ವಿಜಾವಾ ಸ್ಯಾತ್ । ಹೇ ಅಗ್ನೇ ಸಾ ಪ್ರಸಿದ್ಧಾ ತೇ ಸುಮತಿಸ್ತ್ವದೀಯಾನುಗ್ರಹಬುದ್ಧಿರಸ್ಮೇ ಅಸ್ಮಾಸು ಭೂತು । ಭವತು ॥

ಅಥವಾ

ಹೇ ಅಗ್ನೇ ಪುರುದಂಸಂ । ಅಪೋಽಪ್ನೋ ದಂಸೋ ವೇಷ ಇತಿ ಕರ್ಮನಾಮಸು ಪಠಿತತ್ವಾದ್ದಂಸಃಶಬ್ದಃ ಕರ್ಮವಾಚೀ । ಪುರೂಣಿ ಬಹೂನಿ ದಂಸಾಂಸಿ ಕರ್ಮಾಣಿ ಯಸ್ಯಾಃ ಸಾ । ತಾಂ ಬಹುಕರ್ಮಾಣಂ ಗೋಃ ಸನಿಂ ಗವಾದಿಪಶೂನ್ಸಂಪಾದಯಿತ್ರೀಮಿಳಾಮೇತನ್ನಾಮಿಕಾಂ ಗೋರೂಪಾಂ ದೇವತಾಂ ಶಶ್ವತ್ತಮಂ ನಿರಂತರಂ ಹವಮಾನಾಯ ಯಜಮಾನಾಯ ಮಹ್ಯಂ ಸಾಧ । ಸಾಧಯ । ಕಿಂಚ ನೋಽಸ್ಮಾಕಂ ಸೂನುಃ ಪುತ್ರಸ್ತನಯಃ ಪೌತ್ರಃ ಸ್ಯಾದ್ಭವತ್ವಿತಿ ತೇ ತವ ಯಾ ಸುಮತಿಃ ಶೋಭನಾ ಬುದ್ಧಿಃ ಸಾ ವಿಜಾವಾಬಂಧ್ಯಾ ಸತ್ಯಸ್ಮೇ ಅಸ್ಮಾಕಂ ಭೂತು । ಭವತು ॥ ಶಶ್ವತ್ತಮಂ ಉಚ್ಛಾದಿಷು ಪಾಠಾದಂತೋದಾತ್ತತ್ವಂ । ಸಾಧ । ರಾಧ ಸಾಧ ಸಂಸಿದ್ಧೌ । ಅಂತರ್ಭಾವಿತಣ್ಯರ್ಥೋಽಯಂ । ಲೋಟಿ ವ್ಯತ್ಯಯೇನ ಶಪ್ । ಸೇರ್ಹ್ಯಪಿಚ್ಚೇತಿ ಹಿರಾದೇಶಃ । ತಸ್ಯಾತೋ ಹೇರಿತಿ ಲುಕ್ । ನಿಘಾತಃ । ವಿಜಾವಾ । ಜನೀ ಪ್ರಾದುರ್ಭಾವೇ । ಅಸ್ಮಾದನ್ಯೇಭ್ಯೋಽಪಿ ದೃಶ್ಯಂತ ಇತಿ ವನಿಪ್ । ವಿಡ್ವನೋರನುನಾಸಿಕಸ್ಯಾದಿತ್ಯಾತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ । ಲಿಂಗವ್ಯತ್ಯಯಃ ಭೂತು । ಭೂ ಸತ್ತಾಯಾಂ । ಬಹುಲಂ ಛಂದಸೀತಿ ಶಪೋ ಲುಕ್ । ಭೂಸುವೋಸ್ತಿಙೀತಿ ಗುಣಪ್ರತಿಷೇಧಃ ॥

॥ ಪ್ರತಿಪದಾರ್ಥ ॥

(ಹೇ) **ಅಗ್ನೇ**—ಎಲೈ ಅಗ್ನಿಯೇ । **ಪುರುದಂಸಂ**—ಅನೇಕ ಕರ್ಮವಿಶಿಷ್ಟವೂ । **ಗೋಃ ಸನಿಂ**—ಗವಾದಿ ಪಶುಗಳನ್ನು ಒದಗಿಸುವವಳೂ (ಆದ) । **ಇಳಾಂ**—ಗೋರೂಪಳಾದ ಇಳಾನಾಮಕ ದೇವತೆಯನ್ನು । **ಶಶ್ವತ್ತಮಂ**—ನಿರಂತರವೂ । **ಹವಮಾನಾಯ**—ಯಾಗಾನುಷ್ಠಾನ ಮಾಡುತ್ತಿರುವ ನನಗೆ । **ಸಾಧ**—ಸಾಧಿಸು (ಅನುಗ್ರಹಿಸು) (ಮತ್ತು) । **ನಃ**—ನಮಗೆ । **ಸೂನುಃ**—ಪುತ್ರನೂ । **ತನಯಃ**—ಪೌತ್ರನೂ । **ಸ್ಯಾತ್**—ಆಗಲಿ (ಎಂಬುದಾಗಿ) । **(ಹೇ) ಅಗ್ನೇ**—ಎಲೈ ಅಗ್ನಿಯೇ । **ತೇ**—ನಿನ್ನ । **(ಯಾ) ಸುಮತಿಃ**—ಯಾವ ಶೋಭನವಾದ ಬುದ್ಧಿಯಿದೆಯೋ । **ಸಾ**—ಅದು । **ಅಸ್ಮೇ**—ನಮಗೋಸ್ಕರ । **ವಿಜಾವಾ**—ಅವಂಧ್ಯವು । **ಭೂತು**—ಆಗಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಅನೇಕ ಕರ್ಮಗಳಿಗೆ ಸಹಾಯಕವಾಗುವ ಗವಾದಿ ಪಶುಗಳನ್ನು ಕೊಡುವವಳೂ, ಇಳಾನಾಮಕಳೂ, ಗೋರೂಪಳೂ ಆದ ಭೂಮಿಯು, ನಿರಂತರ ಯಾಗಾಚರಣೆಯಲ್ಲಿ ನಿರತರಾದ ನಮಗೆ ಅನುಕೂಲಿಸುವಂತೆ ಮಾಡು; ಮತ್ತು ಎಲೈ ಅಗ್ನಿಯೇ, ಸ್ತೋತೃಗಳಿಗೆ ಪುತ್ರಪೌತ್ರಾದಿಗಳನ್ನನುಗ್ರಹಿಸಬೇಕೆಂಬ ನಿನ್ನ ಶುಭವಾದ ಬುದ್ಧಿಯು ನಮಗೆ ಯಾವಾಗಲೂ ಅವಂಧ್ಯವಾಗಲಿ (ಸಫಲವಾಗಲಿ).

## English Translation.

Grant, Agni, to the offerer of the oblation, the earth, the bestower of cattle, the means of many (pious rites), such that it may be perpetual : may there be to us sons and grandsons, born in our race, and may your good-will ever be productive of benefits to us.

॥ ವಿಶೇಷವಿಷಯಗಳು ॥

ಭಾಷ್ಯಕಾರರು ಈ ಮಂಡಲದ ಮೊದಲನೆಯ ಸೂಕ್ತದ ಕೊನೆಯಲ್ಲಿರುವ ಈ ಋಕ್ಕಿಗೆ ಒಂದುವಿಧವಾಗಿಯೂ ಅನಂತರ ಈ ಮಂಡಲದ ಏಳನೆಯ ಸೂಕ್ತದ ಕೊನೆಯಲ್ಲಿರುವ ಇದೇ ಋಕ್ಕಿಗೆ ಮತ್ತೊಂದು ವಿಧವಾಗಿಯೂ ವ್ಯಾಖ್ಯಾನವನ್ನು ಮಾಡಿದಾರೆ ಇಲ್ಲಿ ಆ ಎರಡು ವಿಧವಾದ ವ್ಯಾಖ್ಯಾನಗಳನ್ನೂ ವಿವರಿಸಿದೆ.

ಪಶುಪುರೋಡಾಶಹೋಮದಲ್ಲಿ ಸ್ವಿಷ್ಟಕೃದ್ಧೋಮಮಾಡುವಾಗ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಇಳಾಮಗ್ನೇ ಪುರುದಂಸಂ ಸನಿಂ ಗೋಃಹೋರ್ತಾಯಕ್ಷದಗ್ನಿಂ ಪುರೋಳಾಶಸ್ಯ ಸ್ವದಸ್ವ ಹವ್ಯಾ ಸಮಿಷೋ ದಿದೀಹೀತಿ ಪುರೋಳಾಶಸ್ವಿಷ್ಟಕೃತ ಇತಿ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೩-೫).

**ಪುರುದಂಸಂ—ಪುರೂಣಿ ಬಹೂನಿ ದಂಸಾನಿ ಕರ್ಮಾಣಿ ಯಸ್ಯಾಃ ಸಾ । ಅಪ್ನಃ ದಂಸಃ** ಎಂಬ ಇಪ್ಪತ್ತಾರು ಕರ್ಮನಾಮಗಳಲ್ಲಿ (ನಿ ೩-೨) **ದಂಸಶ್ಶಬ್ದವು** ಉಕ್ತವಾಗಿರುತ್ತದೆ. ಬಹಳ ಕರ್ಮಗಳುಳ್ಳದ್ದೆಂದು ಅರ್ಥ.

**ಗೋಃ ಸನಿಂ—ಗವಾದಿಪಶೂನ್ ಸಂಪಾದಯಿತ್ರೀಂ ।** ಗೋಶಬ್ದಕ್ಕೆ ಪೃಥಿವೀ, ವಾಕ್ಕು, ಪಶು, ರಶ್ಮಿ ಎಂದು ಅನೇಕಾರ್ಥಗಳು ಇರುವುವು. **ಗೋಃ ಸನಿಂ** ಎಂಬ ಪದಗಳು **ಇಳಾಂ** ಎಂಬ ಪದಕ್ಕೆ ವಿಶೇಷಣವಾಗಿರುವುದರಿಂದ ಇಳಾದೇವತೆಯು ಗೋವುಗಳೇ ಮೊದಲಾದವುಗಳೆಲ್ಲವನ್ನೂ ಅನುಗ್ರಹಿಸುವಳೆಂದು ಅರ್ಥವನ್ನು ವರ್ಣಿಸಿದೆ.

**ಇಳಾಂ—ಏತನ್ನಾಮಿಕಾಂ ಗೋರೂಪಾಂ ದೇವತಾಂ ।** ಪೃಥಿವೀನಾಮಗಳಲ್ಲಿ ಇಳಾ ಪದವು (ನಿ. ೨-೫) ಉಕ್ತವಾಗಿದೆ. ವಾಙ್ನಾಮಗಳಲ್ಲಿಯೂ, (ನಿ. ೨-೨೩) ಅನ್ನನಾಮಗಳಲ್ಲಿಯೂ, (ನಿ. ೩-೯) ಗೋನಾಮಗಳಲ್ಲಿಯೂ (ನಿ. ೩-೬) ಉಕ್ತವಾಗಿದೆ. ಮತ್ತು ಇಳಾ ಎಂಬ ಪದವು ಈಶ ಧಾತುವಿನಿಂದ ನಿಷ್ಪನ್ನವಾಗಿದೆ.

**ಅಭಿ ನ ಇಳಾ ಯೂಥಸ್ಯ ಮಾತಾ ಸ್ಮನ್ನದೀಭಿರುರ್ವಶೀ ವಾ ಗೃಣಾತು ।**
**ಉರ್ವಶೀ ವಾ ಬೃಹದ್ದಿವಾ ಗೃಣಾನಾಭ್ಯೂರ್ಣ್ವಾನಾ ಪ್ರಭೃಥಸ್ಯಾಯೋಃ ।**
**ಸಿಷಕ್ತು ನ ಊರ್ಜವ್ಯಸ್ಯ ಪುಷ್ಟೇಃ ॥**

(ಋ. ಸಂ. ೫–೪೧–೧೯, ೨೦)

ಈ ಋಕ್ಕುಗಳಲ್ಲಿ ಇಳಾ ಅಥವಾ **ಇಡಾ** ಎಂಬ ದೇವಿಯು ಮಧ್ಯಮಸ್ಥಾನದೇವತೆಯೆಂದು ವಿವೃತ ವಾಗಿದೆ. ಸಾಯಣರು ಗೋವಿನ ಆಕಾರವನ್ನು ಧರಿಸಿರುವ **ಇಳಾ** ಎಂದು ಹೆಸರುಳ್ಳ ದೇವತೆಯೆಂದು ಅರ್ಥವನ್ನು ವಿವರಿಸಿದಾರೆ.

**ಶಶ್ವತ್ತಮಂ ಹವಮಾನಾಯ ಸಾಧ**—**ನಿರಂತರಂ ಹವಮಾನಾಯ ಯಜಮಾನಾಯ ಮಹ್ಯಂ ಸಾಧಯ ।** ಅಗ್ನಿಯನ್ನು ಯಾವಾಗಲೂ ಹವಿಸ್ಸುಗಳಿಂದ ತೃಪ್ತಿಪಡಿಸುತ್ತಿರುವ ಯಜಮಾನನಾದ ನನಗೆ ಬೇಕಾದ ಇಷ್ಟಾರ್ಥಗಳನ್ನು ನೆರವೇರಿಸುವ, ಪ್ರಭೂತವಾದ ಮಾಹಾತ್ಮ್ಯದಿಂದ ಪೂರಿತವಾಗಿರುವ, ಗೋರೂಪದಿಂದ ಇರುವ, ಇಳಾ ದೇವತೆಯ ಅನುಗ್ರಹವು ಉಂಟಾಗುವಂತೆ ಅಗ್ನಿಯನ್ನು ಪ್ರಾರ್ಥಿಸಿದೆ.

**ಸೂನುಃ**—**ಪುತ್ರಃ, ತನಯಃ ಪೌತ್ರಃ ।** ತುಕ್, ತೋಕಂ ಎಂಬ ಹದಿನೈದು ಅಪತ್ಯನಾಮಗಳಲ್ಲಿ (ನಿ. ೩–೨) ತನಯ ಶಬ್ದವೂ, ಸೂನು ಶಬ್ದವೂ ಪಠಿತವಾಗಿದೆ.

**ಏತಾ ವಿಶ್ವಾ ಸವನಾ ತೂತುಮಾ ಕೃಷೇ ಸ್ವಯಂ ಸೂನೋ ಸಹಸೋ ಯಾನಿ ದಧಿಷೇ ।**
**ವರಾಯ ತೇ ಪಾತ್ರಂ ಧರ್ಮಣೇ ತನಾ ಯಜ್ಞೋ ಮಂತ್ರೋ ಬ್ರಹ್ಮೋದ್ಯತಂ ವಚಃ ॥**

(ಋ. ಸಂ. ೧೦–೫೦–೬)

ಎಂಬ ಈ ಋಕ್ಕಿನಲ್ಲಿ ಸೂನೋ ಎಂಬ ಶಬ್ದಕ್ಕೆ ಪುತ್ರನೆಂದು ಅರ್ಥವನ್ನು ಹೇಳಿ ಅಗ್ನಿಯನ್ನು (ಸಹಸಸ್ಪುತ್ರ) **ಸಹಸಸ್ಸೂನೋ, ಬಲಸ್ಯ ಪುತ್ರ** ಎಂದು ಹೇಳಿದೆ. ಸಾಯಣರು ಸೂನುಶಬ್ದಕ್ಕೆ ಪುತ್ರನೆಂದೂ, ತನಯ ಶಬ್ದಕ್ಕೆ ಪೌತ್ರ (ಪುತ್ರನ ಪುತ್ರ) ಎಂದೂ ಅರ್ಥವನ್ನು ವರ್ಣಿಸಿದ್ದಾರೆ.

**ಸುಮತಿಃ**—**ಶೋಭನಾ ಬುದ್ಧಿಃ ।** ನಿರುಕ್ತಕಾರರು **ದೇವಸುಮತಿಂ** ಎಂಬಲ್ಲಿ **ದೇವಾನಾಂ ಕಲ್ಯಾಣೀಂ ಮತಿಂ** ದೇವತೆಗಳ ಶುಭಕರವಾದ ಬುದ್ಧಿ ಎಂದೂ, **ವೈಶ್ವಾನರಸ್ಯ ಸುಮತೌ ಸ್ಯಾಮ** ಎಂಬಲ್ಲಿ **ಕಲ್ಯಾಣ್ಯಾಂ ಮತೌ** ಎಂದೂ, **ವಯಂ ದೇವಸ್ಯ ಧೀಮಹಿ ಸುಮತಿಂ ಸತ್ಯಧರ್ಮಣಃ** ಎಂಬಲ್ಲಿಯೂ **ಕಲ್ಯಾಣೀಂ ಮತೀಂ** ಎಂಬ ಇದೇ ಅರ್ಥವನ್ನೂ ವರ್ಣಿಸಿದ್ದಾರೆ. ಸಾಯಣರು ಅಗ್ನಿಯನ್ನು ಹವಿಸ್ಸುಗಳಿಂದ ತೃಪ್ತಿಗೊಳಿಸಿದ ಯಜಮಾನರ ವಿಷಯದಲ್ಲಿ ಅಗ್ನಿಯು ಅನುಗ್ರಹಿಸಬಹುದಾದ ಪುತ್ರ ಪೌತ್ರಾದಿಗಳ ಉತ್ಪತ್ತಿ ಮತ್ತು ಅಭಿವೃದ್ಧಿಯೇ ಮೊದಲಾದ ಅಗ್ನಿಯ ಕಲ್ಯಾಣಕರವಾದ ಬುದ್ಧಿಯು ನಮ್ಮ ವಿಷಯದಲ್ಲಿ ಉಂಟಾಗಲಿ ಎಂದು ಪ್ರಾರ್ಥಿಸಿದೆ.



ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕಭೂಪಾಲಸಾಮ್ರಾಜ್ಯ
ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಋಕ್ಸಂಹಿತಾಭಾಷ್ಯೇ ದ್ವಿತೀಯಾಷ್ಟಕೇಽಷ್ಟಮೋಽಧ್ಯಾಯಃ ಸಮಾಪ್ತಃ ॥

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ದ್ವಿತೀಯಾಷ್ಟಕದಲ್ಲಿ
ಎಂಟನೆಯ ಅಧ್ಯಾಯವು ಸಮಾಪ್ತವಾದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ।
॥ ಶುಭಂ ಭೂಯಾತ್ ॥
॥ ಮಂಗಳಂ ॥